ಶ್ರೀರಾಘವೇಂದ್ರತೀರ್ಥ ಗುರುಸಾರ್ವಭೌಮ ವಿರಚಿತಾ

# ಶ್ರೀಕೃಷ್ಣಚಾರಿತ್ರ್ಯ ಮಂಜರೀ

(ಕನ್ನಡ ವಿಶೇಷಾನುವಾದ ಸಹಿತ)




ಅನುವಾದಕರು

ವಿದ್ಯಾವಾಚಸ್ಪತಿ ಶ್ರೀರಾಘವೇಂದ್ರಮಠೀಯಾಸ್ಥಾನವಿದ್ವಾನ್

ದಿ|| ಶ್ರೀ ಪಿ.ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರು

ಸಂಗ್ರಾಹಕರು

ಪಂಡಿತಕೇಸರಿ ರಾಜಾ ಎಸ್. ಗಿರಿಯಾಚಾರ್ಯರು



ಪ್ರಕಾಶಕರು

ಶ್ರೀ ಗುರುಸಾರ್ವಭೌಮ ಸಂಶೋಧನಾ ಮಂದಿರ

ಶ್ರೀರಾಘವೇಂದ್ರ ಸ್ವಾಮಿ ಮಠ

ಮಂತ್ರಾಲಯ - 518 345.

॥ ಶ್ರೀಃ ॥

ಶ್ರೀರಾಘವೇಂದ್ರತೀರ್ಥ ಗುರುಸಾರ್ವಭೌಮ ವಿರಚಿತಾ

# ಶ್ರೀಕೃಷ್ಣಚಾರಿತ್ರ್ಯ ಮಂಜರೀ

(ಕನ್ನಡ ವಿಶೇಷಾನುವಾದ ಸಹಿತ)


ಅನುವಾದಕರು

ವಿದ್ಯಾವಾಚಸ್ಪತಿ ಶ್ರೀರಾಘವೇಂದ್ರಮಠೀಯಾಸ್ಥಾನವಿದ್ವಾನ್

ದಿ॥ ಶ್ರೀ ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರು

ಸಂಗ್ರಾಹಕರು

ಪಂಡಿತಕೇಸರಿ ರಾಜಾ ಎಸ್. ಗಿರಿಯಾಚಾರ್ಯರು



ಪ್ರಕಾಶಕರು

ಶ್ರೀ ಗುರುಸಾರ್ವಭೌಮ ಸಂಶೋಧನಾ ಮಂದಿರ

ಶ್ರೀರಾಘವೇಂದ್ರ ಸ್ವಾಮಿ ಮಠ

ಮಂತ್ರಾಲಯ - 518 345.

ಪ್ರಕಾಶಕರು :

**ಶ್ರೀಗುರುಸಾರ್ವಭೌಮ ಸಂಶೋಧನಾ ಮಂದಿರ**

**ಶ್ರೀರಾಘವೇಂದ್ರಸ್ವಾಮಿ ಮಠ,**

ಮಂತ್ರಾಲಯ - ೫೧೮ ೩೪೫.



ಪ್ರಥಮ ಮುದ್ರಣ ೧೯೯೬-ಪ್ರತಿಗಳು ೧೦೦೦

ದ್ವಿತೀಯ ಮುದ್ರಣ ೨೦೧೩-ಪ್ರತಿಗಳು ೧೦೦೦

ಪ್ರತಿಗಳು ದೊರೆಯುವ ಸ್ಥಳ :

**ಶ್ರೀಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠ**

**ಪುಸ್ತಕಭಾಂಡಾಗಾರ,**

ಮಂತ್ರಾಲಯ.

ಮುದ್ರಕರು :

**ಶ್ರೀ ರಾಘವೇಂದ್ರ ಸ್ವಾಮಿ ಪ್ರಿಂಟರ್ಸ್ & ಬೈಂಡರ್ಸ್**

ಹೈದರಾಬಾದ್.

॥ ಶ್ರೀಮನ್ಮೂಲರಾಮೋ ವಿಜಯತೇ ।                                                   ॥ ಶ್ರೀಗುರುರಾಜೋ ವಿಜಯತೇ ॥

## ಅನುಗ್ರಹವಚನ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣಪಾರಾವಾರಪಾರಂಗತ ಸರ್ವತಂತ್ರಸ್ವತಂತ್ರ ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ ಶ್ರೀಮನ್ಮೂಲರಘುಪತಿ ವೇದವ್ಯಾಸದೇವದಿವ್ಯಶ್ರೀಪಾದಪದ್ಮಾರಾಧಕ ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾ ಸಂಸ್ಥಾನಾಧೀಶ್ವರರಾದ ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತಸಾಮ್ರಾಜ್ಯ ದಿಗ್ವಿಜಯವಿದ್ಯಾಸಿಂಹಾಸನಾಧೀಶ್ವರರಾದ ಶ್ರೀಮತ್ಸುಜಯೀಂದ್ರತೀರ್ಥ ಶ್ರೀಪಾದಂಗಳವರ ಕರಕಮಲಸಂಜಾತರಾದ ಶ್ರೀಮತ್ಸುಶಮೀಂದ್ರತೀರ್ಥ ಶ್ರೀಪಾದಂಗಳವರ ವರಕುಮಾರಕರಾದ

# ಶ್ರೀ 1008 ಶ್ರೀಮತ್ಸುಯತೀಂದ್ರತೀರ್ಥ ಶ್ರೀಪಾದಂಗಳವರ ಅನುಗ್ರಹವಚನ

ಕಲಿಯುಗ ಕಾಮಧೇನು ಕಲ್ಪವೃಕ್ಷ ಸದೃಶರಾದ ಶ್ರೀರಾಘವೇಂದ್ರತೀರ್ಥ ಗುರುಸಾರ್ವಭೌಮರು ಶ್ರೀಕೃಷ್ಣಚಾರಿತ್ರಮಂಜರೀ ಎಂಬ ಬಹ್ವರ್ಥಗರ್ಭಿತ ಕೃತಿಯನ್ನು ರಚಿಸಿದ್ದಾರೆ. ಅದಕ್ಕೆ ಶ್ರೀರಾಘವೇಂದ್ರಸ್ವಾಮಿಗಳ ಪೂರ್ವಾಶ್ರಮದ ಪುತ್ರರಾದ ಶ್ರೀಲಕ್ಷ್ಮೀನಾರಾಯಣಾಚಾರ್ಯರು ಉತ್ತಮವಾದ ವ್ಯಾಖ್ಯಾನವನ್ನು ಬರೆದಿದ್ದಾರೆ. ಈ ವ್ಯಾಖ್ಯಾನಾನುಸಾರವಾಗಿ ಪಂಡಿತರತ್ನ ಪಿ.ಪಿ. ಲಕ್ಷ್ಮೀನಾರಾಯಣೋಪಾಧ್ಯಾಯರು ವಿಸ್ತಾರವಾಗಿ ಕನ್ನಡಾನುವಾದವನ್ನು ಕನ್ನಡ ಶ್ರೀಗುರುಸಾರ್ವಭೌಮ ಮಾಸಪತ್ರಿಕೆಯಲ್ಲಿ ಕ್ರಮವಾಗಿ ಮಾಡಿದ್ದರು. ಅದೇ ಗ್ರಂಥವು ನಮ್ಮ ಗುರುಗಳ ಕಾಲದಲ್ಲೂ ಮರುಮುದ್ರಣಗೊಂಡಿತ್ತು. ಅದನ್ನು ಈಗ ನಮ್ಮ ಅಪೇಕ್ಷೆ ಮತ್ತು ಆಜ್ಞೆಯ ಮೇರೆಗೆ ಪಂಡಿತಕೇಸರಿ ವಿದ್ವಾನ್ ರಾಜಾ. ಎಸ್. ಗಿರಿಯಾಚಾರ್ಯರು ಸಂಗ್ರಹಿಸಿ ಸಂಶೋಧಿಸಿ, ಶ್ರೀಮಠದ ಶಿಷ್ಯರ ಹಾಗು ಭಕ್ತರ ಅಪೇಕ್ಷೆಯ ಮೇರೆಗೆ ಶ್ರೀಗುರುಸಾರ್ವಭೌಮರ 392 ನೇ ಪಟ್ಟಾಭಿಷೇಕಮಹೋತ್ಸವ ಹಾಗು 418 ನೇ ವರ್ಧಂತ್ಯುತ್ಸವಾಂಗವಾಗಿ ಮರುಮುದ್ರಿಸುತ್ತಿರುವುದು ನಮಗೆ ಸಂತಸದ ವಿಷಯ. ಇದರ ಲಾಭವನ್ನು ಸಕಲ ಭಗವದ್ಭಕ್ತರು ಪಡೆದು ಅಸ್ಮದು ಉಪಾಸ್ಯಮೂರ್ತಿ ಶ್ರೀರಾಘವೇಂದ್ರ ತೀರ್ಥಗುರ್ವಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತಸೀತಾಪತಿ ಶ್ರೀಮನ್ಮೂಲರಾಮ ಚಂದ್ರದೇವರು ಸಮಸ್ತ ಸನ್ಮಂಗಳವನ್ನುಂಟುಮಾಡಲೆಂದು ಹಾರೈಸುವೆವು.

ಮಂತ್ರಾಲಯ.

10-3-2013                                                   ಇತ್ಯನೇಕ ನಾರಾಯಣ ಸ್ಮರಣೆಗಳು.

॥ ಶ್ರೀಃ ॥

# ಮುನ್ನುಡಿ

"ವಾಚಾ ಸಂಕ್ಷಿಪ್ತಯಾ ಯದ್ಬಹುಚರಿತಮುಪಾವರ್ಣಯಸ್ತ್ವಂ ಮುರಾರೇಃ
ಕಿಂಚ ಶ್ರೀರಾಘವೇಂದ್ರವ್ರತಿಪ ರಘುಪತೇಸ್ತೇನ ನೋ ವಿಸ್ಮಯೋಽಹಂ ।
ಕಿಂ ವಾ ದುಸ್ಸಾಧ್ಯಮಸ್ತಿ ತ್ರಿಜಗತಿ ಮಹತಾಮಾತ್ಮನಃ ಪಾಣಿಪದ್ಮೇ
ಪಶ್ಯಾಮಂದೋಮರಂದಃ ಕಿಲ ಘಟಜನುಷಾ ಚೋಲಿರಾಕಾರಿ ಸಿಂಧುಃ ॥"

ಕಲಿಯುಗ ಕಾಮಧೇನು ಕಲ್ಪವೃಕ್ಷ ಸದೃಶರಾದ ಮಂತ್ರಾಲಯ ಪ್ರಭುಗಳು ಭಾಗವತ ಭಾರತಾದಿ ಗ್ರಂಥಪ್ರತಿಪಾದ್ಯನಾದ ಶ್ರೀಕೃಷ್ಣಪರಮಾತ್ಮನ ಮಹಿಮಾವರ್ಣನ ರೂಪವಾದ "ಶ್ರೀಕೃಷ್ಣಚಾರಿತ್ರ ಮಂಜರೀ" ಎಂಬ ಕೃತಿರತ್ನವನ್ನು ರಚಿಸಿದ್ದಾರೆ. ಈ ಚಿಕ್ಕ ಕೃತಿಯ ಬಹ್ವರ್ಥಗರ್ಭಿತವಾದ ಪದಗಳ ಸಮಗ್ರ ಅಭಿಪ್ರಾಯವನ್ನು ನಿರೂಪಿಸುವ ವಿಷಯದಲ್ಲಿ ಶ್ರೀಗುರುಸಾರ್ವಭೌಮರ ಪೂರ್ವಾಶ್ರಮದ ಪುತ್ರರಾದ ಶ್ರೀಲಕ್ಷ್ಮೀನಾರಾಯಣಾಚಾರ್ಯರ ವ್ಯಾಖ್ಯಾನವೇ ಸಮರ್ಥವಾಗಿದೆ.

ಶ್ರೀಮಠದ ಆಸ್ಥಾನ ವಿದ್ವಾಂಸರಾಗಿದ್ದ ಪಂಡಿತರತ್ನ ಪಿ.ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರು ಬರೆದ ಶ್ರೀಕೃಷ್ಣಚಾರಿತ್ರ್ಯಮಂಜರೀ ಹಾಗೂ ವ್ಯಾಖ್ಯಾನದ ಕನ್ನಡ ವಿಶೇಷಾನುವಾದರೂಪವಾದ ಲೇಖನಗಳು ನಮ್ಮ ಶ್ರೀಮಠದ ಕನ್ನಡ "ಗುರುಸಾರ್ವಭೌಮ" ಮಾಸ ಪತ್ರಿಕೆಯಲ್ಲಿ ಕ್ರಮವಾಗಿ ಬರುತ್ತಿದ್ದವು. ಅದೇ ಗ್ರಂಥವು ಮೊದಲಬಾರಿಗೆ ಶ್ರೀಸುಶಮೀಂದ್ರತೀರ್ಥರ ಕಾಲದಲ್ಲಿ ಮುದ್ರಣಗೊಂಡು, ಈಗ ಎರಡನೇಬಾರಿಗೆ ಪ್ರಸ್ತುತ ಪೀಠಾಧಿಪತಿಗಳಾದ ಶ್ರೀಸುಯತೀಂದ್ರತೀರ್ಥ ಶ್ರೀಪಾದಂಗಳವರ ಆಜ್ಞಾನುಸಾರ ಶ್ರೀಗುರುಸಾರ್ವಭೌಮರ 392 ನೇ ಪಟ್ಟಾಭಿಷೇಕಮಹೋತ್ಸವ ಹಾಗು 418 ನೇ ವರ್ಧಂತ್ಯುತ್ಸವಾಂಗವಾಗಿ ದ್ವಿತೀಯ ಮುದ್ರಣಗೊಂಡು ಬಿಡುಗಡೆಯಾಗಿದೆ. ಇದರ ಕರಡು ತಿದ್ದುವ ಕಾರ್ಯದಲ್ಲಿ ವಿಶೇಷ ಶ್ರಮ ವಹಿಸಿ ಯಶಸ್ವಿಯಾಗಿ ನೆರವೇರಿಸಿದ ನಮ್ಮ ಸಂಶೋಧನಾಮಂದಿರದ ವಿದ್ವಾಂಸರಿಗೂ, ಅತಿಶೀಘ್ರವಾಗಿ ಸುಂದರವಾಗಿ ಮುದ್ರಿಸಿಕೊಟ್ಟು ಶ್ರೀರಾಘವೇಂದ್ರಸ್ವಾಮಿ ಪ್ರಿಂಟರ್ಸ್ & ಬೈಂಡರ್ಸ್, ಹೈದರಾಬಾದ್ ಇವರಿಗೂ, ಇದರ ಪಠನ ಪಾರಾಯಣಾದಿಗಳನ್ನು ಮಾಡುವ ಸಕಲ ಆಸ್ತಿಕರಿಗೂ, ಶ್ರೀರಾಘವೇಂದ್ರ ತೀರ್ಥಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಸೀತಾಪತಿ ಶ್ರೀಮನ್ಮೂಲರಾಮ ಚಂದ್ರದೇವರು ಸಕಲಸನ್ಮಂಗಳವನ್ನುಂಟುಮಾಡಲೆಂದು, ಶ್ರೀ ಪಿ.ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರ ಗ್ರಂಥಗಳು - ಅನುವಾದಗಳು ಮುದ್ರಣ - ಮರುಮುದ್ರಣಗಳಾಗಲೆಂದು ಪ್ರಾರ್ಥಿಸುವೆವು.

ಇತಿ

**ಪಂಡಿತಕೇಸರಿ. ವಿದ್ವಾನ್ ರಾಜಾ. ಎಸ್. ಗಿರಿಯಾಚಾರ್ಯರು**

ಮಂತ್ರಾಲಯ - 518 345. (ಆಂಧ್ರಪ್ರದೇಶ)

# ಶ್ರೀಮನ್ಮೂಲರಾಮದೇವರು
# ಶ್ರೀದಿಗ್ವಿಜಯರಾಮ ದೇವರು
# ಶ್ರೀ ಜಯರಾಮದೇವರು



# ಶ್ರೀದೇವಿ ಮತ್ತು ಭೂದೇವಿ ಸಮೇತ
# ಶ್ರೀನಿವಾಸದೇವರು



# ಶ್ರೀಮದಾನಂದತೀರ್ಥಭಗವತ್ಪಾದರು



ಶ್ರೀಮದಾನಂದತೀರ್ಥೇಂದುಭಾಸನಂ ಮಮ ಮಾನಸೇ ।
ಆಶಾಸೇ ಸಾಧುಶಬ್ದಾರ್ಥಸರಿದೀಶಾಭಿವೃದ್ಧಯೇ ॥

# ಶ್ರೀ ರಾಘವೇಂದ್ರತೀರ್ಥಗುರುಸಾರ್ವಭೌಮರು

## ಮಂತ್ರಾಲಯ



ಮೂಕೋSಪಿ ಯತ್ಪ್ರಸಾದೇನ ಮುಕುಂದಶಯನಾಯತೇ ।
ರಾಜರಾಜಾಯತೇ ರಿಕ್ತೋ ರಾಘವೇಂದ್ರಂ ತಮಾಶ್ರಯೇ ॥

# ಶ್ರೀ ಸುಜಯೀಂದ್ರತೀರ್ಥರು



ಸುಯಮೀಂದ್ರಕರಾಬ್ಜೋತ್ಥಂ ಸುವಿದ್ಯಾಬೋಧಕಂ ಸದಾ ।
ಸುಮೂಲರಾಮಪೂಜಾಢ್ಯಂ ಸುಜಯೀಂದ್ರಗುರುಂ ಭಜೇ ॥

# ಶ್ರೀ ಸುಶಮೀಂದ್ರತೀರ್ಥರು



ಸುಧೀಜನಸುಮಂದಾರಂ ಸುಧೀಂದ್ರಸುತಸುಪ್ರಿಯಮ್ ।
ಸುಶಮೀಂದ್ರಗುರುಂ ವಂದೇ ಸುಜಯೀಂದ್ರಕರೋದ್ಭವಮ್ ॥

# ಶ್ರೀ ಸುಯತೀಂದ್ರತೀರ್ಥರು



ಪ್ರಸ್ತುತ ಪೀಠಾಧಿಪತಿಗಳು

## ಶ್ರೀ ರಾಘವೇಂದ್ರಸ್ವಾಮಿ ಮಠ, ಮಂತ್ರಾಲಯ.

॥ ಶ್ರೀಃ ॥

# ಶ್ರೀಕೃಷ್ಣ ಚಾರಿತ್ರ್ಯ ಮಂಜರೀ

## ಶ್ಲೋಕವಿಷಯ ಸಂಗ್ರಹ

**ಶ್ಲೋಕ-೧** **ಪುಟ - 1**

**ವಿಷಯ :** ಶ್ರೀಮನ್ನಾರಾಯಣನನ್ನು ಕುರಿತು ಚತುರ್ಮುಖಬ್ರಹ್ಮಾದಿ ದೇವತೆಗಳಿಂದ ಭೂಭಾರಹರಣಕ್ಕಾಗಿ ಪ್ರಾರ್ಥನೆ. ಶ್ರೀನಾರಾಯಣನು ವಸುದೇವ - ದೇವಕಿಯರಲ್ಲಿ ಶ್ರೀಕೃಷ್ಣನಾಗಿ ಅವತರಿಸಿದನು. ಗೋಕುಲಕ್ಕೆ ಬಂದು ಯಶೋದೆ ನಂದಗೋಪರನ್ನು ಸಂತೋಷಪಡಿಸುವನು. ಪೂತನಾ, ಶಕಟಾಸುರ, ತೃಣಾವರ್ತ ಮೊದಲಾದ ಅಸುರರ ಸಂಹಾರ.

**ಶ್ಲೋಕ - ೨** **ಪುಟ - 123**

**ವಿಷಯ :** ಶ್ರೀಕೃಷ್ಣನು ತಾಯಿ ಯಶೋದೆಗೆ ತನ್ನ ಮುಖದಲ್ಲಿ ಬ್ರಹ್ಮಾಂಡದರ್ಶನ ಮಾಡಿಸುವನು. ಗರ್ಗಾಚಾರ್ಯರಿಂದ ಬಲರಾಮ ಶ್ರೀಕೃಷ್ಣರಿಗೆ ನಾಮಕರಣ. ಶ್ರೀಕೃಷ್ಣಬಲರಾಮರ ಬಾಲಕ್ರೀಡೆಗಳು. ಗೋಪಿಕಾಸ್ತ್ರೀಯರ ಮನೆಗಳಲ್ಲಿ ಕ್ಷೀರದಧ್ಯಾದಿ ಚೌರ್ಯ. ಯಶೋದೆಗೆ ಸ್ವವದನದಲ್ಲಿ ಬ್ರಹ್ಮಾಂಡದರ್ಶನ.

**ಶ್ಲೋಕ - ೩** **ಪುಟ -140**

**ವಿಷಯ :** ಯಶೋದೆಯಿಂದ ಒರಳಿನಲ್ಲಿ ಹಗ್ಗದಿಂದ ಕಟ್ಟಲ್ಪಟ್ಟ ಶ್ರೀಕೃಷ್ಣನು ವೃಕ್ಷಜನ್ಮದಲ್ಲಿದ್ದ ಕುಬೇರನ ಪುತ್ರರಾದ ನಲಕೂಬರ ಮತ್ತು ಮಣಿಗ್ರೀವರನ್ನು ನಾರದರ ಶಾಪದಿಂದ ಮೋಚನಗೊಳಿಸಿದನು. ಬೃಂದಾವನದಲ್ಲಿ ಮುರಳೀನಾದಾದಿ ವ್ಯಾಪಾರಗಳಿಂದ ಕ್ರೀಡಿಸಿದನು. ಗೋವುಗಳ ಪಾಲನೆ. ವತ್ಸಾಸುರ ಸಂಹಾರ.

**ಶ್ಲೋಕ - ೪** **ಪುಟ - 152**

ಶ್ರೀಕೃಷ್ಣನಿಂದ ಬಕಾಸುರ, ಧೇನುಕಾಸುರ ಸಂಹಾರ, ಕಾಲಿಯಮರ್ದನ, ದಾವಾಗ್ನಿಪಾನ, ವೃಕ್ಷರೂಪೀ ಉಗ್ರದೈತ್ಯನ ಸಂಹಾರ, ಗೋಕುಲ ರಕ್ಷಣೆ.

**ಶ್ಲೋಕ - ೫** **ಪುಟ - 166**

ಶ್ರೀಕೃಷ್ಣನು ದುರ್ಗಾರಣ್ಯದಲ್ಲಿ ದಾರಿತಪ್ಪಿದ ಗೋವುಗಳನ್ನು ಮತ್ತು ಗೋಪಾಲಕರನ್ನು ರಕ್ಷಿಸಿದನು. ಯಮುನಾ ನದಿಯ ತೀರದಲ್ಲಿ ಗೋಪಿಕಾಸ್ತ್ರೀಯರೊಂದಿಗೆ ವಿಹಾರ.

**ಶ್ಲೋಕ - ೬** **ಪುಟ - 168**

ನಗ್ನರಾಗಿ ಜಲಕ್ರೀಡೆಮಾಡುತ್ತಿದ್ದ ಗೋಪಿಕಾಸ್ತ್ರೀಯರ ವಸ್ತ್ರಾಪಹರಣ. ಗೋಪಿಕಾಸ್ತ್ರೀಯರೊಂದಿಗೆ ಕ್ರೀಡೆ. ಗೋವರ್ಧನೋದ್ಧಾರ, ಇಂದ್ರಮದಹರಣ, ಗೋಕುಲ ರಕ್ಷಣ.

**ಶ್ಲೋಕ - ೭** **ಪುಟ - 186**

ವರುಣನಿಂದ ಅಪಹೃತನಾದ ತನ್ನ ತಂದೆ ನಂದಗೋಪನನ್ನು ಕರೆ ತಂದು ಅವನಿಗೆ ತನ್ನ ವೈಕುಂಠಲೋಕವನ್ನು ತೋರಿಸಿದನು. ವೇಣುಗಾನದಿಂದ ಆಕರ್ಷಿತರಾದ ಗೋಪಿಕಾಸ್ತ್ರೀಯರೊಂದಿಗೆ ಯಮುನಾ ನದೀತೀರದಲ್ಲಿ ರಾತ್ರಿ ಬೆಳದಿಂಗಳಿನಲ್ಲಿ ವಿಹರಿಸಿದನು.

**ಶ್ಲೋಕ - ೮** ಪುಟ - 198

ಗೋಪಿಕಾಸ್ತ್ರೀಯರ ಗರ್ವಪರಿಹಾರಕ್ಕಾಗಿ ಶ್ರೀಕೃಷ್ಣನು ಅದೃಶ್ಯನಾದನು. ಖಿನ್ನರಾದ ಸ್ತ್ರೀಯರು ಬಹುವಿಧ ಸ್ತೋತ್ರಗಳಿಂದ ಶ್ರೀಕೃಷ್ಣನನ್ನು ಪ್ರಾರ್ಥಿಸುವರು. ಗೋಪೀಗೀತೆ ಪ್ರಸನ್ನನಾದ ಶ್ರೀಕೃಷ್ಣನು ಪ್ರಕಟನಾಗಿ ರಾಸಕ್ರೀಡೆಯಿಂದ ಗೋಪಿಕಾಸ್ತ್ರೀಯರನ್ನು ಸಂತೋಷಬಡಿಸುವನು.

**ಶ್ಲೋಕ - ೯** ಪುಟ - 275

ಶಂಖಚೂಡದೈತ್ಯ ಸಂಹಾರ, ದೈತ್ಯನ ಶಿರದಲ್ಲಿದ್ದ ಮಣಿಯನ್ನು ಕಿತ್ತು ಅಣ್ಣ ಬಲರಾಮನಿಗೆ ಕೊಟ್ಟು ಸಂತೋಷಪಡಿಸುವನು. ಗೋಕುಲದ ವ್ರಜಸುಂದರಿಗೆ ದರ್ಶನ. ವೃಷಭಾಸುರ ಹಾಗೂ ಕೇಶೀದೈತ್ಯರ ಸಂಹಾರ. ಬ್ರಹ್ಮಾದಿದೇವತೆಗಳಿಂದ ಶ್ರೀಕೃಷ್ಣನ ಮೇಲೆ ಪುಷ್ಪವೃಷ್ಟಿ. ಕಂಸನ ಸಂಹಾರ ಮುಂತಾದ ಕಾರ್ಯಗಳನ್ನು ಮಾಡುವಂತೆ ನಾರದರಿಂದ ಶ್ರೀಕೃಷ್ಣನಲ್ಲಿ ಪ್ರಾರ್ಥನೆ. ಶ್ರೀಕೃಷ್ಣನಿಂದ ಅಭಯಪ್ರದಾನ. ಮಯಾಸುರನ ಮಗನಾದ ವ್ಯೋಮಾಸುರನ ಸಂಹಾರ ಹಾಗೂ ಆ ಅಸುರನಿಂದ ಗುಹೆಯಲ್ಲಿ ಬಂಧಿತರಾಗಿದ್ದ ಎಲ್ಲ ಗೋಪಾಲಕರ ವಿಮೋಚನೆ.

**ಶ್ಲೋಕ - ೧೦** ಪುಟ - 286

ನಾರದರಿಂದ ಎಲ್ಲ ವಿಷಯವನ್ನು ತಿಳಿದ ಕಂಸನು ಬಲರಾಮ - ಶ್ರೀಕೃಷ್ಣರನ್ನು ಮಥುರೆಗೆ ಕರೆ ತರುವಂತೆ ತನ್ನ ಮಂತ್ರಿಯಾದ ಅಕ್ರೂರನನ್ನು ಗೋಕುಲಕ್ಕೆ ಕಳುಹಿಸುವನು. ಶ್ರೀಕೃಷ್ಣ ಭಕ್ತನಾದ ಅಕ್ರೂರನು ಎಲ್ಲ ವಿಷಯಗಳನ್ನು ಯಥಾವತ್ತಾಗಿ ಅರುಹಿ ಶ್ರೀಕೃಷ್ಣನನ್ನು ಆಮಂತ್ರಿಸುವನು. ವ್ರಜಯುವತಿಯರ ವಿರಹ ಶೋಕ, ಶ್ರೀಕೃಷ್ಣನಿಂದ ಸಾಂತ್ವನ, ಎಲ್ಲರೂ ಮಥುರೆಗೆ ಹೊರಡುವರು. ಯಮುನಾ ನದಿಯಲ್ಲಿ ಸ್ನಾನ ಮಾಡುತ್ತಿರುವ ಅಕ್ರೂರನಿಗೆ ಶ್ರೀಕೃಷ್ಣನಿಂದ ತನ್ನ ಮೂಲರೂಪ ದರ್ಶನ. ರಜಕಸಂಹಾರ, ತ್ರಿವಕ್ರೆಯಾದ ಕುಬ್ಜಳಾದ ಸೈರಂಧ್ರಿಯ ಉದ್ಧಾರ.

**ಶ್ಲೋಕ - ೧೧** ಪುಟ - 309

ಶ್ರೀಕೃಷ್ಣ ನಿಂದ ಶಿವಧನುರ್ಭಂಗ. ಕಂಸನ ಭೃತ್ಯರು ಹಾಗೂ ಸೈನಿಕರ ಸಂಹಾರ. ಕುವಲಯಾಪೀಡವೆಂಬ ಗಜ ಸಂಹಾರ, ಚಾಣೂರ ಮತ್ತು ಮುಷ್ಟಿಕರೆಂಬ ಮಲ್ಲರ ಸಂಹಾರ. ಭೋಜದೇಶಾಧಿಪತಿಯಾದ ಕಂಸನ ವಧೆ. ಸ್ವಕೀಯರನ್ನು ಸಂತೋಷಪಡಿಸುವಿಕೆ. ಗರ್ಗಾಚಾರ್ಯರಿಂದ ಬಲರಾಮ ಶ್ರೀಕೃಷ್ಣರಿಗೆ ಉಪನಯನ ಸಂಸ್ಕಾರ. ಸಾಂದೀಪಿನೀಗುರುಗಳಲ್ಲಿ ವಿದ್ಯಾಭ್ಯಾಸ, ಗುರುಕುಲವಾಸ.

**ಶ್ಲೋಕ - ೧೨** ಪುಟ - 341

ಸಾಂದೀಪಿನೀ ಗುರುಗಳಿಗೆ ಗುರುದಕ್ಷಿಣೆಯಾಗಿ ಅವರ ಮೃತಪುತ್ರನನ್ನು ತಂದು ಒಪ್ಪಿಸುವುದು. ತನ್ನ ವಿರಹದಿಂದ ದುಃಖಿತರಾದ ಗೋಕುಲವಾಸಿಗಳಿಗೆ ಉದ್ಧವನ ಮೂಲಕ ಶುಭಸಂದೇಶವನ್ನು ಕಳುಹಿಸಿ ಸಂತೋಷಬಡಿಸಿದನು. ಸೈರಂಧ್ರಿಯ ಮನೋರಥವನ್ನು ಪೂರ್ಣಗೊಳಿಸಿದನು. ಅಕ್ರೂರನಿಂದ ಸತ್ಕಾರ. ಕೌರವರಿಂದ ಪೀಡಿತರಾದ ಪಾಂಡುಪುತ್ರರ ಸಮಾಚಾರವನ್ನು ಅಕ್ರೂರನಿಂದ ತಿಳಿಯುವನು.

ಅಳಿಯನಾದ ಕಂಸನ ಸಂಹಾರದಿಂದ ಮಗಳು ವಿಧವೆಯಾಗಲು ಕುಪಿತನಾದ ಜರಾಸಂಧನಿಂದ ಶ್ರೀಕೃಷ್ಣನನ್ನು ಸಂಹರಿಸುವ ವ್ಯರ್ಥಪ್ರಯತ್ನ. ಶ್ರೀಕೃಷ್ಣನು ಜರಾಸಂಧನನ್ನು ಅನೇಕಸಲ ಯುದ್ಧದಲ್ಲಿ ಸೋಲಿಸಿ ಓಡಿಸಿದನು.

**ಶ್ಲೋಕ - ೧೩** **ಪುಟ - 377**

ಶ್ರೀಕೃಷ್ಣನು ಮಥುರೆಯಿಂದ ಕರವೀರಪುರಕ್ಕೆ ಹೊರಟನು. ಮಾರ್ಗಮಧ್ಯದಲ್ಲಿ ಶ್ರೀಪರಶುರಾಮದೇವರ ದರ್ಶನ ಹಾಗೂ ಕುಶಲ ಭಾಷಣ, ಗೋಮಂತ ಪರ್ವತಕ್ಕೆ ಬರುವನು. ಗರುಡನಿಂದ ಸಮರ್ಪಿಸಲ್ಪಟ್ಟ ಕಿರೀಟವನ್ನು ಸ್ವೀಕರಿಸುವನು. ಕರವೀರಪುರದಲ್ಲಿ ಶೃಗಾಲ ವಾಸುದೇವನ ಸಂಹಾರ. ಸಮುದ್ರದಲ್ಲಿ ನಿರ್ಮಿಸಲ್ಪಟ್ಟ ದ್ವಾರಕಾಪಟ್ಟಣಕ್ಕೆ ಬಂಧುಗಳಾದ ಯಾದವ ಸಮೂಹವನ್ನು ಕರೆದೊಯ್ಯುವನು. ಮುಚುಕುಂದ ಮಹಾರಾಜನ ಅಕ್ಷಿಗಳಿಂದ ಉತ್ಪನ್ನವಾದ ಅಗ್ನಿಯಿಂದ ಕಾಲಯವನ ನಾಮಕ ಅಸುರನ ಸಂಹಾರ.

**ಶ್ಲೋಕ - ೧೪** **ಪುಟ - 400**

ಮುಚುಕುಂದ ಮಹಾರಾಜನಿಂದ ಶ್ರೀಕೃಷ್ಣಸ್ತುತಿ. ಕಾಲಯವನ ಸೈನಿಕರ ಸಂಹಾರ, ಜರಾಸಂಧನ ಪರಾಜಯ, ಜರಾಸಂಧನಿಂದ ಗೋಮಂತಕ ಪರ್ವತಾಗ್ರದಲ್ಲಿರುವ ಶ್ರೀಕೃಷ್ಣಬಲರಾಮರನ್ನು ಜೀವಂತ ದಹಿಸುವ ವ್ಯರ್ಥಪ್ರಯತ್ನ, ಶ್ರೀಕೃಷ್ಣನಿಂದ ಸರ್ವರ ರಕ್ಷಣೆ. ಕುಂಡಿನಪುರದಲ್ಲಿ ರುಕ್ಮಿಣಿಯನ್ನು ಅಪಹರಿಸಿ ದ್ವಾರಕಾಪುರಕ್ಕೆ ಬಂದು ಪಾಣಿಗ್ರಹಣ ಮಾಡುವನು.

**ಶ್ಲೋಕ - ೧೫** **ಪುಟ - 466**

ಶ್ರೀಕೃಷ್ಣನು ರುಕ್ಮಿಣಿಯ ಪ್ರಾರ್ಥನೆಯಂತೆ ರುಕ್ಮಿಯನ್ನು ಸಂಹರಿಸದೇ ವಿರೂಪಗೊಳಿಸುವನು. ಸ್ಯಮಂತಕಮಣಿಯನ್ನು ಸ್ವೀಕರಿಸುವನು. ಜಾಂಬವತೀ ಹಾಗೂ ಸತ್ಯಭಾಮೆಯರನ್ನು ವಿವಾಹವಾಗುವನು. ಪಾಂಡವರ ವಾರ್ತೆಯನ್ನು ತಿಳಿಯಲು ಹಸ್ತಿನಾವತಿಗೆ ಬರುವನು. ಸ್ಯಮಂತಕಮಣಿಯ ಮೇಲಿನ ಮೋಹದಿಂದ ತನ್ನ ತಂದೆಯಾದ ಸತ್ರಾಜಿತನನ್ನು ಸಂಹರಿಸಿ ಶತಧನ್ವನು ಮಣಿಯನ್ನು ಅಪಹರಿಸಿದನೆಂಬ ವಾರ್ತೆಯಿಂದ ದುಃಖಿತಳಾದ ಸತ್ಯಭಾಮೆಯನ್ನು ಸಾಂತ್ವನಗೊಳಿಸುವನು. ಪಾಂಚಾಲ ದೇಶದಲ್ಲಿ ದ್ರೌಪದಿಯ ಸ್ವಯಂವರ, ಅಲ್ಲಿ ಪಾಂಡುಪುತ್ರರೊಡನೆ ಸಮಾಗಮ ಹಾಗೂ ಅವರಿಂದ ಶ್ರೀಕೃಷ್ಣನ ಸತ್ಕಾರ.

**ಶ್ಲೋಕ - ೧೬** **ಪುಟ - 500**

ಶ್ರೀಕೃಷ್ಣನು ದ್ರೌಪದಿಯ ಸ್ವಯಂವರದ ನಂತರ ಪಾಂಚಾಲದೇಶದಿಂದ ದ್ವಾರಕೆಗೆ ಬರುವನು. ಸತ್ರಾಜಿತನನ್ನು ಕೊಂದಿದ್ದ ಶತಧನ್ವನನ್ನು ಸಂಹರಿಸುವನು. ಸ್ಯಮಂತಕಮಣಿಯು ಅಕ್ರೂರನಲ್ಲಿರುವುದನ್ನು ತೋರಿಸಿ ಬಲರಾಮನ ಕೋಪವನ್ನು ಕಳೆಯುವನು. ಪಾಂಡವರನ್ನು ನೋಡಲು ಇಂದ್ರಪ್ರಸ್ಥಪುರಕ್ಕೆ ಬರುವನು. ಅರ್ಜುನನೊಂದಿಗೆ ಶ್ರೀಕೃಷ್ಣನು ಬೇಟೆಯಾಡಲು ಯಮುನಾತೀರಕ್ಕೆ ಬಂದಾಗ ಅಲ್ಲಿ ಸೂರ್ಯಪುತ್ರಿಯಾದ ಕಾಲಿಂದಿಯನ್ನು ವೈದಿಕ ವಿಧಿಪೂರ್ವಕ ವಿವಾಹವಾಗುವನು. ವಿಶ್ವಕರ್ಮನಿಂದ ಪಾಂಡವರಿಗಾಗಿ ವಿಸ್ತಾರವಾದ ಇಂದ್ರಪ್ರಸ್ಥಪುರವನ್ನು ನಿರ್ಮಾಣಮಾಡಿಸಿ ಶ್ರೀಕೃಷ್ಣನು ಪುನಃ ದ್ವಾರಕೆಗೆ ಹೊರಟು ಬರುವನು.

**ಶ್ಲೋಕ - ೧೭** **ಪುಟ - 523**

ಶ್ರೀಕೃಷ್ಣನು ಮಿತ್ರವಿಂದೆ ಎಂಬ ಕನ್ಯೆಯನ್ನು ವಿವಾಹವಾದನು. ಅನಂತರ ನಿರಾಯುಧನಾಗಿ ಒಬ್ಬನೇ ಏಳು ಬಲಿಷ್ಠವಾದ ವೃಷಭಗಳನ್ನು ಏಕಕಾಲಕ್ಕೆ ಪಾಶದಿಂದ ಬಂಧಿಸಿ ನಗ್ನಜಿತ್ ರಾಜನ ಮಗಳಾದ ನೀಲಾದೇವಿಯನ್ನು ವಿವಾಹವಾದನು. ನಂತರ ಕೇಕಯ ದೇಶಕ್ಕೆ ಬಂದು ಅಲ್ಲಿನ ರಾಜನಾದ ಶ್ರುತಕೀರ್ತಿಯ ಮಗಳಾದ ಭದ್ರಾದೇವಿಯನ್ನು ಸ್ವೀಕರಿಸಿದನು. ಅಲ್ಲಿಂದ ಮದ್ರದೇಶಕ್ಕೆ ಬಂದು ಮದ್ರದೇಶಾಧಿಪತಿಯ ಮಗಳಾದ

ಲಕ್ಷ್ಮಣಾದೇವಿಯನ್ನು ಪರಿಗ್ರಹಿಸಿದನು. ಇಂದ್ರನಿಂದ ಪ್ರಾರ್ಥಿಸಲ್ಪಟ್ಟ ಶ್ರೀಕೃಷ್ಣನು ಭೂದೇವಿಯ ಮಗನಾದ ನರಕಾಸುರನ ಪಟ್ಟಣದೊಳಗೆ ಪ್ರವೇಶ ಮಾಡಿ ಅಲ್ಲಿ ತನ್ನೊಡನೆ ಯುದ್ಧಕ್ಕೆ ಬಂದ ನರಕಾಸುರನ ಮಂತ್ರಿಯಾದ ಮುರನೆಂಬ ದೈತ್ಯನನ್ನು ಚಕ್ರದಿಂದ ಸಂಹರಿಸಿ ದೇವತೆಗಳಿಂದ ಸ್ತುತ್ಯನಾದನು.

**ಶ್ಲೋಕ - ೧೮** **ಪುಟ - 539**

ಶ್ರೀಕೃಷ್ಣನು ಮುರವಧಾನಂತರ ನರಕಾಸುರನ ಇತರ ನಾಲ್ವರು ಮಂತ್ರಿಗಳನ್ನು ಸಂಹರಿಸಿ ನಂತರ ಆ ೫ ಮಂತ್ರಿಗಳ ೩೫ ಜನ ಮಕ್ಕಳನ್ನು ಸಂಹರಿಸಿದನು. ಭೂದೇವಿಯ ಮಗನಾದ ನರಕಾಸುರನೊಂದಿಗೆ ಘೋರವಾದ ಯುದ್ಧವನ್ನು ಮಾಡಿ ಚಕ್ರದಿಂದ ಆ ಅಸುರನ ಶಿರಸ್ಸನ್ನು ಕತ್ತರಿಸಿ ಸಂಹರಿಸಿದನು. ಧರಾದೇವಿಯಿಂದ ಸ್ತುತನಾಗಿ ಶ್ರೀಕೃಷ್ಣನು ನರಕಾಸುರನ ಮಗನಾದ ಭಗದತ್ತನನ್ನು ತಂದೆಯ ರಾಜ್ಯದಲ್ಲಿ ಪಟ್ಟಾಭಿಷಿಕ್ತನನ್ನಾಗಿ ಮಾಡಿದನು. ನರಕಾಸುರನಿಂದ ಅಕ್ಷತ ಕನ್ಯೆಯರನ್ನು ಅವರ ಪ್ರಾರ್ಥನೆಯಂತೆ ಬಂಧಮುಕ್ತರನ್ನಾಗಿ ಮಾಡಿ ದ್ವಾರಕೆಗೆ ಕರೆದೊಯ್ದು ವಿವಾಹವಾದನು. ನರಕಾಸುರನಿಂದ ಅಪಹರಿಸಲ್ಪಟ್ಟ ಕರ್ಣಕುಂಡಲಗಳನ್ನು ದೇವೇಂದ್ರನ ತಾಯಿಯಾದ ಅದಿತಿದೇವಿಗೆ ಪುನಃ ಕೊಡಿಸುವ ಮೂಲಕ ಅವಳಿಗೆ ಸಂತೋಷವನ್ನುಂಟು ಮಾಡಿದನು.

**ಶ್ಲೋಕ - ೧೯** **ಪುಟ - 550**

ನಂದನವನದಲ್ಲಿ ವಿಹರಿಸುತ್ತಿರುವಾಗ ಸತ್ಯಭಾಮೆಯ ಪ್ರಾರ್ಥನೆಯಂತೆ ಅಲ್ಲಿದ್ದ ಪಾರಿಜಾತ ವೃಕ್ಷವನ್ನು ಬುಡಸಹಿತ ಕಿತ್ತಿ ಗರುಡಾರೂಢರಾಗಿ ದ್ವಾರಕೆಗೆ ಹೊರಟನು. ಇದನ್ನು ಪ್ರತಿರೋಧಿಸಿದ ಇಂದ್ರಾದಿದೇವತೆಗಳನ್ನು ಸೋಲಿಸಲು ಪರಾಜಿತರಾದ ಇಂದ್ರಾದಿಗಳಿಂದ ಸ್ತುತ್ಯನಾದನು. ಶ್ರೀಕೃಷ್ಣನಿಂದ ರುಕ್ಮಿಣಿಯಲ್ಲಿ ಪ್ರದ್ಯುಮ್ನನ ಜನನ. ಪೌಂಡ್ರಕವಾಸುದೇವನ ಸಂಹಾರ, ತಂದೆಯ ಮರಣದಿಂದ ಕುಪಿತನಾದ ಸುದಕ್ಷಿಣನು ದ್ವಾರಕೆಯನ್ನು ನಾಶಪಡಿಸಲು ಪ್ರಯೋಗಿಸಿದ ಅಗ್ನಿಸ್ವರೂಪವಾದ ಕೃತ್ಯವನ್ನು ಶ್ರೀಕೃಷ್ಣನು ತನ್ನ ರಥದ ಚಕ್ರದ ಕಾಂತಿಯಿಂದ ವಿಫಲಗೊಳಿಸಲು, ಅದು ತಿರುಗಿ ಬಂದು ಸುದಕ್ಷಿಣನನ್ನು ಮತ್ತು ಅವನ ಸೈನಿಕರನ್ನು ನಾಶಗೊಳಿಸಿತು.

**ಶ್ಲೋಕ - ೨೦** **ಪುಟ - 569**

ಶ್ರೀಕೃಷ್ಣನು ಒಮ್ಮೆ ಸೂರ್ಯಗ್ರಹಣದ ಸಮಯಕ್ಕೆ ತನ್ನ ಪತ್ನಿ, ಪುತ್ರರು, ಪೌತ್ರರು, ಬಂಧುಬಾಂಧವರೊಂದಿಗೆ ಶ್ರೀಪರಶುರಾಮದೇವರಿಂದ ನಿರ್ಮಿತವಾಗಿದ್ದ "ಸ್ಯಮಂತ ಪಂಚಕ" ವೆಂಬ ಪುಣ್ಯಕ್ಷೇತ್ರಕ್ಕೆ ಬಂದನು. ಅಲ್ಲಿ ತನ್ನ ದರ್ಶನಕ್ಕಾಗಿ ಬಂದ ಸಕಲ ಮುನಿವೃಂದವನ್ನೂ, ಬಂಧುಗಳನ್ನೂ ಸಂತೋಷಬಡಿಸಿ ತನ್ನ ತಂದೆಯಾದ ವಸುದೇವನಿಂದ ಯಾಗವನ್ನು ಮಾಡಿಸಿದನು. ನಂತರ ಎಲ್ಲರೊಡಗೂಡಿ ದ್ವಾರಕಾಪಟ್ಟಣಕ್ಕೆ ಬಂದು ಅಲ್ಲಿ ತನ್ನ ತಂದೆಯಾದ ವಸುದೇವನಿಗೆ ಭಗವದ್ವಿಷಯಕ ತತ್ತ್ವಗಳನ್ನು ಉಪದೇಶಿಸಿದನು. ತಾಯಿಯಾದ ದೇವಕಿಯಿಂದ ಪ್ರಾರ್ಥಿತನಾದ ಶ್ರೀಕೃಷ್ಣನು ಕಂಸನಿಂದ ಸಂಹೃತರಾಗಿದ್ದ ಆರು ಜನ ಮಕ್ಕಳನ್ನು ಸುತಲಲೋಕದಿಂದ ಕರೆತಂದು ತಾಯಿಗೆ ತೋರಿಸಿ ಹರ್ಷವನ್ನುಂಟುಮಾಡಿದನು.

**ಶ್ಲೋಕ - ೨೧** **ಪುಟ - 595**

ಶ್ರೀಕೃಷ್ಣನು ಅಂತಃಪುರದಲ್ಲಿ ರುಕ್ಮಿಣಿಯೊಡನೆ ನಾನಾ ರೀತಿಯ ಹಾಸ್ಯವಚನಗಳಿಂದ ಮತ್ತು ನರ್ಮವಾಕ್ಯಗಳಿಂದ ರಮಿಸುವನು. ಅದರಂತೆಯೇ ಬೇರೆ ಬೇರೆ ಅಂತಃಪುರಗಳಲ್ಲಿರುವ ಇತರ ಸ್ತ್ರೀಯರೊಂದಿಗೆ ಕ್ರೀಡಿಸುವನು. ಶ್ರೀಕೃಷ್ಣನಿಗೆ ಒಬ್ಬೊಬ್ಬ ಸ್ತ್ರೀಯಲ್ಲಿಯೂ ಹತ್ತು ಹತ್ತು ಜನ ಪುತ್ರರು ಮತ್ತು ಒಬ್ಬ ಪುತ್ರಿಯ ಜನನ.

ಪ್ರಾಪ್ತ ವಯಸ್ಕರಾದ ಅವರೆಲ್ಲರ ವಿವಾಹ. ಪೌತ್ರರು ಹಾಗೂ ಪ್ರಪೌತ್ರರ ಜನನ. ತನ್ನ ಪೌತ್ರನಾದ ಅಂದರೆ ಮಗನಾದ ಪ್ರದ್ಯುಮ್ನನ ಪುತ್ರನಾದ ಅನಿರುದ್ಧನಿಗೆ ರುಕ್ಮಿಯ ಮೊಮ್ಮಗಳೊಡನೆ ವಿವಾಹ. ಬಲರಾಮನಿಂದ ರುಕ್ಮಿಯ ಸಂಹಾರ. ಎಲ್ಲ ಪತ್ನಿ ಪುತ್ರ-ಪೌತ್ರಾದಿಗಳೊಂದಿಗೆ ಸುಖ ಸಂಸಾರ.

**ಶ್ಲೋಕ - ೨೨** **ಪುಟ - 612**

ಹದಿನಾರು ಸಹಸ್ರ ಪತ್ನಿಯರ ರತ್ನಖಚಿತವಾದ ಅಂತಃಪುರಗಳಲ್ಲಿ ಒಂದು ಮನೆಯಲ್ಲಿ ಮಲಗಿದ್ದರೆ, ಇನ್ನೊಂದು ಮನೆಯಲ್ಲಿ ಭೋಜನ ಮಾಡುವನು. ಬೇರೊಂದು ಮನೆಯಲ್ಲಿ ಮಂತ್ರಜಪ, ಬೇರೆಡೆ ಕ್ರೀಡಾರ್ಥವಾಗಿ ಬೇಟೆಗಾಗಿ ಹೋಗುವನು. ಕೆಲ ಮನೆಗಳಲ್ಲಿ ಪಗಡೆಯಾಟವನ್ನು ಆಡುವನು. ಕೆಲವು ಕಡೆ ವೇದೋಪನ್ಯಾಸಗಳನ್ನು ಮಾಡುತ್ತಿದ್ದರೆ ಇನ್ನು ಕೆಲವು ಕಡೆ ಉದ್ಧವಾದಿಗಳೊಂದಿಗೆ ಮಂತ್ರಾಲೋಚನೆ ಮಾಡುವನು. ಶಿಶುಪಾಲನೆಯನ್ನು ಮಾಡುವನು. ಹೀಗೆ ಒಂದೊಂದು ಮನೆಯಲ್ಲಿ ಒಂದೊಂದು ರೀತಿಯ ವ್ಯಾಪಾರಗಳನ್ನು ಏಕಕಾಲಕ್ಕೆ ಮಾಡುತ್ತಿರುವುದನ್ನು ಪರೀಕ್ಷಾರ್ಥವಾಗಿ ಬಂದ ನಾರದರಿಗೆ ತೋರಿಸಿ ತನ್ನ ಅಚಿಂತ್ಯಾದ್ಭುತ ಮಹಿಮೆಗಳನ್ನು ಪ್ರಕಟಪಡಿಸಿದನು.

**ಶ್ಲೋಕ - ೨೩** **ಪುಟ - 639**

ಶ್ರೀಕೃಷ್ಣನು ನಿತ್ಯ ಅರುಣೋದಯ ಕಾಲದಲ್ಲೆದ್ದು ಪ್ರಾತರ್ವಿಧಿಗಳನ್ನು ಮುಗಿಸಿ ಸ್ನಾನ ಸಂಧ್ಯಾದಿ ಸ್ವಾಶ್ರಮೋಚಿತ ನಿತ್ಯಕರ್ಮಗಳನ್ನು ಮುಗಿಸುತ್ತಿದ್ದನು. ನಂತರ "ಸುಧರ್ಮಾ" ಎಂಬ ನಿರ್ದುಷ್ಟವಾದ ದಿವ್ಯ ಸಭೆಗೆ ಬಂದು ಅಲ್ಲಿ ಶ್ರೇಷ್ಠ ಸಿಂಹಾಸನದಲ್ಲಿ ವಿರಾಜಮಾನನಾಗಿ ರಾಜ್ಯಭಾರವನ್ನು ನಡೆಸುತ್ತಿದ್ದನು.

ಜರಾಸಂಧನಿಂದ ಕಾರಾಗೃಹದಲ್ಲಿ ಬಂಧಿತರಾದ ಎಲ್ಲ ರಾಜರು ತಮ್ಮನ್ನು ಮುಕ್ತರನ್ನಾಗಿ ಮಾಡುವಂತೆ ಪ್ರಾರ್ಥಿಸಲು, ಒಂದು ದಿನ ಶ್ರೀಕೃಷ್ಣನಲ್ಲಿ ಒಬ್ಬ ದೂತನನ್ನು ಕಳುಹಿಸಿದರು. ಆ ದೂತನಿಗೆ ಅಭಯವಚನವನ್ನಿತ್ತು ಶ್ರೀಕೃಷ್ಣನು ಪಾಂಡವರು ರಾಜಸೂಯ ಯಾಗಕ್ಕೆಂದು ಅವರ ರಾಜಧಾನಿ ಇಂದ್ರಪ್ರಸ್ಥಕ್ಕೆ ಹೋದನು. ಅಲ್ಲಿ ಪಾಂಡವರಿಂದ ಸತ್ಕೃತನಾಗಿ ಭೀಮನಿಂದ ಜರಾಸಂಧನ ಸಂಹಾರವನ್ನು ಮಾಡಿಸಿ ಸಕಲ ರಾಜರನ್ನು ಬಂಧಮುಕ್ತರನ್ನಾಗಿ ಮಾಡಿದನು.

**ಶ್ಲೋಕ - ೨೪** **ಪುಟ - 660**

ಶ್ರೀಕೃಷ್ಣನು ಜರಾಸಂಧನ ವಧೆಯ ನಂತರ ಅವನ ಮಗನಾದ ಸಹದೇವನನ್ನು ಮಗಧದೇಶಕ್ಕೆ ರಾಜನನ್ನಾಗಿ ನೇಮಿಸಿದನು. ನಂತರ ಚೇದಿದೇಶದ ರಾಜನಾದ ಶಿಶುಪಾಲನನ್ನು ಸಂಹರಿಸಿ ಧರ್ಮರಾಜನ ರಾಜಸೂಯ ಯಾಗವು ನಿರ್ವಿಘ್ನವಾಗಿ ನೆರವೇರುವಂತೆ ಮಾಡಿದನು. ಯಾಗವು ಮುಗಿದ ನಂತರ ಇಂದ್ರಪ್ರಸ್ಥದಿಂದ ದ್ವಾರಕೆಗೆ ತಿರುಗಿ ಬಂದ ಶ್ರೀಕೃಷ್ಣನು ದ್ವಾರಕೆಯ ಪ್ರಾಕಾರಾದಿಗಳನ್ನು ನಾಶ ಮಾಡಿದ ಸಾಲ್ವನೆಂಬ ಅಸುರನ ಸಂಹಾರ ಮಾಡಿದನು.

**ಶ್ಲೋಕ - ೨೫** **ಪುಟ - 686**

ಎಂದಿನಂತೆ ಶ್ರೀಕೃಷ್ಣನು 'ಸುಧರ್ಮಾ' ಎಂಬ ತನ್ನ ಸಭೆಯಲ್ಲಿ ಸಿಂಹಾಸನದಲ್ಲಿ ಕುಳಿತಿರುವಾಗ, ಅಧರ್ಮಿಯಾದ ದುರ್ಯೋಧನನಿಂದ ಕಪಟದ್ಯೂತದಲ್ಲಿ ಪರಾಜಿತನಾದ ಧರ್ಮರಾಜನು ಪತ್ನಿ ಹಾಗೂಅನುಜರೊಂದಿಗೆ ೧೨ ವರ್ಷ ವನವಾಸ ಹಾಗೂ ೧ ವರ್ಷ ಅಜ್ಞಾತವಾಸಕ್ಕಾಗಿ ಅರಣ್ಯಕ್ಕೆ ಹೋಗಿರುವ

ಸಮಾಚಾರವನ್ನು ಒಬ್ಬ ಬ್ರಾಹ್ಮಣನಿಂದ ಕೇಳಿದನು. ಇದರಿಂದ ಉದ್ವಿಗ್ನನಾದ ಶ್ರೀಕೃಷ್ಣನು ಸತ್ಯಭಾಮಾದೇವಿಯೊಡನೆ ಪಾಂಡವರಿದ್ದಲ್ಲಿ ಬಂದು ಅವರನ್ನು ಬಹುವಿಧವಾಗಿ ಸಾಂತ್ವನಗೊಳಿಸಿ ದ್ವಾರಕೆಗೆ ಮರಳಿ ಬಂದನು. ದ್ವಾರಕೆಯ ಉಪವನದಲ್ಲಿಯ ಹಾಳು ಬಾವಿಯೊಂದರಲ್ಲಿ ಬ್ರಹಸ್ವ ಅಪಹರಿಸಿದ್ದರಿಂದ ಓತಿಕಾಟ ಜನ್ಮವನ್ನು ಹೊಂದಿ ದುಃಖಪಡುತ್ತಿದ್ದ ನೃಗರಾಜನನ್ನು ಉದ್ಧರಿಸಿ ದಿವ್ಯರೂಪವುಳ್ಳವನನ್ನಾಗಿ ಮಾಡಿದನು. ವಿದೇಹದೇಶಾಧಿಪತಿಯಾದ ಬಹುಲಾಶ್ವರಾಜನ ಮನೆಗೆ ಯೋಗಿ ಅಲ್ಲಿ ಕೆಲ ದಿನಗಳ ವರೆಗೆ ವಾಸಿಸಿ ಎಲ್ಲರನ್ನೂ ಸಂತೋಷಬಡಿಸಿದನು. ಅದರಂತೆ ಯಾದವ ಶ್ರೇಷ್ಠನಾದ ಶ್ರುತದೇವನಲ್ಲಿ ಕೆಲ ದಿನವಿದ್ದು ಅವರಿಂದ ಬೀಳ್ಕೊಂಡು ದ್ವಾರಕೆಗೆ ತಿರುಗಿಬಂದನು. ಪಾಂಡವರು ವನವಾಸ, ಅಜ್ಞಾತವಾಸಗಳನ್ನು ಮುಗಿಸಿ ಉಪಪ್ಲಾವ್ಯನಗರಕ್ಕೆ ಬಂದಿರುವದನ್ನು ತಿಳಿದು ಸಂತೋಷಭರಿತನಾದ ಶ್ರೀಕೃಷ್ಣನು ಪಾಂಡವರನ್ನು ಕಾಣಲು ಬಹುಸೇನೆಯಿಂದ ಕೂಡಿಕೊಂಡು ಉಪಪ್ಲಾವ್ಯ ನಗರಕ್ಕೆ ಬಂದನು.

**ಶ್ಲೋಕ - ೨೬** **ಪುಟ - 693**

ಶ್ರೀಕೃಷ್ಣನು ಕುರುಪಾಂಡವರ ಸಂಧಿಗಾಗಿ ದೂತಕಾರ್ಯವನ್ನು ಮಾಡಿದನು. ಹಸ್ತಿನಾವತಿಯಲ್ಲಿ ದುಷ್ಟ ದುರ್ಯೋಧನಾದಿಗಳು ಸಂಧಿಗಾಗಿ ದೂತನಾಗಿ ಬಂದ ಶ್ರೀಕೃಷ್ಣನನ್ನೇ ಬಂಧಿಸಲು ವಿಫಲಪ್ರಯತ್ನ ನಡೆಸಿದಾಗ ಶ್ರೀಕೃಷ್ಣನು ತನ್ನ ಅಪರಿಚ್ಛಿನ್ನ ಅನಂತ ದಿವ್ಯ ರೂಪಗಳನ್ನು ಪ್ರಕಟಿಸಿ ಎಲ್ಲರಿಗೂ ಬಹು ಭಯವನ್ನು ಹುಟ್ಟಿಸಿದನು. ಧೃತರಾಷ್ಟ್ರನಿಗೆ ದಿವ್ಯದೃಷ್ಟಿಯನ್ನಿತ್ತು ಅವನಿಗೆ ತನ್ನ ವಿಶ್ವರೂಪವನ್ನು ತೋರಿಸಿ ಅವನಿಂದ ಸ್ತುತನಾದನು. ಯುದ್ಧದಲ್ಲಿ ಅರ್ಜುನನ ಸಾರಥ್ಯವನ್ನು ವಹಿಸಿ ಅವನಿಗೆ ಗೀತೋಪದೇಶವನ್ನು ಮಾಡಿ ದಿವ್ಯದೃಷ್ಟಿಯನ್ನಿತ್ತು ತನ್ನ ವಿಶ್ವರೂಪದರ್ಶನವನ್ನು ಮಾಡಿಸಿದನು. ರುದ್ರದೇವರಿಂದ ಅರ್ಜುನನಿಗೆ ದಿವ್ಯಾಸ್ತ್ರಗಳನ್ನು ಕೊಡಿಸಿ ಅವನಿಂದ ಯುದ್ಧದಲ್ಲಿ ಜಯದ್ರಥನ ಸಂಹಾರ ಮಾಡಿಸಿದನು. ಪಾಂಡವರಿಂದ ಸಕಲ ಕೌರವರನ್ನೂ ಕೊಲ್ಲಿಸಿ ಕೊನೆಗೆ ಭೀಮಸೇನನಿಂದ ದುಷ್ಟ ದುರ್ಯೋಧನನ ಸಂಹಾರ ಮಾಡಿಸಿದನು. ಧರ್ಮರಾಜನನ್ನು ಹಸ್ತಿನಾವತಿಯ ಸಾರ್ವಭೌಮ ರಾಜನನ್ನಾಗಿ ಮಾಡಿದನು.

**ಶ್ಲೋಕ - ೨೭** **ಪುಟ - 697**

ಧರ್ಮಿಷ್ಠರಾದ ಪಾಂಡವರಿಗೆ ಸಾಮ್ರಾಜ್ಯ ಪ್ರಾಪ್ತಿಯಾದ ಮೇಲೆ ಅವರಿಂದ ಸತ್ಕೃತನಾಗಿ ಬೀಳ್ಕೊಂಡು ಶ್ರೀಕೃಷ್ಣನು ದ್ವಾರಕಾಪಟ್ಟಣಕ್ಕೆ ತಿರುಗಿ ಬಂದು ಸುಖವಾಗಿದ್ದನು. ಬಾಲ್ಯಮಿತ್ರನಾದ ಕುಚೇಲನಿಗೆ ಸಕಲೈಶ್ವರ್ಯಗಳನ್ನು ಕೊಟ್ಟು ಸಂತೋಷಪಡಿಸಿದನು. ಒಮ್ಮೆ ಶ್ರೀಕೃಷ್ಣನು ಪರಮಪ್ರಿಯರಾದ ಪಾಂಡವರು, ಯಾದವ ಬಾಂಧವರು, ನಾನಾ ದೇಶಗಳಿಂದ ಬಂದ ರಾಜಾಧಿರಾಜರು, ಋಷಿಮುನಿಗಳನ್ನು ಕರೆಯಿಸಿಕೊಂಡು ಅಶ್ವಮೇಧವೆಂಬ ಮಹಾಯಜ್ಞವನ್ನು ಪ್ರಾರಂಭಿಸಿದನು. ಆ ಸಮಯಕ್ಕೆ 'ತನ್ನ ಮಕ್ಕಳನ್ನು ಕಾಪಾಡಬೇಕು' ಎಂದು ಕೂಗುತ್ತ ಬಂದ ಬ್ರಾಹ್ಮಣನನ ಪ್ರಾರ್ಥನೆಯನ್ನು ಮನ್ನಿಸಿ ಶ್ರೀಕೃಷ್ಣನು ಬ್ರಾಹ್ಮಣಪುತ್ರರನ್ನು ರಕ್ಷಿಸಿ ಅರ್ಜುನನ ಗರ್ವಪರಿಹಾರ ಮಾಡಿದನು. ಅರ್ಧ ಮುಹೂರ್ತಕಾಲಯಜ್ಞ ವಿಚ್ಛೇದವಾದ್ದರಿಂದ ಪ್ರಾಯಶ್ಚಿತ್ತ ರೂಪ ಕರ್ಮವನ್ನಾಚರಿಸಿ ಯಜ್ಞವನ್ನು ಪೂರ್ಣಗೊಳಿಸಿದನು. ಮುಂದೆ ದಂತವಕ್ತ್ರನೆಂಬ ದೈತ್ಯನನ್ನು ಸಂಹರಿಸಿ ದ್ವಾರಕಾ ಪಟ್ಟಣಕ್ಕೆ ತಿರುಗಿ ಬಂದು ಉದ್ಧವನಿಗೆ ಅನೇಕ ತತ್ತ್ವಗಳನ್ನು ಉಪದೇಶಿಸಿದನು.

**ಶ್ಲೋಕ - ೨೮** **ಪುಟ - 700**

ಲೋಕಕಂಟಕರಾದ ದುಷ್ಟರ ಶಿಕ್ಷಣ ಮತ್ತು ಶಿಷ್ಟರ ಪರಿಪಾಲನಾದಿ ಕಾರ್ಯಗಳಿಂದ ಸಜ್ಜನರಿಗೆ ಆನಂದವನ್ನುಂಟು ಮಾಡುತ್ತ ಶ್ರೀಕೃಷ್ಣನು ಬ್ರಹ್ಮಾದಿದೇವತೆಗಳಿಂದ ಪಾರಿಜಾತ ಮುಂತಾದ ದೇವವೃಕ್ಷಗಳ ಪುಷ್ಪಗಳಿಂದ ಅಭಿಷೇಕ ಮಾಡಿಸಿಕೊಳ್ಳಲ್ಪಟ್ಟನು. ಅಭಿಷೇಕ ಸಮಯದಲ್ಲಿ ಗಂಧರ್ವರೇ ಮೊದಲಾದಸಿದ್ಧರು 'ಜಯ ಜಯ ವಾಸುದೇವ' ಎಂದು ಮುಂತಾಗಿ ಸ್ತೋತ್ರ ಮಾಡುತ್ತ ಗಾಯನ ಮಾಡಿದರು. ಭೂಭಾರಹರಣ, ಧರ್ಮಸಂಸ್ಥಾಪನಾದಿಕಾರ್ಯಗಳನ್ನು ಮಾಡಿ ಶ್ರೀಕೃಷ್ಣನು ರುಕ್ಮಿಣೀ ಸತ್ಯಭಾಮಾದಿ ಪತ್ನಿಯರಿಂದಲೂ, ಪ್ರದ್ಯುಮ್ನ ಮೊದಲಾದ ಅನೇಕ ಮಕ್ಕಳಿಂದಲೂ, ಅನಿರುದ್ಧಾದಿ ಅನೇಕ ಮೊಮ್ಮಕ್ಕಳಿಂದಲೂ ಕೂಡಿದವನಾಗಿ ಜಗತ್ತಿನಲ್ಲಿ ಸರ್ವರಿಗಿಂತಲೂ' ಉತ್ಕೃಷ್ಟನಾಗಿ ವಿರಾಜಿಸಿದನು.

**ಶ್ಲೋಕ - ೨೯** **ಪುಟ - 702**

'ಈ ಪ್ರಕಾರವಾಗಿ ಶ್ರೀರಾಘವೇಂದ್ರತೀರ್ಥಯತಿಗಳಿಂದ ಸಂಕ್ಷೇಪವಾಗಿ ಮಾಡಲ್ಪಟ್ಟ ಶ್ರೀಕೃಷ್ಣಚಾರಿತ್ರ್ಯ ಮಂಜರೀ ಎಂಬ ಗ್ರಂಥವು ಅಧ್ಯಯನ ಮಾಡುವವರಿಗೆ ಸರ್ವಾಭೀಷ್ಟಪ್ರದವಾಗಿದೆ' ಎಂದು ಗ್ರಂಥಕರ್ತೃಗಳಿಂದ ಉಪಸಂಹಾರ.

॥ ಶ್ರೀಃ ॥

## ಶ್ರೀರಾಘವೇಂದ್ರ ಯತಿಸಾರ್ವಭೌಮ ವಿರಚಿತಾ

# ಶ್ರೀ ಕೃಷ್ಣಚಾರಿತ್ರ್ಯಮಂಜರೀ

## ಪ್ರಾರಭ್ಯತೇ

**ವಿಷ್ಣುರ್ಬ್ರಹ್ಮಾದಿದೇವೈಃ ಕ್ಷಿತಿಭರಹರಣೇ ಪ್ರಾರ್ಥಿತಃ ಪ್ರಾದುರಾಸೀ**
**ದ್ದೇವಕ್ಯಾಂ ನಂದನಂದೀ ಶಿಶುವಧವಿಹಿತಾಂ ಪೂತನಾಂ ಯೋ ಜಘಾನ।**
**ಉತ್ಥಾನೌತ್ಸುಕ್ಯಕಾಲೇ ರಥಚರಣಗತಂ ಚಾಸುರಂ ಪಾದಘಾತೈ -**
**ಶ್ಚಕ್ರಾವರ್ತಂ ಚ ಮಾತ್ರಾ ಗುರುರಿತಿ ನಿಹಿತೋ ಭೂತಲೇ ಸೋಽವತಾನ್ಮಾಂ ॥ ೧ ॥**

**ಪದಚ್ಛೇದ** - ವಿಷ್ಣುಃ ಬ್ರಹ್ಮಾದಿದೇವೈಃ ಕ್ಷಿತಿಭರಹರಣೇ ಪ್ರಾರ್ಥಿತಃ ಪ್ರಾದುರಾಸೀತ್ ದೇವಕ್ಯಾಂ ನಂದನಂದೀ ಶಿಶುವಧವಿಹಿತಾಂ ಪೂತನಾಂ ಯಃ ಜಘಾನ ಉತ್ಥಾನೌತ್ಸುಕ್ಯಕಾಲೇ ರಥಚರಣಗತಂ ಚ ಅಸುರಂ ಪಾದಘಾತೈಃ ಚಕ್ರಾವರ್ತಂ ಚ ಮಾತ್ರಾ ಗುರುಃ ಇತಿ ನಿಹಿತಃ ಭೂತಲೇ ಸಃ ಅವತಾತ್ ಮಾಂ।

**ಅನ್ವಯ** - ವಿಷ್ಣುಃ ಬ್ರಹ್ಮಾದಿದೇವೈಃ ಕ್ಷಿತಿಭರಹರಣೇ ಪ್ರಾರ್ಥಿತಃ ದೇವಕ್ಯಾಂ ಪ್ರಾದುರಾಸೀತ್ ಯಃ ನಂದನಂದೀ ಪಾದಘಾತೈಃ ಶಿಶುವಧವಿಹಿತಾಂ ಪೂತನಾಂ ಉತ್ಥಾನೌತ್ಸುಕ್ಯಕಾಲೇ ರಥಚರಣಗತಂ ಅಸುರಂ ಚ ಮಾತ್ರಾ ಗುರುಃ ಇತಿ ಭೂತಲೇ ನಿಹಿತಃ, ಚಕ್ರಾವರ್ತಂ ಚ ಜಘಾನ ಸಃ ಮಾಂ ಅವತಾತ್।

**ಅರ್ಥ** - **ವಿಷ್ಣುಃ** ಎಲ್ಲಾ ಪ್ರದೇಶಗಳಲ್ಲಿಯೂ ವ್ಯಾಪಿಸಿಕೊಂಡಿರುವ ಶ್ರೀಹರಿಯು **ಬ್ರಹ್ಮಾದಿದೇವೈಃ** ಬ್ರಹ್ಮದೇವರೇ ಮೊದಲಾದ ದೇವತೆಗಳಿಂದ **ಕ್ಷಿತಿಭರಹರಣೇ** ಭೂಮಿಗೆ ಭಾರವಾಗಿರುವ ಜರಾಸಂಧ ಮುಂತಾದ ದೈತ್ಯರ ಸಂಹಾರಕ್ಕಾಗಿ **ಪ್ರಾರ್ಥಿತಃ** ಪ್ರಾರ್ಥಿಸಲ್ಪಟ್ಟವನಾಗಿ **ದೇವಕ್ಯಾಂ** ದೇವಕೀದೇವಿಯಲ್ಲಿ **ಪ್ರಾದುರಾಸೀತ್** ಅವತರಿಸಿದನು. **ಯಃ** ಯಾವ ಶ್ರೀಕೃಷ್ಣನು **ನಂದನಂದೀ** ನಂದನನ್ನು ಸಂತೋಷಪಡಿಸಿದನೋ **ಪಾದಘಾತೈಃ** ಕಾಲುಗಳಿಂದ ಮಾಡಿದ ಒದೆಗಳಿಂದ **ಶಿಶುವಧವಿಹಿತಾಂ** ಮಕ್ಕಳನ್ನು ಕೊಲ್ಲುವುದಕ್ಕಾಗಿ ನಿಯಮಿಸಲ್ಪಟ್ಟ **ಪೂತನಾಂ** ಪೂತನೆಯೆಂಬ ರಾಕ್ಷಸಿಯನ್ನೂ, **ಉತ್ಥಾನೌತ್ಸುಕ್ಯಕಾಲೇ** ನಾಲ್ಕನೆಯ ತಿಂಗಳಿನಲ್ಲಿ ಮನೆಯಿಂದ ಶ್ರೀಕೃಷ್ಣನು ದೇವರನ್ನು ನೋಡುವುದಕ್ಕಾಗಿ ಹೊರಟಾಗ ಏರ್ಪಟ್ಟ ಉತ್ಸವಕಾಲದಲ್ಲಿ **ರಥಚರಣಗತಂ** ಚಕ್ರದಲ್ಲಿ ಬಂದು ಕುಳಿತಿದ್ದ **ಅಸುರಂ ಚ** ಶಕಟಾಕ್ಷ ಎಂಬ ದೈತ್ಯನನ್ನೂ, **ಮಾತ್ರಾ** ತಾಯಿಯಿಂದ **ಗುರುಃ ಇತಿ** ಭಾರವಾಗಿರುವನೆಂದು **ಭೂತಲೇ** ಭೂಮಿಯಲ್ಲಿ **ನಿಹಿತಃ** ಇಡಲ್ಪಟ್ಟವನಾಗಿ **ಚಕ್ರಾವರ್ತಂ ಚ** ಸುಳಿಗಾಳಿಯ ರೂಪದಿಂದ ಬಂದಿರುವ ತೃಣಾವರ್ತ ಎಂಬ ದೈತ್ಯನನ್ನೂ **ಜಘಾನ** ಸಂಹರಿಸಿದನೋ **ಸಃ** ಆ ಶ್ರೀಕೃಷ್ಣನು **ಮಾಂ** ನನ್ನನ್ನು **ಅವತಾತ್** ರಕ್ಷಿಸಲಿ.

ವಿಗ್ರಹ- ಬ್ರಹ್ಮಾ ಆದಿಃ ಯೇಷಾಂ ತೇ ಬ್ರಹ್ಮಾದಯಃ ಬ್ರಹ್ಮಾದಯಶ್ಚ ತೇ ದೇವಾಶ್ಚ ಬ್ರಹ್ಮಾದಿದೇವಾಃ, ತೈಃ ಬ್ರಹ್ಮಾದಿದೇವೈಃ; ಭ್ರಿಯತೇ ಇತಿ ಭರಃ ಕ್ಷಿತೇಃ ಭರಃ ಕ್ಷಿತಿಭರಃ, ಕ್ಷಿತಿಭರಸ್ಯ ಹರಣಂ ಕ್ಷಿತಿಭರಹರಣಂ, ತಸ್ಮಿನ್

ಕ್ಷಿತಿಭರಹರಣೇ; ಪ್ರಕರ್ಷೇಣ ಅರ್ಥಿತಃ ಪ್ರಾರ್ಥಿತಃ; ದೇವಕಸ್ಯ ಅಪತ್ಯಂ ಸ್ತ್ರೀ ದೇವಕೀ, ತಸ್ಯಾಂ ದೇವಕ್ಯಾಂ; ನಂದಂ ನಂದಯತಿ ಇತಿ ನಂದನನಂದೀ; ಶಿಶೂನಾಂ ವಧಃ ಶಿಶುವಧಃ, ಶಿಶುವಧಾಯ ವಿಹಿತಾ ಶಿಶುವಧವಿಹಿತಾ, ತಾಂ ಶಿಶುವಧವಿಹಿತಾಂ; ಉತ್ಸುಕಾನಾಂ ಭಾವಃ ಔತ್ಸುಕ್ಯಂ ಉತ್ಥಾನೇ ಔತ್ಸುಕ್ಯಂ ಉತ್ಥಾನೌತ್ಸುಕ್ಯಂ, ಉತ್ಥಾನೌತ್ಸುಕ್ಯಸ್ಯ ಕಾಲಃ ಉತ್ಥಾನೌತ್ಸುಕ್ಯಕಾಲಃ ತಸ್ಮಿನ್ ಉತ್ಥಾನೌತ್ಸುಕ್ಯಕಾಲೇ, ರಥಸ್ಯ ಚರಣಂ ರಥಚರಣಂ, ರಥಚರಣಂ ಗತಃ ತಂ ರಥಚರಣಗತಂ; ಪಾದಾಭ್ಯಾಂ ಘಾತಾಃ ಪಾದಘಾತಾಃ, ತೈಃ ಪಾದಘಾತೈಃ; ಚಕ್ರವತ್ ಆವರ್ತತೇ ಇತಿ ಚಕ್ರಾವರ್ತಃ, ತಂ ಚಕ್ರಾವರ್ತಂ, ಭುವಃ ತಲಂ ಭೂತಲಂ, ತಸ್ಮಿನ್ ಭೂತಲೇ;

ವಿಶೇಷಾರ್ಥ - **ವಿಷ್ಣುಃ ಬ್ರಹ್ಮಾದಿದೇವೈಃ ಕ್ಷಿತಿಭರಹರಣೇ ಪ್ರಾರ್ಥಿತಃ ದೇವಕ್ಯಾಂ ಪ್ರಾದುರಾಸೀತ್** "ಪೂರ್ವಂ ಸಮುದ್ರಶಾಯೀ ಶ್ರೀಮನ್ನಾರಾಯಣಃ ಬ್ರಹ್ಮಾದಿದೇವೈಃ ಸಕಲದುಷ್ಟನಿಗ್ರಹಾರ್ಥಮರ್ಥಿತಃ ತಸ್ಮಾದುತ್ಥಾಯ ತೈಃ ಸಹ ಮೇರುಂ ಪ್ರಾಪ್ಯ, ಚತುರ್ಮುಖಂ ಪ್ರತಿ " "ಯತ್ರ ತ್ವಯೋಕ್ತೋಽಸ್ಮಿ ತತ್ರ ಪ್ರಾದುರ್ಭವಿಷ್ಯಾಮಿ" ಇತ್ಯುಕ್ತ್ವಾ ತೇನ ಚತುರ್ಮುಖೇನ " ಅಹಂ ಪುರಾ ವರುಣಾಯ ಅಮೃತಸ್ರವಾ ಗಾಃ ಪ್ರಾದಾಂ। ತಾಸ್ತಚ್ಛಿತಾ ಕಶ್ಯಪಃ ಸ್ವಪತ್ನ್ಯಾ ಆದಿತ್ಯಾ ಸುರಭ್ಯಾ ಚ ಪ್ರಚೋದಿತ ಅಪಾಹರತ್, ತದಪರಾಧೇನ "ಕ್ಷತ್ರೇಷು ಗೋಜೀವನಕೋ ಭವ" ಇತಿ ಮಯಾ ಶಪ್ತಃ ಕಶ್ಯಪೋ ಭೂಮೌ ಯದುಕುಲೇ ಬಹುಗೋಧನಾಢ್ಯೋ ವಸುದೇವ ಇತಿ ಖ್ಯಾತಃ ಶೂರನಾಮಕಾದ್ರಾಜ್ಞಃ ಸಕಾಶಾತ್ ಪ್ರಜಾತಃ। ತಸ್ಯೈವ ಭಾರ್ಯಾ ಅದಿತಿಶ್ಚ ದೇವಕೀತಿ ಬಭೂವ। ಅನ್ಯಾ ಸುರಭಿಸ್ತು ರೋಹಿಣೀ ಬಭೂವ। ತೌ ದೇವಕೀವಸುದೇವೌ ತ್ವಾಮೇವ ಸುತಮಿಚ್ಛಂತೌ ತ್ವದೀಯಂ ತಪಸ್ತೇಪತುಃ। ತಥಾ ಯೋ ದ್ರೋಣನಾಮಾ ವಸುಃ ಸ ಭಾರ್ಯಯಾ ಧರಯಾ ಸಹ ತ್ವತ್ಪ್ರಿತೃತ್ವಂ ಪ್ರಾಪ್ತುಂ ತಪಶ್ಚಕಾರ। ತಸ್ಮೈ ಸ ವರೋ ಮಯಾ ದತ್ತಃ। ಸ ಚ ಶೂರಾದ್ವೈಶ್ಯಕನ್ಯಾಯಾಂ ಗೋಕುಲೇ ನಂದಾಖ್ಯೋ ಜಾತಃ। ಅತಸ್ತ್ವಂ ಪ್ರಥಮಂ ದೇವಕೀವಸುದೇವಯೋಸ್ತವ ಸ್ವರೂಪಂ ಪ್ರದರ್ಶ್ಯ ತತೋ ನಂದಗೋಪಗೃಹಂ ವ್ರಜ" ಇತ್ಯುಕ್ತಸ್ತಂ ಪ್ರತಿ ತಥೇತಿ ಚೋಕ್ತ್ವಾ ತಾನ್ ದೇವಾನ್ " ವಿಪ್ರಕ್ಷತ್ರಾದಿಭಾವೇನ ಭೂತಲೇ ಉತ್ಪದ್ಯಧ್ವಂ" ಇತ್ಯನುಜ್ಞಾಪ್ಯ ಸ್ವಯಂ ವಸುದೇವಾಜ್ಞಾತಃ । ತತಃ ಪೂರ್ವಂ ರೋಹಿಣ್ಯಾಂ ವಸುದೇವಾಚ್ಛೇಷೋ ಬಲರಾಮಃ ಇತಿ ಜಾತಃ ದೇವಾಸ್ತತ್ರ ತತ್ರಾಜಾಯಂತ। "

# ಕೃಷ್ಣಾವತಾರ ಪೂರ್ವಪೀಠಿಕೆ

೧) ಶ್ರೀಹರಿಯು ಹಿಂದೊಮ್ಮೆ ಕ್ಷೀರಸಮುದ್ರದಲ್ಲಿ ಮಲಗಿದ್ದನು. ಆಗ ಬ್ರಹ್ಮರುದ್ರ ಮುಂತಾದ ಸಕಲ ದೇವತೆಗಳೂ ಅಲ್ಲಿಗೆ ಬಂದರು. ಜರಾಸಂಧ ಮುಂತಾದ ದೈತ್ಯರನ್ನು ನಿಗ್ರಹಿಸಬೇಕೆಂದು ಪ್ರಾರ್ಥಿಸಿದರು. ಶ್ರೀಹರಿಯು ನಿದ್ದೆಯಿಂದ ಎದ್ದನು. ಎಲ್ಲಾ ದೇವತೆಗಳನ್ನೂ ಕರೆದುಕೊಂಡು ಮೇರುಪರ್ವತಕ್ಕೆ ಬಂದನು. ಬ್ರಹ್ಮದೇವನನ್ನು ಕುರಿತು" ಎಲ್ಲಿ ನಾನು ಅವತರಿಸಬೇಕೆಂದು ಹೇಳುವಿಯೋ ಅಲ್ಲಿ ಅವತರಿಸುವೆನು" ಎಂದನು.

ಆಗ ಬ್ರಹ್ಮದೇವರು " ನಾನು ಹಿಂದೆ ವರುಣನಿಗೆ ಅಮೃತವನ್ನು ಕರೆಯುವ ಗೋವುಗಳನ್ನು ಕೊಟ್ಟೆನು. ಅವುಗಳನ್ನು ಅವನ ಅಪ್ಪನಾದ ಕಶ್ಯಪನು ತನ್ನ ಹೆಂಡಂದಿರಾದ ಅದಿತಿ ಸುರಭಿ ಎಂಬವರಿಂದ ಪ್ರೇರಿತನಾಗಿ ಅಪಹರಿಸಿದನು. ಆ ಅಪರಾಧದಿಂದ " ನೀನು ಕ್ಷತ್ರಿಯನಾಗಿ ಹುಟ್ಟು. ಆದರೆ ಗೋವುಗಳಿಂದ ಜೀವಿಸು." ಎಂದು ಶಪಿಸಿದೆನು. ಆ ಶಾಪದಿಂದ ಕಶ್ಯಪನು ಯದುರಾಜನ ವಂಶದಲ್ಲಿ ವಸುದೇವ ಎಂಬ ಹೆಸರಿನಿಂದ ಶೂರ ಎಂಬ

ರಾಜನಿಗೆ ಮಗನಾಗಿ ಹುಟ್ಟಿದನು. ಅಸಂಖ್ಯ ಗೋವುಗಳಿಂದ ಯುಕ್ತನಾದನು. ಅವನಿಗೆ ಅದಿತಿಯು ದೇವಕೀ ಎಂಬ ಹೆಸರಿನಿಂದಲೂ ಸುರಭಿಯು ರೋಹಿಣೀ ಎಂಬ ಹೆಸರಿನಿಂದಲೂ ಪತ್ನಿಯರಾಗಿ ಅವತರಿಸಿದರು.

" ವಸುದೇವ ಮತ್ತು ದೇವಕೀದೇವಿಯರು ನೀನೇ ಮಗನಾಗಿ ಹುಟ್ಟಬೇಕೆಂದು ನಿನ್ನನ್ನು ಕುರಿತು ತಪಸ್ಸನ್ನು ಮಾಡಿದರು. ಆ ವರವನ್ನು ನೀನು ಅವರಿಗೆ ಕೊಟ್ಟೆ. ಅದೇ ಸಮಯದಲ್ಲಿ ಅಷ್ಟವಸುಗಳಲ್ಲಿ ಒಬ್ಬನಾದ ದ್ರೋಣ ಎಂಬ ವಸುವು ಧರಾ ಎಂಬ ತನ್ನ ಪತ್ನಿಯೊಡನೆ ನನ್ನನ್ನು ಕುರಿತು ತಪಸ್ಸನ್ನು ಮಾಡಿದನು. ನಾನೂ ಆ ವರವನ್ನು ಕೊಟ್ಟೆನು. ಆ ದ್ರೋಣ ಎಂಬ ವಸುವು ಶೂರರಾಜನಿಗೆ ವೈಶ್ಯಜಾತಿಯಲ್ಲಿ ಹುಟ್ಟಿರುವ ಪತ್ನಿಯಲ್ಲಿ ಮಗನಾಗಿ ಹುಟ್ಟಿರುವನು. ಆಗ ಧರಾದೇವಿಯು ಯಶೋದೆ ಎಂಬ ಹೆಸರಿನಿಂದ ನಂದನಿಗೆ ಪತ್ನಿಯಾಗಿ ಅವತರಿಸಿರುವಳು. ನೀನು ವಸುದೇವನ ಪತ್ನಿಯಾಗಿರುವ ದೇವಕೀದೇವಿಯ ಹೊಟ್ಟೆಯಿಂದ ಅವತರಿಸು ನಂದನ ಮನೆಗೆ ಹೋಗು." ಎಂದು ಬ್ರಹ್ಮದೇವರು ಹೇಳಿದರು.

" ಹಾಗೆಯೇ ಆಗಲಿ ಎಂದು ಶ್ರೀಹರಿಯು ಹೇಳಿದನು. ಬ್ರಾಹ್ಮಣ ಕ್ಷತ್ರಿಯ ಮುಂತಾದ ಜಾತಿಗಳಲ್ಲಿ ಅವತರಿಸುವಂತೆ ದೇವತೆಗಳಿಗೆ ಆಜ್ಞಾಪಿಸಿದನು. ತಾನು ವಸುದೇವನಿಂದ ದೇವಕೀದೇವಿಯಲ್ಲಿ ಅವತರಿಸಿದನು. ಶ್ರೀಹರಿಯ ಅವತಾರಕ್ಕಿಂತ ಪೂರ್ವದಲ್ಲಿ ವಸುದೇವನ ದೆಸೆಯಿಂದ ರೋಹಿಣೀದೇವಿಯಲ್ಲಿ ಬಲರಾಮ ಎಂಬ ಹೆಸರಿನಿಂದ ಶೇಷದೇವರು ಅವತರಿಸಿದರು. ದೇವತೆಗಳು ಅಲ್ಲಲ್ಲಿ ಅವತರಿಸಿದರು."

ವಿಶೇಷಾರ್ಥ ವಿವರಣ - ಪರಮಶಾಂತರಾದ ನಾರೀಮಣಿಯರು ನಾವು ಮಾಡಿದ ಎಲ್ಲಾ ಅಪರಾಧಗಳನ್ನೂ ಮನ್ನಿಸುತ್ತಿರುವರು. ಆದರೆ ಅವರ ಮುಂದೆ ಅವರ ಪತಿಯನ್ನು ನಿಂದಿಸಿದ ಕೂಡಲೇ ಭದ್ರಾಕಾಳಿಯಂತೆ ಉಗ್ರರೂಪವನ್ನು ಧರಿಸುವರು. ಅವರು ಮುಂದೆ ಪತಿನಿಂದಕನು ನಿಂತಿರುವುದೇ ಪರಮಭಾರವೆಂದು ತಿಳಿಯುವರು. ಅವನನ್ನು ತನ್ನ ಮುಂದಿನ ಭಾಗದಿಂದ ಹೊರಡಿಸುವದಕ್ಕೆ ವಿಶ್ವಪ್ರಯತ್ನ ಮಾಡುವರು.

ಭೂದೇವಿಯು ಶ್ರೀಹರಿಯ ಪತ್ನಿಯಾಗಿರುವಳು. ಪರಮಶಾಂತಳಾಗಿರುವಳು. ಅವಳ, ಮೇಲೆ ವಾಸಿಸುತ್ತಾ ಮಲಮೂತ್ರ ವಿಸರ್ಜನಾದಿಗಳೆಲ್ಲವನ್ನು ಮಾಡುತ್ತಿದ್ದರೂ ತಾಯಿಯಂತೆ ಕ್ಷಮಿಸುತ್ತಿರುವಳು. ಆದ್ದರಿಂದಲೇ ಅವಳಿಗೆ 'ಕ್ಷಮಾ' ಅಂದರೆ "ಸಹನಗುಣವುಳ್ಳವಳು" ಎಂಬ ಹೆಸರು ಪ್ರಸಿದ್ಧವಾಗಿದೆ. ಆದರೆ ಮಹಾಪತಿವ್ರತೆಯಾದ ಭೂದೇವಿಯ ಮೇಲೆ ವಾಸಿಸುತ್ತಾ, ಭೂದೇವಿಯಿಂದ ಜೀವಿಸುತ್ತಾ, ಭೂದೇವಿಯಿಂದಲೇ ಸರ್ವವಿಧವಾದ ಉಪಕಾರಗಳನ್ನು ಪಡೆಯುತ್ತಾ ಭೂದೇವಿಯ ಪತಿಯಾದ ಶ್ರೀಹರಿಯನ್ನು ನಿಂದಿಸುತ್ತಿರುವ ದುಷ್ಟದೈತ್ಯರನ್ನು ಭೂದೇವಿಯು ಸಹಿಸಲಿಲ್ಲ.

ಪುಣ್ಯವು ಅತಿಹಗುರವಾಗಿಯೂ ಪಾಪಗಳು ಒಂದೊಂದೂ ದೊಡ್ಡ ದೊಡ್ಡ ಪರ್ವತಗಳಷ್ಟು ಭಾರವಾಗಿಯೂ ಅತಿಪರಿಶುದ್ಧಳಾದ ಭೂದೇವಿಗೆ ಭಾಸವಾಗುತ್ತಿದ್ದವು. 'ಒಬ್ಬೊಬ್ಬ ದೈತ್ಯನೂ ಅಸಂಖ್ಯ ಪಾಪಗಳೆಂಬ ಪರ್ವತಗಳಿಂದ ಯುಕ್ತನಾಗಿದ್ದನು. ಇಂತಹ ಅಸಂಖ್ಯ ದೈತ್ಯರನ್ನು ಹೊರಲಿಕ್ಕೆ ಭೂದೇವಿಯು ಶಕ್ತಳಾಗಲಿಲ್ಲ. ಈ ಭಾರದಿಂದ ಪೀಡಿತಳಾದ ಭೂದೇವಿಯು ಜಗದ್ಗುರುವಾದ ಬ್ರಹ್ಮದೇವರ ಮೂಲಕವಾಗಿ ಶ್ರೀಹರಿಯಲ್ಲಿ ತನ್ನ ದುಃಖವನ್ನು ಹೇಳಿಕೊಳ್ಳಬೇಕೆಂದು ತೀರ್ಮಾನಿಸಿದಳು. ಈ ಅಂಶವನ್ನು ಕ್ಷಿತಿಭರ ಎಂಬ ಪದದಿಂದ "ಜರಾಸಂಧ

ಮುಂತಾದ ದೈತ್ಯರು ಭೂಮಿಗೆ ಭಾರವಾಗಿರುವರು" ಎಂದು ಹೇಳುತ್ತಾ ಶ್ರೀರಾಘವೇಂದ್ರಗುರುಸಾರ್ವಭೌಮರು ತಿಳಿಸಿರುವರು.

ಶ್ರೀಹರಿಯನ್ನು "ಗೋಬ್ರಾಹ್ಮಣಹಿತಾಯ ಚ"ಮುಂತಾದ ವಾಕ್ಯಗಳು ಹೊಗಳುತ್ತಿವೆ. ಅಲ್ಲಿಯೂ ಗೋವಿನ ಹೆಸರನ್ನು ಮೊದಲು ಹೇಳಿ ಅನಂತರದಲ್ಲಿ ಬ್ರಾಹ್ಮಣ ಎಂಬ ಹೆಸರನ್ನು ಹೇಳಿರುತ್ತದೆ. ಇದರಿಂದ ಗೋವುಮತ್ತು ಬ್ರಾಹ್ಮಣರು ಶ್ರೀಹರಿಗೆ ಪ್ರಿಯರೆಂದು ಭೂದೇವಿಯು ತೀರ್ಮಾನಿಸಿದಳು. ಆ ಎರಡು ವಸ್ತುಗಳಲ್ಲಿಯೂ ಬ್ರಾಹ್ಮಣರು ಮಾಡುತ್ತಿರುವ ಯಜ್ಞ ಮುಂತಾದ ಕಾರ್ಯಗಳಲ್ಲಿ ಹಾಲು, ಮೊಸರು, ತುಪ್ಪ, ಗೋಮಯ, ಗೋಮೂತ್ರ ಮುಂತಾದ ಎಲ್ಲಾ ವಸ್ತುಗಳಿಂದಲೂ ಉಪಯುಕ್ತವಾಗಿರುವ ಗೋವು ಅತ್ಯಂತ ಪ್ರಿಯವೆಂದೂ ತೀರ್ಮಾನಿಸಿದಳು. ಶ್ರೀಹರಿಯನ್ನು ಶರಣು ಹೊಂದುವಾಗ ಶ್ರೀಹರಿಗೆ ಅತ್ಯಂತ ಪ್ರಿಯವಾದ ಗೋವಿನ ರೂಪವನ್ನು ಸ್ವೀಕರಿಸಿಕೊಂಡು ಹೋದರೆ ಶ್ರೀಹರಿಯ ವಿಶೇಷಾನುಗ್ರಹವು ಬೇಗನೆ ಏರ್ಪಡುವುದಾಗಿಯೂ ತೀರ್ಮಾನಿಸಿದಳು. ದೊಡ್ಡ ದೊಡ್ಡ ಹುದ್ದೆದಾರರನ್ನು ಅವರವರಿಗೆ ಬೇಕಾದ ವೇಷದಲ್ಲಿ ಹೋಗಿ ನೋಡಿದರೆ ಕಾರ್ಯವು ಬೇಗನೆ ಸಿದ್ಧವಾಗುವದು ಅನುಭವಸಿದ್ಧವಲ್ಲವೇ?.

ದೀನಾನಾಮನಾಥಾನಾಮುದ್ಧರಣಂ ಎಂಬ ವಾಕ್ಯವು ದುಃಖಿತರಾದ ಅನಾಥರನ್ನು ಬೇಗನೆ ಶ್ರೀಹರಿಯು ಉದ್ಧರಿಸುವುದಾಗಿ ಹೇಳುತ್ತಿದೆ. ಆದ್ದರಿಂದ ಶ್ರೀಹರಿಯನ್ನು ಶರಣು ಹೊಂದುವಾಗಲೂ ತುಂಬಾ ದೈನ್ಯದಿಂದ ಯುಕ್ತಳಾಗಿ ಬ್ರಹ್ಮದೇವರ ಸಮೀಪಕ್ಕೆ ಹೋಗಬೇಕೆಂದು ತೀರ್ಮಾನಿಸಿದಳು. ಗೋವಿನ ರೂಪವನ್ನು ಧರಿಸಿದಳು. ಕಣ್ಣೀರನ್ನು ಸುರಿಸುತ್ತಾ ಬಿಕ್ಕಿ ಬಿಕ್ಕಿ ಅಳುತ್ತಾ ತುಂಬಾ ದೀನಳಾಗಿ ಬ್ರಹ್ಮದೇವರಲ್ಲಿಗೆ ಬಂದಳು. ಜರಾಸಂಧ ಮುಂತಾದವರನ್ನು ಹೊರಲಾರೆನೆಂದು ಅವರನ್ನು ಸಂಹರಿಸಿ ತನ್ನನ್ನು ಅವರ ಸಂಬಂಧದಿಂದ ಬಿಡುಗಡೆಯನ್ನು ಮಾಡಬೇಕೆಂದು ಬೇಡಿದಳು.

## ಬ್ರಹ್ಮದೇವರು ಕ್ಷೀರಸಮುದ್ರಕ್ಕೆ ಹೋದುದು

ಬ್ರಹ್ಮದೇವರು ಭೂದೇವಿಯ ಪ್ರಾರ್ಥನೆಯನ್ನು ಕೇಳಿದರು. ತಾನೂ ರುದ್ರಾದಿದೇವತೆಗಳೂ ಪರತಂತ್ರರೆಂದೂ ಶ್ರೀಹರಿಯೊಬ್ಬನೇ ಭೂದೇವಿಯ ದುಃಖವನ್ನು ಪರಿಹರಿಸಲು ಶಕ್ತನೆಂದೂ ಈ ಸಂದರ್ಭದಲ್ಲಿ ತಿಳಿಸಬೇಕೆಂದು ತೀರ್ಮಾನಿಸಿದರು. ರುದ್ರ ಇಂದ್ರ ಮುಂತಾದ ಸಕಲದೇವತೆಗಳನ್ನೂ ಬರಮಾಡಿಕೊಂಡರು. ಮೊದಲು ತಾನೂ ಅನಂತರದಲ್ಲಿ ರುದ್ರದೇವನೂ ಅನಂತರದಲ್ಲಿ ಸಕಲದೇವತೆಗಳನ್ನು ಹಿಂದಿಟ್ಟುಕೊಂಡು ಬಂದಿರುವ ದೇವರಾಜನಾದ ದೇವೇಂದ್ರನೂ ತಾರತಮ್ಯಾನುಗುಣವಾಗಿ ಶ್ರೀಹರಿಯು ವಾಸಿಸುತ್ತಿರುವ ಕ್ಷೀರಸಮುದ್ರಕ್ಕೆ ಹೊರಟರು.

ಈ ದೇವತೆಗಳ ಆಕಾರವು ವೇದಗಳಿಂದ ಹೊಗಳಲ್ಪಡುತ್ತಿದೆ. ತೇಜೋಮಯವಾದ ಇವರ ಶರೀರಗಳಿಂದ ಆಕಾಶದಲ್ಲಿರುವ ಕತ್ತಲೆಯೆಲ್ಲವೂ ಅದೃಶ್ಯವಾಯಿತು. ಇವರೆಲ್ಲರೂ ಭೂದೇವಿಗಾಗಿ ಶ್ರೀಹರಿಯನ್ನು ಸ್ತುತಿಸುತ್ತಾ ಯೋಗಿವರ್ಯರಿಗೂ ಮಹಾಪ್ರಯತ್ನದಿಂದ ಗಮ್ಯವಾದ ಮತ್ತು ಪರ್ವತಾಕಾರವಾದ ಅಲೆಗಳಿಂದ ಭೂಷಿತವಾದ ಕ್ಷೀರಸಮುದ್ರದ ಉತ್ತರತೀರಕ್ಕೆ ಬಂದರು.

# ದೇವತೆಗಳ ನಿಯಮಗಳು

ಬ್ರಹ್ಮದೇವರು ಪದ್ಮಾಸನವನ್ನು ಹಾಕಿಕೊಂಡು ಕುಳಿತರು. ಕೈಗಳನ್ನು ಜೋಡಿಸಿದರು. ಪ್ರಾಣವಾಯುವನ್ನು ನಿರೋಧ ಮಾಡಿಕೊಂಡರು. ಹೊರಗಿನ ವಿಷಯಗಳಿಂದ ಇಂದ್ರಿಯಗಳನ್ನು ಹಿಂದಿರುಗಿಸಿದರು. ಶ್ರೀಹರಿಯ ಮೂರ್ತಿಯನ್ನು ಏಕಾಗ್ರಚಿತ್ತದಿಂದ ಸ್ಮರಿಸಿದರು. ಇತರರಿಂದ ತಿಳಿಯಲ್ಪಡದಿರುವ ಮಂತ್ರಗಳಿಂದ ಶ್ರೀಹರಿಯನ್ನು ಸ್ತುತಿಸಿದರು. ಪದ್ಮಾಸನದಲ್ಲಿ ಕುಳಿತವರು ಅನೇಕ ಸಹಸ್ರವರ್ಷಗಳ ವರೆಗೆ ಸ್ವಲ್ಪವೂ ಚಲಿಸಲಿಲ್ಲ. ಆದ್ದರಿಂದ ತನಗೆ ಬಂದಿರುವ 'ಪದ್ಮಾಸನ' ಎಂಬ ಹೆಸರನ್ನು ಸಾರ್ಥಕಪಡಿಸಿಕೊಂಡರು. ಪುರುಷಸೂಕ್ತದಿಂದ ಶ್ರೀಹರಿಯನ್ನು ಸ್ತುತಿಸಿದರು. ಇದರಿಂದ ಅನಂತಕಣ್ಣುಗಳಿಂದಲೂ ಅನಂತಕೈಗಳೇ ಮೊದಲಾದ ಅವಯವಗಳಿಂದಲೂ ಯುಕ್ತನಾದ ಶ್ರೀಹರಿಯು ಏಕಕಾಲದಲ್ಲಿ ಅನಂತದುಷ್ಟರನ್ನು ಶಿಕ್ಷಿಸುವುದಕ್ಕೂ ಅನಂತ ಶಿಷ್ಟರನ್ನು ರಕ್ಷಿಸುವುದಕ್ಕೂ ಶಕ್ತನೆಂದು ವ್ಯಕ್ತಪಡಿಸಿದನು.

ಶ್ರೀರುದ್ರದೇವರು ಶ್ರೀಹರಿಯನ್ನು ಏಕಾಗ್ರಚಿತ್ತದಿಂದ ಸ್ಮರಿಸಿದರು. ಮೈಮರೆತರು. ಯಾವ ವಸ್ತುಗಳನ್ನೂ ಸ್ವೀಕರಿಸಲಿಲ್ಲ. ವಸ್ತ್ರಾದಿಗಳನ್ನೂ ಬಿಟ್ಟರು ಇದರಿಂದ 'ದಿಗಂಬರ' ಎಂಬ ತನ್ನ ಹೆಸರನ್ನು ಸತ್ಯವಾಗುವಂತೆ ಮಾಡಿಕೊಂಡರು. ಎಲ್ಲಾ ವಸ್ತುಗಳಲ್ಲಿಯೂ ಆಸೆಯನ್ನು ಬಿಟ್ಟರು. ಇದರಿಂದ ಕಾಮನನ್ನು ಜಯಿಸಿದವನೆಂಬ ಬಿರುದನ್ನು ಸಾರ್ಥಕ ಪಡಿಸಿಕೊಂಡರು. ಶ್ರೀಹರಿಯನ್ನು ಉತ್ತಮ ರೀತಿಯಿಂದ ಸ್ತುತಿಸಿದರು. ಇದರಿಂದ 'ಗಿರೀಶ' ಅಂದರೆ 'ಮಾತಿನಲ್ಲಿ ಶೂರ' ಎಂಬ ತನ್ನ ಹೆಸರನ್ನು ನಿಜವಾಗುವಂತೆ ಮಾಡಿಕೊಂಡರು.

ಶೇಷದೇವರು ಆಹಾರವನ್ನು ತ್ಯಜಿಸಿದರು ವಾಯುವನ್ನು ಮಾತ್ರ ಸ್ವೀಕರಿಸಿದರು. ಆದ್ದರಿಂದಲೇ 'ಪವನಾಶನ' ಅಂದರೆ 'ವಾಯುವೇ ಆಹಾರವಾಗಿರುವವರು' ಎಂಬ ತಮ್ಮ ಬಿರುದನ್ನು ಸಾರ್ಥಕಪಡಿಸಿಕೊಂಡರು.

" ದೇವೇಂದ್ರನು ಎಲ್ಲಾ ಕಾರ್ಯಗಳನ್ನೂ ಅತ್ಯಂತ ಭಕ್ತಿಯಿಂದ ಮಾಡಿದನು. ಇದರಿಂದ ಆ ಎಲ್ಲಾ ಕಾರ್ಯಗಳಿಗೂ ನೂರರಷ್ಟು ಫಲವು ಬಂತು. ಆದ್ದರಿಂದ "ಶತಕ್ರತು" ಅಂದರೆ " ನೂರರಷ್ಟು ಫಲವನ್ನು ಕೊಡುತ್ತಿರುವ ಕರ್ಮಗಳನ್ನು ಮಾಡುತ್ತಿರುವವನು" ಎಂಬ ತನ್ನ ಹೆಸರನ್ನು ಸಾರ್ಥಕಪಡಿಸಿಕೊಂಡನು."

"ದೇವತೆಗಳೆಲ್ಲರೂ, ನಿದ್ರೆಯಿಲ್ಲದಿರುವವರು ಸೇವಿಸುತ್ತಿರುವಂತೆ, ಶ್ರೀಹರಿಯನ್ನು ಅಖಂಡವಾಗಿ ಸೇವಿಸಿದರು. ಆದ್ದರಿಂದಲೇ "ಅಸ್ವಪ್ನ" ಅಂದರೆ " ನಿದ್ರೆಯಿಲ್ಲದವರು" ಎಂಬ ತಮ್ಮ ಹೆಸರನ್ನು ಸಾರ್ಥಕವಾಗುವಂತೆ ಮಾಡಿಕೊಂಡರು.

ಶ್ರೀಹರಿಧ್ಯಾನ ಎಂಬ ಕಲ್ಪವೃಕ್ಷವು ದೇವತೆಗಳ ಮನಸ್ಸಿನಲ್ಲಿ ಮೊಳೆಯಿತು. ಉತ್ತಮ ಭಕ್ತಿಯೆಂಬ ಲತೆಯಿಂದ ಆಲಿಂಗಿತವಾಗಿ ಮಹಾಫಲದಾಯಕವಾಯಿತು. ಮೂಗಿನ ತುದಿಯನ್ನು ನೋಡುತ್ತಿರುವ ಕಣ್ಣುಗಳಿಂದ ಆನಂದಭಾಷ್ಪಗಳು ಸುರಿದವು. ಅವುಗಳು ಎದೆಯಲ್ಲಿ ಬಿದ್ದವು. ಇದರಿಂದ ಹೃದಯದಲ್ಲಿರುವ ಧ್ಯಾನವೆಂಬ ಕಲ್ಪವೃಕ್ಷಕ್ಕೆ ನೀರನ್ನು ಎರೆದಂತಾಯಿತು. ಮೈಗಳಲ್ಲಿ ರೋಮಾಂಚನಗಳು ಏರ್ಪಟ್ಟವು. ಇವುಗಳು ಧ್ಯಾನವೆಂಬ ಕಲ್ಪವೃಕ್ಷದ ಬೇರುಗಳಂತೆ ಕಾಣಿಸಿದವು. ಆ ಕಾಲದಲ್ಲಿ ದೇಹಗಳಲ್ಲಿ ಅಪಾರಕಾಂತಿಗಳು ಏರ್ಪಟ್ಟವು. ಆ ಕಾಂತಿಗಳು ಆ ಕಲ್ಪವೃಕ್ಷದ ಎಳೆಯ ಚಿಗುರುಗಳಂತೆ ಕಾಣಿಸಿದವು. ನಾನಾ ವಿಧವಾದ ಋಗ್ವೇದಾದಿ ಶಾಖೆಗಳಲ್ಲಿ ಹೇಳಿರುವಂತೆ

ಧ್ಯಾನಿಸಿದರು. ಈ ಶಾಖೆಗಳೇ ಆ ಕಲ್ಪವೃಕ್ಷದ ಕೊಂಬೆಗಳೆನಿಸಿದವು. ಕಣ್ಣುಗಳನ್ನು ಅರ್ಧಮುಚ್ಚಿಕೊಂಡಿದ್ದರು. ಆ ಕಣ್ಣುಗಳು ಆ ಕಲ್ಪವೃಕ್ಷವು ಫಲಿಸಿದಂತಾಯಿತು. ಮರಗಳು ಫಲಿಸಿದ ಕೂಡಲೇ ಪಕ್ಷಿಯು ಬರುವಂತೆ ಶ್ರೀಹರಿಯು ಮನಸ್ಸಿನಲ್ಲಿ ಬಂದು ಕುಳಿತನು. ಅವನನ್ನು ಬ್ರಹ್ಮಾದಿದೇವತೆಗಳು ಮನಸ್ಸಿನಲ್ಲಿಯೇ ನೋಡಿದರು. ಭಕ್ತಿಯಿಂದ ಪ್ರಾರ್ಥಿಸಿದರು.

## ದೇವತೆಗಳು ಶ್ರೀಹರಿಯನ್ನು ಪ್ರಾರ್ಥಿಸಿದುದು

ಮಹಾಪ್ರಭೋ ಈ ಭೂದೇವಿಯಲ್ಲಿ ಅಸುರಶ್ರೇಷ್ಠರು ವಾಸಿಸುತ್ತಿರುವರು. ಅದರಿಂದ ಅವಳು ತುಂಬಾ ಖಿನ್ನಳಾಗಿರುವಳು. ಇವಳಲ್ಲಿ ವಾಸಿಸುತ್ತಿರುವ ಎಲ್ಲಾ ದೈತ್ಯರುಗಳೂ ಅನಾದಿಕಾಲದಿಂದ ಇಂದಿನವರೆಗೂ ಮಹಾಪಾಪಕಾರ್ಯಗಳನ್ನು ಮಾಡುತ್ತಿರುವರು. ನಿನ್ನಲ್ಲಿ ಅತ್ಯಂತ ದ್ವೇಷವನ್ನು ಮಾಡುತ್ತಿರುವರು. ಸಜ್ಜನರಿಗೆ ಎಲ್ಲಾ ಕಷ್ಟಗಳನ್ನು ಸಹಿಸುವ ಶಕ್ತಿಯಿದೆ. ಆದರೆ ದುರ್ಜನರ ಸಹವಾಸವು ತುಂಬಾ ಭಾರವೆನಿಸುತ್ತದೆ. ಈ ದೈತ್ಯರು ತನ್ನಲ್ಲಿ ವಾಸಿಸುತ್ತಿರುವುದು ಭೂದೇವಿಗೆ ತುಂಬಾ ಭಾರದಂತೆ ತೋರುವುದರಲ್ಲಿ ತಪ್ಪೇನೂ ಇಲ್ಲ ಈ ದೈತ್ಯರ ವಿಚಾರವನ್ನು ಸ್ವಲ್ಪ ಮಟ್ಟಿಗೆ ವಿಜ್ಞಾಪಿಸಿಕೊಳ್ಳುತ್ತಿರುವೆವು.

"ದೇವದೇವ, ನಿನಗೆ ಯಾವ ಕಾರ್ಯವನ್ನು ಮಾಡಿದರೂ ಆ ಕಾರ್ಯಗಳಿಂದ ಸ್ವಪ್ರಯೋಜನವಿಲ್ಲ. ನೀನು ಎಲ್ಲಾ ಕಾರ್ಯಗಳನ್ನೂ ನಿನ್ನ ಭಕ್ತರಾದ ನಮಗೋಸ್ಕರವಾಗಿಯೇ ಮಾಡುತ್ತಿರುವಿ. ನೀನು ನಮ್ಮಹಿತಕ್ಕಾಗಿ ಹಿಂದೆ ದೈತ್ಯರನ್ನೆಲ್ಲಾ ಸಂಹರಿಸಿದಿ. ಅವರೆಲ್ಲರೂ ಈಗ ಭೂಮಿಯಲ್ಲಿ ಹುಟ್ಟಿರುವರು. ಆ ವಿಷಯವನ್ನು ವಿಶದವಾಗಿ ತಿಳಸುವೆವು."

## ದೇವಾಸುರಯುದ್ಧ

" ಹಿಂದೆ ದೇವತೆಗಳಿಗೂ ದೈತ್ಯರಿಗೂ ಘೋರವಾದ ಯುದ್ಧವು ನಡೆಯಿತು. ೧೦೦೦೦೦೦೦, ೦೦೦೦೦, ೦೦೦೦೦,೦೦೦೦೦,೦೦೦೦೦,೦೦೦೦೦,೦೦೦೦೦,೦೦೦೦೦,೦೦೦೦೦,೦೦೦೦೦,೦೦೦೦೦,೦೦೦೦೦, ೦೦೦೦೦, ಸಂಖ್ಯೆಯು ಮಹೌಘವೆನಿಸುತ್ತದೆ. ನೂರು ಅಕ್ಷೋಹಿಣೀ ಸೈನ್ಯಗಳೂ ಎರಡೂ ಮಹೌಘ ಸೈನ್ಯಗಳೂ ದೇವತೆಗಳ ಸೈನ್ಯದಲ್ಲಿದ್ದವು. ದೇವಸೈನ್ಯದಲ್ಲಿದ್ದ ಸೈನಿಕರ ಸಂಖ್ಯೆಯನ್ನು ಮಹೌಘಸಂಖ್ಯೆಯಿಂದ ಗುಣಿಸಬೇಕು. ಅಷ್ಟು ಸೈನ್ಯಗಳು ದೈತ್ಯರ ಸೈನ್ಯದಲ್ಲಿದ್ದವು . ಈ ಎರಡು ಸೈನ್ಯಗಳಲ್ಲಿಯೂ ಉತ್ತಮವಾದ ಕುದುರೆಗಳ ಸೈನ್ಯಗಳೂ, ರಥಗಳ ಸೈನ್ಯಗಳೂ, ಆನೆಗಳ ಸೈನ್ಯಗಳು, ಉತ್ತಮವಾದ ಅಸ್ತ್ರಗಳನ್ನು ತಿಳಿದಿರುವ ವೀರರ ಸೈನ್ಯಗಳೂ ಇದ್ದವು. ದೈತ್ಯರ ಸೈನ್ಯದಲ್ಲಿ ದೊಡ್ಡ ದೊಡ್ಡ ಪರ್ವತಗಳನ್ನು ಧರಿಸಿದವರ ಸೈನ್ಯಗಳೂ ಇದ್ದವು.

ನೂರು ಪುರುಷಪ್ರಮಾಣದಷ್ಟು ಎತ್ತರವಾಗಿರುವ ಪ್ರಮಾಣವು "ನಲ್ವ" ಎಂದೆನಿಸುತ್ತದೆ. ಎರಡು ಸೈನ್ಯಗಳಲ್ಲಿರುವ ರಥಗಳು ಅಸಂಖ್ಯಾಕನಲ್ವಗಳಷ್ಟು ಎತ್ತರವಾಗಿವೆ. ರಥಿಗಳೆಲ್ಲರೂ ಶ್ರೇಷ್ಠವಾದ ಆಯುಧಗಳಿಂದಲೂ ನಾನಾ ವಿಧವಾದ ಆಭರಣಗಳಿಂದಲೂ ಹೊಡೆದಾಡಿಕೊಂಡರು. ಅಸಂಖ್ಯವಾದ ರಕ್ತಗಳ ನದಿಗಳು ಅತಿವೇಗವಾಗಿ ಹೊರಟವು. ಆಗ ದೈತ್ಯಸೈನ್ಯದಲ್ಲಿ ನೂರರಲ್ಲಿನ ಒಂದು ಭಾಗವು ಕೆಲನಿಮಿಷಗಳಲ್ಲಿಯೇ ಕೊಲ್ಲಲ್ಪಟ್ಟಿತು."

# ಶಂಬರಾಸುರ ಸಂಹಾರ

"ಆಗ " ಶಂಬರ" ಎಂಬ ದೈತ್ಯನು ಯುದ್ಧಕ್ಕಾಗಿ ಬಂದನು. ಅವನು ರುದ್ರದೇವರ ವರದಿಂದ ಅವಧ್ಯನಾಗಿರುವನು ಮತ್ತು ಎಲ್ಲಾ ಮಾಯೆಗಳನ್ನೂ ತಿಳಿದವನು. ಅವನು ಮಾಯಾಯುದ್ಧವನ್ನು ಮಾಡಲು ಆರಂಭಿಸಿದನು. ಯಾರಿಂದಲೂ ಅವನ ಮಾಯೆಗಳನ್ನು ಸಹಿಸಲು ಸಾಧ್ಯವಿಲ್ಲ. ಅವನು ಸಾವಿರಾರು ಮಾಯೆಗಳನ್ನು ಸೃಷ್ಟಿಸಿದನು. ಅವನ ಮಾಯೆಯಿಂದ ದೇವತೆಗಳೆಲ್ಲರೂ ಒಂದೂ ತಿಳಿಯದಂತಾದರು. ಚಂದ್ರ, ಸೂರ್ಯ, ಇವರೇ ಮೊದಲಾದ ಎಲ್ಲಾ ದೇವತೆಗಳು ತುಂಬಾ ಆಪತ್ತಿಗೆ ಗುರಿಯಾದರು.

" ದೇವೇಂದ್ರನು ಇದನ್ನು ನೋಡಿದನು. ರುದ್ರದೇವರ ಅನುಗ್ರಹದಿಂದ ಲಬ್ಧವಾದ ಮಾಯೆಯನ್ನು ನಿಗ್ರಹಿಸಬೇಕಾದರೆ ಬ್ರಹ್ಮದೇವರ ಅನುಗ್ರಹದಿಂದ ಲಬ್ಧವಾಗಿರುವ ಮತ್ತು ವೈಷ್ಣವವಾಗಿರುವ ಮಾಯೆಯನ್ನು ಉಪಯೋಗಿಸಬೇಕೆಂದು ತೀರ್ಮಾನಿಸಿದನು. ತನಗೆ ಬ್ರಹ್ಮದೇವರು ಅನುಗ್ರಹಿಸಿ ಕೊಟ್ಟಿರುವ ವೈಷ್ಣವ ಮಾಯೆಯನ್ನು ಉಪಯೋಗಿಸಿದನು. ಈ ವೈಷ್ಣವ ಮಾಯೆಗೆ ವಿಷ್ಣುವಿನ ವರವಿದೆ. ಆ ವರದಿಂದ ಈ ಮಾಯೆಯನ್ನು ಸಹಿಸಲು ಯಾರಿಂದಲೂ ಸಾಧ್ಯವಿಲ್ಲ. ಎಲ್ಲಾ ಮಾಯೆಗಳನ್ನೂ ನಾಶಮಾಡುತ್ತದೆ. ಇಂತಹ ವೈಷ್ಣವ ಮಾಯೆಯಿಂದ ರುದ್ರದೇವರ ಅನುಗ್ರಹದಿಂದ ಲಬ್ಧವಾಗಿರುವ ಎಲ್ಲಾ ಮಾಯೆಗಳೂ ನಶಿಸಿದವು. ವರುಣ, ಅಗ್ನಿ, ಚಂದ್ರ, ಸೂರ್ಯ, ಯಮ ಮುಂತಾದ ಎಲ್ಲಾ ದೇವತೆಗಳೂ ಸ್ವಸ್ಥರಾದರು. ಅವರೆಲ್ಲರಿಗೂ ಹಿಂದಿನ ಬಲವೂ ಉತ್ಸಾಹವೂ ಬಂತು. ದೈತ್ಯರನ್ನು ಸಂಹರಿಸುತ್ತಾ ಬಂದರು. ದೇವೇಂದ್ರನು ವಜ್ರಾಯುಧದಿಂದ ಶಂಬರಾಸುರನನ್ನು ಸಂಹರಿಸಿದನು."

( ಈ ಶಂಬರಾಸುರನು ಶ್ರೀಕೃಷ್ಣನ ಮಗನಾದ ಪ್ರದ್ಯುಮ್ನನಿಂದ ಕೊಲ್ಲಲ್ಪಡುವ ಶಂಬರನಲ್ಲ ಮೂಲಶಂಬರನೆಂದು ತಿಳಿಯಬೇಕು)

# ವಿಪ್ರಚಿತ್ತಿ ಸಂಹಾರ

" ಮಹಾಪ್ರಭೋ, ಶಂಬರಾಸುರನು ಸತ್ತಕೂಡಲೇ ದೇವೇಂದ್ರನಿಂದ ಭೀತರಾದ ದೈತ್ಯರುಗಳೆಲ್ಲರೂ ಚದುರಿ ಓಡಿದರು. ಆಗ "ವಿಪ್ರಚಿತ್ತಿ" ಎಂಬ ದೈತ್ಯನು ಯುದ್ಧಕ್ಕಾಗಿ ಬಂದನು. ಅವನು ಬ್ರಹ್ಮದೇವರ ವರದಿಂದ ಅವಧ್ಯನಾದವನು. ಅವನು ದೈತ್ಯರೆಲ್ಲರನ್ನೂ ಹಿಂದಿರುಗಿಸಿದನು. ದೇವೇಂದ್ರನೇ ಮೊದಲಾದ ಎಲ್ಲಾ ದೇವತೆಗಳನ್ನೂ ಎದುರಿಸಿದನು. ಎಲ್ಲಾ ದೇವತೆಗಳನ್ನೂ ಉರುಳಿಸಿದನು. ದೇವೇಂದ್ರನೂ ಸಹ ಅವನ ಬಾಣಗಳಿಂದ ಮೂರ್ಛಿತನಾದನು. ಎಚ್ಚರವಾದ ಕೂಡಲೇ ಹೆದರಿ ಓಡಿಹೋದನು. ಆಗ ವಾಯುದೇವರು ಮುಂದೆ ಬಂದರು. ಬಾಣಗಳಿಂದ ಅವನನ್ನು ತಡೆದು ನಿಲ್ಲಿಸಿದರು. ಅವನ ಅಸ್ತ್ರಗಳನ್ನು ಉತ್ತಮವಾದ ಅಸ್ತ್ರಗಳಿಂದ ನಾಶಮಾಡಿದರು. ಸುವರ್ಣದಿಂದ ರಚಿತವಾದ ಗದೆಯಿಂದ ಅವನನ್ನು ಸಂಹರಿಸಿದರು."

# ಕಾಲನೇಮಿ ಸಂಹಾರ

ಆಗ "ಕಾಲನೇಮಿ"ದೈತ್ಯನು ಯುದ್ಧಕ್ಕಾಗಿ ಬಂದನು. ಅವನಿಗೆ ನಿನ್ನ ಆಜ್ಞೆಯಂತೆ ಬ್ರಹ್ಮದೇವನು

ಯಾರಿಂದಲೂ ಪರಾಜಯವಿಲ್ಲವೆಂಬ ವರವನ್ನು ಕೊಟ್ಟಿದ್ದನು. ಸಾವಿರ ತಲೆಗಳಿಂದಲೂ ಎರಡುಸಾವಿರ ಕೈಗಳಿಂದಲೂ ಯುಕ್ತನಾಗಿದ್ದನು. ಅವನನ್ನು ವಾಯುದೇವರು ನೋಡಿದರು. ಇವನಿಗೆ ನಿನ್ನ ಆಜ್ಞೆಯಿಂದ ಬ್ರಹ್ಮದೇವನು ವರವನ್ನು ಕೊಟ್ಟಿರುವುದರಿಂದ ನೀನೇ ವರವನ್ನು ಕೊಟ್ಟಂತಾಯಿತು. ಆದ್ದರಿಂದ ನಿನ್ನ ವರದಿಂದ ಪರಾಜಯವಿಲ್ಲದವನನ್ನು ನೀನೇ ಸಂಹರಿಸಬೇಕೆಂದು ತೀರ್ಮಾನಿಸಿದರು. ನಿನ್ನನ್ನು ಸ್ಮರಿಸಿದರು.

ವಾಯುದೇವರು ವಿಷ್ಣುಪ್ರಿಯವಾದ ವೈಷ್ಣವಧರ್ಮದಲ್ಲಿ ಯಾವಾಗಲೂ ಜಾಗ್ರತೆಯಾಗಿರುವವರು. ಆದ್ದರಿಂದ ಕಾಲನೇಮಿಯನ್ನು ಸಂಹರಿಸಲು ಶಕ್ತರಿದ್ದರೂ ನಿನ್ನ ವರವನ್ನು ಸತ್ಯವಾಗುವಂತೆ ಮಾಡುವುದಕ್ಕಾಗಿ ಆ ಸಮಯದಲ್ಲಿ ನಿನ್ನನ್ನು ಸ್ಮರಿಸುವುದು ಯುಕ್ತವೇ ಆಗಿದೆ. ಆಗ ನೀನು ಪ್ರತ್ಯಕ್ಷನಾದೆ. ಅವನು ಎರಡು ಸಾವಿರ ಕೈಗಳಿಂದ ಪ್ರಯೋಗಿಸಿದ ಅಸ್ತ್ರಗಳನ್ನೂ ಆಯುಧಗಳನ್ನೂ ನಾಶಮಾಡಿದಿ. ಅವನ ಎರಡು ಸಾವಿರ ಕೈಗಳನ್ನೂ ಸುದರ್ಶನ ಚಕ್ರದಿಂದ ಕತ್ತರಿಸಿದಿ. ಸಾವಿರ ತಲೆಗಳನ್ನೂ ಕತ್ತರಿಸಿದಿ. ಎಲ್ಲಾ ಭೂಮಂಡಲವನ್ನೂ ವ್ಯಾಪಿಸಿರುವ ಅವನ ದೇಹವನ್ನೂ ಛಿನ್ನಭಿನ್ನವಾಗುವಂತೆ ಮಾಡಿದಿ. ಅವನನ್ನು ಯಮಲೋಕಕ್ಕೆ ಕಳುಹಿಸಿದಿ. ಆ ಯುದ್ಧದಲ್ಲಿ ಮುಕ್ಕಾಲು ಭಾಗ ದೈತ್ಯರನ್ನು ನೀನು ಸಂಹರಿಸಿದಿ. ಉಳಿದ ಕಾಲುಬಾಗ ದೈತ್ಯರನ್ನು ವಾಯುದೇವನು ಸಂಹರಿಸಿದನು.''

## ದೈತ್ಯರಿಗೆ ಸದ್ಗುಣಲಾಭವು ಏರ್ಪಡಕೂಡದು

'' ಮಹಾಪ್ರಭೋ, ಆ ದೈತ್ಯರೆಲ್ಲರೂ ತಪಸ್ಸನ್ನು ಮಾಡಿದರು. ತಪಸ್ಸಿನ ಬಲದಿಂದ ಈಗ ಭೂಮಿಯಲ್ಲಿ ಮಹಾಭಗವದ್ಭಕ್ತರಾದ ರಾಜರುಗಳ ವಂಶಗಳಲ್ಲಿ ಹುಟ್ಟಿರುವರು. ಇದರಿಂದ ಅವರಿಗೆ ಪಾಪಕಾರ್ಯಗಳನ್ನು ಮಾಡುವ ಬುದ್ಧಿಯೇ ಇಲ್ಲದಂತಾಗಿದೆ ೧) ಉತ್ತಮರಾದ ವಿಷ್ಣುಭಕ್ತರ ಮಕ್ಕಳಾಗಿ ಹುಟ್ಟಿರುವುದು. ೨) ವಂಶಕ್ಕೆ ಯೋಗ್ಯರಾದ ಪುರೋಹಿತರಿಂದ ವಂಶಕ್ಕೆ ಯೋಗ್ಯವಾದ ಸಚ್ಛಾಸ್ತ್ರಗಳನ್ನು ಓದುತ್ತಿರುವುದು. ೩) ''ವಿಷ್ಣು ಪ್ರೇರಣಯಾ ವಿಷ್ಣುಪ್ರೀತ್ಯರ್ಥಂ'' ಎಂದು ಹೇಳುತ್ತಾ ಎಲ್ಲಾ ಕಾರ್ಯಗಳನ್ನೂ ಆರಂಭಿಸುವುದು. ೪) ಕೊನೆಗೆ ''ನಾರಾಯಣಾಯೇತಿ ಸಮರ್ಪಯೇತ್ತತ್'' ಎಂದು ಹೇಳಿದಂತೆ ಶ್ರೀಹರಿಗೆ ತಾವು ಮಾಡಿದ ಎಲ್ಲಾ ಕಾರ್ಯಗಳನ್ನೂ ಸಮರ್ಪಿಸುವುದು. ೫) '' ಸರ್ವದೇವನಮಸ್ಕಾರಃ ಕೇಶವಂ ಪ್ರತಿ ಗಚ್ಛತಿ'' ಎಂದು ನಂಬುವುದು. ೬) '' ಜರಾಸಂಧಶರ್ಮಾ ಅಹಂ ಭೋ ಅಭಿವಾದಯೇ'' ಎಂದು ಹೇಳುತ್ತಾ ಶ್ರೀಹರಿಗೂ ಗುರುಗಳಿಗೂ ನಮಸ್ಕಾರಗಳನ್ನು ಮಾಡುತ್ತಿರುವುದು. ೭) ದೇವತೆಗಳಿಗೂ ಋಷಿಗಳಿಗೂ ಪಿತೃಗಳಿಗೂ ತರ್ಪಣಗಳನ್ನು ಕೊಡುತ್ತಿರುವುದು ಮುಂತಾದ ವೈಷ್ಣವಧರ್ಮಗಳನ್ನು ಸಹವಾಸಬಲದಿಂದ ಮಾಡುತ್ತಿರುವರು. ಸ್ವಭಾವದಿಂದ ಬೆಳ್ಳಗಿರುವ ಸ್ಫಟಿಕಮಣಿಯು ದಾಸವಾಳ ಹೂವಿನ ಸಂಪರ್ಕದಿಂದ ಕೆಂಪಾಗಿ ಕಾಣಿಸುತ್ತದೆ. ಅದರಂತೆ ಸ್ವಬಾವದಿಂದ ವಿಷ್ಣುಭಕ್ತಿಯಿಲ್ಲದಿರುವವರಲ್ಲಿಯೂ ಯೋಗ್ಯರ ಸಂಪರ್ಕದಿಂದ ಹರಿಭಕ್ತ್ಯಾದಿಗುಣಗಳು ಏರ್ಪಡುವುದು ಸಹಜವಾಗಿದೆ. ಆದ್ದರಿಂದ ಈ ವೈಷ್ಣವಧರ್ಮಗಳ ಅನುಷ್ಠಾನದಿಂದ ಅವರೆಲ್ಲರಿಗೂ ನಿನ್ನಲ್ಲಿ ಸ್ವಲ್ಪಭಕ್ತಿಯೂ ಏರ್ಪಡುತ್ತಿದೆ. ಹೀಗೆ ವೈಷ್ಣವಧರ್ಮಗಳನ್ನು ಮಾಡದವರಿಗೂ ಅಧೋಗತಿಯು ಎಂದೆಂದಿಗೂ ಏರ್ಪಡಲಾರದು. ಉತ್ತಮವಾದ ವೈಕುಂಠಲೋಕಗಳ ಪ್ರಾಪ್ತಿಯೇ ಆಗಬೇಕು.

" ಇವರೆಲ್ಲರೂ ಅನಾದಿಕಾಲದಿಂದ ನಿನ್ನನ್ನು ದ್ವೇಷಿಸುತ್ತಿರುವವರು. ಇವರಿಗೆ ಸದ್ಗತಿಯಿಲ್ಲವೆಂದು " ಶೃಣ್ವೇ ವೀರ ಉಗ್ರಮುಗ್ರಂ ದಮಾಯನ್" ಮುಂತಾದ ವೇದಗಳು ಹೇಳುತ್ತಿವೆ. "ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಂ" ಎಂದು ನೀನೂ ಹೇಳುತ್ತಿರುವಿ. ಇವರನ್ನು ನಿತ್ಯನರಕಕ್ಕೆ ಕಳುಹಿಸಬೇಕೆಂದು ನೀನು ಸಂಕಲ್ಪಿಸಿರುವಿ. ನಿನ್ನ ಸಂಕಲ್ಪವು ಎಂದೆಂದಿಗೂ ಸುಳ್ಳಾಗುವುದಿಲ್ಲ. ಆದ್ದರಿಂದಲೇ "ಸತ್ಯಕಾಮ" ಎಂಬ ಬಿರುದು ನಿನಗಿದೆ.

" ಮಹಾಸ್ವಾಮಿ" ಇವರುಗಳಿಗೆ ಸದ್ಗತಿಯನ್ನು ಕೊಡದಿದ್ದರೆ ಇವರು ಮಾಡಿರುವ ವೈಷ್ಣವಧರ್ಮಗಳೂ ಅಲ್ಪ ವಿಷ್ಣುಭಕ್ತಿಯೂ ನಿಷ್ಫಲವಾಗುತ್ತವೆ. ಸದ್ಗತಿಯನ್ನು ಕೊಟ್ಟರೆ ಅನಾದಿಕಾಲದಿಂದ ಸ್ವಭಾವದಿಂದ ವಿಷ್ಣುದ್ವೇಷಿಗಳಾದ ಇವರಿಗೆ ಸದ್ಗತಿಯನ್ನು ಕೊಟ್ಟಿರುವುದರಿಂದ ವೇದವಾಕ್ಯಗಳೂ ನಿನ್ನ ಮಾತುಗಳೂ ನಿನ್ನ ಸಂಕಲ್ಪವೂ ಸುಳ್ಳಾಗುತ್ತವೆ. ಹೀಗೆ ಎರಡು ಪಕ್ಕದಲ್ಲಿ ಉರುಳುಗಳಿಂದ ಯುಕ್ತವಾದ ಹಗ್ಗದಲ್ಲಿ ಸಿಕ್ಕಿದವನಂತೆ ಎರಡು ಪಕ್ಷದಲ್ಲಿಯೂ ಅನರ್ಥವು ಏರ್ಪಡುತ್ತಿದೆ."

## ಕೃಷ್ಣಾವತಾರದ ಆವಶ್ಯಕತೆ

"ಆದ್ದರಿಂದ ನೀನು ಭೂಲೋಕದಲ್ಲಿ ಅವತರಿಸಬೇಕು. ನಿನ್ನ ಅವತಾರಕ್ಕಿಂತ ಪೂರ್ವದಲ್ಲಿಯೇ " ದೇವಕಿಯ ಎಂಟನೆಯ ಮಗನು ನಿನಗೆ ಮೃತ್ಯು" ಎಂಬ ಅಶರೀರವಾಣಿಯಿಂದ ನಿನ್ನಲ್ಲಿ ಕಂಸನಿಗೆ ದ್ವೇಷವನ್ನು ಹುಟ್ಟಿಸಬೇಕು. ನಿನ್ನ ಅವತಾರ ಕಾಲದಲ್ಲಿ "ನಿನ್ನ ಮೃತ್ಯುವು ಹುಟ್ಟಿರುವನು. ಅವನು ಎಲ್ಲಿಯೋ ಬೆಳೆಯುತ್ತಿರುವನು" ಎಂದು ದುರ್ಗಾದೇವಿಯಿಂದ ಹೇಳಿಸಿ ನಿನ್ನಲ್ಲಿ ದ್ವೇಷವನ್ನು ಬೆಳೆಯಿಸಬೇಕು. ನೀನು ಅವತರಿಸಿದ ಮೇಲೆ ನಾರದರಿಂದ "ನಿನ್ನ ಶತ್ರುವು ವೃಂದಾವನದಲ್ಲಿರುವ ಶ್ರೀಕೃಷ್ಣನು" ಎಂದು ಹೇಳಿಸಿ ನಿನ್ನಲ್ಲಿ ದ್ವೇಷವು ಪಕ್ವವಾಗುವಂತೆ ಮಾಡಬೇಕು. ಇದರಿಂದ ಕಂಸನಿಗೂ ಕಂಸನ ಪರಿವಾರದಲ್ಲಿ ಸೇರಿದವರಿಗೂ ಕಂಸನ ಬಂಧುಗಳಿಗೂ ಮಿತ್ರರಿಗೂ ನಿನ್ನಲ್ಲಿ ಏರ್ಪಟ್ಟಿರುವ ಅಲ್ಪಭಕ್ತಿಯನ್ನು ನಾಶಮಾಡಬೇಕು. ಪೂತನಾ ಮುಂತಾದವರಿಗೆ ಹಳ್ಳಿಹಳ್ಳಿಗಳಲ್ಲಿಯೂ ಇರುವ ಮಕ್ಕಳನ್ನು ಕೊಲ್ಲುವಂತೆ ಕಂಸನಿಂದ ಆಜ್ಞೆಯನ್ನು ಕೊಡಿಸಬೇಕು. ಇದರಿಂದ ಬಾಲವಧಾನಿಮಿತ್ತವಾಗಿ ಅವರ ಧರ್ಮಬುದ್ಧಿಯನ್ನು ಕೆಡಿಸಬೇಕು, ಅ ಸಂಖ್ಯವಾದ ಪಾಪಗಳನ್ನು ಅವರಿಂದ ಮಾಡಿಸಬೇಕು."

" ಹೀಗೆ ಮಾಡಿದರೆ ಕಂಸನೂ ಅವನ ಪರಿವಾರಕ್ಕೆ ಸೇರಿದ ಪೂತನಾದಿಗಳೂ, ಕಂಸನ ಬಂಧುಗಳಾದ ಜರಾಸಂಧ ಮುಂತಾದವರೂ ಜರಾಸಂಧನ ಪರಿವಾರದಲ್ಲಿ ಸೇರಿರುವ ಸಕಲ ದೈತ್ಯರುಗಳೂ ತಾವು ಮಾಡಿರುವ ಎಲ್ಲಾ ಪುಣ್ಯಗಳನ್ನೂ ಕಳೆದುಕೊಳ್ಳುವರು. ತಮಗೆ ಏರ್ಪಟ್ಟಿರುವ ಸ್ವಲ್ಪಭಕ್ತಿಯನ್ನೂ ಕಳೆದುಕೊಳ್ಳುವರು. ಎಲ್ಲಾ ಪಾಪಗಳಿಂದಲೂ ತುಂಬುವರು. ನಿನ್ನಲ್ಲಿ ದ್ವೇಷವನ್ನು ಹೆಚ್ಚಿಸಿಕೊಳ್ಳುವರು. ಇವರೆಲ್ಲರೂ ತಾವು ಮಾಡಿರುವ ಪುಣ್ಯಗಳನ್ನೂ ಅಲ್ಪಭಕ್ತಿಯನ್ನೂ ಕಳೆದುಕೊಳ್ಳುವುದರಿಂದ ಅವುಗಳಿಗೆ ಫಲವನ್ನು ಕೊಡಬೇಕಾದ ಪ್ರಸಕ್ತಿಯೇ ಬರುವುದಿಲ್ಲ. ಆದ್ದರಿಂದ ಹಿಂದೆ ಹೇಳಿರುವಂತೆ ತಮೋ ಯೋಗ್ಯರಿಗೆ ಸದ್ಗತಿಯಾಗಲೀ ಅವರು ಮಾಡಿರುವ ಪುಣ್ಯಗಳಿಗೂ ಸ್ವಲ್ಪಭಕ್ತಿಗೂ ವೈಫಲ್ಯವಾಗಲೀ ಬರುವುದಿಲ್ಲ. ಇದು ನಿನ್ನ ಅವತಾರದ ಮೊದಲನೆಯ ಫಲವಾಗುವುದು.

# ಕಂಸ

" ಈಗ ಯಾವ ದೈತ್ಯನು ಎಲ್ಲಿ ಹುಟ್ಟಿರುವನು ಎಂಬ ವಿಷಯವನ್ನು ವಿಜ್ಞಾಪಿಸಿಕೊಳ್ಳುವೆವು. ದೇವತೆಗಳಲ್ಲಿ ಸುಪ್ರಸಿದ್ಧ ಸಂಗೀತಗಾರನಾದ ಉಗ್ರಸೇನ ಎಂಬ ಗಂಧರ್ವನು ಭೂಲೋಕದಲ್ಲಿ ಉಗ್ರಸೇನ ಎಂಬ ಹೆಸರಿನಿಂದ ಹುಟ್ಟಿರುವನು. ಅವನ ಪತ್ನಿಯು ಒಮ್ಮೆ ಉದ್ಯಾನವನದಲ್ಲಿ ಸಂಚರಿಸುತ್ತಿದ್ದಳು. ಆಗ ಅಲ್ಲಿನ ಸೌಂದರ್ಯವನ್ನು ನೋಡಿದಾಗ ಅವಳಿಗೆ ಪತಿಯ ಸ್ಮರಣೆಯು ಏರ್ಪಟ್ಟಿತು. ಆಗ ಆ ಮಾರ್ಗವಾಗಿ ದ್ರುಮಿಲ ಎಂಬ ಗಂಧರ್ವಜಾತಿಯಲ್ಲಿ ಹುಟ್ಟಿದ ದೈತ್ಯನು ಹೋಗುತ್ತಿದ್ದನು. ಅವನಿಗೆ ಇನ್ನೊಬ್ಬರ ಮನಸ್ಸಿನಲ್ಲಿರುವ ವಿಷಯವನ್ನು ತಿಳಿಯುವ ಶಕ್ತಿ ಇತ್ತು. ಆ ಶಕ್ತಿಯಿಂದ ಉಗ್ರಸೇನನ ಪತ್ನಿಯ ಮನಸ್ಸಿನಲ್ಲಿ ಏರ್ಪಟ್ಟ ಪತಿಸ್ಮರಣವು ತಿಳಿಯಿತು. ಕೂಡಲೇ ಉಗ್ರಸೇನನ ರೂಪವನ್ನು ಧರಿಸಿದನು. ಅವಳ ಸಮೀಪಕ್ಕೆ ಬಂದನು. ಅವಳೂ ತನ್ನ ಪತಿಯು ಸ್ಮರಿಸಿದ ಕೂಡಲೇ ಬಂದುದಕ್ಕಾಗಿ ಸಂತೋಷಿಸಿದಳು. ಇಬ್ಬರೂ ರತಿಕ್ರೀಡೆಯನ್ನು ಮಾಡಿದರು. ಆಮೇಲೆ ವಿಷಯವನ್ನು ತಿಳಿದ ಉಗ್ರಸೇನನ ಪತ್ನಿಯು ಗಂಧರ್ವನನ್ನು ಧಿಕ್ಕರಿಸಿದಳು. ಅವನು ನಿನ್ನವರಿಗೆ ಶತ್ರುವಾದ ಮಗನು ಹುಟ್ಟುವನು ಎಂದು ಹೇಳಿ ಹೋದನು. ಹೀಗೆ ವ್ಯಭಿಚಾರದಿಂದ ಉಗ್ರಸೇನನ ಪತ್ನಿಯ ಹೊಟ್ಟೆಯಲ್ಲಿ ಕಾಲನೇಮಿ ಎಂಬ ದೈತ್ಯನು ಹುಟ್ಟಿ, ಕಂಸ ಎಂದು ಪ್ರಸಿದ್ಧನಾದನು. ಇವನು ವ್ಯಭಿಚಾರದಿಂದ ಹುಟ್ಟಿರುವುದರಿಂದಲೇ ಹುಟ್ಟಿದ ದಿನದಿಂದ ಶ್ರೀಕೃಷ್ಣದೇವನಲ್ಲಿ ದ್ವೇಷವನ್ನು ಮಾಡಲು ಮೊದಲನೆಯ ಕಾರಣವಾಯಿತು."

" ಆ ಕಂಸನು ರುದ್ರದೇವರನ್ನು ಕುರಿತು ತಪಸ್ಸನ್ನು ಮಾಡಿದನು. ತನ್ನನ್ನು ಯಾರಿಂದಲೂ ಜಯಿಸಲು ಸಾಧ್ಯವಿಲ್ಲವೆಂಬ ವರವನ್ನು ಪಡೆದನು. ದೇವೇಂದ್ರನನ್ನು ರುದ್ರದೇವರ ವರಬಲದಿಂದ ಜಯಿಸಿದನು. ವರುಣನನ್ನು ಜಯಿಸಿ ರತ್ನಗಳನ್ನು ಅಪಹರಿಸಿದನು. ತನ್ನ ಭಕ್ತನಾದ ಜರಾಸಂಧನ ಸೇವೆಗಾಗಿ ರುದ್ರದೇವರು ಕೆಲವು ಯಕ್ಷರನ್ನು ಕೊಟ್ಟಿದ್ದರು. ಅವರನ್ನು ಆಸ್ತಿಪಾಸ್ತಿ ಎಂಬ ತನ್ನ ಎರಡು ಹೆಣ್ಣುಮಕ್ಕಳನ್ನು ಯಾವಾಗಲೂ ರಕ್ಷಿಸುವುದಕ್ಕಾಗಿ ಜರಾಸಂಧನು ಏರ್ಪಡಿಸಿದ್ದನು. ಆ ಯಕ್ಷರನ್ನು ಕಂಸನು ಜಯಿಸಿದನು. ಆ ಎರಡು ಕನ್ಯೆಯರನ್ನು ಬಲಾತ್ಕಾರದಿಂದ ಅಪಹರಿಸಿದನು. ಜರಾಸಂಧನು ಈ ಕಂಸನನ್ನು ನಿಗ್ರಹಿಸಲು ಶಕ್ತನಾಗಿದ್ದನು. ಆದರೂ ನಿಗ್ರಹಿಸಲಿಲ್ಲ. ಈ ಕಂಸನ ಅಪರಿಮಿತ ಬಲವನ್ನೂ ಧೈರ್ಯವನ್ನೂ ನೋಡಿ ಸಂತೋಷಿಸಿದನು. ಆಸ್ತಿ ಪಾಸ್ತಿ ಎಂಬ ತನ್ನ ಕನ್ಯೆಯರನ್ನು ಕೊಟ್ಟು ಸಂತೋಷದಿಂದ ಕನ್ಯಾದಾನವನ್ನು ಮಾಡಿದನು. ಕಂಸನಾಗಿ ಅವತರಿಸಿದ ಈ ಕಾಲನೇಮಿಯನ್ನು ನೀನು ನಿತ್ಯನರಕದಲ್ಲಿ ತಳ್ಳಬೇಕು.

**ಜರಾಸಂಧ :-** " ವಿಪ್ರಚಿತ್ತಿ" ಎಂಬ ದೈತ್ಯನು "ಜರಾಸಂಧ" ಎಂಬ ಹೆಸರಿನಿಂದ ಅವತರಿಸಿರುವನು. ಅವನಿಗೆ ಬ್ರಹ್ಮದೇವರು ಮತ್ತು ರುದ್ರದೇವರು" ಯಾರಿಂದಲೂ ಪರಾಜಯವಿಲ್ಲ" ಎಂಬ ವರವನ್ನು ಕೊಟ್ಟಿರುವರು. ಅವನಿಗೆ ಸಮವಾದ ಬಲವುಳ್ಳವನ್ನು ಈ ಭೂಲೋಕದಲ್ಲಿಯೂ ಅತಲ ಮುಂತಾದ ಕೆಳಗಣ ಲೋಕಗಳಲ್ಲಿಯೂ ಯಾರೂ ಇಲ್ಲ . ಎಲ್ಲಾ ರಾಜರುಗಳನ್ನೂ ತನ್ನ ವಶದಲ್ಲಿಟ್ಟುಕೊಂಡಿರುವನು."

**ಹಂಸ ಮತ್ತು ಡಿಬಿಕ :-** " ಮಧು ಕೈಟಭ ಎಂಬ ಇಬ್ಬರು ದೈತ್ಯರು ವೇದಗಳನ್ನು ಅಪಹರಿಸಿದರು. ಅವರನ್ನು ನೀನು ಹಯಗ್ರೀವರೂಪದಿಂದ ಸಂಹರಿಸಿದಿ. ಅವರಲ್ಲಿ ಮಧು ಎಂಬ ದೈತ್ಯನು "ಹಂಸ" ಎಂಬ ರೂಪದಿಂದಲೂ ಕೈಟಭ ಎಂಬ ದೈತ್ಯನು "ಡಿಬಿಕ" ಎಂಬ ರೂಪದಿಂದಲೂ ಹುಟ್ಟಿರುವರು. ಅವರಿಬ್ಬರೂ ರುದ್ರದೇವರ

ವರಬಲದಿಂದ ಯಾರಿಂದಲೂ ಜಯಿಸಲು ಅಶಕ್ಯರಾದವರು. ರುದ್ರದೇವರನ್ನು ಸರ್ವೋತ್ತಮನೆಂದೂ ಜರಾಸಂಧನನ್ನು ರುದ್ರದೇವರ ಅನಂತರದಲ್ಲಿ ಸರ್ವಜೀವರ ಮಧ್ಯದಲ್ಲಿ ಉತ್ತಮನೆಂದೂ ತಿಳಿದಿರುವರು. ಅವರಿಬ್ಬರನ್ನೂ ನಿತ್ಯನರಕದಲ್ಲಿ ನೀನು ತಳ್ಳಬೇಕು.

## ದೇವಾಸುರಯುದ್ಧದಲ್ಲಿ ಸತ್ತ ದೈತ್ಯರು

" ದೇವಾಸುರ ಯುದ್ಧದಲ್ಲಿ ನಿನ್ನಿಂದ ಕೊಲ್ಲಲ್ಪಟ್ಟ ದೈತ್ಯರಲ್ಲಿ ಅನೇಕ ದೈತ್ಯರು ನಿತ್ಯನರಕವನ್ನು ಈಗ ಪಡೆದಿರುವರು. ಉಳಿದ ದೈತ್ಯರು ಈಗ ಭೂಲೋಕದಲ್ಲಿ ಹುಟ್ಟಿರುವರು. ಅವರನ್ನೆಲ್ಲರನ್ನೂ ನೀನು ನಿತ್ಯನರಕದಲ್ಲಿ ತಳ್ಳಬೇಕು.

## ದುರ್ಯೋಧನ

" ಕಲಿಯು ಎಲ್ಲಾ ದೈತ್ಯರ ಮಧ್ಯದಲ್ಲಿ ಅತ್ಯಂತ ಬಲಿಷ್ಠನು. ಅವನು ನಿನ್ನ ಪ್ರಥಮವೈರಿಯಾಗಿರುವನು. ಅವನು ನಿನ್ನ ಅನಂತಾವತಾರಗಳಲ್ಲಿ ನಿನ್ನ ಸಾಮರ್ಥ್ಯವನ್ನು ಚೆನ್ನಾಗಿ ತಿಳಿದನು. ನಿನ್ನನ್ನು ಬಲದಿಂದ ಜಯಿಸಲು ಸಾಧ್ಯವಿಲ್ಲವೆಂದೂ ತೀರ್ಮಾನಿಸಿದನು. ನಿನ್ನನ್ನು ದ್ವೇಷಿಸದೆ ಇರಲೂ ಅವನಿಂದ ಸಾಧ್ಯವಾಗಲಿಲ್ಲ. ಸಜ್ಜನರಲ್ಲಿ ಪ್ರವೇಶಿಸಿದನು. ಅವರು ಶ್ರೀಹರಿಯ ಮಹಿಮೆಯನ್ನು ತಿಳಿಯದಂತೆ ಮಾಡಿದನು. " ನನಗಿಂತ ಬೇರೆ ಶ್ರೀಹರಿ ಇಲ್ಲ" " ನಾನೇ ಶ್ರೀಹರಿಯಾಗಿರುವೆನು" " ಪ್ರಪಂಚವು ಸುಳ್ಳು. ಆದ್ದರಿಂದ ಶ್ರೀಹರಿಯು ಪ್ರಪಂಚದ ತಂದೆಯಲ್ಲ." "ನಮ್ಮ ತಂದೆಯೂ ಅಲ್ಲ" ಮುಂತಾದ ವಿಪರೀತಜ್ಞಾನವು ಸಜ್ಜನರಲ್ಲಿ ಹುಟ್ಟುವಂತೆ ಮಾಡಿದನು. ಈ ಕಲಿಯು ಅಜ್ಞಾನ ಮತ್ತು ವಿಪರೀತಜ್ಞಾನ ಸ್ವರೂಪಿಯಾಗಿರುವನು. ಇವನಿಂದ ಹುಟ್ಟಿದ ಅಜ್ಞಾನದಿಂದಲೂ ವಿಪರೀತಜ್ಞಾನದಿಂದಲೂ ಯುಕ್ತರಾಗಿರುವ ಸಜ್ಜನರು ಶ್ರೀಹರಿಯನ್ನು ಆರಾಧಿಸದಂತೆ ಮಾಡಿದನು. ಬಲದಿಂದ ಶ್ರೀಹರಿಯನ್ನು ಗೆಲ್ಲಲಿಕ್ಕೆ ಸಾಧ್ಯವಾಗದಿದ್ದರೂ ಅವನನ್ನು ಯಾರೂ ಆರಾಧಿಸದಂತೆ ಮಾಡಿಬಿಟ್ಟೆನೆಂದು ಹೆಮ್ಮೆಯಿಂದ ಯುಕ್ತನಾದನು."

"ಆಗ ನೀನು ವೇದವ್ಯಾಸಾವತಾರವನ್ನು ಸ್ವೀಕರಿಸಿದಿ. ವೇದಗಳನ್ನು ವಿಂಗಡಿಸಿದಿ. ವೇದಾರ್ಥಗಳನ್ನು ಉದಾಹರಣಪೂರ್ವಕವಾಗಿ ಸರ್ವರೂ ತಿಳಿಯಲೆಂದು ಎಲ್ಲಾ ಪುರಾಣಗಳನ್ನೂ ಮಹಾಭಾರತ ಗ್ರಂಥವನ್ನೂ ಬರೆದಿ. ವೇದಗಳ ಮತ್ತು ಪುರಾಣಗಳ ಅರ್ಥಗಳಲ್ಲಿ ಸಂಶಯವೂ ವಿಪರೀತ ಜ್ಞಾನವೂ ಏರ್ಪಡುವ ಸಂದರ್ಭದಲ್ಲಿ ಆ ಸಂಶಯವನ್ನೂ ವಿಪರೀತಜ್ಞಾನವನ್ನೂ ಪರಿಹರಿಸಿ ಅವುಗಳ ನಿಜಾರ್ಥಗಳನ್ನು ತಿಳಿಸುವುದಕ್ಕಾಗಿ ಬ್ರಹ್ಮಸೂತ್ರಗಳನ್ನು ಬರೆದಿ."

" ಈ ಬ್ರಹ್ಮಸೂತ್ರಗಳನ್ನು ಓದಿದ ಮೇಲೆ ಸಜ್ಜನರೆಲ್ಲರಿಗೂ ಬಂದಿರುವ ಸಂಶಯಗಳೂ ವಿಪರೀತಜ್ಞಾನಗಳೂ ಕ್ರಮವಾಗಿ ನಶಿಸಿದವು. ಇದರಿಂದ ಕಲಿಯ ಪ್ರಭಾವವು ಅಡಗಿತು. ನಿನ್ನಿಂದ ರಚಿಸಲ್ಪಟ್ಟ ಬ್ರಹ್ಮಸೂತ್ರಗಳಿಂದ ಅಜ್ಞಾನ ಮತ್ತು ವಿಪರೀತ ಜ್ಞಾನರೂಪಿಯಾದ ಕಲಿಯು ಕೊಲ್ಲಲ್ಪಟ್ಟನು. ಆದರೆ ಈ ವಧೆಯು ಕಾಲನೇಮಿ ಮುಂತಾದ ದೈತ್ಯರ ವಧೆಯಂತೆ ಆಯುಧಗಳ ಹೊಡೆತದಿಂದ ಏರ್ಪಟ್ಟ ವಧೆಯಲ್ಲ. ಕೇವಲ

ಬ್ರಹ್ಮಸೂತ್ರಗಳಲ್ಲಿ ವಾಕ್ಯಗಳಿಂದ ಏರ್ಪಟ್ಟ ವಧೆಯಾಗಿರುತ್ತದೆ. ಇದು ಸಾಲದು. ಅವನು ಭೂಲೋಕದಲ್ಲಿ ದುರ್ಯೋಧನ ಎಂಬ ರೂಪದಿಂದ ಹುಟ್ಟಬೇಕು. ಅವನನ್ನು ವಾಯುದೇವರು, ಭೀಮಸೇನ ಎಂಬ ರೂಪದಿಂದ ಗದೆಯಿಂದ ಸಂಹರಿಸಬೇಕು.

"ಸಜ್ಜನರು ಬ್ರಹ್ಮಸೂತ್ರಗಳನ್ನು ಓದಿದರು. ಆಗ ಅವರೊಳಗೆ ವಾಸಿಸುತ್ತಿದ್ದ ಕಲಿಯು ಬ್ರಹ್ಮಸೂತ್ರಗಳನ್ನು ಕೇಳಿದನು. ಅವರಿಗೆ ವಿಪರೀತಜ್ಞಾನವು ದೂರವಾಯಿತು. ಅವರಲ್ಲಿ ವಾಸಿಸುತ್ತಿರುವ ಕಲಿಗೆ ಬ್ರಹ್ಮಸೂತ್ರಗಳನ್ನು ಓದಿದರೂ " ಶ್ರೀಹರಿಯು ಸರ್ವೋತ್ತಮನಾಗಿರುವನು" ಎಂಬ ಯಥಾರ್ಥಜ್ಞಾನವು ಏರ್ಪಡಲಿಲ್ಲ. ಇದಕ್ಕೆ ಅವನಲ್ಲಿರುವ ಅಯೋಗ್ಯತೆಯೇ ಕಾರಣವಾಗಿರುತ್ತದೆ. "ಶ್ರೀಹರಿಯು ಸರ್ವೋತ್ತಮನಲ್ಲ" ಎಂಬ ವಿಪರೀತನಿಶ್ಚಯವೂ ಏರ್ಪಡಲಿಲ್ಲ. ಇದಕ್ಕೆ ಬ್ರಹ್ಮಸೂತ್ರಗಳ ಪ್ರಭಾವವೇ ಕಾರಣವಾಗಿದೆ. " ಶ್ರೀಹರಿಯು ಸರ್ವೋತ್ತಮನೋ ಅಲ್ಲವೋ ಎಂಬ ಸಂಶಯವು ಮಾತ್ರ ಏರ್ಪಟ್ಟಿರುತ್ತದೆ. ಈ ಸಂಶಯವು ಇರುವವರೆಗೆ ಅವನಿಗೆ ನಿತ್ಯನರಕವು ಏರ್ಪಡಲಾರದು. ಪುಣ್ಯಗಳಿಂದ ಸದ್ಗತಿಯೂ, ಪಾಪಗಳಿಂದ ದುರ್ಗತಿಯು, ಏರ್ಪಡುವಂತಾದೀತು. ಆದ್ದರಿಂದ ಈ ಕಲಿಗೆ "ಶ್ರೀಹರಿಯು ಸರ್ವೋತ್ತಮನಲ್ಲ" ಎಂಬ ವಿಪರೀತ ನಿಶ್ಚಯವನ್ನು ಹುಟ್ಟಿಸಿ ನಿತ್ಯನರಕದಲ್ಲಿ ತಳ್ಳಬೇಕು."

## ರಾಮಾವತಾರಕಾಲದಲ್ಲಿ ಸತ್ತ ದೈತ್ಯರು

"ಶ್ರೀರಾಮಾವತಾರಕಾಲದಲ್ಲಿ ನಿನ್ನ ಮತ್ತು ಹನುಮಂತದೇವನ ಬಲವನ್ನು ಆ ಕಾಲದಲ್ಲಿ ಹುಟ್ಟಿರುವವಎಲ್ಲಾ ದೈತ್ಯರು ತಿಳಿದರು. ನಿನಗೂ ಹನುಮಂತನಿಗೂ ಸಮಾನರು ಯಾರೂ ಇಲ್ಲವೆಂದು ತೀರ್ಮಾನಿಸಿದರು. ಹೀಗೆ ತೀರ್ಮಾನಿಸಿದವರು ನಿನ್ನಲ್ಲಿ ಗೌರವವನ್ನಿಟ್ಟುಕೊಂಡಾಯಿತು. ನಿನ್ನಲ್ಲಿಯೂ ವಾಯುದೇವನಲ್ಲಿಯೂ ಗೌರವವನ್ನು ಇಟ್ಟುಕೊಂಡವರು ನಿತ್ಯನಕರವನ್ನು ಹೊಂದಲು ಅನರ್ಹರಾಗಿರುವರು. ಆದ್ದರಿಂದ ನೀನು ಭೂಮಿಯಲ್ಲಿ ಅವತರಿಸಬೇಕು. ವಾಯುದೇವನೂ ಭೂಮಿಯಲ್ಲಿ ಅವತರಿಸಬೇಕು. ರಾಮಾವತಾರಕಾಲದಲ್ಲಿ ಹುಟ್ಟಿದ ದೈತ್ಯರೆಲ್ಲರೂ ಭೂಮಿಯಲ್ಲಿ ಈಗ ಹುಟ್ಟಿರುವರು. ಅವರೆಲ್ಲರು ನಿನ್ನಲ್ಲಿಯೂ ವಾಯುದೇವನಲ್ಲಿಯೂ ಎಲ್ಲಾ ದೇವತೆಗಳಲ್ಲಿಯೂ ನಾನಾ ಪ್ರಕಾರಗಳಿಂದ ದ್ವೇಷವನ್ನು ಮಾಡುವಂತಾಗಬೇಕು. ನಿನ್ನಲ್ಲಿ ಸ್ವಲ್ಪವೂ ಬಹುಮಾನವಿಲ್ಲದವರಾಗಬೇಕು. "ನೀನು ಸರ್ವೋತ್ತಮನೋ ಅಲ್ಲವೋ" ಎಂಬ ಸಂಶಯದಿಂದಲೂ ಯುಕ್ತರಾಗಬಾರದು. " ನೀನು ಸರ್ವೋತ್ತಮನಲ್ಲ" ಎಂಬ ವಿಪರೀತ ನಿಶ್ಚಯವನ್ನು ಪಡೆಯಬೇಕು. ನೀನು ಭೂಮಿಯಲ್ಲಿ ಅವತರಿಸಿ ನಾನಾ ವಿಧವಾದ ವೈರವನ್ನು ಹುಟ್ಟಿಸಿ ಅವರನ್ನೆಲ್ಲರನ್ನೂ ನಿತ್ಯನರಕದಲ್ಲಿ ತಳ್ಳಬೇಕು.

## ಶಿಶುಪಾಲ ಮತ್ತು ದಂತವಕ್ತ್ರರು

"ಜಯ ವಿಜಯ ಎಂಬುವವರಿಬ್ಬರು ನಿನ್ನ ದ್ವಾರಪಾಲಕರಾಗಿರುವರು. ಅವರು ಸನಕ ಮುಂತಾದ ನಾಲ್ಕು ಮುನಿಗಳ ಶಾಪದಿಂದ ರಾವಣ ಕುಂಭಕರ್ಣ ಎಂಬ ಎರಡು ರೂಪಗಳಿಂದ ಹುಟ್ಟಿದರು. ಅವರಲ್ಲಿ ಇಬ್ಬರು ದೈತ್ಯರು ಪ್ರವೇಶಿಸಿದರು. ಮಹಾವಿಷ್ಣುಭಕ್ತರಾದ ಜಯವಿಜಯರಿಂದ ನಿನ್ನ ದ್ವೇಷವನ್ನು ಮಾಡಿಸಿದರು. ಆ ರಾವಣ, ಕುಂಭಕರ್ಣರು ಈಗ ಶಿಶುಪಾಲದಂತವಕ್ತ್ರ ಎಂಬ ಎರಡು ರೂಪಗಳಿಂದ ಭೂಮಿಯಲ್ಲಿ ಹುಟ್ಟಿರುವರು. ನೀನು

ಭೂಮಿಯಲ್ಲಿ ಅವತರಿಸಬೇಕು. ಶಿಶುಪಾಲನನ್ನೂ ದಂತವಕ್ರನನ್ನೂ ಸಂಹರಿಸಬೇಕು. ಅವರಿಬ್ಬರಲ್ಲಿ ಪ್ರವೇಶಿಸಿದ ದೈತ್ಯರಿಂದ ಅವರಿಬ್ಬರನ್ನು ಬಿಡಿಸಬೇಕು. ಅವರಿಬ್ಬರನ್ನು ಪುನಃ ವೈಕುಂಠದಲ್ಲಿ ದ್ವಾರಪಾಲಕ ಸ್ಥಾನದಲ್ಲಿ ಸೇರಿಸಬೇಕು. ಅವರಿಬ್ಬರಿಂದ ಶ್ರೀಹರಿದ್ವೇಷವನ್ನು ಮಾಡಿಸಿದ ದೈತ್ಯರಿಬ್ಬರನ್ನು ನಿತ್ಯನರಕದಲ್ಲಿ ತಳ್ಳಬೇಕು.

## ಸಾಲ್ವ

"ಬಲಿಚಕ್ರವರ್ತಿಯು ನಿನ್ನಲ್ಲಿ ಅತ್ಯಂತ ಭಕ್ತಿಯುಳ್ಳವನು. ಅವನು ನಿನ್ನ ಭಕ್ತರಾದ ಇಂದ್ರಾದಿದೇವತೆಗಳನ್ನು ಅವರ ಲೋಕದಿಂದ ಓಡಿಸಿದನು. ನಿನ್ನನ್ನು ಅನೇಕ ಸಂದರ್ಭಗಳಲ್ಲಿ ಅಪಮಾನ ಮಾಡಿರುವನು. ಇವೆಲ್ಲವೂ ಅತ್ಯಂತ ಭಕ್ತನಾದ ಬಲಿಚಕ್ರವರ್ತಿಗೆ "ಬಲಿ" ಎಂಬ ದೈತ್ಯನ ಆವೇಶದಿಂದ ಏರ್ಪಟ್ಟಿವೆ. ಬಲಿ ಎಂಬ ದೈತ್ಯನು ಈಗ ಸಾಲ್ವದೇಶದ ಅಧಿಪತಿಯಾಗಿರುವ ಬ್ರಹ್ಮದತ್ತರಾಜನಿಗೆ"ಸಾಲ್ವ" ಎಂಬ ಹೆಸರಿನಿಂದ ಮಗನಾಗಿ ಹುಟ್ಟಿರುವನು."

" ಈ ಸಾಲ್ವನು ರುದ್ರದೇವರನ್ನು ಕುರಿತು ಘೋರವಾದ ತಪಸ್ಸನ್ನು ಮಾಡಿದನು. ಸರ್ವರಿಂದಲೂ ಅಭೇದ್ಯವಾದ "ಸೌಭ" ಎಂಬ ವಿಮಾನವನ್ನು ಪಡೆದನು. ಆ ವಿಮಾನದ ಬಲದಿಂದ ಸರ್ವರನ್ನೂ ಗೆದ್ದನು. ಈ ಸಾಲ್ವನು ಶ್ರೀಪರಶುರಾಮದೇವ ಎಂಬ ಹೆಸರಿನಿಂದ ಯುಕ್ತನಾಗಿರುವ ನಿನ್ನೊಡನೆ ಅನೇಕ ಬಾರಿ ಯುದ್ಧವನ್ನು ಮಾಡಿದನು. ಎಲ್ಲಾ ಸಂದರ್ಭಗಳಲ್ಲಿಯೂ ಪರಾಜಿತನಾದನು. ಪರಶುರಾಮರೂಪಿಯಾದ ನೀನೇ ಅವನನ್ನು ಕೊಲ್ಲಬಹುದಾಗಿತ್ತು. " ಕೃಷ್ಣಾವತಾರವನ್ನು ಸ್ವೀಕರಿಸಬೇಕು. ಆಗ ಅವನನ್ನು ಕೊಲ್ಲಬೇಕು." ಎಂದು ಸಂಕಲ್ಪಿಸಿದಿ. ಆದ್ದರಿಂದಲೇ ಆಗ ಕೊಲ್ಲಲಿಲ್ಲ.

"ಇವನು ತಪಸ್ಸನ್ನು ಮಾಡಿ ಪಡೆದಿರುವ ಸೌಭ ಎಂಬ ವಿಮಾನದಲ್ಲಿ ಕುಳಿತು ಇವನ ತಂದೆಯಾದ ಬ್ರಹ್ಮದತ್ತನೂ ಸಹ ಸರ್ವರನ್ನೂ ಜಯಿಸಿದನು. ಆದರೆ ಭೀಷ್ಮಾಚಾರ್ಯನಿಂದ ಪರಾಜಿತನಾದನು. ಆಗ ಸಾಲ್ವನು ತಪಸ್ಸನ್ನು ಮಾಡುತ್ತಿದ್ದನು. ಆದ್ದರಿಂದಲೇ ಭೀಷ್ಮನಿಂದ ಪರಾಜಿತನಾದನು. ಸಾಲ್ವನಿದ್ದಿದ್ದರೆ ಪರಾಜಿತನಾಗುತ್ತಿದ್ದಿಲ್ಲ. ಈಗ ಸಾಲ್ವನು ತಪಸ್ಸಿನಿಂದ ಹಿಂದಿರುಗಿ ಬಂದಿರುವನು. ನಿನ್ನನ್ನು ಬಿಟ್ಟು ಇತರರಿಂದ ಇವನನ್ನು ಕೊಲ್ಲಲು ಸಾಧ್ಯವಿಲ್ಲ. ನೀನು ಕೃಷ್ಣಾವತಾರವನ್ನು ಸ್ವೀಕರಿಸು. ನಿನ್ನ ಸಂಕಲ್ಪದಂತೆ ಇವನನ್ನು ಸಂಹರಿಸು. ಇವನನ್ನು ನಿತ್ಯನರಕದಲ್ಲಿ ತಳ್ಳು."

## ಕೀಚಕ

" ಬಾಣಾಸುರ ಎಂಬ ದೈತ್ಯನು ನಿನ್ನಲ್ಲಿ ತುಂಬಾ ಭಕ್ತಿಯುಳ್ಳವನು. ಅವನಲ್ಲಿ "ಬಾಣಾಸುರ" ಎಂಬ ದೈತ್ಯನು ಪ್ರವೇಶಿಸಿದನು. ನಿನಗೆ ಅತ್ಯಂತ ವಿರೋಧವನ್ನು ಬಾಣಾಸುರನಿಂದ ಮಾಡಿಸಿದನು. ಅವನು ಈಗ "ಕೀಚಕ" ಎಂಬ ಹೆಸರಿನಿಂದ ಹುಟ್ಟಿರುವನು. ಕೀಚಕನು ರುದ್ರದೇವರ ವರದಿಂದ ಅವಧ್ಯನಾಗಿರುವನು. ಅವನನ್ನು ಕೊಲ್ಲಿಸು. ನಿತ್ಯ ನರಕದಲ್ಲಿ ತಳ್ಳು."

" ಮಹಾಪ್ರಭೋ ನೀನು ಭೂಮಿಯಲ್ಲಿ ಅವತರಿಸಬೇಕು. ಹಿಂದೆ ನಾವು ಹೇಳಿರುವ ಎಲ್ಲಾ ಕಾರ್ಯಗಳನ್ನೂ ಸಮಯೋಚಿತವಾಗಿ ಮಾಡಬೇಕು. ನೀನೇ ಬ್ರಹ್ಮ, ರುದ್ರ, ಇಂದ್ರ ಮುಂತಾದ ಎಲ್ಲಾ

ದೇವತೆಗಳಿಗೂ ಗತಿಯಾಗಿರುವಿ. ನಿನ್ನಲ್ಲಿ ಎಲ್ಲಾ ಶಕ್ತಿಗಳೂ ಪೂರ್ಣವಾಗಿವೆ. ನಿನ್ನಲ್ಲಿ ಸ್ವರೂಪಜ್ಞಾನವು ಪೂರ್ಣವಾಗಿದೆ. ನಿನ್ನಲ್ಲಿ ಸ್ವರೂಪಸುಖವೂ ಪೂರ್ಣವಾಗಿದೆ. ಈ ಶಕ್ತಿ ಜ್ಞಾನ ಮತ್ತು ಸುಖಗಳು ಯಾವಾಗಲೂ ನಿನ್ನಲ್ಲಿ ವ್ಯಕ್ತವಾಗುತ್ತಿವೆ. ನಿನಗೆ ಸಮನು ಯಾರೂ ಇಲ್ಲ. ಹೀಗಿರುವಾಗ ನಿನಗಿಂತ ಉತ್ತಮನು ಇರಲು ಸಾಧ್ಯವೇ? ನಿನ್ನನ್ನು ನಾವೆಲ್ಲರೂ ನಮಸ್ಕರಿಸುವೆವು. ನಮ್ಮನ್ನು ಕರುಣಿಸು.'' ಇದು ದೇವತೆಗಳೆಲ್ಲರೂ ಮಾಡಿದ ಪ್ರಾರ್ಥನೆ. ಈ ಅಂಶವು ವಿಷ್ಣುಃ ಬ್ರಹ್ಮಾದಿದೇವೈಃ ಪ್ರಾರ್ಥಿತಃ ಎಂಬ ಅಂಶದಿಂದ ಹೇಳಲ್ಪಟ್ಟಿತು.

# ಶ್ರೀಕೃಷ್ಣಾವತಾರ ಪೂರ್ವಪೀಠಿಕೆ

## ವಿಷ್ಣುಸರ್ವೋತ್ತಮತ್ವ ಸಮರ್ಥನೆ

ಶ್ರೀಹರಿಯು ನಗುತ್ತಾ ಇವರೆಲ್ಲರ ಪ್ರಾರ್ಥನೆಯನ್ನು ಕೇಳಿದನು. ಯಾರಿಗೂ ದರ್ಶನವನ್ನು ಕೊಡಲಿಲ್ಲ. ಬ್ರಹ್ಮದೇವರಿಗೆ ಮಾತ್ರ ಕೇಳುವಂತೆ ಮಾತಾಡಿದನು. " ಎಲೈ ದೇವತೆಗಳಿರಾ, ನಿಮ್ಮ ಪ್ರಾರ್ಥನೆಯಂತೆ ನಾನು ಅವತರಿಸಿದಾಗ ನನ್ನನ್ನು ಸೇವಿಸುವುದಕ್ಕಾಗಿ ನೀವೆಲ್ಲರೂ ಭೂಮಿಯಲ್ಲಿ ಹುಟ್ಟಬೇಕು. ದೇವತಾಸ್ತ್ರೀಯರೂ ಹುಟ್ಟಬೇಕು. " ಇದು ಶ್ರೀಹರಿಯ ಆಜ್ಞೆ.

ಪುನಃ ಶ್ರೀಹರಿಯು ಆಲೋಚಿಸಿದನು. " ಬ್ರಹ್ಮದೇವನು ನಾನು ಸರ್ವೋತ್ತಮನೆಂದು ಸರ್ವರಿಗೂ ತಿಳಿಸುವುದಕ್ಕೂ, ನನ್ನಲ್ಲಿ ತನಗಿರುವ ಅಪಾರವಾದ ಭಕ್ತಿಯನ್ನು ತಿಳಿಸುವುದಕ್ಕೂ ಇಲ್ಲಿಗೆ ರುದ್ರ ಮುಂತಾದ ಸಕಲ ದೇವತೆಗಳನ್ನು ಕರೆದುಕೊಂಡು ಬಂದಿರುವನು. ಅತ್ಯಂತ ಭಕ್ತಿಯಿಂದ ಸ್ತುತಿಸುತ್ತಿರುವನು. ನಾನು ಈಗ ನನ್ನನ್ನು ಸ್ತುತಿಸುತ್ತಿರುವ ಯಾವ ದೇವತೆಗಳಿಗೂ ನನ್ನ ದರ್ಶನವನ್ನು ಕೊಟ್ಟಿಲ್ಲ. ಅದ್ದರಿಂದ " ನಾನೇ ಸರ್ವೋತ್ತಮನು" ಎಂಬ ವಿಷಯವನ್ನು ಸ್ಪಷ್ಟಪಡಿಸಿದೆನು. ನಾನು ಮಾತಾಡಿದ ಮಾತುಗಳೂ ಬ್ರಹ್ಮದೇವನ ಕಿವಿಗೆ ಮಾತ್ರ ಬಿದ್ದಿವೆ. ಇತರರ ಕಿವಿಗಳಿಗೆ ಬಿದ್ದಿಲ್ಲ. ಬ್ರಹ್ಮನು ನನ್ನ ಮಾತುಗಳನ್ನು ತಿಳಿದು ಅವರಿಗೆ ಆ ಮಾತುಗಳನ್ನು ತಿಳಿಸಿರುವನು. ಆದ್ದರಿಂದ ಎಲ್ಲಾ ದೇವತಗಳ ಮಧ್ಯದಲ್ಲಿಯೂ ಬ್ರಹ್ಮದೇವನೇ ಉತ್ತಮನೆಂದು ತಿಳಿಸಿದೆನು. ಇನ್ನು ಮುಂದೆ " ಬ್ರಹ್ಮದೇವನಿಗಿಂತಲೂ ಲಕ್ಷ್ಮೀದೇವಿಯು ಉತ್ತಮಳು ಎಂದು ಸರ್ವರಿಗೂ ಸ್ಪಷ್ಟಪಡಿಸುವೆನು ಎಂದು ತೀರ್ಮಾನಿಸಿದನು. ಲಕ್ಷ್ಮೀದೇವಿಯರನ್ನು ಕರೆದನು.

# ದುರ್ಗಾದೇವಿಯರಿಗೆ ಶ್ರೀಹರಿಯ ಮೊದಲನೆಯ ಅಪ್ಪಣೆ

## ಶ್ರೀಕೃಷ್ಣದೇವ ಅಣ್ಣಂದಿರ ಪೂರ್ವಚರಿತ್ರೆ

" ಪ್ರಿಯಳೇ ನಾನು ಹೇಳುವ ಮಾತುಗಳನ್ನು ಕೇಳು. ಅದರಂತೆ ನಡೆದುಕೋ ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮದೇವನ ಮಗನಾದ ಮರೀಚಿ ಎಂಬ ಋಷಿಗೆ ಊರ್ಣಾ ಎಂಬ ಪತ್ನಿಯಲ್ಲಿ ಸ್ಮರ, ಉದ್ಗೀಥ, ಪರಿಷ್ವಂಗ, ಪತಂಗ, ಕ್ಷುದ್ರಭೃತ್, ಘೃಣೀ ಎಂದು ಆರು ಜನ ಮಕ್ಕಳು ಹುಟ್ಟಿದರು. ಅವರು ದೇವಲ ಎಂಬ ಋಷಿಯ

ದೇಹವು ಕಾಮಜ್ವರದಿಂದ ಕೃಶವಾಗಿರುವುದನ್ನು ಕಂಡರು. ಅವರನ್ನು ನೋಡಿ ಅಪಹಾಸವನ್ನು ಮಾಡಿದರು. ಇದರಿಂದ ಕುಪಿತರಾದ ದೇವಲಋಷಿಯು ಅವರನ್ನು ದೈತ್ಯರಾಗಿ ಹುಟ್ಟುವಂತೆ ಶಪಿಸಿದನು. ಈ ಶಾಪದಿಂದ ಅವರೆಲ್ಲರೂ ಹಿರಣ್ಯಾಕ್ಷನ ಮಗನಾದ ಕಾಲನೇಮಿ ಎಂಬ ದೈತ್ಯನಿಗೆ ಮಕ್ಕಳಾಗಿ ಹುಟ್ಟಿದರು. ಆ ಆರು ಮಕ್ಕಳೂ ಬ್ರಹ್ಮದೇವನನ್ನು ಕುರಿತು ತಪಸ್ಸನ್ನು ಮಾಡಿದರು. ಯಾರಿಂದಲೂ ಮರಣವಿಲ್ಲ, ಎಂಬ ವರವನ್ನು ಪಡೆದರು.

ಇದನ್ನು ಹಿರಣ್ಯಕಶಿಪುವು ತಿಳಿದನು. "ತನ್ನ ತಮ್ಮನ ಮೊಮ್ಮಕ್ಕಳು ತನ್ನಲ್ಲಿ ಅವಧ್ಯತ್ವ ವರವನ್ನು ಕೇಳಲಿಲ್ಲ. ಹಾಗೆ ಕೇಳಿದ್ದರೆ ತಾನೇ ಕೊಡುತ್ತಿದ್ದೆನು. ತನ್ನಲ್ಲಿ ಕೇಳದೆ ಬ್ರಹ್ಮದೇವನಿಂದ ಈ ವರವನ್ನು ಪಡೆದರು. ಇದರಿಂದ ತನ್ನನ್ನು ಅಪಮಾನ ಮಾಡಿದಂತಾಯಿತು.'' ಎಂದು ತಿಳಿದನು. ಅವರನ್ನು ಕರೆದನು. "ನೀವೆಲ್ಲರೂ ಭೂಮಿಯಲ್ಲಿ ಹುಟ್ಟಿರಿ. ಅಲ್ಲಿ ನಿಮ್ಮ ತಂದೆಯೇ ನಿಮ್ಮನ್ನು ಕೊಲ್ಲಲಿ'' ಎಂದು ಶಪಿಸಿದನು.

ಈ ಹಿರಣ್ಯಕಶಿಪುವು ಬ್ರಹ್ಮದೇವರಿಂದ ವರವನ್ನು ಪಡೆದನು. ಮೊದಲು ನಿರಹಂಕಾರಿಯಾಗಿದ್ದ ಇವನು ಬ್ರಹ್ಮದೇವರಿಂದ ವರವನ್ನು ಪಡೆದ ಮೇಲೆ ಅಹಂಕಾರಿಯಾದನು. ಆದ್ದರಿಂದಲೇ ಕಾಲನೇಮಿಯ ಮಕ್ಕಳು ಬ್ರಹ್ಮದೇವರಿಂದ ವರವನ್ನು ಪಡೆದುದಕ್ಕಾಗಿ ಕುಪಿತನಾದನು.

"ಬ್ರಹ್ಮದೇವನ ವರವು ಸತ್ಯವಾದರೆ ಅವರಿಗೆ ಮರಣವಿಲ್ಲ. ಹಿರಣ್ಯಕಶಿಪುವಿನ ಶಾಪವು ಸುಳ್ಳಾಗುವುದು. ಹಿರಣ್ಯಕಶಿಪುವಿನ ಶಾಪವು ಸತ್ಯವಾದರೆ ಅವರನ್ನು ಅವರ ತಂದೆಯಾದ ಕಾಲನೇಮಿಯೇ ಕೊಲ್ಲುವನು. ಬ್ರಹ್ಮದೇವರ ವರವು ಸುಳ್ಳಾಗುತ್ತದೆ. ಇದು ಸಹಜ. ಆದರೆ ನನ್ನಲ್ಲಿ ಅಘಟಿತಘಟನಾಶಕ್ತಿಯು ಇದೆ. ಬ್ರಹ್ಮದೇವ ವರವನ್ನೂ ಹಿರಣ್ಯಕಶಿಪುವಿನ ಶಾಪವನ್ನೂ ಸತ್ಯವಾಗುವಂತೆ ಮಾಡುವೆನು.

"ದೇವಿಯೇ ನೀನು ಇಲ್ಲಿಂದ ಹೊರಟು ಸುತಲಲೋಕದಲ್ಲಿರುವ ಬಲಿಚಕ್ರವರ್ತಿಯ ಮನೆಗೆ ಹೋಗು. ಅಲ್ಲಿ ಆ ಆರು ಜನರೂ ಇದ್ದಾರೆ. ಅವರಲ್ಲಿ ಸ್ಮರ ಎಂಬ ಮೊದಲನೆಯ ಮಗನನ್ನು ಒಂದು ಗುಹೆಗೆ ಯಾರಿಗೂ ತಿಳಿಯದಂತೆ ಕರೆದುಕೊಂಡು ಹೋಗು. ಅವನಿಗೆ ಒಂದು ವರ್ಷಕಾಲದವರೆಗೆ ಗಾಢನಿದ್ರೆಯು ಏರ್ಪಡುವಂತೆ ಮಾಡು. ಅವನ ದೇಹದಲ್ಲಿ ಪ್ರವೇಶಿಸು. ಅವನ ಜೀವನನ್ನು ಎರಡು ಭಾಗವಾಗಿ ವಿಂಗಡಿಸು. ಒಂದು ಭಾಗವು ಆ ದೇಹವು ನಶಿಸದಂತೆ ಇರುವುದಕ್ಕಾಗಿ ಆ ದೇಹದಲ್ಲಿಯೇ ಇರಲಿ. ಇನ್ನೊಂದು ಭಾಗವನ್ನು ಕರೆದುಕೊಂಡು ಅಲ್ಲಿಂದ ಹೊರಡು. ಮಧುರಾಪಟ್ಟಣದಲ್ಲಿ ವಸುದೇವನ ಪತ್ನಿಯಾದ ದೇವಕೀದೇವಿ ಹೊಟ್ಟೆಯಲ್ಲಿ ಅವನನ್ನು ಇಡು. ಅವನಿಗೆ ವಸುದೇವನ ವೀರ್ಯದಿಂದಲೂ ದೇವಕೀದೇವಿಯ ಶೋಣಿತದಿಂದಲೂ ದೇಹವು ಏರ್ಪಡಲಿ. ಹತ್ತು ತಿಂಗಳು ಮುಗಿಯುವಾಗ ಅವನು ಹುಟ್ಟಲಿ. ಹುಟ್ಟಿದ ಕೂಡಲೇ ಕಾಲನೇಮಿಯ ಅವತಾರವಾಗಿರುವ ಕಂಸನು ಅವನನ್ನು ಸಂಹರಿಸುವನು. ಸಂಹರಿಸಿದ ಕೂಡಲೇ ಅವನನ್ನು ಅಲ್ಲಿಂದ ಕರೆದುಕೊಂಡು ಸುತಲ ಲೋಕದಲ್ಲಿ ಮಲಗಿರುವ ಅವನ ದೇಹದ ಸಮೀಪಕ್ಕೆ ಬಾ. ಅವನ ದೇಹದೊಳಗೆ ಪ್ರವೇಶಿಸು. ಅವನ ದೇಹದೊಳಗಿರುವ ಆ ಜೀವನ ಭಾಗದೊಡನೆ ಈ ಭಾಗವನ್ನು ಸೇರಿಸು ಎರಡು ಭಾಗಗಳೂ ಒಂದಾಗುವಂತೆ ಮಾಡು.

"ಈಗ ನೋಡು. ಸುತಲಲೋಕದಲ್ಲಿ ಒಂದು ವರ್ಷಕಾಲದ ವರೆಗೆ ನಿದ್ರೆಯನ್ನು ಮಾಡುತ್ತಿರುವಾಗಲೇ ಅವನಿಗೆ ಜನ್ಮವು ಏರ್ಪಡಲಿ. ಅವನ ತಂದೆಯಾದ ಕಾಲನೇಮಿಯು ಅವನನ್ನು ಕೊಲ್ಲಲಿ. ಹಿರಣ್ಯಕಶಿಪುವಿನ ಶಾಪವು ಸತ್ಯವಾಗಲಿ. ಬ್ರಹ್ಮದೇವನು ವರವನ್ನು ಕೊಟ್ಟಿರುವ ದೇಹವು ನಿದ್ರಿಸುತ್ತಿರಲಿ. ನಿದ್ರಾಕಾಲದಲ್ಲಿ ಜೀವನು ಒಂದು

ಅಂಶದಿಂದ ಆ ದೇಹದಲ್ಲಿ ಇರುತ್ತಿರುವುದರಿಂದ ಆ ದೇಹವು ನಶಿಸುವುದಿಲ್ಲ. ಆ ದೇಹವು ಅವಧ್ಯವಾಗಿರುವುದರಿಂದ ಬ್ರಹ್ಮದೇವನ ವರವೂ ಸತ್ಯವಾಗಲಿ. ಇದೇರೀತಿಯಿಂದ ಉಳಿದ ಐದು ಜನರಿಗೂ ಒಂದೊಂದಾಗಿ ಒಂದೊಂದು ವರ್ಷಕಾಲದ ವರೆಗೆ ನಿದ್ದೆಯನ್ನು ಕೊಟ್ಟು ಹಿಂದೆ ಹೇಳಿದಂತೆ ಮಾಡು. ಹೀಗೆ ನನ್ನ ಅಘಟಿತಘಟನಾಶಕ್ತಿಯನ್ನು ತಿಳಿಸುವುದಕ್ಕಾಗಿ ದೇವಕೀದೇವಿಗೆ ಆರು ಮಕ್ಕಳು ಹುಟ್ಟಿ ಸಾಯಲಿ. ಸಾಯದೆಯೂ ಇರಲಿ. ಇದು ನೀನು ಮಾಡಬೇಕಾದ ಮೊದಲನೆಯ ಕಾರ್ಯ."

## ದುರ್ಗಾದೇವಿಯರಿಗೆ ಶ್ರೀಹರಿಯ ಎರಡನೆಯ ಅಪ್ಪಣೆ

" ದೇವಕೀದೇವಿಯ ಏಳನೆಯ ಗರ್ಭದಲ್ಲಿ ಶೇಷದೇವನು ಪ್ರವೇಶಿಸುವನು. ಮೂರನೆಯ ತಿಂಗಳು ಪೂರ್ತಿಯಾಗುವವರೆಗೆ ಅವಳು ಅವನನ್ನು ಧರಿಸಲಿ. ವಸುದೇವನ ಇನ್ನೊಬ್ಬ ಪತ್ನಿಯಾದ ರೋಹಿಣೀದೇವಿಯು ಗೋಕುಲದಲ್ಲಿರುವ ನಂದನ ಮನೆಯಲ್ಲಿ ವಾಸಿಸುತ್ತಿರುವಳು. ದೇವಕಿದೇವಿಗೆ ಮೂರನೆಯ ತಿಂಗಳು ಪೂರ್ತಿಯಾಗುವಾಗ ಯಾರಿಗೂ ತಿಳಿಯದಂತೆ ಅವನನ್ನು ಸೆಳೆದು ರೋಹಿಣೀದೇವಿಯ ದೇಹದಲ್ಲಿ ಇಡು. ಒಂದು ದೇಹದಲ್ಲಿರುವ ಶಿಶುವನ್ನು ಯಾರಿಗೂ ತಿಳಿಯದಂತೆ ದೇಶಾಂತರದಲ್ಲಿರುವ ಇನ್ನೊಬ್ಬ ಸ್ತ್ರೀಯ ಹೊಟ್ಟೆಯಲ್ಲಿಡುವ ಕೆಲಸವು ನಿನ್ನಿಂದಲೇ ಸಾಧ್ಯ. ಇದರಿಂದ ನಿನ್ನಲ್ಲಿರುವ ಅಘಟಿತ ಘಟನಾಶಕ್ತಿಯೂ ವ್ಯಕ್ತವಾಗಲಿ. ಈ ಕಾರ್ಯವನ್ನು ಎರಡನೆಯದಾಗಿ ಮಾಡು."

## ದುರ್ಗಾದೇವಿಯರಿಗೆ ಶ್ರೀಹರಿಯ ಮೂರನೆಯ ಅಪ್ಪಣೆ

" ದೇವಕೀದೇವಿಯ ಎಂಟನೆಯ ಗರ್ಭದಲ್ಲಿ ನಾನು ಪ್ರವೇಶಿಸುವೆನು. ನಾನು ಪ್ರವೇಶಿಸಿದ ಕೂಡಲೇ ನೀನು ಗೋಕುಲದಲ್ಲಿರುವ ನಂದನ ಪತ್ನಿಯಾದ ಯಶೋದೆಯ ಗರ್ಭದಲ್ಲಿ ಪ್ರವೇಶಿಸು. ನಾನು ದೇವಕೀದೇವಿಯ ಗರ್ಭದಿಂದ ಹೊರಗೆ ಬಂದ ಕೂಡಲೇ ನೀನು ಯಶೋದೆಯ ದೇಹದಿಂದ ಹೊರಗೆ ಬಾ. ನನ್ನನ್ನು ಎತ್ತಿಕೊಂಡು ವಸುದೇವನು ಗೋಕುಲಕ್ಕೆ ಬರುವನು. ನಿನ್ನ ಸ್ಥಾನದಲ್ಲಿ ನನ್ನನ್ನು ಮಲಗಿಸುವನು. ನಿನ್ನನ್ನು ಎತ್ತಿಕೊಂಡು ಮಥುರೆಗೆ ಬರುವನು. ನನ್ನ ಸ್ಥಾನದಲ್ಲಿ ನಿನ್ನನ್ನು ಮಲಗಿಸುವನು. ಕೂಸುಗಳು ಹುಟ್ಟಿದ ಮೇಲೆ ಬದಲಾಯಿಸಬಹುದೆಂದು ಅಂಜಿದ ಕಂಸನು ರೋಹಿಣೀದೇವಿಯನ್ನು ಇಲ್ಲಿಂದ ಅಲ್ಲಿಗೆ ಕಳುಹಿಸಿದನು. ಹಾಗೆ ಮಾಡಿದರೂ ಅವನ ಪ್ರಯತ್ನವು ನಿಷ್ಫಲವಾಗಲಿ. ಕಂಸನು ನಿನ್ನನ್ನು ನಾನೆಂದು ಭ್ರಮಿಸಿ ಕೊಲ್ಲಲು ಯತ್ನಿಸುವನು. ನೀನು ಆಕಾಶದಲ್ಲಿ ನಿಂತು ಉಗ್ರವಾದ ರೂಪವನ್ನು ತೋರಿಸು. ನಾನು ಹುಟ್ಟಿರುವ ಸಮಾಚಾರವನ್ನು ಎಚ್ಚರಿಸು. ಇದು ನೀನು ಮಾಡಬೇಕಾದ ಮೂರನೆಯ ಕಾರ್ಯ."

" ಹೀಗೆ ನನ್ನನ್ನು ಸೇವಿಸಿದುದಕ್ಕಾಗಿ ನಿನ್ನನ್ನು ಎಲ್ಲರೂ ನಾನಾವಿಧವಾದ ಹೆಸರುಗಳಿಂದ ಕರೆಯುವರು. ನನ್ನ ತಂಗಿಯೆಂದು ಭಾವಿಸಿ ಪೂಜಿಸುತ್ತಿರುವರು. " ಇದು ಶ್ರೀಹರಿಯು ದುರ್ಗಾದೇವಿಯರಿಗೆ ಪ್ರತ್ಯಕ್ಷವಾಗಿ ಹೇಳಿದ ಮಾತು. ಈ ಮಾತುಗಳನ್ನು ಲಕ್ಷ್ಮೀದೇವಿಯರಿಗೆ ಕಾಣಿಸುತ್ತಾ ಶ್ರೀಹರಿಯು ಹೇಳಿದನು. ಬ್ರಹ್ಮದೇವರಿಗೆ ಹಿಂದೆ ಹೇಳಿದ ಮಾತುಗಳು ಅವರಿಗೆ ಕಾಣಿಸದೆ ಹೇಳಿದವುಗಳು. ಆದ್ದರಿಂದ ಪರಮಾತ್ಮನಿಂದ ಪ್ರತ್ಯಕ್ಷವಾಗಿ ಆಜ್ಞಾಪಿಸಲ್ಪಡದಿರುವ ಬ್ರಹ್ಮದೇವರಿಗಿಂತ ಪ್ರತ್ಯಕ್ಷವಾಗಿ ಆಜ್ಞಾಪಿಸಲ್ಪಟ್ಟ ಲಕ್ಷ್ಮೀದೇವಿಯರು ಉತ್ತಮರೆಂದು

ಸ್ಪಷ್ಟಪಡಿಸಿದನು. ತನ್ನಿಂದ ಆಜ್ಞಾಪಿಸಲ್ಪಟ್ಟ ಲಕ್ಷ್ಮೀದೇವಿಯರಿಗಿಂತ ಆಜ್ಞೆ ಯನ್ನು ಮಾಡಿರುವ ತಾನೇ ಉತ್ತಮನೆಂದೂ ಸ್ಪಷ್ಟಪಡಿಸಿದನು.

## ಶ್ರೀಹರಿಯು ಕ್ಷೀರಸಮುದ್ರದಿಂದ ಮೇರುಶಿಖರಕ್ಕೆ ಬಂದುದು

ಪುನಃ ಶ್ರೀಹರಿಯು ಆಲೋಚಿಸಿದನು. " ಕ್ಷೀರಸಮುದ್ರದ ಮಧ್ಯದಲ್ಲಿ ಶ್ವೇತದ್ವೀಪವು ಇರುತ್ತದೆ. ಈ ಶ್ವೇತದ್ವೀಪದಲ್ಲಿ ನಾನು ಈಗ ವಾಸಿಸುತ್ತಿರುವೆನು. ಇಲ್ಲಿ ನನ್ನನ್ನು ನೋಡುವುದಕ್ಕಾಗಿ ಎಲ್ಲಾ ದೇವತೆಗಳೂ ಬಂದಿರುವರು. ನನ್ನನ್ನು ಸ್ತುತಿಸಿದರು. ನಾನೂ ಯಾರಿಗೂ ಕಾಣಿಸಲಿಲ್ಲ" ಬ್ರಹ್ಮದೇವನಿಗೆ ಮಾತ್ರ ಕೇಳುವಂತೆ ನನ್ನ ಸಂದೇಶವನ್ನು ಎಲ್ಲಾ ದೇವತೆಗಳಿಗೂ ತಿಳಿಸಿರುವೆನು. ಆದರೆ ಇದು ದೇವಲೋಕಕ್ಕೆ ಮಾತ್ರ ಸಂಬಂಧಿಸಿದ ಕಾರ್ಯವಲ್ಲ. ನನ್ನಿಂದ ಕೊಲ್ಲಲ್ಪಡಬೇಕಾದ ದೈತ್ಯರು ಭೂಮಿಯಲ್ಲಿ ವಾಪಿಸುತ್ತಿರುವರು. ನಾನು ಅವತರಿಸಬೇಕಾದ ಸ್ಥಳವೂ ಭೂಮಿಯೇ ಆಗಿದೆ. ಆದ್ದರಿಂದ ದೇವಲೋಕಕ್ಕಿಂತ ಭೂಲೋಕದ ಸಂಬಂಧವೇ ಈ ಕಾರ್ಯಕ್ಕೆ ಅಧಿಕವಾಗಿದೆ.

" ದೇವಲೋಕಗಳಲ್ಲಿರುವ ಎಲ್ಲಾ ಕಾರ್ಯಗಳನ್ನು ಸತ್ಯಲೋಕದಲ್ಲಿದ್ದ ಬ್ರಹ್ಮದೇವನು ನಿರ್ವಹಿಸುತ್ತಿರುವನು. ಭೂಲೋಕದಲ್ಲಿರುವ ಎಲ್ಲಾ ಕಾರ್ಯಗಳನ್ನು ನಿರ್ವಹಿಸುವುದಕ್ಕಾಗಿ ಇದೇ ಬ್ರಹ್ಮದೇವನು ಮೇರುಪರ್ವತದ ಶಿಖರದಲ್ಲಿರುವ "ಶತಕೋಟಿ" ಎಂಬ ಪಟ್ಟಣದಲ್ಲಿ ರೂಪಾಂತರದಿಂದ ವಾಸಿಸುತ್ತಿರುವನು. ಅಲ್ಲಿಗೆ ಹೋಗಬೇಕು. ಬ್ರಹ್ಮದೇವನ ಆ ರೂಪಾಂತರವನ್ನೂ ಅನುಗ್ರಹಿಸಬೇಕು. ಭೂಲೋಕಕ್ಕೆ ಸಂಬಂಧಿಸಿದ ವಿಷಯಗಳನ್ನು ಅವನಲ್ಲಿ ಚರ್ಚಿಸಿ ಅವನ ಅಭಿಪ್ರಾಯದಂತೆ ನಡೆದುಕೊಳ್ಳಬೇಕು. ಅದಕ್ಕಾಗಿ ಮೇರುಪರ್ವತಕ್ಕೆ ಹೋಗುವೆನು."

" ಈ ಶ್ವೇತದ್ವಿಪಕ್ಕಾಗಲೀ ಶ್ವೇತದ್ವೀಪದ ಸಮೀಪಪ್ರದೇಶಕ್ಕಾಗಿಯಾಗಲೀ ಯಾವ ದೈತ್ಯನೂ ಬರುವ ಅರ್ಹತೆಯುಳ್ಳವನಲ್ಲ. ಆದ್ದರಿಂದ ನಾನು ದೇವತೆಗಳಿಗೆ ನನ್ನ ಅವತಾರ ವಿಷಯದಲ್ಲಿ ಸಂದೇಶವನ್ನು ನೀಡಿರುವುದು ಯಾವ ದೈತ್ಯನಿಗೂ ಗೊತ್ತಿಲ್ಲ. ಅವರೆಲ್ಲರಿಗೂ ಈ ವಿಷಯವು ತಿಳಿಯಬೇಕಾಗಿದೆ. ಈ ವಿಷಯವು ತಿಳಿದರೆ ಇಂದಿನಿಂದಲೇ ನನ್ನಲ್ಲಿ ದ್ವೇಷವನ್ನು ಮಾಡಲು ಆರಂಭಿಸುವರು. ಇಂದೇ ದ್ವೇಷಿಸಲು ಆರಂಭಿಸಿದರೆ ದೇವತೆಗಳು ಪ್ರಾರ್ಥಿಸಿದಂತೆ ನನ್ನ ಅವತಾರಕಾರ್ಯವು ಬಹುಬೇಗನೆ ಸಾಗುತ್ತದೆ. ಆದ್ದರಿಂದ ದೈತ್ಯಸಂಚಾರಕ್ಕೆ ಯೋಗ್ಯವಾಗಿರುವ ಮೇರುಪರ್ವತದ ಶಿಖರದಲ್ಲಿಯೇ ಈ ವಿಷಯದ ಚರ್ಚೆಯನ್ನು ಇಟ್ಟುಕೊಳ್ಳಬೇಕು. ಅಲ್ಲಿ ಅದೃಶ್ಯರಾಗಿ ಸಂಚರಿಸುತ್ತಿರುವ ದೈತ್ಯರು ಈ ಚರ್ಚೆಗಳನ್ನೆಲ್ಲಾ ಕೇಳುವರು. ಇದರಿಂದ ನನ್ನ ಅವತಾರ ವಿಷಯವುಬಹಿರಂಗವಾಗುತ್ತದೆ. ಅದಕ್ಕಾಗಿಯೂ ಮೇರುಪರ್ವತಕ್ಕೆ ಹೋಗುವೆನು" ಎಂದು ಸಂಕಲ್ಪಿಸಿದನು.

ಸರ್ವರಿಗೂ ತನ್ನ ರೂಪವನ್ನು ತೋರಿಸಿದನು. ತನ್ನ ಜೊತೆಯಲ್ಲಿ ಮೇರುಪರ್ವತಕ್ಕೆ ಬರುವಂತೆ ಆಜ್ಞಾಪಿಸಿದನು. ಕೆಲವರಿಗೆ ಅನಂತಸೂರ್ಯರಂತೆ ಅಧಿಕವಾದ ತೇಜಸ್ಸಿನಿಂದಲೂ ಮತ್ತೆ ಕೆಲವರಿಗೆ ಅನಂತಚಂದ್ರರಂತೆ ಸೌಮ್ಯಕಾಂತಿಯಿಂದಲೂ ಯುಕ್ತನಾಗಿ ಕಾಣಿಸಿದನು. ಸಕಲ ದೇವತೆಗಳಿಂದಲೂ ಯುಕ್ತನಾಗಿ ಮೇರುಪರ್ವತಕ್ಕೆ ಬಂದನು. ಮೇರುಪರ್ವತದಲ್ಲಿರುವ ಬ್ರಹ್ಮದೇವರು ಅತ್ಯಂತ ಭಕ್ತಿಯಿಂದ ಶ್ರೀಹರಿಯನ್ನು

ಆರಾಧಿಸಿದರು. ಸತ್ಯಲೋಕವಾಸಿಯಾದ ಬ್ರಹ್ಮದೇವರು ಸ್ತುತಿಸಿದಂತೆ ಸ್ತುತಿಸಿದರು. ಭೂಲೋಕದಲ್ಲಿ ಅವತರಿಸುವಂತೆ ಪ್ರಾರ್ಥಿಸಿದರು. ಶ್ರೀಹರಿಯು ಅವರನ್ನು ಕುರಿತು ಹೇಳಿದನು.

" ಓ ಬ್ರಹ್ಮದೇವ, ನಾನು ಸ್ವತಂತ್ರನಾಗಿರುವೆನು. ಆದರೂ ನಿನ್ನ ಭಕ್ತಿಯಿಂದ ನಿನ್ನ ಅಧೀನನಾಗಿರುವೆನು. ಯಾವ ಕಾರ್ಯವನ್ನೂ ನನ್ನ ಇಚ್ಛೆಯಂತೆ ನಾನು ಮಾಡುವುದಿಲ್ಲ. ನಿನ್ನ ಇಚ್ಛೆಯಂತೆಯೇ ಮಾಡುತ್ತಿರುವೆನು. ನೀನು ನನ್ನನ್ನು ಭೂಮಿಯಲ್ಲಿ ಅವತರಿಸಬೇಕೆಂದು ಪ್ರಾರ್ಥಿಸಿದಿ. ನಿನ್ನ ಪ್ರಾರ್ಥನೆಯಂತೆ ಅವತರಿಸುವೆನು. ಯಾರ ಮಗನಾಗಿ ಅವತರಿಸಬೇಕು? ಎಲ್ಲಿ ಅವತರಿಸಬೇಕು? ಮುಂತಾದ ವಿವರವನ್ನು ಹೇಳು." ಎಂದನು.

## ಕಶ್ಯಪರಿಗೆ ಬ್ರಹ್ಮದೇವರ ಶಾಪ

ಬ್ರಹ್ಮದೇವರು ಶ್ರೀಹರಿಯನ್ನು ನಮಸ್ಕರಿಸಿದರು. ತನ್ನ ಅಭಿಪ್ರಾಯವನ್ನು ಹೇಳಿದರು. " ಓ ಮಹಾಪ್ರಭೋ, ನನ್ನಲ್ಲಿ ಕೆಲವು ದನಗಳಿದ್ದವು. ಆ ದನಗಳ ಹಾಲುಗಳು ಅಮೃತದ ರುಚಿಯಿಂದಲೂ ಶಕ್ತಿಯಿಂದಲೂ ಯುಕ್ತವಾಗಿದ್ದವು. ಆ ದನಗಳನ್ನು ವರುಣನು ಕೇಳಿದನು, ಅವನಿಗೆ ಕೊಟ್ಟಿದ್ದೆನು. ಅವನ ತಂದೆಯಾದ ಕಶ್ಯಪನು ಅವನ ಮನೆಗೆ ಬಂದನು. ಈ ದನಗಳನ್ನು ಕೇಳಿದನು. ಅವನು ಕೊಡಲಿಲ್ಲ. ಸುರಭಿ, ಅದಿತಿ ಎಂಬ ಇಬ್ಬರು ಪತ್ನಿಯರಿಂದ ಪ್ರೇರಿತನಾಗಿ ಬಲಾತ್ಕಾರದಿಂದ ಅವುಗಳನ್ನು ಅಪಹರಿಸಿದನು. ವರುಣನು ನನ್ನಲ್ಲಿಗೆ ಬಂದು ವಿಷಯವನ್ನು ತಿಳಿಸಿದನು."

"ಮಗನು ಇಷ್ಟಪಡದಿರುವಾಗ ಬಲಾತ್ಕಾರದಿಂದ ಅವನಿಗೆ ನಾನು ಕೊಟ್ಟಿರುವ ವಸ್ತುವನ್ನು ತಂದೆಯಾದ ಕಶ್ಯಪನು ಅಪಹರಿಸಿದುದು ಅನ್ಯಾಯವೆಂದು ತೀರ್ಮಾನಿಸಿದೆನು. ಕಶ್ಯಪನನ್ನು ಕರೆದೆನು " ದನವನ್ನು ನೀನು ಅಪಹರಿಸಿರುತ್ತೀ. ಆದ್ದರಿಂದ ಭೂಲೋಕದಲ್ಲಿ ಕ್ಷತ್ರಿಯನಾಗಿ ಹುಟ್ಟು. ಆದರೆ ದನಗಳಿಂದ ಜೀವಿಸು. ನಿನಗೆ ಈ ದನಗಳನ್ನು ಅಪಹರಿಸುವಂತೆ ಪ್ರೇರಿಸಿರುವ ನಿನ್ನ ಪತ್ನಿಯರಿಬ್ಬರು ನಿನ್ನೊಡನೆ ಹುಟ್ಟಲಿ." ಎಂದು ಶಪಿಸಿದೆನು.

ಆ ಕಶ್ಯಪನು ಈಗ "ಶೂರ" ಎಂಬ ರಾಜನ ಮಗನಾಗಿ "ವಸುದೇವ" ಎಂಬ ಹೆಸರಿನಿಂದ ಹುಟ್ಟಿರುವನು. ಬಹಳ ಗೋವುಗಳಿಂದ ಯುಕ್ತನಾಗಿರುವನು. ಕ್ಷತ್ರಿಯನಾಗಿ ಹುಟ್ಟಿ ಗೋವುಗಳಿಂದ ಜೀವಿಸುತ್ತಿರುವನು. ಅದಿತಿದೇವಿಯು ದೇವಕೀ ಎಂಬ ಹೆಸರಿನಿಂದಲೂ ಸುರಭಿದೇವಿಯು, ರೋಹಿಣೀ ಎಂಬ ಹೆಸರಿನಿಂದಲೂ ಅವನ ಪತ್ನಿಯರಾಗಿ ಅವತರಿಸಿರುವರು. ನೀನು ಆ ಇಬ್ಬರು ಪತ್ನಿಯರಲ್ಲಿ ದೇವಕೀದೇವಿಯ ಮಗನಾಗಿ ಅವತರಿಸಬೇಕು.

## ದ್ರೋಣ ಎಂಬ ವಸುವಿಗೆ ಬ್ರಹ್ಮದೇವರ ವರ

" ಓ ಮಹಾಪ್ರಭೋ, ಅಷ್ಟವಸುಗಳ ಮಧ್ಯದಲ್ಲಿ ದ್ರೋಣ ಎಂಬ ವಸುವು ತನ್ನ ಪತ್ನಿಯಾದ ಧರಾದೇವಿಯಿಂದ ಯುಕ್ತನಾಗಿ ನೀನೇ ಮಗನಾಗಿ ಹುಟ್ಟಬೇಕೆಂದು ನನ್ನನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಿದನು. ನಾನು ಅವನಿಗೆ ಆ ವರವನ್ನು ಕೊಟ್ಟೆನು. ವಸುದೇವನ ತಂದೆಯಾದ ಶೂರರಾಜನಿಗೆ ವೈಶ್ಯಜಾತಿಯ ಒಬ್ಬಳು ಪತ್ನಿಯಿರುವಳು. ಅವಳಲ್ಲಿ ಶೂರರಾಜನಿಗೆ ಈ ದ್ರೋಣನು " ನಂದ" ಎಂಬ ಹೆಸರಿನಿಂದ ಮಗನಾಗಿ ಅವತರಿಸಿರುವನು. ಅವನ ಪತ್ನಿಯಾದ ಧರಾದೇವಿಯು " ಯಶೋದಾ"ಎಂಬ ಹೆಸರಿನಿಂದ ನಂದನ ಪತ್ನಿಯಾಗಿ ಅವತರಿಸಿರುವಳು."

# ವಸುದೇವನಿಗೆ ಶ್ರೀಹರಿಯ ವರ

"ಓ ಮಹಾಪ್ರಭೋ, ಸ್ವಾಯಂಭುವಮನ್ವಂತರದಲ್ಲಿ "ಸುತಪಾ" ಎಂಬ ಪ್ರಜಾಪತಿಯು "ಪೃಶ್ನಿ" ಎಂಬ ಪತ್ನಿಯಿಂದ ಯುಕ್ತನಾಗಿ ನಿನ್ನನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಿದನು. ನೀನು ಅವರಿಗೆ ಪ್ರತ್ಯಕ್ಷನಾದೆ. "ನಿನಗೆ ಸಮಾನವಾದ ಮಗನು ಹುಟ್ಟಬೇಕು." ಎಂದು ನಿನ್ನಿಂದ ವರವನ್ನು ಬೇಡಿದನು. ನೀನು ಆ ವರವನ್ನು ಕೊಟ್ಟೆ. ನಿನಗೆ ಸಮಾನನು ನೀನೇ, ಬೇರೆ ಯಾರೂ ಇಲ್ಲ. ಆದ್ದರಿಂದ ಅವರಿಗೆ ಮಗನಾಗಿ ನೀನೇ ಅವತರಿಸಿದಿ. ಪೃಶ್ನಿ ಎಂಬುವಳ ಗರ್ಭದಿಂದ ನೀನು ಅವತರಿಸಿರುವುದರಿಂದ "ಪೃಶ್ನಿಗರ್ಭ" ಎಂದು ಪ್ರಸಿದ್ಧನಾದಿ. ಅವರು ಮುಂದಿನ ಜನ್ಮದಲ್ಲಿ "ಕಶ್ಯಪ" "ಅದಿತಿ" ಎಂಬ ಹೆಸರಿನಿಂದ ಹುಟ್ಟಿದರು. ಆಗಲೂ ಹಿಂದಿನ ಜನ್ಮದಲ್ಲಿ ಅವರಿಗೆ ನೀನು ಕೊಟ್ಟಿರುವ ವರವನ್ನು ರಕ್ಷಿಸುವುದಕ್ಕಾಗಿ ಮಗನಾಗಿ ಹುಟ್ಟಿದಿ. ಆಗ ನೀನು ಕುಳ್ಳನಾದುದರಿಂದ "ವಾಮನ" ಎಂದು ಪ್ರಸಿದ್ಧನಾದಿ. ಈಗ ಅವರಿಬ್ಬರೂ "ವಸುದೇವ" "ದೇವಕೀ" ಎಂಬ ಹೆಸರಿನಿಂದ ಅವತರಿಸಿರುವರು. ಈಗಲೂ ಮೊದಲನೆಯ ಜನ್ಮದಲ್ಲಿ ನೀನು ಇವರಿಗೆ ಕೊಟ್ಟಿರುವ ವರವನ್ನು ರಕ್ಷಿಸುವುದಕ್ಕಾಗಿ ಇವರಿಬ್ಬರ ಮಗನಾಗಿ ಅವತರಿಸಲೇ ಬೇಕು."

# ಶ್ರೀಕೃಷ್ಣನು ಮಥುರೆಯಲ್ಲಿ ಹುಟ್ಟಿ ಗೋಕುಲಕ್ಕೆ ಹೋಗಲು ಕಾರಣ

"ಓ ಮಹಾಪ್ರಭೋ, ವಸುದೇವ ದೇವಕಿ ಎಂಬುವರಿಗೆ ವರವನ್ನು ನೀನು ಕೊಟ್ಟಿರುವಿ, ನಂದ ಯಶೋದ ಎಂಬುವರಿಗೆ ವರವನ್ನು ನಾನು ಕೊಟ್ಟಿರುವೆನು. ನೀನು ನಿನ್ನ ವರದಂತೆ ವಸುದೇವ ದೇವಕಿಯರಿಗೆ ಮಗನಾಗಿ ಅವತರಿಸಬೇಕೆ? ನನ್ನ ವರದಂತೆ ನಂದ ಮತ್ತು ಯಶೋದೆಯರ ಮಗನಾಗಿ ಅವತರಿಸಬೇಕೆ? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಈಗ ಸಮಾಧಾನವನ್ನು ಹೇಳುವೆನು.

ನನ್ನ ನಿನ್ನ ಇಬ್ಬರ ವರಗಳನ್ನೂ ಸತ್ಯವಾಗುವಂತೆ ಮಾಡು. ನಿನ್ನ ವರವು ನನ್ನ ವರಕ್ಕಿಂತ ಉತ್ತಮವಾದುದು. ಆದ್ದರಿಂದ ನಿನ್ನ ವರದಂತೆ ಮೊಟ್ಟಮೊದಲು ವಸುದೇವದೇವಕಿಯರ ಪುತ್ರನಾಗಿ ನೀನು ಅವತರಿಸು. ಅವತರಿಸಿದವನು ಮಥುರೆಯಲ್ಲಿ ನಿಲ್ಲದೆ ಗೋಕುಲಕ್ಕೆ ಬಂದು ಬಿಡು. ನಂದಮತ್ತು ಯಶೋದೆಯರು ನೀನೇ ಅವರ ಮಗನೆಂದು ಭ್ರಮಿಸುವಂತೆ ಮಾಡು. ನಿನ್ನ ತಂದೆ ತಾಯಿಗಳಿಗಾಗುವ ಆನಂದವು ಅವರಿಬ್ಬರಿಗೆ ಏರ್ಪಡಲಿ. ತಮ್ಮ ಮಗನಲ್ಲದಿದ್ದರೂ ಪುತ್ರವಾತ್ಸಲ್ಯದಿಂದ ನಿನ್ನನ್ನು ಬೆಳೆಸುತ್ತಾ ನಂದ ಮತ್ತು ಯಶೋದೆಯರು ಪುತ್ರಸುಖವನ್ನು ಅನುಭವಿಸಲಿ. ಇದರಿಂದ ದುರ್ಬಲವಾದ ನನ್ನ ವರವೂ ಸತ್ಯವಾಗುವಂತಾಗಲಿ."

"ಮಹಾಪ್ರಭೋ, ನೀನು ನಿನ್ನ ರೂಪವನ್ನು ತೋರಿಸುವುದೇ ನಿನಗೆ ಜನನವೆನಿಸುತ್ತದೆ. ಇದಕ್ಕಿಂತ ಬೇರೆ ವಿಧವಾದ ಪ್ರಾಕೃತದೇಹದ ಲಾಭ ಮುಂತಾದ ಜನನವು ನಿನಗಿಲ್ಲ. ಆದ್ದರಿಂದ ವಸುದೇವ ಮತ್ತು ದೇವಕಿಯರಿಗೆ ನೀನು ನಿನ್ನ ಸ್ವರೂಪವನ್ನು ತೋರಿಸುವುದೇ ಜನನವೆನಿಸುತ್ತದೆ, ಅದೇ ವಿಧದಿಂದ ನಂದನಿಗೂ ಯಶೋದೆಗೂ ನಿನ್ನ ಸ್ವರೂಪವನ್ನು ತೋರಿಸು. ಹೀಗಾದ ಮೇಲೆ ನಂದನೂ ವಸುದೇವನಂತೆ ನಿನ್ನ ತಂದೆಯಾಗುವುದರಲ್ಲಿ ತಪ್ಪೇನಿದೆ?" ಇದು ಬ್ರಹ್ಮದೇವರ ಪ್ರಾರ್ಥನೆ.

# ಶ್ರೀ ಹರಿಯು ದೇವತೆಗಳಿಗೆ ಪ್ರತ್ಯಕ್ಷವಾಗಿ ಕೊಟ್ಟ ಆಜ್ಞೆ

ಈ ಪ್ರಾರ್ಥನೆಯನ್ನು ಶ್ರೀಹರಿಯು ಅಂಗೀಕರಿಸಿದನು. ಎಲ್ಲಾ ದೇವತೆಗಳ ಕಡೆಗೆ ತಿರುಗಿದನು. " ಎಲೈ ದೇವತೆಗಳಿರಾ, ಒಬ್ಬೊಬ್ಬ ದೇವತೆಯೂ ಹುಟ್ಟಬೇಕಾದ ಜಾತಿ ಮತ್ತು ಆಕಾರ ಮುಂತಾದವುಗಳನ್ನು ನಾನು ಸಂಕಲ್ಪಿಸಿರುವೆನು. ನನ್ನ ಸಂಕಲ್ಪವನ್ನು ನೀವು ತಿಳಿದಿರುವಿರಿ. ಆ ಸಂಕಲ್ಪದಂತೆ ನೀವೆಲ್ಲರೂ ಭೂಲೋಕದಲ್ಲಿ ಅವತರಿಸಿರಿ" ಎಂದು ಆಜ್ಞಾಪಿಸಿದನು.

# ವಸುದೇವನೂ ಅವನ ಪತ್ನಿಯರೂ

ಅತ್ರಿ ಋಷಿಗಳ ನೇತ್ರದಿಂದ ಚಂದ್ರನು ಅವತರಿಸಿದನು. ಅವನ ವಂಶದಲ್ಲಿ ಯದು ಎಂಬ ಪ್ರಸಿದ್ಧರಾಜನು ಅವತರಿಸಿದನು. ಅವನ ವಂಶದಲ್ಲಿ ಶೂರ ಎಂಬ ಪ್ರಸಿದ್ಧ ರಾಜನು ಅವತರಿಸಿದನು. ಅವನಿಗೆ ಕಶ್ಯಪಋಷಿಗಳು "ವಸುದೇವ" ಎಂಬ ಹೆಸರಿನಿಂದ ಮಗನಾಗಿ ಅವತರಿಸಿದರು.

ಅದೇ ಚಂದ್ರವಂಶದಲ್ಲಿ ಆಹುಕ ಎಂಬ ರಾಜನು ಅವತರಿಸಿದನು. ಆಹುಕರಾಜನಿಗೆ ಉಗ್ರಸೇನ, ದೇವಕ ಎಂಬ ಎರಡು ಮಕ್ಕಳು ಹುಟ್ಟಿದರು. ಅವರಲ್ಲಿ ಜ್ಯೇಷ್ಠಪುತ್ರನಾದ ಉಗ್ರಸೇನನಿಗೆ ಕಂಸ ಮುಂತಾದ ಅನೇಕ ಮಕ್ಕಳು ಹುಟ್ಟಿದರು. ದೇವಕರಾಜನಲ್ಲಿ ಕಶ್ಯಪರ ಏಳು ಪತ್ನಿಯರು ಮಕ್ಕಳಾಗಿ ದೇವಕೀ, ಧೃತದೇವಾ, ಶಾಂತಿದೇವಾ, ಉಪದೇವಾ, ಶ್ರೀದೇವಾ, ದೇವರಕ್ಷಿತಾ, ಸಹದೇವಾ ಎಂಬ ಹೆಸರಿನಿಂದ ಹುಟ್ಟಿದರು. ಈ ಏಳು ಕನ್ಯೆಯರಲ್ಲಿ ಜ್ಯೇಷ್ಠಕುಮಾರಿಯಾದ ದೇವಕೀದೇವಿಯನ್ನು ಆಹುಕರಾಜನು ದತ್ತು ಸ್ವೀಕಾರ ಮಾಡಿದನು. ಆದ್ದರಿಂದ ದೇವಕೀದೇವಿಯು ಆಹುಕ ರಾಜನಿಗೆ ಮಗಳೂ ಮೊಮ್ಮಗಳೂ ಆಗುವಳು. ಕಂಸನಿಗೆ ತನ್ನ ತಾತನಾದ ಆಹುಕರಾಜನು ದತ್ತುಸ್ವೀಕಾರಮಾಡಿರುವುದರಿಂದ ಸೋದರತ್ತೆಯೂ ತನ್ನ ಚಿಕ್ಕಪ್ಪನ ಮಗಳಾಗಿರುವುದರಿಂದ ತಂಗಿಯೂ ಆಗುವಳು.

# ದೇವಕಿಯ ವಿವಾಹಮಹೋತ್ಸವದಲ್ಲಿ ಅಶರೀರವಾಣಿ

ಈ ಏಳು ಕನ್ಯೆಯರನ್ನು ವಿವಾಹಮಾಡಿಕೊಳ್ಳುವುದಕ್ಕಿಂತ ಪೂರ್ವದಲ್ಲಿ ವಸುದೇವನು ಮೂರು ಕನ್ಯೆಯರನ್ನು ವಿವಾಹ ಮಾಡಿಕೊಂಡಿದ್ದನು. ಆ ಮೂರು ಕನ್ಯೆಯರೂ ಹಿಂದಿನ ಜನ್ಮದಲ್ಲಿ ಕಶ್ಯಪರ ಪತ್ನಿಯರು. ಅವರಲ್ಲಿ ಮೊದಲನೆಯವಳು ಸುರಭಿ ಎಂಬುವಳು. ಅವಳು ಬಾಹ್ಲೀಕದೇಶದ ರಾಜನ ಮಗಳಾಗಿ ರೋಹಿಣೀ ಎಂಬ ಹೆಸರಿನಿಂದ ಹುಟ್ಟಿದಳು. ಅವಳಿಗೆ ಬಲರಾಮನು ಮಗನಾಗಿ ಹುಟ್ಟುವನು. ಎರಡನೆಯವಳು "ದಿತಿ" ಎಂಬುವಳು. ಅವಳು ಕಾಶಿರಾಜನ ಮಗಳಾಗಿ ಹುಟ್ಟಿದಳು. ಅವಳಲ್ಲಿ "ವೇನ" ಎಂಬ ದೈತ್ಯನು ಮಗನಾಗಿ "ಪೌಂಡ್ರಕವಾಸುದೇವ" ಎಂಬ ಹೆಸರಿನಿಂದ ಹುಟ್ಟಿದನು. " ನಾನೇ ದೇವರು" ಎಂದು ಹೇಳುತ್ತಾ ಅಧೋಗತಿಯನ್ನು ಪಡೆದನು. ಮೂರನೆಯವಳು "ದನು" ಎಂಬುವಳು. ಅವಳು ಕರವೀರೇಶ್ವರನ ಮಗಳಾಗಿ ಹುಟ್ಟಿದಳು. ಅವಳಲ್ಲಿ "ಮಧು" ಎಂಬ ದೈತ್ಯನ ಮಗನೂ ಹಿಂದೆ ಶ್ರೀಹರಿಯಿಂದ ಸಂಹರಿಸಲ್ಪಟ್ಟವನೂ ಆಗಿರುವ "ಧುಂಧು" ಎಂಬ ದೈತ್ಯನು "ಸೃಗಾಲವಾಸುದೇವ" ಎಂಬ ಹೆಸರಿನಿಂದ ಮಗನಾಗಿ ಹುಟ್ಟಿದನು.

ಪೌಂಡ್ರಕವಾಸುದೇವನೂ ಸೃಗಾಲವಾಸುದೇವನೂ ಹುಟ್ಟಿದ ಮೇಲೆ ವಸುದೇವನು ಅವರಿಬ್ಬರ ತಾಯಂದಿರುಗಳನ್ನು ಬಿಟ್ಟು ಮಥುರೆಗೆ ಬಂದನು. ದೇವಕೀದೇವಿಯರೇ ಮೊದಲಾದವರನ್ನು ವಿವಾಹ ಮಾಡಿಕೊಂಡನು. ಪುನಃ ಆ ಊರುಗಳಿಗೆ ಹೋಗಲಿಲ್ಲ. ಆದ್ದರಿಂದ ಪೌಂಡ್ರಕವಾಸುದೇವನಿಗೂ ಸೃಗಾಲವಾಸುದೇವನಿಗೂ ತಮ್ಮಂದಿರು ಹುಟ್ಟಲಿಲ್ಲ. ತಮ್ಮ ತಾಯಂದಿರನ್ನು ಬಿಟ್ಟಿದ್ದರಿಂದ ವಸುದೇವನಲ್ಲಿ ಅವರಿಬ್ಬರಿಗೂ ಪ್ರಬಲವಾದ ದ್ವೇಷವು ಏರ್ಪಟ್ಟಿತು. ಈ ದ್ವೇಷವೇ ಹೆಚ್ಚುತ್ತಾ ಹೋಗಿ ಯಾದವರಲ್ಲಿಯೇ ದ್ವೇಷವು ಏರ್ಪಟ್ಟಿತು. ಇವರಿಬ್ಬರನ್ನು ಬಿಟ್ಟು ಉಳಿದ ವಸುದೇವನ ಮಕ್ಕಳೆಲ್ಲರೂ ದೇವತೆಗಳ ಅವತಾರವಾಗಿರುವರು. ಹೀಗೆ ವಸುದೇವನು ತನ್ನ ಹಿಂದಿನ ಜನ್ಮದ ಹದಿಮೂರು ಪತ್ನಿಯರಲ್ಲಿ ಹತ್ತು ಪತ್ನಿಯರನ್ನು ವಿವಾಹ ಮಾಡಿಕೊಂಡನು. ಉಳಿದ ಮೂವರು ವಸುದೇವನು ಹುಟ್ಟಿದಾಗ ಹುಟ್ಟಲಿಲ್ಲ.

"ವಾಯುದೇವರು ದೇವಕೀವಸುದೇವರ ವಿವಾಹಕಾಲದಲ್ಲಿ ಆಲೋಚಿಸಿದರು. ಶ್ರೀಹರಿಯು ಅವತಾರಕಾಲದಲ್ಲಿ ಲೋಕನ್ಯಾಯವನ್ನೇ ಅನುಸರಿಸುತ್ತಿರುವನು. ಲೋಕನ್ಯಾಯವನ್ನು ನೋಡಿದಾಗ ಮಾನ್ಯನಾದ ಸೋದರಮಾವನನ್ನು ಸಂಹರಿಸುವುದು ತಪ್ಪೆನಿಸುತ್ತದೆ. ಆದರೆ ಸೋದರಮಾವನಿಗಿಂತ ಉತ್ತಮ ಬಂಧುಗಳಾದ ತಂದೆ ತಾಯಿಯವರಿಗೆ ಚಿತ್ರಹಿಂಸೆಯನ್ನು ಕೊಡುತ್ತಿರುವ ಸೋದರಮಾವನನ್ನು ಸಂಹರಿಸುವುದು ತಪ್ಪಾಗಲಾರದು. ಇದೂ ಲೋಕನ್ಯಾಯ, ಶ್ರೀಕೃಷ್ಣದೇವನು ದೇವಕೀದೇವಿಯಲ್ಲಿ ಅವತರಿಸಿದಾಗ ಕಂಸನು ಅವನ ಸೋದರಮಾವನಾಗುವನು. ಅವನನ್ನು ಕೊಲ್ಲುವುದಕ್ಕಾಗಿಯೇ ಶ್ರೀಹರಿಯು ಕೃಷ್ಣಾವತಾರವನ್ನು ಸ್ವೀಕರಿಸುವನು ಶ್ರೀಕೃಷ್ಣದೇವನು ಕಂಸನನ್ನು ಸಂಹರಿಸುವುದಕ್ಕಾಗಿಯೇ ಅವನಿಂದ ದೇವಕೀವಸುದೇವರಿಗೆ ಚಿತ್ರಹಿಂಸೆಯನ್ನು ಕೊಡಿಸಬೇಕು.

" ಅದು ಮಾತ್ರವಲ್ಲ ಕಂಸ, ಜರಾಸಂಧ ಮುಂತಾದವರಿಗೆ ಶ್ರೀಹರಿದ್ವೇಷವನ್ನು ಹೆಚ್ಚಿಸುವುದಕ್ಕಾಗಿಯೇ ಶ್ರೀಹರಿಯು ಕೃಷ್ಣಾವತಾರವನ್ನು ಸ್ವೀಕರಿಸುತ್ತಿರುವನು. "ಶ್ರೀಕೃಷ್ಣದೇವನು ತನಗೆ ಮೃತ್ಯು" ಎಂಬ ಸಮಾಚಾರವನ್ನು ಕಂಸನಿಗೆ ಇಂದೇ ತಿಳಿಸಬೇಕು. ಅದನ್ನು ತಿಳಿದರೆ ಇಂದಿನಿಂದಲೇ ಶ್ರೀಹರಿಯಲ್ಲಿ ಹೆಚ್ಚು ಹೆಚ್ಚು ದ್ವೇಷವನ್ನು ಮಾಡಲು ಕಂಸನು ಆರಂಭಿಸುವನು." ಎಂದು ವಾಯುದೇವರು ತೀರ್ಮಾನಿಸಿದರು. ದೇವಕೀದೇವಿಯ ವಿವಾಹವು ನಡೆಯಿತು. ಕಂಸನಿಗೆ ದೇವಕೀದೇವಿಯರಲ್ಲಿರುವ ಪ್ರೇಮದಿಂದ ರಥದ ಸಾರಥ್ಯವನ್ನು ಅವನೇ ನಡೆಯಿಸಿದನು. ಆಗ ವಾಯುದೇವರು ಅದೃಶ್ಯರಾಗಿ " ಎಲೋ ಕಂಸ, ನೀನು ದೇವಕೀದೇವಿಯಲ್ಲಿ ತುಂಬಾ ಪ್ರೀತಿಯನ್ನು ಇಟ್ಟುಕೊಂಡು ಅವಳನ್ನು ಗಂಡನ ಮನೆಗೆ ಕರೆದುಕೊಂಡು ಹೋಗುತ್ತಿರುವಿ. ದಡ್ಡನೇ, ಅವಳ ಎಂಟನೆಯ ಮಗನು ನಿನ್ನನ್ನು ಕೊಲ್ಲುವನು." ಎಂದು ಹೇಳಿದರು.

## ದೇವಕಿಯ ಸಂಹಾರೋದ್ಯೋಗ

ಈ ಅಶರೀರವಾಣಿಯನ್ನು ಕಂಸನು ಕೇಳಿದನು. ದೇವಕೀದೇವಿಯಲ್ಲಿ ಅಪಾರಪ್ರೇಮವಿದ್ದರೂ, "ಅವಳ ಮಗನು ತನ್ನನ್ನು ಕೊಲ್ಲುವನು" ಎಂದು ತಿಳಿದ ಮೇಲೆ ಸ್ವಾರ್ಥಪರನಾದ ಕಂಸನಿಗೆ ಆ ಪ್ರೇಮವು ನಿಲ್ಲುವುದೇ? ಇಲ್ಲ " ಇವಳು ಬದುಕಿದ್ದರೆ ಇವಳಿಗೆ ಎಂಟನೆಯ ಮಗನು ಹುಟ್ಟುವ ಸಂಭವವಿದೆ ಇವಳನ್ನು ಈಗಲೇ ಕೊಂದುಬಿಟ್ಟರೆ ಇವಳಿಗೆ ಮಗನು ಹುಟ್ಟುವುದೂ ಇಲ್ಲ. ನನಗೆ ಮರಣವೂ ಏರ್ಪಡುವುದಿಲ್ಲ." ಎಂದು

ತೀರ್ಮಾನಿಸಿದನು. ರಥದಿಂದ ಕೆಳಗೆ ಧುಮುಕಿದನು. ದೇವಕೀದೇವಿಯ ಜುಟ್ಟನ್ನು ಸೆಳೆದನು. ಅವಳನ್ನು ಕೊಲ್ಲುವುದಕ್ಕಾಗಿ ಖಡ್ಗವನ್ನು ಎತ್ತಿದನು.

## ವಸುದೇವನು ಉಪಾಯದಿಂದ ದೇವಕಿಯನ್ನು ರಕ್ಷಿಸಿದುದು

ಆಗ ವಸುದೇವನು ಕಂಸನನ್ನು ನೋಡಿ ಎಷ್ಟೋ ಬುದ್ಧಿವಾದಗಳನ್ನು ಹೇಳಿದನು. ಕಂಸನು ಕೇಳಲಿಲ್ಲ. ದೇವಕೀದೇವಿಯನ್ನು ಕೊಂದೇಬಿಡುವುದಾಗಿ ಹಠಹಿಡಿದನು. ಆಗ ವಸುದೇವನು ಕಂಸನನ್ನು ಕುರಿತು ಹೇಳಿದನು. " ಓ ಕಂಸಾ, ಇವಳು ನಿನ್ನನ್ನು ಕೊಲ್ಲುವುದಾಗಿ ಅಶರೀರವಾಣಿಯು ಹೇಳಲಿಲ್ಲ. ಇವಳ ಎಂಟನೆಯ ಮಗನು ನಿನ್ನನ್ನು ಕೊಲ್ಲುವುದಾಗಿ ಹೇಳಿರುತ್ತದೆ. ಆದ್ದರಿಂದ ನಿರಪರಾಧಿಯಾದ ಇವಳನ್ನು ಕೊಲ್ಲಬೇಡ. ಇವಳಲ್ಲಿ ಹುಟ್ಟಿದ ಎಲ್ಲಾ ಮಕ್ಕಳನ್ನೂ ಹುಟ್ಟಿದ ಕೂಡಲೇ ನಿನ್ನ ವಶದಲ್ಲಿ ಕೊಟ್ಟು ಬಿಡುವೆನು. ಅವುಗಳನ್ನು ನಿನ್ನ ಇಚ್ಛೆಯಂತೆ ಮಾಡು." ಎಂದನು.

" ನನಗೆ ಮಕ್ಕಳೇ ಹುಟ್ಟದಿರಬಹುದು. ಮಕ್ಕಳು ಹುಟ್ಟಿದರೂ ಆ ಮಕ್ಕಳು ಹುಟ್ಟುವುದಕ್ಕಿಂತ ಮುಂಚಿತವಾಗಿಯೇ ಕಂಸನು ಸಾಯಬಹುದು. ಮಕ್ಕಳೂ ಹುಟ್ಟಿ ಕಂಸನೂ ಅಷ್ಟರವರೆಗೆ ಬದುಕಿದ್ದರೆ ಅಶರೀರವಾಣಿಯು ಹೇಳಿದಂತೆ ಕಂಸನೇ ನನ್ನ ಮಗನಿಂದ ಸಾಯಬಹುದು. ಮಕ್ಕಳೂ ಹುಟ್ಟಿ ಅಷ್ಟರವರೆಗೆ ಕಂಸನೂ ಬದುಕಿದ್ದು ನನ್ನ ಮಕ್ಕಳು ಅವನಿಂದ ಸಾಯುವುದಾದರೆ ವಿಧಿಯಿಲ್ಲ. ನನ್ನ ಮಕ್ಕಳಿಗೆ ಆಪತ್ತು ಬರುವುದಾದರೂ ಇಂದು ಬರುವುದಿಲ್ಲ. ಕಾಲಾಂತರದಲ್ಲಿ ಬರುತ್ತದೆ. ಇಂದು ಬಂದಿರುವ ಆಪತ್ತನ್ನು ತಪ್ಪಿಸಿಕೊಂಡರೆ ಕಾಲಾಂತರದಲ್ಲಿ ಏನಾದರೂ ನಡೆಯಲಿ" ಎಂದು ತೀರ್ಮಾನಿಸಿ ಮೇಲ್ಕಂಡ ಮಾತುಗಳನ್ನು ಹೇಳಿದನು.

ಕಂಸನು ಈ ಮಾತುಗಳನ್ನು ಕೇಳಿದನು. ಅವನಿಗೆ ಈ ಮಾತುಗಳು ಯುಕ್ತಿಯುಕ್ತವಾಗಿದ್ದಂತೆ ತಿಳಿಯಿತು. ದೇವಕಿಯನ್ನು ಕೊಲ್ಲಬೇಕೆಂಬ ಅಭಿಪ್ರಾಯವನ್ನು ಬಿಟ್ಟನು.

## ದೇವಕೀದೇವಿಗೆ ಪುತ್ರೋತ್ಸವ

ದೇವಕೀದೇವಿಯು ಗರ್ಭಿಣಿಯಾದಳು ಸುಂದರವಾದ ಗಂಡುಮಗುವನ್ನು ಹಡೆದಳು. ಸತ್ಯವಾದಿಯಾದ ವಸುದೇವನು ಆ ಮಗುವನ್ನು ಕಂಸನಿಗೆ ಒಪ್ಪಿಸಿದನು. ಕಂಸನು ಕೂಸನ್ನು ನೋಡಿದನು. ವಸುದೇವನು ತಾನು ಹೇಳಿದಂತೆ ನಡೆದುಕೊಂಡದ್ದರಿಂದ ಸಂತುಷ್ಟನಾದನು. " ಈ ಮಗುವು ನನಗೆ ಮೃತ್ಯುವಲ್ಲ. ದೇವಕಿಯ ಎಂಟನೆಯ ಮಗುವೇ ನನಗೆ ಮೃತ್ಯು. ಆದ್ದರಿಂದ ಈ ಕೂಸನ್ನು ಕೊಲ್ಲುವುದು ಬೇಡ" ಎಂದು ತೀರ್ಮಾನಿಸಿದನು. " ವಸುದೇವಾ, ಈ ಕೂಸನ್ನು ಎತ್ತಿ ಕೊಂಡು ಹೋಗು. ಎಂಟನೆಯ ಮಗನನ್ನು ಮಾತ್ರ ನನಗೆ ತಂದೊಪ್ಪಿಸು" ಎಂದನು. ವಸುದೇವನು ಕೂಸನ್ನು ಎತ್ತಿಕೊಂಡು ಹಿಂದಿರುಗಿ ಬಂದನು. ಆದರೆ ಮನಸ್ಸಿಗೆ ನೆಮ್ಮದಿಯಿಲ್ಲ. ಚಂಚಲಸ್ವಭಾವವುಳ್ಳವರ ಮಾತುಗಳನ್ನು ನಂಬುವಂತಿಲ್ಲ. ಪುನಃ ಯಾವಾಗ ಮಗುವನ್ನು ತರುವಂತೆ ಆಜ್ಞಾಪಿಸುವನೋ? ಎಂದು ಚಿಂತೆಯಿಂದ ಯುಕ್ತನಾಗಿದ್ದನು.

# ನಾರದರ ಕೈಂಕರ್ಯ

ನಾರದರು ಇದನ್ನು ನೋಡಿದರು. " ವಸುದೇವ ಮತ್ತು ದೇವಕಿಯರಲ್ಲಿ ಪ್ರಬಲವಾದ ಅಪರಾಧವನ್ನು ಕಂಸನು ಮಾಡಬೇಕೆಂದು ವಾಯುದೇವರು ಸಂಕಲ್ಪಿಸಿ ಅಶರೀರವಾಣಿಯನ್ನು ನುಡಿದರು. ಕಂಸನು ದೇವಕೀದೇವಿಯಲ್ಲಿ ಅಭಿಮಾನವನ್ನಿಟ್ಟು ಅವಳ ಮಗನನ್ನು ಹಿಂದಿರುಗಿಸಿ ಕಳುಹಿಸಿದನು. ಹೀಗೆ ಮಾಡಿರುವುದು ಸರಿಯಲ್ಲ. ಇದು ವಸುದೇವ ದೇವಕಿಯಲ್ಲಿ ಅಪರಾಧಗಳನ್ನು ಹೆಚ್ಚುಹೆಚ್ಚಾಗಿ ಕಂಸನು ಮಾಡಬೇಕೆಂಬ ಶ್ರೀಹರಿಸಂಕಲ್ಪಕ್ಕೂ ವಾಯುದೇವರ ಸಂಕಲ್ಪಕ್ಕೂ ವಿರುದ್ಧವಾಗಿದೆ." ಎಂದು ತೀರ್ಮಾನಿಸಿದರು. ಕಂಸನಿದ್ದಲ್ಲಿಗೆ ಓಡೋಡಿ ಬಂದರು. ಕಂಸನನ್ನು ನೋಡಿ ಹೇಳಿದರು.

" ಕಂಸಾ ಈ ಮಗುವನ್ನು ನೀನು ಹಿಂದಿರುಗಿಸಿ ಕಳುಹಿಸಿದ್ದು ಸರಿಯಲ್ಲ. ವಸುದೇವ ಮುಂತಾದವರು ದೇವತೆಗಳು. ವಸುದೇವನಿಗೆ ಮಗನಾಗಿ ಅವತರಿಸಲಿರುವ ನಿನ್ನ ಮೃತ್ಯುವು ಎಲ್ಲಾ ದೇವತೆಗಳ ಯಜಮಾನನು. ನೀನು ಪ್ರಬಲನಾದ ದೈತ್ಯನು. ನಿನ್ನ ಕಡೆಯವರೆಲ್ಲರು ದೈತ್ಯರು. ದೇವತೆಗಳಿಗೂ ದೈತ್ಯರಿಗೂ ವಿರೋಧವು ಸಹಜವಾದುದು. ಆದ್ದರಿಂದ ವಸುದೇವ ಮುಂತಾದವರಿಗೆ ನೀನು ಉಪಕಾರವನ್ನು ಮಾಡಿದರೂ ನಿನಗೆ ಅವರೆಲ್ಲರೂ ಸಮಯವನ್ನು ನೋಡಿ ದ್ರೋಹವನ್ನು ಮಾಡುವುದರಲ್ಲಿ ಸಂಶಯವಿಲ್ಲ. ಆದ್ದರಿಂದ ಅವರನ್ನೆಲ್ಲರನ್ನೂ ಬಂಧುಗಳೆಂದು ಭಾವಿಸಬೇಡ. ದ್ವೇಷಿಗಳೆಂದು ತಿಳಿದು ಅವರಿಗೆಲ್ಲರಿಗೂ ದ್ರೋಹವನ್ನು ಮಾಡು."

" ಅದು ಮಾತ್ರವಲ್ಲ. ಅಶರೀರವಾಣಿಯು ದೇವಕೀದೇವಿಯ ಎಂಟನೆಯ ಮಗನು ನಿನಗೆ ಮೃತ್ಯು ಎಂದು ಹೇಳಿರುತ್ತದೆ. ಆ ಮಾತಿನ ಅರ್ಥವನ್ನು ವಿಮರ್ಶಿಸಬೇಕು. ಮೊದಲನೆಯ ಮಗುವಿನಿಂದ ಕ್ರಮವಾಗಿ ಎಣಿಸಿದರೆ ಎಂಟನೆಯ ಮಗನು ಎಂಟನೆಯ ಮಗನಾಗಬಹುದು. ಎಂಟನೆಯವನಿಂದ ತಲೆಕೆಳಗಾಗಿ ಎಣಿಸಿದರೆ ಮೊದಲನೆಯ ಮಗನೂ ಕ್ರಮವಾಗಿ ಎಣಿಸಿದರೆ ಏಳನೆಯ ಮಗನೂ ಎಂಟನೆಯವನಾಗಬಹುದು. ಎರಡನೆಯ ಮಗನಿಂದ ಕ್ರಮವಾಗಿ ಎಣಿಸಿದರೆ ಮೊದಲನೆಯ ಮಗನೂ ತಲೆಕೆಳಗಾಗಿ ಎಣಿಸಿದರೆ ಮೂರನೆಯ ಮಗನೂ ಎಂಟನೆಯ ಮಗನಾಗುಬಹುದು. ಮೂರನೆಯವನಿಂದ ಕ್ರಮವಾಗಿ ಎಣಿಸಿದರೆ ಎರಡನೆಯವನೂ ತಲೆಕೆಳಗಾಗಿ ಎಣಿಸಿದರೆ ನಾಲ್ಕನೆಯವನೂ ಎಂಟನೆಯ ಮಗನಾಗುಬಹುದು. ಹೀಗೆ ದೇವಕೀದೇವಿಯ ಎಂಟು ಮಕ್ಕಳೂ ಎಂಟನೆಯ ಮಗನಾಗುವ ಸಂಭವ ವುಂಟು. ಆದ್ದರಿಂದ ನೀನು ಈ ಮಗುವನ್ನು ಕೊಲ್ಲು." ಎಂದು ಹೇಳಿದರು.

ಕಂಸನು ಆ ಮಗುವನ್ನು ತರಿಸಿ ಕೊಂದನು. ವಸುದೇವ ಮತ್ತು ದೇವಕೀಯರನ್ನು ದ್ವೇಷಿಗಳೆಂದು ನಂಬಿದನು. ಸೆರೆಯನೆಯಲ್ಲಿಟ್ಟನು. ಹೀಗೆಯೇ ದೇವಕೀದೇವಿಯರಲ್ಲಿ ಕ್ರಮವಾಗ ಹುಟ್ಟಿರುವ ಕೀರ್ತಿಮಾನ್, ಸುಷೇಣ, ಭದ್ರಸೇನ, ಋಜು, ಸಂಮರ್ದನ, ಭದ್ರ ಎಂಬ ಆರು ಮಕ್ಕಳನ್ನು ಕೊಂದನು.

# ಬಲರಾಮನ ಅವತಾರ

ದೇವಕಿಯು ಏಳನೆಯ ಗರ್ಭವನ್ನು ಧರಿಸಿದಳು. ಶ್ರೀಹರಿಯು ಶೇಷದೇವನನ್ನು ಕರೆದನು. ದೇವಕೀದೇವಿಯ ಏಳನೆಯ ಗರ್ಭದಲ್ಲಿ ಪ್ರವೇಶಿಸುವಂತೆ ಆಜ್ಞಾಪಿಸಿದನು. ರಾಜರು ಪರಊರಿಗೆ ಹೋಗುವುದಕ್ಕೆ

ಮುಂಚಿತವಾಗಿ ತಮ್ಮ ಹಾಸಿಗೆಯನ್ನು ಕಳುಹಿಸುವರು. ಅದರಂತೆ ಶ್ರೀಹರಿಯೂ ತನ್ನ ಹಾಸಿಗೆಯಾದ ಶೇಷದೇವನನ್ನು ತನ್ನ ಅವತಾರಕ್ಕಿಂತ ಮುಂಚಿತವಾಗಿ ಕಳುಹಿಸಿರುವುದು ನ್ಯಾಯವಾಗಿದೆ. ದುರ್ಗಾದೇವಿಯು ಶ್ರೀಹರಿಯ ಆಜ್ಞೆಯಂತೆ ಗರ್ಭಧಾರಣೆಯಾಗಿ ಮೂರನೇ ತಿಂಗಳು ಮುಗಿಯುವಾಗ ಶೇಷದೇವನನ್ನು ಯಾರಿಗೂ ತಿಳಿಯದಂತೆ ಎತ್ತಿಕೊಂಡು ಹೋದಳು. ಗೋಕುಲದಲ್ಲಿ ವಸುದೇವನು ತಮ್ಮನಾದ ನಂದನ ಮನೆಯಲ್ಲಿ ವಾಸಿಸುತ್ತಿರುವ ವಸುದೇವನ ಪತ್ನಿಯಾಗಿರುವ ರೋಹಿಣೀದೇವಿಯ ಹೊಟ್ಟೆಯಲ್ಲಿ ಇಟ್ಟಳು.

ದೇವಕಿಯು ಗರ್ಭಿಣಿಯಾದ ಸಮಯದಲ್ಲಿ ವಸುದೇವನ ಇತರ ಪತ್ನಿಯರು ಮಥುರಾ ಪಟ್ಟಣದಲ್ಲಿ ಇರಕೂಡದು ಎಂದು ಕಂಸನು ಆಜ್ಞಾಪಿಸಿದ್ದನು. ಅವರು ಆಗ ಮಥುರಾಪಟ್ಟಣದಲ್ಲಿದ್ದರೆ ದೇವಕೀದೇವಿಗೆ ಹುಟ್ಟಿದ ಕೂಸನ್ನು ತಮ್ಮ ಮಗನೆಂದು ಹೇಳಿ ಬದಲಾಯಿಸುವ ಸಂಭವವಿದೆಯೆಂದು ಹೀಗೆ ಬದಲಾಯಿಸಿ ಬಿಟ್ಟರೆ ತನ್ನ ಶತ್ರುವಾದ ಶ್ರೀಹರಿಯು ತಪ್ಪಿಸಿಕೊಂಡು ಹೋಗಿ ಬದುಕುವ ಸಂಭವವಿದೆ ಎಂಬ ಭಯದಿಂದಲೇ ಕಂಸನು ಈ ರೀತಿಯಾದ ಏರ್ಪಾಡನ್ನು ಮಾಡಿದ್ದನು. ಆದ್ದರಿಂದಲೇ ದೇವಕೀದೇವಿಯು ಏಳನೆಯ ಗರ್ಭವನ್ನು ಧರಿಸಿದ ಕೂಡಲೇ ರೋಹಿಣೀದೇವಿಯನ್ನು ಮಥುರಾಪಟ್ಟಣದಿಂದ ಗೋಕುಲಕ್ಕೆ ಕಳುಹಿಸಿದನು. ಇದನ್ನು ಶ್ರೀಹರಿಯು ತಿಳಿದ. ದುರ್ಗಾದೇವಿಯರ ಮೂಲಕವಾಗಿ ಪ್ರಸವವಾಗುವುದಕ್ಕಿಂತ ಪೂರ್ವದಲ್ಲಿ ದೇವಕೀದೇವಿಯ ಏಳನೇಯ ಶಿಶುವನ್ನು ರೋಹಿಣೀದೇವಿಯ ಶಿಶುವಾಗಿ ಬದಲಾಯಿಸಿದನು. ಹುಟ್ಟಿದ ಮೇಲೆ ಕೂಸನ್ನು ಬದಲಾಯಿಸಬಹುದೆಂದು ಕಂಸನು ಅಂಜಿದನು. ಕೂಸು ಹುಟ್ಟುವುದಕ್ಕಿಂತ ಪೂರ್ವದಲ್ಲಿಯೇ ಶ್ರೀಹರಿಯು ಕೂಸನ್ನು ಬದಲಾಯಿಸಿದನು ಏನು ಆಶ್ಚರ್ಯ! ಶ್ರೀಹರಿಯ ಅಘಟಿತ ಘಟನಾಶಕ್ತಿಯನ್ನೂ ದುರ್ಗಾದೇವಿಯರ ಅಘಟಿತಘಟನಾಶಕ್ತಿಯನ್ನೂ ಏನೆಂದು ವರ್ಣಿಸಲಿ!

ರೋಹಿಣೀದೇವಿಯನ್ನು ಪ್ರವೇಶಿಸಿದ ಶೇಷದೇವನ ತಲೆಯಲ್ಲಿ ಒಂದು ಬಿಳಿಯ ಕೂದಲಿನ ರೂಪದಿಂದ ಶ್ರೀಹರಿಯು ಸನ್ನಿಹಿತನಾಗಿರುವನು. ಆದ್ದರಿಂದಲೇ ಅವನನ್ನು "ಶುಕ್ಲಕೇಶಾವತಾರ" ಎಂದು ಸರ್ವರೂ ಹೊಗಳುತ್ತಿರುವರು. ಶೇಷದೇವನಲ್ಲಿ ಶುಕ್ಲಕೇಶರೂಪದಿಂದ ಸನ್ನಿಹಿತನಾಗಿದ್ದು ಕೃಷ್ಣರೂಪಿಯಾದ ತನಗೆ ತಾನೇ ಅಣ್ಣನೆಂದೆನಿಸುವನು. ರೋಹಿಣೀದೇವಿಗೆ ಸುಖಸ್ವರೂಪಿಯಾದ ಶ್ರೀಹರಿಯು ಮಗನಾಗಿರುವುದರಿಂದ ಏರ್ಪಡುವ ಸುಖವನ್ನು ಕೊಡುತ್ತಿರುವನು.

## ಶ್ರೀಕೃಷ್ಣಾವತಾರ

ದೇವಕೀದೇವಿಯ ಏಳನೆಯ ಗರ್ಭವು ಸ್ರಾವವಾಯಿತು ಎಂದು ಸರ್ವರೂ ತಿಳಿದರು ಎಂಟನೆಯ ಗರ್ಭದಲ್ಲಿ ಶ್ರೀಹರಿಯು ದ್ವಾರಪಾಲಕರಾಗಿರುವ ಜಯ ವಿಜಯರನ್ನು ಇಬ್ಬರು ದೈತ್ಯರು ಬಲದಿಂದ ವಶಪಡಿಸಿಕೊಂಡರು. ಶಿಶುಪಾಲ ದಂತವಕ್ರ ಎಂಬ ಹೆಸರಿನಿಂದ ಭೂಲೋಕದಲ್ಲಿ ಸೆಳೆದುಕೊಂಡು ಬಂದರು. ಭಕ್ತರಿಂದಲೇ ಶ್ರೀಹರಿಯ ವಿರೋಧವನ್ನು ಮಾಡಿಸುತ್ತಿರುವರು. ತುಂಬಾ ದುರಹಂಕಾರದಿಂದ ಯುಕ್ತರಾಗಿರುವರು. ಮನುಷ್ಯರನ್ನು ಕಿದ್ದಿರುವ ಅವರಿಬ್ಬರನ್ನು ನಿಗ್ರಹಿಸಬೇಕು. ತನ್ನ ಭಕ್ತರಿಬ್ಬರನ್ನು ಅವರಿಬ್ಬರಿಂದ ಬಿಡಿಸಿ ತನ್ನ ಲೋಕಕ್ಕೆ ಕರೆದುಕೊಂಡು ಹೋಗಬೇಕು. ಅದಕ್ಕಾಗಿ ಶ್ರೀಹರಿಯು ಗರ್ಭದಲ್ಲಿ ಪ್ರವೇಶಿಸಿದನು.

ಸೂಕ್ಷ್ಮವಾದ ಅಣುಗಳೇ ಪ್ರಕೃತಿಯೆನಿಸುತ್ತವೆ. ಆ ಅಣುಗಳಲ್ಲಿ ಬಿಳಿಬಣ್ಣದ ಅಣುಗಳು ಸತ್ವಗುಣಗಳೆಂದೂ ಕೆಂಪುಅಣುಗಳು ರಜೋಗುಣಗಳೆಂದೂ ಕಪ್ಪು ಅಣುಗಳು ತಮೋಗುಣಗಳೆಂದೂ ಹೇಳಲ್ಪಡುತ್ತವೆ. ಈ ಅಣುಗಳಿಂದ ನಿರ್ಮಿತವಾದ ದೇಹವೇ ಪ್ರಾಕೃತದೇಹವೆನಿಸುತ್ತದೆ. ಈ ಪ್ರಾಕೃತ ದೇಹದಲ್ಲಿ ರಕ್ತ ಎಲುಬು ಮಾಂಸ ಮುಂತಾದ ಅಸಹ್ಯವಾದ ವಸ್ತುಗಳಿರುತ್ತವೆ. ತಾಯಿಯ ಹೊಟ್ಟೆಯಲ್ಲಿ ಈ ದೇಹವು ಹುಟ್ಟಿ ಬೆಳೆಯುತ್ತಿರುವಾಗ ಜೀವನು ಈ ದೇಹದಲ್ಲಿ ವಾಸಿಸುತ್ತಿರುವನು. ಅವನಿಗೆ ಆಗ ತನ್ನ ದೇಹದಲ್ಲಿ ವಾಸಿಸುತ್ತಿರುವುದು ತುಂಬಾ ಕಷ್ಟವಾಗಿರುತ್ತದೆ. ಇದನ್ನೇ ಗರ್ಭವಾಸವೆಂದು ಹೇಳುವರು.

ಶ್ರೀಹರಿಗೆ ಪ್ರಕೃತಿಯ ಸಂಬಂಧವಿಲ್ಲ. ಆದ್ದರಿಂದ ಅವನಿಗೆ ಯಾವಾಗಲೂ ಪ್ರಾಕೃತದೇಹವಿಲ್ಲ. ಪ್ರಾಕೃತದೇಹವಿಲ್ಲದಿರುವುದರಿಂದ ಗರ್ಭವಾಸವೂ ಇಲ್ಲ. ಸರ್ವವ್ಯಾಪಿಯಾದ ಶ್ರೀಹರಿಯು ಎಲ್ಲಾ ಕಡೆಗಳಲ್ಲಿಯೂ ಇದ್ದಂತೆ ದೇವಕೀದೇವಿಯ ದೇಹದಲ್ಲಿ ವಾಸಿಸುತ್ತಿರುವನು. ಈ ತತ್ವವನ್ನು ತಿಳಿಸುವುದಕ್ಕಾಗಿ ಶೇಷದೇವನಿಗೆ ಪ್ರಾಕೃತ ಶರೀರವನ್ನು ಕೊಟ್ಟು ದೇವಕೀದೇವಿಯ ಗರ್ಭದಲ್ಲಿಯೂ ರೋಹಿಣೀದೇವಿಯ ಗರ್ಭದಲ್ಲಿಯೂ ವಾಸಿಸುವಂತೆ ಮಾಡಿದನು. ತಾನು ಮಾತ್ರ ಎಲ್ಲಾ ಕಡೆಯಲ್ಲಿ ವಾಸಿಸುತ್ತಿರುವಂತೆ ದೇವಕೀದೇವಿಯ ದೇಹದಲ್ಲಿ ವಾಸಿಸಿದನು. ಗರ್ಭವು ಕ್ರಮವಾಗಿ ಬೆಳೆಯುವಂತೆ ತೋರಿಸಿದನು.

ಶ್ರೀಹರಿಯು ಗರ್ಭದಲ್ಲಿರುವಾಗ ಅಲ್ಲಿಗೆ ಬ್ರಹ್ಮರುದ್ರ ಮುಂತಾದ ದೇವತೆಗಳು ಬಂದರು. ಶ್ರೀಹರಿಯು ಅಲ್ಲಿದ್ದರೂ ಆನಂದಪೂರ್ಣನಾಗಿರುವುದನ್ನು ನೋಡಿದರು. ಸೆರೆಮನೆಯ ಯಜಮಾನನು ಸೆರೆಮನೆಯನ್ನು ನೋಡುವುದಕ್ಕಾಗಿ ಬಂದಾಗ ಅವನಿಗೆ ಸೆರೆಮನೆಯಿಂದ ಏರ್ಪಡುವ ದುಃಖವಿದೆಯೇ? ಕೈದಿಗಳೇ ದುಃಖಿಗಳಾಗುವರು. ಕೈದಿಗಳು ಸೆರೆಮನೆಯ ಯಜಮಾನನನ್ನು ಸ್ತುತಿಸಿದರೆ ಸೆರೆಮನೆಯಿಂದ ಬಿಡುಗಡೆಯನ್ನು ಪಡೆಯಬಹುದು. ನಾವೆಲ್ಲರೂ " ಗರ್ಭವಾಸವೆಂಬ ಸೆರೆಮನೆಯಲ್ಲಿ ವಾಸಿಸುತ್ತಿರುವೆವು. ಆ ಸೆರೆಮನೆಯಿಂದ ನಮ್ಮನ್ನು ಬಿಡಿಸು.'' ಎಂದು ಹೇಳುತ್ತಾ ಸ್ತುತಿಸಿದರು.

ಶ್ರಾವಣ ಕೃಷ್ಣಪಕ್ಷದ ಅಷ್ಟಮೀತಿಥಿಯು ಬಂತು. ಆ ದಿನದ ಅರ್ಧರಾತ್ರಿ ಕಾಲದಲ್ಲಿ ರೋಹಿಣಿನಕ್ಷತ್ರದಲ್ಲಿ ಶ್ರೀಹರಿಯು ಕಮಲದಂತೆ ಸುಂದರವಾದ ನೇತ್ರಗಳು, ಶಂಖ, ಚಕ್ರ, ಗದಾ ಮುಂತಾದ ಆಯುಧಗಳು, ನಾಲ್ಕು ಕೈಗಳು, ಶ್ರೀವತ್ಸ ಎಂಬ ಚಿಹ್ನೆ, ಕೌಸ್ತುಭಮಣಿ, ಹಳದಿಯಾದ ಬಟ್ಟೆ, ನೀಲಮೇಘದಂತೆ ನೀಲವಾದ ಕಾಂತಿ. ಅಮೂಲ್ಯವಾದ ವೈಡೂರ್ಯಖಚಿತವಾದ ಕಿರೀಟಕುಂಡಲ ಉಡುದಾರ ಭುಜಕೀರ್ತಿ ಮುಂತಾದ ಆಭರಣಗಳು ಗುಂಗುರುಕೂದಲುಗಳು ಇವುಗಳಿಂದ ಯುಕ್ತನಾಗಿ ಅವತರಿಸಿದನು.

ಅಷ್ಟಮೀ ಎಂಬ ಎಂಟನೆಯ ತಿಥಿ, ಅರ್ಧರಾತ್ರಿ ಕಾಲ, ಜಯಂತೀಯೋಗ ಈ ಮೂರು ಒಟ್ಟಿಗೆ ಸೇರಿದ ಸಮಯದಲ್ಲಿ ಶ್ರೀಕೃಷ್ಣದೇವನು ಅವತರಿಸಿದನು. ಇದರಿಂದ " ಎಂಟು ದಿಕ್ಕುಗಳಲ್ಲಿರುವವರೂ ಅರ್ಧ ರಾತ್ರಿ ಕಾಲದಲ್ಲಿ ಸಂಚರಿಸುವವರೂ ಆಗಿರುವ ರಾಕ್ಷಸರನ್ನು ಜಯಿಸುವೆನು'' ಎಂದು ಶ್ರೀಕೃಷ್ಣದೇವನು ಸೂಚಿಸಿದನು.

ರೋಹಿಣೀನಕ್ಷತ್ರದಲ್ಲಿ ಅವತರಿಸಿದನು. ದೇವಕಿಯಲ್ಲಿ ಹುಟ್ಟಿದನೆಂದು ಪ್ರಸಿದ್ಧನಾದಂತೆ ರೋಹಿಣಿಯಲ್ಲಿ ಹುಟ್ಟಿದನು ಎಂದು ಪ್ರಸಿದ್ಧನಾದನು. ಇದರಿಂದ "ಮಗನಲ್ಲದಿದ್ದರೂ ರೋಹಿಣಿಯಲ್ಲಿ ಹುಟ್ಟಿದನು ಎಂದು ಪ್ರಸಿದ್ಧನಾದಂತೆ ಯಶೋದೆಯ ಮಗನಲ್ಲದಿದ್ದರೂ ಯಶೋದೆಯಲ್ಲಿ ಹುಟ್ಟಿದನು ಎಂದೂ ಪ್ರಸಿದ್ಧನಾಗುವನು.'' ಎಂದು ತಿಳಿಸಿದನು.

ಶ್ರೀಕೃಷ್ಣದೇವನ ಜನ್ಮದಿನದಲ್ಲಿ ಚಂದ್ರಬಿಂಬದ ಅರ್ಧಭಾಗವು ಕಪ್ಪಾಗಿಯೂ ಅರ್ಧಭಾಗವು ಬಿಳಿಬಣ್ಣವುಳ್ಳದ್ದಾಗಿಯೂ ಇತ್ತು. " ಶ್ರೀಕೃಷ್ಣದೇವನು ತನ್ನ ವಂಶದಲ್ಲಿ ಅವತರಿಸಿರುವುದರಿಂದ ಸಂತೋಷ ತನ್ನ ಸೌಂದರ್ಯಕ್ಕಿಂತ ಅಧಿಕವಾದ ಸೌಂದರ್ಯವು ಶ್ರೀಕೃಷ್ಣದೇವನ ಮುಖದಲ್ಲಿರುವುದರಿಂದ ದುಃಖ ಇವೆರಡೂ ಸಮವಾಗಿರುವುದರಿಂದ ಚಂದ್ರಬಿಂಬವು ಈ ಸ್ಥಿತಿಯನ್ನು ಪಡೆದಿರಬಹುದು" ಎಂದು ಊಹಿಸಬಹುದು.

ಶ್ರೀಕೃಷ್ಣಾವತಾರಕಾಲದಲ್ಲಿ ಗಂಧರ್ವರು ಹಾಡಿದರು ಮತ್ತು ಅಪ್ಸರಃ ಸ್ತ್ರೀಯರು ನರ್ತನ ಮಾಡಿದರು. " ಶ್ರೀಕೃಷ್ಣದೇವನು ಸಂಗೀತದಿಂದ ಗಂಧರ್ವರನ್ನೂ ನರ್ತನದಿಂದ ಅಪ್ಸರ ಸ್ತ್ರೀಯರನ್ನೂ ಜಯಿಸುವನು. ಅವನನ್ನು ಈಗಲೇ ಸೇವಿಸಿ ವಶಪಡಿಸಿಕೊಳ್ಳಬೇಕು. ಅವನು ವಶನಾದರೆ ಮುಂದೆ ನಮ್ಮನ್ನು ಜಯಿಸಿದರೂ ಮಾನಭಂಗ ಮಾಡಲಾರನು" ಎಂದು ತಿಳಿದು ಗಂಧರ್ವರೂ ಅಪ್ಸರ ಸ್ತ್ರೀಯರೂ ಶ್ರೀಕೃಷ್ಣದೇವನನ್ನು ಸೇವಿಸುವುದಕ್ಕಾಗಿ ಹಾಗೆ ಮಾಡಿದರೆಂದು ಊಹಿಸಿಬಹುದು.

ಶ್ರೀಕೃಷ್ಣಾವತಾರಕಾಲದಲ್ಲಿ ಎಲ್ಲಾ ದಿಕ್ಕುಗಳೂ ನಿರ್ಮಲವಾದವು. " ಶ್ರೀಕೃಷ್ಣನು ತನ್ನ ಕೀರ್ತಿಗಳಿಂದ ಎಲ್ಲಾ ದಿಕ್ಕುಗಳನ್ನೂ ಅಲಂಕರಿಸುವನು." ಎಂಬ ಸಂತೋಷವೇ ದಿಕ್ಕುಗಳ ನೈರ್ಮಲ್ಯಕ್ಕೆ ಕಾರಣವೆಂದು ಊಹಿಸಬಹುದಾಗಿದೆ.

ಭೂದೇವಿಯು ಪ್ರಸನ್ನಳಾದಳು. "ಶ್ರೀಕೃಷ್ಣದೇವನು ತನ್ನ ಪಾದಗಳಿಂದ ಭೂಮಿಯನ್ನು ಅಲಂಕರಿಸುವನು" ಎಂಬ ಸಂತೋಷವೇ ಭೂದೇವಿಯ ಪ್ರಸನ್ನತೆಗೆ ಕಾರಣವಾಯಿತು.

ಶ್ರೀಕೃಷ್ಣಾವತಾರಕಾಲದಲ್ಲಿ ದೇವತೆಗಳು ಪಾರಿಜಾತಪುಷ್ಪಗಳ ಮಳೆಯನ್ನು ಸುರಿಸುತ್ತಾ ಹೃದಯದಲ್ಲಿ ಅವನನ್ನು ಸ್ಮರಿಸುತ್ತಾ ಸ್ತುತಿಸಿದರು. ಇದರಿಂದ ಪಾರಿಜಾತಪುಷ್ಪಗಳನ್ನು ತೋರಿಸಿ ಪಾರಿಜಾತವೃಕ್ಷವನ್ನು ಭೂಲೋಕಕ್ಕೆ ತರುವಂತೆ ಶ್ರೀಕೃಷ್ಣನನ್ನು ಈಗಲೇ ಪ್ರೋತ್ಸಾಹಪಡಿಸಿದರೆಂದು ಊಹಿಸಬಹುದಾಗಿದೆ.

ಶ್ರೀಕೃಷ್ಣಾವತಾರಕಾಲದಲ್ಲಿ ಅಷ್ಟವಸುಗಳೂ ದೇವತೆಗಳೂ ತುಂಬಾ ಸಂತುಷ್ಟರಾದರು. "ಶ್ರೀಕೃಷ್ಣದೇವನು ವಸುದೇವನ ಮಗನಲ್ಲ. ಆದರೂ ಅವನಿಗೂ ವಾಸುದೇವ ಎಂಬ ಬಿರುದು ಬಂದಿದೆ. ವಸುದೇವನ ಮಗನಾಗಿರುವುದರಿಂದ ಈ ಬಿರುದು ಶ್ರೀಕೃಷ್ಣದೇವನಿಗೆ ಬಂದಿರುವುದಾದರೆ ನಮ್ಮ ಮಗನಾಗಿರುವುದರಿಂದಲೂ ಆ ಬಿರುದು ಶ್ರೀಕೃಷ್ಣದೇವನಿಗೆ ಬಂದಿರುತ್ತದೆ." ಎಂದು ವಸುದೇವರು ಅಂದರೆ ಅಷ್ಟವಸುಗಳೂ ದೇವತೆಗಳೂ ಸಂತುಷ್ಟರಾಗುವುದರಲ್ಲೇನು ತಪ್ಪು?

ಶ್ರೀಕೃಷ್ಣಾವತಾರಕಾಲದಲ್ಲಿ ದೇವತೆಗಳ ಆನಕ ದುಂದುಭಿ ಅಂದರೆ ತಮಟೆಗಳೂ ನಗಾರಿಗಳೂ ಧ್ವನಿಯನ್ನು ತಾವಾಗಿಯೇ ಮಾಡಿದವು. "ಜನ್ಮವಿಲ್ಲದ ಶ್ರೀಕೃಷ್ಣದೇವನು ಆನಕದುಂದುಭಿ ಅಂದರೆ ವಸುದೇವನ ಪ್ರಿಯಕುಮಾರನೆಂದು ಪ್ರಸಿದ್ಧನಾದನು. ಹಾಗೆಯೇ ನಮ್ಮ ಮಗನೆಂದೂ ಪ್ರಸಿದ್ಧನಾಗಲಿ" ಎಂದು ಆನಕ ದುಂದುಭಿಗಳು ಅಂದರೆ ತಮಟೆಗಳೂ ನಗಾರಿಗಳೂ ಸಂತೋಷದಿಂದ ಧ್ವನಿಯನ್ನು ಮಾಡುವುದರಲ್ಲಿ ತಪ್ಪೇನಿದೆ?

ಶ್ರೀಕೃಷ್ಣಾವತಾರಕಾಲದಲ್ಲಿ ಸಮುದ್ರದ ಮೇಲೆ ಮಳೆಗಾಲದ ನೀಲಮೇಘಗಳು ಮೆಲ್ಲಮೆಲ್ಲನೆ ಗರ್ಜಿಸಿದವು. "ಶ್ರೀಕೃಷ್ಣದೇವನು ತನ್ನ ದೇಹದ ಕಾಂತಿಯಿಂದ ಮಳೆಗಾಲದ ನೀಲಮೇಘಗಳನ್ನು ಜಯಿಸಿದನು.

ಅವನನ್ನು ಜಯಿಸಲು ನೀಲಮೇಘಗಳಿಗೆ ಸಾಧ್ಯವಾಗಲಿಲ್ಲ. ಜಡವಾದ ಸಮುದ್ರದ ಮುಂದೆ ಬಂದು ತನ್ನ ಪೌರುಷವನ್ನು ಕುರಿತು ಮೆಲ್ಲ ಮೆಲ್ಲನೆ ಹೇಳಿಕೊಂಡವು. ಶಕ್ತಿಯಿಲ್ಲದವನು ಒಂದೂ ತಿಳಿಯದ ಜಡವಸ್ತುಗಳ ಮುಂದೆ ತನ್ನ ಪ್ರತಾಪವನ್ನು ಹೇಳಿಕೊಳ್ಳುವುದು ಸ್ವಭಾವವಲ್ಲವೇ?

ಶ್ರೀಕೃಷ್ಣಾವತಾರಕಾಲದಲ್ಲಿ ಸರೋವರಗಳು ಮಳೆಗಾಲವಾಗಿದ್ದರೂ ಕೆಸರಿಲ್ಲದಂತೆ ನಿರ್ಮಲವಾದವು. ಕಮಲಗಳು ಅರಳದಿರುವ ರಾತ್ರಿಕಾಲವಾಗಿದ್ದರೂ ಕಮಲಗಳಿಂದ ಶೋಭಿಸಿದವು. " ರಾತ್ರಿಕಾಲದಲ್ಲಿ ಶ್ರೀಕೃಷ್ಣದೇವನು ಸ್ತ್ರೀಯರಿಂದ ಸಹಿತವಾಗಿ ನಮ್ಮಲ್ಲಿ ಜಲಕ್ರೀಡೆಯನ್ನು ಮಾಡುವನು. ಆಗ ಕುತ್ತಿಗೆವರೆಗೆ ಮುಳುಗಿರುವ ಸ್ತ್ರೀಯರ ಮುಖಕಮಲಗಳಿಂದ ನಮ್ಮನ್ನು ಅಲಂಕರಿಸುವನು" ಎಂದು ಹೇಳುತ್ತಿರುವಂತೆ ಈ ದೃಶ್ಯವು ಕಾಣಿಸಿತು.

ಶ್ರೀಕೃಷ್ಣಾವತಾರಕಾಲದಲ್ಲಿ ಆಕಾಶವು ನಿರ್ಮಲವಾಗಿ ಕಾಣಿಸಿತು. ನಕ್ಷತ್ರಗಳೆಲ್ಲ ತುಂಬಾ ಪ್ರಕಾಶಿಸಿದವು. "ಶ್ರೀಕೃಷ್ಣದೇವನು ಸರ್ವಲೋಕವ್ಯಾಪಿಯಾದವನು. ಅವನನ್ನು ನೋಡಿ ಸಕಲಲೋಕವ್ಯಾಪಿಯಾದ ಆಕಾಶವು ಹೊಟ್ಟೆಕಿಚ್ಚಿನಿಂದ ಯುಕ್ತವಾಗಿತ್ತು. ಅವನು ಈಗ ಚಿಕ್ಕ ಬಾಲಕ ರೂಪವನ್ನು ಧರಿಸಿರುವನು. ಆಕಾಶವು ಅವನು ಕೃಶನಾಗಿರುವುದನ್ನು ನೋಡಿತು. ತುಂಬಾ ಸಂತೋಷದಿಂದ ನಕ್ಷತ್ರಗಳೆಂಬ ಆಭರಣಗಳಿಂದ ತನ್ನನ್ನು ಅಲಂಕರಿಸಿಕೊಂಡು ನೋಡುತ್ತಿದೆ ಎಂದು ಊಹಿಸಬಹುದಾಗಿದೆ.

ಶ್ರೀಕೃಷ್ಣಾವತಾರಕಾಲದಲ್ಲಿ ಬ್ರಾಹ್ಮಣರ ಮನಸ್ಸುಗಳು ತುಂಬಾ ಪ್ರಸನ್ನವಾದವು. "ಕೃಷ್ಣನು ಈಗ ಬಾಲರೂಪವನ್ನು ಸ್ವೀಕರಿಸಿರುವನು. ಬಾಲರೂಪವನ್ನು ಸ್ವೀಕರಿಸಿದಾಗ ಬಾಲಸ್ವಭಾವವನ್ನು ಅನುಸರಿಸುವನು. ಆದ್ದರಿಂದ ಬಹುಬೇಗನೆ ಸಂತುಷ್ಟನಾಗುವನು"ಎಂದು ತಿಳಿದದ್ದರಿಂದಲೇ ಬ್ರಾಹ್ಮಣರು ಸಂತುಷ್ಟರಾದರು.

ಶ್ರೀಕೃಷ್ಣಾವತಾರಕಾಲದಲ್ಲಿ ಬ್ರಾಹ್ಮಣರ ಮನೆಯಲ್ಲಿರುವ ಆಹಿತಾಗ್ನಿಗಳು ಕಟ್ಟಿಗೆಗಳಿಲ್ಲದೆಯೇ ಜ್ವಲಿಸಿದವು. " ಹಿಂದೆ ಆಹುತಿಯನ್ನು ಕೊಟ್ಟಾಗ ನಾವು ಜ್ವಲಿಸುತ್ತಿದ್ದೆವು. ಈಗ ಹಾಗೆ ಮಾಡುವಂತಿಲ್ಲ. ಬಾಲಕರನ್ನು ಬಹುಬೇಗನೆ ವಶಪಡಿಸಿಕೊಳ್ಳಬಹುದಲ್ಲವೇ? ಶ್ರೀಕೃಷ್ಣದೇವನು ಬಾಲರೂಪದಿಂದ ಯುಕ್ತನಾಗಿರುವುದರಿಂದ ಅವನನ್ನು ಆರಾಧಿಸಿ ಬಹುಬೇಗನೆ ಎಲ್ಲಾ ಇಷ್ಟಾರ್ಥಗಳನ್ನೂ ಈ ಬ್ರಾಹ್ಮಣರು ಪಡೆಯುವರು. ಆದ್ದರಿಂದ ನಮ್ಮಲ್ಲಿ ಅಸಡ್ಡೆಯು ಇವರಿಗೆ ಏರ್ಪಡಬಹುದು. ಆದ್ದರಿಂದ ನಾವೆಲ್ಲರೂ ಕಟ್ಟಿಗೆ ಮುಂತಾದ ಆಹುತಿದ್ರವ್ಯಗಳಿಲ್ಲ ದಂತೆಯೆ ಜ್ವಲಿಸುತ್ತಾ ಬ್ರಾಹ್ಮಣರನ್ನು ತೃಪ್ತಿಪಡಿಸೋಣ. ನಮ್ಮನ್ನು ಅಸಡ್ಡೆಮಾಡದಂತೆ ಮಾಡೋಣ ಎಂಬ ಅಭಿಪ್ರಾಯದಿಂದಲೇ ಅಗ್ನಿಗಳು ಹಾಗೆ ಮಾಡಿದವು.

ಶ್ರೀಕೃಷ್ಣಾವತಾರಕಾಲದಲ್ಲಿ ತಂಗಾಳಿಯು ಪುಷ್ಪಗಳನ್ನೆಲ್ಲಾ ಮೆಲ್ಲನೆ ಆಡಿಸುತ್ತಾ ಸರೋವರಗಳನ್ನು ಸ್ಪರ್ಶಿಸುತ್ತಾ ಶ್ರೀಕೃಷ್ಣದೇವನ ಮನೆಯನ್ನು ಪ್ರವೇಶಿಸಿತು. " ಶ್ರೀವಾಯುದವೇರು ಪುಷ್ಪಗಳನ್ನು ಆರಿಸಿದರು. ಸರೋವರಗಳಲ್ಲಿ ಸ್ನಾನವನ್ನು ಮಾಡಿದರು. ಪೂಜೆಗಾಗಿ ಅರ್ಘ್ಯೋದಕವನ್ನು ಸ್ವೀಕರಿಸಿದರು. ಪ್ರತಿಮೆಯನ್ನು ಸ್ಪರ್ಶಿಸಿದರು. ಪೂಜಿಸಿದರು. " ಅಯೋಗ್ಯಜೀವರ ದೇಹದಿಂದ ನನ್ನನ್ನು ಬಿಡಿಸು" ಎಂದು ಪ್ರಾರ್ಥಿಸಿದರು ಎಂದು ಇದರಿಂದ ಊಹಿಸಬಹುದಾಗಿದೆ.

ಶ್ರೀಕೃಷ್ಣಾವತಾರಕಾಲದಲ್ಲಿ ದೇವತೆಗಳೆಲ್ಲರೂ ಸ್ತುತಿಸಿದರು. ಪುಷ್ಪಗಳ ಮಳೆಯನ್ನು ಸುರಿಸಿದರು. ಆಕಾಶದಲ್ಲಿದ್ದ ಎಲ್ಲಾ ಮೇಘಗಳೂ ಚದರಿ ಓಡಿಹೋದವು. " ಈ ಮೇಘಗಳು ಶ್ರೀಕೃಷ್ಣದರ್ಶನಕ್ಕೆ ಪ್ರತಿಬಂಧಕವಾಗಿವೆ ಎಂದು ತಿಳಿದು ದೇವತೆಗಳೇ ಈ ಮೇಘಗಳನ್ನು ಓಡಿಸಿದರು" ಎಂದು ಹೇಳುವುದೇ ಯುಕ್ತವಾಗಿದೆ.

ಶ್ರೀಕೃಷ್ಣಾವತಾರಕಾಲದಲ್ಲಿ ಚರಾಚರಾತ್ಮಕವಾದ ಸರ್ವಜೀವರೂ ಸಂತೋಷಿಸಿದರು. ಶ್ರೀಕೃಷ್ಣನಿಗೆ ಜನ್ಮವಿಲ್ಲ. ಆದರೆ ಜನ್ಮ ವಿದ್ದಂತೆ ನಟಿಸಿದನು. ಇದನ್ನು ನೋಡಿದ ಸರ್ವರಿಗೂ ಸಂತೋಷವು ಏರ್ಪಟ್ಟಿದ್ದಲ್ಲಿ ಆಶ್ಚರ್ಯವಿಲ್ಲ. ಎಂದಿಗೂ ನೋಡದಿರುವ ಆಶ್ಚರ್ಯವನ್ನು ನೋಡಿದಾಗ ಸಂತೋಷವು ಏರ್ಪಟ್ಟಿರುವುದು ನ್ಯಾಯವೇ ಆಗಿದೆ. ಜನ್ಮ ವಿಲ್ಲದವನಿಗೆ ಜನ್ಮವು ಏರ್ಪಟ್ಟಂತೆ ನಟಿಸುವುದು ಆಶ್ಚರ್ಯವಲ್ಲವೇ?

ಶ್ರೀಕೃಷ್ಣದೇವನು ಅವತರಿಸಿದನು. ತಂದೆ ತಾಯಿಗಳನ್ನು ಕೃಪೆಯಿಂದ ನೋಡಿದನು. ಅಷ್ಟರ ವರೆಗೆ ಅವರ ದೇಹದಲ್ಲಿ ದೃಢತರವಾಗಿ ಬಿಗಿಯಲ್ಪಟ್ಟಿದ್ದ ಸಂಕೋಲೆಗಳು ಕಳಚಿ ಬಿದ್ದವು. ಸ್ಥಾವರಜೀವರನ್ನೂ ಜಂಗಮಜೀವರನ್ನೂ ಕೃಪಾದೃಷ್ಟಿಯಿಂದ ಇವನು ನೋಡಿದ ಕೂಡಲೇ ಅವರ ಸಂಸಾರವೆಂಬ ಸಂಕೋಲೆಯೇ ಅವರನ್ನು ಬಿಟ್ಟು ಅಗಲುತ್ತದೆ. ಹೀಗಿರುವಾಗ ಈ ಕಬ್ಬಿಣದ ಅಲ್ಪಸಂಕೋಲೆಯು ಕಳಚಿ ಬೀಳುವುದರಲ್ಲಿ ಆಶ್ಚರ್ಯವೇನಿದೆ?

ಶ್ರೀಕೃಷ್ಣದೇವನನ್ನು ವಸುದೇವ ಮತ್ತು ದೇವಕೀದೇವಿಯರು ನೋಡಿದರು. ಅವನ ಕೃಪಾದೃಷ್ಟಿಯಿಂದ ತಮ್ಮ ಕೈಕಾಲುಗಳಲ್ಲಿದ್ದ ಸಂಕೋಲೆಗಳು ಕಳಚಿ ಬಿದ್ದುದನ್ನು ತಿಳಿದರು. ಇಂತಹ ಮಹಾಪ್ರಭಾವಶಾಲಿಯಾದ ಈ ಕೂಸು ತಮ್ಮ ಮಗನಲ್ಲವೆಂದು ತಿಳಿದರು. ಶ್ರೀಹರಿಯೇ ಈ ಮಗುವೆಂದು ನಿಶ್ಚಯಿಸಿದರು. ಈ ಮಗುವನ್ನು ಗಟ್ಟಿಯಾಗಿ ಸ್ತುತಿಸಬೇಕೆಂದು ಸಂಕಲ್ಪಿಸಿದರು. ಆದರೆ ಕಂಸನು ಈ ಮಗುವು ತಮ್ಮ ಮಗನೆಂದು ತಿಳಿದರೆ ಮಗುವಿಗೆ ಖಂಡಿತವಾಗಿಯೂ ಆಪತ್ತು ಏರ್ಪಡುತ್ತದೆಯೆಂದು ಹೆದರಿದರು. "ಆಪತ್ಕಾಲದಲ್ಲಿ ಶ್ರೀಹರಿಯನ್ನು ಸ್ಮರಿಸುವುದು ಸಹಜವಲ್ಲವೇ? ಅದರಂತೆ ನಾವೂ ಸ್ಮರಿಸುತ್ತಿರುವೆವು ಎಂದು ಕಂಸನ ಭೃತ್ಯರು ತೀರ್ಮಾನಿಸಿ ತಮಗೆ ಪುತ್ರೋತ್ಸವ ವಾದ ವಿಷಯವನ್ನು ಪುತ್ರನನ್ನು ಸ್ತುತಿಸುವ ವಿಚಾರವನ್ನೂ ತಿಳಿಯಲಾರರು" ಎಂದು ಧೈರ್ಯವನ್ನು ತಂದುಕೊಂಡು ಗಟ್ಟಿಯಾಗಿ ಸ್ತುತಿಸಿದರು.

# ಶ್ರೀಕೃಷ್ಣನಿಗೆ ಜನ್ಮವಿಲ್ಲ

(೧) " ಓ ಪರಮಪುರುಷ! ನೀನು ಯಾರು ಎಂಬ ವಿಷಯವು ನನಗೆ ಈಗ ತಿಳಿಯಿತು. ನೀನು ಪರಮಪುರುಷನಾಗಿರುವಿ. ನೀನು ಪ್ರಕೃತಿಗಿಂತ ಉತ್ತಮನಾಗಿರುವಿ. ನೀನು ಪ್ರಕೃತಿಯ ಬಂಧನಕ್ಕೆ ಸಿಗದಿರುವವನಾಗಿರುವಿ. ನೀನು ಸರ್ವ ಪ್ರೇರಕನಾಗಿರುವಿ. ನಿನ್ನ ಈ ದೇಹವು ಪ್ರಕೃತಿಯಿಂದ ನಿರ್ಮಿತವಾದುದಲ್ಲ. ಪ್ರಾಕೃತವಾದ ಸತ್ವಾದಿಗುಣಗಳಿಂದಲಾಗಲೀ ಶುಕ್ರಶೋಣಿತಗಳಿಂದಲಾಗಲೀ ನಿರ್ಮಿತವಾದುದಲ್ಲ. ಈ ದೇಹದಲ್ಲಿ ಪ್ರಾಕೃತವಾದ ವಸ್ತುಗಳ ಸಂಬಂಧವೇ ಇಲ್ಲ. ಅಪ್ರಾಕೃತವಾದ ಜ್ಞಾನ ಆನಂದ ಮುಂತಾದ ಗುಣಗಳೇ ಈ ದೇಹದ ಆಕಾರವನ್ನು ಧರಿಸಿವೆ. ನೀನು ನನ್ನ ಮಗನಲ್ಲ. ಮಗನಂತೆ ನಟಿಸುತ್ತಿರುವಿ." ಇದು ವಸುದೇವನು ಮಾಡಿರುವ ಸ್ತುತಿ.

(೨) "ಓ ಮಹಾಪುರುಷ! ನೀನು ಪ್ರಳಯಕಾಲದಲ್ಲಿ ಎಲ್ಲಾ ಲೋಕಗಳಲ್ಲಿರುವ ಚರಾಚರಾತ್ಮಕ ವಾದ ವಸ್ತುಗಳನ್ನೂ ನಿನ್ನ ಹೊಟ್ಟೆಯಲ್ಲಿ ಎಲ್ಲೋ ಒಂದು ಮೂಲೆಯಲ್ಲಿ ಸಾಸಿವೆಕಾಳನ್ನು ಧರಿಸಿದಂತೆ ಧಾರಾಳವಾಗಿ ಧರಿಸುತ್ತಿರುವಿ. ಇಷ್ಟು ದೊಡ್ಡ ಆಕಾರವುಳ್ಳ ನಿನ್ನನ್ನು ನನ್ನ ಪುಟ್ಟ ಹೊಟ್ಟೆಯಲ್ಲಿ ನಾನು ಧರಿಸಬಲ್ಲೆನೇ? ಅಷ್ಟು ದೊಡ್ಡ ಆಕಾರವುಳ್ಳ ನಿನ್ನನ್ನು ಧರಿಸುವುದಕ್ಕೆ ಬೇಕಾದ ಸ್ಥಳವು ನನ್ನ ಹೊಟ್ಟೆಯಲ್ಲಿದೆಯೇ? ನನಗೆ ಇಷ್ಟು ದೊಡ್ಡ ರೂಪವನ್ನು ಧರಿಸುವ ಶಕ್ತಿ ಇದೆಯೇ? ಆದರೂ ನನ್ನ ಹೊಟ್ಟೆಯಲ್ಲಿ ವಾಸಿಸಿದಂತೆ ನಟಿಸಿದಿ. ಈ ನಟನವು ತುಂಬಾ ಆಶ್ಚರ್ಯವಾದುದು" ಇದು ದೇವಕೀದೇವಿಯ ಸ್ತುತಿ.

ಪ್ರಸವಕಾಲದಲ್ಲಿ ತಾಯಿಗೆ ಮೂರ್ಛೆಯು ಏರ್ಪಟ್ಟರೆ ತನ್ನ ಮಗುವನ್ನು ಇದೇ ತನ್ನ ಮಗುವೆಂದು ಗುರುತಿಸುವುದು ತಾಯಿಗೆ ಸಾಧ್ಯವಿಲ್ಲ. ಪ್ರಸವಕಾಲದಲ್ಲಿ ಕೂಸನ್ನು ಯಾರಾದರೂ ಬದಲಾಯಿಸ ಬಹುದಲ್ಲವೇ? ತಾಯಿಯು ಗುರುತಿಸಿದರೂ ತಂದೆಯು ಗುರುತಿಸುವ ಹಾಗಿಲ್ಲ. ಪ್ರಸವಕಾಲದಲ್ಲಿ ಪ್ರಸವ ಗೃಹದಲ್ಲಿ ತಂದೆಯು ಇರದಿರುವುದೂ ಅದೇ ಸಮಯದಲ್ಲಿ ಮಗುವನ್ನು ಬದಲಾಯಿಸುವ ಸಂಭವವಿರುವುದೂ ಇದಕ್ಕೆ ಕಾರಣವಾಗಿದೆ. ತಾಯಿ ತಂದೆ ಇವರಿಬ್ಬರು ಗುರುತು ಹಿಡಿದರೂ ಮೂರನೆಯ ಮನುಷ್ಯರು ಮಕ್ಕಳನ್ನು ಗುರುತಿಸಲು ಸಂಭವವೇ ಇಲ್ಲ. ತಂದೆ ತಾಯಿಗಳಿಬ್ಬರು ಮಾತ್ರ ಮಗನನ್ನು ನನ್ನ ಮಗನೆಂದು ಗುರುತಿಸಿ ಹೇಳುವ ಸಂಭವವಿದೆ. ಅವರಿಬ್ಬರೂ ಇವನು ನನ್ನ ಮಗನೆಂದು ಗುರುತಿಸದಿದ್ದರೆ ಅವನನ್ನು ಅವರಿಬ್ಬರ ಮಗನೆಂದು ಸಮರ್ಥಿಸಲು ಯಾರು ಶಕ್ತರು?

ಪ್ರಕೃತದಲ್ಲಿ ತಂದೆ ತಾಯಿಗಳ ಸ್ಥಾನದಲ್ಲಿರುವ ವಸುದೇವನೂ ದೇವಕಿಯೂ ಶ್ರೀಕೃಷ್ಣದೇವನು ತಮ್ಮ ಮಗನಲ್ಲವೆಂದು ಸಯುಕ್ತಿಕವಾಗಿ ಸಮರ್ಥಿಸಿದರು. ಹೀಗಿರುವಾಗ ಶ್ರೀಕೃಷ್ಣದೇವನು ವಸುದೇವ ದೇವಕಿಯರ ಕುಮಾರನೆಂದು ಸಮರ್ಥಿಸಲು ಯಾರು ಶಕ್ತರಾಗುವರು? ಬೇರೆ ಯಾರ ಮಗನೂ ಅಲ್ಲವೆಂಬ ವಿಷಯದಲ್ಲಿ ಸಂಶಯವಿಲ್ಲ. ಆದ್ದರಿಂದ ಶ್ರೀಕೃಷ್ಣದೇವನಿಗೆ ಜನ್ಮವಿಲ್ಲವೆಂದು ಸಿದ್ಧವಾಗುತ್ತದೆ.

(೩) ಇವರಿಬ್ಬರ ಸ್ತುತಿಯನ್ನು ಶ್ರೀಕೃಷ್ಣದೇವನು ಕೇಳಿ, ಉತ್ತರಿಸಿದನು. " ಹೇ ದೇವಕಿಯೇ!, ನೀನು ಸ್ವಾಯಂಭುವಮನ್ವಂತರದಲ್ಲಿ "ಪೃಶ್ನಿ" ಎಂಬ ಹೆಸರಿನಿಂದ ಅವತರಿಸಿದಿ. ಆಗ ಈ ವಸುದೇವನು "ಸುತಪಾ" ಎಂಬ ಹೆಸರಿನಿಂದ ಅವತರಿಸಿದನು. ನೀವಿಬ್ಬರೂ ನನ್ನನ್ನು ಸಂತೋಷಪಡಿಸುವುದಕ್ಕಾಗಿ ೪೩೨೦೦೦೦ ವರ್ಷಗಳ ವರೆಗೆ ಉಗ್ರವಾದ ತಪಸ್ಸನ್ನು ಮಾಡಿದಿರಿ. ಆಗ ನಾನು ಪ್ರಸನ್ನನಾಗಿ ಈಗ ನಿಮಗೆ ತೋರಿಸಿರುವ ರೂಪದಿಂದ ದರ್ಶನವನ್ನು ಕೊಟ್ಟೆನು. " ಬೇಕಾದ ವರಗಳನ್ನು ಕೇಳಿರಿ" ಎಂದು ಹೇಳಿದೆನು. ಮೋಕ್ಷವನ್ನು ಕೇಳಿದ್ದರೂ ಕೊಡುತ್ತಿದ್ದೆನು. ನನ್ನ ಮಾಯೆಯಿಂದ ಮೋಹಿತರಾಗಿ. ಆ ವರವನ್ನು ಕೇಳಲಿಲ್ಲ. " ನಿನ್ನಂತಹ ಮಗನು ಬೇಕು" ಎಂದು ಕೇಳಿದಿರಿ. ಆ ವರವನ್ನು ಕೊಟ್ಟೆನು. ನನಗೆ ಸಮಾನನು ಯಾರೂ ಇಲ್ಲ. ಆದ್ದರಿಂದ ನಾನೇ ನಿಮಗೆ ಮಗನಾಗಿ ಪೃಶ್ನಿಗರ್ಭ ಎಂಬ ಹೆಸರಿನಿಂದ ಅವತರಿಸಿದೆನು." " ಮುಂದಿನ ಜನ್ಮದಲ್ಲಿ ನೀನು ಅದಿತಿಯಾಗಿಯೂ ಈ ವಸುದೇವನು ಕಶ್ಯಪನಾಗಿಯೂ ಅವತರಿಸಿದಿರಿ. ಆಗಲೂ ನಿಮಗೆ ಮಗನಾಗಿ ಅವತರಿಸಿದೆನು. ಆಗ ನನ್ನನ್ನು ಉಪೇಂದ್ರ ಎಂದು ಕುಳ್ಳನಾದುದರಿಂದ ವಾಮನ ಎಂದೂ ಕರೆದರು."

" ಈಗ ನಿಮಗೆ ಮೂರನೆಯ ಜನ್ಮವಾಗಿದೆ. ಈಗಲೂ ನಿಮಗೆ ಮಗನಾಗಿ ಅವತರಿಸಿದೆನು. ಈಗ ನಾನು ನಿಮಗೆ ತೋರಿಸಿರುವ ದೇಹವು ನಿಮ್ಮ ಶುಕ್ರಶೋಣಿತಗಳಿಂದ ನಿರ್ಮಿತವಾದ ದೇಹವಲ್ಲ. ಆಗ ವರವನ್ನು ಕೊಟ್ಟ

ದೇಹವೇ ಆಗಿರುತ್ತದೆ. ಮನುಷ್ಯರಂತೆ ಎರಡು ಕೈಗಳಿಂದ ಯುಕ್ತನಾಗಿಯೂ ಬತ್ತಲೆಯಾಗಿಯೂ ಆಯುಧ ಮುಂತಾದವುಗಳಿಲ್ಲದೆಯೂ ನಾನು ಅವತರಿಸಿದ್ದರೆ ನನ್ನನ್ನು ನೀವು ಗುರುತುಹಿಡಿಯಲು ಸಾಧ್ಯವಿಲ್ಲ. ಆದ್ದರಿಂದ ಹಿಂದೆ ಸ್ವಾಯಂಭುವ ಮನ್ವಂತರದಲ್ಲಿ ನಿಮಗೆ ತೋರಿಸಿದ ರೂಪದಿಂದಲೇ ಈಗ ದರ್ಶನವನ್ನು ಕೊಟ್ಟಿರುವೆನು. ಈ ರೂಪದಿಂದ ಯುಕ್ತನಾಗಿರುವ ನನ್ನನ್ನು ನೀವು ಹಿಂದೆ ನೋಡಿರುವುದರಿಂದ ಈಗ ಗುರುತು ಹಿಡಿಯಲು ನಿಮಗೆ ಸಾಧ್ಯವಾಗುತ್ತದೆ. ಈ ಜನ್ಮದಲ್ಲಿ ನೀವಿಬ್ಬರೂ ಕೆಲಕಾಲದಲ್ಲಿ ಪುತ್ರನೆಂದು ಪುತ್ರಸ್ನೇಹವನ್ನೂ ಕೆಲಕಾಲದಲ್ಲಿ ಪರಬ್ರಹ್ಮನೆಂದು ಭಕ್ತಿಯನ್ನೂ ಮಾಡುತ್ತಿರುವಿರಿ. ಕೊನೆಗೆ ಭಕ್ತಿಯು ಪಕ್ವವಾದ ಮೇಲೆ ಮುಕ್ತಿಯನ್ನು ಪಡೆಯುವಿರಿ"

ಮಗನ ಸ್ಥಾನದಲ್ಲಿರುವ ಶ್ರೀಕೃಷ್ಣದೇವನು ಮೇಲ್ಕಂಡ ಮಾತುಗಳಿಂದ ಸ್ವಾಯಂಭುವಮನ್ವಂತರದಲ್ಲಿ ವರವನ್ನು ಕೊಡುವುದಕ್ಕಾಗಿ ಬಂದ ದೇಹವೇ ಈ ದೇಹವೆಂದು ಹೇಳಿದನು. ತಂದೆತಾಯಿಗಳ ಸ್ಥಾನದಲ್ಲಿರುವ ವಸುದೇವ ಮತ್ತು ದೇವಕಿಯರು ಈ ದೇಹವು ತಮ್ಮ ಶುಕ್ರ ಮತ್ತು ಶೋಣಿತಗಳಿಂದ ಹುಟ್ಟಲಿಲ್ಲವೆಂದು ಹೇಳಿದರು. ಶ್ರೀಕೃಷ್ಣನ ದೇಹದಲ್ಲಿ ಬಾಧ್ಯತೆಯಿಲ್ಲದವರು ಶ್ರೀಕೃಷ್ಣನ ದೇಹವು ವಸುದೇವದೇವಕಿಯರ ಶುಕ್ರಶೋಣಿತಗಳಿಂದ ಹುಟ್ಟಿದೆ ಎಂದು ಹೇಳುತ್ತಿರುವರು. ಇದು ಆಶ್ಚರ್ಯವಾಗಿದೆ. ಆದ್ದರಿಂದ ಶ್ರೀಕೃಷ್ಣನ ದೇಹವು ಹುಟ್ಟಲೇ ಇಲ್ಲವೆಂದೂ ಶ್ರೀಕೃಷ್ಣದೇವನು ವಸುದೇವ ಮತ್ತು ದೇವಕಿಯರ ಮಗನಲ್ಲವೆಂದೂ ಹೇಳುವುದೇ ಯುಕ್ತವಾಗಿದೆ. ಆದರೆ ಕೃಷ್ಣದೇವನು ವಸುದೇವ ದೇವಕಿಯರ ಮಗನೆಂದು ಪ್ರಸಿದ್ಧಿ ಇದೆ. ಅದಕ್ಕೆ ಈಗ ಕಾರಣವನ್ನು ಹೇಳುತ್ತೇವೆ.

(೪) ಪುತ್ ಅಂದರೆ ನರಕಗಳು. ಅವುಗಳಿಂದ ರಕ್ಷಿಸುವವನು ಪುತ್ರನೆನಿಸುವನು. ಶ್ರೀಕೃಷ್ಣದೇವನು ತನ್ನನ್ನು ಸ್ಮರಿಸುತ್ತಿರುವ ಭಕ್ತರನ್ನೆಲ್ಲರನ್ನೂ ನರಕದಲ್ಲಿ ಬೀಳದಂತೆ ಮಾಡುವನು. ಆದ್ದರಿಂದ ತನ್ನ ಭಕ್ತರೆಲ್ಲರಿಗೂ ಪುತ್ರನೆನಿಸುತ್ತಿರುವನು. ವಸುದೇವನು ದೇವಕೀದೇವಿಯೂ ಮಾಡಿದ ನಿರಂತರ ಸ್ಮರಣದಿಂದ ಪ್ರಸನ್ನನಾಗಿರುವ ಶ್ರೀಕೃಷ್ಣದೇವನು ಅವರ ಕಣ್ಣುಗಳ ಮುಂದೆ ಬಂದು ನಿಂತಿರುವನು. ಅವನು ಅವರಿಬ್ಬರ ಎಲ್ಲಾ ನರಕಗಳನ್ನೂ ಪರಿಹರಿಸುವ ಮೂಲಕ ಆದ್ದರಿಂದಲೇ ಅವರ ಪುತ್ರ ಎಂದು ಹೇಳಲ್ಪಡುವುದೂ ಯುಕ್ತವೇ ಆಗಿದೆ.

(೫) ತಾಯಿಯು ಮಗನನ್ನು ಚೆನ್ನಾಗಿ ತಿಳಿದವಳು. ಅವಳು ತಿಳಿದಷ್ಟು ಯಾರೂ ತಿಳಿಯುವುದಿಲ್ಲ. ಆದ್ದರಿಂದಲೇ "ಮಾತಾ" ಎಂದು ತಾಯಿಯನ್ನು ಕರೆಯುವುದಾಗಿ ಶಾಸ್ತ್ರಗಳು ತಿಳಿಸುತ್ತವೆ. ದೇವಕೀದೇವಿಯು ಶ್ರೀಕೃಷ್ಣದೇವನನ್ನು ತನ್ನ ಮಗನಲ್ಲವೆಂದೂ ಪ್ರಳಯಕಾಲದಲ್ಲಿ ಪ್ರಪಂಚವನ್ನು ಹೊಟ್ಟೆಯಲ್ಲಿಟ್ಟುಕೊಂಡು ಪ್ರಳಯ ಸಮುದ್ರದಲ್ಲಿ ವಿಹರಿಸಿದ ವಿಶ್ವಮೂರ್ತಿ ಯೆಂದೂ ತಿಳಿದಳು. ಆದ್ದರಿಂದಲೇ ಅವಳಿಗೆ ಕೃಷ್ಣನ "ಮಾತಾ" ಅಂದರೆ ತಾಯಿ ಎಂದು ಹೇಳುವುದು ಯುಕ್ತವೇ ಆಗಿದೆ.

(೬) ಒಬ್ಬ ವ್ಯಕ್ತಿಯ ನಿಜಸ್ವರೂಪವನ್ನು ಚೆನ್ನಾಗಿ ತಿಳಿಸುವವನೇ ತಂದೆಯೆನಿಸುವನು. ಬ್ರಹ್ಮದೇವನು ಜಗದ್ಗುರುವಾದುದರಿಂದ ಎಲ್ಲಾ ಯೋಗ್ಯಜೀವರಿಗೂ ಶ್ರೀಹರಿಯ ನಿಜಸ್ವರೂಪವನ್ನು ತಿಳಿಸಿದನು. ಆದ್ದರಿಂದಲೇ ತನ್ನ ತಂದೆಯಾಗಿರುವ ನಾರಾಯಣದೇವನಿಗೂ ತಂದೆಯೆನಿಸಿದನು. ಇದು "ಕವಿರ್ಯಃ ಪುತ್ರಃ ಸ ಈಮಾಚಿಕೇತ" ಮುಂತಾದ ವೇದಗಳಲ್ಲಿ ಹೇಳಿರುವಸಾರ. ವಸುದೇವನು ಶ್ರೀಕೃಷ್ಣದೇವನ ದೇಹವು ಪ್ರಾಕೃತವಲ್ಲವೆಂದೂ ಜ್ಞಾನಾನಂದಾದಿಗುಣಾತ್ಮಕವೆಂದೂ ಶ್ರೀಹರಿಯ ನಿಜಸ್ವರೂಪವನ್ನು ತಿಳಿಸಿದನು. ಆದ್ದರಿಂದ ಅವನು ಶ್ರೀಕೃಷ್ಣದೇವನ ತಂದೆಯೆಂದು ಹೇಳಿರುವುದೂ ಯುಕ್ತವೇ ಆಗಿದೆ.

ಮೇಲ್ಕಂಡ ಕಾರಣಗಳಿಂದ ಶ್ರೀಕೃಷ್ಣದೇವನು ವಸುದೇವ ಮತ್ತು ದೇವಕಿಯರ ಪುತ್ರನೆಂದೂ ವಸುದೇವನು ತಂದೆಯೆಂದೂ ದೇವಕೀದೇವಿಯು ತಾಯಿಯೆಂದೂ ಹೇಳಬಹುದು. ಇದೇ ರೀತಿಯಿಂದ ಶ್ರೀಕೃಷ್ಣದೇವನನ್ನು ನಿರಂತರ ಸ್ಮರಿಸುತ್ತಿರುವ ಎಲ್ಲಾ ಭಕ್ತರಿಗೂ ಪುತ್ರನೆಂದೂ ಶ್ರೀಕೃಷ್ಣನನ್ನು ಚೆನ್ನಾಗಿ ತಿಳಿದಿರುವ ಎಲ್ಲಾ ಭಕ್ತರೂ ತಾಯಿಯೆಂದೂ ಶ್ರೀಕೃಷ್ಣನನ್ನು ತಿಳಿಸುತ್ತಿರುವ ಎಲ್ಲಾ ಗುರುಗಳೂ ಶ್ರೀಕೃಷ್ಣದೇವನ ತಂದೆಯೆಂದೂ ಹೇಳಬಹುದು. ಇದರಿಂದ ಶ್ರೀಕೃಷ್ಣದೇವನ ದೇಹವು ವಸುದೇವ ಮತ್ತು ದೇವಕಿಯರ ಶುಕ್ರಶೋಣಿತಗಳಿಂದ ಹುಟ್ಟಿರುವುದೇ ಅವನು ಅವರಿಬ್ಬರ ಮಗನೆಂದೂ ಅವರಿಬ್ಬರು ಅವನ ತಂದೆತಾಯಿಗಳೆಂದೂ ಹೇಳುವುದಕ್ಕೆ ಕಾರಣವಾಗಬೇಕಾಗಿಲ್ಲ.

(೭) ಶ್ರೀಕೃಷ್ಣದೇವನು ಅವತರಿಸುವಾಗ ನಾಲ್ಕು ಕೈಗಳಿಂದಲೂ ಶಂಖ ಚಕ್ರ ಮುಂತಾದ ಆಯುಧಗಳಿಂದಲೂ ಸರ್ವಾಭರಣಗಳಿಂದಲೂ ಪೀತಾಂಬರದಿಂದಲೂ ಯುಕ್ತನಾಗಿ ಅವತರಿಸಿದನು. ವಸುದೇವ ದೇವಕಿಯರು ಸ್ತುತಿಸಿದ ಮೇಲೆ ಆ ರೂಪವನ್ನು ಮರೆಮಾಡಿದನು. ಎರಡು ಕೈಗಳಿಂದ ಯುಕ್ತವಾಗಿರುವ, ಬತ್ತಲೆಯಾದ, ಆಭರಣಗಳಿಲ್ಲದ ಸಾಮಾನ್ಯಶಿಶುವಿನ ರೂಪವನ್ನು ಧರಿಸಿದನು. ಈ ಎರಡು ರೂಪಗಳಲ್ಲಿ ಮೊದಲನೆಯ ರೂಪವು ದೇವಕೀದೇವಿಹೊಟ್ಟೆಯಿಂದ ಹೊರಗೆ ಬಂದಿರುತ್ತದೆ ಆದ್ದರಿಂದ ಆ ರೂಪವೇ ದೇವಕೀದೇವಿಯ ಮತ್ತು ವಸುದೇವನ ಶುಕ್ರಶೋಣಿತಗಳಿಂದ ಹುಟ್ಟಿರುವ ದೇಹವೆಂಬ ಸಂಶಯಕ್ಕೆ ಅವಕಾಶವಿದೆ. ಆದರೆ ಸ್ವಾಯಂಭುವ ಮನ್ವಂತರದಲ್ಲಿ ತೋರಿಸಿರುವ ರೂಪವೇ ಈ ರೂಪವೆಂದು ಶ್ರೀಕೃಷ್ಣದೇವನು ಹೇಳಿರುವನು. ಆದ್ದರಿಂದ ಈ ರೂಪವು ವಸುದೇವನ ಮತ್ತು ದೇವಕೀದೇವಿಯರ ವೀರ್ಯದಿಂದ ಹುಟ್ಟಿಲಿಲ್ಲವೆಂದು ಸ್ಪಷ್ಟವಾಯಿತು. ಎರಡನೆಯ ರೂಪವು ದೇವಕಿದೇವಿಯ ಹೊಟ್ಟೆಯಿಂದ ಹೊರಗೆ ಬಂದಿಲ್ಲ. ಮೊದಲನೆಯ ರೂಪವು ಅದೃಶ್ಯವಾದ ಮೇಲೆ ಪ್ರತ್ಯಕ್ಷವಾಯಿತು. ಆದ್ದರಿಂದ ಎರಡನೇ ರೂಪವು ವಸುದೇವ ಮತ್ತು ದೇವಕಿಯರ ಶುಕ್ರಶೋಣಿತಗಳಿಂದ ಹುಟ್ಟಿದೆಯೆಂಬ ಸಂಶಯಕ್ಕೆ ಅವಕಾಶವಿಲ್ಲ. ಈ ಕಾರಣದಿಂದಲೂ ಶ್ರೀಕೃಷ್ಣದೇವನು ವಸುದೇವದೇವಕೀಯರ ಮಗನಲ್ಲವೆಂದು ಸ್ಪಷ್ಟವಾಯಿತು.

(೮) ತಂದೆತಾಯಿಗಳ ಶುಕ್ರಶೋಣಿತಗಳಿಂದ ದೇಹಮಾತ್ರ ಹುಟ್ಟುತ್ತದೆ. ಆಭರಣಗಳಾಗಲೀ ಆಯುಧಗಳಾಗಲೀ ಬಟ್ಟೆಯಾಗಲೀ ಹುಟ್ಟುವುದಿಲ್ಲ. ಶ್ರೀಕೃಷ್ಣದೇವನು ಅವತರಿಸುವಾಗ ಬರೀ ದೇಹದಿಂದ ಅವತರಿಸಿದ್ದರೆ ಅವನ ದೇಹವು ಶುಕ್ರಶೋಣಿತಗಳಿಂದ ಹುಟ್ಟಿದ ದೇಹವೆಂದು ಹೇಳಬಹುದು. ಆದರೆ ಬರೀ ದೇಹದಿಂದ ಅವನು ಅವತರಿಸಲಿಲ್ಲ. ಬಟ್ಟೆ ಆಭರಣ ಆಯುಧ ಮುಂತಾದವುಗಳಿಂದ ಸಹಿತನಾಗಿಯೇ ಅವತರಿಸಿರುವನು. ಆಭರಣಾದಿಗಳಿಂದ ಯುಕ್ತವಾಗಿರುವ ಈ ದೇಹವು ಶುಕ್ರ ಶೋಣಿತಗಳಿಂದ ಹುಟ್ಟಿಲಿಲ್ಲವೆಂದೇ ಹೇಳಬೇಕು. ಈ ಕಾರಣದಿಂದಲೂ ಶ್ರೀಕೃಷ್ಣದೇವನು ವಸುದೇವ ದೇವಕಿಯರ ಮಗನಲ್ಲವೆಂದು ಸ್ಪಷ್ಟವಾಯಿತು.

(೯) ಶ್ರೀಹರಿಯು ಕಂಬದಿಂದ ನರಸಿಂಹರೂಪವನ್ನು ಧರಿಸಿ ಹೊರಗೆ ಬಂದನು. ಆಗ ಅವನನ್ನು ಪ್ರಸವಿಸಿದವಳು ಯಾರು? ಆ ಶರೀರವು ಯಾವ ತಂದೆಯ ವೀರ್ಯದಿಂದ ಹುಟ್ಟಿತು ? ಸರ್ವಾಂತರ್ಯಾಮಿಯಾದ ಶ್ರೀನರಹರಿಯು ಕಂಬದಲ್ಲಿರಲಿಲ್ಲವೇ? ಆ ಕಂಬದಿಂದ ಹೊರಗೆ ಬಂದ ಮಾತ್ರದಿಂದ ಕಂಬವು ತಂದೆಯೆಂದೂ ತಾಯಿಯೆಂದೂ ಹೇಳಲ್ಪಡುವುದೇ? ಬೇರೆ ಯಾರಾದರೂ ತಂದೆತಾಯಿಗಳೆಂದು ಹೇಳಲು ಸಾಧ್ಯವೇ? ತಂದೆತಾಯಿಗಳಿಲ್ಲದೆ ಕಂಬದಿಂದ ನರಸಿಂಹದೇವನು ಬಂದಿರುವನು.

ಕಂಬದಂತಿರುವ ದೇವಕೀದೇವಿಯ ಹೊಟ್ಟೆಯಿಂದ ಶ್ರೀಕೃಷ್ಣದೇವನು ಹೊರಗೆ ಬಂದಿರುವನು. ಸರ್ವವ್ಯಾಪಿಯಾದ ಶ್ರೀಹರಿಯು ದೇವಕೀದೇವಿಯ ಹೊಟ್ಟೆಯೊಳಗೆ ಪ್ರವೇಶಿಸಿದಂತೆ ನಟಿಸಿದನು. ಹೊರಗೆ ಬಂದಂತೆ ನಟಿಸಿದನು. ಹೊರಗೆ ಬಂದಂತೆ ನಟಿಸುತ್ತಿರುವಾಗಲೂ ಹೊಟ್ಟೆಯೊಳಗೆ ಇದ್ದೇ ಇರುವನು. ಇದೆಲ್ಲವೂ ಅವನ ಲೀಲೆ. ಇಲ್ಲಿ ಯಾರು ತಂದೆ? ಯಾರು ತಾಯಿ?

ಪಿಶಾಚಿಗಳು ದೇಹದಲ್ಲಿ ಪ್ರವೇಶಿಸುವುದೂ ಹೊರಗೆ ಬರುವುದೂ ಉಂಟು. ಯಾರಿಗೂ ತಿಳಿಯದಂತೆ ಪ್ರವೇಶಿಸುವುದಕ್ಕೂ ಹೊರಗೆ ಬರುವುದಕ್ಕೂ ಪಿಶಾಚಿಗಳಿಗೆ ಶಕ್ತಿ ಇದೆ. ಅಲ್ಪಶಕ್ತಿಯುಳ್ಳ ಪಿಶಾಚಿಗಳಿಗೆ ಈ ಶಕ್ತಿಯಿದ್ದರೆ ಅನಂತಶಕ್ತಿಯುಳ್ಳ ಶ್ರೀಹರಿಗೆ ಯಾರಿಗೂ ತಿಳಿಯದಂತೆ ದೇವಕೀದೇವಿಯ ಶರೀರದಲ್ಲಿ ಪ್ರವೇಶಿಸುವುದಕ್ಕೆ ಶಕ್ತಿ ಇಲ್ಲವೇ? ಪಿಶಾಚವು ಶರೀರದಲ್ಲಿ ಪ್ರವೇಶಿಸುವಾಗ ಗರ್ಭಧಾರಣೆಯಾಯಿತೆಂದೂ ದೇಹದಲ್ಲಿರುವವರೆಗೆ ಆ ಪಿಶಾಚಕ್ಕೆ ಗರ್ಭವಾಸವೆಂದೂ, ದೇಹದಿಂದ ಹೊರಗೆ ಬರುವಾಗ ಆ ಪಿಶಾಚವು ಹುಟ್ಟಿತೆಂದೂ ಯಾರಾದರೂ ಹೇಳುವರೇ? ಇದರಂತೆ ಶ್ರೀಕೃಷ್ಣದೇವನು ದೇವಕಿದೇವಿಯ ದೇಹದಲ್ಲಿ ಪ್ರವೇಶಿಸಿದಂತೆ ನಟಿಸಿದಾಗ ಶ್ರೀಕೃಷ್ಣನು ಗರ್ಭದಲ್ಲಿ ಪ್ರವೇಶಿಸಿದನೆಂದೂ ಹೊಟ್ಟೆಯಲ್ಲಿ ವಾಸಿಸಿದಂತೆ ನಟಿಸಿದಾಗ ಗರ್ಭವಾಸವಾಯಿತೆಂದೂ ದೇಹದಿಂದ ಹೊರಗೆಬಂದಂತೆ ನಟಿಸಿದಾಗ ಹುಟ್ಟಿದನೆಂದೂ ಹೇಳುವುದರಲ್ಲಿ ನ್ಯಾಯವಿಲ್ಲ.

ಈ ಎಲ್ಲಾ ಅರ್ಥಗಳನ್ನೂ ಶ್ರೀಗುರುಸಾರ್ವಭೌಮರು "ವಿಷ್ಣುಃ ಪ್ರಾದುರಾಸೀತ್" ಅಂದರೆ "ಶ್ರೀಹರಿಯು ಕಣ್ಣಿಗೆ ಕಾಣಿಸಿದನು. ಹುಟ್ಟಲಿಲ್ಲ" ಎಂದು ಹೇಳುತ್ತಾ ಸ್ಪಷ್ಟಪಡಿಸಿರುವರು.

## ದುರ್ಗಾದೇವಿಯರ ಅವತಾರ

ಶ್ರೀಕೃಷ್ಣದೇವನ ಅವತಾರವಾದ ಕೂಡಲೇ ಶ್ರೀಹರಿಯ ಆಜ್ಞೆಯಂತೆ ದುರ್ಗಾದೇವಿಯರು ಗೋಕುಲದಲ್ಲಿ ನಂದನ ಪತ್ನಿಯಾದ ಯಶೋದೆಯ ಮಗಳಾಗಿ ಅವತರಿಸಿದರು. ಈ ಯಶೋದೆಯು "ಶ್ರೀಕೃಷ್ಣನು ನನ್ನ ಮಗು" ಮುಂತಾದ ಅಸಂಖ್ಯವಾದ ಮೋಹವನ್ನು ಪಡೆಯಲಿರುವಳು. ಆ ಮೋಹಗಳಿಗೆ ಮೂಲ ಕಾರಣಳಾದ ದುರ್ಗಾದೇವಿಯು ಯಶೋದೆಯಲ್ಲಿ ಹುಟ್ಟಿರುವುದರಿಂದಲೇ ಅವಳಲ್ಲಿ ಮೋಹಪರಂಪರೆಯು ಬೆಳೆಯಿತು.

## ಶ್ರೀಕೃಷ್ಣದೇವನ ಗೋಕುಲಯಾತ್ರೆ

ಕಂಸನು ತನ್ನ ಮಿತ್ರರೆಲ್ಲರೂ ಸತ್ತದ್ದರಿಂದ ಏರ್ಪಡುವ ದುಃಖಗಳನ್ನೆಲ್ಲಾ ಅನುಭವಿಸಬೇಕು. ಆ ಮೇಲೆಯೇ ಅವನನ್ನು ಕೊಲ್ಲಬೇಕು. ನಾನು ಇಲ್ಲಿದ್ದರೆ ಇಂದೇ ಕಂಸನು ನನ್ನನ್ನು ಸಂಹರಿಸುವುದಕ್ಕಾಗಿ ಪ್ರಯತ್ನವನ್ನು ಮಾಡುವನು. ಆಗ ನಾನು ಇಂದೇ ಅವನನ್ನು ಕೊಲ್ಲ ಬೇಕಾಗುವುದು. ನಾನು ಇಂದೇ ಅವನನ್ನು ಕೊಲ್ಲದಿರಬೇಕಾದರೆ ಈ ದಿನದಲ್ಲಿ ಕಂಸನಿಗೂ ನನಗೂ ಸಮಾಗಮವು ಏರ್ಪಡದಿರಬೇಕು." ಎಂದು ಶ್ರೀಕೃಷ್ಣದೇವನು ಸಂಕಲ್ಪಿಸಿದನು. ತನ್ನನ್ನು ಗೋಕುಲಕ್ಕೆ ಕರೆದುಕೊಂಡು ಹೋಗಿ ಯಶೋದೆಯ ಹಾಸಿಗೆಯಲ್ಲಿ ಮಲಗಿಸುವಂತೆಯೂ ಯಶೋದೆಗೆ ಈಗಲೇ ಹುಟ್ಟಿರುವ ಹೆಣ್ಣು ಶಿಶುವನ್ನು ತಂದು ದೇವಕಿದೇವಿಯ ಹಾಸಿಗೆಯಲ್ಲಿ ಮಲಗಿಸುವಂತೆಯೂ ವಸುದೇವನನ್ನು ನೋಡಿ ಆಜ್ಞಾಪಿಸಿದನು.

ತನ್ನನ್ನು ಆಶ್ರಯಿಸಿರುವ ಎಲ್ಲಾ ಭಕ್ತರ ಭಯವನ್ನು ಪರಿಹರಿಸುವವನು ಶ್ರೀಕೃಷ್ಣನು. ಅವನು ಅಲ್ಪನಾದ ಕಂಸನಿಗೆ ಹೆದರಿ ಮಧುರೆಯನ್ನು ಬಿಟ್ಟು ಓಡಿಹೋದನು ಎಂದು ಹೇಳುವುದು ಯುಕ್ತವಲ್ಲ. ತನ್ನ ಪರಮಪ್ರಿಯ ಪತ್ನಿಯಾದ ದುರ್ಗಾದೇವಿಯು ಯಶೋದೆಯಲ್ಲಿ ಚಿಕ್ಕಮಗುವಿನ ರೂಪದಿಂದ ಹುಟ್ಟಿರುವಳು. ಅವಳನ್ನು ನೋಡುವುದಕ್ಕಾಗಿಯೇ ಶ್ರೀಕೃಷ್ಣದೇವನು ಗೋಕುಲಕ್ಕೆ ಹೋದನು ಎಂದು ಹೇಳುವುದೇ ನ್ಯಾಯವಾಗಿದೆ.

ವಸುದೇವನು ಶ್ರೀಕೃಷ್ಣದೇವನ ಆಜ್ಞೆಯನ್ನು ಅಂಗೀಕರಿಸಿದನು. ಶ್ರೀಕೃಷ್ಣದೇವನ ಕೃಪಾದೃಷ್ಟಿಯಿಂದ ಅವನ ಮತ್ತು ದೇವಕಿಯ ಕೈಕಾಲುಗಳಲ್ಲಿದ್ದ ಸಂಕೋಲೆಗಳು ಮೊದಲೇ ಕಳಚಿಬಿದ್ದಿದ್ದವು. ಶ್ರೀಕೃಷ್ಣದೇವನನ್ನು ತನ್ನ ಕೈಗಳಿಂದ ಎತ್ತಿದನು. ಸೆರೆಮನೆಯ ಬಾಗಿಲುಗಳಿಗೆ ಬಲವಾದ ಬೀಗಗಳು ಹಾಕಲ್ಪಟ್ಟಿದ್ದವು. ಬೀಗಗಳು ತಾನಾಗಿಯೇ ತೆರೆಯಲ್ಪಟ್ಟವು. ಬಾಗಿಲುಗಳು ತೆರೆಯಲ್ಪಟ್ಟವು.

ಶ್ರೀಕೃಷ್ಣದೇವನು ತನ್ನ ವಂಶದಲ್ಲಿ ಅವತರಿಸಿ ತನಗೆ ವಿಶೇಷ ಕೀರ್ತಿಯನ್ನು ಕೊಟ್ಟಿರುವನು. ಅದಕ್ಕಾಗಿ ಶ್ರೀಕೃಷ್ಣದೇವನನ್ನು ನೋಡಿ ತನ್ನ ಕೃತಜ್ಞತೆಯನ್ನು ತಿಳಿಸಬೇಕೆಂದು ಚಂದ್ರನಿಗೆ ಆಸೆಯು ಏರ್ಪಟ್ಟಿತು. ಶ್ರೀಹರಿಯ ಆಜ್ಞೆಯಿಂದ ಆಕಾಶದಲ್ಲಿ ಸಂಚರಿಸುತ್ತಿರುವ ಚಂದ್ರನು ತನ್ನ ಉದ್ಯೋಗವನ್ನು ಬಿಟ್ಟು ಸೆರೆಮನೆಯೊಳಗೆ ಹೋಗುವಂತಿಲ್ಲ. ಬಾಗಿಲಿಗೆ ಕಾರಣವಾಗಿರುವ ಮರಗಳಿಗೆ ಚಂದ್ರನೇ ಅಭಿಮಾನಿಯಾಗಿರುವನು. ಆದ್ದರಿಂದ ಬೀಗಗಳನ್ನೂ ತೆರೆದು ತನ್ನ ಅಧೀನವಾದ ಮರಗಳ ಬಾಗಿಲುಗಳನ್ನೂ ತೆರೆದು ಚಂದ್ರದೇವನೇ ಶ್ರೀಕೃಷ್ಣದೇವನನ್ನು ಸೆರೆಮನೆಯಿಂದ ಹೊರಗೆ ಕರೆತರಿಸಿದನೆಂದು ಹೇಳುವುದು ನ್ಯಾಯವಾಗಿದೆ.

ವಸುದೇವನು ಸೆರೆಮನೆಯಲ್ಲಿ ಅನೇಕ ಬಾಗಿಲುಗಳನ್ನು ದಾಟಿಕೊಂಡು ಬರಬೇಕಾಯಿತು. ಅಷ್ಟು ಬಾಗಿಲುಗಳೂ ಬಲವಾಗಿ ಬಿಗಿಯಲ್ಪಟ್ಟಿದ್ದವು. ಅವುಗಳಲ್ಲಿ ಒಂದೂ ಶ್ರೀವಸುದೇವನಿಗೆ ವಿಘ್ನವನ್ನು ಕೊಡಲಿಲ್ಲ. ಶ್ರೀಹರಿಯನ್ನು ಸ್ಮರಿಸುವವನಿಗೂ ವಿಘ್ನಗಳು ಏರ್ಪಡುವುದಿಲ್ಲ. ಶ್ರೀಕೃಷ್ಣದೇವನನ್ನು ಕೈಯಲ್ಲಿ ಎತ್ತಿಕೊಂಡಿರುವ ಮಹಾಭಾಗ್ಯಶಾಲಿಯಾದ ವಸುದೇವನಿಗೆ ವಿಘ್ನಗಳಿವೆಯೇ?

ಶ್ರೀವಸುದೇವನು ಸೆರೆಮನೆಯ ಕಾವಲುಗಾರರಿಂದ ಹೆದರಿದನು. ದುರ್ಗಾದೇವಿಯರು ಯಶೋದೆಯಲ್ಲಿ ಅವತರಿಸಿದ ಕ್ಷಣದಿಂದ ಅವರ ಪ್ರಭಾವದಿಂದ ಎಲ್ಲಾ ಕಾವಲುಗಾರರಿಗೂ ತುಂಬಾ ನಿದ್ದೆಯು ಬಂತು. ಇದನ್ನು ತಿಳಿದ ವಸುದೇವನು ಧೈರ್ಯದಿಂದ ಹೊರಟನು. ಆದರೂ ಅರ್ಧರಾತ್ರಿಕಾಲವಾಗಿದ್ದರೂ ರಸ್ತೆಯಲ್ಲಿ ಸಂಚರಿಸಬಹುದಾದ ಒಂದೆರಡು ಜನರಿಂದ ಭೀತನಾದನು. ಚಿಕ್ಕ ಮಳೆಯು ಬಂತು. ಇದರಿಂದ ರಸ್ತೆಯಲ್ಲಿ ಸಂಚರಿಸುತ್ತಿರುವ ಒಬ್ಬಿಬ್ಬರು ರಸ್ತೆಯ ಪಕ್ಕದಲ್ಲಿ ಸೇರಿದರು. ಉಳಿದವರಿಗೆ ಈ ಮಳೆಯಿಂದ ನಿದ್ದೆಯು ಬಲವಾಯಿತು. ಇದನ್ನು ತಿಳಿದ ವಸುದೇವನು ಧೈರ್ಯದಿಂದ ತನ್ನ ಪ್ರಯಾಣವನ್ನು ಮುಂದುವರಿಸಿದನು.

ದೇವೇಂದ್ರನು ಅಸಂಖ್ಯ ಗೋವುಗಳನ್ನೂ ಗೋಕುಲವನ್ನೂ ಗೊಲ್ಲರನ್ನೂ ನಾಶ ಮಾಡುವುದಕ್ಕಾಗಿ ಮುಂದೆ ಪ್ರಬಲವಾದ ಮಳೆಯನ್ನು ಸುರಿಸುವನು. ಈ ಪಾಪಕ್ಕೆ ಪ್ರಾಯಶ್ಚಿತ್ತರೂಪವಾಗಿ ಈಗಲೇ ಮಳೆಯನ್ನು ಸುರಿಸಿ ವಸುದೇವನಿಗೆ ಧೈರ್ಯವನ್ನು ಕೊಟ್ಟು ಶ್ರೀಕೃಷ್ಣದೇವನ ಸೇವೆಯನ್ನು ಮಾಡಿರುವನು'' ಎಂದು ಹೇಳುವುದೇ ನ್ಯಾಯವಾಗಿದೆ.

ಮಳೆಯಿಂದ ಶ್ರೀಕೃಷ್ಣದೇವನ ದೇಹವು ಒದ್ದೆ ಯಾಗುವ ಸಂಭವವು ಬಂತು. ವಸುದೇವನು ಶ್ರೀಕೃಷ್ಣದೇವನ ದೇಹವು ಒದ್ದೆ ಯಾಗದಂತೆ ಮಾಡುವುದಕ್ಕಾಗಿ ಶ್ರಮವನ್ನು ವಹಿಸುವಂತಾಯಿತು. ಅದನ್ನು ತಿಳಿದ ಶೇಷದೇವರು ಓಡಿ ಬಂದರು. ಕೊಡೆಯನ್ನು ಹಿಡಿದಂತೆ ಶ್ರೀಕೃಷ್ಣದೇವನ ಮೇಲೆ ಹೆಡೆಗಳನ್ನು ಅರಳಿಸಿಕೊಂಡು ಹಿಂದೆಯೇ ಬಂದರು. ಮಳೆಯ ನೀರು ಒಂದು ಬಿಂದುವೂ ಶ್ರೀಕೃಷ್ಣದೇವನ ಮೇಲೆ ಬೀಳದಂತೆ ಮಾಡಿದರು.

ಶೇಷದೇವರು ಶ್ರೀಕೃಷ್ಣಾವತಾರದಲ್ಲಿ ಶ್ರೀಕೃಷ್ಣದೇವನಿಗೆ ಅಣ್ಣನಾಗಿ ಅವತರಿಸಿರುವರು. ಇದರಿಂದ ಶ್ರೀಕೃಷ್ಣದೇವನಿಂದ ನಮಸ್ಕರಿಸಲ್ಪಡುವ ಸಂಭವವೂ " ನಾನು ಶ್ರೀಕೃಷ್ಣನ ಅಣ್ಣ" ಎಂಬ ಅಹಂಕಾರವು ಬರುವ ಸಂಭವವೂ ಉಂಟು. ಇದರಿಂದ ಬರಬಹುದಾದ ಪಾಪವನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಶ್ರೀಕೃಷ್ಣದೇವನನ್ನು ಈಗಲೇ ಶೇಷದೇವರು ಸೇವಿಸಿದರೆಂದು ಹೇಳುವುದು ನ್ಯಾಯವಾಗಿದೆ. ಮಾರ್ಗದಲ್ಲಿ ಹೋಗುತ್ತಿರುವ ಶ್ರೀಕೃಷ್ಣದೇವನ ಹಿಂದೆ ಹೆಡೆಯನ್ನು ಅರಳಿಸಿಕೊಂಡು ಹೋಗುತ್ತಿರುವ ಶೇಷದೇವರು " ನಾನು ನಿನ್ನ ಕೊಡೆಯನ್ನು ಹಿಡಿಯುತ್ತಿರುವ ದಾಸನು. ಅಣ್ಣನಲ್ಲ ಆದ್ದರಿಂದ ಅಣ್ಣನಾಗಿ ಅವತರಿಸಿದಾಗ ನಾನು ಮಾಡುವ ಅಪರಾಧಗಳನ್ನು ಮನ್ನಿಸಬೇಕು" ಎಂದು ಪ್ರಾರ್ಥಿಸಿದಂತಾಗಲಿಲ್ಲವೇ?

ಶ್ರೀಕೃಷ್ಣದೇವನ ಮುಂದೆ ಬ್ರಹ್ಮ, ರುದ್ರ ಮುಂತಾದ ದೇವತೆಗಳು ಸಾಲು ಸಾಲಾಗಿ ನಿಂತುಕೊಂಡು ಅತ್ಯಂತ ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರಗಳನ್ನು ಮಾಡಿದರು. ಶ್ರೀಕೃಷ್ಣದೇವನು ಅನಾದಿಕಾಲದಿಂದ ಇಂದಿನ ವರೆಗೆ ಯಾರಿಗೂ ನಮಸ್ಕರಿಸಲಿಲ್ಲ. ಇನ್ನು ಮುಂದೆಯೂ ಯಾರಿಗೂ ನಮಸ್ಕರಿಸುವ ಸಂಭವವೂ ಇಲ್ಲ. ಸಕಲ ಜೀವಸಮುದಾಯದಿಂದಲೂ ಶ್ರೀಲಕ್ಷ್ಮೀದೇವಿಯರಿಂದಲೂ ಉತ್ತಮನಾಗಿರುವ ಶ್ರೀಹರಿಯು ಯಾರನ್ನು ನಮಸ್ಕರಿಸಬೇಕು? ಆದರೆ ಈಗ ಶ್ರೀಕೃಷ್ಣನಾಗಿ ಅವತರಿಸಿರುವನು. ಈ ಸಂದರ್ಭದಲ್ಲಿ ಲೋಕದಲ್ಲಿ ಹಿರಿಯರಿಗೆ ಕಿರಿಯರು ನಮಸ್ಕರಿಸಲೇ ಬೇಕು ಎಂಬ ನ್ಯಾಯವನ್ನು ತಿಳಿಸುವುದಕ್ಕಾಗಿ ಕಿರಿಯನಂತೆ ನಟಿಸುತ್ತಿರುವ ಶ್ರೀಕೃಷ್ಣನು ಹಿರಿಯರಂತೆ ಲೋಕದೃಷ್ಟಿಯಿಂದ ಕಾಣಿಸುತ್ತಿರುವ ವಸುದೇವ ಮುಂತಾದವರನ್ನು ನಮಸ್ಕರಿಸಬೇಕಾದ ಸಂದರ್ಭವು ಬಂತು. ನಮಸ್ಕಾರಮಾಡಿಯೇ ತಿಳಿಯದಿರುವ ಅವನಿಗೆ ನಮಸ್ಕಾರವನ್ನು ಮಾಡುವ ಕ್ರಮವನ್ನು ತಿಳಿಸಬೇಡವೇ? ಅವನಿಗೆ ನಮಸ್ಕಾರವನ್ನು ಮಾಡುವ ಕ್ರಮವನ್ನು ತಿಳಿಸುವುದಕ್ಕಾಗಿ ದೇವತೆಗಳು ನಮಸ್ಕರಿಸಿ ತೋರಿಸಿದರೆಂದು ಹೇಳುವುದು ನ್ಯಾಯವಾಗಿದೆ. ಅವನು ಕಿರಿಯವನಂತೆ ನಟಿಸುತ್ತಿರುವಾಗ ದೇವತೆಗಳು ಉಪದೇಶಕರಂತೆ ನಟಿಸುತ್ತಿರುವುದು ನ್ಯಾಯವಲ್ಲವೇ?

ವಸುದೇವನು ಯಮುನಾನದೀ ತೀರಕ್ಕೆ ಬಂದನು. ಆಗಲೇ ಏರ್ಪಟ್ಟ ಮಳೆಯಿಂದ ಯಮುನಾನದಿಯಲ್ಲಿ ನೀರು ತುಂಬಿ ಹರಿಯುತ್ತಿತ್ತು. ಯಮುನಾನದಿಯನ್ನು ದಾಟಿ ಗೋಕುಲಕ್ಕೆ ಹೋಗಬೇಕಾಗಿದೆ. ನದಿಯಲ್ಲಿ ಹಡಗುಗಳು ಯಾವುದೂ ಇಲ್ಲ. ಇದ್ದರೂ ಆ ಹಡಗಿನಲ್ಲಿ ದಾಟುತ್ತಿರುವಾಗ ಇವನನ್ನು ಅಂಬಿಗನು ಗುರುತು ಹಿಡಿದು ಕಂಸನಿಗೆ ತಿಳಿಸಿಬಿಟ್ಟರೆ ಅಪಾಯ ಆದ್ದರಿಂದ ಹಡಗಿನಿಂದ ದಾಟುವಂತೆಯೂ ಇಲ್ಲ. ಹಿಂದೆ ಹೋದರೆ ಇಷ್ಟರೊಳಗೆ ಎಚ್ಚೆತ್ತಿರುವ ಸೆರೆಮನೆಯ ಕಾವಲುಗಾರರ ಕೈಯಲ್ಲಿ ಶ್ರೀಕೃಷ್ಣದೇವನೊಡನೆ ಸಿಗುವ ಸಂಭವ. ಆದ್ದರಿಂದ ಹಿಂದೆ ಹೋಗುವಂತಿಲ್ಲ ನದಿಯಲ್ಲಿ ನೀರು ತುಂಬಿ ಹರಿಯುತ್ತಿರುವುದರಿಂದ ಮುಂದೆ ಹೋಗುವಂತೆಯೂ ಇಲ್ಲ. ವಸುದೇವನು ತುಂಬಾ ಹೆದರಿದನು.

ಯಮುನೆಯು ವಸುದೇವನ ಕೈಯಲ್ಲಿರುವ ಶ್ರೀಕೃಷ್ಣದೇವನನ್ನು ಗುರುತಿಸಿ ನೋಡಿದಳು. ಶ್ರೀಕೃಷ್ಣದೇವನೇ ಶ್ರೀರಾಮಾವತಾರವನ್ನು ಸ್ವೀಕರಿಸಿದವನೆಂದು ತಿಳಿದಳು. ಶ್ರೀರಾಮನು ಲಂಕೆಗೆ ಹೋಗುವುದಕ್ಕೆ ಹಾದಿಯನ್ನು ಬಿಟ್ಟುಕೊಡಬೇಕೆಂದು ಮೂರುದಿನಗಳವರೆಗೆ ಸಮುದ್ರತೀರದಲ್ಲಿ ಮಲಗಿದ ವಿಷಯವನ್ನೂ ತನ್ನ ಪತಿಯಾದ ಸಮುದ್ರರಾಜನು ಉದಾಸೀನನಾಗಿದ್ದುದನ್ನೂ, ಶ್ರೀರಾಮದೇವರು ಕುಪಿತನಾಗಿ ಕೆಂಡದಂತಿರುವ ಕಣ್ಣುಗಳಿಂದ ಸಮುದ್ರರಾಜನನ್ನು ನೋಡಿದುದನ್ನೂ ಸಮುದ್ರರಾಜನಲ್ಲಿರುವ ಪ್ರಾಣಿಗಳೆಲ್ಲ ಬೆಂದುಹೋಗಿ ಸಮುದ್ರರಾಜನ ಜಲವು ಒಣಗಿಹೋದುದನ್ನೂ ಕೊನೆಗೆ ಸಮುದ್ರರಾಜನು ಕಾಲಿಗೆ ಬಿದ್ದು ಶರಣಾಗತನಾದುದನ್ನೂ, ಸ್ಮರಿಸಿದಳು. ಕೊನೆಗೆ ಸೇತುವಿನಿಂದ ಸಮುದ್ರರಾಜನನ್ನು ಕಟ್ಟಿಹಾಕಿದುದನ್ನೂ ಸ್ಮರಿಸಿದಳು. ಪತಿಯ ಗತಿಯೇ ಹೀಗಾದ ಮೇಲೆ ತನ ಗತಿಯು ಏನಾದೀತು ಎಂದು ಅಂಜಿದಳು.

ಸ್ತ್ರೀಯರಿಗೆ ಕಷ್ಟಬಂದರೆ ಪತಿಯು ರಕ್ಷಣೆಯನ್ನು ಮಾಡುವನು. ಪತಿಯ ಗತಿಯೇ ಹೀಗಾದ ಮೇಲೆ ತನಗೆ ಆಪತ್ತು ಬಂದಾಗ ತನ್ನನ್ನು ರಕ್ಷಿಸುವವರು ಯಾರೂ ಇಲ್ಲ ಎಂದು ನಂಬಿದಳು. "ಶ್ರೀಕೃಷ್ಣದೇವನಿಗೆ ಮಾರ್ಗವನ್ನು ಬಿಟ್ಟುಕೊಡಬೇಕು. ಇದರಿಂದ ತನ್ನ ಪತಿಗೂ ತನಗೂ ಬರಬಹುದಾದ ಆಪತ್ತನ್ನೂ ಪರಿಹರಿಸಬೇಕು" ಎಂದು ನಿಶ್ಚಯಿಸಿದಳು. ಮೇಲಿನಿಂದ ಬರುತ್ತಿರುವ ನೀರನ್ನು ಕಟ್ಟೆಯಿಂದ ತಡೆದು ನಿಲ್ಲಿಸಿದಂತೆ ತಡೆದು ನಿಲ್ಲಿಸಿದಳು. ಇದರಿಂದ ಮೇಲ್ಭಾಗದಿಂದ ನೀರು ಬರಲಿಲ್ಲ. ಕೆಳಭಾಗದಲ್ಲಿರುವ ನೀರೆಲ್ಲವೂ ಹರಿದು ಹರಿದು ಮುಂದೆ ಹೋಯಿತು . ವಸುದೇವನಿದ್ದ ಸ್ಥಳದಲ್ಲಿ ನೀರಿಲ್ಲದಂತಾಯಿತು. ವಸುದೇವನು ಕಾಲುನಡೆಯಿಂದ ನಡೆದುಕೊಂಡು ಮುಂದುವರಿದನು. ತುಂಬಾ ಹೆದರಿದ್ದ ವಸುದೇವನು ಶ್ರೀಕೃಷ್ಣದೇವನ ಮಹಿಮೆಯನ್ನು ತಿಳಿದು ಆಶ್ಚರ್ಯಪರವಶನಾದನು.

"ಯಮುನಾನದಿಯಂತೆ ಸಂಸಾರ ಎಂಬ ನದಿಯಲ್ಲಿಯೂ ನಾನು ಸಿಕ್ಕಿರುವೆನು. ತುಂಬಾ ತತ್ತಳಿಸುತ್ತಿರುವೆನು. ಶ್ರೀಕೃಷ್ಣನ ಕೃಪೆಯಿಂದಈ ಯಮುನೆಯು ನನಗೆ ಮಾರ್ಗವನ್ನು ಬಿಟ್ಟುಕೊಟ್ಟಳು. ಇದರಂತೆ ಸಂಸಾರ ಎಂಬ ನದಿಯನ್ನೂ ಶ್ರೀಕೃಷ್ಣನ ಕೃಪೆಯಿಂದಲೇ ದಾಟುವೆನು. ಈ ವಿಷಯದಲ್ಲಿ ಸಂಶಯವೇ ಇಲ್ಲ" ಎಂದು ವಸುದೇವನು ನಂಬಿದನು.

ಗರುಡದೇವರು ತಮ್ಮ ದೇಹದಲ್ಲಿ ತಕ್ಷಕ ವಾಸುಕಿ ಮುಂತಾದ ಸರ್ಪಗಳನ್ನು ಯಜ್ಞೋಪವೀತ ಉಡುದಾರ ಮುಂತಾದ ಆಭರಣಗಳ ಸ್ಥಾನದಲ್ಲಿ ಧರಿಸಿರುವರು. ಎರಡು ರೆಕ್ಕೆಗಳಿಂದ ಯುಕ್ತರಾಗಿರುವರು. ವಿನಯದಿಂದ ಬಗ್ಗಿಕೊಂಡು ಶ್ರೀಹರಿಯ ಮುಂದೆ ನಿಂತಿರುವರು. ಶ್ರೀವಸುದೇವನ ದೇಹದಲ್ಲಿರುವ ಆಭರಣಗಳಲ್ಲಿ ಅವನ ಹಿಂದೆ ಬರುತ್ತಿರುವ ಶೇಷದೇವರ ಪ್ರತಿಬಿಂಬಗಳು ಕಾಣಿಸಿದವು. ಇದರಿಂದ ಗರುಡದೇವರಂತೆ ಸರ್ಪಗಳೆಂಬ ಆಭರಣಗಳಿಂದ ಯುಕ್ತನಾದವನಂತೆ ಕಾಣಿಸಿದನು. ಅವನ ಎರಡು ಕೈಗಳಿಗೆ ಶ್ರೀಕೃಷ್ಣದೇವನನ್ನು ಎತ್ತಿಕೊಂಡಿರುವ ಭಾಗ್ಯವು ಏರ್ಪಟ್ಟಿತು. ಅದರಿಂದ ಬಂದ ಸಂತೋಷದಿಂದ ಅವುಗಳಲ್ಲಿ ರೋಮಗಳು ಎದ್ದು ನಿಂತವು. ಇದನ್ನು ನೋಡುವಾಗ ಗರಿಗಳಿಂದ ಯುಕ್ತವಾದ ಎರಡು ರೆಕ್ಕೆಗಳಿಂದ ಯುಕ್ತನಾದಂತೆ ಕಾಣಿಸಿದನು. ಅವನ ಅಂಗಗಳೆಲ್ಲಾ ಭಕ್ತಿಯಿಂದ ಬಗ್ಗಿದವು. ಇದನ್ನು ನೋಡಿದಾಗ ಅವನು ಗರುಡದೇವನಂತೆಯೂ ಶ್ರೀಕೃಷ್ಣದೇವನು ಗರುಡವಾಹನವಾಗಿ ಗೋಕುಲಕ್ಕೆ ಹೋಗುತ್ತಿದ್ದಂತೆಯೂ ಕಾಣಿಸಿತು. ಗರುಡನಂತೆ ಅತಿವೇಗದಿಂದ ವಸುದೇವನು ನಡೆದನು.

"ಶ್ರೀಕೃಷ್ಣದೇವನು ಕಳ್ಳನಂತೆ ಯಾರಿಗೂ ತಿಳಿಯದಂತೆ ಗೋಕುಲಕ್ಕೆ ಓಡಿಹೋದನು" ಎಂಬ ಅಪವಾದವು ಶ್ರೀಕೃಷ್ಣದೇವನಿಗೆ ಬರಬಾರದೆಂದು ದೇವತೆಗಳು ನಿಶ್ಚಯಿಸಿದರು. ಅವರು ನಿಶ್ಚಯಿಸಿದಂತೆ ರಾಜವೈಭವದಿಂದ ಮೆರವಣಿಗೆ ಮಾಡುತ್ತಾ ಹೋಗುತ್ತಿದ್ದಂತೆ ಘಟನೆಗಳು ಏರ್ಪಟ್ಟವು. ಮೇಘಗಳು ಗರ್ಜಿಸಿದವು. ಇದು ನಗಾರಿಯನ್ನು ಬಾರಿಸಿದಂತಿತ್ತು. ಗಂಧರ್ವರೆಲ್ಲರೂ ಶ್ರೀಕೃಷ್ಣದೇವನ ಸುತ್ತಲೂ ನಿಂತುಕೊಂಡು ಸುಸ್ವರದಿಂದ ಹಾಡಿದರು. ಇದು ಸ್ತುತಿಪಾಠಕರು ಸುತ್ತಲೂ ನಿಂತುಕೊಂಡು ಸ್ತುತಿಸುತ್ತಿರುವಂತಿತ್ತು. ಧ್ವಜ ಮುಂತಾದ ರಾಜಚಿಹ್ನೆಗಳಿಂದ ಯುಕ್ತವಾದ ಮತ್ತು ಪುಷ್ಪದಂತೆ ಮೆತ್ತಗಿರುವ ವಸುದೇವನ ಕೈಗಳಲ್ಲಿ ಶ್ರೀಕೃಷ್ಣದೇವನು ಮಲಗಿದ್ದನು. ಇದನ್ನು ನೋಡುವಾಗ ಧ್ವಜ ಶ್ವೇತಛತ್ರ ಮುಂತಾದ ರಾಜಲಕ್ಷಣಗಳಿಂದ ಯುಕ್ತವಾದ ಪುಷ್ಪಕವಿಮಾನದಲ್ಲಿ ಶ್ರೀಕೃಷ್ಣದೇವನು ಮಲಗಿಕೊಂಡು ಸವಾರಿ ಮಾಡುತ್ತಿರುವಂತೆ ಕಾಣಿಸಿತು. ದೇವತೆಗಳು ಶ್ರೀಕೃಷ್ಣದೇವನ ಮೇಲೆ ಪುಷ್ಪಗಳ ಮಳೆಯನ್ನು ಹಾದಿಯುದ್ದಕ್ಕೂ ಸುರಿಸುತ್ತಾ ಬಂದರು. ಆ ಪುಷ್ಪಗಳು ಶ್ರೀಕೃಷ್ಣದೇನನ ಮೇಲೆ ಬಿದ್ದು ಅವನ ಎರಡು ಪಾರ್ಶ್ವಗಳಲ್ಲಿ ಕೆಳಗೆ ಉರುಳಿದವು. ಶ್ರೀಕೃಷ್ಣದೇವನ ಎರಡು ಪಾರ್ಶ್ವಗಳಲ್ಲಿ ಎಡೆಬಿಡದೆ ಕೆಳಗೆ ಬೀಳುತ್ತಿರುವ ಬಿಳಿಯ ಹೂವಿನ ಮಳೆಗಳನ್ನು ನೋಡುತ್ತಿರುವಾಗ ಶ್ರೀಕೃಷ್ಣದೇವನ ಎರಡು ಪಾರ್ಶ್ವಗಳಲ್ಲಿಯೂ ಎಡೆಬಿಡದೆ ಬಿಳಿಯ ಚಾಮರಗಳನ್ನು ಬೀಸುತ್ತಿರುವಂತೆ ಕಾಣಿಸಿತು. ಶೇಷದೇವರು ಬಿಳಿಬಣ್ಣದ ಹೆಡೆಯನ್ನು ಅರಳಿಸಿಕೊಂಡು ಅವನ ಹಿಂದೆ ಹೋದರು. ಇದನ್ನು ನೋಡುವಾಗ ಶ್ವೇತಛತ್ರವನ್ನು ಹಿಡಿಯುತ್ತಿರುವಂತೆ ಕಾಣಿಸಿತು. ಬ್ರಹ್ಮರುದ್ರ, ಇಂದ್ರ, ಮುಂತಾದ ದೇವತೆಗಳು ಶ್ರೀಕೃಷ್ಣನ ಸುತ್ತಲೂ ಹೋಗುತ್ತಿದ್ದರು. ಇದನ್ನು ನೋಡಿದರೆ ಚಕ್ರವರ್ತಿಯು ಪರಿವಾರಸಹಿತವಾಗಿ ಹೋಗುತ್ತಿರು ವಂತೆ ಕಾಣಿಸಿತು. ಹೀಗೆ ಚಕ್ರವರ್ತಿಗೆ ಯೋಗ್ಯವಾದ ವೈಭವದಿಂದ ಶ್ರೀಕೃಷ್ಣದೇವನು ಗೋಕುಲಕ್ಕೆ ಹೋದನು. ಕಳ್ಳನಂತೆ ಓಡಲಿಲ್ಲ.

ಶ್ರೀಕೃಷ್ಣದೇವನು ಗೋಕುಲವನ್ನು ಪ್ರವೇಶಿಸಿದನು. ಆ ಗೋಕುಲವು ಗೋವುಗಳಿಂದಲೂ ಗೋಪಾಲಕರಿಂದಲೂ ತುಂಬಿತ್ತು. ಆದ್ದರಿಂದಲೇ ಗೋಕುಲ ಎಂಬ ಹೆಸರು ಅನ್ವರ್ಥಕವಾಗಿತ್ತು. ಯಶೋದೆಯು ಅಲ್ಲಿ ವಾಸಿಸುತ್ತಿರುವಳು. ಅವಳು ಹುಟ್ಟಿರುವ ಮತ್ತು ಸೇರಿರುವ ಕುಲಗಳಿಗೆ ಕೀರ್ತಿಯನ್ನೂ ಪುಣ್ಯವನ್ನೂ ಕೊಡಬೇಕು. ಇದರಿಂದ ಅವಳು ಯಶೋದ ಅಂದರೆ ಕೀರ್ತಿಯನ್ನು ಕೊಡುವವಳು ಎಂಬ ಹೆಸರನ್ನು ಸಾರ್ಥಕವಾಗುವಂತೆ ಮಾಡಬೇಕು ಎಂದು ಶ್ರೀಕೃಷ್ಣದೇವನು ಗೋಕುಲವನ್ನು ಪ್ರವೇಶಿಸಿದನು.

ಶ್ರೀಕೃಷ್ಣದೇವನು ಗೋಕುಲವನ್ನು ಪ್ರವೇಶಿಸುವ ಸಮಾಚಾರವು ಅಲ್ಲಿರುವವರಿಗೆ ಯಾರಿಗೂ ತಿಳಿಯದು. ಆದ್ದರಿಂದ ಯ್ಯಾರೂ ಗೋಕುಲವನ್ನು ಅಲಂಕರಿಸಲಿಲ್ಲ. ಆದರೂ ದೈವಘಟನೆಯಿಂದ ತಾನಾಗಿಯೇ ಅಲಂಕರಿಸಲ್ಪಟ್ಟಿತು. ಆಕಾಶದಲ್ಲಿರುವ ಮೇಘಗಳ ನಡುವಿನಲ್ಲಿ ಚಂದ್ರಕಿರಣಗಳು ಕೆಳಮುಖವಾಗಿ ಬಂದವು. ಅವುಗಳು ಬಿಳಿಬಣ್ಣದ ವಸ್ತ್ರದಿಂದ ನಿರ್ಮಿತವಾದ ಪತಾಕೆಗಳಂತೆ ಕಾಣಿಸಿದವು. ದೇವತೆಗಳು ಸುರಿಸಿದ ಹೂವಿನ ಮಳೆಯಿಂದ ಎಲ್ಲಾ ಕಡೆಗಳಲ್ಲಿಯೂ ಪುಷ್ಪಗಳು ತುಂಬಿದ್ದವು. ಈ ಪುಷ್ಪಗಳು ಅಲಂಕಾರಕ್ಕಾಗಿ ಚೆಲ್ಲಲ್ಪಟ್ಟ ಪುಷ್ಪಗಳಂತೆ ಕಾಣಿಸಿದವು. ಮಳೆಯ ನೀರಿನಿಂದ ಎಲ್ಲಾ ಪ್ರದೇಶಗಳು ಒದ್ದೆಯಾಗಿದ್ದವು. ಇದು ಗೋಕುಲವನ್ನು ತೊಳೆಯುವುದಕ್ಕಾಗಿ ನೀರನ್ನು ಚೆಲ್ಲಿದಂತೆ ಕಾಣಿಸಿತು. ಶೇಷದೇವನ ಕಂಠದಲ್ಲಿರುವ ಕಪ್ಪುಬಣ್ಣವೂ ಹೊಟ್ಟೆಯಲ್ಲಿರುವ ಬಿಳಿಬಣ್ಣವೂ ಹೆಡೆಯಲ್ಲಿರುವ ಮಾಣಿಕ್ಯಮಣಿಗಳ ಕೆಂಪುಬಣ್ಣವೂ ಎಲ್ಲಾ ಸ್ಥಳಗಳಲ್ಲಿಯೂ ವ್ಯಾಪಿಸಿತು. ಇದನ್ನು ನೋಡಿದರೆ ಅನೇಕ ಬಣ್ಣಗಳಿಂದ ಯುಕ್ತವಾದ ರಂಗವಲ್ಲಿ ಯಿಂದ ಗೋಕುಲದ ಮಾರ್ಗವು

ಅಲಂಕರಿಸಲ್ಪಟ್ಟಂತೆ ಕಾಣಿಸಿತು. ಶೇಷದೇವನ ಸಾವಿರ ಹೆಡೆಗಳು ತೋರಣಗಳಂತೆ ಕಾಣಿಸಿದವು. ಆಕಾಶದಲ್ಲಿ ಸಾಲು ಸಾಲಾಗಿ ನಿಂತಿರುವ ದೇವತೆಗಳ ವಿಮಾನಗಳು ಮೇಲುಕಟ್ಟಿನಂತೆ ಕಾಣಿಸಿದವು. ಶೇಷದೇವನ ಹೆಡೆಯಿಂದ ಶುಭ್ರವಾದ ಜಲಬಿಂದುಗಳು ಕೆಳಗೆ ಬೀಳುತ್ತಿದ್ದವು. ಅವುಗಳು ಹೆಡೆಯಲ್ಲಿರುವ ಮಾಣಿಕ್ಯಗಳ ಕಾಂತಿಯಿಂದ ಕೆಂಪಾಗಿದ್ದವು. ಇವುಗಳು ಶ್ರೀಕೃಷ್ಣದೇವನ ಆಗಮನ ಕಾಲದಲ್ಲಿ ಅವನನ್ನು ಸ್ವಾಗತಿಸುವುದಕ್ಕಾಗಿ ಅವನ ಮೇಲೆ ಎಸೆಯಲ್ಪಟ್ಟ ಮಂತ್ರಾಕ್ಷತೆಗಳಂತೆ ಕಾಣಿಸಿದವು. ಇದರಿಂದ ಅರ್ಧರಾತ್ರಿಕಾಲದಲ್ಲಿಯೂ ಆ ಪ್ರದೇಶವು ಅಲಂಕರಿಸಲ್ಪಟ್ಟಂತೆ ಕಾಣಿಸಿತು.

ವಸುದೇವನು ಗೋಕುಲದ ರಸ್ತೆಗಳಲ್ಲಿ ನಡೆಯುತ್ತಾ ನಂದನ ಮನೆಗೆ ಬಂದನು. ದುರ್ಗಾದೇವಿಯರು ಆಗಲೇ ಅಲ್ಲಿ ಅವತರಿಸಿದ್ದರು. ಅವರ ಪ್ರಭಾವದಿಂದ ಗೋಕುಲದಲ್ಲಿರುವ ಸರ್ವರೂ ಗೊರಕೆಯನ್ನು ಹೊಡೆಯುತ್ತಿದ್ದರು. ಯಶೋದೆಯೂ ಗಾಢನಿದ್ರೆಯಿಂದ ಯುಕ್ತಳಾಗಿದ್ದಳು. ಅವಳಿಗೆ ತನಗೆ ಹುಟ್ಟಿರುವ ಮಗುವು ಗಂಡೋ? ಹೆಣ್ಣೋ? ಎಂಬ ವಿಚಾರವೂ ಗೊತ್ತಿಲ್ಲ. ಆ ಯಶೋದೆಯ ಹಾಸಿಗೆಯ ಸಮೀಪಕ್ಕೆ ಬಂದನು.

## ದುರ್ಗಾದೇವಿಯರ ಮಥುರಾಯಾತ್ರೆ

ಸಮಸ್ತಮುಕ್ತರಿಗೆ ಅಧಿಪತಿಯೂ ಸರ್ವವ್ಯಾಪಿಯೂ ಆಗಿರುವ ತನ್ನ ಪತಿಯು ಸಂಸಾರಿಜೀವನಂತೆ ಈಗ ಚಿಕ್ಕಮಗುವಿನ ರೂಪವನ್ನು ಧರಿಸಿರುವನು. ಅವನ ಪತ್ನಿಯೂ ಸಕಲಲೋಕವ್ಯಾಪಿನಿಯೂ ಆಗಿರುವ ದುರ್ಗಾದೇವಿಯರೂ ಚಿಕ್ಕಮಗುವಿನ ರೂಪವನ್ನು ಧರಿಸಿರುವರು. ಇದರಿಂದ ದುರ್ಗಾದೇವಿಯರಿಗೆ ಈ ರೂಪದಿಂದ ಇಬ್ಬರೂ ಒಂದೇ ಕಡೆಯಲ್ಲಿರುವುದಕ್ಕೆ ನಾಚಿಕೆಯಾಯಿತು. ಅದಕ್ಕಾಗಿ ರಾತ್ರಿ ಬೆಳಗಾಗುವುದರೊಳಗಾಗಿ ಈ ಸ್ಥಳವನ್ನು ಬಿಟ್ಟು ಓಡಿಹೋಗಬೇಕೆಂದು ಆಲೋಚಿಸಿದರು.

ಅದು ಮಾತ್ರವಲ್ಲ. " ನಾನು ಶ್ರೀಹರಿಯ ಪತ್ನಿಯಾಗಿರುವೆನು. ಆದರೀಗ ತಂಗಿಯಾಗಿ ಅವತರಿಸಿರುವೆನು. ಆದ್ದರಿಂದ ಈಗ ಪತ್ನಿಯಂತೆ ಇರಲು ಸಾಧ್ಯವಿಲ್ಲ" ಎಂದು ತಿರ್ಮಾನಿಸಿದರು. ಊರನ್ನು ಬಿಟ್ಟು ಓಡಿಹೋಗುವುದಾಗಿ ನಿಶ್ಚಯಿಸಿದರು. ಆದರೂ ಸುಂದರವಾದ ಇನ್ನೊಂದು ರೂಪದಿಂದ ಶ್ರೀಕೃಷ್ಣನ ವಕ್ಷಃಸ್ಥಳವನ್ನು ಹೊಂದಿದರು. ತೃಪ್ತಿಯಿಂದ ವಾಸಿಸಿದರು.

ಬ್ರಹ್ಮ ಮುಂತಾದ ದೇವತೆಗಳ ತಂದೆಯೂ ತನ್ನ ಮಗನಂತೆ ನಟಿಸುತ್ತಿರುವವನೂ ಆಗಿರುವ ಶ್ರೀಕೃಷ್ಣದೇವನನ್ನು ವಸುದೇವನು ಯಶೋದೆಯ ಪಕ್ಕದಲ್ಲಿ ಮಲಗಿಸಿದನು. ಶ್ರೀಕೃಷ್ಣನನ್ನು ಸೇವಿಸುವವರಿಗೆ ಮುಕ್ತಿಯು ಕೊನೆಗೆ ಸಿಗುತ್ತದೆ. ತತ್ಕಾಲದಲ್ಲಿ ಐಶ್ವರ್ಯಾದಿಗಳು ಸಿಗುತ್ತವೆ. ವಸುದೇವನು ಶ್ರೀಕೃಷ್ಣನನ್ನು ಎತ್ತಿಕೊಂಡು ಇಲ್ಲಿಯವರೆಗೆ ಬಂದನು. ಈ ಸೇವೆಗೆ ಯೋಗ್ಯವಾದ ಫಲದಂತಿರುವ ದುರ್ಗಾದೇವಿಯರನ್ನು ಎತ್ತಿಕೊಂಡನು. ಕಂಸನ ಮನೆಗೆ ಅವನ ಮೃತ್ಯುವನ್ನು ತಂದಂತೆ ತಂದನು. ದೇವಕಿದೇವಿಯ ಹಾಸಿಗೆಯಲ್ಲಿ ಮಲಗಿಸಿದನು. ಸೆರೆಮನೆಯ ಬಾಗಿಲುಗಳು ಹಿಂದಿನಂತೆ ತಾನಾಗಿಯೇ ಮುಚ್ಚಲ್ಪಟ್ಟವು. ಅವರಿಬ್ಬರ ಕೈಗಳಲ್ಲಿ ಸಂಕೋಲೆಗಳು ತಾನಾಗಿಯೇ ಬಿಗಿಯಲ್ಪಟ್ಟವು.

ದೇವಕೀದೇವಿಯು ಗರ್ಭಿಣಿಯಾದಾಗ ವಸುದೇವನ ಇತರ ಪತ್ನಿಯರನ್ನು ಕಂಸನು ಮಧುರಾಪಟ್ಟಣದಲ್ಲಿ

ಇರದಂತೆ ಮಾಡಿದನು. ಕೂಸುಗಳನ್ನು ಬದಲಾಯಿಸಬಹುದೆಂಬ ಭಯದಿಂದಲೇ ಹಾಗೆ ಮಾಡಿದ್ದು. ಆದರೆ ಹಾಗೆ ಮಾಡಿಯೂ ಭಯವು ತಪ್ಪಲಿಲ್ಲ. ಶ್ರೀಹರಿಯ ಸಾಮರ್ಥ್ಯವನ್ನು ಎಷ್ಟೆಂದು ವರ್ಣಿಸಲಿ?

## ದುರ್ಗಾದೇವಿಯರು ಕಂಸನನ್ನು ಎಚ್ಚರಿಸಿದುದು

ಅರುಣೋದಯಕಾಲವಾಯಿತು. ದುರ್ಗಾದೇವಿಯರು ಶಿಶುಸ್ವಭಾವವನ್ನು ಅನುಸರಿಸಿ ಗಟ್ಟಿಯಾಗಿ ಅತ್ತರು. ಅಷ್ಟರವರೆಗೆ ಅವರ ಪ್ರಭಾವದಿಂದ ಮಲಗಿದ್ದ ಕಂಸನ ದೂತರು ಅವರ ಪ್ರಭಾವದಿಂದಲೇ ಎದ್ದರು. ಕಂಸನಲ್ಲಿಗೆ ಓಡೋಡಿ ಬಂದರು. ದೇವಕೀದೇವಿಗೆ ಪುತ್ರೋತ್ಸವವಾಗಿರುವ ಸಮಾಚಾರವನ್ನು ತಿಳಿಸಿದರು. ಕಂಸನೂ ಓಡಿ ಬಂದನು. ಮಗುವಿನ ಕಾಲುಗಳನ್ನು ಎತ್ತಿ ಕೆಳಗೆ ಅಪ್ಪಳಿಸಿದನು.

ದುರ್ಗಾದೇವಿಯರು ಶಿಶುವಿನ ರೂಪವನ್ನು ಬಿಟ್ಟರು ಆಯುಧಗಳಿಂದ ಸಹಿತವಾದ ಎಂಟು ಭುಜಗಳಿಂದ ಯುಕ್ತವಾದ ಭಯಂಕರರೂಪವನ್ನು ಧರಿಸಿದರು. "ಕಂಸಾ, ನನ್ನನ್ನು ಸಂಹರಿಸಿದ್ದರಿಂದ ಏನು ಫಲ, ನಿನ್ನ ಶತ್ರುವು ಹುಟ್ಟಿಯಾಯಿತು. ಬೆಳೆಯುತ್ತಿರುವನು." ಎಂದು ಹೇಳಿದರು. ಅದೃಶ್ಯರಾದರು. ಚಿಕ್ಕ ರೂಪವನ್ನು ಧರಿಸಿದರು. ದೇವಕೀದೇವಿಯ ಹಾಸಿಗೆಯಲ್ಲಿ ತಂದೆತಾಯಿಗಳಿಗೆ ಮಾತ್ರ ಕಾಣಿಸುತ್ತಿರುವಂತೆ ಮಲಗಿದರು. ಶ್ರೀಕೃಷ್ಣದೇವನ ವಿಯೋಗದಿಂದ ತಂದೆ ತಾಯಿಗಳಿಗೆ ಏರ್ಪಟ್ಟ ದುಃಖವನ್ನು ತಾನು ಅವಳ ಪಕ್ಕದಲ್ಲಿದ್ದು ಪರಿಹರಿಸಿದರು. ಬೇರೆ ಬೇರೆ ಸ್ಥಳಗಳಲ್ಲಿ ನಾನಾ ವಿಧವಾದ ಹೆಸರುಗಳಿಂದಲೂ ರೂಪಗಳಿಂದಲೂ ಯುಕ್ತರಾಗಿ ಪೂಜಿಸಲ್ಪಡುತ್ತಿರುವರು.

ಕಂಸನ್ನು ಇದನ್ನೆಲಾ ನೋಡಿ, ದೇವಕೀದೇವಿಯ ಎಂಟನೆಯ ಮಗುವು ಗಂಡಲ್ಲವೆಂದೂ ಹೆಣ್ಣೆಂದೂ ಅಶರೀರವಾಣಿಯು ಸುಳ್ಳಾಯಿತೆಂದೂ ನಂಬಿದನು. ಅಶರೀರವಾಣಿಯನ್ನು ನಂಬಿ ದೇವಕೀದೇವಿಗೂ ವಸುದೇವನಿಗೂ ಇಷ್ಟರವರಗೆ ಮಾಡಿರುವ ದ್ರೋಹಗಳಿಗಾಗಿ ಅವರಿಬ್ಬರಲ್ಲಿ ಕ್ಷಮಾಪಣೆಯನ್ನು ಬೇಡಿದನು. ಅವರನ್ನು ಸೆರೆಮನೆಯಿಂದ ಬಿಡಿಸಿದನು. ಮನೆಗೆ ಹಿಂದಿರುಗಿ ಬಂದನು. ಮರುದಿನ ಬೆಳಿಗ್ಗೆ ಸಭೆಯನ್ನು ಸೇರಿಸಿ, ಸರ್ವರಿಗೂ ರಾತ್ರಿಯಲ್ಲಿ ನಡೆದ ವಿಷಯಗಳನ್ನು ತಿಳಿಸಿದನು. ಅವನ ಮಂತ್ರಿಗಳೆಲ್ಲರೂ ಅವನನ್ನು ನೋಡಿ ಹೇಳಿದರು.

## ಕಂಸನಿಗೆ ಮಂತ್ರಿಗಳ ದುರುಪದೇಶ, ಮತ್ತು ಕಂಸನ ಅಂಗೀಕಾರ

" ಪ್ರಭೋ, ನಿನ್ನ ಶತ್ರುವು ಬದುಕ್ಕಿದ್ದರೆ ಈಗ ಚಿಕ್ಕಮಗುವಾಗಿರಬೇಕು. ಆದ್ದರಿಂದ ಎಲ್ಲಾ ದೇಶಗಳಲ್ಲಿರುವ ಚಿಕ್ಕಮಕ್ಕಳುಗಳನ್ನು ಕೊಂದುಬಿಟ್ಟರೆ ಆ ಚಿಕ್ಕಮಕ್ಕಳುಗಳ ಮಧ್ಯದಲ್ಲಿ ನಿನ್ನ ಶತ್ರುವೂ ಸಾಯುವನು. ಇದು ನಿನ್ನ ಶತ್ರುವನ್ನು ಕೊಲ್ಲುವುದಕ್ಕೆ ಮಾಡಬೇಕಾದ ಉಪಾಯ. ದೇವತೆಗಳೆಲ್ಲರೂ ನಿನ್ನಿಂದ ಪರಾಜಿತರಾಗಿರುವರು. ಆದರೂ ಶತ್ರುಗಳನ್ನು ಉದಾಸೀನ ಮಾಡಬಾರದು. ಅವರೆಲ್ಲರನ್ನೂ ಕೊಲ್ಲಲೇಬೇಕು. ಅವರೆಲ್ಲರಿಗೂ ನಾರಾಯಣನು ಬೇರಿನಂತಿರುವನು. ಅವನನ್ನು ಕೊಂದುಬಿಟ್ಟರೆ ಬೇರಿಲ್ಲದ ಮರದಂತೆ ಎಲ್ಲಾದೇವತೆಗಳೂ ಸಾಯುವರು. ನಾರಾಯಣನಿಗೆ ಬ್ರಾಹ್ಮಣರೂ ಗೋವುಗಳೂ ವೇದಗಳೂ ಯಜ್ಞಗಳೂ ಸತ್ಯ ಮುಂತಾದ ಗುಣಗಳೂ ಶರೀರಗಳಂತಿವೆ. ನಾರಾಯಣನ ಶರೀರಗಳಂತಿರುವ ಬ್ರಾಹ್ಮಣರೇ ಮೊದಲಾದವರನ್ನು ಸಂಹರಿಸಿದರೆ ನಾರಾಯಣನು ಸಾಯುವನು. ನಾರಾಯಣನು ಸತ್ತರೆ ಎಲ್ಲಾ ದೇವತೆಗಳೂ ಸಾಯುವರು. ದೇವತೆಗಳೂ ನಿನ್ನ

ಶತ್ರುವೂ ಸತ್ತರೆ ನೀನು ಯಾವ ತೊಂದರೆಯೂ ಇಲ್ಲದಂತೆ ಸುಖವಾಗಿರಬಹುದು. ಆದ್ದರಿಂದ ಬ್ರಾಹ್ಮಣರೆಲ್ಲರನ್ನೂ ಎಲ್ಲಾ ಗೋವುಗಳನ್ನೂ ಕೊಲ್ಲಲೇಬೇಕು. ವೇದಗಳನ್ನು ಅಭ್ಯಾಸ ಮಾಡುತ್ತಿರುವವರನ್ನೂ ಯಜ್ಞಗಳನ್ನು ಮಾಡುತ್ತಿರುವವರನ್ನೂ ಗುಣವಂತರನ್ನೂ ಕೊಲ್ಲಲೇಬೇಕು'' ಎಂದು ಉಪದೇಶಿಸಿದರು. ಕಂಸನೂ ಅವರೆಲ್ಲರನ್ನು ಸಂಹರಿಸುವಂತೆಯೂ ಚಿಕ್ಕಮಕ್ಕಳೆಲ್ಲರನ್ನೂ ಸಂಹರಿಸುವಂತೆಯೂ ಆಜ್ಞಾಪಿಸಿದನು.

ಕಂಸನು ತಾನು ಮಾಡಿದ ತಪ್ಪಿಗಾಗಿ ವಸುದೇವ ಮತ್ತು ದೇವಕಿಯರಲ್ಲಿ ಕ್ಷಮಾಪಣೆಯನ್ನು ಬೇಡಿದನು. ಕೆಲವು ಗಂಟೆಗಳ ಅನಂತರದಲ್ಲಿ ಬ್ರಾಹ್ಮಣರನ್ನೂ ಶಿಶುಗಳನ್ನೂ ಕೊಲ್ಲುವಂತೆ ಆಜ್ಞಾಪಿಸಿದನು. ಆದ್ದರಿಂದ ಅವನ ದೇಹದಲ್ಲಿ ಒಳ್ಳೆಯ ಜೀವನೂ ಕೆಟ್ಟ ಜೀವನೂ ಒಟ್ಟಿಗೆ ವಾಸಿಸುತ್ತಿರುವುದಾಗಿ ತಿಳಿಯುತ್ತದೆ. ಒಳ್ಳೆಯ ಜೀವನಿಂದ ಒಳ್ಳೆಯ ಕೆಲಸಗಳೂ ಕೆಟ್ಟ ಜೀವನಿಂದ ಕೆಟ್ಟ ಕಲಸಗಳೂ ಏರ್ಪಡುತ್ತವೆ.

## ದೇವತೆಗಳ ಅವತಾರ

**ವಿಶೇಷಾರ್ಥ-ವಿಷ್ಣುಃ ಬ್ರಹ್ಮಾದಿದೇವೈಃ ಸಹ ಪ್ರಾದುರಾಸೀತ್ ತತ್ರ ತತ್ರ ದೇವಾಃ ಅಜಾಯಂತ** ವಿಷ್ಣುವು ಬ್ರಹ್ಮದೇವರೇ ಮೊದಲಾಗಿರುವ ಅಂದರೆ ಬ್ರಹ್ಮದೇವರನ್ನು ಬಿಟ್ಟು ಉಳಿದಿರುವ ಎಲ್ಲಾ ದೇವತೆಗಳಿಂದಲೂ ಅಥವಾ ಮುಂದಿನ ಕಲ್ಪದಲ್ಲಿ ಬ್ರಹ್ಮಪದವಿಯನ್ನು ಪಡೆಯುವ ವಾಯುದೇವರೇ ಮೊದಲಾದ ಎಲ್ಲಾ ದೇವತೆಗಳಿಂದಲೂ ಸಹಿತವಾಗಿ ಭೂಲೋಕದಲ್ಲಿ ಅವತರಿಸಿದನು. ಆ ದೇವತೆಗಳು ಅಲ್ಲಲ್ಲಿ ಹುಟ್ಟಿದರು.

**ವಿಶೇಷಾರ್ಥ ವಿವರಣ** - ಇಷ್ಟರ ವರೆಗೆ ಶ್ರೀಕೃಷ್ಣದೇವನು ಅವತರಿಸಿದ ವಿಷಯವನ್ನು ವರ್ಣಿಸಿದೆನು. ಇನ್ನು ಮುಂದೆ ಶ್ರೀಕೃಷ್ಣದೇವನನ್ನು ಸೇವಿಸುವುದಕ್ಕಾಗಿ ಶ್ರೀಕೃಷ್ಣದೇವನ ಅವತಾರಕ್ಕಿಂತ ಹಿಂದೆಯೂ ಮುಂದೆಯೂ ಅವತರಿಸಿರುವ ದೇವತೆಗಳನ್ನು ಹೇಳುವೆವು.

ಬ್ರಹ್ಮಾದಿದೇವ ಎಂಬ ಪದವು ಬ್ರಹ್ಮ ಎಂಬ ದೇವತೆಯಿಂದ ಆರಂಭಿಸಿ ಎಲ್ಲಾ ದೇವತೆಗಳು ಎಂಬ ಅರ್ಥವನ್ನು ತಿಳಿಸುತ್ತದೆ. ಬ್ರಹ್ಮದೇವರಿಂದ ಆರಂಭಿಸುವಾಗ ಬ್ರಹ್ಮದೇವರನ್ನು ಸೇರಿಸಿಕೊಂಡರೂ ಸೇರಿಸಿಕೊಳ್ಳಬಹುದು. ಹೀಗೆ ಹೇಳಿದಾಗ ತದ್ಗುಣಸಂವಿಜ್ಞಾನಬಹುವ್ರೀಹಿ ಸಮಾಸವಾಗುತ್ತದೆ. ಬ್ರಹ್ಮದೇವರನ್ನು ಬಿಟ್ಟರೂ ಬಿಡಬಹುದು. ಹೀಗೆ ಹೇಳಿದಾಗ ಅತದ್ಗುಣಸಂವಿಜ್ಞಾನ ಬಹುವ್ರೀಹಿಸಮಾಸವಾಗುತ್ತದೆ. ಪ್ರಕೃತದಲ್ಲಿ ಬ್ರಹ್ಮದೇವರಿಗೆ ಭೂಮಿಯಲ್ಲಿ ಅವತಾರವಿಲ್ಲ. ಆದ್ದರಿಂದ ಇತರ ದೇವತೆಗಳಂತೆ ಬ್ರಹ್ಮದೇವರೂ ಅವತರಿಸಿದರೆಂದು ಹೇಳುವುದು ಯುಕ್ತವಾಗುವುದಿಲ್ಲ. ಆದ್ದರಿಂದ ಅತದ್ಗುಣಸಂವಿಜ್ಞಾನಬಹುವ್ರೀಹಿ ಸಮಾಸವನ್ನು ಆಶ್ರಯಿಸಿ ಬ್ರಹ್ಮದೇವರನ್ನು ಬಿಟ್ಟು ಉಳಿದ ಎಲ್ಲಾ ದೇವತೆಗಳಿಂದ ಸಹಿತನಾಗಿ ವಿಷ್ಣುವು ಅವತರಿಸಿದನು ಎಂಬ ಅರ್ಥವನ್ನು ಬ್ರಹ್ಮಾದಿದೇವೈಃಸಹಪ್ರಾದುರಾಸೀತ್ ಎಂಬ ವಾಕ್ಯಕ್ಕೆ ಹೇಳಿರುವೆವು.

ಅಥವಾ ಇಲ್ಲಿರುವ "ಬ್ರಹ್ಮ" ಎಂಬ ಪದವು ಈಗ ಬ್ರಹ್ಮಪದವಿಯಲ್ಲಿರುವವರನ್ನು ಹೇಳುವುದಿಲ್ಲ. ಮುಂದೆ ಬ್ರಹ್ಮಪದವಿಯನ್ನು ಪಡೆಯುವ ವಾಯುದೇವರನ್ನು ತಿಳಿಸುತ್ತದೆ. ವಾಯುದೇವರೇ ಮೊದಲಾದ ದೇವತೆಗಳಿಂದ ಸಹಿತನಾಗಿ ವಿಷ್ಣುವು ಅವತರಿಸಿದನು ಎಂಬ ಅರ್ಥವನ್ನು ಬ್ರಹ್ಮಾದಿದೇವೈಃ ಸಹ ಪ್ರಾದುರಾಸೀತ್ ಎಂಬ ವಾಕ್ಯವು ತಿಳಿಸುತ್ತದೆ. ಆಗ ತದ್ಗುಣಸಂವಿಜ್ಞಾನಬಹುವ್ರೀಹಿ ಸಮಾಸವೇ ಆಗುತ್ತದೆ.

# ಸೂರ್ಯವಂಶ

ನಾರಾಯಣನಿಗೆ ಬ್ರಹ್ಮದೇವರೂ ಬ್ರಹ್ಮದೇವರಿಗೆ ಮರೀಚಿ ಎಂಬ ಋಷಿಯೂ ಮರೀಚಿ ಋಷಿಗಳಿಗೆ ಕಶ್ಯಪ ಎಂಬ ಋಷಿಯೂ ಕಶ್ಯಪ ಋಷಿಗಳಿಗೆ ಅದಿತಿ ಎಂಬ ಪತ್ನಿಯಲ್ಲಿ ವಿವಸ್ವಾನ್ ಎಂಬ ಹೆಸರಿನಿಂದ ಯುಕ್ತನಾದ ಸೂರ್ಯನೂ ಸೂರ್ಯನಿಗೆ ಶ್ರಾದ್ಧದೇವ ಅಥವಾ ವೈವಸ್ವತಮನು ಎಂಬುವ ವನ ಮಕ್ಕಳಾಗಿ ಅವತರಿಸಿದನು. ಸೂರ್ಯಪುತ್ರನಾದ ವೈವಸ್ವತಮನುವಿಗೆ ಇಕ್ಷ್ವಾಕು ಮುಂತಾದ ಹತ್ತು ಗಂಡುಮಕ್ಕಳು ಹುಟ್ಟಿದರು. ಅವರಿಂದ ಸೂರ್ಯವಂಶವು ಬೆಳೆಯಿತು.

# ಚಂದ್ರವಂಶ

ಅದೇ ವೈವಸ್ವತಮನುವಿಗೆ ಇಳಾ ಎಂಬ ಹೆಣ್ಣು ಮಗಳು ಹುಟ್ಟಿದಳು. ಅವಳು ಪುರೋಹಿತರಾದ ಶ್ರೀವಸಿಷ್ಠರ ಅನುಗ್ರಹದಿಂದ ಪುರುಷಳಾದಳು. ಪುರುಷತ್ವವನು ಪಡೆದ ಮೇಲೆ ಸುದ್ಯುಮ್ನ ಎಂದು ಪ್ರಸಿದ್ಧಳಾದಳು. ಸುದ್ಯುಮ್ನನು ಒಮ್ಮೆ ಪರಿವಾರಸಹಿತವಾಗಿ ಬೇಟೆಗಾಗಿ ಕಾಡಿಗೆ ಹೋದನು. ಕಾಡಿನಿಂದ ಕಾಡಿಗೆ ಸಂಚರಿಸುತ್ತಾ ಇಲಾವೃತವರ್ಷ ಎಂಬ ಭೂಪ್ರದೇಶಕ್ಕೆ ಬಂದನು.

ಆ ಇಲಾವೃತ ವರ್ಷದಲ್ಲಿ ಪಾರ್ವತೀಸಹಿತರಾಗಿ ರುದ್ರದೇವರು ವಾಸಿಸುತ್ತಿರುವರು. ಅವರು ಒಮ್ಮೆ ರತಿಕ್ರೀಡೆಯನ್ನು ಮಾಡುತ್ತಿದ್ದರು. ಆಗ ಅವರನ್ನು ನೋಡುವುದಕ್ಕಾಗಿ ಕೆಲವು ಮುನಿಗಳು ಬಂದರು. ಆ ಮುನಿಗಳನ್ನು ನೋಡಿದ ಪಾರ್ವತಿದೇವಿಯರು ಲಜ್ಜಿತರಾಗಿ ತಮ್ಮ ಸೀರೆಯನ್ನು ಅವಸರವಾಗಿ ಉಟ್ಟುಕೊಂಡರು. ಇದನ್ನು ನೋಡಿದ ರುದ್ರದೇರು ತನ್ನ ಪತ್ನಿಯ ಸಂತೋಷಕ್ಕಾಗಿ ಆ ಪ್ರದೇಶಕ್ಕೆ ಯಾವ ಗಂಡಸರೂ ಬರಕೂಡದೆಂದೂ ಬಂದರೆ ಹೆಂಗಸಾಗಬೇಕೆಂದೂ ಶಾಪವನ್ನು ಕೊಟ್ಟರು. ಈ ಶಾಪದ ವಿಷಯವನ್ನು ತಿಳಿದ ಯಾವ ಗಂಡಸರೂ ಅಂದಿನಿಂದ ಅಲ್ಲಿಗೆ ಹೋಗುತ್ತಿದ್ದಿಲ್ಲ.

ಸುದ್ಯುಮ್ನನಿಗೆ ಈ ವಿಷಯವು ತಿಳಿದಿರಲಿಲ್ಲ. ಅವನು ಅಲ್ಲಿಗೆ ಹೋದನು. ಹೋದಕೂಡಲೇ ಅವನೂ ಅವನ ಪರಿವಾರದಲ್ಲಿ ಸೇರಿದವರೂ ಸ್ತ್ರೀಯರಾದರು. ಪುನಃ ಇಳೆಯಾದನು. ಇಳೆಯು ತನ್ನ ಪರಿವಾರ ಸಹಿತಳಾಗಿ ಸಂಚರಿಸುತ್ತಾ ಬಂದಳು. ಅವಳನ್ನು ಚಂದ್ರನ ಮಗನಾದ ಬುಧನು ನೋಡಿದನು. ಅವಳ ಸೌಂದರ್ಯಾದಿಗುಣಗಳಿಂದ ಪರವಶನಾದನು. ಅವಳನ್ನು ವಿವಾಹ ಮಾಡಿಕೊಂಡನು. ಅವಳಲ್ಲಿ ಅವನಿಗೆ ಪುರೂರವಾ ಎಂಬ ಮಗನು ಹುಟ್ಟಿದನು.

ಪುರೂರವಸ್ಸು ಹುಟ್ಟಿದ ಮೇಲೆ ತಮ್ಮ ಪುರೋಹಿತರಾದ ವಸಿಷ್ಠರನ್ನು ಸ್ಮರಿಸಿದಳು. ಅವರು ಬಂದರು. ಅವಳ ಈ ದುರವಸ್ಥೆಯನ್ನು ನೋಡಿದರು. ಅವಳಿಗೆ ಪುನಃ ಪುರುಷತ್ವವು ಬರಬೇಕೆಂದು ರುದ್ರದೇವರನ್ನು ಪ್ರಾರ್ಥಿಸಿದರು. ರುದ್ರದೇವರು ತಾನು ಕೊಟ್ಟಿರುವ ಶಾಪವೂ ಸುಳ್ಳಾಗಬಾರದು. ವಸಿಷ್ಠರ ಪ್ರಾರ್ಥನೆಯೂ ವ್ಯರ್ಥವಾಗಬಾರದು. ಇದಕ್ಕಾಗಿ ಒಂದು ತಿಂಗಳು ಗಂಡಸಾಗಿಯೂ ಒಂದು ತಿಂಗಳು ಹೆಂಗಸಾಗಿಯೂ ಇರುವಂತೆ

ಇಳೆಯನ್ನು ಅನುಗ್ರಹಿಸಿದರು. ಆ ಇಳೆಯು ತನ್ನ ಜೀವಮಾನದವರೆಗೆ ಹಾಗೆಯೇ ಇದ್ದಳು. ಅವಳು ಸತ್ತ ಮೇಲೆ ತಪಸ್ಸನ್ನು ಮಾಡಿ ಇಕ್ವಾಕು ಮುಂತಾದ ಮಕ್ಕಳನ್ನು ವೈವಸ್ವತಮನುವು ಪಡೆದನು. ಸೂರ್ಯಪುತ್ರನಾದ ವೈವಸ್ವತಮನುವಿಗೆ ಪುತ್ರಿಯಾಗಿ ಹುಟ್ಟಿದ ಇಳಾದೇವಿಯು ಚಂದ್ರನ ಮಗನಾದ ಬುಧನನ್ನು ವಿವಾಹ ಮಾಡಿಕೊಂಡು ಅವನಿಂದ ಪುರೂರವಾ ಎಂಬ ಮಗವನ್ನು ಪಡೆದಿರುವುದರಿಂದ ಚಂದ್ರವಂಶಕ್ಕೂ ಸೂರ್ಯನೇ ಮೂಲ ಪುರುಷನೆನಿಸಿದನು.

## ಯಯಾತಿರಾಜ

ಪುರೂರವಸ್ಸಿಗೆ ಆಯುವೂ ಆಯುವಿಗೆ ನಹುಷ ಯಯಾತಿ ಎಂಬ ಇಬ್ಬರು ಪುತ್ರರು ಹುಟ್ಟಿದರು. ಯಯಾತಿರಾಜನಿಗೆ ಶುಕ್ರಾಚಾರ್ಯರ ಮಗಳಾದ ದೇವಯಾನಿ ಎಂಬ ಪತ್ನಿಯಲ್ಲಿ ಯದು ತುರ್ವಸು ಎಂಬ ಎರಡು ಗಂಡುಮಕ್ಕಳೂ ವೃಷಪರ್ವ ಎಂಬ ದೈತ್ಯರಾಜನ ಮಗಳಾದ ಶರ್ಮಿಷ್ಠಾ ಎಂಬ ಪತ್ನಿಯಲ್ಲಿ ದ್ರುಹ್ಯು ಅನು ಪುರು ಎಂಬ ಮೂವರು ಗಂಡುಮಕ್ಕಳು ಹುಟ್ಟಿದರು. ಯಯಾತಿರಾಜನ ಐದು ಮಕ್ಕಳೂ ಪುರುವಿನಲ್ಲಿ ಅತ್ಯಂತ ಭಕ್ತಿ ಯುಳ್ಳವರಾಗಿದ್ದರು.

## ಯದುವಂಶ

ಯದುರಾಜನ ವಂಶದಲ್ಲಿ ಕೃತವೀರ್ಯ ಎಂಬ ಪ್ರಸಿದ್ಧನಾದ ರಾಜನು ಹುಟ್ಟಿದನು. ಅವನಿಗೆ ಅರ್ಜುನ ಎಂಬ ಚಕ್ರವರ್ತಿಯು ಮಗನಾಗಿ ಹುಟ್ಟಿದನು. ಕೃತವೀರ್ಯನ ಮಗನಾಗಿರುವುದರಿಂದ ಕಾರ್ತವೀರ್ಯಾರ್ಜುನ ಎಂದು ಪ್ರಸಿದ್ಧನಾದನು. ಅವನು ದತ್ತಾತ್ರೇಯರೂಪಿಯಾದ ಶ್ರೀಹರಿಯನ್ನು ಅತ್ಯಂತ ಭಕ್ತಿಯಿಂದ ಆರಾಧಿಸಿದನು. ಅವನ ವಿಶೇಷಾನುಗ್ರಹದಿಂದ ಯೋಗಸಿದ್ಧಿಯನ್ನು ಪಡೆದನು. ಅವನನ್ನು ಸ್ಮರಿಸುವವರ ಮನೆಯಲ್ಲಿ ಕಳುವಾದ ವಸ್ತುಗಳು ಸಿಗಬೇಕೆಂಬ ವರವನ್ನೂ ಸಾವಿರ ಕೈಗಳನ್ನೂ ಅಪಾರ ಸಾಮರ್ಥ್ಯವನ್ನೂ ಹೊಂದಿದನು. ಯದುರಾಜನ ವಂಶದಲ್ಲಿ ಇಂತಹ ವಿಷ್ಣುಭಕ್ತರಾದ ಅಸಂಖ್ಯ ರಾಜರುಗಳು ಹುಟ್ಟಿದರು. ಅವರೆಲ್ಲರೂ ಯಾದವರೆಂದು ಪ್ರಸಿದ್ಧರಾದರು.

## ಪುರುವಂಶ

ಯಯಾತಿರಾಜನ ಕೊನೆಯ ಮಗನಾದ ಪುರುರಾಜನ ವಂಶದಲ್ಲಿ "ಕುರು" ಎಂಬ ಚಕ್ರವರ್ತಿಯು ಹುಟ್ಟಿದನು. ಅವನು ವಿಷ್ಣುವಿಗೆ ಅತ್ಯಂತ ಪ್ರಿಯನಾಗಿದ್ದನು. ಕುರುರಾಜನ ವಂಶದಲ್ಲಿ ಹುಟ್ಟಿದವರೆಲ್ಲರೂ ಕೌರವರೆಂದು ಪ್ರಸಿದ್ಧರಾದರು. ಆ ವಂಶದಲ್ಲಿ "ಪ್ರತೀಪ" ಎಂಬ ರಾಜನು ಹುಟ್ಟಿದನು.

## ಪ್ರತೀಪರಾಜ

ಪ್ರತೀಪರಾಜನಿಗೆ ದೇವಾಪಿ ಬಾಹ್ಲೀಕ ಶಂತನು ಎಂಬ ಮೂರು ಮಕ್ಕಳು ಹುಟ್ಟಿದರು.

# ದೇವಾಪಿ

ಈ ಮೂರುಜನರಲ್ಲಿ ಮೊದಲನೆಯ ಮಗನಾದ ದೇವಾಪಿಯು ಕುಷ್ಠರೋಗದಿಂದ ಪೀಡಿತನಾದನು. ಕುಷ್ಠರೋಗಕ್ಕೆ ಕಾರಣವಾದ ಪಾಪವನ್ನು ಕಳೆದುಕೊಳ್ಳುವುದಕ್ಕಾಗಿ ತಪಸ್ಸನ್ನು ಮಾಡಬೇಕೆಂದು ಕಾಡಿಗೆ ಹೋದನು. ಆದ್ದರಿಂದ ಆಗ ಅವನು ರಾಜನಾಗಲಿಲ್ಲ. ಮುಂದಿನ ಕೃತಯುಗವು ಆರಂಭಿಸುವವರೆಗೆ ತಪಸ್ಸನ್ನು ಮಾಡಿ ಶ್ರೀಹರಿಯನ್ನು ಸಂತೋಷಪಡಿಸುವನು. ಕೃತಯುಗದಲ್ಲಿ ರಾಜಪದವಿಯನ್ನು ಹೊಂದುವನು.

# ಬಾಹ್ಲೀಕರಾಜ

ಬಾಹ್ಲೀಕದೇಶದ ರಾಜನು ತನ್ನ ಮಗಳನ್ನು ಪ್ರತೀಪರಾಜನಿಗೆ ಕೊಟ್ಟು ವಿವಾಹವನ್ನು ಮಾಡಿದನು. ಅವನಿಗೆ ಗಂಡುಮಕ್ಕಳಿರಲಿಲ್ಲ. ಅವಳಲ್ಲಿ ಹುಟ್ಟುವ ಮಗನನ್ನು ತನ್ನ ರಾಜ್ಯವನ್ನು ಪಾಲನೆ ಮಾಡುವುದಕ್ಕಾಗಿ ತನಗೆ ಕೊಡಬೇಕೆಂದು ಕರಾರು ಮಾಡಿದನು. ಹಾಗೆ ಕರಾರುಮಾಡಿಕೊಂಡೇ ಕನ್ಯಾದಾನ ಮಾಡಿದನು. ಇದೇ ಪುತ್ರಿಕಾಪುತ್ರಧರ್ಮವೆನಿಸುತ್ತದೆ. ತನ್ನ ಮಗಳ ಮಗನೇ ತನ್ನ ಮಗನೆಂದು ಏರ್ಪಡಿಸಿಕೊಳ್ಳುವುದೇ ಈ ಧರ್ಮದ ತಿರುಳು. ಅವಳಲ್ಲಿ ಬಾಹ್ಲೀಕರಾಜನು ಹುಟ್ಟಿದನು. ಈ ಬಾಹ್ಲೀಕ ರಾಜನನ್ನು ತನ್ನ ಕರಾರಿನಂತೆ ಬಾಹ್ಲೀಕದೇಶದ ಅರಸನು ತನ್ನ ಮಗನಾಗಿ ಮಾಡಿಕೊಂಡನು. ಆದ್ದರಿಂದ ಅವನು ಬಾಹ್ಲೀಕದೇವಶದ ಅರಸನಾದನು. (ಈ ಬಾಹ್ಲೀಕನೇ ಮುಂದೆ ಶ್ರೀರಾಘವೇಂದ್ರಸ್ವಾಮಿಗಳಾಗಿ ಅವತರಿಸಿದ್ದು.)

ಈ ಬಾಹ್ಲೀಕರಾಜನು ಹಿರಣ್ಯಕಶಿಪುವಿನ ಮಗನೂ ಅತ್ಯಂತ ವಿಷ್ಣುಭಕ್ತನೂ ಆಗಿರುವ ಪ್ರಹ್ಲಾದನ ಅವತಾರವಾಗಿರುವನು. ಅವನಲ್ಲಿ ವಾಯುದೇವನ ವಿಶೇಷಸನ್ನಿಧಾನವಿರುತ್ತದೆ. ಆದ್ದರಿಂದಲೇ ಮಹಾಬಲಿಷ್ಠನಾಗಿರುವನು. ಭೂಭಾರವನ್ನು ಪರಿಹರಿಸುವುದಕ್ಕಾಗಿ ಅವತರಿಸಿರುವ ಶ್ರೀಹರಿಗೆ ಬಲಗೈಯಿಂತಿದ್ದು ಭೂಭಾರವನ್ನು ಪರಿಹರಿಸಿದನು.

# ಸೋಮದತ್ತರಾಜ

ಏಕಾದಶ ರುದ್ರರಲ್ಲಿ ಒಬ್ಬನಾದ ಪತ್ರತಾಪ ಎಂಬ ರುದ್ರನು ಸೋಮದತ್ತ ಎಂಬ ಹೆಸರಿನಿಂದ ಬಾಹ್ಲೀಕರಾಜನಿಗೆ ಮಗನಾಗಿ ಹುಟ್ಟಿದನು. ಅಜೈಕಪಾತ್ ಅಹಿರ್ಬುಧ್ನಿ ವಿರೂಪಾಕ್ಷ ಎಂಬ ಮೂವರು ರುದ್ರರು ಸೋಮದ್ತರಾಜನಿಗೆ ಮಕ್ಕಳಾಗಿ ಹುಟ್ಟಿದರು. ಈ ಮೂವರು ಅತ್ಯಂತ ಪ್ರಸಿದ್ಧರಾದರು. ಇವರೆಲ್ಲರೂ ಭೂಭಾರಪರಿಹಾರಮಾಡಲು ಶ್ರೀಕೃಷ್ಣದೇವನನ್ನು ಸೇವಿಸುವುದಕ್ಕಾಗಿಯೇ ಅವತರಿಸಿದರು.

# ಭೂರಿಶ್ರವರಾಜ

ಸೋಮದತ್ತರಾಜನು ರುದ್ರದೇವರನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಿದನು. ರುದ್ರದೇವರು ಪ್ರತ್ಯಕ್ಷರಾದರು. (೧) ನನ್ನ ಶತ್ರುಗಳನ್ನೆಲ್ಲಾ ಸಂಹರಿಸುವ ಒಬ್ಬ ಮಗನು ನನಗೆ ಹುಟ್ಟಬೇಕು. (೨) ಅವನು ತುಂಬಾ ಬಲಿಷ್ಠನಾಗಿರಬೇಕು. (೩) ಅವನಲ್ಲಿ ನಿಮ್ಮ ಮತ್ತು ಸರ್ವರುದ್ರರ ಆವೇಶವಿರಬೇಕು. (೪) ಯಜ್ಞಗಳನ್ನು

ಯಾವಾಗಲೂ ಮಾಡುವ ಸ್ವಭಾವವುಳ್ಳವನಾಗಿರಬೇಕು ಎಂದು ವರವನ್ನು ಬೇಡಿದನು. ಅವರ ವರದಿಂದ ಭೂರಿಶ್ರವಾ ಎಂಬ ಮಗನು ಹುಟ್ಟಿದನು. ಅವನಲ್ಲಿ ಎಲ್ಲಾ ರುದ್ರರ ಆವೇಶವಿತ್ತು. ಆದ್ದರಿಂದ ಭೂರಿಶ್ರವಾ ಎಂಬ ಮಗನು ತುಂಬಾ ಬಲಿಷ್ಠನಾದನು.

ಪ್ರತೀಪ ರಾಜನ ಮಗನಾದ ಬಾಹ್ಲೀಕರಾಜನ ಸಂತತಿಯನ್ನು ಸಂಕ್ಷೇಪವಾಗಿ ವರ್ಣಿಸಿದೆವು. ಈಗ ಪ್ರತೀಪರಾಜನ ಮಗನಾದ ಶಂತನುವಿನ ವಂಶವನ್ನು ಹೇಳುತ್ತೇವೆ.

## ಶಂತನು ರಾಜ

ಹಿಂದೆ ಹೇಳಿದಂತೆ ದೇವಾಪಿ ಬಾಹ್ಲೀಕರಾಜ ಎಂಬ ಪ್ರತೀಪರಾಜನ ಮೊದಲನೆಯ ಎರಡು ಮಕ್ಕಳು ಅವನ ರಾಜ್ಯವನ್ನು ಪಾಲಿಸಲಿಲ್ಲ. ಶಂತನು ಎಂಬ ಮೂರನೆಯ ಮಗನೇ ರಾಜ್ಯವನ್ನು ಪಾಲಿಸಿದನು. ಅವನು ವರುಣದೇವನ ಅವತಾರವಾಗಿಯೂ ಇದ್ದನು. ಆದ್ದರಿಂದ ವಯಸ್ಸಿನಲ್ಲಿ ಚಿಕ್ಕವನಾಗಿದ್ದರೂ ಗುಣಗಳಿಂದ ಶ್ರೇಷ್ಠನೆನಿಸಿದನು. ಅವನ ವಿಷಯವನ್ನು ಈಗ ವಿವರವಾಗಿ ಹೇಳುವೆವು.

ಪೂರ್ವಸಮುದ್ರದ ಪಶ್ಚಿಮತೀರದಲ್ಲಿ ಗಂಗಾಸಮುದ್ರಸಂಗಮಪ್ರದೇಶದಲ್ಲಿ ಬ್ರಹ್ಮದೇವರು ಒಮ್ಮೆ ಸಂಚರಿಸುತ್ತಿದ್ದರು. (೧) ಆ ದಿನ ಪೂರ್ಣಿಮಾದಿನವಾಗಿತ್ತು. (೨) ಆಕಾಶದಲ್ಲಿ ಮೇಘಗಳು ವ್ಯಾಪ್ತವಾಗಿದ್ದು ಮಳೆಯ ಲಕ್ಷಣವೂ ಕಾಣಿಸಿತು. (೩) ಬಿರುಗಾಳಿಯೂ ಬಂತು. ಈ ಮೂರು ಕಾರಣಗಳಿಂದ ಸಮುದ್ರದಲ್ಲಿ ದೊಡ್ಡ ದೊಡ್ಡ ಅಲೆಗಳು ಮೇಲೆ ಮೇಲೆ ಬರಲು ಆರಂಭಿಸಿದವು. ಅಲೆಗಳಿಂದ ಹೊರಟ ನೀರಿನ ಬಿಂದುಗಳು ಬ್ರಹ್ಮದೇವರ ದೇಹದಲ್ಲಿ ಬಿದ್ದವು. ಆಗ ಬ್ರಹ್ಮದೇವರು ಕುಪಿತರಾದರು. ಸಮುದ್ರರಾಜನನ್ನು ನೋಡಿ "ನಿಲ್ಲು ಶಾಂತನಾಗು" ಎಂದು ಹೇಳಿದರು. ಅದನ್ನು ಕೇಳಿದ ವರುಣದೇವನು ಶಾಂತನಾದನು. ಕೋಪದಿಂದ ಬ್ರಹ್ಮದೇವರು ಶಪಿಸಿದರು.

"ವರುಣಾ, ನೀನು ನನ್ನನ್ನು ಮನುಷ್ಯರು ಅಲಕ್ಷ್ಯಮಾಡಿದಂತೆ ಅಲಕ್ಷ್ಯಮಾಡಿದಿ. ನನ್ನ ಮೇಲೆ ನೀರಿನ ಅಭಿಷೇಕವನ್ನು ಮಾಡಿದಿ. ಅದಕ್ಕಾಗಿ ನೀನು ಎರಡು ಜನ್ಮಗಳನ್ನು ಮನುಷ್ಯರಲ್ಲಿ ಸ್ವೀಕರಿಸಬೇಕು. ನೀನು ನನ್ನ ದೇಹದಲ್ಲಿ ನೀರಿನಿಂದ ಅಭಿಷೇಕ ಮಾಡಿರುವುದರಿಂದ ಮೊದಲನೆಯ ಜನ್ಮದಲ್ಲಿ "ಮಹಾಭಿಷಕ್" ಎಂದು ಪ್ರಸಿದ್ಧನಾಗುವಿ.

"ನೀನು ನನ್ನ ಮೇಲೆ ನೀರಿನಿಂದ ಅಭಿಷೇಕ ಮಾಡಿದ ಕೂಡಲೇ ಶಾಂತನಾಗು ಎಂದು ಹೇಳಿದೆನು. ಕೂಡಲೇ ಶಾಂತನಾಗಿ ಚಿಕ್ಕರೂಪವನ್ನು ತಾಳಿದಿ. ಆದ್ದರಿಂದ ಶಾಂತತನು = ಶಾಂತನು =ಶಂತನು ಅಂದರೆ ಶಾಂತವಾದ ಚಿಕ್ಕರೂಪವನ್ನು ಧರಿಸಿದವನು ಎಂಬ ಹೆಸರು ನಿನ್ನ ಎರಡನೆಯ ಜನ್ಮದಲ್ಲಿ ನಿನಗೆ ಏರ್ಪಡುತ್ತದೆ."

ಶಾಂತವಾದ ಚಿಕ್ಕರೂಪವನ್ನು ನಿನ್ನ ಮೂಲರೂಪದಿಂದಲೇ ನೀನು ಸ್ವೀಕರಿಸಿರುವಿ. ಅವತಾರರೂಪಗಳಿಂದಲ್ಲ. ಆದ್ದರಿಂದ ನಿನ್ನ ಮೂಲರೂಪವನ್ನೇ ಶಂತನು ಎಂದು ಕರೆಯಬೇಕು. ಮೂಲರೂಪವನ್ನು ಹಾಗೆ ಕರೆಯದೆ ಅವತಾರರೂಪವನ್ನೇ ಕರೆಯುವುದಾದರೂ "ಮಹಾಭಿಷಕ್" ಎಂಬ ಮೊದಲನೆಯ ಅವತಾರವನ್ನೂ ಸಹ ಶಂತನು ಎಂಬ ಹೆಸರಿನಿಂದ ಕರೆಯಬೇಕು. ಎರಡನೆಯ ಅವತಾರವನ್ನು ಮಾತ್ರ ಕರೆಯುವಂತಿಲ್ಲ.

ಆದರೆ ಅದಕ್ಕೆ ಇನ್ನೊಂದು ಕಾರಣವೂ ಇದೆ. ನನ್ನ ಮೇಲೆ ನೀರಿನಿಂದ ಅಭಿಷೇಕವನ್ನು ನೀನು ಮಾಡಿದಿ. ಈ ಅಪರಾಧವು ನಿನ್ನ ಎರಡನೆಯ ಜನ್ಮದಲ್ಲೇ ಮುಗಿಯುತ್ತದೆ. ಆದ್ದರಿಂದ ಶಾಂತತನು=ಶಾಂತನು=ಶಂತನು. ಅಂದರೆ ಅಪರಾಧ ಪರಿಹಾರಕ್ಕೆ ಕಾರಣವಾಗಿರುವ ದೇಹವು ಎರಡನೆಯ ಜನ್ಮದ ದೇಹವೇ ಆಗುತ್ತದೆ. ಮೂಲರೂಪದ ದೇಹವೂ "ಮಹಾಭಿಷಕ್" ಎಂಬ ದೇಹವೂ ಆಗುವುದಿಲ್ಲ. ಈ ಕಾರಣದಿಂದ ಎರಡನೆಯ ಜನ್ಮದಲ್ಲಿಯೇ "ಶಂತನು" ಎಂದು ಪ್ರಸಿದ್ಧನಾಗುವಿ. ನೀನು ಎರಡನೆಯ ಜನ್ಮವನ್ನು ಹೊಂದಿದಾಗ ಈ ಗಂಗೆಯು ದೇವತಾಶರೀರದಿಂದಲೇ ನಿನ್ನ ಪತ್ನಿಯಾಗುವಳು. ಇದು ಬ್ರಹ್ಮದೇವರ ಶಾಪ.

ವರುಣನು ಬ್ರಹ್ಮದೇವರ ಶಾಪದಿಂದ "ಮಹಾಭಿಷಕ್" ಎಂಬ ರಾಜನಾಗಿ ಹುಟ್ಟಿದನು. ನಾರಾಯಣನಲ್ಲಿ ಅತ್ಯಂತ ಭಕ್ತಿಯನ್ನು ಮಾಡಿದನು. ಬಹುಕಾಲದ ವರೆಗೆ ಸುಖವಾಗಿ ಬಾಳಿದನು. ಶರೀರವನ್ನು ಬಿಟ್ಟನು. ಬ್ರಹ್ಮಲೋಕಕ್ಕೆ ಹೋದನು. ದೇವತೆಗಳ ಮಧ್ಯದಲ್ಲಿ ಸುಖವಾಗಿ ವಾಸಿಸುತ್ತಿದ್ದನು. ಆಗ ಅಲ್ಲಿಗೆ ಅವನ ಪತ್ನಿಯಾದ ಗಂಗೆಯು ಬಂದಳು. ಅವಳ ಸೀರೆಯು ಆಕಸ್ಮಿಕವಾಗಿ ಜಾರಿ ಕೆಳಗೆ ಬಿತ್ತು. ಆಗ ದೇವತೆಗಳೆಲ್ಲರೂ ಬೆತ್ತಲೆಯಾದ ಸ್ತ್ರೀಯನ್ನು ನೋಡಬಾರದು ಎಂಬ ಶಾಸ್ತ್ರಮರ್ಯಾದೆಯನ್ನು ಅನುಸರಿಸಿ ತಲೆಯನ್ನು ತಗ್ಗಿಸಿಕೊಂಡರು. ಮಹಾಭಿಷಕ್ ಎಂಬ ರಾಜನು ಮಾತ್ರ ತನ್ನ ಪತ್ನಿಯೆಂಬ ಭಾವನೆಯಿಂದ ಬೆತ್ತಲೆಯಾದ ಗಂಗೆಯನ್ನು ಆಸೆಯಿಂದ ನೋಡಿದನು. ಇದನ್ನು ಬ್ರಹ್ಮದೇವರು ನೋಡಿದರು.

"ಎಲೋ ವರುಣನೇ ನನ್ನ ಮೇಲೆ ನೀರನ್ನು ಚೆಲ್ಲಿದ್ದಕ್ಕೋಸ್ಕರ ನಿನಗೆ ಹಿಂದೆ ಎರಡು ಜನ್ಮಗಳಲ್ಲಿ ಭೂಮಿಯಲ್ಲಿ ಹುಟ್ಟುವಂತೆ ಶಾಪವನ್ನು ಕೊಟ್ಟಿದ್ದೆನು. ಅದರಂತೆ ನೀನು ಒಂದು ಜನ್ಮದಲ್ಲಿ ಭೂಮಿಯಲ್ಲಿ ಹುಟ್ಟಿ ಮುಗಿಯಿತು. ನೀನು ಮಾಡಿದ್ದು ಒಂದೇ ಅಪರಾಧ. ಆ ಅಪರಾಧಕ್ಕೆ ನೀನು ಮಾಡಿರುವ ಈ ತಪ್ಪನ್ನು ನಾನು ಹಿಂದೆಯೇ ತಿಳಿದಿರುವೆನು. ಈ ತಪ್ಪಿಗಾಗಿಯೇ ನಿನಗೆ ಎರಡನೆಯ ಜನ್ಮವು ಬರುವಂತೆ ನಿನ್ನನ್ನು ಆಗಲೇ ಶಪಿಸಿರುವೆನು. ಮೊದಲನೆಯ ಅಪರಾಧಕ್ಕೆ ಎರಡು ಜನ್ಮಗಳು ಬರುವಂತೆ ಶಪಿಸಿರುವುದಾಗಿ ಹೇಳಿದೆನು.

"ಈ ಗಂಗೆಯು ನಿನ್ನ ಪತ್ನಿಯಾಗಿರುವುದು ನಿಜ. ಅವಳು ದಿಂಗಬರಳಾಗಿರುವಾಗ ಅವಳನ್ನು ನೀನು ನೋಡುವುದು ತಪ್ಪಾಗಲಾರದು. ಆದರೆ ನನ್ನ ಮುಂದೆಯೂ ಎಲ್ಲಾ ದೇವತೆಗಳ ಮುಂದೆಯೂ ಲಜ್ಜೆಯಿಲ್ಲದೆ ಕಾಮಪೀಡಿತನಾಗಿ ನೀನು ನೋಡಿರುವಿ. ಇದು ತಪ್ಪು. ಹಿಂದೆ ನಾನು ಕೊಟ್ಟಿರುವ ಶಾಪದಿಂದ ನೀನು ಎರಡನೆಯ ಜನ್ಮವನ್ನು ಈಗಲೇ ಪಡೆಯಬೇಕೆಂಬ ನಿರ್ಬಂಧವಿರಲಿಲ್ಲ. ಯಾವಾಗ ಬೇಕಾದರೂ ಪಡೆಯಬಹುದಾಗಿತ್ತು. ಈಗ ನೀನು ಮಾಡಿರುವ ಎರಡನೆಯ ತಪ್ಪಿಗೋಸ್ಕರ ಈಗಲೇ ಎರಡನೆಯ ಜನ್ಮವನ್ನು ಪಡೆಯಬೇಕೆಂದು ಶಪಿಸುವೆನು." ಇದು ಬ್ರಹ್ಮದೇವರ ಎರಡನೆಯ ಶಾಪ.

ಈ ಶಾಪವನ್ನು ಕೊಟ್ಟಕೂಡಲೇ "ಮಹಾಭಿಷಕ್" ಎಂಬ ರಾಜನು ಶಂತನು ಎಂಬ ಹೆಸರಿನಿಂದ ಪ್ರತೀಪರಾಜನಿಗೆ ಮಗನಾಗಿ ಹುಟ್ಟಿದನು. ದೇವಗಂಗೆಯು ಮನುಷ್ಯಳಾಗಿ ಹುಟ್ಟಲಿಲ್ಲ. ದೇವತಾ ಸ್ವರೂಪದಿಂದಲೇ ಅವನ ಪತ್ನಿಯಾದಳು. ಅವಳೊಡನೆ ಅನೇಕ ವರ್ಷಗಳವರೆಗೆ ಸುಖವಾಗಿ ವಾಸಿಸಿದನು.

# ಭೀಷ್ಮಾಚಾರ್ಯರು

ಅಷ್ಟವಸುಗಳಲ್ಲಿ "ದ್ಯು" ಎಂಬ ವಸುವು ಕೊನೆಯವನು. ಅವನಿಗೆ ವರಾಂಗಿ ಎಂಬುವವಳು ಪತ್ನಿ. ಅವಳಿಗೆ ಸುವಿಂದ ಎಂಬ ರಾಜನ ಪತ್ನಿಯಾದ ಮನುಷ್ಯಳಾದ ವರಾಂಗಿ ಎಂಬುವವಳಲ್ಲಿ ತುಂಬಾ ಸ್ನೇಹ. ಮನುಷ್ಯಳಾದ ವರಾಂಗಿಗೆ ತನ್ನಂತೆಯೇ ವಾರ್ಧಕ್ಯಾವಸ್ಥೆಯೂ ಮರಣವೂ ಏರ್ಪಡಕೂಡದೆಂದು ದೇವತೆಯಾದ ವರಾಂಗಿಯು ಅಪೇಕ್ಷಿಸಿದಳು. ನಂದಿನಿಯೆಂಬ ವಸಿಷ್ಠರ ಮನೆಯಲ್ಲಿರುವ ಗೋವಿನ ಅಮೃತಮಯವಾಗಿರುವ ಹಾಲನ್ನು ಕುಡಿದವರಿಗೆ ವಾರ್ಧಕ್ಯಾವಸ್ಥೆಯೂ ಮರಣವೂ ಏರ್ಪಡುವುದಿಲ್ಲವೆಂದು ತಿಳಿದಳು. ಆ ಗೋವನ್ನು ತಂದುಕೊಡುವಂತೆ ತನ್ನ ಪತಿಯಾದ 'ದ್ಯು' ಎಂಬ ವಸುವಿನಲ್ಲಿ ಪ್ರಾರ್ಥಿಸಿದಳು. ಅವನು ವಸಿಷ್ಠರ ಮನೆಗೆ ಹೋದನು. ಅವನಲ್ಲಿರುವ ಸಹೋದರ ಪ್ರೇಮದಿಂದ ಅವನ ಅಣ್ಣಂದಿರಾದ ಏಳು ವಸುಗಳೂ ಅಲ್ಲಿಗೆ ಹೋದರು. ಅವರೆಲ್ಲರ ಸಹಾಯದಿಂದ ನಂದಿನೀಧೇನುವನ್ನು "ದ್ಯು' ಎಂಬ ವಸುವು ಕಟ್ಟಿಹಾಕಿದನು.

ಈ ಅಷ್ಟವಸುಗಳ ಮಧ್ಯದಲ್ಲಿ ಅಗ್ನಿದೇವನು ಒಬ್ಬನಾಗಿರುವನು. ಅಗ್ನಿದೇವನಿಗಿಂತ ವಸಿಷ್ಠರು ಕೆಳಗಣದರ್ಜೆಗೆ ಸೇರಿದವರು. ಆದ್ದರಿಂದ ಅಗ್ನಿದೇವರನ್ನು ಶಪಿಸಲು ವಸಿಷ್ಠರಿಂದ ಸಾಧ್ಯವಾಗುವುದಿಲ್ಲ. ಅದಕ್ಕಾಗಿ ಅಗ್ನಿದೇವರನ್ನೂ ಇತರ ವಸುಗಳನ್ನೂ ಶಪಿಸುವುದಕ್ಕಾಗಿ ಬ್ರಹ್ಮದೇವರು ವಸಿಷ್ಠರಲ್ಲಿ ಪ್ರವೇಶಿಸಿದರು. ಎಲ್ಲರನ್ನೂ ಹೀಗೆ ಶಪಿಸಿದರು.

" ಮನುಷ್ಯರಿಗೆ ಮರಣವೂ ವಾರ್ಧಕ್ಯಾವಸ್ಥೆಯೂ ಜನ್ಮಸಿದ್ಧವಾದುದು. ಅದನ್ನು ಪರಿಹರಿಸಬೇಕೆಂದು "ದ್ಯು" ಎಂಬ ವಸುವಿನ ಪತ್ನಿಯು ಅಪೇಕ್ಷಿಸಿದಳು. ಅವಳ ಮಾತುಗಳಿಗೆ ವಶನಾಗಿ "ದ್ಯು" ಎಂಬ ವಸುವು ವಸಿಷ್ಠರ ನಂದಿನೀಧೇನುವನ್ನು ಅಪಹರಿಸುವುದಕ್ಕಾಗಿ ಹೊರಟನು. ಅವನಿಗಾಗಿ ಉಳಿದ ವಸುಗಳೂ ಹೊರಟರು. ವಸಿಷ್ಠರ ನಂದಿನೀಧೇನುವನ್ನು ಅಪಹರಿಸಿದರು. ಇದು ಪ್ರಬಲವಾದ ಅಧರ್ಮಕಾರ್ಯವಾಗಿದೆ. ಈ ಅಧರ್ಮಕಾರ್ಯವನ್ನು ಮಾಡಿರುವ ನೀವೆಲ್ಲರೂ ಮನುಷ್ಯರಾಗಿ ಹುಟ್ಟಿರಿ."

" ನಿಮ್ಮಲ್ಲಿ ಏಳು ಜನರು ಸ್ವತಃ ಈ ಕಾರ್ಯವನ್ನು ಮಾಡಲಿಲ್ಲ. ತಮ್ಮನ ಮೇಲಿನ ಪ್ರೀತಿಯಿಂದ ಈ ಪಾಪ ಕಾರ್ಯವನ್ನು ಮಾಡಿದಿರಿ. ಆದ್ದರಿಂದ ಏಳು ವಸುಗಳು ಮಾಡಿರುವ ಪಾಪವು ಅಲ್ಪವಾಗಿದೆ. ಈ ಕಾರಣದಿಂದ ಅವರೆಲ್ಲರೂ ಹುಟ್ಟಿದಕೂಡಲೇ ಸಾಯಲಿ. ಸತ್ತಕೂಡಲೇ ತಮ್ಮ ಲೋಕಗಳಿಗೆ ಹಿಂದಿರುಗಿ ಬರಲಿ." ದೇವತೆಗಳಿಗೆ ಭೂಲೋಕದಲ್ಲಿ ವಾಸಿಸುವುದೇ ನರಕವೆನಿಸುತ್ತದೆ. ಎಷ್ಟು ಸುಖದಿಂದ ವಾಸಿಸಿದರೂ ಸುಖವೆನಿಸಲಾರದು. ಹೀಗೆ ಅವರೆಲ್ಲರೂ ಮಾಡಿರುವ ಪಾಪವು ಅಲ್ಪವಾಗಿರುವುದರಿಂದ ಅವರೆಲ್ಲರಿಗೂ ಭೂಲೋಕದಲ್ಲಿ ವಾಸವು ಕಡಿಮೆಯಾಗುವಂತೆ ಅನುಗ್ರಹಿಸಿರುವೆನು."

"ದ್ಯು" ಎಂಬ ವಸುವು ಹೆಂಡತಿಯ ಮಾತನ್ನು ಕೇಳಿದನು. ಅವಳ ಮೇಲಿನ ಮೋಹದಿಂದ ಈ ಅಧರ್ಮಕಾರ್ಯವನ್ನು ಮಾಡುವುದಕ್ಕಾಗಿ ಹೊರಟನು. ಉಳಿದ ಏಳು ವಸುಗಳಿಂದ ಅಧರ್ಮಕಾರ್ಯವನ್ನು ಮಾಡಿಸಿದನು. ಆದ್ದರಿಂದ ಇವನ ಪಾಪವು ಅಧಿಕವಾದುದು. ಈ ಕಾರಣದಿಂದ ಅವರೆಲ್ಲರಿಗೂ ಕೊಡುವ ದಂಡನೆಗಿಂತ ಅಧಿಕವಾದ ದಂಡನೆಯನ್ನು ಇವನಿಗೆ ಕೊಡುವೆನು."

"(೧) ಇವನು ಎಂಟು ಜನರ ಆಯುಸ್ಸನ್ನು ಪಡೆದು ಬಹುಕಾಲದ ವರೆಗೆ ಭೂಮಿಯಲ್ಲಿ ವಾಸಿಸಲಿ. (೨) ವರಾಂಗಿಯಲ್ಲಿ ವಿಶೇಷಮೋಹದಿಂದ ಇಷ್ಟು ಅಧರ್ಮಕಾರ್ಯಗಳನ್ನು ಮಾಡಿದ ಇವನಿಗೂ ವರಾಂಗಿಗೂ ಆ ಜನ್ಮದಲ್ಲಿ ಅತ್ಯಂತ ವಿರೋಧವು ಏರ್ಪಡಲಿ (೩) ಇವನಿಗೆ ಆ ಜನ್ಮದಲ್ಲಿ ತನ್ನ ಪತ್ನಿಯಾದ ವರಾಂಗಿಯ ಸಂಬಂಧವು ಏರ್ಪಡದಿರಲಿ. (೪) ಇವನು ಕೊನೆಯ ವರೆಗೂ ಬ್ರಹ್ಮಚಾರಿಯಾಗಿಯೇ ಇರಲಿ (೫) ಸಾಯುವ ಕಾಲದಲ್ಲಿ ಇವನು ಶರಪಂಜರದಲ್ಲಿ ಮಲಗಲಿ, (೬) ಶರಪಂಜರದಲ್ಲಿ ಮಲಗಿರುವಾಗ ಶರಗಳಮೊನೆ ಚುಚ್ಚಲ್ಪಡುತ್ತಾ ಗರ್ಭವಾಸದಲ್ಲಿ ಎಲ್ಲರಿಗೂ ಏರ್ಪಡುವ ದುಃಖಕ್ಕಿಂತ ಎಂಟು ಪಾಲು ಅಧಿಕವಾದ ದುಃಖವನ್ನು ಅನುಭವಿಸಲಿ. (೭) ಶರಪಂಜರದಲ್ಲಿರುವ ಬಾಣಗಳಿಂದ ಚುಚ್ಚಲ್ಪಡುವಿಕೆ ಶಸ್ತ್ರಾಸ್ತ್ರಗಳ ಹೊಡೆತದಿಂದ ಏರ್ಪಟ್ಟ ಹುಣ್ಣುಗಳು ಇವೆರಡರಿಂದ ಸಾಯುವ ಕಾಲದಲ್ಲಿ ಎಲ್ಲರಿಗೂ ಏರ್ಪಡುವ ದುಃಖಕ್ಕಿಂತ ಎಂಟರಷ್ಟು ಅಧಿಕವಾದ ದುಃಖವನ್ನು ಅನುಭವಿಸಲಿ. ಇದೇ ಇವನು ಮಾಡಿರುವ ಮಹಾಪಾಪಕಾರ್ಯಕ್ಕೆ ಇವನಿಗೆ ಕೊಡಬೇಕಾದ ದಂಡನೆಯಾಗಿದೆ.

"ಈ ವರಾಂಗಿಯು ತನ್ನ ಗಂಡನನ್ನು ದುರ್ಮಾರ್ಗದಲ್ಲಿ ಪ್ರವೃತ್ತನಾಗುವಂತೆ ಮಾಡಿದಳು ಆದ್ದರಿಂದ ಇವಳ ಪಾಪವು "ದ್ಯು" ಎಂಬ ವಸುವಿನ ಪಾಪಕ್ಕಿಂತಲೂ ಪ್ರಬಲವಾದುದು. ಆದ್ದರಿಂದಲೇ ಇವಳಿಗೆ ಇವಳ ಗಂಡನಿಗೆ ಕೊಡುವ ದಂಡನೆಗಿಂತ ಅಧಿಕವಾದ ದಂಡನೆಯನ್ನು ಕೊಡಬೇಕು."

"(೧) ಪತಿಯನ್ನು ವಶಪಡಿಸಿಕೊಂಡಿರುವ ಇವಳು ಭೂಮಿಯಲ್ಲಿ ಹುಟ್ಟಿದಾಗ ಅಂಬಾ ಎಂಬ ಹೆಸರಿನಿಂದ ಹುಟ್ಟಲಿ. ಆಗ ಇವಳ ಪತಿಯ ಸಂಪರ್ಕವು ಇವಳಿಗೆ ಏರ್ಪಡದಿರಲಿ, (೨) ಬ್ರಹ್ಮಚಾರಿಯಾಗಿಯೇ ಇರಲಿ. (೩) ಅಂಬಾ ಎಂಬ ಜನ್ಮವು ಮುಗಿದ ಮೇಲೆ ಪುನಃ ಭೂಮಿಯಲ್ಲಿ ಹುಟ್ಟಲಿ. (೪) ಎರಡನೆಯ ಜನ್ಮದಲ್ಲಿ ಹೆಂಗಸಾಗಿ ಹುಟ್ಟಿ ಪುರುಷತ್ವವನ್ನು ಪಡೆಯಲಿ. (೫) ತನ್ನ ಗಂಡನ ಮರಣಕ್ಕೆ ತಾನೇ ಕಾರಣಳಾಗಲಿ. ಇದು ಇವಳಿಗೆ ಕೊಡುವ ದಂಡನೆಯಾಗುತ್ತದೆ ಇದು ಬ್ರಹ್ಮದೇವರ ಶಾಪ.

ಈ ಶಾಪವನ್ನು ಎಲ್ಲರೂ ಕೇಳಿದರು. ಈ ಶಾಪವನ್ನು ಕೊಟ್ಟವರು ವಸಿಷ್ಠರಲ್ಲ. ವಸಿಷ್ಠರಲ್ಲಿ ಸನ್ನಿಹಿತರಾಗಿರುವ ಬ್ರಹ್ಮದೇವರು ಎಂದು ಜ್ಞಾನದೃಷ್ಟಿಯಿಂದ ತಿಳಿದರು. ನಂದಿನೀಧೇನುವನ್ನು ಬಿಟ್ಟುಬಿಟ್ಟರು. ಅವರ ಕಾಲಿಗೆ ಅಡ್ಡಬಿದ್ದರು. ಎಂಟು ಜನರೂ ಒಟ್ಟುಗೂಡಿ ಬ್ರಹ್ಮದೇವರಲ್ಲಿ ಪ್ರಾರ್ಥಿಸಿದರು.

" ಓ ಬ್ರಹ್ಮದೇವ! ನಿಮ್ಮ ಶಾಪದಂತೆ ನಾವು ಭೂಮಿಯಲ್ಲಿ ಹುಟ್ಟುವೆವು. ಆದರೆ ನಾವು ಹುಟ್ಟುವಾಗ ಮನುಷ್ಯ ಸ್ತ್ರೀಯ ಗರ್ಭದಲ್ಲಿ ವಾಸವು ನಮಗೆ ಏರ್ಪಡಬಾರದು. ದೇವಸ್ತ್ರೀಯ ಗರ್ಭದಲ್ಲಿಯೇ ವಾಸಿಸಿ ಹುಟ್ಟಬೇಕು." ಎಂಬ ವರವನ್ನು ಬೇಡಿದರು.

ಪುನಃ "ದ್ಯು" ಎಂಬ ವಸುವನ್ನು ಬಿಟ್ಟು ಉಳಿದ ಏಳು ವಸುಗಳು ಪ್ರಾರ್ಥಿಸಿದರು. "ಓ ಬ್ರಹ್ಮದೇವ! "ದ್ಯು" ಎಂಬ ವಸುವಿಗೆ ನಮ್ಮೆಲ್ಲರ ಆಯುಸ್ಸನ್ನೂ ಕೊಟ್ಟಿರುವಿರಿ. ಆ ಜನ್ಮದಲ್ಲಿ ಇವನಿಗೆ ವಿಶೇಷಾನುಗ್ರಹವನ್ನು ಮಾಡಬೇಕು. (೧) ಇವನು ಎಲ್ಲವನ್ನೂ ತಿಳಿದವನಾಗಿರಲಿ (೨) ತುಂಬಾ ಕೀರ್ತಿಯನ್ನು ಪಡೆಯಲಿ (೩) ಬ್ರಹ್ಮಾಸ್ತ್ರ ಮುಂತಾದ ಎಲ್ಲಾ ಅಸ್ತ್ರಗಳನ್ನೂ ತಿಳಿದವನಾಗಿರಲಿ. (೪) ಇವನಲ್ಲಿ ನಿಮ್ಮ ವಿಶೇಷಸನ್ನಿಧಾನವಿರಲಿ. (೫) ಇವನು ನಮ್ಮೆಲ್ಲರ ಆಯುಸ್ಸನ್ನು ಪಡೆದಂತೆ ನಮ್ಮೆಲ್ಲರ ಬಲವನ್ನೂ ಪಡೆಯಲಿ." ಇದು ಏಳು ವಸುಗಳ ಪ್ರಾರ್ಥನೆ. ಈ ಪ್ರಾರ್ಥನೆ ಯನ್ನು ಬ್ರಹ್ಮದೇವರು ಅಂಗೀಕರಿಸಿದರು.

## ಅಷ್ಟವಸುಗಳು ಗಂಗೆಯಲ್ಲಿ ತಿಳಿಸಿದುದು

ಅವರೆಲ್ಲರೂ ಗಂಗಾದೇವಿಯಲ್ಲಿಗೆ ಬಂದರು. "ಓ ದೇವಿಯೇ, ಬ್ರಹ್ಮದೇವರ ಶಾಪದಿಂದ ನಾವು ಎಂಟು ಜನರೂ ಭೂಮಿಯಲ್ಲಿ ಹುಟ್ಟಬೇಕಾಗಿದೆ. ಅವರ ವರದಂತೆ ಮನುಷ್ಯಸ್ತ್ರೀಯರ ಗರ್ಭವಾಸವು ನಮಗಿಲ್ಲ. ದೇವಸ್ತ್ರೀಯ ಗರ್ಭವಾಸವೇ ಏರ್ಪಡಬೇಕು. ನಿನಗೂ ದೇವತಾಶರೀರದಿಂದಲೇ ಶಂತನುರಾಜನ ಶರೀರಸಂಪರ್ಕವು ಏರ್ಪಡಬೇಕೆಂದು ಬ್ರಹ್ಮದೇವರ ಶಾಪವಿದೆ. ಆದ್ದರಿಂದ ದೇವತಾಶರೀರದಿಂದ ಯುಕ್ತಳಾಗಿರುವ ನಿನ್ನ ಶರೀರದಲ್ಲಿ ಶಂತನುರಾಜನಿಂದ ನಾವು ಹುಟ್ಟುವೆವು. ನಾವು ಹುಟ್ಟಿದ ಕೂಡಲೇ ನಮ್ಮನ್ನು ಕೊಂದುಬಿಡು. ನಾವು ಭೂಲೋಕದಲ್ಲಿ ಹೆಚ್ಚು ಕಾಲ ವಾಸಿಸಲಾರೆವು. ಬ್ರಹ್ಮದೇವರೂ ಸಹ ನಾವು ಹುಟ್ಟಿದ ಕೂಡಲೇ ಸಾಯುವಂತೆ ಅನುಗ್ರಹಿಸಿರುವರು" ಎಂದು ಬೇಡಿದರು.

## ಅಷ್ಟವಸುಗಳಲ್ಲಿ ಗಂಗೆಯು ವರವನ್ನು ಬೇಡಿದುದು

ಗಂಗೆಯು ಅವರನ್ನು ನೋಡಿದಳು. ಅವರನ್ನು ಗರ್ಭದಲ್ಲಿ ಧರಿಸುವ ವಿಷಯವು ತನಗೆ ಸಮ್ಮತವಾಯಿತು. ಆದರೆ ಹುಟ್ಟಿದ ಕೂಡಲೇ ಮಕ್ಕಳನ್ನು ಕೊಲ್ಲುವ ವಿಷಯವನ್ನು ಕೇಳಿದ ಕೂಡಲೇ ಶಿಶುಹತ್ಯಾದೋಷವು ಬರುವುದಾಗಿ ಅಂಜಿ ಅವರಲ್ಲಿ ವರವನ್ನು ಬೇಡಿದಳು (೧) "ನೀವೆಲ್ಲರೂ ಹೇಳಿದಂತೆ ನಿಮ್ಮಲ್ಲಿ ಏಳು ಜನರನ್ನು ಹುಟ್ಟಿದ ಕೂಡಲೇ ಕೊಂದು ಬಿಡುವೆನು. ಈಗ ನೀವು ಹುಟ್ಟಿದ ಕೂಡಲೇ ಕೊಂದುಬಿಡಬೇಕೆಂದು ಬೇಡುತ್ತಿರುವಿರಿ. ಆದರೆ ಆ ಜನ್ಮವು ಬಂದಾಗ ನಿಮಗೆ ಆ ದೇಹವೇ ಪ್ರಿಯವಾಗಿರುತ್ತದೆ. ಆಗ ನಿಮ್ಮನ್ನು ಕೊಂದರೆ ನನ್ನಲ್ಲಿ ನಿಮಗೆ ಅಪ್ರೀತಿಯು ಏರ್ಪಡುವ ಸಂಭವವಿದೆ. ಆ ಅಪ್ರೀತಿಯು ಏರ್ಪಡಬಾರದು. (೨) ಶಿಶುಹತ್ಯೆಯಿಂದ ಪಾಪವು ನನಗೆ ಬರಬಾರದು. (೩) ನಿಮ್ಮ ಮಧ್ಯದಲ್ಲಿ ಒಬ್ಬನನ್ನು ನಾನು ಕೊಲ್ಲಲಾರೆನು. ಅವನು ದೀರ್ಘಾಯುಷ್ಯವಂತನಾಗಬೇಕು." ಎಂದು ಮೂರು ವರಗಳನ್ನು ಬೇಡಿದಳು. ಅವರು ಆ ವರಗಳನ್ನು ಕೊಟ್ಟರು.

## ಗಂಗಾದೇವಿಯ ಆಲೋಚನೆ

ಗಂಗೆಯು ದೇವತಾಶರೀರದಿಂದಲೇ ಶಂತನುರಾಜನ ಪತ್ನಿಯಾಗಬೇಕೆಂದು ಸಂಕಲ್ಪಿಸಿದಳು. ತನಗೆ ಹುಟ್ಟುವ ಏಳು ಮಕ್ಕಳನ್ನು ಕೊಲ್ಲಬೇಕೆಂದೂ ಸಂಕಲ್ಪಿಸಿದಳು. ಆದರೆ ಹುಟ್ಟುವ ಮಕ್ಕಳನ್ನೆಲ್ಲಾ ಕೊಲ್ಲುತ್ತಿರುವುದನ್ನು ನೋಡಿ ಶಂತನುರಾಜನಾಗಲೀ ಅವನ ತಂದೆತಾಯಿಗಳಾಗಲೀ ಸುಮ್ಮನಿರುವರೇ? ಅವರು ಅಡ್ಡಿಮಾಡಿದರೆ ಕೊಲ್ಲಲು ಸಾಧ್ಯವೇ? ಅದು ಮಾತ್ರವಲ್ಲ. ದೇವತಾಶರೀರದಿಂದ ನಾನು ಶಂತನುರಾಜನಲ್ಲಿಗೆ ಹೋದಾಗ ಈ ವಿಷಯನ್ನು ತಿಳಿದ ಪ್ರತೀಪರಾಜನು ದೇವತಾಸ್ತ್ರೀಯನ್ನು ವಿವಾಹಮಾಡಿಕೊಳ್ಳಕೂಡದೆಂದು ಮಗನಾದ ಶಂತನುರಾಜನನ್ನು ತಡೆದುಬಿಟ್ಟರೆ ವಿವಾಹವಾಗುವುದಾದರೂ ಹೇಗೆ? ಎಂದು ಯೋಚಿಸಿದಳು.

"ನಾನು ವರುಣದೇವನ ಪತ್ನಿಯಾಗಿರುವೆನು. ನನಗೆ ವರುಣನನ್ನೂ ವರುಣದೇವನ ಅವತಾರವಾಗಿರುವ ಶಂತನುರಾಜನನ್ನೂ ಬಿಟ್ಟು ಇತರರಲ್ಲಿ ಯಾರಲ್ಲಿಯೂ ಕಾಮವಿಕಾರವಿಲ್ಲ. ಕಾಮವಿಕಾರವಿಲ್ಲದಿದ್ದರೂ ಕಾಮವಿಕಾರವಿದ್ದಂತೆ ನಟಿಸುತ್ತಾ ಪ್ರತೀಪರಾಜನ ಸಮೀಪಕ್ಕೆ ಹೋಗಬೇಕು. "ಕಾಮದಿಂದ ಯುಕ್ತಳಾಗಿ

ಹೋಗುವ ವಿವಾಹಯೋಗ್ಯಳಾದ ಕನ್ಯೆಯನ್ನು ಕ್ಷತ್ರಿಯರು ವಿವಾಹ ಮಾಡಿ ಕೊಳ್ಳಲೇಬೇಕು'' ಎಂಬ ನಿಯಮವಿದೆ. ಆ ನಿಯಮದಿಂದ, "ನನ್ನನ್ನು ವಿವಾಹಮಾಡಕೊಳ್ಳಲೇಬೇಕು'' ಎಂಬ ಅಭಿಪ್ರಾಯವು ಅವನಲ್ಲಿ ಹುಟ್ಟಬೇಕು.'' ಇದು ಕಾಮವಿಕಾರವಿದ್ದಂತೆ ನಟಿಸುತ್ತಾ ಹೋದದ್ದಕ್ಕೆ ಮೊದಲನೆಯ ಪ್ರಯೋಜನ.

ದೇವತಾಸ್ತ್ರೀಯರು ಯಾವಾಗಲೂ ತನ್ನ ಗಂಡನನ್ನು ಬಿಟ್ಟು ಇತರರನ್ನು ಕಾಮಿಸುವುದಿಲ್ಲ. ಈ ಸ್ತ್ರೀಯು ತನ್ನನ್ನು ಕಾಮಿಸಿದಳು. ಶಂತನುರಾಜನನ್ನು ವಿವಾಹ ಮಾಡಿಕೊಂಡಳು. ಆದ್ದರಿಂದ ಇವಳು ಮನುಷ್ಯಸ್ತ್ರೀಯೇ ಹೊರತು ದೇವತಾಸ್ತ್ರೀಯಲ್ಲ ಎಂದು ಪ್ರತೀಪರಾಜನಿಗೆ ಭ್ರಮೆಯನ್ನು ಹುಟ್ಟಿಸುವುದೇ ಗಂಗೆಯು ಪ್ರತೀಪರಾಜನಲ್ಲಿ ಕಾಮವಿಕಾರವು ಏರ್ಪಟ್ಟಂತೆ ನಟಿಸುವುದಕ್ಕೆ ಎರಡನೆಯ ಪ್ರಯೋಜನ.

" ಹೋದವಳು ಪ್ರತೀಪರಾಜನ ಬಲತೊಡೆಯ ಮೇಲೆ ಕುಳಿತುಕೊಳ್ಳಬೇಕು. ಎಡತೊಡೆಯೇ ಹೆಂಡತಿಯು ಕುಳಿತುಕೊಳ್ಳುವ ತೊಡೆಯಾಗಿರುತ್ತದೆ. ಬಲತೊಡೆಯು ಹೆಂಡತಿಯು ಕುಳಿತುಕೊಳ್ಳುವ ತೊಡೆಯಲ್ಲ. ಮಗಳು ಅಥವಾ ಸೊಸೆಯು ಕುಳಿತುಕೊಳ್ಳುವ ತೊಡೆಯಾಗಿರುತ್ತದೆ. ಇದರಿಂದ " ಈ ಕಾಮವು ನಿನ್ನಲ್ಲಿ ಅಲ್ಲ. ನಿನ್ನ ಮಗನಲ್ಲಿ'' ಎಂದು ತಿಳಿಸಬೇಕು. ಹೀಗೆ ಮಾಡಿದರೆ ಪ್ರತೀಪರಾಜನೇ "ನಿನ್ನನ್ನು ನನ್ನ ಮಗನಿಗಾಗಿ ಸ್ವೀಕರಿಸುವೆನು''. ಎಂದು ಹೇಳುವಂತಾಗುತ್ತದೆ. ಹೀಗೆ ಅವನಿಂದ ಹೇಳಿಸಿ ಬಿಟ್ಟರೆ ದೇವತಾಸ್ತ್ರೀಯೆಂದು ತಿಳಿದರೂ ಅವನಿಂದ ವಿವಾಹವು ತಡೆಯದಂತಾಗುವುದು.'' ಇದು ಬಲತೊಡೆಯಲ್ಲಿ ಕುಳಿತದ್ದಕ್ಕೆ ಪ್ರಯೋಜನ.

"ಪ್ರತೀಪರಾಜನು ತನ್ನನ್ನು ಸೊಸೆಯಾಗಿ ಸ್ವಿಕರಿಸುವುದಾಗಿ ವಾಗ್ದಾನವನ್ನು ಮಾಡಿದ ಮೇಲೆ ಮೂರು ವರಗಳನ್ನು ಅವನಲ್ಲಿ ಕೇಳಬೇಕು. ಅವುಗಳನ್ನು ಕೊಡುವುದಾಗಿ ಅವನಿಂದ ಮೊದಲು ವಾಗ್ದಾನವನ್ನು ಪಡೆಯಬೇಕು. ಆ ಮೇಲೆಯೇ ಕ್ರಮವಾಗಿ ಒಂದೊಂದು ವರಗಳನ್ನು ಕೇಳಬೇಕು''. (೧) ನಿಮ್ಮ ಮಗನು "ನೀನು ಯಾರು?'' ಎಂದು ನನ್ನನ್ನು ಕೇಳಕೂಡದು. (೨) ನಾನು ಎಂತಹ ಅಯೋಗ್ಯ ಕಾರ್ಯವನ್ನು ಮಾಡುತ್ತಿದ್ದರೂ ನಿಮ್ಮ ಮಗನು ತಡೆಯಬಾರದು. (೩) ನಾನುಮಾಡುವ ಅಯೋಗ್ಯಕಾರ್ಯಕ್ಕೆ ಕಾರಣವನ್ನು ನಿಮ್ಮ ಮಗನು ಕೇಳಕೂಡದು. ಈ ಮೂರು ವರಗಳನ್ನು ನೀವು ನನಗೆ ಕೊಡಬೇಕು. ಇದಕ್ಕೆ ಒಪ್ಪಿದರೆ ನಾನು ನಿಮ್ಮ ಮಗನನ್ನು ವಿವಾಹ ಮಾಡಿಕೊಳ್ಳುವೆನು. ಈ ಮೂರು ವರಗಳಲ್ಲಿ ಒಂದಾದರೂ ಬದಲಾವಣೆಯಾದರೆ ವಿವಾಹವಾದರೂ ಸಹ ನಾನು ನಿಮ್ಮ ಮಗನನ್ನುಬಿಟ್ಟುಹೋಗುವೆನು'' ಎಂದು ಪ್ರತೀಪರಾಜನಲ್ಲಿ ಹೇಳಬೇಕು. ಹೀಗೆ ವಾಗ್ದಾನವನ್ನು ಪಡೆದು ಬಿಟ್ಟರೆ ಪ್ರತೀಪರಾಜನೇ ತನ್ನ ಈ ವರಗಳನ್ನು ಮಗನಿಗೆ ಹೇಳುತ್ತಾನೆ ತಂದೆಯ ಆಜ್ಞೆಯನ್ನು ಪರಿಪಾಲನ ಮಾಡುವುದಕ್ಕೋಸ್ಕರ ಮಗನೂ ನಾನು ಯಾರೆಂಬ ವಿಷಯವನ್ನು ನನ್ನಲ್ಲಿ ಕೇಳುವುದಿಲ್ಲ. ಮಕ್ಕಳನ್ನು ಸಂಹರಿಸುತ್ತಿರುವಾಗ ಅಡ್ಡಿಮಾಡುವುದಿಲ್ಲ. ಪ್ರತೀಪರಾಜನ ಮೂರು ಮಕ್ಕಳ ಮಧ್ಯದಲ್ಲಿ ಶಂತನುವನ್ನೇ ತನ್ನ ಪತಿಯಾಗಿ ವರಿಸಿರುವುದಾಗ ಹೇಳಬೇಕು ಇದರಿಂದ ಬೇರೆ ಮಕ್ಕಳನ್ನು ವಿವಾಹಮಾಡಿಕೊಳ್ಳುವಂತೆ ನಿರ್ಬಂಧ ಮಾಡದಂತಾಗುತ್ತದೆ'' ಎಂದು ತೀರ್ಮಾನಿಸಿದಳು. ಅದರಂತೆಯೇ ಮಾಡಿದಳು.

## ಏಳು ಮಕ್ಕಳನ್ನು ಗಂಗೆಯು ಸಂಹರಿಸಿದುದು

ಪ್ರತೀಪರಾಜನೂ ಶಂತನುರಾಜನಿಗೆ ತಾನು ಕೊಟ್ಟಿರುವ ವರಗಳ ವಿಚಾರವನ್ನು ತಿಳಿಸಿದನು. ಅವನೂ ಅಂಗೀಕರಿಸಿದನು. ವಿವಾಹವಾಯಿತು. ಏಳು ಮಕ್ಕಳು ಹುಟ್ಟಿದರು. ಅವರನ್ನು ಸಂಹರಿಸಿದಳು.

ಗಂಗಾದೇವಿಯು ಮಾಡುತ್ತಿರುವ ಶಿಶುಹತ್ಯೆಯನ್ನು ನೋಡುತ್ತಿರುವ ಶಂತನುರಾಜನಿಗೆ ಮನಸ್ಸಿನಲ್ಲಿ ತುಂಬಾ ಅಸಮಾಧಾನವಾಯಿತು. ಆ ಅಸಮಾಧಾನವನ್ನು ತನ್ನ ಚರ್ಯೆಯಿಂದ ತಿಳಿಸಿದನು. ಆದರೆ ಬಾಯಿಮಾತಿನಿಂದ ತಡೆಯಲಿಲ್ಲ. ಬಾಯಿಯಿಂದ ತಿಳಿಸಿದರೆ ತನ್ನನ್ನು ಬಿಟ್ಟು ಹೋಗುವುದಾಗಿ ಅವಳು ಹೇಳಿರುವಳು. ಅವಳ ವಿಯೋಗ ಭಯದಿಂದಲೇ ಹಾಗೆ ಹೇಳಲಿಲ್ಲ. ಅವಳೂ ನಿಷಿದ್ಧದಿನದಲ್ಲಿ ತನ್ನ ಸಂಗವನ್ನು ಮಾಡುವಂತೆ ಕರೆದಳು. ಅವನು ಅವಳ ಮಾತುಗಳನ್ನು ನಿರಾಕರಿಸಿದನು. ಅವಳು ಅವನ ಧರ್ಮನಿಷ್ಠೆಯನ್ನು ತಿಳಿಸುವುದಕ್ಕಾಗಿಯೇ ಹಾಗೆ ಕರೆದಳು. ಅವಳ ಮಾತನ್ನು ಮೀರಿದರೂ ಅವಳು ತನ್ನ ನಿಯಮದಂತೆ ಅವನನ್ನು ಬಿಟ್ಟು ಹೋಗಲಿಲ್ಲ. ಅದು ದೊಡ್ಡ ತಪ್ಪು ಕೆಲಸವಲ್ಲ. "ಶಿಶುಹತ್ಯೆ" ಎಂಬ ಪ್ರಬಲವಾದ ತಪ್ಪನ್ನು ಮಾಡಿದಾಗ ತಡೆದರೆ ಅವನನ್ನು ಬಿಟ್ಟು ಹೋಗುವುದಾಗಿ ತೀರ್ಮಾನಿಸಿದಳು.

## ಪುನಃ ಗಂಗೆಯ ಆಲೋಚನೆ

ಎಂಟನೆಯ ಮಗನು ಹುಟ್ಟುವ ಸಮಯವು ಬಂತು. ಆಗ ಆಲೋಚಿಸಿದಳು. " ನಾನು ನನ್ನ ಏಳು ಮಕ್ಕಳನ್ನು ಕೊಲ್ಲುವುದಾಗಿ ಅಷ್ಟವಸುಗಳಿಗೆ ವಾಗ್ದಾನವನ್ನು ಮಾಡಿರುವೆನು. ಆ ವಾಗ್ದಾನದಂತೆ ಅವರನ್ನು ಸಂಹರಿಸಿದೆನು. ಎಂಟನೆಯ ಮಗನನ್ನು ದೀರ್ಘಾಯುಷ್ಯವಂತನನ್ನಾಗಿಸಬೇಕೆಂದು ಅಷ್ಟವಸುಗಳಲ್ಲಿ ವರವನ್ನು ಬೇಡಿರುವೆನು. ಆದ್ದರಿಂದ ಎಂಟನೆಯ ಮಗನನ್ನು ಕೊಲ್ಲುವ ಉದ್ದೇಶವು ನನಗಿಲ್ಲ. ನನ್ನ ಪತಿಯು ಏಳು ಮಕ್ಕಳನ್ನು ಕೊಂದಾಗ ತುಂಬಾ ಅಸಮಾಧಾನವನ್ನು ತೋರಿಸಿರುವೆನು. ಆದರೆ ನನ್ನನ್ನು ತಡೆಯಲಿಲ್ಲ. ಈಗ ಎಂಟನೆಯ ಮಗನನ್ನು ಕೊಲ್ಲುವಂತೆ ನಾನು ನಟಿಸಬೇಕು. ನನ್ನ ಪತಿಯಲ್ಲಿ ಏರ್ಪಟ್ಟಿರುವ ಅಸಮಾಧಾನವು ಮಿತಿಮೀರಬೇಕು. ಅವರು ನನ್ನನ್ನು ತಡೆಯಬೇಕು. ನಾನು ಈ ಕಾರಣವನ್ನು ನಿಮಿತ್ತವಾಗಿಟ್ಟುಕೊಂಡು ಅವರನ್ನು ಬಿಟ್ಟು ಹೋಗಬೇಕು."

"ನನ್ನ ಪತಿಯ ದೇಹವು ಮನುಷ್ಯದೇಹವಾಗಿರುತ್ತದೆ. ನನ್ನ ಪತಿಯು ಮನುಷ್ಯಶರೀರವನ್ನು ಪಡೆದಿರುವಾಗ ನಾನೂ ಮನುಷ್ಯಶರೀರವನ್ನೇ ಪಡೆಯಬೇಕಾಗಿತ್ತು. ಆದರೆ(೧) " ಮನುಷ್ಯಗರ್ಭದಲ್ಲಿ ನಾವು ವಾಸಿಸಲಾರೆವು. ನೀನು ದೇವತಾ ಶರೀರದಿಂದಲೇ ನಮ್ಮನ್ನು ಪ್ರಸವಿಸು" ಎಂದು ಅಷ್ಟವಸುಗಳು ಪ್ರಾರ್ಥಿಸಿದರು. (೨) "ದೇವತಾ ಶರೀರದಿಂದಲೇ ಶಂತನು ರಾಜನ ಪತ್ನಿಯಾಗಿ ಅವತರಿಸು" ಎಂದು ಬ್ರಹ್ಮದೇವರೂ ನನ್ನನ್ನು ಆಜ್ಞಾಪಿಸಿದರು. ಈ ಎರಡು ಕಾರಣಗಳಿಂದ ನಾನು ದೇವತಾ ಶರೀರದಿಂದಲೇ ಇಲ್ಲಿಗೆ ಬಂದಿರುವೆನು. ಶಂತನು ರಾಜನು ನನ್ನ ಪತಿಯೇ ಆಗಿದ್ದರೂ ಮನುಷ್ಯಶರೀರದಿಂದ ಯುಕ್ತರಾಗಿರುವ ಅವರೊಡನೆ ದೇವತಾಶರೀರದಿಂದ ಯುಕ್ತಳಾಗಿರುವ ನಾನು ಪ್ರತ್ಯಕ್ಷಶರೀರದಿಂದ ವಾಸಿಸುತ್ತಿರುವುದು ಅಷ್ಟು ಸುಖವಾಗಿಲ್ಲ. ಅದು ಮಾತ್ರವಲ್ಲ. ದೇವತೆಗಳ ಮುಖ್ಯವಾದ ಒಂದು ಧರ್ಮವಿದೆ. ಅದನ್ನು ವಿವರಿಸುತ್ತೇನೆ :-

(೧) ದೇವತೆಗಳು ತತ್ತ್ವಾಭಿಮಾನಿಗಳಾಗಿ ಮನುಷ್ಯರ ಮಧ್ಯದಲ್ಲಿ ವಾಸಿಸುತ್ತಿರುವುದುಂಟು. ಆಗ ಯಾರ ಕಣ್ಣಿಗೂ ಕಾಣಿಸುವುದಿಲ್ಲ. ಇದು ಅವರ ಧರ್ಮ. ಎಲ್ಲರ ಕಣ್ಣಿಗೆ ಕಾಣಿಸಿಕೊಂಡು ಭೂಮಿಯಲ್ಲಿ ವಾಸಿಸುವುದು ಅಧರ್ಮವೆನಿಸುತ್ತದೆ. (೨) ತತ್ತ್ವಾಭಿಮಾನಿದೇವತೆಗಳು ಎಲ್ಲರನ್ನು ಮುಟ್ಟುತ್ತಿರುವುದುಂಟು. ಆದರೆ ಮುಟ್ಟುವುದು ಯಾರಿಗೂ ತಿಳಿಯುವುದಿಲ್ಲ. ಇದು ಅವರ ಧರ್ಮ. ಎಲ್ಲರಿಗೂ ತಿಳಿಯುವಂತೆ ಮುಟ್ಟುವುದು ಅಧರ್ಮವೆನಿಸುತ್ತದೆ (೩) ದೇವತೆಗಳು ಅಶರೀರವಾಣಿಯಂತೆ ಯಾರಿಗೂ ಕಾಣಿಸದೆ ಮಾತಾಡುವುದುಂಟು. ಇದು ಅವರಿಗೆ

ಧರ್ಮವೆನಿಸುತ್ತದೆ. ಎಲ್ಲರಿಗೂ ಕಣ್ಣಿಗೆ ಕಾಣಿಸಿಕೊಂಡು ಮಾತಾಡುವುದು ಅಧರ್ಮವೆನಿಸುತ್ತದೆ. ಇವರು ದೇವತೆಗಳು ಎಂದು ಇತರರು ತಿಳಿದ ಮೇಲೆ ಮೇಲ್ಕಂಡ ದೇವತಾಧರ್ಮಗಳನ್ನು ದೇವತೆಗಳು ಅನುಷ್ಠಿಸಲೇಬೇಕು. ತಿಳಿಯದಿದ್ದಾಗ ಈ ಧರ್ಮಗಳನ್ನು ಅನುಷ್ಠಿಸದಿರುವುದರಿಂದ ದೋಷವಿಲ್ಲ.''

(೪) "ವರವನ್ನು ಕೊಡುವುದು ಮುಂತಾದ ವಿಶೇಷ ಸಂದರ್ಭಗಳಲ್ಲಿ ಮನುಷ್ಯರ ಕಣ್ಣಿಗೆ ಕಾಣಿಸುವುದೂ ಮನುಷ್ಯರನ್ನು ಮುಟ್ಟುವುದೂ ಅವರೊಡನೆ ಮಾತಾಡುವುದೂ ದೇವತೆಗಳಿಗೆ ಅಧರ್ಮವಲ್ಲ. (೫) ಆಗ ಮನುಷ್ಯರಿಗಿಂತ ಉತ್ತಮರಾದ ದೇವಋಷಿ ಮೊದಲಾದವರೊಡನೇ ಬಹುಕಾಲದ ವರೆಗೆ ಸಂಭಾಷಣ, ಕಣ್ಣಿಗೆ ಕಾಣಿಸುವಂತೆ ವಾಸ ಮುಂತಾದವುಗಳು ದೇವತೆಗಳಿಗೆ ಅಧರ್ಮವಲ್ಲ

(೬) " ಮನುಷ್ಯರ ಮಧ್ಯದಲ್ಲಿ ದೇವತೆಗಳು ವಾಸಿಸುವುದಕ್ಕೆ ಪ್ರಬಲವಾದ ಕಾರಣವು ಬೇಕು. ಆ ಕಾರಣವಿದ್ದಾಗ ಅವರು ವಾಸಿಸುವುದು ತಪ್ಪಲ್ಲ. ಆ ಕಾರಣವು ಹೋದಕೂಡಲೇ ಅವರು ಮನುಷ್ಯರ ಕಣ್ಣಿಗೆ ಕಾಣಿಸಬಾರದು. ಇದು ಅವರ ಧರ್ಮ.

" ನಾನು ಅಷ್ಟವಸುಗಳನ್ನು ಪ್ರಸವಿಸುವುದಾಗಿ ವರವನ್ನು ಕೊಟ್ಟಿರುವೆನು. ಆ ಕಾರಣದಿಂದ ಭೂಮಿಗೆ ಬಂದೆನು. ಎಂಟನೆಯ ಮಗನು ಹುಟ್ಟಿದ ಕೂಡಲೇ ಆ ಕಾರಣವು ಮುಗಿಯುತ್ತದೆ. ಆದ್ದರಿಂದ ಎಂಟನೆಯ ಮಗನು ಹುಟ್ಟಿದ ಕೂಡಲೇ ನಾನು ನನ್ನ ಲೋಕಕ್ಕೆ ಹೋಗುವುದೇ ನನ್ನ ಧರ್ಮವಾಗಿದೆ. ನನ್ನ ಪತಿಯು ನನ್ನಲ್ಲಿ ತುಂಬಾ ಪ್ರೇಮವನ್ನಿಟ್ಟಿರುವರು. ಅವರ ಮನಸ್ಸನ್ನು ನೋಯಿಸಿ ಹೋಗುವುದು ಅಧರ್ಮವಾಗಿದೆ. ಈ ಅಧರ್ಮವು ಬಾರದಿರುವುದಕ್ಕಾಗಿಯೇ ಹಿಂದೆ ಮೂರು ನಿಬಂಧನೆಗಳನ್ನು ಮಾಡಿರುವೆನು. ಆ ನಿಬಂಧನೆಗಳಲ್ಲಿ ಒಂದಕ್ಕೆ ವ್ಯತ್ಯಾಸವಾಗಿ ನಡೆದುಕೊಂಡರೂ ಪತಿಯನ್ನು ಬಿಟ್ಟು ಹೋಗುವುದಾಗಿ ವರವನ್ನು ತೆಗೆದುಕೊಂಡಿರುವೆನು. ಇದರಿಂದ ಪತಿಯ ಮನಸ್ಸಿಗೆ ಆಯಾಸವಾದರೂ ದೇವತೆಗಳ ಮುಖ್ಯಧರ್ಮವನ್ನು ಪಾಲನೆ ಮಾಡಿರುವುದರಿಂದ ನನಗೆ ಶ್ರೀಹರಿಯ ವಿಶೇಷಾನುಗ್ರಹವು ಏರ್ಪಡುವುದರಲ್ಲಿ ಸಂಶಯವಿಲ್ಲ'' ಎಂದು ತೀರ್ಮಾನಿಸಿದಳು.

# ಎಂಟನೆಯ ಮಗನ ಸಂಹಾರೋದ್ಯೋಗ ಮತ್ತು ಪತಿಯನ್ನು ಬಿಟ್ಟು ಹೋದುದು

ಎಂಟನೆಯ ಮಗನು ಹುಟ್ಟಿದನು. ಅವನನ್ನು ಎತ್ತಿದಳು. ಸಂಹರಿಸುವುದಕ್ಕಾಗಿ ಕೆಳಗೆ ಅಪ್ಪಳಿಸುವಂತೆ ನಟಿಸಿದಳು. ಅದನ್ನು ಶಂತನು ನೋಡಿದನು. ಸಹಿಸಲಿಕ್ಕಾಗಲಿಲ್ಲ. ಓಡಿ ಬಂದನು. (೧) ಅವಳ ಕೈಯನ್ನು ಹಿಡಿದು ತಡೆದನು.'' (೨) ನೀನು ಯಾರು? ಹಿಂಸಾವಿಹಾರಿಗಳಂತೆ ಏಳು ಮಕ್ಕಳನ್ನು ಕೊಂದಿರುವಿ. ಈಗ ಎಂಟನೆಯ ಮಗುವನ್ನೂ ಸಂಹರಿಸುತ್ತಿರುವಿ. ನಿನ್ನ ರೂಪವು ಉತ್ತಮ ದೇವತೆಗಳ ಸ್ತ್ರೀಯರ ರೂಪದಂತಿದೆ. ನಿಜವಾಗಿಯೂ ನೀನು ದೇವತಾಸ್ತ್ರೀಯೇ ಆಗಿರುವಿ. (೩) ಉತ್ತಮ ದೇವತಾಸ್ತ್ರೀಯರು ಪಾಪಕಾರ್ಯವನ್ನು ಮಾಡುವುದಿಲ್ಲ. ಆದ್ದರಿಂದ ನೀನು ಮಾಡುವ ಈ ಕಾರ್ಯವು ಪಾಪಕಾರ್ಯವಲ್ಲವೆಂದು ತೀರ್ಮಾನಿಸಬಹುದಾಗಿದೆ. ಯಾವುದೋ ಒಂದು ಪ್ರಬಲವಾದ ಕಾರಣದಿಂದಲೇ ಹೀಗೆ ಮಾಡುತ್ತಿರುವಿ. ಆ ಕಾರಣ ಯಾವುದು? ನಾನು ತಿಳಿಯಬಹುದಾಗಿದ್ದರೆ ತಿಳಿಸು'' ಎಂದು ಕಾರಣಕೇಳಿದನು.

ಈ ಮಾತುಗಳನ್ನು ಗಂಗಾದೇವಿಯು ಕೇಳಿದಳು. ಮಗುವನ್ನು ಕೊಲ್ಲುವ ಪ್ರಯತ್ನವನ್ನು ನಿಲ್ಲಿಸಿದಂತೆ ನಟಿಸಿದಳು. ಎಲ್ಲಾ ವಿಷಯಗಳನ್ನು ತಿಳಿಸಿದಳು. ಅದೃಶ್ಯಳಾದಳು. ಪತಿಯ ಅನುಮತಿಯನ್ನು ಪಡೆದು ಮಗನನ್ನು ಕರೆದುಕೊಂಡು ವರುಣಲೋಕಕ್ಕೆ ಹೋದಳು. ದೇವತೆಗಳಂತೆ ಹಾಗೆ ಎಲ್ಲಾ ವ್ರತಗಳನ್ನೂ ಅನುಷ್ಠಾನ ಮಾಡುತ್ತಾ ಇದ್ದುದರಿಂದ ಅವನು ದೇವವ್ರತ ಎಂದು ಪ್ರಸಿದ್ಧನಾದನು.

## ದೇವವ್ರತನ ವಿದ್ಯಾಭ್ಯಾಸ

ದೇವವ್ರತನನ್ನು ಬೃಹಸ್ಪತ್ಯಾಚಾರ್ಯರಲ್ಲಿ ವಿದ್ಯಾಭ್ಯಾಸಕ್ಕಾಗಿ ಬಿಟ್ಟಳು. ಐವತ್ತು ವರ್ಷಗಳವರೆಗೆ ವೇದಗಳನ್ನು ಓದಿದನು. ಅನಂತರದಲ್ಲಿ ಶ್ರೀಪರಶುರಾಮದೇವರಲ್ಲಿ ಬಿಟ್ಟಳು. ಅಲ್ಲಿ ತತ್ವಶಾಸ್ತ್ರವನ್ನು ಐವತ್ತು ವರ್ಷಗಳ ವರೆಗೂ ಅಸ್ತ್ರವಿದ್ಯೆಯನ್ನು ಇಪ್ಪತ್ತೈದುವರ್ಷಗಳವರೆಗೂ ಓದಿದನು.

## ತಂದೆಯೊಡನೆ ದೇವವ್ರತನನ್ನು ಸೇರಿಸಿದುದು

ಅನಂತರದಲ್ಲಿ ಗಂಗಾದೇವಿಯು ದೇವವ್ರತನನ್ನು ತನ್ನ ಪತಿಗೆ ಸಮರ್ಪಿಸುವುದಕ್ಕೋಸ್ಕರ ತನ್ನ ತೀರದಲ್ಲಿ ತಂದುಬಿಟ್ಟಳು. ಅವನು ಗಂಗೆಯಲ್ಲಿ ಶರಪಂಜರದಿಂದ ಸೇತುವೆಯನ್ನು ಕಟ್ಟಿದನು. ಅದೇ ಸಮಯದಲ್ಲಿ ಶಂತನುರಾಜನು ಬೇಟೆಯಾಡುತ್ತಾ ಗಂಗಾತೀರಕ್ಕೆ ಬಂದನು. ತುಂಬಾ ನೀರಡಿಕೆ ಯಾಯಿತು. ಗಂಗೆಗೆ ಬಂದನು. ಗಂಗೆಯಲ್ಲಿ ಒಂದು ಬಿಂದು ಜಲವೂ ಇರಲಿಲ್ಲ. ತುಂಬಾ ಆಶ್ಚರ್ಯವಾಯಿತು. ಇದಕ್ಕೆ ಕಾರಣವನ್ನು ಹುಡುಕುತ್ತಾ ಗಂಗಾತೀರದಲ್ಲಿಯೇ ಬಹುದೂರದವರೆಗೆ ಬಂದನು. ಒಂದೆಡೆಯಲ್ಲಿ ಅಸ್ತ್ರಗಳಿಂದ ಆಟವಾಡುತ್ತಾ ಸೇತುವೆಯನ್ನು ಕಟ್ಟಿರುವ ಬಾಲಕನ್ನು ನೋಡಿದನು. ಆ ಬಾಲಕನು ಇವನನ್ನು ನೋಡಿದ ಕೂಡಲೇ ಅದೃಶ್ಯನಾದನು.

ಈ ಬಾಲಕನು ಅಸ್ತ್ರಗಳಿಂದ ಸೇತುವೆಯನ್ನು ಕಟ್ಟಿರುವುದರಿಂದಲೇ ಆ ಸೇತುವಿನ ಮೇಲ್ಭಾಗದಲ್ಲಿ ಎಲ್ಲಾ ಜಲವೂ ನಿಂತಿರುವುದೆಂದೂ ಆದ್ದರಿಂದಲೇ ಕೆಳಭಾಗದಲ್ಲಿ ನೀರೇ ಇಲ್ಲವೆಂದೂ ತಿಳಿದನು. ಆ ಹುಡುಗನನ್ನು ಹುಡುಕಿದನು. ಆಗ ಗಂಗಾದೇವಿಯು ಮಗನನ್ನು ಕರೆದುಕೊಂಡು ಬಂದಳು. ಅವನನ್ನು ಪತಿಗೆ ಸಮರ್ಪಿಸಿದಳು. ಪತಿಯನ್ನು ನೋಡಿ ಹೇಳಿದಳು.

" ಪತಿವರ್ಯರೇ, ಇದೋ ನಿಮ್ಮ ಮಗನು. ಇವನು ಎಲ್ಲಾ ಅಸ್ತ್ರಗಳನ್ನೂ ತಿಳಿದಿರುವನು. ವೀರ್ಯದಿಂದಲೂ ಬಲದಿದಂಲೂ ಯುಕ್ತನಾಗಿರುವನು. ಇವನ ಏಳು ಅಣ್ಣಂದಿರುಗಳೂ ಶ್ರೀವಿಷ್ಣುವಿನ ಪಾದಕಮಲಗಳ ಸ್ಪರ್ಶದಿಂದ ಅತ್ಯಂತ ಪರಿಶುದ್ಧವಾಗಿರುವ ನನ್ನ ಜಲದಲ್ಲಿ ವಿಷ್ಣುವನ್ನು ಸ್ಮರಿಸುತ್ತಾ ದೇಹವನ್ನು ತ್ಯಜಿಸಿರುವರು. ಇದರಿಂದ ಅವರ ಪಾಪಗಳೆಲ್ಲಾ ಹೋದವು. ಅವರು ತಮ್ಮ ಮೂಲರೂಪಗಳಲ್ಲಿ ಐಕ್ಯವನ್ನು ಹೊಂದಿರುವರು. ಆದ್ದರಿಂದ ಅವರನ್ನು ಕುರಿತು ಶೋಕಿಸಬೇಡಿರಿ. ಇವನಿಂದ ಸುಖವಾಗಿ ವಾಸಿಸಿರಿ" ಎಂದು ಹೇಳಿದಳು. ಅದೃಶ್ಯಳಾದಳು.

ಶಂತನುರಾಜನು ಅವನನ್ನು ಕರೆದುಕೊಂಡು ಮನೆಗೆ ಬಂದನು. ಅವನ ಸದ್ಗುಣಗಳಿಂದ ಸಂತುಷ್ಟನಾದನು. ಯುವರಾಜಪದವಿಯಲ್ಲಿ ಅವನಿಗೆ ಪಟ್ಟಾಭಿಷೇಕವನ್ನು ಮಾಡಿದನು. ಸುಖವಾಗಿ ವಾಸಿಸಿದನು. ಪುನಃ ಆ ದೇವವ್ರತನು ತಂದೆಯಿಂದ ಅನುಮತಿಯನ್ನು ಪಡೆದು ಬೃಹಸ್ಪತ್ಯಾಚಾರ್ಯರಿಂದ ಐವತ್ತು ವರ್ಷಗಳ ವರೆಗೆ ವೇದಗಳನ್ನು ಓದಿದನು. ಪರಶುರಾಮದೇವರಿಂದ ಐವತ್ತು ವರ್ಷಗಳ ವರೆಗೆ ಅಸ್ತ್ರವಿದ್ಯೆಯನ್ನೂ ಮುನ್ನೂರು ವರ್ಷಗಳ ವರೆಗೆ ತತ್ತ್ವವಿದ್ಯೆಯನ್ನು ಓದಿದನು. ಹೀಗೆ ಐನೂರ ಇಪ್ಪತ್ತೈದು ವರ್ಷಗಳಲ್ಲಿ ವಿದ್ಯಾಭ್ಯಾಸವನ್ನು ಮಾಡಿ ಸರ್ವಜ್ಞತ್ವವನ್ನು ಪಡೆದನು. ಪುನಃ ಹಿಂದಿರುಗಿ ತಂದೆಯ ಸಮೀಪಕ್ಕೆ ಬಂದನು. ತಂದೆಯನ್ನು ಸೇವಿಸುತ್ತಾ ಸಂತೋಷದಿಂದ ವಾಸಿಸಿದನು.

## ಕೃಪಾಚಾರ್ಯರು ಮತ್ತು ಕೃಪೀದೇವಿಯು

ರುದ್ರರ ಮಧ್ಯದಲ್ಲಿ ವಿಷ್ಕಂಭ ಎಂಬ ರುದ್ರನು ಶ್ರೀಹರಿಯು ಭೂಭಾರವನ್ನು ಪರಿಹರಿಸುವುದಕ್ಕಾಗಿ ಭೂಮಿಯಲ್ಲಿ ಅವತರಿಸುವಾಗ ತಾನೂ ಅವತರಿಸಿ ಶ್ರೀಹರಿಯನ್ನು ಸೇವಿಸಬೇಕೆಂದು ಸಂಕಲ್ಪಿಸಿದನು. ಅದೇ ರೀತಿಯಿಂದ ಬೃಹಸ್ಪತ್ಯಾಚಾರ್ಯರ ಪತ್ನಿಯಾದ ತಾರಾದೇವಿಯೂ ಸಂಕಲ್ಪಿಸಿದಳು. ಅದೇ ಸಮಯದಲ್ಲಿ ಶರದ್ವಾನ್ ಎಂಬ ಋಷಿಯು ತಪಸ್ಸನ್ನು ಮಾಡುತ್ತಿದ್ದರು.

ಶರದ್ವಾನ್ ಎಂಬ ಋಷಿಯ ವೀರ್ಯದಲ್ಲಿ ಇವರಿಬ್ಬರೂ ಪ್ರವೇಶಿಸಿದರು. ಅದೇ ಸಮಯದಲ್ಲಿ ಊರ್ವಶೀ ಎಂಬ ಅಪ್ಸರ ಸ್ತ್ರೀಯು ಆ ಮಾರ್ಗವಾಗಿ ಬಂದಳು. ಅವಳನ್ನು ನೋಡಿದ ಕೂಡಲೇ ಶರದ್ವಾನ್ ಎಂಬ ಋಷಿಗೆ ಕಾಮವಿಕಾರವು ಏರ್ಪಟ್ಟಿತು. ಕೂಡಲೇ ವೀರ್ಯವು ದರ್ಭೆಯ ಕಾಡಿನಲ್ಲಿ ಬಿತ್ತು. ಬಿದ್ದಕೂಡಲೇ ಆ ವೀರ್ಯವು ದರ್ಭೆಯಿಂದ ಎರಡು ತುಂಡಾಯಿತು. ಆ ಎರಡು ತುಂಡುಗಳಿಂದ ಒಂದು ಗಂಡುಮಗುವೂ ಇನ್ನೊಂದು ಹೆಣ್ಣು ಮಗುವೂ ಹುಟ್ಟಿದವು.

ಈ ಮಕ್ಕಳಿಗೆ ತಾಯಿ ಇಲ್ಲ. ತಾಯಿಯಿಲ್ಲದೆಯೇ ಹುಟ್ಟಿರುವ ಈ ಮಕ್ಕಳನ್ನು ತಂದೆಯೇ ಕಾಪಾಡಬೇಕಾಯಿತು. ಆದರೆ ಜ್ಞಾನಿಗಳಾದ ಶರದ್ವಾನ್ ಎಂಬ ಋಷಿಯು ಶಂತನುರಾಜನು ಈ ಮಕ್ಕಳನ್ನು ಸಂರಕ್ಷಿಸುವುದಾಗಿ ತಿಳಿದರು. ತಪಸ್ಸನ್ನು ಮಾಡುವುದಕ್ಕಾಗಿ ಹೊರಟು ಹೋದರು.

ಭೀಷ್ಮನು ಹುಟ್ಟಿ ಒಂದೆರಡು ದಿನಗಳಾದವು. ಶಂತನು ರಾಜನು ಬೇಟೆಯಾಡುತ್ತಾ ಕಾಡಿಗೆ ಬಂದನು. ಆಗಲೇ ಹುಟ್ಟಿರುವ ಈ ಎರಡು ಮಕ್ಕಳನ್ನು ನೋಡಿದನು. ಅನಾಥರಾಗಿ ಬಿದ್ದಿರುವ ಈ ಮಕ್ಕಳಲ್ಲಿ ಅವನಿಗೆ ಕೃಪಾ ಏರ್ಪಟ್ಟಿತು. ಅವುಗಳನ್ನು ಅವನು ತನ್ನ ಮನೆಗೆ ಎತ್ತಿಕೊಂಡು ಬಂದನು. ಚೆನ್ನಾಗಿ ರಕ್ಷಿಸಿದನು. ಕೃಪೆಗೆ ಪಾತ್ರರಾದ ಈ ಮಕ್ಕಳಿಗೆ ಕ್ರಮವಾಗಿ ಕೃಪ ಎಂದೂ ಕೃಪೀ ಎಂದೂ, ಹೆಸರನ್ನಿಟ್ಟನು. ಈ ಕೃಪನು ವಿಷ್ಣುವಿನ ಪ್ರೀತಿಗಾಗಿ ಉಗ್ರವಾದ ತಪಸ್ಸನ್ನು ಮಾಡಿದನು. ಸಕಲ ಲೋಕೇಶ್ವರರಿಗೂ ಈಶ್ವರನಾದ ಮಹಾವಿಷ್ಣುವು ಸಂತುಷ್ಟನಾದನು. ಮುಂದಿನ ಮನ್ವಂತರದಲ್ಲಿ ಸಪ್ತರ್ಷಿಗಳಲ್ಲಿ ಒಬ್ಬನ ಪದವಿಯನ್ನೂ ಬ್ರಹ್ಮದೇವರ ಈ ದಿನವು ಮುಗಿಯುವ ವರೆಗೆ ಆಯುಸ್ಸನ್ನೂ ಕೊಟ್ಟನು. ಆ ಕೃಪಾಚಾರ್ಯನು ಶಂತನುವಿನ ಮಗನಂತೆ ಶಂತನುವಿನ ಮನೆಯಲ್ಲಿ ಬೆಳೆದನು. ದೇವವ್ರತನಿಗೆ ಸ್ನೇಹಿತನಾದನು. ಶಂತನುರಾಜನೂ ಸಹ ಕೃಪನನ್ನೂ ಕೃಪಿಯನ್ನೂ ಮಕ್ಕಳಂತೆ ಕಾಪಾಡಿದನು. ಆ

ಕೃಪಾಚಾರ್ಯನು ಗೌತಮರಿಂದ ಎಲ್ಲಾ ಅಸ್ತ್ರವಿದ್ಯೆಯನ್ನೂ ಗೋತ್ರಪ್ರವರ ಮುಂತಾದವುಗಳನ್ನೂ ಪಡೆದನು. ಎಲ್ಲಾ ವೇದಗಳನ್ನೂ ಎಲ್ಲಾ ಶಾಸ್ತ್ರಗಳನ್ನೂ ವಿಶ್ವಾಮಿತ್ರರಿಂದ ಓದಿದನು. ಎಲ್ಲಾ ತತ್ವವಿದ್ಯೆಗಳನ್ನೂ ಶ್ರೀಪರಶುರಾಮದೇವರಿಂದ ಓದಿದನು. ಸರ್ವಜ್ಞತ್ವವನ್ನು ಪಡೆವನು.

## ದ್ರೋಣಾಚಾರ್ಯರು

ಶ್ರೀಹರಿಯು ಭೂಮಿಯಲ್ಲಿ ಅವತರಿಸುವಾಗ ಭೂಭಾರಪರಿಹಾರವನ್ನು ಮಾಡಿ ಶ್ರೀಹರಿಯನ್ನು ಸೇವಿಸಬೇಕೆಂದು ಬೃಹಸ್ಪತ್ಯಾಚಾರ್ಯರು ಸಂಕಲ್ಪಿಸಿದರು. ಇವರು ಮುಂದೆ ಭೀಮ ಅರ್ಜುನ ಮುಂತಾದ ಉತ್ತಮದೇವತೆಗಳಿಗೆ ಗುರುವಾಗುವವರು. ಆ ಯೋಗ್ಯತೆಯು ಇವರಲ್ಲಿಲ್ಲ. ಅದಕ್ಕಾಗಿ ಬ್ರಹದೇವರ ವಿಶೇಷಸನ್ನಿಧಾನದಿಂದ ಸಹಿತರಾಗಿ ಭರದ್ವಾಜರ ವೀರ್ಯದಲ್ಲಿ ಪ್ರವೇಶಿಸಿದರು. ಭರದ್ವಾಜರು ಸ್ನಾನಕ್ಕಾಗಿ ಗಂಗಾನದಿಗೆ ಬಂದರು. ಆಗ ಆ ಮಾರ್ಗವಾಗಿ ಘೃತಾಚೀ ಎಂಬ ಅಪ್ಸರಸ್ತ್ರೀಯು ಹೋಗುತ್ತಿದ್ದಳು. ಬೆತ್ತಲೆಯಾದ ಅವಳನ್ನು ನೋಡಿದರು. ಕಾಮಪೀಡಿತರಾದರು. ಅವರ ವೀರ್ಯವು ಕೆಳಗೆ ಬಿದ್ದಿತು. ಆ ವೀರ್ಯವನ್ನು ದ್ರೋಣ ಅಂದರೆ ಒಂದು ಕೊಳಗದಲ್ಲಿ ತುಂಬಿದರು. ಆ ದ್ರೋಣದಿಂದ ಒಬ್ಬ ಮಗನು ಹುಟ್ಟಿದನು. ಅವನು ದ್ರೋಣದಿಂದ ಹುಟ್ಟಿದರಿಂದ ದ್ರೋಣ ಎಂದು ನಾಮಕರಣಮಾಡಿದರು. ತಂದೆಯಾದ ಭರದ್ವಾಜರು ಎಲ್ಲಾ ವೇದಗಳನ್ನೂ ಶಾಸ್ತ್ರಗಳನ್ನೂ ಅವನಿಗೆ ಉಪದೇಶಿಸಿದರು. ಅವನೂ ಬ್ರಹ್ಮದೇವರ ಸನ್ನಿಧಾನದಿಂದ ಯುಕ್ತನಾದುದರಿಂದ ಬಹುಬೇಗನೆ ಸರ್ವಜ್ಞನಾದನು.

## ದ್ರುಪದರಾಜ

"ಹೂಹೂ" ಎಂಬ ಗಂಧರ್ವನು ಇಂದ್ರಸಭೆಯಲ್ಲಿ ಸಂಗೀತವನ್ನು ಹಾಡುತ್ತಿದ್ದರೂ ಹೆಚ್ಚಾಗಿ ಬ್ರಹ್ಮಸಭೆಯಲ್ಲಿ ಹಾಡುತ್ತಿರುವವನು. ಅವನು ಮರುತ್ತುಗಳ ಮಧ್ಯದಲ್ಲಿ "ಅವಹ" ಎಂಬ ಮರುತ್ತಿನ ಆವೇಶದಿಂದ ಯುಕ್ತನಾದನು. ಅದೇ ಸಮಯದಲ್ಲಿ ಪಾಂಚಾಲದೇವಶದ ಅಧಿಪತಿಯಾದ ಪೃಷತ ಎಂಬುವನು, ಮಕ್ಕಳು ಹುಟ್ಟಬೇಕೆಂದು ಕಾಡಿನಲ್ಲಿ ಉಗ್ರವಾದ ತಪಸ್ಸನು ಮಾಡುತ್ತಿದ್ದನು. ಅವನ ವೀರ್ಯದಲ್ಲಿ ಹೂಹೂ ಎಂಬ ಗಂಧರ್ವನು ಪ್ರವೇಶಿಸಿದನು. ಆ ಪೃಷತನು ಒಬ್ಬ ಉತ್ತಮಳಾದ ಅಪ್ಸರ ಸ್ತ್ರೀಯನ್ನು ನೋಡಿದನು. ಕಾಮಪೀಡಿತನಾದನು. ಅವನ ವೀರ್ಯವು ಕೆಳಗೆ ಬಿತ್ತು. ನಾಚಿಕೆಯಿಂದ ಯುಕ್ತನಾದನು. ಕಾಲಿನಿಂದ ಆ ವೀರ್ಯವನ್ನು ತಿಕ್ಕಿದನು. ಆಗ ಆ ವೀರ್ಯದಿಂದ ಒಬ್ಬ ಮಗನು ಹುಟ್ಟಿದನು.

ಅವನಿಗೆ "ಪದೇ ದ್ರುತ" ಅಂದರೆ ಕಾಲಿನಿಂದ ತಿಕ್ಕಲ್ಪಟ್ಟವನಾದುದರಿಂದ "ದ್ರುಪದ" ಎಂದು ಹೆಸರನ್ನಿಟ್ಟನು. ಅವನು ದ್ರೋಣಾಚಾರ್ಯರ ತಂದೆಯಾಗಿರುವ ಭರದ್ವಾಜರಿಂದ ಸಕಲ ವೇದಗಳನ್ನೂ ಸಕಲಶಾಸ್ತ್ರಗಳನ್ನೂ ಸಕಲ ವಿದ್ಯೆಗಳನ್ನೂ ದ್ರೋಣಾಚಾರ್ಯರೊಡನೆ ಓದಿದನು. ದ್ರೋಣರಲ್ಲಿ ತುಂಬಾ ಪ್ರೇಮವನ್ನಿಟ್ಟಿದ್ದನು. ಆ ಪ್ರೇಮದಿಂದ "ನನಗೆ ರಾಜ್ಯವು ಸಿಕ್ಕಿದಾಗ ಅರ್ಧರಾಜ್ಯವನ್ನು ನಿನಗೆ ಕೊಡುವೆನು" ಎಂದು ಹೇಳಿದನು. ದ್ರುಪದನು ರಾಜ್ಯವನ್ನು ಪಡೆದನು.

ದ್ರೋಣರು ದ್ರುಪದರಾಜನು ಹೇಳಿದಂತೆ ದ್ರುಪದನ ಅರ್ಧರಾಜ್ಯಕ್ಕೆ ಅರ್ಹರಾಗಿದ್ದರೂ ಅರ್ಧರಾಜ್ಯವನ್ನು ಸ್ವೀಕರಿಸಲಿಲ್ಲ. ಕೃಪೀದೇವಿಯನ್ನು ವಿವಾಹಮಾಡಿಕೊಂಡರು. ಯಾರಿಂದಲೂ ಯಾವದಾನವನ್ನೂ ಸ್ವೀಕರಿಸುವುದಿಲ್ಲವೆಂದ ಸಂಕಲ್ಪಿಸಿದರು. ಹೊಲಗಳಲ್ಲಿಯೂ ಬೀದಿಗಳಲ್ಲಿಯೂ ಬಿದ್ದಿರುವ ಧಾನ್ಯಗಳನ್ನು ಹೆಕ್ಕಿ ಜೀವನ ಮಾಡುತ್ತಿದ್ದರು. ಇದೇ ಬ್ರಾಹ್ಮಣರಿಗೆ ಯೋಗ್ಯ ಜೀವನೋಪಾಯವೆನಿಸುತ್ತದೆ. ಎಲ್ಲಾ ವಸ್ತುಗಳಲ್ಲಿಯೂ ಆಸೆಯನ್ನು ಬಿಟ್ಟರು. ನಿಷ್ಕಾಮಕರ್ಮಗಳನ್ನು ಮಾಡುತ್ತಾ ಶ್ರೀಹರಿಯನ್ನು ಸೇವಿಸುತ್ತಾ ಹಸ್ತಿನಾವತಿಯಲ್ಲಿ ವಾಸಿಸಿದರು.

ಅವರೂ ಭೀಷ್ಮರೂ ಪರಶುರಾಮದೇವರ ಶಿಷ್ಯರು ಬ್ರಹ್ಮದೇವರ ವಿಶೇಷಾವೇಶದಿಂದ ಯುಕ್ತರು. ಆದ್ದರಿಂದ ಅವರಿಬ್ಬರಿಗೂ ತುಂಬಾ ಸ್ನೇಹವು ಏರ್ಪಟ್ಟಿತು. ಕೃಪಾಚಾರ್ಯರಲ್ಲಿ ಇಷ್ಟು ಗುಣಗಳಿಲ್ಲದಿರುವುದರಿಂದ ಅವರಲ್ಲಿ ದ್ರೋಣಾಚಾರ್ಯರಿಗೆ ಕಡಿಮೆ ಪ್ರೀತಿಯು ಏರ್ಪಟ್ಟಿತು.

## ವಿರಾಟರಾಜ

ಹಾ ಹಾ ಎಂಬ ಗಂಧರ್ವನು ಬ್ರಹ್ಮಸಭೆಯಲ್ಲಿ ಸಂಗೀತಗಾರನಾಗಿದ್ದನು. ಅವನು ಮರುತ್ತುಗಳಲ್ಲಿ ವಿವಹ ಎಂಬುವವನ ಆವೇಶದಿಂದ ಯುಕ್ತನಾಗಿ ವಿರಾಟ ಎಂಬ ರಾಜನಾಗಿ ಅವತರಿಸಿದನು. ಅವನು ಭೀಷ್ಮ ದ್ರೋಣ ಕೃಪರಿಗೆ ಸಮಾನ ವಯಸ್ಸಿನವನು. ಧರ್ಮದಿಂದ ರಾಜ್ಯವನ್ನು ರಕ್ಷಿಸುತ್ತಿದ್ದನು.

## ಸತ್ಯವತೀದೇವಿ

ಅಗ್ನಿಷ್ವಾತ್ತ ಎಂದು ಪ್ರಸಿದ್ಧರಾದ ಪಿತೃಗಳು ದೇವಲೋಕದಲ್ಲಿರುವವರು. ಅವರನ್ನು ದೇವತೆಗಳು ಆರಾಧಿಸುತ್ತಿರುವವರು. ಅವರು ತಮಗೆ ಮಗಳು ಹುಟ್ಟಬೇಕೆಂದು ಸಂಕಲ್ಪಿಸಿದರು. ಆ ಕ್ಷಣದಲ್ಲಿ ಅಚ್ಛೋದಾ ಎಂಬ ಹೆಸರಿನಿಂದ ಒಬ್ಬ ಮಗಳು ಹುಟ್ಟಿದಳು. ಸ್ತ್ರೀಪುರುಷರ ಸಂಪರ್ಕವಿಲ್ಲದೆ ಸಂಕಲ್ಪಮಾತ್ರದಿಂದ ಹುಟ್ಟಿರುವುದರಿಂದ ಅವಳು ಮಾನಸಕುಮಾರಿಯೆನಿಸಿದಳು. ನದಿಯ ರೂಪವನ್ನು ಧರಿಸಿದಳು. ನಾರಾಯಣನ ಪ್ರೀತೀಗಾಗಿ ಉಗ್ರವಾದ ತಪಸ್ಸನ್ನು ಅನೇಕ ಸಹಸ್ರವರ್ಷಗಳವರೆಗೆ ಮಾಡಿದಳು. ಶ್ರೀಹರಿಯು ಪ್ರತ್ಯಕ್ಷನಾದನು. ನಿನ್ನ ಮಗನಾಗಿ ನಾನು ಅವತರಿಸುವೆನು''. ಎಂದು ವರವನ್ನು ಕೊಟ್ಟನು.

ವಸು ಎಂಬ ಮಹಾವಿಷ್ಣುಭಕ್ತನು ಬೇಟೆಯಾಡುತ್ತಿದ್ದನು. ಆಗ ಅವನಿಗೆ ಶ್ರೀಹರಿಸಂಕಲ್ಪದಿಂದ ಹೆಂಡತಿಯ ಸ್ಮರಣೆಯು ಏರ್ಪಟ್ಟಿತು. ಕೂಡಲೇ ವೀರ್ಯಸ್ಖಲನವಾಯಿತು. ಆ ವೀರ್ಯವನ್ನು ವ್ಯರ್ಥ ಮಾಡಕೂಡದೆಂದು ಸಂಕಲ್ಪಿಸಿದನು. ತನ್ನಲ್ಲಿ ಪಳಗಿದ ಒಂದು ಗೃಧ್ರಪಕ್ಷಿಯು ಸಮೀಪದಲ್ಲೇ ಇತ್ತು. ಆ ವೀರ್ಯವನ್ನು ಆ ಗೃಧ್ರಪಕ್ಷಿಯ ಬಾಯಿಯಲ್ಲಿಟ್ಟನು. "ಇದನ್ನು ಹೆಂಡತಿಗೆ ಕೊಡು" ಎಂದು ಹೇಳಿದನು. ಆ ಪಕ್ಷಿಯು ಇವನ ಊರಿಗೆ ಬರುತ್ತಿತ್ತು ಆಗ ಇನ್ನೊಂದು ಗೃಧ್ರಪಕ್ಷಿಗೂ ಈ ಪಕ್ಷಿಗೂ ಜಗಳವು ಏರ್ಪಟ್ಟಿತು. ಆ ಜಗಳದ ಮಧ್ಯದಲ್ಲಿ ಆ ಪಕ್ಷಿಯ ಬಾಯಿಯಿಂದ ಈ ವೀರ್ಯವು ಕೆಳಗೆ ಬಿತ್ತು. ಕೆಳಗೆ ಯಮುನಾನದಿಯು ಹರಿಯುತ್ತಿತ್ತು. ಯಮುನೆಯಲ್ಲಿ ಬಿದ್ದ ಆ ವೀರ್ಯವನ್ನು ಒಂದು ಹೆಣ್ಣು ಮೀನು ನುಂಗಿತು. ಆ ಮೀನು ಗರ್ಭಿಣಿಯಾಯಿತು. ಕೆಲವು ಬೆಸ್ತರು ಬಲೆಯನ್ನು

ಹಾಕಿದಾಗ ಆ ಬಲೆಯಲ್ಲಿ ಇತರ ಮೀನುಗಳೊಡನೆ ಈ ಮೀನು ಸಿಕ್ಕಿತು. ಈ ಮೀನನ್ನು ಬೆಸ್ತರು ಸೀಳಿದರು. ಹೊಟ್ಟೆಯಲ್ಲಿ ಗಂಡುಮಗುವೂ ಹೆಣ್ಣು ಮಗುವೂ ಇತ್ತು. ಈ ಎರಡು ಮಕ್ಕಳನ್ನು ತಮ್ಮ ರಾಜನಿಗೆ ಬೆಸ್ತರು ಕೊಟ್ಟರು. ಆ ರಾಜನು ತನ್ನ ದೊರೆಯಾದ ವಸುರಾಜನಿಗೆ ಆ ಎರಡು ಮಕ್ಕಳನ್ನು ಕೊಟ್ಟನು. ವಸುರಾಜನು ಮಗನನ್ನು ತಾನೇ ಇಟ್ಟುಕೊಂಡನು. ಆ ಮಗನು ಮೀನಿನ ಹೊಟ್ಟೆಯಿಂದ ಹುಟ್ಟಿದುದರಿಂದ "ಮತ್ಸ್ಯರಾಜ" ಎಂದು ಪ್ರಸಿದ್ಧನಾದನು. ಮಗಳನ್ನು ಬೆಸ್ತರ ರಾಜನಿಗೆ ಕೊಟ್ಟನು. ಪರಮಸುಂದರಿಯಾದ ಆ ಕನ್ಯೆಯಾಗಿ ಹಿಂದೆ ಹೇಳಿದ ಅಚ್ಛೋದಾ ಎಂಬ ದೇವಪಿತೃಗಳ ಕನ್ಯೆಯು ಅವತರಿಸಿದಳು. ಸತ್ಯವತೀ ಎಂದು ಪ್ರಸಿದ್ಧಳಾದಳು. ಅವಳು ಬೆಸ್ತರ ರಾಜನ ಮನೆಯಲ್ಲಿಯೇ ಬೆಳೆದಳು. ಯಾತ್ರಿಕರನ್ನು ಯಮುನಾನದಿಯಿಂದ ದಾಟಿಸುತ್ತಿದ್ದಳು.

# ವೇದವ್ಯಾಸರು

ಅದೇ ಸಮಯದಲ್ಲಿ ಬ್ರಹ್ಮದೇವರ ಮಗನಾದ ವಸಿಷ್ಠರ ಮೊಮ್ಮಗನೂ ಶಕ್ತಿ ಎಂಬ ಮುನಿಯ ಮಗನೂ ಆಗಿರುವ ಪರಾಶರ ಎಂಬ ಮುನಿಯು ಶ್ರೀಹರಿಯೇ ತನಗೆ ಮಗನಾಗಿ ಅವತರಿಸಬೇಕೆಂದು ಉಗ್ರವಾದ ತಪಸ್ಸನ್ನು ಮಾಡಿದನು. ಶ್ರೀಹರಿಯು ಅವರ ತಪಸ್ಸಿನಿಂದ ಪ್ರಸನ್ನನಾದನು. ಅವರ ಮಗನಾಗಿ ಸತ್ಯವತೀದೇವಿಯಲ್ಲಿ ಅವತರಿಸುವುದಾಗಿ ವರವನ್ನು ಕೊಟ್ಟನು.

ವಸುರಾಜನ ಮಗಳೂ ಬೆಸ್ತರ ರಾಜನ ಮನೆಯಲ್ಲಿ ಬೆಳೆಯುತ್ತಿರುವವಳೂ ಆಗಿರುವ ಸತ್ಯವತಿಯು ಒಮ್ಮೆ ಹಡಗಿನಿಂದ ಯಾತ್ರಿಕರನ್ನು ಯಮುನಾನದಿಯಿಂದ ದಾಟಿಸುತ್ತಿದ್ದಳು. ಆಗ ಆ ಮಾರ್ಗವಾಗಿ ಪರಾಶರರು ಬಂದರು. ಅವರು ಅವಳ ಹಡಗಿನಲ್ಲಿ ಕುಳಿತರು. ಅವಳನ್ನು ಮೋಹಿಸಿದರು. ಅವಳೂ ಅವರನ್ನು ನೋಡಿ ಮೋಹಿಸಿದಳು. ಇಬ್ಬರೂ ತಮ್ಮ ತಂದೆ ತಾಯಿ ಮುಂತಾದ ಬಂಧುಗಳನ್ನು ಸ್ಮರಿಸಿದರು. ಅವರೆಲ್ಲರೂ ಬಂದರು. ವಸು ರಾಜನು ತನ್ನ ಕನ್ಯೆಯಾದ ಸತ್ಯವತೀದೇವಿಯನ್ನು ಪರಾಶರರಿಗೆ ಕೊಟ್ಟು ಬ್ರಾಹ್ಮವಿವಾಹ ಕ್ರಮದಿಂದ ವಿವಾಹವನ್ನು ಮಾಡಿಸಿದನು.

ಸತ್ಯವತೀದೇವಿಗೆ ಅಚ್ಛೋದಾ ಎಂಬ ಹಿಂದಿನ ಜನ್ಮದಲ್ಲಿಯೂ ಕೊಟ್ಟಿರುವ ವರವನ್ನು ಸತ್ಯವಾಗುವಂತೆ ಮಾಡುವುದಕ್ಕಾಗಿ ಶ್ರೀಹರಿಯು ಅವರಿಬ್ಬರಿಗೆ ಮಗನಾಗಿ ವೇದವ್ಯಾಸ ಎಂಬ ರೂಪದಿಂದ ಯಮುನಾನದಿಯ ಮಧ್ಯದಲ್ಲಿರುವ ದ್ವೀಪದಲ್ಲಿ ಅವತರಿಸಿ, ವೇದಗಳನ್ನು ವಿಭಾಗಿಸಿ, ಸಕಲ ಶಾಸ್ತ್ರಗಳನ್ನೂ ರಚಿಸಿದನು.

# ಸತ್ಯವತೀದೇವಿಯನ್ನು ಶಂತನುರಾಜನು ವಿವಾಹ ಮಾಡಿಕೊಂಡದ್ದು

ಸತ್ಯವತೀದೇವಿಯು ಪರಾಶರರ ಅನುಗ್ರಹದಿಂದ ಪುನಃ ಕನ್ಯಾತ್ವವನ್ನು ಪಡೆದಳು. ಬೇಟೆ ಯಾಡುವುದಕ್ಕಾಗಿ ಹೋಗಿದ್ದ ಶಂತನುರಾಜನು ಸತ್ಯವತೀದೇವಿಯನ್ನು ನೋಡಿ ಮೋಹಿಸಿ ಅವಳನ್ನು ತನ್ನ ಪತ್ನಿಯಾಗ ಬೇಕೆಂದು ಕೇಳಿದನು. ಅವಳು ತನ್ನ ತಂದೆಯಲ್ಲಿ ಕೇಳಬೇಕೆಂದು ಹೇಳಿದಳು. ಶಂತನುರಾಜನು ಅವಳ ತಂದೆಯೆಂದು ಪ್ರಸಿದ್ಧನಾದ ಬೆಸ್ತರ ರಾಜನಲ್ಲಿ ಕೇಳಿದನು. ಅವಳ ಹೊಟ್ಟೆಯಲ್ಲಿ ಹುಟ್ಟುವ ಮಗನಿಗೆ ರಾಜ್ಯವು ಸಿಗುವುದಾದರೆ

ತನ್ನ ಮಗಳನ್ನು ಕೊಡುವುದಾಗಿ ಅವನು ತಿಳಿಸಿದನು. ಜ್ಯೇಷ್ಠಪುತ್ರನಾದ ಭೀಷ್ಮನಿರುವಾಗ ಅವನನ್ನು ಬಿಟ್ಟು ಸತ್ಯವತಿಯ ಮಗನಿಗೆ ರಾಜ್ಯವನ್ನು ಕೊಡುವುದು ಶಂತನು ರಾಜನಿಗೆ ಸಂಮತವಾಗಲಿಲ್ಲ. ಅವಳನ್ನು ಸ್ಮರಿಸುತ್ತಾ ಬಾಡಿದ ಮುಖದಿಂದ ಮನೆಗೆ ಬಂದನು.

ಭೀಷ್ಮನು ತಂದೆಯ ಮುಖವು ಬಾಡಿರುವುದನ್ನು ನೋಡಿದನು. ಸಾರಥಿಯನ್ನು ಕೇಳಿ ಎಲ್ಲಾ ವಿಷಯಗಳನ್ನೂ ತಿಳಿದುಕೊಂಡನು. ಬೆಸ್ತರ ರಾಜನ ಮನೆಗೆ ಹೋದನು. ಸತ್ಯವತಿಯನ್ನು ತನ್ನ ತಂದೆಗಾಗಿ ಕೇಳಿದನು. ತನಗೆ ತಂದೆಯು ಕೊಟ್ಟ ರಾಜ್ಯವನ್ನು ಅವಳ ಮಗನಿಗೆ ಕೊಡುವುದಾಗಿ ಪ್ರತಿಜ್ಞೆ ಯನ್ನು ಮಾಡಿದನು. ಆದರೂ ಬೆಸ್ತರ ರಾಜನಿಗೆ ಭೀಷ್ಮರ ಮಾತಿನಲ್ಲಿ ನಂಬಿಕೆಯು ಬರಲಿಲ್ಲ. " ನನ್ನ ಮಗನಿಗೆ ರಾಜ್ಯವು ಸಿಗುತ್ತದೆ ಎಂಬ ಕಾರಣದಿಂದಲ್ಲವೇ ನಿನಗೆ ಭಯ. ಈ ಜನ್ಮದಲ್ಲಿ ನಾನು ವಿವಾಹವನ್ನೇ ಮಾಡಿಕೊಳ್ಳುವುದಿಲ್ಲ." ಎಂದು ಪ್ರತಿಜ್ಞೆಯನ್ನು ಮಾಡಿದನು.

ಈ ಭಯಂಕರವಾದ ಪ್ರತಿಜ್ಞೆಯನ್ನು ದೇವತೆಗಳು ಕೇಳಿದರು. "ಭೀಷ್ಮ" ಅಂದರೆ ಭಯಂಕರವಾದ "ವ್ರತ" ಅಂದರ ಬ್ರಹ್ಮಚರ್ಯ ಎಂಬ ನಿಯಮವನ್ನು ಧರಿಸಿರುವುದರಿಂದ ಭೀಷ್ಮವ್ರತಃ ಭೀಷ್ಮ ಎಂಬ ನಾಮಕರಣವನ್ನು ಮಾಡಿದರು. ಇವನ ತಲೆಯ ಮೇಲೆ ಪುಷ್ಪದ ಮಳೆಯನ್ನು ಸುರಿಸಿದರು.

ಇವೆಲ್ಲವನ್ನೂ ನೋಡಿದ ಬೆಸ್ತರ ರಾಜನು ಬೆರಗಾದನು. ಭೀಷ್ಮರ ಮಾತುಗಳನ್ನು ನಂಬಿದನು. ಸತ್ಯವತೀದೇವಿಯನ್ನು ಶ್ರೀಭೀಷ್ಮರ ವಶದಲ್ಲಿ ಸಮರ್ಪಿಸಿದನು. ಭೀಷ್ಮರು ಅವಳನ್ನು ಕರೆದುಕೊಂಡು ಬಂದು ಶಂತನುರಾಜನಿಗೆ ಸಮರ್ಪಿಸಿದರು.

ಬೆಸ್ತರಜಾತಿಯು ನೀಚಜಾತಿಯಾಗಿರುತ್ತದೆ. ವ್ಯಭಿಚಾರಾದಿ ನೀಚ ಕಾರ್ಯಗಳಲ್ಲಿಯೂ ಆಸಕ್ತವಾಗಿರುತ್ತದೆ. ಆ ಜಾತಿಯಲ್ಲಿ ಹುಟ್ಟಿದ ಸ್ತ್ರೀಯನ್ನು ಧರ್ಮನಿರತನಾದ ಶಂತನುವು ಹೇಗೆ ವಿವಾಹ ಮಾಡಿಕೊಂಡನು? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಈಗ ಉತ್ತರವನ್ನು ಕೊಡುತ್ತೇವೆ.

ಈ ಸತ್ಯವತೀದೇವಿಯು ಬೆಸ್ತರ ಜಾತಿಯಲ್ಲಿ ಹುಟ್ಟಲಿಲ್ಲ. ಮೀನಿನ ಹೊಟ್ಟೆಯನ್ನು ಸೀಳಿದಾಗ ಸಿಕ್ಕಿದವಳು. ಅವಳ ತೇಜಸ್ಸು ಮುಂತಾದ ಗುಣಗಳನ್ನು ನೋಡಿದ ಬೆಸ್ತರ ರಾಜನು ಅವಳು ಸಾಮಾನ್ಯ ಮೀನಿನ ಮಗಳಲ್ಲವೆಂದೂ ಯಾರೋ ಕ್ಷತ್ರಿಯನ ವೀರ್ಯದಿಂದ ಮೀನಿನ ಹೊಟ್ಟೆಯಲ್ಲಿ ಹುಟ್ಟಿರುವ ಮಹಾಮಹಿಮಳಾದ ಕ್ಷತ್ರಿಯ ಸ್ತ್ರೀಯಳೆಂದು ಊಹಿಸಿದನು. ತನ್ನ ಜಾತಿಗೆ ಯೋಗ್ಯವಾದ ಆಹಾರ ಮುಂತಾದವುಗಳಿಂದ ಇವಳನ್ನು ಬೆಳೆಸಲಿಲ್ಲ. ಕ್ಷತ್ರಿಯಜಾತಿಗೆ ಯೋಗ್ಯವಾದ ಆಹಾರ ಮುಂತಾದವುಗಳಿಂದಲೇ ಬೆಳೆಸಿದನು. ಆದ್ದರಿಂದ ಇವಳ ಜನ್ಮವೂ ಬೆಳವಣಿಗೆಯೂ ದುಷ್ಟವಲ್ಲ ಎಂದು ಶಂತನು ರಾಜನು ಮೊಟ್ಟಮೊದಲು ಬೆಸ್ತರ ರಾಜನ ಮೂಲಕವಾಗಿ ತಿಳಿದುಕೊಂಡನು. ಭೀಷ್ಮನು ಅವಳನ್ನು ಕರೆದುಕೊಂಡು ಬಂದನು. ತನ್ನ ತಂದೆಗೂ ಅವಳಿಗೂ ವಿವಾಹವನ್ನು ಮಾಡಿಸಿದನು.

# ಸಜ್ಜನರ ಮನಸ್ಸಿಗೆ ತೋರಿದ್ದೇ ಧರ್ಮ

ಸಜ್ಜನರ ಮನಸ್ಸು ಯಾವಾಗಲೂ ಕೆಟ್ಟಕೆಲಸಗಳನ್ನು ಮಾಡುವುದರಲ್ಲಿ ಪ್ರವೃತ್ತವಾಗುವುದಿಲ್ಲ. ಇದು ಸಾಮಾನ್ಯ ನಿಯಮ. ತನ್ನ ಯೋಗ್ಯತೆಯನ್ನು ಮೀರಿ ಅಧಿಕವಾದ ಪುಣ್ಯವನ್ನು ಸಂಪಾದಿಸಿದವರು ಆ ಅಧಿಕವಾದ

ಪುಣ್ಯವನ್ನು ಕಳೆದುಕೊಳ್ಳಬೇಕು. ಅದಕ್ಕಾಗಿ ಅವರಿಗೆ ಕೆಟ್ಟಕೆಲಸಗಳನ್ನು ಮಾಡಬೇಕೆಂಬ ದುರ್ಬುದ್ಧಿಯು ಹುಟ್ಟುವುದೂ ಉಂಟು.

ಚಂದ್ರನು ಹುಟ್ಟಿದ ದಿನದಿಂದ ಮೇರುಪರ್ವತವನ್ನು ಪ್ರದಕ್ಷಣೆ ಮಾಡಲು ಆರಂಭಿಸಿ ಈ ಕಲ್ಪವು ಮುಗಿಯುವವರೆಗೂ ಎಡೆಬಿಡದೇ ಪ್ರದಕ್ಷಿಣೆ ಮಾಡುತ್ತಿರುವನು. ಇದರಿಂದ ಅವನಿಗೆ ತನ್ನ ಯೋಗ್ಯತೆಗಿಂತ ಅಧಿಕವಾದ ಪುಣ್ಯವು ಬರುತ್ತದೆ. ಆ ಅಧಿಕವಾದ ಪುಣ್ಯವನ್ನು ಕಳೆದುಕೊಳ್ಳಬೇಕು. ಆ ಪುಣ್ಯವು ಹೋಗುವ ವರೆಗೆ ಅವನಿಗೆ ಮುಕ್ತಿಯು ಸಿಗಲಾರದು. ಭಕ್ತಾಗ್ರೇಸರನಾದ ಚಂದ್ರನಿಗೆ ಆ ಹೆಚ್ಚಿನ ಪುಣ್ಯವನ್ನು ಪರಿಹರಿಸುವುದಕ್ಕಾಗಿಯೇ ದುರ್ಬುದ್ಧಿಯನ್ನು ಶ್ರೀಹರಿಯು ಕೊಟ್ಟನು. ಆ ದುರ್ಬುದ್ಧಿಯಿಂದಲೇ ತನಗಿಂತಲೂ ಉತ್ತಮರಾದ ಶ್ರೀಬೃಹಸ್ಪತ್ಯಾಚಾರ್ಯರ ಪತ್ನಿಯಾದ ತಾರಾದೇವಿಯ ಅಂಗಸಂಗವನ್ನು ಚಂದ್ರನು ಮಾಡಿದನು. ಅದರಿಂದ ಹೆಚ್ಚಿನ ಪುಣ್ಯವನ್ನು ಕಳೆದುಕೊಂಡು ಮುಕ್ತಿಯನ್ನು ಪಡೆಯುವುದಕ್ಕೆ ಅರ್ಹನಾದನು.

ಸುಗ್ರೀವನು ಶ್ರೀರಾಮದೇವನ ಸೇವೆಯನ್ನು ತನ್ನ ಯೋಗ್ಯತೆಗಿಂತ ಅಧಿಕವಾಗಿ ಮಾಡಿದನು. ಇದರಿಂದ ಬಂದ ಅಧಿಕವಾದ ಪುಣ್ಯವು ನಶಿಸಿದ ಮೇಲೆಯೇ ಅವನಿಗೆ ಮುಕ್ತಿಯು ಏರ್ಪಡುತ್ತದೆ. ಅದಕ್ಕಿಂತ ಪೂರ್ವದಲ್ಲಿ ಮುಕ್ತಿಯು ಸಿಗಲಾರದು. ಭಕ್ತಾಗ್ರೇಸರನಾದ ಸುಗ್ರೀವನ ಅಧಿಕವಾದ ಪುಣ್ಯವನ್ನು ಕಳೆಯುವುದಕ್ಕಾಗಿಯೇ ಶ್ರೀಹರಿಯು ದುರ್ಬುದ್ಧಿಯನ್ನು ಕೊಟ್ಟನು. ಆ ದುರ್ಬುದ್ಧಿಯಿಂದಲೇ ಸುಗ್ರೀವನು ತನ್ನ ಅಣ್ಣನೂ, ತನಗಿಂತ ಯೋಗ್ಯತೆಯಲ್ಲಿ ಉತ್ತಮನೂ ಆಗಿರುವ ವಾಲಿಯ ಪತ್ನಿಯಾದ ತಾರಾದೇವಿಯ ಅಂಗಸಂಗವನ್ನು ಮಾಡಿದನು. ಅಧಿಕವಾದ ಪುಣ್ಯವನ್ನು ತಾರಾಸಂಗದಿಂದ ಕಳೆದುಕೊಂಡು ಮುಕ್ತಿಯನ್ನು ಪಡೆಯುವುದಕ್ಕೆ ಅರ್ಹನಾದನು.

ಶಂತನುರಾಜನು ಚಂದ್ರನಂತೆಯೂ ಸುಗ್ರೀವನಂತೆಯೂ ತನ್ನ ಯೋಗ್ಯತೆಗಿಂತ ಅಧಿಕವಾದ ಪುಣ್ಯವನ್ನು ಸಂಪಾದಿಸಿದವನಲ್ಲ. ಆದ್ದರಿಂದ ಮೇಲ್ಕಂಡ ಸಾಮಾನ್ಯನಿಯಮದಂತೆ ಅವನಿಗೆ ದುರ್ಬುದ್ಧಿಯು ಬರುವುದಕ್ಕೆ ಅವಕಾಶವಿಲ್ಲ. ಈ ವಿಷಯವನ್ನು ಶಂತನುರಾಜನು ತಿಳಿದಿದ್ದನು. ಆದ್ದರಿಂದಲೇ ಕೆಳಗೆ ಕಂಡಂತೆ ತಾನು ಆಲೋಚಿಸಿದನು.

"ನಾನು ನನ್ನ ಯೋಗ್ಯತೆಗಿಂತ ಅಧಿಕವಾದ ಪುಣ್ಯವನ್ನು ಸಂಪಾದಿಸಿದವನಲ್ಲ. ಆದ್ದರಿಂದ ನನಗಾಗಲೀ ನನ್ನಂತಿರುವ ಇತರ ಸಜ್ಜನರಿಗಾಗಲೀ ಯಾವ ವಿಧವಾದ ದುರ್ಬುದ್ಧಿಯನ್ನೂ ಶ್ರೀಹರಿಯು ಕೊಡುವುದಿಲ್ಲ. ನಮಗೆ ಮನಸ್ಸಿನಲ್ಲಿ ತೋರಿರುವುದೆಲ್ಲಾ ಸತ್ಪ್ರೇರಣೆಯಿಂದಲೇ ಏರ್ಪಟ್ಟಿರುವುದೆಂದೇ ಹೇಳಬೇಕು. ಈಗ ನನಗೆ ಈ ಸತ್ಯವತೀದೇವಿಯಲ್ಲಿ ಆಸೆಯು ಏರ್ಪಟ್ಟಿತು. ಈ ಆಸೆಯೂ ಸತ್ಪ್ರೇರಣೆಯಿಂದಲೇ ಏರ್ಪಟ್ಟಿರುವುದಾಗಿ ತಿಳಿಯುವೆನು.

"ಕ್ಷತ್ರಿಯಜಾತಿಯವರು ವ್ಯಭಿಚಾರಾದಿನಿರತರಾಗಿರುವ ನೀಚಜಾತಿಯವರಲ್ಲಿ ಹುಟ್ಟಿದ ಕನ್ಯೆಯನ್ನು ವಿವಾಹ ಮಾಡಿಕೊಳ್ಳುವುದು. ಅಧರ್ಮವೆನಿಸುತ್ತದೆ. ಈ ಕಾರ್ಯವನ್ನು ಮಾಡಬೇಕೆಂಬ ಬುದ್ಧಿಯೂ ಸತ್ಪ್ರೇರಣೆಯಿಂದ ಹುಟ್ಟಿದ ಬುದ್ಧಿಯಲ್ಲ. ನನ್ನ ಬುದ್ಧಿಯು ಸತ್ಪ್ರೇರಣೆಯಿಂದಲೇ ಹುಟ್ಟಿರುವುದರಿಂದ ಇವರ ಸಂಗವು ಅಧರ್ಮವಲ್ಲವೆಂದು ತೀರ್ಮಾನಿಸುವೆನು.

" ಇವಳ ತೇಜಸ್ಸು ಮುಂತಾದ ಗುಣಗಳನ್ನು ವಿಮರ್ಶಿಸುವಾಗ ಇವಳು ಕ್ಷತ್ರಿಯ ಜಾತಿಯಲ್ಲಿ ಹುಟ್ಟಿದವಳೇ ಹೊರತು ಇತರ ಜಾತಿಯಲ್ಲಿ ಹುಟ್ಟಿದವಳಲ್ಲ ಎಂದು ತೀರ್ಮಾನಿಸುವೆನು."

"ಇವಳಿಗೆ ಸತ್ಯವತೀ ಎಂದು ಹೆಸರು. ಸತ್ಯ ಎಂಬ ಹೆಸರಿನಿಂದ ಯುಕ್ತನಾದ ಶ್ರೀಹರಿಯ ತಾಯಿಯಾಗಿರುವುದರಿಂದಲೇ ಇವಳಿಗೆ ಈ ಹೆಸರು ಬಂದಿರುತ್ತದೆ. ಶ್ರೀಹರಿಯು ಮಗನಾಗಿ ಅವತರಿಸಬೇಕಾದರೆ ವ್ಯಭಿಚಾರಾದಿನಿರತವಾದ ನೀಚ ಜಾತಿಯಲ್ಲಿ ಇವಳು ಹುಟ್ಟಲಿಲ್ಲವೆಂದೇ ತೀರ್ಮಾನಿಸುವೆನು.

"ಇವಳು ಬೆಸ್ತರ ರಾಜನ ಮನೆಯಲ್ಲಿದ್ದರೂ ಬೆಸ್ತರ ಜಾತಿಗೆ ಯೋಗ್ಯವಾದ ಅನ್ನದಿಂದಲೂ ಇತರ ಆಹಾರವಸ್ತುಗಳಿಂದಲೂ ಬೆಳೆದವಳಲ್ಲ. ರಾಜಯೋಗ್ಯವಾದ ಆಹಾರಗಳಿಂದ ಬೆಳೆದವಳು. ಆದ್ದರಿಂದಲೇ ಸ್ವೀಕಾರಾರ್ಹಳು" ಎಂದು ತೀರ್ಮಾನಿಸಿದನು.

ಮೇಲ್ಕಂಡಂತೆ ವಿಮರ್ಶಿಸಿದ ಧರ್ಮನಿರತನಾದ ಶಂತನುರಾಜನು ಅವಳು ತನಗೆ ಯೋಗ್ಯಳೆಂದು ತೀರ್ಮಾನಿಸಿ ಅವಳನ್ನು ವಿವಾಹ ಮಾಡಿಕೊಂಡನು.

## ಭೀಷ್ಮನಿಗೆ ಶಂತನುವಿನ ವರ

ಭೀಷ್ಮನು ತಂದೆಯ ಸುಖಕ್ಕಾಗಿ ತನ್ನ ಸುಖವನ್ನು ಬಿಟ್ಟನು. ಇದರಿಂದ ತಂದೆಯು ಸಂತುಷ್ಟನಾದನು. (೧) ತನ್ನ ಇಚ್ಛೆಯಿಲ್ಲದೆ ಸಾಯಬಾರದು. ತಾನು ಅಪೇಕ್ಷಿಸಿದಾಗಲೇ ಸಾಯಬೇಕು. (೨) ಯುದ್ಧದಲ್ಲಿ ಇನ್ನೊಬ್ಬರಿಂದ ಸೋಲಬಾರದು (೩) ಇನ್ನೊಬ್ಬರು ಯಾವ ಕಾರಣದಿಂದಲೂ ಬಲಾತ್ಕಾರದಿಂದ ಭೀಷ್ಮನನ್ನು ವಶಪಡಿಸಿಕೊಳ್ಳಬಾರದು. ಈ ಮೂರು ವರಗಳನ್ನು ಶ್ರೀಭೀಷ್ಮನಿಗೆ ಶಂತನುರಾಜನು ಕೊಟ್ಟನು.

## ಶಂತನುರಾಜನ ದೇಹತ್ಯಾಗ

ಸತ್ಯವತೀದೇವಿಯೊಡನೆ ಅನೇಕ ವರ್ಷಗಳವರೆಗೆ ಸುಖಿಸಿದನು. ಅವನಿಗೆ ಅವಳಲ್ಲಿ ಚಿತ್ರಾಂಗದ, ವಿಚಿತ್ರವೀರ್ಯ ಎಂಬ ಎರಡು ಗಂಡುಮಕ್ಕಳು ಹುಟ್ಟಿದರು. ಮಕ್ಕಳು ಹುಟ್ಟಿದಾಗ ಶಂತನುರಾಜನು ತುಂಬಾ ಮುದುಕನಾಗಿದ್ದನು. ಅವನ ದೇಹವು ತುಂಬಾ ಜೀರ್ಣವಾಗಿತ್ತು. ಈ ಜೀರ್ಣವಾದ ದೇಹದಿಂದ ತನಗೆ ಪ್ರಯೋಜನವಿಲ್ಲವೆಂದು ತಿಳಿದನು. ದೇಹವನ್ನು ತ್ಯಜಿಸಬೇಕೆಂದು ಇಚ್ಛಿಸಿದನು. ಅದಕ್ಕಾಗಿ ಬಲವಾದ ಯೋಗಾಭ್ಯಾಸವನ್ನು ಮಾಡಿದನು. ಯೋಗಬಲದಿಂದ ಶ್ರೀಹರಿಯನ್ನು ಸ್ಮರಿಸುತ್ತಾ ದೇಹವನ್ನು ತ್ಯಜಿಸಿದನು. ತನ್ನ ಮೂಲರೂಪವಾದ ವರುಣನಲ್ಲಿ ಐಕ್ಯವನ್ನು ಹೊಂದಿದನು.

ಶಂತನು ರಾಜನು ದ್ವಾಪರಯುಗದಲ್ಲಿದ್ದವನು. ವಿಷಯದಲ್ಲಿ ಅತ್ಯಂತ ಆಸಕ್ತಿಯುಳ್ಳವರೂ ದೀರ್ಘವಾದ ತಪಸ್ಸುಗಳನ್ನು ಮಾಡದವರೂ ವಾರ್ಧಕ್ಯಾವಸ್ಥೆಯಲ್ಲಿ ಬಲವತ್ತರವಾದ ರೋಗಾದಿಗಳಿಂದ ಪೀಡಿತರಾಗಿ ಅಥವಾ ಬಲಿಷ್ಠರಾದ ರಾಜಾದಿಗಳಿಂದ ಕೊಲ್ಲಲ್ಪಟ್ಟು ಆ ಯುಗದಲ್ಲಿ ಸಾಯುತ್ತಿದ್ದರು.

ಇದಕ್ಕೆ ಶಂತನು ರಾಜನ ಎರಡನೆಯ ಮಗನಾಗಿರುವ ವಿಚಿತ್ರವೀರ್ಯನೇ ದೃಷ್ಟಾಂತ. ಅವನು ತಪಸ್ಸನ್ನು

ಮಾಡಲಿಲ್ಲ. ಅಧಿಕವಾದ ವಿಷಯಾಸಕ್ತಿಯಿಂದ ಯುಕ್ತನಾಗಿದ್ದನು. ಆದ್ದರಿಂದಲೇ ಕ್ಷಯರೋಗದಿಂದ ಪೀಡಿತನಾಗಿ ಸತ್ತನು. ಇದು ಅತ್ಯಂತ ಪ್ರಸಿದ್ಧವಾದ ವಿಷಯ.

ವಿಷಯಗಳಲ್ಲಿ ಅತ್ಯಂತ ಆಸಕ್ತಿಯಿಲ್ಲದವರೂ ಅಧಿಕವಾದ ತಪಸ್ಸುಗಳನ್ನು ಮಾಡುತ್ತಿದ್ದರೂ ಆಗಿನ ಕಾಲದಲ್ಲಿ ತಮ್ಮ ವಾರ್ಧಕ್ಯಾವಸ್ಥೆಯಲ್ಲಿ ಸಾಯುವುದಕ್ಕೆ ಎರಡು ಕಾರಣಗಳು. ೧) ತಾವೇ ಸಾಯಬೇಕೆಂದು ಇಷ್ಟಪಡಬೇಕು. ೨) ಅವರಿಗಿಂತ ಬಲಿಷ್ಠರಾದವರು ಅವರನ್ನು ಕೊಲ್ಲಬೇಕು. ಈ ಎರಡು ಕಾರಣಗಳನ್ನು ಬಿಟ್ಟು ಬೇರೆ ಕಾರಣಗಳಿಂದ ಯಾರೂ ಸಾಯುತ್ತಿದ್ದಿಲ್ಲ. ಶಂತನುರಾಜನು ಈ ಎರಡು ಕಾರಣಗಳ ಮಧ್ಯದಲ್ಲಿ ಮೊದಲನೆಯ ಕಾರಣದಿಂದ ಸತ್ತನು. ತನ್ನ ಮಗನಾದ ಭೀಷ್ಮನಿಗೆ ಇಚ್ಛೆಯಿಂದ ಮರಣವು ಏರ್ಪಡುವಂತೆ ವರವನ್ನು ಕೊಟ್ಟಿರುವ ಶಂತನುರಾಜನು ಇಚ್ಛೆಯಿಂದ ಮರಣವನ್ನು ಹೊಂದಿರುವುದು ಆಶ್ಚರ್ಯವಲ್ಲ.

ಇಚ್ಛಾಮರಣವನ್ನು ಶಂತನುರಾಜನು ಕೊಡದಿದ್ದರೂ ಮೇಲ್ಕಂಡ ಎರಡು ಮರಣಕಾರಣಗಳಲ್ಲಿ ಒಂದಾದ ಇಚ್ಛಾಮರಣವು ವಿಷಯಗಳಲ್ಲಿ ಆಸಕ್ತಿಯಿಲ್ಲದವನೂ ಮಹಾತಪಸ್ವಿಯೂ ಆಗಿರುವ ಭೀಷ್ಮನಿಗೆ ಏರ್ಪಡುತ್ತಿತ್ತು. ಆದರೆ ಅವನಿಗಿಂತಲೂ ಬಲಿಷ್ಠರಿಂದ ಅವನಿಗೆ ಮರಣವು ಏರ್ಪಡಕೂಡದೆಂದೂ ಇಚ್ಛಾ ಮರಣವೇ ಏರ್ಪಡಬೇಕೆಂದು ಅದರಿಂದ ಅವನಿಗೆ ವಿಶೇಷಕೀರ್ತಿಯು ಬರಬೇಕೆಂದೂ ಈ ವರವನ್ನು ಕೊಟ್ಟಿರುವ ಶಂತನುವಿನ ಅಭಿಪ್ರಾಯ.

## ಚಿತ್ರಾಂಗದನ ವಧೆ

ತನ್ನ ತಂದೆಯಾದ ಶಂತನುರಾಜನು ಸತ್ತಮೇಲೆ ಅವನಿಗೆ ಮಾಡಬೇಕಾದ ಪಿತೃಕರ್ಮಗಳನ್ನೆಲ್ಲವನ್ನೂ ಭೀಷ್ಮನು ಸಹೋದರರಿಂದ ಸಹಿತನಾಗಿ ಮಾಡಿ ಮುಗಿಸಿದನು. ಸತ್ಯವತೀದೇವಿಯಲ್ಲಿ ಶಂತನುರಾಜನಿಗೆ ಹುಟ್ಟಿರುವ ಚಿತ್ರಾಂಗದ ವಿಚಿತ್ರವೀರ್ಯ ಎಂಬ ಎರಡು ಮಕ್ಕಳಲ್ಲಿ ದೊಡ್ಡವನಾದ ಚಿತ್ರಾಂಗದನನ್ನು ತನ್ನ ತಂದೆಯಾದ ಶಂತನುವಿನ ರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಿದನು. ಚಿತ್ರಾಂಗದ ಎಂಬ ಗಂಧರ್ವಜಾತಿಯಲ್ಲಿ ಹುಟ್ಟಿದ ದೈತ್ಯನು ಪ್ರಪಂಚದಲ್ಲಿ ಚಿತ್ರಾಂಗದ ಎಂಬ ಹೆಸರು ತನಗೊಬ್ಬನಿಗೆ ಮಾತ್ರ ಇರಬೇಕೆಂದು ಸಂಕಲ್ಪಿಸಿದನು. ಶಂತನುರಾಜನ ಮಗನಾದ ಚಿತ್ರಾಂಗದನಿಗೆ ಚಿತ್ರಾಂಗದ ಎಂಬ ಹೆಸರನ್ನು ಬಿಡಬೇಕೆಂದು ಹೇಳಿ ಕಳುಹಿಸಿದನು. ಇವನು ಕೇಳಲಿಲ್ಲ. ಅದಕ್ಕಾಗಿ ಇವನೊಡನೆ ಯುದ್ಧವನ್ನು ಮಾಡಿದನು. ಆ ಯುದ್ಧದಲ್ಲಿ ಭೀಷ್ಮನ ತಮ್ಮನಾದ ಚಿತ್ರಾಂಗದನು ಸತ್ತನು.

## ವಿಚಿತ್ರವೀರ್ಯನ ವಿವಾಹ

ಅವನು ಸತ್ತ ಮೇಲೆ ಅವನ ತಮ್ಮನಾದ ವಿಚಿತ್ರವೀರ್ಯನಿಗೆ ಭೀಷ್ಮನು ಪಟ್ಟಾಭಿಷೇಕವನ್ನು ಮಾಡಿದನು. ತಾನೇ ರಾಜ್ಯದ ಎಲ್ಲಾ ನಿರ್ವಾಹಗಳನ್ನೂ ಮಾಡಿದನು. ಅದೇ ಸಮಯದಲ್ಲಿ ಕಾಶೀದೇಶದ ಅರಸನು ಅಂಬಾ ಅಂಬಾಲಿಕಾ ಎಂಬ ತನ್ನ ಮೂವರು ಹೆಣ್ಣುಮಕ್ಕಳಿಗೆ ಸ್ವಯಂವರಮಹೋತ್ಸವವನ್ನು ಏರ್ಪಡಿಸಿದನು. ಆ ಸ್ವಯಂವರಮಹೋತ್ಸವಕ್ಕೆ ಪ್ರಪಂಚದಲ್ಲಿ ಪ್ರಸಿದ್ಧರಾದ ಎಲ್ಲಾ ರಾಜಕುಮಾರರೂ ಬಂದಿದ್ದರೂ. ಭೀಷ್ಮನು ತನ್ನ ತಮ್ಮನಾದ ವಿಚಿತ್ರವೀರ್ಯನಿಗೆ ಆ ಕನ್ಯೆಯರನ್ನು ತಂದು ವಿವಾಹವನ್ನು ಮಾಡಬೇಕೆಂದು ಸಂಕಲ್ಪಿಸಿದನು.

ಆ ಸ್ವಯಂವರಮಹೋತ್ಸವದಲ್ಲಿ ಅಂಬಾ ಎಂಬುವವಳು ಸಾಲ್ವದೇಶದ ಅಧಿಪತಿಯಾಗಿರುವ ಬ್ರಹ್ಮದತ್ತ ಎಂಬ ಅಸುರನನ್ನು ವರಿಸಿದಳು. ಅವನು ಅವಳ ಕೈಗಳನ್ನು ಹಿಡಿಯಬೇಕು. ಆ ಸಮಯದಲ್ಲಿ ಭೀಷ್ಮನು ಅಲ್ಲಿಗೆ ಹೋದನು. ಬ್ರಹ್ಮದತ್ತನನ್ನೂ ಅಲ್ಲಿ ನೆರೆದಿರುವ ಎಲ್ಲಾ ರಾಜರುಗಳನ್ನೂ ಗೆದ್ದನು. ಆ ಮೂರು ಹುಡುಗಿಯರನ್ನೂ ಕರೆದುಕೊಂಡು ಊರಿಗೆ ಬಂದನು. ತನ್ನ ತಮ್ಮನಾದ ವಿಚಿತ್ರವೀರ್ಯನನ್ನು ವಿವಾಹಮಾಡಿಕೊಳ್ಳಬೇಕೆಂದು ಹೇಳಿದನು. ಆ ಮೂವರಲ್ಲಿ ಅಂಬಿಕಾ ಅಂಬಾಲಿಕಾ ಎಂಬ ಇಬ್ಬರು ಶಾಪದಿಂದ ಹುಟ್ಟಿದವರಲ್ಲ. ಪರಮಮಂಗಲಸ್ವಭಾವವುಳ್ಳವರು. ಆದ್ದರಿಂದ ಒಪ್ಪಿದರು. ಅವರಿಬ್ಬರನ್ನೂ ವಿಚಿತ್ರವೀರ್ಯನಿಗೆ ಕೊಟ್ಟು ವಿವಾಹವನ್ನು ಮಾಡಿಸಿದನು.

## ಅಂಬೆಯ ಚರಿತ್ರೆ

ಭೀಷ್ಮನ ಮೂಲರೂಪವಾದ "ದ್ಯು" ಎಂಬ ವಸುವಿನ ಪತ್ನಿಯಾದ ವರಾಂಗಿಯು ಅಂಬಾ ಎಂದು ಕಾಶೀರಾಜನ ಕುಮಾರಿಯಾಗಿ ಅವತರಿಸಿದಳು. ೧) ಅವಳಿಗೆ ಬ್ರಹ್ಮದೇವರ ಶಾಪದಿಂದ ಈ ಜನ್ಮದಲ್ಲಿ ವಿವಾಹವಿಲ್ಲ ೨) ದೇವತಾಸ್ತ್ರೀಯರು ಮನುಷ್ಯರಾಗಿ ಅವತರಿಸಿದರೂ ಮನುಷ್ಯರ ಪತ್ನಿಯರಾಗುವುದಕ್ಕೆ ಅರ್ಹರಲ್ಲ. ಈ ಎರಡುಕಾರಣಗಳಿಂದ ಅವಳು ವಿಚಿತ್ರವೀರ್ಯನನ್ನು ವಿವಾಹವನ್ನು ಮಾಡಿಕೊಳ್ಳಲಿಕ್ಕೆ ಸಮ್ಮತಿಸಲಿಲ್ಲ. "ಬ್ರಹ್ಮದತ್ತ ರಾಜನನ್ನು ನಾನು ವರಿಸಿರುವೆನು. ಅವನನ್ನು ಬಿಟ್ಟು ಇನ್ನೊಬ್ಬರನ್ನು ವರಿಸಲಾರೆನು" ಎಂದಳು. ಹೀಗೆ ಹೇಳಿರುವುದೂ ಕ್ರಮವಾಗಿ ಮುಂದೆ ಅವಳಿಗೆ ಈ ಜನ್ಮದಲ್ಲಿ ವಿವಾಹವು ನಡೆಯದಿರುವುದಕ್ಕೂ ಬ್ರಹ್ಮದೇವರ ಶಾಪವು ಸತ್ಯವಾಗುವುದಕ್ಕೂ ಕಾರಣವಾಯಿತು. ಅದ್ದರಿಂದಲೇ ಶ್ರೀಹರಿಯು ಅವಳ ಬಾಯಿಯಿಂದ ಅ ಮಾತುಗಳನ್ನು ನುಡಿಸಿದನು.

ಈ ಮಾತುಗಳನ್ನು ಕೇಳಿದ ಭೀಷ್ಮನು ಅವಳ ಇಚ್ಛೆಗೆ ವಿರೋಧವಾಗಿ ವಿಚಿತ್ರವೀರ್ಯನಿಗೆ ಅವಳನ್ನು ವಿವಾಹ ಮಾಡಲು ಒಪ್ಪಲಿಲ್ಲ. ಅವಳ ಇಚ್ಛೆಯಂತೆ ಬ್ರಹ್ಮದತ್ತನನ್ನೇ ವಿವಾಹಮಾಡಿಕೊಳ್ಳುವುದಕ್ಕೆ ಸಮ್ಮತಿಸಿದನು. ಹಿಂದಿರುಗಿ ಬ್ರಹ್ಮದತ್ತನಲ್ಲಿಗೆ ಕಳುಹಿಸಿದನು. ಅವಳೂ ಬ್ರಹ್ಮದತ್ತನಲ್ಲಿಗೆ ಬಂದಳು. ತಾನು ಬ್ರಹ್ಮದತ್ತನನ್ನು ಆಸೆಯಿಂದ ವರಿಸಿರುವುದಾಗಿಯೂ ಆದ್ದರಿಂದಲೇ ಭೀಷ್ಮನಿಂದ ಅನುಮತಿಯನ್ನು ಪಡೆದು ಹಿಂದಿರುಗಿ ಬಂದಿರುವುದಾಗಿಯೂ ಬ್ರಹ್ಮದತ್ತನಲ್ಲಿ ಪ್ರಾರ್ಥಿಸಿದಳು.

ಭೀಷ್ಮನು ಬಲಾತ್ಕಾರದಿಂದ ಕೈಹಿಡಿದು ಸೆಳೆದುಕೊಂಡು ಹೋಗಿರುವ ಸ್ತ್ರೀಯನ್ನು ನಾನು ಮುಟ್ಟಲಾರೆನೆಂದು ಬ್ರಹ್ಮದತ್ತನು ಅವಳನ್ನು ತಿರಸ್ಕರಿಸಿದನು. ಅವಳು ಹಿಂದಿರುಗಿ ಬಂದಳು. ನೀನು ನನ್ನನ್ನು ಮುಟ್ಟಿರುವಿ. ಆದ್ದರಿಂದ ನೀನೇ ನನ್ನನ್ನು ವಿವಾಹಮಾಡಿಕೊಳ್ಳಬೇಕೆಂದು ನಿರ್ಬಂಧಿಸಿದಳು. ನೀನು ನನ್ನನ್ನು ವಿವಾಹ ಮಾಡಿಕೊಳ್ಳದಿದ್ದರೆ ಪರಪುರುಷನಾದ ನೀನು ಕೈಹಿಡಿದು ಸೆಳೆದುಕೊಂಡು ಬಂದಿರುವ ನನ್ನನ್ನು ಸಾಲ್ವನಂತೆ ಮರ್ಯಾದೆಯುಳ್ಳ ಯಾವನೂ ಸ್ವೀಕರಿಸಲಾರನೆಂದೂ ಆದ್ದರಿಂದಲೇ ಈ ಜನ್ಮದಲ್ಲಿ ನನಗೆ ವಿವಾಹವೇ ಏರ್ಪಡದಂತಾಗುವುದೆಂದೂ ತನ್ನ ದುರವಸ್ಥೆಯನ್ನು ಕುರಿತು ಹೇಳಿಕೊಂಡಳು.

"ನಾನು ಈ ಜನ್ಮದಲ್ಲಿ ಬ್ರಹ್ಮಚರ್ಯವ್ರತವನ್ನು ಧರಿಸುವುದಾಗಿ ಪ್ರತಿಜ್ಞೆ ಮಾಡಿದ್ದೇನೆ. ಆದ್ದರಿಂದ ನಾನು

ಸ್ವೀಕರಿಸುವುದಿಲ್ಲ. ಪರಪುರುಷನಲ್ಲಿ ಆಸೆಯನ್ನು ಇಟ್ಟುಕೊಂಡಿರುವ ನಿನ್ನನ್ನು ನನ್ನ ತಮ್ಮನಿಗಾಗಿಯೂ ಸ್ವೀಕರಿಸಲಾರೆನು. '' ಎಂದು ಭೀಷ್ಮನು ಹೇಳಿದನು. ಅಂಬೆಯು ಭೀಷ್ಮನನ್ನು ಒಪ್ಪಿಸುವುದಕ್ಕಾಗಿ ಬಹಳ ಪ್ರಯತ್ನವನ್ನು ಮಾಡಿದಳು. ಭೀಷ್ಮನು ಒಪ್ಪಲಿಲ್ಲ.

ಅಂಬೆಯು ಆಲೋಚಿಸಿದಳು. '' ಈ ಭೀಷ್ಮನು ಶ್ರೀಪರಶುರಾಮದೇವನ ಶಿಷ್ಯನು ಶ್ರೀಪರಶುರಾಮದೇವನಲ್ಲಿ ಅತ್ಯಂತಭಕ್ತಿ ಯುಳ್ಳವನು. ಅವನ ಮಾತನ್ನು ಮೀರಲಾರ. ಹಾಗೆ ಮೀರುವ ಸಂದರ್ಭ ಬಂದರೆ ಇವನನ್ನು ನಿಗ್ರಹಿಸುವ ಶಕ್ತಿಯು ಶ್ರೀಪರಶುರಾಮದೇವನಿಗೆ ಇರುತ್ತದೆ. ಇವನನ್ನು ಬಲದಿಂದಲಾದರೂ ಬಗ್ಗಿಸಿ ಇವನು ನನ್ನನ್ನು ಪರಿಗ್ರಹಿಸುವಂತೆ ಮಾಡುವೆನು'' ಎಂದು ತೀರ್ಮಾನಿಸಿದಳು. ಶ್ರೀ ಪರಶುರಾಮದೇವನಲ್ಲಿಗೆ ಬಂದಳು. ಅವನಲ್ಲಿ ಎಲ್ಲಾ ಸಮಾಚಾರವನ್ನೂ ತಿಳಿಸಿದಳು. ಶ್ರೀಪರಶುರಾಮದೇವನನ್ನು ಭಕ್ತಿಯಿಂದ ಸಂತೋಷಪಡಿಸಿದಳು. ತನ್ನನ್ನು ಭೀಷ್ಮನು ವಿವಾಹ ಮಾಡಿಕೊಳ್ಳುವಂತೆ ಮಾಡಬೇಕೆಂದು ಪ್ರಾರ್ಥಿಸಿದಳು. ಶ್ರೀಪರಶುರಾಮದೇವನು ಆಲೋಚಿಸಿದನು.

"(೧) ಈ ಅಂಬೆಯು ಅತ್ಯಂತ ಭಕ್ತಿಯಿಂದ ನನ್ನನ್ನು ಆರಾಧಿಸಿರುವಳು. (೨) ಮೂಲ ರೂಪದಲ್ಲಿ ತನ್ನ ಪತಿಯಾಗಿರುವ ಭೀಷ್ಮನನ್ನು ಈ ಜನ್ಮದಲ್ಲಿಯೂ ಪತಿಯಾಗುವಂತೆ ಮಾಡಬೇಕೆಂದು ನನ್ನಲ್ಲಿ ಪ್ರಾರ್ಥಿಸಿರುವಳು. ಈ ಆಸೆಯು ಯೋಗ್ಯವಾದ ಆಸೆಯೇ ಹೊರತು ಅಯೋಗ್ಯವಾದ ಆಸೆಯಲ್ಲ. ಆದ್ದರಿಂದ ಇವಳ ಆಸೆಯನ್ನು ಪೂರ್ತಿಮಾಡಲೇಬೇಕು."

"(೧) ಈ ಅಂಬೆಯು ತನ್ನ ಮೂಲರೂಪದಲ್ಲಿ ವರಾಂಗಿಯಾಗಿರುವಾಗ ಮಾಡಿರುವ ಅಪರಾಧದಿಂದ ಈ ಜನ್ಮವನ್ನು ಪಡೆದಿರುವಳು. (೨) ತನ್ನ ಪತಿಗೂ ಜನ್ಮವನ್ನು ಪಡೆಯುವುದಕ್ಕೆ ಕಾರಣಳಾಗಿರುವಳು. (೩) ಈ ಜನ್ಮದಲ್ಲಿಯೂ ತನ್ನ ಪತಿಯನ್ನು ಬಿಟ್ಟು ಪರಪುರುಷನಾದ ಸಾಲ್ವನನ್ನು ಬಯಸಿರುವಳು (೪) ಇನ್ನು ಮುಂದೆ ರುದ್ರದೇವನನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಿ ಭೀಷ್ಮನನ್ನು ಸಂಹರಿಸುವಂತಾಗಬೇಕೆಂದು ವರವನ್ನು ಬೇಡುವಳು. (೫) ತನ್ನ ಪತಿಯ ಮರಣಕ್ಕೆ ಕಾರಣಳಾಗುವಳು. ಈ ಪಾಪಗಳೆಲ್ಲವೂ ಅನೇಕ ಜನ್ಮಗಳಲ್ಲಿ ಅನುಭವಿಸಬೇಕಾದ ಮಹಾಪಾಪಗಳೆನಿಸುತ್ತವೆ. ಅದು ಮಾತ್ರವಲ್ಲ. ಇಂತಹ ಪಾಪಗಳು ಇನ್ನು ಮುಂದೆ ಯಾವ ಜನ್ಮದಲ್ಲಿಯೂ ಪತಿಯ ಸಮಾಗಮವು ಏರ್ಪಡದಂತೆ ಮಾಡುವ ಮಹಾಪಾಪಗಳೆನಿಸುತ್ತವೆ. ಆದ್ದರಿಂದ ಇನ್ನು ಮುಂದೆ ಇವಳಿಗೆ ತನ್ನ ಮೂಲರೂಪದ ಪತಿಯ ಸಮಾಗಮವು ಯಾವ ಕಾರಣದಿಂದಲೂ ಏರ್ಪಡಲಾರದು. ಆದರೆ ನನ್ನನ್ನು ಆರಾಧಿಸಿ ಸಂತೋಷಪಡಿಸಿದವರಿಗೆ ಎಂದಿಗೂ ದುರ್ಗತಿಯು ಏರ್ಪಡಬಾರದು. ಆದ್ದರಿಂದ ಇವಳಿಗೆ ಇವಳ ಪಾಪದಿಂದ ಅಸಂಖ್ಯ ಜನ್ಮಗಳಲ್ಲಿ ಏರ್ಪಡದಿರುವ ಪತಿಸಮಾಗಮವನ್ನು ಎರಡು ಜನ್ಮಗಳ ಅನಂತರದಲ್ಲಿ ಏರ್ಪಡಿಸುತ್ತೇನೆ."

" ಬ್ರಹ್ಮದೇವನು ಈ ಜನ್ಮದಲ್ಲಿ ಇವಳಿಗೆ ವಿವಾಹವಿಲ್ಲವೆಂದು ಹೇಳಿರುವನು. ರುದ್ರದೇವನು ಇವಳು ಮುಂದಿನ ಜನ್ಮದಲ್ಲಿ ಸ್ತ್ರೀಯಾಗಿ ಹುಟ್ಟುವುದಾಗಿಯೂ ಅನಂತರದಲ್ಲಿ ಪುರುಷತ್ವವನ್ನು ಪಡೆದು ಪತಿಯ ಮರಣಕ್ಕೆ ಕಾರಣಳಾಗುವುದಾಗಿಯೂ ಇನ್ನು ಮುಂದೆ ವರವನ್ನು ಕೊಡುವನು. ಈ ಬ್ರಹ್ಮನೂ ರುದ್ರನೂ ಇವಳಿಗಿಂತ ಅಧಿಕ ಭಕ್ತಿಯುಳ್ಳವರು, ಆದ್ದರಿಂದ ಅವರಿಬ್ಬರ ಮಾತುಗಳನ್ನು ಸತ್ಯವಾಗುವಂತೆ ಮಾಡುವುದಕ್ಕಾಗಿ ಈ ಜನ್ಮದಲ್ಲಿಯೂ

ಮುಂದಿನ ಜನ್ಮದಲ್ಲಿಯೂ ಇವಳನ್ನು ಭೀಷ್ಮನೊಡನೆಯಾಗಲೀ ಭೀಷ್ಮನ ಮೂಲರೂಪದೊಡನೆಯಾಗಲಿ ವಿವಾಹ ಮಾಡಿಸುವುದಿಲ್ಲ. ಅಸಂಖ್ಯ ಜನ್ಮಗಳಲ್ಲಿ ಏರ್ಪಡದಿರುವ ಪತಿಸಮಾಗಮವು ಇವಳಿಗೆ ಈ ಜನ್ಮವೂ ಮುಂದಿನ ಜನ್ಮವೂ ಮುಗಿದ ಕೂಡಲೇ ಭೀಷ್ಮನ ಮೂಲರೂಪದೊಡನೆ ಏರ್ಪಡುವಂತೆ ಮಾಡುವೆನು. ಇದು ನನ್ನ ಕರುಣೆಯ ಪ್ರಭಾವ."

"ಭೀಷ್ಮನು ಈ ಜನ್ಮದಲ್ಲಿ ಬ್ರಹ್ಮಚರ್ಯವ್ರತವನ್ನು ಸ್ವೀಕರಿಸಿರುವನು. ಬ್ರಹ್ಮದೇವನೂ ಸಹ ಇವನಿಗೆ ಈ ಜನ್ಮದಲ್ಲಿ ಬ್ರಹ್ಮಚರ್ಯವ್ರತವೇ ಹೊರತು ಪತ್ನೀಸಮಾಗಮವು ಇಲ್ಲವೆಂದೂ ಅಂಬೆಗೆ ಪತಿಸಮಾಗಮವು ಈ ಜನ್ಮದಲ್ಲಿ ಏರ್ಪಡುದಿಲ್ಲವೆಂದು ಹೇಳಿರುವನು. ಈ ಅಂಬೆಯು ಮಾತ್ರ ಈ ಜನ್ಮದಲ್ಲೇ ಪತಿಸಮಾಗಮವನ್ನು ಬಯಸುತ್ತಿರುವಳು. ಈ ಮೂವರ ಮಾತುಗಳಲ್ಲಿ ಬ್ರಹ್ಮದೇವನ ಮಾತು ಸತ್ಯವಾಗಬೇಕು. ಎರಡನೆಯದಾಗಿ ಭೀಷ್ಮನ ಪ್ರತಿಜ್ಞೆಯು ಸತ್ಯವಾಗಬೇಕು ಇವಳ ಆಸೆಯೂ ಪೂರ್ಣವಾಗಬೇಕು. ಆದರೆ ಈ ಜನ್ಮದಲ್ಲಿ ಅಲ್ಲ, ಮುಂದಿನ ಜನ್ಮದಲ್ಲಿಯೂ ಅಲ್ಲ. ಎರಡು ಜನ್ಮಗಳ ಅನಂತರದಲ್ಲಿ ಪೂರ್ಣವಾಗಲಿ."

" ಅಂಬೆಯು ಈ ಜನ್ಮದಲ್ಲಿಯೇ ಪತಿಸಮಾಗಮವನ್ನು ಬಯಸುತ್ತಿರುವಳು. ಅದಕ್ಕಾಗಿ ನನ್ನನ್ನು ಶರಣು ಹೊಂದಿರುವಳು. ನಾನು ಈಗ ಮಾಡಬೇಕಾದ ಕರ್ತವ್ಯವನ್ನು ನಿರ್ಧರಿಸಬೇಕು. ಭೀಷ್ಮನನ್ನು ಕರೆದು ಅಂಬೆಯನ್ನು ವಿವಾಹ ಮಾಡಿಕೋ ಎಂದು ಆಜ್ಞಾಪಿಸಲೇ? ಹಾಗೆ ಆಜ್ಞೆಯನ್ನು ಮಾಡಿದಾಗ ಭೀಷ್ಮನು ನನ್ನ ಆಜ್ಞೆಯಂತೆ ನಡೆದರೆ ಅವನು ಮಾಡಿರುವ ಬ್ರಹ್ಮಚರ್ಯಪ್ರತಿಜ್ಞೆಯೂ ಬ್ರಹ್ಮದೇವನು ಅವನಿಗೂ ಇವಳಿಗೂ ಕೊಟ್ಟಿರುವ ಶಾಪವೂ ಸುಳ್ಳಾಗುವುದು. ಅದು ಸರ್ವಥಾ ಕೂಡದು. ನನ್ನ ಭಕ್ತನ ಪ್ರತಿಜ್ಞೆಯು ಬ್ರಹ್ಮದೇವನ ಶಾಪವು ಸುಳ್ಳಾಗಬಹುದೇ?

"ನನ್ನ ಆಜ್ಞೆಯನ್ನು ಭೀಷ್ಮನು ಮೀರಿದರೆ ಅವನ ಪ್ರತಿಜ್ಞೆಯೂ ಬ್ರಹ್ಮದೇವನ ಶಾಪವೂ ಸತ್ಯವಾಗುತ್ತದೆ. ಆದರೆ ನನ್ನ ಆಜ್ಞೆಯನ್ನು ಮೀರಿದ ದೋಷವು ಭೀಷ್ಮನಿಗೆ ಬರುವುದಿಲ್ಲವೇ? ನನ್ನ ಆಜ್ಞೆಯನ್ನು ಭೀಷ್ಮನು ಮೀರಿದಾಗ ನಾನು ಸುಮ್ಮನೆ ಇರಬಹುದೇ? ನಾನು ಸುಮ್ಮನೆ ಇದ್ದರೂ ನನ್ನನ್ನು ನಂಬಿ ಬಂದಿರುವ ಅಂಬೆಯು ಸುಮ್ಮನಿರುವಳೇ? ಬಲಾತ್ಕಾರದಿಂದಲಾದರೂ ಭೀಷ್ಮನು ಅಂಬೆಯನ್ನು ಪರಿಗ್ರಹಿಸುವಂತೆ ಮಾಡಬೇಡವೇ? ಅದಕ್ಕಾಗಿ ಅವನೊಡನೆ ಯುದ್ಧವನ್ನು ನಾನು ಮಾಡಬೇಕಾದ ಪ್ರಸಕ್ತಿಯು ಬಂದಾಗ ನಾನು ಸೋಲಬೇಕೆ? **"ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ"** ಎಂಬ ಶ್ರುತಿಯು ನನ್ನನ್ನು ಅನಂತ ಶಕ್ತಿ ಯುಳ್ಳವನೆಂದು ಹೊಗಳುತ್ತಿದೆ. ಇಂತಹ ನನಗೆ ಪರಾಜಯವು ಎಲ್ಲಿ ಬಂತು. ನನಗೆ ಜಯವೇ ನಿಶ್ಚಿತ. ನಾನು ಜಯಿಸಿದರೆ ಪುನಃ ಭೀಷ್ಮನ ಪ್ರತಿಜ್ಞೆಯೂ ಬ್ರಹ್ಮದೇವನ ಶಾಪವೂ ಸುಳ್ಳಾಗುವುದಿಲ್ಲವೇ?

ಆದರೆ ನನಗೆ ಈಗ ಒಂದು ಉಪಾಯವು ತೋರುತ್ತಿದೆ. ನಾನು ಸೋಲದಿದ್ದರೂ ಸೋತವನಂತೆ ನಟಿಸಬೇಕು. **"ವಿದ್ಧವನ್ಮೂರ್ಛವಚ್ಛೈವ ಕೇಶವೋ ವೇದನಾರ್ತವತ್ । ದರ್ಶಯನ್ನಪಿ ಮೋಹಾಯ ನೈವ ವಿಷ್ಣುಸ್ತಥಾ ಭವೇತ್"** ಅಂದರೆ ಹೊಡೆಯಲ್ಪಡದಿದ್ದರೂ ಹೊಡೆಯಲ್ಪಟ್ಟವನಂತೆಯೂ, ಮೂರ್ಛಿತನಾಗದಿದ್ದರೂ ಮೂರ್ಛಿತನಂತೆಯೂ, ದುಃಖಪೀಡಿತನಲ್ಲದಿದ್ದರೂ ದುಃಖಪೀಡಿತನಂತೆಯೂ ದೈತ್ಯರಿಗೆ ವಿಪರೀತಜ್ಞಾನವನ್ನು ಕೊಡುವುದಕ್ಕಾಗಿ ಶ್ರೀಹರಿಯು ನಟಿಸುವುದುಂಟು. ಹಾಗೆ ನಟಿಸಿದ ಮಾತ್ರದಿಂದ ಶ್ರೀಹರಿಯು ಹೊಡೆಯಲ್ಪಟ್ಟವನು ಮೂರ್ಛಿತನೂ ದುಃಖಪೀಡಿತನೂ ಆಗಲಾರನು ಎಂದು ಪ್ರಮಾಣಗಳು ಸಾರುತ್ತಿವೆ. ಆ ಪ್ರಮಾಣಗಳನ್ನು ನಾನು ಶರಣುಹೊಂದಬೇಕು.

ಭೀಷ್ಮನಿಂದ ಸೋತಂತೆ ನಟಿಸಬೇಕು. " ಅಂಬೆಯೇ,ನನ್ನ ಶಿಷ್ಯನಾದ ಭೀಷ್ಮನು ನನ್ನ ಆಜ್ಞೆಯನ್ನು ಮೀರಿದನು. ಯುದ್ಧವನ್ನು ಮಾಡಿ ಸೋಲಿಸಿ ನನ್ನ ಆಜ್ಞೆಯನ್ನು ಮೀರದಂತೆ ಮಾಡವುದಕ್ಕಾಗಿ ಯತ್ನಿಸಿದೆನು. ಸಾಧ್ಯವಾಗಲಿಲ್ಲ. ನಾನೇ ಸೋತೆನು. ನೀನು ನನ್ನನ್ನು ಸೇವಿಸಿದುದಕ್ಕಾಗಿ ನಾನು ಮಾಡಬೇಕಾದ ಪ್ರಯತ್ನವನ್ನೆಲ್ಲಾ ಮಾಡಿಬಿಟ್ಟೆನು. ನನ್ನಿಂದ ನಿನ್ನ ಇಷ್ಟಾರ್ಥವನ್ನು ಪೂರ್ತಿಮಾಡಲು ಸಾಧ್ಯವಾಗಲಿಲ್ಲ. ಮನ್ನಿಸು, ನೀನು ಬೇರೆ ವಿಧದಿಂದ ನಿನ್ನ ಇಷ್ಟವನ್ನು ಪೂರ್ತಿಮಾಡಿಕೊಳ್ಳಲು ಯತ್ನಿಸು ಎಂದು ಹೇಳಿಬಿಡೋಣ." ಎಂದು ತೀರ್ಮಾನಿಸಿದನು.

ಶ್ರೀಪರಶುರಾಮದೇವನು ಅಂಬೆಯನ್ನು ಕರೆದುಕೊಂಡು ಭೀಷ್ಮನಿದ್ದಲ್ಲಿಗೆ ಬಂದನು. ಭೀಷ್ಮನು ಅತ್ಯಂತ ಭಕ್ತಿ ಯಿಂದ ಶ್ರೀಪರಶುರಾಮದೇವನನ್ನು ಪೂಜಿಸಿದನು. ಶ್ರೀಪರಶುರಾಮದೇವನು ಅಂಬೆಯನ್ನು ತೋರಿಸಿ " ಇವಳನ್ನು ಸ್ವೀಕರಿಸು" ಎಂದು ಆಜ್ಞಾಪಿಸಿದನು. ಭೀಷ್ಮನು ತನ್ನ ಪ್ರತಿಜ್ಞೆಯನ್ನು ತಿಳಿಸಿದನು. "ಗುರುವಿನ ಆಜ್ಞೆಗೆ ಮರ್ಯಾದೆಯನ್ನು ಕೊಡು. ನಿನ್ನ ಪ್ರತಿಜ್ಞೆಯನ್ನು ಬಿಡು." ಎಂದು ಪರುಶುರಾಮದೇವನು ನಿರ್ಬಂಧಿಸಿದನು. ಭೀಷ್ಮನು ಶ್ರೀಪರಶುರಾಮದೇವನ ಆಜ್ಞೆಯನ್ನು ಸ್ವೀಕರಿಸಲಿಲ್ಲ. ಇಬ್ಬರಿಗೂ ಅಂಬೆಯ ನಿಮಿತ್ತದಿಂದ ಘೋರವಾದ ಯುದ್ಧವಾಯಿತು. "ಶ್ರೀಪರಶುರಾಮನನ್ನು ಜಯಿಸಿದವನು" ಎಂಬ ಕೀರ್ತಿ ಭೀಷ್ಮನಿಗೆ ಕೊಡುವುದಕ್ಕಾಗಿಯೇ ಭೀಷ್ಮನೊಡನೆ ಯುದ್ಧವನ್ನು ಮಾಡಿದನು. ಅವನನ್ನು ಕೊಲ್ಲಲು ಶಕ್ತನಾದರೂ ಕೊಲ್ಲಲಿಲ್ಲ. ಅನಂತಶಕ್ತಿಯುಳ್ಳವನೂ ಸರ್ವಾಂತರ್ಯಾಮಿಯೂ ಸರ್ವಜ್ಞನೂ ಸರ್ವಪ್ರಪಂಚವನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡಿರುವವನೂ ಸರ್ವರನ್ನೂ ಜಯಿಸಿದವನೂ ಆಗಿರುವ ಶ್ರೀಪರಶುರಾಮದೇವನಿಗೆ ಸಮನು ರೂಯಾರು ಇಲ್ಲ. ಹೀಗಿರುವಾಗ ಉತ್ತಮನು ಎಲ್ಲಿರುವನು? ಅಂತಹ ಶ್ರೀಪರುಶುರಾಮದೇವನಿಗೆ ಯಾವ ಕಾಲದಲ್ಲಿ ಅಶಕ್ತಿಯಿದೆ? ಯುದ್ಧದಲ್ಲಿ ಶ್ರೀಪರಶುರಾಮದೇವನು ಪರಾಜಿತನಾಗಲಿಲ್ಲ. ಪರಾಜಿತನಂತೆ ನಟಿಸಿದನು. ಅಂಬೆಯನ್ನು ನೋಡಿ ಹೇಳಿದನು. " ಅಂಬೆಯೇ ನನ್ನಿಂದ ಸಾಧ್ಯವಾಗುವ ಪ್ರಯತ್ನವನ್ನೆಲ್ಲಾ ಮಾಡಿದೆನು. ಸಾಧ್ಯವಾಗಲಿಲ್ಲ. ಆದ್ದರಿಂದ ನಿನ್ನ ಕಾರ್ಯವನ್ನು ಸಾಧಿಸಿಕೊಳ್ಳಲು ಬೇರೆ ಪ್ರಯತ್ನವನ್ನು ಮಾಡು" ಎಂದು ಹೇಳಿದನು.

ಸರ್ವಶಕ್ತನೂ ಸರ್ವಾಂತರ್ಯಾಮಿಯೂ ಆಗಿರುವ ಶ್ರೀಪರಶುರಾಮದೇವನು "ನನ್ನಿಂದ ಭೀಷ್ಮನನ್ನು ಬಗ್ಗಿಸಲು ಸಾಧ್ಯವಾಗಲಿಲ್ಲ" ಎಂದು ಸುಳ್ಳನ್ನು ಹೇಳಬಹುದೇ? ಈ ಸುಳ್ಳನ್ನು ಹೇಳಿ ಶರಣಾಗತಳಾದ ಅಂಬೆಯನ್ನು ಮೋಸ ಮಾಡಬಹುದೇ? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಈಗ ಉತ್ತರವನ್ನು ಕೊಡುತ್ತೇವೆ.

ಇವಳ ಪ್ರೇರಣೆಯಿಂದ ಇವಳ ಪತಿಯು ಹಿಂದೆ ಅಕಾರ್ಯವನ್ನು ಮಾಡಿರುವನು. ಮುಂದೆ ಇವಳು ತನ್ನ ಪತಿಯನ್ನು ಸಂಹರಿಸುವುದಕ್ಕಾಗಿ ಯತ್ನಿಸುವಳು. ಈ ಕಾರ್ಯಗಳೆಲ್ಲವೂ ಇವರ ಪ್ರಾರಬ್ಧಪಾಪಕರ್ಮಗಳೆನಿಸುತ್ತವೆ. ಈ ಪ್ರಾರಬ್ಧಪಾಪಗಳನ್ನೆಲ್ಲವನ್ನೂ ಬಾರದಂತೆ ಮಾಡಲು ಸಾಧ್ಯವಿಲ್ಲ. ಇವಳಿಗೆ ಈಗಲೇ ಪತಿಸಮಾಗಮವು ಏರ್ಪಟ್ಟರೆ ಪತಿಯ ಸಂಹಾರಕ್ಕಾಗಿ ಇವಳು ಮಾಡಲಿರುವ ಪಾಪಕರ್ಮಗಳನ್ನು ಮಾಡಲು ಅವಕಾಶವು ಬರುವುದಿಲ್ಲ. ಆ ಪಾಪಗಳನ್ನೂ ಮಾಡಬೇಕು. ಆ ಪಾಪಗಳೆಲ್ಲವನ್ನೂ ಶ್ರೀಹರಿಯ ಶರಣಾಗತಿಯ ಬಲದಿಂದ ಇವಳು ಪರಿಹರಿಸಿಕೊಳ್ಳಲೂ ಬೇಕು. ಇದಕ್ಕೆ ಉಪಯುಕ್ತವಾಗುವ ಮಾತುಗಳೆಲ್ಲವೂ ಅವಳಿಗೆ ಹಿತಕರವಾಗುತ್ತವೆ. ಆ ಮಾತುಗಳನ್ನು ಆಡುವುದೇ ಸತ್ಯವೆನಿಸುತ್ತದೆ. ಹಿತಕರವಲ್ಲದ ಮಾತು ಸತ್ಯವಾಗಿದ್ದರೂ ಸುಳ್ಳೆನಿಸುತ್ತದೆ. ಹಿತಕರವಾದ ಮಾತು ಅಸತ್ಯವಾಗಿದ್ದರೂ ಸತ್ಯವೆನಿಸುತ್ತದೆ. ಇದು ಅತಿ ಸೂಕ್ಷ್ಮಧರ್ಮ. ಆದ್ದರಿಂದ ಅಂಬೆಗೂ

ಭೀಷ್ಮನಿಗೂ ಸಮಾಗಮವು ಈಗ ಏರ್ಪಡದಿರುವುದಕ್ಕೆ ಸಂಬಂಧಿಸಿದ ಎಲ್ಲಾ ಮಾತುಗಳೂ ಅವಳಿಗೂ ಹಿತಕರವಾದುದರಿಂದ ಅಸತ್ಯವಾಗಿದ್ದರೂ ಸತ್ಯವೆನಿಸುತ್ತವೆ. ಆದುದರಿಂದ ಶ್ರೀಪರಶುರಾಮದೇವನ ಎಲ್ಲಾ ಮಾತುಗಳೂ ಸುಳ್ಳಾದರೂ ಸತ್ಯವೆನಿಸುತ್ತವೆ.

ಅಂಬೆಯು ಶ್ರೀಪರಶುರಾಮದೇವನ ಸನ್ನಿಧಾನದಿಂದ ಹೊರಟಳು. ಕಾಡಿಗೆ ಬಂದಳು. ರುದ್ರದೇವರನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಿದಳು. ರುದ್ರದೇವರು ಪ್ರತ್ಯಕ್ಷರಾದರು. (೧) ಭೀಷ್ಮನು ಸಾಯಬೇಕು. (೨) ನಾನು ಇನ್ನೊಂದು ಜನ್ಮದಲ್ಲಿ ಗಂಡಸಾಗಬೇಕು. (೩)ಭೀಷ್ಮನ ಮರಣಕ್ಕೆ ಕಾರಣಳಾಗಬೇಕು.'' ಎಂಬ ವರವನ್ನು ಬೇಡಿದಳು. ಆ ವರವನ್ನು ಕೊಟ್ಟರು. ಒಂದು ಮಾಲೆಯನ್ನು ಅವಳ ಕೈಯಲ್ಲಿ ಕೊಟ್ಟರು. ಯಾವನು ಈ ಮಾಲೆಯನ್ನು ಧರಿಸುವನೋ ಅವನು ಭೀಷ್ಮನನ್ನು ಸಂಹರಿಸುವನು ಎಂದು ಹೇಳಿದರು.

ಅಂಬೆಯು ಆ ಮಾಲೆಯನ್ನು ಕೈಯಲ್ಲಿ ಧರಿಸಿದಳು. ಒಬ್ಬೊಬ್ಬ ರಾಜನ ಮನೆಗೂ ಹೋದಳು. " ಈ ಮಾಲೆಯನ್ನು ಧರಿಸುವವನು ಭೀಷ್ಮನನ್ನು ಕೊಲ್ಲುವನು. ಭೀಷ್ಮನನ್ನು ಕೊಲ್ಲಬೇಕೆಂದು ಇಚ್ಛಿಸುವವರು ಈ ಮಾಲೆಯನ್ನು ಸ್ವೀಕರಿಸಿ ಎಂದು ಹೇಳಿದಳು. ಆದರೆ ಭೀಷ್ಮನ ಭಯದಿಂದ ಈ ಮಾಲೆಯನ್ನು ಯಾರೂ ಸ್ವೀಕರಿಸಲಿಲ್ಲ. ಭೀಷ್ಮನ ಸಾಮರ್ಥ್ಯಾತಿಶಯವನ್ನು ಇದರಿಂದ ಊಹಿಸಬಹುದು. ಕೊನೆಗೆ ದ್ರುಪದರಾಜನ ಮನೆಗೆ ಬಂದಳು. ಅವನ ಮನೆಯ ಬಾಗಿಲಿನಲ್ಲಿ ಈ ಮಾಲೆಯನ್ನು ಇಟ್ಟಳು. ಯೋಗಾಭ್ಯಾಸಬಲದಿಂದ ಶ್ರೀಹರಿಯನ್ನು ಸ್ಮರಿಸುತ್ತಾ ದೇಹವನ್ನು ಬಿಟ್ಟಳು.

ಆ ಮಾಲೆಯನ್ನು ದ್ರುಪದರಾಜನು ನೋಡಿದನು. ಆ ಮಾಲೆಯಲ್ಲಿರುವ ಕಮಲಗಳು ಬಾಡಲಿಲ್ಲ. ಇಂತಹ ಅದ್ಭುತವಾದ ಮಾಲೆಯನ್ನು ದ್ರುಪದರಾಜನುತನ್ನ ಖಜಾನೆಗೆ ಸೇರಿಸಿದನು. ದ್ರೌಪದಿಸ್ವಯಂವರ ಕಾಲದಲ್ಲಿ ದ್ರೌಪದಿಯು ಇದೇ ಮಾಲೆಯನ್ನು ಅರ್ಜುನನ ಕಂಠದಲ್ಲಿ ಸಮರ್ಪಿಸಿದಳು. ಈ ಮಾಲೆಯ ಪ್ರಭಾವದಿಂದಲೇ ಅರ್ಜುನನು ಕಾಲಾಂತರದಲ್ಲಿ ಭೀಷ್ಮನನ್ನು ಸಂಹರಿಸುವನು.

ಇದೇ ಸಮಯದಲ್ಲಿ ಮಗನು ಹುಟ್ಟಬೇಕೆಂದು ದ್ರುಪದರಾಜನು ರುದ್ರದೇವರ ಪ್ರಿತ್ಯರ್ಥವಾಗಿ ಉಗ್ರವಾದ ತಪಸ್ಸನ್ನು ಮಾಡಿದನು. ರುದ್ರದೇವರು ಪ್ರಸನ್ನರಾದರು. "ದ್ರುಪದರಾಜನೇ, ನಿನಗೆ ಒಬ್ಬಳು ಮಗಳು ಹುಟ್ಟುತ್ತಾಳೆ. ಅವಳೇ ಕಾಲಾಂತರದಲ್ಲಿ ಗಂಡಸಾಗುವಳು'' ಎಂದರು. ಅವರ ಮಾತಿನಂತೆ ಅಂಬೆಯೇ ಎರಡನೆಯ ಜನ್ಮದಲ್ಲಿ ದ್ರುಪದರಾಜನಿಗೆ ಮಗಳಾಗಿ ಅವತರಿಸಿದಳು. ತಂದೆತಾಯಿಗಳು ಅವಳಿಗೆ ಶಿಖಿಂಡಿನೀ ಎಂದು ನಾಮಕರಣವನ್ನುಮಾಡಿದರು. ರುದ್ರದೇವರ ಮಾತನ್ನು ನಂಬಿ ಅವಳಿಗೆ ಗಂಡುಮಕ್ಕಳಿಗೆ ಮಾಡುವ ಚೌಲ ಉಪನಯನ ಮುಂತಾದ ಸಂಸ್ಕಾರಗಳನ್ನು ಮಾಡಿದರು. ಅವಳು ಹೆಣ್ಣುಮಗಳು ಎಂಬ ವಿಷಯ ಅವಳ ತಂದೆತಾಯಿಗಳಿಗೆ ಮಾತ್ರ ಗೊತ್ತು. ಬೇರೆ ಯಾರಿಗೂ ತಿಳಿಯದು. ಪುರುಷವೇಷದಂದಲೇ ಇದ್ದಳು.

ಅವಳಿಗೆ ದಶಾರ್ಣದೇಶದ ಅಧಿಪತಿಯಾದ ಹಿರಣ್ಯವರ್ಮನ ಕುಮಾರಿಯನ್ನು ಮದುವೆ ಮಾಡಿದರು. ಅವಳು'' ತನ್ನ ಪತಿಯು ಗಂಡಸಲ್ಲ. ತನ್ನಂತೆಯೇ ಹೆಂಗಸು'' ಎಂದು ತಿಳಿದಳು. ಅವಳು ತನ್ನನ್ನು ಸಾಕುತ್ತಿದ್ದವಳೂ ತಾಯಿಯ ಸ್ಥಾನದಲ್ಲಿ ಇದ್ದವಳೂ ಆಗಿರುವ ಸ್ತ್ರೀಯಲ್ಲಿ ಈ ವಿಷಯವನ್ನು ರಹಸ್ಯವಾಗಿ ತಿಳಿಸಿದಳು. ಆ ಸಾಕುತಾಯಿಯು ಅವಳ ತಂದೆಯಾದ ಹಿರಣ್ಯವರ್ಮನಿಗೆ ತಿಳಿಸಿದಳು. ಅವನು ಕುಪಿತನಾದನು. ದ್ರುಪದರಾಜನಿಗೆ

ದೂತನನ್ನು ಕಳುಹಿಸಿದನು. ಅವನನ್ನೂ ಅವನ ಪರಿವಾರಗಳನ್ನೂ ಸಂಹರಿಸುವುದಾಗಿ ತಿಳಿಸಿದನು. ಸೈನ್ಯಸಮೇತನಾಗಿ ಹೊರಟನು.

ಆಗ ದ್ರುಪದರಾಜನೂ ಸಹ ರುದ್ರದೇವರ ಮಾತನ್ನು ನಂಬಿ ದೂತನನ್ನು ಕಳುಹಿಸಿದನು. "ನನ್ನ ಮಗನನ್ನು ಪರೀಕ್ಷಿಸದೇ ಹೆಣ್ಣೆಂದು ಹೇಗೆ ಹೇಳಿದಿ. ಹುಡುಗರ ಹುಡುಗತನದ ಮಾತಿನಿಂದ ರಾಜಾಧಿರಾಜನಾದ ನಿನ್ನ ಬುದ್ಧಿಯು ಕೆಡಬಹುದೇ? ಇಂತಹ ಅವಿವೇಕಿಯು ರಾಜ್ಯಪಾಲನೆಗೆ ಅರ್ಹನಾಗುವನೇ? ನಿನಗೆ ನಂಬಿಕೆಯಿಲ್ಲದಿದ್ದರೆ ನನ್ನ ಮಗನನ್ನು ಪರೀಕ್ಷಿಸು" ಎಂದು ತಮಾಷೆಯಮಾತುಗಳನ್ನು ಹೇಳಿ ಕಳುಹಿಸಿದನು.

"ಹಿರಣ್ಯವರ್ಮನು ಅವಳನ್ನು ಪರೀಕ್ಷಿಸಲು ಬರುತ್ತಿರುವನು ಒಂದರೆಡು ದಿನಗಳಲ್ಲಿ ಗುಟ್ಟು ಹೊರಬರುತ್ತದೆ" ಎಂದು ದ್ರುಪದರಾಜನೂ ಅವನ ಪತ್ನಿಯೂ ತುಂಬಾ ಚಿಂತೆಯಿಂದ ಯುಕ್ತರಾದರು. ಇದನ್ನು ಶಿಖಂಡಿನಿಯು ನೋಡಿದಳು. " ನನ್ನ ತಂದೆತಾಯಿಗಳು ನನ್ನ ನಿಮಿತ್ತದಿಂದ ತುಂಬಾ ದುಃಖವನ್ನು ಅನುಭವಿಸುತ್ತಿರುವುರು. ನನ್ನ ಮಾವನು ಒಂದೆರಡು ದಿನಗಳಲ್ಲಿ ಸೈನ್ಯಯಸಮೇತನಾಗಿಇಲ್ಲಿಗೆ ಬರುವನು. ನನ್ನನ್ನು ಪರೀಕ್ಷಿಸುವನು. ಹೆಣ್ಣೆಂದು ತಿಳಿದು ನನ್ನ ತಂದೆ ತಾಯಿಗಳನ್ನು ಸಂಹರಿಸುವನು. ನನ್ನ ಮಾವನುಬರುವುದರೊಳಗೆ ನಾನು ಇಲ್ಲಿಂದ ಓಡಿ ಹೋಗಬೇಕು. ನಾನು ಇಲ್ಲದಿರುವುದರಿಂದ ನನ್ನನ್ನು ಪರೀಕ್ಷಿಸುವುದಕ್ಕೆ ಅವಕಾಶವು ಏರ್ಪಡುವುದಿಲ್ಲ. ನನ್ನನ್ನು ಪರೀಕ್ಷಿಸಿ ಮುಗಿಯುವ ವರೆಗೆ ನಾನು ಹೆಣ್ಣೆಂದು ಹಿರಣ್ಯವರ್ಮನಿಂದ ತೀರ್ಮಾನಿಸಲು ಸಾಧ್ಯವಾಗುವುದಿಲ್ಲ. ಅಷ್ಟರ ವರೆಗೆ ನನ್ನ ಮಾತಾಪಿತೃಗಳನ್ನು ನನ್ನ ಮಾವನು ಸಂಹರಿಸಲಾರನು. ಆದಕ್ಕಾಗಿ ನಾನು ಬೇಟೆಯಾಡುವ ನಿಮಿತ್ತದಿಂದ ಕಾಡಿಗೆ ಹೋದಂತೆ ಹೋಗಬೇಕು. ಅಲ್ಲಿಯೇ ಇರಬೇಕು" ಎಂದು ತೀರ್ಮಾನಿಸಿದಳು ಕಾಡಿಗೆ ಹೋದಳು. ಸ್ಥೂಣಾಕರ್ಣ ಅಂದರೆ ಗೂಟದಂತೆ ದೃಢವಾದ ಕಿವಿಗಳಿಂದ ಯುಕ್ತನಾದ ತುಂಬುರು ಎಂಬ ಗಂಧರ್ವನನ್ನು ನೋಡಿದಳು. ತನ್ನ ದುರವಸ್ಥೆಯನ್ನು ಹೇಳಿಕೊಂಡಳು. ಅವನಿಗೆ ಅವಳಲ್ಲಿ ಕೃಪೆಯು ಏರ್ಪಟ್ಟಿತು. ಅವನು ಅವಳನ್ನು ಕುರಿತು ಹೇಳಿದನು.

ಸ್ತ್ರಿಯಃ ಸತೀಸ್ತಾ ಉ ಮೇ ಪುಂಸ ಆಹುಃ ಪಶ್ಯದಕ್ಷಣ್ವಾನ್ನ ವಿಚೇತದಂಧಃ।
ಕವಿರ್ಯಃಪುತ್ರಃ ಸ ಇಮಾ ಚಿಕೇತ ಯಸ್ತಾ ವಿಜಾನಾತ್ಸ ಪಿತುಃ ಪಿತಾಸತ್॥

" ಈ ಶ್ರುತಿಯ ಅರ್ಥವನ್ನು ತಿಳಿಸುತ್ತೇನೆ (೧) ಸ್ತ್ರೀ ಜೀವರಿಗೆ ಬಿಂಬರೂಪವಾಗಿರುವ ಅಸಂಖ್ಯಸ್ತ್ರೀರೂಪಗಳು ನಾರಾಯಣನಿಗೆ ಇವೆ. (೨) ಬಿಂಬರೂಪವಲ್ಲದಿರುವ ನಾರಾಯಣೀ ವಾಗೀಶ್ವರೀ ಮುಂತಾದ ಅಸಂಖ್ಯರೂಪಗಳೂ ಇವೆ. ಈ ಎರಡು ವಿಧವಾದ ನಾರಾಯಣನ ಸ್ತ್ರೀರೂಪಗಳೂ ಸ್ತ್ರೀಶಕ್ತಿಯಿಂದಲೂ ಪುರುಷಶಕ್ತಿಯಿಂದಲೂ ಯುಕ್ತವಾಗಿವೆ. ಬರೀ ಸ್ತ್ರೀಶಕ್ತಿಯಿಂದ ಯುಕ್ತವಾಗಿಲ್ಲ. ಈ ವಿಷಯನ್ನು " ಆತ್ಮನಿ ಚೈವಂ ವಿಚಿತ್ರಾಶ್ಚ ಹಿ " ಮುಂತಾದ ಬ್ರಹ್ಮಸೂತ್ರ ಮುಂತಾದ ಪ್ರಮಾಣಗಳಿಂದ ಶ್ರೀವೇದವ್ಯಾಸರೇ ಮೊದಲಾದ ಜ್ಞಾನಿಗಳು ಹೇಳಿರುತ್ತಾರೆ. " ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ" ಮುಂತಾದ ಶ್ರುತಿಗಳೂ ತಿಳಿಸುತ್ತವೆ."

೧) ಆದ್ದರಿಂದಲೇ " ಅಮೃತವನ್ನು ಬಡಿಸುತ್ತಿದ್ದ ನಾರಾಯಣನ ನಾರಾಯಣೀ ಎಂಬ ಸ್ತ್ರೀರೂಪವು ರಾಹುವಿನ ಶಿರಸ್ಸನ್ನು ಕತ್ತರಿಸುವುದಕ್ಕಾಗಿ ಮರುಕ್ಷಣದಲ್ಲಿಯೇ ಪುರುಷತ್ವವನ್ನು ಪಡೆಯಿತು" ಎಂದು ಶ್ರೀಮದ್ಭಾಗವತದಲ್ಲಿ ಶ್ರೀವೇದವ್ಯಾಸರು ಹೇಳಿರುವರು. ಇದರಿಂದ ನಾರಾಯಣೀ ಎಂಬ ಸ್ತ್ರೀರೂಪಕ್ಕೆ ಸ್ತ್ರೀಶಕ್ತಿ

ಪುರುಷಶಕ್ತಿ ಎಂಬ ಎರಡು ವಿಧವಾದ ಶಕ್ತಿಗಳೂ ಇವೆ'' ಎಂದು ಸ್ಪಷ್ಟವಾಗುತ್ತದೆ.

೨) " **ಪುಂವಚ್ಛಕ್ತಿಯುತಾ ಯತಃ**" ಇತ್ಯಾದಿ ಪ್ರಮಾಣಗ್ರಂಥಗಳಲ್ಲಿ ನಾರಾಯಣೀ ಮುಂತಾದ ನಾರಾಯಣನ ಸ್ತ್ರೀ ರೂಪಗಳಿಗೆ ಪುರುಷರಂತೆ ಶಕ್ತಿ ಇರುವುದರಿಂದಲೇ "ಅಕ್ಷರಃ'' ಮುಂತಾದ ಪುಲ್ಲಿಂಗಶಬ್ದಗಳು ಹೆಸರಾಗಿವೆ ಎಂದು ಹೇಳಿರುತ್ತದೆ. ಇಲ್ಲಿಯೂ ಸ್ತ್ರೀರೂಪಗಳಲ್ಲಿ ಸ್ತ್ರೀಶಕ್ತಿ ಪುರುಷಶಕ್ತಿ ಇವೆರಡೂ ಇರುವುದಾಗಿ ತಿಳಿಯುತ್ತದೆ.''

" ಇದೇ ರೀತಿಯಲ್ಲಿ ದೈತ್ಯರನ್ನು ವಂಚಿಸಿ ಅವರ ಕೈಯಲ್ಲಿರುವ ಅಮೃತಕಲಶವನ್ನು ಸ್ವೀಕರಿಸುವುದಕ್ಕೆ ಶ್ರೀಹರಿಯು ಮರುಕ್ಷಣದಲ್ಲಿ ಯೇ ನಾರಾಯಣೀ ರೂಪವನ್ನು ಸ್ವೀಕರಿಸಿದಂತೆ ಭಾಗವತದಲ್ಲಿ ಶ್ರೀವೇದವ್ಯಾಸರು ಹೇಳಿರುವರು. ಇದರಿಂದ ನಾರಾಯಣನ ಪುರುಷರೂಪಕ್ಕೂ ಸ್ತ್ರೀಶಕ್ತಿಯೂ ಪುರುಷಶಕ್ತಿಯೂ ಇದ್ದಂತೆ ಸ್ಪಷ್ಟವಾಗುತ್ತದೆ. ಪುರುಷರೂಪಗಳಿಗೂ ಸ್ತ್ರೀರೂಪಗಳಿಗೂ ಪುರುಷಶಕ್ತಿ ಸ್ತ್ರೀಶಕ್ತಿ ಎಂಬ ದ್ವಿವಿಧವಾದ ಶಕ್ತಿಗಳು ನಾರಾಯಣನ ರೂಪಗಳಿಗೆ ಮಾತ್ರ ಇರುತ್ತವೆ. ಅವನನ್ನು ಬಿಟ್ಟು ಉಳಿದ ಬ್ರಹ್ಮ ಮುಂತಾದ ಯಾವ ಪುರುಷರಿಗೂ ಇಲ್ಲ.

" ಪುರುಷರಲ್ಲಿ ಅರ್ಜುನ ಮುಂತಾದವರು ಬೃಹನ್ನಳಾ ಮುಂತಾದ ಸ್ತ್ರೀರೂಪವನ್ನು ಪಡೆದಿರುವರು. ಆದರೆ ಶಾಪ ಅಥವಾ ವರ ಮುಂತಾದ ನಿಮಿತ್ತಗಳಿಂದ ಸ್ತ್ರೀತ್ವವನ್ನು ಪಡೆದಿರುವರು. ಸ್ವಶಕ್ತಿಯಿಂದ ಅಲ್ಲ. ಅದ್ದರಿಂದ ಸ್ವಶಕ್ತಿ ಯಿಂದ ಸ್ತ್ರೀತ್ವವನ್ನೂ ಪುರಷತ್ವವನ್ನೂ ಪಡೆದವನು ನಾರಾಯಣನೊಬ್ಬನೇ ಹೊರತು ಬೇರೆ ಯಾರೂ ಅಲ್ಲ.''

" ನಾರಾಯಣನ ಎಡಗಾಲಿನ ಅಂಗುಷ್ಠದ ಉಗುರಿನ ಕೊನೆಯು ಬ್ರಹ್ಮಾಂಡವನ್ನು ಭೇದಿಸಿತು. ನಾರಾಯಣನ ಕಪ್ಪು ಕೂದಲು ಕೃಷ್ಣ ಎಂಬ ಅವತಾರವನ್ನು ಸ್ವೀಕರಿಸಿ ಭೂಭಾರವಾಗಿರುವ ಅಸಂಖ್ಯ ದೈತ್ಯರನ್ನು ಸಂಹರಿಸಿತು. ಆದ್ದರಿಂದ ದೇವತೇಗಳೇ ಮೊದಲಾದ ಸಕಲ ಜೀವರಾಶಿಗಳಲ್ಲಿ ಅವನಿಗೆ ಸಮಾನನು ಯಾರು?''

" ನಾರಾಯಣನ ಸ್ತ್ರೀರೂಪಗಳು ದ್ವಿವಿಧವಾದ ಶಕ್ತಿಗಳಿಂದ ಯುಕ್ತವಾಗಿವೆಯೆಂದು ತಿಳಿದವನೇ ಇಂದ್ರಿಯಗಳ ಸಾಫಲ್ಯವನ್ನು ಪಡೆದವನು. ತಿಳಿಯದವನು ಕುರುಡನು. ಬ್ರಹ್ಮದೇವನು ಈ ವಿಷಯನ್ನು ಚೆನ್ನಾಗಿ ತಿಳಿದಿರುವನು. ಮುಕ್ತಿಯೋಗ್ಯರಾದ ಜೀವರಿಗೆ ತಿಳಿಸಿರುವನು. ಮುಂದಿನ ಕಲ್ಪದಲ್ಲಿ ಬ್ರಹ್ಮಪದವಿಗೆ ಬರತಕ್ಕ ಶ್ರೀಮಧ್ವಾಚಾರ್ಯರೂ ತಿಳಿದಿರುವರು ಮತ್ತು ತಿಳಿಸಿರುವರು.''

" ಪರಮಾತ್ಮನಿಗೆ ಆಕಾರವೂ ಇಲ್ಲ. ಗುಣಗಳೂ ಇಲ್ಲ. ಎಂದು ಅಯೋಗ್ಯರು ಹೇಳುತ್ತಾರೆ. ಆಕಾರವೂ ಗುಣಗಳೂ ಇಲ್ಲದಿರುವ ವಸ್ತುಗಳೇ ಇಲ್ಲ. ಆದ್ದರಿಂದ ಪರಮಾತ್ಮನೇ ಇಲ್ಲವೆಂದು ಹೇಳಿದಂತಾಯಿತು. ಅಂತಹ ಪುರುಷನನ್ನು ನೋಡಿ ನಾರಾಯಣನು "ನಾರಾಯಣೀ'' ಎಂಬ ಸ್ತ್ರೀರೂಪವನ್ನು ಧರಿಸಿದನು. ನಾರಾಯಣಿಯೂ ಪುರುಷರೂಪವನ್ನು ಧರಿಸಿದರು. ಎಂದು ಹೇಳುತ್ತಾ ನಾರಾಯಣನಿಗೆ ಆಕಾರವನ್ನೂ ಸ್ತ್ರೀರೂಪ ಮತ್ತು ಪುರುಷರೂಪಗಳ ಗ್ರಹಣಶಕ್ತಿಯನ್ನೂ ಸಮರ್ಥಿಸಿದರು. ಇತರ ಜೀವರಲ್ಲಿ ಆ ಶಕ್ತಿ ಇಲ್ಲವೆಂದು ಸಮರ್ಥಿಸಿದರು. ಇದು ಮೇಲ್ಕಂಡ "ಸ್ತ್ರಿಯಃ ಸತೀಃ'' ಎಂಬ ಶ್ರುತಿಯ ತಾತ್ಪರ್ಯಾರ್ಥವಾಗಿದೆ. ಇನ್ನು ಪದ ಮತ್ತು ಪದಾರ್ಥಗಳನ್ನು ವಿವರಿಸುವನು.''

"ಸತೀಃ ಯಾವಾಗಲೂ ಸ್ವಾಭಾವಿಕವಾದ ಸ್ವಶಕ್ತಿಯಿಂದಲೇ ಇರುತ್ತಿರುವ, ಸ್ತ್ರಿಯಃ=ಸ್ತ್ರೀಯರಿಗೆ ಬಿಂಬರೂಪವಾದ ಅನಂತ ಸ್ತ್ರೀದೇಹಗಳು ಮತ್ತು ಬಿಂಬರೂಪವಲ್ಲದಿರುವ ನಾರಾಯಣೀ ವಾಗೀಶ್ವರೀ ಮುಂತಾದ ಅನಂತ ಸ್ತ್ರೀದೇಹಗಳು (ಸಂತಿ)= ಇವೆ. ತಾಃ ಉ = ಆ ದೇಹಗಳನ್ನೇ, ಮೇ = ನನಗೆ (ವೇದಾಭಿಮಾನಿನಿಯಾದ ಲಕ್ಷ್ಮೀದೇವಿಗೆ) ವಿಹಾರಕ್ಕೆ ಯೋಗ್ಯವಾದ, ಪುಂಸಃ = ಪುರುಷದೇಹಗಳನ್ನು, ಆಹುಃ = ವೇದಾರ್ಥತತ್ವಜ್ಞರಾದ ವೇದವ್ಯಾಸರೇ ಮೊದಲಾದ ಜ್ಞಾನಿಗಳು ಹೇಳುತ್ತಾರೆ. ಪಶ್ಯತ್ = ಈ ವಿಧವಾದ ಸ್ತ್ರೀರೂಪಗಳನ್ನು ತಿಳಿದವನು. ಅಕ್ಷಣ್ವಾನ್=ಇಂದ್ರಿಯಗಳ ಸಾರ್ಥಕ್ಯವನ್ನು ಪಡೆದವನು ನ ವಿಚೇತತ್= ತಿಳಿಯದವನು, ಅಂಧಃ=ಕುರುಡನು, ಕವಿಃ=ಸರ್ವಜ್ಞನಾಗಿರುವ, ಯಃ ಪುತ್ರಃ = ಯಾವ ನನ್ನ ಮಗನಾದ ಬ್ರಹ್ಮದೇವ ಮತ್ತು ಶ್ರೀಮಧ್ವಾಚಾರ್ಯರು, ಸಃ = ಅವನು, ಇಮಾಃ = ಈ ದ್ವಿವಿಧವಾದ ಶಕ್ತಿಯುಳ್ಳ ಸ್ತ್ರೀದೇಹಗಳನ್ನು ಚಕೇತ = ತಿಳಿಯಲು ಸಮರ್ಥನು, ಯಃ = ಯಾವ ಬ್ರಹ್ಮನು ಮತ್ತು ಮಧ್ವಾಚಾರ್ಯರು, ತಾಃ = ಆ ದೇಹಗಳನ್ನು, ವಿಜಾನಾತ್ = ದ್ವಿವಿಧ ಶಕ್ತಿಯಿಂದ ಯುಕ್ತವೆಂದು ತಿಳಿದಿರುವನೋ ಮತ್ತು ತಿಳಿಸುವನೋ, ಸಃ = ಆ ಬ್ರಹ್ಮನು ಮತ್ತು ಮಧ್ವಾಚಾರ್ಯರು, ಪಿತುಃ = ಸಕಲ ಲೋಕಜನಕನಾದ ನಿನ್ನ, ಪಿತಾ = ತಂದೆಯು, ಅಸತ್ = ಆದನು. ಅಂದರೆ ನಿರ್ಗುಣ ನಿರಾಕಾರ ಮುಂತಾದ ಅಪಪ್ರಚಾರಗಳಿಂದ ಇಲ್ಲದಂತೆ ಮಾಡಿರುವ ನಿನ್ನನ್ನು ಸಗುಣ ಸಾಕಾರ ಮುಂತಾದ್ದನ್ನು ಸಮರ್ಥಿಸಿ ಇದ್ದಂತೆ ಮಾಡಿದನು. ಇದು ಮೇಲ್ಕಂಡ ಶ್ರುತಿಗಳ ಪದಪದಾರ್ಥ.

ತುಂಬುರು ಎಂಬ ಗಂಧರ್ವನು ಶಿಖಂಡಿನಿಯನ್ನು ನೋಡಿ ಈ ಶ್ರುತಿಯ ಅರ್ಥವನ್ನು ವಿವರಿಸಿ ಹೇಳಿದನು. " ಓ ಶಿಖಂಡಿನಿಯೇ, ಮೇಲ್ಕಂಡ ಶ್ರುತಿಯಲ್ಲಿ ನಾರಾಯಣನ ನಾರಾಯಣೀ ಮುಂತಾದ ಸ್ತ್ರೀರೂಪಗಳಿಗೆ ಮಾತ್ರ ಪುರುಷತ್ವಶಕ್ತಿಯು ಇರುತ್ತದೆ. ಇತರ ಯಾವ ಸ್ತ್ರೀಯರಿಗೂ ಪುರುಷತ್ವಶಕ್ತಿಯು ಇಲ್ಲವೆಂದು ಸ್ಪಷ್ಟವಾಗಿ ಹೇಳಿದೆ. ನೀನು ಸ್ತ್ರೀಯಾಗಿರುವಿ. ಆದ್ದರಿಂದ ನಿನಗೆ ಪುರುಷತ್ವವನ್ನು ಪಡೆಯುವ ಅರ್ಹತೆಯಿಲ್ಲ. ನೀನು ಸ್ತ್ರೀಯಾಗಿ ಹುಟ್ಟುವುದಾಗಿಯೂ ಕಾಲಾಂತರದಲ್ಲಿ ಪುರುಷತ್ವವನ್ನು ಪಡೆಯುವುದಾಗಿಯೂ ರುದ್ರನು ವರವನ್ನು ಕೊಟ್ಟಿರುವನು. ಆದರೆ ವೇದೋಕ್ತ ವಾದ ಈ ನಿಯಮವನ್ನು ಬದಲಾಯಿಸುವ ಯೋಗ್ಯತೆಯು ರುದ್ರದೇವನಿಗೂ ಇಲ್ಲ. ಆದ್ದರಿಂದ ಅವನ ವರವು ಸುಳ್ಳಾಗಲೇಬೇಕು.

" ಗಂಡಸರು ಶಾಪ ವರ ಮುಂತಾದ ನಿಮಿತ್ತಗಳಿಂದ ಹೆಂಗಸರಾಗಬಹುದು. ಅರ್ಜುನನು ಶಾಪದಿಂದ ಬೃಹನ್ನಳಾ ಎಂಬ ಸ್ತ್ರೀದೇಹವನ್ನು ಪಡೆಯಲಿಲ್ಲವೇ? ಆದರೆ ಸ್ತ್ರೀಯರು ಯಾವ ಕಾರಣದಿಂದಲೂ ಗಂಡಸರಾಗಲಾರರು. ರುದ್ರದೇವನೂ ಸಹ ನೀನು ಹುಟ್ಟುವಾಗಲೇ ಗಂಡಸಾಗಿ ಹುಟ್ಟುವಂತೆ ವರವನ್ನು ಕೊಟ್ಟಿಲ್ಲ ಇದರಿಂದ ಸ್ತ್ರೀಯಾದವಳು ಗಂಡಸಾಗಿ ಹುಟ್ಟಲು ಸಾಧ್ಯವಿಲ್ಲವೆಂಬ ಅಂಶವನ್ನು ಅವನು ಒಪ್ಪಿದಂತಾಯಿತು."

"ಸ್ತ್ರೀಯಾಗಿ ಹುಟ್ಟಿದ ನೀನು ಇಷ್ಟರ ವರೆಗೂ ಗಂಡಸಾಗಲಿಲ್ಲ. ಆದ್ದರಿಂದ ಸ್ತ್ರೀಯಾಗಿ ಹುಟ್ಟಿದವಳು ರುದ್ರದೇವನ ವರದಿಂದಲೂ ಮಧ್ಯದಲ್ಲಿ ಗಂಡಸಾಗುವುದಿಲ್ಲವೆಂದೂ ಸ್ಪಷ್ಟವಾಯಿತು. ಈಗ ರುದ್ರದೇವನ ವರವು ಸತ್ಯವಾಗುವಂತೆ ಮಾಡುವುದಕ್ಕೆ ಒಂದು ಉಪಾಯವನ್ನು ಹೇಳುವೆನು."

" ಗಂಡಸರು ಶಾಪಾದಿನಿಮಿತ್ತಗಳಿಂದ ಅರ್ಜುನನು ಬೃಹನ್ನಳೆಯಾದಂತೆ ಸ್ತ್ರೀಯರಾಗಬಹುದು. ಆಗ ಅವರ ಪುರುಷ ಲಕ್ಷಣಗಳೆಲ್ಲವೂ ಹೋಗಿ ಸ್ತ್ರೀಯರ ಲಕ್ಷಣಗಳು ದೇಹದಲ್ಲಿಯೂ ಸ್ವರಾದಿಗಳಲ್ಲಿಯೂ

ಏರ್ಪಡುತ್ತವೆ. ಸ್ತ್ರೀಯರ ಲಕ್ಷಣಗಳಿಗಾಗಿ ಗಂಡಸರಿಗೆ ಬಂದ ಸ್ತ್ರೀದೇಹದಲ್ಲಿ ಇನ್ನೊಬ್ಬ ಸ್ತ್ರೀಯು ಇರಬೇಕಾದ ಅವಶ್ಯಕತೆಯಿಲ್ಲ. ಅರ್ಜುನನು ಬೃಹನ್ನಳೆಯಾದಾಗ ಆ ದೇಹದಲ್ಲಿ ಇನ್ನೊಬ್ಬ ಸ್ತ್ರೀಯು ಇರಲಿಲ್ಲ. ಅರ್ಜುನನು ಮಾತ್ರಇದ್ದನು. ಅವನಿಗೆ ಬಂದ ಬೃಹನ್ನಳಾದೇಹದಲ್ಲಿ ಸ್ತ್ರೀಯರ ಲಕ್ಷಣಗಳೆಲವೂ ಇದ್ದವು. ಆದರೆ ಗಂಡಸರು ಸ್ತ್ರೀಯರಾದಾಗ ಶಾಪಾದಿನಿಮಿತ್ತಗಳು ಹೋದ ಕೂಡಲೇ ಪುನಃ ಪುರುಷತ್ವವನ್ನು ಪಡೆಯುವರು."

"ಸ್ತ್ರೀಯರು ಗಂಡಸರಾಗಬೇಕಾದರೆ ಹಾಗಲ್ಲ. ಸ್ತ್ರೀಯರು ಇನ್ನೊಬ್ಬ ಗಂಡಸಿನ ದೇಹದಲ್ಲಿ ಪ್ರವೇಶಿಸಬೇಕು. ಆ ದೇಹದಲ್ಲಿಯೂ ಆ ದೇಹದ ಯಜಮಾನನಾದ ಗಂಡು ಜೀವನಿರಬೇಕು. ಗೃಹಸ್ಥನ ಮನೆಯೊಳಗೆ ಸನ್ಯಾಸಿಯು ಹೋದಂತೆ ಪುರುಷಜೀವನಿಂದ ಯುಕ್ತವಾದ ಪುರುಷದೇಹದಲ್ಲಿ ಸ್ತ್ರೀಜೀವನ ಪ್ರವೇಶವೆಂದು ತಿಳಿಯಬೇಕು. ಗೃಹಸ್ಥನ ಮನೆಗೆ ಗೃಹಸ್ಥನೇ ಯಜಮಾನನಾಗುವನು. ಸನ್ಯಾಸಿಯಲ್ಲ. ಅದರಂತೆ ಗಂಡುಜೀವನಿಂದ ಯುಕ್ತವಾದ ದೇಹಕ್ಕೆ ಗಂಡು ಜೀವವೇ ಯಾಜಮಾನನಾಗುವನು. ಸನ್ಯಾಸಿಯಂತೆ ಮಧ್ಯದಲ್ಲಿ ಪ್ರವೇಶಿಸಿದ ಸ್ತ್ರೀಯಲ್ಲ. ಪುರುಷಜೀವನ ದೇಹದಲ್ಲಿ ಪುರುಷಜೀವನು ಇಲ್ಲದಿದ್ದರೆ ಆ ದೇಹದಲ್ಲಿ ಪ್ರವೇಶಿಸಿದ ಸ್ತ್ರೀಯು ಬಲವತ್ತರವಾದ ಶಾಪಾದಿನಿಮಿತ್ತಗಳಿಂದಲೂ ಪುರುಷನಾಗುವುದಿಲ್ಲ.

"ಶಿಖಂಡಿನಿಯೇ, ನನ್ನ ದೇಹವನ್ನು ನಾನು ನಿನಗೆ ಕೊಡುವೆನು. ಆ ದೇಹದಲ್ಲಿ ಪುರುಷದೇಹದ ಲಕ್ಷಣಗಳಾಗಿರುವ ಮೀಸೆ ಲಿಂಗ ಮುಂತಾದವುಗಳು ಇರುವುದಕ್ಕಾಗಿಯೂ ಗಂಭೀರಸ್ವರ ಮುಂತಾದ ಲಕ್ಷಣಗಳು ಇರುವುದಕ್ಕಾಗಿಯೂ ನಾನು ಒಂದು ಅಂಶದಿಂದ ವಾಸಿಸುವೆನು. ಆ ದೇಹದಲ್ಲಿ ನೀನು ಪ್ರವೇಶಿಸು. ನೀನು ಪ್ರವೇಶಿಸಿದ ಕೂಡಲೇ ನಿನ್ನ ಆಕಾರಕ್ಕೆ ಸಮಾನವಾದ ಆಕಾರವೂ ನಿನ್ನಧ್ವನಿಗೆ ಸಮಾನವಾದ ಧ್ವನಿ ಮುಂತಾದವುಗಳೂ ನನ್ನ ಅನುಗ್ರಹದಿಂದ ಆ ದೇಹದಲ್ಲಿ ಏರ್ಪಡುತ್ತವೆ. ಆ ದೇಹದಿಂದ ಯುಕ್ತಳಾಗಿ ನೀನು ಊರಿಗೆ ಹಿಂದಿರುಗು."

"ನಾನು ನಿನ್ನ ದೇಹದಲ್ಲಿ ಪ್ರವೇಶಿಸುವೆನು. ನಾನು ಪುರುಷನು. ಪುರುಷನು ಸ್ತ್ರೀದೇಹವನ್ನು ಪಡೆಯುವುದಕ್ಕಾಗಿ ಸ್ತ್ರೀಜೀವನ ಅವಶ್ಯಕತೆಯಿಲ್ಲವೆಂದು ಹಿಂದೆ ನಿನಗೆ ತಿಳಿಸಿರುವೆನು. ನೀನು ಹಿಂದಿರುಗಿ ಬರುವ ವರೆಗೂ ಸ್ತ್ರೀದೇಹದಲ್ಲಿ ಪ್ರವೇಶಿಸಿ ಸ್ತ್ರೀಯಾಗಿ ವಾಸಿಸುವೆನು. ಇಂದು ನಿನ್ನನ್ನು ನಿನ್ನ ಮಾವನು ಪರೀಕ್ಷಿಸಿ ಹಿಂದಿರುಗಿ ಹೋಗಲಿ. ನಾಳೆ ನೀನು ಹಿಂದಿರುಗಿ ಇಲ್ಲಿಗೆ ಬಾ. ನನ್ನ ದೇಹವನ್ನು ನಾನು ಸ್ವೀಕರಿಸುವೆನು. ನಿನ್ನ ದೇಹವನ್ನು ನೀನು ಸ್ವೀಕರಿಸಿ ಹಿಂದಿರುಗು. ಒಂದು ದಿನದ ವರೆಗಾದರೂ ನೀನು ಪುರುಷತ್ವವನ್ನು ಪಡೆದದ್ದರಿಂದ ರುದ್ರದೇವನ ವರವೂ ಸತ್ಯವಾಗಲಿ." ಇದು ತುಂಬುರು ಗಂಧರ್ವನು ಹೇಳಿದ ಮಾತು.

ಈ ಮಾತುಗಳನ್ನು ಶಿಖಂಡಿನಿಯು ಕೇಳಿದಳು. ಅವಳಿಗೆ ತುಂಬಾ ಸಂತೋಷವಾಯಿತು. ತುಂಬುರುಗಂಧರ್ವನ ದೇಹದೊಳಗೆ ಪ್ರವೇಶಿಸಿದಳು. ತುಂಬುರುಗಂಧರ್ವನು ಒಂದು ಅಂಶದಿಂದ ಶಿಖಂಡಿನಿಯು ಪ್ರವೇಶಿಸಿದ ತನ್ನ ದೇಹದಲ್ಲಿ ವಾಸಿಸಿದನು. ಶಿಖಂಡಿನಿಯು ಪ್ರವೇಶಿಸಿದ ತುಂಬುರುವಿನ ದೇಹದಲ್ಲಿ ತುಂಬುರುಗಂಧರ್ವನ ಅನುಗ್ರಹದಿಂದ ಶಿಖಂಡಿನಿಯ ದೇಹದ ಸಾಮ್ಯವೂ ಧ್ವನಿ ಮುಂತಾದ ಆತ್ಮಗುಣಗಳೂ ಪುರುಷತ್ವವೂ ಏರ್ಪಟ್ಟವು. ಊರಿಗೆ ಹಿಂದಿರುಗಿ ಬಂದನು. ತಂದೆ ತಾಯಿಗಳಿಗೆ ಎಲ್ಲಾ ವಿಷಯಗಳನ್ನೂ ತಿಳಿಸಿದನು. ಅವರು ಸಂತುಷ್ಟರಾದರು. ಅವನ ಮಾವನು ಅವನನ್ನು ನಾನಾ ವಿಧದಿಂದ ಪರೀಕ್ಷಿಸಿದನು. ಶಿಖಂಡಿನಿಯು ಪುರುಷನೆಂದು ತೀರ್ಮಾನಿಸಿದನು. ಅಳಿಯನನ್ನು ಸ್ತ್ರೀ ಎಂದು ತಿಳಿದು ಪರೀಕ್ಷಿಸಿ ಸೋತದ್ದಕ್ಕಾಗಿ ನಾಚಿಕೊಂಡನು. ಹಿಂದಿರುಗಿ ಊರಿಗೆ ಹೋದನು.

ಶಿಖಂಡಿನಿಯು ಹಿಂದಿರುಗಿ ತನ್ನ ಊರಿಗೆ ಬಂದ ಮೇಲೆ ಅವಳ ದೇಹದಲ್ಲಿ ತುಂಬುರು ಗಂಧರ್ವನು ವಾಸಿಸಿದನು. ಸ್ತ್ರೀದೇಹದಲ್ಲಿ ವಾಸಿಸುತ್ತಿರುವುದರಿಂದ ಸ್ತ್ರೀಯರಂತೆ ಲಜ್ಜಾದಿಗುಣಗಳು ಬಂದವು. ಆಗ ಅವನ ಅಧಿಪತಿಯಾದ ಕುಬೇರನು ಅಲ್ಲಿಗೆ ಬಂದನು. ಲಜ್ಜಾಪರವಶನಾದ ತುಂಬುರುಗಂಧರ್ವನು ಕುಬೇರನನ್ನು ಸ್ವಾಗತಿಸಲಿಲ್ಲ. ಗಿಡಗಳ ಮತ್ತು ಮರಗಳ ಹಿಂದೆ ಅವಿತುಕೊಂಡನು. ಕುಬೇರನು ಜ್ಞಾನದೃಷ್ಟಿಯಿಂದ ನಡೆದ ಎಲ್ಲಾ ವಿಷಯಗಳನ್ನೂ ತಿಳಿದನು.

" ಎಲೋ ತುಂಬುರು ಗಂಧರ್ವನೇ! ಹುಡುಗಾಟಿಕೆಯಿಂದ ನೀನು ನಿನ್ನ ಪುರಷತ್ವವನ್ನ ಶಿಖಂಡಿಗೆ ಕೊಟ್ಟು ಹೆಂಗಸಾಗಿರುವಿ. ಈ ಸ್ತ್ರೀತ್ವವು ನಿನಗೆ ಆ ಶಿಖಂಡಿನಿಯು ಸಾಯುವವರೆಗೆ ಇರಲಿ. ಅವಳಿಗೆ ಈಗ ಬಂದ ಪುರುಷದೇಹವು ಸ್ವಾಭಾವಿಕವಲ್ಲ. ನಿನ್ನ ಅನುಗ್ರಹದಿಂದ ಲಬ್ಧವಾಯಿತು. ಆ ದೇಹವನ್ನು ಅವಳಿಗೆ ಕೊಡುವ ಶಕ್ತಿಯೂ ಕಿತ್ತುಕೊಳ್ಳುವ ಶಕ್ತಿಯೂ ನಿನ್ನಲ್ಲಿದೆ, ಈಗ ನೀನು ವಾಸಿಸುತ್ತಿರುವ ಸ್ತ್ರೀದೇಹವೇ ಅವಳಿಗೆ ಸ್ವಾಭಾವಿಕವಾದುದು. ಅವಳು ಕೆಲವು ಕಾಲದ ಅನಂತರದಲ್ಲಿ ಸೈನ್ಯಗಳ ನಿಲ್ದಾಣದಲ್ಲಿ ರಾತ್ರಿಯಲ್ಲಿ ಮಲಗಿಕೊಂಡಿರುವಳು. ಆ ಸಮಯದಲ್ಲಿ ಅಶ್ವತ್ಥಾಮನು ಅಲ್ಲಿಗೆ ಬರುವನು. ಖಡ್ಗದಿಂದ ಅವಳ ಕುತ್ತಿಗೆಯನ್ನು ಕೊಯ್ಯುವನು.

"ಕುತ್ತಿಗೆಯನ್ನು ಕೊಯ್ಯುವ ಸಮಯದಲ್ಲಿ ಅವಳ ಸ್ತ್ರೀದೇಹವನ್ನು ಅವಳಿಗೆ ನಿನ್ನ ಯೋಗಶಕ್ತಿಯಿಂದ ಕೊಡು. ಅಶ್ವತ್ಥಾಮನು ಅವಳ ಸ್ವಾಭಾವಿಕವಾದ ಸ್ತ್ರೀದೇಹದ ಕುತ್ತಿಗೆಯನ್ನು ಕತ್ತರಿಸಲಿ. ಅವಳ ಸ್ವಾಭಾವಿಕವಾದ ಸ್ತ್ರೀದೇಹದಲ್ಲಿರುವ ನಿನ್ನ ಅಂಶವು ಸೈನ್ಯಗಳ ನಿಲ್ದಾಣದಲ್ಲಿ ಮಲಗಿರುವ ಸ್ವಾಭಾವಿಕವಾದ ನಿನ್ನ ದೇಹದಲ್ಲಿ ಯೋಗಶಕ್ತಿಯಿಂದ ಪ್ರವೇಶಿಸಲಿ. ಆ ದೇಹದಲ್ಲಿ ಶಿಖಂಡಿನಿಗೆ ಪುರುಷತ್ವವನ್ನು ಕೊಡುವುದಕ್ಕಾಗಿ ವಾಸಿಸುತ್ತಿರುವ ನಿನ್ನ ಅಂಶದೊಡನೆ ಸೇರಲಿ. ಅಂದಿನಿಂದ ನೀನು ಪುನಃ ಪುರುಷತ್ವವನ್ನು ಪಡೆಯುವಂತಾಗಲಿ. ಹುಟ್ಟಿದ ಮೇಲೆ ಇಂದಿನ ವರೆಗೆ ಸ್ವಭಾವದಿಂದ ಸ್ತ್ರೀಯಾಗಿದ್ದ ಶಿಖಂಡಿನಿಯು ನಿನ್ನೆದಿನದಿಂದ ಸಾಯುವ ವರೆಗೂ ರುದ್ರದೇವರ ವರದಿಂದ ಅಸ್ವಾಭಾವಿಕವಾದ ಪುರುಷತ್ವವನ್ನು ಪಡೆಯಲಿ." ಎಂದು ತುಂಬುರು ಗಂಧರ್ವನನ್ನು ಶಪಿಸಿದನು. ಕುಬೇರನು ಹಿಂದಿರುಗಿ ಹೋದನು.

ಮರುದಿನದಲ್ಲಿ ಶಿಖಂಡಿನಿಯು ಹಿಂದಿರುಗಿ ಬಂದಳು. ತುಂಬುರುಗಂಧರ್ವನಲ್ಲಿ ಕೃತಜ್ಞತೆಯನ್ನು ಸಮರ್ಪಿಸಿದಳು. ಅವನ ಪುರುಷದೇಹವನ್ನು ಸ್ವೀಕರಿಸುವಂತೆಯೂ ತನ್ನ ಸ್ತ್ರೀದೇಹವನ್ನು ಕೊಡುವಂತೆಯೂ ಬೇಡಿದಳು. ತುಂಬುರು ಗಂಧರ್ವನು ತನಗೆ ಬಂದ ಕುಬೇರನ ಶಾಪವನ್ನು ತಿಳಿಸಿದನು. ಅವಳನ್ನು ಪುರುಷದೇಹದಿಂದಲೇ ಹಿಂದಿರುಗುವಂತೆ ಹೇಳಿದನು. ಅವಳೂ ಸಂತೋಷದಿಂದ ಹಿಂದಿರುಗಿದಳು. ಶಿಖಂಡಿನೀ ಎಂಬ ಸ್ತ್ರೀಲಿಂಗ ಶಬ್ದದಿಂದ ಅಂದಿನ ವರೆಗೆ ಹೇಳಲ್ಪಡುತ್ತಿದ್ದವಳು ಅಂದಿನಿಂದ ಶಿಖಂಡೀ ಎಂದು ಪುಲ್ಲಿಂಗ ಶಬ್ದದಿಂದ ಹೇಳಲ್ಪಟ್ಟಳು. ಶಿಖಂಡಿಯು "ಶಿಖಂಡೀ ಚ ಮಹಾರಥಃ" ಎಂದು ಹೊಗಳಲ್ಪಟ್ಟನು. ಅಸ್ತ್ರ ಶಸ್ತ್ರ ವಿದ್ಯೆಗಳಲ್ಲಿ ಪ್ರತಾಪಶಾಲಿಯೆನಿಸಿದನು. ಕಾಶಿರಾಜನ ಕುಮಾರಿಯಾದ ಅಂಬಾದೇವಿಯ ವೃತ್ತಾಂತವು ಇಲ್ಲಿಗೆ ಮುಗಿಯಿತು.

# ವಿಚಿತ್ರವೀರ್ಯನ ಮರಣ

ವಿಚಿತ್ರವೀರ್ಯನು ಹಿಂದೆ ಹೇಳಿದಂತೆ ಅಂಬಿಕಾ ಅಂಬಾಲಿಕಾ ಎಂಬ ಅಂಬಾದೇವಿಯ ಸಹೋದರಿಯರನ್ನು ವಿವಾಹ ಮಾಡಿಕೊಂಡನು. ಅವರಿಬ್ಬರಲ್ಲಿ ಅವನು ವಿಶೇಷವಾಗಿ ಆಸಕ್ತನಾದನು. ಅನೇಕ ವರ್ಷಗಳ ವರೆಗೆ ಕ್ರೀಡಿಸಿದನು. ಅತಿಕ್ರೀಡೆಯಿಂದ ಕ್ಷಯರೋಗವು ಬಂದು ಸತ್ತನು.

# ಧೃತರಾಷ್ಟ್ರನ ಜನನ

ಆ ಸಮಯದಲ್ಲಿ ಅವನ ತಾಯಿಯಾದ ಸತ್ಯವತೀದೇವಿಯು ತನ್ನ ಮಗನಾದ ಶ್ರೀವೇದವ್ಯಾಸರನ್ನು ಸ್ಮರಿಸಿದಳು. ಸಕಲಜಗಜ್ಜನಕನಾಗಿಯೂ ತನ್ನನ್ನು ಸೇವಿಸುವವರಿಗೆ ಜನ್ಮ ವಾರ್ಧಕ್ಯ ಮುಂತಾದ ದೋಷಗಳನ್ನು ಪರಿಹರಿಸುವವನಾಗಿಯೂ ಜ್ಞಾನಾನಂದಸ್ವರೂಪಿಯಾಗಿಯೂ ಇರುವ ಶ್ರೀವೇದವ್ಯಾಸರು ಬಂದರು ಅವರನ್ನು ಭೀಷ್ಮರೇ ಮೊದಲಾದವರು ಅತ್ಯಂತ ಭಕ್ತಿಯಿಂದ ಆರಾಧಿಸಿದರು. ಮತ್ತು ಸ್ತುತಿಸಿದರು. ತಾಯಿಯಾದ ಸತ್ಯವತೀದೇವಿಯು ಪ್ರಾರ್ಥಿಸಿದಳು.

"ಮಗನೇ! ನನ್ನ ಮಕ್ಕಳು ಚಿತ್ರಾಂಗದ ವಿಚಿತ್ರವೀರ್ಯ ಎಂಬುವವರು ಸ್ವರ್ಗಸ್ಥರಾದರು. ಅವರುಗಳಿಗೆ ಮಕ್ಕಳಿಲ್ಲ. ಭೀಷ್ಮನು ಈ ಜನ್ಮದಲ್ಲಿ ಬ್ರಹ್ಮಚರ್ಯವ್ರತವನ್ನು ಸ್ವೀಕರಿಸುವುದಾಗಿ ಪ್ರತಿಜ್ಞೆಯನ್ನು ಮಾಡಿರುವನು. " ಬ್ರಹ್ಮಚರ್ಯವ್ರತವನ್ನು ಬಿಡು. ವಿವಾಹವನ್ನು ಮಾಡಿಕೊಂಡು ಸಂತತಿಯನ್ನು ವೃದ್ಧಿ ಮಾಡು" ಎಂದ ಎಷ್ಟೋ ವಿಧದಿಂದ ಬೇಡಿದೆನು. ಆದರೆ ಅವನು ತನ್ನ ಪ್ರತಿಜ್ಞೆಯನ್ನು ಬಿಡಲು ಇಷ್ಟಪಡುವುದಿಲ್ಲ. ಆದ್ದರಿಂದ ಶಂತನುರಾಜರ ಸಂತತಿಯು ಇಲ್ಲಿಗೆ ಮುಗಿಯುವಂತಾಗಿದೆ. ಮುಂದೆ ರಾಜ್ಯವನ್ನು ನಿರ್ವಾಹಮಾಡುವ ರಾಜನೇ ಇಲ್ಲದಂತಾಯಿತು.

" ಮಗನೇ! ನನ್ನ ಮಾತನ್ನು ಲಾಲಿಸು, ಸಂತತಿಯು ನಿಂತು ಹೋಗುವ ಸಂದರ್ಭದಲ್ಲಿ ಸತ್ತವನ ಸ್ವಕೀಯರು ಸತ್ತವನ ಪತ್ನಿಯಲ್ಲಿ ಸಂತತಿಯನ್ನು ಉತ್ಪಾದನೆ ಮಾಡುವಂತೆ ಕಾಮವಿಕಾರವಿಲ್ಲದವರೂ ಉತ್ತಮರೂ ಆಗಿರುವ ಪುರುಷರಲ್ಲಿ ಪ್ರಾರ್ಥಿಸಬೇಕು. ಅವರೂ ಅವರ ಪ್ರಾರ್ಥನೆಯಂತೆ ಸಂತತಿಯನ್ನು ಉತ್ಪಾದನೆ ಮಾಡಬೇಕು. ಕಾಮವಿಕಾರವಿಲ್ಲದೆ ಸಂತತಿವೃದ್ಧಿಗಾಗಿ ಉತ್ತಮಪುರುಷರು ಪರಸ್ತ್ರೀಯಲ್ಲಿ ಸಂತತಿಯನ್ನು ಹುಟ್ಟಿಸಿದರೂ ವ್ಯಭಿಚಾರದೋಷವಿಲ್ಲ. ಇದು ಈ ಯುಗದ ಧರ್ಮವಾಗಿರುತ್ತದೆ."

" ಆದ್ದರಿಂದ ವಿಚಿತ್ರವೀರ್ಯನ ಅಣ್ಣನಾದ ಭೀಷ್ಮನೂ ತಾಯಿಯಾದ ನಾನು ಇತರ ಬಂಧುಗಳೂ ಅತ್ಯಂತ ಭಕ್ತಿಯಿಂದ ನಿನ್ನನ್ನು ನಮಸ್ಕರಿಸಿ ಪೂಜಿಸಿ ಪ್ರಾರ್ಥಿಸಿಕೊಳ್ಳುತ್ತಿದ್ದೇವೆ. ನನ್ನ ಪುತ್ರನೂ ನಿನ್ನ ಸಹೋದರನೂ ಆಗಿರುವ ವಿಚಿತ್ರವೀರ್ಯನ ಪತ್ನಿಯಲ್ಲಿ ಒಬ್ಬಮಗನನ್ನು ಹುಟ್ಟಿಸು" ಇದು ಸತ್ಯವತಿಯ ಪ್ರಾರ್ಥನೆ.

" ರಮಾದೇವಿಯೊಬ್ಬಳೇ ನನ್ನ ಅಂಗಸಂಕಕ್ಕೆ ಯೋಗ್ಯಳಾದ ಸ್ತ್ರೀಯಾಗಿರುವಳು. ದೇವಲೋಕ ಮುಂತಾದ ಯಾವ ಲೋಕಗಳಲ್ಲಿಯೂ ನನ್ನ ಅಂಗಸಂಗಕ್ಕೆ ಯೋಗ್ಯಳಾದ ಸ್ತ್ರೀಯು ರಮಾದೇವಿಯನ್ನು ಬಿಟ್ಟು ಇತರರಿಲ್ಲ. ಇತರ ಸ್ತ್ರೀಯರೂ ಸಹ ಪ್ರಬಲವಾದ ತಪಸ್ಸನ್ನು ಮಾಡಿ ನನ್ನ ಅಂಗಸಂಗವನ್ನು ಪಡೆಯುವುದುಂಟು. ಅವರಲ್ಲಿಯೂ ರಮದೇವಿಯೇ ಸನ್ನಿಹಿತಳಾಗಿದ್ದು ಸುಖಿಸುವಳು. ಅವರೆಲ್ಲರೂ ರಮಾದೇವಿಯ ಸನ್ನಿಧಾನಬಲದಿಂದ ಅಲ್ಪಸುಖವನ್ನು ಅನುಭವಿಸುವರು.

" ನೀನು ನನ್ನ ತಾಯಿಯಾಗಿರುವಿ. ನಿನ್ನ ಆಸೆಯನ್ನು ನಾನು ಪೂರ್ತಿ ಮಾಡಬೇಕು. ನನ್ನ ಅಂಗಸಂಗವನ್ನು ಪಡೆಯುವ ಇತರ ಸ್ತ್ರೀಯರಂತೆ ನಿನ್ನ ಸೊಸೆಯೂ ಒಂದು ವರ್ಷದ ವರೆಗೆ ನನಗೆ ಪ್ರಿಯವಾದ ವೈಷ್ಣವವ್ರತವನ್ನು ಅನುಷ್ಠಿಸಲಿ. ವೈಷ್ಣವವ್ರತಾನುಷ್ಠಾನದಿಂದ ಅವಳ ದೇಹವು ಅತ್ಯಂತ ಪರಿಶುದ್ಧವಾಗಲಿ. ಅನಂತರದಲ್ಲಿ ನನ್ನ ಸಂಗವು ಏರ್ಪಡಲಿ. ಅದರಿಂದ ಶ್ರೇಷ್ಠನಾದ ಮಗನು ಹುಟ್ಟುವನು." ಇದು ವೇದವ್ಯಾಸರ ಉತ್ತರ.

" ಒಂದು ವರ್ಷದ ವರೆಗೆ ವ್ರತವನ್ನು ಮಾಡಲಿಕ್ಕೆ ಅವಕಾಶವಿಲ್ಲ. ರಾಜನಿಲ್ಲದ್ದರಿಂದ ರಾಜ್ಯವು ನಶಿಸುತ್ತದೆ. ಆದ್ದರಿಂದ ವೈಷ್ಣವವ್ರತವನ್ನು ಅನುಷ್ಠಿಸದಂತೆಯೇ ಈಗಲೇ ನನ್ನ ಸೊಸೆಯಲ್ಲಿ ಸಂತತಿಯನ್ನು ಉತ್ಪಾದನೆ ಮಾಡು." ಇದು ಪುನಃ ಸತ್ಯವತಿಯ ಪ್ರಾರ್ಥನೆ.

" ನಾನು ಯಾವಾಗಲೂ ಪರಮಸೌಮ್ಯವಾದ ರೂಪವನ್ನು ಧರಿಸಿರುವವನು. ಭಯಂಕರವಾದ ರೂಪವೂ ನನಗಿದೆ. ಅದನ್ನು ಕಾರಣವಿಶೇಷವು ಬಂದಾಗ. ತೋರಿಸುವೆನು. ನಿನ್ನ ಸೊಸೆಯನ್ನು ಕೊಲ್ಲುವುದಕ್ಕೆ ಬರುವವನಂತೆ ಅತಿಭಯಂಕರವಾದ ರೂಪವನ್ನು ಅವಳ ಅಂಗಸಂಗಕ್ಕಾಗಿ ಬರುವಾಗ ತೋರಿಸುವೆನು. ಅವಳು ನನ್ನ ಆ ರೂಪವನ್ನು ಸಹಿಸುವುದಕ್ಕೆ ಶಕ್ತಳಾಗಿದ್ದರೆ ಅವಳಿಗೆ ಗುಣವಂತನೂ ಬಲವಂತನೂ ವೀರ್ಯವಂತನೂ ಆಗಿರುವ ಮಗನು ಹುಟ್ಟುವನು. ಇದು ವೈಷ್ಣವವ್ರತಾನುಷ್ಠಾನವಿಲ್ಲದೆ ಈಗಲೇ ಮಗನು ಹುಟ್ಟಬೇಕಾದರೆ ಉಪಾಯ". ಇದು ಶ್ರೀವೇದವ್ಯಾಸರ ಪ್ರತ್ಯುತ್ತರ.

ಸತ್ಯವತಿಯು ಒಪ್ಪಿದಳು. ತನ್ನ ಮೊದಲನೆಯ ಸೊಸೆಯಾದ ಅಂಬಿಕೆಯನ್ನು ಕಳುಹಿಸಿದಳು. ಶ್ರೀ ವೇದವ್ಯಾಸರು ಭಯಂಕರವಾದ ರೂಪವನ್ನು ತೋರಿಸಿದರು. ಅವಳು ಹೆದರಿದಳು. ಎರಡು ಕಣ್ಣುಗಳನ್ನೂ ಮುಚ್ಚಿದಳು. ಶ್ರೀವೇದವ್ಯಾಸರು ಅಂಗಸಂಗವನ್ನು ಕೊಟ್ಟರು. ಅವಳಲ್ಲಿ ಆಗಲೇ ಗಂಡುಮಗನು ಹುಟ್ಟಿದನು. ಅವನ ತಾಯಿಯು ಅಂಗಸಂಗ ಕಾಲದಲ್ಲಿ ಕಣ್ಣುಗಳನ್ನು ಮುಚ್ಚಿದ್ದರಿಂದ ಕುರುಡನಾಗಿ ಹುಟ್ಟಿದನು.

ಅರಿಷ್ಟಾ ಎಂಬ ದೇವಸ್ತ್ರೀಯಲ್ಲಿ ಹಂಸ ಎಂಬ ಗಂಧರ್ವಪತಿಯು ಹುಟ್ಟಿದನು. ಅವನೇ ಧೃತರಾಷ್ಟ್ರ ಎಂಬ ಹೆಸರಿನಿಂದ ಅಂಬಿಕೆಗೆ ಮಗನಾಗಿ ಹುಟ್ಟಿದನು. ಅವನಲ್ಲಿ ವಾಯುದೇವರ ವಿಶೇಷಾವೇಶವಿತ್ತು. ಶ್ರೀವೇದವ್ಯಾಸರು ಅವನಿಗೆ ಅಧಿಕವಾದ ಬಲವು ಏರ್ಪಡುವಂತೆ ವರವನ್ನು ಕೊಟ್ಟರು. ಶ್ರೀವೇದವ್ಯಾಸರ ವರದಿಂದಲೂ ವಾಯುದೇವರ ವಿಶೇಷಾವೇಶದಿಂದಲೂ ಅಧಿಕವಾದ ಬಲದಿಂದ ಯುಕ್ತನಾದನು.

## ಪಾಂಡುವಿನ ಜನನ

ಸತ್ಯವತೀ ದೇವಿಯು ತನ್ನ ಮೊಮ್ಮಗನು ಕುರುಡನಾಗಿ ಹುಟ್ಟಿದುದನ್ನು ನೋಡಿದಳು. ಶ್ರೀವೇದವ್ಯಾಸರನ್ನು ಪೂಜಿಸಿದಳು, " ಈ ಮೊಮ್ಮಗನು ಕುರುಡನಾಗಿರುವನು. ಇನ್ನೊಬ್ಬ ಗುಣವಂತನಾದ ಮೊಮ್ಮಗನನ್ನು ಅಂಬಾಲಿಕೆಯಲ್ಲಿ ಹುಟ್ಟಿಸಬೇಕು." ಎಂದು ಪ್ರಾರ್ಥಿಸಿದಳು.

ಶ್ರೀವೇದವ್ಯಾಸರು ಒಪ್ಪಿದರು. ಅಂಬಾಲಿಕೆಯು ಶ್ರೀವೇದವ್ಯಾಸರ ಸನ್ನಿಧಿಗೆ ಬಂದಳು. ಅವರೂ ಹಿಂದಿನಂತೆ ಭಯಂಕರವಾದ ರೂಪವನ್ನು ತೋರಿಸಿದರು. ಅವಳೂ ಅಂಬಿಕೆಯಂತೆ ಹೆದರಿದಳು. ಧೃತರಾಷ್ಟ್ರನಂತೆ

ಕುರುಡನಾದ ಮಗನು ಹುಟ್ಟುವನೆಂಬ ಭಯದಿಂದ ಕಣ್ಣುಗಳನ್ನು ಮುಚ್ಚಲಿಲ್ಲ. ಆದರೆ ಹೆದರಿಕೆಯಿಂದ ಬಂಗಾರವರ್ಣದಿಂದ ಯುಕ್ತವಾದ ಅವಳ ದೇಹವಲ್ಲವೂ ಪಾಂಡುರೋಗದಿಂದ ಪೀಡಿತರಾದವರ ದೇಹದಂತೆ ಹಳದಿಬಣ್ಣದಿಂದ ಯುಕ್ತವಾಯಿತು. ಅವಳಿಗೆ ಶ್ರೀವೇದವ್ಯಾಸರು ಅಂಗಸಂಗವನ್ನು ಕೊಟ್ಟರು. ಅವಳು ಭಯದಿಂದ ಹಳದಿಬಣ್ಣದಿಂದ ಯುಕ್ತಳಾದುದರಿಂದ ಅವಳ ಮಗನೂ ಹಳದಿಬಣ್ಣದಿಂಡ ಯುಕ್ತನಾಗಿ ಹುಟ್ಟಿದನು. ಅವನು ಪಾಂಡುರೋಗವುಳ್ಳವನಂತೆ ಕಾಣಿಸುತ್ತಿರುವುದರಿಂದ ಪಾಂಡು ಎಂದು ಹೇಳಲ್ಪಟ್ಟನು.

ಪರಾವಹ ಎಂಬ ವಾಯುದೇವನು ಮುಖ್ಯಪ್ರಾಣದೇವರ ವಿಶೇಷಾವೇಶದಿಂದ ಯುಕ್ತನಾಗಿ ಪಾಂಡು ಎಂಬ ಹೆಸರಿನಿಂದ ಅವತರಿಸಿದನು. ಶ್ರೀವೇದವ್ಯಾಸರು ಅವನಿಗೆ "ಬಲವೂ ವೀರ್ಯವೂ ಅಧಿಕವಾಗಲಿ" ಎಂದು ವರವನ್ನು ಕೊಟ್ಟರು. ಶ್ರೀವೇದವ್ಯಾಸರ ವರದಿಂದಲೂ ಮುಖ್ಯಪ್ರಾಣದೇವರ ವಿಶೇಷದಿಂದಲೂ ಪಾಂಡುರಾಜನು ಅಧಿಕವಾದ ವೀರ್ಯದಿಂದಲೂ ಬಲದಿಂದಲೂ ಯುಕ್ತನಾಗಿ ಹುಟ್ಟಿದನು. ಸಕಲ ಶಾಸ್ತ್ರಗಳನ್ನೂ ಅಸ್ತ್ರಗಳನ್ನೂ ತಿಳಿದನು.

## ವಿದುರನ ಜನನ

ಸತ್ಯವತಿಯು ತನ್ನ ಎರಡನೆಯ ಮೊಮ್ಮಗನನ್ನು ನೋಡಿದಳು. ಅವನ ದೇಹವು ಪಾಂಡುರೋಗದವನ ದೇಹದಂತೆ ಹಳದಿಯಾಗಿರುವುದನ್ನು ತಿಳಿದಳು. ಶ್ರೀವೇದವ್ಯಾಸರನ್ನು ನೋಡಿದಳು. "ಮೊದಲನೆಯ ಮೊಮ್ಮಗನು ಕುರುಡನಾದನು. ಎರಡನೆಯ ಮೊಮ್ಮಗನು ಪಾಂಡುರೋಗಗ್ರಸ್ತನಂತಿರುವನು. ಯಾವ ದೋಷವೂ ಇಲ್ಲದಿರುವ ಮೂರನೆಯ ಮೊಮ್ಮಗನನ್ನು ಹುಟ್ಟಿಸಬೇಕು" ಎಂದು ಪ್ರಾರ್ಥಿಸಿದಳು. ಶ್ರೀವೇದವ್ಯಾಸರು ಒಪ್ಪಿದರು.

ದೊಡ್ಡ ಸೊಸೆಯನ್ನು ಕರೆದಳು. "ನೀನು ಹಿಂದೆ ಶ್ರೀವೇದವ್ಯಾಸರೊಡನೆ ಅಂಗಸಂಗವನ್ನು ಪಡೆದಾಗ ಕಣ್ಣುಗಳನ್ನು ಮುಚ್ಚಿದಿ. ಆದ್ದರಿಂದ ನಿನ್ನ ಮಗನು ಕುರುಡನಾದನು. ಈಗ ಹಾಗೆ ಮಾಡಬೇಡ. ಭಕ್ತಿಯಿಂದ ಸೇವಿಸು. ಅಂಜಬೇಡ" ಎಂದು ಹೇಳಿದಳು. ಅಂಬಿಕೆಯು " ಹಾಗೆಯೇ ಆಗಲಿ" ಎಂದು ಹೇಳಿದಳು.

ಆದರೆ ದೇವರಮಾಯೆಯನ್ನು ಮೀರಲು ಯಾರಿಂದಲೂ ಸಾಧ್ಯವಿಲ್ಲ. ದೇವರ ಮಾಯೆಯಿಂದ ಶ್ರೀವೇದವ್ಯಾಸರನ್ನು ಸಮೀಪಿಸುವುದಕ್ಕೆ ಅಂಬಿಕೆಯು ಹೆದರಿದಳು. ವಿಚಿತ್ರವೀರ್ಯನ ಇನ್ನೊಬ್ಬ ಪತ್ನಿಯೂ ಶೂದ್ರಜಾತಿಯಲ್ಲಿ ಹುಟ್ಟಿದವಳೂ ಆಗಿರುವ ತನ್ನ ಸೇವಕಳನ್ನು ಕರೆದಳು. ಅವಳನ್ನು ತನಗೆ ಬದಲಾಗಿ ಶ್ರೀವೇದವ್ಯಾಸರ ಅಂಗಸಂಗಕ್ಕಾಗಿ ಕಳುಹಿಸಿದಳು. ಆದ್ದರಿಂದಲೇ ಅಂಬಿಕೆಯು ದುರ್ಬುದ್ಧಿಯುಳ್ಳವಳೆಂದು ಹೇಳಬಹುದು.

ಶೂದ್ರಸ್ತ್ರೀಯು ಆನಂದಪೂರ್ಣರು ಗುಣಸಮುದ್ರರೂ ಆಗಿರುವ ಶ್ರೀವೇದವ್ಯಾಸರೊಡನೆ ಅತ್ಯಂತ ಭಕ್ತಿಯಿಂದ ಕ್ರೀಡಿಸಿದಳು. ಅವಳಲ್ಲಿ ವಿದುರನು ಹುಟ್ಟಿದನು. ವಿತ್+ಉ+ರ= ವಿದುರ ಅಂದರೆ " ಜ್ಞಾನದಲ್ಲಿ ಸದ್ಭಾವದಿಂದ ಆಸಕ್ತಿಯುಳ್ಳವನು" ಎಂದು ಶ್ರೀವೇದವ್ಯಾಸರು ಹೆಸರನ್ನಿಟ್ಟರು. ಆದ್ದರಿಂದ ವಿದುರ ಎಂದು ಪ್ರಸಿದ್ಧನಾದನು. ಅವನು ಜ್ಞಾನದಿಂದಲೂ ಭುಜಬಲದಿಂದಲೂ ನೀತಿಯಿಂದಲೂ ಯುಕ್ತನಾಗಿರುವಂತೆಯೂ ಧನುರ್ಧಾರಿಗಳಲ್ಲಿ ಪ್ರಸಿದ್ಧನಾಗುವಂತೆಯೂ ಶ್ರೀವೇದವ್ಯಾಸರು ಅವನಿಗೆ ವರವನ್ನು ಕೊಟ್ಟರು.

# ವಿದುರನ ಪೂರ್ವ ಚರಿತ್ರೆ

ಒಂದು ಊರಿನಲ್ಲಿ ಕೆಲವು ಕಳ್ಳರು ಒಬ್ಬ ಧನಿಕನ ಮನೆಯಲ್ಲಿ ಕೆಲವು ವಸ್ತುಗಳನ್ನು ಕದ್ದರು ಅವರನ್ನು ರಕ್ಷಕಭಟರು ದೂರದಿಂದ ನೋಡಿದರು. ಅವರನ್ನು ಬೆನ್ನಟ್ಟಿಕೊಂಡು ಬಂದರು. ಆ ಕಳ್ಳರು ಬಹುದೂರದ ವರೆಗೆ ತಪ್ಪಿಸಿಕೊಂಡು ಓಡಿಬಂದರು. ಮಾಂಡವ್ಯಋಷಿಗಳ ಆಶ್ರಮದ ಸಮೀಪಕ್ಕೆ ಬಂದರು. ಆಗ ರಕ್ಷಕಭಟರು ತುಂಬಾ ಸಮೀಪಿಸಿದರು. ಕಳ್ಳರು ತಪ್ಪಿಸಿಕೊಳ್ಳುವುದಕ್ಕಾಗಿ ಮಾಂಡವ್ಯಋಷಿಗಳ ಆಶ್ರಮವನ್ನು ಪ್ರವೇಶಿಸಿದರು. ಅವಿತುಕೊಂಡರು. ರಕ್ಷಕಭಟರು ಆ ಆಶ್ರಮಕ್ಕೆ ಬಂದರು.

ಆಗ ಮಾಂಡವ್ಯಋಷಿಗಳು ಶ್ರೀಹರಿಯನ್ನು ಅಖಂಡವಾಗಿ ಸ್ಮರಿಸುತ್ತಾ ಮೈಮರೆತಿದ್ದರು. ಇದನ್ನು ತಿಳಿಯದ ರಕ್ಷಕಭಟರು ಮಾಂಡವ್ಯಋಷಿಗಳಲ್ಲಿ ಕಳ್ಳರನ್ನು ಕುರಿತು ಕೇಳಿದರು. ಅವರಿಗೆ ಇವರು ಕೇಳಿದ್ದೂ ಕಳ್ಳರು ಬಂದದ್ದೂ ತಮ್ಮ ಆಶ್ರಮದಲ್ಲಿ ಅವಿತುಕೊಂಡದ್ದೂ ಯಾವುದೂ ತಿಳಿಯದು. ಆದ್ದರಿಂದ ಯಾವ ಉತ್ತರವನ್ನು ಕೊಡಲಿಲ್ಲ. ರಕ್ಷಕಭಟರು ಆಶ್ರಮವನ್ನೆಲ್ಲಾ ಹುಡುಕಿದರು. ಆಗ ಕಳ್ಳರು ಸಿಕ್ಕಿದರು. ಅವರು ಕದ್ದಿರುವ ವಸ್ತುಗಳೂ ಸಿಕ್ಕಿದವು. ಕಳ್ಳರನ್ನೂ ಕದ್ದ ಧನವನ್ನೂ ವಶಪಡಿಸಿಕೊಂಡರು.

ನಂತರ ಆರಕ್ಷಕರು ಮಾಂಡವ್ಯಋಷಿಗಳನ್ನೂ ನೋಡಿದರು. ಇವನೂ ಒಬ್ಬ ಕಳ್ಳನೆಂದೂ ಬೇರೆ ಕಳ್ಳರಂತೆ ಓಡಲೂ ಅವಿತುಕೊಳ್ಳಲೂ ಶಕ್ತಿಯಿಲ್ಲದೆ ಅಸಂಪ್ರಜ್ಞಾತಸಮಾಧ್ಯವಸ್ಥೆಯಲ್ಲಿ ಕುಳಿತವನಂತೆ ನಟಿಸುತ್ತಿರುವನೆಂದೂ ತೀರ್ಮಾನಿಸಿದರು. ಎಲ್ಲಾ ಕಳ್ಳರ ಜೊತೆಯಲ್ಲಿ ಅವರನ್ನೂಕಟ್ಟಿ ಸೆಳೆದುಕೊಂಡು ಬಂದರು. ರಾಜನ ಮುಂದೆ ನಿಲ್ಲಿಸಿದರು. ರಾಜನು ಎಲ್ಲಾ ಕಳ್ಳರನ್ನೂ ತ್ರಿಶೂಲದಲ್ಲಿ ಏರಿಸುವಂತೆ ಆಜ್ಞಾಪಿಸಿದನು.

ರಕ್ಷಕಭಟರು ತ್ರಿಶೂಲಭಾಗವು ಮೇಲ್ಮುಖವಾಗುವಂತೆ ಎತ್ತರವಾದ ತ್ರಿಶೂಲಗಳನ್ನು ಭೂಮಿಯಲ್ಲಿ ನೆಟ್ಟರು. ಕಳ್ಳರ ಗುದದ್ವಾರಗಳನ್ನು ತ್ರಿಶೂಲದಲ್ಲಿ ಸಿಕ್ಕಿಸಿದರು. ಕಳ್ಳರ ದೇಹಗಳ ಭಾರದಿಂದ ಕಳ್ಳರ ದೇಹಗಳೆಲ್ಲಾ ತ್ರಿಶೂಲಗಳ ಒಳಗೆ ಪ್ರವೇಶಿಸುತ್ತಾ ಬಂದವೂ. ಕಳ್ಳರೆಲ್ಲರೂ ನೋವನ್ನು ತಾಳಲಾರದೆ ಸತ್ತರು.

ಮಾಂಡವ್ಯಮುನಿಗಳು ಆಗಲೂ ಅಸಂಪ್ರಜ್ಞಾತಸಮಾಧ್ಯ ವಸ್ಥೆಯಲ್ಲಿದ್ದರು. ಅವರಿಗೆ ರಾಜನ ಮುಂದೆ ತನ್ನನ್ನು ನಿಲ್ಲಿಸಿದ್ದೂ ರಾಜನು ತ್ರಿಶೂಲದಲ್ಲಿ ತನ್ನನ್ನು ಏರಿಸುವಂತೆ ಆಜ್ಞಾಪಿಸಿದ್ದೂ ತ್ರಿಶೂಲದಲ್ಲಿ ತನ್ನನ್ನು ಏರಿಸಿದ್ದೂ ಯಾವುದೂ ತಿಳಿಯದು. ಅವರು ಸಾಯಲಿಲ್ಲ. ಅವರ ದೇಹದಲ್ಲಿ ಪ್ರತಿಕ್ಷಣದಲ್ಲಿಯೂ ತೇಜಸ್ಸು ಅಧಿಕವಾಗುತ್ತಾ ಬಂತು. ಅವರಿಗೆ ವೇದನೆಯೂ ಏರ್ಪಡಲಿಲ್ಲ. ಇದನ್ನು ರಾಜನು ತಿಳಿದನು. ಶೂಲದಿಂದ ಅವರನ್ನು ಇಳಿಸಿದನು. ಆಗ ಅವರಿಗೆ ಎಚ್ಚರವಾಯಿತು. ಅಪರಾಧಕ್ಕಾಗಿ ಕ್ಷಮಾಪಣೆಯನ್ನು ಬೇಡಿದನು. ಆಗ ಅವರಿಗೆ ನಡೆದ ವಿಷಯಗಳೆಲ್ಲಾ ತಿಳಿದವು.

ಮಾಂಡವ್ಯರು ಆಲೋಚಿಸಿದರು. "ನನ್ನನ್ನು ಶೂಲದಲ್ಲಿ ಈ ರಾಜನು ಏರಿಸಿರುವನು. ಇದಕ್ಕೆ ಕಾರಣವೇನು? ಈ ರಾಜನು ಅವಿವೇಕದಿಂದ ಏರಿಸಿರುವನು. ಆದ್ದರಿಂದ ರಾಜಾಜ್ಞೆಯು ಪ್ರಧಾನಕಾರಣವಲ್ಲ. ಪ್ರಾಣಿಗಳಿಗೆ ಶಿಕ್ಷೆಯನ್ನು ಮಾಡುವ ಅಧಿಕಾರವು ಯಮದೇವನಿಗೆ ಸೇರಿದ್ದು. ಅವನು ತಾನೇ ಆಗಲೀ ತನ್ನ ದೂತರ ಮೂಲಕವಾಗಿಯಾಗಲೀ ರಾಜಾದಿಗಳ ಮೂಲಕವಾಗಿಯಾಗಲೀ ಶಿಕ್ಷೆಯನ್ನು ಕೊಡುವನು. ಆದ್ದರಿಂದ " ನನಗೆ

ಈ ಶಿಕ್ಷೆಯನ್ನು ರಾಜನ ಮೂಲಕವಾಗಿ ಕೊಡಿಸಲು ಕಾರಣವೇನು? ಎಂದು ಯಮದೇವನಲ್ಲಿಯೇ ಕೇಳಬೇಕು'' ಎಂದು ತೀರ್ಮಾನಿಸಿ, ಯಮದೇವನನ್ನು ನೋಡಿ, ಕಾರಣವನ್ನು ಕೇಳಿದರು. ಅದಕ್ಕೆ ಯಮದೇವರು ಉತ್ತರಿಸಿದರು.

" ನೀನು ಚಿಕ್ಕ ವಯಸ್ಸಿನಲ್ಲಿ ಆಟವಾಡುತ್ತಿರುವಾಗ ಇರುವೆಯ ಗುದದ್ವಾರದಲ್ಲಿ ಕಡ್ಡಿಯನ್ನು ಚುಚ್ಚಿರುವಿ. ಆ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಬುದ್ಧಿಬಂದ ಮೇಲೆ ಮಾಡಬೇಕಾಗಿತ್ತು. ಪ್ರಾಯಶ್ಚಿತ್ತವನ್ನು ಮಾಡಲಿಲ್ಲ. ಅದಕ್ಕಾಗಿ ನಿನ್ನ ಗುದದ್ವಾರದಲ್ಲಿ ತ್ರಿಶೂಲವನ್ನು ಚುಚ್ಚಿಸಿರುವೆನು'' ಎಂದ ಹೇಳಿದರು.

ಇದನ್ನು ಕೇಳಿದ ಮಾಂಡವ್ಯರು ಹೇಳಿದರು. " ಈಗ ಕದ್ದವರು ಕಳ್ಳರು. ನಾನಲ್ಲ ಆದ್ದರಿಂದ ಈಗಿನ ಅಪರಾಧಕ್ಕೆ ಈ ಗ ಶಿಕ್ಷೆಯನ್ನು ನೀನು ಕೊಟ್ಟಿಲ್ಲ. ಹಿಂದೆ ಯಾವಾಗಲೋ ಚಿಕ್ಕ ವಯಸ್ಸಿನಲ್ಲಿ ನಾನು ಮಾಡಿರುವ ಅಪರಾಧಕ್ಕಾಗಿ ನನಗೆ ಈಗ ಶಿಕ್ಷೆಯನ್ನು ಕೊಟ್ಟಿರುವುದಾಗಿ ಹೇಳುತ್ತಿರುವಿ ತುಂಬಾ ಬಾಲ್ಯದಲ್ಲಿ ನಾನು ತಪ್ಪು ಮಾಡಿದ್ದರೆ ಆ ತಪ್ಪಿಗೆ ದಂಡನೆಯಿರಲಾರದು. ಅಥವಾ ದಂಡನೆಯಿದ್ದರೂ. ತುಂಬಾ ಅಲ್ಪವಾದ ದಂಡನೆಯನ್ನು ಕೊಡಬೇಕು. ಇಷ್ಟು ದೊಡ್ಡ ದಂಡನೆಯನ್ನು ನೀನು ಕೊಟ್ಟಿರುವುದು ಸರಿಯಲ್ಲ. ಅಪರಾಧಕ್ಕೆ ತಕ್ಕ ದಂಡನೆಯನ್ನು ಕೊಡದಿರುವ ದಂಡಾಧಿಕಾರಿಗೆ ಬ್ರಾಹ್ಮಣರು ತಕ್ಕ ದಂಡನೆಯನ್ನು ಕೊಡಬೇಕೆಂದು ಶಾಸ್ತ್ರವಿದೆ. ಆದ್ದರಿಂದ ನಾನು ನಿನಗೆ ದಂಡನೆಯನ್ನು ವಿಧಿಸುತ್ತೇನೆ. " ನೀನು ಶೂದ್ರನಾಗಿ ಹುಟ್ಟು'' ಎಂದು ಮಾಂಡವ್ಯರು ಶಪಿಸಿದರು. ಆ ಶಾಪದಿಂದ ಯಮದೇವನು ವಿದುರನಾಗಿ ಅವತರಿಸಿದನು.

" ಮಾಂಡವ್ಯರು ಚಿಕ್ಕ ವಯಸ್ಸಿನಲ್ಲಿ ಇರುವೆಯ ಗುದದ್ವಾರದಲ್ಲಿ ಕಡ್ಡಿಯನ್ನು ಚುಚ್ಚಿದ್ದು ನಿಜ. ಆದ್ದರಿಂದ ಯಮದೇವನು ಸುಳ್ಳು ಹೇಳಲಿಲ್ಲ. ಆದರೂ ಇಷ್ಟು ದೊಡ್ಡ ಶಿಕ್ಷೆಯನ್ನು ಚಿಕ್ಕ ಅಪರಾಧಕ್ಕೆ ಕೊಟ್ಟಿರುವುದು ಹೇಗೆ ಯುಕ್ತವಾಗುತ್ತದೆ? '' ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಉತ್ತರವನ್ನು ಕೊಡುವೆವು.

ವಸಿಷ್ಠರು ಮಾಂಡವ್ಯಋಷಿಗಳಿಗಿಂತ ಯೋಗ್ಯತೆಯಲ್ಲಿ ಉತ್ತಮರು. ಅವರ ಸಾಮ್ಯವು ಎಷ್ಟು ಪ್ರಯತ್ನವನ್ನು ಮಾಡಿದರೂ ಅವರಿಗಿಂತ ಕೆಳಗಣದರ್ಜೆಯವರಿಗೆ ಸಿಗಲಾರದು. ಮಾಂಡವ್ಯರು ವಸಿಷ್ಠರ ಸಾಮ್ಯವನ್ನು ಅಪೇಕ್ಷಿಸಿದರು. ಅದಕ್ಕಾಗಿ ಉಗ್ರವಾದ ತಪಸ್ಸನ್ನು ಮಾಡಿದರು. ಆ ತಪಸ್ಸಿನಿಂದ ತಮ್ಮ ಯೋಗ್ಯತೆಗಿಂತ ಅಧಿಕವಾದ ಪುಣ್ಯವನ್ನು ಗಳಿಸಿದರು. ಈ ಅಧಿಕವಾದ ಪುಣ್ಯವು ಕ್ಷೀಣವಾಗುವವರೆಗೆ ಮಾಂಡವ್ಯರಿಗೆ ಮುಕ್ತಿಯು ಸಿಗಲಾರದು. ಅದಕ್ಕಾಗಿ ಇಂತಹ ಸಂದರ್ಭದಲ್ಲಿ ಶ್ರೀಹರಿಯಾಗಲೀ ಶ್ರೀಹರಿದಾಸರಾದ ದೇವತೆಗಳಾಗಲೀ ಅಧಿಕವಾದ ಪುಣ್ಯವನ್ನು ಕ್ಷೀಣವಾಗುವಂತೆ ಮಾಡುವರು. ಆದ್ದರಿಂದಲೇ " ಏಧಮಾನದ್ವಿಟ್'' ಅಂದರೆ " ತನ್ನ ಯೋಗ್ಯತೆಗಿಂತ ಅಧಿಕವಾದ ಪುಣ್ಯವನ್ನು ಮಾಡಿ ಮೇಲು ಮೇಲಿನ ಅಂತಸ್ತನ್ನು ಪಡೆಯುವುದಕ್ಕಾಗಿ ಪ್ರಯತ್ನಿಸುವವನಿಗೆ ವೈರಿ'' ಅಂದರೆ " ಅವನ ಅಧಿಕವಾದ ಪುಣ್ಯವನ್ನು ನಾಶಮಾಡುವವನು'' ಎಂದು ಶ್ರೀಹರಿಗೆ ಹೆಸರು. ಶ್ರೀಮಾಂಡವ್ಯರ ಅಧಿಕವಾದ ಪುಣ್ಯವನ್ನು ನಾಶಮಾಡಬೇಕೆಂದು ಶ್ರೀಹರಿಯು ಸಂಕಲ್ಪಿಸಿದನು. ಶ್ರೀಹರಿಸಂಕಲ್ಪವನ್ನು ತಿಳಿದ ಯಮದೇವನು ತಾನೇ ಈ ಕೈಂಕರ್ಯವನ್ನು ಮಾಡಬೇಕೆಂದು ಸಂಕಲ್ಪಿಸಿದನು.

ಚಿಕ್ಕವರು ಮಾಡಿದ ಪುಣ್ಯವನ್ನು ಕಳೆಯಬೇಕಾದರೆ ಚಿಕ್ಕವರಿಂದ ಶಾಪವನ್ನು ದೊಡ್ಡವರು ಪಡೆಯುವುದು ಸುಲಭವಾದ ಉಪಾಯ. " ಯಮದೇವನು ಮಾಂಡವ್ಯಋಷಿಗಳಿಂದ ಶಾಪವನ್ನು ಪಡೆಯಬೇಕು. ಅದರಿಂದ ಅವರ ಅಧಿಕವಾದ ಪುಣ್ಯವನ್ನು ನಾಶಮಾಡಬೇಕು.'' ಎಂದು ಸಂಕಲ್ಪಿಸಿದನು.

ವಸಿಷ್ಠರ ಸಾಮ್ಯವನ್ನು ಅಪೇಕ್ಷಿಸಿ ಅದಕ್ಕಾಗಿ ಮಾಡಿರುವ ಮಹಾಪ್ರಯತ್ನ ಮತ್ತು ಚಿಕ್ಕವಯಸ್ಸಿನಲ್ಲಿ ಇರುವೆಯ ಗುದದ್ವಾರದಲ್ಲಿ ಕಡ್ಡಿಯಿಂದ ಚುಚ್ಚಿರುವುದು ಎಂಬ ಎರಡು ಅಪರಾಧಗಳಿಂದ ಯಮದೇವರು ಮಾಂಡವ್ಯರನ್ನು ತ್ರಿಶೂಲದಲ್ಲಿ ಏರಿಸಿದರು. ಕಾರಣವನ್ನು ಕೇಳಿದಾಗ ಇರುವೆಯ ಗುದದ್ವಾರದಲ್ಲಿ ಕಡ್ಡಿಯಿಂದ ಚುಚ್ಚಿರುವುದೊಂದನ್ನೇ ಕಾರಣವಾಗಿ ಹೇಳಿದರು. ಇನ್ನೊಂದು ಕಾರಣವನ್ನು ಹೇಳಲಿಲ್ಲ. ಅದನ್ನು ಹೇಳಿಬಿಟ್ಟಿದ್ದರೆ ಮಾಂಡವ್ಯರು ಶಾಪವನ್ನು ಕೊಡುತ್ತಿದ್ದಿಲ್ಲ. ಯಮದೇವರ ಇಷ್ಟಸಿದ್ಧಿಯೂ ಆಗುತ್ತಿದ್ದಿಲ್ಲ. ಅದಕ್ಕಾಗಿ ಒಂದೇ ಕಾರಣವನ್ನು ಹೇಳಿ ಶಾಪವನ್ನು ಪಡೆದರು.

ಮೂರನೆಯ ಮೊಮ್ಮಗನು ಶೂದ್ರನಾದುದನ್ನು ಸತ್ಯವತಿಯು ನೋಡಿದಳು. ಶ್ರೀವೇದವ್ಯಾಸರನ್ನು ನಮಸ್ಕರಿಸಿ, ಅಂಬಾಲಿಕೆಯಲ್ಲಿ ಇನ್ನೊಬ್ಬ ಮಗನನ್ನು ಹುಟ್ಟಿಸಬೇಕೆಂದು ಪ್ರಾರ್ಥಿಸಿದಳು. ಶ್ರೀವೇದವ್ಯಾಸರು ಇಷ್ಟಪಡಲಿಲ್ಲ. ಅದೃಶ್ಯರಾದರು.

## ಧೃತರಾಷ್ಟ್ರಾದಿಗಳ ವಿದ್ಯಾಭ್ಯಾಸ

ಭೀಷ್ಮನು ಇವರಿಗೆ ಯೋಗ್ಯವಾದ ಚೌಲ ಮುಂತಾದ ಎಲ್ಲಾ ಸಂಸ್ಕಾರಗಳನ್ನೂ ಮುನಿಗಳ ಮೂಲಕವಾಗಿ ಮಾಡಿಸಿದನು. ಶ್ರೀವೇದವ್ಯಾಸರು ಸಕಲ ವಿದ್ಯೆಗಳನ್ನೂ ಉಪದೇಶಿಸಿದರು. ಪಾಂಡುರಾಜನಿಗೆ ಎಲ್ಲಾ ಅಸ್ತ್ರಗಳನ್ನೂ ಶಸ್ತ್ರಗಳನ್ನೂ ಭೀಷ್ಮನು ಉಪದೇಶಿಸಿದನು. ಅವರೆಲ್ಲರೂ ಸರ್ವವಿದ್ಯೆಗಳಲ್ಲಿಯೂ ಮಹಾಪಾಂಡಿತ್ಯವನ್ನು ಪಡೆದರು. ವಿದುರನು ಸರ್ವರಿಗಿಂತಲೂ ಅಧಿಕವಾದ ಜ್ಞಾನವನ್ನು ಪಡೆದು ಸರ್ವಜ್ಞನೆನಿಸಿದನು. ಸರ್ವಾಸ್ತ್ರಗಳನ್ನೂ ತಿಳಿದ ಪಾಂಡುರಾಜನು ಒಬ್ಬನೇ ಧನುಸ್ಸನ್ನು ಧರಿಸಿಕೊಂಡು ಇಡೀ ಭೂಮಂಡಲವನ್ನು ಜಯಿಸಿದನು.

## ಸಂಜಯನ ಜನನ

ಸಮಸ್ತಗಂದರ್ವರುಗಳಿಗೆ ಅಧಿಪತಿಯಾದ ತುಂಬುರುವು ಉದ್ವಹ ಎಂಬ ವಾಯುದೇವನ ಆವೇಶದಿಂದ ಯುಕ್ತನಾಗಿ ವಿಚಿತ್ರವೀರ್ಯನ ಸಾರಥಿಯಾದ ಗವಲ್ಗಣನಿಗೆ ಸಂಜಯ ಎಂಬ ಹೆಸರಿನಿಂದ ಮಗನಾಗಿ ಹುಟ್ಟಿದನು. ಶ್ರೀವೇದವ್ಯಾಸರ ಶಿಷ್ಯನಾಗಿ ಸರ್ವಜ್ಞನೂ ಬುದ್ಧಿವಂತನೂ ಆದನು. ಅವನು ಧೃತರಾಷ್ಟ್ರ ಪಾಂಡು ವಿದುರ ಎಂಬ ಮೂವರಿಗೆ ಸ್ನೇಹಿತನೂ ಹಿತಚಿಂತಕನೂ ಪ್ರಿಯನೂ ಆಗಿದ್ದನು, ಹೆಚ್ಚಾಗಿ ಧೃತರಾಷ್ಟ್ರನನ್ನು ಅನುಸರಿಸುತ್ತಿದ್ದನು.

## ಧೃತರಾಷ್ಟ್ರನ ವಿವಾಹ

ಗಾಂಧಾರದೇಶದ ರಾಜನಾದ ಸುಬಲರಾಜನ ಕುಮಾರಿಯೂ ಶಕುನಿಯ (ಅಕ್ಕ) ಸಹೋದರಿಯಾದ ಆಗಿರುವ ಗಾಂಧಾರೀದೇವಿಯನ್ನು ಧೃತರಾಷ್ಟ್ರನು ವಿವಾಹಮಾಡಿಕೊಂಡನು.

## ಶಕುನಿ

"ಶ್ರೀಹರಿಯು ಇದ್ದಾನೋ ಇಲ್ಲವೋ? ಯಾರು ಕಂಡ" ಎಂಬ ಸಂಶಯವು ದ್ವಾ+ಪರ= ದ್ವಾಪರ ಅಂದರೆ ಎರಡು ಪಕ್ಷಗಳಲ್ಲಿಯೂ ತಾತ್ಪರ್ಯವುಳ್ಳ ಜ್ಞಾನವೆನಿಸುತ್ತದೆ. ತತ್ವ ಸಂಶಯವೆನಿಸಿದ ಈ ದ್ವಾಪರಕ್ಕೆ

ಈ ಶಿಕ್ಷೆಯನ್ನು ರಾಜನ ಮೂಲಕವಾಗಿ ಕೊಡಿಸಲು ಕಾರಣವೇನು? ಎಂದು ಯಮದೇವನಲ್ಲಿಯೇ ಕೇಳಬೇಕು'' ಎಂದು ತೀರ್ಮಾನಿಸಿ, ಯಮದೇವನನ್ನು ನೋಡಿ, ಕಾರಣವನ್ನು ಕೇಳಿದರು. ಅದಕ್ಕೆ ಯಮದೇವರು ಉತ್ತರಿಸಿದರು.

" ನೀನು ಚಿಕ್ಕ ವಯಸ್ಸಿನಲ್ಲಿ ಆಟವಾಡುತ್ತಿರುವಾಗ ಇರುವೆಯ ಗುದದ್ವಾರದಲ್ಲಿ ಕಡ್ಡಿಯನ್ನು ಚುಚ್ಚಿರುವಿ. ಆ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಬುದ್ಧಿಬಂದ ಮೇಲೆ ಮಾಡಬೇಕಾಗಿತ್ತು. ಪ್ರಾಯಶ್ಚಿತ್ತವನ್ನು ಮಾಡಲಿಲ್ಲ. ಅದಕ್ಕಾಗಿ ನಿನ್ನ ಗುದದ್ವಾರದಲ್ಲಿ ತ್ರಿಶೂಲವನ್ನು ಚುಚ್ಚಿಸಿರುವೆನು'' ಎಂದ ಹೇಳಿದರು.

ಇದನ್ನು ಕೇಳಿದ ಮಾಂಡವ್ಯರು ಹೇಳಿದರು. " ಈಗ ಕದ್ದವರು ಕಳ್ಳರು. ನಾನಲ್ಲ ಆದ್ದರಿಂದ ಈಗಿನ ಅಪರಾಧಕ್ಕೆ ಈ ಗ ಶಿಕ್ಷೆಯನ್ನು ನೀನು ಕೊಟ್ಟಿಲ್ಲ. ಹಿಂದೆ ಯಾವಾಗಲೋ ಚಿಕ್ಕ ವಯಸ್ಸಿನಲ್ಲಿ ನಾನು ಮಾಡಿರುವ ಅಪರಾಧಕ್ಕಾಗಿ ನನಗೆ ಈಗ ಶಿಕ್ಷೆಯನ್ನು ಕೊಟ್ಟಿರುವುದಾಗಿ ಹೇಳುತ್ತಿರುವಿ ತುಂಬಾ ಬಾಲ್ಯದಲ್ಲಿ ನಾನು ತಪ್ಪು ಮಾಡಿದ್ದರೆ ಆ ತಪ್ಪಿಗೆ ದಂಡನೆಯಿರಲಾರದು. ಅಥವಾ ದಂಡನೆಯಿದ್ದರೂ. ತುಂಬಾ ಅಲ್ಪವಾದ ದಂಡನೆಯನ್ನು ಕೊಡಬೇಕು. ಇಷ್ಟು ದೊಡ್ಡ ದಂಡನೆಯನ್ನು ನೀನು ಕೊಟ್ಟಿರುವುದು ಸರಿಯಲ್ಲ. ಅಪರಾಧಕ್ಕೆ ತಕ್ಕ ದಂಡನೆಯನ್ನು ಕೊಡದಿರುವ ದಂಡಾಧಿಕಾರಿಗೆ ಬ್ರಾಹ್ಮಣರು ತಕ್ಕ ದಂಡನೆಯನ್ನು ಕೊಡಬೇಕೆಂದು ಶಾಸ್ತ್ರವಿದೆ. ಆದ್ದರಿಂದ ನಾನು ನಿನಗೆ ದಂಡನೆಯನ್ನು ವಿಧಿಸುತ್ತೇನೆ. " ನೀನು ಶೂದ್ರನಾಗಿ ಹುಟ್ಟು'' ಎಂದು ಮಾಂಡವ್ಯರು ಶಪಿಸಿದರು. ಆ ಶಾಪದಿಂದ ಯಮದೇವನು ವಿದುರನಾಗಿ ಅವತರಿಸಿದನು.

" ಮಾಂಡವ್ಯರು ಚಿಕ್ಕ ವಯಸ್ಸಿನಲ್ಲಿ ಇರುವೆಯ ಗುದದ್ವಾರದಲ್ಲಿ ಕಡ್ಡಿಯನ್ನು ಚುಚ್ಚಿದ್ದು ನಿಜ. ಆದ್ದರಿಂದ ಯಮದೇವನು ಸುಳ್ಳು ಹೇಳಲಿಲ್ಲ. ಆದರೂ ಇಷ್ಟು ದೊಡ್ಡ ಶಿಕ್ಷೆಯನ್ನು ಚಿಕ್ಕ ಅಪರಾಧಕ್ಕೆ ಕೊಟ್ಟಿರುವುದು ಹೇಗೆ ಯುಕ್ತವಾಗುತ್ತದೆ? '' ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಉತ್ತರವನ್ನು ಕೊಡುವೆವು.

ವಸಿಷ್ಠರು ಮಾಂಡವ್ಯಋಷಿಗಳಿಗಿಂತ ಯೋಗ್ಯತೆಯಲ್ಲಿ ಉತ್ತಮರು. ಅವರ ಸಾಮ್ಯವು ಎಷ್ಟು ಪ್ರಯತ್ನವನ್ನು ಮಾಡಿದರೂ ಅವರಿಗಿಂತ ಕೆಳಗಣದರ್ಜೆಯವರಿಗೆ ಸಿಗಲಾರದು. ಮಾಂಡವ್ಯರು ವಸಿಷ್ಠರ ಸಾಮ್ಯವನ್ನು ಅಪೇಕ್ಷಿಸಿದರು. ಅದಕ್ಕಾಗಿ ಉಗ್ರವಾದ ತಪಸ್ಸನ್ನು ಮಾಡಿದರು. ಆ ತಪಸ್ಸಿನಿಂದ ತಮ್ಮ ಯೋಗ್ಯತೆಗಿಂತ ಅಧಿಕವಾದ ಪುಣ್ಯವನ್ನು ಗಳಿಸಿದರು. ಈ ಅಧಿಕವಾದ ಪುಣ್ಯವು ಕ್ಷೀಣವಾಗುವವರೆಗೆ ಮಾಂಡವ್ಯರಿಗೆ ಮುಕ್ತಿಯು ಸಿಗಲಾರದು. ಅದಕ್ಕಾಗಿ ಇಂತಹ ಸಂದರ್ಭದಲ್ಲಿ ಶ್ರೀಹರಿಯಾಗಲೀ ಶ್ರೀಹರಿದಾಸರಾದ ದೇವತೆಗಳಾಗಲೀ ಅಧಿಕವಾದ ಪುಣ್ಯವನ್ನು ಕ್ಷೀಣವಾಗುವಂತೆ ಮಾಡುವರು. ಆದ್ದರಿಂದಲೇ " ಏಧಮಾನದ್ವಿಟ್'' ಅಂದರೆ " ತನ್ನ ಯೋಗ್ಯತೆಗಿಂತ ಅಧಿಕವಾದ ಪುಣ್ಯವನ್ನು ಮಾಡಿ ಮೇಲು ಮೇಲಿನ ಅಂತಸ್ತನ್ನು ಪಡೆಯುವುದಕ್ಕಾಗಿ ಪ್ರಯತ್ನಿಸುವವನಿಗೆ ವೈರಿ'' ಅಂದರೆ " ಅವನ ಅಧಿಕವಾದ ಪುಣ್ಯವನ್ನು ನಾಶಮಾಡುವವನು'' ಎಂದು ಶ್ರೀಹರಿಗೆ ಹೆಸರು. ಶ್ರೀಮಾಂಡವ್ಯರ ಅಧಿಕವಾದ ಪುಣ್ಯವನ್ನು ನಾಶಮಾಡಬೇಕೆಂದು ಶ್ರೀಹರಿಯು ಸಂಕಲ್ಪಿಸಿದನು. ಶ್ರೀಹರಿಸಂಕಲ್ಪವನ್ನು ತಿಳಿದ ಯಮದೇವನು ತಾನೇ ಈ ಕೈಂಕರ್ಯವನ್ನು ಮಾಡಬೇಕೆಂದು ಸಂಕಲ್ಪಿಸಿದನು.

ಚಿಕ್ಕವರು ಮಾಡಿದ ಪುಣ್ಯವನ್ನು ಕಳೆಯಬೇಕಾದರೆ ಚಿಕ್ಕವರಿಂದ ಶಾಪವನ್ನು ದೊಡ್ಡವರು ಪಡೆಯುವುದು ಸುಲಭವಾದ ಉಪಾಯ. " ಯಮದೇವನು ಮಾಂಡವ್ಯಋಷಿಗಳಿಂದ ಶಾಪವನ್ನು ಪಡೆಯಬೇಕು. ಅದರಿಂದ ಅವರ ಅಧಿಕವಾದ ಪುಣ್ಯವನ್ನು ನಾಶಮಾಡಬೇಕು.'' ಎಂದು ಸಂಕಲ್ಪಿಸಿದನು.

ವಸಿಷ್ಠರ ಸಾಮ್ಯವನ್ನು ಅಪೇಕ್ಷಿಸಿ ಅದಕ್ಕಾಗಿ ಮಾಡಿರುವ ಮಹಾಪ್ರಯತ್ನ ಮತ್ತು ಚಿಕ್ಕವಯಸ್ಸಿನಲ್ಲಿ ಇರುವೆಯ ಗುದದ್ವಾರದಲ್ಲಿ ಕಡ್ಡಿಯಿಂದ ಚುಚ್ಚಿರುವುದು ಎಂಬ ಎರಡು ಅಪರಾಧಗಳಿಂದ ಯಮದೇವರು ಮಾಂಡವ್ಯರನ್ನು ತ್ರಿಶೂಲದಲ್ಲಿ ಏರಿಸಿದರು. ಕಾರಣವನ್ನು ಕೇಳಿದಾಗ ಇರುವೆಯ ಗುದದ್ವಾರದಲ್ಲಿ ಕಡ್ಡಿಯಿಂದ ಚುಚ್ಚಿರುವುದೊಂದನ್ನೇ ಕಾರಣವಾಗಿ ಹೇಳಿದರು. ಇನ್ನೊಂದು ಕಾರಣವನ್ನು ಹೇಳಲಿಲ್ಲ. ಅದನ್ನು ಹೇಳಿಬಿಟ್ಟಿದ್ದರೆ ಮಾಂಡವ್ಯರು ಶಾಪವನ್ನು ಕೊಡುತ್ತಿದ್ದಿಲ್ಲ. ಯಮದೇವರ ಇಷ್ಟಸಿದ್ಧಿಯೂ ಆಗುತ್ತಿದ್ದಿಲ್ಲ. ಅದಕ್ಕಾಗಿ ಒಂದೇ ಕಾರಣವನ್ನು ಹೇಳಿ ಶಾಪವನ್ನು ಪಡೆದರು.

ಮೂರನೆಯ ಮೊಮ್ಮಗನು ಶೂದ್ರನಾದುದನ್ನು ಸತ್ಯವತಿಯು ನೋಡಿದಳು. ಶ್ರೀವೇದವ್ಯಾಸರನ್ನು ನಮಸ್ಕರಿಸಿ, ಅಂಬಾಲಿಕೆಯಲ್ಲಿ ಇನ್ನೊಬ್ಬ ಮಗನನ್ನು ಹುಟ್ಟಿಸಬೇಕೆಂದು ಪ್ರಾರ್ಥಿಸಿದಳು. ಶ್ರೀವೇದವ್ಯಾಸರು ಇಷ್ಟಪಡಲಿಲ್ಲ. ಅದೃಶ್ಯರಾದರು.

## ಧೃತರಾಷ್ಟ್ರಾದಿಗಳ ವಿದ್ಯಾಭ್ಯಾಸ

ಭೀಷ್ಮನು ಇವರಿಗೆ ಯೋಗ್ಯವಾದ ಚೌಲ ಮುಂತಾದ ಎಲ್ಲಾ ಸಂಸ್ಕಾರಗಳನ್ನೂ ಮುನಿಗಳ ಮೂಲಕವಾಗಿ ಮಾಡಿಸಿದನು. ಶ್ರೀವೇದವ್ಯಾಸರು ಸಕಲ ವಿದ್ಯೆಗಳನ್ನೂ ಉಪದೇಶಿಸಿದರು. ಪಾಂಡುರಾಜನಿಗೆ ಎಲ್ಲಾ ಅಸ್ತ್ರಗಳನ್ನೂ ಶಸ್ತ್ರಗಳನ್ನೂ ಭೀಷ್ಮನು ಉಪದೇಶಿಸಿದನು. ಅವರೆಲ್ಲರೂ ಸರ್ವವಿದ್ಯೆಗಳಲ್ಲಿಯೂ ಮಹಾಪಾಂಡಿತ್ಯವನ್ನು ಪಡೆದರು. ವಿದುರನು ಸರ್ವರಿಗಿಂತಲೂ ಅಧಿಕವಾದ ಜ್ಞಾನವನ್ನು ಪಡೆದು ಸರ್ವಜ್ಞನೆನಿಸಿದನು. ಸರ್ವಾಸ್ತ್ರಗಳನ್ನೂ ತಿಳಿದ ಪಾಂಡುರಾಜನು ಒಬ್ಬನೇ ಧನುಸ್ಸನ್ನು ಧರಿಸಿಕೊಂಡು ಇಡೀ ಭೂಮಂಡಲವನ್ನು ಜಯಿಸಿದನು.

## ಸಂಜಯನ ಜನನ

ಸಮಸ್ತಗಂಧರ್ವರುಗಳಿಗೆ ಅಧಿಪತಿಯಾದ ತುಂಬುರುವು ಉದ್ವಹ ಎಂಬ ವಾಯುದೇವನ ಆವೇಶದಿಂದ ಯುಕ್ತನಾಗಿ ವಿಚಿತ್ರವೀರ್ಯನ ಸಾರಥಿಯಾದ ಗವಲ್ಗಣನಿಗೆ ಸಂಜಯ ಎಂಬ ಹೆಸರಿನಿಂದ ಮಗನಾಗಿ ಹುಟ್ಟಿದನು. ಶ್ರೀವೇದವ್ಯಾಸರ ಶಿಷ್ಯನಾಗಿ ಸರ್ವಜ್ಞನೂ ಬುದ್ಧಿವಂತನೂ ಆದನು. ಅವನು ಧೃತರಾಷ್ಟ್ರ ಪಾಂಡು ವಿದುರ ಎಂಬ ಮೂವರಿಗೆ ಸ್ನೇಹಿತನೂ ಹಿತಚಿಂತಕನೂ ಪ್ರಿಯನೂ ಆಗಿದ್ದನು. ಹೆಚ್ಚಾಗಿ ಧೃತರಾಷ್ಟ್ರನನ್ನು ಅನುಸರಿಸುತ್ತಿದ್ದನು.

## ಧೃತರಾಷ್ಟ್ರನ ವಿವಾಹ

ಗಾಂಧಾರದೇಶದ ರಾಜನಾದ ಸುಬಲರಾಜನ ಕುಮಾರಿಯೂ ಶಕುನಿಯ (ಅಕ್ಕ) ಸಹೋದರಿಯಾದ ಆಗಿರುವ ಗಾಂಧಾರೀದೇವಿಯನ್ನು ಧೃತರಾಷ್ಟ್ರನು ವಿವಾಹಮಾಡಿಕೊಂಡನು.

## ಶಕುನಿ

"ಶ್ರೀಹರಿಯು ಇದ್ದಾನೋ ಇಲ್ಲವೋ? ಯಾರು ಕಂಡ" ಎಂಬ ಸಂಶಯವು ದ್ವಾ+ಪರ= ದ್ವಾಪರ ಅಂದರೆ ಎರಡು ಪಕ್ಷಗಳಲ್ಲಿಯೂ ತಾತ್ಪರ್ಯವುಳ್ಳ ಜ್ಞಾನವೆನಿಸುತ್ತದೆ. ತತ್ವ ಸಂಶಯವೆನಿಸಿದ ಈ ದ್ವಾಪರಕ್ಕೆ

ಕಾರಣನಾದ ದೈತ್ಯನು ದ್ವಾಪರ ಎಂದು ಪ್ರಸಿದ್ಧನಾಗಿರುವನು. ತತ್ವಸಂಶಯಕ್ಕೆ ಕಾರಣವಾದ ದ್ವಾಪರ ಎಂಬ ಮೂರನೆಯ ಯುಗವೂ ಇವನ ಆಧಿಪತ್ಯಕ್ಕೆ ಒಳಪಟ್ಟಿರುವುದರಿಂದ ದ್ವಾಪರಯುಗವೆನಿಸುತ್ತದೆ.

ಈ ತತ್ವಸಂಶಯವು ದೃಢವಾಗುತ್ತಾ ಬಂದರೆ ಕೊನೆಗೆ "ದೇವರೇ ಇಲ್ಲ" ಎಂದು ನಾಸ್ತಿಕ್ಯಬುದ್ಧಿಯು ಹುಟ್ಟುತ್ತದೆ. ಈ ನಾಸ್ತಿಕ್ಯಬುದ್ಧಿಯು ಬಂದರೆ ತನ್ನ ಇಷ್ಟದಂತೆ ಕೆಟ್ಟ ಕೆಲಸಗಳನ್ನು ಮಾಡುತ್ತಾನೆ. ಈ ವಿಧದಿಂದ ಸರ್ವಾನರ್ಥಗಳಿಗೂ ಮೂಲಕಾರಣನಾದ ದ್ವಾಪರ ಎಂಬ ದೈತ್ಯನು ಶಕುನಿ ಎಂಬ ಹೆಸರಿನಿಂದ ಹುಟ್ಟಿದನು. ಅವನು ತನ್ನ ಅಕ್ಕನ ಗಂಡನಾದ ಧೃತರಾಷ್ಟ್ರನನ್ನು ಆಶ್ರಯಿಸಿದನು. ಆದ್ದರಿಂದಲೇ ಧೃತರಾಷ್ಟ್ರನಿಗೆ ತತ್ವಸಂಶಯವು ಏರ್ಪಡುವುದಕ್ಕೂ ಆ ತತ್ವಸಂಶಯವು ಕೊನೆಗೆ ನಾಸ್ತಿಕ್ಯಬುದ್ಧಿಯಲ್ಲಿ ಪರಿಣಮಿಸುವುದಕ್ಕೂ ಆ ನಾಸ್ತಿಕ್ಯಬುದ್ಧಿಯಿಂದ ದ್ಯೂತ ಮುಂತಾದ ಕೆಟ್ಟಕೆಲಸಗಳಲ್ಲಿ ರುಚಿಯನ್ನು ಹುಟ್ಟಿಸುವುದಕ್ಕೂ ಕಾರಣನಾದನು.

# ಕುಂತೀದೇವಿಯ ಪೂರ್ವಚರಿತ್ರೆ

ಕೂರ್ಮ ಎಂಬ ವಾಯುದೇವನು ಕುಂತಿದೇಶದ ಅಧಿಪತಿಯಾದ ಕುಂತಿಭೋಜರಾಜನಾಗಿ ಅವತರಿಸಿದನು. ಅವನಿಗೆ ಮಕ್ಕಳಿರಲಿಲ್ಲ. ವಸುದೇವನ ತಂದೆಯಾದ ಶೂರರಾಜನು ತನ್ನ ಮಗಳಾದ ಪೃಥಾದೇವಿಯನ್ನು ತನ್ನ ಪರಮಮಿತ್ರನಾದ ಕುಂತಿಭೋಜರಾಜನಿಗೆ ಪುತ್ರಿಯಾಗಿ ಕೊಟ್ಟನು. ಅವಳನ್ನು ಅತ್ಯಂತ ಪ್ರೇಮದಿಂದ ಕುಂತಿಭೋಜರಾಜನು ರಕ್ಷಿಸಿದನು. ಅಂದಿನಿಂದ ಅವಳು ಕುಂತೀ ಎಂದು ಪ್ರಸಿದ್ಧಳಾದಳು. ಈ ಕುಂತಿಯು ಗುಣಗಳಿಂದಲೂ ಉತ್ತಮಶೀಲದಿಂದಲೂ ಸುರೂಪದಿಂದಲೂ ಯುಕ್ತಳಾಗಿದ್ದಳು.

# ಕುಂತೀದೇವಿಗೆ ದೂರ್ವಾಸರಿಂದ ವರಲಾಭ

ಕುಂತೀಭೋಜನ ರಾಜಧಾನಿಗೆ ಒಮ್ಮೆ ದೂರ್ವಾಸರು ಬಂದರು. ಅವರು ರುದ್ರದೇವರ ಅವತಾರ ಮತ್ತು ಮಹಾಕೋಪಿಷ್ಠರು. ಅವರು ಕುಂತೀಭೋಜರಾಜನಲ್ಲಿ ತಾನು ಕೆಲವು ಸಮಯದವರೆಗೆ ಆ ಊರಿನಲ್ಲಿ ಇರುವುದಾಗಿ ಹೇಳಿದರು.

" ನನ್ನ ಮಗಳಾದ ಕುಂತಿಯು ತನ್ನ ಶಕ್ತ್ಯನುಸಾರವಾಗಿ ಸೇವಿಸುವಳು. ಆ ಸೇವೆಯಲ್ಲಿ ಹೆಚ್ಚು ಕಡಿಮೆ ಇರಬಹುದು. ನೀವು ಸಹಿಸಿಕೊಂಡಿರಬೇಕು. ಇದಕ್ಕೆ ಒಪ್ಪುವುದಾದರೆ ನೀವು ನಮ್ಮಲ್ಲಿ ಇಷ್ಟವಿದ್ದಷ್ಟು ದಿನಗಳ ವರೆಗೆ ಇರಬಹುದು'' ಎಂದು ಕುಂತೀಭೋಜರಾಜನು ಹೇಳಿದನು. ಅದಕ್ಕೆ ದೂರ್ವಾಸರು ಒಪ್ಪಿದರು. ಕುಂತೀಭೋಜರಾಜನು ದೂರ್ವಾಸರ ಸೇವೆಗಾಗಿ ಕುಂತಿಯನ್ನು ಕಳುಹಿಸಿದನು.

ಕುಂತಿದೇವೀಯು ಮಹಾಕೋಪಿಷ್ಠರಾದ ದೂರ್ವಾಸರು ಹೇಳಿದ ಮಾತುಗಳಂತೆ ನಡೆದುಕೊಂಡಳು. ಅವರು ಹೇಳದಿರುವ ಕೆಲಸಗಳನ್ನು ಅವರ ಮನಸ್ಸನ್ನು ತಿಳಿದು ಮಾಡಿದಳು. ದೇಹದಲ್ಲಿರುವ ಅವಯವಗಳಿಂದ ಸೂಚಿಸಲ್ಪಟ್ಟ ಕಾರ್ಯಗಳನ್ನೂ ಮಾಡಿದಳು. ಯಾರಿಂದಲೂ ಆ ರೀತಿಯಿಂದ ಸೇವಿಸುವುದಕ್ಕೆ ಸಾಧ್ಯವಿಲ್ಲ. ಹದಿಮೂರು ವರ್ಷಗಳವರೆಗೆ ಯಾವ ಲೋಪವೂ ಇಲ್ಲದಂತೆ ಶಾಸ್ತ್ರೋಕ್ತ ರೀತಿಯಿಂದ ಅವರನ್ನು ಸಂತೋಷಪಡಿಸಿದಳು. ಅವರು ತೃಪ್ತರಾದರು. ಊರಿಗೆ ಹೊರಡುವ ದಿನದಲ್ಲಿ ಅವಳಿಗೆ ಒಂದು ಮಂತ್ರವನ್ನು

ಉಪದೇಶಿಸಿದರು. ಆ ಮಂತ್ರವನ್ನು ಜಪಿಸಿ ಯಾವ ಯಾವ ದೇವತೆಗಳನ್ನು ಕರೆಯುವಳೋ ಅವರೆಲ್ಲರೂ ಬರುವರು ಸಮಸ್ತ ದೇವತೆಗಳೂ ವಶರಾಗುವರು.

## ಕರ್ಣನ ಜನನ

ಕುಂತೀದೇವಿಯು ಒಮ್ಮೆ ಋತುಸ್ನಾನವನ್ನು ಮಾಡಿದಳು. ದೂರ್ವಾಸರು ಉಪದೇಶಿಸಿದ ಮಂತ್ರವನ್ನು ಪರೀಕ್ಷಿಸುವುದಕ್ಕಾಗಿ ಒಮ್ಮೆ ಜಪಿಸಿ ಸೂರ್ಯದೇವನನ್ನು ಕರೆದಳು. ಮರುಕ್ಷಣದಲ್ಲಿ ಸೂರ್ಯದೇವನು ಬಂದನು. "ಪರೀಕ್ಷೆ ಮಾಡುವುದಕ್ಕಾಗಿ ಕರೆದೆನು. ಹಿಂದಿರುಗಿ ಹೋಗಿರಿ. ರತಿಕ್ರೀಡೆಯು ಬೇಡ. ಅವಿವಾಹಿತಳಾದ ನನಗೆ ಗುಪ್ತರತಿಕ್ರಿಡೆಯಿಂದ ಸಂತತಿಯು ಹುಟ್ಟಿದರೆ ಅಪಕೀರ್ತಿಯು ಬರುವುದು''. ಮುಂತಾದ ಮಾತುಗಳಿಂದ ಹಿಂದಿರುಗಿಸುವುದಕ್ಕಾಗಿ ಯತ್ನಿಸಿದಳು. ಅವಳ ಪ್ರಯತ್ನವು ಫಲಿಸಲಿಲ್ಲ.

" ಅಂಜಬೇಡ, ನಿನ್ನ ಯೋನಿಯು ಕೆಡುವುದಿಲ್ಲ. ನಿನಗೆ ಅಪಕೀರ್ತಿಯು ಬರುವುದಿಲ್ಲ. ಪ್ರಸವವಾದ ಲಕ್ಷಣಗಳು ನಿನ್ನಲ್ಲಿ ಏರ್ಪಡುವುದಿಲ್ಲ'' ಮುಂತಾದ ಮಾತುಗಳಿಂದ ಅವಳನ್ನು ಸಂತೋಷಪಡಿಸಿದನು. ಸೂರ್ಯದೇವನು ಕೈಗಳನ್ನೂ ಕಾಲುಗಳನ್ನೂ ಹಿಡಿದು ಅವಳನ್ನು ವಶಪಡಿಸಿಕೊಂಡನು. ಅವಳ ಅಂಗಸಂಗವನ್ನು ಮಾಡಿದನು. ಮರುಕ್ಷಣದಲ್ಲಿ ಸೂರ್ಯದೇವನೇ (ಸೂರ್ಯದೇವನಿಗೆ) ಮಗನಾಗಿ ಹುಟ್ಟಿದನು. ಸ್ವಾಭಾವಿಕವಾದ ಕವಚದಿಂದಲೂ ಕರ್ಣಕುಂಡಲಗಳಿಂದಲೂ ಸಹಿತನಾಗಿ ಹುಟ್ಟಿದನು. ಎರಡನೆಯ ಸೂರ್ಯನಂತೆ ಪ್ರಕಾಶಿಸಿದನು. ಸುಂದರವಾದ ಕಿವಿಗಳಿಂದ ಸಹಿತನಾದುದರಿಂದ ಆ ಬಾಲಕನು ಕರ್ಣ ಎಂದು ಪ್ರಸಿದ್ಧನಾದನು.

ರಾಮಾವತಾರ ಕಾಲದಲ್ಲಿ ಇದೇ ಸೂರ್ಯನು ಸುಗ್ರೀವನಾಗಿ ಹುಟ್ಟಿದನು. ಆಗ ತನ್ನ ಅಣ್ಣನೂ ತನಗಿಂತ ಯೋಗ್ಯತೆಯಲ್ಲಿ ಉತ್ತಮನೂ ಆಗಿರುವ ವಾಲಿಯನ್ನು ಶ್ರೀರಾಮದೇವನಿಂದ ಕೊಲ್ಲಿಸಿದನು. ಪ್ರಬಲವಾದ ಈ ಅಪರಾಧವನ್ನು ಮಾಡಿದುದಕ್ಕಾಗಿ ಈ ಜನ್ಮದಲ್ಲಿ ಸಹಸ್ರವರ್ಮ ಎಂಬ ದೈತ್ಯನ ಆವೇಶದಿಂದ ಸಹಿತನಾಗಿ ಹುಟ್ಟಿದನು. ಭೂತಪ್ರೇತಪಿಶಾಚಾದಿಗಳ ಆವೇಶದಿಂದ ಹೇಗೆ  ಜನರ ಬುದ್ಧಿಯು ಕೆಡುತ್ತದೋ ಅದರಂತೆ ದೈತ್ಯಾವೇಶದಿಂದ ಕರ್ಣನ ಬುದ್ಧಿಯು ಕೆಟ್ಟಿತು. ಆದರೂ ಹಿಂದಿನ ಜನ್ಮದಲ್ಲಿ ಶ್ರೀರಾಮದೇವನನ್ನು ಅತ್ಯಂತ ಭಕ್ತಿಯಿಂದ ಆರಾಧಿಸಿರುವುದರಿಂದ ಅವನಲ್ಲಿ ಶ್ರೀಹರಿಯ ವಿಶೇಷ ಸನ್ನಿಧಾನವು ಇತ್ತು. ಸೂರ್ಯದೇವನು ಹಿಂದಿರುಗಿ ಹೋದನು.

ಕುಂತೀದೇವಿಗೆ ಜನಾಪವಾದದ ಭಯವು ಏರ್ಪಟ್ಟಿತು. ರತ್ನಖಚಿತವಾದ ಪೆಟ್ಟಿಗೆಯಲ್ಲಿ ಕರ್ಣನನ್ನು ಮಲಗಿಸಿದಳು. ರತ್ನಗಳನ್ನು ಎಡೆಯಲ್ಲಿ ತುಂಬಿಸಿದಳು. ಪೆಟ್ಟಿಗೆಯನ್ನು ಮುದ್ರಣ ಮಾಡಿದಳು. ತನ್ನ ಊರಿನಲ್ಲಿರುವ ಅಶ್ವನದಿಯಿಂದ ಚರ್ಮಣ್ವತೀನದಿಯನ್ನೂ ಚರ್ಮಣ್ವತೀನದಿಯಿಂದ ಯಮುನಾನದಿಯನ್ನೂ ಯಮುನಾನದಿ ಯಿಂದ ಗಂಗೆಯನ್ನು ಹೊಂದಿತು. ಗಂಗೆಯಲ್ಲಿ ತೇಲುತ್ತಾ. ಚಂಪಾಪುರಕ್ಕೆ ಬಂತು. ಆ ಊರಿನಲ್ಲಿದ್ದ ಅಧಿರಥ ಎಂಬ ಸೂತನು ಆ ಪೆಟ್ಟಿಗೆಯನ್ನು ನೋಡಿ ವಶಪಡಿಸಿಕೊಂಡನು. ಆ ಪೆಟ್ಟಿಗೆಯಲ್ಲಿದ್ದ ರತ್ನಗಳನ್ನೂ ಮಗುವನ್ನೂ ತೆಗೆದುಕೊಂಡು ಆ ಮಗುವು ವಸು ಅಂದರೆ ದ್ರವ್ಯದಿಂದ ಸೇನ ಅಂದರೆ ಸಹಿತನಾಗಿ ಬಂದಿರುವುದರಿಂದ ಕರ್ಣನಿಗೆ ವಸುಷೇಣ ಎಂದು ನಾಮಕರಣವನ್ನು ಮಾಡಿದನು.

ಅಧಿರಥನು ಕರ್ಣನನ್ನು ಲಾಲಿಸಿದನು. ಅವನ ಪತ್ನಿಯಾದ ರಾಧೆಯು ಬೆಳೆಯಿಸಿದಳು. ಕರ್ಣನು ಬಾಲ್ಯದಲ್ಲಿಯೇ ಎಲ್ಲಾ ಶಾಸ್ತ್ರಗಳನ್ನೂ ಅಧ್ಯಯನ ಮಾಡಿ, ಮಹಾಬಲಿಷ್ಠನಾದನು. ಸ್ವಾಭಾವಿಕವಾದ ಸುಗುಣಗಳಿಂದ ಶೋಭಿಸಿದನು.

## ಪಾಂಡುರಾಜನೊಡನೆ ಕುಂತಿಯ ವಿವಾಹ

ಕುಂತಿಯನ್ನು ಕುಂತಿಭೋಜರಾಜನು ಪಾಂಡುವಿಗೆ ಕೊಟ್ಟು ವಿವಾಹ ಮಾಡಿದನು. ಪಾಂಡುರಾಜನ ಮೂಲರೂಪವಾದ ಪರಾವಹ ಎಂಬ ವಾಯುದೇವನ ಪತ್ನಿಯಾದ ಕುಂತೀದೇವಿಯೇ ಈಗ ಕುಂತಿಯಾಗಿ ಅವತರಿಸಿರುವಳು. ಕುಂತೀದೇವಿಯೊಡನೆ ಪಾಂಡುರಾಜನು ಬಹುಕಾಲದವರೆಗೆ ಸುಖವಾಗಿ ವಾಸಿಸಿದನು.

## ವಿದುರನ ವಿವಾಹ

ವಸುದೇವನ ತಂದೆಯಾದ ಶೂರರಾಜನಿಗೆ ಶೂದ್ರಜಾತಿಯ ಪತ್ನಿಯಲ್ಲಿ ಹುಟ್ಟಿದವಳೂ ಗುಣಸಂಪನ್ನಳೂ ಆಗಿರುವ ಅರುಣೀ ಎಂಬುವವಳನ್ನು ವಿದುರನು ವಿವಾಹ ಮಾಡಿಕೊಂಡನು.

## ಶಲ್ಯ ಮತ್ತು ಮಾದ್ರಿಯ ಜನನ

ಮದ್ರದೇಶದ ಅಧಿಪತಿಯಾದ ಋತಾಯನ ಎಂಬುವವನು ತನಗೆ ದೇವೇಂದ್ರನಿಗೆ ಸಮನಾದ ಮಗನೂ ಕನ್ಯಾರತ್ನವು ಹುಟ್ಟಬೇಕೆಂದು ಅಪೇಕ್ಷಿಸಿದನು. ಅದಕ್ಕಾಗಿ ಬ್ರಹ್ಮದೇವನನ್ನು ಕುರಿತು ತಪಸ್ಸು ಮಾಡಿದನು. ಬ್ರಹ್ಮದೇವನು ವರವನ್ನು ಕೊಟ್ಟನು. ಈ ವರದಿಂದ ಪ್ರಹ್ಲಾದನ ತಮ್ಮನೂ ಹರಿಭಕ್ತನೂ ಆಗಿರುವ ಸಹ್ಲಾದನು ವಾಯುದೇವರ ಅವೇಶದಿಂದ ಯುಕ್ತನಾಗಿ ಋತಾಯನನಿಗೆ ಮಗನಾಗಿ ಹುಟ್ಟಿದನು. ಅವನಿಗೆ ಎಲ್ಲರಿಗಿಂತಲೂ ಅಧಿಕವಾದ ಬಲವು ಏರ್ಪಡುವಂತೆ ಬ್ರಹ್ಮದೇವನು ವರವನ್ನು ಕೊಟ್ಟನು. ಆ ಮಗನು ಬ್ರಹ್ಮದೇವನ ವರಬಲದಿಂದಲೂ ವಾಯುದೇವರ ಆವೇಶಬಲದಿಂದಲೂ ಅಧಿಕಬಲವುಳ್ಳವನಾದನು. ಅವನಿಗೆ ಶಲ್ಯ ಅಂದರೆ ಎಲ್ಲಾ ಶತ್ರುಗಳ ಹೃದಯಕ್ಕೆ ಅಣೆಯಂತಿರುವವನು ಎಂದು ನಾಮಕರಣವನ್ನು ಮಾಡಿದನು.

ಶಲ್ಯನಿಗೆ ಅವನ ತಂದೆಯಾದ ಋತಾಯನನು ತನ್ನ ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದನು. ಸಕಲ ಶಾಸ್ತ್ರಗಳನ್ನೂ ತಿಳಿದಿರುವ ಶಲ್ಯನು ಧರ್ಮದಿಂದ ರಾಜ್ಯವನ್ನು ಪಾಲಿಸಿದನು.

## ಮಾದ್ರಿಯ ವಿವಾಹ

ಋತಾಯನನ ಮಗಳಾದ ಆ ಮಾದ್ರಿಯೂ ಸಹ ಕುಂತೀದೇವಿಯಂತೆ ಪಾಂಡುರಾಜನ ಮೂಲ ರೂಪವಾದ ಪರಾವಹ ಎಂಬ ವಾಯುದೇವನ ಪತ್ನಿಯಾಗಿರುವಳು. ಆ ಮಾದ್ರಿಯನ್ನು ಪಾಂಡುರಾಜನು ವಿವಾಹ ಮಾಡಿಕೊಂಡನು.

# ಪಾಂಡುರಾಜನ ರಾಜ್ಯನಿರ್ವಾಹ

ಪಾಂಡುರಾಜನು ಕುಂತೀ ಮತ್ತು ಮಾದ್ರಿ ಎಂಬ ಇಬ್ಬರ ಪತ್ನಿರತ್ನಗಳಿಂದ ಸಹಿತನಾಗಿ ನಾನಾ ವಿಧವಾದ ಸುಖಗಳನ್ನು ಅನುಭವಿಸಿದನು. ಭೀಷ್ಮನು ರಾಜ್ಯದಲ್ಲಿ ಧೃತರಾಷ್ಟ್ರನನ್ನು ರಾಜನನ್ನಾಗಿಯೂ ಪಾಂಡುವನ್ನು ಯುವರಾಜನನ್ನಾಗಿಯೂ ಏರ್ಪಡಿಸಿದನು. ಧೃತರಾಷ್ಟ್ರನು ಕುರುಡನಾದುದರಿಂದ ರಾಜ್ಯವನ್ನು ಪಾಲಿಸಲಿಲ್ಲ. ಪಾಂಡುವೇ ರಾಜ್ಯವನ್ನು ಪಾಲಿಸಿದನು. ಭೀಷ್ಮ ಮತ್ತು ಧೃತರಾಷ್ಟ್ರ ಇವರಿಬ್ಬರ ಆಜ್ಞೆಯಂತೆ ನಡೆದುಕೊಂಡನು. ವಿದುರನು ಇವನಿಗೆ ಮಾರ್ಗದರ್ಶಕನಾಗಿದ್ದನು. ಏಕೈಕವೀರನಾದ ಪಾಂಡುರಾಜನು ಪ್ರಪಂಚದಲ್ಲಿರುವ ಸರ್ವರಾಜರನ್ನೂ ಗೆದ್ದನು. ದಿಗ್ವಿಜಯದಲ್ಲಿ ಸಂಗ್ರಹಿಸಿದ ಧನಕನಕಾದಿಗಳನ್ನೆಲ್ಲವನ್ನೂ ಧೃತರಾಷ್ಟ್ರನ ಮನೆಯಲ್ಲಿ ತುಂಬಿಸಿದನು. ಧೃತರಾಷ್ಟ್ರನು ನಾನಾ ವಿಧವಾದ ಅಸಂಖ್ಯಯಜ್ಞಗಳನ್ನು ಮಾಡಿ ಶ್ರೀಹರಿಯನ್ನು ಸಂತೋಷಪಡಿಸಿದನು. ಪಾಂಡುರಾಜನೂ ಅಣ್ಣನ ಅನುಮತಿಯಿಂದ ನಾನಾವಿಧವಾದ ಯಜ್ಞಗಳನ್ನು ಮಾಡಿದನು.

# ಸತ್ಯವತೀ ಮುಂತಾದವರಿಗೆ ಸದ್ಗತಿಯಾದುದು

"ಇನ್ನು ಕೆಲವು ವರ್ಷಗಳಲ್ಲಿ ಕೌರವರಿಗೂ ಪಾಂಡವರಿಗೂ ವಿರೋಧವು ಏರ್ಪಡುತ್ತದೆ. ಆ ಸಮಯದಲ್ಲಿ ಸತ್ಯವತೀದೇವಿ ಇಲ್ಲಿ ಇರಬಾರದು. ತನ್ನ ಮೊಮ್ಮಕ್ಕಳು ಒಗ್ಗಟ್ಟಾಗಿ ಇರುವ ಈ ಸಮಯದಲ್ಲೇ ಅವಳನ್ನು ಇಲ್ಲಿಂದ ಹೊರಡಿಸಬೇಕು.'' ಎಂದು ಶ್ರೀವೇದವ್ಯಾಸದೇವರು ಸಂಕಲ್ಪಿಸಿದರು. ಅವಳನ್ನು ಕರೆದುಕೊಂಡು ತನ್ನ ಆಶ್ರಮಕ್ಕೆ ಹೋದರು. ಅವಳ ಜೊತೆಯಲ್ಲಿ ಅಂಬಿಕಾ, ಅಂಬಾಲಿಕಾ ಎಂಬ ಇಬ್ಬರು ಸೊಸೆಯರು ಹೋದರು. ವಿದುರನ ತಾಯಿಯು ಅಂಬಿಕೆಯ ಹಿಂದೆ ಹೋದಳು.

ಸತ್ಯವತೀದೇವಿಗೆ ಶ್ರೀವೇದವ್ಯಾಸರು ತತ್ತ್ವೋಪದೇಶಗಳನ್ನು ಮಾಡಿದರು. ಅವರ ಉಪದೇಶದಿಂದ ಶ್ರೀವೇದವ್ಯಾಸರನ್ನು ಪರಬ್ರಹ್ಮ ಎಂದು ತಿಳಿದುಕೊಂಡು ಅತ್ಯಂತ ಭಕ್ತಿಯನ್ನು ಮಾಡಿದಳು. ಕೆಲವು ಸಮಯದಲ್ಲಿ ಪುತ್ರ ಎಂದು ಅಪಾರ ಪ್ರೇಮವನ್ನು ಮಾಡಿದಳು. ಕೊನೆಗೆ ಭಕ್ತ್ಯತಿಶಯವನ್ನು ಪಡೆದಳು. ಆ ಭಕ್ತಿಯಿಂದ ವೈಕುಂಠಲೋಕವನ್ನು ಪಡೆದಳು.

ವಿದುರನ ತಾಯಿಯು ಶ್ರೀವೇದವ್ಯಾಸರೊಡನೆ ರತಿಕ್ರೀಡೆಯನ್ನು ಮಾಡುವಾಗ ಪರಮಭಕ್ತಿಯುಕ್ತಳಾಗಿದ್ದಳು. ಅನಂತರದಲ್ಲಿಯೂ ಅತ್ಯಂತ ಭಕ್ತಿಯಿಂದ ಯುಕ್ತಳಾಗಿದ್ದಳು. ಅವಳ ಮಗನು ಯಮನಾದುದರಿಂದ ಇತರರಲ್ಲಿರುವ ಸದ್ಗುಣಗಳಿಗಿಂತ ಅಧಿಕವಾದ ಭಕ್ತ್ಯಾದಿಸದ್ಗುಣಗಳು ಅವನಲ್ಲಿದ್ದವು. ಅವನ ಸದ್ಗುಣಗಳಿಂದಲೂ ಅವಳಿಗೆ ಉತ್ತಮ ಲೋಕಪ್ರಾಪ್ತಿಯು ಏರ್ಪಡಬೇಕು. ಆದರೂ ಅವಳ ಭಕ್ತಿಯು ಸತ್ಯವತೀದೇವಿಯ ಭಕ್ತಿಗಿಂತ ಸ್ವಲ್ಪ ಕಡಿಮೆಯೂ ಅಂಬಿಕಾ ಅಂಬಾಲಿಕೆಯರ ಭಕ್ತಿಗಿಂತ ಅಧಿಕವಾಗಿಯೂ ಇತ್ತು. ಆದ್ದರಿಂದ ಅವಳು ಮೊದಲು ಬ್ರಹ್ಮಲೋಕಕ್ಕೆ ಹೋದಳು. ಅಲ್ಲಿಂದ ವೈಕುಂಠಲೋಕಕ್ಕೆ ಹೋದಳು.

ಅಂಬಾಲಿಕೆಯು ಶ್ರೀವೇದವ್ಯಾಸರೊಡನೆ ರತಿಕ್ರಿಡೆಯನ್ನು ಮಾಡುವಾಗ ಅತ್ಯಂತ ಭಕ್ತಿಯನ್ನು ತೋರಿಸಲಿಲ್ಲ. ಇತರ ಕಾಲದಲ್ಲಿ ಅತ್ಯಂತ ಭಕ್ತಿಯನ್ನು ತೋರಿಸಿದಳು. ಆದ್ದರಿಂದ ಸತ್ತಕೂಡಲೇ ಬ್ರಹ್ಮಲೋಕಕ್ಕೂ

ವೈಕುಂಠಲೋಕಕ್ಕೂ ಹೋಗಲಿಲ್ಲ. ಸ್ವರ್ಗಲೋಕಕ್ಕೆ ಹೋದಳು. ಅಲ್ಲಿ ಕೆಲಕಾಲದ ವರೆಗೆ ಇದ್ದು ಕ್ರಮದಿಂದ ಸತ್ಯಲೋಕವನ್ನೂ ವೈಕುಂಠಲೋಕವನ್ನೂ ಪಡೆದಳು. ಸತ್ಯವತಿದೇವಿಗೂ ವಿದುರನ ತಾಯಿಗೂ ಅಂಬಾಲಿಕೆಗೂ ವೈಕುಂಠಪ್ರಾಪ್ತಿಯು ಏರ್ಪಟ್ಟದ್ದರಿಂದ ಮೂವರಿಗೂ ಸಾಲೋಕ್ಯಮುಕ್ತಿಯು ಏರ್ಪಟ್ಟ ಹಾಗಾಯಿತು.

ಅಂಬಿಕೆಯು ತಾನು ರತಿಕ್ರೀಡೆಯನ್ನು ಮಾಡದೇ ದಾಸಿಯನ್ನು ಕಳುಹಿಸಿದಳು. ಈ ಅಪರಾಧದಿಂದ ಅವಳಿಗೆ ವೈಕುಂಠಲೋಕ ಪ್ರಾಪ್ತಿಯು ಏರ್ಪಡಲಿಲ್ಲ. ಆದರೂ ರತಿಕ್ರೀಡಾತಿರಿಕ್ತಕಾಲದಲ್ಲಿ ಭಕ್ತಿಯನ್ನು ಮಾಡಿದಳು. ಆದ್ದರಿಂದ ಅಧಮಮುಕ್ತಳಂತೆ ವೈಕುಂಠವನ್ನು ಬಿಟ್ಟು ಇತರ ಲೋಕಗಳಲ್ಲಿ ಸಾರೂಪ್ಯ ಮುಕ್ತಿಯನ್ನು ಪಡೆದು ವಾಸಿಸಿದಳು. ಅತ್ತೆಯಂತೆಯೂ ತಂಗಿಯಂತೆಯೂ ದಾಸಿಯಂತೆಯೂ ಸಾಲೋಕ್ಯ ಮುಕ್ತಿಯನ್ನು ಪಡೆಯಲಿಲ್ಲ.

ಜೀವನು ಶ್ರೀಹರಿಯಲ್ಲಿ ಮನಸ್ಸನ್ನು ಹೇಗೆ ಹೇಗೆ ಇಟ್ಟಿರುತ್ತಾನೆಯೋ ಅದಕ್ಕೆ ಯೋಗ್ಯವಾದ ಗತಿಯು ಏರ್ಪಡುತ್ತದೆ. ಸತ್ಯವತೀದೇವಿಯೇ ಮೊದಲಾದವರ ಮನೋಭಾವಗಳ ವ್ಯತ್ಯಾಸವನ್ನು ಅನುಸರಿಸಿ ಫಲಭೇದವು ಏರ್ಪಟ್ಟದ್ದು ಸರಿಯೇ ಆಗಿರುತ್ತದೆ.

## ಪಾಂಡುವಿನ ವೈರಾಗ್ಯ

ಪಾಂಡುರಾಜನು ಕೆಲವು ವರ್ಷಗಳವರೆಗೆ ರಾಜ್ಯವನ್ನು ಪಾಲಿಸಿದನು. ಕೊನೆಗೆ ರಾಜ್ಯವನ್ನು ಧೃತರಾಷ್ಟ್ರನಿಗೂ ವಿದುರನಿಗೂ ಒಪ್ಪಿಸಿ ಕಾಡಿಗೆ ಹೋದನು. ಇಬ್ಬರು ಪತ್ನಿಯರಿಂದ ಸಹಿತನಾಗಿ ಬದರೀಕ್ಷೇತ್ರದಲ್ಲಿ ವಾಸಿಸಿದನು. ಗೃಹಸ್ಥಾಶ್ರಮಿಯಾಗಿಯೇ ಇದ್ದು ನಾನಾ ವಿಧವಾದ ಸುಖಗಳನ್ನು ಅನುಭವಿಸಿದನು. ಮುನಿಶ್ರೇಷ್ಠರಿಂದ ಯುಕ್ತನಾಗಿ ತಪಸ್ಸನ್ನೂ ಮಾಡಿದನು. ಜಗತ್ಪತಿಯೂ ರಮಾಪತಿಯೂ ಆದ ನಾರಾಯಣನನ್ನು ಭಕ್ತಿಯಿಂದ ಪೂಜಿಸಿದನು.

ಒಮ್ಮೆ ಕಾಡಿನಲ್ಲಿ ಕರ್ದಮ ಎಂಬ ಋಷಿಯು ಕಾಮಪೀಡಿತನಾಗಿ ಜಿಂಕೆಯ ರೂಪವನ್ನು ಸ್ವೀಕರಿಸಿ ಜಿಂಕೆಯ ರೂಪದಿಂದ ಯುಕ್ತಳಾದ ತನ್ನ ಪತ್ನಿಯೊಡನೆ ರತಿಕ್ರೀಡೆಯನ್ನು ಮಾಡುತ್ತಿದ್ದನು. ಆ ಸಮಯದಲ್ಲಿ ದೈವಾಧೀನನಾಗಿ ಪಾಂಡುರಾಜನು ಅಲ್ಲಿಗೆ ಬಂದನು. ತಿಳಿಯದೆ ಜಿಂಕೆಯ ರೂಪದಿಂದ ಯುಕ್ತನಾದ ಋಷಿಯನ್ನು ಬಾಣದಿಂದ ಹೊಡೆದನು. ಆ ಋಷಿಯು ಸಾಯುವಾಗ "ನೀನೂ ಪತ್ನಿಯೊಡನೆ ರತಿಕ್ರೀಡೆಯನ್ನು ಮಾಡುತ್ತಾ ಸಾಯುವಿ'' ಎಂದು ಶಪಿಸಿದನು. ಇದನ್ನು ಕೇಳಿದ ಪಾಂಡುರಾಜನು ಪತ್ನಿಯರ ಸಂಗವನ್ನು ಅಂದಿನಿಂದ ಬಿಟ್ಟನು. ಸನ್ಯಾಸವನ್ನು ಸ್ವೀಕರಿಸಬೇಕೆಂದು ಆಶಿಸಿದನು. ಕುಂತಿಯು ನಮಸ್ಕರಿಸಿ "ಕೂಡದು'' ಎಂದು ತಡೆದಳು. ಗೃಹಸ್ಥಾಶ್ರಮದಲ್ಲಿಯೇ ಇದ್ದನು. ಪತ್ನಿಯರಿಂದ ಸಹಿತನಾಗಿ ತಪಸ್ಸನ್ನು ಮಾಡಿದನು.

## ಬದರೀಕ್ಷೇತ್ರ

ಪೂರ್ವಸಮುದ್ರದಿಂದ ಪಶ್ಚಿಮ ಸಮುದ್ರದ ವರೆಗೆ ಉದ್ದವಾಗಿರುವ ಸಪಾದಲಕ್ಷ ಎಂಬ ಪರ್ವತವು ಮೇರು ಪರ್ವತದ ದಕ್ಷಿಣದಲ್ಲಿದೆ. ಆ ಪರ್ವತದಲ್ಲಿ ಒಂದೂಕಾಲುಲಕ್ಷ ಶಿಖರಗಳಿವೆ. ಆದ್ದರಿಂದಲೇ ಆ ಪರ್ವತಕ್ಕೆ ಸಪಾದಲಕ್ಷ ಎಂಬ ಹೆಸರು ಬಂದಿರುತ್ತದೆ. ಈ ಸಪಾದಲಕ್ಷಪರ್ವತದ ಮಧ್ಯದಲ್ಲಿ ಶತಶೃಂಗ ಎಂಬ ಒಂದು ಪರ್ವತವಿದೆ. ಆ ಶತಶೃಂಗ ಪರ್ವತದ ಪೂರ್ವದಲ್ಲಿ ನರ ಎಂಬ ಶಿಖರವೂ ಪಶ್ಚಿಮದಲ್ಲಿ ನಾರಾಯಣ ಎಂಬ

ಶಿಖರವೂ ಇದೆ. ಆ ಎರಡು ಶಿಖರಗಳ ಮಧ್ಯದಲ್ಲಿ ಅಲಕನಂದಾ ಎಂಬ ಹೆಸರಿನಿಂದ ಗಂಗೆಯು ದಕ್ಷಿಣಾಭಿಮುಖವಾಗಿ ಹರಿಯುತ್ತಿರುತ್ತದೆ. ನರ ನಾರಾಯಣ ಎಂಬ ಶಿಖರಗಳಿಂದಲೂ ಅಲಕನಂದೆಯಿಂದಲೂ ಯುಕ್ತವಾದ ಆ ಪ್ರದೇಶವೇ ಬದರೀಕ್ಷೇತ್ರವೆನಿಸುತ್ತದೆ. ಆ ಬದರೀಕ್ಷೇತ್ರದಲ್ಲಿ ದಕ್ಷಿಣದಲ್ಲಿ ಒಂದು ಯೋಜನದ ಕೆಳಭಾಗದಲ್ಲಿ ಪಾಂಡುಕೇಶ್ವರ ಎಂಬ ಪುಣ್ಯಕ್ಷೇತ್ರವು ಇರುತ್ತದೆ. ಪಾಂಡುರಾಜನು ಅಲ್ಲಿ ವಾಸಿಸಿದನು. ಆದ್ದರಿಂದಲೇ ಆ ಕ್ಷೇತ್ರಕ್ಕೆ ಪಾಂಡುಕೇಶ್ವರ ಎಂಬ ಹೆಸರು ಬಂತು.

ಬದರೀಕ್ಷೇತ್ರದಲ್ಲಿ ಚಳಿಗಾಲದಲ್ಲಿ ಆರುತಿಂಗಳುಗಳ ವರೆಗೆ ಆಕಾಶದಿಂದ ಗಿರಿಶಿಖರಗಳಂತೆ ದೊಡ್ಡದಾಗಿರುವ ಮಂಜುಗಡ್ಡೆಗಳು ಬೀಳುತ್ತಿರುತ್ತವೆ. ಆ ಸಮಯದಲ್ಲಿ ಅಲ್ಲಿ ಪಶುಗಳು, ಪಕ್ಷಿಗಳು, ಮೃಗಗಳೂ ಮನುಷ್ಯರು ಮುಂತಾದವರು ವಾಸಿಸಲು ಸಾಧ್ಯವಿಲ್ಲ. ಆದ್ದರಿಂದ ಆಗ ಬದರೀಕ್ಷೇತ್ರದಲ್ಲಿರುವ ಪಶುಗಳೇ ಮೊದಲಾದ ಸರ್ವಪ್ರಾಣಿಗಳೂ ಪಾಂಡುಕೇಶ್ವರ ಕ್ಷೇತ್ರಕ್ಕೆ ಬರುತ್ತವೆ. ಆರು ತಿಂಗಳುಗಳ ವರೆಗೆ ಇದ್ದು ಬೇಸಿಗೆಕಾಲ ಬಂದಾಗ ಹಿಂದಿರುಗಿ ಬದರಿಗೆ ಹೋಗುತ್ತವೆ. ಪಾಂಡುರಾಜನು ಬದರೀಕ್ಷೇತ್ರದಲ್ಲಿ ನಿರಂತರವಾಸವು ಸಾಧ್ಯವಿಲ್ಲವೆಂದು ತಿಳಿದನು. ನಿರಂತರವಾಸಕ್ಕಾಗಿ ಪಾಂಡುಕೇಶ್ವರದಲ್ಲಿ ವಾಸಿಸಿದನು.

ಈ ಸಮಯದಲ್ಲಿ ದೇವಕೀದೇವಿಯು ಆರು ಮಕ್ಕಳುಗಳನ್ನು ಹಡೆದಳು. ಆ ಮಕ್ಕಳುಗಳನ್ನು ಕಂಸನು ಸಂಹರಿಸಿದನು. ಅದೇ ಸಮಯದಲ್ಲಿ ಮುನಿಗಳೊಡನೆ ವಾಸಿಸುತ್ತಿದ್ದ ಪಾಂಡುರಾಜನು ಯೋಗಬಲದಿಂದ ದೇಹವನ್ನು ತ್ಯಜಿಸಿ ಬ್ರಹ್ಮದೇವರನ್ನು ಸೇವಿಸುವುದಕ್ಕಾಗಿ ಬ್ರಹ್ಮಲೋಕಕ್ಕೆ ಹೋಗಬೇಕೆಂದು ತೀರ್ಮಾನಿಸಿದನು. ಆಗ ಮುನಿಗಳೆಲ್ಲಾ ಅವನನ್ನು ತಡೆದರು.

## ಪಾಂಡುರಾಜನಿಗೆ ಮುನಿಗಳ ಉಪದೇಶ

" ಪಾಂಡುರಾಜನೇ, ಸಂಧ್ಯಾವಲಿಯ ಪತಿಯಾದ ರುಕ್ಮಾಂಗದನನ್ನು ಕುರಿತು ಮೋಹಿನಿಯು 'ಏಕಾದಶೀವ್ರತವನ್ನು ಬಿಡುವಿಯಾ, ನಿನ್ನ ಮಗನ ತಲೆಯನ್ನು ಕೊಡುವಿಯಾ' ಎಂದು ಕೇಳಿದಳು. ಆಗ ರುಕ್ಮಾಂಗದನು ತನ್ನ ಮಗನಾದ ಧರ್ಮಾಂಗದನನ್ನು ಈ ವಿಷಯವಾಗಿ ಪ್ರಶ್ನಿಸಿದನು. ಆಗ ಮಗನು 'ಏಕಾದಶೀವ್ರತವನ್ನು ನೀವೂ ಅಮ್ಮನೂ ಬಿಡಕೂಡದು. ನಾನೂ ಬಿಡಲಾರೆ. ನನ್ನ ತಲೆಯನ್ನು ಕತ್ತರಿಸಿ ಮೋಹಿನಿಗೆ ಕೊಡಿರಿ." ಎಂದನು. ರುಕ್ಮಾಂಗದನೂ ಹಾಗೆಯೇ ಮಾಡಿದನು.

"ರುಕ್ಮಾಂಗದನು ತನ್ನ ಮಗನನ್ನು ತಾನೇ ಕೊಂದನು. ಅವನ ಮಗನಿಗೂ ಮಕ್ಕಳಿಲ್ಲ. ಆದರೂ ತಂದೆಯೂ ಮಗನೂ ಏಕಾದಶೀವ್ರತದಲ್ಲಿ ಅತ್ಯಂತ ಆದರವನ್ನು ತೋರಿಸಿದರು. ಈ ಪುಣ್ಯದಿಂದ ಶ್ರೀಹರಿಯು ಪ್ರಸನ್ನನಾಗಿ ತಂದೆಗೂ ತಾಯಿಗೂ ಮಗನಿಗೂ ವಿಮಾನವನ್ನು ಕಳುಹಿಸಿದನು. ಆ ವಿಮಾನದಲ್ಲಿ ಕುಳಿತು ಅವರೆಲ್ಲರೂ ಮುಕ್ತಿಯನ್ನು ಪಡೆದರು. ಆದ್ದರಿಂದ ಸದ್ಗತಿಯಾಗಲು ಮಕ್ಕಳು ಹುಟ್ಟಲೇಬೇಕು ಎಂಬ ನಿರ್ಬಂಧವಿಲ್ಲ."

" ಆದರೆ ಮಕ್ಕಳಿಲ್ಲದ ಎಲ್ಲರಿಗೂ ಧರ್ಮಾಂಗದನಂತೆ ಮುಕ್ತಿಯಾಗುತ್ತದೆ ಎಂಬ ನಿಯಮವಿಲ್ಲ " ಯಾವನು ಯಾವ ಕಾರ್ಯವನ್ನು ಮಾಡುವುದಕ್ಕಾಗಿ ಹುಟ್ಟಿರುವನೋ ಅವನು ಆ ಕಾರ್ಯವನ್ನು ಮಾಡಲೇಬೇಕು. ಇಲ್ಲದಿದ್ದರೆ ಅವನಿಗೆ ಸದ್ಗತಿಯು ಏರ್ಪಡಲಾರದು" ಎಂಬ ನಿಯಮವಿದೆ. ಕೆಲವರು ಮಕ್ಕಳನ್ನು ಪಡೆಯುವುದಕ್ಕಾಗಿಯೇ

ಹುಟ್ಟಿದವರು. ಅವರು ಮಕ್ಕಳನ್ನು ಹುಟ್ಟಿಸಲೇಬೇಕು. ಈ ದರ್ಜೆಯಲ್ಲಿ ಸೇರಿದವರು ಪ್ರಿಯವ್ರತಾದಿಗಳು. ಕೆಲವರಿಗೆ ಮಕ್ಕಳೇ ಇಲ್ಲ. ಆದರೂ ತನ್ನ ಪತ್ನಿಯು ತಮಗಿಂತ ಉತ್ತಮರಿಂದ ಮಕ್ಕಳನ್ನು ಪಡೆಯುವಂತೆ ಆಜ್ಞಾಪಿಸುವುದಕ್ಕೋಸ್ಕರ ಹುಟ್ಟಿದವರು. ಈ ದರ್ಜೆಯಲ್ಲಿ ಸೇರಿದವರು ಕಲ್ಮಾಷಪಾದರಾಜನೇ ಮೊದಲಾದವರು. ಕೆಲವರು ಮಕ್ಕಳನ್ನು ಪಡೆಯುವುದಕ್ಕಾಗಿಯೂ ಹುಟ್ಟಿಲ್ಲ. ತನ್ನ ಪತ್ನಿಯು ತಮಗಿಂತ ಉತ್ತಮಪುರುಷರಿಂದ ಮಕ್ಕಳನ್ನು ಪಡೆಯುವಂತೆ ಆಜ್ಞಾಪಿಸುವುದಕ್ಕೂ ಹುಟ್ಟಿಲ್ಲ. ಇತರ ಮಹಾಪುಣ್ಯಕಾರ್ಯಗಳನ್ನು ಮಾಡುವುದಕ್ಕಾಗಿ ಹುಟ್ಟಿದವರು. ಈ ದರ್ಜೆಯಲ್ಲಿ ಸೇರಿದವರು ಧರ್ಮಾಂಗದನೇ ಮೊದಲಾದವರು.''

"ಪಾಂಡುರಾಜನೇ ನೀನು ಕರ್ದಮಋಷಿಯ ಶಾಪದಿಂದ ಯುಕ್ತನಾಗಿರುವಿ. ಆದ್ದರಿಂದ ಮಕ್ಕಳನ್ನು ಹುಟ್ಟಿಸುವುದಕ್ಕೆ ಹುಟ್ಟಿದವನಲ್ಲ. ನಿನಗಿಂತ ಉತ್ತಮರಾದ ವಾಯುದೇವ ಮುಂತಾದವರಿಂದ ಸಂತತಿಯನ್ನು ಪಡೆಯುವುದಕ್ಕಾಗಿ ಪತ್ನಿಯನ್ನು ಆಜ್ಞಾಪಿಸುವುದಕ್ಕಾಗಿ ಹುಟ್ಟಿದವನು. ಆ ಕಾರ್ಯವನ್ನು ಮಾಡಿ ಮುಗಿಸುವ ವರೆಗೆ ನಿನಗೆ ಸದ್ಗತಿಯಾಗಲಾರದು. ಆದ್ದರಿಂದ ಆ ಕಾರ್ಯವನ್ನು ಮಾಡು. ನಿನ್ನ ಪತ್ನಿಯರಲ್ಲಿ ಮಕ್ಕಳು ಹುಟ್ಟಲಿ. ಅನಂತರದಲ್ಲಿ ಬ್ರಹ್ಮಲೋಕಕ್ಕೆ ಹೋಗು.'' ಇದು ಮುನಿಗಳು ಪಾಂಡುರಾಜನಿಗೆ ಆಜ್ಞಾಪಿಸಿದುದು.

ಅದೇ ಸಮಯದಲ್ಲಿ ಕಲಿ ಎಂಬ ದೈತ್ಯನೂ ರಾಮಾವತಾರಕಾಲದಲ್ಲಿ ಕೊಲ್ಲಲ್ಪಟ್ಟ ಇಂದ್ರಜಿತ್ ಮುಂತಾದ ರಾಕ್ಷಸರೂ ಧೃತರಾಷ್ಟ್ರನ ಪತ್ನಿಯಾದ ಗಾಂಧಾರಿಯ ಗರ್ಭದಲ್ಲಿ ಪ್ರವೇಶಿಸಿದರು. ಗಾಂಧಾರಿಯು ಗರ್ಭಿಣಿಯಾದ ಸಮಾಚಾರವನ್ನು ಹಸ್ತಿನಾವತಿಯಿಂದ ಬಂದಿರುವ ಕೆಲವು ಮುನಿಗಳು ಪಾಂಡುರಾಜನಿಗೆ ಹೇಳಿದರು.

ತಾನು ದೇಹವನ್ನು ತ್ಯಜಿಸಿ ಬ್ರಹ್ಮಲೋಕಕ್ಕೆ ಹೋಗಬೇಕೆಂದು ಸಂಕಲ್ಪಿಸಿದ್ದಾಗ ಅಡ್ಡಗಟ್ಟಿನಿಲ್ಲಿಸಿದ ಮುನಿಗಳು ಹೇಳಿದ ಮಾತುಗಳನ್ನು ಸ್ಮರಿಸಿದನು. ತನಗೆ ಪತ್ನಿಯರ ಅಂಗಸಂಗದಿಂದ ಪುತ್ರರು ಏರ್ಪಡುವ ಭಾಗ್ಯವಿಲ್ಲವೆಂದೂ ತನಗಿಂತ ಉತ್ತಮರಾದ ದೇವತೆಗಳ ಅಂಗಸ್ಪರ್ಶದಿಂದ ಸಂತತಿಯನ್ನು ಹುಟ್ಟಿಸುವಂತೆ ತನ್ನ ಪತ್ನಿಯರಿಗೆ ಆಜ್ಞೆ ಯನ್ನು ಕೊಡಬೇಕೆಂದೂ ನಿಶ್ಚೈಸಿದನು. ಶ್ರೀಹರಿಯನ್ನು ಅತ್ಯಂತ ಭಕ್ತಿ ಯಿಂದ ಸ್ಮರಿಸಿ ಕುಂತೀದೇವಿಯನ್ನು ನೋಡಿದನು.

## ಕುಂತೀಪಾಂಡುಸಂಭಾಷಣೆ

" ಕುಂತಿಯೇ! ಸನಕಾದಿ ಮುನಿಗಳು ಮುಂತಾದವರಿಗೆ ಮಕ್ಕಳಿಲ್ಲದೆ ಸದ್ಗತಿಯು ಏರ್ಪಡುವುದುಂಟು. ಆದರೆ ನಮಗೆ ಮಕ್ಕಳಿಲ್ಲದೆ ಸದ್ಗತಿಯಿಲ್ಲವೆಂದು ಈ ಜ್ಞಾನಿಗಳು ಹೇಳುತ್ತಿರುವರು. ನನಗೆ ಕರ್ದಮರ ಶಾಪದಿಂದ ನಿಮ್ಮ ಸಂಪರ್ಕದಿಂದ ಮಕ್ಕಳು ಹುಟ್ಟುವಂತಿಲ್ಲ. ನನಗಿಂತ ಉತ್ತಮರಾದ ದೇವತೆಗಳಿಗೂ ನಿನಗೂ ಸಂಪರ್ಕವೂ ಏರ್ಪಟ್ಟೇ ಮಕ್ಕಳು ಹುಟ್ಟಬೇಕು. ಆದ್ದರಿಂದ ನೀನು ನನಗಿಂತ ಉತ್ತಮನಾದ ದೇವತೆಯಿಂದ ಮಕ್ಕಳನ್ನು ಪಡೆದುಕೋ'' ಎಂದನು.

"ಪತಿವರ್ಯ, ದೇವತಾಸ್ತ್ರೀಯರನ್ನು ಎರಡು ವಿಧವಾಗಿ ವಿಂಗಡಿಸಬಹುದು. (೧) ನಿಯತಪತ್ನಿಯರು. ಇವರು ಅನಾದಿಕಾಲದಿಂದ ಅನಂತಕಾಲದ ವರೆಗೂ ಒಂದೇ ದೇವತೆಯ ಪತ್ನಿಯರಾಗಿರುವರು. ಮನಸ್ಸಿನಿಂದಲೂ ಮಾತಿನಿಂದಲೂ ದೇಹದಿಂದಲೂ ತಮ್ಮ ತಮ್ಮ ಪತಿಯನ್ನು ಬಿಟ್ಟು ಯಾವಾಗಲೂ ಯಾವ ಕಾರಣದಿಂದಲೂ

ಪರಪುರುಷನನ್ನು ಸೇವಿಸಿದವರಲ್ಲ. ಆದ್ದರಿಂದಲೇ ಮಹಾಪತಿವ್ರತೆಯರೆನಿಸಿದರು. ಈ ನಿಯತ ಪತ್ನಿಯರು ತಮ್ಮ ತಮ್ಮ ಪತಿಗಳೊಡನೆ ಮುಕ್ತಿಯನ್ನು ಪಡೆಯುವರು."

"ಈ ನಿಯತಪತ್ನಿಯರು ತಮ್ಮ ಪತಿಯನ್ನು ಬಿಟ್ಟು ಪರಪುರುಷರೊಡನೆ ಸಂಗವನ್ನು ಮಾಡುವ ಸಂದರ್ಭವು ಒಮ್ಮೊಮ್ಮೆ ಬರುವುದುಂಟು. ಬಲವತ್ತರವಾದ ಪ್ರಾರಬ್ಧಕರ್ಮದಿಂದ ಉತ್ತಮರ ಶಾಪ ಮುಂತಾದ ಪ್ರಬಲಕಾರಣವು ಏರ್ಪಟ್ಟ ಸಂದರ್ಭಗಳಲ್ಲಿ ಮಾತ್ರ ಅವರಿಗೆ ತಮ್ಮ ಪತಿಯನ್ನು ಬಿಟ್ಟು ಪರಪುರುಷರ ಸಂಗವು ಏರ್ಪಡುತ್ತದೆ."

" ಅಂತಹ ಸಂದರ್ಭದಲ್ಲಿಯೂ ತಮ್ಮ ಪತಿಗಿಂತ ಅಧಮರಾದ ದೇವತೆಗಳ ಸಂಗವು ಏರ್ಪಟ್ಟರೆ ಆ ಸ್ತ್ರೀಯರು ತಮ್ಮ ಪತಿಯ ದೇಹದೊಡನೆ ಸಹಗಮನ ಅಂದರೆ ಪತಿಯ ದೇಹವನ್ನು ಸುಡುವಾಗ ತನ್ನ ದೇಹವನ್ನೂ ಸುಟ್ಟುಕೊಳ್ಳಬೇಕು. ಹಾಗೆ ಮಾಡದಿದ್ದರೆ ಅವಳಿಗೆ ಪ್ರಾಯಶ್ಚಿತ್ತವೇ ಇಲ್ಲ. ಅವಳಿಗೆ ಪತಿಲೋಕಪ್ರಾಪ್ತಿಯಾಗುವುದೇ ಇಲ್ಲ. ಸಹಗಮನವನ್ನು ಮಾಡಿದರೂ ಸಹ ಅನೇಕ ಸಹಸ್ರವರ್ಷಗಳವರೆಗೆ ಪತಿಸಮಾಗಮವು ಏರ್ಪಡದೇ ಕೊನೆಗೆ ಪತಿಸಮಾಗಮವು ಅವರಿಗೆ ಏರ್ಪಡುತ್ತದೆ."

ಈ ನಿಯತ ಪತ್ನಿಯರು ತಮ್ಮ ಪತಿಗಳಿಗಿಂತ ಉತ್ತಮನಾದಪುರುಷನೊಡನೆ ಸಂಗವನ್ನು ಮಾಡಿದರೆ ಆ ಸ್ತ್ರೀಯರಿಗೆ ಪರಲೋಕದಲ್ಲಿ ಯಾವ ಹಾನಿಯೂ ಇಲ್ಲ. ಆದರೆ ಈ ಲೋಕದಲ್ಲಿ ಅವರಿಗೂ ಅವರ ಪತಿಗಳಿಗೂ ಮಕ್ಕಳಿಗೂ ನಾನಾ ವಿಧವಾದ ದುಃಖಗಳು ಏರ್ಪಡುತ್ತವೆ.

"ಈ ನಿಯತ ಪತ್ನಿಯರ ಪತಿಗಳೂ ಕೂಡಾ ಅನಾದಿಕಾಲದಿಂದ ಅನಂತಕಾಲದವರೆಗೆ ತಮ್ಮ ತಮ್ಮ ಪತ್ನಿಯರನ್ನು ಬಿಟ್ಟು ಪರಸ್ತ್ರೀಯರನ್ನು ಸೇವಿಸುವುದಿಲ್ಲ. ಮುಕ್ತಿಯಲ್ಲಿಯೂ ತಮ್ಮ ತಮ್ಮ ಪತ್ನಿಯರೊಡನೆಯೇ ಸುಖಿಸುತ್ತಾರೆ."

(೨) ಅನಿಯತಪತ್ನಿಯರು ಅಪ್ಸರಃಸ್ತ್ರೀಯರು ಈ ದರ್ಜೆಗೆ ಸೇರಿದವರು. ಈ ಅಪ್ಸರಃಸ್ತ್ರೀಯರು ಲಜ್ಜೆಯಿಲ್ಲದವರು. ಒಬ್ಬ ಗಂಡನೆಂಬ ನಿಯಮವು ಇವರಿಗಿಲ್ಲ. ಅಸಂಖ್ಯ ಪುರುಷರನ್ನು ಒಬ್ಬಳು ಮೋಹಿಸಬಹುದು. ತನ್ನ ಮನಸ್ಸಿಗೆ ತೋರಿದವನೊಡನೆ ವಿಹರಿಸಬಹುದು. ಇವರು ದೇವತೆಗಳ ಸೂಳೆಯರು. ದೇವತೆಗಳೆಲ್ಲರೂ ಇವರ ಮಿಂಡರು. ಇವರಿಗೂ ನಿಯತಪತ್ನಿಗಳಿಗೆ ಇರುವಂತೆ ಮುಕ್ತಿಯಿದೆ. ಮುಕ್ತಿಯಲ್ಲಿಯೂ ಈ ಅಪ್ಸರಃ ಸ್ತ್ರೀಯರು ದೇವತೆಗಳ ಸೂಳೆಯರಾಗಿಯೂ ದೇವತೆಗಳು ಇವರಿಗೆ ಮಿಂಡರಾಗಿಯೂ ಇರುವರು. ಮುಕ್ತವಸ್ಥೆಯಲ್ಲಿ ಈ ಅಪ್ಸರಃಸ್ತ್ರೀಯರು ಯಾವಾಗಲೂ ಇರುವರು. ಸಂಸಾರವಸ್ಥೆಯಲ್ಲಿ ಕೆಲಕಾಲದಲ್ಲಿ ಇವರು ಇರುವುದೂ ಉಂಟು. ಇಲ್ಲದಿರುವುದೂ ಉಂಟು. ಕೃತಯುಗದಲ್ಲಿ ಇವರು ಇರುವುದಿಲ್ಲ. ತ್ರೇತಾಯುಗದ ಆರಂಭದಲ್ಲಿ ಇವರು ಹುಟ್ಟುವರು. ಇವರು ಇಲ್ಲದಿರುವ ಕೃತಯುಗದಲ್ಲಿ ದೇವತೆಗಳೆಲ್ಲರೂ ತಮ್ಮ ತಮ್ಮ ನಿಯತಪತ್ನಿಯರ ಸಂಗವನ್ನೇ ಮಾಡುತ್ತಿರುವರು. ಇವರು ಇರುವ ತ್ರೇತಾಯುಗ ಮುಂತಾದ ಯುಗಗಳಲ್ಲಿ ದೇವತೆಗಳು ತಮ್ಮ ನಿಯತಪತ್ನಿಯರ ಸಂಗವನ್ನೂ ಅಪ್ಸರಃಸ್ತ್ರೀಯರ ಸಂಗವನ್ನೂ ಮಾಡುತ್ತಿರುವರು. ಈ ಅಪ್ಸರಃಸ್ತ್ರೀಯರಿಗೆ ವ್ಯಭಿಚಾರವೇ ಧರ್ಮವಾಗಿದೆ. ಆದ್ದರಿಂದ ಇವರ ಸಂಗದಿಂದ ಇವರಿಗೂ ದೇವತೆಗಳಿಗೂ ಪಾಪವಿಲ್ಲ. ಈ ಅಪ್ಸರಃ ಸ್ತ್ರೀಯರಿಗೆ ಮುಕ್ತಿಯಿದ್ದರೂ ನಿಯತಪತ್ನಿಯರಿಗೆ ಮುಕ್ತಿಯಲ್ಲಿ ಏರ್ಪಡುವ ಸುಖವು ಇವರಿಗಿಲ್ಲ. ಅಲ್ಪವಾದ ಸುಖವೇ ಏರ್ಪಡುತ್ತದೆ."

"ಪತಿವರ್ಯ!, ನಾನು ಅನಾದಿಕಾಲದಿಂದಲೂ ನಿಮ್ಮ ಪತ್ನಿಯಾಗಿರುವೆನು. ನಾನು ಮಹಾಪಾತಿವ್ರತ್ಯಧರ್ಮದಿಂದ ನಿಮ್ಮನ್ನು ಸೇವಿಸುತ್ತಿರುವೆನು. ನನ್ನನ್ನು ಕರೆದು ನೀವು ಪರಪುರುಷನ ಸಂಗದಿಂದ ಪುತ್ರನನ್ನು ಪಡೆಯಬೇಕೆಂದು ಆಜ್ಞಾಪಿಸುತ್ತಿರುವಿರಿ. ಇದು ಯುಕ್ತವಲ್ಲ. ಆದರೂ ನಿಮ್ಮ ಆಜ್ಞೆಯನ್ನು ಮೀರುವುದು ನನಗೆ ಧರ್ಮವಲ್ಲ. ಆದ್ದರಿಂದ ಪರಪುರುಷನಿಂದ ಮಗನನ್ನು ಪಡೆಯುವೆನು. ನನ್ನ ಅಂಗಸಂಗವನ್ನು ಮಾಡುವ ಪರಪುರುಷನೂ ನಿಮಗಿಂತ ಅಧಮನಾಗಿದ್ದರೆ ಏರ್ಪಡುವ ಅನರ್ಥಗಳನ್ನು ಹಿಂದೆ ವಿವರಿಸಿರುವೆನು. ಆದ್ದರಿಂದ ನಿಮಗಿಂತ ಅಧಮನಾಗಿರಕೂಡದು. ನಿಮಗಿಂತ ಉತ್ತಮನೇ ಆಗಿರಬೇಕು. ನಿಮಗೆ ದೇವತೆಗಳು ಸಮಾನರೆನಿಸುವರು. ದೇವತೆಗಳಲ್ಲಿಯೂ ಕೆಲವು ದೇವತೆಗಳೇ ನಿಮಗಿಂತ ಉತ್ತಮರಾಗಿರುವರು. ನಿಮಗಿಂತ ಉತ್ತಮರಾದ ದೇವತೆಗಳ ಅಂಗಸಂಗವನ್ನು ಮಾಡಿದರೆ ನನಗೆ ಪಾರತ್ರಿಕಹಾನಿಯಿಲ್ಲ. ನಿಮ್ಮ ಆಜ್ಞೆಯಿಂದ ಅವರ ಸಂಗವನ್ನು ಮಾಡಿದರೆ ಐಹಿಕಹಾನಿಯೂ ಇಲ್ಲ. ಆದ್ದರಿಂದ ನಿಮಗಿಂತ ಉತ್ತಮರಾಗಿರುವ ಯಾವ ದೇವತೆಯ ಅಂಗಸಂಗವನ್ನು ಮಾಡಲಿ. ಯಾರನ್ನು ಕರೆಯಲಿ. ನೀವು ಆಜ್ಞಾಪಿಸಿರಿ."

"ಎಲ್ಲಾ ದೇವತೆಗಳನ್ನೂ ವಶಪಡಿಸಿಕೊಂಡು ಅವರಿಂದ ಮಗನನ್ನು ಪಡೆಯುವುದಕ್ಕೆ ನನ್ನಲ್ಲಿ ಒಂದು ಮಂತ್ರವಿದೆ. ಆ ಮಂತ್ರದಿಂದ ನೀವು ಇಷ್ಟಪಡುವ ದೇವತೆಯನ್ನು ಕರೆದು ಅವನಿಂದ ಮಗನನ್ನು ಪಡೆಯುವೆನು.

## ಧರ್ಮರಾಜನ ಜನನ

ಈ ಮಾತುಗಳನ್ನು ಪಾಂಡುರಾಜನು ಕೇಳಿದನು. " ರಾಜನು ಧರ್ಮವಿಲ್ಲದೆ ಪ್ರಜೆಗಳನ್ನು ರಕ್ಷಿಸಲು ಶಕ್ತನಾಗಲಾರನು. ಆದ್ದರಿಂದ ಯಮಧರ್ಮರಾಜನನ್ನು ನೀನು ಆಹ್ವಾನ ಮಾಡು. ಯಮಧರ್ಮರಾಜನೇ ಮಗನಾಗಿ ಹುಟ್ಟಿದರೆ ಧರ್ಮದಿಂದ ರಾಜ್ಯವನ್ನು ಪಾಲಿಸಬಹುದು." ಎಂದನು. ಕುಂತೀದೇವಿಯು ಮಂತ್ರವನ್ನು ಜಪಿಸಿದಳು. ಯಮದೇವನನ್ನು ಕರೆದಳು. ಮರುಕ್ಷಣದಲ್ಲಿ ಯಮದೇವನು ಬಂದನು. ಕುಂತೀದೇವಿಯಲ್ಲಿ ತಾನೇ ತನಗೆ ಮಗನಾಗಿ ಹುಟ್ಟಿದನು.

## ದುರ್ಯೋಧನಾದಿಗಳ ಜನನ

ಧರ್ಮರಾಜನು ಹುಟ್ಟಿದ ಸಮಾಚಾರನ್ನು ಋಷಿಗಳ ಮೂಲಕವಾಗಿ ಗಾಂಧಾರಿಯು ತಿಳಿದಳು. ಅವಳಿಗೆ ತುಂಬಾ ಹೊಟ್ಟೆಕಿಚ್ಚು ಏರ್ಪಟ್ಟಿತು. ತನ್ನ ಹೊಟ್ಟೆಯನ್ನು ಗುದ್ದಿಕೊಂಡಳು. ಅವಳ ಹೊಟ್ಟೆಯಿಂದ ಗರ್ಭವು ಜಾರಿ ಕೆಳಗೆ ಬಿತ್ತು. ನೂರ ಒಂದು ಹೋಳಾಯಿತು. ಶ್ರೀವೇದವ್ಯಾಸರು ಅಲ್ಲಿಗೆ ಬಂದರು. ಆ ನೂರ ಒಂದು ಹೋಳುಗಳನ್ನು ನೂರ ಒಂದು ಗಡಿಗೆಗಳಲ್ಲಿ ಇಟ್ಟು ದೇವಕಾರ್ಯಾರ್ಥವಾಗಿ ರಕ್ಷಿಸಿದರು. ಒಂದೊಂದು ದಿನದಲ್ಲಿ ಒಂದೊಂದು ಗಡಿಗೆಯಂತೆ ಒಡೆಯಿತು. ನೂರ ಒಂದು ದಿನಗಳಲ್ಲಿ ನೂರ ಒಂದು ಮಕ್ಕಳು ಹುಟ್ಟಿದರು.

ಮೇರುಪರ್ವತದ ಶಿಖರದಲ್ಲಿ ಶ್ರೀಕೃಷ್ಣಾವತಾರಕ್ಕಾಗಿ ಶ್ರೀಹರಿಯ ಅಧ್ಯಕ್ಷತೆಯಲ್ಲಿ ದೊಡ್ಡ ಸಭೆಯು ನಡೆದ ವಿಷಯವನ್ನು ಹೇಳಿರುವೆವು. ಆ ಸಭೆಯು ನಡೆದಾಗ ದೈತ್ಯರೆಲ್ಲರೂ ಅದೃಶ್ಯರಾಗಿದ್ದು ಆ ಸಭೆಯಲ್ಲಿ ನಡೆದ ಎಲ್ಲಾ ತೀರ್ಮಾನಗಳನ್ನೂ ತಿಳಿದರು. ದೇವತೆಗಳೆಲ್ಲರೂ ಭೂಮಿಯಲ್ಲಿ ಅವತರಿಸುವಾಗ ಅವರೆಲ್ಲರನ್ನೂ ಎದುರಿಸುವುದಕ್ಕೆ ತಮ್ಮ ವ್ಯೂಹದಲ್ಲಿಯೂ ಪ್ರಧಾನನಾದ ಕಲಿಯು ಅಪಾರ ಶಕ್ತಿಗಳಿಂದ ಹುಟ್ಟಬೇಕೆಂದು ತೀರ್ಮಾನಿಸಿದರು.

ರುದ್ರದೇವನನ್ನು ತಪಸ್ಸಿನಿಂದ ಸಂತೋಷಪಡಿಸಿದರು. " ಎಲ್ಲಾ ದೇವತೆಗಳಿಗೂ ಕಂಟಕಪ್ರಾಯನಾದ ಕಲಿಯು ಭೂಮಿಯಲ್ಲಿ ಹುಟ್ಟುವನು. ಆಗ ಅವನನ್ನು ಯಾರೂ ಸಂಹರಿಸಲು ಶಕ್ತರಾಗಬಾರದು" ಎಂದು ವರವನ್ನು ಬೇಡಿದರು. ರುದ್ರದೇವರು ವರವನ್ನು ಕೊಟ್ಟರು.

ಅವರ ವರದಿಂದ ಕಲಿಯು ಗಾಂಧಾರಿಯ ಮಕ್ಕಳಲ್ಲಿ ಮೊದಲನೆಯವನಾಗಿ ಹುಟ್ಟಿದನು. ದುರ್ಯೋಧನ ಎಂದು ಪ್ರಸಿದ್ಧನಾದನು. ಅವನಲ್ಲಿ ವಾಯುದೇವನ ವಿಶೇಷ ಸನ್ನಿಧಾನವಿತ್ತು.ಆ ಕಾರಣದಿಂದಲೂ ರುದ್ರದೇವರ ವರದಿಂದಲೂ ವಜ್ರದಂತೆ ಗಟ್ಟಿಯಾದ ದೇಹವುಳ್ಳವನಾಗಿಯೂ ಮಹಾಬಲಿಷ್ಠನಾಗಿಯೂ ಹುಟ್ಟಿದನು. ದುರ್ಯೋಧನನು ಹುಟ್ಟಿದ ಮರುದಿನದಲ್ಲಿ ತುಪ್ಪದಿಂದ ತುಂಬಲ್ಪಟ್ಟ ಗಡಿಗೆಯಿಂದ ಇಂದ್ರಜಿತುವು ದುಃಶಾಸನ ಎಂಬ ಹೆಸರಿನಿಂದ ಹುಟ್ಟಿದನು. ಮರುದಿನದಲ್ಲಿ ಅತಿಕಾಯ ಎಂಬ ರಾಕ್ಷಸನು ವಿಕರ್ಣ ಎಂಬ ಹೆಸರಿನಿಂದ ಹುಟ್ಟಿದನು. ಮರುದಿನದಲ್ಲಿ ಖರ ಎಂಬ ರಾಕ್ಷಸನು ಚಿತ್ರಸೇನ ಎಂಬ ಹೆಸರಿನಿಂದ ಹುಟ್ಟಿದನು. ಇನ್ನು ಉಳಿದ ರಾಕ್ಷಸರು ಗಾಂಧಾರಿಯ ಗರ್ಭದಲ್ಲಿ ಕ್ರಮವಾಗಿ ಹುಟ್ಟಿದರು. ಎಲ್ಲರೂ ಉಗ್ರವಾದ ಪರಾಕ್ರಮವುಳ್ಳವರಾಗಿ ಹುಟ್ಟಿದರು.

ಮೃಷಾ ಎಂಬ ಹೆಸರುಳ್ಳ ಸುಳ್ಳಿನ ಅಭಿಮಾನಿನಿಯಾದ ರಾಕ್ಷಸಿಯು ದುಃಶಲಾ ಎಂಬ ಹೆಸರಿನಿಂದ ಗಾಂಧಾರಿದೇವಿಯ ನೂರ ಒಂದನೆಯ ಮಗಳಾಗಿ ಹುಟ್ಟಿದಳು. ಅವಳಲ್ಲಿ ಕುಹೂ ಎಂಬ ಅಮಾವಾಸ್ಯಭಿಮಾನಿನಿಯಾದ ದೇವತೆಯ ಸನ್ನಿಧಾನವಿತ್ತು. ಅವಳು ಅರ್ಜುನನ ಮಗನಾದ ಅಭಿಮನ್ಯುವನ್ನು ಕೊಲ್ಲುವುದಕ್ಕಾಗಿ ರುದ್ರದೇವನಿಂದ ವರವನ್ನು ಪಡೆದು ಆ ವರದಿಂದ ಹುಟ್ಟಿದಳು. ಕಾಲಕೇಯ ಎಂಬ ದಾನವನು ಅಭಿಮನ್ಯುವನ್ನು ಕೊಲ್ಲುವುದಕ್ಕಾಗಿಯೇ ಸೈಂಧವ ಎಂಬ ಹೆಸರಿನಿಂದ ಹುಟ್ಟಿದನು. ಅವನು ದುಃಶಲೆಯ ಪತಿಯಾದನು. ದುಃಶಲೆಯಿಂದ ಪ್ರೇರಿತನಾದ ಸೈಂಧವನು ಅಭಿಮನ್ಯುವಿನ ಮರಣಕ್ಕೆ ಕಾರಣನಾದನು. ಹೀಗೆ ದುರ್ಯೋಧನ ಮುಂತಾದ ನೂರ ಒಂದು ಮಕ್ಕಳ ಉತ್ಪತ್ತಿಯನ್ನು ಕುರಿತು ಹೇಳಿದೆವು.

## ಯುಯುತ್ಸುವಿನ ಜನನ

ನಿರ್ಋತಿ ಎಂಬ ನೈಋತ್ಯದಿಕ್ಕಿನ ಪಾಲಕನಿಗೆ ನೈರ್ಋತ ಎಂಬುವವನು ಸಹೋದರನು. ಧೃತರಾಷ್ಟ್ರನಿಗೆ ವೈಶ್ಯಜಾತಿಯಲ್ಲಿ ಹುಟ್ಟಿದ ಒಬ್ಬ ಪತ್ನಿಯಲ್ಲಿ ಆ ನೈರ್ಋತ ಎಂಬುವವನು ಮಗನಾಗಿ ಹುಟ್ಟಿದನು. ಅವನು ಅತ್ಯಂತ ವಿಷ್ಣುಭಕ್ತನು. ಅವನು ದುರ್ಯೋಧನನು ಹುಟ್ಟಿದ ಕೂಡಲೇ ದುಃಶಾಸನನು ಹುಟ್ಟುವುದಕ್ಕಿಂತ ಪೂರ್ವದಲ್ಲಿ ಹುಟ್ಟಿದನು. ಅವನಲ್ಲಿ ಮೂಗಿನ ಅಭಿಮಾನಿಯಾದ ನಾಸಿಕ್ಯವಾಯು ಎಂಬ ವಾಯುದೇವರ ವಿಶೇಷಸನ್ನಿಧಾನವಿತ್ತು. ಅವನು ಯುಯುತ್ಸು ಎಂದು ಪ್ರಸಿದ್ಧನಾದನು.

## ಭೀಮಸೇನನ ಜನನ

ಧರ್ಮರಾಜನು ಹುಟ್ಟಿದಕೂಡಲೇ ಪಾಂಡುರಾಜನು ಕುಂತೀದೇವಿಯನ್ನು ನೋಡಿದನು. "ಧರ್ಮದಿಂದ ಪ್ರಜೆಗಳನ್ನು ರಕ್ಷಿಸುವುದಕ್ಕಾಗಿ ಯಮದೇವನನ್ನೆ ನೀನು ಮಗನಾಗಿ ಪ್ರಸವಿಸಿರುತ್ತಿ. ಆದರೆ ಬಾಹುಬಲ ಜ್ಞಾನಬಲ ಇವೆರಡು ಇಲ್ಲದಿದ್ದರೆ ಧರ್ಮದೇವತೆಯೇ ಮಗನಾಗಿ ಹುಟ್ಟಿದರೂ ಧರ್ಮದಿಂದ ಪ್ರಜೆಗಳನ್ನು ರಕ್ಷಿಸಲು ಶಕ್ತನಾಗಲಾರನು. ಆದ್ದರಿಂದ ಬಾಹುಬಲ ಜ್ಞಾನಬಲ ಇವೆರಡು ಬಲಗಳಿಂದ ಯುಕ್ತನಾದ ಮಗನನ್ನು ಪ್ರಸವಿಸು."

" ಈ ಎರಡು ಬಲಗಳಿಂದ ಪೂರ್ಣನಾದವನು ಅನಂತಗುಣಪೂರ್ಣನಾದ ನಾರಾಯಣನೇ ಹೊರತು ಬೇರೆ ಯಾರೂ ಇಲ್ಲ. ಆದರೆ ಅವನು ಶ್ರೀವೇದವ್ಯಾಸ ಎಂಬ ಹೆಸರಿನಿಂದ ನನ್ನ ತಾಯಿಯಾದ ಅಂಬಾಲಿಕೆಯಲ್ಲಿ ನನ್ನನ್ನು ಹುಟ್ಟಿಸಿದನು. ವಿಚಿತ್ರವೀರ್ಯನಲ್ಲ. ಆದ್ದರಿಂದ ಶ್ರೀಹರಿಯು ನನಗೆ ತಂದೆಯೂ ನಿನಗೆ ಮಾವನೂ ಆಗಿರುವನು. ಆದ್ದರಿಂದಲೇ ಶ್ರೀಹರಿಯಿಂದ ನೀನು ಮಕ್ಕಳನ್ನು ಪಡೆಯುವಂತೆ ಇಲ್ಲ.

" ನಾರಾಯಣನ ಅನಂತರದಲ್ಲಿ ಬಾಹುಬಲ ಜ್ಞಾನಬಲಗಳಲ್ಲಿ ಎಲ್ಲರಿಗಿಂತಲೂ ಶ್ರೇಷ್ಠನಾದವನು ವಾಯುದೇವನೇ ಆಗಿರುವನು. ಯಜ್ಞಗಳ ಮಧ್ಯದಲ್ಲಿ ಅಶ್ವಮೇಧಯಾಗವೇ ಶ್ರೇಷ್ಠವಾದುದು. ಮನುಷ್ಯರು ನೋಡುತ್ತಿರುವ ತೇಜೋಮಯವಾದ ವಸ್ತುಗಳ ಮಧ್ಯದಲ್ಲಿ ಸೂರ್ಯನೇ ಶ್ರೇಷ್ಠನು. ಬ್ರಾಹ್ಮಣ ಮುಂತಾದ ಜಾತಿಗಳ ಮಧ್ಯದಲ್ಲಿ ಬ್ರಾಹ್ಮಣನೇ ಶ್ರೇಷ್ಠನು. ಅದರಂತೆ ದೇವತೆಗಳ ಮಧ್ಯದಲ್ಲಿ ಎಲ್ಲಾ ಗುಣಗಳಿಂದಲೂ ಶ್ರೀಹರಿಯು ಅನಂತರದಲ್ಲಿ ವಾಯುದೇವನೇ ಉತ್ತಮನಾಗಿರುವನು. ಆದ್ದರಿಂದ ನೀನು ವಾಯುದೇವನನ್ನು ಕರೆದು ಅವನಿಂದ ಬಲದ್ವಯ ಯುಕ್ತನಾದ ಮಗನನ್ನು ಪ್ರಸವಿಸು." ಇದು ಪಾಂಡುರಾಜನ ಎರಡನೆಯ ಆಜ್ಞೆ.

ಕುಂತಿದೇವಿಯು ವಾಯುದೇವನನ್ನು ಕರೆದಳು ವಾಯುದೇವನು ಎರಡು ಕೈಗಳಿಂದ ಕುಂತೀದೇವಿಯನ್ನು ಆಲಿಂಗಿಸಿದನು. ಮರುಕ್ಷಣದಲ್ಲಿ ತಾನೇ ತನಗೆ ಮಗನಾಗಿ ಅವತರಿಸಿದನು. ಜ್ಞಾನಬಲ ಬಾಹುಬಲ ಎಂಬ ಎರಡು ವಿಧವಾದ ಬಲಗಳಲ್ಲಿ ಆ ಬಾಲಕನಿಗೆ ಸಮನು ಯಾರು ಇಲ್ಲ. ಅವನು ನಾರಾಯಣನೊಬ್ಬನ ವಶನು. ಭಕ್ತಿಯಲ್ಲಿ ಅವನಿಗೆ ಸಮನು ಯಾರೂ ಇಲ್ಲ. ಅವನು (ಭೃತ+ಮ)=(ಭೃ+ಮ)=(ಭೀ+ಮ)= ಭೀಮ ಅಂದರೆ ಪಂಚರಾತ್ರ ಮುಂತಾದ ಎಲ್ಲಾ ಪ್ರಮಾಣ ಗ್ರಂಥಗಳನ್ನೂ ಪೂರ್ಣವಾಗಿ ತಿಳಿದವನು. (ಸ+ಇನ)= ಸೇನ. ಅಂದರೆ ಸರ್ವಸ್ವಾಮಿಯಾದ ಶ್ರೀಹರಿಯ ಪೂರ್ಣ ಸನ್ನಿಧಾನದಿಂದ ಯುಕ್ತನಾಗಿರುವವನು. (ಭೀಮ)+(ಸೇನ)= ಭೀಮಸೇನ ಎಂದು ಪ್ರಸಿದ್ಧನಾದನು.

ಆ ಬಾಲಕನ ಅವತಾರಕಾಲದಲ್ಲಿ ಸಮೀಪದಲ್ಲಿ ಒಂದು ಹುಲಿಯು ಕೂಗಿತು. ಆ ಧ್ವನಿಯನ್ನು ಕುಂತಿಯು ಕೇಳಿದಳು ಅವಳು ಹೆದರಿದಳು. ಅವಳ ಕೈಯಲ್ಲಿದ್ದ ಬಾಲಕನು ಜಾರಿ ಕೆಳಿಗೆ ಬಿದ್ದನು. ಅವನ ದೇಹವು ಶತಶೃಂಗ ಎಂಬ ಪರ್ವತಕ್ಕೆ ತಗಲಿತು. ಪರ್ವತವು ಹಿಟ್ಟು ಹಿಟ್ಟಾಯಿತು. ಮೃದುವಾದ ಮಗುವಿನ ದೇಹವು ತಗಲಿದ ಕೂಡಲೇ ಅತಿ ಗಟ್ಟಿಯಾದ ಪರ್ವತವು ಪುಡಿ ಪುಡಿಯಾಗಬೇಕಾದರೆ ಆ ದೇಹದ ಕಾಠಿನ್ಯವನ್ನು ಎಷ್ಟೆಂದು ವರ್ಣಿಸಲಿ.

ಭೀಮಸೇನನು ಹುಟ್ಟಿದಕೂಡಲೇ ಮೂಲರೂಪಿಗಳಾದ ಕಲಿ ಮುಂತಾದ ಎಲ್ಲಾ ದೈತ್ಯರುಗಳೂ ಅವತಾರ ರೂಪಿಗಳಾದ ಅಸುರರೂ ರಾಕ್ಷಸರುಗಳೂ ತುಂಬಾ ಭಯದಿಂದ ಯುಕ್ತರಾಗಿ ರಕ್ತದ ವಾಂತಿಯನ್ನು ಮಾಡಿದರು. ಈ ಭೀಮಸೇನನ ಹೊಟ್ಟೆಯಲ್ಲಿ ಅವನ ಅಂಗುಷ್ಠದಷ್ಟು ದೊಡ್ಡ ಆಕಾರವುಳ್ಳ ವೃಕ ಎಂಬ ಜಾಠರಾಗ್ನಿಯು ಯಾವಾಗಲೂ ವಾಸಿಸುತ್ತದೆ. ಆ ಅಗ್ನಿಯು ಬ್ರಹ್ಮಾಂಡದಲ್ಲಿರುವ ಎಲ್ಲಾ ವಸ್ತುಗಳನ್ನೂ ಭಸ್ಮಮಾಡುವ ಶಕ್ತಿಯಿಂದ ಯುಕ್ತವಾಗಿದೆ. ಆದ್ದರಿಂದಲೇ ಅವನಿಗೆ ವೃಕೋದರ ಎಂಬ ಹೆಸರು ಬಂತು. ಆದ್ದರಿಂದಲೇ ಅಪಾರ ಭೋಜನ ಶಕ್ತಿಯು ಅವನಲ್ಲಿತ್ತು. ಭೀಮಸೇನನು ದೇವತೆಗಳಿಗೆ ಸಂತೋಷವನ್ನೂ ದೈತ್ಯರಿಗೆ ಭಯವನ್ನೂ ಹೆಚ್ಚಿಸುತ್ತಾ ಕಾಡಿನಲ್ಲಿ ಬೆಳೆಯುತ್ತಿದ್ದನು.

ಭೀಮಸೇನನು ಹುಟ್ಟಿದ ಮೇಲೆ ಹಿಂದೆ ಹೇಳಿದಂತೆ ಬಲರಾಮನು ದೇವಕೀದೇವಿಯ ಗರ್ಭದಲ್ಲಿ ಮೂರು ತಿಂಗಳವರೆಗೂ ರೋಹಿಣೀದೇವಿಯ ಗರ್ಭದಲ್ಲಿ ಏಳು ತಿಂಗಳವರೆಗೂ ವಾಸಿಸಿದನು. ಅನಂತರದಲ್ಲಿ ಹುಟ್ಟಿದನು. ಬಲರಾಮನು ದೇವಕೀದೇವಿಯ ದೇಹದಿಂದ ರೋಹಿಣೀದೇವಿಯ ದೇಹಕ್ಕೆ ಹೋದಮೇಲೆ ಶ್ರೀಹರಿಯು ವಸುದೇವನ ದೇಹದಲ್ಲಿ ಪ್ರವೇಶಿಸಿದನು. ಋತುಕಾಲದಲ್ಲಿ ವಸುದೇವನ ದೇಹದಿಂದ ದೇವಕೀದೇವಿಯ ದೇಹದಲ್ಲಿ ಪ್ರವೇಶಿಸಿದನು. ಅವಳ ದೇಹದಲ್ಲಿ ಏಳು ತಿಂಗಳವರೆಗೆ ವಾಸಿಸಿ ಎಂಟನೆಯ ತಿಂಗಳಿನಲ್ಲಿ "ಶ್ರೀಕೃಷ್ಣ" ಎಂಬ ಹೆಸರಿನಿಂದ ಅವತರಿಸಿದನು.

ಶ್ರೀಗುರುಸಾರ್ವಭೌಮರ ಪೂರ್ವಾಶ್ರಮದ ಪುತ್ರರಾದ ಶ್ರೀಲಕ್ಷ್ಮೀನಾರಾಯಣಾಚಾರ್ಯರು ತಾವು ಬರೆದಿರುವ ಶ್ರೀಕೃಷ್ಣಚಾರಿತ್ರ್ಯಮಂಜರೀ ವ್ಯಾಖ್ಯಾನದಲ್ಲಿ "ದೇವಾಸ್ತತ್ರ ತತ್ರಾಜಾಯಂತ" ಅಂದರೆ "ದೇವತೆಗಳು ಅಲ್ಲಲ್ಲಿ ಹುಟ್ಟಿದರು." ಎಂದು ಸೂತ್ರ ರೂಪವಾಗಿ ತಿಳಿಸಿದರು. ಅದನ್ನು ವಿವರಿಸುತ್ತಾ ಶ್ರೀಕೃಷ್ಣಾವತಾರಕ್ಕಿಂತ ಪೂರ್ವದಲ್ಲಿ ಅವತರಿಸಿದ ಶ್ರೀಭೀಮಸೇನದೇವರವರೆಗಿನ ಪ್ರಸಿದ್ಧರಾಜರುಗಳನ್ನು ತಿಳಿಸಿದೆವು. ಇನ್ನು ಮುಂದೆ ಶ್ರೀಕೃಷ್ಣಾವತಾರಾನಂತರದಲ್ಲಿ ಅವತರಿಸಿರುವ ದೇವತೆಗಳೇ ಮೊದಲಾದವರ ವಿಷಯವನ್ನು ಹೇಳಬೇಕು. ಅದನ್ನು ಎಲ್ಲೆಲ್ಲಿ ಪ್ರಸಕ್ತಿಯು ಬರುತ್ತದೆಯೋ ಅಲ್ಲಲ್ಲಿ ತಿಳಿಸುವೆವು. ಈಗ ಶ್ರೀಕೃಷ್ಣಾವತಾರಚರಿತ್ರೆಯನ್ನೇ ಮುಂದು ವರಿಸುವೆವು.

## ಶ್ರೀಕೃಷ್ಣಾವತಾರಾನಂತರದಲ್ಲಿ ಹುಟ್ಟಿದವರ ಚರಿತ್ರೆ ಆರಂಭ

ನಂದನು ಕಂಸನ ಅಧೀನವಾದ "ಬೃಹದ್ವನ" ಎಂಬ ವನದಲ್ಲಿ ವಾಸಿಸುತ್ತಿದ್ದನು. ಅವನು ಪ್ರತಿವರ್ಷದಲ್ಲಿ ಕಂಸನಿಗೆ ಕಪ್ಪವನ್ನು ಕೊಡಬೇಕಾಗಿತ್ತು. ಶ್ರೀಕೃಷ್ಣಾವತಾರವರ್ಷದಲ್ಲಿ ಕಪ್ಪವನ್ನು ಕೊಡುವುದಕ್ಕಾಗಿ ಕಂಸನ ರಾಜಧಾನಿಯಾದ ಮಥುರೆಗೆ ಹೋಗಬೇಕೆಂದು ಬೃಹದ್ವನದಿಂದ ತನ್ನ ಪತ್ನಿಯಾದ ಯಶೋದೆಯೊಡನೆ ಹೊರಟನು. ಮಥುರೆಯು ಬೃಹದ್ವನದಿಂದ ಪೂರ್ವದಿಕ್ಕಿನಲ್ಲಿ ಎರಡು ಕ್ರೋಶ ದೂರದಲ್ಲಿತ್ತು. ಮಾರ್ಗದಲ್ಲಿ ಯಮುನಾನದಿಯನ್ನು ದಾಟಬೇಕಾಗಿತ್ತು. ಮಥುರೆಗೆ ಹೊರಟ ದಿನದಲ್ಲಿ ಯಮುನಾನದೀತೀರದಲ್ಲಿ ಬಟ್ಟೆಯ ಗುಡಾರಗಳನ್ನು ಹಾಕಿಕೊಂಡು ವಾಸಿಸಿದರು. ಆ ದಿನದಲ್ಲಿ ಅರ್ಧರಾತ್ರಿಕಾಲದಲ್ಲಿ ಯಶೋದೆಯು ಹೆಣ್ಣುಮಗುವನ್ನು ಪ್ರಸವಿಸಿದಳು. ಅದೇ ದಿನದಲ್ಲಿ ಅರ್ಧರಾತ್ರಾನಂತರದಲ್ಲಿ ವಸುದೇವನು ಶ್ರೀಕೃಷ್ಣದೇವನನ್ನು ತಂದು ಯಶೋದೆಯ ಹಾಸಿಗೆಯಲ್ಲಿ ಮಲಗಿಸಿದನು. ಹೆಣ್ಣುಮಗುವನ್ನು ಎತ್ತಿಕೊಂಡು ಮಥುರೆಗೆ ಹೋದನು.

## ಸೂರ್ಯೋದಯ ವರ್ಣನೆ

ಮರುದಿನ ಬೆಳಗಾಯಿತು. ಸೂರ್ಯನು ಪೂರ್ವಸಮುದ್ರದಿಂದ ಮೇಲೆ ಬಂದನು. ಇದು ಶ್ರೀಕೃಷ್ಣದೇವನನ್ನು ಪೂಜಿಸುವುದಕ್ಕಾಗಿ ಸೂರ್ಯನು ಮಿಂದಂತಿತ್ತು. ಉದಯಪರ್ವತವನ್ನು ಏರಿದನು. ಇದು ಶ್ರೀಕೃಷ್ಣ ಪೂಜೆಗಾಗಿ ಮಣೆಯಲ್ಲಿ ಕುಳಿತಂತಿತ್ತು. ತನ್ನ ಕಿರಣಗಳೆಂಬ ಕೈಗಳಿಂದ ಕಮಲಗಳನ್ನು ಅರಳಿಸಿದನು. ಇದು ಅರ್ಚನೆಗಾಗಿ ಪುಷ್ಪಗಳನ್ನು ಸಿದ್ಧಪಡಿಸುವಂತಿತ್ತು. ಕತ್ತಲೆಯನ್ನು ನಿರಾಕರಿಸಿದನು. ಇದು ಪಾಪಪುರುಷನನ್ನು ನಿರಾಸ ಮಾಡಿದಂತಿತ್ತು. ರಾಗ ಅಂದರೆ ಎಳೆಕೆಂಪು ಬಣ್ಣದಿಂದ ಯುಕ್ತನಾದನು. ಇದು ರಾಗ ಅಂದರೆ ಅನುರಾಗ

ಅಥವಾ ಭಕ್ತಿಯಿಂದ ಯುಕ್ತನಾದಂತೆ ಕಾಣಿಸಿತು. ಹಕ್ಕಿಗಳು ಗುಂಪು ಗುಂಪಾಗಿ ಕೂಗಿದವು. ಇದು " ಶ್ರೀಕೃಷ್ಣನು ಹುಟ್ಟಿದನು'' ಎಂದು ಕೂಗಿ ಹೇಳುತ್ತಿರುವಂತಿತ್ತು. ಗೋಕುಲದಲ್ಲಿರುವ ಮನೆಮನೆಗಳಲ್ಲಿಯೂ ಸೂರ್ಯಕಿರಣಗಳು ವ್ಯಾಪಿಸಿದವು. ಇದು ಸೂರ್ಯನು ಕಿರಣಗಳೆಂಬ ಕೈಗಳನ್ನು ಶ್ರೀಕೃಷ್ಣನನ್ನು ಅರ್ಚಿಸುವುದಕ್ಕಾಗಿ ಚಾಚುತ್ತಿರುವಂತಿತ್ತು.

ಆಕಾಶದಲ್ಲಿ ದೇವಲೋಕದ ರತ್ನದಂತಿರುವ ಸೂರ್ಯನು ಉದಯಿಸಿದನು. ಭೂಲೋಕದಲ್ಲಿರುವ ಕಮಲಗಳು ಅರಳಿದವು. ಭೂಲೋಕದಲ್ಲಿ ಭೂಲೋಕದ ರತ್ನದಂತಿರುವ ಶ್ರೀಕೃಷ್ಣನು ಅವತರಿಸಿದನು. ದೇವಲೋಕದಲ್ಲಿರುವ ದೇವತೆಗಳ ಮುಖ ಕಮಲಗಳು ಅರಳಿದವು.

ಸಮುದ್ರದಿಂದ ಕಮಲದಂತೆ ಎಳೆಗೆಂಪಾದ ಸೂರ್ಯನು ಮೆಲ್ಲಮೆಲ್ಲಗೆ ಮೇಲೆ ಬಂದನು. ಇದು ಮೇರುಪರ್ವತದಲ್ಲಿರುವ ದೇವತೆಗಳು ಶ್ರೀಕೃಷ್ಣನನ್ನು ಅರ್ಚಿಸುವುದಕ್ಕಾಗಿ ಸಮುದ್ರವೆಂಬ ಸರೋವರದಿಂದ ಕಮಲವನ್ನು ಎತ್ತುವಂತಿತ್ತು.

## ಶ್ರೀಕೃಷ್ಣ ಜನ್ಮೋತ್ಸವ

ಮರಗಳಲ್ಲಿ ಸೂರ್ಯೋದಯಕಾಲದಲ್ಲಿ ಹಕ್ಕಿಗಳು ಗುಂಪುಗುಂಪಾಗಿ ಕೂಗಿದವು. ಅದರಂತೆ ಗೋಕುಲದಲ್ಲಿ ಶ್ರೀಕೃಷ್ಣಾವತಾರಕಾಲದಲ್ಲಿ ಸ್ತುತಿಪಾಠಕರು ಗುಂಪು ಗುಂಪಾಗಿ ಸ್ತುತಿಸಿದರು.

ಸೂರ್ಯೋದಯಕಾಲದಲ್ಲಿ ರಾಜಹಂಸಿಯರು ಇತರ ಪಕ್ಷಿಗಳೊಡನೆ ಸಂಚರಿಸಿದವು. ಅದರಂತೆ ಪುಷ್ಟವಾದ ಮಧ್ಯಪ್ರದೇಶ ಮತ್ತು ಸ್ತನಗಳ ಕೆಳಭಾಗದಲ್ಲಿ ಬಳಕುತ್ತಿರುವ ಕೃಶವಾದ ಹೊಟ್ಟೆಯಿಂದ ಯುಕ್ತವಾಗಿರುವ ಸ್ತ್ರೀಯರು ಇತರ ಜನರಿಂದ ಸಹಿತರಾಗಿ ಸಂಚರಿಸುತ್ತಾ ಯಶೋದೆಯ ಮನೆಗೆ ಬಂದರು.

ಶ್ರೀಕೃಷ್ಣನು ಈಗ ಚಿಕ್ಕಮಗುವಿನ ರೂಪವನ್ನು ಸ್ವೀಕರಿಸಿರುವನು. ಚಿಕ್ಕ ಮಕ್ಕಳನ್ನು ವಶಪಡಿಸಿಕೊಳ್ಳುವುದು ಅತ್ಯಂತ ಸುಲಭ. ಆದ್ದರಿಂದಲೇ ಸುಂದರವಾದ ಮತ್ತು ಕೋಮಲವಾದ ಅವಯವಗಳಿಂದ ಯುಕ್ತರಾದ ಸ್ತ್ರೀಯರು ಮುತ್ತಿನಹಾರ, ಕರ್ಣಕುಂಡಲ, ತಲೆಯ ಕೂದಲು, ಸೀರೆಯ ಸೆರಗುಗಳು, ಕಾಲ್ಗಡಗಗಳು ಮುಂತಾದವುಗಳು ಚಲಿಸುವಂತೆ ಶ್ರೀಕೃಷ್ಣನನ್ನು ಸಮೀಪಿಸಿದರು.

ವಿಷ್ಣುಪದ ಅಂದರೆ ಆಕಾಶದಲ್ಲಿ ಗೋಗಣ ಅಂದರೆ ಸೂರ್ಯಕಿರಣಗಳ ಸಮೂಹವು ಅಸಂಖ್ಯವಾಗಿ ವ್ಯಾಪಿಸಿತು. ನಂದನು ಗೋಗಣ ಅಂದರೆ ಎರಡು ಲಕ್ಷ ಗೋವುಗಳನ್ನೂ ರತ್ನಗಳನ್ನೂ ವಸ್ತ್ರಗಳನ್ನೂ ಆಭರಣಗಳನ್ನೂ ದಾನ ಮಾಡಿ ವಿಷ್ಣುಪದ ಅಂದರೆ ಶ್ರೀಕೃಷ್ಣಪಾದಗಳಲ್ಲಿ ಸಮರ್ಪಿಸಿದನು.

ಶ್ರೀಕೃಷ್ಣದೇವನು ಇನ್ನು ಕೆಲದಿನಗಳಲ್ಲಿ ಯಮುನಾನದೀತೀರದಲ್ಲಿ ಸಾವಿರಗಟ್ಟಲೆ ಗೋವುಗಳನ್ನು ಕಾಪಾಡುವನು. ಅದಕ್ಕೆ ಗೋವುಗಳು ಬೇಕು. ನಂದನು ಗೋವುಗಳನ್ನು ಕಾಪಾಡುವವನು. ಅದಕ್ಕೆ ಗೋವುಗಳು ಬೇಕು. ನಂದನು ಗೋವುಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದನು. ಇದು ಆ ದಾನಬಲದಿಂದ ಅಸಂಖ್ಯ ಗೋವುಗಳನ್ನು ಸಂಪಾದಿಸುವುದಕ್ಕಾಗಿ ಯತ್ನಿಸುವಂತಿತ್ತು.

ಬ್ರಾಹ್ಮಣರು ಋಷಿಗಳು ದೇವತೆಗಳು ಪಿತೃಗಳು ಸ್ತುತಿಪಾಠಕರು ಮುಂತಾದವರಿಗೆ ನಂದನು ತುಂಬಾ ಸಂತೋಷದಿಂದ ಹಣವನ್ನು ಕೊಟ್ಟು ತೃಪ್ತಿಪಡಿಸಿದನು. ಶ್ರೀಕೃಷ್ಣನ ತಂದೆಯೆಂದು ತನ್ನನ್ನು ಹೇಳುತ್ತಿರುವನು. ಇದನ್ನು ನೋಡಿ ನಗುತ್ತಿರುವ ಬ್ರಾಹ್ಮಣರೇ ಮೊದಲಾದವರನ್ನು ವಶಪಡಿಸಿಕೊಳ್ಳುವುದಾಗಿ ನಂದನು ಹಣವನ್ನು ಕೊಡುತ್ತಿರುವಂತಿತ್ತು.

ಆಕಾಶದಲ್ಲಿ ಮೇಲ್ಮುಖವಾದ ಸೂರ್ಯನ ಕಿರಣಗಳು ಧ್ವಜಗಳಂತೆಯೂ ಕೆಳಮುಖವಾದ ಕಿರಣಗಳು ತೋರಣಗಳಂತೆಯೂ ಶೋಭಿಸಿದವು. ಗೋಕುಲಭೂಮಿಯು ಧ್ವಜಗಳಿಂದಲೂ ತೋರಣಗಳಿಂದಳೂ ಶೋಭಿಸಿತು.

ಗೋಕುಲದಲ್ಲಿರುವ ಎಲ್ಲಾ ಮನೆಗಳೂ ಪತಾಕೆಗಳಿಂದಲೂ ಧ್ವಜಸ್ತಂಭಗಳಿಂದಲೂ ಪೂರ್ಣ ಕುಂಭಗಳಿಂದಲೂ ತೋರಣಗಳಿಂದಲೂ ಶೋಭಿಸಿದವು. " ಶ್ರೀಕೃಷ್ಣನು ಬಾಲಲೀಲೆಯಿಂದ ಕೆಲದಿನಗಳಲ್ಲಿ ಈ ಮನೆಗಳನ್ನು ಪ್ರವೇಶಿಸುವನು ಎಂದು ತಿಳಿದು ಈಗಲೇ ಮನೆಗಳನ್ನು ಅಲಂಕರಿಸಿದಂತಿತ್ತು.

ಗೋಕುಲದಲ್ಲಿರುವ ಕರುಗಳನ್ನೂ ದನಗಳನ್ನೂ (ಎತ್ತುಗಳನ್ನೂ) ಅರಿಶಿನ ಎಣ್ಣೆಗಳಿಂದ ಅಲಂಕರಿಸಿದರು. " ಶೀಘ್ರದಲ್ಲಿ ಕರುಣೆಯ ನೋಟದಿಂದ ಇವುಗಳನ್ನು ಶ್ರೀಕೃಷ್ಣನು ನೋಡಿ ಕಾಪಾಡುವನು" ಎಂದು ಅಲಂಕರಿಸಿದಂತಿತ್ತು. ಗೊಲ್ಲರೆಲ್ಲರೂ ಹಾಲು ಬೆಣ್ಣೆ ತುಪ್ಪ ಮೊಸರು ಮುಂತಾದ ವಸ್ತುಗಳನ್ನು ಅನ್ಯೋನ್ಯವಾಗಿ ಚೆಲ್ಲಿಕೊಂಡು ಆಟವಾಡಿದರು. ಇದರಿಂದ "ಕೃಷ್ಣ ನಮ್ಮೊಡನೆ ನೀನೂ ಹೀಗೆಯೇ ವಿಹರಿಸು" ಎಂದು ಹೇಳಿದಂತಿತ್ತು.

## ಮಧ್ಯಾಹ್ನ ವರ್ಣನೆ

ಶಾಂತನಾದ ಚಂದ್ರನು ಉದಯಿಸಿದಾಗ ಎಲ್ಲರೂ ಭೋಗಗಳನ್ನು ಅನುಭವಿಸಿದರು. ಕ್ರೂರಕಿರಣಗಳಿಂದ ಸಹಿತನಾದ ಸೂರ್ಯನು ಉದಯಿಸಿದ ಕೂಡಲೇ ಭಯಭಕ್ತಿಯಿಂದ ಧರ್ಮಕಾರ್ಯಗಳನ್ನು ಮಾಡಲು ಉದ್ಯುಕ್ತರಾದರು. ಇದು " ಜನರು ಶಾಂತನಿಂದ ಹೆದರುವುದಿಲ್ಲ. ಕ್ರೂರಸ್ವಭಾವವುಳ್ಳವನಿಂದ ಹೆದರುವರು" ಎಂದು ತಿಳಿಸಿತು.

ಮೇಲ್ಮುಖವಾದ ಕಿರಣಗಳೆಂಬ ಕೈಗಳಿಂದ ವಿಷ್ಣುಪದ ಅಂದರೆ ಆಕಾಶವನ್ನು ಹಿಡಿದುಕೊಂಡು ಸೂರ್ಯನು ಕ್ರಮದಿಂದ ಮೇಲೆ ಬಂದನು. ವಿಷ್ಣುಪದ ಅಂದರೆ ಶ್ರೀಹರಿಪಾದವನ್ನು ಕೈಗಳಿಂದ ಹಿಡಿದವನು ಮೇಲೆ ಬರುವುದು ನ್ಯಾಯವೇ ಆಗಿದೆ.

ಸೂರ್ಯನ ಬಿಂಬವು ಉದಯಕಾಲದಲ್ಲಿ ರಾಗ ಅಂದರೆ ಕೆಂಪುಬಣ್ಣವನ್ನು ಬಿಟ್ಟಿತು. ತೀಕ್ಷ್ಣವಾಯಿತು. ಶ್ರೀ ರಾಮನು ಸೂರ್ಯವಂಶದಲ್ಲಿ ಹುಟ್ಟಿದವನು. ಆಗ ಸೂರ್ಯನಿಗೆ ಸಂತೋಷವಾಗಿತ್ತು. ಈಗ ಅದೇ ರಾಮನು ಶ್ರೀಕೃಷ್ಣರೂಪದಿಂದ ಬಲರಾಮನ ತಮ್ಮನಾಗಿ ಚಂದ್ರವಂಶದಲ್ಲಿ ಹುಟ್ಟಿರುವನು. ಇದರಿಂದ ಸೂರ್ಯನು ಕುಪಿತನಾದನು. ಆದ್ದರಿಂದಲೇ ರಾಗ ಅಂದರೆ ಪ್ರೇಮವನ್ನು ಬಿಟ್ಟು ಕ್ರೂರನಾದನು. ಹಗಲಿನಲ್ಲಿ ಉದಯಿಸುವ ಸೂರ್ಯನಿಗೆ ರಾತ್ರಿಯಲ್ಲಿ ಉದಯಿಸುವ ಚಂದ್ರನು ತಮ್ಮನೇ ಆಗಿದ್ದರೂ ಅವನಿಗೆ ಕೀರ್ತಿಯು ಬಂದಾಗ ಅಣ್ಣನಾದ ಸೂರ್ಯನಿಗೆ ಅಸಹನೆಯು ಏರ್ಪಡುವುದು ನ್ಯಾಯವಾಗಿದೆ.

ಛಾಯಾ ಅಂದರೆ ನೆರಳನ್ನು ಆಶ್ರಯಿಸಿದವರ ಮುಖವನ್ನು ಸೂರ್ಯನು ಬಾಡಿಸಲಿಲ್ಲ. ಛಾಯಾ ಎಂಬ ತನ್ನ ಪತ್ನಿಯನ್ನು ಆಶ್ರಯಿಸಿದವರಿಗೆ ಸೂರ್ಯನು ತಾಪವನ್ನು ಪರಿಹರಿಸಿದ್ದು ನ್ಯಾಯವೇ ಆಗಿದೆ. ಎಷ್ಟು ಕ್ರೂರನೂ ತನ್ನ ಪತ್ನಿಯ ಸಂಬಂಧಿಗಳನ್ನು ಪೀಡಿಸುವನೇ?

## ಶ್ರೀಕೃಷ್ಣನು ಗೊಲ್ಲರಲ್ಲಿ ಹುಟ್ಟಿದುದೇಕೆ?

ಗೋರೂಪವನ್ನು ಧರಿಸಿ ತನ್ನನ್ನು ಶರಣುಹೊಂದುವುದಕ್ಕಾಗಿ ಬಂದಿದ್ದ ಭೂದೇವಿಯನ್ನು ರಕ್ಷಿಸುವುದಕ್ಕಾಗಿ ಶ್ರೀಕೃಷ್ಣನು ಅವತರಿಸಿದನು. ಆದ್ದರಿಂದಲೇ ಅವನೂ ಅವನ ಪರಿವಾರದಲ್ಲಿ ಸೇರಿದ ದೇವತೆಗಳೂ ಗೊಲ್ಲರ ಕುಲದಲ್ಲಿ ಅವತರಿಸಿದರು.

## ಶ್ರೀಕೃಷ್ಣದೇವನಿಗೆ ಜಾತಕರ್ಮಸಂಸ್ಕಾರವನ್ನು ಮಾಡಿದುದು

ಬಾಲಕನು ಹುಟ್ಟಿದ ಕೂಡಲೇ ಅವರಿಗೆ ಆಯುಸ್ಸು ವರ್ಚಸ್ಸು ಯಶಸ್ಸು ಬಲ ಮುಂತಾದ ಗುಣಗಳ ವೃದ್ಧಿಗಾಗಿ ಜಾತಕರ್ಮ ಎಂಬ ಸಂಸ್ಕಾರವನ್ನು ಮಾಡಬೇಕು. ಆಗ ಒಂದು ಹೆಸರನ್ನೂ ಇಡಬೇಕು. ಶ್ರೀಕೃಷ್ಣನಿಗೆ ಜನ್ಮವಿಲ್ಲ. ಆದ್ದರಿಂದ ಅವನಿಗೆ ಜಾತಕರ್ಮವೂ ಹೆಸರನ್ನಿಡುವುದೂ ಬೇಕಾಗಿಲ್ಲ. ಆದರೂ ವಿಧಿಜ್ಞರಾದ ಜ್ಞಾನಿಗಳು ಜಾತಕರ್ಮಸಂಸ್ಕಾರವನ್ನು ಮಾಡಿಸಿ, ಮಾಧವ ಎಂಬ ಯೋಗ್ಯ ಹೆಸರನ್ನಿಟ್ಟರು.

## ಶ್ರೀಕೃಷ್ಣನು ತಾಯಿಯ ಹಾಲನ್ನು ಕುಡಿಯಲು ಆರಂಭಿಸಿದುದು

ಜಾತಕರ್ಮಸಂಸ್ಕಾರವು ಮುಗಿದಕೂಡಲೇ ತಾಯಿಯು ಮಗನಿಗೆ ತನ್ನ ಮೊಲೆಗಳ ಹಾಲನ್ನು ಕುಡಿಸಬೇಕು. ಆ ಕ್ರಮದಿಂದ ಯಶೋದೆಯು ತನ್ನ ಮೊಲೆಗಳ ಹಾಲನ್ನು ಕುಡಿಸಿದಳು. ಇವನಿಗೆ ಜನ್ಮವಿಲ್ಲ. ತಾಯಿಯ ಹಾಲಿನ ರುಚಿಯನ್ನು ತಿಳಿಯದವನು. ಈಗಲೇ ಕುಡಿಯುತ್ತಿರುವನು. ಆದ್ದರಿಂದ ಅತೃಪ್ತನಂತೆ ಆಸೆಯಿಂದ ಕುಡಿಯುತ್ತಿರುವನು. ಈ ಹಾಲು ಅವನಿಗೆ ಹೊಸದು. ಮತ್ತು ಪ್ರಿಯವೂ ಆಗಿದೆ. ಆದ್ದರಿಂದ ತೃಪ್ತಿಯಿಲ್ಲದೆ ಕುಡಿಯುತ್ತಿರುವುದರಲ್ಲಿ ನ್ಯಾಯವಿದೆ.

ಶ್ರೀಕೃಷ್ಣನು ನಿತ್ಯತೃಪ್ತನು. ಅವನಿಗೆ ಈ ಅಲ್ಪವಾದ ಹಾಲಿನಲ್ಲಿ ಆಸೆಯಿಲ್ಲ. ಯಶೋದೆಯು ಮಹಾಪುಣ್ಯವಂತಳು. ಆದ್ದರಿಂದಲೇ ಶ್ರೀಕೃಷ್ಣನಿಗೆ ತಾಯಿಯಾದಳು. ಅವಳ ಹೃದಯದಲ್ಲಿ ಅಧಿಕವಾದ ಪುಣ್ಯವನ್ನು ತುಂಬಿಸಬೇಕು ಅದಕ್ಕಾಗಿ ಹೆಚ್ಚಿನ ಸ್ಥಳವು ಹೃದಯದಲ್ಲಿ ಬೇಕು. ಹೆಚ್ಚಿನ ಸ್ಥಳವನ್ನು ಏರ್ಪಡಿಸುವುದಕ್ಕಾಗಿಯೇ ಎದೆಯಲ್ಲಿರುವ ಹಾಲನ್ನು ಹೊರಪಡಿಸಬೇಕು. ಅದಕ್ಕಾಗಿಯೇ ಶ್ರೀಕೃಷ್ಣನು ಹಾಲನ್ನು ಕುಡಿಯುತ್ತಿರುವಂತೆ ನಟಿಸುತ್ತಾ ಎದೆಯನ್ನು ಖಾಲಿ ಮಾಡುತ್ತಾ ಖಾಲಿಯಾದ ಜಾಗದಲ್ಲಿ ಪುಣ್ಯವನ್ನು ತುಂಬಿಸುತ್ತಾ ಇರುವನು.

ಶ್ರೀಕೃಷ್ಣನು ಒಂದು ಮೊಲೆಯನ್ನು ಕುಡಿಯುತ್ತಿರುವನು. ಒಂದು ಕೈಯಿಂದ ಇನ್ನೊಂದು ಮೊಲೆಯನ್ನು

ಮುಟ್ಟುತ್ತಿರುವನು. ಇದರಿಂದ " ಇಕೋ, ನೀನು ನನಗೆ ಹಾಲನ್ನು ಕುಡಿಸಿದ್ದಕ್ಕೆ ಫಲವನ್ನು ನೀಡುತ್ತಿರುವೆನು" ಎಂದು ಸೂಚಿಸುತ್ತಿರುವನು. ಕಣ್ಣುಗಳಿಂದ ಯಶೋದೆಯ ಮುಖವನ್ನು ನೋಡುತ್ತಿರುವನು. ಇದರಿಂದ ಅವಳಿಗೆ ಮುಕ್ತಿಸುಖವನ್ನು ಕೊಡುತ್ತಾ " ಇದೇ ನನಗೆ ಹಾಲನ್ನು ಕುಡಿಸಿದ್ದಕ್ಕೆ ಫಲ" ಎಂದು ಸೂಚಿಸುತ್ತಿರುವನು.

ಶ್ರೀಕೃಷ್ಣನು ಪೂರ್ಣಾನಂದನು. ಅವನು ಯಶೋದೆಯ ಹಾಲನ್ನು ಪುನಃ ಪುನಃ ಕುಡಿಯುತ್ತಾ ಬಂದನು. ಇದರಿಂದ ಹಾಲನ್ನು ಕುಡಿಯುವುದಕ್ಕಿಂತ ಪೂರ್ವದಲ್ಲಿ ಶ್ರೀಕೃಷ್ಣನಿಗೆ ಹಸಿವು ಏರ್ಪಟ್ಟಿತ್ತೆಂದೂ ಹಾಲನ್ನು ಕುಡಿದ ಮೇಲೆ ಹಸಿವು ಅಡಗಿತೆಂದೂ ಯಶೋದಯು ಭ್ರಮಿಸಿದಳು. ಅಸಂಖ್ಯವಾದ ಗೋವುಗಳನ್ನು ಮನೆಯಲ್ಲಿ ಕಟ್ಟಿದಳು. " ತನ್ನ ಹಾಲು ಸಾಲದಿದ್ದರೆ ಗೋವುಗಳ ಹಾಲಿನಿಂದ ತೃಪ್ತಿಪಡಿಸುವೆನು." ಎಂದು ಭ್ರಮಿಸಿದಳು. ಶ್ರೀಕೃಷ್ಣನಿಗೆ ಪುನಃ ಪುನಃ ಹಾಲನ್ನು ಕುಡಿಸುತ್ತಾ ಬಂದಳು.

## ನಂದನು ಮಥುರೆಗೆ ಹೋಗಿ ಹಿಂದಿರುಗಿ ಬಂದುದು

ಸಕಲ ಜನರಿಗೂ ತಂದೆಯೂ ಬ್ರಹ್ಮದೇವನ ತಂದೆಯೂ ಆಗಿರುವ ಆನಂದಪೂರ್ಣನಾದ ಶ್ರೀಕೃಷ್ಣನನ್ನು ಯಶೋದೆಯೂ ನಂದನೂ ಲಾಲಿಸುತ್ತಾ ಒಂದು ತಿಂಗಳಿನ ವರೆಗೆ ಯಮುನಾತೀರದಲ್ಲಿಯೇ ವಾಸಿಸಿದರು. ಒಂದು ತಿಂಗಳು ಪೂರ್ತಿಯಾದ ಕೂಡಲೇ ನಂದನು ಯಶೋದಯನ್ನೂ ಕೆಲವು ಪರಿವಾರಗಳನ್ನೂ ಅಲ್ಲಿಯೇ ಬಿಟ್ಟು ಕಂಸನನ್ನು ನೋಡಿ ಕಪ್ಪವನ್ನು ಕೊಡುವುದಕ್ಕಾಗಿ ಮಥುರೆಗೆ ಹೋದನು. ಕಂಸನಿಗೆ ಕಪ್ಪವನ್ನು ಕೊಟ್ಟನು. ವಸುದೇವನ ಮನೆಗೆ ಬಂದು ಅವನ ಯೋಗಕ್ಷೇಮವನ್ನು ವಿಚಾರಿಸಿದನು. ವಸುದೇವನು " ನಂದನೆ! ಬೇಗನೆ ಹಿಂದಿರುಗು. ಗೋಕುಲದಲ್ಲಿ ಅನೇಕ ಉತ್ಪಾತಗಳು ಏರ್ಪಡುತ್ತಿವೆ" ಎಂದನು. ಈ ಮಾತುಗಳನ್ನು ಕೇಳಿದ ನಂದನು ಅಂದೇ ಹಿಂದಿರುಗಿದನು.

ಇಷ್ಟರವರೆಗೆ (೧) "ವಿಷ್ಣುಃ ಕ್ಷಿತಿಭರಹರಣೇ ಪ್ರಾರ್ಥಿತಃ" ಅಂದರೆ " ವಿಷ್ಣುವು ಭೂಭಾರಪರಿಹಾರಕ್ಕಾಗಿ ಪ್ರಾರ್ಥಿಸಲ್ಪಟನು. " (೨) "ವಿಷ್ಣುಃ ದೇವಕ್ಯಾಂ ಪ್ರಾದುರಾಸೀತ್" ಅಂದರೆ " ವಿಷ್ಣುವು ದೇವಕಿಯಲ್ಲಿ ಅವತರಿಸಿದನು." (೩) "ವಿಷ್ಣುಃ ಬ್ರಹ್ಮಾದಿದೇವೈಃ ಸಹ ಪ್ರಾದುರಾಸೀತ್" ಅಂದರೆ "ವಿಷ್ಣುವು ವಾಯುದೇವರು ಮುಂತಾದ ದೇವತೆಗಳೊಡನೆ ಅವತರಿಸಿದನು." (೪) "ವಿಷ್ಣುಃ ನಂದನಂದೀ" ಅಂದರೆ "ವಿಷ್ಣುವು ನಂದನನ್ನು ನಾನಾ ವಿಧದಿಂದ ಸಂತೋಷಪಡಿಸಿದನು." ಎಂಬ ಅಂಶಗಳನ್ನು ವಿವರಿಸಿದೆವು.

**(೫) ಯಃ ವಿಷ್ಣುಃ ಶಿಶುವಧವಿಹಿತಾಂ ಪೂತನಾಂ ಜಘಾನ** = ಮಕ್ಕಳನ್ನು ಕೊಲ್ಲುವುದಕ್ಕಾಗಿ ಕಂಸನಿಂದ ಆಜ್ಞಾಪಿಸಲ್ಪಟ್ಟ ಪೂತನೆಯನ್ನು ಶ್ರೀಕೃಷ್ಣರೂಪಿಯಾದ ಶ್ರೀಹರಿಯು ಸಂಹರಿಸಿದನು.

ವಿಶೇಷಾರ್ಥ : **(ಜಾತಮಾತ್ರಾನ್ ಕುಮಾರಾನ್ನಿಹಂತುಂ. ಯದಾ ಸ್ವಜನಾನಾದಿಶತ್ ತದಾ ಶಿಶುಹನನಾರ್ಥಂ ಚಾರಯಂತೀಂ, ಸ್ವಸ್ವರೂಪಮಾಚ್ಛಾದ್ಯ ಶುಭರೂಪಧರಾಂ, ನಂದಗೃಹಂ ಪ್ರಾಪ್ತಾಂ. ಕಂಸಧಾತ್ರೀಂ, ಪೂತನಾಂ, ಸ್ವಹನನಾರ್ಥಂ ವಿಷೋಲ್ಬಣಂ ಸ್ತನಂ ಪಾಯಯಂತೀಮಸುಭಿಃ ಸಹ ಸ್ತನಂ ಪೀತ್ವಾ, ತಾಂ ಹತ್ವಾ, ತದ್ದೇಹಸ್ಥಾಂ ತಾಟಕಾಂ ನರಕಂ ನೀತ್ವಾ, ತುಂಬುರುಸಂಗದೋಷೇಣ ವಿತ್ತೇಶ್ವರಶಪ್ತಾಂ ತತ್ಸಂಪ್ರವಿಷ್ಟಾಂ ಸ್ವಭುಕ್ತಸ್ತನೇನ ಪೂತಾಮೂರ್ವಶೀಂ ತದ್ದೇಹಾನ್ಮೋಚಯಿತ್ವಾ ಸ್ವರ್ಗಂ ಪ್ರತಿಪ್ರೇಷ್ಯ,)**

ಕಂಸನು ಹಸುಗೂಸುಗಳನ್ನು ಕೊಲ್ಲುವುದಕ್ಕಾಗಿ ತನ್ನ ಜನರನ್ನು ಆಜ್ಞಾಪಿಸಿದನು. ಅವರಲ್ಲಿ ಒಬ್ಬ ರಾಕ್ಷಸಿಯು ನಂದನ ಮನೆಗೆ ಬಂದಳು. ಅವಳು ಕಂಸನ ಸಾಕುತಾಯಿಯಾಗಿರುವವಳು. ಪೂತನಾ ಎಂದು ಅವಳ ಹೆಸರು. ಅವಳ ದೇಹದಲ್ಲಿ ಎರಡು ಜೀವರು ವಾಸಿಸುತ್ತಿರುವರು.

(೧) ಆ ಇಬ್ಬರಲ್ಲಿ ತಾಟಕಾ ಎಂಬ ರಾಕ್ಷಸಿಯು ಮೊದಲನೆಯವಳು. ಅವಳು ಭಯಂಕರವಾದ ವಿಷವನ್ನು ತನ್ನ ಸ್ತನಗಳ ಮೇಲೆ ಲೇಪನ ಮಾಡಿಕೊಂಡಿರುವವಳು. ವಿಷಮಿಶ್ರವಾದ ಮೊಲೆಗಳನ್ನು ಚಿಕ್ಕಮಕ್ಕಳಿಗೆ ಕುಡಿಸುತ್ತಾ ಸಂಹರಿಸುತ್ತಿರುವವಳು. ಭಯಂಕರವಾದ ತನ್ನ ಸ್ವರೂಪವನ್ನು ತನ್ನ ಮಾಯೆಯಿಂದ ಮರೆಮಾಡಿಕೊಂಡು ಪರಮಮಂಗಲರೂಪದಂತಿರುವ ರೂಪವನ್ನು ಧರಿಸಿಕೊಂಡಿರುವವಳು. ಶ್ರೀಕೃಷ್ಣದೇವನನ್ನು ಸಂಹರಿಸಬೇಕೆಂದು ವಿಷಮಿಶ್ರಿತವಾದ ಮೊಲೆಯನ್ನು ಕುಡಿಸಿದಳು. ಅವಳ ಮೊಲೆಯನ್ನು ಕುಡಿಯುತ್ತಾ ಶ್ರೀಕೃಷ್ಣದೇವನು ಅವಳ ಪ್ರಾಣವನ್ನು ಹೀರಿದನು. ಅವಳನ್ನು ಸಂಹರಿಸಿ ನಿತ್ಯನರಕದಲ್ಲಿ ತಳ್ಳಿದನು.

(೨) ಅವಳ ದೇಹದಲ್ಲಿ ಪ್ರವೇಶಮಾಡಿಕೊಂಡು ವಾಸಿಸುತ್ತಿರುವ ಊರ್ವಶೀ ಎಂಬ ಅಪ್ಸರಃಸ್ತ್ರೀಯು ಎರಡನೆಯವಳು. ಅವಳು ತುಂಬುರು ಎಂಬ ಗಂಧರ್ವನ ಸಂಗವನ್ನು ಮಾಡಿದಳು. ಇದರಿಂದ ಕುಪಿತನಾದ ಕುಬೇರನು ಅವಳನ್ನು ರಾಕ್ಷಸಿಯಾಗಿ ಹುಟ್ಟುವಂತೆ ಶಪಿಸಿದನು. ಆ ಶಾಪದಿಂದ ಅವಳು ತಾಟಕೆಯ ದೇಹದಲ್ಲಿ ಪ್ರವೇಶಿಸಿದಳು. ಶ್ರೀಕೃಷ್ಣದೇವನಿಗೆ ಮೊಲೆಗಳನ್ನು ಕೊಟ್ಟದ್ದರಿಂದ ಅವಳು ಪರಿಶುದ್ಧಳಾದಳು. ಕುಬೇರನ ಶಾಪದಿಂದ ಬಿಡುಗಡೆಯನ್ನು ಪಡೆದು ಸ್ವರ್ಗಕ್ಕೆ ಹೋದಳು.

## ಊರ್ವಶಿಗೆ ಕುಬೇರನ ಶಾಪ

ವಿಶೇಷಾರ್ಥ: ವಿವರಣ - ಊರ್ವಶೀ ಎಂಬ ಅಪ್ಸರಃಸ್ತ್ರೀಯು ಕುಬೇರನಿಗೆ ತುಂಬಾ ಪ್ರಿಯಳಾದವಳು. ಕುಬೇರನ ಅಧೀನನಾದ ತುಂಬುರು ಎಂಬ ಗಂಧರ್ವನು ಈ ಊರ್ವಶಿಯಲ್ಲಿ ಆಸೆಯನ್ನು ಇಟ್ಟಿದ್ದನು. ಅವಳನ್ನು ವಶಪಡಿಸಿಕೊಂಡನು. ಅವಳೊಡನೆ ರತಿಕ್ರೀಡೆಯನ್ನು ಮಾಡಿದನು. ಈ ವಿಷಯವನ್ನು ತಿಳಿದ ಕುಬೇರನು ತುಂಬಾ ಕುಪಿತನಾದನು. "ನೀನು ರಾಕ್ಷಸಿಯಾಗಿ ಹುಟ್ಟು" ಎಂದು ಶಪಿಸಿದನು. ಆ ಶಾಪದ ಬಲದಿಂದ ಆ ಊರ್ವಶಿಯು ತಾಟಕಾ ಎಂಬ ರಾಕ್ಷಸಿಯ ದೇಹದಲ್ಲಿ ಪ್ರವೇಶಿಸಿದಳು.

## ದೇವತೆಗಳಿಗೆ ರಾಕ್ಷಸತ್ವ ಪ್ರಾಪ್ತಿ

ದೇವತೆಗಳು ಅನಾದಿಕಾಲದಿಂದ ವಿಷ್ಣುಭಕ್ತರು. ಅವರಿಗೆ ಸ್ವಭಾವಸಿದ್ಧವಾದ ವಿಷ್ಣುಭಕ್ತಿಯು ಯಾವ ಕಾರಣದಿಂದಲೂ ಹೋಗುವುದಿಲ್ಲ. ರಾಕ್ಷಸತ್ವವೂ ಬರುವುದಾದಲ್ಲಿ. ಶಾಪನಿಮಿತ್ತಗಳಿಂದ ಅವರಿಗೆ ರಾಕ್ಷಸತ್ವವು ಬರುವ ಸಂದರ್ಭವುಂಟು. ಅಂತಹ ಸಂದರ್ಭದಲ್ಲಿ ಸ್ವಭಾವದಿಂದ ವಿಷ್ಣುದ್ವೇಷಿಯಾದ ಜೀವನೊಡನೆ ಒಂದೇ ದೇಹದಲ್ಲಿ ವಾಸಿಸುವ ದುರ್ಯೋಗವು ಅವರಿಗೆ ಏರ್ಪಡುತ್ತದೆ. ಹಾಗೆ ಏರ್ಪಟ್ಟಾಗ ಸ್ವಭಾವದಿಂದ ವಿಷ್ಣುದ್ವೇಷಿಯಾದ ಜೀವನು ಮನಃಪೂರ್ವಕವಾಗಿ ವಿಷ್ಣುದ್ವೇಷವನ್ನು ಮಾಡುವನು. ಸ್ವಭಾವದಿಂದ ವಿಷ್ಣುಭಕ್ತನಾದ ಜೀವನು ಸ್ವಭಾವದಿಂದ ವಿಷ್ಣುದ್ವೇಷಿಯಾದ ಜೀವನೊಡನೆ ಸೇರಿ ತಾನೂ ವಿಷ್ಣುವನ್ನು ದ್ವೇಷಿಸುವನು. ಆದರೆ ಈ

ವಿಷ್ಣುದ್ವೇಷವು ಆ ಜನ್ಮಕ್ಕೆ ಮಾತ್ರ ಸಂಬಂಧಿಸಿದ್ದು. ಅನಾದಿಯಲ್ಲ ಮತ್ತು ಸ್ವಾಭಾವಿಕವಲ್ಲ. ಆ ಜನ್ಮದಲ್ಲಿಯೂ ಸಹ ಕ್ಲೃಪ್ತವಾದ ಕಾಲಕ್ಕೆ ಮಾತ್ರಸಂಬಧಪಟ್ಟಿದ್ದು. ಇದೇ ದೇವತೆಗಳಿಗೆ ರಾಕ್ಷಸತ್ವಪ್ರಾಪ್ತಿಯೆನಿಸುತ್ತದೆ.

ಶ್ರೀರಾಮಾವತಾರಕಾಲದಲ್ಲಿ ಶ್ರೀರಾಮದೇವನಿಂದ ಕೊಲ್ಲಲ್ಪಟ್ಟ ತಾಟಕ ಎಂಬ ರಾಕ್ಷಸಿಯು ಶ್ರೀಹರಿಯನ್ನು ದ್ವೇಷಿಸುವುದಕ್ಕಾಗಿಯೇ ಪೂತನಾ ಎಂಬ ರಾಕ್ಷಸಿಯಾಗಿ ಹುಟ್ಟಿದಳು. ಊರ್ವಶಿಯು ಕುಬೇರನ ಶಾಪದಿಂದ ತಾಟಕೆಯೊಡನೆ ತಾಟಕೆಯ ದೇಹದಲ್ಲಿ ವಾಸಿಸುತ್ತಾ ಶ್ರೀಹರಿಯನ್ನು ತಾತ್ಕಾಲಿಕವಾಗಿ ದ್ವೇಷಿಸುತ್ತಿದ್ದವಳು. ಆಗಲೂ ಊರ್ವಶಿಯಲ್ಲಿ ಅನಾದಿಸಿದ್ಧವಾದ ವಿಷ್ಣುಭಕ್ತಿಯು ಇದ್ದೇ ಇದೆ. ಆದರೆ ಶಾಪದಿಂದ ಆ ಭಕ್ತಿಯು ಮುಚ್ಚಲ್ಪಟ್ಟಿದೆ. ತಾತ್ಕಾಲಿಕವಾದ ದ್ವೇಷವೇ ಕಾಣಿಸುತ್ತಿದೆ. ಇದೇ ಊರ್ವಶಿಗೆ ಶಾಪದಿಂದ ರಾಕ್ಷಸತ್ವಪ್ರಾಪ್ತಿಯೆನಿಸುತ್ತದೆ.

## ಪೂತನೆ

ಕಂಸನು ಚಿಕ್ಕ ಮಗುವಾಗಿದ್ದಾಗಅವನನ್ನು ಈ ಪೂತನೆಯು ಬೆಳೆಸಿದಳು. ಆದ್ದರಿಂದಲೇ ಕಂಸನಿಗೆ ಈ ಪೂತನೆಯು "ಧಾತ್ರೀ" ಅಂದರೆ ಸಾಕುತಾಯಿಯೆನಿಸಿದಳು. ಕಂಸನೂ ತಾಯಿಯಲ್ಲಿ ಇಟ್ಟಿರುವ ಭಕ್ತಿಯನ್ನೇ ಇವಳಲ್ಲಿ ಇಟ್ಟಿದ್ದನು. " ಎಳೆಗೂಸುಗಳನ್ನು ಕೊಲ್ಲಬೇಕು." ಎಂದು ಕಂಸನು ತನ್ನ ಪ್ರಿಯಮಿತ್ರರೆಲ್ಲರಿಗೂ ಆಜ್ಞಾಪಿಸಿದಾಗ ಅವನ ಮಾತಿನಂತೆ ನಡೆಯುವುದಕ್ಕೆ ಪೂತನೆಯು ಮೊದಲು ಹೊರಟಳು. ತನ್ನ ಮಗನಂತಿರುವ ಕಂಸನ ರಕ್ಷಣೆಯ ವಿಷಯದಲ್ಲಿ ಅಕ್ಕರೆಯು ಕಂಸನ ಸಾಕುತಾಯಿಗೆ ಅಧಿಕವಾಗಿರುವುದು ಸಹಜಲ್ಲವೇ?

## ಪೂತನೆಯ ತಂತ್ರ

ಅವಳು ಭಯಂಕರವಾದ ರೂಪದಿಂದ ಯುಕ್ತಳಾದವಳು. ಆ ರೂಪದಿಂದ ಅವಳು ಬಂದರೆ ಯಾರೂ ತಮ್ಮ ಮಕ್ಕಳುಗಳನ್ನು ಅವಳ ಕೈಯಲ್ಲಿ ಒಪ್ಪಿಸಲಾರರು. ಮಕ್ಕಳನ್ನು ಕೊಲ್ಲುವುದಕ್ಕೂ ಸಾಧ್ಯವಾಗಲಾರದು. ಅದಕ್ಕಾಗಿ ತನ್ನ ಮಾಯಾಬಲದಿಂದ ತನ್ನೊಡನೆ ಅದೇ ದೇಹದಲ್ಲಿ ವಾಸಿಸುತ್ತಿರುವ ಊರ್ವಶಿಯಂತೆ ಸುಂದರವಾದ ರೂಪವನ್ನು ಧರಿಸಿದಳು.

ಚಿತ್ರಹಿಂಸೆಯಿಂದ ಮಕ್ಕಳನ್ನು ಕೊಂದರೆ ಅವಳನ್ನು ನೋಡಿದ ಕೂಡಲೇ ಎಲ್ಲರೂ ಹೆದರುವರು. ಯಾರೂ ಯಾವ ಮಕ್ಕಳನ್ನೂ ಇವಳ ಸಮೀಪದಲ್ಲಿ ಸೇರಿಸಲಾರರು. ಆಗಲೂ ಮಕ್ಕಳನ್ನು ಕೊಲ್ಲುವುದು ಸಾಧ್ಯವಾಗಲಾರದು. ಅದಕ್ಕಾಗಿ ಮಕ್ಕಳನ್ನು ಪ್ರೇಮದಿಂದ ಲಾಲನೆ ಮಾಡುತ್ತಾ ಮೊಲೆ ಹಾಲನ್ನು ಕುಡಿಸುತ್ತಿರುವಂತೆ ನಟಿಸಬೇಕು. ಮೊಲೆಗಳ ಮೇಲೆ ಅತಿಕ್ರೂರವಾದ ಹಾಲಾಹಲವಿಷಮುಂತಾದ ವಿಷಗಳನ್ನು ಸವರಬೇಕು. ಆ ವಿಷದಿಂದ ಮಿಶ್ರವಾದ ಹಾಲನ್ನು ಕುಡಿಸುತ್ತಾ ಮರುಕ್ಷಣದಲ್ಲಿಯೇ ಮಕ್ಕಳನ್ನು ಕೊಲ್ಲಬೇಕು. ಮಕ್ಕಳು ಸತ್ತಕೂಡಲೇ ತಾನೂ ಇತರರೊಡನೆ ಅಳುತ್ತಾ ತನ್ನ ಮೇಲೆ ಯಾರಿಗೂ ಅಪನಂಬಿಕೆಯು ಬಾರದಂತೆ ಮಾಡಿಕೊಂಡು ತನ್ನ ಕಾರ್ಯವನ್ನು ಮುಂದುವರಿಸಬೇಕು. ಇದು ಮಕ್ಕಳನ್ನು ಕೊಲ್ಲುವುದಕ್ಕೆ ಸುಲಭವಾದ ಮಾರ್ಗವೆಂದು ತೀರ್ಮಾನಿಸಿದಳು.

# ಪೂತನಾ ಸಂಹಾರ

ಅನೇಕ ಮಕ್ಕಳನ್ನು ಕೊಂದಳು. ಯಶೋದೆಯು ವಾಸಿಸುತ್ತಿರುವ ವಸ್ತ್ರದ ಗುಡಾರಕ್ಕೆ ಬಂದಳು. ಕಾಲುಗಳಲ್ಲಿ ಕಾಲ್ಗಡಗಗಳು, ಕೈಯಲ್ಲಿ ಬಳೆಗಳು ಝಣಝಣತ್ಕಾರವನ್ನು ಮಾಡುತ್ತಿವೆ. ವಿಶಾಲವಾದ ನಿತಂಬಪ್ರದೇಶದಲ್ಲಿ ರತ್ನದ ಉಡುದಾರವು ಶೋಭಿಸುತ್ತಿದೆ. ಕಡೆಗಣ್ಣಿನ ನೋಟದಿಂದ ಮಹಾಮುನಿಗಳೆಲ್ಲರೂ ಅವಳ ಮುಂದೆ ಕಲ್ಲಿನಂತೆ ಪರವಶರಾದರು. ಊರ್ವಶಿಯಂತೆ ಮೆರೆಯುತ್ತ ಬಂದಳು. ಶ್ರೀಕೃಷ್ಣದೇವನನ್ನು ಎತ್ತಿ ತೊಡೆಯ ಮೇಲೆ ಇಟ್ಟುಕೊಂಡಳು. ಅವಳು ಮಾಯಾಬಲದಿಂದ ಸ್ವೀಕರಿಸಿದ ಪರಮಸುಂದರವಾದ ರೂಪವನ್ನು ನೋಡಿದ ಸ್ತ್ರೀಯರು ಯಾರೂ ಅವಳನ್ನು ತಡೆಯಲಿಲ್ಲ. ಅವಳು ಶ್ರೀಕೃಷ್ಣದೇವನಿಗೆ ಮೊಲೆಹಾಲನ್ನು ಕುಡಿಸಿದಳು. ಆ ಹಾಲಿನೊಡನೆ ಮೊಲೆಯ ಮೇಲೆ ಹಚ್ಚಿದ ವಿಷವೂ ಶ್ರೀಕೃಷ್ಣದೇವನ ಹೊಟ್ಟೆಯಲ್ಲಿ ಪ್ರವೇಶಿಸಿತು.

(೧) ವಿಷಜಂತುಗಳಲ್ಲಿ ಪ್ರಧಾನಪ್ರಾಣಿಗಳು ಸರ್ಪಗಳು, ಸರ್ಪಗಳಲ್ಲಿ ಪ್ರಧಾನನು-ಶೇಷದೇವನು, ಆ ಶೇಷದೇವನು ಈಗ ಬಲರಾಮನಾಗಿ ಅವತರಿಸಿರುವನು. ಬಲರಾಮನ ತಮ್ಮನಾಗಿ ಅವತರಿಸಿರುವ ಶ್ರೀಕೃಷ್ಣದೇವನನ್ನು ಬಾಧಿಸಲು ಯಾವ ವಿಷವಾದರೂ ಶಕ್ತವಾಗುತ್ತದೆಯೇ? (೨) ರಮಾದೇವಿಯರ ಅಧರಾಮೃತವನ್ನು ಪಾನಮಾಡುತ್ತಿರುವ ಶ್ರೀಕೃಷ್ಣನನ್ನು ಈ ಅಲ್ಪವಾದ ವಿಷವು ಬಾಧಿಸುತ್ತದೆಯೇ? ಇಲ್ಲವೇ ಇಲ್ಲ.

ಶ್ರೀಕೃಷ್ಣದೇವನು ಅವಳ ಎದೆಯಲ್ಲಿ ಹಚ್ಚಿರುವ ವಿಷವನ್ನು ಎತ್ತರವಾದ ಅವಳ ಮೊಲೆಯಲ್ಲಿರುವ ದೊಡ್ಡ ದೊಡ್ಡ ರಂಧ್ರಗಳ ದ್ವಾರಗಳಿಂದ ಅವಳ ದೇಹದೊಳಗೆ ವ್ಯಾಪಿಸುವಂತೆ ಮಾಡಿದಾಗ. ಅವಳು ಸತ್ತಳು. ಕಂಸನು ಶೀಘ್ರದಲ್ಲಿಯೇ ಸಾಯುವನು. ಸತ್ತಕೂಡಲೇ ನಿತ್ಯನರಕದಲ್ಲಿ ಬೀಳುವನು. ಇನ್ನು ಅವನಿಗೆ ಇಲ್ಲಿ ತಾಯಿಯ ಆವಶ್ಯಕತೆಯಿಲ್ಲ. ನಿತ್ಯನರಕದಲ್ಲಿಯೇ ತಾಯಿಯ ಆವಶ್ಯಕತೆ ಇದೆ. ಆದ್ದರಿಂದ ಅವನ ಸಾಕುತಾಯಿಯನ್ನು ಶ್ರೀಕೃಷ್ಣದೇವನು ಇಲ್ಲಿಂದ ಸಂಹರಿಸಿ ನಿತ್ಯನರಕಕ್ಕೆ ಕಳುಹಿಸಿದನು.

ಅವಳು ಪ್ರಪಂಚದಲ್ಲಿರುವ ಎಲ್ಲಾ ಮಕ್ಕಳನ್ನೂ ಬಾಲಗ್ರಹದಂತೆ ಪೀಡಿಸುತ್ತಾ ಸಂಹರಿಸಿದಳು. ಅವಳನ್ನೂ ಬಾಲಗ್ರಹದಂತೆ ಶ್ರೀಕೃಷ್ಣದೇವನು ಪೀಡಿಸಿ ಸಂಹರಿಸಿದನು. ಅವಳು ಎಲ್ಲಾ ಬಾಲಕರನ್ನು ವಿಷದಾನದಿಂದ ಸಂಹರಿಸಿದಳು. ಅದರ ಫಲವಾಗಿ ಅವಳೂ ವಿಷದಿಂದಲೇ ಸತ್ತಳು.

ಅವಳು ತನಗಿಂತ ಅನಂತಪಾಲು ಉತ್ತಮನಾಗಿರುವ ಶ್ರೀಕೃಷ್ಣದೇವನನ್ನು ಸಂಹರಿಸುವುದಕ್ಕಾಗಿ ಯತ್ನಿಸಿದಳು. ಅವಳೇ ಸತ್ತಳು. ಲೋಕದಲ್ಲಿ ತಮಗಿಂತ ಉತ್ತಮರನ್ನು ಸಂಹರಿಸಬೇಕೆಂದು ಯೋಚಿಸಿದವರೆಲ್ಲರಿಗೂ ಇದೇಗತಿಯು ಏರ್ಪಡುವುದು ನ್ಯಾಯವಲ್ಲವೇ?

ಶ್ರೀಕೃಷ್ಣದೇವನನ್ನು ಸಂಹರಿಸುವುದಕ್ಕಾಗಿ ಸರ್ಪಗಳಿಂದ ವಿಷವನ್ನು ಕೇಳಿ ತೆಗೆದುಕೊಂಡಿದ್ದಳು. ಆ ವಿಷವನ್ನು ನೋಡಿ ಶ್ರೀಕೃಷ್ಣದೇವನು ಅಂಜಲಿಲ್ಲ. ನಿರ್ವೀರ್ಯವಾದ ವಿಷವನ್ನು ಕೊಟ್ಟು ತನ್ನನ್ನು ಮೋಸಮಾಡಿರುವ ಸರ್ಪಗಳ ಮೇಲೆ ಕುಪಿತಳಾದಳು. ಆ ಸರ್ಪಗಳನ್ನು ಹೆದರಿಸುವುದಕ್ಕಾಗಿ ಅವುಗಳ ವಾಸಸ್ಥಾನವಾಗಿರುವ ಕೆಳಗಿನ ಲೋಕಗಳಿಗೆ ಪೂತನೆಯೇ ಹೋಗಿರಬೇಕೆಂದು ತೋರುತ್ತದೆ. ವಿಷವನ್ನು ಕುಡಿದವನು ಸಾಯಲಿಲ್ಲ. ವಿಷವನ್ನು ಕೊಟ್ಟವಳು ಸತ್ತಳು. ಅದರಿಂದ ಮೇಲ್ಕಂಡ ರೀತಿಯಿಂದ ತೀರ್ಮಾನಿಸಬೇಕಾಗಿದೆ.

ಪೂತನೆಯ ಸಾಯುವಾಗ ನಿಜರೂಪವನ್ನು ಸ್ವೀಕರಿಸಿದಳು. ಕೈಗಳೂ ಕಾಲುಗಳೂ ಎತ್ತರವಾದ ಪರ್ವತಗಳ ಶಿಖರಗಳಂತೆ ಕಾಣಿಸಿದವು. ವಿಶಾಲವಾದ ಬಾಯಿಯಲ್ಲಿ ಉದ್ದ ಉದ್ದವಾದ ಕೋರೆಹಲ್ಲುಗಳು ಕಾಣಿಸಿದವು. ಒಣಗಿದ ಕೆರೆಯಂತೆ ಆಳವಾದ ಹೊಟ್ಟೆಯು ಕಾಣಿಸಿತು. ಅತಿ ಕಠೋರವಾದ ಧ್ವನಿಯಿಂದ ತಾಟಕಿಯೇ ಇವಳೆಂದು ಎಲ್ಲರೂ ತಿಳಿಯುವಂತಿತ್ತು.

ಅವಳ ದೇಹದಲ್ಲಿರುವ ಎರಡು ಜೀವರುಗಳಲ್ಲಿ ತಾಟಕಿಯು ಶ್ರೀಕೃಷ್ಣದೇವನಿಗೆ ವಿಷವನ್ನು ಕುಡಿಸಿದ್ದಕ್ಕಾಗಿ ನಿತ್ಯನರಕವನ್ನು ಹೊಂದಿದಳು. ಊರ್ವಶಿಯು ಮಾಡಿರುವ ಅಲ್ಪದ್ವೇಷವನ್ನು ಶ್ರೀಹರಿಯು ಮನ್ನಿಸಿದನು. ಅನಾದಿಕಾಲದಿಂದ ಅವಳು ಮಾಡಿರುವ ಭಕ್ತಿ ಯಿಂದ ಅವಳಿಗೆ ಸ್ವರ್ಗಲೋಕವನ್ನು ಕೊಟ್ಟನು.

## ಪೂತನೆಯ ದೇಹದಲ್ಲಿ ಜೀವದ್ವೈವಿಧ್ಯವಿದೆ ಎಂಬ ವಿಷಯದಲ್ಲಿ ಪುರಾಣ ವಚನ

ಪೂತನೆಯ ದೇಹದಲ್ಲಿ ತಾಟಕೆ ಮತ್ತು ಊರ್ವಶೀ ಎಂಬ ಇಬ್ಬರು ಜೀವರು ವಾಸಿಸುತ್ತಿರುವುದಾಗಿ ಹಿಂದೆ ಹೇಳಿದೆವು. ಆ ವಿಷಯದಲ್ಲಿ ಪ್ರಮಾಣವನ್ನು ಈಗ ಹೇಳುತ್ತಿರುವೆವು.

## ಜೀವದ್ವೈವಿಧ್ಯದಲ್ಲಿ ಪ್ರಮಾಣ

*ಪೂತನಾಕಂಸನರಕಶಿಶುಪಾಲಾದಿಷು ದ್ವಿಧಾ ।*
*ಜೀವಾಃ ಸಂತಸ್ತ್ವಸಂತಶ್ಚ ತತ್ರ ಬಂಧ್ವಾದಿರೂಪಿಣಃ ॥*
*ವಿಷ್ಣೋಃ ಸಂತ ಇತಿ ಜ್ಞೇಯಾ ಅಸಂತಃ ಶತ್ರುರೂಪಿಣಃ ।*
*ಶುಭಜೀವಪ್ರಕಾಶೇನ ಕದಾಚಿಚ್ಛುಭಬುದ್ಧಯಃ ।*
*ವಿಪರ್ಯಯೇನ್ಯಥಾ ಚ ಸ್ಯುಃ ಶುಭಾಸ್ತತ್ರ ಹರಿಂ ಯಯುಃ ।*
*ಅಸುರಾಶ್ಚ ತಮೋ ಘೋರಂ ಯದಿ ತತ್ರೈವ ಮಧ್ಯಮಾಃ ॥*
*ಮಧ್ಯಮಾಂ ಗತಿಮೇವಾಪುರೇಕದೇಹಗತಾ ಅಪಿ । (ಗರುಡಪುರಾಣವಚನ)*

ಪೂತನೆಯು ಶ್ರೀಕೃಷ್ಣದೇವನಿಗೆ ಮೊಲೆಯ ಹಾಲನ್ನು ಕುಡಿಸಿದಳು. ಆದ್ದರಿಂದ ತಾಯಿಗೆ ಸಮಳಾದಳು. ಕಂಸನು ಶ್ರೀಕೃಷ್ಣನ ಸೋದರಮಾವನೆನಿಸಿದ್ದರಿಂದ ಬಂಧುವೆನಿಸಿದನು. ನರಕಾಸುರನು ವರಾಹಾವತಾರಕಾಲದಲ್ಲಿ ಶ್ರೀಹರಿಯು ಪುತ್ರನಾಗಿ ಹುಟ್ಟಿದ್ದರಿಂದ ಶ್ರೀಹರಿಯು ಬಂಧುವೆನಿಸಿದನು. ಶಿಶುಪಾಲನು ಶ್ರೀಕೃಷ್ಣದೇವನ ಸೋದರ ಅತ್ತೆಯ ಮಗನಾದ್ದರಿಂದ ಬಂಧುವೆನಿಸಿದನು. ಇವರೆಲ್ಲರೂ ಶ್ರೀಕೃಷ್ಣದೇವನನ್ನು ಸಂಹರಿಸುವುದಕ್ಕೆ ಯತ್ನಿಸಿದ್ದರಿಂದ ಶತ್ರುಗಳೆನಿಸಿದರು.

ಹೀಗೆ ಒಂದೇ ದೇಹದಲ್ಲಿ ಶ್ರೀಕೃಷ್ಣದೇವನ ಬಂಧುಗಳಾದ ಜೀವರೂ ಶತ್ರುಗಳಾದ ಜೀವರೂ ವಾಸಿಸುತ್ತಿರುವುದುಂಟು. ಆದ್ದರಿಂದಲೇ ಶ್ರೀಕೃಷ್ಣದೇವನ ಬಂಧುಜೀವರ ಪ್ರಕಾರವು ಏರ್ಪಟ್ಟಾಗ ಒಳ್ಳೆಯ

ಬುದ್ಧಿಯೂ ಶತ್ರುಜೀವರ ಪ್ರಕಾರವು ಏರ್ಪಟ್ಟಾಗ ಅಶುಭಬುದ್ಧಿಯೂ ಅವರಲ್ಲಿ ಏರ್ಪಡುತ್ತಿರುತ್ತದೆ. ಅವರಲ್ಲಿ ಶ್ರೀಹರಿಗೆ ಬಂಧುಜೀವರೆಲ್ಲರೂ ಶುಭಜೀವರೆಂದು ಹೇಳಲ್ಪಡುವರು. ಶತ್ರುಜೀವರೆಲ್ಲರೂ ಅಶುಭಜೀವರೆನಿಸುವರು. ಅವರಲ್ಲಿ ಶುಭಜೀವರಿಗೆ ಮಾತ್ರ ಸದ್ಗತಿಯು ಏರ್ಪಡುತ್ತದೆ. ಅಶುಭಜೀವರಿಗೆ ಘೋರವಾದ ನಿತ್ಯನರಕವು ಏರ್ಪಡುತ್ತದೆ. ಮಧ್ಯಮಜೀವರಿಗೆ ಸದ್ಗತಿಯೂ ದುರ್ಗತಿಯೂ ಏರ್ಪಡುವುದಿಲ್ಲ. ಮಧ್ಯಮಗತಿಯೇ ಏರ್ಪಡುತ್ತದೆ. ಇದು ಗರುಡಪುರಾಣವಚನ.

ಒಬ್ಬ ಜೀವನ ದೇಹದಲ್ಲಿ ಪಿಶಾಚಾವೇಶವು ಏರ್ಪಡುತ್ತದೆ. ಆ ದೇಹದಲ್ಲಿ ಎರಡು ಜೀವರು ವಾಸಿಸುತ್ತಿರುವರು. ಆ ಎರಡು ಜೀವರಲ್ಲಿ ಒಬ್ಬ ಆ ದೇಹವು ಹುಟ್ಟುವಾಗ ಆ ದೇಹದಲ್ಲಿ ಪ್ರವೇಶಿಸಿದನು. ಅವನು ಆ ದೇಹವನ್ನು ಬಿಟ್ಟಕೂಡಲೇ ಆ ದೇಹವು ನಶಿಸುತ್ತದೆ. ಅವನು ಆ ದೇಹದ ಯಜಮಾನನೆನಿಸುವನು. ಅವನಿಗೆ ಆ ದೇಹದಲ್ಲಿ ಅಭಿಮಾನವಿರುವುದೂ ಆ ದೇಹವನ್ನು ರಕ್ಷಿಸುವುದಕ್ಕಾಗಿ ತಾನು ಮಹಾಪ್ರಯತ್ನವನ್ನು ಮಾಡುತ್ತಿರುವುದೂ ಸಹಜವಾಗಿದೆ.

ಆ ದೇಹದಲ್ಲಿ ಪ್ರವೇಶಿಸಿದ ಪಿಶಾಚವು ಆ ದೇಹದಲ್ಲಿ ವಾಸಿಸುತ್ತಿರುವ ಎರಡನೆಯದು. ಆ ಪಿಶಾಚವು ಆ ದೇಹವು ಹುಟ್ಟಿದಾಗ ಆ ದೇಹದಲ್ಲಿ ಪ್ರವೇಶಿಸಲಿಲ್ಲ. ಆ ದೇಹವನ್ನು ಬಿಟ್ಟು ಹೋದರೂ ಆ ದೇಹವು ನಶಿಸುವುದಿಲ್ಲ. ಆ ದೇಹವು ಹುಟ್ಟಿದ ಮೇಲೆ ಆ ದೇಹದಲ್ಲಿ ಪ್ರವೇಶಿಸಿ ಆ ದೇಹವು ಇರುವಾಗಲೇ ಬಿಟ್ಟು ಹೋಗುತ್ತದೆ. ಆದ್ದರಿಂದ ಆ ಪಿಶಾಚವು ಆ ದೇಹದ ಯಜಮಾನನಲ್ಲ.

ಆದರೂ ಆ ದೇಹದಲ್ಲಿ ಆ ಪಿಶಾಚವು ಅಭಿಮಾನವನ್ನು ಇಟ್ಟುಕೊಂಡಿರುತ್ತದೆ. ಆ ಅಭಿಮಾನದಿಂದಲೇ ಆ ದೇಹದಲ್ಲಿ ತಾನು ವಾಸಿಸುತ್ತಿರುವಾಗ ತನ್ನ ವಾಸಕ್ಕೆ ವಿರೋಧಿಗಳಾದ ಮಂತ್ರವಾದಿಮುಂತಾದವರ ಮಂತ್ರಗಳ ಬಾಧೆಯಿಂದ ತಪ್ಪಿಸಿಕೊಂಡು ಆ ದೇಹದಲ್ಲಿಯೇ ನಿರಂತರವಾಗಿ ವಾಸಿಸಬೇಕೆಂದು ಪ್ರಯತ್ನಮಾಡುತ್ತದೆ. ಮಂತ್ರವು ಬಲವತ್ತರವಾಗಿದ್ದು. ಆ ದೇಹದಲ್ಲಿ ವಾಸಿಸುವುದಕ್ಕೆ ಸಾಧ್ಯವಿಲ್ಲದ ಸ್ಥಿತಿಯು ಬಂದಾಗಲೇ ಆ ದೇಹವನ್ನು ಬಿಟ್ಟು ಹೋಗುತ್ತದೆ.

ಎರಡು ವಿಧವಾದ ಜೀವರು ಆ ದೇಹದಲ್ಲಿ ವಾಸಿಸುತ್ತಿದ್ದರೂ ಪಿಶಾಚದ ಬಲವು ಕಡಿಮೆಯಾದಾಗ ಆ ದೇಹದ ಯಜಮಾನನಲ್ಲಿರುವ ಸ್ವಾಭಾವಿಕವಾದ ಬುದ್ಧಿಗೆ ಯೋಗ್ಯವಾದ ವ್ಯಾಪಾರಗಳು ಆ ದೇಹದಿಂದ ನಡಿಯುತ್ತವೆ. ಪಿಶಾಚದ ಬಲವು ಅಧಿಕವಾದಾಗ ಪಿಶಾಚದ ಬುದ್ಧಿಗೆ ಯೋಗ್ಯವಾದ ವ್ಯಾಪಾರಗಳು ನಡಿಯುತ್ತವೆ.

ಪೂತನಾದಿಗಳ ದೇಹದಲ್ಲಿಯೂ ಎರಡು ವಿಧವಾದ ಜೀವರು ವಾಸಿಸುತ್ತಿರುತ್ತಾರೆ. ಅವರಲ್ಲಿ ಕೆಲವು ಜೀವರು ಅನಾದಿ ಕಾಲದಿಂದಲೂ ವಿಷ್ಣುಭಕ್ತರಾದ ಊರ್ವಶೀ ಮುಂತಾದವರು. ಅವರಿಗೆ ಬಲವು ಹೆಚ್ಚಾದಾಗ ವಿಷ್ಣುಭಕ್ತಿ ಮುಂತಾದ ಗುಣಗಳು ವ್ಯಕ್ತವಾಗುತ್ತವೆ. ಊರ್ವಶೀ ಮುಂತಾದವರು ಶಾಪದಿಂದ ಬಂದಿರುವವರು. ಅವರು ಶಾಪದಲ್ಲಿ ನಿರ್ದಿಷ್ಟವಾದ ಕಾಲದವರೆಗೆ ಮಾತ್ರ ಆ ದೇಹಗಳಲ್ಲಿ ವಾಸಿಸುವರು. ಶಾಪಕಾಲದಲ್ಲಿಯೂ ಅವರಿಗೆ ಬಲವು ಹೆಚ್ಚಾದಾಗ ಮಾತ್ರ ಅವರ ಗುಣಗಳು ವ್ಯಕ್ತವಾಗುತ್ತವೆ. ಬಲವು ಕಡಿಮೆಯಾದಾಗ ಇಲ್ಲ. ಇದು ಒಂದೇ ದೇಹದಲ್ಲಿ ಎರಡು ವಿಧರಾದ ಜೀವರು ವಾಸಿಸುವ ಕ್ರಮ. ಇದು ಮೇಲ್ಕಂಡ ಗರುಡಪುರಾಣವಚನದ ವಿವರಣೆ. ಈ ವಚನದಲ್ಲಿ ಯುಕ್ತಿಯೂ ಇದೆ. ಆ ಯುಕ್ತಿಯನ್ನು ಈಗ ಹೇಳುತ್ತೇವೆ.

# ಜೀವದ್ವೈವಿಧ್ಯದಲ್ಲಿ ಮೊದಲನೆಯ ಯುಕ್ತಿ

ಶಿಶುಪಾಲ ಮುಂತಾದವರನ್ನು ದೈತ್ಯ ಅಸುರ ಮುಂತಾದ ಹೆಸರುಗಳಿಂದ ಪ್ರಮಾಣವಚನಗಳಲ್ಲಿ ಕರೆದಿರುವುದುಂಟು. ಈ ರೀತಿಯಲ್ಲಿ ಕರೆದಿರುವುದಕ್ಕೆ ಕಾರಣವನ್ನು ಈಗ ವಿಮರ್ಶಿಸುತ್ತೇವೆ.

(೧) ಯಾರು ಶ್ರೀಹರಿಗೆ ಪ್ರಿಯರೋ ಅವರನ್ನು ಸುರರೆಂದೂ ಯಾರು ಅಪ್ರಿಯರೋ ಅವರನ್ನು ಅಸುರರು ಅಂದರೆ ಸುರರಿಗೆ ವಿರುದ್ಧರೆಂದೂ ಆದ್ದರಿಂದಲೇ ಸುರಸಾರ್ವಭೌಮನಾದ ಶ್ರೀಹರಿಗೆ ವಿರುದ್ಧರೆಂದೂ ಹೇಳಬಹುದು. ಶಿಶುಪಾಲನು ವೈಕುಂಠದ ದ್ವಾರಪಾಲಕನಾದ ಜಯನು ಅವನು ಹರಿಪ್ರಿಯನಾದ್ದರಿಂದಲೇ ಹರಿಯ ಪಟ್ಟಣವಾಗಿರುವ ವೈಕುಂಠಲೋಕದ ದ್ವಾರಪಾಲಕಸ್ಥಾನವನ್ನು ಪಡೆದಿರುವನು. ಹರಿಪ್ರಿಯನಾದ ಈ ಜಯನೇ ಶಿಶುಪಾಲನ ದೇಹದಲ್ಲಿ ವಾಸಿಸುತ್ತಿದ್ದಾನೆ ಎಂಬ ವಿಷಯದಲ್ಲಿ ಯಾರಿಗೂ ವಿವಾದವಿಲ್ಲ. ಇವನೊಬ್ಬನೇ ಶಿಶುಪಾಲನ ದೇಹದಲ್ಲಿ ವಾಸಿಸುತ್ತಿರುವುದು ನಿಜವಾಗಿದ್ದರೆ ಹರಿಪ್ರಿಯನಾದ ಈ ಶಿಶುಪಾಲನನ್ನು ಅಸುರ ಅಂದರೆ ಸುರವಿರುದ್ಧನು ಎಂದು ಹೇಳಿರುವುದು ಯುಕ್ತವಾಗುವುದಿಲ್ಲ.

ಸುರವಿರೋಧವನ್ನು ಮಾಡುವುದು ಎರಡು ವಿಧವಾಗಿದೆ. (೧)ಅನಾದಿಕಾಲದಿಂದ ಶ್ರೀಹರಿಯನ್ನು ವಿರೋಧಿಸುವುದು ಮೊದಲನೆಯ ವಿಧವಾಗಿದೆ. ಜಯ ಮುಂತಾದವರು ಅನಾದಿಕಾಲದಿಂದ ಶ್ರೀಹರಿಯನ್ನು ವಿರೋಧಿಸುತ್ತಿಲ್ಲ. ಮೂರು ಜನ್ಮಗಳಲ್ಲಿ ಮಾತ್ರ ಶ್ರೀಹರಿಯನ್ನು ವಿರೋಧಿಸುತ್ತಿರುವರು. ಆದ್ದರಿಂದ ಈ ಮೊದಲನೆಯ ಕಾರಣದಿಂದ ಶಿಶುಪಾಲನ ದೇಹದಲ್ಲಿರುವ ಜಯನನ್ನು ಅಸುರ ಎಂದು ಹೇಳುವಂತಿಲ್ಲ.

(೨) ತಾತ್ಕಾಲಿಕವಾಗಿ ಶ್ರೀಹರಿವಿರೋಧವನ್ನು ಮಾಡುವುದು ಎರಡನೆಯ ವಿಧವಾಗಿದೆ. ಜಯನು ಸನಕಾದಿ ಮುನಿಗಳ ಶಾಪದಿಂದ ಮೂರು ಜನ್ಮಗಳಲ್ಲಿ ಶ್ರೀಹರಿಯನ್ನು ವಿರೋಧಿಸಿರುವನು. ಆದ್ದರಿಂದ ಅವನನ್ನು ಅಸುರ ಎಂದು ಹೇಳಬಹುದಲ್ಲವೇ? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಈಗ ಉತ್ತರವನ್ನು ಕೊಡುತ್ತೇವೆ.

ಇಂದ್ರನು ಶ್ರೀಕೃಷ್ಣಭಕ್ತರಾದ ಗೊಲ್ಲರನ್ನು ಸಂಹರಿಸುವುದಕ್ಕಾಗಿ ಮಳೆಯನ್ನು ಸುರಿಸಿದನು. ಇದೇ ರೀತಿಯಿಂದ ರುದ್ರದೇವನಿಂದ ಆರಂಭಿಸಿ ಸಕಲ ದೇವತೆಗಳೂ ಒಂದೊಂದು ಸಂದರ್ಭದಲ್ಲಿ ಶ್ರೀಹರಿಯನ್ನು ವಿರೋಧಿಸಿರುವುದುಂಟು. ಅವರೆಲ್ಲರನ್ನೂ ಅಸುರರು ಎಂದು ಯಾರೂ ಎಲ್ಲಿಯೂ ಹೇಳಲಿಲ್ಲ. ಆದ್ದರಿಂದ "ತಾತ್ಕಾಲಿಕ ಹರಿದ್ವೇಷಿಗಳು ಅಸುರರೆಂದು ಹೇಳಲ್ಪಡುವುದಿಲ್ಲ." ಎಂದು ಸಿದ್ಧವಾಯಿತು. ಆದ್ದರಿಂದಲೇ ಈ ಎರಡನೆಯ ಕಾರಣದಿಂದ ಶಿಶುಪಾಲನ ದೇಹದಲ್ಲಿರುವ ಜಯನನ್ನು ಅಸುರ ಎಂದು ಹೇಳಲು ಸಾಧ್ಯವಾಗುವುದಿಲ್ಲವೆಂದು ಸಿದ್ಧವಾಯಿತು.

(೩) ಅಸುರಜಾತಿಯಲ್ಲಿ ಹುಟ್ಟಿದವನನ್ನು ಅಸುರ ಎಂದು ಕರೆಯಬಹುದು. ಆದರೆ ಅಸುರಜಾತಿಯಲ್ಲಿ ಈ ಶಿಶುಪಾಲನು ಹುಟ್ಟಲಿಲ್ಲ. ಕ್ಷತ್ರಿಯಜಾತಿಯಲ್ಲಿ ಹುಟ್ಟಿರುವನು. ಆದ್ದರಿಂದ ಈ ಕಾರಣದಿಂದಲೂ ಶಿಶುಪಾಲನ ದೇಹದಲ್ಲಿರುವ ಜಯನನ್ನು "ಅಸುರ" ಎಂದು ಕರೆಯುವಂತಿಲ್ಲ. ಆದ್ದರಿಂದ ಸ್ವಾಭಾವಿಕ ದ್ವೇಷ, ತಾತ್ಕಾಲಿಕದ್ವೇಷ, ಅಸುರಜಾತಿಯಲ್ಲಿ ಜನನ ಎಂಬ ಮೂರು ಕಾರಣಗಳಿಂದಲೂ ಶಿಶುಪಾಲನ ದೇಹದಲ್ಲಿರುವ ಜಯನನ್ನು ಅಸುರ ಎಂದು ಕರೆಯುವಂತಿಲ್ಲ.

(ಳ) ಶುಭಜೀವನಾದ ಜಯನು ಸನಕಾದಿಮುನಿಗಳ ಉಗ್ರವಾದ ಶಾಪದಿಂದ ಅಸುರನಾಗಿ ಹುಟ್ಟಬಹುದಲ್ಲವೇ? ಇದಕ್ಕಾಗಿ ಆ ದೇಹದಲ್ಲಿ ಅನಾದಿಕಾಲದಿಂದ ವಿಷ್ಣುವನ್ನು ದ್ವೇಷಿಸುತ್ತಿರುವ ಇನ್ನೊಬ್ಬ ಜೀವನ ಆವಶ್ಯಕತೆಯೇನು? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಉತ್ತರವನ್ನು ಕೊಡುತ್ತೇವೆ.

# ಮಿತ್ರಸಹನ ಚರಿತ್ರೆ

ಸೂರ್ಯವಂಶದಲ್ಲಿ ಮಿತ್ರಸಹ ಎಂಬ ರಾಜನು ಹುಟ್ಟಿದನು. ಅವನು ಒಮ್ಮೆ ಬೇಟೆಯಾಡುವುದಕ್ಕೆ ಕಾಡಿಗೆ ಹೋದನು. ಅಲ್ಲಿ ಎರಡು ರಾಕ್ಷಸ ಸಹೋದರರು ಜಿಂಕೆಯ ರೂಪದಿಂದ ಸಂಚರಿಸುತ್ತಿದ್ದರು. ಅವರಲ್ಲಿ ಒಬ್ಬನನ್ನು ಮಿತ್ರಸಹನು ಸಂಹರಿಸಿದನು. ಇನ್ನೊಬ್ಬನು ಅದೃಶ್ಯನಾದನು. ಅವನು ತನ್ನ ಸಹೋದರನನ್ನು ಸಂಹರಿಸಿದುದಕ್ಕಾಗಿ ಮಿತ್ರಸಹನಿಗೆ ದ್ರೋಹವನ್ನು ಮಾಡಬೇಕೆಂದು ತೀರ್ಮಾನಿಸಿದನು.

ಒಂದು ರೂಪದಿಂದ ವಸಿಷ್ಠರ ರೂಪವನ್ನು ಸ್ವೀಕರಿಸಿದನು. ಮಿತ್ರಸಹನಲ್ಲಿಗೆ ಬಂದನು. ಮನುಷ್ಯಮಾಂಸವನ್ನು ತನಗೆ ಪಕ್ವಮಾಡಿ ಬಡಿಸಬೇಕೆಂದೂ ಈ ವಿಷಯದಲ್ಲಿ ಹೆಚ್ಚಿನ ವಿಚಾರವು ಅನಾವಶ್ಯಕವೆಂದೂ ಹೇಳಿದನು. ಮಿತ್ರಸಹನೂ ಮನಸ್ಸಿಲ್ಲದೆ ಒಪ್ಪಿದನು. ಆ ರಾಕ್ಷಸನು ಇನ್ನೊಂದು ರೂಪದಿಂದ ಅಡಿಗೆಯವನ ವೇಷವನ್ನು ಧರಿಸಿದನು. ಮಿತ್ರಸಹನ ಅಡಿಗೆಮನೆಯಲ್ಲಿ ಪ್ರವೇಶಿಸಿದನು. ಮನುಷ್ಯಮಾಂಸವನ್ನು ಬೇಯಿಸಿದನು. ಆ ಮಾಂಸವನ್ನು ವಸಿಷ್ಠರಿಗೆ ಬಡಿಸಿದನು.

ಮಿತ್ರಸಹನು ಮನಃಪೂರ್ವಕವಾಗಿ ಈ ಕಾರ್ಯವನ್ನು ಮಾಡಿದನೆಂದು ವಸಿಷ್ಠರು ಭಾವಿಸಿದರು. "ಮಿತ್ರಸಹನೇ, ನನಗೆ ಮನುಷ್ಯಮಾಂಸವನ್ನು ಬೇಯಿಸಿ ಬಡಿಸುವಂತೆ ಅಡಿಗೆಯವನಿಗೆ ಹೇಳಿ ಅವನ ಮೂಲಕವಾಗಿ ಈ ಕಾರ್ಯವನ್ನು ಮಾಡಿಸಿರುವಿ. ಆದ್ದರಿಂದ ನೀನು ಮನುಷ್ಯರ ಮಾಂಸವನ್ನು ತಿನ್ನುವ ರಾಕ್ಷಸನಾಗು" ಎಂದು ಶಪಿಸಿದನು.

ಆದರೆ ವಸಿಷ್ಠರ ಉಗ್ರವಾದ ಈ ಶಾಪದಿಂದಲೂ ಯೋಗ್ಯಜೀವನಾದ ಮಿತ್ರಸಹನು ರಾಕ್ಷಸನಾಗುವಂತಿಲ್ಲ. ಅದಕ್ಕಾಗಿ ಅವನ ದೇಹದಲ್ಲಿ ಕಿಂಕರ ಎಂಬ ದೈತ್ಯನು ಪ್ರವೇಶಿಸಿದನು. ದೈತ್ಯಪ್ರವೇಶಾನಂತರದಲ್ಲಿ ಆ ಶಾಪದಿಂದ ಮಿತ್ರಸಹನು ರಾಕ್ಷಸನಾದನು. ವಸಿಷ್ಠರು ನಿಜಾಂಶವನ್ನು ತಿಳಿದರು. ಹನ್ನೆರಡು ವರ್ಷಕಾಲ ಮುಗಿದ ಕೂಡಲೇ ರಾಕ್ಷಸತ್ವವು ಹೋಗಿ ಪುನಃ ಮನುಷ್ಯತ್ವವು ಬರುವಂತೆ ಅನುಗ್ರಹಿಸಿದರು. ಅದರಂತೆ ಹನ್ನೆರಡು ವರ್ಷಗಳು ಮುಗಿದ ಕೂಡಲೇ ಕಿಂಕರ ಎಂಬ ದೈತ್ಯನು ಬಿಟ್ಟುಹೋದನು. ಮಿತ್ರಸಹನಿಗೆ ಮನುಷ್ಯತ್ವವು ಬಂತು. ಇದು ಭಾರತದದಲ್ಲಿ ಹೇಳಿರುವ ಕತೆ.

ಇದರಿಂದ ಸನಕಾದಿಮುನಿಗಳ ಉಗ್ರವಾದ ಶಾಪದಿಂದಲೂ ಜಯನು ಅಸುರನಾಗುವುದಿಲ್ಲವೆಂದೂ ಅವನಿಗೆ ಅಸುರತ್ವವು ಬರುವುದಕ್ಕಾಗಿ ಮಿತ್ರಸಹನಿಗೆ ಕಿಂಕರ ಎಂಬ ದೈತ್ಯನ ಆವೇಶದಂತೆ ಒಬ್ಬ ದೈತ್ಯನ ಆವೇಶವು ಅವನಲ್ಲಿ ಏರ್ಪಡಬೇಕೆಂದೂ ಸಿದ್ಧವಾಯಿತು.

ಮೇಲ್ಕಂಡ ವಿವರಣದಿಂದ ಶಿಶುಪಾಲನ ದೇಹದಲ್ಲಿ ಜಯನು ವಾಸಿಸಿದಂತೆ ಇನ್ನೊಂದು ಜೀವನೂ ವಾಸಿಸುತ್ತಿದ್ದಾನೆಯೆಂದು ಹೇಳಲೇಬೇಕು. ಆ ಜೀವನು ಸುರರನ್ನೂ ಸುರಸಾರ್ವಭೌಮನಾದ ಶ್ರೀಹರಿಯನ್ನೂ

ಅನಾದಿಕಾಲದಿಂದ ದ್ವೇಷಿಸುತ್ತಿರುವ ಜೀವನೆಂದೂ ಅವನು ಆ ದೇಹದಲ್ಲಿ ವಾಸಿಸುತ್ತಿರುವುದರಿಂದಲೇ ಶಿಶುಪಾಲನಿಗೆ ಅಸುರ ಎಂಬ ಹೆಸರು ಬಂದಿರುವುದೆಂದೂ ಹೇಳಲೇ ಬೇಕು. ಇದು ಮೊದಲನೆಯ ಯುಕ್ತಿಯಾಗಿದೆ.

## ಎರಡನೆಯ ಯುಕ್ತಿ

ಶಿಶುಪಾಲನ ದೇಹದಲ್ಲಿ ಜಯನು ಇದ್ದಾನೆ ಎಂದು ಸರ್ವರೂ ಅಂಗೀಕರಿಸುತ್ತೇವೆ. ಆ ಜಯನು ವಿಷ್ಣುಭಕ್ತನಾದುದರಿಂದ ವಿಷ್ಣುವನ್ನು ಎಂದೆಂದಿಗೂ ದ್ವೇಷಿಸುವುದಿಲ್ಲ. ಶಿಶುಪಾಲನು ತೊದಲು ಮಾತುಗಳನ್ನು ಆಡುವುದಕ್ಕೆ ಆರಂಭಿಸಿದ ದಿನದಿಂದ ಸಾಯುವವರೆಗೆ ವಿಷ್ಣುವನ್ನು ದ್ವೇಷಿಸಿರುವ ವಿಷಯವು ಭಾಗವತಾದಿ ಗ್ರಂಥಗಳನ್ನು ಪರಿಶೀಲಿಸಿದವರಿಗೆ ಸ್ಪಷ್ಟವಾಗಿ ತಿಳಿಯುತ್ತದೆ. ಈ ನಿರಂತರ ದ್ವೇಷವನ್ನು ಶಿಶುಪಾಲನ ದೇಹದಲ್ಲಿದ್ದು ಮಾಡುವುದಕ್ಕಾಗಿ ವಿಷ್ಣುವನ್ನು ಅನಾದಿಕಾಲದಿಂದಲೂ ದ್ವೇಷಿಸುತ್ತಿರುವ ಇನ್ನೊಬ್ಬ ಜೀವನು ಅದೇ ದೇಹದಲ್ಲಿ ಇರುವುದಾಗಿ ಅಂಗೀಕರಿಸಲೇಬೇಕು. ಹಾಗೆ ಅಂಗೀಕರಿಸದಿದ್ದರೆ, ಕಾರಣವೇ ಇಲ್ಲದೆ ನಿರಂತರದ್ವೇಷರೂಪವಾದ ಫಲವು ಆ ದೇಹದಲ್ಲಿ ಏರ್ಪಡುತ್ತಿರುವುದಾಗಿ ಹೇಳಲೇಬೇಕು. ಇದು ಅತಿಪ್ರಬಲವಾದ ದೋಷವೆನಿಸುತ್ತದೆ. ಇದರಿಂದ ಶಿಶುಪಾಲನ ದೇಹದಲ್ಲಿ ಜಯ ಎಂಬ ಶುಭಜೀವನೂ ನಿರಂತರವಾಗಿ ವಿಷ್ಣುವನ್ನು ದ್ವೇಷಿಸುತ್ತಿರುವ ಇನ್ನೊಬ್ಬ ಜೀವನೂ ವಾಸಿಸುತ್ತಿರುವುದಾಗಿ ಸಿದ್ಧವಾಗುತ್ತದೆ.

## ಮೂರನೆಯ ಯುಕ್ತಿ

ಶಿಶುಪಾಲನ ದೇಹದಲ್ಲಿ ಭಗವದ್ಭಕ್ತನಾದ ಜಯನೇ ಹೊರತು ಬೇರೆ ದೈತ್ಯಜೀವನಿಲ್ಲ ಎಂದು ಹೇಳುವುದಾದರೆ ಆ ದೇಹದಲ್ಲಿದ್ದು ಶ್ರೀವಿಷ್ಣುವನ್ನು ದ್ವೇಷಿಸುತ್ತಿದ್ದವನು ಯಾರು? ಎಂದು ವಿಮರ್ಶಿಸಬೇಕು. ಜಯನೇ ಆಗಿದ್ದರೆ ಆ ಜಯನಲ್ಲಿ ಅನಾದಿಕಾಲದಿಂದ ಮಾಡುತ್ತಿರುವ ಅಪಾರ ಭಕ್ತಿಯೂ ಮೂರು ಜನ್ಮಗಳಲ್ಲಿ ಮಾಡಿದ ಅಲ್ಪವಾದ ವಿಷ್ಣುದ್ವೇಷವೂ ಇರುತ್ತದೆ. ಈ ದ್ವೇಷ ಮತ್ತು ಭಕ್ತಿಗಳಲ್ಲಿ ಪರಿಮಿತವಾದ ದ್ವೇಷವನ್ನು ಮನ್ನಿಸಿ ಅಪರಿಮಿತವಾದ ಅನಾದಿಭಕ್ತಿಯಿಂದಲೇ ಕರುಣಾಳುವಾದ ಶ್ರೀಹರಿಯು ಅವನಿಗೆ ಸದ್ಗತಿಯನ್ನು ಕೊಟ್ಟಿರುವನು ಎಂದು ಹೇಳುವುದೇ ನ್ಯಾಯವಾಗಿದೆ. ಆದ್ದರಿಂದ ಜಯನಲ್ಲಿರುವ ಭಕ್ತಿಯೇ ಮುಕ್ತಿಗೆ ಕಾರಣವಾಯಿತೆಂದೂ ದ್ವೇಷವು ಕಾರಣವಾಗಲಿಲ್ಲವೆಂದೂ ಸಿದ್ಧವಾಯಿತು.

## ಪೂತನಾದಿ ದೇಹಗಳಲ್ಲಿ ದ್ವಿವಿಧಜೀವರು ಇದ್ದಾರೆಂದು ಸ್ಪಷ್ಟವಾಗಿ ಹೇಳದಿರಲು ಕಾರಣ

ಶ್ರೀವೇದವ್ಯಾಸರು ಭಾಗವತಗ್ರಂಥದಲ್ಲಿ ಪೂತನಾದಿದೇಹಗಳಲ್ಲಿ ಎರಡು ಜೀವರು ಇರುವಂತೆ ಸ್ಪಷ್ಟವಾಗಿ ಹೇಳಲಿಲ್ಲ. ಇದಕ್ಕೆ ಕಾರಣವನ್ನು ಈಗ ಹೇಳುತ್ತೇವೆ.

**" ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ । ಮಾಮಪ್ರಾಪ್ಯೈವ ಕೌಂತೇಯ ತತೋ**

**ಯಾಂತ್ಯಧಮಾಂ ಗತಿಂ"** ಮುಂತಾದ ಪ್ರಮಾಣಗ್ರಂಥಗಳಲ್ಲಿ ಆಸುರೀಯೋನಿ ಅಂಧಂತಮಸ್ಸು ಮುಂತಾದ ಹೆಸರುಗಳಿಂದ ಕರೆಯಲ್ಪಡುವ ಲೋಕಗಳು ಇರುವುದಾಗಿ ಅತಿ ಸ್ಪಷ್ಟವಾಗಿ ವರ್ಣಿಸಲ್ಪಡುತ್ತವೆ. ಪ್ರಮಾಣಗಳಿಂದ ವರ್ಣಿಸಲ್ಪಟ್ಟ ಈ ಲೋಕಗಳು ಇಲ್ಲವೆಂದು ಹೇಳುವಂತಿಲ್ಲ.

ಈ ಲೋಕಗಳಲ್ಲಿ ಯಾರಾದರೂ ಜೀವರು ವಾಸಿಸುತ್ತಿರುವುದಾಗಿ ಹೇಳಲೇಬೇಕು. ಹಾಗೆ ಹೇಳದಿದ್ದರೆ ಆ ಭೂಪ್ರದೇಶಗಳನ್ನು ಲೋಕಗಳೆಂದು ಹೇಳುವಂತಿಲ್ಲ. ಜನರ ಸಮೂಹದಿಂದ ಯುಕ್ತವಾದ ಪ್ರದೇಶವೇ ಲೋಕವಲ್ಲವೇ? ಆ ಲೋಕಗಳಿಗೆ ಹೋಗುವ ಜೀವರು ಯಾರು? ಎಂದು ವಿಮರ್ಶಿಸೋಣ.

ವಿಷ್ಣುಭಕ್ತರು ವಿಷ್ಣುಲೋಕಗಳಿಗೆ ಹೋಗುತ್ತಾರೆ. ಆದ್ದರಿಂದ ಅವರು ಅಂಧಂತಮಸ್ಸಿಗೆ ಹೋಗುವಂತಿಲ್ಲ. ವಿಷ್ಣುದ್ವೇಷವನ್ನು ಬಿಟ್ಟು ಇತರ ಪಾಪಗಳನ್ನು ಮಾಡಿದವರು ಯಮದೇವನ ಅಧೀನವಾಗಿರುವ ಅನಿತ್ಯವಾದ ಕುಂಭೀಪಾಕ ಮುಂತಾದ ಲೋಕಗಳಿಗೆ ಹೋಗುತ್ತಿರುವುದಾಗಿ ಪ್ರಮಾಣ ಗ್ರಂಥಗಳು ತಿಳಿಸುತ್ತಿವೆ. ಆದ್ದರಿಂದ ವಿಷ್ಣುದ್ವೇಷಕ್ಕಿಂತ ಭಿನ್ನವಾದ ಪಾಪಗಳನ್ನು ಮಾಡಿದವರು ಅಂಧಂತಮಸ್ಸು ಮುಂತಾದ ನಿತ್ಯನರಕಗಳಿಗೆ ಹೋಗವಂತಿಲ್ಲ.

**ಶ್ರೀಮಹಾವಿಷ್ಣುವಿನ ದ್ವೇಷವನ್ನು ಮಾಡದೇ ಇತರಪಾಪಗಳನ್ನು ಮಾಡಿದವರು ಎಂದಿಗೂ ನಿತ್ಯನರಕಕ್ಕೆ (ಅಂಧಂತಮಸ್ಸಿಗೆ) ಹೋಗುವುದಿಲ್ಲ. ನಿತ್ಯನರಕಕ್ಕೆ ವಿಷ್ಣುದ್ವೇಷಿಗಳು ಮಾತ್ರವೇ ಹೋಗುತ್ತಾರೆ.** ಎಂದು ಹೇಳಲೀ ಬೇಕು. ಇಲ್ಲವಾದರೆ ಅಂದರೆ "ಮಹಾವಿಷ್ಣುವನ್ನು ದ್ವೇಷಿಸುವವರು ಮಾತ್ರವೇ ನಿತ್ಯನರಕದಲ್ಲಿ ಇರುತ್ತಾರೆ" ಎಂದು ಹೇಳದಿದ್ದರೆ ಆ ನಿತ್ಯನರಕವು "ಲೋಕಗಳು" ಅಂದರೆ "ಜನಸಂದಣಿಯಪ್ರದೇಶಗಳು" ಎಂದು ಹೇಳಲಾಗುವದಿಲ್ಲ. "ಜನರೇ ಇಲ್ಲದ ಭೂಪ್ರದೇಶಗಳು" ಎಂದು ಹೇಳಬೇಕಾಗುತ್ತದೆ. ಇದು ಸಾಧ್ಯವಿಲ್ಲ. (ಲೋಕಗಳು ಅಂದರೆ ಜನರು ಇದ್ದೇಇರಬೇಕು) ಆದ್ದರಿಂದ ಅಂಧಂತಮಸ್ಸು ಎಂಬ ಪ್ರಮಾಣಸಿದ್ಧವಾದ ಈ ನಿತ್ಯನರಕದ ಲೋಕಗಳಲ್ಲಿ ವಿಷ್ಣುಭಕ್ತರು ಇರಲು ಸಾಧ್ಯವೇ ಇಲ್ಲ. ವಿಷ್ಣುವನ್ನು ದ್ವೇಷಿಸದೇ ಬೇರೆ ಪಾಪಗಳನ್ನು ಮಾಡಿದವರು ಸಹ ಇರುವುದಿಲ್ಲ. ಹಾಗಾದರೆ ಯಾರು ಇರುತ್ತಾರೆ? ಶ್ರೀಮಹಾವಿಷ್ಣುವಿನ ದ್ವೇಷಿಗಳೇ ಈ ಅಂಧಂತಮಸ್ಸಿನಲ್ಲಿ ಇರುತ್ತಾರೆ ಎಂದು ಹೇಳಲೇಬೇಕು. ಹೀಗಾದಾಗ ಈ ನಿತ್ಯನರಕವನ್ನು "ಲೋಕ" ಎಂದು ಕರೆಯಬಹುದು.

ಅಂಧಂತಮಸ್ಸಿಗೆ ಹೋಗುವ ಅರ್ಹತೆಯುಳ್ಳ ಜೀವರಿಗೆ ಅವರವರ ಯೋಗ್ಯತಾನುಸಾರವಾಗಿ ದ್ವೇಷವು ಪೂರ್ಣವಾಗಬೇಕು. ಆಮೇಲೆಯೇ ನಿತ್ಯನರಕಗಳಿಗೆ ಹೋಗುವುದಾಗಿ ಹೇಳಲೇಬೇಕು. ಈ ಶ್ರೀಹರಿದ್ವೇಷವನ್ನು ತಮೋಯೋಗ್ಯರಲ್ಲಿ ಹೆಚ್ಚಿಸುವುದಕ್ಕಾಗಿ ಪುರಾಣಕರ್ತರಾದ ಶ್ರೀವೇದವ್ಯಾಸರು ತಮ್ಮಿಂದ ರಚಿತವಾದ ಪುರಾಣಗಳಲ್ಲಿ ಮುಕ್ತಿಯೋಗ್ಯರಿಗಾಗಿ ಶ್ರೀವಿಷ್ಣುಭಕ್ತಿಯಲ್ಲಿ ಅಭಿರುಚಿಯನ್ನು ಹುಟ್ಟಿಸುವ ಮಾತುಗಳನ್ನು ಹೇಳಿದಂತೆ ತಮೋಯೋಗ್ಯರಿಗಾಗಿ ಶ್ರೀವಿಷ್ಣುದ್ವೇಷದಲ್ಲಿಯೂಅಭಿರುಚಿಯನ್ನು ಹುಟ್ಟಿಸುವ ಮಾತುಗಳನ್ನೂ ಹೇಳಲೇಬೇಕು.

ಈ ಎರಡು ವಿಧವಾದ ಪರಸ್ಪರ ವಿರುದ್ಧವಾದ ಮಾತುಗಳಲ್ಲಿ ಶ್ರೀವಿಷ್ಣುಭಕ್ತಿಯನ್ನು ಹೊಗಳುವ ಮಾತುಗಳು ಅತ್ಯಂತ ಪ್ರಬಲವಾದವುಗಳು ಮತ್ತು ಬೇರೆ ಅರ್ಥವನ್ನು ಹೇಳುವುದಕ್ಕೆ ಅವಕಾಶವಿಲ್ಲದವುಗಳು. ಅವುಗಳನ್ನು ವಿಮರ್ಶಿಸಿದ ಉತ್ತಮಜೀವರು ಆ ವಾಕ್ಯಗಳಿಂದ ವಿಷ್ಣುಭಕ್ತಿಯ ಮಹತ್ವವನ್ನು ತಿಳಿದು ವಿಷ್ಣುಭಕ್ತಿಯನ್ನು ಹೆಚ್ಚಿಸಿಕೊಂಡು ವಿಷ್ಣುಲೋಕಗಳಿಗೆ ಹೋಗುತ್ತಾರೆ.

ವಿಷ್ಣುದ್ವೇಷವನ್ನು ಹೊಗಳುವ ಮಾತುಗಳು ಅತ್ಯಂತ ದುರ್ಬಲವಾದವುಗಳು ಮತ್ತು ವಿಷ್ಣುಭಕ್ತಿಯನ್ನು ಹೆಚ್ಚಿಸುವುದಕ್ಕೆ ಅನುಕೂಲವಾದ ಬೇರೆ ವಿಧವಾದ ಅರ್ಥವನ್ನು ಹೇಳುವುದಕ್ಕೆ ಅವಕಾಶವುಳ್ಳವುಗಳು. ಆ ವಾಕ್ಯಗಳಿಗೆ ಬೇರೆ ವಿಧವಾದ ಅರ್ಥವನ್ನು ಬಿಟ್ಟು ವಿಷ್ಣುದ್ವೇಷವನ್ನು ಹೆಚ್ಚಿಸುವುದಕ್ಕೆ ಅನುಕೂಲವಾದ ಅರ್ಥವನ್ನೇ ತಮೋಯೋಗ್ಯಜೀವರು ಸ್ವೀಕರಿಸುವರು. ಇದರಿಂದ ವಿಷ್ಣುದ್ವೇಷವನ್ನು ಹೆಚ್ಚಿಸಿಕೊಂಡ ತಮೋಯೋಗ್ಯಜೀವರು ವಿಷ್ಣುದ್ವೇಷವನ್ನು ತಮ್ಮ ತಮ್ಮ ಯೋಗ್ಯತೆಯನ್ನು ಅನುಸರಿಸಿ ಪೂರ್ಣವಾಗುವಂತೆ ಮಾಡಿಕೊಂಡು ನಿತ್ಯನರಕಲೋಕಗಳಲ್ಲಿ ಹೋಗಿ ಬೀಳುವರು.

ಶ್ರೀವೇದವ್ಯಾಸರು ತಮೋಯೋಗ್ಯಜೀವರಿಗೆ ವಿಷ್ಣುದ್ವೇಷವನ್ನು ಹೆಚ್ಚಿಸುವುದಕ್ಕಾಗಿಯೇ "ಪೂತನೆಯ ದೇಹದಲ್ಲಿರುವ ಊರ್ವಶಿಯು ಸದ್ಗತಿಯನ್ನು ಹೊಂದಿದಳು. ತಾಟಕಿಯು ನಿತ್ಯನರಕವನ್ನು ಹೊಂದಿದಳು." ಎಂದು ಸ್ಪಷ್ಟವಾಗಿ ಹೇಳಲಿಲ್ಲ. "ಪೂತನೆಯು ಸದ್ಗತಿಯನ್ನು ಹೊಂದಿದಳು." ಎಂದು ಎರಡು ಅರ್ಥವನ್ನು ತಿಳಿಸುವ ಮಾತುಗಳನ್ನೇ ಹೇಳಿರುವರು. ಆ ಮಾತುಗಳಿಗೆ "ಪೂತನಾ ಎಂಬ ವಿಷ್ಣುದ್ವೇಷಿಯಾದ ರಾಕ್ಷಸಿಯು ಸದ್ಗತಿಯನ್ನು ಹೊಂದಿದಳು" ಎಂಬ ಅರ್ಥವು ಮೇಲೆ ತಿಳಿಯುತ್ತದೆ. "ಪೂತನಾದೇಹದಲ್ಲಿರುವ ಊರ್ವಶಿಯು ಸದ್ಗತಿಯನ್ನು ಪಡೆದಳು" ಎಂಬ ಅರ್ಥವು ವಿಮರ್ಶಿಸಿದ ಮೇಲೆ ತಿಳಿಯುತ್ತದೆ.

ಈ ಎರಡು ಅರ್ಥಗಳಲ್ಲಿ ವಿಮರ್ಶನದಿಂದ ತಿಳಿಯುವ ಅರ್ಥವನ್ನು ಯೋಗ್ಯಜೀವರೂ ಮೇಲೆ ಮೇಲೆ ತಿಳಿಯುವ ಅರ್ಥವನ್ನು ಅಯೋಗ್ಯಜೀವರೂ ತಿಳಿಯುತ್ತಿರುವುದು ಸಹಜವಾಗಿದೆ.

ಆದ್ದರಿಂದ ಅಯೋಗ್ಯಜೀವರು "ವಿಷ್ಣುದ್ವೇಷಿಯಾದ ಪೂತನೆಯು ಸದ್ಗತಿಯನ್ನು ಪಡೆದಳು" ಎಂಬ ಅರ್ಥವನ್ನು ತಿಳಿದು ಪೂತನೆಯಂತೆ ತಾವೂ ಅತಿಸುಲಭವಾದ ವಿಷ್ಣುದ್ವೇಷವನ್ನೇ ಮಾಡಬೇಕೆಂದು ತಿಳಿದು ವಿಷ್ಣುದ್ವೇಷವನ್ನೇ ಹೆಚ್ಚಿಸಿಕೊಳ್ಳುವುದಕ್ಕೂ ವಿಷ್ಣುದ್ವೇಷದ ಪೂರ್ಣತೆಯನ್ನು ಪಡೆಯುವುದಕ್ಕೂ ಆ ಪೂರ್ಣತೆಯಿಂದ ನಿತ್ಯನರಕದಲ್ಲಿ ಹೋಗಿ ಬೀಳುವುದಕ್ಕೂ ಅದರಿಂದ ನಿತ್ಯನರಕವು ಖಾಲಿಯಾಗದಂತೆ ಮಾಡುವುದಕ್ಕೂ ಅನುಕೂಲವಾಗುತ್ತದೆ. ಅದಕ್ಕಾಗಿಯೇ ಶ್ರೀವೇದವ್ಯಾಸರು ಈ ವಿಧವಾಗಿ ಬರೆದಿರುವರು.

## ವಿಷ್ಣುದ್ವೇಷವು ಮುಕ್ತಿಗೆ ಸಾಧನವಲ್ಲ

**ಯಾತುಧಾನ್ಯಪಿ ಸಾ ಸ್ವರ್ಗಮವಾಪ ಜನನೀಗತಿಮ್ ।**
**ಕೃಷ್ಣಭುಕ್ತಸ್ತನಕ್ಷೀರಾಃ ಕಿಯು ಗಾವೋ ನು ಮಾತರಃ ॥**

" ಪೂತನೆಯು ಕೃಷ್ಣದ್ವೇಷಿಯಾದರೂ. ಶ್ರೀಕೃಷ್ಣನತಾಯಿಯಂತೆ ಅವನಿಗೆ ಮೊಲೆಯ ಹಾಲನ್ನು ಕುಡಿಸಿದಳು. ಈ ಪುಣ್ಯಪ್ರಭಾವದಿಂದ ಸ್ವರ್ಗವನ್ನು ಪಡೆದಳು. ಹೀಗಿರುವಾಗ ಶ್ರೀಕೃಷ್ಣದೇವನಿಗೆ ಪ್ರೇಮದಿಂದ ಹಾಲನ್ನು ಕುಡಿಸಿದ ತಾಯಂದಿರಿಗೂ ಗೋವುಗಳಿಗೂ ಸದ್ಗತಿಯಾಯಿತೆಂದು ಹೇಳಬೇಕಾದ್ದೇನಿದೆ" ಎಂದು ಈ ಶ್ಲೋಕಕ್ಕೆ ಮೇಲಿನ ಅರ್ಥವು ತಿಳಿಯುತ್ತದೆ. ಆದ್ದರಿಂದ "ವಿಷ್ಣುದ್ವೇಷವೂ ಮುಕ್ತಿಗೆ ಸಾಧನವಾಗುತ್ತದೆ." ಎಂದು ಈ ಭಾಗವತವಾಕ್ಯವು ತಿಳಿಸುತ್ತಿರುವುದಾಗಿ ಕೆಲವರು ಅರ್ಥವನ್ನು ಹೇಳುತ್ತಾರೆ. ಶ್ರೀಮಧ್ವಾಚಾರ್ಯರು ಆ ರೀತಿಯಾದ ಅರ್ಥವನ್ನು ಹೇಳುವುದಿಲ್ಲ.

"ಪೂತನೆಯ ದೇಹದಲ್ಲಿ ವಾಸಿಸುತ್ತಿರುವ ಊರ್ವಶೀ ಎಂಬ ವಿಷ್ಣುಭಕ್ತಳು ಅದೇ ದೇಹದಲ್ಲಿ ವಾಸಿಸುತ್ತಿರುವ ತಾಟಕಿಯೆಂಬ ವಿಷ್ಣುದ್ವೇಷಿಯ ಸಹವಾಸದಿಂದ ಶ್ರೀಕೃಷ್ಣದೇವನನ್ನು ಕೊಲ್ಲುವುದಕ್ಕಾಗಿ ಮೊಲೆಹಾಲನ್ನು ಕುಡಿಸಿದಳು. ಕರುಣಾಸಮುದ್ರನಾದ ಶ್ರೀಕೃಷ್ಣದೇವನು ಅವಳ ಅಪರಾಧವನ್ನು ಮನ್ನಿಸಿ ಅವಳಿಗೆ ಸದ್ಗತಿಯನ್ನು ಕೊಟ್ಟನು. ಹೀಗಿರುವಾಗ ಸ್ವಲ್ಪವೂ ದ್ವೇಷವನ್ನು ಮಾಡದೆ ಪ್ರೇಮದಿಂದ ಮೊಲೆಹಾಲನ್ನು ಕುಡಿಸಿದ ಗೋವುಗಳಿಗೂ ತಾಯಂದಿರಿಗೂ ಸದ್ಗತಿಯನ್ನು ಕೊಡುವುದಿಲ್ಲವೇ?" ಎಂದು ಶ್ರೀಮಧ್ವಾಚಾರ್ಯರು ಇನ್ನೊಂದು ವಿಧವಾದ ಅರ್ಥವನ್ನು ಈ ವಾಕ್ಯಕ್ಕೆ ಹೇಳುತ್ತಿರುವರು. ಶ್ರೀಹರಿಯ ದ್ವೇಷವು ಮುಕ್ತಿಗೆ ಸಾಧನವಲ್ಲ. ಆದ್ದರಿಂದಲೇ ಶ್ರೀಮಧ್ವಾಚಾರ್ಯರು ಮೇಲ್ಕಂಡ ಎರಡನೆಯ ಅರ್ಥವನ್ನು ಹೇಳಿರುವರು. ಈ ವಿಷಯವನ್ನು ಈಗ ಸ್ಪಷ್ಟಪಡಿಸುವೆವು.

(೧)ಶ್ರೀಹರಿಯು ಮತ್ಸ್ಯ ಕೂರ್ಮ ಮುಂತಾದ ಅನಂತಾವತಾರಗಳನ್ನು ಸ್ವೀಕರಿಸಿರುವನು ಒಂದೊಂದು ಅವತಾರಗಳಲ್ಲಿಯೂ ತನ್ನನ್ನು ದ್ವೇಷಿಸುತ್ತಿರುವ ದೈತ್ಯರನ್ನು ಜಯಿಸಿ ಅವರ ಸಂಪತ್ತುಗಳನ್ನು ಅಪಹರಿಸುತ್ತಿರುವ ವಿಷಯವೂ ಎಲ್ಲರಿಗೂ ತಿಳಿದಿದೆ. ಅವರಿಂದ ಅಪಹರಿಸಿದ ಸಂಪತ್ತುಗಳನ್ನೆಲ್ಲಾ ತನ್ನ ಭಕ್ತರಾದ ಇಂದ್ರ ಮುಂತಾದ ದೇವತೆಗಳೇ  ಮುಂತಾದವರಿಗೆ ಕೊಡುತ್ತಿರುವುದೂ ಸರ್ವರಿಗೂ ತಿಳಿದಿದೆ. ಒಂದು ಅವತಾರದಲ್ಲಿಯೂ ದೇವತೆಗಳನ್ನು ಜಯಿಸಿ ಅವರ ಸಂಪತ್ತುಗಳನ್ನು ದೈತ್ಯರಿಗೆ ಕೊಟ್ಟಿಲ್ಲವೆಂಬ ವಿಷಯವೂ ಎಲ್ಲರಿಗೂ ಗೊತ್ತಿದೆ. ಶ್ರೀಹರಿಯು ತನ್ನ ಭಕ್ತರನ್ನು ಅನುಗ್ರಹಿಸುತ್ತಿರುವಂತೆ ತನ್ನ ದ್ವೇಷಿಗಳನ್ನೂ ಅನುಗ್ರಹಿಸುತ್ತಿರುವುದು ಸತ್ಯವಾಗಿದ್ದರೆ ಈ ವಿಧವಾದ ವೈಷಮ್ಯವು ಯುಕ್ತವಾಗುವುದಿಲ್ಲ.

(೨) "ಶ್ರೀಹರಿದ್ವೇಷಿಗೂ ಮುಕ್ತಿ ಸಿಗುತ್ತದೆ" ಎಂಬ ಅಭಿಪ್ರಾಯವು ಶ್ರೀಶುಕಾಚಾರ್ಯರಿಗೆ ಸಂಮತವಾಗಿದ್ದರೆ, ಒಬ್ಬೊಬ್ಬ ದೈತ್ಯನನ್ನು ಶ್ರೀಕೃಷ್ಣದೇವನು ಸಂಹರಿಸುವಾಗಲೂ ಆ ಒಬ್ಬೊಬ್ಬ ದೈತ್ಯನಿಗೆ ಪೂತನೆಯಂತೆ ಸದ್ಗತಿಯು ಏರ್ಪಟ್ಟಿದ್ದಾಗಿ ಹೇಳಬೇಕಾಗಿತ್ತು. ಆದರೆ ಹಾಗೆ ಹೇಳಲಿಲ್ಲ. ಅದು ಮಾತ್ರವಲ್ಲ. ಅನೇಕ ಪ್ರಮಾಣಗಳಿಂದ ಶ್ರೀವಿಷ್ಣುದ್ವೇಷವು ಮುಕ್ತಿಗೆ ಸಾಧನವಲ್ಲವೆಂದೂ ನಿತ್ಯನರಕಗಳಿಗೆ ಸಾಧನವೆಂದೂ ಸ್ಪಷ್ಟವಾಗಿ ಸಿದ್ಧವಾಗುತ್ತದೆ. ಆ ಪ್ರಮಾಣವಚನಗಳನ್ನು ಕ್ರಮವಾಗಿ ಹೇಳಿ ಆ ಪ್ರಮಾಣಗಳಿಗೆ ಅರ್ಥವನ್ನು ಹೇಳುತ್ತೇವೆ.

**ಯೇಽನ್ಯೇಽರವಿಂದಾಕ್ಷ ವಿಮುಕ್ತ ಮಾನಿನಸ್ತ್ವಯ್ಯಸ್ತಭಾವಾದವಿಶುದ್ಧಬುದ್ಧಯಃ।**
**ಆರುಹ್ಯ ಕೃಚ್ಛ್ರೇಣ ಪರಂ ಪದಂ ತತಃ ಪತಂತ್ಯಧೋಽನಾದೃತಯುಷ್ಮದಂಘ್ರಯಃ ॥**

"ಕೆಲವರು ಮುಕ್ತಿಯನ್ನು ಪಡೆದಂತೆ ಭಾವಿಸುತ್ತಿರುವರು. ಆದರೆ ಅವರಿಗೆ ನಿನ್ನಲ್ಲಿ ಭಕ್ತಿಯಿಲ್ಲ. ಆದ್ದರಿಂದಲೇ ಅವರ ಬುದ್ಧಿಯು ಶುದ್ಧವಲ್ಲ. ಅಂತಹ ಜನರು ಬಹು ಪ್ರಯಾಸದಿಂದ ಮೇಲುಮೇಲಿನ ಸ್ಥಾನಗಳನ್ನು ಪಡೆದರೂ ಕೊನೆಗೆ ನಿನ್ನ ಪಾದಗಳನ್ನು ಆದರದಿಂದ ಸೇವಿಸದೇ ತಿರಸ್ಕರಿಸಿರುವುದರಿಂದ ಕೆಳಗೆ ಬೀಳುವರು."

(ದೇವಕೀದೇವಿಯ ಗರ್ಭದಲ್ಲಿ ಶ್ರೀಕೃಷ್ಣದೇವನು ವಾಸಿಸುತ್ತಿರುವಾಗ ಬ್ರಹ್ಮದೇವನೂ ರುದ್ರದೇವನೂ ಸ್ತುತಿಸುತ್ತಿರುವ ಆ ಸ್ತುತಿಯಲ್ಲಿರುವ ವಚನವಿದು) ದ್ವೇಷದಿಂದ  ಮುಕ್ತಿಯು ಸಿಗುವುದು ಸಂಮತವಾಗಿದ್ದರೆ ಈ ವಾಕ್ಯದಲ್ಲಿ ದ್ವೇಷಿಗಳಿಗೆ ಅಧೋಗತಿಯಾಗುವುದಾಗಿ ಹೇಳುತ್ತಿದ್ದಿಲ್ಲ.

**(೨) ಜಗಮ ಕೃಚ್ಛ್ರಾನ್ನಿರ್ಋತೇರಥಕ್ಷಯಂ ಪುಷ್ಪೈಃ ಕಿರಂತೋ ಹರಿಮೀಡಿರೇ ಸುರಾಃ।**

" ಅರಿಷ್ಟಾಸುರನು ಸುಖಲೇಶವೂ ಇಲ್ಲದಿರುವ ನಿತ್ಯನರಕವನ್ನು ಹೊಂದಿದನು. ದೇವತೆಗಳೆಲ್ಲರೂ ಶ್ರೀಹರಿಯ ಮೇಲೆ ಪುಷ್ಪದ ಮಳೆಯನ್ನು ಸುರಿಸುತ್ತಾ ಅವನನ್ನು ಸ್ತುತಿಸಿದರು."

(ಅರಿಷ್ಟಾಸುರನನ್ನು ಶ್ರೀಕೃಷ್ಣದೇವನು ಸಂಹರಿಸಿದನು. ಆ ಸಮಯದಲ್ಲಿ ಶ್ರೀಶುಕಾಚಾರ್ಯರು ಹೇಳಿದ ಮಾತು ಇದು) ಈ ವಾಕ್ಯದಲ್ಲಿಯೂ ಶ್ರೀಕೃಷ್ಣದೇವನನ್ನು ಸಂಹರಿಸುವುದಕ್ಕಾಗಿ ಬಂದ ಅರಿಷ್ಟಾಸುರನಿಗೆ ಸದ್ಗತಿಯಾದಂತೆ ಹೇಳಬೇಕಾಗಿತ್ತು.

**(೩) ಅಂಬಷ್ಠಾಂಬಷ್ಠ ನೌ ಮಾರ್ಗಂ ದೇಹ್ಯಪಕ್ರಮ ಮಾ ಚಿರಮ್।**
**ನ ಚೇತ್ಸಕುಂಜರಂ ತ್ವಾSದ್ಯ ನಯಾಮಿ ಯಮಸಾದನಮ್॥**

" ಎಲೋ ಮಾವಟಿಗನೇ ಮಾವಟಿಗನೇ, ನನ್ನ ಅಣ್ಣನಾದ ಬಲರಾಮನಿಗೂ ನನಗೂ ಹಾದಿಯನ್ನು ಬಿಡು. ಶೀಘ್ರದಲ್ಲಿ ಆ ಕಡೆಗೆ ಹೋಗು. ಹಾಗೆ ಮಾಡದಿದ್ದರೆ ನಿನ್ನನ್ನೂ ನಿನ್ನ ಆನೆಯನ್ನೂ ಯಮಲೋಕಕ್ಕೆ ಕಳುಹಿಸುವೆನು.

(ಆನೆಯ ಮಾವಟಿಗನು ಕುವಲಯಾಪೀಡ ಎಂಬ ಆನೆಯನ್ನು ಶ್ರೀಕೃಷ್ಣದೇವನನ್ನು ಸಂಹರಿಸುವುದಕ್ಕಾಗಿ ರಂಗಸ್ಥಳದ ಮುಂದೆ ನಿಲ್ಲಿಸಿಕೊಂಡು ಕಾದಿರುವನು. ಅವನನ್ನು ನೋಡಿ ಶ್ರೀಕೃಷ್ಣದೇವನು ಹೇಳುವ ಮಾತು ಇದು.) ಈ ವಾಕ್ಯದಲ್ಲಿಯೂ ಶ್ರೀಕೃಷ್ಣದೇವನು ತನ್ನನ್ನೂ ತನ್ನ ಅಣ್ಣನನ್ನೂ ಕೊಲ್ಲುವುದಕ್ಕಾಗಿ ಬಂದಿರುವ ಆನೆಯ ಮಾವಟಿಗನನ್ನೂ ನೋಡಿ " ಯಮಲೋಕಕ್ಕೆ ಕಳುಹಿಸುವೆನು" ಎಂದು ಹೇಳಿದೆ. " ನನ್ನ ಲೋಕಕ್ಕೆ ಕಳುಹಿಸುವೆನು" ಎಂದು ಹೇಳಬೇಕಾಗಿತ್ತು.

**(೪) ಯದನಿಂದತ್ಪಿತಾ ಮಹ್ಯಂ ತ್ವದ್ಭಕ್ತೇ ಮಯಿ ಚಾಘವಾನ್।**
**ತಸ್ಮಾತ್ಪಿತಾ ಮೇ ಪೂಯೇತ ದುರಂತಾದ್ದುಸ್ತರಾದಘಾತ್॥**

" ನನ್ನ ತಂದೆಯಾದ ಹಿರಣ್ಯಕಶಿಪುವು ನಿನ್ನನ್ನು ನಿಂದಿಸಿದನು. ನಾನು ನಿನ್ನ ಭಕ್ತನೆಂಬ ಕಾರಣದಿಂದ ನನ್ನನ್ನೂ ನಿಂದಿಸಿದನು. ನನ್ನನ್ನು ನಿಂದಿಸಿರುವುದೂ ನಿನ್ನನ್ನು ನಿಂದಿಸಿರುವುದು ಈ ಎರಡು ಕಾರ್ಯಗಳೂ ಮಹಾಪಾಪಗಳೆನಿಸುತ್ತವೆ. ಈ ಮಹಾಪಾಪಗಳು "ದುರಂತ" ಅಂದರೆ " ಅನಂತಜನ್ಮಗಳನ್ನು ಸ್ವೀಕರಿಸಿ ಅನುಭವಿಸಿದರೂ ಮುಗಿಯುವವುಗಳಲ್ಲ." " ದುಸ್ತರ" ಅಂದರೆ "ಯಾವ ಪ್ರಾಯಶ್ಚಿತ್ತದಿಂದಲೂ ಅನುಭವದಿಂದಲೂ ಪರಿಹಾರವಿಲ್ಲದ ಪಾಪಗಳನ್ನು ಪರಿಹರಿಸುವ ಶಕ್ತಿಯು ನಿನ್ನ ಕಡೆಗಣ್ಣುಗಳ ಕೃಪಾದೃಷ್ಟಿಗೆ ಇದೆ."

(ಹಿರಣ್ಯಕಶಿಪುವನ್ನು ಸಂಹರಿಸಿದ ಶ್ರೀನರಸಿಂಹದೇವನನ್ನು ಪ್ರಹ್ಲಾದನು ಸ್ತುತಿಸುತ್ತಿರುವನು. ಆಗ ಪ್ರಹ್ಲಾದನು ಹೇಳಿದ ಮಾತು ಇದು.) ಇಲ್ಲಿಯೂ ಭಗವನ್ನಿಂದೆಯು "ದುರಂತ" ದುಸ್ತರ" ಎಂದು ಹೇಳಿದ್ದು ಶ್ರೀಹರಿದ್ವೇಷವು ಪ್ರಬಲವಾದ ಅಪರಾಧವೆಂದು ಸ್ಪಷ್ಟಪಡಿಸುತ್ತದೆ.

**(೫) ಹಿರಣ್ಯಕಶಿಪುಶ್ಚಾಪಿ ಭಗವನ್ನಿಂದಯಾ ತಮಃ।**
**ವಿವಿಕ್ಷುರತ್ಯಗಾತ್ಸೂನೋಃ ಪ್ರಹ್ಲಾದಸ್ಯಾನುಭಾವತಃ॥**

" ಹಿರಣ್ಯಕಶಿಪುವು ಭಗವನ್ನಿಂದೆಯನ್ನೂ ಭಗವದ್ಭಕ್ತನಾದ ಪ್ರಹ್ಲಾದನ ನಿಂದೆಯನ್ನೂ ಮಾಡಿದನು. ಈ ನಿಂದೆಗಳಿಂದ ನಿತ್ಯನರಕವನ್ನು ಪಡೆಯಬೇಕಾಗಿತ್ತು. ಆದರೆ ಅವನ ಮಗನಾದ ಪ್ರಹ್ಲಾದನ ಭಕ್ತಿಯ ಬಲದಿಂದ ನರಕವನ್ನು ಪಡೆಯಲಿಲ್ಲ. ನರಕವನ್ನು ದಾಟಿಬಿಟ್ಟನು. (ಈ ವಾಕ್ಯವು ಶ್ರೀಶುಕಾಚಾರ್ಯರು ಹೇಳಿದ್ದು) ಈ ವಾಕ್ಯವು ಭಗವನ್ನಿಂದೆಯು ನಿತ್ಯನರಕಕ್ಕೆ ಸಾಧನವೆಂದು ಸ್ಪಷ್ಟವಾಗಿ ಹೇಳುತ್ತಿದೆ.

(೬) ತಾನಹಂ ದ್ವಿಷತಃ ಕ್ರೂರಾನ್ಸಂಸಾರೇಷು ನರಾಧಮಾನ್ ।
ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥
ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।
ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್ ॥

"ಮನುಷ್ಯರಲ್ಲಿ ಉತ್ತಮರು ಮಧ್ಯಮರು ಅಧಮರು ಎಂದು ತ್ರಿವಿಧಜೀವರುಂಟು. ಆ ಮೂರು ವಿಧಜೀವರಲ್ಲಿ ಮನುಷ್ಯಾಧಮರು ನನ್ನನ್ನು ದ್ವೇಷಿಸುವರು. ಅವರನ್ನು ಒಂದೊಂದು ಜನ್ಮದಲ್ಲಿಯೂ " ಅಸುರಯೋನಿ" ಅಂದರೆ "ನನ್ನನ್ನು ದ್ವೇಷಿಸುವ ಜನ್ಮಗಳಲ್ಲಿಯೇ" ತಳ್ಳುವೆನು. ಒಂದೊಂದು ಜನ್ಮಗಳಲ್ಲಿಯೂ ಅಸುರಯೋನಿಗಳನ್ನು ಪಡೆಯುತ್ತಿರುವ ಈ ಮನುಷ್ಯಾಧಮರು, ನನ್ನನ್ನೂ ನನಗೆ ಪ್ರಿಯವಾಗಿರುವ " ದೇವಯೋನಿ" ಅಂದರೆ ಭಗವದ್ಭಕ್ತರ ಮಧ್ಯದಲ್ಲಿ ಜನ್ಮವನ್ನೂ ಪಡೆಯುವುದೇ ಇಲ್ಲ. ಕೊನೆಗೆ "ಅಧೋಗತಿ" ಅಂದರೆ ನಿತ್ಯನರಕವನ್ನು ಪಡೆಯುವರು" (ಇದು ಭಗವದ್ಗೀತೆಯಲ್ಲಿ ಶ್ರೀಕೃಷ್ಣದೇವನು ಹೇಳಿದ್ದು). ಈ ವಾಕ್ಯದಲ್ಲಿ ಭಗವದ್ದ್ವೇಷವು ಭಗವತ್ಪ್ರಾಪ್ತಿಗೆ ವಿಘ್ನವೆಂದು ಸ್ಪಷ್ಟವಾಗಿ ಹೇಳುತ್ತಿದೆ.

(೭) ಊರ್ಧ್ವಂ ಗಚ್ಛಂತಿ ಸತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ ।
ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ॥

" ಸಾತ್ವಿಕರಾದ ಜೀವರು ಮೇಲಿನ ಲೋಕಗಳಿಗೆ ಹೋಗುವರು. ರಾಜಸಜೀವರು ಮಧ್ಯಲೋಕ ಅಂದರೆ ಮನುಷ್ಯಲೋಕಗಳಲ್ಲಿ ವಾಸಿಸುವರು. ತಾಮಸರಾದ ಅಸುರಜೀವರು ಅಧೋಗತಿ ಅಂದರೆ ನರಕಾದಿಲೋಕಗಳನ್ನು ಹೊಂದುವರು."

(ಇದು ಮಹಾಭಾರತದಲ್ಲಿ ಬೇರೆ ಬೇರೆ ಕಡೆಗಳಲ್ಲಿಯೂ ಗೀತೆಯಲ್ಲಿಯೂ ಹೇಳಿರುವ ಶ್ರೀಹರಿಯ ಮಾತು) ಈ ವಾಕ್ಯದಲ್ಲಿ ಸಾತ್ವಿಕಾದಿಜೀವರಿಗೆ ಬೇರೆ ಬೇರೆ ವಿಧವಾದ ಗತಿಯು ಸ್ಪಷ್ಟವಾಗಿ ತಿಳಿಸಿದೆ.

(೮) ವೈಕುಂಠಂ ನಾಮ ತಲ್ಲೋಕಂ ದಿವ್ಯಂ ನಿತ್ಯಂ ಸನಾತನಮ್ ।
ಅವೈಷ್ಣವಾನಾಮಪ್ರಾಪ್ಯಂ ಮಹಾಯತ್ನವತಾಮಪಿ ॥

" ವೈಕುಂಠ ಎಂಬ ವಿಷ್ಣುಲೋಕವಿದೆ. ಆ ಲೋಕವು ಪ್ರಕೃತಿಸಂಬಂಧವುಳ್ಳ ಪಂಚಭೂತಗಳಿಂದ ನಿರ್ಮಿತವಾದುದಲ್ಲ. ಅಪ್ರಾಕೃತವಾದುದು. ಅನಾದಿನಿತ್ಯವಾದುದು. ವೇದಗಳಿಂದ ಹೊಗಳಲ್ಪಡುತ್ತಿರುವುದು. ಈ ಲೋಕವನ್ನು ವಿಷ್ಣುಭಕ್ತಿ ಯಿಲ್ಲದವರು ಎಷ್ಟು ಪ್ರಯತ್ನಗಳನ್ನು ಮಾಡಿದರೂ ಪಡೆಯಲಾರರು."

( ಈ ವಾಕ್ಯವು ಮಹಾಭಾರತದಲ್ಲಿದೆ.) ಈ ವಾಕ್ಯದಲ್ಲಿ ವಿಷ್ಣುಭಕ್ತಿಯಿಲ್ಲದವರು ಎಷ್ಟು ಪ್ರಯತ್ನಗಳನ್ನು

ಮಾಡಿದರೂ ಅವರಿಗೆ ವಿಷ್ಣುಲೋಕಪ್ರಾಪ್ತಿ ರೂಪವಾದ ಮುಕ್ತಿಯಿಲ್ಲವೆಂದು ಹೇಳುತ್ತಿದೆ.

**(೯) ನಿಂದಾಂ ಭಗವತಃ ಶೃಣ್ವಂಸ್ತತ್ಪರಸ್ಯ ಜನಸ್ಯ ವಾ।**
**ತತೋ ನಾಪೈತಿ ಯಃ ಸೋಪಿ ಯಾತ್ಯಧಃ ಸುಕೃತಾಚ್ಚ್ಯುತಃ॥**

" ಭಗವಂತನ ಮತ್ತು ಭಗವದ್ಭಕ್ತನ ನಿಂದೆಯನ್ನು ಒಮ್ಮೆಯೂ ಕೇಳಕೂಡದು. ಯಾರಾದರೂ ನಮ್ಮ ಮುಂದೆ ಭಗವಂತನನ್ನು ನಿಂದಿಸಿದರೆ ಕಿವಿಗಳನ್ನು ಮುಚ್ಚಿಕೊಂಡು ಬೇರೆ ಕಡೆಗೆ ಹೋಗಬೇಕು. ಇದು ಭಗವನ್ನಿಂದೆ ಮಾಡುತ್ತಿರುವಾಗ ಆ ನಿಂದೆಯನ್ನು ನಿಲ್ಲಿಸಲು ಶಕ್ತಿಯಿಲ್ಲದವನು ಮಾಡುವ ಉಪಾಯ. ಈ ಅಶಕ್ತನು ಆ ಸ್ಥಳವನ್ನು ಬಿಟ್ಟು ಬೇರೆ ಕಡೆಗೆ ಹೋಗದಿದ್ದರೆ ಅವನ ಪುಣ್ಯಗಳೆಲ್ಲವೂ ಕ್ಷೀಣವಾಗುತ್ತವೆ, ಕೊನೆಗೆ ನಿತ್ಯನರಕವನ್ನು ಪಡೆಯುವನು.

(ಇದು ಭಾಗವತದಲ್ಲಿ ರಾಜಸೂಯಪ್ರಕರಣದಲ್ಲಿ ಶಿಶುಪಾಲನು ಮಾಡಿದ ಶ್ರೀಕೃಷ್ಣನಿಂದೆಯನ್ನು ಕೇಳಿದ ಸಭ್ಯರು ಕಿವಿಗಳನ್ನು ಮುಚ್ಚಿಕೊಂಡು ಹೋದಾಗ ಅವರು ಮಾಡಿದ ಕೆಲಸವು ಯುಕ್ತವೆಂದು ಶ್ರೀಶುಕಾಚಾರ್ಯರು ಹೇಳಿದ ಮಾತು) ಈ ವಾಕ್ಯದಲ್ಲಿ ಒಮ್ಮೆ ಶ್ರೀಹರಿಯನ್ನು ಇನ್ನೊಬ್ಬನು ನಿಂದಿಸುತ್ತಿದ್ದಾಗ ಕೇಳಿದವನಿಗೂ ಅಧೋಗತಿಯು ಏರ್ಪಡುತ್ತದೆ. ಹೀಗಿರುವಾಗ ತಾನೇ ಶ್ರೀಹರಿಯನ್ನು ನಿಂದಿಸುತ್ತಿದ್ದರೆ ಅಧೋಗತಿಯು ಏರ್ಪಡುತ್ತದೆಯೆಂದು ಹೇಳಬೇಕಾದ್ದೇನಿದೆ? ಎಂದು ಹೇಳುತ್ತಾ ಕೈಮುತ್ಯ ನ್ಯಾಯದಿಂದ ಮೇಲ್ಕಂಡ ವಿಷಯವನ್ನೇ ದೃಢಪಡಿಸುತ್ತದೆ.

**(೧೦) ತಮೇವಂ ವಿದ್ವಾನಮೃತ ಇಹ ಭವತಿ, ನಾನ್ಯಃ ಪಂಥಾ ವಿದ್ಯತೇಽ ಯನಾಯ।**

" ಹಿಂದೆ ಹೇಳಿದ ಸಹಸ್ರಶೀರ್ಷತ್ವ ಮುಂತಾದ ಗುಣಗಳಿಂದ ಶ್ರೀಹರಿಯು ಯುಕ್ತನಾಗಿರುವನು ಎಂದು ತಿಳಿಯಬೇಕು. ಹೀಗೆ ತಿಳಿಯುವವನು " ಅಮೃತಃ" ಅಂದರೆ ಮರಣವಿಲ್ಲದವನು ಅಂದರೆ ಮುಕ್ತನು ಆಗುವನು. ಈ ಜ್ಞಾನಕ್ಕಿಂತ ಬೇರೆ ಮಾರ್ಗವು ಮುಕ್ತಿಗೆ ಇಲ್ಲ."

(ಇದು ಯಜುರ್ವೇದದಲ್ಲಿರುವ ಪುರುಷಸೂಕ್ತದ ವಾಕ್ಯ) ಈ ವೇದವಾಕ್ಯವು ಶ್ರೀಹರಿಯು ಗುಣಪೂರ್ಣನಾಗಿರುವನು ಎಂಬ ಜ್ಞಾನವೇ ಮುಕ್ತಿಗೆ ಸಾಧನವೆಂದೂ ಬೇರೆ ವಿಧವಾದ ಸಾಧನವಿಲ್ಲವೆಂದೂ ಅತಿಸ್ಪಷ್ಟವಾಗಿ ಹೇಳುತ್ತಿದೆ.

**(೧೧) ಅಥಾತೋ ಬ್ರಹ್ಮಜಿಜ್ಞಾಸಾ**

" ಬ್ರಹ್ಮಜ್ಞಾನವಿಲ್ಲದೆ ಮೋಕ್ಷವು ಸಿಗುವುದಿಲ್ಲ. ಆದ್ದರಿಂದ ಮೋಕ್ಷವನ್ನು ಅಪೇಕ್ಷಿಸುವ ಸರ್ವರೂ ಬ್ರಹ್ಮಜ್ಞಾನಕ್ಕಾಗಿ ಬ್ರಹ್ಮವಿಚಾರವನ್ನು ಮಾಡಲೇ ಬೇಕು. (ಇದು ಬ್ರಹ್ಮ ಸೂತ್ರ) ಈ ಸೂತ್ರವು ಶ್ರೀಹರಿಯ ಮಾಹಾತ್ಮ್ಯ ಜ್ಞಾನವೇ ಮೋಕ್ಷಸಾಧನವೆಂದೂ ದ್ವೇಷಾದಿಗಳು ಮೋಕ್ಷಸಾಧನವಲ್ಲವೆಂದೂ ಅತಿ ಸ್ಪಷ್ಟವಾಗಿ ಹೇಳುತ್ತಿದೆ.

ಶ್ರೀಹರಿ, ಬ್ರಹ್ಮದೇವರು, ರುದ್ರದೇವರು, ಪ್ರಹ್ಲಾದಾದಿ ಭಕ್ತಾಗ್ರೇಸರರು ಮುಂತಾದವರ ಮಾತುಗಳು ಭಾಗವತದಲ್ಲಿಯೂ ಭಾರತಗ್ರಂಥಗಳಲ್ಲಿಯೂ ಭಕ್ತಿಯಿಂದಲೇ ಮುಕ್ತಿ, ದ್ವೇಷದಿಂದ ಮುಕ್ತಿಯು ಸಿಗುವುದಿಲ್ಲವೆಂಬ

ವಿಷಯದಲ್ಲಿ ಆಧಾರವಾಗಿ ಕೊಡಲ್ಪಟ್ಟಿವೆ. ಆದ್ದರಿಂದ ಪೂತನೆಯ ದೇಹದಲ್ಲಿರುವ ಊರ್ವಶಿಯೇ ಭಕ್ತಿಯಿಂದ ಸದ್ಗತಿಯನ್ನು ಪಡೆದಳೆಂದೂ ತಾಟಕಿಯು ಅಧೋಗತಿಯನ್ನು ಪಡೆದಳೆಂದೂ ಸಿದ್ಧವಾಯಿತು.

ಭಕ್ತಿಯಿಂತೆ ದ್ವೇಷವೂ ಮುಕ್ತಿಗೆ ಸಾಧನವಾಗಿದ್ದರೆ, ಭಕ್ತಿ ದ್ವೇಷ ಎಂಬ ಎರಡು ಉಪಾಯಗಳಲ್ಲಿ ಭಕ್ತಿಮಾರ್ಗವನ್ನು ಪಡೆಯುವುದಕ್ಕಾಗಿ ಶ್ರೀಹರಿಯ ಮಾಹಾತ್ಮ್ಯವನ್ನು ಮೊಟ್ಟಮೊದಲು ತಿಳಿಯಬೇಕು. ಅದಕ್ಕಾಗಿ ಶಾಸ್ತ್ರಗಳನ್ನು ಓದಬೇಕು. ಶಾಸ್ತ್ರಗಳನ್ನು ಓದಿದ ಮೇಲೆ ಅಲ್ಲಿ ಬರುವ ಸಂಶಯಗಳನ್ನೆಲ್ಲಾ ಪರಿಹರಿಸಿಕೊಳ್ಳಬೇಕು. ಮಾಹಾತ್ಮ್ಯಜ್ಞಾನವು ದೃಢವಾದ ಮೇಲೆ ಶ್ರೀಹರಿಯನ್ನು ಧ್ಯಾನಿಸಬೇಕು. ಧ್ಯಾನಾನಂತರದಲ್ಲಿ ಅವನನ್ನು ನೋಡಬೇಕು. ನೋಡಿದ ಮೇಲೆ ಭಕ್ತಿಯು ಪೂರ್ಣವಾಗುತ್ತದೆ. ಭಕ್ತಿಯು ಪೂರ್ಣವಾದ ಮೇಲೆ ಶ್ರೀಹರಿಯ ಪೂರ್ಣಾನುಗ್ರಹವು ಏರ್ಪಡುತ್ತದೆ. ಶ್ರೀಹರಿಯ ಪೂರ್ಣಾನುಗ್ರಹದಿಂದ ಮುಕ್ತಿಯು ಸಿಗುತ್ತದೆ. ಇಷ್ಟೆಲ್ಲಾ ಆಗುವುದಕ್ಕೆ ಅನೇಕ ಜನ್ಮಗಳ ವರೆಗೆ ಸಾಧನಗಳನ್ನು ಮಾಡಬೇಕು. ಆದ್ದರಿಂದ ಭಕ್ತಿಮಾರ್ಗವು ಕಷ್ಟಸಾಧ್ಯವಾದುದು.

ದ್ವೇಷಮಾರ್ಗವು ಕಷ್ಟಸಾಧ್ಯವಲ್ಲ ಅತಿಸುಲಭ, ಶ್ರೀಹರಿಯನ್ನು ನೋಡಿ " ಸೂಳೆಮಗನೇ" ಎಂದು ಬೈದರೂ ಸಾಕು. ಇಷ್ಟು ಸುಲಭವಾದ ದ್ವೇಷಮಾರ್ಗವನ್ನು ಬಿಟ್ಟು ಕಠಿನ ಮಾರ್ಗವನ್ನು "ನಾನ್ಯಃ ಪಂಥಾಃ" ಎಂಬ ಶ್ರುತಿಯೂ "ಅಥಾತೋ ಬ್ರಹ್ಮಜಿಜ್ಞಾಸಾ" ಮುಂತಾದ ಬ್ರಹ್ಮಸೂತ್ರಗಳು ಹೇಳಲು ಕಾರಣವೇನು? ಅಧಿಕಾರಿಗಳಾದರೂ ಮೇಲ್ಕಂಡ ಸುಲಭವಾದ ದ್ವೇಷಮಾರ್ಗವನ್ನು ಬಿಟ್ಟು ಭಕ್ತಿಮಾರ್ಗದಲ್ಲಿ ತಪಸ್ಸು ಮುಂತಾದವುಗಳನ್ನು ಮಾಡುತ್ತಾ ದೇಹವನ್ನು ಕೃಶವಾಗುವಂತೆ ಮಾಡಿಕೊಳ್ಳಲು ಕಾರಣವೇನು? ಆದ್ದರಿಂದ ಶ್ರೀಹರಿದ್ವೇಷವು ಮುಕ್ತಿಗೆ ಸಾಧನವಲ್ಲವೆಂದು ಸರ್ವರೂ ಅಂಗೀಕರಿಸಿದ್ದಾರೆ ಮತ್ತು ಅಂಗೀಕರಿಸಲೇಬೇಕು. ಎಂದು ಸಿದ್ಧವಾಗುತ್ತದೆ. ಅದು ಮಾತ್ರವಲ್ಲ.

ಅದ್ವೈತಿಗಳಾಗಲೀ ತಾರ್ಕಿಕರಾಗಲೀ ಇತರ ವಾದಿಗಳಾಗಲೀ ಸರ್ವರೂ ಜ್ಞಾನದಿಂದಲೇ ಮೋಕ್ಷವೆಂದು ಹೇಳುವರು. ಆ ಜ್ಞಾನವು ಅದ್ವೈತಜ್ಞಾನವೆಂದು ಅದ್ವೈತಿಗಳೂ, ಪದಾರ್ಥತತ್ವಜ್ಞಾನವೆಂದು ತಾರ್ಕಿಕರೂ, ಬೇರೆ ಬೇರೆ ವಿಧವಾದ ಜ್ಞಾನಿಗಳೆಂದು ಇತರರೂ ಹೇಳಬಹುದು. ಆದರೆ ಜ್ಞಾನವನ್ನು ಬಿಟ್ಟು ಇತರ ಸಾಧನವು ಯಾವುದೂ ಮೋಕ್ಷಕ್ಕೆ ಸಾಧನವಲ್ಲವೆಂಬ ವಿಷಯದಲ್ಲಿ ಎಲ್ಲರಿಗೂ ಸಮ್ಮತಿ ಇದೆ. ಈಗ ಜ್ಞಾನಕ್ಕಿಂತ ಭಿನ್ನವಾಗಿರುವ ದ್ವೇಷವು ಮೋಕ್ಷಕ್ಕೆ ಸಾಧನವೆಂದು ಹೇಳಿದರೆ ತಮ್ಮಸಿದ್ಧಾಂತಕ್ಕೆ ವಿರುದ್ಧವಾದ ಸಿದ್ಧಾಂತವನ್ನು ಅಂಗೀಕರಿಸಿದಂತಾಗಲಿಲ್ಲವೇ?

ಕೆಲವು ಮೇಧಾವಿಗಳು "ದ್ವೇಷದಿಂದ ಮುಕ್ತಿಯು ಸಿಗುತ್ತದೆ" ಎಂಬ ಪಕ್ಷವನ್ನು ಮತ್ತೊಂದು ವಿಧವಾಗಿ ಹೇಳುವರು. ಅವರ ಪಕ್ಷವನ್ನು ಈಗ ಹೇಳುತ್ತೇವೆ. " ದ್ವೇಷದಿಂದ ಮುಕ್ತಿಯು ಸಿಗುತ್ತದೆ" ಎಂಬ ಪಕ್ಷವನ್ನು ನಾವು ಅಂಗೀಕರಿಸುವುದಿಲ್ಲ. ಶ್ರೀಹರಿಯಲ್ಲಿ ದ್ವೇಷವನ್ನು ಮಾಡುತ್ತಿರುವವನು ಎಡೆಬಿಡದೆ ಶ್ರೀಹರಿಯನ್ನು ಸ್ಮರಿಸುತ್ತಿರುವನು. ಈ ಸ್ಮರಣದಿಂದ ಮುಕ್ತಿಯು ಏರ್ಪಡುತ್ತದೆ. ಈ ಸ್ಮರಣವು ಜ್ಞಾನರೂಪವಾಗಿದೆ. ಆದ್ದರಿಂದ ಜ್ಞಾನದಿಂದಲೇ ಮುಕ್ತಿಯು ಏರ್ಪಟ್ಟಂತಾಯಿತು. ಆದ್ದರಿಂದ ಹಿಂದೆ ಹೇಳಿದ ಸ್ವಸಿದ್ಧಾಂತವಿರೋಧ ಎಂಬ ದೋಷವು ಬರುವುದಿಲ್ಲ. ಇದು ಅವರ ವಾದ. ಅದು ಸರಿಯಲ್ಲ.

ಶ್ರೀಹರಿಯಲ್ಲಿ ದ್ವೇಷವನ್ನು ಮಾಡುವುದೂ ದ್ವೇಷದಿಂದ ಶ್ರೀಹರಿಯನ್ನು ಸ್ಮರಿಸುವುದೂ ಒಂದೇ ವಿಧವಾದ ಫಲವನ್ನು ಕೊಡುತ್ತದೆ. ಕಾಮಧೇನುವು ಗೋಹತ್ಯೆಯನ್ನು ಮಾಡಿದವನನ್ನು ನೋಡಿ ದುಃಖಿಸಿದಂತೆ ಗೋಹತ್ಯೆಯನ್ನು

ಮಾಡುವುದಕ್ಕಾಗಿ ನಿರಂತರದಲ್ಲಿಯೂ ಗೋವನ್ನು ಸ್ಮರಿಸುತ್ತಿರುವವನನ್ನೂ ನೋಡಿ ದುಃಖಿಸುತ್ತದೆ. ಸಂತೋಷಿಸುವುದಿಲ್ಲ. ಅದು ಮಾತ್ರವಲ್ಲ. ದ್ವೇಷದಿಂದ ಸ್ಮರಿಸುವುದು ಪುಣ್ಯಸಾಧನವೆಂದು ಹೇಳುವುದಾದರೆ ಬ್ರಾಹ್ಮಣರನ್ನೂ ಗೋವುಗಳನ್ನೂ ಕೊಲ್ಲುವುದಕ್ಕಾಗಿ ಬ್ರಾಹ್ಮಣರು ಮತ್ತು ಗೋವುಗಳ ಕಾಲುಗಳನ್ನು ಹಿಡಿಯುವುದೂ ಅವರುಗಳ ಹೆಸರುಗಳನ್ನು ಹೇಳುವುದೂ ಅವರುಗಳನ್ನು ಆಲಿಂಗಿಸುವುದೂ ಅವರನ್ನು ಸಂದರ್ಶಿಸುವುದೂ ಮಹಾಪುಣ್ಯಸಾಧನವೆಂದು ಹೇಳಬೇಕಾಗುವುದು. ಹಚ್ಚೇಕೆ? ಗೋಬ್ರಾಹ್ಮಣರ ವಧವೇ ಅವರ ಪಾದಸ್ಪರ್ಶಾದಿ ಪುಣ್ಯಕಾರ್ಯಗಳಿಗೆ ಸಾಧನವಾಗಿರುವುದರಿಂದ ಮಹಾಪುಣ್ಯಕರವಾದೀತು. ಆದ್ದರಿಂದ ದ್ವೇಷಕ್ಕಾಗಿ ಶ್ರೀಹರಿಯನ್ನು ಸ್ಮರಿಸುವುದೂ ದ್ವೇಷಿಸುವುದೂ ಒಂದೇ ವಿಧವಾದದ್ದು.

ಆದ್ದರಿಂದ ಶ್ರೀಹರಿಯನ್ನು ದ್ವೇಷಿಸುವುದಕ್ಕಾಗಿ ಮಾಡುತ್ತಿರುವ ನಿರಂತರ ಸ್ಮರಣದಿಂದ ಮುಕ್ತಿಯು ಪೂತನಾದಿಗಳಿಗೆ ಏರ್ಪಟ್ಟಿತ್ತು ಎಂಬ ಮತವೂ ಯುಕ್ತವಲ್ಲ.

## ಪೂತನಾ ದೇಹ ಸಂಸ್ಕಾರ

ಪೂತನೆಯ ಭಯಂಕರವಾದ ದೇಹವು ಕೆಳಗೆ ಬಿತ್ತು. ಅನೇಕ ಯೋಜನಗಳಷ್ಟು ಉದ್ದವೂ ಅಗಲವೂ ಇದ್ದ ಆ ದೇಹವನ್ನು ಎತ್ತಿಕೊಂಡು ಹೋಗುವುದಕ್ಕೆ ಯಾರಿಂದಲೂ ಸಾಧ್ಯವಾಗಲಿಲ್ಲ. ಕತ್ತಿ ಮುಂತಾದ ಚಿಕ್ಕ ಚಿಕ್ಕ ಆಯುಧಗಳಿಂದ ಆ ದೇಹವನ್ನು ಕತ್ತರಿಸಲೂ ಸಾಧ್ಯವಾಗಲಿಲ್ಲ. ಕೊಡಲಿ ಮುಂತಾದ ದೊಡ್ಡ ದೊಡ್ಡ ಆಯುಧಗಳಿಂದ ಬಹುಪ್ರಯಾಸದಿಂದ ತುಂಡು ಮಾಡಿದರು. ಆ ತುಂಡುಗಳನ್ನೆಲ್ಲಾ ಅಸಂಖ್ಯಾಕರಾದ ಗೊಲ್ಲರು ಒಟ್ಟುಗೂಡಿ ಎತ್ತಿಕೊಂಡು ಹೋಗಿ ಚಿತೆಯಲ್ಲಿ ಇಟ್ಟರು. ಅವಳ ದೇಹವು ಸುಡುತ್ತಿರುವಾಗ ಅಗರು ಗಂಧದ ಪರಿಮಳವು ಬಂತು. ಇದು ಪರಮ ಭಕ್ತಳಾದ ಊರ್ವಶಿಯು ಈ ಶರೀರದಲ್ಲಿ ವಾಸಿಸುತ್ತಿದ್ದಳೆಂದು ತಿಳಿಸುತ್ತಿತ್ತು.

ಪೂತನೆಯ ಮೇಲೆ ಸ್ವಲ್ಪವೂ ಭಯವಿಲ್ಲದೆ ಆಟವಾಡುತ್ತಿರುವ ಶ್ರೀಕೃಷ್ಣದೇವನನ್ನು ಯಶೋದೆಯೂ ಗೋಪಿಕಾಸ್ತ್ರೀಯರೂ ನೋಡಿ ತುಂಬಾ ಹೆದರಿದರು. ಕೂಸಿಗೆ ಆಪತ್ತು ಏರ್ಪಟ್ಟಿತು ಎಂದು ಅಂಜಿದರು. ವೇಗವಾಗಿ ಓಡಿ ಬಂದು ಮಗುವನ್ನು ಎತ್ತಿಕೊಂಡು ಹೋದರು. ಕೂಸಿಗೆ ಭೀತಿಯಿಂದ ಯಾವ ವಿಧವಾದ ಆಪತ್ತೂ ಬರಬಾರದೆಂದು ರಕ್ಷೆಯನ್ನು ಮಾಡಿದರು. ಗೋಮೂತ್ರದಿಂದ ಸ್ನಾನ ಮಾಡಿಸಿದರು. ಗೋವುಗಳ ಪಾದಧೂಳಿಯನ್ನು ಶ್ರೀಕೃಷ್ಣದೇವನ ದೇಹದಲ್ಲಿ ಚೆಲ್ಲಿದರು. ಗೋಮಯದಿಂದ ಶ್ರೀಕೃಷ್ಣನ ದೇಹದ ಒಂದೊಂದು ಅವಯವವನ್ನೂ ಮುಟ್ಟಿ ಕೇಶವಾದಿ ದ್ವಾದಶನಾಮುಗಳನ್ನು ಪಠಿಸುತ್ತಾ ರಕ್ಷೆಯು ಏರ್ಪಡಬೇಕೆಂದು ಪ್ರಾರ್ಥಿಸಿದರು. ಹೀಗೆ ಪ್ರೇಮದಿಂದ ಶ್ರೀಕೃಷ್ಣದೇವನಿಗೆ ರಕ್ಷೆಯನ್ನು ಮಾಡಿದರು. ಯಶೋದೆಯು ತನ್ನ ಮೊಲೆಯ ಹಾಲನ್ನು ಕುಡಿಸಿ ಹಾಸಿಗೆಯಲ್ಲಿ ಮಲಗಿಸಿದಳು.

ಇಷ್ಟರಲ್ಲಿ ಮಥುರೆಗೆ ಹೋಗಿದ್ದ ನಂದನೂ ಗೊಲ್ಲರೂ ಹಿಂದಿರುಗಿದರು. ಎಲ್ಲಾ ವಿಷಯವನ್ನೂ ಕೇಳಿ ತಿಳಿದರು. "ನಿಜವಾಗಿಯೂ ವಸುದೇವನು ಋಷಿಯೋ ಯೋಗೀಶ್ವರನೋ ಆಗಿಬಿಟ್ಟನು. ಆದ್ದರಿಂದಲೇ ಅವನು ಹೇಳಿದ ವಿಷಯಗಳೆಲ್ಲಾ ಸತ್ಯವಾದವು". ಎಂದು ಹೇಳುತ್ತಾ ಆಶ್ಚರ್ಯಪಟ್ಟರು.

# ಶ್ರೀಗುರುಸಾರ್ವಭೌಮರ ಗ್ರಂಥಗಾಂಭೀರ್ಯ

**ಶಿಶುವಧವಿಹಿತಾಂ ಪೂತನಾಂ ಯೋ ಜಘಾನ** ಇಲ್ಲಿರುವ **"ವಿಹಿತ"** ಎಂಬ ಪದವು ಅಹಿತ ಅಥವಾ ವಿಶೇಷವಾಗಿ ಹಿತ ಎಂಬ ಎರಡು ಅರ್ಥಗಳನ್ನು ತಿಳಿಸುತ್ತದೆ. **"ವಿರ್ನಿಷೇಧೇ ಪೃಥಗ್ಭಾವೇ"** ಎಂಬ ಶ್ಲೋಕವನ್ನು ಅನುಸರಿಸಿ "ವಿ" ಎಂಬ ಉಪಸರ್ಗವು ನಿಷೇಧ ಎಂಬ ಅರ್ಥವನ್ನು ತಿಳಿಸುತ್ತದೆ. ಆದ್ದರಿಂದ (ವಿ+ಹಿತ)= ಹಿತವಿರುದ್ಧ=ಅಹಿತ ಎಂಬ ಅರ್ಥವನ್ನು ತಿಳಿಸುತ್ತದೆ. ಹೀಗೆಯೇ (ವಿಶೇಷೇಣ ಹಿತ) = ವಿಹಿತ ಅಂದರೆ ವಿಶೇಷವಾಗಿ ಹಿತವಾದದ್ದು ಎಂಬ ಅರ್ಥವನ್ನೂ ತಿಳಿಸುತ್ತದೆ.

**ಶಿಶುವಧಃ ವಿಹಿತಃ ಅಸಿತಃ ಯಸ್ಯಾಃಸಾ = ಶಿಶುವಧವಿಹಿತಾ, ತಾಂ ಶಿಶುವಧವಿಹಿತಾಂ, ಪೂತನಾಂ** ಎಂದು ವಿಗ್ರಹವನ್ನು ಮಾಡಿದಾಗ ಶಿಶುವಧವು ತನಗೆ ಹಿತಕರವಲ್ಲವೆಂದೂ ಅಹಿತಕರವೆಂದೂ ತಿಳಿದಿರುವ ಪೂತನೆಯನ್ನು ಅಂದರೆ ಪೂತನಾದೇಹದಲ್ಲಿರುವ ಊರ್ವಶಿಯನ್ನು ಎಂಬ ಅರ್ಥವು ಬರುತ್ತದೆ. **ಶಿಶುವಧಃ ವಿಶೇಷೇಣ ಹಿತಃ ಯಸ್ಯಾಃ ಸಾ, ತಾಂ ಶಿಶುವಧವಿಹಿತಾಂ ಪೂತನಾಂ** ಎಂದು ವಿಗ್ರಹವನ್ನು ಮಾಡಿದಾಗ ಶಿಶುವಧವೇ ವಿಶೇಷದಿಂದ ಹಿತಕರವೆಂದು ತಿಳಿದಿರುವ ಪೂತನಾದೇಹದಲ್ಲಿರುವ ತಾಟಕೆಯನ್ನು ಎಂಬ ಅರ್ಥವು ತಿಳಿಯುತ್ತದೆ.

ಜಘಾನ ಎಂಬಲ್ಲಿರುವ ''ಹನ'' ಎಂಬ ಧಾತುವೂ **ಹನ ಹಿಂಸಾಗತ್ಯೋಃ** ಎಂಬ ಧಾತು ವ್ಯಾಖ್ಯಾನವನ್ನು ಅನುಸರಿಸಿ ಹಿಂಸಾ ಎಂಬ ಅರ್ಥವನ್ನೂ ಗತಿ ಎಂಬ ಅರ್ಥವನ್ನೂ ತಿಳಿಸುತ್ತದೆ. ಆದ್ದರಿಂದ ಪೂತನಾಂ ಜಘಾನ ಅಂದರೆ ಪೂತನಾದೇಹದಲ್ಲಿರುವ ತಾಟಕಾ ಎಂಬ ರಾಕ್ಷಸಿಯನ್ನು ಹಿಂಸಿಸಿದನು. ಎಂದೂ ಪೂತನಾಂ ಜಘಾನ ಅಂದರೆ ಪೂತನಾ ದೇಹದಲ್ಲಿದ್ದ ಊರ್ವಶಿಯನ್ನು ಅನುಗ್ರಹಿಸುವುದಕ್ಕಾಗಿ ಅವಳನ್ನು ಸಮೀಪಿಸಿದನು ಎಂದೂ ತಿಳಿಯುತ್ತದೆ. ಪೂತನಾಂ ಎಂಬ ಪದದಲ್ಲಿರುವ ಏಕವಚನವು ತಾಟಕೆಗೂ ಊರ್ವಶಿಗೂ ಪೂತನಾ ಎಂಬ ಒಂದೇ ಹೆಸರೆಂದು ತಿಳಿಸುತ್ತದೆ.

ಮೇಲ್ಕಂಡ ವಿವರಣೆಯಿಂದ ನಾವು ಹೇಳಿರುವ ಎಲ್ಲಾ ಅರ್ಥಗಳೂ ಶ್ರೀಗುರುಸಾರ್ವಭೌಮರಿಂದ ಸೂತ್ರದಂತಿರುವ ಚಿಕ್ಕಮಾತಿನಿಂದ ಸೂಚಿಸಲ್ಪಟ್ಟವು ಎಂದು ಹೇಳಿದಂತಾಯಿತು. ಶ್ರೀಗುರುಸಾರ್ವಭೌಮರ ಮಾತಿನ ಗಾಂಭೀರ್ಯವನ್ನು ಏನೆಂದು ವರ್ಣಿಸಲಿ.

(೬) **ಯಃ ವಿಷ್ಣುಃ ಉತ್ಥಾನೌತ್ಸುಕ್ಯಕಾಲೇ ರಥಚರಣಗತಂ ಅಸುರಂ ಚ ಪಾದಘಾತೈಃ ಜಘಾನ**

ದೇವರನ್ನು ನೋಡುವುದಕ್ಕಾಗಿ ಮನೆಯಿಂದ ಹೊರಗೆ ನಾಲ್ಕನೆಯ ತಿಂಗಳಿನಲ್ಲಿ ಹೊರಡುವುದು. ಉತ್ಥಾನ ಅಥವಾ ನಿಷ್ಕ್ರಮಣ ಎನಿಸುತ್ತದೆ. ನಿಷ್ಕ್ರಮಣಕ್ಕೆ ಸಂಬಂಧಿಸಿದ ಉತ್ಸವಕಾಲದಲ್ಲಿ ಬಂಡಿಯ ಚಕ್ರದಲ್ಲಿ ಅಡಗಿರುವ ಶಕಟಾಸುರನನ್ನು ಬಲವಾದ ಒದೆಗಳಿಂದ ಕೊಂದನು.

ವಿಶೇಷಾರ್ಥ - **ಕದಾಚಿದೌತ್ಥಾನಮಹೋತ್ಸವೇ ವಾದಿತ್ರಗೀತಮಂತ್ರವಾಚನಪೂರ್ವಕಂ ಮಾತ್ರಾ ಯಶೋದಯಾ ಕೃತಾಭಿಷೇಚನಂ ಪ್ರಾಪ್ಯ ಶಕಟಸ್ಯಾಧಃ ಶಾಯಿತಃ ಸ್ತನಾರ್ಥೀ ರುದನ್ ಬಂಧುಜನಪೂಜಾದೌ ವ್ಯಾಸಕ್ತಯಾ ಯಶೋದಯಾ ಅಜ್ಞಾತಃ ಪಾದಾಭ್ಯಾಂ ಚಕ್ರಂ ಪಾತಯಿತ್ವಾ ತದ್ಗತಂ ಸ್ವಹನನಾರ್ಥಮುದ್ಯುಕ್ತಂ**

**ಶಕಟಾಕ್ಷನಾಮಕದೈತ್ಯಂ ಹತ್ವಾ** (ಒಮ್ಮೆ ನಿಷ್ಕ್ರಮಣ ಮಹೋತ್ಸವಕಾಲದಲ್ಲಿ ವಾದ್ಯ ಸಂಗೀತ ಮಂತ್ರಪಠನ ಪೂರ್ವಕವಾಗಿ ಯಶೋದೆಯು ಶ್ರೀಕೃಷ್ಣದೇವನಿಗೆ ಅಭಿಷೇಕವನ್ನು ಮಾಡಿಸಿದಳು. ಒಂದು ಬಂಡಿಯ ಅಡಿಯಲ್ಲಿ ಮಲಗಿಸಿದಳು. ಉತ್ಸವಕಾಲದಲ್ಲಿ ಬಂದಿರುವ ಬಂಧುಜನರ ಪೂಜೆ ಮುಂತಾದ ಕರ್ಮಗಳಲ್ಲಿ ಆಸಕ್ತಳಾಗಿ ಶ್ರೀಕೃಷ್ಣದೇವನನ್ನು ಮರೆತಳು. ಶ್ರೀಕೃಷ್ಣದೇವನು ಮೊಲೆಹಾಲನ್ನು ಕುಡಿಯಬೇಕೆಂದು ಆಶಿಸಿ ಅದಕ್ಕಾಗಿ ಅತ್ತನು. ಕಾಲುಗಳಿಂದ ಬಂಡಿಚಕ್ರವನ್ನು ಒದ್ದು ಉರುಳಿಸಿದನು. ಆ ಚಕ್ರದಲ್ಲಿ ಅಡಗಿದವನೂ ತನ್ನನ್ನು ಕೊಲ್ಲುವುದಕ್ಕಾಗಿ ಉದ್ಯುಕ್ತನೂ ಆಗಿರುವ ಶಕಟಾಕ್ಷ ಎಂಬ ದೈತ್ಯನನ್ನು ಸಂಹರಿಸಿದನು.

ವಿಶೇಷಾರ್ಥ - ವಿವರಣ - ಯಮುನಾನದೀತೀರದಲ್ಲಿರುವ ಗುಡಾರದಲ್ಲಿ ಶ್ರೀಕೃಷ್ಣದೇವನು ಅವತರಿಸಿದನು. ಅವತಾರಾನಂತರದಲ್ಲಿ ಮೂವತ್ತು ದಿನಗಳು ಕಳೆದವು.ಮೂವತ್ತೊಂದನೇ ದಿನದಲ್ಲಿ ಕಂಸನನ್ನು ನೋಡುವುದಕ್ಕಾಗಿ ಮಥುರೆಗೆ ನಂದನೇ ಮೊದಲಾದವರು ಬಂದರು. ಅದೇ ದಿನದಲ್ಲಿ ಪೂತನೆಯನ್ನು ಶ್ರೀಕೃಷ್ಣದೇವನು ಸಂಹರಿಸಿದನು. ಶ್ರೀಕೃಷ್ಣದೇವನು ಅವತರಿಸಿ ಮೂರು ತಿಂಗಳುಗಳು ಪೂರ್ಣವಾದವು. ನಾಲ್ಕನೆಯ ತಿಂಗಳಿನಲ್ಲಿ ಶ್ರೀಕೃಷ್ಣದೇವನ ಜನ್ಮನಕ್ಷತ್ರವಾದ ರೋಹಿಣೀ ನಕ್ಷತ್ರವು ಬಂತು.

ಕೂಸುಗಳು ಹುಟ್ಟಿದ ಮೇಲೆ ಮೂರು ತಿಂಗಳು ಪೂರ್ತಿಯಾಗುವ ವರೆಗೆ ಮನೆಯ ಒಳಗೆಯೇ ಆ ಕೂಸುಗಳು ಇರಬೇಕು. ಸೂರ್ಯನ ಕಿರಣಗಳ ಸ್ಪರ್ಶವು ಮಕ್ಕಳಿಗೆ ಆಗಬಾರದು. ನಾಲ್ಕನೇ ತಿಂಗಳು ಆರಂಭವಾದ ಮೇಲೆ ಒಳ್ಳೇದಿನವನ್ನು ನೋಡಿಕೊಂಡು ಆ ದಿನದಲ್ಲಿ ಕೂಸುಗಳನ್ನು ಸೂರ್ಯನ ಕಿರಣಗಳು ವ್ಯಾಪಿಸಿಕೊಂಡಿರುವ ಪ್ರದೇಶಕ್ಕೆ ತರಬೇಕು. ಸಮೀಪದಲ್ಲಿರುವ ದೇವಾಲಯ ಮುಂತಾದ ಪವಿತ್ರಪ್ರದೇಶಗಳಿಗೆ ಕರೆದುಕೊಂಡು ಹೋಗಿ ಹಿಂದಿರುಗಿ ಬರಬೇಕು. ಇದು ಮಗುವಿಗೆ ಆಯುಸ್ಸು ಬಲ ಮುಂತಾದ ಗುಣಗಳು ಹೆಚ್ಚುವುದಕ್ಕಾಗಿ ಮಾಡುವ ಉತ್ಥಾನಕರ್ಮ ಅಥವಾ ಉಪನಿಷ್ಕ್ರಾಮಣ ಕರ್ಮ ಎಂದೆನಿಸುತ್ತದೆ. ಈ ಉತ್ಥಾನವನ್ನು ಯಶೋದೆಯು ಶ್ರೀಕೃಷ್ಣದೇವನಿಗೆ ದೊಡ್ಡ ಉತ್ಸವವಾಗಿಯೇ ನಡೆಯಿಸಿದಳು.

ಶ್ರೀಕೃಷ್ಣದೇವನು ಪೂತನೆಯನ್ನು ಮನೆಯೊಳಗೆ ಕೊಂದನು. ಇನ್ನು ಮುಂದೆ ಮನೆಯಿಂದ ಹೊರಗಿರುವ ದೈತ್ಯರನ್ನು ಸಂಹರಿಸಿಬೇಕೆಂದು ಸಂಕಲ್ಪಿಸಿದನು. ಅವನ ಸಂಕಲ್ಪಾನುಸಾರವಾಗಿ ಮನೆಯ ಹೊರಗಿರುವ ದೈತ್ಯರನ್ನು ಸಂಹರಿಸುವುದಕ್ಕೆ ಈ ಉಪನಿಷ್ಕ್ರಾಮ ಕರ್ಮವು ಅನುಕೂಲವಾಯಿತು.

ಈ ಉತ್ಥಾನೋತ್ಸವ ದಿನದಲ್ಲಿ ಶ್ರೀಕೃಷ್ಣದೇವನ ಜನ್ಮನಕ್ಷತ್ರವಾದ ರೋಹಿಣೀನಕ್ಷತ್ರವೂ ಒಟ್ಟುಗೂಡಿತು. ಆದ್ದರಿಂದ ಈ ಉತ್ಥಾನೋತ್ಸವವನ್ನು ದ್ವಿಗುಣವಾದ ಉತ್ಸಾಹದಿಂದ ಯಶೋದೆಯು ನಡೆಯಿಸಿದಳು. ಎಲ್ಲಾ ಬಂಧುಗಳನ್ನೂ ಕರೆಯಿಸಿದಳು. ಮೇಳಗಾರರು ವಾದ್ಯಗಳನ್ನು ಬಾರಿಸಿದರು. ಸುಮಂಗಲೆಯರು ಸುಸ್ವರದಿಂದ ಸಂಗೀತಗಳನ್ನು ಹಾಡಿದರು. ಪುರೋಹಿತರು ವೇದಘೋಷಗಳನ್ನು ಮಾಡಿದರು. ಶ್ರೀಕೃಷ್ಣದೇವನಿಗೆ ಮಂಗಳಜಲಗಳಿಂದ ಅಭಿಷೇಕವು ನಡಿಯಿತು. ಪೂಜ್ಯರಾದ ಬ್ರಾಹ್ಮಣರನ್ನು ಅನ್ನದಾನ ಗೋದಾನ ಮುಂತಾದವುಗಳಿಂದ ತೃಪ್ತಿಪಡಿಸಿದಳು. ಅವರು ಶ್ರೀಕೃಷ್ಣದೇವನನ್ನು ವೇದಮಂತ್ರಗಳಿಂದ ಆಶೀರ್ವದಿಸಿದರು. ಶ್ರೀಕೃಷ್ಣದೇವನಿಗೆ ಮೊಲೆಯ ಹಾಲನ್ನು ಕುಡಿಸಿದಳು. ಶ್ರೀಕೃಷ್ಣದೇವನು ತೃಪ್ತನಾದಂತೆ ನಟಿಸಿದನು. ನಿದ್ರೆಯು ಬರುವಂತೆ ನಟಿಸಿದನು. ಯಮುನಾನದಿಯ ತೀರದಲ್ಲಿ ಒಂದು ಬಂಡಿಯನ್ನು ಯಶೋದೆಯು ನೋಡಿದಳು. ಶ್ರೀಕೃಷ್ಣನಿಗೆ ಬಿಸಿಲಿನ

ಬಾಧೆಯು ಏರ್ಪಡಕೂಡದೆಂದು ಯೋಚಿಸಿದಳು. ಆ ಬಂಡಿಯ ಅಡಿಯಲ್ಲಿ ಮಲಗಿಸಿದಳು. ಶ್ರೀಕೃಷ್ಣದೇವನು ತುಂಬಾ ನಿದ್ರೆಯು ಬರುತ್ತಿರುವಂತೆ ನಟಿಸುತ್ತಾ ಮಲಗಿದನು. ಯಶೋದೆಯು ಈ ಉತ್ಸವಕ್ಕೆ ಬಂದಿರುವ ಬಂಧುಗಳನ್ನು ಗೌರವಿಸುವುದಕ್ಕೆ ಹೊರಟಳು. ಬಹುಕಾಲದ ವರೆಗೆ ಬಂಧುಗಳನ್ನೇ ಪೂಜಿಸಿದಳು. ಶ್ರೀಕೃಷ್ಣದೇವನನ್ನು ಮರೆತಳು.

ಶ್ರೀಕೃಷ್ಣದೇವನನ್ನು ನಂದನು ತನ್ನ ಬಂಧುಗಳ ಮಧ್ಯದಲ್ಲಿ ಅಭಿಷೇಕ ಮಾಡಿದನು. ಇದನ್ನು ನೋಡಿದರೆ ಅಂದಿನಿಂದ ಆರಂಭಿಸಿ ಉದ್ಧತರಾದ ದೈತ್ಯರ ಸಮೂಹವನ್ನು ನಿಗ್ರಹಿಸುವುದಕ್ಕಾಗಿ ಶ್ರೀಕೃಷ್ಣದೇವನಿಂದ ದೀಕ್ಷೆಯನ್ನು ಮಾಡಿಸಿದಂತಿತ್ತು. ಶ್ರೀಕೃಷ್ಣದೇವನು ದೀಕ್ಷೆಯನ್ನು ಸ್ವೀಕರಿಸಿದ ಕೂಡಲೇ ದೈತ್ಯರನ್ನು ಸಂಹರಿಸಲು ಆರಂಭಿಸಿದನು.

# ಶಕಟಾಕ್ಷ ಸಂಹಾರ

ಆಗ ಕಂಸನ ಭೃತ್ಯನಾದ ಶಕಟಾಕ್ಷ ಎಂಬ ದೈತ್ಯನು ಅಲ್ಲಿಗೆ ಬಂಡಿಯ ಅಚ್ಚು ಮರದ ರೂಪದಿಂದ ಬಂದನು. ಅಕಸ್ಮಾತ್ತಾಗಿ ಬಂಡಿಯ ಅಚ್ಚುಮರವು ಮುರಿದಂತೆ ನಟಿಸುತ್ತಾ ಆ ದೈತ್ಯನು ಬಂಡಿಯ ಅಡಿಯಲ್ಲಿ ಮಲಗಿರುವ ಮಕ್ಕಳನ್ನು ಸಂಹರಿಸುತ್ತಾ ಬಂದನು. ಬಂಡಿಯ ಅಡಿಯಲ್ಲಿ ಮಲಗಿರುವ ಶ್ರೀಕೃಷ್ಣದೇವನನ್ನು ನೋಡಿದನು. ಇವನನ್ನೂ ಹಾಗೆಯೇ ಕೊಲ್ಲಬೇಕೆಂದು ತೀರ್ಮಾನಿಸಿದನು. ತಾನು ಆ ಬಂಡಿಯ ಅಚ್ಚು ಮರದಲ್ಲಿ ಪ್ರವೇಶಿಸಿದನು.

ಸರ್ವಜ್ಞನಾದ ಶ್ರೀಕೃಷ್ಣದೇವನು ಇವನು ಬರುವುದನ್ನು ಪೂರ್ವಭಾವಿಯಾಗಿಯೇ ತಿಳಿದಿದ್ದನು. ಇವನನ್ನು ಕೊಲ್ಲುವುದಕ್ಕಾಗಿಯೇ ನಿದ್ರೆ ಬಂದವನಂತೆ ನಟಿಸುತ್ತಾ ಮಲಗಿದ್ದನು. ಇವನು ಬಂದಕೂಡಲೇ ನಿದ್ರೆಯಿಂದ ಎಚ್ಚರವಾದಂತೆ ನಟಿಸಿದನು. ನಿದ್ದೆಯಿಂದ ಎದ್ದಕೂಲೇ ಮಕ್ಕಳ ಸ್ವಭಾವವನ್ನು ಅನುಸರಿಸಿ ಮೊಲೆಹಾಲಿಗಾಗಿ ಅಳಲು ಆರಂಭಿಸಿದನು. ಅವನು ಅಳುತ್ತಿರುವ ಧ್ವನಿಯು ಯಶೋದೆಯ ಕಿವಿಗೆ ಬೀಳಲಿಲ್ಲ. ಅಳುತ್ತಾ ಕೈಗಳನ್ನೂ ಕಾಲುಗಳನ್ನೂ ಝಾಡಿಸಿದನು. ಶ್ರೀಕೃಷ್ಣದೇವನ ಅತಿ ಮೃದುವಾದ ಅಂಗಾಲು ಬಂಡಿಗೆ ಮೆಲ್ಲಗೆ ತಗಲಿತು. ಆದರೆ ಆ ವೇಗವನ್ನು ಆ ಬಂಡಿಯು ಸಹಿಸಲಿಲ್ಲ. ಅನಂತ ಶಕ್ತಿಯಿಂದ ಯುಕ್ತನಾಗಿರುವ ಶ್ರೀಕೃಷ್ಣದೇವನ ವೇಗವನ್ನು ಈ ಬಂಡಿಯು ಸಹಿಸದಿರುವುದು ಆಶ್ಚರ್ಯವಲ್ಲ. ಆ ಬಂಡಿಯು ಆಕಾಶದಲ್ಲಿ ಬಹುದೂರದ ವರೆಗೆ ಹೋಗಿ, ತಲೆಕೆಳಗಾಗಿ ಕೆಳಗೆ ಬಿತ್ತು. ಆ ಬಂಡಿಯಲ್ಲಿದ್ದ ಪಾತ್ರೆಗಳು ಮುಂತಾದ ಎಲ್ಲಾ ವಸ್ತುಗಲೂ ಕೆಳಗೆ ಉರುಳಿಬಿದ್ದವು. ಪುಡಿಪುಡಿಯಾದವು. ಆ ಬಂಡಿಯ ಅಚ್ಚುಮರವು ಮುರಿಯಿತು. ಆ ಅಚ್ಚುಮರದ ಒಳಗೆ ಅಡಗಿದ್ದ ಶಕಟಾಕ್ಷನ ದೇಹವು ಪುಡಿಪುಡಿಯಾಯಿತು.

ಕಂಸನು ಇನ್ನು ಕೆಲವು ದಿನಗಳಲ್ಲಿ ಸಾಯುವನು. ಸತ್ತಕೂಡಲೇ ನಿತ್ಯನರಕಗಳಲ್ಲಿ ಬೀಳುವನು. ಅವನು ಹೋಗುವ ಸಮಯದಲ್ಲಿ ಅವನ ಸಕಲ ಸಂಪತ್ತುಗಳನ್ನೂ ತೆಗೆದುಕೊಂಡು ಹೋಗಬಹುದು. ಅದಕ್ಕಾಗಿ ಅವನ ವಾಹನಗಳನ್ನು ಮುರಿಯಬೇಕು. ಅದಕ್ಕಾಗಿಯೇ ಶಕಟಾಕ್ಷ ಎಂಬ ಬಂಡಿಯನ್ನು ಶ್ರೀಕೃಷ್ಣದೇವನು ಮುರಿದಂತಿತ್ತು.

ಶ್ರೀಕೃಷ್ಣದೇವನು ಕಾಲಿನಿಂದ ಒದ್ದಕೂಡಲೇ ಶಕಟಾಕ್ಷ ಎಂಬ ದೈತ್ಯನು ಮಾಯೆಯಿಂದ ತಾನು ಸ್ವೀಕರಿಸಿದ ಅಚ್ಚುಮರದ ರೂಪವನ್ನು ಬಿಟ್ಟನು. ದೈತ್ಯಾಕಾರವಾದ ನಿಜರೂಪವನ್ನು ಧರಿಸಿದನು. ಸಕಲ ಮಾಯಾನಿರಾಸಕವಾದ ಶ್ರೀಹರಿಯ ಪಾದಸ್ಪರ್ಶವಾದ ಕೂಡಲೇ ಮಾಯೆಯು ಅವನನ್ನು ಬಿಟ್ಟುಹೋದದ್ದೂ ಅವನು ನಿಜರೂಪವನ್ನು ಧರಿಸಿದ್ದೂ ಯುಕ್ತವೇ ಸರಿ.

ಶ್ರೀಕೃಷ್ಣದೇವನ ಕಾಲಿನಿಂದ ಒದೆಯಲ್ಪಟ್ಟ ಶಕಟಾಕ್ಷನು ಸತ್ತುಹೋದನು. ಅವನು ಅಚ್ಚುಮರದ ರೂಪದಿಂದ ಚಕ್ರವನ್ನು ಧರಿಸಿದನು. ಚಕ್ರವನ್ನು ವೈಷ್ಣವರು ಮಾತ್ರ ಧರಿಸಲು ಅರ್ಹರು. ದೈತ್ಯರಲ್ಲ. ಈ ದೈತ್ಯನು ತನ್ನ ದೈತ್ಯಜಾತಿಗೆ ಅನರ್ಹವಾದ ಚಕ್ರವನ್ನು ಧರಿಸಿದ್ದರಿಂದಲೇ ಸತ್ತದ್ದು ಯುಕ್ತವಾಗಿದೆ.

ಈ ದೈತ್ಯನು ವಿಷ್ಣುಪದ ಅಂದರೆ ವಿಷ್ಣುವಿನ ಪಾದದಿಂದ ಒಮ್ಮೆ ಒದೆಯಲ್ಪಟ್ಟನು. ಆ ಒದೆಯ ರುಚಿಯನ್ನು ಕಂಡನು. ಆಕಾಶವೂ ವಿಷ್ಣುಪದ ಎಂದು ಹೇಳಲ್ಪಡುತ್ತದೆ. ಆದ್ದರಿಂದ ಅಲ್ಲಿಯೂ ಒದೆಯು ಸಿಗಬಹುದೆಂದು ಅಂಜಿದನು. ಅದಕ್ಕಾಗಿ ಆಕಾಶದಲ್ಲಿರುವ ಮೇಲಿನ ಲೋಕಗಳೇ ಬೇಡವೆಂದು ನಿಶ್ಚಯಿಸಿದನು. ಕೆಳಗಿರುವ ನಿತ್ಯನರಕಗಳಿಗೆ ಹೋದನು. ದೈತ್ಯರಿಗೆ ವಿನಾಶಕಾಲದಲ್ಲಿ ವಿಪರೀತಜ್ಞಾನವು ಬರುವುದು ಸಹಜ ಆದ್ದರಿಂದ ಈ ದೈತ್ಯನಿಗೆ ತನ್ನ ಮರಣಕಾಲದಲ್ಲಿ ವಿಷ್ಣುಪಾದವಲ್ಲದ ಆಕಾಶವನ್ನು ನೋಡಿ ವಿಷ್ಣುಪಾದ ಎಂಬ ವಿಪರೀತಜ್ಞಾನವು ಬಂದಿರುವುದು ಯುಕ್ತವೇ ಆಗಿದೆ.

ಈ ಬಂಡಿಯು ಮುರಿದ ಧ್ವನಿಯನ್ನು ಎಲ್ಲಾ ಗೊಲ್ಲರೂ ಯಶೋದೆಯೂ ಕೇಳಿ ಓಡಿಬಂದರು. " ಬಿರುಗಾಳಿಯಿಲ್ಲ ಎತ್ತುಗಳು ಅನ್ಯೋನ್ಯವಾಗಿ ಜಗಳವಾಡುತ್ತಾ ಬಂಡಿಯನ್ನು ತಳ್ಳಲಿಲ್ಲ, ಹೀಗಿರುವಾಗ ಈ ಬಂಡಿಯು ಹೇಗೆ ತಲೆಕೆಳಗಾಗಿ ಬಿತ್ತು. " ಎಂದು ಅನ್ಯೋನ್ಯವಾಗಿ ಮಾತನಾಡಿಕೊಂಡರು. ಆಗ ಅಲ್ಲಿದ್ದ ಗೊಲ್ಲಬಾಲಕರು. " ಶ್ರೀಕೃಷ್ಣನು ಒದ್ದನು. ಬಂಡಿಯು ಬಿತ್ತು " ಎಂದು ಹೇಳಿದರು. " ಹುಡುಗರ ಮಾತು" ಎಂದು ಹೇಳುತ್ತಾ ಈ ಬಾಲಕರ ಮಾತನ್ನು ಯಾರೂ ನಂಬಲಿಲ್ಲ. ಅಪರಿಮಿತ ಬಲವುಳ್ಳ ಈ ಕೃಷ್ಣದೇವನ ಬಲವನ್ನು ಅಲ್ಪಬಲವುಳ್ಳ ಇವರು ನಂಬದಿರುವುದು ಯುಕ್ತವೇ ಆಗಿದೆ.

ಮಗನನ್ನು ಮರೆತದ್ದಕ್ಕಾಗಿ ಯಶೋದೆಯನ್ನು ನಂದನು ಬೈದನು. ಯಮುನಾತೀರದಿಂದ ಯಶೋದೆಯು ಓಡಿಬಂದಳು. ಅಳುತ್ತಿರುವ ಶ್ರೀಕೃಷ್ಣದೇವನನ್ನು ತಬ್ಬಿಕೊಂಡಳು. ಮೊಲೆಹಾಲನ್ನು ಕುಡಿಸಿದಳು. ಬಲಿಷ್ಠರಾದ ಗೊಲ್ಲರು ಬಂಡಿಯನ್ನು ಸರಿಪಡಿಸಿದರು. ತನ್ನ ಮಗನಿಗೆ ಯಾವುದೋ ದುಷ್ಟಗ್ರಹವು ಬಾಧಿಸುತ್ತಿರುವುದಾಗಿ ತಿಳಿದಳು. ಬ್ರಾಹ್ಮಣರು ಹೋಮಗಳನ್ನು ಮಾಡಿದರು. ಮೊಸರು ಅಕ್ಷತೆ ದರ್ಭೆ ನೀರುಗಳಿಂದಲೂ ಪವಿತ್ರವಾದ ಮೂಲಿಕೆಗಳಿಂದಲೂ ಶ್ರೀಕೃಷ್ಣದೇವನಿಗೆ ಅಭಿಷೇಕವನ್ನು ಮಾಡಿದರು. ನಂದನು ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿದನು. ಅವರಿಂದ ಶ್ರೀಕೃಷ್ಣದೇವನಿಗೆ ಸ್ವಸ್ತಿವಾಚನವನ್ನು ಮಾಡಿಸಿದನು. ಸರ್ವಗುಣಗಳಿಂದಲೂ ಯುಕ್ತವಾದ ಗೋವುಗಳನ್ನು ದಾನ ಮಾಡಿದನು. " ಮಂತ್ರಜ್ಞರು ಸದಾಚಾರನಿರತರೂ ಅಸೂಯಾದಿದೋಷಗಳಿಲ್ಲದವರೂ ಆಗಿರುವ ಬ್ರಾಹ್ಮಣರು ಆಶೀರ್ವದಿಸಿರುವರು. ಅವರ ಮಾತುಗಳು ಎಂದಿಗೂ ಸುಳ್ಳಾಗುವುದಿಲ್ಲ. ಆದ್ದರಿಂದ ತನ್ನ ಮಗನಿಗೆ ಇನ್ನು ಯಾವ ವಿಧವಾದ ತೊಂದರೆಯೂ ಇರಲಾರದು" ಎಂದು ನಂಬಿದನು.

## ಅರ್ಜುನನ ಜನನ

ಶಕಟಾಕ್ಷನನ್ನು ಸಂಹರಿಸಿದ ಸರ್ವದುಷ್ಟಸಂಹಾರಕನಾದ ಶ್ರೀಕೃಷ್ಣದೇವನು ಪುನಃ ಮಲಗಿ ನಿದ್ರೆಯನ್ನು ಮಾಡುತ್ತಿರುವಂತೆ ನಟಿಸಿದನು. ಹೀಗೆ ಬಾಲಲೀಲೆಯಿಂದ ಗೊಲ್ಲರೆಲ್ಲರನ್ನೂ ಸಂತೋಷಪಡಿಸುತ್ತಾ ಶ್ರೀಕೃಷ್ಣದೇವನು ವಾಸಿಸುತ್ತಿದ್ದನು. ಅವನಿಗೆ ವೃದ್ಧಿಯೂ ಇಲ್ಲ ಹ್ರಾಸವೂ ಇಲ್ಲ. ಆದರೂ ವಯಸ್ಸು ಹೆಚ್ಚಿದಂತೆ

ತಾನೂ ಬೆಳೆದಂತೆ ಲೋಕದ ಜನರ ಕಣ್ಣಿಗೆ ಕಾಣಿಸುತ್ತಾ ಬಂದನು. ಶಕಟಾಸುರನನ್ನು ಶ್ರೀಕೃಷ್ಣದೇವನು ಸಂಹರಿಸಿದ ಮೇಲೆ ಪಾಂಡುರಾಜನು ತನ್ನ ಪತ್ನಿಯಾದ ಕುಂತಿಯನ್ನು ನೋಡಿ ಹೇಳಿದನು.

" ಓ ಕುಂತಿಯೇ! ಧರ್ಮಿಷ್ಠನಾದ ಮಗನು ಮೊದಲು ನಮಗೆ ಹುಟ್ಟಿದನು. ಅನಂತರದಲ್ಲಿ ಜ್ಞಾನಬಲ ಬಾಹುಬಲ ಎಂಬ ಎರಡು ವಿಧವಾದ ಬಲಗಳಿಂದ ಶ್ರೇಷ್ಠನಾದ ಮಗನು ಹುಟ್ಟಿದನು. ಅತಿಬಲಿಷ್ಠನಾದ ಒಬ್ಬನೇ ಇದ್ದರೆ ಅವನಿಗೂ ಶತ್ರುಗಳಿಗೂ ಯಾವಾಗಲೂ ಯುದ್ಧವು ಏರ್ಪಡುತ್ತಿರುವ ಸಂಭವವಿದೆ. ಅಂತಹ ಸಂಭವವು ಬಂದಾಗ ಅವನು ಶತ್ರುಗಳ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಿರುವಾಗ ಒಂದು ಕಡೆಗೆ ಯುದ್ಧವನ್ನೂ ಇನ್ನೊಂದು ಕಡೆಯಲ್ಲಿ ರಾಜ್ಯಪಾಲನವನ್ನೂ ಎರಡನ್ನೂ ಮಾಡುವುದು ಅವನಿಂದ ಸಾಧ್ಯವಾಗುವುದಿಲ್ಲ. ಯುದ್ಧವು ನಡೆಯುತ್ತಾ ಇರುವಾಗ ಶತ್ರುಗಳು ಕಳ್ಳತನದಿಂದ ರಾಜ್ಯವನ್ನು ಅಪಹರಿಸುವ ಸಂಭವವಿದೆ. ಆದ್ದರಿಂದ ಶತ್ರುಗಳೊಡನೆ ಯುದ್ಧಕ್ಕಾಗಿ ಒಬ್ಬನೂ ಪುರರಕ್ಷಣಕ್ಕಾಗಿ ಇನ್ನೊಬ್ಬನೂ ಹೀಗೆ ಬಲಿಷ್ಠರಾದ ಎರಡು ಮಕ್ಕಳು ಬೇಕು."

" ಈ ಎರಡು ಬಲಿಷ್ಠರಾದ ಮಕ್ಕಳಲ್ಲಿ ಮೊದಲನೆಯವನಾಗಿ ವಾಯುದೇವನು ಅವತರಿಸಿರುವನು. ವಾಯುದೇವನ ಅನಂತರದಲ್ಲಿ ಶೇಷ ಗರುಡ ರುದ್ರ ಎಂಬ ಮೂರು ದೇವತೆಗಳು ಸರ್ವದೇವತೆಗಳಲ್ಲಿ ಉತ್ತಮರಾಗಿರುವರು. ಆ ಮೂವರಲ್ಲಿ ಶೇಷದೇವನು ಈಗ ನಿನ್ನ ಅಣ್ಣನಾದ ವಸುದೇವನ ಮಗನಾಗಿ ಹುಟ್ಟಿರುವನು. ಆದ್ದರಿಂದ ನಿನಗೆ ಸೋದರಳಿಯನಾದಂತಾಯಿತು. ನಿನ್ನ ಸೋದರಳಿಯನನ್ನು ನಿನ್ನ ಅಂಗಸಂಗವನ್ನು ಮಾಡಲು ಅನರ್ಹನಾಗಿರುವನು. ಆದ್ದರಿಂದ ನೀನು ಅವನಿಂದ ಅತಿಬಲಿಷ್ಠನಾದ ಎರಡನೆಯ ಮಗನನ್ನು ಪಡೆಯುವಂತಿಲ್ಲ.

"ಗರುಡದೇವನು ಮನುಷ್ಯರಲ್ಲಿ ಯಾವಾಗಲೂ ಹುಟ್ಟುವುದಿಲ್ಲ. ಮನುಷ್ಯರಲ್ಲಿ ಅವತರಿಸಕೂಡದು ಎಂದೂ , ಅವತಾರದಿಂದ ಮಾಡಬೇಕಾದ ಸೇವೆಯನ್ನು ಮೂಲರೂಪದಿಂದಲೇ ಸ್ವೀಕರಿಸುವುದಾಗಿಯೂ ಅವನಿಗೆ ಶ್ರೀಹರಿಯ ಆಜ್ಞೆಯಿದೆ. ಆದ್ದರಿಂದ ಅವನು ನಿನಗೆ ಸಂತತಿಯನ್ನು ಉತ್ಪಾದನೆ ಮಾಡುವುದಕ್ಕಾಗಿ ಭೂಲೋಕಕ್ಕೆ ಬರುವುದಿಲ್ಲ. ಮತ್ತು ನಿನಗೆ ಮಗನಾಗಿ ಅವತರಿಸುವುದಿಲ್ಲ."

"ರುದ್ರನು ಮಹಾಕೋಪಿಷ್ಠನು ಕೋಪಕ್ಕೆ ಕಾರಣವಾದ ತಮೋಗುಣವೇ ಪ್ರಧಾನವಾಗಿ ಇರುವ ಶರೀರವುಳ್ಳವನು. ಪ್ರಜಾರಕ್ಷಣೆಯು ಸತ್ವಗುಣಪ್ರಧಾನವಾದ ಶರೀರವುಳ್ಳವನಿಂದಲೂ ಶಾಂತ್ಯಾದಿಗುಣಗಳಿಂದ ಯುಕ್ತನಾದವನಿಂದಲೂ ಏರ್ಪಡಬೇಕು. ಆದ್ದರಿಂದ ರುದ್ರನು ಪ್ರಜಾರಕ್ಷಣೆಗೆ ಉಪಯುಕ್ತನಾದ ಎರಡನೆಯ ಬಲಿಷ್ಠನನ್ನು ಹುಟ್ಟಿಸಲು ಅರ್ಹನಲ್ಲ."

" ಗರುಡ, ಶೇಷ ರುದ್ರ ಈ ಮೂವರ ಅನಂತರದಲ್ಲಿ ಸರ್ವದೇವತೆಗಳ ಮಧ್ಯದಲ್ಲಿ ದೇವೇಂದ್ರನು ಉತ್ತಮನು. ಅವನನ್ನು ಕರಿ. " ಇದು ಪಾಂಡುರಾಜನ ಆಜ್ಞೆ. ಕುಂತೀದೇವಿಯು ತನ್ನ ಪತಿಯ ಆಜ್ಞೆಯಂತೆ ಮಂತ್ರವನ್ನು ಇನ್ನೊಮ್ಮೆ ಜಪಿಸಿ. ದೇವೇಂದ್ರನನ್ನು ಕರೆದಳು. ದೇವೇಂದ್ರನು ಬಂದನು. ಕುಂತಿಯ ಅಂಗಸಂಗವನ್ನು ಮಾಡಿದನು. ಆಗಲೇ ತಾನೇ ತನ್ನ ಮಗನಾಗಿ ಹುಟ್ಟಿದನು. ಅವನೇ ಅರ್ಜುನ ಎಂದು ಪ್ರಸಿದ್ಧನಾದನು. ಅರ್ಜುನನಲ್ಲಿ ನರ ಎಂಬ ಶೇಷದೇವನ ಆವೇಶವೂ ವಿಷ್ಣುವಿನ ವಿಶೇಷಾವೇಶವೂ ಇತ್ತು. ಆದ್ದರಿಂದಲೇ ಅವನು ಅತ್ಯಂತ ಬಲಿಷ್ಠನೂ ಬ್ರಹ್ಮಚಾರಿ ಸಕಲ ಅಸ್ತ್ರಗಳನ್ನು ತಿಳಿದವನೂ ಆದನು.

ಭೀಮ, ಅರ್ಜುನ ಅವರಿಬ್ಬರೂ ಪರಮಸುಂದರವಾದ ರೂಪವುಳ್ಳವರು. ಆದರೆ ವಜ್ರದಂತೆ ಅತಿ ಕಠೋರವಾದ ದೇಹವುಳ್ಳವರು. ಪರಮಸುಂದರವಾದ ರೂಪವೂ ಅತಿ ಮೃದುವಾದ ಶರೀರವೂ ಉಳ್ಳ ಇನ್ನೊಬ್ಬ ಮಗನು ಹುಟ್ಟಬೇಕೆಂದು ಆಶಿಸಿದನು. ಕುಂತಿಯನ್ನು ಕರೆದು ಆ ರೀತಿಯಾದ ಮಗನನ್ನು ಪಡೆಯಬೇಕೆಂದು ಆಜ್ಞಾಪಿಸಿದನು. ಕುಂತಿಯು ಆಲೋಚಿಸಿದಳು.

ರಾಜ್ಯರಕ್ಷಣೆಯನ್ನು ಮಾಡುವುದಕ್ಕಾಗಿ ಧಾರ್ಮಿಕನೂ, ಬಲಿಷ್ಠರಾದ ಎರಡು ಮಕ್ಕಳು ಬೇಕು ಎಂದು ಹೇಳುವುದರಲ್ಲಿ ನ್ಯಾಯವಿದೆ. ಪರಮಸುಂದರನೂ ಮೃದುಶರೀರವುಳ್ಳವನೂ ಮಗನಾಗಿ ಹುಟ್ಟುವುದರಿಂದ ರಾಜ್ಯರಕ್ಷಣೆಯ ವಿಷಯದಲ್ಲಿ ಯಾವ ಉಪಯೋಗವೂ ಇಲ್ಲ. ಆದ್ದರಿಂದ ಈ ಮಗನು ಬೇಡವೆಂದು ತೀರ್ಮಾನಿಸಿದಳು. ಗಂಡನಿಗೆ ಈ ಕಾರಣವನ್ನು ತಿಳಿಸಿದಳು. ತಾನು ಪಾಂಡುರಾಜನ ಆಜ್ಞೆಯನ್ನು ಅಂಗೀಕರಿಸಲಿಲ್ಲ. ಅವನೂ ಇವಳ ಅಭಿಪ್ರಾಯವನ್ನು ಒಪ್ಪಿದನು.

## ಉದ್ಧವನ ಜನನ

"ಉತ್ಕೃಷ್ಟಜಾತಿಯಲ್ಲಿ ಹುಟ್ಟಿದವರು ತನಗಿಂತ ನಿಕೃಷ್ಟ ಜಾತಿಯಲ್ಲಿ ಹುಟ್ಟಿದವರ ದಾಸತ್ವವನ್ನು ವಹಿಸಬಾರದು. ಅವರ ಎಂಜಲನ್ನು ತಿನ್ನಬಾರದು. ಅವರು ಧರಿಸಿದ ಮಾಲೆ ಗಂಧ ವಸ್ತ್ರ ಅಲಂಕಾರ ಮುಂತಾದವುಗಳನ್ನು ಧರಿಸಬಾರದು. ಇದು ಶ್ರೀಹರಿಯ ನಿಯಮ. ನಾನು ದ್ರೋಣ ಎಂಬ ಹೆಸರಿನಿಂದ ಈಗಾಗಲೇ ಬ್ರಾಹ್ಮಣನಾಗಿ ಹುಟ್ಟಿರುವೆನು. ಶ್ರೀಕೃಷ್ಣದೇವನು ಕ್ಷತ್ರಿಯಜಾತಿಯಲ್ಲಿ ಅವತರಿಸಿರುವನು. ಮೇಲ್ಕಂಡ ನಿಯಮದಂತೆ ನಾನು ನಡೆಯಲೇ ಬೇಕು. ಆದ್ದರಿಂದ ನಾನು ದ್ರೋಣನಾಗಿ ಅವತರಿಸಿದಾಗ ಶ್ರೀಕೃಷ್ಣದೇವನ ಎಂಜಲು ಮುಂತಾದವುಗಳನ್ನು ಸ್ವೀಕರಿಸುವಂತಿಲ್ಲ. ಧರ್ಮರಕ್ಷಕನಾದ ಶ್ರೀಕೃಷ್ಣದೇವನೂ ತನ್ನ ದಾಸತ್ವ ಮುಂತಾದವುಗಳನ್ನು ನನಗೆ ಕೊಡುವಂತಿಲ್ಲ."

**ತ್ವಯೋಪಭುಕ್ತಸ್ರಗ್ಗಂಧವಾಸೋಽಲಂಕಾರಚರ್ಚಿತಾಃ।**
**ಉಚ್ಛಿಷ್ಟಭೋಜಿನೋ ದಾಸಾಸ್ತವ ಮಾಯಾಂ ಜಯೇಮಹಿ ॥**

"ಇದು ನಾನೇ ಒಂದು ಸಂದರ್ಭದಲ್ಲಿ ಆಸೆಯಿಂದ ಹೇಳುವ ಮಾತು. ಈ ಮಾತಿನಲ್ಲಿ. "ಹೇ ದೇವ, ನೀನು ಧರಿಸಿದ ವಸ್ತ್ರಾದಿಗಳನ್ನು ನಾನು ಧರಿಸಬೇಕು. ನಿನ್ನ ಎಂಜಲನ್ನು ನಾನು ತಿನ್ನಬೇಕು. ನಿನ್ನ ದಾಸನಾಗಿ ನಾನು ಸರ್ವದಾ ಬಿದ್ದಿರಬೇಕು." ಎಂದು ಹೇಳುತ್ತಾ ನನ್ನ ಆಸೆಯನ್ನು ತಿಳಿಸುವೆನು ನನ್ನ ಆಸೆಯು ದ್ರೋಣಜನ್ಮದಲ್ಲಿ ಪೂರ್ತಿಯಾಗುವುದಿಲ್ಲ. ನಾನು ದ್ರೋಣನಾಗಿ ಹುಟ್ಟಿದಾಗ ಕ್ಷತ್ರಿಯನಂತೆ ಯುದ್ಧದಲ್ಲಿ ಮುನ್ನಗ್ಗುವೆನು. ಭೂಭಾರವನ್ನು ಪರಿಹರಿಸುವೆನು. ಈ ಅಲ್ಪವಾದ ಸೇವೆಯನ್ನು ಮಾತ್ರ ಮಾಡಿ ಶ್ರೀಕೃಷ್ಣದೇವನನ್ನು ತೃಪ್ತಿಪಡಿಸುವೆನು. ಆದ್ದರಿಂದ ನನ್ನ ದ್ರೋಣಜನ್ಮವೂ ಅಪೂರ್ಣವೆಂದು ಭಾವಿಸುವೆನು. ದ್ರೋಣಾವತಾರದಲ್ಲಿ ಮಾಡದಿರುವ ಎಂಜಲನ್ನ ಭಕ್ಷಣ ಮುಂತಾದ ಪರಮಭಾಗವತ ಧರ್ಮಗಳನ್ನು ಅನುಷ್ಠಿಸುವುದಕ್ಕಾಗಿ ನಾನು ಇನ್ನೊಂದು ಜನ್ಮವನ್ನು ಸ್ವೀಕರಿಸಬೇಕು." ಇದು ದೇವೇಂದ್ರನ ಗುರುಗಳಾದ ಬೃಹಸ್ಪತ್ಯಾಚಾರ್ಯರ ನಿರ್ಧಾರ.

ಧರ್ಮರಾಜನೇ ಮೊದಲಾದ ಪಾಂಡವರೂ ಬಲರಾಮನೇ ಮೊದಲಾದ ಯಾದವರೂ ಹುಟ್ಟುವುದಕ್ಕಿಂತ

ಪೂರ್ವದಲ್ಲಿ ಉಪಗವ ಎಂಬ ಯಾದವನ ಪತ್ನಿಯ ಗರ್ಭದಲ್ಲಿ ಈ ಬೃಹಸ್ಪತ್ಯಾಚಾರ್ಯರು ಉದ್ಧವ ಎಂಬ ಹೆಸರಿನಿಂದ ಅವತರಿಸಿದರು. ಈ ಉದ್ಧವನು ಶ್ರೀಕೃಷ್ಣದೇವನ ಜಾತಿಯಲ್ಲಿ ಹುಟ್ಟಿರುವುದರಿಂದ ಮೇಲ್ಕಂಡ ತನ್ನ ಅನೆಗಳನ್ನೆಲ್ಲವನ್ನೂ ಪೂರ್ತಿಮಾಡಿಕೊಂಡು ಅಪರಿಮಿತವಾದ ಭಾಗವತಧರ್ಮವನ್ನು ಮಾಡಿ ಶ್ರೀಕೃಷ್ಣದೇವನನ್ನು ಬಹುವಿಧದಿಂದ ತೃಪ್ತಿಪಡಿಸಿದನು. ಬೃಹಸ್ಪತ್ಯಾಚಾರ್ಯರಿಂದಲೇ ಸರ್ವವಿದ್ಯೆಗಳನ್ನು ಓದಿದನು. ಮಹಾ ವಿದ್ವಾಂಸನಾದನು. ನಿಪುಣನಾದನು. ಸರ್ವಜ್ಞನಾದನು. ಶ್ರೀಕೃಷ್ಣದೇವನ ಪ್ರಧಾನ ಮಂತ್ರಿಯಾದನು.

# ಸಾತ್ಯಕಿ ಚೇಕಿತಾನ ಮತ್ತು ಕೃತವರ್ಮರ ಜನನ ಮತ್ತು ಧರ್ಮರಾಜಾದಿಗಳ ಆಯುಸ್ಸು

ಉದ್ಧವನು ಹುಟ್ಟಿದ ಮೇಲೆ ಮೂರು ವರ್ಷಗಳು ಮುಗಿದವು. ಆಗ ಸಾತ್ಯಕಿಯು ಹುಟ್ಟಿದನು. ಸಾತ್ಯಕಿಯು ಹುಟ್ಟಿದ ದಿನದಲ್ಲಿಯೇ ನಾಲ್ವತ್ತೊಂಭತ್ತು ವಾಯುದೇವರ ಮಧ್ಯದಲ್ಲಿ ಪ್ರಸಿದ್ಧನಾದ ಪ್ರವಹ ಎಂಬ ವಾಯುದೇವನೇ ಶ್ರೀಕೃಷ್ಣದೇವನನ್ನು ಸೇವಿಸುವುದಕ್ಕಾಗಿ ಯದುವಂಶದಲ್ಲಿ ಚೇಕಿತಾನ ಎಂಬ ಹೆಸರಿನಿಂದ ಹುಟ್ಟಿದನು. ಅದೇ ದಿನದಲ್ಲಿಯೇ ಹೃದಿಕಾ ಎಂಬ ಸ್ತ್ರೀಯ ಗರ್ಭದಿಂದ ಕೃತವರ್ಮನು ಹುಟ್ಟಿದನು. ಸಾತ್ಯಕಿ ಚೇಕಿತಾನ ಕೃತವರ್ಮ ಎಂಬ ಈ ಮೂವರು ಹುಟ್ಟಿದ ಮೇಲೆ ಮೂರು ವರ್ಷಗಳ ಅನಂತರದಲ್ಲಿ ಧರ್ಮರಾಜನು ಹುಟ್ಟಿದನು.

# ಅಶ್ವತ್ಥಾಮರ ಜನನ

ಧರ್ಮರಾಜನು ಹುಟ್ಟಿದ ಮೇಲೆ ಒಂದು ವರ್ಷವು ಮುಗಿಯಿತು. ಆಗ ಭೂಭಾರವನ್ನು ಪರಿಹರಿಸಿ ಶ್ರೀಕೃಷ್ಣದೇವನನ್ನು ಸೇವಿಸವುದಕೊಸ್ಕರ ರುದ್ರದೇವರು ಕೃಪೀದೇವಿಯಲ್ಲಿ ದ್ರೋಣಾಚಾರ್ಯರಿಂದ ಅಶ್ವತ್ಥಾಮ ಎಂಬ ಹಸೆರಿನಿಂದ ಹುಟ್ಟಿದರು. ಅವರು ಹುಟ್ಟುವಾಗ ಕುದುರೆಯಂತೆ ಕೂಗಿದರು. ಆದ್ದರಿಂದ ಅಶ್ವತ್ಥ ಅಂದರೆ ಕುದುರೆಯಲ್ಲಿರುವ ಧ್ವನಿಯಿಂದ ಅಮಾ ಅಂದರೆ ಸಹಿತರಾಗಿ ಹುಟ್ಟಿದರಿಂದ ಅಶ್ವತ್ಥಾಮಾ ಎಂಬ ಹೆಸರಿನಿಂದ ಪ್ರಸಿದ್ಧರಾದರು. ಮಹಾತ್ಮರಾದ ಈ ಅಶ್ವತ್ಥಾಮರು ಮಹಾಬಲಿಷ್ಠರೂ ಸರ್ವಜ್ಞರೂ ಸಕಲಾಸ್ತ್ರಗಳನ್ನು ತಿಳಿದವರೂ ಆದರು. ಅಶ್ವತ್ಥಾಮರು ಹುಟ್ಟಿದ ಮೇಲೆ ನಾಲ್ಕನೆಯ ದಿನದಲ್ಲಿ ದುರ್ಯೋಧನನು ಹುಟ್ಟಿದನು. ಅವನು ಹುಟ್ಟಿದ ಮರುದಿನದಲ್ಲಿ ಅತಿ ಧೀರನಾದ ಶ್ರೀಭೀಮಸೇನದೇವರು ಹುಟ್ಟಿದರು. ಶ್ರೀಭೀಮಸೇನದೇವರು ಹುಟ್ಟಿದ ದಿನದಲ್ಲಿ ಯೇ ದುಃಶಾಸನನು ಹುಟ್ಟಿದನು. ಶ್ರೀಭೀಮಸೇನದೇವರು ಹುಟ್ಟಿದ ಮೇಲೆ ಎರಡು ತಿಂಗಳುಗಳು ಮುಗಿದವು. ಆಗ ರೋಹಿಣೀದೇವಿಯ ಗರ್ಭದಲ್ಲಿ ಬಲರಾಮನು ಹುಟ್ಟಿದನು.

# ಬಲರಾಮನು ಶ್ರೀಕೃಷ್ಣದೇವನಿಗೆ ಅಣ್ಣನಾಗಿ ಹುಟ್ಟಲು ಕಾರಣ

ರಾಮಾವತಾರಕಾಲದಲ್ಲಿ ಶೇಷದೇವನು ಶ್ರೀರಾಮದೇವನಿಗೆ ತಮ್ಮನಾಗಿ ಹುಟ್ಟಿದನು. ಆಗ ಅಣ್ಣನಾದ ಶ್ರೀರಾಮದೇವರ ಸೇವೆಯನ್ನು ತನ್ನ ಯೋಗ್ಯತೆಗಿಂತ ಅಧಿಕವಾಗಿ ಮಾಡಿದನು. ಆ ಅಧಿಕವಾದ ಪುಣ್ಯವನ್ನು ಕಳೆದುಕೊಳ್ಳಬೇಕು. ಅದಕ್ಕಾಗಿ ಶ್ರೀಹರಿಯು ಅವನಿಗೆ ದುರ್ಬುದ್ಧಿಯನ್ನು ಕೊಟ್ಟನು. " ಶ್ರೀರಾಮದೇವನಿಗೆ ತಮ್ಮ ನಾಗಿ ಹುಟ್ಟಿದ್ದರಿಂದಲ್ಲವೇ ಇಷ್ಟು ಕಷ್ಟವು ಏರ್ಪಟ್ಟಿತು. ಇನ್ನು ಮುಂದೆ ನಾನು ತಮ್ಮನಾಗಿ ಹುಟ್ಟಲಾರೆನು.

ಅಣ್ಣನಾಗಿಯೇ ಹುಟ್ಟುವೆನು'' ಎಂದು ಸಂಕಲ್ಪಿಸಿದನು. ಶ್ರೀಹರಿಯು ಕೊಟ್ಟಿರುವ ಈ ದುರ್ಬುದ್ಧಿಯಿಂದಲೇ ಕೃಷ್ಣಾವತಾರಕಾಲದಲ್ಲಿ ಶ್ರೀಕೃಷ್ಣದೇವನಿಗೆ ಅಣ್ಣನಾಗಿ ಹುಟ್ಟಿದನು.

ಭಗವದ್ಭಕ್ತನಾದ ದೇವೇಂದ್ರನು ಗೋವರ್ಧನಪರ್ವತವನ್ನು ಶ್ರೀಕೃಷ್ಣದೇವನು ಎತ್ತಿದಾಗ ಶ್ರೀಕೃಷ್ಣದೇವನನ್ನು ಎದುರಿಸಲಿಲ್ಲವೇ? ದೇವೇಂದ್ರನಿಗೆ ದೈತ್ಯಾವೇಶದಿಂದ ದುರ್ಬುದ್ಧಿಯು ಏರ್ಪಡಲಿಲ್ಲವೆ? ಆ ದುರ್ಬುದ್ಧಿಯನ್ನು ಶ್ರೀಹರಿಯೇ ಕೊಡಲಿಲ್ಲವೆ? ಅದರಂತೆ ಶೇಷದೇವನಿಗೂ ದೈತ್ಯಾವೇಶದಿಂದಲೂ ಶ್ರೀಹರಿಯ ಪ್ರೇರಣೆಯಿಂದಲೂ ಲಕ್ಷ್ಮಣಜನ್ಮದಲ್ಲಿ ಬಂದಿರುವ ಅಧಿಕ ಆಯಾಸದಿಂದ ಈ ವಿಧವಾದ ದುರ್ಬುದ್ಧಿ ಬಂತು.

## ಬಲರಾಮನು ದೇವಕೀ ರೋಹಿಣಿಯರಿಗೆ ಮಗನಾಗಿ ಹುಟ್ಟಲು ಕಾರಣ

ದೇವಕೀದೇವಿಯು ಶೇಷದೇವನು ತನಗೆ ಮಗನಾಗಿ ಹುಟ್ಟಬೇಕಂದು ತಪಸ್ಸನ್ನು ಮಾಡಿದಳು. ಅದಕ್ಕಾಗಿ ಶೇಷದೇವನು ಮೂರು ತಿಂಗಳ ವರೆಗೆ ದೇವಕೀದೇವಿಯ ಗರ್ಭದಲ್ಲಿ ವಾಸಿಸಿದನು. ರೋಹಿಣೀದೇವಿಯು ವಿಷ್ಣುವಿನ ಆವೇಶದಿಂದ ಯುಕ್ತನಾದ ಮಹಾಬಲಿಷ್ಠನಾದ ಮಗನು ಹುಟ್ಟಬೇಕೆಂದು ತಪಸ್ಸನ್ನು ಮಾಡಿದಳು. ಆದಕ್ಕಾಗಿ ಶ್ರೀಹರಿಯ ಬಿಳಿಯ ಕೂದಲಿನಿಂದ ಯುಕ್ತನಾದ ಶೇಷದೇವನು ರೋಹಿಣೀದೇವಿಯ ದೇಹದಲ್ಲಿ ಪ್ರವೇಶಿಸಿದನು. ಶ್ರೀಹರಿಯ ಅವಯಗಳಿಗೂ ಅವನಿಗೂ ಭೇದವಿಲ್ಲ ಆದ್ದರಿಂದ ಶ್ರೀಹರಿಯ ಬಿಳಿಯ ಕೂದಲು ಶ್ರೀಹರಿಯೇ ಆಗಿರುತ್ತದೆ. ಆದ್ದರಿಂದಲೇ ಶ್ರೀಹರಿಯ ಬಿಳಿಯ ಕೂದಲಿನಿಂದ ಯುಕ್ತನಾದ ಶೇಷದೇವನೂ ಶ್ರೀಹರಿಯ ಆವೇಶದಿಂದ ಯುಕ್ತನಾದ ಶೇಷದೇವನಾದಂತಾಯಿತು. ಏಳು ತಿಂಗಳು ಮುಗಿಯುವವರೆಗೆ ಅಲ್ಲಿ ವಾಸಿಸಿದನು. ದೇವಕೀದೇವಿಯ ಗರ್ಭದಲ್ಲಿ ಮೂರು ತಿಂಗಳು. ರೋಹಿಣೀದೇವಿಯ ದೇಹದಲ್ಲಿ ಏಳು ತಿಂಗಳು ಹೀಗೆ ಹತ್ತು ತಿಂಗಳು ಬಲರಾಮನಿಗೆ ಗರ್ಭವಾಸವು ಏರ್ಪಟ್ಟಿತು. ಅನಂತರದಲ್ಲಿ ಹುಟ್ಟಿದನು.

## ಶ್ರೀಕೃಷ್ಣದೇವನಿಗೆ ಹತ್ತು ೩೦ಗಳ ವರೆಗೆ ಗರ್ಭವಾಸ

" ದಶಮೇ ಮಾಸಿ ಜಾಯತೇ'' ಎಂಬ ಶ್ರುತಿಯು ಹತ್ತನೇ ತಿಂಗಳಿನಲ್ಲಿ ಪ್ರಸವ ಎಂದು ಹೇಳುತ್ತದೆ. ಆ ಶ್ರುತಿಯ ಅರ್ಥವನ್ನು ಸತ್ಯವಾಗುವಂತೆ ಮಾಡುವುದಕ್ಕೋಸ್ಕರ ಬಲರಾಮನು ಹಿಂದೆ ಹೇಳಿದಂತೆ ಹತ್ತನೇ ತಿಂಗಳಿನಲ್ಲಿ ಹುಟ್ಟಿದನು. ಶ್ರೀಕೃಷ್ಣದೇವನೂ ಸಹ ಬಿಳಿಯ ಕೂದಲಿನ ರೂಪದಿಂದ ಮೂರು ತಿಂಗಳುಗಳ ವರೆಗೆ ದೇವಕೀದೇವಿಯ ದೇಹದಲ್ಲಿ ವಾಸಿಸಿದನು. ಅದೇ ದೇಹದಲ್ಲಿ ಶ್ರೀಕೃಷ್ಣರೂಪದಿಂದ ಏಳು ತಿಂಗಳ ವರೆಗೆ ವಾಸಿಸಿದನು. ಆದ್ದರಿಂದ ಹತ್ತು ತಿಂಗಳ ವರೆಗೆ ತಾಯಿಯ ಹೊಟ್ಟೆಯಲ್ಲಿ ವಾಸಿಸಿದ ಹಾಗಾಯಿತು.

## ದೇವಕೀ ಮತ್ತು ವಸುದೇವರ ಕಾರಾಗೃಹವಾಸ

ದೇವಕೀ ಮತ್ತು ವಸುದೇವ ಇವರಿಬ್ಬರನ್ನು ಕಂಸನು ಸೆರೆಮನೆಯಲ್ಲಿ ಇಟ್ಟಂತೆ ತಿಳಿಯುತ್ತದೆ. ಹಾಗಾದರೆ ರೋಹಿಣೀ ಮುಂತಾದ ವಸುದೇವನ ಇತರ ಪತ್ನಿಯರಿಗೂ ಅವನಿಗೂ ಸಂಪರ್ಕವಿಲ್ಲದೆ ಬಲರಾಮ ಮುಂತಾದವರು ಹೇಗೆ ಹುಟ್ಟಿದರು ಎಂಬ ಪ್ರಶ್ನೆಯು ಬರುತ್ತದೆ. ಇದಕ್ಕೆ ಉತ್ತರವನ್ನು ಕೊಡುತ್ತೇವೆ.

ದೇವಕೀದೇವಿಯು ಆರು ಮಕ್ಕಳನ್ನು ಒಂದೊಂದು ವರ್ಷಗಳಿಗೆ ಒಬ್ಬೊಬ್ಬ ಮಗನನ್ನಾಗಿ ಪ್ರಸವಿಸಿದಳು. ಆ ಆರು ವರ್ಷಗಳಲ್ಲಿ ಹತ್ತು ಹತ್ತು ತಿಂಗಳ ವರೆಗೆ ಗರ್ಭಿಣಿಯಾಗಿದ್ದಳು. ಉಳಿದ ಎರಡು ತಿಂಗಳ ವರೆಗೆ ಬಾಣಂತಿಯಾಗಿದ್ದಳು. ಏಳನೆಯ ಗರ್ಭಧಾರಣೆಯು ಏರ್ಪಟ್ಟ ಮೇಲೆ ಮೂರು ತಿಂಗಳ ವರೆಗೆ ಶೇಷದೇವನನ್ನೂ ಏಳು ತಿಂಗಳ ವರೆಗೆ ಶ್ರೀಕೃಷ್ಣದೇವನನ್ನು ಗರ್ಭದಲ್ಲಿ ಧರಿಸಿದಳು. ಅವಳು ಗರ್ಭಿಣಿಯಾಗಿರುವ ಸಮಯದಲ್ಲಿಯೂ ಬಾಣಂತಿಯಾಗಿರುವ ಸಮಯದಲ್ಲಿಯೂ ಅವಳಿಗೂ ವಸುದೇವನಿಗೂ ಕಾರಾಗೃಹವಾಸವು ಏರ್ಪಟ್ಟಿತ್ತು. ಅವಳು ಮೊದಲನೆಯ ಮಗನನ್ನು ಧರಿಸಿದಳು. ಅವಳು ಗರ್ಭಿಣಿಯಾಗಿರುವ ಸಮಯದಲ್ಲಿಯೂ ಬಾಣಂತಿಯಾಗಿರುವ ಸಮಯದಲ್ಲಿಯೂ ಅಳವಿಗೂ ವಸುದೇವನಿಗೂ ಕಾರಾಗೃಹವಾಸವು ಏರ್ಪಟ್ಟಿತ್ತು. ಅವಳು ಮೊದಲನೆಯ ಮಗನನ್ನು ಧರಿಸಿದ ಮೇಲೆ ಶ್ರೀಕೃಷ್ಣದೇವನನ್ನು ಪ್ರಸವಿಸುವ ವರೆಗೆ ೬ ವರ್ಷ ೧೦ ತಿಂಗಳುಗಳಾದವು. ಈ ಸಮಯದಲ್ಲಿ ಕಾರಾಗೃಹವಾಸವು ಬಿಡದೆ. ವಸುದೇವ ಮತ್ತು ದೇವಕೀದೇವಿಯರಿಗೆ ಏರ್ಪಟ್ಟಿತ್ತು ದೇವಕೀದೇವಿಗೆ ಹುಟ್ಟಿದ ಮಕ್ಕಳನ್ನು ಕೊಲ್ಲುವುದಕ್ಕಾಗಿಯೇ ಈ ಏರ್ಪಾಡು.

ಈ ಕಾರಾಗೃಹವಾಸಕಾಲದಲ್ಲಿ ಪಾಪವನ್ನೇ ಮಾಡದಿರುವ ವಸುದೇವ ಮತ್ತು ದೇವಕೀದೇವಿಯರ ಕಾಲುಗಳಲ್ಲಿ ಬೇರೆ ಬೇರೆ ಸಂಕೋಲೆಗಳನ್ನು ಹಾಕಿಸಿದ್ದನು. ಹಾಗೆ ಸಂಕೋಲೆಯನ್ನು ಹಾಕಿಸಿದ್ದರಿಂದ ದೇವಕಿಗೂ ವಸುದೇವನಿಗೂ ಸೆರೆಮನೆಯೊಳಗೆ ನಡಿಯುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ. ಕೈಗಳಿಂದ ಮಾಡುವ ಎಲ್ಲಾ ಕಾರ್ಯಗಳನ್ನೂ ಮಾಡಲು ಸಾಧ್ಯವಾಗುತ್ತಿತ್ತು. ಈ ವಿಧವಾದ ಸಂಕೋಲೆಗೆ ಗತಿಶೃಂಖಲಾ ಅಂದರೆ ನಡೆಸಂಕೋಲೆ ಎಂದು ಹೆಸರು. ಇವರಿಬ್ಬರು ಕಾರಾಗೃಹದಲ್ಲಿ ವಾಸಿಸುತ್ತಿರುವಾಗ ವಸುದೇವನ ಇತರ ಪತ್ನಿಯರೂ ಅವನ ಜೊತೆಯಲ್ಲಿ ವಾಸಿಸುವುದಕ್ಕೆ ಅನುಮತಿಯಿತ್ತು. ಅವರು ಜೈಲಿನಲ್ಲಿ ವಸುದೇವನ ಜೋತೆಯಲ್ಲಿಯೂ ಹೊರಗೆ ವಸುದೇವನ ತಮ್ಮನಾದ ನಂದನ ಮನೆಯಲ್ಲಿಯೂ ವಾಸಿಸಬಹುದು. ಅವರಿಗೆ ಕಾರಾಗೃಹವಾಸದ ನಿರ್ಬಂಧವಿಲ್ಲ.

ಅವರಲ್ಲಿ ಯಾರಾದರೂ ಪತ್ನಿಯರು ಗರ್ಭಿಣಿಯರಾದರೆ ಅವರು ಮಾತ್ರ ವಸುದೇವನ ಜೊತೆಯಲ್ಲಿ ಇರಕೂಡದು. ಅವಳಿಗೆ ಹುಟ್ಟಿದ ಮಗನನ್ನು ದೇವಕೀದೇವಿಯ ಮಗನನ್ನೂ ಬದಲಾಯಿಸಬಹುದೆಂಬ ಸಂಶಯವೇ ಇದಕ್ಕೆ ಕಾರಣ. ಅವರೆಲ್ಲರೂ ನಂದನ ಮನೆಯಲ್ಲಿ ವಾಸಿಸಬೇಕು. ಇದು ಕಂಸನ ಏರ್ಪಾಡು.

ದೇವಕೀದೇವಿಯು ಏಳನೇ ಗರ್ಭವನ್ನು ಧರಿಸಿದಳು. ಆ ಕಾಲದಲ್ಲಿ ರೋಹಿಣೀದೇವಿಯು ನಂದನ ಮನೆಯಲ್ಲಿದ್ದಳು. ದೇವಕೀದೇವಿಯ ಗರ್ಭದಲ್ಲಿದ್ದ ಶಿಶುವನ್ನು ದುರ್ಗಾದೇವಿಯು ರೋಹಿಣೀದೇವಿಯ ದೇಹದಲ್ಲಿ ಇಟ್ಟಳು. ಈ ವಿಷಯವು ಅವಳಿಗೂ ಗೊತ್ತಿಲ್ಲ. ಯಾರಿಗೂ ಗೊತ್ತಿಲ್ಲ. ಇದೇ ದೈವಿಕಗರ್ಭವೆನಿಸುತ್ತದೆ. ದೇವಕೀದೇವಿಯ ಗರ್ಭವು ಸ್ರಾವವಾಯಿತು ಎಂಬ ಪ್ರಚಾರವು ಏರ್ಪಟ್ಟಿತು. ಆಗ ವಸುದೇವನ ಪತ್ನಿಯರೆಲ್ಲರೂ ದುಃಖವನ್ನು ವಿಚಾರಿಸುವುದಕ್ಕೆ ಕಾರಾಗೃಹಕ್ಕೆ ಬಂದರು. ರೋಹಿಣಿಯೂ ಬಂದಳು. ಆಗ ಒಂದೆರಡು ದಿನಗಳಲ್ಲಿ ರೋಹಿಣಿಯು ಗರ್ಭಿಣಿಯೆಂದು ಕಂಸನು ತಿಳಿದನು. ಕೂಡಲೇ ಅವಳನ್ನು ನಂದನ ಮನೆಗೆ ಕಳುಹಿಸಿದನು. ಅಲ್ಲಿಯೇ ಬಲರಾಮನನ್ನು ಪ್ರಸವಿಸುವವರೆಗೂ ವಾಸಿಸಿದಳು. ಆದ್ದರಿಂದಲೇ ವಸುದೇವನಿಂದಲೇ ಇವಳು ಗರ್ಭಿಣಿಯಾದ ಳೆಂದೂ ದೇವಕಿಯೂ ಅವನಿಂದಲೇ ಗರ್ಭಿಣಿಯಾಗಿ ಗರ್ಭವು ಸ್ರಾವವಾಯಿತೆಂದೂ ಪ್ರಚಾರಕ್ಕೆ ಅವಕಾಶವಾಯಿತು.

# ಶ್ರೀಕೃಷ್ಣದೇವನು ವಿಶ್ವರೂಪವನ್ನು ಯಶೋದೆಗೆ ತೋರಿಸಿದ್ದು

ರೋಹಿಣೀದೇವಿಯ ಗರ್ಭದಿಂದ ಬೃಹದ್ವನದಲ್ಲಿ ಬಲರಾಮನು ಜನಿಸಿದನು. ಶ್ರೀಕೃಷ್ಣದೇವನು ಮಥುರಾ ಪಟ್ಟಣದಲ್ಲಿರುವ ಕಂಸನ ಕಾರಾಗೃಹದಲ್ಲಿ ಜನಿಸಿ ಬೃಹದ್ವನಕ್ಕೆ ಬಂದನು. ಬಲರಾಮನಲ್ಲಿ ವಾಸಿಸುತ್ತಿರುವ ಬಿಳಿಯ ಕೂದಲಿನರೂಪದಿಂದ ಯುಕ್ತನಾಗಿರುವ ಶ್ರೀಹರಿಯು ತಾನು ರೋಹಿಣೀದೇವಿಗೆ ಕೊಟ್ಟಿರುವ ವರದಂತೆ ಅವಳನ್ನು ಸಂತೋಷಪಡಿಸುತ್ತಾ ಪ್ರತಿದಿನದಲ್ಲಿಯೂ ಬೆಳೆಯುತ್ತಾ ಬಂದನು. ಶ್ರೀಕೃಷ್ಣದೇವನೂ ಬಲರಾಮನೊಡನೆ ನಾನಾ ವಿಧವಾದ ಆಟಗಳನ್ನು ತೋರಿಸುತ್ತಾ ನಂದಗೋಕುಲದಲ್ಲಿರುವ ಸರ್ವರನ್ನು ಸಂತೋಷಪಡಿಸುತ್ತಿದ್ದನು.

ಯಶೋದೆಯು ಶ್ರೀಕೃಷ್ಣದೇವನ ಮಹಿಮೆಯನ್ನು ತಿಳಿಯಲಿಲ್ಲ. ಪ್ರಕೃತಿಯಿಂದ ನಿರ್ಮಿತವಾದ ಪ್ರಾಕೃತಶರೀರದಿಂದ ಯುಕ್ತನಾದವನೆಂದೇ ಭಾವಿಸಿದಳು. ಅವಳಿಗೆ ತನ್ನ ನಿಜಸ್ವರೂಪವನ್ನು ತೋರಿಸಬೇಕೆಂದು ಶ್ರೀಹರಿಯು ಸಂಕಲ್ಪಿಸಿದನು. ಒಂದು ದಿನ ಇದಕ್ಕಾಗಿ ಆಕಳಿಸಿದನು. ಆಗ ಶ್ರೀಕೃಷ್ಣದೇವನ ಬಾಯಿಯಲ್ಲಿ ಬ್ರಹ್ಮಾಂಡವನ್ನು ನೋಡಿದಳು.

ಶ್ರೀವಾದಿರಾಜಗುರುಸಾರ್ವಭೌಮರ ಕೃಪೆಯಿಂದ ಈ ಬ್ರಹ್ಮಾಂಡವನ್ನು ಬ್ರಹ್ಮಾಂಡದ ಹೊರಗಿರುವ ಆವರಣಗಳನ್ನೂ ತಿಳಿಸುವೆವು.

# ಬ್ರಹ್ಮಾಂಡದೊಳಗೂ ಹೊರಗೂ ಇರುವ ೨೫ ತತ್ವಗಳು

ಪೃಥಿವೀ ಜಲ ತೇಜಸ್ಸು ವಾಯು ಆಕಾಶ ಎಂಬ ಐದು ವಸ್ತುಗಳು ಮಹಾಭೂತಗಳೆನಿಸುತ್ತವೆ. ಗಂಧ ರಸರೂಪ ಸ್ಪರ್ಶ ಶಬ್ದ ಎಂಬ ಐದು ವಸ್ತುಗಳು ತನ್ಮಾತ್ರೆ ಎನಿಸುತ್ತವೆ. ವಾಕ್ ಪಾಣಿ ಪಾದ ಪಾಯು ಉಪಸ್ಥಎಂಬ ಐದು ವಸ್ತುಗಳು ಕರ್ಮೇಂದ್ರಿಯಗಳೆನಿಸುತ್ತವೆ. ಘ್ರಾಣ ರಸನ ಚಕ್ಷುಃ ತ್ವಕ್ ಶ್ರೋತ್ರ, ಎಂಬ ಐದು ವಸ್ತುಗಳು ಜ್ಞಾನೇಂದ್ರಿಯಗಳೆನಿಸುತ್ತವೆ. ಮನಸ್ಸು ಬುದ್ಧಿ ಎಂಬ ಎರಡು ವಸ್ತುಗಳುಅಂತರಿಂದ್ರಿಯಗಳೆನಿಸುತ್ತವೆ. ಮೇಲ್ಕಂಡ ೨೨ ವಸ್ತುಗಳು, ಅಹಂಕಾರತತ್ವ ಮತ್ತು ಮಹತತ್ವಗಳು ಇಪ್ಪತ್ತನಾಲ್ಕು ತತ್ವಗಳಾಗುತ್ತವೆ. ಇಪ್ಪತ್ತೈದನೆಯದು ಇಷ್ಟು ತತ್ವಗಳಿಗೂ ಮೂಲತತ್ವವಾದ ಮೂಲಪ್ರಕೃತಿ, ಅಂದರೆ ಸೂಕ್ಷ್ಮವಾದ ಅಣುಗಳು.

ಈ ಇಪ್ಪತ್ತೈದು ತತ್ವಗಳು ಎರಡು ವಿಧವಾಗಿವೆ. (೧) ಶುದ್ಧತತ್ವಗಳು, ಅಂದರೆ ಪೃಥಿವೀತತ್ವ ಮುಂತಾದ ೨೫ ತತ್ವಗಳ ಮಧ್ಯದಲ್ಲಿ ಯಾವುದಾದರೊಂದು ತತ್ವದಲ್ಲಿ ತನ್ನನ್ನು ಬಿಟ್ಟು ಇತರ ೨೪ ತತ್ವಗಳು ಸ್ವಲ್ಪವೂ ಮಿಶ್ರಣವನ್ನು ಪಡೆಯದೆ ಇರುವ ತತ್ವಗಳು.

ಉದಾ-ಪೃಥಿವೀತತ್ವ ಅಂದರೆ ಜಲತತ್ವ ಮುಂತಾದ ಇತರ ೨೪ ತತ್ವಗಳ ಮಿಶ್ರಣವಿಲ್ಲ ಇಂತಹ ಸ್ಥಿತಿಯಲ್ಲಿ ಇರುವಾಗಲೇ ಶುದ್ಧ ಪೃಥಿವೀತತ್ವವೆನಿಸುತ್ತದೆ. ಇದೇ ರೀತಿಯಲ್ಲಿ ಶುದ್ಧಜಲತತ್ವ ಮುಂತಾದ ಉಳಿದ ೨೪ ಶುದ್ಧ ತತ್ವಗಳನ್ನೂ ತಿಳಿಯಬೇಕು.

(೨) ಮಿಶ್ರಿತತತ್ವಗಳು, ಅಂದರೆ ಮೂಲ ಪ್ರಕೃತಿಯನ್ನು ಬಿಟ್ಟು ಉಳಿದ ಪೃಥಿವೀತತ್ವ ಮುಂತಾದ ೨೪ ತತ್ವಗಳಲ್ಲಿ ಎಲ್ಲಾ ತತ್ವಗಳೂ ಮಿಶ್ರಿತವಾಗಿವೆ. ಅವುಗಳಲ್ಲಿ ಯಾವುದಾದರೊಂದು ತತ್ವದ ಭಾಗವು

ಅಧಿಕವಾಗಿರುತ್ತದೆ. ಮಿಶ್ರಿತವಾದ ೨೪ ತತ್ವಗಳಲ್ಲಿ ಯಾವ ತತ್ವದ ಭಾಗವು ಅಧಿಕವಾಗಿದೆಯೋ ಆ ತತ್ವದ ಹೆಸರು ಆ ತತ್ವಕ್ಕೆ ಬರುತ್ತದೆ.

ಉದಾ - ಪೃಥಿವೀತತ್ವದಲ್ಲಿ ಜಲತತ್ವ ಮುಂತಾದ ೨೩ ತತ್ವಗಳು ಮಿಶ್ರಿತವಾಗಿವೆ. ಅವುಗಳಲ್ಲಿ ಪೃಥಿವೀತತ್ವದ ಭಾಗವು ಅಧಿಕವಾಗಿದೆ. ಹೀಗಿರುವಾಗಲೇ ಮಿಶ್ರಿತಪೃಥಿವೀತತ್ವವೆನಿಸುತ್ತದೆ. ಇದೇ ರೀತಿಯಲ್ಲಿ ಮಿಶ್ರಿತಜಲತತ್ವ ಮುಂತಾದ ಉಳಿದ ೨೩ ತತ್ವಗಳನ್ನೂ ತಿಳಿಯಬೇಕು.

# ಬ್ರಹ್ಮಾಂಡ

ಐವತ್ತು ಕೋಟಿ ಯೋಜನಗಳಷ್ಟು ಅಗಲವೂ ಅಷ್ಟೇ ಉದ್ದವೂ ಉಳ್ಳ ವರ್ತುಲಾಕಾರವಾದ ವಸ್ತುವೇ ಬ್ರಹ್ಮಾಂಡವೆನಿಸುತ್ತದೆ. ಈ ಬ್ರಹ್ಮಾಂಡದ ಒಳಗೆ ಅತಲ ವಿತಲ ಸುತಲ ಮಹಾತಲ ತಲಾತಲ ರಸಾತಲ ಪಾತಾಳ ಎಂಬ ಕೆಳಗಿನ ಏಳು ಲೋಕಗಳೂ, ಭೂಲೋಕ ಎಂಬ ಮಧ್ಯ ಲೋಕವೂ, ಭುವರ್ಲೋಕ ಸುವರ್ಲೋಕ ಮಹರ್ಲೋಕ ಜನೋಲೋಕ ತಪೋಲೋಕ ಸತ್ಯಲೋಕ ಎಂಬ ಮೇಲಿನ ಆರು ಲೋಕಗಳೂ ಹೀಗೆ ಹದಿನಾಲ್ಕು ಲೋಕಗಳಿವೆ. ಈ ಹದಿನಾಲ್ಕು ಲೋಕಗಳಲ್ಲಿ ಬ್ರಹ್ಮ ಮುಂತಾದ ಸಕಲ ದೇವತೆಗಳೂ ಕಲಿ ಮುಂತಾದ ಸಕಲ ದೈತ್ಯರೂ ಮನುಷ್ಯರು ಮೃಗಗಳು ಪಕ್ಷಿಗಳು ಮುಂತಾದ ಸಕಲ ಪ್ರಾಣಿಗಳೂ ವಾಸಿಸುತ್ತಿರುವರು. ಈ ಸರ್ವಜೀವರ ದೇಹಗಳೂ ೮೪ ಲಕ್ಷ ವಿಧವಾಗಿವೆ. ಈ ವಿಧವಾದ ದೇಹಗಳಲ್ಲಿ ಒಂದೊಂದು ವಿಧವಾದ ದೇಹಗಳು ಅನಂತ ಸಂಖ್ಯಾಕವಾಗಿವೆ. ಈ ಎಲ್ಲಾ ದೇಹಗಳೂ ಹಿಂದೆ ಹೇಳಿರುವ ಮಿಶ್ರಿತವಾದ ೨೪ ತತ್ವಗಳಿಂದಲೇ ಹುಟ್ಟಿರುತ್ತವೆ. ಶುದ್ಧ ತತ್ವಗಳಿಂದ ಯಾವ ಶರೀರವೂ ಹುಟ್ಟಲಿಲ್ಲ.

# ಬ್ರಹ್ಮಾಂಡದ ಆವರಣಗಳು

ಈ ಬ್ರಹ್ಮಾಂಡದ ಹೊರಗೆ ಈ ಬ್ರಹ್ಮಾಂಡಕ್ಕೆ ೨೫ ಹೊದಿಕೆಗಳು ಅಂದರೆ ಆವರಣಗಳು ಇವೆ. ಈ ಆವರಣಗಳು ತೆಂಗಿನಕಾಯಿಯ ಮೇಲಿರುವ ಸಿಪ್ಪೆಗಳಂತೆ ಬ್ರಹ್ಮಾಂಡವನ್ನು ಅಂಟಿಕೊಂಡು ಬ್ರಹ್ಮಾಂಡವನ್ನು ಸುತ್ತಿಕೊಂಡಿವೆ. ಈ ೨೫ ಆವರಣಗಳೂ ಹಿಂದೆ ಹೇಳಿರುವ ಶುದ್ಧತತ್ವಗಳು, ಮಿಶ್ರಿತ ತತ್ವಗಳಲ್ಲ.

ಬ್ರಹ್ಮಾಂಡದ ಹೊರಗಿರುವ ಮೊದಲನೆಯ ಆವರಣವು ಶುದ್ಧಪೃಥಿವೀತತ್ವಾವರಣವೆನಿಸುತ್ತದೆ. ಈ ಆವರಣವು ೫೦ ಕೋಟಿ ಯೋಜನ ಉದ್ದವೂ ಅಷ್ಟೇ ಅಗಲವೂ ವರ್ತುಲಾಕಾರವುಳ್ಳದ್ದೂ ಆಗಿರುವ ಬ್ರಹ್ಮಾಂಡದ ಹೊರಗೆ ನೂರು ಕೋಟಿ ಯೋಜನಗಳಷ್ಟು ದಪ್ಪವಾಗಿದೆ. ಇದು ಸುವರ್ಣಾತ್ಮಕವಾದದ್ದು.

ಈ ಪೃಥಿವೀತತ್ವದ ಆವರಣದ ಮೇಲೆ ಜಲತತ್ವದ ಆವರಣವಿದೆ. ಈ ಜಲತತ್ವದ ಆವರಣವು ಬ್ರಹ್ಮಾಂಡಕ್ಕೆ ಎರಡನೆಯ ಆವರಣವೆ ನಿಸುತ್ತದೆ. ಇದು ಒಂದು ಕೋಟಿ ಯೋಜನಗಳಷ್ಟುದಪ್ಪವಾಗಿದೆ. ಈ ನೀರಿನಲ್ಲಿ ಪೃಥಿವೀತತ್ವದ ಮಿಶ್ರಣವಿಲ್ಲ ಇತರ ಯಾವ ತತ್ವಗಳ ಮಿಶ್ರಣವೂ ಇಲ್ಲ. ಶುದ್ಧ ಜಲತತ್ವವೆನಿಸುತ್ತದೆ.

ಶ್ರೀಹರಿಯು ವಾಮನಾವತಾರವನ್ನು ಸ್ವೀಕರಿಸಿದನು. ಮೂರು ಹೆಜ್ಜೆಗಳನ್ನು ಅಳೆಯುವುದಕ್ಕಾಗಿ ತ್ರಿವಿಕ್ರಮರೂಪವನ್ನು ಸ್ವೀಕರಿಸಿದನು. ಎಡಗಾಲನ್ನು ಮೇಲೆ ಎತ್ತಿದನು. ಆ ಎಡಗಾಲು ಐವತ್ತು ಕೋಟಿ ಯೋಜನ

ಎತ್ತರವುಳ್ಳ ಬ್ರಹ್ಮಾಂಡದ ಮಧ್ಯಭಾಗದಲ್ಲಿ ನಿಂತಿರುವ ತ್ರಿವಿಕ್ರಮನ ಮೇಲೆ ೨೫ ಕೋಟಿಯೋಜನ ಎತ್ತರದ ವರೆಗೆ ಹೋಯಿತು. ಅಲ್ಲಿಗೆ ಬ್ರಹ್ಮಾಂಡದ ಎಲ್ಲೆಯು ಮುಗಿಯಿತು. ಅದರ ಮೇಲೆ ಪೃಥಿವೀತತ್ತ್ವಾವರಣವನ್ನು ಶ್ರೀತ್ರಿವಿಕ್ರಮದೇವನ ಎಡಗಾಲಿನ ಅಂಗುಷ್ಠದ ಉಗುರಿನ ತುದಿಯು ಭೇದಿಸಿತು. ಪೃಥಿವೀತತ್ತ್ವಾವರಣವನ್ನೂ ದಾಟಿತು. ಜಲತತ್ತ್ವಾವರಣಪ್ರದೇಶದಲ್ಲಿ ಮುಂದುವರೆಯಿತು. ಜಲತತ್ತ್ವಾವರಣದಲ್ಲಿರುವ ನೀರು, ತ್ರಿವಿಕ್ರಮನ ಎಡಗಾಲಿನ ಉಗುರಿನಿಂದ ಬಿರುಕುಬಿಟ್ಟಿರುವ ಸುವರ್ಣಾತ್ಮಕವಾದ ಪೃಥಿವೀತತ್ತ್ವಾವರಣದ ಮೂಲಕವಾಗಿ ಬ್ರಹ್ಮಾಂಡದ ಒಳಗೆ ಸುರಿಯಿತು. ಈ ನೀರೇ ಗಂಗೆಯೆನಿಸಿತು. ಈ ನೀರು ತಣ್ಣಗೆ ಇರುತ್ತದೆ. ಬಿಳಿಯ ಬಣ್ಣದಿಂದ ಯುಕ್ತವಾಗಿದೆ. ಈ ನೀರೇ ಪೃಥಿವೀತತ್ತ್ವದಿಂದ ಅಮಿಶ್ರಿತವಾದ ಜಲತತ್ತ್ವವೆನಿಸುತ್ತದೆ.

ಈ ಜಲತತ್ತ್ವಾವರಣದ ಮೇಲೆ ಅಗ್ನಿತತ್ತ್ವದ ಆವರಣವಿದೆ. ಹಸಿಕಟ್ಟಿಗೆಯಿಂದ ಅಗ್ನಿಯು ಏರ್ಪಡುವುದುಂಟು. ಆದರೆ ಈ ಅಗ್ನಿಯು ತಿಷ್ಣವಾಗಿರುವುದಿಲ್ಲ. ಸ್ವಲ್ಪವೂ ಹಸಿಯಿಲ್ಲದಿರುವ ಕಟ್ಟಿಗೆಯಿಂದ ಏರ್ಪಟ್ಟ ಬೆಂಕಿಯು ಅತಿತೀಕ್ಷ್ಣವಾಗಿರುತ್ತದೆ. ಇದರಿಂದ ಜಲಮಿಶ್ರಣವೇ ಇಲ್ಲದಿರುವ ಅಗ್ನಿಯು ಅತಿಭಯಂಕರ ವಾಗಿರುತ್ತದೆ ಎಂಬ ವಿಷಯದಲ್ಲಿ ವಿವಾದವಿಲ್ಲ.

ಈ ಜಲತತ್ತ್ವಾವರಣದಮೇಲಿರುವ ಅಗ್ನಿಯು ಜಲಭಾಗದಿಂದ ಸ್ವಲ್ಪವೂ ಮಿಶ್ರಿತವಲ್ಲ. ಯಾವಾಗಲೂ ಜ್ವಲಿಸುತ್ತಿರುವ ಅತ್ಯುಗ್ರವಾದ ತೇಜಸ್ಸಿನ ರಾಶಿಯಾಗಿದೆ. ಈ ಆವರಣವು ಜಲತತ್ತ್ವಾವರಣದ ಮೇಲೆ ಹತ್ತುಸಾವಿರ ಸಂಖ್ಯೆಯಿಂದ ಗುಣಿಸಲ್ಪಟ್ಟ ಕೋಟಿಯೋಜನಗಳಷ್ಟು ದಪ್ಪವಾಗಿದೆ.

ಯಾವಾಗಲೂ ಜ್ವಲಿಸುತ್ತಿರುವ ಅಗ್ನಿಯ ಆವರಣದ ಮಧ್ಯದಲ್ಲಿರುವ ಜಲಾವರಣದಲ್ಲಿರುವ ನೀರು ಕುದಿಯುತ್ತಾ ಒಣಗಬೇಕು. ಆದರೆ ಬಿಸಿಯೂ ಆಗುವುದಿಲ್ಲ. ಯಾವಾಗಲೂ ತಣ್ಣಗಾಗಿಯೇ ಇರುತ್ತದೆ. ಈ ನೀರು ತಣ್ಣಗಿದೆ ಎಂಬ ವಿಷಯವು ಇದೇ ಆವರಣದಿಂದ ಕೆಳಗೆ ಸುರಿದು ಬ್ರಹ್ಮಾಂಡದ ಒಳಗೆ ಬಂದಿರುವ ಗಂಗೆಯನ್ನು ಮುಟ್ಟಿದ ನಮ್ಮೆಲ್ಲರಿಗೂ ಅನುಭವಸಿದ್ಧವಾಗಿದೆ. ಈ ನೀರು ಅಗ್ನ್ಯಾವರಣದಲ್ಲಿರುವ ಬೆಂಕಿಯ ಪ್ರಭಾವದಿಂದಲೇ ಕೆಳಗೂ ಮೇಲೆಯೂ ಪಕ್ಕದಲ್ಲಿ ಹರಿಯುವುದಿಲ್ಲ. ಕುದಿಯುತ್ತಾ ಉಕ್ಕಿಬರುವುದಿಲ್ಲ. ಇದೆಲ್ಲವೂ ಜಲಾವರಣದಲ್ಲಿರುವ ನಾರಾಯಣನ ಪ್ರಭಾವದಿಂದಲೇ ಏರ್ಪಡುತ್ತದೆ. ಈ ತೇಜಸ್ಸಿನ ಆವರಣವು ಬ್ರಹ್ಮಾಂಡಕ್ಕೆ ಮೂರನೆಯ ಆವರಣವೆನಿಸುತ್ತದೆ.

ಈ ಅಗ್ನಿಯ ಆವರಣದ ಮೇಲೆ ಅಗ್ನಿಭಾಗದಿಂದ ಮಿಶ್ರಿತವಲ್ಲದಿರುವ ಗಾಳಿಯ ಆವರಣವು ಇರುತ್ತದೆ. ಈ ಆವರಣವು ತೇಜಸ್ಸಿನ ಆವರಣದ ಮೇಲೆ ಇಪ್ಪತ್ತು ಸಾವಿರದಿಂದ ಗುಣಿಸಲ್ಪಟ್ಟ ಕೋಟಿ ಯೋಜನಗಳಷ್ಟು ದಪ್ಪವಾಗಿದೆ. ಇದು ಬ್ರಹ್ಮಾಂಡಕ್ಕೆ ನಾಲ್ಕನೆಯ ಆವರಣವೆನಿಸುತ್ತದೆ.

ಈ ವಾಯುವಿನ ಆವರಣದ ಮೇಲೆ ವಾಯುಭಾಗದಿಂದ ಮಿಶ್ರಿತವಲ್ಲದಿರುವ ಆಕಾಶದ ಆವರಣವು ಇರುತ್ತದೆ. ಈ ಆವರಣವು ವಾಯುವಿನ ಆವರಣದ ಮೇಲೆ ಮೂವತ್ತುಸಾವಿರದಿಂದ ಗುಣಿಸಲ್ಪಟ್ಟ ಕೋಟಿಯೋಜನಗಳಷ್ಟು ದಪ್ಪವಾಗಿದೆ. ಈ ಆವರಣವು ಬ್ರಹ್ಮಾಂಡಕ್ಕೆ ಐದನೆಯ ಆವರಣವೆನಿಸಿದೆ.

ಈ ಆಕಾಶತತ್ತ್ವದ ಆವರಣದ ಮೇಲೆ ಆಕಾಶತತ್ತ್ವದಿಂದ ಮಿಶ್ರಿತವಲ್ಲದಿರುವ ಅಹಂಕಾರತತ್ತ್ವದ

ಅವಯವಗಳಾಗಿರುವ ಪಂಚತನ್ಮಾತ್ರೆಗಳು. ಪಂಚಕರ್ಮೇಂದ್ರಿಯಗಳು, ಪಂಚಜ್ಞಾನೇಂದ್ರಿಯಗಳು. ಮನಸ್ಸು ಮತ್ತು ಬುದ್ಧಿತತ್ವ ಎಂಬ ಹದಿನೇಳು ತತ್ವಗಳ ಆವರಣಗಳು ಇರುತ್ತವೆ.

ಇವುಗಳಲ್ಲಿ ಗಂಧ ರಸ ರೂಪ ಸ್ಪರ್ಶಶಬ್ದ ಎಂಬ ತನ್ಮಾತ್ರೆಗಳ ಐದು ಆವರಣಗಳೂ ಉಪಸ್ಥ ವಾಯು ಪಾದ ಪಾಣಿ ವಾಕ್ ಎಂಬ ಕರ್ಮೇಂದ್ರಿಯಗಳ ಐದು ಆವರಣಗಳೂ ಘ್ರಾಣ ರಸನ ಚಕ್ಷುಃ ತ್ವಕ್ ಶ್ರೋತ್ರ ಎಂಬ ಜ್ಞಾನೇಂದ್ರಿಯಗಳ ಐದು ಆವರಣಗಳೂ ಕ್ರಮವಾಗಿ ಐದೈದು ಸಹಸ್ರಕೋಟಿ ಯೋಜನಗಳಷ್ಟು ದಪ್ಪವಾಗಿವೆ.

ಇವುಗಳ ಮೇಲೆ ಮನಸ್ತತ್ವದ ಆವರಣವು ಹತ್ತು ಸಹಸ್ರಕೋಟಿಯೋಜನಗಳಷ್ಟು ದಪ್ಪವೂ ಅದರ ಮೇಲೆ ಬುದ್ಧಿತತ್ವದ ಆವರಣವು ೨೫ ಸಹಸ್ರಕೋಟಿಯೋಜನಗಳಷ್ಟು ದಪ್ಪವೂ ಅದರ ಮೇಲೆ ಪ್ರಧಾನವಾದ ಅಹಂಕಾರತತ್ವದ ಆವರಣವು ತೊಂಭತ್ತು ಸಹಸ್ರಕೋಟಿಯೋಜನಗಳಷ್ಟು ದಪ್ಪವೂ ಇರುತ್ತದೆ.

ಇವುಗಳಲ್ಲಿ ಅಹಂಕಾರತತ್ವದ ಅವಯವಗಳಾಗಿರುವ ಪಂಚತನ್ಮಾತ್ರೆಗಳು ಪಂಚಕರ್ಮೇಂದ್ರಿಯಗಳು ಪಂಚಜ್ಞಾನೇಂದ್ರಿಯಗಳು ಮನಸ್ಸು ಮತ್ತು ಬುದ್ಧಿತತ್ವಗಳ ಆವರಣಗಳನ್ನು ಒಟ್ಟುಗೂಡಿಸಿದರೆ ೫×೧೫+೧೦+೨೫=೧೧೦ ಸಹಸ್ರ ಕೋಟಿ ಯೋಜನ ಸಂಖ್ಯೆಯಾಗುತ್ತದೆ. ಇಷ್ಟು ದಪ್ಪವಾಗಿರುವ ಅಹಂಕಾರತತ್ವದ ಅವಯಗಳ ಆವರಗಣಗಳು ಆಕಾಶತತ್ವದ ಆವರಣದ ಮೇಲೆ ಇರುತ್ತವೆ. ಇವುಗಳನ್ನು ಪ್ರತ್ಯೇಕವಾಗಿ ಗಣನ ಮಾಡುವಾಗ ೧೭ ಅವರಣಗಳಾಗುತ್ತವೆ. ಆದರೆ ಇವುಗಳೆಲ್ಲವನ್ನೂ ಒಂದೇ ಆವರಣವಾಗಿ ಪರಿಗಣಿಸಿ ಆರನೆಯ ಆವರಣವಾಗಿ ಭಾಗವತಕಾರರು ಹೇಳಿರುವರು.

ಈ ಆರನೆಯ ಆವರಣದ ಮೇಲೆ ೯೦ ಸಹಸ್ರಕೋಟಿ ಯೋಜನ ದಪ್ಪವಾಗಿರುವ ಅಹಂಕಾರತತ್ವದ ಆವರಣವು ಬ್ರಹ್ಮಾಂಡಕ್ಕೆ ಏಳನೆಯ ಆವರಣವೆನಿಸುತ್ತದೆ. ಈ ಅಹಂಕಾರತತ್ವದ ಆವರಣದ ಮೇಲೆ ಅಹಂಕಾರತತ್ವದಿಂದ ಮಿಶ್ರಿತವಲ್ಲದಿರುವ ಮಹತ್ತತ್ವದ ಆವರಣವು ಇರುತ್ತದೆ. ಈ ಆವರಣವು ಅಹಂಕಾರತತ್ವದ ಆವರಣಕ್ಕಿಂತ ೩೩೦ ಸಹಸ್ರದಿಂದ ಗುಣಿಸಲ್ಪಟ್ಟ ಕೋಟಿ ಯೋಜನಗಳಷ್ಟು ದಪ್ಪವುಳ್ಳದ್ದಾಗಿರುತ್ತದೆ. ಈ ಆವರಣವು ಎಂಟನೆಯ ಆವರಣವೆನಿಸುತ್ತದೆ.

ಈ ಆವರಣದ ಮೇಲೆ ಮೂಲಪ್ರಕೃತಿಯ ಆವರಣವು ಇರುತ್ತದೆ. ಈ ಆವರಣವು ೪೩೦ ಸಹಸ್ರ ಸಂಖ್ಯೆಯಿಂದ ಗುಣಿಸಲ್ಪಟ್ಟ ಕೋಟಿ ಯೋಜನಗಳಷ್ಟು ದಪ್ಪವಾಗಿದೆ. ಈ ಆವರಣವು ಒಂಭತ್ತನೆಯ ಆವರಣವೆನಿಸುತ್ತದೆ.

# ಯಶೋದೆಗೆ ವಿಶ್ವರೂಪದರ್ಶನ

ಶ್ರೀಕೃಷ್ಣದೇವನ ಬಾಯಿಯಲ್ಲಿ ಮೇಲ್ಕಂಡ ಬ್ರಹ್ಮಾಂಡವನ್ನೂ ಬ್ರಹ್ಮಾಂಡದ ಮೇಲಿರುವ ೨೫ ಆವರಣಗಳನ್ನೂ (೯ ಆವರಣಗಳನ್ನೂ) ಬ್ರಹ್ಮ ಮುಂತಾದ ಸಕಲ ದೇವತೆಗಳನ್ನೂ ಕಲಿ ಮುಂತಾದ ಸಕಲ ದೈತ್ಯರನ್ನೂ, ಮನುಷ್ಯರೇ ಮೊದಲಾದ ಸರ್ವಜೀವರನ್ನೂ ಕ್ರಮವಾಗಿ ಯಶೋದೆಯು ನೋಡಿದಳು. ಆಶ್ಚರ್ಯಚಕಿತಳಾದಳು. ಶ್ರೀಕೃಷ್ಣದೇವನ ವಿಶ್ವರೂಪವನ್ನು ನೋಡುತ್ತಾ ತುಂಬಾ ಹೆದರಿದಳು. ಕಣ್ಣುಗಳನ್ನು

ಮುಚ್ಚಿದಳು. " ತನ್ನ ದೇಹವು ನೋಡುವಾಗ ಚಿಕ್ಕದಾಗಿದ್ದರೂ ಎಲ್ಲಾ ದೇಶಗಳಲ್ಲಿಯೂ ವ್ಯಾಪ್ತವಾಗಿದೆ." ಎಂದು ತಿಳಿಸುವುದಕ್ಕಾಗಿಯೇ ಶ್ರೀಕೃಷ್ಣದೇವನು ಯಶೋದೆಗೆ ಸರ್ವಜೀವಜಡಾತ್ಮಕ ಪ್ರಪಂಚಕ್ಕೂ ಅವನೇ ಜನಕನು." ಎಂದು ಯಶೋದೆಯೂ ತಿಳಿದಳು. ತನ್ನ ವಿಶ್ವರೂಪವನ್ನು ಅದೃಶ್ಯವಾಗುವಂತೆ ಮಾಡಿಕೊಂಡನು.

**(೮) ಮಾತ್ರಾ ಗುರುಃ ಇತಿ ಭೂತಲೇ ನಿಹಿತಃ ಚಕ್ರಾವರ್ತಂ ಚ ಜಘಾನ ಸಃ ಮಾಂ ಅವತಾತ್**

ತಾಯಿಯಿಂದ ಭಾರವುಳ್ಳವನು ಎಂದು ಕೆಳಗಿಡಲ್ಪಟ್ಟ ಶ್ರೀಕೃಷ್ಣದೇವನು ತೃಣಾವರ್ತನನ್ನು ಸಂಹರಿಸಿದನು.

**ವಿಶೇಷಾರ್ಥ :- ಕದಾಚಿತ್ ಲಾಲಯಂತ್ಯಾಃ ಸ್ವಮಾತುರ್ಯಶೋದಾಯಾ ಅಂಕಸ್ಥಃ ತಯಾ ವೋಢುಮಶಕ್ಯಃ ಭೂಮೌ ನಿಹಿತಃ ತದಾ ಸ್ವಹನನಾರ್ಥಮಾಗತಂ ಕಂಸಭೃತ್ಯಂ ಚಕ್ರವಾತ ಸ್ವರೂಪಂ ರೇಣುಭಿಶ್ಚಕ್ಷೂಂಷಿ ಮುಷ್ಣಂತಂ ತೃಣಾವರ್ತನಾಮಕ ದೈತ್ಯಂ ತೇನಾಂತರಿಕ್ಷಮುನ್ನೀತಸ್ತಂ ಕಂಠೇ ಗೃಹೀತ್ವಾ ಲೀಲಯಾ ಶಿಲಾತಲೇ ನಿಪಾತ್ಯ,ಹತ್ವಾ ಸರ್ವಾನತೋಷಯತ್** " (ಒಮ್ಮೆ ಶ್ರೀಕೃಷ್ಣದೇವನನ್ನು ಅವನ ತಾಯಿಯಾದ ಯಶೋದೆಯು ಲಾಲಿಸುತ್ತಿದ್ದಳು. ಆಗ ಅವನು ಅವಳ ತೊಡೆಯಲ್ಲಿ ಮಲಗಿದ್ದನು. ತಾಯಿಗೆ ಅವನನ್ನು ಎತ್ತಲು ಸಾಧ್ಯವಾಗಲಿಲ್ಲ. ಕೆಳಗೆ ಮಲಗಿಸಿದಳು. ಆಗ ಕಂಸನ ಭೃತ್ಯನಾದ ತೃಣಾವರ್ತ ಎಂಬ ದೈತ್ಯನು ಅಲ್ಲಿಗೆ ಬಂದು. ಶ್ರೀಕೃಷ್ಣದೇವನನ್ನು ಸಂಹರಿಸಬೇಕೆಂದು ತೀರ್ಮಾನಿಸಿದನು. ಬಿರುಗಾಳಿಯ ರೂಪದಿಂದ ಯುಕ್ತನಾದ ಆ ದೈತ್ಯನು ತನ್ನಿಂದ ಎಬ್ಬಿಸಲ್ಪಟ್ಟ ಧೂಳಿಯಿಂದ ಎಲ್ಲರ ಕಣ್ಣುಗಳನ್ನೂ ಮುಚ್ಚುವಂತೆ ಮಾಡಿದನು. ಶ್ರೀಕೃಷ್ಣದೇವನನ್ನು ಆಕಾಶಕ್ಕೆ ಎತ್ತಿಕೊಂಡು ಹೋದನು. ಶ್ರೀಕೃಷ್ಣದೇವನು ಅವನ ಕುತ್ತಿಗೆಯನ್ನು ಕೈಗಳಿಂದ ಹಿಡಿದನು. ಲೀಲೆಯಿಂದ ಭೂಮಿಯಲ್ಲಿ ಕೆಡಹ ಕೊಂದು ಸರ್ವರನ್ನು ಸಂತೋಷಪಡಿಸಿದನು.)

## ತೃಣಾವರ್ತನ ಸಂಹಾರ

ವಿಶೇಷಾರ್ಥ ವಿವರಣ:- ಒಂದು ದಿನ ಯಶೋದೆಯು ಶ್ರೀಕೃಷ್ಣದೇವನನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ಲಾಲನೆ ಮಾಡುತ್ತಿದ್ದಳು. ಆಗ ಹತ್ತಿಯಂತೆ ಹಗುರವಾಗಿದ್ದ ಶ್ರೀಕೃಷ್ಣದೇವನ ದೇಹವು ಕ್ರಮವಾಗಿ ಭಾರವಾಗುತ್ತಾ ಬಂತು. ಕೊನೆಗೆ ಯಶೋದೆಗೆ ಶ್ರೀಕೃಷ್ಣದೇವನನ್ನು ಎತ್ತಲು ಸಾಧ್ಯವಾಗಲಿಲ್ಲ. ಬಹಳ ಪ್ರಯಾಸದಿಂದ ಶ್ರೀಕೃಷ್ಣದೇವನನ್ನು ಕೆಳಗಿಳಿಸಿ ನೆಲದಲ್ಲಿ ಮಲಗಿಸಿ ತನ್ನ ಮನೆಯ ಕೆಲಸಕ್ಕಾಗಿ ಹೊರಟು ಹೋದಳು.

ಕುವಾದಿಯು ತನ್ನ ಕುತರ್ಕಗಳಿಂದ ಎಲ್ಲರಿಗೂ ಒಂದೂ ತೋರದಂತೆ ಮಾಡುವನು. ಸರ್ವರನ್ನೂ ಕತ್ತಲೆಯಲ್ಲಿ ಸಿಕ್ಕಿದವರಂತೆ ಮಾಡುವನು. ತನ್ನ ಆರ್ಭಾಟವಚನಗಳಿಂದ ಯಾರ ಮಾತನ್ನೂ ಯಾರೂ ಕೇಳದಂತೆ ಮಾಡುವನು.

ಅದೇರೀತಿಯಿಂದ ತೃಣಾವರ್ತ ಎಂಬ ಕಂಸಭೃತ್ಯನು ಬಿರುಗಾಳಿಯ ರೂಪದಿಂದ ಅಲ್ಲಿಗೆ ಬಂದನು. ಕುತರ್ಕಗಳಂತಿರುವ ಧೂಳಿಗಳಿಂದ ಎಲ್ಲರ ಕಣ್ಣುಗಳೂ ಕಾಣಿಸದಂತೆ ಮಾಡಿದನು. ಭಯಂಕರವಾದ ಕತ್ತಲೆಯನ್ನು ಏರ್ಪಡಿಸಿದನು. ಬಿರುಗಾಳಿಯ ಧ್ವನಿಯಿಂದ ಯಾರ ಮಾತನ್ನೂ ಯಾರೂ ಕೇಳದಂತೆ ಮಾಡಿದನು. ಒಂದು ಮುಹೂರ್ತಕಾಲದ ವರೆಗೆ ಎಲ್ಲೆಲ್ಲಿಯೂ ಧೂಳಿ, ಎಲ್ಲೆಲ್ಲಿಯೂ ಕತ್ತಲೆ, ಆಗ ಯಶೋದೆಯು ತನ್ನ ಮಗನನ್ನು ಸ್ಮರಿಸಿದಳು.

ಶ್ರೀಕೃಷ್ಣದೇವನನ್ನು ಮಲಗಿಸಿದ ಸ್ಥಳಕ್ಕೆ ತುಂಬಾ ಕಷ್ಟದಿಂದ ಬಂದಳು. ಕಷ್ಟಪಟ್ಟು ಕಣ್ಣುಗಳನ್ನು ತೆರೆದು ನೋಡಿದಳು. ಆದರೆ ಆ ಸ್ಥಳದಲ್ಲಿ ಶ್ರೀಕೃಷ್ಣದೇವನಿಲ್ಲ. ಕೆಳಗೆ ಬಿದ್ದಳು. ಕರು ಸತ್ತಾಗ ಗೋವುಗಳು ಅಳುತ್ತಿರುವಂತೆ ಅತಿ ಕರುಣಧ್ವನಿಯಿಂದ ಅತ್ತಳು. ಇವಳು ಅಳುವ ಧ್ವನಿಯನ್ನು ಕೇಳಿದ ಗೋಪಿಕಾಸ್ತ್ರೀಯರೆಲ್ಲರೂ ತುಂಬಾ ಸಂಕಟದಿಂದ ಯುಕ್ತರಾಗಿ ಕಣ್ಣೀರ ಸುರಿಸುತ್ತಾ ಅಲ್ಲಿಗೆ ಬಂದರು. ಆಗ ಬಿರುಗಾಳಿಯ ವೇಗವು ಕಡಿಮೆಯಾಗಿತ್ತು.

ತೃಣಾವರ್ತನು ಬರುವ ಸಮಾಚಾರವು ಸರ್ವಜ್ಞನಾದ ಶ್ರೀಕೃಷ್ಣದೇವನಿಗೆ ಹಿಂದೆಯೇ ಗೊತ್ತಿತ್ತು. ಆದ್ದರಿಂದಲೇ ಅವನನ್ನು ಸಂಹರಿಸಬೇಕೆಂದು ತೀರ್ಮಾನಿಸಿದನು. ಆಗ ತನ್ನ ತಾಯಿಯು ಅಲ್ಲಿರಬಾರದೆಂದು ತೀರ್ಮಾನಿಸಿದನು. ಅದಕ್ಕಾಗಿಯೇ ತನ್ನ ದೇಹವನ್ನು ತುಂಬಾ ಭಾರವಾಗುವಂತೆ ಮಾಡಿಕೊಂಡನು. ತನ್ನ ತಾಯಿಯು ತನ್ನನ್ನು ಎತ್ತಲು ಸಾಧ್ಯವಿಲ್ಲದೆ ಕೆಳಗೆ ಮಲಗಿಸಿ ದೂರ ಸರಿಯುವಂತೆ ಮಾಡಿದನು. ತೃಣಾವರ್ತನು ಬಿರುಗಾಳಿಯ ರೂಪದಿಂದ ಬಂದಿರುವುದರಿಂದ ಅವನನ್ನು ಆಕಾಶದಲ್ಲಿಯೇ ಸಂಹರಿಸಬೇಕೆಂದು ತೀರ್ಮಾನಿಸಿದನು. ವಾಯುವಿಗೆ ಲಯವು ಆಕಾಶದಲ್ಲಿ ತಾನೇ? ಆಕಾಶದಲ್ಲಿ ಅವನನ್ನು ಸಂಹರಿಸುವುದಕ್ಕಾಗಿ ತನ್ನನ್ನು ಆಕಾಶದಲ್ಲಿ ಬಹುದೂರದ ವರೆಗೆ ಎತ್ತಿಕೊಂಡು ಅವನೇ ಹೋಗುವಂತೆ ಮಾಡಬೇಕೆಂದು ಸಂಕಲ್ಪಿಸಿದನು. ಅದಕ್ಕಾಗಿ ಪುನಃ ತನ್ನ ದೇಹವನ್ನು ಹತ್ತಿಯಂತೆ ಹಗುರವಾಗುವಂತೆ ಮಾಡಿದನು. ಇದರಿಂದ ಬಿರುಗಾಳಿಯಲ್ಲಿ ಸಿಕ್ಕಿದ ಚಿಕ್ಕ ಎಲೆಯಂತೆ ತನ್ನ ದೇಹವು ಬಹುದೂರದ ವರೆಗೆ ಚದುರಿ ಹೋಗುವಂತೆ ಮಾಡಿದನು. ಆಮೇಲೆ ತನ್ನ ದೇಹವನ್ನು ಕ್ರಮವಾಗಿ ಭಾರವಾಗುವಂತೆ ಮಾಡಿಕೊಳ್ಳಲು ಆರಂಭಿಸಿದನು. ಆಗ ಅವನಿಗೆ ಶ್ರೀಕೃಷ್ಣದೇವನನ್ನು ಎತ್ತಿಕೊಂಡು ಹೋಗಲು ಸಾಧ್ಯವಾಗಲಿಲ್ಲ. ಬಿರುಗಾಳಿಯ ರೂಪದಿಂದ ಯುಕ್ತನಾದ್ದರಿಂದ ಅತಿವೇಗದಿಂದ ಯುಕ್ತನಾಗಿದ್ದರೂ ಸಕಲಲೋಕಧಾರಕನಾದ ಶ್ರೀಹರಿಯನ್ನು ಈ ಅಲ್ಪನಾದ ದೈತ್ಯನು ಎತ್ತ ಬಲ್ಲನೇ?

ಎಲ್ಲಾ ಗೊಲ್ಲರ ಕಣ್ಣುಗಳನ್ನೂ ಮುಚ್ಚಿಸಿದನು. ತನ್ನ ಕಣ್ಣುಗಳು ತಿರುಗುತ್ತಾ ಮುಚ್ಚಲು ಆರಂಭಿಸಿದವು. ಎಲ್ಲರನ್ನೂ ಸುತ್ತಲೂ ಸುತ್ತಿಸಿದನು. ಅವನ ತಲೆಯು ಸುತ್ತಿತು. ಸಜ್ಜನರಾದ ಗೊಲ್ಲರ ಮನಸ್ಸಿಗೆ ತುಂಬಾ ಕಷ್ಟವನ್ನು ಕೊಟ್ಟನು. ಅದಕ್ಕಾಗಿ ತಾನೂ ಸಹಿಸಲಾರದ ಕಷ್ಟವನ್ನು ಅನುಭವಿಸಿದನು. ಯಶೋದೆಯನ್ನು ಕೆಳಗೆ ಬೀಳಿಸಿದನು. ಅದಕ್ಕಾಗಿ ತಾನೂ ಕೆಳಗೆ ಬಿದ್ದನು. ತಾನು ಮಾಡಿದ ಪ್ರಬಲವಾದ ದ್ರೋಹಕ್ಕೆ ಯೋಗ್ಯವಾದ ಫಲವನ್ನು ಕೂಡಲೇ ಅನುಭವಿಸಬೇಡವೆ?

ತೃಣಾವರ್ತನು ತನ್ನನ್ನು ಎತ್ತಿಕೊಂಡು ಮೇಲೆ ಮೇಲೆ ಹೋಗುತ್ತಿರುವಾಗ ಶ್ರೀಕೃಷ್ಣದೇವನು ಸಂತೋಷಿಸಿದನು. ಪರ್ವತದಂತೆ ತುಂಬಾ ಭಾರದಿಂದ ಯುಕ್ತವಾಗಿರುವ ತನ್ನ ದೇಹವು ತುಂಬಾ ಎತ್ತರದಿಂದ ಕೆಳಗೆ ಬೀಳುವಾಗ ಆ ದೇಹದ ಅಡಿಯಲ್ಲಿಯೂ ಬಂಡೆಕಲ್ಲುಗಳ ಮೇಲೂ ಬಿದ್ದಿರುವ ತೃಣಾವರ್ತನ ದೇಹವು ಚೂರ್ಣ ಚೂರ್ಣವಾಗುವುದಕ್ಕೆ ಆಕಾಶದಲ್ಲಿ ಬಹುದೂರದ ವರೆಗೆ ಹೋಗುವುದು ಅನುಕೂಲವಲ್ಲವೇ? ಶ್ರೀಕೃಷ್ಣದೇವನನ್ನು ಎತ್ತಿಕೊಂಡು ಹೋಗಲು ಶಕ್ತನಲ್ಲದಿರುವ ತೃಣಾವರ್ತನು ಅವನನ್ನು ಬಿಡಬೇಕೆಂದು ಪ್ರಯತ್ನಿಸಿದನು. ಆದರೆ ಶ್ರೀಕೃಷ್ಣದೇವನು ಅವನ ಕುತ್ತಿಗೆಯನ್ನು ಎರಡು ಕೈಗಳಿಂದಲೂ ಗಟ್ಟಿಯಾಗಿ ಹಿಡಿದು ಬಿಟ್ಟನು. ಆ ಕೈಗಳಿಂದ ತನ್ನನ್ನು ಬಿಡಿಸಿಕೊಳ್ಳಲು ಶಕ್ತನಾಗಲಿಲ್ಲ.

ತೃಣಾವರ್ತನ ಎದೆಯ ಮೇಲೆ ಶ್ರೀಕೃಷ್ಣದೇವನು ಅವನ ಕುತ್ತಿಗೆಯನ್ನು ಹಿಡಿದುಕೊಂಡು ಜೋತಾ

ಡುತ್ತಿರುವನು. ಶ್ರೀಕೃಷ್ಣದೇವನ ಭಾರವನ್ನು ತಾಳಲಾರದೆ ತೃಣಾವರ್ತನು ನಿಟ್ಟುಸಿರು ಬಿಡುತ್ತಿರುವನು. ಅವನ ಸ್ಥಿತಿಯು ವಿಷವನ್ನು ಕುಡಿದು ತಲೆಯು ಸುತ್ತುತ್ತಿರುವಾಗ ಸರೋವರವೆಂಬ ಭ್ರಾಂತಿಯಿಂದ ಆಕಾಶವನ್ನು ಪ್ರವೇಶಿಸುತ್ತಿರುವಂತಾಯಿತು.

ಶ್ರೀಕೃಷ್ಣದೇವನನ್ನು ಹೃದಯದಲ್ಲಿ ಧರಿಸಿದನು. ವಿಷ್ಣುಪದವೆಂಬ ಹೆಸರುಳ್ಳ ಆಕಾಶವನ್ನು ಅತಿವೇಗದಿಂದ ಪ್ರವೇಶಿಸಿದನು. ಆದರೆ ಮೇಲೆ ಹೋಗಲಿಲ್ಲ. ಕೆಳಗೆ ಬಿದ್ದನು. ವಿಷ್ಣುಪದವನ್ನು ಪಡೆಯಲು ಅನರ್ಹನಾದ ಈ ದೈತ್ಯನು ಮೇಲೆ ಹೋಗದೆ ಕೆಳಗೆ ಬಿದ್ದಿರುವುದು ಅವನಿಗೆ ಯೋಗ್ಯವೇ ಆಗಿರುತ್ತದೆ.

ಪರ್ವತಾಕಾರವಾದ ತೃಣಾವರ್ತನ ದೇಹವು ಬಂಡೆಕಲ್ಲುಗಳ ಮೇಲೆ ಬಿತ್ತು. ಅದರ ಮೇಲೆ ಪರ್ವತಾಕಾರವಾದ ಶ್ರೀಕೃಷ್ಣದೇವನ ದೇಹವು ಬಿತ್ತು. ಕೆಳಗೂ ಮೇಲೂ ಹೊಡೆತದಿಂದ ಅವನ ದೇಹವು ಹಿಟ್ಟಿನ ಮುದ್ದೆಯಂತಾಯಿತು. ರುದ್ರದೇವರ ಬಾಣದಿಂದ ತ್ರಿಪುರಾಸುರನ ಪಟ್ಟಣಗಳಿಗೆ ಏರ್ಪಟ್ಟ ಗತಿಯು ಅವನಿಗಾಯಿತು.

ಆಗ ಅಳುತ್ತಾ ಶ್ರೀಕೃಷ್ಣದೇವನನ್ನು ಹುಡುಕುತ್ತಿರುವ ಗೋಪಿಕಾಸ್ತ್ರೀಯರೂ ಯಶೋದೆಯೂ ಶ್ರೀಕೃಷ್ಣದೇವನು ತೃಣಾವರ್ತನ ದೇಹದ ಮೇಲೆ ಆಟವಾಡುತ್ತಿರುವುದನ್ನು ಕಂಡರು. ತುಂಬಾ ಹೆದರಿ ಓಡಿ ಬಂದರು. ಅವನನ್ನು ಎತ್ತಿಕೊಂಡು ಹೋಗಿ ಯಶೋದೆಯ ಕೈಯಲ್ಲಿ ಕೊಟ್ಟರು. ಮೃತ್ಯುವಿನ ಮುಖದಿಂದ ತಪ್ಪಿಸಿಕೊಂಡು ಬಂದಿರುವನೆಂದು ಭಾವಿಸಿ. ತುಂಬಾ ಸಂತೋಷಿಸಿದರು.

" ಹಿಂಸಾವಿಹಾರಿಯು ತನ್ನ ಪಾಪದಿಂದಲೇ ಸಾಯುವನು. ಸಾಧುಪುರುಷನು ತನಗೆ ಬಂದಿರುವ ಆಪತ್ತುಗಳಿಂದ ತನ್ನ ಸರ್ವಸಮತಾಗುಣದಿಂದ ಬಿಡುಗಡೆಯನ್ನು ಹೊಂದುವನು. ಇದು ಸತ್ಯ. ನಿರಪರಾಧಿಯಾದ ಶ್ರೀಕೃಷ್ಣದೇವನು ಪಾಪಿಷ್ಠನಾದ ತೃಣಾವರ್ತನಿಂದ ಬಿಡುಗಡೆಯನ್ನು ಪಡೆಯಲಿಲ್ಲವೇ?" ಎಂದು ಸರ್ವರೂ ಹೊಗಳಿದರು. ನಂದನು ಪೂತನಾಸಂಹಾರದಿಂದ ಆರಂಭಿಸಿ ತೃಣಾವರ್ತಸಂಹಾರದ ವರೆಗಿನ ಅದ್ಭುತವಾದ ಲೀಲೆಗಳನ್ನು ನೋಡಿ ಆಶ್ಚರ್ಯಪರವಶನಾದನು. ವಸುದೇವನು ಹೇಳಿದ ಮಾತುಗಳನ್ನು ಸತ್ಯವೆಂದು ನಂಬಿದನು. ॥ ೧ ॥

**ಯೋ ಮಾತುರ್ಜೃಂಭಮಾಣೋ ಜಗದಿದಮಖಿಲಂ ದರ್ಶಯನ್ನಂಕರೂಢೋ**
**ಗರ್ಗೇಣಾಚೀರ್ಣನಾಮಾ ಕೃತರುಚಿರಮಹಾಬಾಲಲೀಲೋ ವಯಸ್ಯೈ।**
**ಗೋಪೀಗೇಹೇಷು ಭಾಂಡಸ್ಥಿತಮುರುದಯಾ ಕ್ಷೀರದಧ್ಯಾದಿ ಮುಷ್ಣನ್**
**ಮೃನ್ನಾಭಕ್ಷೀತಿ ಮಾತುಃ ಸ್ವವದನಗಜಗದ್ಭಾಸಯನ್ ಭಾಸತಾಂ ಮೇ ॥ ೨ ॥**

**ಪದಚ್ಛೇದ :-** ಯಃ ಮಾತುಃ ಜೃಂಭಮಾಣಃ ಜಗತ್ ಇದಂ ಅಖಿಲಂ ದರ್ಶಯನ್ ಅಂಕರೂಢಃ ಗರ್ಗೇಣ ಆಚೀರ್ಣನಾಮಾ ಕೃತರುಚಿರಮಹಾಬಾಲಲೀಲಃ ವಯಸ್ಯೈಃ ಗೋಪೀಗೇಹೇಷು ಭಾಂಡಸ್ಥಿತಂ ಉರುದಯಯಾ ಕ್ಷೀರದಧ್ಯಾದಿ ಮುಷ್ಣನ್ ಮೃತ್ ನ ಅಭಕ್ಷಿ ಇತಿ ಮಾತುಃ ಸ್ವವದನಗಜಗತ್ ಭಾಸಯನ್ ಭಾಸತಾಂ ಮೇ.

**ಅನ್ವಯ :-** ಯಃ ಮಾತುಃ ಅಂಕರೂಢಃ ಜೃಂಭಮಾಣಃ, ಇದಂ ಅಖಿಲಂ ಜಗತ್ (ಮಾತುಃ) ದರ್ಶಯನ್

**ಗರ್ಗೇಣ ಆಚೀರ್ಣನಾಮಾ, (ಬಲರಾಮೇಣ ಸಹ) ಕೃತರುಚಿರಮಹಾಬಾಲಲೀಲಃ ವಯಸ್ಯೈಃ (ಸಹ) ಗೋಪೀಗೇಹೇಷು ಭಾಂಡಸ್ಥಿತಂ ಕ್ಷೀರದಧ್ಯಾದಿ ಗೋಪಸ್ತ್ರೀಷು ಉರುದಯಯಾ ಮುಷ್ಣನ್, ಮೃತ್ (ಮಯಾ) ನ ಅಭಕ್ಷಿ ಇತಿ (ವದನ್) ಮಾತುಃ ಸ್ವವದನಗಜಗತ್ ಭಾಸಯನ್ (ಸಃ) ಮೇ ಭಾಸತಾಂ.**

**ಅನ್ವಯಾರ್ಥ :-** **"ಯಃ"** ಯಾವ ಶ್ರೀಕೃಷ್ಣದೇವನು **"ಮಾತುಃ"** ತನ್ನ ತಾಯಿಯಾದ ಯಶೋದೆಯ **"ಅಂಕರೂಢಃ"** ತೊಡೆಯಲ್ಲಿ ಮಲಗಿದವನಾಗಿ **"ಜೃಂಭಮಾಣಃ"** ಆಕಳಿಸುತ್ತಿರುವವನಾಗಿ **"ಇದಂ"** ಈ ಪ್ರತ್ಯಕ್ಷ ಮುಂತಾದ ಪ್ರಮಾಣಗಳಿಂದ ಸಿದ್ಧವಾದ **"ಅಖಿಲಂ"** ಸಪ್ತದ್ವೀಪಗಳು ಸಪ್ತಸಮುದ್ರಗಳು ಪಂಚಮಹಾಭೂತಗಳು ಸ್ಥಾವರಜೀವಗಳು ಜಂಗಮಜೀವಗಳು ಮುಂತಾದ ಎಲ್ಲಾ ವಸ್ತುಗಳಿಂದ ಸಹಿತವಾದ **"ಜಗತ್"** ಭೂಮಂಡಲವನ್ನು **"(ಮಾತುಃ)"** ತಾಯಿಗೆ **"ದರ್ಶಯನ್"** ತೋರಿಸುತ್ತಿರುವವನಾಗಿರುವನೋ **"ಗರ್ಗೇಣ"**ಗರ್ಗಾಚಾರ್ಯರಿಂದ **"ಆಚೀರ್ಣನಾಮಾ"** ಮಾಡಲ್ಪಟ್ಟ ನಾಮಕರಣವುಳ್ಳವನೋ (ಬಲರಾಮೇಣ ಸಹ) ಬಲರಾಮನೊಡನೆ **"ಕೃತರುಚಿರಮಹಾಬಾಲಲೀಲಃ"** ಮಾಡಲ್ಪಟ್ಟ ಸುಂದರವಾದ ಶ್ರೇಷ್ಠವಾದ ಬಾಲಲೀಲೆಗಳಿಂದ ಯುಕ್ತನಾಗಿರುವನೋ **"ವಯಸ್ಯೈಃ(ಸಹ)"** ತನ್ನವಯಸ್ಸಿನ ಬಾಲಕರೊಡನೆ **"ಗೋಪೀಗೇಹೇಷು"** ಗೋಪಿಕಾಸ್ತ್ರೀಯರ ಮನೆಗಳಲ್ಲಿ **"ಭಾಂಡಸ್ಥಿತಂ"** ಪಾತ್ರೆಗಳಲ್ಲಿಇದ್ದ **"ಕ್ಷೀರದಧ್ಯಾದಿ"** ಹಾಲು ಮೊಸರು ಬೆಣ್ಣೆ ತುಪ್ಪ ಮುಂತಾದ ವಸ್ತುಗಳನ್ನು **"(ಗೋಪಸ್ತ್ರೀಷು)"** ಗೋಪಿಕಾಸ್ತ್ರೀಯರಲ್ಲಿ **"ಉರುದಯಯಾ"** ಅಧಿಕವಾದ ದಯೆಯಿಂದ **"ಮುಷ್ಣನ್"** ಕದಿಯುತ್ತಿರುವನೋ **"ಮಯಾ"** ನನ್ನಿಂದ **"ಮೃತ್"** ಮಣ್ಣು **" ನ ಅಭಕ್ಷಿ** ತಿನ್ನಲ್ಪಡಲಿಲ್ಲ. **"ಇತಿ"** ಹೀಗೆ **" (ವದನ್)"** ಹೇಳುತ್ತಿರುವನೋ **"ಮಾತುಃ"** ತಾಯಿಯಾದ ಯಶೋದೆಗೆ **"ಸ್ವವದನಗಜಗತ್"** ತನ್ನ ಮುಖದಲ್ಲಿರುವ ಜಗತ್ತನ್ನು **"ಭಾಸಯನ್"** ತೋರಿಸುತ್ತಿರುವನೋ **"ಸಃ"** ಆ ಶ್ರೀಕೃಷ್ಣದೇವನು **"ಮೇ"** ನನಗೆ **"ಭಾಸತಾಂ"** ಸರ್ವವಿಷಯಕ ಜ್ಞಾನವನ್ನು ಕೊಡಲಿ.

**(೯) ವಿಶೇಷಾರ್ಥ :- ಶ್ರೀಕೃಷ್ಣಃ ಕದಾಚಿತ್ ಸ್ವಮಾತುರಂಕಸ್ಥಃ ಸ್ತನಂ ಪೀತ್ವಾ ಜೃಂಭಮಾಣಃ ಸ್ವಂ (ಮುಖಂ) ಲಾಲಯಂತ್ಯಾ ಯಶೋದಾಯಾಃ ಸ್ವವಿಷಯಕತತ್ವಜ್ಞಾನೋದಯಾರ್ಥಂ ಸರ್ವಂ ಜಗದ್ದರ್ಶಯಿತ್ವಾ"** (ಶ್ರೀಕೃಷ್ಣದೇವನು ಒಮ್ಮೆ ತಾಯಿಯ ತೊಡೆಯಲ್ಲಿ ಮಲಗಿ ಮೊಲೆಯನ್ನು ಕುಡಿಯುತ್ತಾ ಆಕಳಿಸಿದನು. ಅವನ ಬಾಯಿಯನ್ನು ಯಶೋದೆಯು ನೋಡಿದಳು. ಅವಳಿಗೆ ತನ್ನ ನಿಜವಾದ ತಿಳುವಳಿಕೆಯು ಹುಟ್ಟುವುದಕ್ಕಾಗಿ ಎಲ್ಲಾ ಲೋಕಗಳನ್ನೂ ತನ್ನ ಬಾಯಿಯಲ್ಲಿ ತೋರಿಸಿದನು. ವಿಶೇಷಾರ್ಥವಿವರಣವು ಹಿಂದಿನ ಶ್ಲೋಕದಲ್ಲಿಯೇ ಮಾಡಲ್ಪಟ್ಟಿದೆ.

**(೧೦) ವಿಶೇಷಾರ್ಥ:- ಗರ್ಗೇಣ ಆಚೀರ್ಣನಾಮಾ "ವಸುದೇವೋಕ್ತ್ಯಾಯ ವ್ರಜಂ ಪ್ರಾಪ್ತೇನ ಗರ್ಗೇಣ ಕ್ಷತ್ರಿಯಯೋಗ್ಯಾನ್ ಸಂಸ್ಕಾರಾನ್ ನಾಮ ಚ ಬಲರಾಮೇಣ ಸಹ ಪ್ರಾಪ್ಯ"** (ವಸುದೇವನ ಮಾತಿನಿಂದ ಶ್ರೀಕೃಷ್ಣದೇವನು ಗೋಕುಲಕ್ಕೆ ಬಂದಿರುವ ಗರ್ಗಾಚಾರ್ಯರಿಂದ ಕ್ಷತ್ರಿಯಜಾತಿಗೆ ಯೋಗ್ಯವಾದ ಸಂಸ್ಕಾರಗಳನ್ನೂ ಹೆಸರನ್ನೂ ಬಲರಾಮನೊಡನೆ ಪಡೆದನು.)

## ಶ್ರೀಬಲರಾಮನಿಗೂ ಶ್ರೀಕೃಷ್ಣದೇವನಿಗೂ ನಾಮಕರಣ

ವಿಶೇಷಾರ್ಥವಿವರಣ :- " ನನ್ನ ಪತ್ನಿಯಾದ ರೋಹಿಣೀದೇವಿಯಲ್ಲಿ ಒಬ್ಬ ಮಗನು ಹುಟ್ಟಿರುವನು.

ಅವನು ನಂದನ ಮನೆಯಲ್ಲಿಯೇ ಹುಟ್ಟಿ ಬೆಳೆಯುತ್ತಿರುವನು. ನನ್ನ ಪತ್ನಿಯಾದ ದೇವಕೀದೇವಿಯ ಎಂಟನೆಯ ಮಗನೂ ಅಲ್ಲಿಯೇ ವಾಸಿಸುತ್ತಿರುವನು. ಅವರಿಬ್ಬರಿಗೂ ಜಾತಕರ್ಮ ಮುಂತಾದ ಎಲ್ಲಾ ಸಂಸ್ಕಾರಗಳೂ ನಾಮಕರಣವೂ ಏರ್ಪಡಬೇಕು. ನಂದನು ವೈಶ್ಯಜಾತಿಯಲ್ಲಿ ಹುಟ್ಟಿದವನು. ಅವನು ರೋಹಿಣೀದೇವಿಯ ಮಗನನ್ನು ನನ್ನ ಮಗನೆಂದು ತಿಳಿದಿದ್ದರೂ ದೇವಕೀದೇವಿಯ ಮಗನನ್ನು ನನ್ನ ಮಗನೆಂದು ತಿಳಿಯಲಿಲ್ಲ. ತನ್ನ ಮಗನೆಂದೇ ಭಾವಿಸಿರುವನು. ಆದ್ದರಿಂದ ದೇವಕೀದೇವಿಯ ಮಗನಿಗೆ ವೈಶ್ಯಜಾತಿಗೆ ಯೋಗ್ಯವಾದ ಸಂಸ್ಕಾರಗಳನ್ನೇ ಮಾಡಿಸಬಹುದು. ನಾನು ಕ್ಷತ್ರಿಯಜಾತಿಯವನು. ಆದ್ದರಿಂದ ನನ್ನ ಮಗನಿಗೆ ಕ್ಷತ್ರಿಯಜಾತಿಗೆ ಯೋಗ್ಯವಾದ ಸಂಸ್ಕಾರಗಳೇ ಏರ್ಪಡಬೇಕು.

" ಅದಕ್ಕಾಗಿ ನನ್ನ ಪುರೋಹಿತರಾದ ಶ್ರೀಗರ್ಗಾಚಾರ್ಯರನ್ನು ಗೋಕುಲಕ್ಕೆ ಕಳುಹಿಸಬೇಕು. ಅವರನ್ನು ನೋಡಿದ ಕೂಡಲೇ ನಂದನು ದೇವಕೀದೇವಿಯ ಮಗನಿಗೂ ರೋಹಿಣೀದೇವಿಯ ಮಗನಿಗೂ ಜಾತಕರ್ಮಾದಿ ಸಂಸ್ಕಾರಗಳನ್ನೂ ನಾಮಕರಣವನ್ನೂ ಮಾಡಿಸಬೇಕೆಂದು ಅವರಲ್ಲಿ ಪ್ರಾರ್ಥಿಸುವನು. ಆಗ ಗರ್ಗಾಚಾರ್ಯರು ನಾನು ವಸುದೇವನ ಪುರೋಹಿತನೆಂದು ನಾನು ನಿನ್ನ ಮಗನಿಗೆ ನಾಮಕರಣ ಮುಂತಾದ ಸಂಸ್ಕಾರಗಳನ್ನು ಮಾಡಿಸಿದರೆ ನಿನ್ನ ಮಕ್ಕಳು ದೇವಕಿಯ ಮಕ್ಕಳಾಗಿರಬಹುದೆಂಬ ಸಂಶಯವು ಕಂಸನಿಗೆ ಏರ್ಪಡಬಹುದೆಂದೂ ಆ ಸಂಶಯವು ಬಂದರೆ ನಿನ್ನ ಮಕ್ಕಳಿಗೆ ಆಪತ್ತು ಬರಬಹುದೆಂದೂ ಹೇಳಿ ಪೌರೋಹಿತ್ಯವನ್ನು ನಡೆಯಿಸಲು ಇಷ್ಟವಿಲ್ಲದಂತೆ ತೋರಿಸಬೇಕು. ಆಗ ನಂದನು " ಯಾರಿಗೂ ತಿಳಿಯದಂತೆ ಗುಟ್ಟಿನಲ್ಲಿ ನಾಮಕರಣಾದಿ ಸಂಸ್ಕಾರಗಳನ್ನು ಮಾಡಿಸಿ ಹೋಗಿರಿ'' ಎಂದು ಪ್ರಾರ್ಥಿಸುವನು. ಆಮೇಲೆ ಕ್ಷತ್ರಿಯರಿಗೆ ಯೋಗ್ಯವಾದ ಎಲ್ಲಾ ಸಂಸ್ಕಾರಗಳನ್ನೂ ನಾಮಕರಣವನ್ನೂ ಗರ್ಗಾಚಾರ್ಯರಿಂದ ಮಾಡಿಸಬೇಕು.'' ಇದು ವಸುದೇವನ ಸಂಕಲ್ಪ.

ತನ್ನ ಗುರುಗಳಾದ ಗರ್ಗಾಚಾರ್ಯರಿಗೆ ಇದೇರೀತಿಯಲ್ಲಿ ತಿಳಿಸಿದನು. ಅವರೂ ಒಪ್ಪಿ ಗೋಕುಲಕ್ಕೆ ಬಂದರು. ವಸುದೇವನು ಹೇಳಿದಂತೆ ಮಾಡಿದರು. ಗರ್ಗಾಚಾರ್ಯರು ವಯಸ್ಸಿನಲ್ಲಿ ದೊಡ್ಡವನಾದ ರೋಹಿಣೀದೇವಿಯ ಮಗನಿಗೆ ಮೊದಲು ನಾಮಕರಣವನ್ನು ಮಾಡಿಸಿದರು.

ಈ ರೋಹಿಣೀದೇವಿಯ ಮಗನು ತನ್ನ ಗುಣಗಳಿಂದ ಸರ್ವರನ್ನೂ ಸಂತೋಷಪಡಿಸುವನು. ಆದ್ದರಿಂದ "ರಮಯತಿ" ಅಂದರೆ ಸರ್ವರನ್ನೂ ಸಂತೋಷಪಡಿಸುತ್ತಿರುವುದರಿಂದ "ರಾಮ" ಎಂದು ಪ್ರಸಿದ್ಧನಾಗುವನು. ತುಂಬಾ ಬಲಿಷ್ಠನಾಗಿರುವುದರಿಂದ. "ಬಲ" ಎಂದೂ ಪ್ರಸಿದ್ಧನಾಗುವನು. ಬಲ+ರಾಮ= ಬಲರಾಮ ಎಂದೂಪ್ರಸಿದ್ಧನಾಗುವನು. ಇವನನು ಯದುವಂಶದಲ್ಲಿ ಹುಟ್ಟಿದವನು. ಆದರೆ ಗೋಕುಲದಲ್ಲಿ ಹುಟ್ಟಿರುವುದರಿಂದ ಇವನನ್ನು ಗೊಲ್ಲನೆಂದು ಸರ್ವರೂ ತಿಳಿಯುವಂತಿದೆ. ಆದ್ದರಿಂದ ಯುದುವಂಶದಲ್ಲಿ ಹುಟ್ಟಿದ್ದರೂ ಗೊಲ್ಲರ ಜಾತಿಗೆ ಆಕರ್ಷಿಸಲ್ಪಟ್ಟಂತೆ ಕಾಣಿಸಲ್ಪಡುವುದರಿಂದ ಇವನನ್ನು ಸಂಕರ್ಷಣ ಎಂದು ಸರ್ವರೂ ಹೇಳುವರು.

ಇನ್ನು ನಿನ್ನ ಎರಡನೆಯ ಮಗನಿಗೆ ನಾಮಕರಣವನ್ನು ಮಾಡುವೆನು. "(೧) ಇವನು ದೈತ್ಯಪತ್ನಿಯರ ಚಂದ್ರನಂತಿರುವ ಮುಖವನ್ನು ಕೃಷ್ಣಪಕ್ಷದಂತೆ ಕಪ್ಪಾಗುವಂತೆ ಮಾಡುವನು. (೨) ಇವನು ತನ್ನನ್ನು ನೋಡಿದ ಕೂಡಲೇ ಮನುಷ್ಯರು, ಸುಂದರಿಯಾದ ಸ್ತ್ರೀಯರು, ದೇವತೆಗಳು, ಚಾರಣರು ಮುಂತಾದವರ ಮನಸ್ಸುಗಳನ್ನು ಆಕರ್ಷಿಸುತ್ತಿರುವನು (೩) ಕೃಷಿಗೆ ಯೋಗ್ಯವಾದ "ಕೃಷಿ" ಅಂದರೆ ಭೂಮಿಯಲ್ಲಿ ವಾಸಿಸುತ್ತಿದ್ದರೂ "ಣ" ಅಂದರೆ

ಸುಖಿಯಾಗಿರುವವನು. (೪) ಕೃಷಿಗೆ ಯೋಗ್ಯವಾದ "ಕೃಷಿ" ಅಂದರೆ ಭೂದೇವಿಗೆ "ಣ" ಅಂದರೆ ಸುಖಪ್ರದನಾಗಿರುವವನು.(೫) ಕೃಷ್ಣ ಅಂದರೆ ಮೂಲರೂಪಿಯಾದ ಶ್ರೀಹರಿಯ ಕಪ್ಪುಕೂದಲಿನ ಅವತಾರವಾಗಿರುವವನು. (೬) ದೈತ್ಯರೆಂಬ ಕಾಡುಮರಗಳನ್ನು ಸುಡುವ ವಿಷಯದಲ್ಲಿ "ಕೃಷ್ಣವರ್ತ್ಮಾ" ಅಂದರೆ ಕಾಡ್ಗಿಚ್ಚಿನಂತಿರುವವನು. (೭) ದೈತ್ಯಸಮೂಹವನ್ನು ಭಸ್ಮಮಾಡುವ ವಿಷಯದಲ್ಲಿ "ಕೃಷ್ಣವರ್ತ್ಮಾ" ಅಂದರೆ ಪ್ರಳಯಾಗ್ನಿಯಂತಿರುವವನು. ಆದ್ದರಿಂದ ಇವನನ್ನು ಕೃಷ್ಣ ಎಂದು ಕರೆಯಿರಿ. ಹಿಂದೊಮ್ಮೆ ಇವನು ವಸುದೇವನ ಮಗನಾಗಿ ಹುಟ್ಟಿದ್ದನು. ಆದ್ದರಿಂದ ಇವನನ್ನು ವಾಸುದೇವ ಎಂದು ಜ್ಞಾನಿಗಳು ಕರಿಯುತ್ತಿರುವರು. ಇವನ ಗುಣಗಳಿಗೂ ಇವನು ಮಾಡುವ ಲೀಲೆಗಳಿಗೂ ಯೋಗ್ಯವಾದ ಅನಂತ ಹೆಸರುಗಳು ಇವನಿಗಿವೆ. ಅವುಗಳನ್ನು ನಾನು ಯಥಾಶಕ್ತಿ ತಿಳಿದಿರುವೆನು. ಇತರರು ತಿಳಿಯಲಾರರು."

"ಇವನು ನಿಮ್ಮೆಲ್ಲರಿಗೂ ಶ್ರೇಯಸ್ಸನ್ನು ಕೊಡುವನು. ಇವನಿಂದ ಎಲ್ಲಾ ಕಷ್ಟಗಳನ್ನೂ ನೀವು ದಾಟುವಿರಿ. ಇವನು ಹಿಂದೆ ಸಕಲ ಸಜ್ಜನರಿಗೂ ಶಕ್ತಿಯು ಹೆಚ್ಚಾಗುವಂತೆ ಮಾಡಿ ಎಲ್ಲಾ ಶತ್ರುಗಳನ್ನೂ ಜಯಿಸುವಂತೆ ಮಾಡಿರುವವನು. ಇವನನ್ನು ಪ್ರೀತಿಸುವವರಿಗೆ ಶತ್ರುಗಳ ಬಾಧೆಯಿಲ್ಲ. ಹೆಚ್ಚೇಕೆ? ಇವನು ಎಲ್ಲಾ ಗುಣಗಳಿಂದಲೂ ನಾರಾಯಣನಿಗೆ ಸಮನು. ಇವನನ್ನು ಪ್ರೇಮದಿಂದ ರಕ್ಷಿಸು." ಇದು ಗರ್ಗಾಚಾರ್ಯರು ಮಾಡಿದ ಉಪದೇಶ.

ಶ್ರೀಕೃಷ್ಣದೇವನಿಗೆ ನಾಮಕರಣವನ್ನು ಮಾಡುವುದಕ್ಕಿಂತ ಪೂರ್ವದಲ್ಲೇ ಪೂತನಾದಿಗಳನ್ನು ಸಂಹರಿಸಿ "ಪೂತನಾಜೀವಿತಾಹಾರೀ" ಮುಂತಾದ ಹೆಸರುಗಳನ್ನು ತಾನೇ ಸಂಪಾದಿಸಿದ್ದನು. ಅತ್ಯಂತ ಭಕ್ತರಾದ ಗರ್ಗಾಚಾರ್ಯರು ನಾಮಕರಣವನ್ನು ಮಾಡಿದ ನಂತರದಲ್ಲಿ ಆ ಹೆಸರುಗಳಿಂದಲೂ ಪ್ರಸಿದ್ಧನಾದನು. ಅನೇಕ ಹೆಸರುಗಳಲ್ಲಿ ತಮ್ಮ ಪ್ರಿಯರಿಂದ ಹೇಳಲ್ಪಟ್ಟ ಹೆಸರಿನಲ್ಲಿ ಅಧಿಕಪ್ರೀತಿಯಲ್ಲವೇ? ಗರ್ಗಾಚಾರ್ಯರು ತನ್ನ ಕೆಲಸವನ್ನು ಮಾಡಿ ಹಿಂತೆರಳಿದರು.

(೧೧) ವಿಶೇಷಾರ್ಥ -ಕೃತರುಚಿರಮಹಾಬಾಲಲೀಲಃ- ಶ್ರೀಕೃಷ್ಣದೇವನು ಸುಂದರವೂ ಶ್ರೇಷ್ಠವೂ ಆಗಿರುವ ಅಸಂಖ್ಯವಾದ ಬಾಲಲೀಲೆಗಳನ್ನು ಮಾಡಿದನು. **"ಕ್ವಚಿತ್ ಜಾನುಬ್ಯಾಂ ಸಹ ಪಾಣಿಭ್ಯಾಂ ರಿಂಖಣಂ, ಕ್ವಚಿತ್ಪಾದಯುಗಲಮನುಕೃಷ್ಯಾಭಿಸರ್ಪಣಂ, ಕದಾಚಿದ್ವತ್ಸಪುಚ್ಛಾವಲಂಬೇನ ಇತಸ್ತತಃ ಸಂಚರಣಮಿತ್ಯಾದಿವ್ಯಾಪಾರೈರ್ಮಾತ್ರಾದೀನ್ ಸಂತೋಷ್ಯ"** ಕೆಲವು ದಿನಗಳ ವರೆಗೆ ಎರಡು ಮೊಣಕಾಲುಗಳನ್ನೂ ಎರಡು ಕೈಗಳನ್ನೂ ಊರಿ ಅಂಬೆಗಾಲಿಕ್ಕುತ್ತಾ ನಡೆದನು. ಮತ್ತೆ ಕೆಲದಿನ ಎರಡು ಕಾಲುಗಳನ್ನು ಎಳೆಯುತ್ತಾ ಮುಂದೆ ಮುಂದೆ ಹೋದನು. ಮತ್ತೆ ಕೆಲವು ದಿನ ಕರುವಿನ ಬಾಲವನ್ನು ಹಿಡಿದು ಈ ಕಡೆಗೂ ಆ ಕಡೆಗೂ ನಡೆದನು. ಈ ವ್ಯಾಪಾರಗಳೇ ಮುಂತಾದ ವ್ಯಾಪಾರಗಳಿಂದ ತಾಯಿ ಮುಂತಾದವರನ್ನು ಸಂತೋಷಪಡಿಸಿದನು.

ವಿಶೇಷಾರ್ಥವಿವರಣ - ಬಲರಾಮನೂ ಶ್ರೀಕೃಷ್ಣದೇವನೂ ಕ್ರಮವಾಗಿ ಬಾಲಲೀಲೆಗಳನ್ನು ತೋರಿಸುತ್ತಾ ಬಂದರು. ಕೆಸರಿನಿಂದ ಯುಕ್ತವಾದ ಗೋಕುಲದ ಅಂಗಳಗಳಲ್ಲಿ ಹೊಟ್ಟೆಯನ್ನು ಎಳೆಯುತ್ತಾ ಸಂಚರಿಸಿದರು. ಅವರ ತಾಯಂದಿರು ಕೃಪೆಯಿಂದ ಮೊಲೆಗಳಿಂದ ಹಾಲನ್ನು ಸುರಿಸುತ್ತಾ ತಮ್ಮತಮ್ಮ ಮಕ್ಕಳನ್ನು ಎರಡು ಕೈಗಳಿಂದ ತಬ್ಬಿಕೊಂಡಿರು. ಹಾಲನ್ನು ಕುಡಿಸಿದರು. ಮಕ್ಕಳುಗಳ ಮುಖಗಳನ್ನು ನೋಡಿದರು. ಚಿಗುರು ಹಲ್ಲುಗಳಿಂದಲೂ ಮುಗುಳು ನಗೆಯಿಂದಲೂ ಯುಕ್ತವಾಗಿರುವ ಮುಖಗಳನ್ನು ನೋಡಿ ಆನಂದಿಸಿದರು.

ಗೋಕುಲದಲ್ಲಿರುವ ಸ್ತ್ರೀಯರು ಮತ್ತು ನಿರಂತರ ಸ್ಮರಣೆ ಮಾಡುತ್ತಿರುವ ಮುನಿಗಳ ಪ್ರೇಮಪಾಶದಿಂದ ಶ್ರೀಕೃಷ್ಣದೇವನ ಪಾದಗಳು ಬಿಗಿಯಲ್ಪಟ್ಟವು. ಆದ್ದರಿಂದ ಕಾಲುನಡೆಯಿಂದ ನಡಿಯಲು ಸಾಧ್ಯವಾಗಲಿಲ್ಲವೆಂದು ನಟಿಸಿದನು. ಆದ್ದರಿಂದಲೇ ಈ ಇಬ್ಬರು ಬಾಲಕರೂ ಎರಡು ಮೊಣಕಾಲುಗಳನ್ನೂ ಎರಡು ಕೈಗಳನ್ನೂ ಊರಿಕೊಂಡು ಅಂಬೆಗಾಲಿಕ್ಕುತ್ತಾ ನಡಿಯಲು ಆರಂಭಿಸಿದರು.

ಪ್ರಳಯಕಾಲದಲ್ಲಿ ಅನೇಕ ಲೋಕಗಳನ್ನು ತುಂಬಿಕೊಂಡಿರುವ ತನ್ನ ದೊಡ್ಡ ಹೊಟ್ಟೆಯು ಈಗ ಶ್ರೀಕೃಷ್ಣಾವತಾರ ಕಾಲದಲ್ಲಿ ಚಿಕ್ಕರೂಪವನ್ನು ತಾಳಿದೆ. ಇದನ್ನು ತೋರಿಸಲು ನಾಚಿಕೆ ಪಟ್ಟವನಂತೆ ಹೊಟ್ಟೆಯನ್ನು ಕೆಳಗೆ ಮಾಡಿಕೊಂಡು ಶ್ರೀಕೃಷ್ಣದೇವನು ಸಂಚರಿಸಿದನು.

ಎರಡು ಕಾಲುಗಳನ್ನು ಎಳೆಯುತ್ತಿರುವಾಗ ಆ ಕಾಲುಗಳಲ್ಲಿ ಲೀನವಾದ ಮುನಿಗಳ ಮತ್ತು ಗೋಕುಲಸ್ತ್ರೀಯರ ಕಣ್ಣುಗಳೂ ಎಳೆಯಲ್ಪಡುತ್ತಿವೆ. ಸ್ವಭಾವದಿಂದ ಕಪ್ಪಾಗಿರುವ ಶ್ರೀಕೃಷ್ಣದೇವನ ದೇಹವು ಕೆಸರಿನಿಂದ ಅಧಿಕವಾಗಿ ಕಪ್ಪಾಗಿದೆ. ಸುಂದರರೂಪದಿಂದ ಯುಕ್ತವಾದ ಮುಖದ ಮೇಲೆ ಗುಂಗುರು ತಲೆಕೂದಲುಗಳು ಓಡಾಡುತ್ತಿವೆ. ಇಂತಹ ಶ್ರೀಕೃಷ್ಣದೇವನು ಅಮ್ಮಾ ಅಮ್ಮಾ ಎಂದು ಹೇಳುತ್ತಾ ತೊಡೆಯಲ್ಲಿ ಕುಳಿತು ಯಾವ ಯಶೋದೆಯ ಹಾಲನ್ನು ಕುಡಿಯುತ್ತಿರುವನೋ ಅವಳ ಪುಣ್ಯಕ್ಕೆ ಎಣೆಯುಂಟೇ?

ಶ್ರೀಕೃಷ್ಣನಸನ್ನಿಧಾನದಿಂದ ಸಕಲ ಸಂಪತ್ತುಗಳೂ ಗೋಕುಲದಲ್ಲಿ ಏರ್ಪಟ್ಟವು. ಆದ್ದರಿಂದ ಅಲ್ಲಿ ವಾಸಿಸುವವರಿಗೆ ಯಾವ ನ್ಯೂನತೆಯೂ ಬಾಧೆಯೂ ಇಲ್ಲ. ಸಕಲ ನ್ಯೂನತೆಗಳನ್ನು ಪರಿಹರಿಸುತ್ತಿರುವ ಶ್ರೀಕೃಷ್ಣದೇವನು ನಿರ್ಗುಣನಾಗುವನೇ? ಅವನ ಸನ್ನಿಧಾನದಿಂದ ಏರ್ಪಟ್ಟ ಸಂಪತ್ತುಗಳು ಸುಳ್ಳಾಗುತ್ತವೆಯೇ? ಶ್ರೀಕೃಷ್ಣದೇವನು ಅಪಾರವಾದ ತೇಜಸ್ಸಿನಿಂದ ಯುಕ್ತನಾಗಿರುವನು. ಇವನಿಗೆ ಆಕಾರವಿಲ್ಲವೇ? ನಾರಾದರೇ ಮೊದಲಾದ ಮಹಾತ್ಮರು ಯಾವಾಗಲೂ ಇವನನ್ನು ಪೂಜಿಸುತ್ತಿರುವರು. ಇವನು ನೀಚರಾದ ಜೀವರಿಂದ ಅಭಿನ್ನನಾಗುವನೇ? ಹೀಗೆ ಶ್ರೀಕೃಷ್ಣದೇವನು ತನ್ನ ಅಪಾರ ಮಹಿಮೆಗಳಿಂದ ಅದ್ವೈತಿಗಳಿಗೆ ಸಂಮತವಾಗಿರುವ ನಿರ್ಗುಣತ್ವ ಪ್ರಪಂಚಮಿಥ್ಯಾತ್ವ ನಿರಾಕಾರತ್ವ ಜೀವೈಕ್ಯ ಮುಂತಾದ ಎಲ್ಲಾ ಪ್ರಮೇಯಗಳನ್ನೂ ನಿರಾಕರಿಸಿದನು.

ಶ್ರೀಕೃಷ್ಣದೇವನು ಗೋಪಿಕಾಸ್ತ್ರೀಯರ ಮನೆಗಳ ಅಂಗಳಗಳಲ್ಲಿ ಸಂಚರಿಸುತ್ತಿರುವನು. ಅವನ ಕಾಲುಗಳಲ್ಲಿರುವ ಕಡಗಗಳು ಝುಣ ಝುಣ ಎಂಬ ಧ್ವನಿಯನ್ನು ಮಾಡುತ್ತಿವೆ. ಅಂಗಳದ ಧೂಳಿಗಳು ಅವನ ದೇಹದಲ್ಲಿ ಅಂಟಿಕೊಂಡಿವೆ. ಕರುಗಳೊಡನೆ ಓಡಾಡುತ್ತಿರುವನು. ಆಕಾಶದಲ್ಲಿ ದೇವತೆಗಳೆಲ್ಲರೂ ತಮ್ಮ ದೇಹವನ್ನು ಮರೆತು ಪತ್ನೀಸಮೇತರಾಗಿ ಶ್ರೀಕೃಷ್ಣದೇವನ ವೈಭವವನ್ನು ನೋಡುತ್ತಾ ಸ್ತುತಿಸುತ್ತಿರುವರು. ಶ್ರೀಕೃಷ್ಣದೇವನ ಮೇಲೆ ಹೊಟ್ಟೆಕಿಚ್ಚಿನಿಂದ ಯುಕ್ತರಾಗಿರುವ ದಾನವರೆಲ್ಲರನ್ನೂ ಸುಡುತ್ತಿರುವ ಶ್ರೀಕೃಷ್ಣದೇವನಿಗೆ ದೈತ್ಯರ ಬಾಧಾನಿವೃತ್ತಿಗಾಗಿ ಹುಲಿಯ ಉಗುರು ಕಂಠದಲ್ಲಿ ಕಟ್ಟಲ್ಪಟ್ಟಿದೆ. ಮುತ್ತಿನಮಾಲೆ ಮುಂತಾದ ಆಭರಣಗಳಿಂದ ದಿಕ್ಕುಗಳೆಲ್ಲಾ ಬೆಳಕಾಗುತ್ತಿವೆ. ಅವನ ಮುಗುಳುನಗೆಯೇ ದಿಕ್ಕುಗಳನ್ನೆಲ್ಲಾ ಬೆಳಕಾಗುವಂತೆ ಮಾಡುತ್ತಿದೆ. ಅವನಿಗೆ ಆಭರಣವೇಕೆ? ಬಟ್ಟೆಯೇ ಇಲ್ಲ. ಅವನ ಸುಂದರವಾದ ಸೊಂಟವು ಕಣ್ಣಿಗೆ ಕಾಣಿಸುತ್ತಿದೆ. ಸೂರ್ಯನಂತೆ ಹೊಳೆಯುತ್ತಿರುವನು. ತೊದಲು ಮಾತುಗಳಿಂದ ಸರ್ವರನ್ನೂ ಸಂತೋಷಪಡಿಸುತ್ತಿರುವನು. ಪುಷ್ಪವಾದ ತಲೆಕೂದಲುಗಳಿಂದ ಯುಕ್ತನಾಗಿರುವನು. ಈ ಕೃಷ್ಣದೇವನ ಮೂರ್ತಿಯು ಎಂದೆಂದಿಗೂ ನನ್ನ ಮನಸ್ಸಿನಲ್ಲಿ ನಿಲ್ಲಲಿ.

ಈ ಬಲರಾಮಕೃಷ್ಣರು ಕರುಗಳ ಬಾಲಗಳನ್ನು ಹಿಡಿಯುತ್ತಾ ಎದ್ದು ನಿಲ್ಲಲು ಪ್ರಯತ್ನಿಸಿದರು. ಕರುಗಳು ಈ ಬಾಲಕರನ್ನು ಎಳೆಯುತ್ತಾ ಮೆಲ್ಲಮೆಲ್ಲನೆ ಓಡಾಡಲು ಆರಂಭಿಸಿದವು. ಎಲ್ಲಾ ಗೋಪಿಕಾಸ್ತ್ರೀಯರೂ ತಮ್ಮತಮ್ಮ ಮನೆಗಳ ಕೆಲಸಗಳನ್ನು ಮರತು ಇವರಿಬ್ಬರೆ ಬಾಲಲೀಲೆಗಳನ್ನು ನೋಡುತ್ತಾ ನಗುತ್ತಾ ಸಂತೋಷಿಸಿದರು.

ಕ್ರಮವಾಗಿ ಇವರಿಬ್ಬರೂ ಕಾಲ್ನಡೆಯಿಂದ ಸಂಚರಿಸಲು ಆರಂಭಿಸಿದರು. ಕೊಂಬುಗಳಿಂದ ಯುಕ್ತವಾದ ಎತ್ತು ಮುಂತಾದ ಪ್ರಾಣಿಗಳು, ಬೆಂಕಿ, ಕೋರೆಹಲ್ಲಿನಿಂದ ಯುಕ್ತನಾದ ನಾಯಿ ಮುಂತಾದ ಪ್ರಾಣಿಗಳು. ಕತ್ತಿ, ನೀರು, ಪರೆಗಳು ಮುಳ್ಳುಗಳು ಮುಂತಾದ ಅಪಾಯಕರವಾದ ವಸ್ತುಗಳಿಂದ ಆಟವಾಡಲು ಆರಂಭಿಸಿದರು. ಇದರಿಂದ ಇವರನ್ನು ಸ್ವತಂತ್ರರಾಗಿ ಬಿಡಲೂ ಸಾಧ್ಯವಾಗದೆ ಮನೆಯ ಕೆಲಸಗಳನ್ನು ಮಾಡಲೂ ಸಾಧ್ಯವಾಗದೆ ಈ ಬಾಲಕರ ತಾಯಂದಿರು ತುಂಬಾ ಕಷ್ಟಕ್ಕೆ ಗುರಿಯಾದರು.

ಬಂಗಾರದ ಸರವಳಿಗಳಿಂದಲೂ ಮತ್ತು ಮಾಲೆಗಳಿಂದ ಅಲಂಕೃತವಾದ ಮೇಲ್ಕಟ್ಟಿನಿಂದಲೂ ಯುಕ್ತವಾದ ತೊಟ್ಟಿಲಿನಲ್ಲಿ ಶ್ರೀಕೃಷ್ಣದೇವನನ್ನು ಮಲಗಿಸಿ ಯಶೋದೆಯು ತೂಗಿದಳು. ಆಗ ಸಾಲೋಕ್ಯ ಮುಂತಾದ ಮುಕ್ತಿಯ ಸುಖವನ್ನು ಪಡೆದಳು. ತೊಟ್ಟಿಲನ್ನು ತೂಗುತ್ತಿರುವಾಗ ತಲೆಕೂದಲುಗಳೆಲ್ಲವೂ ಅವನ ಹಣೆಯನ್ನು ಅಲಂಕರಿಸಿದವು. ಮುಖದಲ್ಲಿ ಮುಗುಳ್ನಗೆಯಿಂದ ಅಮೃತರಸವನ್ನು ಬೀರಿದನು. ಕಾಲುಗಳಲ್ಲಿ ಕಡಗಗಳು ಝಣ ಝಣತ್ಕಾರವನ್ನು ಮಾಡುತ್ತಿವೆ. ನೀಲಮೇಘಶ್ಯಾಮನಾದ ಶ್ರೀಕೃಷ್ಣದೇವನನ್ನು ತೂಗುತ್ತಾ ಎಲ್ಲಾ ಕಾಲವನ್ನೂ ಸುಖಮಯವಾಗಿ ಕಳೆದಳು.

ಕೆನ್ನೆಯನ್ನು ಚಿಗುರಿನಂತೆ ಮೃದುವಾಗಿರುವ ಬೆರಳುಗಳಿಂದ ಒತ್ತಿದಳು. ಆಗ ಏರ್ಪಟ್ಟ ಮುಗುಳ್ನಗೆಯಿಂದ ಯುಕ್ತವಾದ ಮುಖವನ್ನು ಆಸೆಯಿಂದ ನೋಡಿದಳು. ಆಗ ಮೊಲೆಗಳಿಂದ ಉಕ್ಕಿ ಬರುತ್ತಿರುವ ಹಾಲನ್ನು ಕುಡಿಸಿದಳು. ಹೀಗೆ ಹಗಲಿನ ಕಾಲವನ್ನು ಯಶೋದೆಯು ಸುಖಮಯವಾಗಿ ಕೆಳದಳು.

ಶ್ರೀಕೃಷ್ಣದೇವನು ಚಿಕ್ಕಮಗುಗಳ ಸ್ವಭಾವವನ್ನು ಅನುಸರಿಸಿ ತನ್ನ ಎಡಗಾಲನ್ನು ಕೈಯಿಂದ ಹಿಡಿದನು. ಆ ಕಾಲಿನ ಅಂಗುಷ್ಠವನ್ನು ತನ್ನ ಬಾಯಿಯಲ್ಲಿಟ್ಟು ಮುದ್ದಿಸಿದನು. ಇದನ್ನು ನೋಡುವಾಗ " ಎಲೈ ಅಂಗುಷ್ಠವೇ ನೀನು ನಿನ್ನಲ್ಲಿರುವ ಉಗುರಿನ ತುದಿಯಿಂದಲೇ ಸಕಲ ದೈತ್ಯರಿಂದಲೂ ಸಕಲ ದೇವತೆಗಳಿಂದಲೂ ಸಕಲಜೀವರಿಂದಲೂ ಅಭೇದ್ಯವಾದ ಬ್ರಹ್ಮಾಂಡದ ಪೃಥಿವೀ ಆವರಣವನ್ನು ಭೇದಿಸಿದಿ. ಭಲೇ, ನಿನಗೆ ಸಮಾನನು ನೀನೇ ಎಂದು ಹೇಳುತ್ತಾ ಮುದ್ದಿಸುತ್ತಿರುವಂತಿತ್ತು.

ಎಷ್ಟು ತೂಗಿದರೂ ಶ್ರೀಕೃಷ್ಣದೇವನಿಗೆ ನಿದ್ದೆಯು ಬರಲಿಲ್ಲ. ಆಗ ಯಶೋದೆಯು ಶ್ರೀಕೃಷ್ಣದೇವನನ್ನು ನೋಡಿ " ಮಗು ನಿದ್ದೆಯನ್ನು ಮಾಡು" ಎಂದಳು. " ಅದಕ್ಕೆ ಫಲವೇನು?" ಎಂದು ಶ್ರೀಕೃಷ್ಣದೇವನು ಪ್ರಶ್ನಿಸಿದನು. " ತಿಂದದ್ದೆಲ್ಲವೂ ಅರಗುತ್ತದೆ." ಇದು ಯಶೋದೆಯ ಉತ್ತರ. " ನಿದ್ದೆಯೆಂದರೇನು?" ಇದು ಶ್ರೀಕೃಷ್ಣದೇವನ ಪ್ರಶ್ನೆ. " ಕಣ್ಣುಗಳನ್ನು ಮುಚ್ಚಿಕೊಳ್ಳಬೇಕು. ಪ್ರಾಜ್ಞ ಎಂಬ ಶ್ರೀಹರಿಯನ್ನು ಆಲಂಗಿಸಿಳ್ಳಬೇಕು. ಇದೇ ನಿದ್ರೆ" ಇದು ಯಶೋದೆಯ ಉತ್ತರ.

ಶ್ರೀಕೃಷ್ಣದೇವನು ಎರಡು ಕಣ್ಣುಗಳನ್ನು ಮುಚ್ಚಿಕೊಂಡು ತನ್ನನ್ನು ತಾನೇ ಆಲಂಗಿಸಿಕೊಂಡನು. " ಅಮ್ಮಾ

ನಿದ್ದೆಯನ್ನು ಮಾಡಿಬಿಟ್ಟೆ. ತಿಂದದ್ದೆಲ್ಲಾ ಜೀರ್ಣವಾಯಿತು. ಹಸಿವಾಗುತ್ತಿದೆ ತಿನ್ನಲಿಕ್ಕೆ ಏನಾದರೂ ಕೊಡು.'' ಎಂದನು. ಇದರಿಂದ ಪ್ರಾಜ್ಞ ಎಂಬ ಶ್ರೀಹರಿಯು ತಾನೇ ಎಂದೂ, ತನಗೆ ತನ್ನ ಆಲಿಂಗನವೇ ನಿದ್ರೆ ಎಂದೂ, ಮೈಮರೆತು ಬಿದ್ದಿರುವ ನಿದ್ರೆಯು ತನಗಿಲ್ಲವೆಂದೂ ತನಗೆ ನಿದ್ದೆ ಬರಬೇಕೆಂದು ತೂಗುತ್ತಿರುವುದೆಲ್ಲಾ ವ್ಯರ್ಥವೆಂದೂ ತಿಳಿಸಿದನು.

ಯಶೋದೆಯು ತೊಟ್ಟಿಲನ್ನು ತೂಗುವಾಗ ಸುಸ್ವರದಿಂದ ಯಾವಾಗಲೂ ಹಾಡುತ್ತಿರುವಳು. ಆಗ ಕ್ಷೀರಸಾಗರವಾಸಿಯಾದ ಶ್ರೀಹರಿಯನ್ನೇ ಹೆಚ್ಚಾಗಿ ಪ್ರಾರ್ಥಿಸುತ್ತಿದ್ದಳು. ಇದನ್ನು ಶ್ರೀಕೃಷ್ಣದೇವನು ಗಮನಿಸಿದನು. ತಾಯಿಯನ್ನು ನೋಡಿ ಕೇಳಿದನು. " ಕ್ಷೀರಸಾಗರವಾಸಿಯಾದ ಶ್ರೀಹರಿಯನ್ನೇ ಒಂದೊಂದು ದಿನದಲ್ಲಿಯೂ ಪ್ರಾರ್ಥಿಸುತ್ತಾ ಏಕೆ ತೂಗುತ್ತಿರುವಿ?'' ಎಂದು ಪ್ರಶ್ನಿಸಿದನು. " ಅವನಿಗೆ ತುಂಬಾ ನಿದ್ರೆ. ಆ ನಿದ್ರೆಯಲ್ಲಿ ಸ್ವಲ್ಪಭಾಗವನ್ನಾದರೂ ನಿನಗೆ ಕೊಡಲಿ'' ಎಂದು ಅವನನ್ನು ಬೇಡುತ್ತಿರುವೆನು'' ಇದು ತಾಯಿಯ ಉತ್ತರ. ಅವನಿಗೆ ನಿದ್ದೆಯಿದ್ದರೆ ಬಹುದೂರದಲ್ಲಿರುವ ಅವನಿಗೆ ನಿನ್ನ ಚಿಕ್ಕಧ್ವನಿಯು ಕೇಳಲಾರದು. ನಿದ್ರೆಯನ್ನು ಕೊಡಬೇಕೆಂದು ನಿನ್ನ ಪ್ರಶ್ನೆಯು ವ್ಯರ್ಥ'' ಇದು ಶ್ರೀಕೃಷ್ಣದೇವನ ಪ್ರತ್ಯುತ್ತರ. ಇದರಿಂದ ಕ್ಷೀರಸಾಗರವಾಸಿಯಾದ ಶ್ರೀಹರಿಯು ನಿದ್ರೆಯನ್ನು ಕೊಡಬೇಕೆಂದು ಪ್ರಾರ್ಥಿಸುತ್ತಿರುವ ನೀನೇ ಅವನಿಗೆ ನಿದ್ರೆ ಯಿಲ್ಲವೆಂದು ಅಂಗೀಕರಿಸಿದಂತಾಯಿತೆಂದೂ ನನಗೆ ನಿದ್ರೆಯಿಲ್ಲದಿರುವ ವಿಷಯವನ್ನು ನೀನೇ ಅನುಭವದಿಂದ ತಿಳಿದಿರುವಿಯೆಂದೂ ತಿಳಿಸಿದಂತಾಯಿತು.

ಗೋಪಿಕಾಸ್ತ್ರೀಯರು ಶ್ರೀಕೃಷ್ಣದೇವನನ್ನು ಪ್ರೇಮದಿಂದ ತೊಟ್ಟಿಲಿನಲ್ಲಿ ತೂಗಿದರು. ತೂಗುತ್ತಿರುವಾಗ ನೀಲವಾದ ಅವರ ತಲೆಯ ಕೂದಲುಗಳೂ ಬಿಳಿಯ ಪಟ್ಟೆಮಡಿಗಳೂ ಮುತ್ತಿನ ಹಾರಗಳೂ ಬಳೆಗಳೂ ತಲೆಯಲ್ಲಿ ಮುಡಿದಿರುವ ಮಲ್ಲಿಗೆ ಪುಷ್ಪಗಳೂ, ಅಂಗಗಳೂ ಪಾದಾಭರಣಗಳೂ ಕರ್ಣಕುಂಡಲಗಳೂ ಅಧಿಕವಾಗಿ ಚಲಿಸಿದವು. ಇದರಿಂದ ಅವರ ಸೌಂದರರ್ಯವೂ ಇಮ್ಮಡಿಯಾಯಿತು. ತೂಗುತ್ತಾ ಶ್ರೀಕೃಷ್ಣದೇವನನ್ನು ತಮ್ಮ ಸಮೀಪಕ್ಕೆ ಬರುವಂತೆ ಮಾಡಿಕೊಂಡರು. ಪ್ರಿಯನನ್ನು ವಶೀಕರಣ ಮಾಡಿಕೊಳ್ಳಲು ಸೌಂದರ್ಯಾತಿಶಯವು ತಾನೇ ಕಾರಣ?

ಆನಂದಮೂರ್ತಿಯಾದ ಶ್ರೀಕೃಷ್ಣದೇವನನ್ನು ತೂಗುತ್ತಿರುವಾಗ ಕೆಲವು ಸಂದರ್ಭಗಳಲ್ಲಿ ಗೋಪಿಕಾ ಸ್ತ್ರೀಯರು ತೊಟ್ಟಿಲಿನ ಹಗ್ಗವನ್ನು ಸೆಳೆದರು. ಆಗ ಶ್ರೀಕೃಷ್ಣದೇವನನ್ನು ಸೇವಿಸಿದಂತಾಯಿತು. ಆಗ ಸೇವಿಸಿದ ಗೋಪಿಕಾಸ್ತ್ರೀಯರನ್ನು ಅವನು ಸಮೀಪಿಸಿದನು. ಕೆಲವು ಸಲ ಹಗ್ಗವನ್ನು ಸೆಳೆಯದೆ ಬಿಟ್ಟರು. ಆಗ ಶ್ರೀಕೃಷ್ಣದೇವನ ಸೇವೆಯನ್ನು ಬಿಟ್ಟಂತಾಯಿತು. ಆಗ ಶ್ರೀಕೃಷ್ಣದೇವನು ಅವರನ್ನು ಬಿಟ್ಟು ಬಹುದೂರಕ್ಕೆ ಹೋದನು. ಇದರಿಂದ ಶ್ರೀಕೃಷ್ಣದೇವನನ್ನು ಸೇವಿಸುವವರಿಗೆ ಅವನು ಸಮೀಪಕ್ಕೆ ಬರುತ್ತಿರುವನೆಂದೂ ಕೈಬಿಟ್ಟವರಿಗೆ ದೂರಕ್ಕೆ ಹೋಗುತ್ತಿರುವನೆಂದೂ ಆ ತೊಟ್ಟಿಲು ತಿಳಿಸಿತು.

ಹೀಗೆ ಶ್ರೀಕೃಷ್ಣದೇವನು ನಾನಾವಿಧವಾದ ಸುಂದರವಾದ ಬಾಲಲೀಲೆಗಳಿಂದ ಯಶೋದೆಯನ್ನೂ ಗೋಪಿಕಾಸ್ತ್ರೀಯರನ್ನೂ ತೃಪ್ತಿಪಡಿಸಿದನು.

(೧೧) **ಗೋಪೀಗೇಹೇಷು ವಯಸ್ಯೈಃ ಸಹ ಭಾಂಡಸ್ಥಿತಂ ಕ್ಷೀರದಧ್ಯಾದಿ ಉರುದಯಯಾ ಮುಷ್ಣನ್**
ಗೋಪಿಕಾಸ್ತ್ರೀಯರ ಮನೆಗಳಲ್ಲಿ ತನ್ನ ವಯಸ್ಸಿನ ಬಾಲಕರೊಡನೆ ಪ್ರವೇಶಿಸಿ ಗೋಪಿಕಾಸ್ತ್ರೀಯರಲ್ಲಿರುವ ಅಧಿಕವಾದ ದಯೆಯಿಂದ ಪಾತ್ರೆಗಳಲ್ಲಿರುವ ಹಾಲು ಬೆಣ್ಣೆ ಮೊಸರು ಮುಂತಾದವುಗಳನ್ನು ಕದ್ದನು.

**ವಿಶೇಷಾರ್ಥ :-** " **ಕದಾಚಿದ್ಬಾಲಕೈಃ ಸಹ ಗೋಪೀಗೇಹೇಷು ಗತ್ವಾ, ಕೋಪರಹಿತಾಮನುಗ್ರಹಾಯ ಕೋಪಯುಕ್ತಾನಾಂ ಸ್ವಯೋಗ್ಯತಾತಿರೇಕೇಣ ಕೃತಶುಭಾನಿ ನಿಹಂತುಂ ನಾನಾವಿದೋಪಾಯೈಃ ಕ್ಷಿರದಧ್ಯಾದಿ ಚೌರ್ಯೇಣ ಗೃಹೀತ್ವಾ,** (ಕೆಲವು ಸಂದರ್ಭಗಳಲ್ಲಿ ಗೋಪೀಕಾಸ್ತ್ರೀಯರ ಮನೆಗಳಿಗೆ ಹೋಗಿ ಅವರ ಮನೆಗಳಲ್ಲಿ ಹಾಲು ಬೆಣ್ಣೆ ಮೊಸರುಗಳನ್ನು ಕದ್ದನು. ಕದಿಯುವಾಗ ಕೋಪಿಸದವರನ್ನು ಅನುಗ್ರಹಿಸಿದನು. ಕೋಪಿಸಿದವರು ಅವರ ಯೋಗ್ಯತೆಯನ್ನು ಮೀರಿ ಮಾಡಿರುವ ಪುಣ್ಯಗಳನ್ನು ಅಪಹರಿಸಿದನು.)

**ವಿಶೇಷಾರ್ಥವಿವರಣ:-** ಗೋಕುಲದಲ್ಲಿರುವ ಗೋಪಿಕಾಸ್ತ್ರೀಯರು ಎರಡು ವಿಧರಾಗಿರುವರು. ಅವರಲ್ಲಿ ಕೆಲವರು ತಮ್ಮ ಯೋಗ್ಯತೆಗೆ ಸಂಬಂಧಿಸಿದ ಪುಣ್ಯವನ್ನು ಪೂರ್ತಿಯಾಗಿ ಮಾಡಲಿಲ್ಲ ಅವರಿಂದ ಹೆಚ್ಚಿನ ಪುಣ್ಯವನ್ನು ಮಾಡಿಸಿ ಅವರನ್ನು ಉದ್ಧರಿಸಬೇಕು. ಅದಕ್ಕಾಗಿ ಅವರ ಮನೆಯಲ್ಲಿರುವ ಹಾಲು ಮೊಸರು ಬೆಣ್ಣೆ ಮುಂತಾದ ವಸ್ತುಗಳನ್ನು ಕದಿಯಬೇಕೆಂದೂ ಕದಿಯುವಾಗ ಅವರಿಗೆ ಕೋಪವು ಬಾರದಂತೆ ಮಾಡಿ ಅದರಿಂದ ಅವರಿಗೆ ಅಪಾರ ಪುಣ್ಯವನ್ನು ಕೊಟ್ಟು ಅವರಿಗೆ ಶೀಘ್ರದಲ್ಲಿ ಮೋಕ್ಷವನ್ನು ಕೊಡಬೇಕೆಂದೂ ಸಂಕಲ್ಪಿಸಿದನು.

(೨) ಮತ್ತೆ ಕೆಲವರು ತಮ್ಮ ಯೋಗ್ಯತೆಗಿಂತ ಅಧಿಕವಾದ ಪುಣ್ಯಗಳನ್ನು ಮಾಡಿದ್ದರು. ತಾನು ಕದಿಯುವಾಗ ಅವರಿಗೆ ಕೋಪವು ಬರುವಂತೆ ಮಾಡಿ ಇದರಿಂದ ಅವರು ಮಾಡಿರುವ ಅಧಿಕವಾದ ಪುಣ್ಯಗಳನ್ನು ಕಳೆಯಬೇಕೆಂದು ಸಂಕಲ್ಪಿಸಿದನು. ಪರಮ ಕರುಣಾಳುವಾದ ಶ್ರೀಕೃಷ್ಣದೇವನು ತನ್ನ ಸಂಕಲ್ಪದಂತೆ ಕದಿಯಲು ಆರಂಭಿಸಿದನು.

ಗೋಪಿಕಾಸ್ತ್ರೀಯರಿಗೆ ಮೋಕ್ಷವನ್ನು ಕೊಡಬೇಕೆಂದು ತೀರ್ಮಾನಿಸಿದನು. ಆಗ ಅನೇಕ ಜನ್ಮಗಳಿಂದ ಶ್ರೀಹರಿಯನ್ನು ಅತ್ಯಂತ ಭಕ್ತಿಯಿಂದ ಆರಾಧಿಸುತ್ತಿರುವ ನಾರದಾದಿಯೊಗಿಗಳ ಜ್ಞಾಪಕ ಬಂತು. ಅವರೆಲ್ಲರೂ ಸ್ತ್ರೀಯರಿಗೆ ಮೋಕ್ಷವನ್ನು ಕೊಡುತ್ತಿರುವುದನ್ನು ನೋಡಿ ತನ್ನೊಡನೆ ಪ್ರಣಯಕಲಹಕ್ಕೆ ಬರಬಹುದೆಂದು ಭಾವಿಸಿದನು. ಅದಕ್ಕಾಗಿ ಅವರ ಮನೆಯಲ್ಲಿ ಕದ್ದು ಈ ಪ್ರಣಯಕಲಹಕ್ಕೆ ಸಮಂಜಸವಾದ ಉತ್ತರವನ್ನು ಕೊಡಬೇಕೆಂದು ತೀರ್ಮಾನಿಸಿದನು. ಗೋಪಿಕಾಸ್ತ್ರೀಯರ ಮನೆಯಲ್ಲಿ ಕದ್ದಿರುವ ತಾನು ಅವರ ಋಣದಲ್ಲಿ ಬಿದ್ದಿರುವೆನೆಂದೂ ಆ ಋಣ ಪರಿಹಾರವಾಗುವುದಕ್ಕಾಗಿ ಅವರು ಕೇಳಿರುವ ಮೋಕ್ಷವನ್ನು ಕೊಡಲೇಬೇಕೆಂದೂ ನಾರದಾದಿ ಯೋಗಿಗಳ ಮನೆಯಲ್ಲಿ ಕದಿಯದಿರುವುದರಿಂದ ಅವರ ಋಣವು ತನ್ನಲ್ಲಿಲ್ಲವೆಂದೂ ಆದ್ದರಿಂದ ಅವರ ಋಣಪರಿಹಾರಕ್ಕಾಗಿ ಬೇಗನೆ ಅವರಿಗೆ ಮೋಕ್ಷವನ್ನು ಕೊಡಬೇಕಾಗಿಲ್ಲವೆಂದೂ ಹೇಳಿ ನಾರದಾದಿದಗಳ ಮನಸ್ಸನ್ನು ಸಮಾಧಾನ ಪಡಿಸಬಹುದಲ್ಲವೇ?

ಗೋಪಿಕಾಸ್ತ್ರೀಯರಿಗೆ ಕ್ಷೀರಸಮುದ್ರದ ಮಧ್ಯದಲ್ಲಿರುವ ಶ್ವೇತದ್ವಿಪವನ್ನು ಕೊಡಬೇಕೆಂದು ತೀರ್ಮಾನಿಸಿದನು. ಅದಕ್ಕಾಗಿ ಹಾಲನ್ನು ಕದ್ದನು. ತಾನು ಕದ್ದಿರುವ ಸ್ವಲ್ಪ ಹಾಲನ್ನು ಅನಂತವಾಗಿ ಮಾಡಿ ಕ್ಷೀರಸಮುದ್ರವನ್ನೇ ಅವರಿಗೆ ಕೊಡುವುದಕ್ಕೆ ಹಾಲನ್ನೆ ಕದಿಯುವುದು ಉಚಿತವಲ್ಲವೇ?

ತಾನು ಕದಿಯುತ್ತಿರುವಾಗ ತನ್ನನ್ನು ಧಿಕ್ಕರಿಸುತ್ತಿರುವವಳ ಹಾಲು ಮುಂತಾದ ವಸ್ತುಗಳನ್ನೂ ಅವಳು ಮಾಡಿದ ಪುಣ್ಯಗಳನ್ನೂ ಕದ್ದನು. ವಿನಯದಿಂದ ಬಗ್ಗಿದವಳಿಗೆ ಅಪಾರವಾದ ಪುಣ್ಯಗಳನ್ನು ಕೊಟ್ಟು ಕದ್ದನು. ಇವನಂತಹ ವಿಚಿತ್ರ ಕಳ್ಳನು ಯಾರಿರುವನು?

ಕಳ್ಳತನವು ನಿಂದ್ಯವಾದುದು ನಿಜ. ಆದರೆ ಶ್ರೀಕೃಷ್ಣದೇವನ ಕಳ್ಳತನವು ನಿಂದ್ಯವಲ್ಲ. ಅದನ್ನು ಹೇಳುವ ವರಿಗೂ ಕೇಳುವವರಿಗೂ ಸಕಲ ಸಂಪತ್ತುಗಳನ್ನೂ ಕೊಟ್ಟಿತು.; ಲಕ್ಷ್ಮೀಕಟಾಕ್ಷಕ್ಕೆ ಪಾತ್ರರಾದವರು ಯಾವುದನ್ನು ಮಾಡಿದರೂ ತಪ್ಪೆಂದು ಹೇಳುವವರೇ ಇಲ್ಲ. ಲಕ್ಷ್ಮೀಪತಿಯಾದ ಶ್ರೀಕೃಷ್ಣದೇವನು ಮಾಡುತ್ತಿರುವ ಎಲ್ಲಾ ಕೆಲಸಗಳೂ ಶ್ರೇಯಸ್ಕರವಾಗುವುದರಲ್ಲಿ ಸಂದೇಹವೇನಿದೆ?

"ನವನೀತಚೋರ" ಮುಂತಾದ ಶಬ್ದಗಳಿಂದ ಶ್ರೀಕೃಷ್ಣದೇವನ ಕಳ್ಳತನವನ್ನು ಹೊಗಳುವವರಿಗೆ ಅವನು ಮುಕ್ತಿಯನ್ನು ಕೊಡುತ್ತಿರುವನು. ಇದು ಯುಕ್ತವೇ ಸರಿ. ಶ್ರೀಕೃಷ್ಣದೇವನು ಮಾಡಿರುವ ತಪ್ಪನ್ನು ಪ್ರಕಟಿಸುತ್ತಿರುವವರಿಗೆ ಬೇಕಾದ ಇಷ್ಟಗಳನ್ನು ಕೊಟ್ಟು ಅವರು ಶ್ರೀಕೃಷ್ಣದೇವನ ಕಳ್ಳತನವನ್ನು ಪ್ರಕಟಿಸದಂತೆ ಮಾಡುವುದು ಯುಕ್ತವಲ್ಲವೇ?

ಪ್ರತಿಕ್ಷಣದಲ್ಲಿಯೂ ತನ್ನ ಭಕ್ತರು ಮಾಡುತ್ತಿರುವ ಪಾಪಗಳನ್ನೂ ಅವರಿಗೆ ತಿಳಿಯದಂತೆ ಶ್ರೀಕೃಷ್ಣದೇವನು ಕದಿಯುತ್ತಿರುವನು. ಈಗ ಗೋಕುಲದಲ್ಲಿರುವ ಗೊಲ್ಲರಲ್ಲಿ ಪಾಪವೇ ಇಲ್ಲ. ಆದ್ದರಿಂದ ಪಾಪವನ್ನು ಕದಿಯಲು ಸಾಧ್ಯವಾಗಲಿಲ್ಲ. ಅದಕ್ಕಾಗಿ ಅಲ್ಲಿರುವ ಹಾಲು ಮುಂತಾದ ವಸ್ತುಗಳನ್ನು ಕದ್ದನು. ಅಭ್ಯಾಸದಿಂದ ಬಂದಿರುವ ವಿದ್ಯೆಯನ್ನು ಯಾರಿಂದ ಬಿಡಲು ಸಾಧ್ಯ? ಆದ್ದರಿಂದ ಅವನು ಕದಿಯುತ್ತಿದ್ದ ಪಾಪಗಳಿಗೆ ಬದಲಾಗಿ ಹಾಲು ಮುಂತಾದ ವಸ್ತುಗಳನ್ನು ಕದ್ದಿರುವುದರಲ್ಲಿ ತಪ್ಪೇನಿದೆ?

ಶ್ರೀಕೃಷ್ಣದೇವನು ಹಾಲನ್ನು ಕದ್ದು ಕುಡಿದನು. ಅದನ್ನು ನೋಡುತ್ತಿರುವ ಗೋಪಿಗೆ ಕೋಪವು ಬರಲಿಲ್ಲ. ಸಂತೋಷವೇ ಏರ್ಪಟ್ಟಿತು. ತಾನು ಕುಡಿದು ಉಳಿದ ಹಾಲನ್ನು ಬೆಕ್ಕಿಗೆ ಕುಡಿಸಿದನು. ಅದನ್ನು ನೋಡಿದಾಗ ಬೆಕ್ಕಿನ ಮೇಲೆ ಕೋಪವು ಬಂತು. ಇದು ಯುಕ್ತವೇ ಸರಿ. ಶ್ರೀಹರಿಯು ಕುಡಿದು ಉಳಿದ ಹಾಲು ಅವಳಿಗೆ ಯೋಗ್ಯವಾದುದು. ಅದನ್ನು ಕುಡಿಯುತ್ತಿರುವ ಬೆಕ್ಕಿನಲ್ಲಿ ಕೋಪವು ಬಂದದ್ದು ಯಕ್ತವಲ್ಲವೇ?

ಒಂದು ಮನೆಯಲ್ಲಿ ನೆಲುವಿನಲ್ಲಿ ತಿಳಿಯದ ಸ್ಥಳದಲ್ಲಿ ಗಂಟೆಯನ್ನು ಕಟ್ಟಿ ಅದರ ಮೇಲೆ ಹಾಲನ್ನು ಇಟ್ಟಿದ್ದಳು. ಶ್ರೀಕೃಷ್ಣದೇವನು ಅಲ್ಲಿಗೆಬಂದನು. ಹೇಗೋ ಗಂಟೆಯನ್ನು ಕಟ್ಟಿರುವುದನ್ನು ತಿಳಿದನು.ಗಂಟೆಯ ನಾಲಿಗೆಯನ್ನು ಒಂದು ಕೈಯಿಂದ ಹಿಡಿದನು. ಅದರಿಂದ ಶಬ್ದವು ಏರ್ಪಡಲಿಲ್ಲ. ಇನ್ನೊಂದು ಕೈಯಿಂದ ಮೊಸರಿನ ಗಡಿಗೆಯನ್ನು ಎತ್ತಿಕೊಂಡನು. ಮೂರನೆಯ ಕೈಯಿಂದ ತಾನು ಹಾಲನ್ನು ಕುಡಿದನು. ನಾಲ್ಕನೆಯ ಕೈಯಿಂದ ಗೊಲ್ಲಬಾಲಕರಿಗೆ ಹಾಲನ್ನು ಕೊಡುತ್ತಿದ್ದನು. ಮನೆಯೊಳಗೆ ಪ್ರವೇಶಿಸುತ್ತಿರುವಾಗ ಎರಡು ಕೈಗಳಿಂದ ಯುಕ್ತನಾದವನು ಕದಿಯುತ್ತಿರುವಾಗ ನಾಲ್ಕು ಕೈಗಳಿಂದ ಯುಕ್ತನಾಗಿರುವುದನ್ನು ಮನೆಯ ಯಜಮಾನಿಯು ಕಂಡಳು. ತುಂಬಾ ಆಶ್ಚರ್ಯದಿಂದ ಯುಕ್ತಳಾದಳು. ಕಳ್ಳನನ್ನು ಹಿಡಿಯಬೇಕೆಂದು ಬಂದವಳು ಸುಮ್ಮನಾದಳು.

ಕೈಯಲ್ಲಿ ಬೆಣ್ಣೆಯನ್ನು ಹಿಡಿದುಕೊಂಡಿರುವ ಶ್ರೀಕೃಷ್ಣದೇವನನ್ನು ಓಡಿಸಿಕೊಂಡು ಬಂದ ಗೋಪೀಕಾಸ್ತ್ರೀಯ ತಲೆಯಿಂದ ಪುಷ್ಪಗಳು ಒಂದೊಂದಾಗಿ ಶ್ರೀಕೃಷ್ಣದೇವನ ಹೆಜ್ಜೆಯ ಗುರುತುಗಳ ಮೇಲೆ ಬಿದ್ದವು. ಇದರಿಂದ ಅವನ ಪಾದಗಳನ್ನು ಅರ್ಚಿಸಿದಂತಾಯಿತು.

ಒಂದು ಮನೆಯಲ್ಲಿ ಬೆಣ್ಣೆಯ ಪಾತ್ರೆಯೊಳಗೆ ಶ್ರೀಕೃಷ್ಣದೇವನು ಕೈಯನ್ನಿಟ್ಟಿರುವದನ್ನು ಆ ಮನೆಯ

ಯಜಮಾನಿಯು ನೋಡಿ. ಓಡಿ ಬಂದಳು. " ಕೈಯನ್ನು ಬೆಣ್ಣೆಯ ಪಾತ್ರೆಯೊಳಗೆ ಯಾಕೆ ಇಟ್ಟಿರುವಿ?'' ಎಂದು ಪ್ರಶ್ನಿಸಿದಳು. " ಮೆತ್ತಗಿರುವ ಬೆಣ್ಣೆಯು ಕಲ್ಲಿಗಿಂತ ಗಟ್ಟಿಯಾಗಿರುವ ಮನಸ್ಸಿನಿಂದ ಯುಕ್ತಳಾಗಿರುವ ನಿನ್ನ ಮನೆಯಲ್ಲಿರಬಾರದು. ಅದಕ್ಕಾಗಿ ಮೆತ್ತಗಿರುವ ನನ್ನ ಹೃದಯದಲ್ಲಿಡಬೇಕೆಂದು ಆ ಬೆಣ್ಣೆಯನ್ನು ತೆಗೆಯುತ್ತಿರುವೆನು'' ಇದು ಶ್ರೀಕೃಷ್ಣದೇವನ ಉತ್ತರ.

" ಕಮಲದಂತೆ ಮೃದುವಾಗಿರುವ ನಿನ್ನ ಪಾದದಿಂದ ಬಂಡಿಯು ಪುಡಿಯಾಯಿತು. ಮೃದುವಾದ ಕಾಲೇ ಇಷ್ಟು ಗಟ್ಟಿಯಾಗಿರುವಾಗ ಅತಿಕಠಿನವಾದ ನಿನ್ನ ಎದೆಯು ಮೃದುವೆಂದು ಹೇಳುವುದು ಹೇಗೆ ಯುಕ್ತವಾಗುತ್ತದೆ.'' ಇದು ಪುನಃ ಗೋಪಿಯ ಮಾತು. " ನಾನು ಚಿಕ್ಕಮಗುವಾಗಿರುವಾಗ ನೀನು ಮೇಲ್ಮುಖವಾಗಿ ಮಲಗಿಕೊಂಡು ನನ್ನನ್ನು ಎತ್ತಿ ಎದೆಯ ಮೇಲೆ ನಿಲ್ಲಿಸಿ ಆಡಿಸಿದಿ. ಆಗ ನಿನ್ನ ಎದೆಯು ನನ್ನ ಕಾಲಿಗೆ ತಗಲಿತು. ಅತಿ ಕಠಿನವಾದ ನಿನ್ನ ಎದೆಯ ಸ್ಪರ್ಶದಿಂದ ಮೃದುವಾದ ನನ್ನ ಪಾದವು ಕಲ್ಲಿನಂತಾಯಿತು. ನನ್ನ ಎದೆಗೆ ನಿನ್ನ ಎದೆಯ ಸ್ಪರ್ಶವಾಗಿಲ್ಲ. ಆದ್ದರಿಂದ ನನ್ನ ಎದೆಯಲ್ಲಿ ಬೆಣ್ಣೆಯನ್ನು ಇಡುವುದರಲ್ಲಿ ತಪ್ಪೇನಿದೆ? ಇದು ಶ್ರೀಕೃಷ್ಣದೇವನ ಪ್ರತ್ಯುತ್ತರ.

" ನಿನ್ನನ್ನು ಕಟ್ಟಿ ಹಾಕುವೆನು.'' ಇದು ಗೋಪಿಯ ಮಾತು. " ಅದರಿಂದ ಪ್ರಯೋಜನವೇನು?'' ಇದು ಶ್ರೀಕೃಷ್ಣದೇವನ ಪ್ರಶ್ನೆ. " ಕಪಟಿಯಾದ ನಿನ್ನನ್ನು ಕಟ್ಟಿದ್ದರಿಂದ ನನ್ನ ಮನೆಯ ಹಾಲು ಮುಂತಾದ ವಸ್ತುಗಳ ರಕ್ಷಣೆಯಾಗುತ್ತದೆ.'' ಇದು ಗೋಪಿಯ ಉತ್ತರ. " ಹುಚ್ಚಿಯೇ! ಪ್ರೇಮವಿಲ್ಲದ ನೀನು ನನ್ನನ್ನು ಬಿಡಬಹುದು. ಸ್ನೇಹಯುಕ್ತವಾದ ಬೆಣ್ಣೆಯು ನನ್ನನ್ನು ಬಿಡಲಾರದು. ಅದನ್ನು ಹೇಗೋ ನನ್ನ ಹೃದಯದಲ್ಲಿ ಸೇರಿಸಿ ಬಿಡುವೆನು.'' ಹೀಗೆ ಮಾತುಡುತ್ತಾ ಗೋಪಿಕಾಸ್ತ್ರೀಯನ್ನು ವಶಪಡಿಸಿಕೊಂಡ ಶ್ರೀಕೃಷ್ಣದೇವನು ನನಗೆ ಬುದ್ಧಿಯನ್ನು ಕೊಡಲಿ.

ಶ್ರೀಕೃಷ್ಣದೇವನ ಕಳ್ಳತನವು ಹೆಚ್ಚಾಗುತ್ತಾ ಬಂತು. ಆಗ ಎಲ್ಲಾ ಗೊಲ್ಲಸ್ತ್ರೀಯರೂ ಒಟ್ಟುಗೂಡಿದರು. ನಗುತ್ತಾ ಯಶೋದೆಯ ಮನೆಗೆ ಬಂದರು. ದೂರನ್ನು ಪ್ರತ್ಯೇಕವಾಗಿ ಹೇಳಲಿಕ್ಕೆ ಆರಂಭಿಸಿದರು.

" ಯಶೋದೆಯೇ! ನಿನ್ನ ಮಗನು ನನ್ನ ಮನೆಗೆ ಬಂದನು. ಹಾಲನ್ನೆಲ್ಲವನ್ನೂ ಕುಡಿದನು. ಹಾಲಿನ ಗಡಿಗೆಯನ್ನು ಒಡೆದನು. ಆಗ ನನಗೆ ಕೋಪವೇ ಬರಲಿಲ್ಲ. ಅವನ ಹಲ್ಲುಗಳಿಂದಲೂ ಕಡೆಗಣ್ಣುಗಳಿಂದಲೂ ಹೊರಟ ಕಾಂತಿಯನ್ನು ನೋಡುತ್ತಾ ಅದನ್ನು ಯೋಚಿಸುತ್ತಾ ನಿಂತೆನು.'' ಇದು ಒಬ್ಬಳ ದೂರು.

"ಶ್ರೀಕೃಷ್ಣದೇವನು ನನ್ನ ಮನೆಗೆ ಬಂದನು. ಹಾಲು ಮುಂತಾದ ವಸ್ತುಗಳನ್ನು ಎತ್ತರವಾದ ನೆಲುವಿನಲ್ಲಿಟ್ಟಿದ್ದೆನು. ಅವುಗಳನ್ನು ತೆಗೆಯಲು ಇವನಿಂದ ಸಾಧ್ಯವಾಗಲಿಲ್ಲ. ಆಗ ಅವನನ್ನು ಬೆದರಿಸಬೇಕೆಂದು ನಾನು ಕೆಲವು ಸಖಿಯರೊಡನೆ ಬಂದೆನು. ಅವನು ಚಮತ್ಕಾರ ಮಾತುಗಳಿಂದ ನಮ್ಮನ್ನು ವಶಪಡಿಸಿ ಆ ನೆಲುವಿನ ಕೆಳಗೆ ನಿಲ್ಲುವಂತೆ ಮಾಡಿದನು. ಮರುಕ್ಷಣದಲ್ಲಿಯೇ ನಮ್ಮ ಹೆಗಲಿನ ಮೇಲೆ ಏರಿದನು. ಹಾಲು ಮುಂತಾದ ವಸ್ತುಗಳನ್ನು ತೆಗೆದು ತಿಂದನು.'' ಇದು ಎರಡನೆಯವಳ ಮಾತು.

"ಕೃಷ್ಣ! ನೀನು ಹೀಗೆ ಕಳ್ಳತನವನ್ನು ಮಾಡಿದರೆ ನಂದನ ಮಗನಲ್ಲವೆಂದು ಹೇಳಬೇಕಾಗುತ್ತದೆ. ಯೋಗ್ಯನಾದ ನಂದನಿಗೆ ಮಗನಾಗುವನೇ?'' ಎಂದೆನು. ಹೀಗೆ ಹೇಳಿದರೆ ಯೋಗ್ಯಬಾಲಕರು ತಿದ್ದುವರೆಂದು ಭಾವಿಸಿದೆ. ಆದರೆ ಇವನು ಇನ್ನೂ ಅಧಿಕವಾಗಿ ತಂಟೆಯನ್ನು ಮಾಡುತ್ತಿರುವನು. ಇದರಿಂದ ನಂದನ ಮಗನಲ್ಲವೆಂದು ಹೇಳಿದ್ದನ್ನು ಅನುಮೋದಿಸಿದಂತಾಯಿತು.'' ಇದು ಮೂರನೆಯವಳ ದೂರು.

"ಮಗೂ, ಈ ಹಾಲನ್ನು ದೇವರ ನೈವೇದ್ಯಕ್ಕಾಗಿ ಇಟ್ಟಿರುತ್ತೇನೆ. ಮುಟ್ಟಬೇಡ," ಎಂದೆನು. ದೈವಭಕ್ತಿಯುಳ್ಳ ನಂದನ ಮಗನು ಹೀಗೆ ಹೇಳಿದರಾದರೂ ಕುಡಿಯಲಾರನೆಂದು ತಿಳಿದು ಹೀಗೆ ಹೇಳಿದೆನು. ಹಾಗಾದರೆ ನಾನೇ ದೇವರು." ಎಂದು ಹೇಳಿ ಕುಡಿದುಬಿಟ್ಟನು. ಯಶೋದೆಯೇ, ನಿನ್ನ ಮಗನಿಗೆ ದೇವರಲ್ಲಿಯೂ ಭಕ್ತಿಯಿಲ್ಲವೆಂದು ತೋರುತ್ತದೆ. ಇದು ನಾಲ್ಕನೆಯವಳ ದೂರು.

"ಕಟ್ಟಿರುವ ಕರುಗಳನ್ನು ಬಿಚ್ಚಿ ಹೋಗಬೇಡ" ಎಂದೆನು. ನಗುತ್ತಾ ಬಿಚ್ಚಿ ಬಿಟ್ಟು ಹೋದನು. "ಕಟ್ಟಿದವರನ್ನು ಬಿಚ್ಚುವುದು ನನ್ನ ಸ್ವಭಾವ. ಸ್ವಭಾವವನ್ನು ಬದಲಾಯಿಸುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ. ಇದು ನಗುವುದರ ಅರ್ಥ." ಇದು ಐದನೆಯವಳ ದೂರು.

ಶ್ರೀಕೃಷ್ಣದೇವನು ನನ್ನ ಮನೆಗೆ ಬಂದು. ಒರಳನ್ನು ಎತ್ತಲಿಕ್ಕೆ ಹೋದನು. "ಏಕೆ?" ಎಂದು ಪ್ರಶ್ನಿಸಿದೆನು. " ಹಾಲಿನ ಪಾತ್ರೆಯ ಕೆಳಗೆ ಈ ಒರಳನ್ನು ಇಡಬೇಕು." ಎಂದನು. " ಅದೂ ಏಕೆ?" ಎಂದೆನು. " ಈ ಒರಳಿನ ಮಧ್ಯಭಾಗವು ನಿನ್ನ ಹೊಟ್ಟೆಯಂತೆ ಅತ್ಯಂತ ಕೃಶವಾಗಿದೆ. ಈ ಒರಳಿನ ಮೇಲ್ಭಾಗವೂ ಕೆಳಭಾಗವೂ ತುಂಬಾ ದಪ್ಪವಾಗಿದೆ. ಈ ಒರಳಿನ ಮೇಲೆ ಆ ಗಡಿಗೆಯನ್ನು ಇಟ್ಟರೆ ನಿನ್ನ ಮುಖದ ಹಾಗೆ ಕಾಣಿಸಬಹುದೇ? ಎಂದು ಪರೀಕ್ಷಿಸಬೇಕು. ಅದಕ್ಕಾಗಿ ತೆಗೆದುಕೊಂಡು ಹೋಗುತ್ತಿರುವೆನು" ಎಂದನು. ತಾನು ಮಾಡುತ್ತಿರುವ ಪೋಕಿರಿತನವನ್ನು ಹೀಗೆ ಸಾಮರ್ಥ್ಯದಿಂದ ನಿನ್ನ ಮಗನು ಮುಚ್ಚಿಕೊಳ್ಳುತ್ತಿರುವನು. ಇದು ಆರನೆಯವಳ ದೂರು.

ಹಾಲಿನ ಪಾತ್ರೆಗಳನ್ನು ಕೊಠಡಿಯೊಳಗೆ ಇಟ್ಟು ಬೀಗ ಹಾಕಿದಾಗ ಕಿಟಕಿಯೊಳಗೆ ಕೈಗಳನ್ನು ಹಾಕಿ ಕೈಗಳಿಂದಲೇ ಅವುಗಳನ್ನು ನೋಡಿರುವನು. ಕಾಲುಗಳನ್ನೂ ಹಾಕಿ ಕಾಲುಗಳಿಂದಲೇ ಅವುಗಳನ್ನು ನೋಡಿರುವನು. ಅವನ ಹಿಂದೆ ನಿಂತುಕೊಂಡು ಅವನನ್ನು ಹಿಡಿಯುವುದಕ್ಕಾಗಿ ಬರುತ್ತಿರುವ ನಮ್ಮನ್ನು ಬೆನ್ನಿನಿಂದಲೇ ನೋಡಿರುವುದೂ ಉಂಟು. ಇದನ್ನೆಲ್ಲವನ್ನೂ ನೋಡುವಾಗ ಶ್ರೀಹರಿಯಂತೆ ಇವನು "ವಿಶ್ವತಶ್ಚಕ್ಷುಃ" ಅಂದರೆ ಎಲ್ಲಾ ಅವಯವಗಳಲ್ಲಿಯೂ ಕಣ್ಣುಗಳಿಂದ ಯುಕ್ತನಾದಂತೆ ತೋರುತ್ತದೆ. ಇದು ಏಳನೆಯವಳ ಮಾತು.

ಇವನನ್ನು ಒರಳಿನಲ್ಲಿ ಕಟ್ಟಿದರೆ ಒರಳನ್ನೇ ಎಳೆದುಕೊಂಡು ಹೋಗಲು ಇವನು ಶಕ್ತನಾಗಿರುವನು. ಮನೆಯ ಕಂಬದಲ್ಲಿ ಕಟ್ಟಿದರೆ ಕಂಬಗಳನ್ನು ಕಿತ್ತಿ ಮನೆಗಳನ್ನು ಉರುಳಿಸಲೂ ಶಕ್ತನಾಗಿರುವನು. ಸಕಲಲೋಕಗಳನ್ನೂ ಇವನ ಹೊಟ್ಟೆಯೊಳಗೆ ನೀನು ನೋಡಿರುವಿ. ಇಷ್ಟುದೊಡ್ಡ ಹೊಟ್ಟೆಯಿಂದ ಯುಕ್ತನಾದ ಇವನನ್ನು ಕಟ್ಟಲಿಕ್ಕೆ ಬೇಕಾದ ಹಗ್ಗವು ಎಲ್ಲಿದೆ? ಇವನ ಹೊಟ್ಟೆಯೊಳಗೆ ನಾವೆಲ್ಲರೂ ಇದ್ದ ವಿಷಯವನ್ನೂ ನೀನು ನೋಡಿರುವಿ. ಆದ್ದರಿಂದ ಮಹಾಪ್ರಯಾಸದಿಂದ ಇವನ ಹೊಟ್ಟೆಯನ್ನು ಕಟ್ಟಿದರೆ ಇವನ ಹೊಟ್ಟೆಯೊಳಗೆ ವಾಸಿಸುತ್ತಿರುವ ನಮ್ಮನ್ನೇ ಕಟ್ಟಿದಂತಾಗಲಿಲ್ಲವೆ? ಇದು ಎಂಟನೆಯವಳ ಮಾತು.

ಯಶೋದೆಯೇ! ಒಂದೊಂದು ಮನೆಗಳಲ್ಲಿಯೂ ಕುದಿಯುತ್ತಿರುವ ಹಾಲುಗಳನ್ನು ಇವನು ಕುಡಿಯುತ್ತಿರುವನು. ಆದರೂ ಇವನಿಗೆ ನಾಲಿಗೆಯು ಸುಟ್ಟದ್ದೇ ಇಲ್ಲ. ಇವನ ಬಾಯಿಯಲ್ಲಿ ಜಲರಾಶಿಗಳಿಗೆ ಅಭಿಮಾನಿಯಾದ ವರುಣನೇ ವಾಸಿಸುತ್ತಿರುವನೇ? ಇದು ಒಂಭತ್ತನೆಯವಳ ಮಾತು.

ಯಶೋದೆಯೇ! ಬಹಳ ಎತ್ತರದಲ್ಲಿರುವ ಹಾಲಿನ ಪಾತ್ರೆಗಳನ್ನು ತೆಗೆಯುವುದಕ್ಕಾಗಿ ಒರಳು ಮುಂತಾದ

ವಸ್ತುಗಳನ್ನು ಹುಡುಕುತ್ತಿರುವನು. ಅದು ಯಾವುದೂ ಸಿಗದಿದ್ದರೆ ತಾನೇ ಅಷ್ಟು ಎತ್ತರವಾದ ರೂಪವನ್ನು ಧರಿಸಿ, ತೆಗೆದು, ಪುನಃ ಚಿಕ್ಕ ರೂಪವನ್ನು ಧರಿಸಿದ್ದನ್ನು ನಾನು ಕಂಡಿರುವೆನು. ಇವನು ಅಣಿಮಾದ್ಯಷ್ಟೈಶ್ವರ್ಯಗಳಿಂದ ಯುಕ್ತನಾದ ಯೋಗಿಯಾಗಿರಬಹುದೇ? ಇದು ಹತ್ತನೆಯವಳ ಮಾತು.

ಬಾಯಿಗೆ ಬಂದಂತೆ ಬೈದು ತೀರಿಸಬೇಕು ಎಂದು ಬರುತ್ತೇವೆ. ಆದರೆ ನಮ್ಮ ಬಾಯಿಯಿಂದ ನಿಷ್ಠುರವಾದ ಒಂದು ಮಾತೂ ಹೊರಡುವುದಿಲ್ಲ. ಕೈಗೆ ಬಂದಂತೆ ಹೊಡೆಯಬೇಕೆಂದು ಬರುತ್ತೇವೋ. ನಮ್ಮ ಕೈಗಳು ಹೊಡೆಯುವುದಕ್ಕೆ ಬದಲಾಗಿ ಲಾಲಿಸುತ್ತವೆ. ಅವನ ಚಂಚಲವಾದ ಕಣ್ಣುಗಳನ್ನೂ ಮುಖವನ್ನೂ ನೋಡಿದ ಕೂಡಲೇ ನಾವು ಪರವಶವಾಗಿಬಿಡುವೆವು. ನಿಜವಾಗಿಯೂ ನಿನ್ನ ಮಗನು ಜಗತ್ಪ್ರೇರಕನೆಂದು ತೋರುತ್ತದೆ. ಇದು ಹನ್ನೊಂದನೆಯವಳ ಮಾತು.

ಕತ್ತಲೆಯಲ್ಲಿ ಇಟ್ಟಿರುವ ಮೊಸರಿನ ಪಾತ್ರೆಗಳನ್ನೂ ಕೂಡ ದೀಪವಿಲ್ಲದೆ ತನ್ನ ಕಣ್ಣುಗಳಿಂದ ಹೊರಟಿರುವ ತೇಜಸ್ಸಿನಿಂದಲೇ ಇವನು ತಿಳಿಯುತ್ತಿರುವನು. ಇವನ ಕಣ್ಣುಗಳಲ್ಲಿ ಸೂರ್ಯ ಮತ್ತು ಚಂದ್ರರು ವಾಸಿಸುತ್ತಿರುವರೇ? ಇದು ಹನ್ನೆರಡನೆಯವಳ ಮಾತು.

ಮಂತ್ರಮೂರ್ತಿಯಾದ ಇವನನ್ನು ಕೊಠಡಿಯಲ್ಲಿಟ್ಟು ಬೀಗ ಹಾಕಿದರೆ ಮಂತ್ರಬಲದಿಂದ ಬಾಗಿಲನ್ನು ತೆರೆಯಲು ಶಕ್ತನಾಗಿರುವನು. ಕಂಬ ಮುಂತಾದವುಗಳಲ್ಲಿ ಕಟ್ಟಿದರೆ ಆ ಬಂಧನವನ್ನೂ ವ್ಯರ್ಥವಾಗುವಂತೆ ಮಾಡಲು ಶಕ್ತನು. ತನ್ನ ಭಕ್ತರ ಬಂಧನವೆಲ್ಲವನ್ನೂ ಬಿಡಿಸುತ್ತಿರುವ ಇವನಿಗೆ ಬಂಧನ ವುಂಟೇ? ಕಠೋರವಾದ ಮಾತುಗಳಿಂದ ಇವನನ್ನು ಬೈಯಬೇಕೆಂದು ಬಂದಾಗ ಸಕಲ ವಸ್ತುಗಳನ್ನೂ ಹೊಟ್ಟೆಯೊಳಗೆ ಇಟ್ಟುಕೊಂಡಿರುವ ಈ ಶ್ರೀಕೃಷ್ಣನು ತನ್ನ ಬಾಯಿಯಲ್ಲಿ ಆಶ್ಚರ್ಯಕರವಾದ ವಸ್ತುಗಳನ್ನು ತೋರಿಸಿ ನಮಗೆ ಆಶ್ಚರ್ಯ ವುಂಟಾಗುವಂತೆ ಮಾಡಿ ನಮ್ಮ ಬಾಯಿಯಿಂದ ಅವನನ್ನು ಹೊಗಳುವಂತೆ ಮಾಡುವನು. ಇವನನ್ನು ಮರದಲ್ಲಿ ಕಟ್ಟಿದರೆ ಮರಗಳನ್ನೇ ಮುರಿಯಲು ಶಕ್ತನಾಗಿರುವನು. ಇದು ಹದಿಮೂರನೆಯವಳ ಮಾತು.

ಶ್ರೀಕೃಷ್ಣದೇವನನ್ನು ದೂರುವುದಕ್ಕಾಗಿ ಬಂದಿರುವ ಎಲ್ಲಾ ಗೋಪಿಕಾಸ್ತ್ರೀಯರೂ ಒಂದೊಂದು ವಿಧದಿಂದ ಶ್ರೀಕೃಷ್ಣದೇವನನ್ನು ಹೊಗಳಿದರು. ತಮಗೆ ಬರಬೇಕಾದ ಮೋಕ್ಷಕ್ಕೆ ಹಾದಿಯನ್ನು ಮಾಡುಕೊಂಡರು ಈ ಮಾತುಗಳನ್ನು ಕೇಳಿದ ಯಶೋದೆಯು ಮುಗುಳು ನಗೆಯಿಂದ ಯುಕ್ತಳಾದಳು. ಶ್ರೀಕೃಷ್ಣದೇವನ ಸಾಮರ್ಥ್ಯವನ್ನೂ ಮಹಿಮೆಯನ್ನೂ ತಿಳಿದು ಬೆರಗಾದಳು. ಅವಳೂ ಶ್ರೀಕೃಷ್ಣದೇವನನ್ನು ಖಂಡಿಸಲಿಲ್ಲ.

## ನಕುಲ ಸಹದೇವರ ಜನನ

ಶ್ರೀಕೃಷ್ಣದೇವನು ಅವತರಿಸಿದ ವರ್ಷದಲ್ಲಿ ಭಾದ್ರಪದಮಾಸವು ಅಧಿಕಮಾಸವಾಗಿ ಬಂದಿತ್ತು. ಶ್ರಾವಣ ಬಹುಳ ಚತುರ್ದಶೀದಿನದಲ್ಲಿ ಸಿಂಹಸಂಕ್ರಮಣವು ಏರ್ಪಟ್ಟು ಶುದ್ಧಭಾದ್ರಪದ ಪ್ರತಿಪತ್ತಿಥಿಯಲ್ಲಿ ಕನ್ಯಾಸಂಕ್ರಮಣವು ಏರ್ಪಟ್ಟಿತ್ತು. ಅಧಿಕ ಭಾದ್ರಪದಮಾಸದ ಆರಂಭದಿಂದ ಕೊನೆಯ ವರೆಗೆ ಸೂರ್ಯನು ಸಿಂಹರಾಶಿಯಲ್ಲಿದ್ದನು. ಆಗ ಗುರುವೂ ಸಿಂಹರಾಶಿಯಲ್ಲಿದ್ದನು. ಆ ಅಧಿಕ ಭಾದ್ರಪದಮಾಸವು ಚಾಂದ್ರಮಾಸದಿಂದ ಭಾದ್ರಪದಮಾಸವೆಂದೂ ಸೌರಮಾನದಿಂದ ಶ್ರಾವಣವೆಂದೂ ಹೇಳಲ್ಪಟ್ಟಿತು. ಆ ಅಧಿಕಭಾದ್ರಪದಮಾಸದಲ್ಲಿ

ಕೃಷ್ಣಪಕ್ಷದ ಅಷ್ಟಮೀತಿಥಿಯಲ್ಲಿ ಶ್ರೀಕೃಷ್ಣದೇವನು ಅವತರಿಸಿದನು. ಅದೇ ವರ್ಷದಲ್ಲಿ ಫಾಲ್ಗುನಮಾಸದಲ್ಲಿ ಉತ್ತರ ಫಲ್ಗುನೀನಕ್ಷತ್ರದಲ್ಲಿ ಅರ್ಜುನನು ಹುಟ್ಟಿದನು. ಆ ಫಾಲ್ಗುನಮಾಸದಲ್ಲಿ ಆ ವರ್ಷವು ಮುಗಿಯಿತು. ಆ ವರ್ಷವು ಮುಗಿದ ಕೂಡಲೇ ಪಾಂಡುರಾಜನ ಎರಡನೆಯ ಪತ್ನಿಯಾದ ಮಾದ್ರೀದೇವಿಯು ತನ್ನ ಪತಿಯಾದ ಪಾಂಡುರಾಜನನ್ನು ಬೇಡಿದಳು.

" ಪತಿವರ್ಯ, ನಿಮ್ಮ ಪ್ರಥಮ ಪತ್ನಿಯಾದ ಕುಂತೀದೇವಿಯಲ್ಲಿ ನಿಮಗೆ ಮೂರು ಮಕ್ಕಳು ಹುಟ್ಟಿದರು. ನಿಮ್ಮ ಎರಡನೆಯ ಪತ್ನಿಯಾದ ನಾನು ಮಾತ್ರ ಪುತ್ರರಹಿತಳಾಗಿರುವೆನು. ನಾನೂ ಸಹ ನಿಮ್ಮ ಅನುಗ್ರಹದಿಂದ ಪುತ್ರವತಿಯಾಗಬೇಕು. ಆದ್ದರಿಂದ ನೀವು ಕುಂತೀದೇವಿಯು ತಿಳಿದಿರುವ ಮಂತ್ರವನ್ನು ನನಗೂ ಉಪದೇಶಿಸುವಂತೆ 'ಆಜ್ಞಾಪಿಸಬೇಕು." ಎಂದು ಪ್ರಾರ್ಥಿಸಿದಳು.

ಇದನ್ನು ಕೇಳಿದ ಪಾಂಡುರಾಜನು ಕುಂತಿಯನ್ನು ಕರೆದು ಮಕ್ಕಳನ್ನು ಕೊಡುವ ಶ್ರೇಷ್ಠವಾದ ಮಂತ್ರವನ್ನು ಮಾದ್ರಿಗೆ ಉಪದೇಶಿಸುವಂತೆ ಆಜ್ಞಾಪಿಸಿದನು. ಕುಂತೀದೇವಿಯು " ನೀವು ಆಜ್ಞಾಪಿಸಿದ್ದರಿಂದ ಆ ಮಂತ್ರವನ್ನು ಮಾದ್ರೀದೇವಿಗೆ ಉಪದೇಶಿಸುವೆನು. ಆದರೆ ಆ ಮಂತ್ರವನ್ನು ಒಮ್ಮೆಮಾತ್ರ ಜಪಿಸಬೇಕು. ಆಗ ಸಂತತಿ ಯಾಗತ್ತದೆ. ಎರಡನೆಯ ಸಲ ಜಪಿಸಿದರೆ ಫಲಿಸಲಾರದು ಎಂದು ಹೇಳಿದಳು. ಗಂಡನ ಮಾತಿನಂತೆ ಮಾದ್ರೀದೇವಿಗೆ ಮಂತ್ರವನ್ನು ಉಪದೇಶಿಸಿದಳು. ಎರಡನೆಯ ಸಲ ಜಪಿಸಕೂಡದೆಂದೂ ಹಾಗೆ ಜಪಿಸಿದರೆ ಫಲಿಸಲಾರದೆಂದೂ ಹೇಳಿದಳು.

ಮಾದ್ರೀದೇವಿಯು ಮಂತ್ರವನ್ನು ಪಡೆದಳು. " ನನಗೆ ಎರಡು ಮಕ್ಕಳು ಹುಟ್ಟಬೇಕಾಗಿದೆ. ಈ ಮಂತ್ರವನ್ನು ಎರಡನೆಯ ಸಲ ಜಪಿಸಕೂಡದು ಎಂದು ಕುಂತೀದೇವಿಯು ಹೇಳಿರುವಳು. ಒಂದೇ ಸಲ ಮಂತ್ರವನ್ನು ಜಪಿಸಬೇಕು. ಎರಡು ಮಕ್ಕಳು ಹುಟ್ಟಬೇಕು. ಇದಕ್ಕೆ ಉಪಾಯ ಯಾವುದು?" ಎಂದು ದೀರ್ಘವಾಗಿ ಯೋಚಿಸಿದಳು.

"ನಾಸತ್ಯ ದಸ್ರ ಎಂದು ಎರಡು ಅಶ್ವಿನೀದೇವತೆಗಳಿರುವರು. (೧) ಅವರಿಬ್ಬರಿಗೂ ನಾಸತ್ಯ ಅಥವಾ ದಸ್ರ, ಅಥವಾ ಅಶ್ವಿನೀದೇವತೆಗಳು ಎಂಬ ಒಂದೇ ಹೆಸರು. (೨) ನಾಸತ್ಯನನ್ನು ಬಿಟ್ಟು ದಸ್ರನೂ ದಸ್ರನನ್ನು ಬಿಟ್ಟು ನಾಸತ್ಯನೂ ಇರುವುದೇ ಇಲ್ಲ. ಆದ್ದರಿಂದ ಒಬ್ಬನನ್ನು ಬಿಟ್ಟು ಇನ್ನೊಬ್ಬನು ಬರುವುದೇ ಇಲ್ಲ. (೩) ಉಷಾ ಎಂಬ ಷಕಾರಾಂತಹೆಸರಿನಿಂದ ಹೇಳಲ್ಪಡುವ ದೇವಿಯು ಒಬ್ಬಳೇ ಇಬ್ಬರಿಗೂ ಪತ್ನಿಯಾಗಿರುವಳು. ಈ ಮೂರು ಕಾರಣಗಳಿಂದ ಒಬ್ಬನನ್ನು ಕರೆದರೆ ಇಬ್ಬರೂ ಬರುವರು. ಇಬ್ಬರಿಂದ ಎರಡು ಮಕ್ಕಳು ಹುಟ್ಟುವರು. ಇದರಿಂದ ಕುಂತಿಯ ಮಾತಿನಂತೆ ಮಂತ್ರವನ್ನು ಒಂದೇ ಸಲ ಜಪಿಸಿದಂತೆಯೂ ಆಯಿತು. ಎರಡು ಮಕ್ಕಳು ಹುಟ್ಟುವಂತೆಯೂ ಆಯಿತು." ಎಂದು ತೀರ್ಮಾನಿಸಿದನು.

ಅದರಂತೆಯೇ ಮಾಡಿದಳು. ಬ್ರಹ್ಮದೇವರು ದೇವತೆಗಳನ್ನು ಹುಟ್ಟಿಸುವಾಗ "ನಾಸತ್ಯ" ಎಂಬ ದೇವತೆಯನ್ನು ಮೊದಲು ಸೃಷ್ಟಿಸಿದ್ದರು. ಅನಂತರದಲ್ಲಿ "ದಸ್ರ" ಎಂಬ ದೇವತೆಯನ್ನು ಸೃಷ್ಟಿಸಿದ್ದರು. ಆ ಸೃಷ್ಟಿಕ್ರಮದಂತೆ ಮೊದಲನೆಯವನಾದ ನಾಸತ್ಯನು "ನಕುಲ" ಎಂಬ ಹೆಸರಿನಿಂದಲೂ ದಸ್ರನು "ಸಹದೇವ" ಎಂಬ ಹೆಸರಿನಿಂದಲೂ ಹುಟ್ಟಿದನು.

ಶ್ರೀವಾಯುದೇವರು ಭೀಮಸೇನ ಎಂಬ ರೂಪದಿಂದ ಸಾಕ್ಷಾತ್ತಾಗಿ ಅವತರಿಸಿದರು. ಆದ್ದರಿಂದ ಭೀಮಸೇನ ಎಂಬ ಸಾಕ್ಷಾದವತಾರಕ್ಕೂ ಮೂಲರೂಪಿಯಾದ ವಾಯುದೇವರಿಗೂ ಬಲ ಮುಂತಾದ ಎಲ್ಲಾ ಗುಣಗಳಲ್ಲಿಯೂ ವ್ಯತ್ಯಾಸವಿಲ್ಲ. ಅದೇ ವಾಯುದೇವರು ನಾಲ್ಕು ರೂಪಗಳನ್ನು ಧರಿಸಿದರು. ಧರ್ಮರಾಜನಲ್ಲಿಯೂ ಅರ್ಜುನನಲ್ಲಿಯೂ ನಕುಲನಲ್ಲಿಯೂ ಸಹದೇವನಲ್ಲಿಯೂ ಪ್ರವೇಶಿಸಿದರು. ಆ ನಾಲ್ಕು ಜನರ ಮಧ್ಯದಲ್ಲಿ ಎಲ್ಲರಲ್ಲಿರುವ ಸನ್ನಿಧಾನಕ್ಕಿಂತಲೂ ಅಧಿಕವಾದ ಸನ್ನಿಧಾನದಿಂದ ಅರ್ಜುನನಲ್ಲಿ ಪ್ರವೇಶಿಸಿದರು. ಆದ್ದರಿಂದ ಅರ್ಜುನನು ಈ ನಾಲ್ಕು ಜನರ ಮಧ್ಯದಲ್ಲಿಯೂ ಶ್ರೇಷ್ಠನೆನಿಸಿದನು.

ಧರ್ಮರಾಜನಲ್ಲಿ ಸೌಮ್ಯರೂಪದಿಂದ ಪ್ರವೇಶಿಸಿದರು. ಆದ್ದರಿಂದ ಧರ್ಮರಾಜನು ಪರಮ ಸೌಮ್ಯಸ್ವಭಾವವುಳ್ಳವನೆನಿಸಿದನು. ಅರ್ಜುನನಲ್ಲಿ ವೀರರೂಪದಿಂದ ಪ್ರವೇಶಿಸಿದರು. ಆದ್ದರಿಂದ ಅರ್ಜುನನು ಮಹಾವೀರನೆನಿಸಿದನು.

ಶ್ರೀಭೀಮಸೇನದೇವರು ಪರಮ ಸುಂದರವಾದ ರೂಪದಿಂದ ಯುಕ್ತರಾಗಿರುವರು. ಅವರ ಅನಂತರದಲ್ಲಿ ಅರ್ಜುನನು ಪರಮ ಸುಂದರನಾಗಿರುವನು. ಅವರಿಬ್ಬರಷ್ಟು ಸುಂದರರಾಗಿರುವವರು ಪಾಂಡವರ ಮಧ್ಯದಲ್ಲಿ ಯಾರೂ ಇಲ್ಲ. ಆದರೆ ಅವರಿಬ್ಬರ ದೇಹವು ವಜ್ರದಂತೆ ಅತಿ ಕಠಿನವಾದುದು. ಕಠಿನ ದೇಹವುಳ್ಳವರಾದುದರಿಂದ ಅವರಿಬ್ಬರನ್ನೂ ಅಜ್ಞ ಜನರು ಸುಂದರರೆಂದು ಹೇಳುತ್ತಿಲ್ಲ. ಅದಕ್ಕಾಗಿ ಪಾಂಡುರಾಜನು ತನ್ನ ನಾಲ್ಕನೆಯ ಮಗನು ಪರಮಸುಂದರನಾಗಿಯೂ ಕೇವಲ ಶೃಂಗಾರರಸರೂಪಿಯಾಗಿಯೂ ಹುಟ್ಟಬೇಕೆಂದು ಆಶಿಸಿದನು. ಅದಕ್ಕಾಗಿ ನಕುಲನಲ್ಲಿ ಪರಮಸುಂದರರೂಪದಿಂದಲೂ ಕೇವಲ ಶೃಂಗಾರರಸರೂಪದಿಂದಲೂ ಯುಕ್ತರಾಗಿ ವಾಯುದೇವರು ಪ್ರವೇಶಿಸಿದರು. ಆದ್ದರಿಂದ ನಕುಲನು ಲೋಕದೃಷ್ಟಿಯಿಂದ ಪರಮಸುಂದರನೂ ಕೇವಲ ಶೃಂಗಾರರಸರೂಪಿಯಾಗಿಯೂ ಹುಟ್ಟಿದನು.

ಶ್ರೀಹರಿಯು ಹಿರಣ್ಯಕಶಿಪುವಿನ ಹೊಟ್ಟೆಯನ್ನು ಸೀಳಿದಾಗ ತೋರಿಸಿದ ಶರೀರಕಾಠಿನ್ಯವನ್ನು ರಮಾದೇವಿಯರನ್ನು ಆಲಿಂಗಿಸುವಾಗ ತೋರಿಸುವನೇ? ಜರಾಸಂಧನ ಸಂಧಿಗಳನ್ನು ಮುರಿಯುವಾಗ ತೋರಿಸಿದ ಶರೀರಕಾಠಿನ್ಯವನ್ನು ಶ್ರೀಭೀಮಸೇನದೇವರು ದ್ರೌಪದೀದೇವಿಯನ್ನು ಆಲಿಂಗಸುವಾಗ ತೋರಿಸುವರೇ? ಆದರಂತೆ ಶ್ರೀಭೀಮಸೇನರೂಪದಲ್ಲಿ ತೋರಿಸಿರುವ ಕಾಠಿನ್ಯವನ್ನು ನಕುಲನಲ್ಲಿರುವ ರೂಪದಲ್ಲಿ ತೋರಿಸದಿರುವುದು ಯುಕ್ತವೇ ಸರಿ.

ಸಹದೇವನಲ್ಲಿ ನಕುಲನಲ್ಲಿರುವ ಸೌಂದರ್ಯ ಶೃಂಗಾರ ಮುಂತಾದ ಗುಣಗಳಿಗಿಂತ ಕಡಿಮೆಯಾಗಿರುವ ಸೌಂದರ್ಯ ಶೃಂಗಾರರೂಪಗಳಿಂದ ಯುಕ್ತರಾಗಿ ವಾಯುದೇವರು ಪ್ರವೇಶಿಸಿದರು. ನೀತಿರೂಪದಿಂದಲೂ ಪ್ರವೇಶಿಸಿದರು. ಆದ್ದರಿಂದ ಸಹದೇವನು ನಕುಲನಿಗಿಂತ ಕಡಿಮೆಯಾದ ಸೌಂದರ್ಯ ಮತ್ತು ಶೃಂಗಾರರಸಗಳಿಂದ ಯುಕ್ತನೂ ನೀತಿವಂತನೂ ಆದನು.

ಈ ಬ್ರಹ್ಮದೇವರ ದಿನದಲ್ಲಿ ಆರು ಮನ್ವಂತರಗಳು ಮುಗಿದು ಏಳನೆಯ ಮನ್ವಂತರವು ಈಗ ನಡಿಯುತ್ತಿದೆ. ಈ ಏಳು ಮನ್ವಂತರದಲ್ಲಿ ಆರು ಜನರು ಇಂದ್ರಪದವಿಯನ್ನು ಆಳಿರುವರು. ಅವರಲ್ಲಿ ಶ್ರೀಹರಿಯು ಯಜ್ಞ ಎಂಬ

ಹೆಸರಿನಿಂದ ಮೊದಲನೆಯ ಸ್ವಾಯಂಭುವ ಮನ್ವಂತರದಲ್ಲಿ ಇಂದ್ರಪದವಿಯನ್ನು ಆಳಿರುವನು. ಆ ಯಜ್ಞನೇ ಈಗ ಶ್ರೀಕೃಷ್ಣದೇವನಾಗಿ ಅವತರಿಸಿರುವನು. ಎರಡನೆಯ ಮನ್ವಂತರದಲ್ಲಿ ವಾಯುದೇವರು. ಇಂದ್ರಪದವಿಯನ್ನು ಆಳಿರುವರು. ಅವರು ಈಗ ಭೀಮಸೇನನಾಗಿ ಅವತರಿಸಿರುವರು. ಮೂರನೆಯ ಮನ್ವಂತರದಲ್ಲಿ ಯಮಧರ್ಮರಾಜನು ಇಂದ್ರಪದವಿಯನ್ನು ಆಳಿರುವನು. ಅವನು ಈಗ ಧರ್ಮರಾಜನಾಗಿ ಅವತರಿಸಿರುವನು. ನಾಲ್ಕನೆಯ ಮನ್ವಂತರದಲ್ಲಿ ನಾಸತ್ಯನೂ ಐದನೆಯ ಮನ್ವಂತರದಲ್ಲಿ ದಸ್ರನೂ ಇಂದ್ರಪದವಿಯನ್ನು ಆಳಿರುವರು. ಅವರಿಬ್ಬರೂ ಈಗ ನಕುಲ ಮತ್ತು ಸಹದೇವ ಎಂಬ ಹೆಸರುಗಳಿಂದ ಹುಟ್ಟಿರುವರು. ಆರನೆಯ ಮತ್ತು ಏಳನೆಯ ಮನ್ವಂತರಗಳಲ್ಲಿ ಪುರಂದರನು ಒಬ್ಬನೇ ಇಂದ್ರಪದವಿಯನ್ನು ಆಳುತ್ತಿರುವನು. ಆ ಪುರಂದರನು ಅರ್ಜುನನಾಗಿ ಈಗ ಹುಟ್ಟಿರುವನು.

ಒಬ್ಬ ರಾಜನಿಗೆ ಇಬ್ಬರು ಪತ್ನಿಯರೂ, ಎರಡು ಮನೆಗಳೂ, ಎರಡು ಮನೆಗಳಲ್ಲಿ ಒಂದೊಂದು ಹಾಸಿಗೆಗಳೂ ಇವೆ. ಅವನು ಎಲ್ಲಿ ಮಲಗಿದರೂ ಇಬ್ಬರು ಪತ್ನಿಯರೊಡನೆ ಮಲಗುವುದಾಗಿ ಸಂಕಲ್ಪಿಸಿರುವನು. ಮೊದಲನೆಯ ಮನೆಯಲ್ಲಿ ಆ ಎರಡು ಪತ್ನಿಯರಲ್ಲಿ ಪ್ರಥಮ ಪತ್ನಿಯು ಪ್ರಧಾನಳಾಗಿಯೂ ಎರಡನೆಯ ಪತ್ನಿಯು ಅಪ್ರಧಾನಳಾಗಿಯೂ, ಎರಡನೆಯ ಮನೆಯಲ್ಲಿ ಎರಡನೆಯ ಪತ್ನಿಯು ಪ್ರಧಾನಳಾಗಿಯೂ ಮೊದಲನೆಯ ಪತ್ನಿಯು ಅಪ್ರಧಾನಳಾಗಿಯೂ, ಮಲಗಿದರೆ ಇಬ್ಬರು ಪತ್ನಿಯರಿಗೂ ಸಮಪ್ರಾಧಾನ್ಯವನ್ನು ಕೊಟ್ಟಂತಾಗುತ್ತದೆ.

ಹೀಗೆ ನಾಲ್ಕನೆಯ ಮನ್ವಂತರದಲ್ಲಿಯೂ ಐದನೆಯ ಮನ್ವಂತರದಲ್ಲಿಯೂ ಎರಡು ಅಶ್ವಿನೀದೇವತೆಗಳೂ ಇಂದ್ರಪದವಿಯನ್ನು ಆಳಿರುವರು. ಅವರಲ್ಲಿ ನಾಲ್ಕನೆಯ ಮನ್ವಂತರದಲ್ಲಿ ನಾಸತ್ಯನು ಪ್ರಧಾನನಾಗಿಯೂ ದಸ್ರನು ಅಪ್ರಧಾನನಾಗಿಯೂ ಐದನೆಯ ಮನ್ವಂತರದಲ್ಲಿ ದಸ್ರನು ಪ್ರಧಾನನಾಗಿಯೂ ನಾಸತ್ಯನು ಅಪ್ರಧಾನನಾಗಿಯೂ ಇಂದ್ರಪದವಿಯನ್ನು ಆಳಿರುವರು. ಆದ್ದರಿಂದ ಇಬ್ಬರಿಗೂ ಸಮಪ್ರಾಧಾನ್ಯವು ಬಂದಂತಾಯಿತು.

ಈ ಅಶ್ವಿನೀದೇವತೆಗಳಿಬ್ಬರಿಗೂ ಮೂಲರೂಪದಲ್ಲಿ ಸರ್ವಸಾಮ್ಯವಿದೆ. ಅಂದರೆ ಒಬ್ಬನು ಹೋಗುವಾಗ ಇನ್ನೊಬ್ಬನು ಹೋಗುವನು. ಒಬ್ಬನು ಊಟಮಾಡುವಾಗ ಇನ್ನೊಬ್ಬನು ಊಟಮಾಡುವನು. ಹೀಗೆ ಸರ್ವ ವ್ಯಾಪಾರಗಳನ್ನೂ ಒಂದೇ ವಿಧದಿಂದ ಮಾಡುತ್ತಿರುವರು. ಆದರೆ ಅವತಾರರೂಪಗಳಲ್ಲಿ ಸರ್ವಸಾಮ್ಯವಿಲ್ಲ. ನಕುಲನು ಹೋಗುವಾಗ ಸಹದೇವನು ಹೋಗಬೇಕೆಂಬ ನಿರ್ಬಂಧವಿಲ್ಲ. ಹೀಗೆ ಇಬ್ಬರೂ ಬೇರೆ ವಿಧವಾದ ಕಾರ್ಯಗಳನ್ನು ಮಾಡುತ್ತಿರುವರು.

ಮಾದ್ರೀದೇವಿಯು ಇಬ್ಬರು ಮಕ್ಕಳನ್ನು ಪಡೆದಳು. ಇನ್ನೊಬ್ಬ ಮಗನು ತನಗೆ ಹುಟ್ಟಬೇಕೆಂದು ಅವಳಿಗೆ ಆಸೆಯಾಯಿತು. ಆದರೆ ಮಂತ್ರವನ್ನು ಪುನಃ ಜಪಿಸಿದರೆ ಕುಂತಿಯ ಮಾತಿನಂತೆ ಮಕ್ಕಳು ಹುಟ್ಟುವುದಿಲ್ಲ. ಅದಕ್ಕಾಗಿ ಪತಿಯನ್ನು ಸಮೀಪಿಸಿದಳು. ಇನ್ನೊಮ್ಮೆ ಮಂತ್ರವನ್ನು ಜಪಿಸುವಾಗ ಫಲವು ಸಿಗಬೇಕೆಂದು ಹೇಳುವಂತೆ ಕುಂತೀದೇವಿಯನ್ನು ನೋಡಿ ಆಜ್ಞಾಪಿಸುವಂತೆ ಪ್ರಾರ್ಥಿಸಿದಳು. ಪಾಂಡುರಾಜನು ಕುಂತೀದೇವಿಯನ್ನು ನೋಡಿ. ಮಾದ್ರಿಯ ಮಾತುಗಳನ್ನು ತಿಳಿಸಿದನು.

ಕುಂತೀದೇವಿಯು ಪತಿಯನ್ನು ನೋಡಿದಳು. " ಈ ಮಾದ್ರಿಯು ಕಪಟಿಯಾಗಿರುವಳು. ನನ್ನ ಅನುಮತಿಯಿಲ್ಲದೆ ಒಂದು ಸಲ ಮಂತ್ರವನ್ನು ಜಪಿಸಿ ಇಬ್ಬರು ದೇವತೆಗಳನ್ನು ಕರೆದಿರುವಳು. ಈಗ ಪುನಃ

ಮಂತ್ರವನ್ನು ಜಪಿಸಿದಾಗ ಫಲಿಸುವಂತೆ ಹೇಳಬೇಕೆಂದು ನಿಮ್ಮ ಮೂಲಕವಾಗಿ ನನಗೆ ಆಜ್ಞೆಯನ್ನು ಮಾಡಿಸುತ್ತಿರುವಳು. ನಾನು ಹಾಗೆ ಹೇಳಿಬಿಟ್ಟರೆ ಪುನಃ ಮಂತ್ರವನ್ನು ಜಪಿಸಿ ಅನೇಕ ಮಕ್ಕಳನ್ನು ಪಡೆದು ಅವರಿಂದ ನನ್ನ ಮಕ್ಕಳಿಗೆ ದ್ರೋಹವು ಏರ್ಪಡುವಂತೆ ಮಾಡಿಸಬಹುದು. ಆದುದರಿಂದ ನನಗೆ ನೀವು ಈ ರೀತಿಯಿಂದ ಆಜ್ಞಾಪಿಸಬಾರದು'' ಎಂದು ವಿನಯದಿಂದ ಪ್ರಾರ್ಥಿಸಿದಳು. ಪಾಂಡುರಾಜನು ಅವಳ ಪ್ರಾರ್ಥನೆಯನ್ನು ಅಂಗೀಕರಿಸಿದನು.

ಇಲ್ಲಿ ಒಂದು ವಿಷಯವನ್ನು ಗಮನಿಸಬೇಕು. ಅಧಿಕ ಮಕ್ಕಳ ಆಸೆಯಿಂದ ಯುಕ್ತಳಾದ ಮಾದ್ರೀದೇವಿಯು ಒಂದು ಸಲ ಮಂತ್ರವನ್ನು ಜಪಿಸಿ ಮರುತ್ ಎಂಬ ಹೆಸರಿನಿಂದ ದೇವತೆಗಳನ್ನು ಕರೆದಿದ್ದರೆ ೪೯ ಮರುತ್ತುಗಳು ಬರುತ್ತಿದ್ದರು. ಅವರುಗಳಿಂದ ೪೯ ಮಕ್ಕಳು ಹುಟ್ಟುತ್ತಿದ್ದರು. ರುದ್ರ ಎಂಬ ಹೆಸರಿನಿಂದ ಕರೆದಿದ್ದರೆ ೧೧ ರುದ್ರರು ಬರುತ್ತಿದ್ದರು. ಅವರಿಂದ ೧೧ ಮಕ್ಕಳು ಹುಟ್ಟುತ್ತಿದ್ದರು. ದೇವ ಎಂಬ ಹೆಸರಿನಿಂದ ಕರೆದಿದ್ದರೆ ಸಕಲ ದೇವತೆಗಳು ಬರುತ್ತಿದ್ದರು. ಅವರಿಂದ ಅಸಂಖ್ಯ ಮಕ್ಕಳುಗಳು ಹುಟ್ಟುತ್ತಿದ್ದರು. ಹೀಗಿರುವಾಗ ಅವರೆಲ್ಲರನ್ನೂ ಬಿಟ್ಟು ಅಶ್ವಿನೀದೇವತೆಗಳು ಎಂಬ ಹೆಸರಿನಿಂದ ಇಬ್ಬರೇ ದೇವತೆಗಳನ್ನು ಕರೆದು ಅವರಿಂದ ಎರಡು ಮಕ್ಕಳನ್ನು ಪಡೆದು ಮೂರನೆಯ ಮಗನಿಗಾಗಿ ಪಾಂಡುರಾಜನಲ್ಲಿ ಈ ವಿಧವಾದ ಪ್ರಶ್ನೆಯನ್ನು ಮಾಡಲು ಕಾರಣವೇನು? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಉತ್ತರವನ್ನು ಕೊಡುತ್ತೇವೆ.

ಹೆಸರುಗಳು ಎರಡು ವಿಧವಾಗಿವೆ (೧) ಅನೇಕವ್ಯಕ್ತಿಗಳನ್ನು ತಿಳಿಸುವ ಹೆಸರುಗಳು. ಮರುತ್ ದೇವ, ರುದ್ರ ಮುಂತಾದ ಹೆಸರುಗಳು ಈ ದರ್ಜೆಯಲ್ಲಿ ಸೇರಿವೆ. ಈ ಹೆಸರುಗಳಲ್ಲಿ ಮರುತ್ ಎಂಬ ಹೆಸರು ೪೯ ದೇವತೆಗಳ ಗುಂಪನ್ನು ತಿಳಿಸುತ್ತದೆ. ಒಂದು ವ್ಯಕ್ತಿಯನ್ನು ತಿಳಿಸುವುದಿಲ್ಲ. ಇದರಂತೆ ರುದ್ರ ಎಂಬ ಹೆಸರು ಹನ್ನೊಂದು ರುದ್ರರ ಗುಂಪನ್ನೂ ದೇವ ಎಂಬ ಹೆಸರು ಎಲ್ಲಾ ದೇವತೆಗಳ ಗುಂಪನ್ನೂ ತಿಳಿಸುತ್ತದೆ.

(೨) ಒಂದೇ ವ್ಯಕ್ತಿಯನ್ನು ತಿಳಿಸುವ ಹೆಸರುಗಳು. ಇಂದ್ರ, ಚಂದ್ರ ಮುಂತಾದ ಹೆಸರುಗಳು ಈ ದರ್ಜೆಯಲ್ಲಿ ಸೇರಿರುತ್ತದೆ. ಇಲ್ಲಿ ಇಂದ್ರ ಎಂಬ ಹೆಸರು ಇಂದ್ರಪದವಿಯನ್ನು ಆಳುತ್ತಿರುವ ಒಬ್ಬ ದೇವತೆಯನ್ನೇ ತಿಳಿಸುತ್ತದೆ. ಬೇರೆ ಯಾರನ್ನೂ ತಿಳಿಸುವುದಿಲ್ಲ. ಚಂದ್ರ ಎಂಬ ಹೆಸರು ಒಬ್ಬ ವ್ಯಕ್ತಿಯನ್ನೇತಿಳಿಸುತ್ತದೆ.

ಈ ಎರಡು ವಿಧವಾದ ಹೆಸರುಗಳಲ್ಲಿ ಮೊದಲನೆಯ ದರ್ಜೆಗೆ ಸೇರಿರುವ ಸಾಧಾರಣ ಹೆಸರುಗಳಿಂದ ದೇವತೆಗಳನ್ನು ಕರೆದಾಗ ಆ ಹೆಸರುಗಳಿಂದ ಕರೆಯಲ್ಪಡುತ್ತಿರುವ ಒಬ್ಬೊಬ್ಬರಿಗೂ "ನನ್ನನ್ನೇ ಕರೆದಿರುವಳಾ? ಅಥವಾ ಇದೇ ಹೆಸರಿನಿಂದ ಹೇಳಲ್ಪಡುತ್ತಿರುವ ಇತರರನ್ನು ಕರೆದಿರುವಳಾ?'' ಎಂಬ ಸಂಶಯವು ಬರುತ್ತದೆ. ಈ ಸಂಶಯದಿಂದ ಆ ಹೆಸರಿನಿಂದ ಕರೆಯಲ್ಪಡುವ ಯಾವ ದೇವತೆಯೂ ಬರುವುದಿಲ್ಲ.

ಎರಡನೆಯ ದರ್ಜೆಗೆ ಸೇರಿರುವ ಇಂದ್ರ ಮುಂತಾದ ಹೆಸರುಗಳಿಂದ ಕರೆದಾಗ ಆ ಹೆಸರಿನಿಂದ ಹೇಳಲ್ಪಡುವ ಇನ್ನೊಬ್ಬ ವ್ಯಕ್ತಿಯಿಲ್ಲದಿರುವುದಿಂದ ಇಂದ್ರಪದವಿಯನ್ನು ಆಳುತ್ತಿರುವ ದೇವತೆಯು ತನ್ನನ್ನೇ ಕರೆದಿರುವುದಾಗ ತೀರ್ಮಾನಿಸುವನು. ಆದ್ದರಿಂದ ಅವನೇ ಬರುವನು.

" ಏಕಯೋಕ್ತ್ಯಾ ಪುಷ್ಪದಂತೌ ದಿವಾಕರನಿಶಾಕರೌ'' ಎಂಬ ಕೋಶವನ್ನು ಅನುಸರಿಸಿ "ಪುಷ್ಪದಂತೌ''

ಎಂಬ ಶಬ್ದವು ಸೂರ್ಯ ಮತ್ತು ಚಂದ್ರರನ್ನು ತಿಳಿಸುತ್ತದೆ. ಆದರೆ "ಪುಷ್ಪಶ್ಚ ದಂತಶ್ಚ ಪುಷ್ಪದಂತೌ" ಎಂಬ ವಿಗ್ರಹವನ್ನು ಅನುಸರಿಸಿ "ಪುಷ್ಪ" ಎಂಬ ಹೆಸರಿನಿಂದ ಸೂರ್ಯನನ್ನೂ "ದಂತ" ಎಂಬ ಹೆಸರಿನಿಂದ ಚಂದ್ರನನ್ನೂ ತಿಳಿಸುತ್ತದೆ. ಪುಷ್ಪದಂತೌ ಎಂಬ ಹೆಸರು ಒಬ್ಬನಿಗೆ ಯಾರಿಗೂ ಇಲ್ಲ.

"ಮಾತಾ ಚ ಪಿತಾ ಚ ಪಿತರೌ" ಎಂಬ ವಿಗ್ರಹವನ್ನು ಅನುಸರಿಸಿ " ಮಾತಾ" ಎಂಬ ಪದಕ್ಕೆ ಲೋಪವು ಏರ್ಪಟ್ಟು "ಪಿತರೌ" ಎಂಬ ರೂಪವು ಏರ್ಪಡುತ್ತದೆ. ಇಲ್ಲಿ "ಪಿತರೌ" ಎಂಬ ಪದವು ಅಜಹತ್ಸ್ವಾರ್ಥ್ಯಲಕ್ಷಣೆಯಿಂದ ತಾಯಿಯನ್ನೂ ಶಕ್ತಿಯಿಂದ ತಂದೆಯನ್ನೂ ತಿಳಿಸುತ್ತದೆ. ಶಕ್ತಿ ಅಥವಾ ಲಕ್ಷಣಾ ಎಂಬ ಒಂದೇ ರೀತಿಯಿಂದ ಎರಡು ವ್ಯಕ್ತಿಗಳನ್ನೂ ತಿಳಿಸುವುದಿಲ್ಲ. ಇದರಿಂದ ಒಂದೇಶಬ್ದವು ಶಕ್ತಿಯಿಂದಾಗಲೀ ಲಕ್ಷಣೆಯಿಂದಾಗಲೀ ಒಂದೇ ರೀತಿಯಿಂದ ಒಂದೇ ವ್ಯಕ್ತಿಯನ್ನು ತಿಳಿಸುತ್ತಿರಬೇಕು. ಆ ಹೆಸರಿನಿಂದ ಹೇಳಲ್ಪಡುವ ವ್ಯಕ್ತಿಯನ್ನು ಕರೆಯಬೇಕು. ಆಗ ಆ ವ್ಯಕ್ತಿಯು ಬರುವುದಾಗಿ ತೀರ್ಮಾನಿಸಬಹುದು.

ಪ್ರಕೃತದಲ್ಲಿ ನಾಸತ್ಯ ದಸ್ರ ಎಂಬ ಎರಡು ದೇವತೆಗಳನ್ನು ಸಾಧಾರಣವಾಗಿ ಅಶ್ವಿನೀದೇವತೆಗಳೆಂದು ಕರೆಯುವುದುಂಟು. ಆದ್ದರಿಂದ ಅಶ್ವಿನೀ ಎಂಬ ಹೆಸರು ಅವರಿಬ್ಬರಿಗೂ ಸಾಧಾರಣವಾಗಿದೆ. ನಾಸತ್ಯ ಎಂಬ ಹೆಸರು ನಾಸತ್ಯ ದಸ್ರ ಎಂಬ ಎರಡು ದೇವತೆಗಳಿಗೂ ಇದೆ. ಅದೇ ವಿಧದಿಂದ ದಸ್ರ ಎಂಬ ಹೆಸರೂ ಎರಡು ದೇವತೆಗಳಿಗೂ ಇದೆ. ಆದ್ದರಿಂದ ನಾಸತ್ಯ ಎಂಬ ಹೆಸರು ನಾಸತ್ಯ ಎಂಬ ದೇವತೆಗೆ ವಿಶೇಷ ಹೆಸರೆಂದೂ ನಾಸತ್ಯ ದಸ್ರ ಎಂಬ ಎರಡು ದೇವತೆಗಳಿಗೆ ಸಾಮಾನ್ಯ ಹೆಸರೂ ಆಗುತ್ತದೆ. ಆದ್ದರಿಂದ ನಾಸತ್ಯ ಎಂಬ ಹೆಸರಿನಿಂದಾಗಲೀ ದಸ್ರ ಎಂಬ ಹೆಸರಿನಿಂದಾಗಲೀ ಅಶ್ವಿನೀ ಎಂಬ ಹೆಸರಿನಿಂದಾಗಲೀ ಯಾವ ಹೆಸರಿನಿಂದ ಕರೆದರೂ ಇಬ್ಬರು ದೇವತೆಗಳನ್ನು ಕರೆದಂತಾಗುತ್ತದೆ. ಆದ್ದರಿಂದ ಆ ಇಬ್ಬರು ದೇವತೆಗಳಿಗೂ ಸಂಶಯವು ಬರುವುದಿಲ್ಲ. ಒಟ್ಟಿಗೆಯೇ ಬರುವರು. ಮರುತ್ ಮುಂತಾದ ಹೆಸರಿನಿಂದ ಕರೆದಾಗ ಸಂಶಯವು ಬರುತ್ತದೆ. ಅದಕ್ಕಾಗಿ ಆ ಹೆಸರುಗಳಿಂದ ಕರೆಯದೆ ನಾಸತ್ಯ ದಸ್ರ ಅಶ್ವಿನೀ ಮುಂತಾದ ಹೆಸರುಗಳಿಂದಲೇ ಕರೆದಿರುವಳು.

(೧೨) (ಮಯಾ) ಮೃತ್ ನ ಅಭಕ್ಷಿ ಇತಿ ವದನ್ ಸ್ವವದನಗಜಗತ್ ಭಾಸಯನ್ ಮೇ ಭಾಸತಾಂ - ನನ್ನಿಂದ ಮಣ್ಣು ತಿನ್ನಲ್ಪಡಲಿಲ್ಲ ಎಂದು ಹೇಳುತ್ತಾ ತನ್ನ ಬಾಯಿಯಲ್ಲಿರುವ ಜಗತ್ತನ್ನು ತೋರಿಸುತ್ತಿರುವ ಶ್ರೀಕೃಷ್ಣದೇವನು ನನಗೆ ಜ್ಞಾನವನ್ನು ಕೊಡಲಿ.

# ಮಣ್ಣನ್ನು ತಿಂದ ಬಾಯಿಯಲ್ಲಿ ಬ್ರಹ್ಮಾಂಡವನ್ನು ತೋರಿಸಿದ್ದುದು

**ವಿಶೇಷಾರ್ಥ - "ಸ್ವಸ್ಯ ಲೋಕಸಾಧಾರಣ್ಯೇನ ಶಿಶುಭಾವಂ ಕುರ್ವತ್ಯಾ ಮಾತುಃ ಸ್ವವಿಷಯಕತತ್ತ್ವ ಜ್ಞಾನೋದಯಾರ್ಥಂ ವಯಸ್ಯಾನಾಂ ಪುರತೋ ಮೃದಂ ಭಕ್ಷಯಿತ್ವಾ ತೈರ್ಬೋಧಿತಯಾ ಮಾತ್ರಾ ಕಸ್ಮಾತ್ತ್ವಮ್ಮೃದಂ ಭಕ್ಷಿತವಾನಿತಿ ನಿರ್ಭರ್ತ್ಸಿತಃ "ನಾಹಂ ಭಕ್ಷಿತವಾನಂಬ ಮೃದಂ" ಇತ್ಯುಕ್ತ್ವಾ ಸ್ವಮುಖಂ ವ್ಯಾದಾಯ ತಸ್ಮಿನ್ ಸಾದ್ರಿದ್ವೀಪಾಬ್ಧಿಭೂಗೋಲಂ ಸರ್ವಂ ದರ್ಶಯಿತ್ವಾ ಮಾತುಃ ಸ್ವವಿಷಯಕತತ್ತ್ವಜ್ಞಾನಂ ದತ್ವಾ ತಾಮತೋಷಯತ;".**

ಯಶೋದೆಯು ಸಾಮಾನ್ಯ ಮನುಷ್ಯಶಿಶುವೆಂದು ಶ್ರೀಕೃಷ್ಣದೇವನನ್ನು ತಿಳಿದಳು. ಅವಳಿಗೆ ತನ್ನ ನಿಜಸ್ವರೂಪವನ್ನು ತಿಳಿಸಬೇಕೆಂದು ಶ್ರೀಕೃಷ್ಣದೇವನು ಸಂಕಲ್ಪಿಸಿದನು. ತನ್ನ ಸಂಗಡಿಗರ ಮಧ್ಯದಲ್ಲಿ ಮಣ್ಣನ್ನು ತಿಂದನು. ಅವರೆಲ್ಲರೂ ಬಂದು ಯಶೋದೆಯ ಮುಂದೆ ಈ ವಿಷಯವನ್ನು ತಿಳಿಸಿದರು. ಯಶೋದೆಯು ಶ್ರೀಕೃಷ್ಣದೇವನನ್ನು " ಯಾಕೆ ಮಣ್ಣನ್ನು ತಿಂದಿ?" ಎಂದು ಕೇಳಿದಳು. "ನಾನು ಮಣ್ಣನ್ನು ತಿನ್ನಲಿಲ್ಲ" ಎಂದು ಹೇಳುತ್ತಾ ಬಾಯಿಯನ್ನು ತೆರೆದು ತೋರಿಸಿದನು.

ಆ ಬಾಯಿಯಲ್ಲಿ ಹಿಂದೆ ಹೇಳಿದಂತೆ ಬ್ರಹ್ಮಾಂಡವನ್ನೂ ಬ್ರಹ್ಮಾಂಡದ ಹೊರಗಿರುವ ಒಂಭತ್ತು ಆವರಣಗಳನ್ನೂ ನೋಡಿದಳು. ಗೋಕುಲವನ್ನೂ ಅದರೊಳಗೆ ತನ್ನನ್ನೂ ನಂದನನ್ನೂ ನೋಡಿದಳು. ಇದೇನು ಆಶ್ಚರ್ಯ. ಸ್ವಪ್ನವಾಗಿರಬಹುದೇ? ಅಲ್ಲ, ಅಲ್ಲ. ನಾನು ಮಲಗಿಲ್ಲ. ಮಲಗಿ ನಿದ್ರಿಸುತ್ತಿರುವವರಿಗೆ ಸ್ವಪ್ನವು ಬೀಳುತ್ತದೆ.

ನನಗೆ ಬುದ್ಧಿಯು ಭ್ರಮಿಸಿದೆಯೇ? ಇಲ್ಲ, ಇಲ್ಲ, ನನ್ನ ಬುದ್ಧಿಯು ಸರಿಯಾಗಿಯೇ ಇದೆ. ಬುದ್ಧಿ ಸರಿಯಿಲ್ಲದಂತೆ ನಾನು ಯಾವಾಗಲೂ ನಡೆದುಕೊಂಡದ್ದಿಲ್ಲ. ದೇವರ ಮಾಯೆಯೇನಾದರೂ ಇರಬಹುದೇ? ಇಲ್ಲ, ಇಲ್ಲ, ಶ್ರೀಕೃಷ್ಣನ ಸನ್ನಿಧಾನದಲ್ಲಿ ಎಲ್ಲಾ ಮಾಯೆಗಳೂ ದೂರವಾಗುತ್ತಿವೆ. ಅಥವಾ ನನ್ನ ಮಗನಲ್ಲಿರುವ ಸ್ವಾಭಾವಿಕವಾದ ಶಕ್ತಿಯಿಂದ ಇಂತಹ ಅದ್ಭುತಗಳೆಲ್ಲವೂ ನಡೆಯುತ್ತಿದೆಯೇ? ಇರಬಹುದು. ಪೂತನಾಸಂಹಾರದಿಂದ ಆರಂಭಿಸಿ ಇಂದಿನ ವರೆಗೆ ಅನೇಕ ವಿಚಿತ್ರ ಶಕ್ತಿಯನ್ನು ಇವನಲ್ಲಿ ನೋಡಿರುವೆನು. ಅಂತಹ ಶಕ್ತಿಗಳಲ್ಲಿ ಇದೂ ಒಂದು ಶಕ್ತಿಯಾಗಿರಬಹುದು. ಇವನು ನನ್ನ ಮಗನಲ್ಲ. ಇವನ ಮಾಯೆಯಿಂದ " ನಾನು ಗೋಕುಲದ ರಾಣಿ", " ನನ್ನ ಪತಿಯು ಗೋಕುಲದ ರಾಜ", "ಇವನು ನನ್ನ ಮಗ", " ಈ ಗೋಪಾಲಕರು ಈ ಗೋಪಿಕಾಸ್ತ್ರೀಯರು ಈ ಗೋವುಗಳು ಮತ್ತು ಈ ಸಂಪತ್ತು ನನ್ನ ಅಧೀನ" ಎಂದು ಭ್ರಮಿಸಿರುವೆನು. ಈ ಮೋಹವನ್ನು ಈ ಮಹಾಪ್ರಭುವೇ ಕೊಟ್ಟಿರುವನು. ಅವನ ಕಾಲುಗಳನ್ನು ಗಟ್ಟಿಯಾಗಿ ಹಿಡಿಯುವೆನು. ಇನ್ನು ಮುಂದೆ ಇಂತಹ ಮೋಹವನ್ನು ಕೊಡದೆ ನನ್ನನ್ನು ಕಾಪಾಡಲಿ. ಅವನೇ ನನಗೆ ಗತಿ ಎಂದು ಹೇಳುತ್ತಾ ಅಡ್ಡಬಿದ್ದಳು. ಅವಳಿಗೆ ತತ್ವಜ್ಞಾನವು ಏರ್ಪಟ್ಟಿತು.

ಶ್ರೀಕೃಷ್ಣದೇವನು ಯಶೋದೆಗೆ ಕೊಟ್ಟಿರುವ ಜ್ಞಾನವು ಸ್ಥಿರವಾಗಿ ಹಾಗೆಯೇ ನಿಂತುಬಿಟ್ಟರೆ ಅವಳಿಗೆ ಇನ್ನು ಮುಂದೆ ಸಂಸಾರದಲ್ಲಿರಬೇಕಾದ ಕೆಲಸವಿಲ್ಲ. ಅವಳು ಇನ್ನೂ ಕೆಲವು ಕಾಲದವರೆಗೆ ಸಂಸಾರದಲ್ಲಿರಬೇಕಾಗಿದೆ. ಅದಕ್ಕಾಗಿ ಅವಳಿಗೆ ಶ್ರೀಕೃಷ್ಣದೇವನು ಕೊಟ್ಟಿರುವ ತತ್ವಜ್ಞಾನವನ್ನು ತನ್ನಲ್ಲಿರುವ ವೈಷ್ಣವೀಮಾಯೆಯಿಂದ ಮುಚ್ಚಿಬಿಟ್ಟನು. ಮರುಕ್ಷಣದಲ್ಲಿ ಯಶೋದೆಯು ಶ್ರೀಕೃಷ್ಣದೇವನನ್ನು ಎತ್ತಿದಳು. "ಮಗುವೇ, ಬಾ' ಎಂದು ಹೇಳುತ್ತಾ ಮುದ್ದಾಡಿದಳು. ಬಂದ ಜ್ಞಾನವನ್ನು ಆಚ್ಛಾದಿಸುವವನೂ ಬಾರದಿರುವ ಜ್ಞಾನವನ್ನು ಕೊಡುತ್ತಿರುವವನೂ ಅವನೇ ಅಲ್ಲವೇ? ಈ ಶ್ರೀಕೃಷ್ಣದೇವನು ನನಗೆ ದಿವ್ಯವಾದ ಜ್ಞಾನವನ್ನು ಕೊಡಲಿ ॥ ೨॥

**ದಧ್ನೋಽಮತ್ರಸ್ಯ ಭಂಗಾದುಪಗಮಿತರುಷಾ ನಂದಪತ್ನ್ಯಾಽಥ ಬದ್ಧಃ**
**ಕೃಪ್ರೇಣೋಲೂಖಲೇ ಯೋ ಧನಪತಿತನಯೌ ಮೋಚಯಾಮಾಸ ಶಾಪಾತ್ ।**
**ನಂದಾದ್ಯೈಃ ಪ್ರಾಪ್ಯ ವೃಂದಾವನಮಿಹ ರಮಯನ್ವೇಣುನಾದಾದಿಭಿ ರ್ಯೋ**
**ವತ್ಸಾನ್ಪಾನ್ವತ್ಸರೂಪಂ ಕ್ರತುಭುಗರಿಮಥೋ ಪೋಥಯನ್ನೋಽವತಾನ್ಮಾಮ್ ॥೩॥**

**ಪದಚ್ಛೇದ** - ದಧ್ನಃ, ಅಮತ್ರಸ್ಯ, ಭಂಗಾತ್ ಉಪಗಮಿತರುಷಾ, ನಂದಪತ್ನ್ಯಾ, ಅಥ, ಬದ್ಧಃ, ಕೃಛ್ರೇಣ, ಉಲೂಖಲೇ, ಯಃ, ಧನಪತಿತನಯೌ, ಮೋಚಯಾಮಾಸ, ಶಾಪಾತ್, ನಂದಾದ್ಯೈಃ, ಪ್ರಾಪ್ಯ ವೃಂದಾವನಂ, ಇಹರಮಯನ್, ವೇಣುನಾದಾದಿಭಿಃ, ಯಃ, ವತ್ಸಾನ್,ಪಾನ್, ವತ್ಸರೂಪಂ, ಕ್ರತುಭುಗರಿಂ, ಅಥೋ, ಪೋಥಯನ್, ಸಃ, ಅವತಾತ್, ಮಾಮ್।

**ಅನ್ವಯ** - ಯಃ, ದಧ್ನಃ ಅಮತ್ರಸ್ಯ ಭಂಗಾತ್, ಉಪಗಮಿತರುಷಾ ನಂದಪತ್ನ್ಯಾ, ಅಥ, ಉಲೂಖಲೇ, ಕೃಛ್ರೇಣ ಬದ್ಧಃ, ಧನಪತಿತನಯೌ ಶಾಪಾತ್ ಮೋಚಯಾಮಾಸ ಯಃ, ನಂದಾದ್ಯೈಃ (ಸಹ) ವೃಂದಾವನಂ ಪ್ರಾಪ್ಯ ಇಹ ವೇಣುನಾದಾದಿಭಿಃ ರಮಯನ್, ಅಥೋ ವತ್ಸಾನ್ ಪಾನ್ ವತ್ಸರೂಪಂ ಕ್ರತುಭುಗರಿಂ ಪೋಥಯನ್ ಸಃ, ಮಾಂ ಅವತಾತ್।

**ಅನ್ವಯಾರ್ಥ** - **"ಯಃ"** ಯಾವ ಶ್ರೀಕೃಷ್ಣನು **"ದಧ್ನಃ"** ಮೊಸರಿನ **"ಅಮತ್ರಸ್ಯ"** ಗಡಿಗೆಯ **"ಭಂಗಾತ್"** ನಾಶದಿಂದ **"ಉಪಗಮಿತರುಷಾ"** ಕೋಪದಿಂದ ಯುಕ್ತಳಾಗಿರುವ **"ನಂದಪತ್ನ್ಯಾ"** ನಂದನ ಪತ್ನಿಯಾದ ಯಶೋಧೆಯಿಂದ **"ಅಥ"** ಅನಂತರದಲ್ಲಿ **"ಉಲೂಖಲೇ"** ಒರಳಿನಲ್ಲಿ **"ಕೃಛ್ರೇಣ"** ತುಂಬಾ ಪ್ರಯಾಸಿದಿಂದ **"ಬದ್ಧಃ"** ಕಟ್ಟಲ್ಪಟ್ಟವನಾಗಿ **"ಧನಪತಿತನಯೌ"** ಕುಬೇರನ ಮಕ್ಕಳಾಗಿರುವ ನಲಕೂಬರ ಮಣಿಗ್ರೀವರನ್ನು **"ಶಾಪಾತ್"** ಶಾಪದಿಂದ **"ಮೋಚಯಾಮಾಸ"** ಬಿಡಿಸಿದನೋ **"ಯಃ"** ಯಾವ ಶ್ರೀಕೃಷ್ಣನು**"ನಂದಾದ್ಯೈಃ"** (ಸಹ) ನಂದನೇ ಮೊದಲಾದ ಗೊಲ್ಲರಿಂದ ಸಹಿತನಾಗಿ **"ವೃಂದಾವನಂ"** ವೃಂದಾವನವನ್ನು **"ಪ್ರಾಪ್ಯ"** ಹೊಂದಿ **"ಇಹ"** ಈ ವೃಂದಾವನದಲ್ಲಿ **"ವೇಣುನಾದಾದಿಭಿಃ"** ಕೊಳಲಿನ ಧ್ವನಿ ಮುಂತಾದವುಗಳಿಂದ **"ರಮಯನ್"** ಸಂತೋಷಪಡಿಸುತ್ತಾ **"ಅಥೋ"** ಅನಂತರದಲ್ಲಿ **"ವತ್ಸಾನ್"** ಕರುಗಳನ್ನು **"ಪಾನ್"** ಕಾಪಾಡುತ್ತಿರುವವನಾಗಿ **"ವತ್ಸರೂಪಂ"** ಕರುವಿನ ರೂಪವನ್ನು ಧರಿಸಿರುವ **"ಕ್ರತುಭುಗರಿಂ"** ಯಜ್ಞದಲ್ಲಿ ಆಹುತಿಯನ್ನು ಸ್ವೀಕರಿಸುತ್ತಿರುವ ದೇವತೆಗಳಿಗೆ ವೈರಿಯಾಗಿರುವ ದೈತ್ಯನನ್ನು **"ಪೋಥಯನ್"** ಕೊಂದ **"ಸಃ"** ಆ ಶ್ರೀಕೃಷ್ಣದೇವನು **"ಮಾಂ"** ನನ್ನನ್ನು **"ಅವತಾತ್"** ರಕ್ಷಿಸಲಿ.

(೧೩) ವಿಶೇಷಾರ್ಥ - **ಯಃ ದಧ್ನಃ ಅಮತ್ರಸ್ಯ ಭಂಗಾತ್ ಉಪಗಮಿತರುಷಾ ನಂದಪತ್ನ್ಯಾ ಅಥ ಕೃಛ್ರೇಣ ಬದ್ಧಃ ಧನಪತಿತನಯೌ ಶಾಪಾತ್ ಸ ಮೋಚಿತವಾನ್.**

ಶ್ರೀಕೃಷ್ಣದೇವನು ಮೊಸರಿನ ಗಡಿಗೆಯನ್ನು ಒಡೆದನು. ಇದರಿಂದ ಯಶೋದೆಯು ಕುಪಿತಳಾದಳು. ಅವನನ್ನು ತುಂಬಾ ಪ್ರಯಾಸದಿಂದ ಕಟ್ಟಿದಳು. ಅವನು, ನಾರದರ ಶಾಪದಿಂದ ಮತ್ತಿಯ ಮರಗಳಾಗಿ ಹುಟ್ಟಿರುವ ಕುಬೇರನ ಮಕ್ಕಳಾಗಿರುವ ನಲಕೂಬರ ಮಣೀಗ್ರೀವರನ್ನು ಶಾಪದಿಂದ ಬಿಡಿಸಿದನು.

**ಕೃಷ್ಣಃ ಕದಾಚಿತ್‌ದಧಿಮಥನಂ ಕುರ್ವತ್ಯಾಃ ಸ್ವಚರಿತ್ರಾಣಿ ಗಾಯಂತ್ಯಾ ಮಾತುಃ ಅಂಕಾರೂಢಃ ಸ್ತನಂ ಪಿಬನ್, ಅತೃಪ್ತಪ್ರಾಯಃ, ಅಧಿಶ್ರಿತಮುತ್ಸಿಚ್ಯಮಾನಂ ಪಯೋ ನಿಧಾತುಂ ಜನನ್ಯಾ ಜವೇನೋತ್ಸೃಷ್ಟಃ ಕೋಪೇನ ದಧಿಮಥನಭಾಜನಮಶ್ಮನಾ ಭಿತ್ವಾ, ಚಂದ್ರಸನ್ನಿಭಂ ನವನೀತಂ ಸಮಾದಾಯ, ರಹೋ ಗತ್ವಾ, ಉಲೂಖಲಾಂಘ್ರೇರುಪರಿ ಸ್ಥಿತಃ, ಮಾರ್ಜಾರಾನ್ ಭಕ್ಷಯಿತ್ವಾ, ಸ್ವಯಂ ಚ ಭಕ್ಷಯನ್, ಅಧಿಶ್ರಿತಂ ಪಯ ಅಧೋ ನಿಧಾಯ, ಭಗ್ನಂ ದಧ್ಯಮತ್ರಕಂ ವಿಲೋಕ್ಯ, ಉಲೂಖಲಾಂಘ್ರೇರವಪ್ಲುತ್ಯ ಭೀತವದ್ಧಾವನ್,**

ಮಾತ್ರನ್ನೀಯಮಾನಃ ತಸ್ಯಾಃ ಶ್ರಮಂ ದೃಷ್ಟ್ವಾ, ಸ್ವಸ್ಯ ಭಕ್ತವಶ್ಯತಾಂ ಪ್ರದರ್ಶಯನ್ ತದ್ಧಸ್ತಂ ಪ್ರಾಪ್ತಃ ಸ್ವಕೃತಾಪರಾಧೇನ ಮಾತ್ರೈಕೇನ ದಾಮ್ನೋಲೂಖಲೇ ಬಧ್ಯಮಾನಃ ತೇನ ದಾಮ್ನಾ ಪೂರ್ಣತಾಂ ಪ್ರಾಪ್ಯ, ತಯಾ ಪುನಃ ಪುನರಾನೀತೈರ್ದಾಮ ಸಂಚಯೈರಪಿ ದ್ವ್ಯಂಗುಲದ್ವ್ಯಂಗುಲೈರಪೂರ್ಣತಾಂ ಯಾತಃ ಸಕಲಬಂಧವಿಮುಕ್ತಸ್ಯ ಸ್ವಸ್ಯ ಯೋಗ್ಯತ್ವಂ ಪ್ರದರ್ಶ್ಯ, ಪುನಃ ಪುತ್ರಸ್ಯ ಮಾತೃವಶ್ಯತಾಂ ಪ್ರದರ್ಶಯನ್, ಸ್ವಿನ್ನಗಾತ್ರ್ಯಾ ಬಹುಶ್ರಮಯುಕ್ತಯಾ ಸ್ವಮಾತ್ರಾ ಏಕವತ್ಸಪಾಶೇನೋಲೂಖಲೇ ತೇನೋಲೂಖಲೇನ ತೌ ವೃಕ್ಷಾವುನ್ಮೂಲ್ಯ, ನಾರದೇನ ಸ್ವಸಮೀಪೇ ಯುವತಿಭಿಃ ಸಹ ಕೈಲಾಸೋಪವನೇ ಗಂಗಾಯಂ ಏವಸ್ತ್ರತಯಾ ಕ್ರೀಡಾಪರಾಧನಿಮಿತ್ತೇನ ಶಪ್ತೌ, ಕುಬೇರಪುತ್ರೌ ನಲಕೂಬರಮಣಿಗ್ರೀವೌ ಶಾಪಾನ್ಮೋಚಯಿತ್ವಾ, ತಾಭ್ಯಾಂಸ್ತುತಃ ತೌ ಸ್ವಗೃಹಂ ಪ್ರೇಷ್ಯ, ಸ್ವಯಂ ಚ ನಂದಗೋಪೇನ ದಾಮ್ನೋ ಮೋಚಿತಃ ಸರ್ವಾನ್ಸಂತೋಷ್ಯ.

# ಯಶೋದೆಯ ಭಕ್ತ್ಯತಿಶಯ

ಒಂದು ದಿನ ಪ್ರಾತಃಕಾಲದಲ್ಲಿ ಮನೆಯಲ್ಲಿರುವ ಎಲ್ಲಾ ದಾಸಿಯರಿಗೂ ಬೇರೆ ಬೇರೆ ಕೆಲಸಗಳಿದ್ದವು. ಆದ್ದರಿಂದ ಮೊಸರನ್ನು ಯಶೋದೆಯೇ ಕಡೆಯಬೇಕಾಯಿತು. ಮೊಸರನ್ನು ಕಡೆಯಲಾ ಆರಂಭಿಸಿದಳು.ಆಗ ಶ್ರೀಕೃಷ್ಣದೇವನು ಬಾಲ್ಯದಲ್ಲಿ ಮಾಡಿದ ಕೆಲವು ಲೀಲೆಗಳನ್ನು ಪದ್ಯರೂಪದಿಂದ ಗ್ರಥನ ಮಾಡಿ ಹಾಡಲಾರಂಭಿಸಿದಳು. ಹಾಡುತ್ತಾ ಆನಂದಪರವಶಳಾಗಿ. ಮೈಮರೆತಳು. ಕಣ್ಣುಗಳಿಂದ ಧಾರೆ ಧಾರೆಯಾಗಿ ಕಣ್ಣೀರಗಳನ್ನು ಸುರಿಸಿದಳು. ತಲೆಯಲ್ಲಿ ಧರಿಸಿದ್ದ ಮಲ್ಲಿಗೆ ಪುಷ್ಪಗಳು ಒಂದೊಂದಾಗಿ ಕೆಳಗೆ ಬಿದ್ದವು.

ಶ್ರೀಕೃಷ್ಣದೇವನು ಹಾಸಿಗೆಯಿಂದ ಮೆಲ್ಲನೆ ಎದ್ದನು. ಅವಳ ಸಂಗೀತಜ್ಞಾನವನ್ನು ಮೆಚ್ಚಿದನು. ಅವನು ಜ್ಞಾನಿಪ್ರಿಯನಲ್ಲವೇ? ಅವಳು ತನಗೆ ಅತ್ಯಂತ ಪ್ರಿಯವಾದ ಮಲ್ಲಿಗೆ ಪುಷ್ಪಗಳು ಕೆಳಗೆ ಬಿದ್ದುದನ್ನೂ ಲಕ್ಷಿಸದಿರುವುದನ್ನು ಕಂಡು ಬೆರಗಾದನು. ಅವನು ವೈರಾಗ್ಯವನ್ನು ಪರಮಭಾಗ್ಯವೆಂದು ತಿಳಿದವರಲ್ಲಿ ಪ್ರೀತಿಯನ್ನು ಮಾಡುವವನಲ್ಲವೇ? ಪ್ರೇಮಪರವಶತೆಯಿಂದ ಅವಳ ಕಣ್ಣುಗಳಲ್ಲಿ ಆನಂದಬಾಷ್ಪಗಳು ಧಾರೆ ಧಾರೆಯಾಗಿ ಸುರಿಯುತ್ತಿರುವುದನ್ನು ನೋಡಿ ಸಂಪೂರ್ಣವಾಗಿ ಅವಳ ವಶನಾದನು. ಅವನು ಭಕ್ತಪರಾಧೀನ ನಲ್ಲವೇ?

ಅವಳ ಸಮೀಪಕ್ಕೆ ಬೇಗ ಬೇಗನೆ ಬಂದನು. ಅವಳಿಗೆ ಶ್ರೀಕೃಷ್ಣದೇವನು ತನ್ನನ್ನು ಸಮೀಪಿಸಿದ್ದು ತಿಳಿಯಲಿಲ್ಲ. ಅವಳ ಕೈಯನ್ನು ಮೆಲ್ಲನೆ ಮುಟ್ಟಿದನು. ಆಗಲೂ ಅವಳು ತಿಳಿಯಲಿಲ್ಲ. ಅವಳ ಕೈಯಿಂದ ಕಡಗೋಲನ್ನೂ ಹಗ್ಗವನ್ನೂ ಕಿತ್ತುಕೊಂಡನು. ಗಾಬರಿಯಾದಳು. ತನ್ನ ಮುಂದೆ ಶ್ರೀಮಧ್ವಾಚಾರ್ಯರಿಗೆ ಒಲಿದ ಕಡಗೋಲು ಕೃಷ್ಣ ನನ್ನು ನೋಡಿದಳು. ಬತ್ತಲೆಯಾಗಿದ್ದು ತನ್ನದೇಹದ ಅಪಾರತೇಜಸ್ಸನ್ನು ಬೀರುತ್ತಿರುವ ಮಹಾಪ್ರಭುವನ್ನು ಕಂಡಳು.

ಅವನನ್ನು ಎತ್ತಿಕೊಂಡು. ತೊಡೆಯಲ್ಲಿ ಮಲಗಿಸಿಕೊಂಡಳು. ಕಳಂಕವೇ ಇಲ್ಲದಿರುವ ಚಂದ್ರನಂತೆ ಪ್ರಕಾಶಿಸುತ್ತಿರುವ ಮುದ್ದು ಮುಖವನ್ನು ಎವೆಯಿಕ್ಕದ ಕಣ್ಣುಗಳಿಂದ ಪುನಃ ಪುನಃ ನೋಡಿದಳು. ಮುದ್ದಿಸಿದಳು. ಸುಂದರವಾದ ಸರ್ವಾವಯವಗಳನ್ನು ನೋಡಿದಳು. ಆ ಅಂಗಗಳಲ್ಲಿ ಅಂಗಳಗಳಲ್ಲಿದ್ದ ಧೂಳಿಗಳೆಲ್ಲಾ ಅಂಟಿಕೊಂಡಿದ್ದವು. ಅವುಗಳನ್ನೆಲ್ಲಾ ಪುನಃ ಪುನಃ ತನ್ನ ಕೈಗಳಿಂದ ಒರಸಿದಳು. " ನನ್ನ ಮಗುವಿಗೆ ಹಸಿವಾಗಿದೆ. ಅದಕ್ಕಾಗಿ ಮಗುವು ನನ್ನನ್ನು ಹುಡುಕಿಕೊಂಡು ಬಂತು. ಈ ಸಮಯದಲ್ಲಿ ಮಗುವನ್ನು ಮರೆತು ಮೊಸರನ್ನು

ಕಡೆಯುತ್ತಿರುವೆನಲ್ಲಾ ನನಗೆ ಧಿಕ್ಕಾರವಿರಲಿ'' ಎಂದು ಹೇಳುತ್ತಾ ಮೊಲೆಯನ್ನು ಕುಡಿಸಿದಳು. ಶ್ರೀಕೃಷ್ಣದೇವನೂ ಸಹ ಅವಳ ಭಕ್ತಿಗೆ ಮೆಚ್ಚಿ ಅವಳ ಮೊಲೆಯ ಹಾಲನ್ನು ಎಷ್ಟುಕುಡಿದರೂ ತೃಪ್ತಿಯಿಲ್ಲದವನಂತೆ ಕುಡಿದನು.

## ಭಕ್ತಳಾದ ಯಶೋದೆಯ ಅಪರಾಧ

ಮೊಸರನ್ನು ಕಡೆಯುವುದನ್ನು ಆರಂಭಿಸುವುದಕ್ಕಿಂತ ಪೂರ್ವದಲ್ಲಿ ಅವಳೇ ಹಾಲನ್ನು ದನಗಳಿಂದ ಕರೆದಿದ್ದಳು. ಆ ಹಾಲನ್ನು ಕಾಯಿಸುವುದಕ್ಕಾಗಿ ಒಲೆಯಮೇಲಿಟ್ಟಿದ್ದಳು. ಆ ವಿಷಯವನ್ನು ಶ್ರೀಕೃಷ್ಣದೇವನನ್ನು ಲಾಲಿಸುತ್ತಿರುವ ಸಂದರ್ಭದಲ್ಲಿ ಮರೆತಿದ್ದಳು. ಆಗ ಆ ಹಾಲು ಉಕ್ಕಿ ಒಲೆಯಲ್ಲಿ ಹೋಗಲು ಆರಂಭಿಸಿತು. ಅದನ್ನು ಶಬ್ದದಿಂದ ತಿಳಿದು ಆ ಕ್ಷಣದಲ್ಲಿ ಹಾಲು ವ್ಯರ್ಥವಾಗಿ ಒಲೆಯಲ್ಲಿ ಹೋಗುತ್ತದಲ್ಲಾ ಎಂದು ತಿಳಿದು. ಶ್ರೀಕೃಷ್ಣದೇವನನ್ನು ಅವಸರ ಅವಸರವಾಗಿ ಕೆಳಗೆ ಮಲಗಿಸಿ ಓಡಿಹೋಗಿ ಹಾಲನ್ನು ಇಳಿಸಿ ತಿರುಗಿ ಬಂದಳು.

## ಯಶೋದೆಯ ಅಪರಾಧಕ್ಕೆ ಶಿಕ್ಷೆ

ಅಷ್ಟರಲ್ಲಿ ಶ್ರೀಕೃಷ್ಣದೇವನು ಆಲೋಚಿಸಿದನು. ಈ ಯಶೋದೆಯು ನನ್ನನ್ನೇ ಸರ್ವಸ್ವ ಎಂದು ತಿಳಿದು ನನ್ನನ್ನು ಎತ್ತಿಕೊಂಡಳು. ಆಗ ಅವಳ ಭಕ್ತಿಗೆ ಮೆಚ್ಚಿ ಅವಳ ಮೊಲೆಯ ಹಾಲನ್ನು ಕುಡಿದೆನು. ಆದರೆ ಈಗ ಅವಳು ಅಲ್ಪವಾದ ಹಾಲಿನ ಮೇಲೆ ಆಸೆಯನ್ನಿಟ್ಟು. ಹಾಲಿಗಾಗಿ ಕೂಡಲೇ ನನ್ನನ್ನು ಕೆಳಗಿಟ್ಟು ಓಡಿದಳು. ಈ ನನಗಿಂತ ಹಾಲೇ ಇವಳಿಗೆ ಅಧಿಕವಾಯಿತು. ನನ್ನ ಭಕ್ತರು ನನ್ನನ್ನು ಬಿಟ್ಟು ಯಾವ ಇತರ ವಸ್ತುಗಳನ್ನೂ ಬಯಸಬಾರದು. ಹಾಗೆ ಬಯಸಿದರೆ ಅವರು ಬಯಸಿದ ವಸ್ತುಗಳನ್ನೆಲ್ಲಾ ನಾಶಮಾಡಿ ಪುನಃ ನನ್ನನ್ನೇ ಆಶ್ರಯಿಸುವಂತೆ ಮಾಡುವೆನು. ಇದು ನನ್ನ ಸ್ವಭಾವ. ಆದ್ದರಿಂದ ನನ್ನನ್ನು ಬಿಟ್ಟು ಹಾಲನ್ನು ಬಯಸಿದ ಇವಳ ಮೊಸರನ್ನು ಮೊದಲು ನಾಶಮಾಡುವೆನು. ಎಂದು ತೀರ್ಮಾನ ಮಾಡಿ ಕುಪಿತನಂತೆ ನಟಿಸಿದನು.

ಅಲ್ಲಿ ಬಿದ್ದಿದ್ದ ಚಿಕ್ಕಕಲ್ಲಿನ ಚೂರನ್ನು ತೆಗೆದುಕೊಂಡು ಆ ಕಲ್ಲಿನ ತುಂಡಿನಿಂದ ಮೊಸರಿನ ಗಡಿಗೆಯನ್ನು ಗುರಿಯಿಟ್ಟು ಹೊಡೆದನು. ಆ ಗಡಿಗೆಯು ಒಡೆದು. ಮೊಸರೆಲ್ಲಾ ಚೆಲ್ಲಿತು. ಬೆಣ್ಣೆಯು ಆಗಲೇ ಬಂದಿತ್ತು ಅದನ್ನು ನೋಡಿ ಚಂದ್ರನಂತೆ ಹೊಳೆಯುತ್ತಿರುವ ಆ ಬೆಣ್ಣೆಯನ್ನು ಕೈಯಲ್ಲಿ ಎತ್ತಿಕೊಂಡು ಓಡಿದನು. ದೂರದಲ್ಲಿ ಒಂದು ಒರಳಿನಲ್ಲಿ ಏರಿ ಕುಳಿತನು. ಯಶೋದೆಯು ತನ್ನ ಭಕ್ತಳೆಂಬುವುದು ನಿಜ. ಆದರೆ ಅವಳ ಮನಸ್ಸು ಪಕ್ವವಾಗಲಿಲ್ಲ. ಆದ್ದರಿಂದ ಇತರ ವಸ್ತುಗಳಲ್ಲಿಯೂ ಆಸೆಯನ್ನು ಇಟ್ಟುಕೊಂಡಿರುವ ಅಪಕ್ವಭಕ್ತಳು ಎಂದು ತೀರ್ಮಾನಿಸಿದನು.

ಅವಳ ಭಕ್ತಿಗಾಗಿ ತಾನು ತೆಗೆದುಕೊಂಡು ಹೋದ ಬೆಣ್ಣೆಯಲ್ಲಿ ಸ್ವಲ್ಪಭಾಗವನ್ನು ತಿಂದನು. ಹಾಲಿನಲ್ಲಿ ಆಸೆಯನ್ನು ಇಟ್ಟುಕೊಂಡದ್ದಕ್ಕಾಗಿ ಉಳಿದ ಬೆಣ್ಣೆಯ ಭಾಗವನ್ನು ತಾನು ತಿನ್ನಲಿಲ್ಲ. ಬೆಕ್ಕುಗಳಿಗೆ ತಿನ್ನಿಸಿದನು. ದುಡ್ಡಿನಲ್ಲಿ ವಿಶೇಷವಾದ ಲೋಭವನ್ನು ಇಟ್ಟುಕೊಂಡಿರುವವರ ಧನವನ್ನು ಅಯೋಗ್ಯರಲ್ಲಿ ವಿನಿಯೋಗಿಸಿ ನಾಶಮಾಡುತ್ತಿರುವುದು ಶ್ರೀಹರಿಯ ಸ್ವಭಾವವಲ್ಲವೇ?

ಅವಳು ಹಿಂದಿರುಗಿ ಬಂದಾಗ ಮೊಸರಿನ ಗಡಿಗೆಯು ಒಡೆದಿತ್ತು. ಇದೆಲ್ಲವೂ ತನ್ನ ಮಗನ ಲೀಲೆಯೆಂದು ತಿಳಿದು. ಗಟ್ಟಿಯಾಗಿ ನಕ್ಕಳು. ಅವನನ್ನು ಹುಡುಕಿ ಆವನಿರುವ ಸ್ಥಳವನ್ನು ಕಂಡು ಹಿಡಿದಳು.ವಿಮರ್ಶದಿಂದ

ಲಭ್ಯನಲ್ಲವೇ? ಅವನ ಸಮೀಪಕ್ಕೆ ಬಂದಳು. ಒಂದು ಕೋಲನ್ನು ಕೈಯಲ್ಲಿ ಧರಿಸಿ ಅವನನ್ನು ಹೆದರಿಸಬೇಕೆಂದು ತೀರ್ಮಾನಿಸಿದಳು. ಶ್ರೀಕೃಷ್ಣದೇವನು ಇದನ್ನು ತಿಳಿದು ಮಕ್ಕಳು ತಾಯಂದಿರಿಗೆ ಹೆದರಬೇಕು ಎಂದು ತಿಳಿಸಬೇಕೆಂದು ತೀರ್ಮಾನಿಸಿದನು. ಹೆದರಿದವನಂತೆ ನಟಿಸುತ್ತಾ ಒರಳಿನ ಮೇಲ್ಭಾಗದಿಂದ ಕೆಳಗೆ ಧುಮುಕಿ ಓಡಲು ಆರಂಭಿಸಿದನು. ಯಶೋದೆಯೂ ಅವನನ್ನು ಬೆನ್ನಟ್ಟಿಕೊಂಡು ಓಡಿದಳು. ಅವಳಿಗೆ ಶ್ರೀಕೃಷ್ಣದೇವನನ್ನು ಹಿಡಿಯಲು ಸಾಧ್ಯವಾಗಲಿಲ್ಲ. ತುಂಬಾ ಆಯಾಸದಿಂದ ತನ್ನನ್ನು ಬೆನ್ನಟ್ಟಿಕೊಂಡು ಬರುತ್ತಿರುವ ತಾಯಿಯನ್ನು ನೋಡಿದನು. ಕರುಣಾಳುವಾದ ಶ್ರೀಹರಿಯು ತನ್ನ ನಡೆಯನ್ನು ಮೆಲ್ಲಗೆ ಮಾಡಿದನು. ಶ್ರೀಕೃಷ್ಣದೇವನ ಹಿಂದೆಯೇ ಬಂದಿರುವುದು ಶ್ರೀಹರಿಯ ಯಾತ್ರೆಯೆನಿಸಿತು. ಈ ಯಾತ್ರೆಯಿಂದ ಬಂದಿರುವ ಪುಣ್ಯಪ್ರಭಾವದಿಂದ ಶ್ರೀಕೃಷ್ಣದೇವನನ್ನು ಹಿಡಿದುಬಿಟ್ಟಳು. ಮಕ್ಕಳು ತಾಯಿಗೆ ವಶರಾಗಿರಬೇಕೆಂದು ತಿಳಿಸುವುದಕ್ಕಾಗಿ ತಾಯಿಯ ಕೈಯಲ್ಲಿ ಸಿಕ್ಕಿದನು.

ಶ್ರೀಕೃಷ್ಣದೇವನನ್ನು ಕೋಲಿನಿಂದ ಬೆದರಿಸಿದಳು. ಇವನನ್ನು ಸ್ಮರಿಸುವವರನ್ನೂ ಸಹ ನೋಡಿದ ಕೂಡಲೇ ಯಾರಿಗೂ ಹೆದರದಿರುವ ಯಮನೂ ಹೆದರುತ್ತಿರುವಾಗ ಇವನು ಹೆದರುವನೇ? ಆದರೂ ಭಕ್ತಪರಾಧೀನನೆಂದು ತಿಳಿಸುವುದಕ್ಕಾಗಿ ಹೆದರಿದಂತೆ ನಟಿಸಿದನು. ಶ್ರೀಕೃಷ್ಣದೇವನನ್ನು ಕಟ್ಟಬೇಕೆಂದು ತೀರ್ಮಾನಿಸಿದಳು. ಇವನನ್ನು ಕಟ್ಟಿಬಿಟ್ಟರೆ ಇವನಿಂದಾಗುವ ತಂಟೆಗಳು ಕಡಿಮೆಯಾಗುವುದಲ್ಲವೇ?

## ಶ್ರೀಕೃಷ್ಣನ ಬಂಧನ

ಕರುವನ್ನು ಕಟ್ಟುವ ಒಂದು ಹಗ್ಗವನ್ನು ತಂದಳು. ಆ ಹಗ್ಗದಿಂದ ಇವನ ಸೊಂಟವನ್ನು ಸುತ್ತಿದಳು. ಎರಡು ಅಂಗುಲಗಳಷ್ಟು ಕಡಿಮೆಯಾಯಿತು. ಇನ್ನೊಂದು ಹಗ್ಗವನ್ನು ತಂದಳು. ಅದನ್ನು ಈ ಹಗ್ಗಕ್ಕೆ ಗಂಟುಹಾಕಿದಳು. ಆಗಲೂ ಎರಡು ಅಂಗುಲಗಳಷ್ಟೇ ಕಡಿಮೆಯಾಯಿತು. ಹೀಗೆ ಮನೆಯಲ್ಲಿರುವ ಮತ್ತು ಮಿತ್ರರ ಮನೆಯಲ್ಲಿರುವ ಎಲ್ಲಾ ಹಗ್ಗಗಳನ್ನು ತಂದು ಗಂಟು ಹಾಕಿದಳು. ಆಗಲೂ ಎರಡು ಅಂಗುಲಗಳಷ್ಟೇ ಉಳಿಯಿತು. ಇದರಿಂದ ತಾನು ಯಾವ ಬಂಧನಕ್ಕೂ ಸಿಲುಕದವನೆಂದೂ ತನ್ನ ದಯೆಯಿಂದ ಸರ್ವರೂ ಸಂಸಾರವೆಂಬ ಬಂಧನದಿಂದ ಬಿಡುಗಡೆಯನ್ನು ಪಡೆಯುವರೆಂದೂ ತಿಳಿಸಿದನು. ಅನಂತಕೋಟಿ ಬ್ರಹ್ಮಾಂಡಗಳು ಶ್ರೀಕೃಷ್ಣದೇವನ ಒಂದೊಂದು ರೋಮರಂಧ್ರಗಳಲ್ಲಿ ಪ್ರವೇಶಿಸಿದರೂ ಇನ್ನೂ ಅಧಿಕವಾದ ಅವಕಾಶವು ಖಾಲಿಯಾಗಿರುತ್ತದೆ. ಇಷ್ಟು ದೊಡ್ಡ ಆಕಾರವುಳ್ಳ ಶ್ರೀಕೃಷ್ಣದೇವನನ್ನು ಕಟ್ಟಬೇಕೆಂದು ಕುಪಿತಳಾದ ಯಶೋದೆಯು ಆಶಿಸಿದಳು. ಕೋಪದಿಂದ ಮನಸ್ಸಿನಲ್ಲಿ ವಿಚಾರಶಕ್ತಿಯೇ ಇಲ್ಲದಂತಾಗುತ್ತದೆ. ಆದ್ದರಿಂದ ಶ್ರೀಕೃಷ್ಣದೇವನ ಶಕ್ತಿಯನ್ನು ಅವಳು ತಿಳಿಯದಿರುವುದು ಆಶ್ಚರ್ಯವಲ್ಲ.

ಶ್ರೀಕೃಷ್ಣದೇವನು ಮೊಸರಿನ ಗಡಿಗೆಯನ್ನು ಒಡೆದನು. ಆದ್ದರಿಂದ ಅವನನ್ನು ಶಿಕ್ಷಿಸಬೇಕೆಂದು ಯಶೋದೆಯು ತೀರ್ಮಾನಿಸಿದಳು. ಯಶೋದೆಯು ಹಾಗೆ ತೀರ್ಮಾನಿಸಿದ್ದರಲ್ಲಿ ತಪ್ಪಿಲ್ಲ. ಅವನನ್ನು ಕಟ್ಟುವುದಕ್ಕಾಗಿ ಪ್ರಯತ್ನಿಸಿದಳು. ಅದರಲ್ಲಿಯೂ ತಪ್ಪಿಲ್ಲ. ಅವನ ಭಕ್ತರ ಶಕ್ತಿಯನ್ನು ತಿಳಿದಿದ್ದರೆ ಅವಳು ಅವನನ್ನು ಕಟ್ಟಲು ಯತ್ನಿಸುವಳೇ? ಅವನ ಹೊಟ್ಟೆಯಲ್ಲಿ ಅನಂತ ಸಂಖ್ಯಾಕರಾದ ಮುಕ್ತರು ವಾಸಿಸುತ್ತಿರುವರು. ಅವನಿಗೆ

ಬಂಧನವು ಏರ್ಪಟ್ಟರೆ ಅವನ ಹೊಟ್ಟೆಯೊಳಗಿರುವ ಮುಕ್ತರಿಗೂ ಬಂಧನವು ಏರ್ಪಟ್ಟಂತಾಗುವುದು. ಅವರಿಗೆ ಬಂಧನವು ಯಾವ ಕಾರಣದಿಂದಲೂ ಇಲ್ಲ. ಅವರ ಶಕ್ತಿಯಿಂದಲೇ ಶ್ರೀಕೃಷ್ಣದೇವನಿಗೂ ಬಂಧನವು ಏರ್ಪಟ್ಟಿಲ್ಲ ಎಂದು ಹೇಳಬಹುದಲ್ಲವೇ?

ಯಶೋದೆಯು ಶ್ರೀಕೃಷ್ಣನನ್ನು ಕಟ್ಟುವುದಕ್ಕಾಗಿ ಪ್ರಯತ್ನಿಸಿದಳು. ಆಗ ಎರಡೆರಡು ಅಂಗುಲಗಳಷ್ಟು ಪ್ರದೇಶವೇ ಕಡಿಮೆಯಾಯಿತು. ಇದು " ಎರಡು ಅಂಗುಲ ತಾನೇ ಕಮ್ಮಿ ಯಾಗಿದೆ. ಇನ್ನೊಂದು ಹಗ್ಗವನ್ನು ಜೋಡಿಸಿದರೆ ಕಟ್ಟಿ ಬಿಡಬಹುದು'' ಎಂದು ಶ್ರೀಕೃಷ್ಣದೇವನನ್ನು ಕಟ್ಟುವ ವಿಷಯದಲ್ಲಿ ಆಸೆಯನ್ನು ಹೆಚ್ಚಿಸುವುದಕ್ಕೋಸ್ಕರ ಶ್ರೀಕೃಷ್ಣದೇವನು ಮಾಡಿದ್ದು. ಹೀಗೆ ಮಾಡದೆ ಒಂದು ಮೊಳ ಮುಂತಾದ ಪ್ರದೇಶಗಳಷ್ಟು ಕಡಿಮೆಯಾಗಿದ್ದರೆ'' ಅಷ್ಟು ಹಗ್ಗವನ್ನು ಎಲ್ಲಿಂದ ತರಲಿ. ಹೋಗಲಿ ಬಿಟ್ಟುಬಿಡೋಣ'' ಎಂಬ ಅಭಿಪ್ರಾಯದಿಂದ ಕಟ್ಟುವ ವಿಷಯದಲ್ಲಿ ಔದಾಸೀನ್ಯವನ್ನು ವಹಿಸಬಹುದು.

ಕಟ್ಟುವುದಾಗಿ ಪ್ರಯತ್ನಿಸಿದಾಗ ಕಟ್ಟಿಗೆ ಸಿಕ್ಕಿ ಬೀಳದಿರುವುದರಿಂದ ತನ್ನ ಈಶತ್ವ ಅಂದರೆ ವಿಚಿತ್ರಶಕ್ತಿಯನ್ನು ತಿಳಿಸಿದನು. ಹಾಗೆ ಮಾಡದೇ ಕಟ್ಟಿಗೆ ಸಿಕ್ಕಿ ಬಿದ್ದಿದ್ದರೆ ಅವನೂ ಒಬ್ಬ ಸಾಮಾನ್ಯ ಪುರುಷನೆಂದು ತಿಳಿಯಬಹುದಲ್ಲವೇ?

ಯಶೋದೆಯು ಎಷ್ಟು ಪ್ರಯತ್ನವನ್ನು ಮಾಡಿದರೂ ಶ್ರೀಕೃಷ್ಣದೇವನನ್ನು ಕಟ್ಟಲು ಶಕ್ತಳಾಗಲಿಲ್ಲ. ಶ್ರೀಕೃಷ್ಣದೇವನನ್ನು ಕಟ್ಟುವುದಕ್ಕಾಗಿ ತುಂಬಾ ಶ್ರಮವನ್ನು ವಹಿಸಿದಳು. ಅವಳ ಮೈಯಲ್ಲೆಲ್ಲಾ ಬೆವರು ಸುರಿಯಿತು. ಆಗ ಶ್ರೀಕೃಷ್ಣದೇವನು ಮಕ್ಕಳು ತಾಯಿಗೆ ವಶರಾಗಿರಬೇಕೆಂದು ಪುನಃ ತಿಳಿಸಬೇಕೆಂದು ತೀರ್ಮಾನಿಸಿದನು. ಅದೇ ಸಮಯದಲ್ಲಿ ಅವಳು "ಇವನು ನನ್ನ ಮಗನಲ್ಲ. ಸರ್ವೋತ್ತಮನಾದ ಶ್ರೀಹರಿಯೇ ಆಗಿರುವನು'' ಎಂದು ತಿಳಿದಳು ಆಗ ಅವಳು ಶ್ರೀಕೃಷ್ಣದೇವನನ್ನು ಕಟ್ಟಿಬಿಟ್ಟಳು.

ಎಲ್ಲಾ ಭಕ್ತರೂ ಭಕ್ತಿಯೆಂಬ ಹಗ್ಗದಿಂದ ಇವನನ್ನು ಕಟ್ಟಿರುವಾಗ ಮಹಾಭಕ್ತಳಾದ ಇವಳೂ ಸಾಮಾನ್ಯವಾದ ಹಗ್ಗದಿಂದ ಕಟ್ಟಿರುವುದರಲ್ಲಿ ಆಶ್ಚರ್ಯವಿಲ್ಲ. ಶ್ರೀಕೃಷ್ಣದೇವನನ್ನು ಕಟ್ಟುವುದಕ್ಕೂ ಹೆಚ್ಚು ಹಗ್ಗವು ಬೇಕಾಗಲಿಲ್ಲ. ಮೊದಲು ತೆಗೆದು ಕೊಂಡಿರುವ ಹಗ್ಗವೇ ಸಾಕಾಯಿತು. ಆ ಮೇಲೆ ಜೋಡಿಸಿದ ಎಲ್ಲಾ ಹಗ್ಗಗಳೂ ವ್ಯರ್ಥವಾದವು.

ಎತ್ತರವಾದ ಪ್ರದೇಶದಲ್ಲಿರುವ ಹಾಲನ್ನು ಒರಳಿನ ಮೇಲೆ ಏರಿ ಕದ್ದನು. ಆದ್ದರಿಂದ ಹಾಲನ್ನು ಕದಿಯುವುದಕ್ಕೆ ಒರಳೂ ಸಹಾಯ ಮಾಡಿತು. ಅದಕ್ಕಾಗಿ ಶ್ರೀಕೃಷ್ಣದೇವನ ಹೊಟ್ಟೆಯನ್ನು ಹಗ್ಗದ ಒಂದು ತುದಿಯಿಂದ ಕಟ್ಟಿದಳು. ಆ ಹಗ್ಗದ ಇನ್ನೊಂದು ತುದಿಯಿಂದ ಒರಳನ್ನು ಕಟ್ಟಿದಳು. ಇಬ್ಬರು ಅಪರಾಧಿಗಳನ್ನು ಅನ್ಯೋನ್ಯವಾಗಿ ಕಟ್ಟುವುದು ಸಹಜವಲ್ಲವೇ?

## ನಲಕೂಬರ ಮಣಿಗ್ರೀವರ ಪೂರ್ವಚರಿತ್ರೆ

ಶ್ರೀಕೃಷ್ಣದೇವನು ಒರಳನ್ನು ಎಳೆಯುತ್ತಾ ಹೊರಟನು. ನಲಕೂಬರ ಮಣಿಗ್ರೀವ ಎಂಬ ಇಬ್ಬರು ಭಕ್ತರ ಸಕಲ ದೋಷಗಳನ್ನು ಪರಿಹರಿಸಿ ಅತ್ಯಂತ ಪರಿಶುದ್ಧರಾಗುವಂತೆ ಮಾಡಬೇಕೆಂದು ಸಂಕಲ್ಪಿಸಿದನು.

ಭತ್ತದಲ್ಲಿರುವ ಹೊಟ್ಟುತೌಡು ಮುಂತಾದ ದೋಷಗಳನ್ನು ತೊಲಗಿಸಿ ಶುದ್ಧವಾದ ಅಕ್ಕಿಯನ್ನು

ತಯಾರಿಸುವುದಕ್ಕೆ ಒರಳಿನ ಅವಶ್ಯಕತೆಯಿದೆ. ಅದರಂತೆ ಭಕ್ತರ ದೋಷಗಳನ್ನೆಲಾ ಪರಿಹರಿಸಿ ಅತ್ಯಂತ ಪರಿಶುದ್ಧರಾಗುವಂತೆ ಮಾಡುವುದಾಗಿ ಪ್ರಯತ್ನಿಸುವವನಂತೆ ಶ್ರೀಕೃಷ್ಣದೇವನು ಒರಳನ್ನು ಸೆಳೆದುಕೊಂಡು ಮೆಲ್ಲಗೆ ಮುಂದೆ ಬಂದನು. ಆಗ ಅವನಿಗೆ ನಲಕೂಬರ ಮಣಿಗ್ರೀವ ಎಂಬ ಇಬ್ಬರು ಭಕ್ತರ ಜ್ಞಾಪಕ ಬಂತು.

ನಲಕೂಬರ ಮಣಿಗ್ರೀವ ಎಂಬುವರಿಬ್ಬರು ಪಾರ್ವತೀಪತಿಯಾದ ರುದ್ರದೇವರ ಪರಮಸ್ನೇಹಿತನಾದ ಕುಬೇರನ ಮಕ್ಕಳು ಮತ್ತು ರುದ್ರದೇವರ ಸೇವಕರು, ಅತ್ಯಂತ ವಿಷ್ಣುಭಕ್ತರು. ಅವರಿಬ್ಬರಿಗೂ ಪ್ರಾರಬ್ಧಕರ್ಮದಿಂದ ಸಂಪತ್ತಿನ ಮದವು ಏರ್ಪಟ್ಟಿತು. ಆ ಮದದಿಂದ ಶ್ರೀವಿಷ್ಣು ವಿನ ಪರಮಭಕ್ತರಾದ ನಾರದರನ್ನು ಅಲಕ್ಷ್ಯ ಮಾಡಿದರು.

ಅವರಿಬ್ಬರೂ ಒಮ್ಮೆ ಕೈಲಾಸ ಪರ್ವತದಲ್ಲಿರುವ ಉಪವನದಲ್ಲಿ ಗಂಗಾಸ್ನಾನವನ್ನು ಮಾಡುವುದಕ್ಕಾಗಿ ಸ್ತ್ರೀಯರಿಂದ ಸಹಿತರಾಗಿ ಹೋದರು. ಮದ್ಯವನ್ನು ಕುಡಿದರು. ಮದವು ತಲೆಗೇರಿತು. ಕಣ್ಣುಗಳು ತಿರುಗಲಾರಂಭಿಸಿದವು. ಇವರ ಸುತ್ತಲೂ ಸ್ತ್ರೀಯರು ಹಾಡಲು ಆರಂಭಿಸಿದರು. ಗಂಗಾತೀರದಲ್ಲಿ ಪುಷ್ಪಗಳಿಂದ ಶೋಭಿಸುತ್ತಿರುವ ಉಪವನಗಳಲ್ಲಿ ಬತ್ತಲೆಯರಾಗಿರುವ ಸ್ತ್ರೀಯರ ಮಧ್ಯದಲ್ಲಿ ತಾವೂ ಬತ್ತಲೆಯರಾಗಿ ಸಂಚರಿಸುತ್ತಾ ಬಂದರು. ಎರಡು ಮದಿಸಿದ ಗಂಡು ಆನೆಗಳು ಹೆಣ್ಣು ಆನೆಗಳೊಡನೆ ಉಚ್ಛೃಂಖಲವಾಗಿ ಸಂಚರಿಸುವಂತೆ ಸಂಚರಿಸುತ್ತಾ ಬಂದರು.

ಆಗ ಅಕಸ್ಮಾತ್ತಾಗಿ ಆ ಮಾರ್ಗವಾಗಿ ನಾರದರು ಬಂದರು. ಅವರನ್ನು ಆ ಸ್ತ್ರೀಯರೆಲ್ಲರೂ ದೂರದಲ್ಲಿ ನೋಡಿದರು. ಬಟ್ಟೆಯಿಲ್ಲದೆ ಹಗಲಿನಲ್ಲಿ ಸಂಚರಿಸುತ್ತಿರುವ ತಮ್ಮನ್ನು ನೋಡಿದ ನಾರದರು ಶಪಿಸುವುದಾಗಿ ಹೆದರಿದರು. ಕೂಡಲೇ ತಮ್ಮತಮ್ಮ ಸೀರೆಗಳನ್ನು ಉಟ್ಟುಕೊಂಡರು. ಆದರೆ ಈ ನಲಕೂಬರನೂ ಮಣಿಗ್ರೀವನೂ ಬಟ್ಟೆಗಳನ್ನು ಉಟ್ಟುಕೊಳ್ಳಲಿಲ್ಲ. ನಾರದರು ಇವರಿಬ್ಬರನ್ನು ಶಪಿಸಿದರು. ಇವರಿಬ್ಬರು ಸಂಪತ್ತಿನ ಮದದಿಂದ ಮದ್ಯವನ್ನು ಕುಡಿದು ಮೈಯಲ್ಲಿ ಎಚ್ಚರವಿಲ್ಲದೆ ತನ್ನ ಮುಂದೆ ಬತ್ತಲೆಯರಾಗಿ ನಿಂತಿರುವುದನ್ನು ನೋಡಿದರು. ಇವರಿಬ್ಬರ ಮೇಲೆ ಕರುಣೆಯು ಏರ್ಪಟ್ಟಿತು. ಮದವನ್ನು ಇಳಿಸಿ ಇವರಿಬ್ಬರನ್ನು ಸನ್ಮಾರ್ಗದಲ್ಲಿ ಸೇರಿಸಬೇಕೆಂದು ಸಂಕಲ್ಪಿಸಿದರು. ಅನುಗ್ರಹವನ್ನು ಮಾಡುವುದಕ್ಕಾಗಿ ಶಪಿಸಿದರು.

## ನಲಕೂಬರ ಮಣಿಗ್ರೀವರಿಗೆ ಶಾಪಲಾಭ

"ಸಂಪತ್ತಿನ ಲಾಭವು ತಲೆಗೆ ಏರಿ ಬಿಟ್ಟರೆ ಬುದ್ಧಿಯು ಕೆಡುತ್ತದೆ. ಬುದ್ಧಿಯು ಕೆಟ್ಟಾಗ ಸ್ತ್ರೀಯರಲ್ಲಿಯೂ ಮದ್ಯಾದಿ ಮೋಹಕ ಪದಾರ್ಥಗಳಲ್ಲಿಯೂ, ಆಸೆಯು ಏರ್ಪಡುತ್ತದೆ. ದೇವತೆಯಾದರೂ ಸತ್ತಮೇಲೆ ಅವನ ದೇಹವು ಸುಟ್ಟರೆ ಬೂದಿಯಾಗಿಯೂ, ಸುಡದೆ ನಾಯಿ ಮುಂತಾದ ಪ್ರಾಣಿಗಳಿಂದ ತಿನ್ನಲ್ಪಟ್ಟರೆ ಆ ಪ್ರಾಣಿಗಳ ಹೊಟ್ಟೆಯಲ್ಲಿ ಹೇಲಾಗಿಯೂ ಸುಡದೆ ಯಾವ ಪ್ರಾಣಿಗಳೂ ತಿನ್ನದೆ ಇದ್ದರೆ ಹುಳಗಳಾಗಿಯೂ ಆಗುತ್ತದೆ. ಇಂತಹ ದೇಹವನ್ನು ಶಾಶ್ವತವೆಂದು ತಿಳಿದು ಈ ದೇಹದ ತೃಪ್ತಿಗಾಗಿ ಪ್ರಾಣಿಹಿಂಸೆ ಮುಂತಾದ ಎಲ್ಲಾ ಕೆಟ್ಟ ಕೆಲಸಗಳನ್ನು ಧನಮದದಿಂದ ಯುಕ್ತರಾದವರು ಮಾಡುತ್ತಿರುವರು."

" ಹೀಗೆ ಸಂಪತ್ತಿನ ಮದದಿಂದ ಯುಕ್ತರಾದವರ ಮದವನ್ನು ಇಳಿಸುವುದಕ್ಕೆ ಮುಖ್ಯವಾದ ಸಾಧನವು ಬಡತನವೆನಿಸುತ್ತದೆ. ಬಡತನವು ಬಂದಾಗ ಕಷ್ಟಗಳು ಬರುತ್ತವೆ. ಈ ಕಷ್ಟಗಳನ್ನು ಅನುಭವಿಸುತ್ತಿರುವವನು

ಇನ್ನೊಬ್ಬರಿಗೆ ಕಷ್ಟಗಳನ್ನು ಕೊಡಲಾರನು. ಮುಳ್ಳು ಕಾಲಿಗೆ ನೆಟ್ಟು ಅದರಿಂದ ಕಷ್ಟಪಡುತ್ತಿರುವವನು ಇತರರಿಗೆ ಆ ಕಷ್ಟವನ್ನು ಬಯಸಲಾರನು. ಯಾವಾಗಲೂ ಹಸಿವಿನಿಂದ ಪೀಡಿತನಾಗಿರುವವನ ಇಂದ್ರಿಯಗಳ ಶಕ್ತಿಯು ಕ್ಷೀಣಿಸುತ್ತದೆ. ಪರಹಿಂಸೆಯೂ ತಾನಾಗಿಯೇ ಕಡಿಮೆಯಾಗುತ್ತದೆ.

" ಈ ಬಡವನಿಗೆ ಇವನಂತೆ ಬಡವರಾಗಿರುವ ಸಾಧುಗಳ ಸಹವಾಸವು ಏರ್ಪಡುತ್ತದೆ. ಶ್ರೀಹರಿಯ ಆರಾಧನೆಯಲ್ಲಿಯೂ ಆಸೆಯು ಹುಟ್ಟುತ್ತದೆ. ಧನಮದದಿಂದ ಯುಕ್ತರಾಗಿರುವವರಿಂದ ಸಾಧುಗಳಿಗೆ ಏನೂ ಆಗಬೇಕಾದ್ದಿಲ್ಲ. ಅವರನ್ನು ತಿರಸ್ಕರಿಸಿ ಶ್ರೀಹರಿಯ ಪಾದಸೇವೆಯನ್ನೇ ಬಯಸುತ್ತಿರುವ ಸಾಧುಗಳಿಗೆ ತಮ್ಮಂತೆ ಬಡವರಾಗಿದ್ದು ಶ್ರೀಹರಿಯನ್ನು ಆರಾಧಿಸುವುದಕ್ಕಾಗಿ ಹೊರಟಿರುವವರಲ್ಲಿ ಪ್ರೀತಿಯು ಏರ್ಪಡುವುದು ಸಹಜವಾಗಿದೆ.

"ನೀವಿಬ್ಬರೂ ಲೋಕಪಾಲಕನಾದ ಕುಬೇರನ ಮಕ್ಕಳು. ಮಹಾವಿಷ್ಣುಭಕ್ತನಾದ ರುದ್ರದೇವನ ಸೇವಕರು. ಇಂತಹ ನಿಮಗೆ ಸಂಪತ್ತಿನ ಮದವು ಮಿತಿಮೀರಿದೆ. ಆದ್ದರಿಂದಲೇ ಮಹಾಮದದಿಂದ ಯುಕ್ತರಾಗಿರುವ ನೀವಿಬ್ಬರೂ ನನ್ನ ಮುಂದೆ ಬತ್ತಲೆಯಾಗಿ ನಿಂತಿರುವಿರಿ. ನಿಮ್ಮನ್ನೇ ನೀವು ಮರೆತಿರುವಿರಿ. ನಿಮ್ಮ ಮದವು ಇಳಿಯಬೇಕು. ನೀವು ಯಾವಾಗಲೂ ಇಂತಹ ದುರ್ಬುದ್ಧಿಯನ್ನು ಪಡೆಯಬಾರದು. ಮರಗಳಂತೆ ಮೈಮರೆತಿರುವ ನೀವಿಬ್ಬರೂ ಮರಗಳಾಗಿ ಹುಟ್ಟಿರಿ. ಧನವಿರುವ ನಿಮಗೆ ಧನವಿಲ್ಲದ ಮರದ ಜನ್ಮವು ಬಂದರೆ ಮದವು ತಾನೇ ಇಳಿಯುತ್ತದೆ. ಮರಗಳಾಗಿ ನೀವು ಹುಟ್ಟಿದಾಗಲೂ ನನ್ನ ಅನುಗ್ರಹದಿಂದ ನಿಮ್ಮ ಹಿಂದಿನ ಎಲ್ಲಾ ವಿಷಯಗಳೂ ನಿಮಗೆ ಜ್ಞಾಪಕವಿರುತ್ತವೆ. ನೀವು ಮಾಡಿರುವ ತಪ್ಪಿಗಾಗಿ ಪಶ್ಚಾತ್ತಾಪವು ನಿಮಗೆ ಏರ್ಪಡುತ್ತದೆ. ಮೂವತ್ತಾರು ಸಾವಿರ ವರ್ಷಗಳು ಮುಗಿಯುವ ವರೆಗೆ ನೀವು ಮರಗಳಾಗಿ ವಾಸಿಸಿರಿ. ಶ್ರೀಹರಿಯು ಶ್ರೀಕೃಷ್ಣರೂಪದಿಂದ ಅವತರಿಸುವನು. ಆಗ ಅವನ ದೇಹದ ಸ್ಪರ್ಶವು ಮರಗಳಾಗಿ ಹುಟ್ಟಿರುವ ನಿಮ್ಮಿಬ್ಬರಿಗೆ ಏರ್ಪಡುತ್ತದೆ. ಆಗ ನನ್ನ ಶಾಪದಿಂದ ನಿಮ್ಮಿಬ್ಬರಿಗೂ ಬಿಡುಗಡೆಯು ಏರ್ಪಡುತ್ತದೆ. ಆಗ ನೀವು ನಿಮ್ಮಿಬ್ಬರ ದೇವತಾ ಶರೀರವನ್ನು ಪಡೆಯುವಿರಿ. ಸ್ವರ್ಗಲೋಕಕ್ಕೆ ಹಿಂದಿರುಗಿ ಬರುವಿರಿ."

## ನಲಕೂಬರ ಮಣಿಗ್ರೀವರನ್ನು ಶಾಪದಿಂದ ಬಿಡಿಸಿದ್ದು

ನಾರದರು ಶಾಪವನ್ನು ಕೊಟ್ಟು ಬದರಿಕಾಶ್ರಮಕ್ಕೆ ತೆರಳಿದರು. ನಲಕೂಬರ ಮಣಿಗ್ರೀವರು ಗೋಕುಲದ ಸಮೀಪದಲ್ಲಿ ಮತ್ತಿಯ ಮರಗಳಾಗಿ ಒಟ್ಟಿಗೆ ಹುಟ್ಟಿದರು. ಮೂವತ್ತಾರು ಸಾವಿರ ವರ್ಷಗಳು ಕಳೆದವು. ಅವರಿಬ್ಬರಿಗೆ ಶಾಪಮೋಕ್ಷಕಾಲವೂ ಬಂತು. ಆಗ ಶ್ರೀಕೃಷ್ಣದೇವನ ಹೊಟ್ಟೆಯನ್ನು ಒರಳನ್ನೂ ಸೇರಿಸಿ ಯಶೋದೆಯು ಹಗ್ಗದಿಂದ ಕಟ್ಟಿದಳು. ಆಗ ಶ್ರೀಕೃಷ್ಣದೇವನು ನಾರದರ ಮಾತನ್ನು ಸತ್ಯವಾಗುವಂತೆ ಮಾಡಬೇಕೆಂದೂ ಈ ಇಬ್ಬರು ಭಕ್ತರನ್ನು ಮರಗಳ ಜನ್ಮದಿಂದ ಬಿಡಿಸಬೇಕೆಂದೂ ಸಂಕಲ್ಪಿಸಿದನು. ಒರಳನ್ನು ಎಳೆಯುತ್ತಾ ಈ ಎರಡು ಮತ್ತಿಯ ಮರಗಳನ್ನು ಸಮೀಪಿಸಿದನು. ಈ ಮರಗಳ ಮಧ್ಯದಲ್ಲಿ ಮುಂದುವರಿದನು. ಆಗ ಶ್ರೀಕೃಷ್ಣದೇವನ ಹೊಟ್ಟೆಗೆಲ್ಲಿ ಕಟ್ಟಿದ ಒರಳು ಈ ಎರಡು ಮರಗಳ ಮಧ್ಯದಲ್ಲಿ ಸಿಕ್ಕಿಕೊಂಡಿತು. ಶ್ರೀಕೃಷ್ಣದೇವನು ಒರಳನ್ನು ನೆಳೆದನು. ಆ ಎರಡು ಮರಗಳು ಉರುಳಿ ಬಿದ್ದವು.

ವಿಚಿತ್ರಶಕ್ತಿಯಿಂದ ಯುಕ್ತನಾದ ಶ್ರೀಕೃಷ್ಣದೇವನು ಒರಳನ್ನು ಸೆಳೆಯುತ್ತಿರುವಾಗ ಒರಳಿಗೆ ಕಟ್ಟಿದ ಹಗ್ಗವು ಕಡಿದು ಹೋಗಬೇಕಾಗಿತ್ತು. ಆ ಹಗ್ಗವು ಕಡಿಯಲಿಲ್ಲ. ಕರುವನ್ನು ಕಟ್ಟುವ ಆ ಚಿಕ್ಕ ಹಗ್ಗಕ್ಕೆ ಶ್ರೀಕೃಷ್ಣದೇವನ ಅಂಗಸ್ಪರ್ಶದಿಂದ ಆಕಾಶವನ್ನು ಮುಟ್ಟುತ್ತಿರುವ ಮರಗಳನ್ನು ಉರುಳಿಸುವ ಶಕ್ತಿಯು ಬಂತು. ಆ ಒರಳಿಗೂ ಆ ಶಕ್ತಿಯು ಬಂತು. ಇದು ಆಶ್ಚರ್ಯವಲ್ಲವೇ?

# ನಲಕೂಬರ ಮಣಿಗ್ರೀವರ ಸ್ತುತಿ

ಆಗ ಆ ಎರಡು ಮರಗಳಿಂದ ದೇವತಾಶರೀರದಿಂದ ಯುಕ್ತರಾಗಿರುವ ನಲಕೂಬರನೂ ಮತ್ತು ಮಣಿಗ್ರೀವನೂ ಹೊರಗೆ ಬಂದರು. ಶ್ರೀಕೃಷ್ಣದೇವನನ್ನು ಅತ್ಯಂತ ಭಕ್ತಿಯಿಂದ ನಮಸ್ಕರಿಸಿದರು.

" ಓ ಕೃಷ್ಣದೇವ! ಶ್ರೀನಾರದರ ಅನುಗ್ರಹದಿಂದ ನಿನ್ನನ್ನು ನಾವು ನೋಡಿದೆವು. ನೀನು ಸಕಲ ಸಜ್ಜನರನ್ನು ಉದ್ಧರಿಸುವುದಕ್ಕಾಗಿ ಅವತರಿಸಿರುವಿ. ನಿನ್ನ ಗುಣಗಳನ್ನು ನಮ್ಮ ನಾಲಿಗೆಯು ಯಾವಾಗಲೂ ಹೊಗಳಲಿ. ಕಿವಿಗಳು ಕೇಳಲಿ ಕೈಗಳು ನಿನ್ನನ್ನು ಪೂಜಿಸಲಿ, ಮನಸ್ಸು ಸ್ಮರಿಸಲಿ, ಕಣ್ಣುಗಳು ನಿನ್ನನ್ನೂ ನಿನ್ನ ಭಕ್ತರನ್ನೂ ನೋಡಲಿ. ನಾವು ಹೋಗಿ ಬರುವೆವು." ಎಂದು ಹೊಗಳಿದರು.

"ನಾರದನು ನಿಮ್ಮನ್ನು ಅನುಗ್ರಹಿಸುವುದಕ್ಕಾಗಿ ಶಾಪವನ್ನು ಕೊಟ್ಟನು. ನನ್ನ ಭಕ್ತರ ದರ್ಶನವು ಯಾವಾಗಲೂ ಶ್ರೇಯಸ್ಸಿಗೆ ಕಾರಣವಾಗುತ್ತದೆ. ನಿಮಗೆ ಉತ್ತಮವಾದ ಭಕ್ತಿಯು ಹುಟ್ಟಿದೆ. ನನ್ನನ್ನು ಆರಾಧಿಸುತ್ತಾ ಮುಕ್ತರಾಗಿರಿ" ಎಂದು ಶ್ರೀಕೃಷ್ಣದೇವನು ಹೇಳಿದನು.

ಅವರಿಬ್ಬರೂ ಶ್ರೀಕೃಷ್ಣದೇವನಿಗೆ ಪ್ರದಕ್ಷಿಣಗಳನ್ನೂ ನಮಸ್ಕಾರಗಳನ್ನೂ ಪುನಃ ಪುನಃ ಮಾಡುತ್ತಾ ಅವನ ಅನುಮತಿಯನ್ನು ಪಡೆದು ತಮ್ಮ ಲೋಕಗಳಿಗೆ ಹೋದರು.

ಈ ಮರಗಳು ಉರುಳಿ ಬೀಳುವಾಗ ಏರ್ಪಟ್ಟ ಅತ್ಯಂತ ಭಯಂಕರವಾದ ಶಬ್ದವನ್ನು ಗೊಲ್ಲರೆಲ್ಲರೂ ಕೇಳಿದರು. ಅವಸರ ಅವಸರವಾಗಿ ಓಡಿ ಬಂದರು. ಪರ್ವತಾಕಾರವಾಗಿ ಬಿದ್ದಿರುವ ಮರಗಳನ್ನು ನೋಡಿದರು. ಆ ಮರಗಳ ಮಧ್ಯದಲ್ಲಿ ಆಟವಾಡುತ್ತಿರುವ ಶ್ರೀಕೃಷ್ಣದೇವನನ್ನೂ ನೋಡಿದರು. ನಂದನು ಓಡಿ ಬಂದನು. ಶ್ರೀಕೃಷ್ಣದೇವನ ಹೊಟ್ಟೆಯಲ್ಲಿ ಕಟ್ಟಿರುವ ಹಗ್ಗವನ್ನು ಬಿಚ್ಚಿದನು. ಈ ಹಗ್ಗವನ್ನು ಯಶೋದೆಯು ಕಟ್ಟಿರುವ ವಿಷಯವನ್ನು ತಿಳಿದು ಅವಳನ್ನು ಧಿಕ್ಕರಿಸಿದನು.

ಗೊಲ್ಲರೆಲ್ಲರೂ ಒಟ್ಟುಗೂಡಿದರು. ಗೋಕುಲದಲ್ಲಿ ಪೂತನೆಯು ಬಂದ ದಿನದಿಂದ ಆರಂಭಿಸಿ ಅಂದಿನ ವರೆಗೆ ಏರ್ಪಟ್ಟ ಉತ್ಪಾತಗಳೆಲ್ಲವನ್ನೂ ಒಂದೊಂದಾಗಿ ಎಣಿಸಿದರು. ಈ ಉತ್ಪಾತಗಳಿಂದ ಶ್ರೀಕೃಷ್ಣದೇವನಿಗಾಗಲೀ ಗೋಕುಲದಲ್ಲಿರುವ ಗೊಲ್ಲರಿಗಾಗಲೀ ಯಾವ ವಿಧವಾದ ಆಪತ್ತುಗಳೂ ಏರ್ಪಡದಿರುವ ವಿಷಯವನ್ನು ಕುರಿತು ಆಶ್ಚರ್ಯವನ್ನು ವ್ಯಕ್ತಪಡಿಸಿದರು.

ಈ ಮರಗಳು ಬೀಳಲು ಕಾರಣವನ್ನು ವಿಚಾರಿಸಿದರು. ಯಾರಿಗೂ ತಿಳಿಯಲಿಲ್ಲ. ಆಗ ಅಲ್ಲಿದ್ದ ಗೊಲ್ಲಬಾಲಕರು ಶ್ರೀಕೃಷ್ಣದೇವನು ಹೊಟ್ಟೆಯಲ್ಲಿ ಕಟ್ಟಿದ್ದ ಒರಳು ಈ ಮರಗಳ ಮಧ್ಯದಲ್ಲಿ ಸಿಕ್ಕಿದುದಾಗಿಯೂ,

ಆ ಒರಳನ್ನು ಶ್ರೀಕೃಷ್ಣದೇವನು ಸೆಳೆದುದಾಗಿಯೂ ಮರಗಳು ಕೆಳಗೆ ಉರುಳಿಬಿದ್ದುದಾಗಿಯೂ, ಶ್ರೀಕೃಷ್ಣದೇವನನ್ನು ಸ್ತುತಿಸುತ್ತಾ ಇಬ್ಬರು ದೇವತೆಗಳು ಹೊರಟುಹೋದುದಾಗಿಯೂ ತಿಳಿಸಿದರು. ಗೊಲ್ಲರು ಅವರ ಮಾತುಗಳನ್ನು ನಂಬಲಿಲ್ಲ. ಅನಂತ ಶಕ್ತಿಯುಳ್ಳ ಶ್ರೀಕೃಷ್ಣದೇವನ ಶಕ್ತಿಯನ್ನು ಅಲ್ಪಶಕ್ತಿಯುಳ್ಳ ಈ ಗೊಲ್ಲರು ನಂಬದಿರುವುದು ಯುಕ್ತವೇ ಆಗಿದೆ.

ಆಗ ನಂದನು ಶ್ರೀಕೃಷ್ಣದೇವನ ನಾಮಕರಣಕಾಲದಲ್ಲಿ ಶ್ರೀಗರ್ಗಾಚಾರ್ಯರು ಹೇಳಿರುವ ಶ್ರೀಕೃಷ್ಣದೇವನ ಮಹಿಮೆಗಳನ್ನು ತಿಳಿಸಿದನು. ಅದನ್ನು ಕೇಳಿದ ಗೊಲ್ಲರು ಅಂದಿನಿಂದ ಶ್ರೀಕೃಷ್ಣದೇವನನ್ನು ನಾರಾಯಣನಿಗೆ ಸಮನೆಂದು ನಂಬಿದರು.

# ವೃಂದಾವನ ಗಮನ ನಿರ್ಧಾರ

ಪುನಃ ಎಲ್ಲಾ ಗೊಲ್ಲರೂ ಆಲೋಚಿಸಿದರು. " ಈ ಸ್ಥಳದಲ್ಲಿ ಅನೇಕ ಉತ್ಪಾತಗಳು ಏರ್ಪಟ್ಟಿವೆ. ಆದರೆ ಯಾರಿಗೂ ಯಾವ ವಿಧವಾದ ಆಪತ್ತುಗಳೂ ಏರ್ಪಟ್ಟಿಲ್ಲ. ಆದರೂ ನಂಬುವಂತಿಲ್ಲ. ಆ ಉತ್ಪಾತಗಳಿಂದ ಆಪತ್ತುಗಳು ಏರ್ಪಟ್ಟರೂ ಏರ್ಪಡಬಹುದು. ಆ ಉತ್ಪಾತಗಳ ಫಲವಾಗಿ ಆಪತ್ತುಗಳು ಏರ್ಪಡುವುದಕ್ಕಿಂತ ಮುಂಚಿತವಾಗಿ ಈ ಸ್ಥಳವನ್ನು ಬಿಟ್ಟು ಬೇರೆ ಕಡೆಗಳಿಗೆ ಹೋಗಬೇಕೆಂದು ತೀರ್ಮಾನಿಸಿದರು. ಈ ತೀರ್ಮಾನವನ್ನು ಶ್ರೀಕೃಷ್ಣದೇವನೂ ಅನುಮೋದಿಸಿದನು.

**(೧೨) ನಂದಾದ್ಯೈಃ ವೃಂದಾವನಂ ಪ್ರಾಪ್ಯ - ನಂದನೇ ಮುಂತಾದಿ ಗೊಲ್ಲರೊಡನೆ ವೃಂದಾವನಕ್ಕೆ ಬಂದನು. ವೃಂದಾವನಂ ಯಿಯಾಸುಃ ಸನ್ ಬೃಹದ್ವನೇ ವೃಕಾನ್ ಬಲೇ ವ್ಯಾಘ್ರಸಮಾನ್ ಸೃಷ್ಟ್ವಾ ತೈಃ ಪೀಡಿತೈರುಪನಂದೇನ ಬೋಧಿತೈರ್ನಂದ್ಯೈರ್ನಂದಾದಿಭಿಃ ಸಕಲಕಾಮಪೂರ್ಣಂ ವೃಂದಾವನಂ ಪ್ರಾಪ್ಯ.**

ಗೋಕುಲದಲ್ಲಿ ಕೊಲ್ಲಬೇಕೆಂದು ಸಂಕಲ್ಪಿಸಿದ್ದ ದೈತ್ಯರೆಲ್ಲರನ್ನೂ ಸಂಹರಿಸಿ ಮುಗಿಯಿತು. ಅದು ಮಾತ್ರವಲ್ಲ. ಈ ಗೋಕುಲಕ್ಕೆ ಬಂದ ದೈತ್ಯರೆಲ್ಲರೂ ಸಾಯುತ್ತಿರುವುದರಿಂದ ಇಲ್ಲಿಗೆ ಯಾವ ದೈತ್ಯನು ಬರಲಾರನು. ಆದ್ದರಿಂದ ವೃಂದಾವನ ಎಂಬ ಪರಮ ರಮ್ಯವಾದ ಪ್ರದೇಶಕ್ಕೆ ಹೋಗಬೇಕೆಂದು ಶ್ರೀಕೃಷ್ಣದೇವನು ಸಂಕಲ್ಪಿಸಿದನು. ಗೊಲ್ಲರು ಮಾಡಿರುವ ತೀರ್ಮಾನವನ್ನು ಕೂಡಲೇ ನೆರವೇರಿಸುವಂತೆ ಮಾಡುವುದಕ್ಕಾಗಿ ಶ್ರೀಕೃಷ್ಣದೇವನು ಎಲ್ಲಾ ಗೊಲ್ಲರನ್ನೂ ತುಂಬಾ ಹೆದರಿಸಿದನು.

# ತೋಳಗಳನ್ನು ಸೃಷ್ಟಿಸಿ ಗೊಲ್ಲರನ್ನು ಹೆದರಿಸಿದ್ದು

ಶ್ರೀಕೃಷ್ಣದೇವನು ತನ್ನ ದೇಹದಲ್ಲಿರುವ ರೋಮಗಳ ರಂಧ್ರಗಳಿಂದ ಅಸಂಖ್ಯವಾದ ತೋಳಗಳನ್ನು ಸೃಷ್ಟಿಸಿದನು. ಆ ತೋಳಗಳೆಲ್ಲವೂ ಬಲದಲ್ಲಿ ಹುಲಿಗೆ ಸಮಾನವಾದವುಗಳು. ಆ ತೋಳಗಳೆಲ್ಲವೂ ಗುಂಪು ಗುಂಪಾಗಿ ಹೊರಟು ಬಂದು ಗೊಲ್ಲಬಾಲಕರನ್ನೂ ಗೊಲ್ಲಸ್ತ್ರೀಯರನ್ನೂ ಗೊಲ್ಲರನ್ನೂ ಸಂಹರಿಸುತ್ತಾ ಬಂದವು. ಗೋಕುಲದಲ್ಲಿರುವ ಜನಸಂಖ್ಯೆಯು ಕಮ್ಮಿಯಾಗುತ್ತಾ ಬಂತು. ಆಗ ಉಪನಂದ ಎಂಬ ಗೊಲ್ಲವೃದ್ಧನು ತಾವು ನಿರೀಕ್ಷಿಸಿದ ಉತ್ಪಾತಗಳ ಫಲವು ಬರಲು ಆರಂಭಿಸಿದೆಯೆಂದೂ ಆದ್ದರಿಂದ ಮರುದಿನದಲ್ಲಿಯೇ ವೃಂದಾವನಕ್ಕೆ

ಹೋಗಬೇಕೆಂದೂ ತಿಳಿಸಿದನು. ಮರುದಿನದಲ್ಲಿಯೇ ಸರ್ವರೂ ತಮ್ಮ ತಮ್ಮ ಸಾಮಾನುಗಳನ್ನು ಬಂಡಿಗಳಲ್ಲಿ ತುಂಬಿಸಿಕೊಂಡು ಮುದುಕರಿಂದಲೂ ತರುಣಿಯರಿದಂಲೂ ಬಾಲಕರಿಂದಲೂ ಸಹಿತರಾಗಿ ವೃಂದಾವನಕ್ಕೆ ಬಂದರು.

ಮಾರ್ಗದಲ್ಲಿ ಗೋವುಗಳ ಗೊರಸುಗಳಿಂದಲೂ ಗೊಲ್ಲರ ಕಾಲುಗಳಿಂದಲೂ ಬಂಡಿಗಳಿಂದಲೂ ಹೊರಟ ಧೂಳಿಗಳು ಸೂರ್ಯಕಿರಣಗಳನ್ನು ಮುಚ್ಚಿದವು. ಇದನ್ನು ನೋಡಿದರೆ ಪರಿಶುದ್ಧವಾದ ಈ ಧೂಳಿಗಳನ್ನು ಸೂರ್ಯದೇವನು ತಾನೇ ತನ್ನ ತಲೆಯ ಮೇಲೆ ಧರಿಸಿದಂತಿತ್ತು. ರಮಣೀಯವಾದ ಪ್ರದೇಶಗಳಲ್ಲಿ ಬೇರೆ ಬೇರೆ ಮನೆಗಳನ್ನು ಕಟ್ಟಿಕೊಂಡು ಆ ಮನೆಗಳಲ್ಲಿ ವಾಸಿಸಲು ಆರಂಭಿಸಿದರು.

ಮರಗಳು ಪುಷ್ಪಗಳಿಂದಲೂ, ಗಿಳಿಗಳು ಮಧುರವಾದ ಮಾತುಗಳಿಂದಲೂ, ಕೋಗಿಲೆಗಳು ಮಧುರವಾದ ಸ್ವರಗಳಿಂದಲೂ ನವಿಲುಗಳು ನರ್ತನ ಸೇವೆಯಿಂದಲೂ ಆನೆಗಳು ಮೆಲ್ಲಗಿರುವ ನಡೆಯಿಂದಲೂ ಪರ್ವತಗಳು ಕೆಳಗೆ ಧುಮುಕುತ್ತಿರುವ ನೀರಿನ ಹನಿಗಳಿಂದಲೂ ಜಿಂಕೆಗಳು ರಮ್ಯವಾದ ನೋಟಗಳಿಂದಲೂ ವೃಂದಾವನ ಪ್ರದೇಶವು ಮಣಿಮಯವಾದ ಮತ್ತು ಒಳ್ಳೆಯ ನೆರಳಿನಿಂದ ಯುಕ್ತವಾಗಿರುವ ಮನೆಗಳಿಂದಲೂ ಶ್ರೀಕೃಷ್ಣದೇವನನ್ನು ಸ್ವಾಗತಿಸಿದವು.

ಮಥುರೆಯಲ್ಲಿ ಹುಟ್ಟಿದವನೂ ಗೋಕುಲದಲ್ಲಿ ಕೆಲದಿನಗಳ ವರೆಗೆ ಬೆಳೆದವನೂ ಆಗಿರುವ ಶ್ರೀಕೃಷ್ಣದೇವನು ಈಗ ವೃಂದಾವನಕ್ಕೆ ಬಂದನು. ಇದರಿಂದ ಅನಂತಾಸನ ಶ್ವೇತದ್ವೀಪ ವೈಕುಂಠ ಎಂಬ ಮೂರು ಲೋಕಗಳಲ್ಲಿ ವಾಸಿಸುತ್ತಿರುವ ಶ್ರೀಹರಿಯೇ ತಾನೆಂದು ತಿಳಿಸಿದನು.

(೧೩) **ಇಹ ವೇಣುನಾದಾದಿಭಿಃ ರಮಯನ್ - ತತ್ರ ಬಲರಾಮೇಣ ವೇಣುನಾದಾದಿವ್ಯಾಪಾರೈಃ ಕ್ರೀಡನ್** - ಶ್ರೀಕೃಷ್ಣದೇವನು ಈ ವೃಂದಾವನದಲ್ಲಿ ಬಲರಾಮನೊಡನೆ ವೇಣುಗಾನ ಮುಂತಾದ ಕಾರ್ಯಗಳನ್ನು ಮಾಡುತ್ತಾ ನಾನಾವಿಧವಾಗಿ ಕ್ರೀಡಿಸಿದನು. ಆಗ ಶ್ರೀಕೃಷ್ಣದೇವನಿಗೆ ಒಂದು ವರ್ಷವು ಪೂರ್ಣವಾಯಿತು. ಆಗ ಕರುಗಳ ಗುಂಪುಗಳನ್ನು ಕಾಯುವುದಕ್ಕಾಗಿ ನಂದ ಮುಂತಾದವರು ಅವನನ್ನು ನಿಯಮಿಸಿದರು. ತನ್ನ ವಯಸ್ಸಿನ ಗೊಲ್ಲಬಾಲಕರೊಡನೆ ಪ್ರಾತಃಕಾಲದಲ್ಲಿ ಶ್ರೀಕೃಷ್ಣದೇವನು ಮನೆಯಿಂದ ಹೊರಟು ಕರುಗಳನ್ನು ಅಟ್ಟಿಕೊಂಡು ಕಾಡಿಗೆ ಹೋಗುವುದು ಕಾಡಿನಲ್ಲಿ ನಾನಾವಿಧವಾದ ಆಟಗಳನ್ನು ಆಡುವುದು ಸಂಜೆಗೆ ಕರುಗಳನ್ನು ಊರಿಗೆ ಅಟ್ಟಿಕೊಂಡು ಬರುವುದು ಮುಂತಾದ ಕಾರ್ಯಗಳನ್ನು ಮಾಡುತ್ತಾ ಗೊಲ್ಲರೆಲ್ಲರನ್ನೂ ಸಂತೋಷಪಡಿಸಿದನು.

ದೇವತೆಗಳು ಭೂಲೋಕದಲ್ಲಿ ಅವತರಿಸುವಾಗ ಅವರೆಲ್ಲರಿಗೂ ಮುಖ್ಯವಾದ ಒಂದು ಧರ್ಮವಿದೆ. ಅವರೆಲ್ಲರೂ ಅವತರಿಸಿದ ಯುಗ, ಕುಲ, ಮತ್ತು ಅವರೆಲ್ಲರ ವಯಸ್ಸು ಮುಂತಾದವುಗಳಿಗೆ ಯೋಗ್ಯವಾದ ಎಲ್ಲಾ ಕೆಲಸಗಳನ್ನೂ ಸಾಮಾನ್ಯ ವ್ಯಕ್ತಿಗಳಂತೆಯೇ ಮಾಡಬೇಕು. ತಾವು ದೇವತೆಯೆಂದು ಯಾರೂ ತಿಳಿಯಬಾರದು. ಇದು ಅವರ ಧರ್ಮವಾಗಿರುತ್ತದೆ. ಈ ಧರ್ಮವನ್ನು ತಿಳಿಸುವುದಕ್ಕಾಗಿ ಶ್ರೀಕೃಷ್ಣದೇವನೂ ತಾನು ಅವತರಿಸಿದ ದ್ವಾಪರಯುಗ ತಾನು, ತನ್ನ ಕುಲವೆಂದು ಪ್ರಕಟಿಸುತ್ತಿರುವ ಗೊಲ್ಲರ ಕುಲ, ತನ್ನ ಬಾಲ್ಯವಯಸ್ಸು ಮುಂತಾದವುಗಳಿಗೆ ಯೋಗ್ಯವಾದ ವ್ಯಾಪಾರಗಳನ್ನು ಮಾಡುತ್ತಿರುವನು. ಆದರೂ ಮಧ್ಯ ಮಧ್ಯದಲ್ಲಿ ತನ್ನಲ್ಲಿರುವ ಸರ್ವೋತ್ತಮತ್ವಾದಿಗುಣಗಳನ್ನು ತಿಳಿಸುವುದಕ್ಕಾಗಿ ಬ್ರಹ್ಮಾಂಡವನ್ನು ಬಾಯಿಯಲ್ಲಿ ತೋರಿಸುವುದು ಮುಂತಾದ ಯಾರಿಂದಲೂ ಸ್ಮರಿಸುವುದಕ್ಕೂ ಸಾಧ್ಯವಿಲ್ಲದಲೀಲೆಗಳನ್ನು ಮಾಡುತ್ತಿರುವನು.

ಹಿಂದೆ ಪೂತನಾ, ಶಕಟಾಕ್ಷ,ಧುನಿ, ಚಮು ಎಂಬ ಹೆಸರುಳ್ಳನಾಲ್ವರು ದೈತ್ಯರುಗಳು ಒಟ್ಟುಗೂಡಿ ಪಾರ್ವತೀದೇವಿಯನ್ನು ಕುರಿತು ತಪಸ್ಸನ್ನು ಮಾಡಿದರು. ಈ ನಾಲ್ಕು ಜನರನ್ನು ಬಿಟ್ಟು ತೃಣಾವರ್ತನು ಪ್ರತ್ಯೇಕವಾಗಿ ಶ್ರೀಪಾರ್ವತೀದೇವಿಯನ್ನು ಕುರಿತು ತಪಸ್ಸನ್ನು ಮಾಡಿದನು. ಇವರೆಲ್ಲರೂ. ತಾವು ಯಾರಿಂದಲೂ ಸಾಯಬಾರದು'' ಎಂಬ ವರವನ್ನು ಪಡೆದರು. ಅವರಲ್ಲಿ ಪೂತನಾ, ಶಕಟಾಕ್ಷ, ತೃಣಾವರ್ತ ಎಂಬ ಮೂವರನ್ನು ಶ್ರೀಕೃಷ್ಣದೇವನು ಹಿಂದೆಯೇ ಸಂಹರಿಸಿದನು. ಮತ್ತಿಯ ಮರಗಳ ರೂಪದಿಂದ ಹುಟ್ಟಿರುವ ನಲಕೂಬರನೊಡನೆ ಧುನಿ ಎಂಬ ದೈತ್ಯನು ಮಣಿಗ್ರೀವನೊಡನೆ ಚಮು ಎಂಬ ದೈತ್ಯನು ವಾಸಿಸುತ್ತಿದ್ದರು. ಶ್ರೀಕೃಷ್ಣದೇವನು ಮರಗಳನ್ನು ಕಿತ್ತು ಬಿಸಾಡುವಾಗ ಈ ಇಬ್ಬರು ದೈತ್ಯರು ಸತ್ತರು. ನಲಕೂಬರ ಮಣಿಗ್ರೀವ ಎಂಬ ಕುಬೇರನ ಮಕ್ಕಳು ತಮ್ಮ ಲೋಕಗಳನ್ನು ಪಡೆದರು.

## ವತ್ಸಾಸುರ ಸಂಹಾರ

ಗೊಲ್ಲಬಾಲಕರು ಕೋತಿಗಳ ರೂಪಗಳನ್ನು ಸ್ವೀಕರಿಸಿದರು. ಶ್ರೀಕೃಷ್ಣದೇವನು ಸೇತುವನ್ನು ಕಟ್ಟುವುದು ಮುಂತಾದ ಆಟಗಳನ್ನು ಆಡಿದನು. ಇದರಿಂದ ತಾನು ಹಿಂದಿನ ಅವತಾರ ಕಾಲದಲ್ಲಿ ಶ್ರೀರಾಮದೇವನ ರೂಪವನ್ನು ಧರಿಸಿರುವುದಾಗಿ ತಿಳಿಸಿದನು. ಗೊಲ್ಲಬಾಲಕರೆಲ್ಲರೂ ಗೋವುಗಳ ರೂಪವನ್ನು ಧರಿಸಿದರು. ಶ್ರೀಕೃಷ್ಣದೇವನೂ ಗೋರೂಪವನ್ನು ಧರಿಸಿದನು. ಕಲ್ಲುಗಳನ್ನು ಎತ್ತರ ಪ್ರದೇಶಗಳಿಗೆ ಬಿಸಾಡಿದನು. ಇದನ್ನು ನೋಡುವಾಗ ಕರುವಿನ ರೂಪವನ್ನು ಧರಿಸುವ ವತ್ಸಾಸುರನನ್ನು ಮೇಲೆ ಬಿಸಾಡಿ ಸಂಹರಿಸಲು ಅಭ್ಯಾಸ ಮಾಡುತ್ತಿರುವಂತಿತ್ತು.

**(೧೪) ವಿಶೇಷಾರ್ಥ - ವತ್ಸಾನ್ ಪಾನ್ ವತ್ಸರೂಪಂ ಕ್ರತುಭುಗರಿಂ ಅಥೋ ಪೋಥಯನ್ ಕರುಗಳನ್ನು ಕಾಪಾಡುತ್ತಾ ಕರುವಿನ ರೂಪದಿಂದ ಬಂದಿರುವ ದೈತ್ಯನನ್ನು ಕೊಂದನು.**

**ವಯೋಽನುಸಾರೇಣ ಬಾಲ್ಯೈಃ ಸಹ ವತ್ಸಾನ್ ಚಾರಯನ್ ಕ್ವಚಿದ್ಯಮುನಾತೀರೇ ಸ್ವಹನನಾರ್ಥಮಾಗತಂ ವತ್ಸರೂಪಧರಂ ವತ್ಸಾಸುರನಾಮಕಂ ಕಂಸಭೃತ್ಯಂ ಅಪರಪಾದಾಭ್ಯಾಂ ಸಹ ಲಾಂಗೂಲಂ ಗೃಹೀತ್ವಾ ಕಪಿತ್ಥಾಗ್ರೇ ನೀರಸ್ಯಾಧಃ ಪಾತಯಿತ್ವಾ ತಂ ಹತ್ವಾ ದೇವೈಃ ಪುಷ್ಪೈರಭಿಷಿಚ್ಯಮಾನಃ ಸರ್ವಾನತೋಷಯತ್.**

ತನ್ನ ವಯಸ್ಸನ್ನು ಅನುಸರಿಸಿ ಕರುಗಳನ್ನು ಕಾಪಾಡಲು ಆರಂಭಿಸಿದನು. ಒಂದು ದಿನ ಯಮುನಾನದೀತೀರದಲ್ಲಿ ತನ್ನನ್ನು ಕೊಲ್ಲಲು ಬಂದಿರುವ ಕರುವಿನ ರೂಪವನ್ನು ಧರಿಸಿರುವ ವತ್ಸಾಸುರ ಎಂದು ಪ್ರಸಿದ್ಧನಾದ ದೈತ್ಯನನ್ನು ಹಿಂದಿನ ಎರಡು ಕಾಲುಗಳೊಡನೆ ಬಾಲವನ್ನು ಹಿಡಿದು ಬೇಲದ ಮರದ ಮೇಲೆ ಬಿಸಾಡಿದನು. ಅವನು ಸತ್ತನು. ಸಂತುಷ್ಟರಾದ ದೇವತೆಗಳು ಶ್ರೀಕೃಷ್ಣದೇವನ ತಲೆಯ ಮೇಲೆ ಪುಷ್ಪದ ಮಳೆಯನ್ನು ಸುರಿಸಿದರು. ಸರ್ವರನ್ನೂ ಸಂತೋಷಪಡಿಸಿದನು.

**ವಿಶೇಷಾರ್ಥವಿವರಣ:-** ಶ್ರೀಕೃಷ್ಣದೇವನು ವೃಂದಾವನಕ್ಕೆ ಸೇರಿದನು. ಕಂಸನ ಭೃತ್ಯರನ್ನು ಕ್ರಮವಾಗಿ ಒಬ್ಬೊಬ್ಬರನ್ನು ಸಂಹರಿಸಬೇಕೆಂದು ನಿರೀಕ್ಷಿಸುತ್ತಿದ್ದನು. ಆಗ ಶ್ರೀಕೃಷ್ಣದೇವನು ಕರುಗಳನ್ನು ಕಾಯಲು ಆರಂಭಿಸಿದನು. ಆಗ ವತ್ಸಾಸರ ಎಂಬ ದೈತ್ಯನು ಅಲ್ಲಿಗೆ ಬಂದನು. ಅವನು ಕಂಸನ ಸೇವಕನು. ರುದ್ರದೇವನ ವರದಿಂದ ಅವಧ್ಯನಾಗಿರುವವನು. ಶ್ರೀಕೃಷ್ಣನನ್ನು ಸಂಹರಿಸಬೇಕೆಂದು ಬಂದನು. ಶ್ರೀಕೃಷ್ಣದೇವನು ಅವನನ್ನು

ಗುರುತಿಸಿ. ಅಣ್ಣನಾದ ಬಲರಾಮನಿಗೆ ತೋರಿಸಿದನು. ಅವನ ಬಾಲವನ್ನೂ ಹಿಂದಿನ ಎರಡು ಪಾದಗಳ್ಳೂ ಹಿಡಿದನು. ಅವನನ್ನುಗರಗರ ತಿರುಗಿಸಿದನು. ಆಗಲೇ ಅವನು ಸತ್ತನು. ಅವನ ದೇಹವನ್ನು ಬೇಲದ ಮರದ ಮೇಲೆ ಬೀಸಾಡಿದನು. ಅವನ ದೇಹದ ಸ್ಪರ್ಶದಿಂದ ಬೇಲದ ಮರಗಳೆಲ್ಲವೂ ಒಂದುಕ್ಕೊಂದು ತಗಲಿ ಕೆಳಗೆ ಉರುಳಿದವು. ಆ ಮರಗಳಿಂದ ಬೇಲದ ಫಲಗಳೆಲ್ಲಾ ಆ ವನದಲ್ಲಿ ಎಲ್ಲಾ ಕಡೆಗಳಲ್ಲಿ ಕೆಳಗೆ ಬಿದ್ದವು. ಅವುಗಳನ್ನು ಗೊಲ್ಲಬಾಲಕರೆಲ್ಲರೂ ನಗುತ್ತಾ ತಿಂದರು. ಶ್ರೀಕೃಷ್ಣದೇವನು ವೃಂದಾವನದಲ್ಲಿ ದೈತ್ಯರ ವಧವನ್ನು ಮಾಡುವುದಕ್ಕಾಗಿ ಆರಂಭಿಸಿದ ಈ ಶುಭಮುಹೂರ್ತವನ್ನು ಹೊಗುಳುತ್ತಾ ದೇವತೆಗಳು ಶ್ರೀಕೃಷ್ಣದೇವನ ತಲೆಯ ಮೇಲೆ ಪುಷ್ಪದ ಮಳೆಗಳನ್ನು ಸುರಿಸಿದರು.

ಶ್ರೀಕೃಷ್ಣದೇವನು ಗೊಲ್ಲರಿಗೂ ಗೋವುಗಳಿಗೂ ಯಜಮಾನನಾಗಿ ಅವತರಿಸಿರುವನು. ಆದ್ದರಿಂದ ಗೋವಿನ ರೂಪವನ್ನು ಧರಿಸಿದ ವತ್ಸಾಸುರನನ್ನು ಮೇಲೆ ಕಳುಹಿಸಿದನು. ಇದು ಗೋವುಗಳ ಯಜಮಾನನಾದುದಕ್ಕೆ ಯೋಗ್ಯವಾದ ಕೆಲಸ. ಮಹಾಕಪಟಿಯಾದ ವತ್ಸಾಸುರನು ಕೆಳಗೆ ಬಿದ್ದನು. ಇದು ಕಪಟಿಗಳಿಗೆ ಯೋಗ್ಯವಾಗಿದೆ. ಅವನು ಕೆಳಗೆ ಬೀಳುತ್ತಿರುವಾಗ ತಾನು ಮಾತ್ರ ಕೆಳಗೆ ಬೀಳಲಿಲ್ಲ. ತನ್ನ ದೇಹದ ಸ್ಪರ್ಶ ಏರ್ಪಟ್ಟ ಎಲ್ಲಾ ಮರಗಳನ್ನೂ ಬೀಳಿಸುತ್ತಾ ಆ ಮರಗಳಲ್ಲಿರುವ ಹಣ್ಣುಗಳನ್ನೂ ಉರುಳಿಸಿದನು. ಶ್ರೀಕೃಷ್ಣನನ್ನು ದ್ವೇಷಿಸುತ್ತಿರುವವರು ತಾವು ಮಾತ್ರ ಬೀಳುವುದಲ್ಲ, ತಮ್ಮನ್ನು ಆಶ್ರಯಿಸಿದವರನ್ನೂ ಕೆಳಗೆ ಬೀಳಿಸುವರು ಎಂಬ ವಿಷಯದಲ್ಲಿ ಇದೇ ಸಾಕ್ಷಿಯಾಗಿದೆ. ಇಂತಹ ಶ್ರೀಕೃಷ್ಣದೇವನು ನಮ್ಮನ್ನು ರಕ್ಷಿಸಲಿ. ॥೩॥

**ರಕ್ಷನ್ವತ್ಸಾನ್ವಯಸ್ಯೈರ್ಬಕಮಭಿನದಥೋ ತಿಗ್ಮತುಂಡೇ ಗೃಹೀತ್ವಾ**
**ಪ್ರೀತಿಂ ಕರ್ತುಂ ಸಖೀನಾಂ ಖರಮಪಿ ಬಲತೋ ಘಾತಯನ್ ಕಾಲಿಯಾಹಿಮ್ ।**
**ಉನ್ಮಥ್ಯೋದ್ವಾಸ್ಯ ಕೃಷ್ಣಾಮತಿವಿಮಲಜಲಾಂ ಯೋ ವ್ಯಧಾದ್ದಾವವಹ್ನಿಮ್**
**ಸುಪ್ತಾನಾವೃತ್ಯ ಗೋಷ್ಠೇ ಸ್ಥಿತಮಪಿಬದಸೌ ದುಷ್ಟವೃಕ್ಷಚ್ಛಿದವ್ಯಾತ್ ॥೪॥**

**ಪದಚ್ಛೇದ :-** ರಕ್ಷನ್, ವತ್ಸಾನ್, ವಯಸ್ಯೈಃ, ಬಕಂ, ಅಭಿನತ್, ಅಥೋ ತಿಗ್ಮತುಂಡೇ ಗೃಹೀತ್ವಾ, ಪ್ರೀತಿಂ, ಕರ್ತುಂ ಸಖೀನಾಂ, ಖರಂ, ಅಪಿ, ಬಲತಃ, ಘಾತಯನ್, ಕಾಲಿಯಾಹಿಂ, ಉನ್ಮಥ್ಯ, ಉದ್ವಾಸ್ಯ, ಕೃಷ್ಣಾಂ, ಅತಿವಿಮಲಜಲಾಂ, ಯಃ, ವ್ಯಧ್ಯಾತ್, ದಾವವಹ್ನಿಂ, ಸುಪ್ತಾನ್, ಆವೃತ್ಯ, ಗೋಷ್ಠೇ, ಸ್ಥಿತಂ, ಅಪಿಬತ್, ಅಸೌ, ದುಷ್ಟವೃಕ್ಷಚ್ಛಿತ್, ಅವ್ಯಾತ್.

ಅನ್ವಯ :- ಯಃ ಅಥೋ ವಯಸ್ಯೈಃ (ಸಹ) ವತ್ಸಾನ್ ರಕ್ಷನ್, ತಿಗ್ಮತುಂಡೇ (ಹಸ್ತಾಭ್ಯಾಂ) ಗೃಹೀತ್ವಾ ಬಕಂ ಅಭಿನತ್, ಸಖೀನಾಂ ಪ್ರೀತಿಂ ಕರ್ತುಂ ಬಲತಃ ಖರಮಪಿ ಘಾತಯನ್, ಕಾಲಿಯಾಹಿಂ ಉನ್ಮಥ್ಯ ಉ (ಯಮುನಾಯಾಃ) ದ್ವಾಸ್ಯ ಕೃಷ್ಣಾಂ ಅತಿವಿಮಲಜಲಾಂ ವ್ಯಧಾತ್, ಗೋಷ್ಠೇ ಸುಪ್ತಾನ್ ಆವೃತ್ಯ ಸ್ಥಿತಂ ದಾವವಹ್ನಿಂ ಅಪಿಬತ್, ದುಷ್ಟವೃಕ್ಷಚ್ಛಿತ್ (ಮಾಂ) ಅವ್ಯಾತ್.

ಅನ್ವಯಾರ್ಥ :- " ಯಃ" ಯಾವ ಶ್ರೀಕೃಷ್ಣದೇವನು "ಅಥೋ" ವತ್ಸಾಸುರನನ್ನು ಸಂಹರಿಸಿದ ಅನಂತರದಲ್ಲಿ 'ವಯಸ್ಯೈಃ (ಸಹ) " ತನ್ನ ವಯಸ್ಸಿನ ಗೊಲ್ಲಬಾಲಕರೊಡನೆ "ವತ್ಸಾನ್" ಕರುಗಳನ್ನು "ರಕ್ಷನ್" ರಕ್ಷಿಸುತ್ತಿರುವವನಾಗಿ "ತಿಗ್ಮತುಂಡೇ" ತೀಕ್ಷ್ಣವಾದ ಕೊಕ್ಕುಗಳ ಎರಡು ಭಾಗಗಳನ್ನು "(ಹಸ್ತಾಭ್ಯಾಂ)" ಎರಡು

ಕೈಗಳಿಂದ "ಗೃಹೀತ್ವಾ" ಹಿಡಿದುಕೊಂಡು "ಬಕಂ" ಬಕಪಕ್ಷಿಯ ರೂಪದಿಂದ ಯುಕ್ತನಾಗಿರುವ ದೈತ್ಯನನ್ನು "ಅಭಿನತ್" ತಿಳಿದನೋ "ಸಖೀನಾಂ" ಮಿತ್ರರಿಗೆ "ಪ್ರೀತಿಂ" ಸಂತೋಷವನ್ನು "ಕರ್ತುಂ" ಮಾಡುವುದಕ್ಕೋಸ್ಕರ "ಬಲತಃ" ಬಲರಾಮನಿದಂ "ಖರಮಪಿ" ಕತ್ತೆಯ ರೂಪದಿಂದ ಯುಕ್ತನಾಗಿರುವ ಧೇನುಕ ಎಂಬ ದೈತ್ಯನನ್ನೂ ಸಹ "ಘಾತಯನ್" ಕೊಲ್ಲಿಸಿದನೋ "ಕಾಲಿಯಾಹಿಂ" ಕಾಲಿಯ ಎಂಬ ಸರ್ಪವನ್ನು "ಉನ್ಮಥ್ಯ" ಚೆನ್ನಾಗಿ ತುಳಿದು "(ಯಮುನಾಯಾಃ)" ಯಮುನಾನದಿಯಿಂದ "ಉದ್ವಾಸ್ಯ" ಹೊರಡಿಸಿ "ಕೃಷ್ಣಾಂ" ಯಮುನೆಯನ್ನು "ಅತಿವಿಮಲಜಲಾಂ" ಅತ್ಯಂತ ನಿರ್ಮಲವಾದ ನೀರಿನಿಂದ ಸಹಿತವಾದದ್ದನ್ನಾಗಿ "ವ್ಯಧಾತ್" ಮಾಡಿದನೋ "ಗೋಷ್ಠೇ" ಗೋವುಗಳು ವಾಸಿಸುವ ಸ್ಥಳದಲ್ಲಿ "ಸುಪ್ತಾನ್" ಮಲಗಿರುವ ಗೊಲ್ಲರನ್ನೂ ಗೋವುಗಳನ್ನೂ "ಆವೃತ್ಯ" ಸುತ್ತಿಕೊಂಡು "ಸ್ಥಿತಂ" ಇದ್ದ "ದಾವವಹ್ನಿಂ" ಕಾಡ್ಗಿಚ್ಚನ್ನು "ಅಪಿಬತ್" ಕುಡಿದನೋ "ದುಷ್ಟವೃಕ್ಷಚ್ಛಿತ್" ದುಷ್ಟನಾದ ಮತ್ತು ವೃಕ್ಷರೂಪದೀಂದ ಯುಕ್ತನಾದ ದೈತ್ಯನನ್ನು ಸಂಹರಿಸಿದನೋ "ಅಸೌ" ಈ ಶ್ರೀಕೃಷ್ಣದೇವನು "ಮಾಂ" ನನ್ನನ್ನು "ಅವ್ಯಾತ್" ರಕ್ಷಿಸಲಿ.

# ಬಕಾಸುರ ಸಂಹಾರ

**(೧೫) ವಿಶೇಷಾರ್ಥ :- ಅಥೋ ವಯಸ್ಯೈಃ ಸಹ ವತ್ಸಾನ್ ರಕ್ಷನ್ ತಿಗ್ಮತುಂಡೇ (ಹಸ್ತಾಭ್ಯಾಂ) ಗೃಹೀತ್ವಾ ಬಕಂ ಅಭಿನತ್** -ಕರುಗಳನ್ನು ರಕ್ಷಿಸುತ್ತಿರುವ ಶ್ರೀಕೃಷ್ಣದೇವನು ಬಕಪಕ್ಷಿಯ ರೂಪದಿಂದ ಯುಕ್ತನಾಗಿರುವ ಬಕಾಸುರ ಎಂಬ ದೈತ್ಯನ ಕೊಕ್ಕಿನ ಮೇಲಿನ ಭಾಗವನ್ನೂ ಕೆಳಗಿನ ಭಾಗವನ್ನೂ ಎರಡು ಕೈಗಳಿಂದ ಹಿಡಿದು ಅವನನ್ನು ಸೀಳಿದನು.

**"ಕೃಷ್ಣಃ ಕದಾಚಿದ್ವಯಸ್ಯೈಃ ಸಹ ವತ್ಸಾಂಶ್ಚಾರಯನ್ ಯಮುನಾತೀರಂ ಗತ್ವಾ, ಜಲಂ ಪಾಯಯಿತ್ವಾ ತತ್ರ ಸ್ವಹನನಾರ್ಥಂ ಪ್ರಾಪ್ತಂ ಸ್ಕಂದಪ್ರಸಾದಕವಚಂ ಕಂಸಭೃತ್ಯಂ ಬಕಪಕ್ಷಿರೂಪಂ ಸ್ವಭಕ್ಷಣಾರ್ಥಂ ಮುಖಂ ವ್ಯಾದದಾನಂ ತನ್ಮುಖೇ ಪ್ರವಿಶ್ಯ ತತ್ಕಂಠಂ ದಗ್ಧ್ವಾ ತೇನ ಪುನಶ್ಛರ್ದಿತಃ ತುಂಡಂ ವಿದಾರ್ಯ ತಂ ಹತ್ವಾ."**

ಶ್ರೀಕೃಷ್ಣದೇವನು ಒಮ್ಮೆ ತನ್ನ ವಯಸ್ಸಿನ ಬಾಲಕರೊಡನೆ ಕರುಗಳನ್ನು ಕಾಯುತ್ತಾ ಯಮುನಾನದಿಯ ತೀರಕ್ಕೆ ಬಂದು. ಕರುಗಳಿಗೆ ನೀರನ್ನು ಕುಡಿಸಿದ. ಗೊಲ್ಲಬಾಲಕರೂ ನೀರನ್ನು ಕುಡಿದರು. ತಾನು ನೀರನ್ನು ಕುಡಿಯಬೇಕೆಂದು ನೀರಿನಲ್ಲಿ ಇಳಿದ ಆಗ ಅಲ್ಲಿಗೆ ಒಬ್ಬ ದೈತ್ಯನು ಬಂದ ಅವನು ಪರ್ವತದ ಶಿಖರದಂತೆ ದೊಡ್ಡ ಆಕಾರದಿಂದಲೂ ಕೊಕ್ಕರೆಯ ರೂಪದಿದಂಲೂ ಯುಕ್ತನಾಗಿದ್ದನು. ಬಕಾಸುರ ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದ ಅವನು ಪೂತನೆಯ ಸಹೋದರನು. ಷಣ್ಮುಖನನ್ನು ಸಂತೋಷಪಡಿಸಿ ತಾನು " ಯಾರಿಂದಲೂ ಸಾಯಬಾರದು" ಎಂಬ ವರವನ್ನು ಪಡೆದವನು. ಕಂಸನ ಭೃತ್ಯನಾದ. ಆ ದೈತ್ಯನು ಶ್ರೀಕೃಷ್ಣದೇವನನ್ನು ನುಂಗಬೇಕೆಂದು ಬಂದನು.

ಸಂಸಾರ ಎಂಬ ಒಂದು ಮರವಿದೆ. ಆ ಮರವನ್ನು ಶ್ರೀಹರಿಯ ಅನುಗ್ರಹದಿಂದಲೇ ಭೇದಿಸಬಹುದು. ಬೇರೆಯ ಯಾವ ವಸ್ತುವಿನಿಂದಲೂ ಭೇದಿಸಲು ಸಾಧ್ಯವಿಲ್ಲ. ಗಂಡನ ಪ್ರೇಮವು ಪತ್ನಿಯಲ್ಲಿಯೂ ಪತ್ನಿಯ ಪ್ರೇಮವು ಗಂಡನಲ್ಲಿಯೂ ಇದೆ. ಈ ರೀತಿಯಾಗಿ ಪುತ್ರಪ್ರೇಮ ಪಿತೃಪ್ರೇಮ ಮುಂತಾದ ಅನ್ಯೋನ್ಯ ಪ್ರೇಮಗಳು ಅಸಂಖ್ಯವಾಗಿವೆ, ಈ ಅನ್ಯೋನ್ಯ ಪ್ರೇಮಗಳೇ ಹಗ್ಗಗಳು. ಈ ಹಗ್ಗಗಳನ್ನು ಶ್ರೀಹರಿಯ ಭಕ್ತಿಯಿಂದಲೇ ಕತ್ತರಿಸಬೇಕು. ಬೇರೆ ಮಾರ್ಗವಿಲ್ಲ. ಈ ಪ್ರೇಮಗಳೆಂಬ ಹಗ್ಗಗಳಿಂದ ನಿರ್ಮಿಸಲ್ಪಟ್ಟ ಬಲೆಯು ಮೇಲ್ಕಂಡ ಸಂಸಾರವೆಂಬ ಮರದಲ್ಲಿ

ಸುತ್ತಲೂ ಬೀಸಲ್ಪಟ್ಟಿದೆ. ಒಬ್ಬೊಬ್ಬ ಬ್ರಹ್ಮದೇವರು ಹುಟ್ಟಿ ಮೋಕ್ಷ ಪಡೆಯುವ ವರೆಗೂ ಬ್ರಹ್ಮದೇವರಿಂದ ಆರಂಭಿಸಿ ಇರುವೆಯ ವರೆಗಿರುವ ಸಕಲ ಜೀವರೂ ಈ ಬಲೆಯಲ್ಲಿ ಸಿಕ್ಕಿಕೊಂಡಿರುವರು. ಇವರನ್ನೆಲ್ಲರನ್ನೂ ಈ ಬಲೆಯಿಂದ ವಶಪಡಿಸಿಕೊಂಡು ತಿಂದು ತೇಗುತ್ತಿರುವ ಒಬ್ಬ ಬೇಡನಿರುವನು. ಆ ಬೇಡನು ಶ್ರೀಕೃಷ್ಣನೇ ಹೊರತು ಬೇರೆ ಯಾರೂ ಅಲ್ಲ.

ಇಂತಹ ವಿಚಿತ್ರ ಬೇಡನನ್ನು ಬಕಾಸುರನು ನೋಡಿದನು. ಇವನನ್ನು ಒಂದು ಚಿಕ್ಕ ಮೀನೆಂದೂ ಆ ಮೀನನ್ನು ನುಂಗಿಬಿಡಬೇಕೆಂದೂ ತೀರ್ಮಾನಿಸಿದನು. ಅನೇಕ ಸಹಸ್ರಯೋಜನಗಳಷ್ಟು ದೊಡ್ಡ ಆಕಾರದಿಂದ ಯುಕ್ತವಾಗಿರುವ ಮೀನುಗಳನ್ನೂ ಸಹ ನುಂಗುತ್ತಿರುವ ತಿಮಿಂಗಲವನ್ನು ಸಾಮಾನ್ಯ ಮೀನೆಂದು ಭ್ರಮಿಸಿದನು. ತಿಮಿಂಗಿಲವನ್ನು ನುಂಗಬೇಕೆಂದು ಬಕಪಕ್ಷಿಯು ಸಮೀಪಿಸಿದಂತೆ ಈ ಬಕಾಸುರನು ಶ್ರೀಕೃಷ್ಣದೇವನನ್ನು ನುಂಗಬೇಕೆಂದು ಸಮೀಪಿಸಿದನು. ಬಾಯಿಯನ್ನು ತೆರೆದನು.

ನನ್ನ ನಾಲಿಗೆಯು ನಿನ್ನ ಹೆಸರುಗಳನ್ನು ಯಾವಾಗಲೂ ಹೇಳಲಿಲ್ಲವೆಂದು ತಿಳಿಸುವುದಕ್ಕಾಗಿ ಬಾಯಿಯನ್ನು ತೆರೆದು ತೋರಿಸಿದನು. ಕೃಷ್ಣಪಕ್ಷ ಅಂದರೆ ಕಪ್ಪುಬಣ್ಣದಿಂದ ಯುಕ್ತವಾದ ತನ್ನ ರೆಕ್ಕೆಗಳನ್ನು ತೋರಿಸಿದನು. ಆ ರೆಕ್ಕೆಗಳನ್ನೂ ಕಾಲುಗಳನ್ನೂ ಆಡಿಸಿದನು. ಇದರಿಂದ ತಾನು ಕೃಷ್ಣಪಕ್ಷ ಅಂದರೆ ಕೃಷ್ಣದೇವನ ಪಕ್ಷದಲ್ಲಿ ಸೇರಿದವನಲ್ಲ ಎಂದು ತಿಳಿಸಿದನು. ಭೂಮಿಯಲ್ಲಿ ಶ್ರೀಕೃಷ್ಣದೇವನು ವಾಸಿಸುತ್ತಿರುವನು. ಆದ್ದರಿಂದ "ಶ್ರೀಹರಿಯು ವಾಸಿಸುತ್ತಿರುವ ಭೂಮಿಯನ್ನು ಮುಟ್ಟಲಾರೆನು" ಎಂದು ತಿಳಿಸುವುದಕ್ಕಾಗಿ ಭೂಮಿಯಲ್ಲಿ ನಡೆದು ಬರಲಿಲ್ಲ. ರುದ್ರದೇವನಿಗೆ ವ್ಯೋಮಕೇಶ ಅಂದರೆ ಆಕಾಶವೆಂಬ ತಲೆಗೂದಲಿನಿಂದ ಯುಕ್ತನಾಗಿರುವವನು ಎಂಬ ಹೆಸರಿದೆ. ಆದ್ದರಿಂದ ವಿಷ್ಣುದ್ವೇಷಿಯೂ ರುದ್ರಭಕ್ತನೂ ಆಗಿರುವ ತಾನು ರುದ್ರದೇವನ ತಲೆಗೂದಲಾಗಿರುವ ಆಕಾಶಮಾರ್ಗದಿಂದ ಬರುವೆನು ಎಂದು ತಿಳಿಸುವುದಕ್ಕಾಗಿ ಆಕಾಶಮಾರ್ಗದಿಂದ ಹಾರಿಕೊಂಡು ವೇಗದಿಂದ ಬಂದನು.

ಶ್ರೀಕೃಷ್ಣದೇವನನ್ನು ಬಕಾಸುರನು ನುಂಗಿದನು. ಶ್ರೀಕೃಷ್ಣದೇವನು ಅವನ ಕುತ್ತಿಗೆಯ ವರೆಗೆ ಹೋದನು. ಪ್ರಳಯ ಕಾಲದ ಬೆಂಕಿಯಂತೆ ಸುಡಲು ಆರಂಭಿಸಿದನು. ಶ್ರೀಕೃಷ್ಣದೇವನನ್ನು ನುಂಗಲೂ ಸಾಧ್ಯವಿಲ್ಲದೆ ಹೊರಗೆ ಬಿಡಲೂ ಇಷ್ಟವಿಲ್ಲದೆ ಬಕಾಸುರನು ತುಂಬಾ ಕಷ್ಟಪಟ್ಟನು. ಕೊನೆಗೆ ಉರಿಯನ್ನು ತಾಳಲಾರದೆ ಶ್ರೀಕೃಷ್ಣದೇವನನ್ನು ಬಾಯಿಯಿಂದ ಹೊರಗೆ ವಾಂತಿ ಮಾಡಿದನು.

ಶ್ರೀಕೃಷ್ಣದೇವನು ಅವನ ಕುತ್ತಿಗೆಯ ವರೆಗೆ ಹೋಗಿ. ಅವನ ಹೃದಯವನ್ನು ಇಣಿಕಿ ನೋಡಿದನು. ಆ ಹೃದಯದಲ್ಲಿ ತುಂಬಿರುವ ಪಾಪರಾಶಿಗಳನ್ನೂ ನೋಡಿದನು. ಆ ಹೃದಯ ಪ್ರದೇಶಕ್ಕೆ ಹೋಗುವುದಕ್ಕೆ ಇಷ್ಟಪಡಲಿಲ್ಲ. ಅದಕ್ಕಾಗಿ ಬಕಾಸುರನು ವಾಂತಿ ಮಾಡುವಾಗ ಶ್ರೀಕೃಷ್ಣದೇವನು ತಾನೇ ಹೊರಗೆ ಬಂದನು. ಪುನಃ ಶ್ರೀಕೃಷ್ಣದೇವನನ್ನು ನುಂಗುವ ಸಾಹಸವನ್ನು ಮಾಡುವ ಧೈರ್ಯವು ಬಕಾಸುರನಿಗೆ ಏರ್ಪಡಲಿಲ್ಲ.

ತನ್ನ ಕೊಕ್ಕು ಗಳಿಂದ ಕುಕ್ಕಿ ಶ್ರೀಕೃಷ್ಣದೇವನನ್ನು ಸಂಹರಿಸಬೇಕೆಂದು ಯತ್ನಿಸಿದನು. ಆಗ ಶ್ರೀಕೃಷ್ಣದೇವನು ಒಂದು ಕೈಯಿಂದ ಕೊಕ್ಕಿನ ಕೆಳ ಭಾಗವನ್ನು ಹಿಡಿದನು. ಇನ್ನೊಂದು ಕೈಯಿಂದ ಮೇಲಿನ ಭಾಗವನ್ನು ಹಿಡಿದನು. ಹುಲ್ಲನ್ನು ಸೀಳಿದಂತೆ ಸೀಳಿದನು.

ನಿತ್ಯನರಕ ಎಂಬ ಊರಿಗೆ ಹೋಗುವುದಕ್ಕೆ ವಿಶೇಷ ಬಂಡಿಯು ಹೊರಡುತ್ತಿದೆ. ಶಕಟಾಕ್ಷ ಎಂಬ ದೈತ್ಯನೇ ಆ ಬಂಡಿಯೆನಿಸಿದನು. ಬಾಲಗ್ರಹ ಅಂದರೆ ಬಾಲಕರನ್ನು ಸಂಹರಿಸುವ ವಿಷಯದಲ್ಲಿ ಪ್ರಬಲ ಗ್ರಹದಂತಿರುವ ಪೂತನೆಯು ಬಾಲಗ್ರಹ ಅಂದರೆ ಬಾಲವನ್ನು ಹಿಡಿದು ವಾಹನಗಳನ್ನು ಓಡಿಸುತ್ತಿರುವ ಸಾರಥಿಯಾಗಿರುವಳು. ಸಕಲ ದೈತ್ಯರ ಪ್ರಾಣವಾಯುಗಳ ಸಮೂಹದಂತಿರುವ ತೃಣಾವರ್ತನೇ ಆ ಬಂಡಿಯಲ್ಲಿ ತುಂಬಿಸಿರುವ ಸಾಮಾನುಗಳು. ಬಕಾಸುರನೇ ಆ ಬಂಡಿಯ ಮೇಲೆ ಶೋಭಿಸುತ್ತಿರುವ ಧ್ವಜವೆನಿಸಿದನು. ಇವುಗಳೆಲ್ಲವೂ ತಯಾರಾಗಿವೆ. ಆ ವಾಹನಗಳಲ್ಲಿ ವತ್ಸಾಸುರ ಎಂಬ ವಾಹನವು ತಯಾರಾಗಿದೆ. ಧೇನುಕಾಸುರ ಎಂಬ ಕತ್ತೆಯೂ ಅರಿಷ್ಟಾಸುರ ಎಂಬ ಎತ್ತೂ ಕೇಶಿದೈತ್ಯ ಎಂಬ ಕುದುರೆಯೂ ಸಿದ್ಧವಾಗುತ್ತಿವೆ. ಆ ಮೂರು ವಾಹನಗಳು ಬಂದಕೂಡಲೇ ಈ ಬಂಡಿಯು ಹೊರಡುತ್ತದೆ.

ಬಕಾಸುರ ಸತ್ತನಂತರ ನರಕದಲ್ಲಿರುವ ಭಾವಿಗಳಲ್ಲಿ ಯಮಶಿಕ್ಷ ಎಂಬ ಮೀನುಗಳನ್ನು ತಿನ್ನಲು ಹೋದನು. ಬ್ರಹ್ಮಮುಂತಾದ ಎಲ್ಲಾ ದೇವತೆಗಳು ಅಲ್ಲಿಗೆ ಬಂದರು. ಶ್ರೀಕೃಷ್ಣದೇವನ ಮೇಲೆ ಪುಷ್ಪದ ಮಳೆಗಳನ್ನು ಸುರಿಸುತ್ತಾ ಅವನನ್ನು ಸ್ತುತಿಸಿದರು. ಅಂದು ಸಂಜೆ ಹಿಂದಿರುಗಿ ಬಂದ ಗೊಲ್ಲಬಾಲಕರೆಲ್ಲರೂ ವೃಂದಾವನದಲ್ಲಿರುವವರಿರೆಲ್ಲರಿಗೂ ಈ ವಿಷಯವನ್ನು ತಿಳಿಸಿದರು. ಅವರೆಲ್ಲರೂ ತುಂಬಾ ಆಶ್ಚರ್ಯದಿಂದ ಯುಕ್ತರಾದರು.

# ಧೇನುಕಾಸುರ ಸಂಹಾರ

**(೧೬) ವಿಶೇಷಾರ್ಥ :- ಸಖೀನಾಂ ಪ್ರೀತಿಂ ಕರ್ತುಂ ಖರಮಪಿ ಬಲತಃ ಘಾತಯನ್**

ಸ್ನೇಹಿತರಿಗೆ ಸಂತೋಷವನ್ನು ಕೊಡುವುದಕ್ಕಾಗಿ ಧೇನುಕ ಎಂಬ ಕತ್ತೆಯ ರೂಪವುಳ್ಳ ದೈತ್ಯನನ್ನೂ ಸಹ ಬಲರಾಮನಿಂದ ಕೊಲ್ಲಿಸಿದನು. **"ವಯೋಽನುಸಾರೇಣ ಬಲರಾಮೇಣ ವಯಸ್ಯೈಶ್ಚ ಸಹ ತತ್ರ ತತ್ರ ವನೇಷು ಗಾಶ್ಚಾರಯನ್ ಗಾರ್ದಭಸ್ವರೂಪ ಧೇನುಕಾಸುರರಕ್ಷಿತವನಸ್ಥತಾಲಫಲಭಕ್ಷಣಾರ್ಥಂ ಶ್ರೀದಾಮಪ್ರಭೃತಿಭಿಃ ಪ್ರಾರ್ಥಿತಃ ತದ್ವನಂ ಗತ್ವಾ, ಫಲಾನಿ ಭಕ್ಷಯಿತ್ವಾ, ಬಲರಾಮಕಂಪಿತತಾಲಫಲವನಶಬ್ದಂ ಶ್ರುತ್ವಾ ಕೋಪೇನಾಗತ್ಯ ಬಲರಾಮತಾಡನಾರ್ಥಮುದ್ಯುಕ್ತಂ ವಿಷ್ಣೋಃಶವರಾದನ್ಯೈರವಧ್ಯಂ ಧೇನುಕಂ ಬಲರಾಮೇಣ ಘಾತಯಿತ್ವಾ".**

ಶ್ರೀಕೃಷ್ಣದೇವನಿಗೆ ಆರನೆಯ ವರ್ಷವು ಆರಂಭಿಸಿತು. ಆಗ ಗೋವುಗಳನ್ನು ಕಾಪಾಡುವ ಕೆಲಸವನ್ನು ಕೊಟ್ಟರು. ಅಲ್ಲಲ್ಲಿ ಕಾಡುಗಳಲ್ಲಿ ಬಲರಾಮನಿಂದಲೂ ತನ್ನ ವಯಸ್ಸಿನ ಗೊಲ್ಲಬಾಲಕರಿಂದಲೂ ಸಹಿತನಾಗಿ ತನ್ನ ವಯಸ್ಸನ್ನು ಅನುಸರಿಸಿ ಗೋವುಗಳನ್ನು ಕಾಯುತ್ತಾ ಬಂದನು. ಆಗ ಶ್ರೀದಾಮ ಮುಂತಾದ ಗೊಲ್ಲಬಾಲಕರು ಧೇನುಕ ಎಂಬ ಕತ್ತೆಯ ರೂಪದಿಂದ ಯುಕ್ತನಾಗಿರುವ ದೈತ್ಯನಿಂದ ರಕ್ಷಿಸಲ್ಪಟ್ಟ ವನದಲ್ಲಿದ್ದ ತಾಲಫಲಗಳನ್ನು ಬೇಡಿದರು. ತಾಲಫಲಗಳು ಅವರಿಗೆ ಮುಖ್ಯವಲ್ಲ. ಅವರ ಸಂಹಾರವೇ ಮುಖ್ಯವಾಗಿತ್ತು ಸಜ್ಜನರಿಗೆ ಶ್ರೀಹರಿದ್ವೇಷಿಗಳನ್ನು ಕೊಲ್ಲುವುದೇ ಅತ್ಯಂತ ಪ್ರೀತಿಕರವಲ್ಲವೇ?

ಶ್ರೀಕೃಷ್ಣದೇವನು ಅವರಿಂದ ಸಹಿತನಾಗಿ ಆ ವನಕ್ಕೆ ಬಂದು ಫಲಗಳನ್ನು ತಾನು ತಿಂದು ಇತರರಿಗೂ ತಿನ್ನಿಸಿದನು. ಬಲರಾಮನು ತಾಲವೃಕ್ಷಗಳನ್ನು ಅಡಿಸಿದನು. ತಾಲಫಲಗಳೆಲ್ಲವೂ ಕೆಳಗೆ ಬಿದ್ದವು. ಫಲಗಳೆಲ್ಲವೂ ಕೆಳಗೆ ಬೀಳುತ್ತಿರುವಾಗ ಏರ್ಪಟ್ಟ ಧ್ವನಿಯನ್ನು ಧೇನುಕನು ಕೇಳಿ ಕೋಪದಿಂದ ಪರಿವಾರಸಹಿತನಾಗಿ ಬಂದನು.

ಈ ದೈತ್ಯನು ಗಣಪತಿಯ ವರದಿಂದ ಯಾರಿಂದಲೂ ಕೊಲ್ಲಲು ಅಶಕ್ಯನಾಗಿರುವನು. ಬಲರಾಮದೇವನ ರಥದಲ್ಲಿರುವ ಧ್ವಜವು ತಾಲವೃಕ್ಷವಾಗಿದೆ. ತನ್ನ ಧ್ವಜವಾದ ತಾಲವೃಕ್ಷಗಳ ವನದಲ್ಲಿ ಧೇನುಕನು ವಾಸಿಸುತ್ತಿರುವ ವಿಷಯವು ಬಲರಾಮನ ಕೋಪಕ್ಕೆ ಕಾರಣವಾಯಿತು. ಬಲರಾಮನ್ನು ಒದಿಯುವುದಕ್ಕಾಗಿ ಹಿಂದಿನ ಕಾಲುಗಳನ್ನು ಚಾಚಿದನು. ಇದು ಆ ಕಾಲುಗಳನ್ನು ಹಿಡುದು ಆ ದೈತ್ಯನನ್ನು ಸಂಹರಿಸಬೇಕೆಂದು ಸಂಕಲ್ಪಿಸಿದ ಬಲರಾಮನಿಗೆ ಅನುಕೂಲವಾಯಿತು. ಆ ಕಾಲುಗಳನ್ನು ಹಿಡಿದನು. ತಾಲವೃಕ್ಷಗಳಿಗಿಂತ ಎತ್ತರದಲ್ಲಿ ಬಿಸಾಡಿದನು. ಇದನ್ನು ನೋಡಿದರೆ ಎತ್ತರ ಪ್ರದೇಶವನ್ನು ಗುರಿಇಟ್ಟು ಕಲ್ಲನ್ನು ಬಿಸಾಡಿದಂತಿತ್ತು. ಬಿಸಾಡಿದ ವೇಗದಲ್ಲಿಯೇ ಅವನು ಸತ್ತನು. ಪರ್ವತದಂತೆ ದೊಡ್ಡದಾಗಿರುವ ಅವನ ದೇಹವು ಆಕಾಶದಲ್ಲಿ ಬಹುದೂರದ ವರೆಗೆ ಹೋಗಿ ಕೆಳಗೆ ಫಲಗಳಿಂದ ತುಂಬಿದ ತಾಲಮರಗಳ ಮೇಲೆಯೇ ಬಿತ್ತು. ವಿಷ್ಣು ದ್ವೇಷಿಯಾಗಿರುವ ಧೇನುಕನನ್ನು ರಕ್ಷಿಸಿದ ಆ ಮರಗಳು ಅವನ ದೇಹದ ಹೊಡೆತದಿಂದಲೇ ನಶಿಸಿದವು. ವಿಷ್ಣುದ್ವೇಷಿಗಳನ್ನು ಪೋಷಿಸಿದವರು ಆ ವಿಷ್ಣು ದ್ವೇಷಿಗಳಿಂದಲೇ ಸಾಯುತ್ತಿರುವುದು ಸಹಜವಲ್ಲವೇ? ಧೇನುಕನ ಪರಿವಾರದಲ್ಲಿ ಸೇರಿರುವ ಕತ್ತೆಯ ರೂಪವನ್ನು ಧರಿಸಿದ ಎಲ್ಲಾ ದೈತ್ಯರೂ ಯುದ್ಧಕ್ಕೆ ಬಂದರು. ಅವರನ್ನೆಲ್ಲರನ್ನೂ ಬಲರಾಮನು ಕೊಂದನು. ಗರ್ಗಾಚಾರ್ಯರು ಇಟ್ಟಿರುವ ಬಲರಾಮ ಎಂಬ ಹೆಸರನ್ನು ಮಹಾಬಲಿಷ್ಠನಾದ ಧೇನುಕನನ್ನೂ ಅವನ ಪರಿವಾರವನ್ನೂ ಬಲರಾಮನಿಂದ ಕೊಲ್ಲಿಸಿ ಸಾರ್ಥಕವಾಗುವಂತೆ ಶ್ರೀಕೃಷ್ಣದೇವನು ಮಾಡಿರುವನು.

## ಕಾಳಿಯಮರ್ದನ

(೧೭) **ವಿಶೇಷಾರ್ಥ:- ಕಾಲಿಯಾಹಿಂ ಉನ್ಮಥ್ಯ ಉದ್ವಾಸ್ಯ ಕೃಷ್ಣಾಂ ಅತಿವಿಮಲಜಲಾಂ ವ್ಯಧಾತ್** ಕಾಲಿಯಸರ್ಪನನ್ನು ನಿಗ್ರಹಿಸಿ ಅವನನ್ನು ಅಲ್ಲಿಂದ ಹೊರಡಿಸಿ ಯಮುನಾನದಿಯ ಜಲವನ್ನು ಅತ್ಯಂತ ಪರಿಶುದ್ಧವಾಗುವಂತೆ ಮಾಡಿದನು.

**" ಕದಾಚಿದ್ಯಮುನಾತೀರೇ ಗಾಶ್ಚಾರಯನ್, ಯಮುನಾಯಾಃ ಪ್ರವೇಶವಿಷಯೇ ವಿದ್ಯಮಾನಂ ಕಾಲಿಯಸರ್ಪವಿಷೇಣ ದೂಷಿತಂ ಜಲಂ ಪೀತ್ವಾ ಮೂರ್ಛಿತಾನ್ ಪಶೂನ್ ವಯಸ್ಯಾಂಶ್ಚ ದೃಷ್ಟ್ವಾ ಅಮೃತವರ್ಷಿಣ್ಯಾ ಸ್ವದೃಷ್ಟ್ಯಾ ತಾನ್ ಜೀವಯಿತ್ವಾ ತನ್ನಿಮಿತ್ತಂ ವಿಚಾರ್ಯ ತತ್ರತ್ಯಕದಂಬವೃಕ್ಷಮಧಿರುಹ್ಯ ಹ್ರದೇ ಉತ್ಪ್ಲುತ್ಯ ತತ್ರ ವಿದ್ಯಮಾನಂ ಕಾಲಿಯಾಹಿಂ ಪಾದಾಭ್ಯಾಂ ಮಥಿತ್ವಾ ಜೀವನಾರ್ಥಂ ಸಭಾರ್ಯೇಣ ತೇನ ಪ್ರಾರ್ಥಿತಃ, ತತ್ಕೃತಪೂಜಾಂ ಸ್ವೀಕೃತ್ಯ, ತೇನ ಸ್ತುತಃ, ಸಭಾರ್ಯಂ ಸಪರಿವಾರಂ ತಂ ರಮಣಕದ್ವೀಪಂ ಪ್ರತಿಪ್ರೇಷ್ಯ, ನಿರ್ವಿಷಜಲಾಂ ಯಮುನಾಂ ಕೃತ್ವಾ, ತೀರಂ ಪ್ರಾಪ್ಯ ಗೋಪಾದಿಭಿಃ ಸ್ತೂಯಮಾನಃ, ಗೋಕುಲೇ ಉತ್ಪಾತಾನ್ ದೃಷ್ಟ್ವಾದರ್ಶನಾರ್ಥಂ ಪ್ರಾಪ್ತಾನ್ ಮಾತ್ರಾದಿಸರ್ವಜನಾನ್ ಗೋಪಾಲಾಂಶ್ಚ ಸಂತೋಷ್ಯ, ತೈಃ ಸಹ ತಾಂ ರಾತ್ರಿಂ ತತ್ರ ನಿವಸನ್".**

ಒಮ್ಮೆ ಶ್ರೀಕೃಷ್ಣದೇವನು ಬೆಳಿಗ್ಗೆ ಎದ್ದು ಆ ದಿನದಲ್ಲಿ ಸೂರ್ಯದೇವನ ಕುಮಾರಿಯಾದ ಯಮುನಾನದಿಯಲ್ಲಿರುವ ಕಾಳಿಯನನ್ನು ಅಲ್ಲಿಂದ ಓಡಿಸಿ ಆ ನದಿಯ ಜಲವನ್ನು ವಿಷಬಾಧೆಯಿಂದ ರಹಿತವಾಗುವಂತೆ ಮಾಡಬೇಕೆಂದು ತೀರ್ಮಾನಿಸಿದನು. ಈ ವಿಷಯವನ್ನು ತಿಳಿದ ಸೂರ್ಯದೇವನು ಅತಿ ಸಂತೋಷದಿಂದ ಕೋಲಾಹಲಧ್ವನಿಯಿಂದ ಯುಕ್ತವಾಗಿರುವ ಉದಯಾಚಲದಲ್ಲಿ ಏರಿದನು.

(೧) ತನ್ನ ಭಕ್ತನಾದ ಶೇಷದೇವನ ಅವತಾರವಾಗಿರುವ ಬಲರಾಮನ ಮುಂದೆ ಶೇಷದೇವನ ಜಾತಿಯಲ್ಲಿ ಹುಟ್ಟಿರುವ ಕಾಳಿಯನ್ನು ನಿಗ್ರಹಿಸುವುದು ಶ್ರೀಕೃಷ್ಣದೇವನಿಗೆ ಇಷ್ಟವಿಲ್ಲ. (೨) ಆ ದಿನ ಗೊಲ್ಲರಿಗೆ ಅಪಾರದುಃಖವು ಏರ್ಪಡುತ್ತದೆ. ಅಂತಹ ಸಂದರ್ಭದಲ್ಲಿ ಅವರಿಗೆ ಸಮಾಧಾನವನ್ನು ಹೇಳುವುದಕ್ಕಾಗಿ ಬಲರಾಮನು ವೃಂದಾವನದಲ್ಲಿರುವ ಅವಶ್ಯಕತೆಯೂ ಇದೆ. ಈ ಎರಡು ಕಾರಣಗಳಿಂದ ಅಂದು ಬಲರಾಮನನ್ನು ತನ್ನ ಜೊತೆಯಲ್ಲಿ ಕರೆದುಕೊಳ್ಳದೆ ಶ್ರೀಕೃಷ್ಣದೇವನೇ ತನ್ನ ವಯಸ್ಸಿನ ಗೊಲ್ಲ ಬಾಲಕರೊಡನೆ ಗೋವುಗಳನ್ನು ಹೊರಡಿಸಿಕೊಂಡು ಕಾಡಿಗೆ ಹೋದನು.

ಯಮುನಾನದಿಯಲ್ಲಿ ಇಳಿದು ಸ್ನಾನ ಜಲಪಾನ ಮುಂತಾದವುಗಳನ್ನು ಮಾಡುವ ಸ್ಥಳದಲ್ಲಿ ಕಾಳಿಯ ಎಂಬ ಸರ್ಪರಾಜನು ಬಹುಕಾಲದಿಂದ ವಾಸಿಸುತ್ತಿದ್ದನು. ಅವನಿಗೆ ಬ್ರಹ್ಮದೇವನ ವರವಿತ್ತು. ಆ ವರದಿಂದ ಅವನ ವಿಷವನ್ನು ಸಹಿಸುವ ಶಕ್ತಿಯು ಗರುಡದೇವನಿಗೆ ಒಬ್ಬನಿಗೆ ಮಾತ್ರ ಇತ್ತು. ಗರುಡದೇವನನ್ನು ಬಿಟ್ಟು ಇತರರಿಗೆ ಯಾರಿಗೂ ಇರಲಿಲ್ಲ. ಅದೇ ವರದಿಂದ ಅವನನ್ನು ಕೊಲ್ಲುವ ಶಕ್ತಿಯು ಯಾರಿಗೂ ಇರಲಿಲ್ಲ. ಅವನ ವಿಷದಿಂದ ಯಮುನಾನದಿಯಲ್ಲಿ ಅವನು ವಾಸಿಸುತ್ತಿರುವ ಸ್ಥಳದಲ್ಲಿರುವ ಜಲವೆಲ್ಲವೂ ದೂಷಿತವಾಗಿತ್ತು. ಗೊಲ್ಲಬಾಲಕರೂ ಗೋವುಗಳೂ ತುಂಬಾ ನೀರಡಿಕೆಯಿಂದ ಯುಕ್ತರಾಗಿ ಈ ನೀರನ್ನು ಕುಡಿದರು. ಆ ವಿಷಜಲದ ಪಾನದಿಂದ ಸರ್ವರೂ ಮೃತರಾದರು. ಶ್ರೀಕೃಷ್ಣದೇವನು ಅವರೆಲ್ಲರನ್ನೂ ಅಮೃತಮಯವಾದ ತನ್ನ ದೃಷ್ಟಿಯಿಂದ ನೋಡಿ ಬದುಕಿಸಿದನು.

ಇನ್ನು ಮುಂದೆ ಯಾರಿಗೂ ಈ ವಿಷಜಲಪಾನವನ್ನು ಮಾಡುವ ಸಂದರ್ಭವೇ ಏರ್ಪಡಬಾರದೆಂದು ಶ್ರೀಕೃಷ್ಣದೇವನು ತೀರ್ಮಾನಿಸಿ ಅದಕ್ಕಾಗಿ ಈ ಆ ಕಾಲಿಯನನ್ನು ಯಮುನೆಯಿಂದ ಓಡಿಸಬೇಕೆಂದು ತೀರ್ಮಾನಿಸಿದನು. ಯಮುನಾನದಿಯ ತೀರದಲ್ಲಿರುವ ಮತ್ತಿಯ ಮರದಲ್ಲಿ ಏರಿದನು." ಈ ಕಾಳಿಯನು ಪಾತಾಳಲೋಕಕ್ಕೆ ಹೋದರೂ ನಿಗ್ರಹಿಸದೆ ಬಿಡಲಾರೆನು" ಎಂದು ತಿಳಿಸುವುದಕ್ಕಾಗಿ ಆ ಮತ್ತಿಯ ಮರದಿಂದ ಬಹಳ ಎತ್ತರ ಪ್ರದೇಶದಿಂದ ಭುಜಗಳನ್ನು ತಟ್ಟುತ್ತಾ ಧುಮುಕಿದನು. ಎತ್ತರದಿಂದ ಧುಮುಕಿದವನು ನೀರಿನಲ್ಲಿ ಬಹಳ ಆಳದ ವರೆಗೆ ಹೋಗುವುದು ಸಹಜವಲ್ಲವೇ? ಅನಂತಶಕ್ತಿಯಿಂದಲೂ ಅಪಾರ ಭಾರದಿಂದಲೂ ಯುಕ್ತನಾದ ಶ್ರೀಕೃಷ್ಣದೇವನು ಬಹಳ ಎತ್ತರದಿಂದ ನೀರಿನಲ್ಲಿ ಹಾರಿದಾಗ ಯಮುನಾನದಿಯ ಜಲವು ನಾಲ್ಕುದಿಕ್ಕುಗಳಲ್ಲಿಯೂ ನೂರು ಧನುಸ್ಸುಗಳಷ್ಟು ಎತ್ತರದ ವರೆಗೆ ಹಾರಿತು. ಅನಂತಬಲವುಳ್ಳ ಶ್ರೀಕೃಷ್ಣದೇವನು ಹಾರಿದಾಗ ಅಷ್ಟೇಎತ್ತರದ ವರೆಗೆ ನೀರು ಹಾರಿರುವುದು ಆಶ್ಚರ್ಯವಲ್ಲ.

(೧) ಶ್ರೀಕೃಷ್ಣದೇವನು ಹಾರುವುದಕ್ಕಿಂತ ಪೂರ್ವದಲ್ಲಿ ಶ್ರೀಕೃಷ್ಣದೇವನಿರುವ ಸ್ಥಳವನ್ನು ದಾಟಿ ಮುಂದೆ ಹೋದ ಯಮಮುನಾಜಲಕ್ಕೆ ಶ್ರೀಕೃಷ್ಣದೇವನ ಅಂಗಸಂಗವು ಏರ್ಪಡಲಿಲ್ಲ. ತನಗಿಂತ ಹಿಂದಿರುವ ನೀರಿಗೆ ಆ ಭಾಗ್ಯವು ಏರ್ಪಟ್ಟಿತು. ಅದಕ್ಕಾಗಿ ದುಃಖಿತವಾದ ಮುಂದೆ ಹೋದ ನೀರು ಹಿಂದಿರುಗಿತೆಂದೂ ತನ್ನ ಪ್ರವಾಹಗಳೆಂಬ ಕೈಗಳಿಂದ ಶ್ರೀಕೃಷ್ಣದೇವನನ್ನು ತಬ್ಬಿಕೊಂಡಿತೆಂದೂ ಹೇಳಬಹುದು. (೨) ಯಮುನಾನದಿಯತೀರದಲ್ಲಿರುವ ಶ್ರೀಕೃಷ್ಣದೇವನ ಹೆಜ್ಜೆಯ ಗುರುತುಗಳನ್ನು ಯಮುನೆಯು ತನ್ನ ಎದೆಯಲ್ಲಿ ಧರಿಸಬೇಕೆಂದು ತೀರ್ಮಾನಿಸಿದಳು. ಅದಕ್ಕಾಗಿ ಅಷ್ಟರವರೆಗೆ ಉಕ್ಕಿಬಂದಳು. (೩) ಯಮುನೆಯ ನೀರಿನೊಡನೆ ಪ್ರೇಮಜಲವೂ ಸೇರಿ ಯಮುನೆಯ

ನೀರು ಹೆಚ್ಚಾಗಿರಬಹುದು. (೪) ಜಗದ್ವಂದ್ಯನಾಗಿರುವ ಶ್ರೀಕೃಷ್ಣದೇವನು ತನ್ನ ಕಾಲಿನಲ್ಲಿ ಬಿದ್ದು ತನ್ನನ್ನು ಗೌರವಿಸಿದಾಗ ಸಂತೋಷವು ಹೆಚ್ಚಾಗಿ ಯಮುನೆಯು ಉಕ್ಕಿ ಬರುವುದರಲ್ಲಿ ಆಶ್ಚರ್ಯವೇನಿದೆ? (೫) ಅತ್ಯಂತ ಪತಿಭಕ್ತಿಯಿಂದ ಯುಕ್ತಳಾದ ಯಮುನೆಗೆ ತನ್ನ ಪ್ರಾಣಕಾಂತನಾದ ಶ್ರೀಕೃಷ್ಣದೇವನ ಆಲಿಂಗನವು ಏರ್ಪಟ್ಟಿತು. ಈ ಕಾರಣಗಳಿಂದ ಯಮುನೆಯಲ್ಲಿ ನೀರಿನ ವೃದ್ಧಿಯು ಏರ್ಪಟ್ಟಿತು.

ಶ್ರೀಕೃಷ್ಣದೇವನು ಯಮುನೆಯ ಜಲವನ್ನು ಪಾತಾಳದಿಂದ ಮೇಲಿನ ವರೆಗೆ ಕದಡಿಸಿದನು. ಕಾಳಿಯನು ಶ್ರೀಕೃಷ್ಣದೇವನ ಪ್ರಭಾವವನ್ನು ತಿಳಿಯಲಿಲ್ಲ. ಕಿವಿಯೇ ಇಲ್ಲದಿರುವ ಸರ್ಪರಾಜನು ರಮಾದೇವಿಯರಿಂದ ಶ್ರುತಿಗಳಿಂದ ಹೊಗಳಲ್ಪಡುತ್ತಿರುವ ಶ್ರೀಕೃಷ್ಣದೇವನ ಪ್ರಭಾವವನ್ನು ತಿಳಿಯದಿರುವುದು ಆಶ್ಚರ್ಯವಿಲ್ಲ. ಶ್ರೀಕೃಷ್ಣದೇವನನ್ನು ನಿಗ್ರಹಿಸಬೇಕೆಂದು ಸಂಕಲ್ಪಿಸಿ ತನ್ನ ದೇಹದಿಂದ ಬಿಗಿದನು. ಗೋಪಾಲಕರೂ ಗೋವುಗಳೂ ಇದನ್ನು ನೋಡಿ ತುಂಬಾ ದುಃಖವನ್ನು ಪಡೆದವು.

ಆ ಕಾಲದಲ್ಲಿ ವೃಂದಾವನದಲ್ಲಿ ನಾನಾವಿಧವಾದ ಉತ್ಪಾತಗಳು ಏರ್ಪಟ್ಟವು. ಇದನ್ನು ನೋಡಿದ ಗೊಲ್ಲರಿಗೂ ತುಂಬಾ ದುಃಖವು ಏರ್ಪಟ್ಟಿತು. ಆ ದುಃಖದಿಂದ ಎಲ್ಲಾ ಗೋಪಾಲಕರೂ ಬಲರಾಮನನ್ನು ಮುಂದಿಟ್ಟುಕೊಂಡು ಶ್ರೀಕೃಷ್ಣದೇವನ ಕಾಲಿನ ಹೆಜ್ಜೆಗಳ ಗುರುತುಗಳಿಂದ ಅವನ ಮಾರ್ಗವನ್ನು ತಿಳಿಯುತ್ತಾ ಯಮುನಾನದಿತೀರಕ್ಕೆ ಬಂದು ಸೇರಿದರು.

ಮುಕ್ತಿಗೆ ಹೊಗಬೇಕಾದರೆ ಎರಡು ಮಾರ್ಗಗಳಿವೆ. ಕೆಲವರು ಶೇಷದೇವರನ್ನೂ ಮತ್ತೆ ಕೆಲವರು ಗರುಡದೇವರನ್ನೂ ಮುಂದಿಟ್ಟುಕೊಂಡು ಬ್ರಹ್ಮದೇವರಲ್ಲಿ ಹೋಗಿ ಅವರ ಅನುಗ್ರಹದಿಂದ ಮುಕ್ತಿಯನ್ನು ಪಡೆಯುವುದುಂಟು. ಬಲರಾಮನು ಶೇಷದೇವನ ಅವತಾರವಾಗಿರುವನು. ಬಲರಾಮನನ್ನು ಮುಂದಿಟ್ಟುಕೊಂಡು ಶ್ರೀಕೃಷ್ಣದೇವನ ಸನ್ನಿಧಾನಕ್ಕೆ ಬಂದಿರುವ ಗೊಲ್ಲರೆಲ್ಲರೂ ಶೇಷಮಾರ್ಗದಿಂದ ಮುಕ್ತಿಯನ್ನು ಪಡೆದಂತಾಯಿತು.

ತನ್ನನ್ನು ಹುಡುಕಿಕೊಂಡು ಬಂದಿರುವ ಈ ಗೊಲ್ಲರೆಲ್ಲರನ್ನೂ ಶ್ರೀಕೃಷ್ಣದೇವನು ನೋಡಿದನು. ಜ್ಞಾನಿಪ್ರಿಯನಾದ ಶ್ರೀಕೃಷ್ಣದೇವನಿಗೆ ಸಂತೋಷವು ಉಕ್ಕಿಬಂತು. ಕುಣಿಯಬೇಕೆಂದು ಸಂಕಲ್ಪಿಸಿದನು. ಆಗ ಯಶೋದೆ ಮುಂತಾದವರು ಕಾಳಿಯನ ದೇಹದ ಮಧ್ಯದಲ್ಲಿ ಸಿಕ್ಕಿಕೊಂಡಂತೆ ನಟಿಸುತ್ತಿರುವ ಶ್ರೀಕೃಷ್ಣದೇವನನ್ನು ನೋಡಿದರು. ತಾವೆಲ್ಲರೂ ಯಮುನಾನದಿಯಲ್ಲಿ ಇಳಿದು ಪ್ರಾಣವನ್ನು ಬಿಡುವುದಾಗಿ ತೀರ್ಮಾನಿಸಿದರು. ಯಮುನಾನದಿಯಲ್ಲಿ ಇಳಿದುಬಿಟ್ಟರು.

ಶ್ರೀಕೃಷ್ಣನು ಇವರೆಲ್ಲರಿಗೂ ತನ್ನಲ್ಲಿರುವ ಭಕ್ತಿಯನ್ನು ತಿಳಿದನು. ಇವರನ್ನು ದುಃಖಪಡಿಸಬಾರದೆಂದು ನಿಶ್ಚಯಿಸಿದನು. ಒಮ್ಮೆ ತನ್ನ ದೇಹವನ್ನು ದೊಡ್ಡದಾಗಿ ಮಾಡಿಕೊಂಡನು. ಆಗ ಏರ್ಪಟ್ಟ ನೋವನ್ನು ಸಹಿಸಲಾರದೆ ಕಾಳಿಯನು ತನ್ನ ದೇಹವನ್ನು ಸಡಲಿಸಿದನು. ಇನ್ನೊಮ್ಮೆ ಚಿಕ್ಕರೂಪವನ್ನು ತಾಳಿದನು. ಆಗ ಕಾಳಿಯನ ದೇಹದ ಬಂಧನವು ಜಾರಿಹೋಯಿತು. ಶ್ರೀಕೃಷ್ಣದೇವನು ಕಾಳಿಯನ ದೇಹದ ಬಂಧನದಿಂದ ಬಿಡಿಸಿಕೊಂಡನು.

ಕಾಲಿಯನ ಹೆಡೆಯ ಮೇಲೆ ಏರಿ ನಿಂತು ಕುಣಿಯಲು ಆರಂಭಿಸಿದನು. ಮಿತ್ರರು ಬಂದಾಗ ಯಾರು ಕುಣಿಯುವುದಿಲ್ಲ? ಮಿತ್ರರಾದ ಎಲ್ಲಾ ಗೋಪಾಲಕರು ಬಂದಾಗ ಅವರ ಮಧ್ಯದಲ್ಲಿ ಕಾಳಿಯನ ಹೆಡೆಯ ಮೇಲೆ

ಕುಣಿದನು. ಲೋಕವಂದ್ಯನಾದ ಶ್ರೀಕೃಷ್ಣದೇವನ ಕಾಲು ಗರುಡದೇವನಿಂದ ಪೂಜ್ಯವಾದುದು. ಕಾಳಿಯನ ವಿಷವು ಅಡಗಬೇಕಾದರೆ ಸಕಲ ವಿಷಪರಿಹಾರಕನಾದ ಗರುಡನಿಂದಲೇ ಸಾಧ್ಯ. ಗರುಡದೇವನಿಂದ ಪೂಜ್ಯವಾದ ಶ್ರೀಕೃಷ್ಣದೇವನ ಪಾದಗಳಿಗೆ ಆ ಶಕ್ತಿಯಿಲ್ಲವೆ? ಆ ಪಾದಗಳಿಂದ ಹೆಡೆಗಳ ಮೇಲೆ ನರ್ತನ ಮಾಡುತ್ತಾ ಕಾಳಿಯನ ವಿಷವನ್ನು ಕಾರಿಸಿದನು. ಕಾಳಿಯನ ಹೆಡೆಯ ಮೇಲೆ ಕಾಲನ್ನಿಟ್ಟನು. ಅದರಿಂದ ಅವನ ಬಾಯಿಯು ಕೆಳಮುಖವಾಯಿತು. ಬಾಲವೆಲ್ಲವೂ ಮೇಲ್ಮುಖವಾಯಿತು. ವಿಷವನ್ನು ಕಾರಿಸುವುದಕ್ಕೆ ಬಾಯಿಯು ಕೆಳಮುಖವಾಗಿರುವುದೂ ಬಾಲವು ಮೇಲ್ಮುಖವಾಗಿರುವುದೂ ನ್ಯಾಯವಲ್ಲವೇ?

ಕಾಳಿಯನನ್ನು ನಿಗ್ರಹಿಸುತ್ತಿರುವಾಗಲೂ ವಿಷದೂಷಿತವಾದ ಮುಖವನ್ನು ಪೀಡಿಸಿದನು ಶ್ರೀಕೃಷ್ಣದೇವನನ್ನು ಕಡಿಯುವುದಕ್ಕಾಗಿ ಪ್ರಯತ್ನಿಸಿದ ಮುಖವನ್ನು ಪೀಡಿಸುವುದು ನ್ಯಾಯವಲ್ಲವೇ? ಬಾಲವು ಶ್ರೀಕೃಷ್ಣದೇವನಿಗಾಗಲೀ ಇತರರಿಗಾಗಲೀ ಯಾವ ಅಪರಾಧವನ್ನು ಮಾಡಲಿಲ್ಲ. ಆ ಬಾಲವನ್ನು ಕೈಯಿಂದ ಸವರಿದನು. ಆರ್ತಬಂಧುವಾದ ಶ್ರೀಕೃಷ್ಣದೇವನು ನಿರಪರಾಧಿಯನ್ನು ಅನುಗ್ರಹಿಸುವುದೂ ಅವನ ಸ್ವಭಾವ. ಕಾಳಿಯನು ನಿಗ್ರಹಿಸುತ್ತಿರುವಾಗಲೂ ಅವನನ್ನು ಕೈಗಳಿಂದ ಮುಟ್ಟುತ್ತಾ ಅನುಗ್ರಹಿಸಿದನು. ತನ್ನ ಭಕ್ತರನ್ನು ನಿಗ್ರಹಿಸುತ್ತಿರುವುದೂ ಪರಂಪರೆಯಿಂದ ಅನುಗ್ರಹಿಸುವುದಕ್ಕಾಗಿಯೇ ಎಂದು ಇದರಿಂದ ತಿಳಿಸಿದನು.

ಶ್ರೀಕೃಷ್ಣದೇವನು ನರ್ತನವನ್ನು ಮಾಡುತ್ತಿರುವಾಗ ಅವನ ಭೃತ್ಯರಾಗಿರುವ ಬ್ರಹ್ಮದೇವ ಮುಂತಾದ ಎಲ್ಲಾ ದೇವತೆಗಳೂ ಅವನ ಸುತ್ತಲೂ ನಿಂತುಕೊಂಡು ಅವನನ್ನು ಸ್ತುತಿಸಿದರು. ಇದನ್ನು ನೋಡಿದ ಕಾಳಿಯನಿಗೆ ಶ್ರೀಕೃಷ್ಣದೇವನ ವಿಷಯದಲ್ಲಿದ್ದ ಅಜ್ಞಾನವನ್ನೆಲ್ಲಾ ಆ ಬ್ರಹ್ಮಾದಿದೇವತೆಗಳು ಪರಿಹರಿಸಿದರು.

ಬ್ರಹ್ಮದೇವರು ಮೃದಂಗವನ್ನು ಬಾರಿಸಿದರು. ಶ್ರೀಹನುಮಂತದೇವರು ಹಾಡಿದರು. ರುದ್ರದೇವರು ತಾಳವನ್ನು ಹಾಕಿದರು. ಶ್ರೀಕೃಷ್ಣದೇವನು ನರ್ತಿಸಿದನು. ಕಾಲಿಯನು ನೋವನ್ನೂ ಶ್ರೀಕೃಷ್ಣದೇವನ ದೇಹದ ಭಾರವನ್ನೂ ಸಹಿಸಲಾರದೆ ಮೂರ್ಛಿತನಾದನು. ಆಗ ಕಾಳಿಯನ ಪತ್ನಿಯರೆಲ್ಲರೂ ಬಂದು. ಶ್ರೀಕೃಷ್ಣದೇವನನ್ನು ನಮಸ್ಕರಿಸಿದರು.

"ಮಹಾಪ್ರಭೋ! ನೀನು ದುಷ್ಟರನ್ನು ನಿಗ್ರಹಿಸುವುದಕ್ಕಾಗಿಯೂ ಶಿಷ್ಟರನ್ನು ಅನುಗ್ರಹಿಸುವುದಕ್ಕಾಗಿಯೂ ಅವತರಿಸಿದವನು. ನಮ್ಮ ಪತಿಯು ನಿನಗೆ ಅಪರಾಧವನ್ನು ಮಾಡಿರುವುದರಿಂದ ಅವನನ್ನು ನಿಗ್ರಹಿಸಿದ್ದು ನ್ಯಾಯವಾಗಿದೆ. ಆದರೆ ನಿನ್ನ ದೇಹದ ಭಾರವನ್ನು ಸಹಿಸಲಾರದೆ ದೇಹವನ್ನು ತ್ಯಜಿಸುವ ಕಾಲವು ಬಂದಿದೆ. ನೀನು ನಮ್ಮ ಪತಿಯನ್ನು ನಿಗ್ರಹಿಸುತ್ತಾ ಪರಮಾನುಗ್ರಹವನ್ನು ಮಾಡಿರುವಿ. ಅವರನ್ನು ಶಿಕ್ಷಿಸಿ ಪುನಃ ಅವರಿಗೆ ಗರ್ವವು ಬಾರದಂತೆ ಮಾಡಿರುವಿ. ನೀನು ಕೋಪಿಸುವುದೂ ಅನುಗ್ರಹಕ್ಕೆ ಸಮವೆಂದು ತಿಳಿಸಿರುವಿ. ನೀನು ನಮ್ಮ ಪತಿಯಲ್ಲಿ ಅನುಗ್ರಹವನ್ನು ಮಾಡಿರುವುದರಿಂದ ನಮ್ಮ ಪತಿಯು ಎಷ್ಟು ಪುಣ್ಯವನ್ನು ಮಾಡಿರುವರೋ ತಿಳಿಯದು. ನಿನ್ನ ಪಾದದ ಧೂಳಿಯನ್ನು ಲಕ್ಷ್ಮೀದೇವಿಯರೇ ಮೊದಲಾದವರು ಶಿರಸ್ಸಿನಲ್ಲಿ ಧರಿಸುವುದಕ್ಕಾಗಿ ಬಹುಕಾಲದ ವರೆಗೆ ತಪಸ್ಸನ್ನು ಮಾಡಿರುವರು. ಅಂತಹ ಪಾದಧೂಳಿಯನ್ನು ಶಿರಸ್ಸಿನಲ್ಲಿ ಧರಿಸಿರುವ ನಮ್ಮ ಪತಿಯು ಪರಮಧನ್ಯರು. ನಿನ್ನ ಪಾದಧೂಳಿಯನ್ನು ಸೇವಿಸಿದವರು ಆ ಸೇವೆಯ ರುಚಿಯ ಮುಂದೆ ಮುಕ್ತಿಸುಖವನ್ನೂ ಬಯಸುವುದಿಲ್ಲ. ಇಂತಹ ಪಾದಧೂಳಿಯನ್ನು ಸೇವಿಸಿದ ನಮ್ಮಪತಿಯ ಪ್ರಾಣವನ್ನು ಉಳಿಸು'' ಎಂದು ಪ್ರಾರ್ಥಿಸಿದರು. ಸ್ತ್ರೀಯರ

ಮೃದುಮಧುರವಾದ ಮಾತುಗಳನ್ನು ಶ್ರೀಕೃಷ್ಣದೇವನು ಕೇಳಿ ಕಾಳಿಯನನ್ನು ಬಿಟ್ಟನು. ಸ್ತ್ರೀಯರ ಮಧುರವಾದ ಮಾತುಗಳನ್ನು ಕೇಳಿದ ಮೇಲೆ ಯಾರ ಮನಸ್ಸು ಮೃದುವಾಗಲಾರದು?

ಕಾಳಿಯನು ಚೇತರಿಸಿಕೊಂಡು. ಶ್ರೀಕೃಷ್ಣದೇವನನ್ನು ನಮಸ್ಕರಿಸಿದನು. " ಮಹಾಪ್ರಭೋ ! ನಾವು ಸರ್ಪಜಾತಿಯಲ್ಲಿ ಹುಟ್ಟಿದವರು. ಸ್ವಭಾವದಿಂದಲೇ ಮಹಾಕೋಪಿಷ್ಠರು. ನಮಗೆ ಈ ಸ್ವಭಾವವನ್ನು ನೀನೇ ಕೊಟ್ಟಿರುವಿ. ಅನುಗ್ರಹವನ್ನು ಮಾಡುವುದೂ ನಿಗ್ರಹಿಸುವುದೂ ನಿನ್ನ ಅಧೀನ. ನಿನ್ನ ಮನಸ್ಸಿಗೆ ತೋರಿದಂತೆ ಮಾಡು" ಎಂದು ಪ್ರಾರ್ಥಿಸಿದನು. ಶ್ರೀಕೃಷ್ಣದೇವನನ್ನು ಪತ್ನೀಸಹಿತನಾಗಿ ಅತ್ಯಂತ ಭಕ್ತಿಯಿಂದ ಪೂಜಿಸಿದನು.

ಶ್ರೀಕೃಷ್ಣದೇವನು ಕಾಲಿಯನನ್ನು ನೋಡಿ "ಎಲೈ ಕಾಲಿಯನೇ! ನೀನು ಗರುಡನ ಭಯದಿಂದ ಈ ಯಮುನಾನದಿಯ ಮಡುವಿನಲ್ಲಿ ವಾಸಿಸುತ್ತಿರುವಿ. ನನ್ನ ಕಾಲಿನ ಗುರುತು ನಿನ್ನ ತಲೆಯ ಮೇಲೆ ಈಗ ಏರ್ಪಟ್ಟಿತು. ಇನ್ನು ಮುಂದೆ ಗರುಡನು ನಿನ್ನನ್ನು ಹಿಂಸಿಸುವುದಿಲ್ಲ. ಆದ್ದರಿಂದ ನೀನು ಧೈರ್ಯದಿಂದ ಇಲ್ಲಿಂದ ಹೊರಟು ನಿನ್ನ ವಾಸಸ್ಥಳವಾಗಿರುವ ರಮಣಕ ಎಂಬ ದ್ವೀಪಕ್ಕೆ ಪರಿವಾರಸಹಿತನಾಗಿ ಹೋಗು. ಈ ಯಮುನೆಯ ಜಲವು ಇಂದಿನಿಂದ ವಿಷರಹಿತವಾಗಲಿ. ಸಕಲ ಗೋವುಗಳೂ ಗೊಲ್ಲರೂ ನಿರ್ವಿಚಾರದಿಂದ ಈ ನೀರನ್ನು ಅನುಭವಿಸಲಿ.

ಸರ್ಪಗಳನ್ನು ಗರುಡನು ಆಗಾಗ್ಗೆ ಪಾತಾಳಲೋಕಕ್ಕೆ ಹೋಗಿ ಕೊಲ್ಲುತ್ತಿದ್ದನು. ಆಗ ಸರ್ಪಗಳು ಗರುಡನನ್ನು ನಮಸ್ಕರಿಸಿದವು. ಒಂದೊಂದು ತಿಂಗಳಿನಲ್ಲಿ ಒಬ್ಬೊಬ್ಬನಂತೆ ಒಂದೊಂದು ಸರ್ಪವನ್ನೂ ಅಧಿಕವಾದ ಭಕ್ಷ್ಯಭೋಜ್ಯಾದಿಗಳನ್ನೂ ಕೊಡುವದಾಗಿಯೂ ಆಗಾಗ್ಗೆ ಬಂದು ತಮ್ಮನ್ನು ಸಂಹರಿಸಬಾರದೆಂದೂ ಪ್ರಾರ್ಥಿಸಿಕೊಂಡರು. ಗರುಡದೇವನು ಅವರ ಪ್ರಾರ್ಥನೆಯನ್ನು ಅಂಗೀಕರಿಸಿದನು. ಅಂದಿನಿಂದ ಪಾತಾಳಲೋಕಕ್ಕೆ ಹೋಗಿ ಸರ್ಪಗಳನ್ನು ಸಂಹರಿಸುವುದನ್ನು ಬಿಟ್ಟನು. ಸರ್ಪಗಳು ಮಾಡಿಕೊಂಡ ಈ ಕರಾರಿನಂತೆ ಕಾಲಿಯನು ಬಲಿಯನ್ನು ಕೊಡಬೇಕಾದ ಸಂದರ್ಭವು ಬಂತು.

ಹಿಂದೊಮ್ಮೆ ಗರುಡನು ಯಮುನಾನದಿಯಲ್ಲಿರುವ ಒಂದು ಮಡುವಿನಲ್ಲಿ ಸಂಚರಿಸುತ್ತಿರುವ ದೊಡ್ಡ ಮೀನನ್ನು ನೋಡಿ ಅದನ್ನು ತಿಂದನು. ಆಗ ದೊಡ್ಡ ಮೀನಿನ ಪರಿವಾರದಲ್ಲಿದ್ದ ಮೀನುಗಳು ತುಂಬಾ ದುಃಖಿಸಿದವು. ಇದನ್ನು ಆ ನದೀತೀರದಲ್ಲಿ ತರ್ಪಣ ಕೊಡುತ್ತಿದ್ದ ಸೌಭರಿ ಎಂಬ ಮುನಿಯು ನೋಡಿದನು. ಅವನಿಗೆ ಕನಿಕರವು ಏರ್ಪಟ್ಟಿತು. "ಈ ಮಡುವಿನಲ್ಲಿ ಗರುಡನು ಯಾವ ಪ್ರಾಣಿಯನ್ನೂ ಹಿಂಸಿಸಬಾರದು. ಹಾಗೆ ಹಿಂಸಿಸಿದರೆ ಅವನ ತಲೆಯು ಒಡೆಯಲಿ" ಎಂದು ಪ್ರಾಣಿಗಳ ಹಿತಕ್ಕಾಗಿ ಶಪಿಸಿದನು.

ಈ ವಿಷಯವು ಕಾಲಿಯನಿಗೆ ಗೊತ್ತಿತ್ತು. ಆದ್ದರಿಂದಲೇ ಗರುಡನಿಗಾಗಿ ತಯಾರಿಸಿದ ಭಕ್ಷ್ಯಭೋಜ್ಯಾದಿಗಳನ್ನು ತಾನೇ ತಿಂದನು. ಈ ವಿಷಯವನ್ನು ತಿಳಿದ ಗರುಡನು ಕಾಳಿಯನೊಡನೆ ಜಗಳಕ್ಕೆ ಬಂದನು. ಕಾಳಿಯನು ಓಡಿಬಂದು ಯಮುನಾನದಿಯಲ್ಲಿರುವ ಈ ಮಡುವಿನಲ್ಲಿ ಸೇರಿಕೊಂಡನು. ಗರುಡನು ಅಲ್ಲಿಯವರೆಗೆ ಅವನನ್ನು ಓಡಿಸಿಕೊಂಡು ಬಂದನು. ಸೌಭರಿಋಷಿಯ ಶಾಪಕ್ಕೆ ಗೌರವವನ್ನು ಕೊಡುವುದಕ್ಕಾಗಿ ಅಲ್ಲಿಂದ ಹಿಂದಿರುಗಿದನು. ಇಷ್ಟರವರೆಗೆ ಗರುಡನ ಭಯದಿಂದ ಯಮುನಾನದಿಯ ಮಡುವಿನಲ್ಲಿಯೇ ವಾಸಿಸುತ್ತಿದ್ದ ಕಾಳಿಯನು ಇಂದಿನಿಂದ ಶ್ರೀಕೃಷ್ಣದೇವನ ವರದಿಂದ ನಿರ್ಭಯನಾಗಿ ರಮಣಕದ್ವೀಪಕ್ಕೆ ಹೋದನು.

ಶ್ರೀಕೃಷ್ಣದೇವನು ತನ್ನ ಕೃಪಾದೃಷ್ಟಿಯಿಂದ ಯಮುನಾನದಿಯನ್ನು ನೋಡಿದನು. ಕಾಲಿಯನಿಂದ ವಿಷಮಯವಾದ ಜಲವು ಅಮೃತಮಯವಾಯಿತು. ಯಮುನಾನದಿಯ ಮಧ್ಯದಿಂದ ತೀರಕ್ಕೆ ಬಂದು. ತಾಯಿ ಮುಂತಾದ ಸರ್ವರನ್ನೂ ಸಂತೋಷಪಡಿಸಿದನು. ಆಗ ಸೂರ್ಯಾಸ್ತಮನವಾಗಿ ಬಹುಕಾಲವಾಗಿತ್ತು. ಆದ್ದರಿಂದ ಅಂದು ರಾತ್ರಿ ಮುಗಿಯುವವರೆಗೆ ಅಲ್ಲಿಯೇ ಸರ್ವರಿಂದಲೂ ಸಹಿತವಾಗಿ ವಾಸಿಸಬೇಕೆಂದು ತೀರ್ಮಾನಿಸಿದನು. ಗೊಲ್ಲರೆಲ್ಲರೂ ಮರಗಳ ಕೆಳಭಾಗಗಳಲ್ಲಿಯೂ ಗುಹೆ ಮುಂತಾದ ಸ್ಥಳಗಳಲ್ಲಿಯೂ ನಿಶ್ಚಿಂತರಾಗಿ ಮಲಗಿದರು.

(೧೮) **ವಿಶೇಷಾರ್ಥ :- ಗೋಷ್ಠೇ ಸುಪ್ತಾನ್ ಆವೃತ್ಯ ಸ್ಥಿತಂ ದಾವವಹ್ನಿಂ ಅಪಿಬತ್** ಗೋವುಗಳ ವಾಸಸ್ಥಳದಲ್ಲಿ ಮಲಗಿರುವ ಗೊಲ್ಲರನ್ನೂ ಗೋವುಗಳನ್ನೂ ಸುತ್ತಿಕೊಂಡಿರುವ ಕಾಡ್ಗಿಚ್ಚನ್ನು ಕುಡಿದನು.

**"ಸುಪ್ತಾನಾವೃತ್ಯ ದಹಂತಮುದ್ಧತಬಲಮಗ್ನಿಂ ಪೀತ್ವಾ, ಪ್ರಾತಸ್ತೈಃ ಸಹ ಗೋಕುಲಂ ಪ್ರಾಪ್ಯ ಸರ್ವಾನ್ಸಂತೋಷಯನ್"**

# ಶ್ರೀಕೃಷ್ಣದೇವನು ಕಾಡಿನ ಬೆಂಕಿಯನ್ನು ನುಂಗಿದನು.

ಸರ್ವರೂ ಮಲಗಿ ನಿದ್ರೆಯನ್ನು ಮಾಡುತ್ತಿದ್ದರು. ಆಗ ಅತಿಪ್ರಬಲವಾದ ಕಾಡ್ಗಿಚ್ಚು ಎಲ್ಲಾ ಕಡೆಯಲ್ಲಿಯೂ ವ್ಯಾಪಿಸುತ್ತಾ ಬಂತು. ಆ ಬೆಂಕಿಯ ಮಧ್ಯದಲ್ಲಿ ಸಿಕ್ಕಿಕೊಂಡ ಗೋಪಾಲಕರೂ ಗೋವುಗಳೂ ಶ್ರೀಕೃಷ್ಣದೇವನನ್ನು ಶರಣು ಹೊಂದಿದರು. ಶ್ರೀಕೃಷ್ಣದೇವನು ಅವರಿಗೆ ಕಣ್ಣುಗಳನ್ನು ಮುಚ್ಚಿಕೊಳ್ಳುವಂತೆ ಹೇಳಿದನು. ಅವರೆಲ್ಲರೂ ಹಾಗೆ ಮಾಡಿದರು. ಶ್ರೀಕೃಷ್ಣದೇವನು ಆ ಬೆಂಕಿಯನ್ನು ಕುಡಿದನು. ಇದನ್ನು ಕೇಳಿ ಸರ್ವರೂ ಆಶ್ಚರ್ಯಪಡುತ್ತಾರೆ. ಅಗ್ನಿದೇವನು ತನ್ನ ಜನ್ಮಭೂಮಿಯಾಗಿರುವ ಶ್ರೀಕೃಷ್ಣದೇವನ ಮುಖವನ್ನು ಪ್ರವೇಶಿಸಿದನು. ತನ್ನ ಜನ್ಮಭೂಮಿಯನ್ನು ಸರ್ವರೂ ಪ್ರವೇಶಿಸುವುದು ಸಹಜವಾಗಿದೆ. ಅದಕ್ಕಾಗಿ ಆಶ್ಚರ್ಯಪಡುವುದರಲ್ಲಿ ಅರ್ಥವಿಲ್ಲ. ಶ್ರೀಕೃಷ್ಣದೇವನು ಅಂದು ಬೆಳಗಿನಿಂದ ರಾತ್ರಿಯವರೆಗೆ ಯಮುನಾನದಿಯ ನೀರಿನಲ್ಲಿ ಮುಳುಗಿದ್ದನು. ಆದ್ದರಿಂದ ಅವನಿಗೆ ಚಳಿಯಾಗಿರಬಹುದು. ಅದಕ್ಕಾಗಿ ಬೆಂಕಿಯನ್ನು ಕುಡಿದು ಚಳಿಯನ್ನು ಪರಿಹರಿಸಿಕೊಂಡನೆಂದು ತೋರುತ್ತದೆ. ಮರುದಿನ ಬೆಳಗಾಯಿತು. ಶ್ರೀಕೃಷ್ಣದೇವನು ಗೊಲ್ಲರಿಂದ ಹೊಗಳಲ್ಪಡುತ್ತಾ ವೃಂದಾವನವನ್ನು ಪ್ರವೇಶಿಸಿ ಸರ್ವರನ್ನೂ ತನ್ನ ಲೀಲೆಗಳಿಂದ ಸಂತೋಷಪಡಿಸಿದನು.

# ಉಗ್ರದೈತ್ಯಸಂಹಾರ

**(೧೯) ವಿಶೇಷಾರ್ಥ :- ದುಷ್ಟವೃಕ್ಷಚ್ಛಿತ್ - ದುಷ್ಟನೂ ವೃಕ್ಷರೂಪವುಳ್ಳವನೂ ಆಗಿರುವ ದೈತ್ಯನನ್ನು ಸಂಹರಿಸಿದನು.**

**"ಕದಾಚಿದ್ವಿಷವೃಕ್ಷಸ್ವರೂಪಾತ್ ಬ್ರಹ್ಮಣೋ ವರಾದನ್ಯೈರಜೇಯಾದುಗ್ರಾಖ್ಯಾಸುರಾದ್ರೋಗಪೀಡಿತಾನ್ ಸ್ವಜನಾನ್ ದೃಷ್ಟ್ವಾ ತಂ ವೃಕ್ಷಂ ತದಾಕಾರತತ್ಪರಿವಾರ ವೃಕ್ಷಾಂಶ್ಚೋನ್ಮೂಲ್ಯ, ದಗ್ಧ್ವಾ, ಸ್ವಕೀಯಾನ್ನೀರೋಗಾನ್ ಕೃತ್ವಾ ಸರ್ವಾನತೋಷಯತ್"**

(ಒಮ್ಮೆ ಬ್ರಹ್ಮದೇವನ ವರದಿಂದ ಯಾರಿಂದಲೂ ಜಯಿಸುವುದಕ್ಕೆ ಸಾಧ್ಯವಿಲ್ಲದಿರುವವನೂ ವಿಷವೃಕ್ಷದ ರೂಪವನ್ನು ಧರಿಸಿವನೂ ಆಗಿರುವ ಉಗ್ರ ಎಂಬ ಅಸುರನಿಂದ ರೋಗಪೀಡಿತರಾಗಿರುವ ಸ್ವಜನರನ್ನು ನೋಡಿದನು.

ಆ ಉಗ್ರ ಎಂಬ ದೈತ್ಯನನ್ನೂ ವೃಕ್ಷಗಳ ರೂಪದಿಂದ ವಾಸಿಸುತ್ತಿರುವ ಅವನ ಪರಿವಾರದೈತ್ಯರನ್ನೂ ಬುಡಸಮೇತವಾಗಿ ಕಿತ್ತಿ ಸುಟ್ಟನು. ಸ್ವಕೀಯರನ್ನು ರೋಗರಹಿತರಾಗುವಂತೆ ಮಾಡಿ ಎಲ್ಲರನ್ನೂ ಸಂತೋಷಪಡಿಸಿದನು.)

**ವಿಶೇಷಾರ್ಥವಿವರಣ:-** ವೃಂದಾವನದಲ್ಲಿ ಎಲ್ಲಾ ಮರಗಳೂ ಒಳ್ಳೆಯ ನೆರಳಿನಿಂದಲೂ ಗಿಳಿ ಮುಂತಾದ ಮಧುರ ಧ್ವನಿಯಿಂದ ಯುಕ್ತವಾದ ಪಕ್ಷಿಗಳಿಂದಲೂ ಉತ್ತಮವಾದ ಹಣ್ಣುಗಳಿಂದಲೂ ಸುಗಂಧದಿಂದ ಯುಕ್ತವಾದ ಪುಷ್ಪಗಳಿಂದಲೂ ಸಕಲ ಜನರನ್ನೂ ಆನಂದಪರವಶರಾಗುವಂತೆ ಮಾಡಿದವು. ಆಗ ಉಗ್ರ ಎಂಬ ಒಬ್ಬ ದೈತ್ಯನು ತನ್ನ ಪತ್ನಿಯರಿಂದಲೂ ಮಕ್ಕಳಿಂದಲೂ ಪರಿವಾರಗಳಿಂದಲೂ ಸಹಿತನಾಗಿ ಬ್ರಹ್ಮದೇವರನ್ನು ಕುರಿತು ತಪಸ್ಸನ್ನು ಮಾಡಿದನು. "ಯಾರಿಂದಲೂ ಸಾಯಬಾರದು ಮತ್ತು ಸೋಲಬಾರದು" ಎಂದು ವರವನ್ನು ಸರ್ವರೂ ಬೇಡಿದರು. ಆ ವರವನ್ನು ಅವರೆಲ್ಲರಿಗೂ ಬ್ರಹ್ಮದೇವರು ಕೊಟ್ಟರು.

ಆ ವರಗಳನ್ನು ಪಡೆದ ದೈತ್ಯನು ಪ್ರಪಂಚದಲ್ಲಿ ತಾನೂ ತನ್ನ ಪತ್ನಿಯರೂ ತನ್ನ ಮಕ್ಕಳೂ ತನ್ನ ಪರಿವಾರಗಳೂ ಇರಬೇಕು. ಬೇರೆ ಯಾರೂ ಇರಬಾರದೆಂದೂ ತೀರ್ಮಾನಿಸಿದನು. ತಾನೂ ತನ್ನ ಪರಿವಾರಗಳೂ ಆಗಿರುವ ದೈತ್ಯರೆಲ್ಲರೂ ಮರಗಳ ರೂಪವನ್ನು ಧರಿಸಿದರು. ಅವನ ಪತ್ನಿಯರೆಲ್ಲರೂ ಗೋವುಗಳ ರೂಪವನ್ನು ಧರಿಸಿದರು. ಅವನ ಮಕ್ಕಳೆಲ್ಲರೂ ಕರುಗಳ ರೂಪವನ್ನು ಧರಿಸಿದರು. ಶ್ರೀಕೃಷ್ಣದೇವನು ವಾಸಿಸುತ್ತಿರುವ ವೃಂದಾವನ ಪ್ರಾಂತದಲ್ಲಿ ವಾಸಿಸಿದರು.

ತಮ್ಮ ದೇಹಗಳನ್ನು ಸ್ಪರ್ಶಿಸಿದ ಗಾಳಿಯಿಂದ ನಾನಾ ವಿಧವಾದ ಉಗ್ರವಾದ ರೋಗಗಳನ್ನು ಸೃಷ್ಟಿಸಿದರು. ವೃಂದಾವನ ವಾಸಿಗಳೆಲ್ಲರನ್ನೂ ಆ ರೋಗಗಳಿಂದ ನಾನಾ ವಿಧವಾಗಿ ಪೀಡಿಸುತ್ತಾ ಬಂದರು. ಅಸಂಖ್ಯರಾದ ಮೃಗಗಳೇ ಮೊದಲಾದ ಪ್ರಾಣಿಗಳನ್ನು ಸಂಹರಿಸಿದರು. ಬ್ರಹ್ಮದೇವನಿಂದ ಸೃಷ್ಟಿಸಲ್ಪಟ್ಟ ಸರ್ವರನ್ನೂ ಸಂಹರಿಸುತ್ತಾ ಇವನಿಗೂ ಇವನ ಪರಿವಾರಗಳಿಗೂ ವರವನ್ನು ಕೊಟ್ಟಿರುವ ಬ್ರಹ್ಮದೇವನಿಗೆ ವಿರೋಧವನ್ನು ಮಾಡಿದರು. ವೃಕ್ಷರೂಪಗಳಾದ ಈ ದೈತ್ಯರ ಮೇಲೆ ಬೀಸುತ್ತಿರುವ ಗಾಳಿಯೂ ಇವರ ಹಣ್ಣುಗಳೂ ಪುಷ್ಪಗಳೂ ನೆರಳೂ ಮರುಕ್ಷಣದಲ್ಲಿಯೇ ಸರ್ವರನ್ನೂ ಸಂಹರಿಸಿದವು. ಶ್ರೀಕೃಷ್ಣದೇವನ ಶತ್ರುಗಳಾದ ಈ ದೈತ್ಯರ ಸಂಬಂಧವು ಹೇಗೆ ಸುಖಕರವಾದೀತು?

ವಿಷಜಂತುಗಳ ಮಧ್ಯದಲ್ಲಿ ಶೇಷದೇವನು ಅತ್ಯಂತ ಶ್ರೇಷ್ಠನಾಗಿರುವನು. ಶೇಷದೇವನೇ ಬಲರಾಮನಾಗಿ ಅವತರಿಸಿರುವನು. ಆ ಬಲರಾಮನೂ ಸಹ ಈ ಉಗ್ರಎಂಬ ದೈತ್ಯನ ಸಂಬಂಧದಿಂದ ರೋಗಪೀಡಿತನಾದನು. ಹೀಗಾದ ಮೇಲೆ ಈ ದೈತ್ಯನ ವಿಷದ ಪ್ರಭಾವವನ್ನು ಏನೆಂದು ವರ್ಣಿಸಲಿ? ಶ್ರೀಕೃಷ್ಣದೇವನು ಬಲರಾಮನನ್ನು ಆಲಿಂಗಿಸಿ ಅವನಿಗೆ ಬಂದಿರುವ ರೋಗಗಳನ್ನು ಪರಿಹರಿಸಿದನು.

ಈ ದೈತ್ಯನ ಫಲಗಳೂ,ಪುಷ್ಪಗಳೂ, ಎಳೆಯ ಚಿಗುರುಗಳೂ ಸುಂದರವಾಗಿಯೂ ಅಲುಗಾಡುತ್ತಲೂ ಇರುವ ಎಲೆಗಳು ಸರ್ವರ ಮನಸ್ಸುಗಳನ್ನು ಸೂರೆಗೊಳ್ಳುತ್ತಾ ಸರ್ವರನ್ನೂ ಆಕರ್ಷಿಸುತ್ತಿವೆ. ಆದರೆ ಈ ದೈತ್ಯನು ತನ್ನಲ್ಲಿ ಹಾಲಾಹಲ ವಿಷವನ್ನು ಅಡಗಿಸಿಕೊಂಡಿರುವನು. ನೀಚರು ಮೇಲೆ ಯೋಗ್ಯರಾಗಿ ನಟಿಸುತ್ತಾ ಒಳಗೆ ವಿಷವನ್ನು ತುಂಬಿಕೊಂಡಿರುವುದು ಸಹಜವಲ್ಲವೇ?

ಬರೇ ಮರದ ಎಲೆಗಳನ್ನೂ ಹಣ್ಣುಗಳನ್ನೂ ತಿಂದು ಪಕ್ಷಿಗಳು ಜೀವಿಸುತ್ತವೆ. ಅತಿರಮ್ಯವಾದ ಕಾಡುಗಳಲ್ಲಿ ಮುನಿಗಳು ಯಾರಿಂದಲೂ ಯಾವ ವಸ್ತುಗಳನ್ನೂ ಅಪೇಕ್ಷಿಸದೇ ಪರೋಪಕಾರವನ್ನು ಮಾಡುತ್ತಾ ವಾಸಿಸುತ್ತಿರುವರು. ಈ ಪಕ್ಷಿಗಳಾಗಲೀ ಮುನಿಗಳಾಗಲೀ ಯಾರಿಗೂ ಯಾವ ವಿಧವಾದ ದ್ರೋಹಗಳನ್ನೂ ಮಾಡಿದವರಲ್ಲ. ಇಂತಹ ನಿರಪರಾಧಿಗಳ ಮನಸ್ಸುಗಳನ್ನು ತನ್ನ ಸುಂದರವಾದ ಫಲಪುಷ್ಪಾದಿಗಳಿಂದ ಆಕರ್ಷಿಸುತ್ತಾ ಸಂಹರಿಸುತ್ತಿರುವ ಈ ದೈತ್ಯನಿಗೆ ಉಗ್ರ ಎಂಬ ಹೆಸರು ಅನ್ವರ್ಥಕವಾದುದು.

ವೃಕ್ಷಜನ್ಮಗಳಲ್ಲಿ ಐದು ಜ್ಞಾನೇಂದ್ರಿಯಗಳಿಲ್ಲ. ಆದ್ದರಿಂದ ಆ ಇಂದ್ರಿಯಗಳಿಂದ ಸುಖಗಳನ್ನು ಅನುಭವಿಸುವ ಸಂಭವವೇ ಇಲ್ಲ. ಸಂಚಾರಾದಿಗಳಿಲ್ಲ. ಗಾಳಿ ಮಳೆ ಬಿಸಿಲು ಮುಂತಾದವುಗಳಿಂದ ಯಾವಾಗಲೂ ಕಷ್ಟವನ್ನು ಅನುಭವಿಸುತ್ತಿರಬೇಕು. ಹೀಗೆ ಸುಖಲೇಶವೂ ಇಲ್ಲದಿರುವ ದುಃಖಮಯವಾದ ವೃಕ್ಷಜನ್ಮವನ್ನು ಪಡೆದರೂ ಪರರಿಗೆ ಹಿಂಸೆಯನ್ನು ಮಾಡಬೇಕೆಂದು ಈ ಉಗ್ರದೈತ್ಯನು ಸಂಕಲ್ಪಿಸಿದನು. ತನ್ನ ಮೂಗನ್ನು ಕತ್ತರಿಸಿಕೊಂಡರೂ ಅಡ್ಡಿಯಿಲ್ಲ. ಕಾಶಿಯಾತ್ರೆಗೆ ಹೊರಡುತ್ತಿರುವ ಇತರರ ಮುಂದೆ ಅಂಗಹೀನನಾಗಿ ನಿಂತು ಅಪಶಕುನವನ್ನು ಮಾಡಬೇಕೆಂದು ತೀರ್ಮಾನಿಸಿದ ಪರಮಮೂರ್ಖನೂ ಉಗ್ರನಾಮಕದೈತ್ಯನೂ ಸಮಾನರೆನಿಸಿದರು.

ಶ್ರೀಕೃಷ್ಣದೇವನು ಈ ದೈತ್ಯನಿಂದ ಬಂದಿರುವ ಸಕಲ ರೋಗಗಳನ್ನೂ ಪರಿಹರಿಸಬೇಕೆಂದು ಸಂಕಲ್ಪಿಸಿದನು. ವೃಕ್ಷರೂಪಿಯಾದ ಉಗ್ರನಾಮಕದೈತ್ಯನನ್ನೂ ಅವನ ಪರಿವಾರಕ್ಕೆ ಸೇರಿದ ವೃಕ್ಷರೂಪಿಗಳಾದ ದೈತ್ಯರನ್ನೂ ಬುಡಸಮೇತವಾಗಿ ಕಿತ್ತುಬಿಟ್ಟನು. ಆ ಮರಗಳಿಂದ ಗೋವುಗಳ ರೂಪವನ್ನು ಧರಿಸಿರುವ ಅವನ ಪತ್ನಿಯರನ್ನೂ ಕರುಗಳ ೯ ಾಪವನ್ನು ಧರಿಸಿರುವ ಅವನ ಮಕ್ಕಳನ್ನೂ ಹೊಡೆದನು. ಆ ಹೊಡೆತದಿಂದಲೇ ಮರಗಳ ರೂಪಗಳನ್ನು ಧರಿಸಿದ ದೈತ್ಯರನ್ನೂ ಗೋವುಗಳ ಮತ್ತು ಕರುಗಳ ರೂಪಗಳಿಂದ ಯುಕ್ತರಾದ ದೈತ್ಯರನ್ನೂ ಸಂಹರಿಸಿದನು. ಇದರಿಂದ ಸರ್ವಸಮರ್ಥನಾದ ಶ್ರೀಹರಿಯು ಮಾಡುತ್ತಿರುವ ಒಂದೊಂದು ಕಾರ್ಯಗಳೂ ಅನೇಕ ಫಲಗಳನ್ನು ಕೊಡುತ್ತವೆ ಎಂದು ತಿಳಿಸಿದನು. ಎಲ್ಲರನ್ನೂ ಬೆಂಕಿಯಿಂದ ಸುಟ್ಟು ಬೂದಿಯಾಗುವಂತೆ ಮಾಡಿದನು. ಇದರಿಂದ ಆ ದೈತ್ಯರು ಪುನಃ ಬದುಕುವ ಸಂಭವವೂ ಇಲ್ಲದಂತೆ ಮಾಡಿದನು. ಸಕಲ ಸಜ್ಜನರ ಶ್ರಮವನ್ನು ಪರಿಹರಿಸಿದನು. ಅವನನ್ನೂ ಅವನ ಪರಿವಾರಗಳನ್ನೂ ಸುಟ್ಟು ಬೂದಿಮಾಡಿರುವುದರಿಂದ ಅವನ ಸಂಬಂಧವುಳ್ಳ ಯಾವ ವಸ್ತುವೂ ಉಳಿಯದಂತೆ ಮಾಡಿದನು.

## ನೀಲಾ ವಿವಾಹ

ಯಶೋದೆಗೆ ಕುಂಭಕ ಎಂಬ ಸಹೋದರನಿದ್ದನು. ಅವನಿಗೆ ನೀಲಾ ಎಂಬ ಮಗಳಿದ್ದಳು. ಅವಳು ಹಿಂದಿನ ಜನ್ಮದಲ್ಲಿ ಶ್ರೀಹರಿಯನ್ನು ಕುರಿತು ತಪಸ್ಸನ್ನು ಮಾಡಿದಳು. ಇವನು ಶ್ರೀಕೃಷ್ಣಾವತಾರಕಾಲದಲ್ಲಿ ರುಕ್ಮಿಣೀ ಮುಂತಾದ ಉತ್ತಮಸ್ತ್ರೀಯರನ್ನು ವಿವಾಹ ಮಾಡಿಕೊಳ್ಳುವನು. ಅವರಿಗಿಂತ ಮೊದಲು ತನ್ನನ್ನು ಮದುವೆ ಮಾಡಿಕೊಳ್ಳಬೇಕೆಂದೂ ಅವರಿಗಿಂತ ಪೂರ್ವದಲ್ಲಿ ತನಗೆ ಅಂಗಸಂಗವನ್ನು ಕೊಡಬೇಕೆಂದೂ ವರವನ್ನು ಬೇಡಿದಳು. ಆ ವರವನ್ನು ಶ್ರೀಹರಿಯು ಕೊಟ್ಟನು.

ಅದೇ ಸಮಯದಲ್ಲಿ ಕೆಲವು ಅಪ್ಸರಸ್ತ್ರೀಯರು ಶ್ರೀಹರಿಯನ್ನು ಕುರಿತು ತಪಸ್ಸನ್ನು ಮಾಡಿದರು. ಶ್ರೀಕೃಷ್ಣದೇವನು ಉಪನಯವನ್ನು ಮಾಡಿಕೊಳ್ಳುವುದಕ್ಕಿಂತ ಪೂರ್ವದಲ್ಲಿಯೇ ಅವನ ಅಂಗಸಂಗವು ತಮಗೆ ಏರ್ಪಡಬೇಕೆಂದು ವರವನ್ನು ಕೇಳಿದರು. ಆ ವರವನ್ನು ಅವರಿಗೆ ಕೊಟ್ಟನು.

ಈ ಸಮಾಚಾರವನ್ನು ತಿಳಿದ ನೀಲಾದೇವಿಯು ಪುನಃ ಶ್ರೀಹರಿಯನ್ನು ಕುರಿತು ತಪಸ್ಸನ್ನು ಮಾಡಿದಳು. ಉಪನಯನಕ್ಕಿಂತ ಪೂರ್ವದಲ್ಲಿಯೂ ಸಕಲಗೋಪಿಕಾಸ್ತ್ರೀಯರಿಗಿಂತ ಪೂರ್ವದಲ್ಲಿಯೇ ಶ್ರೀಕೃಷ್ಣದೇವನ ಅಂಗಸಂಗವು ತನಗೆ ಏರ್ಪಡಬೇಕೆಂದು ವರವನ್ನು ಬೇಡಿದಳು. ಆ ವರವನ್ನು ಶ್ರೀಹರಿಯು ಕೊಟ್ಟನು. ಹಿಂದಿನ ಜನ್ಮದಲ್ಲಿ ಪಡೆದಿರುವ ವರಗಳಿಂದ ನೀಲಾ ಎಂಬ ಹೆಸರಿನಿಂದ ಹುಟ್ಟಿದಳು. ಶ್ರೀಕೃಷ್ಣದೇವನೂ ಹಿಂದಿನ ಜನ್ಮದಲ್ಲಿ ಅವಳಿಗೆ ಕೊಟ್ಟಿರುವ ವರಗಳಂತೆ ಅವಳನ್ನು ಉಪನಯನಕ್ಕಿಂತ ಪೂರ್ವದಲ್ಲಿಯೇ ವಿವಾಹವನ್ನು ಮಾಡಿಕೊಳ್ಳಬೇಕೆಂದೂ ಸಕಲ ಗೋಪಿಕಾಸ್ತ್ರೀಯರಿಗಿಂತಲೂ ರುಕ್ಮಿಣೀ ಮುಂತಾದ ಪತ್ನಿಯರಿಗಿಂತಲೂ ಮೊದಲು ಅವಳಿಗೆ ಅಂಗಸಂಗವನ್ನು ಕೊಡಬೇಕೆಂದು ತೀರ್ಮಾನಿಸಿದನು.

ಏಳು ಪ್ರಬಲದೈತ್ಯರು ರುದ್ರದೇವನನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಿದರು. "ಯಾರೂ ತಮ್ಮನ್ನು ಜಯಿಸಲು ಶಕ್ತರಾಗಬಾರದು" ಎಂದು ವರವನ್ನು ಬೇಡಿದರು. ರುದ್ರದೇವರು ಆ ವರವನ್ನು ಕೊಟ್ಟರು. ಆ ದೈತ್ಯರೆಲ್ಲರೂ ಎತ್ತುಗಳಾಗಿ ಕುಂಭಕನ ಮನೆಯಲ್ಲಿ ಹುಟ್ಟಿದರು. ಮೂಗುಗಳಿಗೆ ಹಗ್ಗವನ್ನು ಕಟ್ಟಿ ಆ ಏಳು ಎತ್ತುಗಳನ್ನು ನಿಗ್ರಹಿಸಲು ಯಾರಿಂದಲೂ ಶಕ್ಯವಾಗಲಿಲ್ಲ. "ಆ ಏಳು ಎತ್ತುಗಳನ್ನೂ ಒಂದೇ ಸಲ ಬಿಟ್ಟುಬಿಡಬೇಕು. ಅವುಗಳೆಲ್ಲವನ್ನೂ ಜಯಿಸಿ ಕಟ್ಟಿ ಹಾಕುವವನೇ ನೀಲಾದೇವಿಯನ್ನು ವಿವಾಹ ಮಾಡಿಕೊಳ್ಳಬೇಕು." ಎಂದು ಕುಂಭಕನು ಪ್ರಚಾರ ಮಾಡಿದನು.

ಈ ವಿಷಯವನ್ನು ತಿಳಿದ ಅನೇಕ ವೀರರು ಬಂದರು. ಈ ಎತ್ತುಗಳನ್ನು ನಿಗ್ರಹಿಸುವುದಾಗಿ ಪ್ರತಿಜ್ಞೆಯನ್ನು ಮಾಡಿದರು. ಎತ್ತುಗಳು ಏಕಕಾಲದಲ್ಲಿ ಬಿಡಲ್ಪಟ್ಟವು. ಅವುಗಳ ಕೊಂಬುಗಳಿಂದ ಇವರ ದೇಹಗಳು ತಿವಿಯಲ್ಪಟ್ಟವು. ಮೈಯಲ್ಲೆಲ್ಲಾ ರಕ್ತಧಾರೆಯು ಸುರಿಯಿತು. ಕೆಲವರು ಸತ್ತರು ಕೆಲವರು ಅಂಗಹೀನರಾದರು. ಎಲ್ಲರ ಮುಖವೂ ನೀಲವಾಯಿತು. ನೀಲಾದೇವಿಯನ್ನು ಪಡೆಯಲಿಲ್ಲ. ನೀಲವಾದ ಮುಖಕಾಂತಿಯನ್ನು ಪಡೆದರು. ಶ್ರೀಕೃಷ್ಣದೇವನು ಈ ಸಮಾಚಾರವನ್ನು ತಿಳಿದು ಅಲ್ಲಿಗೆ ಬಂದು. ಏಳು ರೂಪಗಳನ್ನು ಸ್ವೀಕರಿಸಿದನು. ಏಳು ಎತ್ತುಗಳನ್ನು ಒಂದೇ ಸಮಯದಲ್ಲಿ ಕಟ್ಟಿಹಾಕಿ. ನೀಲಾದೇವಿಯನ್ನು ಪಡೆದನು. ಕುಂಭಕನೂ ಶ್ರೀಹರಿಯ ಅನುಗ್ರಹದಿಂದ ನೀಲವಾದ ವೈಕುಂಠಪುರವನ್ನು ಪಡೆದನು.

## ಪ್ರಲಂಬಾಸುರ ಸಂಹಾರ

ಒಂದು ದಿನ ಪ್ರಲಂಬಾಸುರ ಎಂಬ ದೈತ್ಯನು ಕಂಸನಿಂದ ಪ್ರೇರಿತನಾಗಿ ಬಾಲಕರನ್ನು ಸಂಹರಿಸುತ್ತಾ ಶ್ರೀಕೃಷ್ಣದೇವನಿರುವಲ್ಲಿಗೆ ಗೊಲ್ಲಬಾಲಕನ ರೂಪದಿಂದ ಬಂದನು. ಅವನನ್ನು ನೋಡಿದ ಕೂಡಲೇ ಶ್ರೀಕೃಷ್ಣದೇವನು ಅವನನ್ನು ಸಂಹರಿಸುವುದಕ್ಕಾಗಿ ಅವನೊಡನೆ ಸ್ನೇಹವನ್ನು ಮಾಡುವಂತೆ ನಟಿಸಿದನು.

ಅಲ್ಲಿರುವ ಗೊಲ್ಲರೆಲ್ಲರನ್ನೂ ಎರಡು ಗುಂಪುಗಳಾಗಿ ವಿಭಾಗಿಸಿದನು. ಒಂದು ಗುಂಪಿಗೆ ತಾನೂ ಇನ್ನೊಂದು ಗುಂಪಿಗೆ ಬಲರಾಮನೂ ನಾಯಕರಾದರು. ಎರಡು ಗುಂಪುಗಳಲ್ಲಿಯೂ ಗೊಲ್ಲಬಾಲಕರ ಸಂಖ್ಯೆಯು ಸಮವಾಗಿರುವಂತೆ ಮಾಡಿದನು. ಶ್ರೀಕೃಷ್ಣದೇವನ ಗುಂಪಿನಲ್ಲಿ ಒಬ್ಬನೂ ಶ್ರೀಬಲರಾಮನ ಗುಂಪಿನಲ್ಲಿ ಒಬ್ಬನೂ ಜೋಡಿಯಾಗಿ ನಿರ್ದಿಷ್ಟವಾದ ಒಂದು ಸ್ಥಳದಿಂದ ಓಡಲು ಆರಂಭಿಸಬೇಕು. ಭಾಂಡೀರ ಎಂಬ ಆಲದಮರದವರೆಗೆ

ಓಡಬೇಕು. ಅಲ್ಲಿಂದ ಹಿಂದಿರುಗಿ ಹೊರಟ ಸ್ಥಳಕ್ಕೆ ಬಂದು ಸೇರಬೇಕು. ಮೊದಲು ಹಿಂದಿರುಗಿ ಬಂದವನು ಜಯಿಸಿದವನು. ಜಯಿಸಿದವನನ್ನು ಸೋತವನು ಹೊತ್ತುಕೊಂಡು ಪುನಃ ಭಾಂಡೀರ ಎಂಬ ಮರದ ವರೆಗೆ ಹೋಗಿ ಹಿಂದಿರುಗಿ ಬರಬೇಕು. ಈ ಆಟವನ್ನು ಆಡಬೇಕೆಂದು ಶ್ರೀಕೃಷ್ಣದೇವನು ಎಲ್ಲಾ ಗೊಲ್ಲಬಾಲಕರಿಗೆ ಹೇಳಿದಾಗ ಎಲ್ಲರೂ ಒಪ್ಪಿದರು.

ಪ್ರಲಂಬ ಎಂಬ ದೈತ್ಯನು " ಈ ಆಟದಲ್ಲಿ ಕೃಷ್ಣನ ಜೊತೆಯಲ್ಲಾಗಲೀ ಬಲರಾಮನ ಜೊತೆಯಲ್ಲಾಗಲೀ ನಾನು ಆಡಬೇಕು. ಕೃಷ್ಣನು ಪೂತನಾ ಮುಂತಾದ ದೈತ್ಯರನ್ನು ಸಂಹರಿಸಿ ಅತಿಬಲಿಷ್ಠನೆಂದು ಪ್ರಸಿದ್ಧನಾದ ಅವನ ಜೊತೆಯಲ್ಲಿ ಆಟವಾಡಿ ಗೆಲ್ಲುವ ಸಂಭವವಿಲ್ಲ. ಆದ್ದರಿಂದ ಅವನ ಜೊತೆಯಲ್ಲಿ ಸೇರಿ ಜೋಡಿಯಾಗಿ ಆಡಿ ಪ್ರಯೋಜನವಿಲ್ಲ. ಬಲರಾಮನೊಡನೆ ಜೋಡಿಯಾಗಿ ಆಡಬೇಕು. ಈ ಆಟದಲ್ಲಿ ನಾನು ಜಯಿಸುವ ಸಂಭವವುಂಟು. ಆದ್ದರಿಂದಲೇ ಕೃಷ್ಣನ ಗುಂಪಿನಲ್ಲಿ ಸೇರಬೇಕು. ಬಲರಾಮನನ್ನು ಸಂಹರಿಸಬೇಕು" ಎಂದು ತೀರ್ಮಾನಿಸಿ ಅದರಂತೆಯೇ ಮಾಡಿದನು.

ಪ್ರಲಂಬನು ಶ್ರೀಕೃಷ್ಣದೇವನ ಗುಂಪಿನಲ್ಲಿ ಸೇರಿದನು. ಶ್ರೀಕೃಷ್ಣದೇವನ ಗುಂಪಿನಲ್ಲಿ ಸೇರಿದವರಲ್ಲಿ ಪ್ರಲಂಬನನ್ನು ಬಿಟ್ಟು ಉಳಿದವರೆಲ್ಲರೂ ಪ್ರಲಂಬಗೆದ್ದರು. ಶ್ರೀಬಲರಾಮದೇವರ ಗುಂಪಿನಲ್ಲಿ ಸೇರಿದವರಲ್ಲಿ ಬಲರಾಮದೇವರನ್ನು ಬಿಟ್ಟು ಉಳಿದವರೆಲ್ಲರೂ ಸೋತರು. ಸೋತವರೆಲ್ಲರೂ ಗೆದ್ದವರನ್ನು ಹೊತ್ತುಕೊಂಡು ಭಾಂಡೀರ ಎಂಬ ಮರದ ವರೆಗೆ ಹೋಗಿ ಹಿಂದಿರುಗಿ ಬಂದರು.

ಕೊನೆಗೆ ಬಲರಾಮದೇವನೊಡನೆ ಆಟವಾಡಿ ಸೋತಿರುವ ಪ್ರಲಂಬನು ಬಲರಾಮದೇವನನ್ನು ಎತ್ತಿಕೊಂಡು ಭಾಂಡೀರ ಎಂಬ ಮರದ ವರಗೆ ಹೋದನು. ಅಲ್ಲಿಂದ ಹಿಂದಿರುಗಬೇಕಾಗಿತ್ತು. ಹಿಂದಿರುಗಲಿಲ್ಲ. ಮುಂದೆ ಮುಂದೆ ಹೋದನು. ಪರ್ವತದಂತೆ ಭಾರವುಳ್ಳ ಶ್ರೀಬಲರಾಮದೇವನನ್ನು ಎತ್ತಲು ಶಕ್ತನಾಗಲಿಲ್ಲ. ಆಗ ಪ್ರಲಂಬನು ತನ್ನ ನಿಜರೂಪವನ್ನು ಸ್ವೀಕರಿಸಿ ಓಡಲು ಆರಂಭಿಸಿದನು. ಆಗ ಕೋರೆಹಲ್ಲುಗಳಿಂದಲೂ ಬೆಂಕಿಯಿಂತೆ ಜ್ವಲಿಸುತ್ತಿರುವ ಜಡೆಯಿಂದಲೂ ಕರ್ಣಕುಂಡಲ ಕಿರೀಟ ಮುಂತಾದ ಆಭರಣಗಳಿಂದಲೂ ಯುಕ್ತನಾದ ಪ್ರಲಂಬನನ್ನು ಬಲರಾಮನು ನೋಡಿ ಹೆದರಿ ಶ್ರೀಕೃಷ್ಣದೇವನನ್ನು ಸ್ತುತಿಸಿದನು.

ಶ್ರೀಕೃಷ್ಣದೇವನು ಬಲರಾಮನನ್ನು ನೋಡಿ " ಅಣ್ಣಾ! ನೀನು ಸಾವಿರ ಹೆಡೆಗಳ ಮಧ್ಯದಲ್ಲಿ ಒಂದು ಹೆಡೆಯಲ್ಲಿ ಸಕಲ ಭೂಮಂಡಲವನ್ನೂ ಸಾಸಿವೆಕಾಳನ್ನು ಧರಿಸಿರುವಂತೆ ಲೀಲೆಯಿಂದ ಧರಿಸುತ್ತಿರುವ ಶೇಷದೇವನ ಅವತಾರವಾಗಿರುವಿ. ಅನಂತಕೋಟಿ ಬ್ರಹ್ಮಾಂಡಗಳನ್ನು ಧರಿಸಿರುವ ನಿನ್ನಲ್ಲಿ ನಾನು ಶುಕ್ಲಕೇಶರೂಪದಿಂದ ವಾಸಿಸುತ್ತಿರುವೆನು. ನೀನು ನಿನ್ನ ಶಕ್ತಿಯನ್ನೂ ನಿನ್ನಲ್ಲಿ ವಾಸಿಸುತ್ತಿರುವ ನನ್ನನ್ನೂ ಸ್ಮರಿಸು. ಇದರಿಂದ ನಿನ್ನಲ್ಲಿ ಸ್ವಾಭಾವಿಕಬಲವು ವ್ಯಕ್ತವಾಗುತ್ತದೆ. ಆ ಬಲದಿಂದ ಯುಕ್ತನಾಗಿ ಈ ಪ್ರಲಂಬನನ್ನು ಸಂಹರಿಸು" ಎಂದು ಆಜ್ಞಾಪಿಸಿದನು. ಬಲರಾಮದೇವನು ಅದರಂತೆ ಮಾಡಿದನು. ಅವನಲ್ಲಿ ಸ್ವಾಭಾವಿಕವಾದ ಶಕ್ತಿಯು ವ್ಯಕ್ತವಾಯಿತು. ಅವನು ಪ್ರಲಂಬನ ತಲೆಯ ಮೇಲೆ ಗುದ್ದಿದನು. ಆ ಪೆಟ್ಟಿನ ವೇಗವನ್ನು ತಾಳಲಾರದೆ ಪ್ರಲಂಬನು ಸತ್ತನು. ದೇವತೆಗಳೆಲ್ಲರೂ ಪುಷ್ಪದ ಮಳೆಯನ್ನು ಸುರಿಸುತ್ತಾ. " ಬಲದೇವ" ಎಂಬ ಹೆಸರನ್ನು ಕೊಟ್ಟರು. ಅಂದು ಸಕಲ ಗೋಪಾಲಕರೂ ಬಲದೇವನ ಪ್ರಭಾವವನ್ನು ತಿಳಿದು ಆಶ್ಚರ್ಯಚಕಿತರಾದರು.

**ದುರ್ಗಾರಣ್ಯಪ್ರವೇಶಾಚ್ಚ್ಯುತನಿಜಸರಣೀನ್ ಗೋಗಣಾನಾಹ್ವಯದ್ಯೋ**
**ದಾವಾಗ್ನಿಂ ತತ್ರ ಪೀತ್ವಾ ಸಮಪುಷದನುಗಾನ್ ಗೋಪಕಾನಾವಿಷಣ್ಣಾನ್ ।**
**ಗೋಭಿರ್ಗೋಪೈಃ ಪರೀತಃ ಸರಿದುದಕತಟಸ್ಥೋಪಲೇ ಭೋಜ್ಯಮನ್ನಮ್**
**ಭುಕ್ತ್ವಾ ವೇಣೋರ್ನಿನಾದಾದ್ವ್ರಜಗತವನಿತಾಚಿತ್ತಹಾರೀ ಸ ಮಾಽವ್ಯಾತ್ ॥ ೫ ॥**

**ಪದಚ್ಛೇದ :- ದುರ್ಗಾರಣ್ಯಪ್ರವೇಶಾತ್, ಚ್ಯುತನಿಜಸರಣೀನ್, ಗೋಗಣಾನ್, ಆಹ್ವಯತ್, ಯಃ, ದಾವಾಗ್ನಿಂ, ತತ್ರ, ಪೀತ್ವಾ, ಸಮಪುಷತ್, ಅನುಗಾನ್, ಗೋಪಕಾನ್, ಆವಿಷಣ್ಣಾನ್, ಗೋಭಿಃ, ಗೋಪೈಃ, ಪರೀತಃ, ಸರಿದುದಕತಟಸ್ಥೋಪಲೇ, ಭೋಜ್ಯಂ, ಅನ್ನಂ, ಭುಕ್ತ್ವಾ, ವೇಣೋಃ, ನಿನಾದಾತ್, ವ್ರಜಗತವನಿತಾಚಿತ್ತಹಾರೀ, ಸಃ ಮಾ, ಅವ್ಯಾತ್.**

**ಅನ್ವಯ:- ಯಃ ದುರ್ಗಾರಣ್ಯಪ್ರವೇಶಾತ್ ಚ್ಯುತನಿಜಸರಣೀನ್ ಗೋಗಣಾನ್ ಆಹ್ವಯತ್, ತತ್ರ ದಾವಾಗ್ನಿಂ ಪೀತ್ವಾ, ಆವಿಷಣ್ಣಾನ್ ಅನುಗಾನ್ ಗೋಪಕಾನ್ ಸಮಪುಷತ್ ಗೋಭಿಃ ಗೋಪೈಃ ಪರೀತಃ ಸರಿದುದಕತಟಸ್ಥೋಪಲೇ ಭೋಜ್ಯಂ ಅನ್ನಂ ಭುಕ್ತ್ವಾ, ವೇಣೋಃ ನಿನಾದಾತ್ ವ್ರಜಗತವನಿತಾಚಿತ್ತಹಾರೀ ಸಃ ಮಾ ಅವ್ಯಾತ್**

ಅನ್ವಯಾರ್ಥ :- **"ಯಃ"** ಯಾವ ಶ್ರೀಕೃಷ್ಣನು **" ದುರ್ಗಾರಣ್ಯಪ್ರವೇಶಾತ್"** ಪ್ರವೇಶಿಸುವುದಕ್ಕೆ ಕಷ್ಟಸಾಧ್ಯವಾದ ವನದಲ್ಲಿ ಪ್ರವೇಶಿಸಿದುದರಿಂದ **"ಚ್ಯುತನಿಜಸರಣೀನ್"** ತಪ್ಪಿಹೋದ ತಮ್ಮ ಮಾರ್ಗವುಳ್ಳ **"ಗೋಗಣಾನ್"** ಗೋವುಗಳ ಸಮೂಹಗಳನ್ನು **"ಆಹ್ವಯತ್"** ಕರೆದನೋ **"ತತ್ರ"** ಆ ಸಮಯದಲ್ಲಿ ಮತ್ತು ಅದೇಕಾಡಿನಲ್ಲಿ **"ದಾವಾಗ್ನಿಂ"** ಕಾಡಿನ ಬೆಂಕಿಯನ್ನು **"ಪೀತ್ವಾ"** ಕುಡಿದು **"ಆವಿಷಣ್ಣಾನ್"** ತುಂಬಾ ಹೆದರಿದ **"ಅನುಗಾನ್"** ತನ್ನನ್ನು ಅನುಸರಿಸಿ ಬಂದಿರುವ **"ಗೋಪಕಾನ್"** ಗೊಲ್ಲರನ್ನು **"ಸಮಪುಷತ್"** ಚೆನ್ನಾಗಿ ರಕ್ಷಿಸಿದನೋ **"ಗೋಭಿಃ"** ಗೋವುಗಳಿಂದಲೂ **"ಗೋಪೈಃ"** ಗೊಲ್ಲರಿಂದಲೂ **"ಪರೀತಃ"** ಸಹಿತನಾಗಿ **"ಸರಿದುದಕತಟಸ್ಥೋಪಲೇ"** ಯಮುನಾನದಿಯ ನೀರಿನ ಸಮೀಪದಲ್ಲಿದ್ದ ಕಲ್ಲಿನಲ್ಲಿ **"ಭೋಜ್ಯಂ"** ತಿನ್ನುವುದಕ್ಕೆ ಅರ್ಹವಾದ **"ಅನ್ನಂ"** ಅನ್ನವನ್ನು **"ಭುಕ್ತ್ವಾ"** ತಿಂದು **"ವೇಣೋಃ"** ಕೊಳಲಿನ **"ನಿನಾದಾತ್"** ಧ್ವನಿಯಿಂದ **"ವ್ರಜಗತವನಿತಾಚಿತ್ತಹಾರೀ"** ವೃಂದಾವನದಲ್ಲಿರುವ ಸ್ತ್ರೀಯರ ಮನಸ್ಸನ್ನು ಸೂರೆಗೊಂಡನೋ **"ಸಃ"** ಅವನು **"ಮಾ"** ನನ್ನನ್ನು **"ಅವ್ಯಾತ್"** ರಕ್ಷಿಸಲಿ.

(೨೦) **ವಿಶೇಷಾರ್ಥ:- ದುರ್ಗಾರಣ್ಯಪ್ರವೇಶಾತ್ ಚ್ಯುತನಿಜಸರಣೀನ್ ಗೋಗಣಾನ್ ಆಹ್ವಯತ್ ತತ್ರ ದಾವಾಗ್ನಿಂ ಪೀತ್ವಾ ಆವಿಷಣ್ಣಾನ್ ಅನುಗಾನ್ ಗೋಪಕಾನ್ ಸಮಪುಷತ್** - ಪ್ರವೇಶ ಮಾಡುವುದಕ್ಕೆ ಅಶಕ್ಯವಾದ ಕಾಡಿನಲ್ಲಿ ಪ್ರವೇಶಿಸಿದುದರಿಂದ ಗೋವುಗಳಿಗೆ ಹಾದಿ ತಪ್ಪಿಹೋಯಿತು. ಆ ಗೋವುಗಳ ಹೆಸರನ್ನು ಹೇಳಿ ಅವುಗಳನ್ನು ಶ್ರೀಕೃಷ್ಣದೇವನು ಕರೆದನು. ಅದೇ ಕಾಡಿನಲ್ಲಿ ಆಗ ಸುತ್ತಿಕೊಂಡು ಬಂದ ಕಾಡ್ಗಿಚ್ಚನ್ನು ಕುಡಿದನು. ತುಂಬಾ ದುಃಖಿತರಾದ ತನ್ನನ್ನು ಅನುಸರಿಸಿ ಬಂದ ಗೊಲ್ಲರೆಲ್ಲರನ್ನೂ ಕಾಪಾಡಿದನು.

## ಕಾಡಿನ ಬೆಂಕಿಯಿಂದ ಗೋವುಗಳನ್ನೂ ಗೋಪಾಲಕರನ್ನೂ ರಕ್ಷಿಸಿದ್ದು

**ವಿಶೇಷಾರ್ಥ ವಿವರಣ :-** ಷಣ್ಮುಖನ ವರದಿಂದ ಅವಧ್ಯನಾದ ಪ್ರಲಂಬಾಸುರನನ್ನು ಬಲರಾಮದೇವನ

ಮೂಲಕವಾಗಿ ಸಂಹರಿಸಿದ್ದಾಯಿತು. ಅವನು ಬಂದಮೇಲೆ ಅವನನ್ನು ಸಂಹರಿಸುವುದಕ್ಕಾಗಿ ಶ್ರೀಕೃಷ್ಣದೇವನು ಏರ್ಪಡಿಸಿದ ಆಟವು ಬಹುದೀರ್ಘಕಾಲದ ವರೆಗೆ ನಡೆಯಿತು. ಅಷ್ಟರ ವರೆಗೆ ಗೋವುಗಳ ಕಡೆಗೆ ಯಾರ ದೃಷ್ಟಿಯೂ ಇರಲಿಲ್ಲ. ಆ ಕಾಡಿನಲ್ಲಿ ಮರಗಳು ದಟ್ಟವಾಗಿ ಬೆಳೆದಿದ್ದವು. ಆ ಮರಗಳ ಮಧ್ಯದಲ್ಲಿ ಪ್ರವೇಶಿಸಿದ ಗೋವುಗಳಿಗೆ ದಿಕ್ಕೇತಿಳಿಯಲಿಲ್ಲ. ದಿಕ್ಕುತಿಳಿಯದೆ ಕಾಡಿನಿಂದ ಕಾಡಿಗೆ ಹೋಗುತ್ತಾ ಬಂದವು. ಭಾಂಡೀರ ಮರವುಳ್ಳ ದೇಶದಿಂದ ಹೊರಟು ಮುಂಜಾಟವೀ ಎಂಬ ಬಹುದೂರಪ್ರದೇಶದಲ್ಲಿ ಬಂದು ಸೇರಿದವು. ಆಟವು ಮುಗಿದ ಕೂಡಲೇ ಗೊಲ್ಲರೆಲ್ಲರೂ ಆ ಗೋವುಗಳನ್ನು ಗಮನಿಸಿದರು. ಗೋವುಗಳು ಕಾಣಿಸಲಿಲ್ಲ. ಕಾಡಿನಿಂದ ಕಾಡಿಗೆ ಸಂಚರಿಸುತ್ತಾ ಹುಡುಕಿದರು. ಗೋವುಗಳು ಇರುವ ಸ್ಥಳವು ತಿಳಿಯಲಿಲ್ಲ. ತುಂಬಾ ದುಃಖಿತರಾದರು. ಆಗ ಶ್ರೀಕೃಷ್ಣದೇವನು ಎತ್ತರವಾದ ಮರದ ಮೇಲೆ ಏರಿದನು. ಒಂದೊಂದು ಗೋವುಗಳಿಗೂ ಕರುಗಳಿಗೂ ಅವನು ಇಟ್ಟಿರುವ ಹೆಸರಿನಿಂದ ಕರೆದನು. ಶ್ರೀಕೃಷ್ಣದೇವನ ಗಂಭೀರವಾದ ಧ್ವನಿಯು ಮುಂಜಾಟವಿಯಲ್ಲಿರುವ ಗೋವುಗಳ ಕಿವಿಯಲ್ಲಿ ಬಿತ್ತು. ಅದನ್ನು ಕೇಳಿದ ಕೂಡಲೇ ದನಗಳು ಪ್ರತಿಧ್ವನಿಯನ್ನು ಮಾಡಿದವು. ಆ ಧ್ವನಿಯನ್ನು ಕೇಳಿದ ಗೊಲ್ಲರೆಲ್ಲರೂ ಮುಂಜಾಟವಿಗೆ ಬಂದರು.

ಗೋವುಗಳೆಲ್ಲವೂ ಈ ಗೊಲ್ಲರ ಗುಂಪನ್ನು ನೋಡಿ ಆನಂದಪರವಶವಾದವು. ಗೋವುಗಳನ್ನು ಅಟ್ಟಿಕೊಂಡು ಗೊಲ್ಲರು ಹಿಂದಿರುಗಿದರು. ಆಗ ಗೊಲ್ಲರ ಮತ್ತು ಗೋವುಗಳ ಸುತ್ತಲೂ ಕಾಡುಬೆಂಕಿಯು ಸುತ್ತಿರುವುದನ್ನು ಕಂಡು. ತುಂಬಾ ಹೆದರಿ ಪ್ರಾಣರಕ್ಷಣೆಗಾಗಿ ಶ್ರೀಕೃಷ್ಣದೇವನನ್ನು ಪ್ರಾರ್ಥಿಸಿದರು. ಆಗ ಶ್ರೀಕೃಷ್ಣದೇವನು ಅವರೆಲ್ಲರನ್ನೂ ಕಣ್ಣುಗಳನ್ನು ಮುಚ್ಚಿಕೊಳ್ಳುವಂತೆ ಆಜ್ಞಾಪಿಸಿದನು. ಅವರೆಲ್ಲರೂ ಹಾಗೆಯೇ ಮಾಡಿದರು. ಪುನಃ ಕಣ್ಣುಗಳನ್ನು ತೆರೆಯುವಂತೆ ಹೇಳಿದನು. ಅವರೆಲ್ಲರೂ ಕಣ್ಣುಗಳನ್ನು ತೆರೆದರು. ಆಗ ಅವರೆಲ್ಲರೂ ತಮ್ಮ ತಮ್ಮ ಗೋವುಗಳಿಂದ ಯುಕ್ತರಾಗಿ ಭಾಂಡೀರ ಮರದ ಕೆಳಗೆ ನಿಂತಿದ್ದರು. ಎಲ್ಲರೂ ತುಂಬಾ ಆಶ್ಚರ್ಯದಿಂದ ಯುಕ್ತರಾದರು. ಹೀಗೆ ಬೆಂಕಿಯ ಮಧ್ಯದಲ್ಲಿ ಸಿಕ್ಕಿದ್ದ ಗೊಲ್ಲರನ್ನೂ ಗೋವುಗಳನ್ನೂ ರಕ್ಷಿಸಿದನು.

# ವೇಣುಗೀತೆ

**(೨೧) ವಿಶೇಷಾರ್ಥ - ಗೋಭಿಃ ಗೋಪೈಶ್ಚ ಪರೀತಃ ಸರಿದುದಕತಟಸ್ಥೋಪಲೇ ಭೋಜ್ಯಂ ಅನ್ನಂ ಭುಕ್ತ್ವಾ ವೇಣೋಃ ನಿನಾದಾತ್ ವ್ರಜಗತವನಿತಾಚಿತ್ತಹಾರೀ**

ಗೋವುಗಳಿಂದಲೂ ಗೋಪಾಲಕರಿಂದಲೂ ಸಹಿತವಾಗಿ ಯಮುನಾನದಿಯ ತೀರದಲ್ಲಿರುವ ಕಲ್ಲಿನ ಮೇಲೆ ವಾಶಿತು ತಿನ್ನಬೇಕಾದ ಆಹಾರವನ್ನು ತಿಂದನು. ವೃಂದಾವನದಲ್ಲಿರುವ ಸ್ತ್ರೀಯರ ಮನಸ್ಸುಗಳನ್ನು ಕೊಳಲಿನ ಧ್ವನಿಯಿಂದ ಆಕರ್ಷಿಸಿದನು.

**"ಕದಾಚಿತ್ ಗೋಭಿರ್ಗೋಪಾಲೈಶ್ಚ ಸಹ ತತ್ರ ತತ್ರ ಸಂಚರನ್, ಯಮುನಾಜಲಸಮೀಪ ಏವ ವಿದ್ಯಮಾನಶಿಲಾಯಾಂ ಸ್ವಗೃಹಾದಾನೀತದಧ್ಯನ್ನಂ ಬಲರಾಮಾದಿಭಿಃ ಸಹ ಭುಕ್ತ್ವಾ ಕದಾಚಿದ್ಬಲರಾಮಾದಿಭಿಃ ಸಹ ಮನೋಹರಂ ಕುಸುಮಿತವನಂ ಪ್ರವಿಶ್ಯ ಸ್ಮರೋದಯಾನುಕೂಲವೇಣುನಾದಂ ಕುರ್ವನ್, ತಚ್ಛ್ರುತ್ವಾ ಸ್ಮರವಶೇನ ವಿಕ್ಷಿಪ್ತಮನೋಯುಕ್ತಗೋಪಸ್ತ್ರೀಭಿರ್ವರ್ಣಿತಚರಿತ್ರಃ, ತದಾ ಸ್ವಮುಖೋದ್ಗೀರ್ಣ-ವೇಣುನಾದಸ್ವರಾತ್ ಶ್ರೋತೄನ್ ಸರ್ವಾನತೋಷಯತ್.**

ಶ್ರೀಕೃಷ್ಣದೇವನು ಗೋವುಗಳಿಂದಲೂ ಗೊಲ್ಲರಿಂದಲೂ ಸಹಿತನಾಗಿ ವೃಂದಾವನದ ವನಗಳಲ್ಲಿ ಅಲ್ಲಲ್ಲಿ ಸಂಚರಿಸಿದನು. ಯಮುನಾನದಿಯ ನೀರಿನ ಸಮೀಪದಲ್ಲಿಯೇ ಇರುತ್ತಿದ್ದ ಬಂಡೆಕಲ್ಲುಗಳ ಮೇಲೆ ಪ್ರತಿದಿನ ಮಧ್ಯಾಹ್ನ ಮನೆಯಿಂದ ತಂದಿರುವ ಮೊಸರನ್ನವನ್ನೂ ನಾನಾ ವಿಧವಾದ ಭಕ್ಷ್ಯ ಭೋಜ್ಯಾದಿಗಳನ್ನೂ ತಿನ್ನುತ್ತಾ ಬಂದನು. ಅವನ ಪ್ರಸಾದಶೇಷವನ್ನು ಗೊಲ್ಲಬಾಲಕರೆಲ್ಲರೂ ತಿನ್ನುತ್ತಾ ಬಂದರು.

ಕೆಲ ಕಾಲ ಕೊಳಲನ್ನು ಊದುತ್ತಾ ಸ್ತ್ರೀಯರ ಮನಸ್ಸುಗಳನ್ನೆಲ್ಲವನ್ನೂ ಆಕರ್ಷಿಸಿದನು. ವೃಂದಾವನದಲ್ಲಿರುವ ಗೋಪಿಕಾಸ್ತ್ರೀಯರೆಲ್ಲರೂ ಶ್ರೀಕೃಷ್ಣದೇವನ ಕೊಳಲಿನ ಧ್ವನಿಯನ್ನು ಕೇಳುತ್ತಾ ಆ ಧ್ವನಿಯನ್ನು ಹೊಗಳಿದರು. "ಶ್ರೀಕೃಷ್ಣದೇವನೂ ಬಲರಾಮನೂ ಗೋವುಗಳನ್ನು ಓಡಿಸುತ್ತಾ ಕೊಳಲನ್ನು ಊದುತ್ತಿರುವಾಗ ಮಾವಿನ ಚಿಗುರು, ನವಿಲಿನ ಗರಿ, ಪುಷ್ಪಗಳ ಮಾಲಾ ಮುಂತಾದ ಅಲಂಕಾರಗಳಿಂದ ಭೂಷಿತರಾದ ಅವರಿಬ್ಬರನ್ನು ನೋಡಿದವರ ಕಣ್ಣುಗಳು ಸಾರ್ಥಕತೆಯನ್ನು ಪಡೆದಿರುವುವು. ಗೋಪಿಕಾಸ್ತ್ರೀಯರು ಅನುಭವಿಸಬೇಕಾದ ಅಧರಾಮೃತವನ್ನು ಏಕಾಕಿಯಾಗಿ ಅನುಭವಿಸುತ್ತಿರುವ ಕೊಳಲೇನು ಪುಣ್ಯವನ್ನು ಮಾಡಿದೆಯೋ? ಈ ವೇಣುಗಾನವನ್ನು ಕೇಳಿದ ದರ್ಭೆ ಮುಂತಾದ ನೀರಸವಾದ ಗಿಡಗಳೂ ಮರಗಳೂ ರೋಮಾಂಚದಿಂದ ಯುಕ್ತವಾಗಿ ಆನಂದಬಾಷ್ಪವನ್ನು ಸುರಿಸುತ್ತಿವೆ. ಶ್ರೀಕೃಷ್ಣದೇವನ ಹೆಜ್ಜೆಯ ಗುರುತಿನಿಂದ ಭೂಷಿತವಾದ ವೃಂದಾವನವು ಭೂಲೋಕಕ್ಕೆ ಅಪಾರವಾದ ಕೀರ್ತಿಯನ್ನು ಕೊಡುತ್ತಿದೆ. ಹೆಣ್ಣು ಜಿಂಕೆಗಳು ಶ್ರೀಕೃಷ್ಣದೇವನ ವೇಣುಗಾನವನ್ನು ಕೇಳಿ ಮೈಮರೆತು ಕೇಳುತ್ತಿವೆ. ದೇವತಾಸ್ತ್ರೀಯರು ಮೈಮರೆತು ಈ ವೇಣುಗಾನವನ್ನು ಕೇಳುತ್ತಿರುವರು. ಗೋವುಗಳು ಈ ವೇಣುಧ್ವನಿಯನ್ನು ಕೇಳುತ್ತಾ ಚಿತ್ರದಲ್ಲಿ ಬರೆಯಲ್ಪಟ್ಟ ವಿಗ್ರಹಗಳಂತೆ ನಿಂತಿರುವವು. ಪಕ್ಷಿಗಳೆಲ್ಲವೂ ಮುನಿಗಳಂತೆ ನಿಶ್ಶಬ್ದವಾಗಿ ಕೇಳುತ್ತಿವೆ. ನದಿಗಳು ಮನ್ಮಥ ಪರವಶವಾಗಿ ಉಕ್ಕಿ ಬರುತ್ತಾ ಶ್ರೀಕೃಷ್ಣದೇವನ ಪಾದಗಳನ್ನು ತೊಳೆಯುತ್ತಿವೆ. ಸೂರ್ಯದೇವನು ಬಿಸಿಲಿನಲ್ಲಿ ಸಂಚರಿಸುತ್ತಿರುವ ಶ್ರೀಕೃಷ್ಣದೇವನಿಗೆ ಮೇಘಗಳೆಂಬ ಕೊಡೆಗಳನ್ನು ಹಿಡಿಯುತ್ತಾ ಸೇವಿಸುತ್ತಿರುವನು. ಬೇಡರ ಸ್ತ್ರೀಯರು ಶ್ರೀಕೃಷ್ಣದೇವನ ಪಾದಧೂಳಿಗಳಿಂದ ಮಿಶ್ರಿತವಾದ ಕುಂಕುಮಗಳನ್ನು ಸ್ತನಗಳಲ್ಲಿಯೂ ಎದೆಗಳಲ್ಲಿಯೂ ಧರಿಸುತ್ತಾ ಮನಸ್ಸಿನಲ್ಲಿ ಏರ್ಪಟ್ಟ ಮನ್ಮಥವಿಕಾರವನ್ನು ಪರಿಹರಿಸಿಕೊಳ್ಳುತ್ತಿರುವರು. ಈ ಗೋವರ್ಧನ ಪರ್ವತವು ಶ್ರೀಕೃಷ್ಣದೇವನ ಪಾದಸ್ಪರ್ಶದಿಂದ ಏರ್ಪಟ್ಟ ಆನಂದದಿಂದ ಪರವಶವಾಗಿ ಗೆಡ್ಡೆಗೆಣಸು ಮುಂತಾದ ವಸ್ತುಗಳಿಂದ ಗೋವುಗಳನ್ನು ಸಂತೋಷಪಡಿಸುತ್ತಾ ಹರಿದಾಸರಲ್ಲಿ ಶ್ರೇಷ್ಠವೆನಿಸಿತು. ಈ ವೇಣುಗಾನವು ಚಲನವುಳ್ಳ ಪ್ರಾಣಿಗಳು ನಿಶ್ಚಲರಾಗುವಂತೆಯೂ ಚಲನವಿಲ್ಲದ ಜಡವಸ್ತುಗಳು ಚಲನವುಳ್ಳವುಗಳಾಗುವಂತೆಯೂ ಏರ್ಪಡಿಸುತ್ತಿದೆ. ಇದು ತುಂಬಾ ಆಶ್ಚರ್ಯ'' ಮುಂತಾದ ಮಾತುಗಳಿಂದ ವೇಣುಗಾನದ ಮಹಿಮೆಯನ್ನು ಹೊಗಳುತ್ತಾ ಹಗಲಿನ ಕಾಲವನ್ನೆಲ್ಲವನ್ನೂ ಕಳೆದರು. ॥ ೫ ॥

**ಕೃಷ್ಣೋಽಸ್ಮಾಕಂ ಪತಿಃ ಸ್ಯಾದಿತಿ ಕೃತತಪಸಾಂ ಮಜ್ಜನೇ ಗೋಪಿಕಾನಾಮ್**
**ನಗ್ನಾನಾಂ ವಸ್ತ್ರದಾತಾ ದ್ವಿಜವರವನಿತಾನೀತಮನ್ನಂ ಸಮಶ್ನನ್ ।**
**ಶ್ರಾಂತ್ಯೈರ್ಗೋಪ್ಯೈಃ ಸಮಂ ಯೋ ಬಲಮಥನಬಲಾವಾಹೃತೇಽಸ್ಮಿನ್ ಸವೃಷ್ಟೌ**
**ಪ್ರೋದ್ಧೃತ್ಯಾಹಾರ್ಯವರ್ಯಂ ನಿಜಜನಮಖಿಲಂ ಪಾಲಯನ್ ಪಾತ್ವಸೌ ಮಾಮ್ ॥ ೬ ॥**

**ಪದಚ್ಛೇದ :** - ಕೃಷ್ಣಃ ಅಸ್ಮಾಕಂ ಪತಿಃ ಸ್ಯಾತ್ ಇತಿ ಕೃತತಪಸಾಂ ಮಜ್ಜನೇ ಗೋಪಿಕಾನಾಂ ನಗ್ನಾನಾಂ ವಸ್ತ್ರದಾತಾ ದ್ವಿಜವರವನಿತಾನೀತಂ ಅನ್ನಂ ಸಮಶ್ನನ್ ಶ್ರಾಂತ್ಯೈಃ ಗೋಪ್ಯೈಃ ಸಮಂ ಯಃ ಬಲಮಥನಬಲೌ ಆಹೃತೇ

ಅಸ್ಮಿನ್ ಸವೃಷ್ಟೌ ಪ್ರೋದ್ಧೃತ್ಯ ಆಹಾರ್ಯವರ್ಯಂ ನಿಜಜನಂ ಅಖಿಲಂ ಪಾಲಯನ್ ಪಾತು ಅಸೌ ಮಾಮ್.

ಅನ್ವಯ - ಯಃ " ಕೃಷ್ಣಃ ಅಸ್ಮಾಕಂ ಪತಿಃ ಸ್ಯಾತ್" ಇತಿ ಕೃತತಪಸಾಂ ಮಜ್ಜನೇ ನಗ್ನಾನಾಂ ಗೋಪಿಕಾನಾಂ ವಸ್ತ್ರದಾತಾ, ದ್ವಿಜವರವನಿತಾನೀತಂ ಅನ್ನಂ ಶ್ರಾಂತ್ಯೈಃ ಗೋಪ್ಯೈಃ ಸಮಂ ಸಮಶ್ನನ್, ಬಲಮಥನಬಲೌ (ಸ್ವೇನ) ಆಹೃತೇ, ಅಸ್ಮಿನ್ ಸವೃಷ್ಟೌ, ಆಹಾರ್ಯವರ್ಯಂ ಪ್ರೋದ್ಧೃತ್ಯ, ಅಖಿಲಂ ನಿಜಜನಂ ಪಾಲಯನ್ ಅಸೌ ಮಾಂ ಪಾತು.

ಅನ್ವಯಾರ್ಥ :- "ಯಃ" ಯಾವ ಶ್ರೀಕೃಷ್ಣದೇವನು "(ನಃ)" ನಮಗೆ "ಕೃಷ್ಣಃ" ಶ್ರೀಕೃಷ್ಣದೇವನು "ಪತಿಃ" ಗಂಡನು "ಸ್ಯಾತ್" ಆಗಲಿ "ಇತಿ" ಹೀಗೆ ಸಂಕಲ್ಪಿಸಿ "ಕೃತತಪಸಾಂ" ಮಾಡಲ್ಪಟ್ಟ ತಪಸ್ಸಿನಿಂದ ಯುಕ್ತರಾಗಿರುವ "ಮಜ್ಜನೇ" ಸ್ನಾನಕಾಲದಲ್ಲಿ "ನಗ್ನಾನಾಂ" ಬತ್ತಲೆಯರಾಗಿದ್ದ "ಗೋಪಿಕಾನಾಂ" ಗೊಲ್ಲರ ಕನ್ಯೆಯರಿಗೆ "ವಸ್ತ್ರದಾತಾ" ವಸ್ತ್ರವನ್ನು ಕೊಟ್ಟವನಾಗಿಯೂ "ದ್ವಿಜವರವನಿತಾನೀತಂ" ಬ್ರಾಹ್ಮಣಶ್ರೇಷ್ಠರ ಪತ್ನಿಯರಿಂದ ತರಲ್ಪಟ್ಟ "ಅನ್ನಂ" ಅನ್ನವನ್ನು "ಶ್ರಾಂತ್ಯೈಃ" ಶ್ರಮದಿಂದ ಯುಕ್ತರಾದ "ಗೋಪ್ಯೈಃ ಸಮಂ" ಗೊಲ್ಲಬಾಲಕರೊಡನೆ "ಸಮಶ್ನನ್" ತಿನ್ನುತ್ತಿರುವವನಾಗಿಯೂ "ಬಲಮಥನಬಲೌ" ಬಲ ಎಂಬ ದೈತ್ಯನನ್ನು ಸಂಹರಿಸಿದ ದೇವೇಂದ್ರನಿಗೆ ಸೇರಬೇಕಾದ ಆಹಾರವು "ಆಹೃತೇ ಸತಿ" ಅಪಹರಿಸಲ್ಪಟ್ಟಾಗ "ಅಸ್ಮಿನ್" ಈ ದೇವೇಂದ್ರನು "ಸವೃಷ್ಟೌ ಸತಿ" ಮಳೆಯಿಂದ ಸಹಿತನಾಗಿರುವಾಗ "ಆಹಾರ್ಯವರ್ಯಂ" ಆಹಾರ್ಯ ಎಂಬ ಹೆಸರುಳ್ಳ ಪರ್ವತಗಳಲ್ಲಿ ಶ್ರೇಷ್ಠವಾದ ಗೋವರ್ಧನಪರ್ವತವನ್ನು "ಪ್ರೋದ್ಧೃತ್ಯ" ಎತ್ತಿ "ಅಖಿಲಂ" ಸಮಸ್ತರಾದ "ನಿಜಜನಂ" ಸ್ವಜನರನ್ನು "ಪಾಲಯನ್" ರಕ್ಷಿಸುತ್ತಿರುವವನೂ ಆದ "ಅಸೌ" ಈ ಶ್ರೀಕೃಷ್ಣದೇವನು "ಮಾಂ" ನನನ್ನು "ಪಾತು" ರಕ್ಷಿಸಲಿ.

## ಗೋಪಕನ್ಯೆಯರು ಕಾತ್ಯಾಯನೀ ವ್ರತವನ್ನು ಮಾಡಿದರು

(೨೨) ವಿಶೇಷಾರ್ಥ :- "ಕೃಷ್ಣಃ ಅಸ್ಮಾಕಂ ಪತಿಃ ಸ್ಯಾತ್" ಇತಿ ಕೃತತಪಸಾಂ ಮಜ್ಜನೇ ನಗ್ನಾನಾಂ ಗೋಪಿಕಾನಾಂ ವಸ್ತ್ರದಾತಾ - ಕೃಷ್ಣನು ತಮಗೆ ಪತಿಯಾಗಬೇಕೆಂದು ತಪಸ್ಸನ್ನು ಮಾಡಿದರಾ ಸ್ನಾನಕಾಲದಲ್ಲಿ ಬತ್ತಲೆಯರೂ ಆಗಿದ್ದ ಗೋಪಕನ್ಯೆಯರಿಗೆ ಶ್ರೀಕೃಷ್ಣದೇವನು ವಸ್ತ್ರವನ್ನು ಕೊಟ್ಟನು.

"ಕೃಷ್ಣಃ ಸ್ವಪತಿತ್ವಹೇತೋಃ ಕಾತ್ಯಾಯನ್ಯರ್ಚನಾದಿಭಿಃ ತಪೋಽನುಷ್ಠಾತ್ರೀಣಾಂ ಸ್ವಸ್ವವಾಸಾಂಸಿ ತೀರೇ ನಿಧಾಯ ಯಮುನಾಯಾಂ ಮಜ್ಜನಂ ಕುರ್ವತೀನಾಂ ಕುಮಾರಿಕಾಣಾಮಭೀಷ್ಟಫಲದಾನಾಯ ವಯಸ್ಯೈಃ ಸಹ ತತ್ರ ಗತ್ವಾ, ತಾನಿ ವಾಸಾಂಸ್ಯುಪಾದಾಯ ನೀಪವೃಕ್ಷಮಾರುಹ್ಯ ತಾಭಿಃ ಪ್ರಾರ್ಥಿತಃ ನಾನಾವಿಧೋಪ ಹಾಸಪೂರ್ವಕಾಂ ತಾಸಾಂ ವಾಸಾಂಸಿ ದತ್ವಾ ತಾ ಅನುಜ್ಞಾಪ್ಯ."

ಶ್ರೀಕೃಷ್ಣದೇವನೇ ತಮಗೆ ಪತಿಯಾಗಬೇಕೆಂದು ಸಂಕಲ್ಪಿಸಿ ತಪಸ್ಸನ್ನು ಮಾಡುತ್ತಿರುವವರೂ ಸ್ನಾನಕಾಲದಲ್ಲಿ ಬತ್ತಲೆಯರೂ ಆಗಿರುವ ಗೋಪಕನ್ಯೆಯರಿಗೆ ಅಭೀಷ್ಟವಾದ ಫಲಗಳನ್ನು ಕೊಡುವುದಕ್ಕೋಸ್ಕರ ಸಂಗಡಿಗರೊಡನೆ ಅಲ್ಲಿಗೆ ಬಂದು ಅವರ ವಸ್ತ್ರಗಳನ್ನೂ ಅಪಹರಿಸಿ. ಕಂಬಮರದ ಮೇಲೆ ಏರಿದನು. ಅವರಿಂದ ಪ್ರಾರ್ಥಿಸಲ್ಪಟ ಕೃಷ್ಣನು ನಾನಾ ವಿಧವಾದ ಉಪಹಾಸವಚನಗಳನ್ನು ಹೇಳಿ ಅವರ ಸೀರೆಗಳನ್ನು ಕೊಟ್ಟನು. ಅವರು ಕೇಳಿದ ವರಗಳನ್ನು ಕೊಟ್ಟು ಅವರವರ ಮನೆಗಳಿಗೆ ಕಳುಹಿಸಿದನು.

**ವಿಶೇಷಾರ್ಥ ವಿವರಣ :-** ಹಿಂದೆ ಉತ್ತಮರಾದ ಅಪ್ಸರ ಸ್ತ್ರೀಯರಲ್ಲಿ ಕೆಲವರು ಶ್ರೀಹರಿಯನ್ನು ಕುರಿತು ಉಗ್ರವಾದ ತಪಸ್ಸುಗಳನ್ನು ಮಾಡಿ ಸಂತೋಷಗೊಳಿಸಿದರು. ಉಪನಯನಕ್ಕಿಂತ ಪೂರ್ವದಲ್ಲಿಯೇ ಶ್ರೀಹರಿಯ ಅಂಗಸಂಗವು ತಮಗೆ ಏರ್ಪಡಬೇಕೆಂದು ವರವನ್ನು ಕೇಳಿದರು. ಶ್ರೀಹರಿಯು ಕೃಷ್ಣಾವತಾರಕಾಲದಲ್ಲಿ ಹಾಗೆ ಮಾಡುವುದಾಗಿ ವರವನ್ನು ಕೊಟ್ಟನು. ಅವರೆಲ್ಲರೂ ಗೋಪಕನ್ಯೆಯರಾಗಿ ಶ್ರೀಕೃಷ್ಣಾವತಾರಕಾಲದಲ್ಲಿ ವೃಂದಾವನದಲ್ಲಿ ಹುಟ್ಟಿದರು. ಹಿಂದಿನ ಜನ್ಮದ ಸಂಸ್ಕಾರಬಲದಿಂದ ಈ ಜನ್ಮದಲ್ಲಿ ಅವರೆಲ್ಲರೂ ಶ್ರೀಕೃಷ್ಣನನ್ನೇ ವಿವಾಹ ಮಾಡಿಕೊಳ್ಳಬೇಕೆಂದು ತೀರ್ಮಾನಿಸಿದರು. ಅದಕ್ಕಾಗಿ ಮಾರ್ಗಶೀರ್ಷಮಾಸದಲ್ಲಿ ಅರುಣೋದಯಕಾಲದಲ್ಲಿ ಎದ್ದು ಕಾತ್ಯಾಯನೀವ್ರತವನ್ನು ಮಾಡಿದರು.

ಚಳಿಗಾಲದಲ್ಲಿ ಪತಿಯನ್ನು ವಶಮಾಡಿಕೊಳ್ಳುವುದು ಸುಲಭ ಎಂದು ತೀರ್ಮಾನಿಸಿದರು. ಅದಕ್ಕಾಗಿ ಮಾರ್ಗಶೀರ್ಷಮಾಸವನ್ನು ಆರಿಸಿದರು. ಶ್ರೀಕೃಷ್ಣದೇವನ ವಿಚಿತ್ರತೇಜಸ್ಸನ್ನು ನೋಡಿ ಅವನನ್ನು ಉತ್ತಮವಾದ ವ್ರತಗಳಿಂದಲೇ ವಶಪಡಿಸಿಕೊಳ್ಳಬೇಕೆಂದು ತೀರ್ಮಾನಿಸಿದರು. ಪುರುಷದೇವತೆಗಳನ್ನು ಆರಾಧಿಸಿ ಅವರಿಂದ ಶ್ರೀಕೃಷ್ಣದೇವನೇ ತಮಗೆ ಪತಿಯಾಗಬೇಕೆಂದು ವರವನ್ನು ಬೇಡಲು ನಾಚಿಕೆಯಾಯಿತು. ಅದಕ್ಕಾಗಿ ಪುರುಷದೇವತೆಗಳನ್ನು ಆರಾಧಿಸಬಾರದೆಂದು ತೀರ್ಮಾನಿಸಿದರು. ಅಪ್ಸರಸ್ತ್ರೀಯರೇ ಮೊದಲಾದ ಸಕಲ ದೇವತಾಸ್ತ್ರೀಯರು ಪರಮಸುಂದರನಾದ ಶ್ರೀಕೃಷ್ಣದೇವನನ್ನು ಬಯಸುವುದು ಸಹಜವಾಗಿದೆ. ತಮ್ಮಂತೆಯೇ ಶ್ರೀಕೃಷ್ಣದೇವನನ್ನು ಬಯಸುತ್ತಿರುವ ಅಪ್ಸರ ಸ್ತ್ರೀಯರನ್ನು ನೋಡಿ ಶ್ರೀಕೃಷ್ಣದೇವನು ತಮಗೆ ಪತಿಯಾಗಬೇಕೆಂದು ವರವನ್ನು ಬೇಡುವುದು ಅನುಚಿತವೆಂದೂ ಅವರೂ ಸಹ ಆ ವರವನ್ನು ಕೊಡಲಾರರೆಂದೂ ಅಂಜಿದರು. ಅದಕ್ಕಾಗಿ ಅವರನ್ನು ಆರಾಧಿಸಬಾರದೆಂದು ತೀರ್ಮಾನಿಸಿದರು.

ಲಕ್ಷ್ಮೀದೇವಿಯರು ಶ್ರೀಕೃಷ್ಣದೇವನಿಗೆ ತಂಗಿಯಾಗಿ ಅವತರಿಸಿರುವರು. ಈ ಅವತಾರವು ಮುಗಿಯುವವರೆಗೆ ಈ ರೂಪದಿಂದ ಶ್ರೀಕೃಷ್ಣದೇವನನ್ನು ವಿವಾಹಮಾಡಿಕೊಳ್ಳುವಂತಿಲ್ಲ. ಆದ್ದರಿಂದ ತಾವೆಲ್ಲರೂ ಶ್ರೀಕೃಷ್ಣದೇವನನ್ನು ವಿವಾಹಮಾಡಿಕೊಂಡರೂ ಸಹ ಅವರಿಗೆ ಸವತಿಮಾತ್ಸರ್ಯವು ಏರ್ಪಡಲಾರದು.

ಅದು ಮಾತ್ರವಲ್ಲ. ಸಕಲ ಜನರಿಗೆ ಜನನಿಯಾಗಿರುವ ಲಕ್ಷ್ಮೀದೇವಿಯರು ತಮಗೂ ತಾಯಿಯಾಗಿರುವರು. ಅವರಲ್ಲಿ ನಾಚಿಕೆಯಿಲ್ಲದೆ ತಮ್ಮ ಆಸೆಯನ್ನು ತಿಳಿಸಬಹುದು. ಅವರೂ ತಮ್ಮ ಆಸೆಯನ್ನು ಪೂರ್ತಿ ಮಾಡುವುದರಲ್ಲಿ ಸಂಶಯವಿಲ್ಲ. ಆದ್ದರಿಂದ ಕಾತ್ಯಾಯನೀ ಎಂದು ಪ್ರಸಿದ್ಧರಾಗಿರುವ ಲಕ್ಷ್ಮೀದೇವಿಯರನ್ನು ತೃಪ್ತಿಪಡಿಸುವುದಕ್ಕಾಗಿ ಕಾತ್ಯಾಯನೀವ್ರತವನ್ನು ಮಾಡುವುದಾಗಿ ತೀರ್ಮಾನಿಸಿದರು.

ಶ್ರೀಲಕ್ಷ್ಮೀದೇವಿಯರು ಶ್ರೀಕೃಷ್ಣದೇವನ ಅತ್ಯಂತ ಪ್ರಿಯರಾದ ಪತ್ನಿಯರು. ಅವರ ಸ್ಥಾನವನ್ನು ಬಯಸುತ್ತಿರುವ ಈ ಗೋಪಕನ್ಯೆಯರು ಅವರ ವೈರಿಗಳೆಂದು ಹೇಳಿದರೆ ತಪ್ಪಾಗಲಾರದು. ಅಂತಹ ಗೋಪಕನ್ಯೆಯರನ್ನು ಶ್ರೀಕೃಷ್ಣದೇವನು ಅನುಗ್ರಹಿಸಲಾರನು. ಲಕ್ಷ್ಮೀದೇವಿಯರ ವಿಶೇಷಾನುಗ್ರಹವನ್ನು ಪಡೆಯಲು ಈ ಗೋಪಕನ್ಯೆಯರು ಕಾತ್ಯಾಯನೀದೇವಿಯರನ್ನು ಆರಾಧಿಸಲೇಬೇಕು. ಅದಕ್ಕಾಗಿಯೂ ಈ ಗೋಪಕನ್ಯೆಯರು ಕಾತ್ಯಾಯನೀವ್ರತವನ್ನು ಮಾಡಿದ್ದು ತುಂಬಾ ಯುಕ್ತವಾಗಿದೆ.

ಆ ಗೋಪಕನ್ಯೆಯರು ಪ್ರತಿದಿನ ಅರುಣೋದಯಕಾಲದಲ್ಲಿ ಗುಂಪುಗೂಡಿಕೊಂಡು ಶ್ರೀಕೃಷ್ಣದೇವನ

ಮಹಿಮೆಗಳನ್ನು ಗಟ್ಟಿಯಾಗಿ ಹಾಡುತ್ತಾ ಯಮುನಾನದೀತೀರಕ್ಕೆ ಬಂದರು. ತಮ್ಮ ಸೀರೆಗಳನ್ನು ನದೀತೀರದಲ್ಲಿ ಇಟ್ಟು ಬತ್ತಲೆಯಾಗಿ ಸ್ನಾನ ಮಾಡಿದರು. ಸ್ನಾನವು ಮುಗಿದ ಕೂಡಲೇ ತಮ್ಮ ತಮ್ಮ ಸೀರೆಗಳನ್ನು ಉಟ್ಟುಕೊಂಡು ತಿಲಕಗಳನ್ನು ಧರಿಸಿದರು.

**ಕಾತ್ಯಾಯನಿ ಮಹಾಮಾಯೇ ಮಹಾಯೋಗಿನ್ಯಧೀಶ್ವರಿ।**
**ನಂದಗೋಪಸುತಂ ದೇವಿ ಪತಿಂ ಮೇ ಕುರು ತೇ ನಮಃ॥**

ಉಸುಗಿನಿಂದ ನಿರ್ಮಿತವಾದ ಶ್ರೀಕೃಷ್ಣದೇವನ ವಿಗ್ರಹವನ್ನು ಮೇಲ್ಕಂಡ ಮಂತ್ರದಿಂದ ಷೋಡಶೋಪಚಾರಗಳಿಂದ ಪೂಜಿಸಿದರು.

ದಂಪತಿಗಳಿಗೆ ಪ್ರೇಮಾತಿರೇಕದಿಂದ ಆಗಾಗ್ಗೆ ಅನ್ಯೋನ್ಯವಾಗಿ ಕಲಹಗಳು ಏರ್ಪಡುವುದೂ ಅವರ್ಲ್ಲಿಬರಲ್ಲಿ ಯಾರಾದರೂ ಒಬ್ಬರು ಒಗ್ಗಿ ಹೋದುದರಿಂದ ಕಲಹಶಾಂತಿಯು ಏರ್ಪಡುವುದು ಸಹಜ. ಅದರಂತೆ ತಮಗೂ ಶ್ರೀಕೃಷ್ಣದೇವನಿಗೂ ಪ್ರೇಮಕಲಹವು ಏರ್ಪಟ್ಟಾಗ ಆ ಕಲಹವು ಶಾಂತವಾಗುವುದಕ್ಕಾಗಿ ಶ್ರೀಕೃಷ್ಣದೇವನೇ ಒಗ್ಗಿಹೋಗಬೇಕು. ಈ ಆಸೆಯಿಂದ ದುರ್ಗಾದೇವಿಯನ್ನು ಅತ್ಯಂತ ಭಕ್ತಿಯಿಂದ ನಮಸ್ಕರಿಸಿದರು. ಇದರಿಂದ ನಾವೆಲ್ಲರೂ ತನುಮನಧನಗಳಿಂದ ನಿನ್ನಲ್ಲಿ ನಮ್ರರಾದಂತೆ ಶ್ರೀಕೃಷ್ಣದೇವನೂ ನಮ್ಮಲ್ಲಿ ನಮ್ರನಾಗುವಂತಾಗ ಬೇಕೆಂದು ತಿಳಿಸಿದರು.

ಶ್ರೀಕೃಷ್ಣದೇವನು ತಮ್ಮ ಜಡೆಯಲ್ಲಿ ಪುಷ್ಪದ ಮಾಲೆಯನ್ನು ಮುಡಿಸಬೇಕೆಂಬ ಆಸೆಯಿಂದ ಪುಷ್ಪದ ಮಾಲೆಗಳನ್ನು ಸಮರ್ಪಿಸಿದರು. ನಮ್ಮ ಜೊತೆಯಲ್ಲಿ ಶ್ರೀಕೃಷ್ಣದೇವನು ಸ್ನಾನವನ್ನು ಮಾಡಲಿ. ಒದ್ದೆಯಾದ ತಮ್ಮ ತಲೆಗೂದಲುಗಳನ್ನು ಧೂಪದಿಂದ ಆರಿಸಲಿ ಎಂದು ಆಶಿಸುತ್ತಾ ಧೂಪವನ್ನು ಸಮರ್ಪಿಸಿದರು. ನಮ್ಮನ್ನು ಗಟ್ಟಿಯಾಗಿ ಆಲಿಂಗಿಸಲಿ. ತನ್ನ ದೇಹದಲ್ಲಿ ಗಂಧವನ್ನೂ ತಿಲಕವನ್ನೂ ಗಟ್ಟಿಯಾದ ಆಲಿಂಗನದಿಂದ ನಮ್ಮದೇಹದಲ್ಲಿ ಅಂಟಿಕೊಳ್ಳುವಂತೆ ಮಾಡಲಿ ಎಂಬ ಆಸೆಯಿಂದ ಗಂಧವನ್ನೂ ತಿಲಕವನ್ನೂ ಸಮರ್ಪಿಸಿದರು. ಶ್ರೀಕೃಷ್ಣದೇವನು ಪುನಃ ಪುನಃ ಹಲ್ಲುಗಳಿಂದ ಅಗಿದ ತಾಂಬೂಲವನ್ನು ತಮಗೆ ಕೊಡಲಿ ಎಂಬ ಆಸೆಯಿಂದ ತಾಂಬೂಲವನ್ನು ಸಮರ್ಪಿಸಿದರು. ಶ್ರೀಕೃಷ್ಣದೇವನ ತೊಂಡೆಹಣ್ಣಿನಂತೆ ಅತಿಮೃದುವಾಗಿಯೂ ಕೆಂಪಾಗಿಯೂ ಇರುವ ತುಟಿಗಳಲ್ಲಿರುವ ಅಧರಾಮೃತದ ಆಸೆಯಿಂದ ಹಾಲನ್ನು ಸಮರ್ಪಿಸಿದರು. ರತಿಕ್ರೀಡಾಕಾಲದಲ್ಲಿ ನಮ್ಮದೇಹದಿಂದ ಕಳಚಿಬಿದ್ದಿರುವ ಆಭರಣಗಳಿಂದ ನಮ್ಮ ದೇಹಗಳನ್ನು ಶ್ರೀಕೃಷ್ಣದೇವನೇ ಅಲಂಕರಿಸಲಿ ಎಂಬ ಆಸೆಯಿಂದ ಆಭರಣಗಳನ್ನು ಸಮರ್ಪಿಸಿದರು. ಹೀಗೆ ಅತಿ ನಿಪುಣರಾದ ಗೋಪಕನ್ಯೆಯರು ತಮ್ಮ ತಮ್ಮ ಅಭೀಷ್ಟಸಿದ್ಧಿಗಾಗಿ ಕಾತ್ಯಾಯನೀದೇವಿಯರನ್ನು ಅತ್ಯಂತ ಭಕ್ತಿಯಿಂದ ಆರಾಧಿಸಿದರು. ಒಂದು ತಿಂಗಳವರೆಗೂ ಕಾತ್ಯಾಯನೀ ದೇವಿಯರಿಗೆ ಅರ್ಪಿಸಿದ ನೈವೇದ್ಯಶೇಷವನ್ನು ತಿನ್ನುತ್ತಾ ಕಾಲವನ್ನು ಕಳೆದರು.

## ಗೋಪಕನ್ಯಾ ವಸ್ತ್ರಾಪಹಾರ

ಗೋಪಕನ್ಯೆಯರು ಶ್ರೀಕೃಷ್ಣದೇವನ ಅಂಗಸಂಗಕ್ಕಾಗಿ ಅವನ ಪತ್ನಿಯಾಗಿರುವ ಕಾತ್ಯಾಯನೀದೇವಿಯರನ್ನು ಆರಾಧಿಸಿದರು. ಇದರಿಂದ ಕಾತ್ಯಾಯನೀದೇವಿಯರನ್ನು ಸವತಿಯರಾಗುವಂತೆ ಮಾಡಿಕೊಂಡಂತಾಯಿತು.

ಸವತಿಯರನ್ನು ಆರಾಧಿಸಿದರೆ ಇಷ್ಟಪ್ರಾಪ್ತಿಯಾಗುವುದೆ? ಇಲ್ಲ ಈ ಕನ್ಯೆಯರು ಮಾಡುತ್ತಿರುವ ವ್ಯಾಪಾರವು ಅವರ ಇಷ್ಟಪ್ರಾಪ್ತಿಗೆ ವಿರುದ್ಧವಾದ ವ್ಯಾಪಾರವೆನಿಸುತ್ತದೆ. ಶ್ರೀಕೃಷ್ಣದೇವನು ಈ ವಿಷಯವನ್ನು ತಿಳಿಸಬೇಕೆಂದು ತೀರ್ಮಾನಿಸಿದನು.

ಒಂದು ತಿಂಗಳಿನ ವರೆಗೆ ಅವರೆಲ್ಲರೂ ಕಾತ್ಯಾಯನೀವ್ರತವನ್ನು ಮಾಡಿದರು. ಕೊನೆಯ ದಿನದಲ್ಲಿ ಶ್ರೀಕೃಷ್ಣದೇವನು ಸಂಗಡಿಗರೊಡನೆ ಅರುಣೋದಯಕಾಲದಲ್ಲಿ ಅವರೆಲ್ಲರೂ ಸ್ನಾನಮಾಡುತ್ತಿರುವ ಸಮಯದಲ್ಲಿ ಯಮುನಾನದೀತೀರಕ್ಕೆ ಬಂದನು. ಅವರೆಲ್ಲರೂ ತಮ್ಮ ತಮ್ಮ ಸೀರೆಗಳನ್ನು ಯಮುನಾನದಿಯ ದಡದಲ್ಲಿಟ್ಟು ಬತ್ತಲೆಯರಾಗಿ ಸ್ನಾನವನ್ನು ಮಾಡುತ್ತಿದ್ದರು. ಸೀರೆಗಳನ್ನೆಲ್ಲಾ ಶ್ರೀಕೃಷ್ಣದೇವನು ಎತ್ತಿಕೊಂಡು. ಯಮುನಾನದಿಯ ತೀರದಲ್ಲಿರುವ ಕದಂಬಮರದ ಮೇಲೆ ಏರಿ ಆ ಮರದ ಶಾಖೆಗಳಲ್ಲಿ ಸೀರೆಗಳನ್ನು ಸಿಕ್ಕಿಸಿ ತಮಾಷೆಯನ್ನು ನೋಡುತ್ತಾ ಕುಳಿತನು. ಇದರಿಂದ ತಮ್ಮ ಅಭೀಷ್ಟಪ್ರಾಪ್ತಿಗೆ ವಿರುದ್ಧವಾದ ಸವತಿಯ ಆರಾಧನೆಗೆ ಯೋಗ್ಯವಾದ ವಿಘ್ನವನ್ನು ಮಾಡಿದಂತಾಯಿತು.

ಅವರೆಲ್ಲರೂ ಸ್ನಾನವನ್ನು ಮಾಡಿ ಮುಗಿಸಿದರು. ತಮ್ಮ ಸೀರೆಗಳನ್ನು ಉಟ್ಟುಕೊಳ್ಳುವುದಕ್ಕಾಗಿ ಸೀರೆಗಳ ಕಡೆಗೆ ತಿರುಗಿದರು. ಅಲ್ಲಿ ಸೀರೆಗಳಿಲ್ಲ. ಎಲ್ಲಾ ದಿಕ್ಕುಗಳಲ್ಲಿಯೂ ನೋಡಿದರು. ಅಲ್ಲಿಯೂ ಇಲ್ಲ. ಶ್ರೀಕೃಷ್ಣದೇವನು ನಗುವ ಧ್ವನಿಯು ಕೇಳಿಸಿತು. ಮೇಲೆ ನೋಡಿದರು. ತಮ್ಮ ಆಸೆಯ ಪತಿಯು ಮರದ ಮೇಲೆ ನಗುತ್ತಾ ಕುಳಿತಿರುವುದನ್ನು ಆಸೆಯಿಂದ ನೋಡಿದರು. ವಸ್ತ್ರಗಳನ್ನು ಕೇಳಿದರು. "ನೀವು ನಿಮ್ಮ ನಿಮ್ಮ ಸೀರೆಗಳನ್ನು ಇಲ್ಲಿಗೆ ಬಂದು ತೆಗೆದುಕೊಳ್ಳಿ ಸತ್ಯವಾಗಿ ಹೇಳುವೆನು. ತಮಾಷೆಗಾಗಿ ಹೇಳುತ್ತಿಲ್ಲ. ವ್ರತಗಳನ್ನು ಮಾಡಿ ಕೃತಾರ್ಥರಾಗಿರುವಿರಿ. ನಿಮ್ಮಲ್ಲಿ ತಮಾಷೆಯನ್ನು ಮಾಡುವುದು ಯುಕ್ತವಲ್ಲ. ನೀವೆಲ್ಲರೂ ಒಬ್ಬೊಬ್ಬರಾಗಿ ಬಂದರೂ ಬರಬಹುದು. ಎಲ್ಲರೂ ಒಟ್ಟುಗೂಡಿ ಬರಬಹುದು. ನಾನು ಸುಳ್ಳು ಹೇಳಿದವನಲ್ಲ. ಈ ವಿಷಯದಲ್ಲಿ ನಿಮಗೆ ಸಂಶಯವಿದ್ದರೆ ನನ್ನ ಮಿತ್ರರಾದ ಈ ಗೊಲ್ಲಬಾಲಕರನ್ನು ಕೇಳಿರಿ." ಇದು ಶ್ರೀಕೃಷ್ಣದೇವನ ಪ್ರೇಮದ ಕಟ್ಟಳೆ.

ಈ ಮಾತುಗಳನ್ನು ಗೋಪಕನ್ಯೆಯರು ಕೇಳಿ ಒಬ್ಬರ ಮುಖವನ್ನು ಇನ್ನೊಬ್ಬರು ನೋಡಿಕೊಂಡು. ನಗುತ್ತಾ ನಿಂತರು. ನೀರಿನಿಂದ ಹೊರಗೆ ಬರಲಿಲ್ಲ. ಶ್ರೀಕೃಷ್ಣದೇವನ ತಮಾಷೆ ಮಾತುಗಳಿಂದ ಪರವಶರಾದರು. ತಣ್ಣಗಿನ ನೀರಿನಲ್ಲಿ ಕುತ್ತಿಗೆಯ ವರೆಗೆ ಮುಳುಗಿಕೊಂಡಿರುವದರಿಂದ ಚಳಿಯಿಂದ ನಡುಗಿದರು.

"ಪ್ರಿಯನೇ! ನೀನು ಬೃಂದಾವನದಲ್ಲಿರುವವರಲ್ಲಿ ತುಂಬಾ ಮಾನ್ಯನಾಗಿರುವಿ. ಮಾನ್ಯನಾದ ನಂದನ ಕುಮಾರನಾಗಿರುವಿ. ನಾವೆಲ್ಲರೂ ನಿನ್ನ ದಾಸಿಯರು. ನೀನು ಹೇಳಿದಂತೆ ನಡೆದುಕೊಳ್ಳುವೆವು. ಚಳಿಯಿಂದ ನಡುಗುತ್ತಿದ್ದೇವೆ. ನಮ್ಮ ನಮ್ಮ ಸೀರೆಗಳನ್ನು ಕೊಡು. ಕೊಡದಿದ್ದರೆ ನಂದನಿಗೆ ಹೇಳುವೆವು" ಎಂದರು.

ಈ ಮಾತುಗಳನ್ನು ಶ್ರೀಕೃಷ್ಣದೇವನು ಕೇಳಿದನು " ನೀವು ನನ್ನ ದಾಸಿಯರಲ್ಲವೇ? ನಾನು ಹೇಳಿದಂತೆ ನಡೆದುಕೊಳ್ಳುವವರಲ್ಲವೇ? ಹಾಗಾದರೆ ಇಲ್ಲಿಗೆ ಬನ್ನಿ ನಿಮ್ಮ ನಿಮ್ಮ ಸೀರೆಗಳನ್ನು ತೆಗೆದುಕೊಳ್ಳಿ ನಾನು ಸೀರೆಗಳನ್ನು ಕೊಡದಿದ್ದರೆ ರಾಜನಲ್ಲಿ ಹೇಳುವಿರಲ್ಲವೇ? ಹೇಳಿಕೊಳ್ಳಿ . ರಾಜನು ಮಾಡುವುದನ್ನು ಮಾಡಲಿ" ಇದು ಶ್ರೀಕೃಷ್ಣದೇವನ ಉತ್ತರ.

ಅವರೆಲ್ಲರೂ ನಡುಗುತ್ತಾ ತಮ್ಮ ಎರಡು ಕೈಗಳಿಂದ ತಮ್ಮ ತಮ್ಮ ಗುಹ್ಯೇಂದ್ರಿಯಗಳನ್ನು ಮುಚ್ಚಿಕೊಂಡು ನೀರಿನಿಂದ ಮೇಲೆ ಬಂದರು. ಇವರ ಅತ್ಯಂತ ಪರಿಶುದ್ಧವಾದ ಭಕ್ತಿಯಿಂದ ಪ್ರಸನ್ನನಾದನು. ಆ ಸೀರೆಗಳನ್ನೆಲ್ಲಾ ಹೆಗಲಿನ ಮೇಲೆ ಇಟ್ಟುಕೊಂಡು. ಸಂತೋಷದಿಂದ ನಗುತ್ತಾ ಹೇಳಿದನು.

" ಅರುಣೋದಯಕಾಲದಲ್ಲಿ ಎಲ್ಲಾ ದೇವತೆಗಳೂ ಮುನಿಗಳೂ ಸ್ನಾನಾರ್ಥವಾಗಿ ಯಮುನಾ ಮುಂತಾದ ನದಿಗಳಿಗೆ ಬರುತ್ತಾರೆ. ಆ ಸಮಯದಲ್ಲಿ ವ್ರತವನ್ನು ಮಾಡುತ್ತಿರುವ ನೀವೆಲ್ಲರೂ ಬತ್ತಲೆಯರಾಗಿ ಅವರ ಮುಂದೆ ಸ್ನಾನವನ್ನು ಮಾಡಿರುವಿರಿ. ಇದರಿಂದ ದೇವತೆಗಳನ್ನೂ ಮುನಿಗಳನ್ನೂ ಅಪಮಾನ ಮಾಡಿದಂತಾಯಿತು. ಈ ಪಾಪದ ಪರಿಶುದ್ಧಿಗಾಗಿ ನನ್ನನ್ನು ನಮಸ್ಕರಿಸಿರಿ. ಇದರಿಂದ ನಿಮ್ಮ ಪಾಪಗಳೆಲ್ಲವೂ ದೂರವಾಗುತ್ತವೆ. ಆಮೇಲೆ ನಿಮ್ಮ ನಿಮ್ಮ ಸೀರೆಗಳನ್ನು ತೆಗೆದುಕೊಳ್ಳಿ" ಇದು ಶ್ರೀಕೃಷ್ಣದೇವನ ಮಾತು.

ಆ ಮಾತುಗಳನ್ನು ಕನ್ಯೆಯರು ಕೇಳಿದರು. "ಬತ್ತಲೆಯರಾಗಿ ಸ್ನಾನವನ್ನು ಮಾಡಿದ್ದರಿಂದ ವ್ರತಲೋಪವು ಏರ್ಪಟ್ಟಿತು." ಎಂದು ನಂಬಿದರು. ಒಂದು ಕೈಯಿಂದ ಗುಹ್ಯೇಂದ್ರಿಯವನ್ನು ಮುಚ್ಚಿಕೊಂಡರು. ಇನ್ನೊಂದು ಕೈಯಿಂದ ಶ್ರೀಕೃಷ್ಣದೇವನನ್ನು ನಮಸ್ಕರಿಸಿದರು.

ಶ್ರೀಕೃಷ್ಣದೇವನು ಅವರನ್ನು ನೋಡಿ " ಪೂಜ್ಯರಿಗೂ ಅವರಲ್ಲಿರುವ ನನಗೂ ಒಂದು ಕೈಯಿಂದ ನಮಸ್ಕರಿಸುವವನ ಕೈಯನ್ನು ಕತ್ತರಿಸಬೇಕೆಂದು ಶಾಸ್ತ್ರವು ಹೇಳುತ್ತದೆ. ನೀವೆಲ್ಲರೂ ಈ ಪವಿತ್ರ ಕಾಲದಲ್ಲಿ ಬತ್ತಲೆಯರಾಗಿ ಸ್ನಾನಮಾಡಿರುವುದು ಮೊದಲನೆಯ ಅಪರಾಧ. ನನ್ನನ್ನು ಒಂದು ಕೈಯಿಂದ ನಮಸ್ಕರಿಸಿರುವುದು ಎರಡನೆಯ ಅಪರಾಧ. ಈ ಎರಡು ವಿಧವಾದ ಅಪರಾಧಗಳಿಂದ ಬಂದಿರುವ ಪಾಪಗಳನ್ನು ಕಳೆದುಕೊಳ್ಳುವುದಕ್ಕಾಗಿ ನೀವೆಲ್ಲರೂ ಎರಡು ಕೈಗಳಿಂದ ನನ್ನನ್ನು ನಮಸ್ಕರಿಸಬೇಕು." ಎಂದು ಆಜ್ಞಾಪಿಸಿದನು.

ಅವರೆಲ್ಲರೂ ಎರಡು ಕೈಗಳಿಂದ ನಮಸ್ಕರಿಸಿದರು. ಲಜ್ಜೆಯನ್ನು ಬಿಟ್ಟರು. ಅವರೆಲ್ಲರನ್ನೂ ಆಟದ ಬೊಂಬೆಯನ್ನು ಆಡಿಸಿದಂತೆ ಶ್ರೀಕೃಷ್ಣದೇವನು ಆಡಿಸಿದನು. ಶ್ರೀಕೃಷ್ಣದೇವನು ಹೇಳಿದಂತೆಲ್ಲಾ ಅವರೆಲ್ಲರೂ ಮಾಡಿದರು. ಆದರೂ ಅವರಿಗೆ ಶ್ರೀಕೃಷ್ಣದೇವನ ಅಂಗಸಂಗದ ಆಸೆಯಿಂದ ಅವನ ಯಾವ ವ್ಯಾಪಾರವೂ ತಪ್ಪಾಗಿ ತೋರಲಿಲ್ಲ.

ಅವರ ಈ ಶುದ್ಧವಾದ ಭಕ್ತಿಯನ್ನು ನೋಡಿದ ಶ್ರೀಕೃಷ್ಣದೇವನಿಗೆ ಅವರಲ್ಲಿ ಕರುಣೆಯು ಉಕ್ಕಿ ಬಂತು. ಅವರವರ ಸೀರೆಗಳನ್ನು ಕೊಟ್ಟನು. ಅವರೆಲ್ಲರೂ ತಮ್ಮ ತಮ್ಮ ಸೀರೆಗಳನ್ನು ಉಟ್ಟುಕೊಂಡರು. ಪರಮಪ್ರಿಯನಾದ ಶ್ರೀಕೃಷ್ಣದೇವನ ಅಂಗಸಂಗದಲ್ಲಿ ಆಸೆಯು ಹೆಚ್ಚಿತು. ಲಜ್ಜೆಯಿಂದ ಶ್ರೀಕೃಷ್ಣದೇವನ ಮುಖವನ್ನು ಓರೆಗಣ್ಣಿನಿಂದ ನೋಡಿದರು. ಆ ಸ್ಥಳವನ್ನು ಬಿಟ್ಟು ಕದಲಲಿಲ್ಲ.

ಶ್ರೀಕೃಷ್ಣದೇವನು ನೋಡಿದನು. " ಇವರೆಲ್ಲರೂ ನನ್ನ ಪಾದಸ್ಪರ್ಶದ ಆಸೆಯಿಂದ ಒಂದು ತಿಂಗಳಿನ ವರೆಗೆ ಕಾತ್ಯಾಯನೀವ್ರತವನ್ನು ಮಾಡಿರುವರು. ಈಗ ಆ ವ್ರತದ ಫಲಕ್ಕಾಗಿ ಕಾದಿರುವರು." ಎಂದು ತೀರ್ಮಾನಿಸಿದನು. ಅವರನ್ನು ನೋಡಿ ಹೇಳಿದನು.

"ಎಲೈ ಕನ್ಯೆಯರೆ!, ನಿಮ್ಮ ಸಂಕಲ್ಪವನ್ನು ನಾನು ತಿಳಿದಿರುವೆನು. ನನ್ನ ಅಂಗಸಂಗವನ್ನು ಬಯಸಿ ನೀವು ನನ್ನನ್ನು ಪೂಜಿಸಿರುವಿರಿ. ಅದನ್ನೂ ಬಲ್ಲೆನು. ನಿಮ್ಮ ಸಂಕಲ್ಪವು ನನಗೆ ಸಮ್ಮತವಾಗಿದೆ. ಆ ಸಂಕಲ್ಪವು ಸತ್ಯವಾಗುತ್ತದೆ. ನನ್ನಲ್ಲಿ ಕಾಮದಿಂದ ಆಸೆಯನ್ನು ಇಟ್ಟಿರುವಿರಿ. ನನ್ನಲ್ಲಿಟ್ಟಿರುವ ಕಾಮವು ಸಂಸಾರಕ್ಕೆ ಕಾರಣವಾಗಲಾರದು. ಆ ಕಾಮವು ಹುರಿದ ಬೀಜದಂತೆಯೂ ಬೇಯಿಸಿದ ಬೀಜದಂತೆಯೂ ಇರುತ್ತದೆ. ಬೀಜವು ಗಿಡಕ್ಕೆ ಕಾರಣವಾಗಿದ್ದರೂ. ಹುರಿದ ಅಥವಾ ಬೇಯಿಸಿದ ಬೀಜವು ಗಿಡಕ್ಕೆ ಕಾರಣವಾಗುವುದೇ? ಅದರಂತೆ ಕಾಮವು ಸಂಸಾರಕ್ಕೆ ಕಾರಣವಾಗಿದ್ದರೂ ನನ್ನಲ್ಲಿಟ್ಟಿರುವ ಕಾಮವು ಭಕ್ತಿಯ ರೂಪವನ್ನು ಧರಿಸಿ ಸಂಸಾರದಿಂದ ಬಿಡುಗಡೆಗೆ ಕಾರಣವಾಗುತ್ತದೆ.

## ಉಪನಯನಕ್ಕಿಂತ ಪೂರ್ವದಲ್ಲಿ ಶ್ರೀಕೃಷ್ಣದೇವನ ವಿವಾಹ

" ಕನ್ಯೆಯರೇ! ಇಂದು ನಾನು ನಿಮ್ಮನ್ನು ಪರಿಗ್ರಹಿಸಿದೆನು. ನೀವೆಲ್ಲರೂ ವೃಂದಾವನಕ್ಕೆ ಹೋಗಿರಿ. ಇಂದಿನಿಂದ ಒಂದೊಂದು ರಾತ್ರಿಯಲ್ಲಿಯೂ ನನ್ನ ಅಂಗಸಂಗವನ್ನು ಪಡೆಯುವಿರಿ. ಸುಖವಾಗಿ ಕಾಲವನ್ನು ಕಳೆಯುವಿರಿ." ಇದು ಶ್ರೀಕೃಷ್ಣದೇವನ ಅಪ್ಪಣೆ. ಅವರೆಲ್ಲರೂ ಶ್ರೀಕೃಷ್ಣದೇವನನ್ನು ಬಿಟ್ಟುಹೋಗಲು ಮನಸ್ಸಿನಲ್ಲದೆ ತುಂಬಾ ಕಷ್ಟದಿಂದ ಅಲ್ಲಿಂದ ಹೊರಟು ವೃಂದಾವನವನ್ನು ಪ್ರವೇಶಿಸಿದರು. ಅವರೆಲ್ಲರೂ ಶ್ರೀಕೃಷ್ಣದೇವನನ್ನು ವಿವಾಹ ಮಾಡಿಕೊಂಡರು.

ಇತರರ ಪತ್ನಿಯರೂ ಶ್ರೀಕೃಷ್ಣದೇವನನ್ನು ವಿವಾಹಮಾಡಿಕೊಳ್ಳದವರೂ ಆಗಿರುವ ಅಸಂಖ್ಯ ಗೋಪಿಕಾಸ್ತ್ರೀಯರು ಕಾಮಪೀಡಿತರಾಗಿ ಚಂದ್ರನ ಬೆಳದಿಂಗಳಿನಿಂದ ಶೋಭಿತವಾದ ರಾತ್ರಿಕಾಲದಲ್ಲಿ ಶ್ರೀಕೃಷ್ಣದೇವನನ್ನು ಹುಡುಕಿಕೊಂಡು ಬಂದರು. ಅವರೆಲ್ಲರೂ ಶ್ರೀಕೃಷ್ಣದೇವನ ಅಂಗಸಂಗವನ್ನು ಪಡೆದರು.

ಶ್ರೀಕೃಷ್ಣದೇವನನ್ನು ವಿವಾಹ ಮಾಡಿಕೊಂಡಿರುವ ಗೋಪಕನ್ಯೆಯರಲ್ಲಿ ಹತ್ತು ಲಕ್ಷ ಮಕ್ಕಳುಗಳು ಹುಟ್ಟಿದರು. ಅವರೆಲ್ಲರೂ ಗೊಲ್ಲಸ್ತ್ರೀಯರ ಹೊಟ್ಟೆಯಲ್ಲಿ ಹುಟ್ಟಿದುದರಿಂದ ಗೊಲ್ಲರಾದರು. ಅವರೆಲ್ಲರೂ ನಾರಾಯಣ ಎಂಬ ಹೆಸರಿನಿಂದ ಯುಕ್ತರಾದರು. ಅವರೆಲ್ಲರೂ ದೇವತೆಗಳು. ಶ್ರೀಕೃಷ್ಣದೇವನ ಮಕ್ಕಳಾಗಿ ಹುಟ್ಟಬೇಕೆಂದೂ ಹಾಗೆ ಹುಟ್ಟಿದರೆ ತಮ್ಮ ತಂದೆಯಾದ ಶ್ರೀಕೃಷ್ಣದೇವನಲ್ಲಿ ಇತರರಿಗಿಂತ ಅಧಿಕವಾದ ಭಕ್ತಿಯನ್ನು ಪಡೆಯಬಹುದೆಂದೂ ಭಾವಿಸಿದರು. ಅದಕ್ಕಾಗಿ ತಪಸ್ಸನ್ನು ಮಾಡಿ ಶ್ರೀಹರಿಯಿಂದ ವರವನ್ನು ಪಡೆದು. ಶ್ರೀಕೃಷ್ಣದೇವನಿಗೆ ಮಕ್ಕಳಾಗಿ ಹುಟ್ಟಿದರು. ಕಾಮಪೀಡಿತರಾಗಿ ಬಂದಿರುವ ಇತರ ಸ್ತ್ರೀಯರಲ್ಲಿ ಮಕ್ಕಳು ಹುಟ್ಟಲಿಲ್ಲ.

ಶ್ರೀಕೃಷ್ಣದೇವನ ಪತ್ನಿಯರಾದ ಗೋಪಸ್ತ್ರೀಯರೂ ಅನ್ಯರ ಪತ್ನಿಯರಾದ ಗೋಪಸ್ತ್ರೀಯರೂ ಹಿಂದಿನ ಜನ್ಮದಲ್ಲಿ ತಮ್ಮೆಲ್ಲರಿಗೂ ಶ್ರೀಕೃಷ್ಣದೇವನ ಅಂಗಸಂಗವಾಗಬೇಕೆಂದು ಶ್ರೀಹರಿಯಿಂದ ವರವನ್ನು ಬೇಡಿದವರು. ಆ ಅಂಗಸಂಗವೂ ಉಪನಯನಕ್ಕಿಂತ ಪೂರ್ವದಲ್ಲಿಯೇ ಏರ್ಪಡಬೇಕು. ಬಲರಾಮದೇವನಿಗೆ ಮದುವೆಯಾಗುವುದಕ್ಕಿಂತ ಪೂರ್ವದಲ್ಲಿ ಏರ್ಪಡಬೇಕು. ಬಲರಾಮನಿಗೆ ಮದುವೆಯಾಗವುದಕ್ಕಿಂತ ಪೂರ್ವದಲ್ಲಿ ಕೆಲವು ಗೋಪಿಕಾಸ್ತ್ರೀಯರ ಸಂಗವು ಏರ್ಪಡುವುದುಂಟು. ಆ ಸ್ತ್ರೀಯರ ಸಂಗಕ್ಕಿಂತಲೂ ಪೂರ್ವದಲ್ಲಿ ಏರ್ಪಡಬೇಕು ಎಂದು ವರವನ್ನು ಕೇಳಿದ್ದರು.

ಆ ವರಗಳನ್ನು ಸತ್ಯವಾಗುವಂತೆ ಮಾಡುವುದಕ್ಕಾಗಿ ಶ್ರೀಕೃಷ್ಣದೇವನು ತನಗೆ ಉಪನಯನ ವಾಗುವುದಕ್ಕಿಂತ ಪೂರ್ವದಲ್ಲಿಯೂ ಬಲರಾಮನಿಗೆ ಗೋಪಸ್ತ್ರೀಯರ ಅಂಗಸಂಗವು ಏರ್ಪಡುವುದಕ್ಕಿಂತ ಪೂರ್ವದಲ್ಲಿಯೂ ವಿವಾಹಿತರಾದ ಗೋಪಸ್ತ್ರೀಯರಿಗೂ ಅವಿವಾಹಿತರಾದ ಗೋಪಸ್ತ್ರೀಯರಿಗೂ ಅಂಗಸಂಗವನ್ನು ಕೊಟ್ಟನು.

ಶ್ರೀಕೃಷ್ಣದೇವನು ತನ್ನನ್ನು ಆಶ್ರಯಿಸಿದ ಸರ್ವರ ಇಷ್ಟಾರ್ಥಗಳನ್ನು ಪೂರೈಸುವುದರಲ್ಲಿ ಚಿಂತಾಮಣಿಗೆ ಸಮನಾದವನು. ಆದ್ದರಿಂದಲೇ ಅವನೊಬ್ಬನೇ ಅಸಂಖ್ಯರಾದ ಸ್ತ್ರೀಯರನ್ನು ತೃಪ್ತಿಪಡಿಸಿದನು. ಅವನಿಗೆ ಪಾಪಲೇಪವಿಲ್ಲ. ಆದ್ದರಿಂದಲೇ ತನ್ನ ಅಣ್ಣನಾದ ಬಲರಾಮನಿಗೆ ಮದುವೆಯಾಗುವುದಕ್ಕಿಂತ ಪೂರ್ವದಲ್ಲಿ ಸ್ತ್ರೀಸಂಗದಿದಂಲೂ ಅನ್ಯರ ಪತ್ನಿಯರ ಸಂಗದಿಂದಲೂ ಅವನಿಗೆ ದೋಷವಿಲ್ಲ.

**(೨೩) ದ್ವಿಜವರವನಿತಾನೀತಂ ಅನ್ನಂ ಶ್ರಾಂತ್ಯೈಃ ಗೋಪ್ಯೈಃ ಸಮಂ ಸಮಶ್ನನ್**

ಬ್ರಾಹ್ಮಣಶ್ರೇಷ್ಠರ ಪತ್ನಿಯರಿಂದ ತರಲ್ಪಟ್ಟ ಅನ್ನವನ್ನು ಶ್ರಮದಿಂದ ಯುಕ್ತರಾದ ಗೊಲ್ಲರಿಂದ ಯುಕ್ತನಾಗಿ ತಿಂದನು.

## ಬ್ರಾಹ್ಮಣಪತ್ನಿಯರಿಗೆ ಶ್ರೀಕೃಷ್ಣನು ಮಾಡಿದ ಅನುಗ್ರಹ

**ವಿಶೇಷಾರ್ಥ :- ಕದಾಚಿದ್ವಯಸ್ಯೈಃ ಸಹ ದೂರೇ ಗಾಶ್ಚಾರಯನ್, ಕ್ಷುತ್ಪೀಡಿತೈಸ್ತೈರ್ಭೋಜನಾರ್ಥಂ ಪ್ರಾರ್ಥಿತಃ, " ಸಮೀಪ ಏವ ಬ್ರಾಹ್ಮಣಾಃ ಸತ್ರಯಾಗಂ ಕುರ್ವಂತಿ ತತ್ರ ಯೂಯಂ ಗತ್ವಾ ಬಲರಾಮಸಹಿತಂ ಮಾಮಿಹಾಗತಂ ತತ್ಪತ್ನೀಭ್ಯೋ ವಿಜ್ಞಾಪಯತ, ತಾಃ ಯುಷ್ಮಾಕಂ ಯಥೇಷ್ಟಮನ್ನಂ ದಾಸ್ಯಂತಿ" ಇತ್ಯುಕ್ತ್ವಾ ತಾನನುಜ್ಞಾಪ್ಯ, ತಾಭಿರಾನೀತಂ ಚತುರ್ವಿಧಂ ಷಡ್ರಸೋಪೇತಮನ್ನಂ ಬಲರಾಮಾದಿಭಿಃ ಸಹ ಭುಕ್ತ್ವಾ ತಾಸಾಮನುಗ್ರಹಂ ಕೃತ್ವಾ, ಅನುಜ್ಞಾಪ್ಯ.**

ಒಮ್ಮೆ ಆಹಾರಸಾಮಗ್ರಿಯನ್ನು ಯಾರೂ ತೆಗೆದುಕೊಳ್ಳದೆ ತುಂಬಾ ಬೇಗನೆ ಮನೆಯಿಂದ ಹೊರಟರು. ಗೋವುಗಳನ್ನು ಮೇಯಿಸುತ್ತಾ ಬಹುದೂರದ ವರೆಗೆ ಬಂದರು. ಅವರೆಲ್ಲರೂ ತುಂಬಾ ಹಸಿವಿನಿಂದ ಪೀಡಿತರಾದರು. ಶ್ರೀಕೃಷ್ಣದೇವನನ್ನು ಸಮೀಪಿಸಿ. "ಮಹಾಸ್ವಾಮಿ! ಹಸಿವಿನಿಂದ ತುಂಬಾ ಪೀಡಿತರಾಗಿರುವೆವು. ಸಮುಚಿತವಾದ ಆಹಾರವನ್ನು ಕೊಟ್ಟು ಹಸಿವು ಅಡಗುವಂತೆ ಮಾಡು." ಎಂದು ಪ್ರಾರ್ಥಿಸಿದರು.

ಶ್ರೀಕೃಷ್ಣದೇವನು ಅವರೆಲ್ಲರ ಹಸಿವನ್ನು ತನ್ನ ಸಂಕಲ್ಪಮಾತ್ರದಿಂದ ಅಡಗಿಸಬಲ್ಲನು. ಆದರೂ ಹಾಗೆ ಮಾಡಲಿಲ್ಲ. ಭಕ್ತಾಗ್ರೇಸರಳಾದ ಒಬ್ಬ ಬ್ರಾಹ್ಮಣನ ಪತ್ನಿಯನ್ನು ಅನುಗ್ರಹಿಸಬೇಕೆಂದು ಸಂಕಲ್ಪಿಸಿದನು. ಗೊಲ್ಲಬಾಲಕರೆಲ್ಲರನ್ನೂ ನೋಡಿದನು. " ಇಲ್ಲೇ ಸಮೀಪದಲ್ಲಿ ಬ್ರಹ್ಮಜ್ಞಾನಿಗಳಾದ ಕೆಲವು ಬ್ರಾಹ್ಮಣರು ಅಂಗಿರಸ ಎಂದು ಪ್ರಸಿದ್ಧವಾದ ಸತ್ರಯಾಗವನ್ನು ಮಾಡುತ್ತಿರುವರು. ನೀವು ಅಲ್ಲಿಗೆ ಹೋಗಿರಿ. ಆ ಬ್ರಾಹ್ಮಣರನ್ನು ನೋಡಿರಿ. ಬಲರಾಮನೊಡನೆ ನಾನು ಬಂದಿರುವುದಾಗಿ ತಿಳಿಸಿರಿ. ನಾನೂ ನನ್ನ ಅಣ್ಣನೂ ಹಸಿವಿನಿಂದ ಪೀಡಿತರಾಗಿರುವುದಾಗಿ ಹೇಳಿರಿ. ನನಗೂ ನನ್ನ ಅಣ್ಣನಿಗೂ ನನ್ನ ಪರಿವಾರದಲ್ಲಿ ಸೇರಿರುವ ನಿಮಗೂ ಸಾಕಾಗುವಷ್ಟು ಆಹಾರ ಸಾಮಗ್ರಿಯನ್ನು ಕೊಡಬೇಕೆಂದು ಬೇಡಿರಿ.." ಎಂದನು.

ಗೊಲ್ಲಬಾಲಕರೆಲ್ಲರೂ ಯಾಗಶಾಲೆಗೆ ಬಂದರು. ಬ್ರಾಹ್ಮಣರನ್ನು ನಮಸ್ಕರಿಸಿದರು. "ದೀಕ್ಷಿತನ ಅನ್ನವನ್ನು ತಿನ್ನಬಾರದೆಂದು ಹೇಳುವುದುಂಟು. ಆದರೆ ದೀಕ್ಷಾಸ್ವೀಕಾರಕಾಲದಲ್ಲಿ ಮಾಡುವ ದೀಕ್ಷಣೀಯಯಾಗವನ್ನೂ ಪಶುಯಾಗಗಳನ್ನೂ ಸೌತ್ರಾಮಣೀಯಾಗವನ್ನೂ ಬಿಟ್ಟು ಇತರ ಕಾಲಗಳಲ್ಲಿ ದೀಕ್ಷಿತನ ಅನ್ನವನ್ನು ತಿಂದರೂ ದೋಷವಿಲ್ಲವೆಂದು ಶಾಸ್ತ್ರವು ತಿಳಿಸುತ್ತದೆ. ನೀವು ದೀಕ್ಷಣೀಯಯಾಗ ಮುಂತಾದ ಆಹಾರವನ್ನು ತಿನ್ನಲು ಅನರ್ಹವಾದ ಯಾಗಗಳನ್ನು ಮಾಡುತ್ತಿಲ್ಲ. ಆದ್ದರಿಂದ ನಿಮ್ಮ ಅನ್ನವನ್ನು ತಿನ್ನಬಹುದು. ಇಲ್ಲೇ ಸಮೀಪದಲ್ಲಿ ಶ್ರೀಕೃಷ್ಣದೇವನು ಬಂದಿರುವನು. ಅವನು ತುಂಬಾ ಹಸಿದಿರುವನು. ಅವನಿಗೆ ಅನ್ನವನ್ನು ಕೊಡಿರಿ." ಎಂದು ಪ್ರಾರ್ಥಿಸಿದರು.

ಗೊಲ್ಲರೆಲ್ಲರೂ ಹಸಿವಿನಿಂದ ತುಂಬಾ ಪೀಡಿತರಾಗಿದ್ದರೂ ತಮಗೆ ಅನ್ನವು ಬೇಕೆಂದು ಕೇಳಲಿಲ್ಲ ಶ್ರೀಕೃಷ್ಣದೇವನಿಗೆ ಅನ್ನವು ಬೇಕೆಂದು ಕೇಳಿದರು. ಶ್ರೀಕೃಷ್ಣಭಕ್ತರು ವಿರಕ್ತರಲ್ಲವೇ? ಆದ್ದರಿಂದ ತಮಗಾಗಿ ಯಾವುದನ್ನೂ ಬೇಡದಿರುವುದು ಯುಕ್ತವೇ ಸರಿ.

ಬ್ರಾಹ್ಮಣರು ಇವರ ಮಾತುಗಳನ್ನು ಕೇಳಿದರು. "ಶ್ರೀಕೃಷ್ಣದೇವನಿಗೆ ಹಸಿವಾ? ಅನಂತಕೋಟಿ ಬ್ರಹ್ಮಾಂಡಗಳನ್ನು ರೋಮಕೂಪಗಳಲ್ಲಿ ಧರಿಸಿರುವ ಶ್ರೀಕೃಷ್ಣದೇವನಿಗೆ ಹಸಿವಿದ್ದರೆ ಅವನ ಹಸಿವನ್ನು ಅಡಗಿಸುವಷ್ಟು ಆಹಾರವಿದೆಯಾ? ಅವನನ್ನೂ ಅವನ ಭೃತ್ಯರಾದ ಬ್ರಹ್ಮ ಮುಂತಾದ ಸಕಲದೇವತೆಗಳನ್ನೂ ನಮ್ಮ ಈ ಸತ್ರಯಾಗದಲ್ಲಿ ಪ್ರತಿಕ್ಷಣದಲ್ಲಿಯೂ ತೃಪ್ತಿಪಡಿಸುತ್ತಿರುವೆವು. ಅವನಿಗೆ ಅನ್ನದ ಅಪೇಕ್ಷೆ ಇದೆಯೇ?" ಎಂದು ಆಲೋಚಿಸಿದರು. ಯಾಗಮಧ್ಯದಲ್ಲಿ ಅನ್ನದಾನವನ್ನು ಮಾಡಿದರೆ ಯಾಗದಲ್ಲಿ ಅಂಗಲೋಪವು ಏರ್ಪಡುವುದಾಗಿ ಭಾವಿಸಿದಂತೆ ನಟಿಸಿದರು.

ದೇಶ, ಕಾಲ, ಯಜ್ಞಕ್ಕೆ ಉಪಯುಕ್ತವಾದ ದ್ರವ್ಯಗಳು, ಮಂತ್ರಗಳು, ತಂತ್ರಗಳು, ಪುರೋಹಿತರು, ಅಗ್ನಿ, ದೇವತೆ, ಯಜಮಾನನು, ಯಜ್ಞಗಳು, ಯಜ್ಞಗಳಿಂದ ಬರುವ ಪುಣ್ಯ ಮುಂತಾದ ಎಲ್ಲಾ ವಸ್ತುಗಳಲ್ಲಿಯೂ ಶ್ರೀಹರಿಯೇ ಸನ್ನಿಹಿತನಾಗಿದ್ದು ಅವುಗಳಿಂದ ಫಲವನ್ನು ಕೊಡುತ್ತಿರುವನು. ಅಂತಹ ಶ್ರೀಕೃಷ್ಣದೇವನನ್ನು ಸಾಮಾನ್ಯ ಮನುಷ್ಯನೆಂದು ತಿಳಿದಂತೆ ನಟಿಸಿದರು.

"ಅಜ್ಞಾನಿಗಳಾದ ಈ ಗೊಲ್ಲರ ಮಾತುಗಳಿಗೆ ಕಿವಿಯನ್ನು ಕೊಡಬಾರದು" ಎಂದು ತೀರ್ಮಾನಿಸಿದರು. ಗೊಲ್ಲಬಾಲಕರನ್ನು ನೋಡಿ ಸರಿ ಎಂದಾಗಲೀ ಇಲ್ಲವೆಂದಾಗಲೀ ಯಾವ ಉತ್ತರವನ್ನೂ ಕೊಡಲಿಲ್ಲ. ಗೊಲ್ಲಬಾಲಕರು ಆಶಾಭಂಗವು ಏರ್ಪಟ್ಟು ಹಿಂದಿರುಗಿ ಬಂದರು. ನಡೆದ ವಿಷಯವನ್ನು ಶ್ರೀಕೃಷ್ಣದೇವನಿಗೆ ತಿಳಿಸಿದರು.

ಶ್ರೀಕೃಷ್ಣದೇವನು ಈ ಮಾತುಗಳನ್ನು ಕೇಳಿ ಬ್ರಾಹ್ಮಣರ ಅಭಿಪ್ರಾಯವನ್ನು ತಿಳಿದು. ಮೆಲ್ಲನೆ ನಕ್ಕನು. " ಗಂಡಸರಿಗಿಂತ ಹೆಂಗಸರು ಸುಲಭಸಾಧ್ಯರು" ಎಂದು ತಿಳಿಸಬೇಕೆಂದು ತೀರ್ಮಾನಿಸಿದನು. " ಅಲ್ಲೇ ಇರುವ ಪತ್ನೀಶಾಲೆಗೆ ಹೋಗಿರಿ. ಅಲ್ಲಿ ಆ ಬ್ರಾಹ್ಮಣರ ಪತ್ನಿಯರು ವಾಸಿಸುತ್ತಿರುವರು. ಅವರಲ್ಲಿ ನಾನೂ ನಮ್ಮ ಅಣ್ಣನೂ ಬಂದಿರುವುದಾಗಿ ತಿಳಿಸಿರಿ. ಅವರೆಲ್ಲರೂ ಯಾವಾಗಲೂ ನನ್ನನ್ನು ಭಕ್ತಿಯಿಂದ ಸ್ಮರಿಸುತ್ತಿರುವರು. ಅವರು ನಿಮಗೆ ಅನ್ನವನ್ನು ಕೊಡುವರು." ಎಂದನು.

ಗೊಲ್ಲಬಾಲಕರು ಪತ್ನೀಶಾಲೆಗೆ ಬಂದರು. ಅಲ್ಲಿ ಅಲಂಕೃತರಾಗಿ ಕುಳಿತಿರುವ ಬ್ರಾಹ್ಮಣಪತ್ನಿಯರನ್ನು ನೋಡಿ ನಮಸ್ಕರಿಸಿದರು. " ಇಲ್ಲೇ ಸಮೀಪದಲ್ಲಿ ಶ್ರೀಕೃಷ್ಣದೇವನು ವಾಸಿಸುತ್ತಿರುವನು. ಅವನ ಆಜ್ಞೆಯಿಂದ ನಾವು ಬಂದಿರುವೆವು. ಅವನೂ ಅವನ ಪರಿವಾರದಲ್ಲಿ ಸೇರಿರುವ ನಾವೂ ಹಸಿವಿನಿಂದ ಪೀಡಿತರಾಗಿರುವೆವು. ನಮಗೆಲ್ಲರಿಗೂ ಅನ್ನವನ್ನು ಕೊಡಿರಿ " ಎಂದರು.

ಈ ಬ್ರಾಹ್ಮಣಪತ್ನಿಯರು ಯಾವಾಗಲೂ ಶ್ರೀಕೃಷ್ಣದೇವನ ಕಥೆಗಳನ್ನೇ ಹೇಳುತ್ತಿರುವವರು. ಶ್ರೀಕೃಷ್ಣದೇವನನ್ನು ನೋಡಬೇಕೆಂದು ಯಾವಾಗಲೂ ಆಶಿಸುತ್ತಿರುವವರು. ಶ್ರೀಕೃಷ್ಣದೇವನು ಬಂದಿರುವ ಸಮಾಚಾರವನ್ನು ತಿಳಿದ ಕೂಡಲೇ ಪರವಶರಾದರು. ಪಾತ್ರೆಗಳಲ್ಲಿ ನಾಲ್ಕು ವಿಧವಾದ ಅನ್ನಗಳನ್ನು ತುಂಬಿಸಿಕೊಂಡರು. ಅತಿ ವೇಗದಿಂದ ಶ್ರೀಕೃಷ್ಣದೇವನಿದ್ದಲ್ಲಿಗೆ ಬಂದುಸೇರಿದರು. ಗಂಡಂದಿರೂ ಅಣ್ಣಂದಿರೂ ಬಂಧುಗಳೂ ಮಕ್ಕಳೂ ಅಡ್ಡಗಟ್ಟಿದರೂ, ಬಹು ಕಾಲದಿಂದ ಶ್ರೀಕೃಷ್ಣದೇವನಲ್ಲಿ ಮನಸ್ಸನ್ನು ನಿಲ್ಲಿಸಿರುವ ಇವರು ಎಲ್ಲರನ್ನೂ ಲೆಕ್ಕಿಸದೆ ಶ್ರೀಕೃಷ್ಣದೇವನ ಸಮೀಪದಲ್ಲಿ ಬಂದು ಸೇರಿದರು.

ಯಮುನಾನದಿಯ ಉಪವನದಲ್ಲಿರುವ ಶ್ರೀಕೃಷ್ಣದೇವನನ್ನು ನೋಡಿದರು. ನೀಲವರ್ಣ ಬಂಗಾರದ ಉಡುದಾರ, ವನಮಾಲೆ, ನವಿಲಿನ ಗರಿ, ನಾನಾವಿಧವಾದ ಬಣ್ಣಗಳು, ಕಿವಿಯಲ್ಲಿ ಕೆನ್ನೈದಿಲೆ, ಕೆನ್ನೆಯಲ್ಲಿ ತಲೆಗೂದಲು, ಎಡಗೈಯಲ್ಲಿ ಕಮಲ, ಮಿತ್ರನ ಹೆಗಲಿನ ಮೇಲೆ ಬಲಗೈ ಇವುಗಳಿಂದ ಯುಕ್ತನಾಗಿರುವ ಶ್ರೀಕೃಷ್ಣದೇವನನ್ನು ನೋಡುತ್ತಾ ಕಣ್ಣುಗಳ ಮಾರ್ಗದಿಂದ ಹೃದಯದಲ್ಲಿ ಧರಿಸಿದರು. ಅಲ್ಲಿಯೇ ಬಹುಕಾಲದ ವರೆಗೆ ಆಲಿಂಗಿಸಿ ಮೈಮರೆತರು.

ಎಲ್ಲಾ ಆಸೆಗಳನ್ನೂ ಬಿಟ್ಟು ತನ್ನನ್ನು ನೋಡಬೇಕೆಂದು ಬಂದಿರುವ ಆ ಸ್ತ್ರೀಯರನ್ನು ಶ್ರೀಕೃಷ್ಣದೇವನು ನೋಡಿದನು. ಸರ್ವರ ಹೃದಯದಲ್ಲಿ ವಾಸಿಸುತ್ತಿರುವ ಅವನು ಅವರ ಮನಸ್ಸಿನ ಅಭಿಪ್ರಾಯವನ್ನು ತಿಳಿದನು.

" ನಿಮಗೆ ಸ್ವಾಗತವಾಗಲಿ. ಕುಳಿತುಕೊಳ್ಳಿ. ನಿಮಗೆ ನನ್ನಿಂದ ಏನಾಗಬೇಕು? ನನ್ನನ್ನು ನೋಡಬೇಕೆಂದು ಬಂದಂತೆ ತಿಳಿಯುತ್ತದೆ. ನನ್ನಲ್ಲಿಯಾವ ವಿಧವಾದ ಕಾರಣವೂ ಇಲ್ಲದೆ ಅಖಂಡವಾದ ಭಕ್ತಿಯನ್ನು ಕೆಲವರು ಮಾಡುತ್ತಿರುವರು. ಪಂಚಪ್ರಾಣಗಳೂ ಬುದ್ಧಿಯೂ, ಮನಸ್ಸೂ, ದೇಹವೂ ಹೆಂಡತಿಯೂ, ಮಕ್ಕಳೂ ಹಣ ಮುಂತಾದ ವಸ್ತುಗಳೂ ನನ್ನ ಸಂಪರ್ಕದಿಂದ ಪ್ರಿಯವೆನಿಸುತ್ತವೆ. ಹೀಗಿರುವಾಗ ನನಗಿಂತ ಪ್ರಿಯವಾದ ವಸ್ತುವು ಯಾವುದು? ಪರಮ ಪ್ರಿಯನಾದ ನನ್ನನ್ನು ನೋಡುವುದಕ್ಕಾಗಿ ನೀವು ಬಂದಿರುವಿರಿ. ನಾನು ಸಂತುಷ್ಟನಾದೆನು. ನೀವು ಇನ್ನು ಮುಂದೆ ಹಿಂದಿರುಗಿರಿ. ನಿಮ್ಮ ಪತಿಗಳೂ ನಿಮ್ಮ ಮಕ್ಕಳೇ ಮೊದಲಾದ ಸಕಲ ಬಂಧುಗಳೂ ನಿಮ್ಮ ಸಹಾಯದಿಂದ ಸತ್ರಯಾಗವನ್ನು ಪೂರೈಸಲಿ" ಎಂದನು.

"ನೀನು ಹೀಗೆ ಹೇಳಕೂಡದು. ಎಲ್ಲಾ ಬಂಧುಗಳನ್ನೂ ಬಿಟ್ಟು ನಿನ್ನ ಪಾದಧೂಳಿಯ ಸ್ಪರ್ಶದಿಂದ ಯುಕ್ತವಾಗಿರುವ ತುಳಸೀಮಾಲೆಯನ್ನು ಜಡೆಯಲ್ಲಿ ಧರಿಸಬೇಕೆಂದು ನಿನ್ನ ಪಾದದ ಬುಡಕ್ಕೆ ಬಂದಿರುವೆವು. " ನನ್ನ ಭಕ್ತನು ಕೆಡಲಾರನು" ಎಂಬ ನಿನ್ನ ಮಾತನ್ನು ಸತ್ಯವಾಗುವಂತೆ ಮಾಡು. ನಾವು ಇಲ್ಲಿಂದ ಹಿಂದಿರುಗಿ ಹೋದರೆ ನಮ್ಮ ತಂದೆ, ತಾಯಿ, ಗಂಡ, ಮಕ್ಕಳು ಮುಂತಾದ ಸಕಲ ಬಂಧುಗಳೂ ಅವರೆಲ್ಲರನ್ನೂ ತಿರಸ್ಕರಿಸಿ ಬಂದಿರುವ ನಮ್ಮನ್ನು ಮನೆಗೆ ಸೇರಿಸಲಾರರು. ಉಳಿದವರು ಸೇರಿಸುವರೇ? ಆದ್ದರಿಂದ ಹಿಂದಿರುಗಿ ಹೋದಮೇಲೆ

ಅನಾಥರಾಗುವಂತೆ ಮಾಡಬೇಡ. ನಿನ್ನ ಪಾದದಲ್ಲಿ ನಾವು ಬಿದ್ದಿರುವೆವು. ನಮಗೆ ಬೇರೆ ಗತಿಯಿಲ್ಲ'' ಎಂದು ಬ್ರಾಹ್ಮಣ ಪತ್ನಿಯರು ಹೇಳಿದರು.

'' ನಿಮ್ಮ ಪತಿಗಳೇ ಮೊದಲಾದ ಬಂಧುಗಳು ನಿಮ್ಮಲ್ಲಿ ಯಾವ ವಿಧವಾದ ದೋಷಗಳನ್ನೂ ಎಣಿಸಲಾರರು. ನನ್ನ ಅನುಗ್ರಹದಿಂದ ಪರಲೋಕದಲ್ಲಿ ನನ್ನ ಸಂಬಂಧವು ನಿಮಗೆ ಯಾವಾಗಲೂ ಏರ್ಪಡುತ್ತದೆ. ದೇವತೆಗಳೆಲ್ಲರೂ ನೀವು ಪರಲೋಕದಲ್ಲಿ ಸುಖಿಗಳಾಗಿರುವಂತೆ ಮಾಡುವರು. ನನ್ನ ಅಂಗಸಂಗವನ್ನು ನೀವು ಬಯಸುತ್ತಿರುವಿರಿ. ಆ ಅಂಗಸಂಗವು ನಿಮಗೆ ಸುಖವನ್ನು ಕೊಡಲಾರದು. ಈ ಅಂಗಸಂಗದಿಂದ ನಿಮಗೆ ಭಕ್ತಿಯೂ ಹೆಚ್ಚಲಾರದು. ನನ್ನನ್ನು ಯಾವಾಗಲೂ ಸ್ಮರಿಸುತ್ತಾ ಶೀಘ್ರದಲ್ಲಿ ನೀವು ನನ್ನನ್ನು ಪಡೆಯುವಿರಿ'' ಇದು ಶ್ರೀಕೃಷ್ಣದೇವನ ಉತ್ತರ.

ಬ್ರಾಹ್ಮಣಸ್ತ್ರೀಯರೆಲ್ಲರೂ ಹಿಂದಿರುಗಿ ಯಜ್ಞಶಾಲೆಗೆ ಬಂದರು. ಅವರ ಪತಿಗಳು ಮುಂತಾದ ಬಂಧುಗಳು ಅವರಲ್ಲಿ ದೋಷಗಳನ್ನು ಎಣಿಸಲಿಲ್ಲ. ತಮ್ಮ ತಮ್ಮ ಪತ್ನಿಯರೊಡನೆ ಸತ್ರಯಾಗವನ್ನು ಮುಗಿಸಿದರು. ಶ್ರೀಕೃಷ್ಣದೇವನು ಅವರು ತಂದಿರುವ ಚತುರ್ವಿಧವಾದ ಅನ್ನವನ್ನು ತನ್ನ ಮಿತ್ರರಾದ ಗೊಲ್ಲಬಾಲಕರಿಗೆ ಕೊಟ್ಟು ತಾನೂ ತಿಂದನು.

ಆ ಬ್ರಾಹ್ಮಣಸ್ತ್ರೀಯರ ಮಧ್ಯದಲ್ಲಿ ಒಬ್ಬಳನ್ನು ಕೊಠಡಿಯಲ್ಲಿ ಹಾಕಿ ಬೀಗ ಹಾಕಿದ್ದರು. ಅವಳು ತಾನು ಪುರಾಣಾದಿಗಳಲ್ಲಿ ಕೇಳಿ ತಿಳಿದಂತೆ ಶ್ರೀಕೃಷ್ಣದೇವನನ್ನು ಹೃದಯದಲ್ಲಿ ಸ್ಮರಿಸಿದಳು. ದೇಹವನ್ನು ಬಿಟ್ಟು ಮುಕ್ತಿಯನ್ನು ಪಡೆದಳು. ಅವಳಿಗಾಗಿಯೇ ಶ್ರೀಕೃಷ್ಣದೇವನು ಅಲ್ಲಿಗೆ ಹೋದದ್ದು.

ಬ್ರಾಹ್ಮಣರು ಶ್ರೀಕೃಷ್ಣದೇವನನ್ನು ಅಲಕ್ಷ್ಯ ಮಾಡಿದಂತೆ ನಟಿಸಿದರೆಂದು ಹಿಂದೆ ಹೇಳಿದೆವು. ಈಗ ನಟನಕ್ಕಾಗಿಯಾದರೂ ಶ್ರೀಕೃಷ್ಣದೇವನನ್ನು ಅಲಕ್ಷ್ಯ ಮಾಡಿದ್ದು ಯುಕ್ತವಲ್ಲವೆಂದು ತಿಳಿದರು. ಒಟ್ಟಿನಲ್ಲಿ ಶ್ರೀಕೃಷ್ಣದೇವನ ಆಜ್ಞೆಯನ್ನು ಮೀರಿದೆವು. ನಮ್ಮ ಕರ್ತವ್ಯವನ್ನು ಬಿಟ್ಟೆವು. ನಮ್ಮ ಪತ್ನಿಯರು ಅವನ ಆಜ್ಞೆಯನ್ನು ಪಾಲಿಸಿದರು. ಆದ್ದರಿಂದ ತಮ್ಮ ಕರ್ತವ್ಯವನ್ನು ಪಾಲಿಸಿದರು. ನಮ್ಮ ಕುಲ, ವಿದ್ಯಾ, ವ್ರತ ಮುಂತಾದವುಗಳಿಗೆ ಧಿಕ್ಕಾರವಿರಲಿ. ಸ್ತ್ರೀಯರಿಗೆ ಉಪನಯನ ವಿದ್ಯಾಭ್ಯಾಸ ಮುಂತಾದ ಗುಣಗಳಿಲ್ಲ. ಆದರೂ ಶ್ರೀಕೃಷ್ಣದೇವನಲ್ಲಿ ನಿಶ್ಚಲವಾದ ಭಕ್ತಿಯಿದೆ.

ಶ್ರೀಕೃಷ್ಣದೇವನು ಗೊಲ್ಲಬಾಲಕರ ಮೂಲಕವಾಗಿ ನಮ್ಮ ಕರ್ತವ್ಯವನ್ನು ಜ್ಞಾಪಕಪಡಿಸಿದನು. ಆದರೆ ವಿಷಯದಲ್ಲಿ ಆಸಕ್ತರಾದ ನಾವು ತಿಳಿಯಲಿಲ್ಲ. ಶ್ರೀಹರಿಯು ಪೂರ್ಣಕಾಮನು, ಮೋಕ್ಷ ಮುಂತಾದ ಮಹಾಪುರುಷಾರ್ಥಗಳನ್ನೂ ಕೊಡುವ ಶಕ್ತಿಯುಳ್ಳವನು. ಅವನ ಅಧೀನರಾದ ನಮ್ಮಿಂದ ಬೇಡಬೇಕೇ? ಇದೆಲ್ಲವೂ ಅವನ ವಿಡಂಬನವೆನಿಸುತ್ತದೆ.

ಲಕ್ಷ್ಮೀದೇವಿಯು ಸರ್ವರನ್ನೂ ಅಲಕ್ಷ್ಯಮಾಡಿ ಶ್ರೀಕೃಷ್ಣದೇವನನ್ನು ಆಶ್ರಯಿಸುತ್ತಿದ್ದಾಳೆ. ಅಂತಹ ಶ್ರೀಕೃಷ್ಣದೇವನು ನಮ್ಮಲ್ಲಿ ಬೇಡಿರುವಷ್ಟು ಜನಮೋಹಕವ್ಯಾಪಾರವು ಯಾವುದಿದೆ? ನಮ್ಮ ಪತ್ನಿಯರಿಗೆ ಶ್ರೀಕೃಷ್ಣದೇವನಲ್ಲಿ ನಿಶ್ಚಲವಾದ ಭಕ್ತಿ ಇದೆ. ಆದ್ದರಿಂದ ನಾವೆಲ್ಲರೂ ಧನ್ಯರು. '' ಮಹಾಪ್ರಭೋ, ನಿನ್ನ ಮಹಿಮೆಯನ್ನು ತಿಳಿಯದೆ ಅಕಾರ್ಯವನ್ನು ಮಾಡಿದೆವು. ನಮ್ಮ ಅಪರಾಧಗಳನ್ನು ಮನ್ನಿಸು'' ಎಂದು ಹೇಳುತ್ತಾ ಶ್ರೀಕೃಷ್ಣದೇವನನ್ನು ನಮಸ್ಕರಿಸಿದರು. ಶ್ರೀಕೃಷ್ಣದೇವನನ್ನು ನೋಡಿ ಕ್ಷಮಾಪಣೆಯನ್ನು ಬೇಡಬೇಕೆಂದು ಸಂಕಲ್ಪಿಸಿದರು. ಆದರೂ ಕಂಸನ ಭಯದಿಂದ ಹೊರಡಲಿಲ್ಲ.

(೨೪) ಬಲಮಥನಬಲೌ ಆಹೃತೇ ಅಸ್ಮಿನ್ ಸವೃಷ್ಟೌ ಆಹಾರ್ಯವರ್ಯಂ ಪ್ರೋದ್ಧೃತ್ಯ ಅಖಿಲಂ ನಿಜಜನಂ ಪಾಲಯನ್ - ದೇವೇಂದ್ರನ ಭಾಗವು ಶ್ರೀಕೃಷ್ಣದೇವನಿಂದ ಅಪಹರಿಸಲ್ಪಟ್ಟಿತು. ಅದಕ್ಕಾಗಿ ದೇವೇಂದ್ರನು ಮಳೆಯನ್ನು ಸುರಿಸಿದನು. ಆಗ ಪರ್ವತದಲ್ಲಿ ಶ್ರೇಷ್ಠವಾದ ಗೋವರ್ಧನ ಪರ್ವತವನ್ನು ಶ್ರೀಕೃಷ್ಣದೇವನು ಎತ್ತಿದನು. ಇದರಿಂದ ಸ್ವಜನರನ್ನು ಸರ್ವರನ್ನೂ ರಕ್ಷಿಸಿದನು.

# ಗೋವರ್ಧನೋದ್ಧಾರ

ವಿಶೇಷಾರ್ಥ - ಕದಾಚಿತ್ಸ್ವಸ್ಯ ಲೋಕಸಾಧಾರಣ್ಯೇನ ಮಾನುಷಭಾವಂ ಜಾನತ ಇಂದ್ರಸ್ಯ ಸ್ವವಿಷಯಕತತ್ವಜ್ಞಾನೋದಯಾರ್ಥಂ ತದ್ದರ್ಪಜಿಘಾಂಸಯಾ ಇಂದ್ರೋದ್ದೇಶೇನ ಪ್ರತಿವರ್ಷಂ ಕ್ರಿಯಮಾಣಮುತ್ಸವವಿಶೇಷಂ ಪರ್ವತೋದ್ದೇಶ ವ್ಯಾಮಾತ್ಮೋದ್ದೇಶೇನ ನಂದಾದಿಭಿಃ ಕಾರಯಿತ್ವಾ, ಸ್ವಯಮೇವ ಪರ್ವತಾಕಾರರೂಪಾಂತರೇಣ ತತ್ಸರ್ವಂ ಭುಕ್ತ್ವಾ, ಸ್ವಮಾಹಾತ್ಮ್ಯಮಜಾನತಾ ಸ್ವವಿಷಯಕ ಮಹೋತ್ಸವಭಂಗರುಷಾ ಇಂದ್ರೇಣ ವ್ರಜಪೀಡಾರ್ಥಮಾದಿಷ್ಟೈರ್ಮೇಘೈಃ ಕೃತಾಂ ವೃಷ್ಟಿಂ ಸೋಢುಮಶಕ್ತಾನ್ ಸ್ವಕೀಯಾನ್ ಸರ್ವಾನ್ ದೃಷ್ಟ್ವಾ, ತೈಃ ಪ್ರಾರ್ಥಿತಃ, ಗೋವರ್ಧನಾಖ್ಯಂ ಪರ್ವತಮೇಕೇನ ಹಸ್ತೇನ ಲೀಲಯಾ ಛತ್ರಾಕಾರೇಣೋದ್ಧೃತ್ಯ, ತಾಂಸ್ತತ್ರ ಪ್ರವೇಶ್ಯ ಸುಖೇನ ರಕ್ಷಿತ್ವಾ, ಸರ್ವಾನತೋಷಯತ್.

ದೇವೇಂದ್ರನು ಶ್ರೀಕೃಷ್ಣದೇವನನ್ನು ನೋಡಿದನು. ಕೃಷ್ಣದೇವನು ಅವತರಿಸಿದ ಮೇಲೆ ಇಷ್ಟರ ವರೆಗೆ ಅವನ ಕೈಯಲ್ಲಿ ಚಕ್ರ ಮುಂತಾದ ಶ್ರೀಹರಿಯ ಅಸಾಧಾರಣವಾದ ಲಕ್ಷಣಗಳು ಕಾಣಿಸಲಿಲ್ಲ. ಆದ್ದರಿಂದ ಅವನು ಸಾಧಾರಣ ಮನುಷ್ಯನೆಂದು ಭಾವಿಸಿದನು. ಶ್ರೀಹರಿಯ ಅವತಾರ ಎಂಬ ವಿಷಯವನ್ನು ಮರೆತನು. ತನ್ನ ಭಕ್ತರಲ್ಲಿ ಉತ್ತಮನಾದ ದೇವೇಂದ್ರನು ತನ್ನನ್ನು ಮರೆತದ್ದು ಸರಿಯಲ್ಲ. ಅವನು ತನ್ನ ನಿಜಸ್ವರೂಪವನ್ನು ತಿಳಿಯಬೇಕೆಂದು ಕೃಷ್ಣದೇವನು ಸಂಕಲ್ಪಿಸಿದನು.

ಬ್ರಾಹ್ಮಣಪತ್ನಿಯರು ಕೊಟ್ಟ ಚತುರ್ವಿಧವಾದ ಅನ್ನವನ್ನು ಕೃಷ್ಣದೇವನು ಭಕ್ಷಿಸಿದನು. ಅನಾದಿಕಾಲದಿಂದ ಈ ಕಾಲದ ವರೆಗೂ ಪ್ರಾಕೃತಾನ್ನವನ್ನು ತಿಂದವನಲ್ಲ. ಇಂದು ಅಪೂರ್ವವಾಗಿ ಪ್ರಾಕೃತಾನ್ನವನ್ನು ತಿಂದಿರುವುದರಿಂದ ಪ್ರಾಕೃತಾನ್ನದಲ್ಲಿ ಆಸೆಯು ಹುಟ್ಟಿದಂತೆ ನಟಿಸಿದನು. ಅಪೂರ್ವಾನ್ನ ಭಕ್ಷಣವು ಯಾರಿಗೆ ಆಸೆಯನ್ನು ಹುಟ್ಟಿಸಲಾರದು? ದೇವೆಂದ್ರನಿಗೆ ಎಲ್ಲ ಗೊಲ್ಲರೂ ಕೊಡುತ್ತಿರುವ ಬಲಿರೂಪವಾದ ಪ್ರಾಕೃತಾನ್ನದಲ್ಲಿಯೂ ಆಸೆಯು ಹುಟ್ಟಿದಂತೆ ನಟಿಸಿದನು. ಅದಕ್ಕಾಗಿ ಇಂದ್ರನ ಪೂಜೆಯನ್ನು ನಿಲ್ಲಿಸಬೇಕೆಂದೂ ಇಂದ್ರನ ಸ್ಥಾನದಲ್ಲಿ ತನ್ನ ಪೂಜೆಯನ್ನು ಮಾಡುವಂತೆ ಮಾಡಬೇಕೆಂದು ಸಂಕಲ್ಪಿಸುವಂತೆ ಹೇಳುವುದು ತಪ್ಪಾಗಲಾರದು.

ಒಮ್ಮೆ ಕಾಡಿನಿಂದ ಹಿಂದಿರುಗಿ ಬಂದನು. ಆಗ ಗೊಲ್ಲರೆಲ್ಲರೂ ದೇವೇಂದ್ರನ ಪ್ರೀತ್ಯರ್ಥವಾಗಿ ಉತ್ಸವವನ್ನು ಮಾಡುವುದಕ್ಕೆ ಉದ್ಯುಕ್ತರಾಗಿರುವುದನ್ನು ನೋಡಿದನು. ಸರ್ವಜ್ಞನಾದ ಶ್ರೀಕೃಷ್ಣದೇವನಿಗೆ ತಿಳಿಯದ ವಿಷಯವೆಲ್ಲಿ. ಆಗ ಶ್ರೀಕೃಷ್ಣನು ನಂದ ಮುಂತಾದ ವೃದ್ಧರನ್ನು ಕುರಿತು "ನೀವು ಈಗ ಮಾಡಬೇಕೆಂದು ನಿಶ್ಚಯಿಸಿದ ಕರ್ಮವು ಯಾವುದು? ಮಾಡಬೇಕಾದ ಕಾರ್ಯವನ್ನು ಸರಿಯಾಗಿ ತಿಳಿದು ಮಾಡಬೇಕು. ತಿಳಿಯದೆ ಮಾಡಿದರೆ ಫಲವು ಬರಲಾರದು'' ಎಂದು ಪ್ರಶ್ನಿಸಿದನು. ಆಗ ನಂದನು ಉತ್ತರಿಸಿದನು.

"ದೇವೇಂದ್ರನು ಮೇಘಗಳಿಗೆ ಅಧಿಪತಿಯಾಗಿರುವನು. ಅವನ ಅಧೀನವಾದ ಮೇಘಗಳಿಂದ ಮಳೆಯನ್ನು ಸುರಿಸುವನು. ಆ ಮಳೆಯಿಂದ ನಾವು ತಿನ್ನುವ ಸಾಮಗ್ರಿಗಳು ಬೆಳೆಯುತ್ತವೆ. ಅವನ ಕೃಪೆಯಿಂದ ಬೆಳೆದಿರುವ ಆಹಾರಸಾಮಗ್ರಿಗಳಿಂದ ಅವನನ್ನು ಮೊದಲು ಪೂಜಿಸಬೇಕು. ಅವನ ಪೂಜೆಯನ್ನು ಮಾಡಿದ ಮೇಲೆ ಉಳಿದಿರುವ ವಸ್ತುಗಳಿಂದ ನಾವು ಜೀವಿಸಬೇಕು. ಇದು ಪರಂಪರೆಯಿಂದ ಬಂದಿರುವ ಧರ್ಮವೆನಿಸುತ್ತದೆ. ಈ ಧರ್ಮವನ್ನು ಯಾವ ಕಾರಣದಿಂದಲೂ ಬಿಡಲಾಗದು. ಬಿಟ್ಟವನಿಗೆ ಮಂಗಳವಾಗಲಾರದು'' ಇದು ನಂದನ ಉತ್ತರ.

ಈ ಮಾತುಗಳನ್ನು ಶ್ರೀಕೃಷ್ಣದೇವನು ಕೇಳಿದನು. ತನ್ನನ್ನು ಮರೆತಿರುವ ದೇವೇಂದ್ರನು ತನ್ನ ಜೊತೆಯಲ್ಲಿ ಕಲಹಕ್ಕೆ ಬರಬೇಕೆಂದೂ ಆ ಕಲಹದಲ್ಲಿ ಪರಾಜಿತನಾಗಬೇಕೆಂದೂ ಪರಾಜಿತನಾದ ಮೇಲೆ ತನ್ನ ನಿಜಸ್ವರೂಪವನ್ನು ತಿಳಿದ ತನ್ನನ್ನು ಯಾವಾಗಲೂ ಮರೆಯದಂತೆ ಮಾಡಬೇಕೆಂದೂ ಸಂಕಲ್ಪಿಸಿದನು. ಅದಕ್ಕಾಗಿ ದೇವೇಂದ್ರನಿಗೆ ಕೋಪ ಬರುವುದಕ್ಕೆ ಕಾರಣವಾದ ಮಾತುಗಳನ್ನು ಹೇಳಿದನು.

" ತಂದೆಯೇ! ನಾನು ಹೇಳುವುದನ್ನು ಸಾವಧಾನವಾಗಿ ಕೇಳಬೇಕು. ಯುಕ್ತವಾಗಿದ್ದರೆ ಅದರಂತೆ ಮಾಡಬೇಕು. ನಾವು ಗೊಲ್ಲರು, ಹಾಲು ಬೆಣ್ಣೆ ಮೊಸರು ತುಪ್ಪ ಮುಂತಾದ ವಸ್ತುಗಳನ್ನು ಮಾರಿ ಜೀವಿಸುತ್ತಿರುವರು. ಹಾಲು ಮುಂತಾದ ವಸ್ತುಗಳನ್ನು ಗೋವುಗಳು ಕೊಡುತ್ತವೆ. ನಮಗೆ ಜೀವನವನ್ನು ಕೊಡುತ್ತಿರುವ ಗೋವುಗಳು ನಮಗೆ ದೇವರು. ಆ ಗೋವುಗಳು ಜೀವಿಸುತ್ತಿರುವುದು ಗೋವರ್ಧನಪರ್ವತದಿಂದ. ಆ ಗೋವರ್ಧನಗಿರಿಯು ಎರಡನೆಯ ದೇವರು. ಬ್ರಾಹ್ಮಣರು ನಮಗೆಲ್ಲರಿಗೂ ಮಾರ್ಗದರ್ಶಕರು, ಅವರೆಲ್ಲರೂ ಮೂರನೆಯ ದೇವರು. ಆದ್ದರಿಂದ ಬ್ರಾಹ್ಮಣರನ್ನೂ ಗೋವುಗಳನ್ನೂ ಗೋವರ್ಧನಗಿರಿಯನ್ನೂ ತೃಪ್ತಿಪಡಿಸುವುದಕ್ಕಾಗಿ ಗಿರಿಯಜ್ಞವನ್ನು ಮಾಡಬೇಕು. ಪ್ರತ್ಯಕ್ಷದೇವತೆಗಳಾಗಿರುವ ಗೋವುಗಳನ್ನೂ ಬ್ರಾಹ್ಮಣರನ್ನೂ ಗೋವರ್ಧನಗಿರಿಯನ್ನೂ ಆರಾಧಿಸದೆ ಕಣ್ಣಿಗೆ ಕಾಣಿಸದಿರುವ ದೇವೇಂದ್ರನನ್ನು ಕುರಿತು ಯಜ್ಞವನ್ನು ಮಾಡಿ ಫಲವಿಲ್ಲ. ಆದ್ದರಿಂದ ದೇವೇಂದ್ರನ ಪೂಜೆಗಾಗಿ ಸಂಗ್ರಹಿಸುತ್ತಿರುವ ವಸ್ತುಗಳಿಂದ ಗಿರಿಯಜ್ಞವು ನಡೆಯಲಿ. ನಾನಾ ವಿಧವಾದ ಭಕ್ಷ್ಯಭೋಜ್ಯಾದಿಗಳನ್ನು ತಯಾರಿಸಿ ಬ್ರಾಹ್ಮಣರನ್ನು ತೃಪ್ತಿಪಡಿಸಿರಿ. ಗೋವುಗಳಿಗೆ ರುಚಿ ರುಚಿಯಾದ ಹುಲ್ಲು ಮುಂತಾದ ಆಹಾರಗಳನ್ನು ಕೊಟ್ಟು ತೃಪ್ತಿಪಡಿಸಿರಿ. ಗೋವರ್ಧನ ಪರ್ವತಕ್ಕೆ ಬಲಿಯನ್ನು ಕೊಟ್ಟು ಅಲಂಕೃತರಾಗಿ ಪ್ರದಕ್ಷಿಣೆಗಳನ್ನೂ ನಮಸ್ಕಾರಗಳನ್ನೂ ಮಾಡಿರಿ. ಇದೇ ಗೋವುಗಳಿಗೂ ಬ್ರಾಹ್ಮಣರಿಗೂ ಗೋವರ್ಧನಗಿರಿಗೂ ಪ್ರಿಯವಾದ ಯಜ್ಞವೆನಿಸುತ್ತದೆ.'' ಇದು ಶ್ರೀಕೃಷ್ಣದೇವನ ಮಾತು.

ಈ ಮಾತಿನಲ್ಲಿ ಎರಡು ಅರ್ಥವಿದೆ. ಗೋವುಗಳೂ ಬ್ರಾಹ್ಮಣರೂ ಗೋವರ್ಧನಪರ್ವತವೂ ಪೂಜಿಸಲ್ಪಡಬೇಕು. ದೇವೇಂದ್ರನ ಪೂಜೆಯನ್ನು ನಿಲ್ಲಿಸಬೇಕು. ಇದು ಮೊದಲನೆಯ ಅರ್ಥ.

" ನಾಮಾನಿ ಸರ್ವಾಣಿ ಯಮಾವಿಶಂತಿ'' ಮುಂತಾದ ಪ್ರಮಾಣಗಳಿಂದ ಎಲ್ಲಾ ಹೆಸರುಗಳೂ ಪರಮ ಮುಖ್ಯವೃತ್ತಿಯಿಂದ ಶ್ರೀಕೃಷ್ಣದೇವನನ್ನೇ ಹೇಳುತ್ತಿವೆ. ಅದು ಮಾತ್ರವಲ್ಲ. " ಅರ್ಚಂತು ಪುತ್ರಕಾಃ'' ಮುಂತಾದ ಪ್ರಮಾಣಗಳಿಂದ ಗೋವು ಮುಂತಾದ ಎಲ್ಲಾ ವಸ್ತುಗಳಲ್ಲಿಯೂ ಪೂಜಿಸಲ್ಪಡುವವನು ಶ್ರೀಕೃಷ್ಣದೇವನೇ ಎಂದು ಹೇಳುತ್ತವೆ. ಹೀಗೆ ಗೋವು ಮುಂತಾದ ಪದಗಳಿಂದ ಪರಮ ಮುಖ್ಯವೃತ್ತಿಯಿಂದ ಹೇಳಲ್ಪಡುವವನೂ ಎಲ್ಲಾ ಕಡೆಗಳಲ್ಲಿಯೂ ಪೂಜಿಸಲ್ಪಡುವವನೂ ಆಗಿರುವ ಶ್ರೀಕೃಷ್ಣದೇವನನ್ನೇ ಪೂಜಿಸಬೇಕು. ದೇವೇಂದ್ರನ ಪೂಜೆಯನ್ನು ನಿಲ್ಲಿಸಬೇಕು. ಇದು ಎರಡನೆಯ ಅರ್ಥ.

ಮೇಲ್ಕಂಡ ಮೊದಲನೆಯ ಅರ್ಥವನ್ನು ತಿಳಿಸಿ ಗೋವುಗಳ ಬ್ರಾಹ್ಮಣರ ಮತ್ತು ಗೋವರ್ಧನ ಪರ್ವತದ ಪೂಜೆಯನ್ನು ಮಾಡುವ ಬುದ್ಧಿಯು ಗೊಲ್ಲರಿಗೆ ಬರುವಂತೆ ಮಾಡಬೇಕು. ಕೊನೆಗೆ ಮೇಲ್ಕಂಡ ಎರಡನೆಯ ಅರ್ಥವನ್ನು ತಿಳಿಸಿ ತನ್ನನ್ನೇ ಆರಾಧಿಸುವಂತೆ ಮಾಡಬೇಕು. ಇದು ಶ್ರೀಕೃಷ್ಣದೇವನ ಅಭಿಪ್ರಾಯ.

ನಂದನೇ ಮೊದಲಾದ ಗೊಲ್ಲರೆಲ್ಲರೂ ಶ್ರೀಕೃಷ್ಣದೇವನು ಹೇಳಿದ್ದನ್ನು ಅಂಗೀಕರಿಸಿದರು. ಸ್ವಸ್ತಿವಾಚನವನ್ನು ಮಾಡಿಸಿಕೊಂಡರು. ಗೋವರ್ಧನಗಿರಿಯನ್ನೂ ಗೋವುಗಳನ್ನೂ ಬ್ರಾಹ್ಮಣರನ್ನೂ ಪೂಜಿಸಿದರು. ಗೋವುಗಳಿಗೆ ಹುಲ್ಲುಗಳನ್ನು ತಿನ್ನುವುದಕ್ಕೆ ಕೊಟ್ಟರು. ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿದರು. ತಾನೇ ಪರ್ವತಾಕಾರವನ್ನು ಸ್ವೀಕರಿಸಿ ಗೋವರ್ಧನಪರ್ವತದ ಮೇಲೆ ಕುಳಿತನು. "ನಾನೇ ಗೋವರ್ಧನ ಪರ್ವತ" ಎಂದು ಹೇಳುತ್ತಾ ಗೊಲ್ಲರು ಸಮರ್ಪಿಸಿದ ಭಕ್ಷ್ಯ ಭೋಜ್ಯಾದಿಗಳನ್ನು ತಿಂದು ತೃಪ್ತನಾದನು. ಗೋವುಗಳಿಂದಲೂ ಗೋಪಾಲಕರಿಂದಲೂ ಸಹಿತನಾದ ಶ್ರೀಕೃಷ್ಣದೇವನು ಗೋವರ್ಧನ ರೂಪಿಯಾದ ತನ್ನನ್ನು ಪ್ರದಕ್ಷಿಣೆ ಮಾಡಿ ನಮಸ್ಕರಿಸಿದನು. ಗೋವರ್ಧನಗಿರಿಯ ಯಾಗವೆಂಬ ಹೆಸರಿನಿಂದ ತನಗೆ ಪ್ರಿಯವಾದ ಯಾಗವನ್ನು ನಂದ ಮುಂತಾದವರಿಂದ ಮಾಡಿಸಿದನು.

ದೇವೇಂದ್ರನಿಗೆ ತನ್ನನ್ನು ಉದ್ದೇಶಿಸಿ ಮಾಡಬೇಕಾದ ಯಾಗವನ್ನು ನಿಲ್ಲಿಸಿದ ವಿಷಯವು ತಿಳಿಯಿತು. ತುಂಬಾ ಕೋಪವು ಬಂತು. ತನ್ನ ಅಧೀನವಾಗಿರುವ ಸಾಂವರ್ತಕ ಎಂಬ ಹೆಸರಿನಿಂದ ಯುಕ್ತವಾಗಿರುವ ಪ್ರಳಯಕಾಲದಲ್ಲಿ ಲೋಕಗಳನ್ನು ಸಂಹರಿಸುವ ಮೇಘಗಳ ಸಮೂಹವನ್ನು ಕರೆದನು. " ಕಾಡಿನಲ್ಲಿ ವಾಸಿಸುತ್ತಿರುವ ಗೊಲ್ಲರು, ಕೃಷ್ಣನೆಂಬ ಸಾಮಾನ್ಯ ಮನುಷ್ಯನನ್ನು ಆಶ್ರಯಿಸಿರುವರು. ಅಲ್ಪವಾದ ಸಂಪತ್ತಿನಿಂದ ಯುಕ್ತರಾಗಿರುವರು. ಮೂರ್ಖನೂ ಪಂಡಿತನೆಂಬ ಅಹಂಕಾರದಿಂದ ಯುಕ್ತನೂ ಅಜ್ಞಾನಿಯೂ ಆಗಿರುವ ಕೃಷ್ಣನ ಬಲದಿಂದಲೂ ಅಲ್ಪಸಂಪತ್ತಿನ ಬಲದಂದಲೂ ದೇವರಾಜನಾದ ನನಗೆ ಅಪ್ರಿಯವಾದ ಕಾರ್ಯವನ್ನು ಮಾಡಿರುವರು. ಅವರೆಲ್ಲರ ಗರ್ವವನ್ನು ಮುರಿಯಿರಿ. ನಾನು ಐರಾವತದ ಮೇಲೆ ಏರಿದವನಾಗಿ ನಿಮ್ಮ ಹಿಂದೆ ಬರುವೆನು. ನೀವೆಲ್ಲರೂ ಮಹಾ ಸಾಮರ್ಥ್ಯವುಳ್ಳ ಬಿರುಗಾಳಿಗಳಿಂದ ಯುಕ್ತರಾಗಿ ಬೃಂದಾವನವನ್ನು ನಾಶಮಾಡಿರಿ" ಎಂದು ಆಜ್ಞಾಪಿಸಿದನು.

ಕಟ್ಟಲ್ಪಟ್ಟಿದ್ದ ಮೇಘಗಳ ಕಟ್ಟುಗಳನ್ನು ಬಿಡಿಸಿದನು. ಮೇಘಗಳೆಲ್ಲವೂ ಮಿಂಚುಗಳಿಂದಲೂ ಸಿಡಿಲುಗಳಿಂದಲೂ ತೀವ್ರವಾದ ಬಿರುಗಾಳಿಗಳಿಂದಲೂ ಯುಕ್ತವಾಗಿ ಆನೆಗಳ ಸೊಂಡಿಲುಗಳಷ್ಟು ಉದ್ದವೂ ಅಗಲವೂ ಆಗಿರುವ ಮಂಜುಗಡ್ಡೆಗಳನ್ನೂ ನೀರಿನ ಧಾರೆಗಳನ್ನೂ ಸುರಿಸಲು ಆರಂಭಿಸಿದವು. ಅಖಂಡವಾಗಿ ಮಳೆಯು ಸುರಿಯಿತು. ಭೂಮಿಯಲ್ಲಿ ಎತ್ತರ ಪ್ರದೇಶವು ಯಾವುದು ತಗ್ಗಿನ ಪ್ರದೇಶವು ಯಾವುದು ಎಂದು ತಿಳಿಯಲಿಲ್ಲ. ಗೋವುಗಳೂ ಗೊಲ್ಲರೂ ಚಳಿಯಿಂದ ನಡುಗಿದರು. ಇದ್ದ ಸ್ಥಳದಿಂದ ಕದಲಲು ಶಕ್ತರಾಗಲಿಲ್ಲ. ಆಪತ್ಕಾಲದಲ್ಲಿ ಶ್ರೀಕೃಷ್ಣದೇವನನ್ನು ಪ್ರಾರ್ಥಿಸಿದರು. "ಕೃಷ್ಣ, ಕೃಷ್ಣ, ನೀನೇ ನಮಗೆ ಗತಿ, ನಿನ್ನನ್ನು ನಂಬಿರುವ ನಮ್ಮನ್ನು ಕುಪಿತನಾದ ದೇವೇಂದ್ರನು ಸಂಹರಿಸುತ್ತಿರುವನು. ರಕ್ಷಿಸು ರಕ್ಷಿಸು" ಎಂದು ಕೂಗಿದರು.

ಶ್ರೀಕೃಷ್ಣದೇವನು ಅವರೆಲ್ಲರನ್ನೂ ನೋಡಿದನು. " ದೇವೇಂದ್ರನ ಯಾಗವನ್ನು ನಿಲ್ಲಿಸಿದನು. ಇದರಿಂದ ಕುಪಿತನಾಗಿ ಗೊಲ್ಲರನ್ನೂ ಗೋವುಗಳನ್ನೂ ಸಂಹರಿಸಬೇಕೆಂದು ತೀರ್ಮಾನಿಸಿದ ದೇವೇಂದ್ರನು ಅಖಂಡವಾಗಿ ಮಳೆಯನ್ನು ಸುರಿಸುತ್ತಿರುವನು. ಮಳೆಗಾಲವಲ್ಲ, ಬಿರುಗಾಳಿಯ ಕಾಲವಲ್ಲ. ಸಂಪತ್ತಿನ ಮದದಿಂದ ಮಳೆಯನ್ನು

ಸುರಿಸುತ್ತಿರುವನು. ನನ್ನ ಭಕ್ತನಾದ ದೇವೇಂದ್ರನಿಗೆ ಇಷ್ಟು ಅಹಂಕಾರವೂ ಕ್ರೌರ್ಯವೂ ಬರಬಾರದು. ಈ ಸಂದರ್ಭದಲ್ಲಿ ಅವನಿಗೆ ಮಾನಭಂಗವು ಏರ್ಪಡುವಂತೆ ಮಾಡಬೇಕು. ಅದನ್ನು ಮಾಡಿದರೆ ಬುದ್ಧಿಯು ಸ್ವಾಧೀನಕ್ಕೆ ಬರುತ್ತದೆ. ದೇವೇಂದ್ರನು ತನ್ನ ಎಲ್ಲಾ ಶಕ್ತಿಯನ್ನೂ ಉಪಯೋಗಿಸಿ ಮಳೆಯನ್ನು ಸುರಿಸಲಿ. ನಾನು ಆ ಮಳೆಯಿಂದ ಯಾರಿಗೂ ಯಾವ ಹಾನಿಯೂ ಏರ್ಪಡದಂತೆ ಸರ್ವರನ್ನೂ ರಕ್ಷಿಸುವೆನು. ತನ್ನಿಂದ ಯಾರನ್ನೂ ಸಂಹರಿಸಲು ಸಾಧ್ಯವಾಗದಿರುವುದರಿಂದ ದೇವೇಂದ್ರನ ಮಾನವು ಹೋಗುತ್ತದೆ. ಇದೇ ಅವನ ಗರ್ವಕ್ಕೆ ಔಷಧ'' ಎಂದು ತೀರ್ಮಾನಿಸಿದನು.

ಗೋವರ್ಧನಪರ್ವತವನ್ನು ಎಡಗೈಯಿಂದ ಎತ್ತಿದನು. ಚಿಕ್ಕ ಬಾಲಕನು ನಾಯಿಕೊಡೆಯನ್ನು ಎತ್ತಿ ಹಿಡಿದಂತೆ ಲೀಲಾಮಾತ್ರದಿಂದ ಎತ್ತಿಹಿಡಿದನು. ಗೊಲ್ಲರೆನ್ನೆಲ್ಲರನ್ನೂ ಕರೆದನು. " ಕೊಡೆಯ ಅಡಿಯಲ್ಲಿ ನಿಂತಂತೆ ಈ ಪರ್ವತದ ಅಡಿಯಲ್ಲಿ ನೀವೆಲ್ಲರೂ ಬಂದುನಿಲ್ಲಿರಿ. ನನ್ನ ಕೈಯಿಂದ ಈ ಪರ್ವತವು ಜಾರಿ ಕೆಳಗೆ ಬೀಳಬಹುದೆಂಬ ಅಂಜಿಕೆಯು ನಿಮಗೆ ಬೇಡ'' ಎಂದು ಹೇಳಿದನು. ಸಕಲ ಗೋಪಾಲಕರೂ ತಮ್ಮ ತಮ್ಮ ಸಕಲ ವಸ್ತುಗಳನ್ನೂ ಸಾಗಿಸಿಕೊಂಡು ಬಂದರು. ಹಸಿವು ನೀರಡಿಕೆಗಳನ್ನು ಮರೆತರು. ಸುಖದ ಆಸೆಯನ್ನೂ ಮರೆತರು. ಶ್ರೀಕೃಷ್ಣದೇವನ ಮುಖವನ್ನೇ ನೋಡುತ್ತಾ ಆನಂದಮಗ್ನರಾಗಿ ಏಳುದಿನಗಳ ವರೆಗೆ ನಿಂತರು.

ದೇವೇಂದ್ರನು ಏಳುದಿನಗಳ ವರೆಗೆ ಅಖಂಡವಾಗಿ ಮಳೆಯನ್ನು ಸುರಿಸಿದನು. ಯಾವ ಗೊಲ್ಲನಿಗೂ ಗೋವಿಗೂ ಯಾವ ಹಾನಿಯನ್ನೂ ಮಾಡಲು ಶಕ್ತನಾಗಲಿಲ್ಲ. ಅವನ ಗರ್ವ ಅಡಗಿತು. ತುಂಬಾ ಆಶ್ಚರ್ಯದಿಂದ ಯುಕ್ತನಾದನು. ಮೇಘಗಳನ್ನೆಲ್ಲಾ ಹಿಂದಿರುಗುವಂತೆ ಆಜ್ಞಾಪಿಸಿ ತಾನೂ ಹಿಂದಿರುಗಿದನು.

ದೇವೇಂದ್ರನಿಗೆ ಸಾವಿರಕಣ್ಣುಗಳಿವೆ. ಆದ್ದರಿಂದಲೇ ಸಹಸ್ರನೇತ್ರ ಎಂದು ಪ್ರಸಿದ್ಧನಾಗಿರುವನು. ಸಾವಿರಕಣ್ಣುಗಳಿಂದ ಯುಕ್ತನಾಗಿದ್ದರೂ ಶ್ರೀಕೃಷ್ಣದೇವನ ಶಕ್ತಿಯನ್ನು ತಿಳಿಯಲು ಶಕ್ತನಾಗಲಿಲ್ಲ. ಆದ್ದರಿಂದಲೇ ಮಳೆಯನ್ನು ಸುರಿಸುವುದಕ್ಕಾಗಿ ಮೇಘಗಳನ್ನು ಕಳುಹಿಸಿದನು. ಶ್ರೀಕೃಷ್ಣದೇವನನ್ನು ತಿಳಿಯಬೇಕಾದರೆ ವೇದಗಳಿಂದಲೇ ಸಾಧ್ಯ. ಅಂತಹ ಶ್ರೀಕೃಷ್ಣದೇವನನ್ನು ತಿಳಿಯಲು ಅಧಿಕ ಕಣ್ಣುಗಳಿಂದಾಗುವ ಪ್ರಯೋಜನವೇನು?

ಎಲ್ಲಾ ಪರ್ವತಗಳ ರೆಕ್ಕೆಗಳನ್ನು ದೇವೇಂದ್ರನು ಹಿಂದೊಮ್ಮೆ ಕತ್ತರಿಸಿದ್ದನು. ಆದ್ದರಿಂದಲೇ ಪರ್ವತಗಳ ವೈರಿ ಎಂದು ಪ್ರಸಿದ್ಧನಾದನು. ಈಗ ದೇವೇಂದ್ರನು ಮಳೆಯನ್ನು ಸುರಿಸಿದನು. ಆಗ ಅವನ ವೈರಿಯಾದ ಗೋವರ್ಧನಪರ್ವತವನ್ನು ಶ್ರೀಕೃಷ್ಣದೇವನು ಎಬ್ಬಿಸಿದನು. ತಾನು ಸುಮ್ಮನೆ ನಿಂತುಬಿಟ್ಟನು. ತನಗಿಂತ ಅಲ್ಪಶಕ್ತಿಯುಳ್ಳ ಶತ್ರುವು ತನ್ನೊಡನೆ ಜಗಳಕ್ಕೆ ಬಂದಾಗ ಆ ಶತ್ರುವಿನ ಹಳೆಯ ಶತ್ರುವನ್ನು ಎಬ್ಬಿಸಿ ತಾನು ಸುಮ್ಮನಿರುವುದು ರಾಜತಂತ್ರವಲ್ಲವೇ? ಅದರಂತೆ ತನಗೆ ಸಮನಲ್ಲದ ದೇವೇಂದ್ರ ಮಳೆಯನ್ನು ಸುರಿಸಿದಾಗ ಅವನ ಹಳೆಯ ಶತ್ರುವಾದ ಗೋವರ್ಧನಪರ್ವತವನ್ನು ಎತ್ತಿ ಬಿಟ್ಟು ಶ್ರೀಕೃಷ್ಣದೇವನು ಸುಮ್ಮನೆ ನಿಂತದ್ದು ಯುಕ್ತವೇ ಆಗಿರುತ್ತದೆ.

ಪರ್ವತವು ಭೂಭೃತ್ ಅಂದರೆ ಭೂಮಿಯನ್ನು ಎತ್ತಿಕೊಂಡಿರುವ ವಸ್ತುವು ಎಂದು ಪ್ರಸಿದ್ಧವಾಗಿದೆ. ನಿಜವಾಗಿ ಸರ್ವಜ್ಞನಾದ ಶ್ರೀಕೃಷ್ಣದೇವನೇ ಸಕಲಲೋಕಗಳಿಗೂ ಧಾರಕನಾಗಿರುವವನು. ಅವನಿಗೆ ತನ್ನ ಮುಂದೆ

"ಭೂಭೃತ್" ಎಂದು ಬುದ್ಧಿಯಿಲ್ಲದ ಪರ್ವತವು ಹೊಗಳಲ್ಪಡುವುದು ಸಹಿಸಲಿಲ್ಲ. ಅದಕ್ಕಾಗಿ ಗೋವರ್ಧನ ಪರ್ವತವನ್ನು ಕಿತ್ತು ಬಿಟ್ಟನೆಂದು ಊಹಿಸಬಹುದಾಗಿದೆ. ಪರ್ವತವು ಭೂಮಿಯನ್ನು ಎತ್ತಿಕೊಂಡಿರುವುದು ನಿಜವಾಗಿದ್ದರೆ ಭೂಮಿಯಿಂದ ಪರ್ವತವನ್ನು ಬೇರ್ಪಡಿಸಿದ ಕೂಡಲೇ ಭೂಮಿಯು ಕೆಳಗೆ ಬೀಳಬೇಕಾಗಿತ್ತು. ಹಾಗೆ ಬೀಳದಿರುವುದರಿಂದ ಪರ್ವತವು ಭೂಮಿಯನ್ನು ಎತ್ತಿಕೊಂಡಿಲ್ಲವೆಂದು ಸ್ಪಷ್ಟವಾಯಿತು.

# ಗೋವರ್ಧನಪರ್ವತದ ವರ್ಣನೆ

ದೇವೇಂದ್ರನು ಸುರಿಸುತ್ತಿರುವ ಮಳೆಯ ನೀರು ಪರ್ವತದ ಬುಡಕ್ಕೂ ಭೂಮಿಗೂ ಮಧ್ಯದಲ್ಲಿ ಎಡೆಯೇ ಇಲ್ಲದಂತೆ ಅಖಂಡವಾಗಿ ಸುರಿಯುತ್ತಿತ್ತು. ಇದರಿಂದ ಭೂಮಿಗೂ ಪರ್ವತದ ಬುಡಕ್ಕೂ ಮಧ್ಯದಲ್ಲಿರುವ ಅವಕಾಶವು ತಿಳಿಯುತ್ತಿದ್ದಿಲ್ಲ. ಆದ್ದರಿಂದ ಆ ಪರ್ವತವು ಭೂಮಿಯಿಂದ ಕೀಳಲ್ಪಟ್ಟದ್ದರೂ ಕೀಳಲ್ಪಡದಂತೆ ಕಾಣಿಸುತ್ತಿತ್ತು.

ಮಳೆಯ ನೀರು ಪರ್ವತದ ಮೇಲ್ಭಾಗದಲ್ಲಿ ಅಖಂಡವಾಗಿ ಸುರಿಯುತ್ತಿದೆ. ಪರ್ವತದ ಮಧ್ಯ ಭಾಗದಲ್ಲಿ ಶ್ರೀಕೃಷ್ಣದೇವನು ನಿಂತಿರುವನು. ಇದನ್ನು ನೋಡುವವರಿಗೆ ಒಬ್ಬ ಯೋಗಿಯು ಮುಂದಿನ ಜನ್ಮದಲಿ ಸುಖವನ್ನು ಸಾಧಿಸುವುದಕ್ಕಾಗಿ ಮಳೆಯಲ್ಲಿ ನಿಂತು ಶ್ರೀಹರಿಯನ್ನು ಹೃದಯದಲ್ಲಿ ಧ್ಯಾನಿಸುತ್ತಾ ತಪಸ್ಸನ್ನು ಮಾಡುತ್ತಿರುವಂತೆ ಕಾಣಿಸುತ್ತಿತ್ತು.

ಪರ್ವತದ ಕೆಳಭಾಗದಲ್ಲಿರುವ ಗೊಲ್ಲರೂ ಗೋವುಗಳೂ ಕರುಣೆಯೆಂಬ ಅಖಂಡವಾದ ಧಾರೆಯನ್ನು ಸುರಿಸುತ್ತಿರುವ ಶ್ರೀಕೃಷ್ಣನೆಂಬ ಮೇಘದ ವೈಭವವನ್ನು ಸಂತೋಷದಿಂದ ನೋಡುತ್ತಿರುವರು. ಮೇಲ್ಭಾಗದಲ್ಲಿ ಸಂತೋಷಕರವಾದ ಗುಹೆಗಳಲ್ಲಿ ವಾಸಿಸುತ್ತಿರುವ ಪ್ರಾಣಿಗಳು ಮಳೆಯನ್ನು ಸುರಿಸುತ್ತಿರುವ ಮೇಘಗಳನ್ನು ಸಂತೋಷದಿಂದ ನೋಡುತ್ತಿರುವವು. ಹೀಗೆ ಗೋವರ್ಧನಪರ್ವತದ ಒಳಗೂ ಹೊರಗೂ ಇರುತ್ತಿರುವ ಸರ್ವರೂ ಬೇರೆ ಬೇರೆ ವಿಧವಾಗಿ ಮೇಘಗಳನ್ನು ನೋಡಿ ಆನಂದಿಸಿದರು.

ಈ ಗೋವರ್ಧನ ಪರ್ವತವು ಅದರ ಕೆಳಗಿರುವ ಶ್ರೀಕೃಷ್ಣನಿಗೆ ಗೋಪುರದಂತೆ ಕಾಣಿಸಿತು. ಆ ಪರ್ವತದಲ್ಲಿರುವ ಬಂಗಾರದ ಶಿಖರಗಳೇ ಗೋಪುರದಲ್ಲಿರುವ ಕಲಶಗಳಂತೆಯೂ ಮಳೆಯಿಂದ ಅಲುಗಾಡದಿರುವ ಮೃಗ ಪಕ್ಷಿ ಮುಂತಾದ ಪ್ರಾಣಿಗಳು ಗೋಪುರದಲ್ಲಿ ಮೃಗ ಪಕ್ಷಿ ಮುಂತಾದ ವಿಗ್ರಹಗಳಂತೆಯೂ, ಗುಹೆಗಳು ಗೋಪುರದಲ್ಲಿರುವ ಬಾಗಿಲುಗಳಂತೆಯೂ ಕಾಣಿಸಿದವು.

ಶ್ರೀಕೃಷ್ಣದೇವನು ಕಂಸನ ಎದುರಿನಲ್ಲಿ ಮಲ್ಲಯುದ್ಧವನ್ನು ಮಾಡಬೇಕಾಗಿದೆ. ಅದಕ್ಕಾಗಿ ಈಗಲೇ ಮಲ್ಲಯುದ್ಧವನ್ನು ಕಲಿಯಬೇಕು. ಅದಕ್ಕಾಗಿ ದೊಡ್ಡ ಪರ್ವತವನ್ನು ಎತ್ತಿ ಮಲ್ಲಯುದ್ಧವನ್ನು ಅಭ್ಯಾಸ ಮಾಡುತ್ತಿರುವಂತಿತ್ತು.

ಸಮುದ್ರಮಥನಕಾಲದಲ್ಲಿ ಕಡಗೋಲಾದ ಮಂದರಪರ್ವತವು ಸಮುದ್ರದಲ್ಲಿ ಮುಳುಗಿತು. ಆಗ ಶ್ರೀಹರಿಯು ಕೂರ್ಮರೂಪವನ್ನು ಧರಿಸಿ ಆ ಪರ್ವತವನ್ನು ಎತ್ತಿದನು. ಎಲ್ಲಾ ಕಡೆಗಳಲ್ಲಿಯೂ ನೀರನ್ನು ಸುರಿಸುತ್ತಿರುವ ಆ ಪರ್ವತವನ್ನು ದೇವತೆಗಳೆಲ್ಲರೂ ನೋಡಿದರು. ಆಶ್ಚರ್ಯದಿಂದ ಯುಕ್ತರಾದರು. ಅದರಂತೆ

ಶ್ರೀಕೃಷ್ಣದೇವನಿಂದ ಎತ್ತಲ್ಪಟ್ಟ ಈ ಗೋವರ್ಧನ ಪರ್ವತವೂ ಎಲ್ಲಾ ಕಡೆಯಿಂದಲೂ ನೀರನ್ನು ಸುರಿಸುತ್ತಾ ಶೋಭಿಸಿತು. ದೇವತೆಗಳೆಲ್ಲರೂ ಈ ಪರ್ವತವನ್ನು ನೋಡಿ ಆಶ್ಚರ್ಯಚಕಿತರಾದರು.

ನೀರಿನ ಮಧ್ಯದಲ್ಲಿ ಕಾಣಿಸುತ್ತಿರುವ ಗೋವರ್ಧನಪರ್ವತವು ಆ ನೀರನ್ನು ದಾಟಬೇಕೆಂದು ಅಪೇಕ್ಷಿಸುತ್ತಿರುವ ಗೊಲ್ಲರಿಗೂ ಗೋವುಗಳಿಗೂ ಎಲ್ಲಾ ವಿಧವಾದ ಕಷ್ಟಗಳನ್ನೂ ಪರಿಹರಿಸುತ್ತಿರುವ ಹಡಗಿನಂತೆ ಕಾಣಿಸಿತು.

ಗೋವರ್ಧನಪರ್ವತವು ಮರಗಳಲ್ಲಿರುವ ಪೊಟರೆಗಳಲ್ಲಿ ಪಕ್ಷಿಗಳನ್ನೂ, ಮನೆಗಳಂತಿರುವ ಗುಹೆಗಳಲ್ಲಿ ಮೃಗಗಳನ್ನೂ ಮೇಘಮಂಡಲಗಳಿಗಿಂತ ಎತ್ತರದಲ್ಲಿರುವ ಪರ್ವತದ ಮೇಲ್ಭಾಗಗಳಲ್ಲಿ ಮುನಿಗಳನ್ನೂ ರಕ್ಷಿಸಿತು. ಅಪತ್ಕಾಲಗಳಲ್ಲಿ ತಮ್ಮವರನ್ನು ಉತ್ತಮಪುರುಷರು ಕೈಬಿಡುವರೇ? ಅದರಂತೆ ಉತ್ತಮವಾದ ಗೋವರ್ಧನಪರ್ವತವು ತನ್ನನ್ನು ನಂಬಿದ ಪಕ್ಷಿಗಳನ್ನೂ ಮೃಗಗಳನ್ನೂ ಮುನಿಗಳನ್ನೂ ಉದಾಸೀನಮಾಡದೆ ರಕ್ಷಿಸಿರುವುದು ಯುಕ್ತವೇ ಆಗಿದೆ.

ಅತಿ ಪ್ರಬಲವಾದ ಮಳೆಯ ಹೊಡೆತದಿಂದ ಕೆಳಗೆ ಬಿದ್ದಿರುವ ಪುಷ್ಪಗಳ ಮೊಗ್ಗುಗಳಿಂದ ಗೋರ್ವರ್ಧನಪರ್ವತದಲ್ಲಿರುವ ಎಲ್ಲಾ ಪ್ರದೇಶಗಳೂ ಅಲಂಕೃತವಾಗಿವೆ. ಇದನ್ನು ನೋಡಿದರೆ ಶ್ರೀಕೃಷ್ಣದೇವನ ಕಮಲದಂತೆ ಮೃದುವಾದ ಕೈಗಳ ಸ್ಪರ್ಶದಿಂದ ಗೋವರ್ಧನ ಪರ್ವತವು ರೋಮಾಂಚದಿಂದ ಅಲಂಕೃತವಾದಂತೆ ಕಾಣಿಸುತ್ತದೆ.

ಗೋವರ್ಧನಪರ್ವತವು ಗೋವುಗಳನ್ನೂ ಬ್ರಾಹ್ಮಣರನ್ನೂ ರಕ್ಷಿಸುತ್ತಿದೆ. ಶ್ರೀಕೃಷ್ಣದೇವನ ಕೈಗಳಿಂದ ಎತ್ತಲ್ಪಟ್ಟಿದೆ. ಆದ್ದರಿಂದಲೇ ಸಿಡಿಲಿನಿಂದ ಯುಕ್ತವಾಗಿರುವ ಮಳೆಯ ಬಲವತ್ತರವಾದ ಹೊಡೆತವು ಏರ್ಪಟ್ಟರೂ ಚಲಿಸಲಿಲ್ಲ. ಶ್ರೀಕೃಷ್ಣದೇವನ ಅಭಯಹಸ್ತಸ್ಪರ್ಶವು ಏರ್ಪಟ್ಟಿರುವ ಗೋಬ್ರಾಹ್ಮಣರಕ್ಷಕನಿಗೆ ಸ್ಥಾನಚಲನವು ಏರ್ಪಟ್ಟೀತೇ?

ಗೋವರ್ಧಪರ್ವತದಲ್ಲಿ ಸ್ಫಟಿಕಮಣಿಮಯವಾದ ಎತ್ತರವಾಗಿರುವ ಶಿಖರದಲ್ಲಿ ದೇವೇಂದ್ರನ ವಾಸಸ್ಥಳವಾಗಿರುವ ಸ್ವರ್ಗಲೋಕವೂ ಮೇಘಗಳೂ ಪ್ರತಿಬಿಂಬಿತವಾಗಿವೆ. ಇದನ್ನು ನೋಡಿದರೆ ಅಪರಾಧಿಗಳಾಗಿರುವ ದೇವೇಂದ್ರನ ಸ್ವರ್ಗಲೋಕವನ್ನೂ ಮೇಘಗಳ ಲೋಕವನ್ನೂ ಗೋವರ್ಧನ ಪರ್ವತವು ನುಂಗಿದಂತಿದೆ.

ಗೋವರ್ಧನ ಪರ್ವತದ ಪ್ರತಿಬಿಂಬವು ನೀರಿನಲ್ಲಿ ತಲೆಕೆಳಗಾಗಿ ಕಾಣಿಸುತ್ತಿದೆ. ಅದೇ ಸಂಪುಟದ ಕೆಳಗಣ ಭಾಗವೆಂದು ತಿಳಿಯಬಹುದು. ಪರ್ವತದ ಶಿಖರಗಳಲ್ಲಿ ಮೇಲಿನಿಂದ ಉದುರಿಬಿದ್ದ ಪುಷ್ಪಗಳಿಂದ ಅಲಂಕರಿಸಿದಂತಿದೆ. ಅದೇ ಸಂಪುಟದ ಮೇಲ್ಭಾಗವೆಂದು ತಿಳಿಯಬಹುದು. ಪರ್ವತದ ಮಧ್ಯದಲ್ಲಿ ನಂದಬಾಲಕನಿರುವನು. ಅದೇ ಸಂಪುಟದ ಮಧ್ಯಭಾಗವೆಂದು ತಿಳಿಯಬಹುದು. ಹೀಗೆ ಈ ಗೋವರ್ಧಪರ್ವತದ ನೆರಳೂ ಪುಷ್ಪಗಳಿಂದ ಅಲಂಕೃತವಾದ ಮೇಲ್ಭಾಗವೂ ಶ್ರೀಕೃಷ್ಣನಿಂದ ಅಲಂಕೃತವಾದ ಮಧ್ಯಭಾಗವೂ ಸೇರಿದಾಗ ಅದ್ಭುತವಾದ ಸಂಪುಟದಂತೆ ತಿಳಿಯುತ್ತಿದೆ.

ಈ ಗೋವರ್ಧನಪರ್ವತದಲ್ಲಿ ಸಾವಿರಾರು ದೊಡ್ಡ ದೊಡ್ಡ ಆನೆಗಳು ಓಡಾಡುತ್ತಿವೆ. ಇಂತಹ ದೊಡ್ಡ ಗೋವರ್ಧಪರ್ವತವನ್ನು ಶಿಶುರೂಪಿಯಾದ ಶ್ರೀಕೃಷ್ಣದೇವನು ಕೈಯಲ್ಲಿ ಎತ್ತಿಕೊಂಡಿರುವನು. ಇದನ್ನು ನೋಡಿದ ಮಹಾಕವಿಗಳು "ಶಿಶೋಃ ಕರೇ ಹಸ್ತಿಸಹಸ್ರಮಸ್ತಿ" ಅಂದರೆ "ಶಿಶುವಿನ ಕೈಯಲ್ಲಿ ಸಾವಿರ ಆನೆಗಳಿವೆ" ಎಂಬ ಸಮಸ್ಯೆಯನ್ನು ಪೂರ್ತಿ ಮಾಡುತ್ತಿರುವರು.

ಗೋವರ್ಧನಪರ್ವತದಲ್ಲಿ ಎಲ್ಲಾ ಕಡೆಗಳಲ್ಲಿಯೂ ವ್ಯಾಪಿಸಿರುವ ಮಂಜುಗಳು ಆಗ್ನೇಯಾಸ್ತ್ರದಿಂದ ಹೊರಟಿರುವ ಹೊಗೆಗಳಂತೆ ಕಾಣಿಸಿದವು. ಪರ್ವತದ ಶಿಖರಗಳಲ್ಲಿ ನಾನಾ ಬಣ್ಣಗಳಿಂದ ಯುಕ್ತವಾಗಿರುವ ಧಾತುಗಳು ಕರಗಿ ಬರುತ್ತಿವೆ. ಅವುಗಳೆಲ್ಲವೂ ಆಗ್ನೇಯಾಸ್ತ್ರದ ಬೇರೆ ಬೇರೆ ಬಣ್ಣಗಳಂತೆ ಕಾಣಿಸಿದವು. ಆ ಪರ್ವತದ ಸುತ್ತಲೂ ಪ್ರಕಾಶಮಯವಾದ ನಾನಾ ವಿಧವಾದ ರತ್ನಗಳು ಉದುರುತ್ತಿದ್ದವು. ಅವುಗಳೆಲ್ಲವೂ ಆಗ್ನೇಯಾಸ್ತ್ರದ ಕಿಡಿಗಳಂತೆ ಕಾಣಿಸಿದವು. ಹೀಗೆ ದೇವೇಂದ್ರನಿಂದ ಸುರಿಸಲ್ಪಟ್ಟ ಜಲಪ್ರವಾಹವನ್ನು ಒಣಗಿಸುವುದಕ್ಕೋಸ್ಕರ ಶ್ರೀಕೃಷ್ಣದೇವನು ಪ್ರಯೋಗಿಸಿದ ಆಗ್ನೇಯಾಸ್ತ್ರದಂತೆ ಆ ಗೋವರ್ಧನಪರ್ವತವು ಕಾಣಿಸಿತು.

ಶ್ರೀಕೃಷ್ಣದೇವನ ಕೆನ್ನೆಯು ಆಮೆಯ ಬೆನ್ನಿನಂತಿದೆ. ಶ್ರೀಕೃಷ್ಣದೇವನು ಆ ಕೆನ್ನೆಯನ್ನು ಮುಟ್ಟಿದಂತೆ ಗೋವರ್ಧನಪರ್ವತವನ್ನು ಎಡಗೈಯಿಂದ ಎತ್ತಿಕೊಂಡಿರುವನು. ಆ ಎಡಗೈಯು ಆಮೆಯ ಮೇಲೆ ಬಾಲವನ್ನು ಊರಿ ನಿಂತಿರುವ ಶೇಷದೇವನಂತೆಯೂ ಆ ಕೈಯಲ್ಲಿರುವ ಬೆರಳುಗಳು ಶೇಷದೇವನ ಹೆಡೆಗಳಂತೆಯೂ ಆ ಬೆರಳುಗಳ ಮೇಲೆ ನಿಂತಿರುವ ಗೋವರ್ಧನಪರ್ವತವೂ ಶೇಷದೇವನ ಹೆಡೆಗಳ ಮೇಲೆ ನಿಂತಿರುವ ಭೂದೇವಿಯಂತೆಯೂ ಕಾಣಿಸುತ್ತಿದೆ. ಹೀಗೆ ಶ್ರೀಕೃಷ್ಣದೇವನ ಕಪೋಲಗಳನ್ನು ಮುಟ್ಟಿಕೊಂಡು ಮೇಲೆ ಬಂದಿರುವ ಕೈಗಳ ಬೆರಳುಗಳಲ್ಲಿರುವ ಗೋವರ್ಧನಪರ್ವತದವು ಕೂರ್ಮರೂಪಿಯಾದ ಶ್ರೀಹರಿಯ ಬೆನ್ನಿನಲ್ಲಿ ನಿಂತಿರುವ ಶೇಷದೇವನ ಹೆಡೆಗಳಲ್ಲಿ ಶೋಭಿಸುತ್ತಿರುವ ಭೂದೇವಿಯಂತೆ ಕಾಣಿಸಿತು.

ಆ ಗೋವರ್ಧನಪರ್ವತದಲ್ಲಿ ಇಂದ್ರನೀಲಮಣಿಗಳಿಂದ ನಿರ್ಮಿಸಲ್ಪಟ್ಟ ಅನೇಕ ಪ್ರದೇಶಗಳಿವೆ. ಆ ಪ್ರದೇಶಗಳು ನೀಲವಾದ ಮೇಘಗಳನ್ನು ಜಯಿಸಿದವು. ಆ ಪರ್ವತದಲ್ಲಿ ನಾನಾ ಬಣ್ಣಗಳಿಂದ ಯಕ್ತವಾದ ನವಿಲಿನ ಗರಿಗಳು ಅಲ್ಲಲ್ಲಿ ಬಿದ್ದಿರುತ್ತವೆ. ಅವುಗಳು ಮೇಘಗಳಲ್ಲಿರುವ ನಾನಾ ವರ್ಣಗಳಿಂದ ಯುಕ್ತವಾಗಿರುವ ಕಾಮನ ಬಿಲ್ಲುಗಳನ್ನು ಜಯಿಸಿದವು. ಆ ಪರ್ವತದಲ್ಲಿ ನೀರಿನಂತೆ ಹೊಳೆಯುತ್ತಿರುವ ಮುತ್ತುಗಳು ಎಲ್ಲಾ ಕಡೆಗಳಲ್ಲಿಯೂ ಉದುರುತ್ತಿವೆ. ಅವುಗಳು ಆ ಪರ್ವತದಲ್ಲಿ ಸುತ್ತಲೂ ಸುರಿಯುತ್ತಿರುವ ನೀರುಗಳನ್ನು ಜಯಿಸಿದವು. ಆ ಪರ್ವತದಲ್ಲಿ ಮಿಂಚಿನಂತೆ ಹೊಳೆಯುತ್ತಿರುವ ಸುವರ್ಣಮಯವಾದ ಅನೇಕಪ್ರದೇಶಗಳಿವೆ. ಅವುಗಳು ಮೇಘಗಳ ಮಧ್ಯದಲ್ಲಿ ಪ್ರಕಾಶಿಸುತ್ತಿರುವ ಮಿಂಚುಗಳನ್ನು ಜಯಿಸಿದವು. ಆ ಪರ್ವತದಲ್ಲಿ ಸಿಂಹಗಳು ಗರ್ಜಿಸುತ್ತಿದ್ದವು. ಆ ಗರ್ಜನೆಗಳು ಮೇಘದ ಗರ್ಜನೆಗಳನ್ನು ಜಯಿಸಿದವು. ಹೀಗೆ ಆ ಪರ್ವತವು ಮೇಘ ಮುಂತಾದವುಗಳನ್ನು ಜಯಿಸುವುದಕ್ಕೆ ಕ್ಷಮಾಧಾರಿ ಅಂದರೆ ಯಾವಾಗಲೂ ಭೂದೇವಿಯನ್ನು (ಕ್ಷಮಾಗುಣವನ್ನು) ಧರಿಸಿದ್ದರಿಂದಲೇ ಸಾಧ್ಯವಾಯಿತು.

ಮೇಘಗಳಿಂದ ಸುರಿಯುತ್ತಿರುವ ನೀರಿನ ಧಾರೆಗಳೆಲ್ಲವೂ ನಿಂತುಹೋದವು. ನಿನ್ನನ್ನು ನೋಡುತ್ತಿರುವ ಒಬ್ಬೊಬ್ಬರ ಕಣ್ಣುಗಳಿಂದಲೂ ಪ್ರೇಮಾತಿರೇಕದಿಂದ ಕಣ್ಣೀರಿನ ಧಾರೆಗಳು ಸುರಿಯುತ್ತಿವೆ. ಮೇಘಗಳ ಗರ್ಜನೆಗಳೆಲ್ಲವೂ ನಿಂತವು. ನಿನ್ನನ್ನು ಸ್ತುತಿಸುತ್ತಿರುವ ಸಿದ್ಧೇಶ್ವರರ ಮುಖದಿಂದ ಹೊರಡುತ್ತಿರುವ,

ಮೇಘಗರ್ಜನೆಗಳನ್ನೂ ಮೀರಿಸುತ್ತಿರುವ ಧ್ವನಿಗಳು ಕೇಳಿಸುತ್ತಿವೆ. ಮಿಂಚುಗಳು ನಿಂತುಹೋದವು. ದೇವತಾಸ್ತ್ರೀಯರು ನರ್ತಿಸುತ್ತಿದ್ದಾರೆ. ಅವರ ಕೈಗಳಲ್ಲಿರುವ ಆಭರಣಗಳ ಕಾಂತಿಯು ಮಿಂಚುಗಳನ್ನೂ ಮೀರಿಸುತ್ತಿವೆ. ಬಿರಗಾಳಿಯು ನಿಂತುಹೋಯಿತು. ದೇವತೆಗಳು ನಿನ್ನ ಮೇಲೆ ಪುಷ್ಪಗಳ ಮಳೆಗಳನ್ನು ಸುರಿಸುತ್ತಿರುವರು. ಆ ಪುಷ್ಪಗಳ ಜೊತೆಯಲ್ಲಿ ಅಸಂಖ್ಯವಾದ ಭ್ರಮರಗಳು ಓಡಿ ಬರುತ್ತಿವೆ. ಆ ಭ್ರಮರಗಳ ರೆಕ್ಕೆಗಳಿಂದ ಹೊರಡುತ್ತಿರುವ ಗಾಳಿಗಳು ಬಿರುಗಾಳಿಯನ್ನೂ ಮೀರಿಸುತ್ತಿವೆ. ಆಕಾಶದಲ್ಲಿ ಕಪ್ಪುಬಣ್ಣವು ಹೋಯಿತು. ದೇವೇಂದ್ರನು ಸೋತುಹೋದನು. ಆದ್ದರಿಂದ ಅವನಿಗೆ ತುಂಬಾ ನಾಚಿಕೆಯು ಏರ್ಪಟ್ಟಿದೆ. ಅವನ ಮುಖದಲ್ಲಿ ಆಕಾಶದಲ್ಲಿದ್ದ ಕಪ್ಪು ಬಣ್ಣಗಳೆಲ್ಲವೂ ಹೋಗಿ ಸೇರಿವೆ. ಮೇಘಗಳು ಎಲ್ಲೆಲ್ಲಿಯೂ ಇಲ್ಲ. ಆ ಮೇಘಗಳ ಸ್ಥಾನದಲ್ಲಿ ಹೊಳೆಯುತ್ತಿರುವ ದೇವತೆಗಳ ವಿಮಾನಗಳ ವ್ಯಾಪಿಸಿಕೊಂಡಿವೆ. ಕತ್ತಲೆಯು ಎಲ್ಲೆಲ್ಲಿಯೂ ಇಲ್ಲ. ಇಂತಹ ಮಹಾಶಕ್ತಿಪೂರ್ಣನಾದ ನಿನ್ನನ್ನು ಈಗಲೂ ಮನುಷ್ಯನೆಂದು ತಿಳಿಯುತ್ತಿರುವವರ ಮನಸ್ಸಿನಲ್ಲಿ ಎಲ್ಲಾ ಕತ್ತಲೆಯೂ ವ್ಯಾಪಿಸಿದೆ. ನಮ್ಮ ದೇಹದಲ್ಲಿ ಯಾರಲ್ಲಿಯೂ ನಡುಕವಿಲ್ಲ. ದೇವೇಂದ್ರನು ನಿನಗೆ ಅಪರಾಧವನ್ನು ಮಾಡಿರುವನು. ತುಂಬಾ ಹೆದರಿರುವನು. ಅವನ ದೇಹದಲ್ಲಿ ಎಲ್ಲಾ ನಡುಕಗಳೂ ವ್ಯಾಪಿಸಿವೆ.

ಗೊಲ್ಲನ ಈ ಮಾತುಗಳನ್ನು ಕೇಳಿ ಶ್ರೀಕೃಷ್ಣನು ಮೆಲ್ಲನೆ ನಕ್ಕನು. ಸರ್ವರನ್ನು ತಮ್ಮ ತಮ್ಮ ಸ್ಥಾನಗಳಿಗೆ ಹೋಗುವಂತೆ ಆಜ್ಞಾಪಿಸಿದನು. ಅವರೆಲ್ಲರೂ ತಮ್ಮ ತಮ್ಮ ವಸ್ತುಗಳಿಂದ ಸಹಿತರಾಗಿ ತಮ್ಮ ತಮ್ಮ ಸ್ಥಾನಗಳಿಗೆ ಹೋದರು. ಶ್ರೀಕೃಷ್ಣದೇವನು ಗೋವರ್ಧನಪರ್ವತವನ್ನು ಹಿಂದಿದ್ದ ಸ್ಥಳದಲ್ಲಿಯೇ ಸ್ವಲ್ಪವೂ ವ್ಯತ್ಯಾಸವಿಲ್ಲದಂತೆ ಇಟ್ಟನು.

ಶ್ರೀಕೃಷ್ಣದೇವನು ಏಳುದಿನಗಳ ವರೆಗೆ ಗೋವರ್ಧನಪರ್ವತವನ್ನು ಎತ್ತಿ ಹಿಡಿದನು. ಮಧ್ಯದಲ್ಲಿ ಚಲಿಸಲೇ ಇಲ್ಲ. ಇದನ್ನೆಲ್ಲವೂ ಎಲ್ಲಾ ಗೊಲ್ಲರೂ ನೋಡಿದರು. ಆಶ್ಚರ್ಯದಿಂದ ಯುಕ್ತರಾದರು. ಅನ್ಯೋನ್ಯವಾಗಿ ಮಾತಾಡಿಕೊಂಡರು. " ಈ ಬಾಲಕನ ಒಂದೊಂದು ವ್ಯಾಪಾರಗಳೂ ಅತ್ಯಾಶ್ಚರ್ಯಕರವಾಗಿವೆ. ಇಂತಹ ಮಹನೀಯನು ನಮ್ಮಂತಹ ಅಲ್ಪಜನಗಳ ಮಧ್ಯದಲ್ಲಿ ಜನ್ಮವನ್ನು ಸ್ವೀಕರಿಸಿರುವುದು ಹೇಗೆ ಯುಕ್ತವಾಗುತ್ತದೆ?" ಎಂದು ಹೇಳುತ್ತಾ ಪೂತನಾ ಸಂಹಾರದಿಂದ ಆರಂಭಿಸಿ ಇಂದಿನ ವರೆಗೆ ಅವನು ಮಾಡಿರುವ ಒಂದೊಂದು ವ್ಯಾಪಾರಗಳನ್ನೂ ಹೇಳುತ್ತಾ ಆಶ್ಚರ್ಯವನ್ನು ವ್ಯಕ್ತಪಡಿಸಿದರು.

ಆಗ ನಂದನು ಅವನ ನಾಮಕರಣ ಕಾಲದಲ್ಲಿ ಗರ್ಗಾಚಾರ್ಯರು ಹೇಳಿರುವ ಅವನ ಪ್ರಭಾವಗಳೆಲ್ಲವನ್ನೂ ಹೇಳಿದನು. ಅವನು ನಾರಾಯಣಗೆ ಸಮನೆಂದು ಗರ್ಗಾಚಾರ್ಯರು ಹೇಳಿರುವುದಾಗಿಯೂ ಅದನ್ನು ತಾನು ನಂಬುವುದಾಗಿಯೂ ತಿಳಿಸಿದನು. ॥ ೬ ॥

**ಗೋವಿಂದಾಖ್ಯೋऽಥ ತಾತಂ ಜಲಪತಿಹೃತಮಾನೀಯ ಲೋಕಂ ಸ್ವಕೀಯಂ**
**ನಂದಾದೀನಾಂ ಪ್ರದರ್ಶ್ಯ ವ್ರಜಗತವನಿತಾಗಾನಕೃಷ್ಟಾರ್ತಚಿತ್ತಾಃ।**
**ಯಃ ಕಾಲಿಂದ್ಯಾಂ ನಿಶಾಯಾಮರಮಮಯದಮಲಜ್ಯೋತ್ಸ್ನಯಾ ದೀಪಿತಾಯಾಂ**
**ಚಾರ್ವಂಗೀರ್ನರ್ಮವಾಕ್ಯೈಃ ಸ್ತನಭರನಮಿತಾಃ ಪ್ರೀಣಯನ್ ಪ್ರೀಯತಾಂ ನಃ ॥ ೭ ॥**

**ಪದಚ್ಛೇದ :-**ಗೋವಿಂದಾಖ್ಯಃ ಅಥ ತಾತಂ ಜಲಪತಿಹೃತಂ ಆನೀಯ ಲೋಕಂ ಸ್ವಕೀಯಂ ನಂದಾದೀನಾಂ

ಪ್ರದರ್ಶ್ಯ ವ್ರಜಗತವನಿತಾಃ ಗಾನಕೃಷ್ಟಾರ್ತಚಿತ್ತಾಃ ಯಃ ಕಾಲಿಂದ್ಯಾಂ ನಿಶಾಯಾಂ ಅರಮಯತ್ ಅಮಲಜ್ಯೋತ್ಸ್ನಯಾ ದೀಪಿತಾಯಾಂ ಚಾರ್ವಂಗೀಃ ನರ್ಮವಾಕ್ಯೈಃ ಸ್ತನಭರನಮಿತಾಃ ಪ್ರೀಣಯನ್ ಪ್ರೀಯತಾಂ ನಃ।

ಅನ್ವಯ :- ಯಃ ಅಥ ಗೋವಿಂದಾಖ್ಯಃ ಜಲಪತಿಹೃತಂ ತಾತಂ ಆನೀಯ, ಸ್ವಕೀಯಂ ಲೋಕಂ ನಂದಾದೀನಾಂ ಪ್ರದರ್ಶ್ಯ, ಗಾನಕೃಷ್ಟಾರ್ತಚಿತ್ತಾಃ ಚಾರ್ವಂಗೀಃ ಸ್ತನಭರನಮಿತಾಃ ವ್ರಜಗತವನಿತಾಃ ನರ್ಮವಾಕ್ಯೈಃ ಪ್ರೀಣಯನ್ ಅಮಲಜ್ಯೋತ್ಸ್ನಯಾ ದೀಪಿತಾಯಾಂ ಕಾಲಿಂದ್ಯಾಂ ನಿಶಾಯಾಂ ಅರಮಯತ್ ಸಃ ನಃ ಪ್ರೀಯತಾಂ।

ಅನ್ವಯಾರ್ಥ :- "ಯಃ" ಯಾವ ಶ್ರೀಕೃಷ್ಣದೇವನು "ಅಥ" ಗೋವರ್ಧನಪರ್ವತವನ್ನು ಎತ್ತಿದ ಅನಂತರದಲ್ಲಿ "ಗೋವಿಂದಃ" ಗೋವುಗಳನ್ನು ರಕ್ಷಿಸಿದ್ದರಿಂದಲೂ ವೇದ ಮುಂತಾದ ಸಚ್ಛಾಸ್ತ್ರಗಳಿಂದ ಹೊಗಳಲ್ಪಡುತ್ತಿರುವುದರಿಂದಲೂ ಗೋವಿಂದ ಎಂಬ ಬಿರುದನ್ನು ಪಡೆದನೋ "ಜಲಪತಿಹೃತಂ" ಜಲಪಾಲಕನಾದ ವರುಣನಿಂದ ಅಥವಾ ವರುಣನ ಸೇವಕನಾದ ರಾಕ್ಷಸನಿಂದ ಸೆರೆ ಹಿಡಿಯಲ್ಪಟ್ಟ "ತಾತಂ"ತನ್ನ ತಂದೆಯಾದ ನಂದನನ್ನು "ಆನೀಯ" ಹಿಂದಿರುಗಿಸಿ ಕರೆದುಕೊಂಡು ಬಂದು "ಸ್ವಕೀಯಂ" ತನ್ನದಾಗಿರುವ "ಲೋಕಂ" ವೈಕುಂಠಲೋಕವನ್ನು "ನಂದಾದೀನಾಂ" ನಂದ ಮುಂತಾದವರಿಗೆ "ಪ್ರದರ್ಶ್ಯ" ತೋರಿಸಿ "ಗಾನಕೃಷ್ಟಾರ್ತಚಿತ್ತಾಃ" ವೇಣುಗಾನದಿಂದ ಆಕರ್ಷಿಸಲ್ಪಟ್ಟ ಮತ್ತು ಮನ್ಮಥಪೀಡಿತವಾಗಿರುವ ಮನಸ್ಸಿನಿಂದ ಯುಕ್ತರಾಗಿರುವ "ಚಾರ್ವಂಗೀಃ" ಸುಂದರವಾದ ಅವಯವಗಳಿಂದ ಯುಕ್ತವಾಗಿರುವ "ಸ್ತನಭರನಮಿತಾಃ" ಮೊಲೆಗಳ ಭಾರದಿಂದ ಬಗ್ಗಿರುವ "ವ್ರಜಗತವನಿತಾಃ" ವೃಂದಾವನದಲ್ಲಿರುವ ಸ್ತ್ರೀಯರನ್ನು "ನರ್ಮವಾಕ್ಯೈಃ" ಅಪಹಾಸಕರವಾದ ತಮಾಷೆ ಮಾತುಗಳಿಂದ "ಪ್ರೀಣಯನ್" ಸಂತೋಷಪಡಿಸುತ್ತಿರುವವನಾಗಿ "ಅಮಲಜ್ಯೋತ್ಸ್ನಯಾ" ನಿರ್ಮಲವಾದ ಬೆಳದಿಂಗಳನಿಂದ "ದೀಪಿತಾಯಾಂ" ಪ್ರಕಾಶಿಸುತ್ತಿರುವ "ನಿಶಾಯಾಂ" ರಾತ್ರಿಯಲ್ಲಿ "ಅರಮಯತ್" ಸಂತೋಷಪಡಿಸಿದನೋ "ಸಃ" ಆ ಶ್ರೀಕೃಷ್ಣದೇವನು "ನಃ" ನಮ್ಮ ವಿಷಯದಲ್ಲಿ "ಪ್ರೀಯತಾಂ" ಸಂತುಷ್ಟನಾಗಲಿ.

## ಗೋವಿಂದನ ಪಟ್ಟಾಭಿಷೇಕ

(೨೫) ವಿಶೇಷಾರ್ಥ :- ಅಥ ಗೋವಿಂದಾಖ್ಯಃ ಗೋವರ್ಧನಪರ್ವತವನ್ನು ಎತ್ತಿ ಸರ್ವರನ್ನು ರಕ್ಷಿಸಿದ ಮೇಲೆ ಗೋವಿಂದ ಎಂಬ ಬಿರುದಿನಿಂದ ಯುಕ್ತನಾದನು.

ಕೃಷ್ಣಃ ಗೋವರ್ಧನೋದ್ಧಾರೇಣ ಸರ್ವರಕ್ಷಣಾನಂತರಂ ಸ್ವರಕ್ಷಿತಂ ವ್ರಜಂ ದೃಷ್ಟ್ವಾ, ಸ್ವಸ್ಯ ನಾರಾಯಣಾವತಾರತ್ವಂ ನಿಶ್ಚಿತ್ಯ ಗತಕೋಪೇನ ಸ್ವಕೃತಾಪರಾಧಶಾಂತ್ಯೈ ಸುರದ್ರುಮಕಾಮಧೇನ್ವಾದಿಭಿಃ ಸಹ ಸ್ವಶರಣಂ ಪ್ರಾಪ್ತೇನೇಂದ್ರೇಣ ಕ್ಷೀರಾದಿಭಿರಭಿಷಿಕ್ತಃ ತೇನ ಕೃತಂ "ಗಾಃ ಪಶೂನ್ ವಿಂದತಿ ಪ್ರಾಪ್ನೋತಿ ಇತಿ ವಾ, ಗಾಃ ವೇದವೇದಾನುಸಾರಿವಾಚಃ ಪ್ರತಿಪಾದ್ಯತಯಾ ವಿಂದತಿ ಇತಿ ವೇತ್ಯಾದ್ಯನ್ವರ್ಥೋಪೇತಂ ಗೋವಿಂದ ಇತಿ ನಾಮ ಚ ಪ್ರಾಪ್ಯ.

ಶ್ರೀಕೃಷ್ಣದೇವನು ಗೋವರ್ಧನಪರ್ವತವನ್ನು ಎತ್ತಿ ಗೋವುಗಳನ್ನೂ ಗೊಲ್ಲರನ್ನೂ ಗೊಲ್ಲಸ್ತ್ರೀಯರನ್ನೂ ಅವರ ಸಕಲ ವಸ್ತುಗಳನ್ನೂ ರಕ್ಷಿಸಿದನು. ಇದನ್ನು ನೋಡಿದ ದೇವೇಂದ್ರನು, ಶ್ರೀಕೃಷ್ಣದೇವನು ನಾರಾಯಣನ

ಅವತಾರ ಎಂದು ನಂಬಿದನು. ಶ್ರೀಕೃಷ್ಣದೇವನ ಭಕ್ತರೆಲ್ಲರನ್ನೂ ಗೋವುಗಳನ್ನೂ ಸಂಹರಿಸಬೇಕೆಂದು ಮಳೆಯನ್ನು ಸುರಿಸಿದ್ದು ಮಹಾಪರಾಧ ಎಂದು ತಿಳಿದನು. ಪಾರಿಜಾತವೃಕ್ಷ ಕಾಮಧೇನು ಮುಂತಾದ ಪರಿವಾರಗಳಿಂದ ಸಹಿತನಾಗಿ ವೃಂದಾವನಕ್ಕೆ ಬಂದನು. ತಾನು ಮಾಡಿದ ಅಪರಾಧವನ್ನು ಕಳೆದುಕೊಳ್ಳುವುದಕ್ಕಾಗಿ ಏಕಾಂತದಲ್ಲಿ ಶ್ರೀಕೃಷ್ಣದೇವನನ್ನು ಸಾಷ್ಟಾಂಗ ನಮಸ್ಕರಿಸಿ ಸ್ತುತಿಸಿದನು. "ಮಹಾಪ್ರಭೋ, ನೀನು ಜ್ಞಾನ ಮುಂತಾದ ಅನಂತಗುಣಗಳಿಂದ ಪೂರ್ಣನಾಗಿರುವಿ. ಆದ್ದರಿಂದ ನಿನ್ನಲ್ಲಿ ಅಜ್ಞಾನ ಮುಂತಾದ ದೋಷಗಳ ಮೂಲಕವಾದ ಸಂಸಾರವಿಲ್ಲ. ನೀನೇ ಸರ್ವರಿಗೂ ತಂದೆಯೂ ಗುರುವೂ ಅಧಿಪತಿಯೂ ಶಿಕ್ಷಕನೂ ಆಗಿರುವಿ. ನೀನು ನಿನ್ನ ಇಚ್ಛೆಯಿಂದ ನಾನಾ ವಿಧವಾದ ರೂಪಗಳನ್ನು ಸ್ವೀಕರಿಸುವಿ. ನಾನೇ ಜಗದೀಶನೆಂದು ಅಹಂಕಾರವನ್ನು ಪಡೆದವರ ಗರ್ವವನ್ನು ಅಡಗಿಸುವಿ. ನನ್ನ ಪೂಜೆಯನ್ನು ನನ್ನ ಅನುಗ್ರಹಕ್ಕಾಗಿ ನೀನು ನಿಲ್ಲಿಸಿದಿ. ನಾನೇ ಜಗತ್ತಿಗೆ ಅಧಿಪತಿಯೆಂಬ ಅಹಂಕಾರದಿಂದ ನಿನ್ನನ್ನೂ ನಿನ್ನ ಅಧೀನರಾದ ಗೊಲ್ಲರೇ ಮೊದಲಾದವರನ್ನೂ ಸಂಹರಿಸಬೇಕೆಂದು ತೀರ್ಮಾನ ಮಾಡಿದೆನು. ನನ್ನ ಗರ್ವವನ್ನು ಪರಿಹರಿಸಿ ನಾನು ಸರಿಯಾದ ಮಾರ್ಗದಲ್ಲಿರುವಂತೆ ಮಾಡಿದ ನನ್ನನ್ನು ಉದ್ಧರಿಸು" ಎಂದು ಪ್ರಾರ್ಥಿಸಿದನು.

"ದೇವೇಂದ್ರ, ನಿನ್ನನ್ನು ಅನುಗ್ರಹಿಸುವುದಕ್ಕಾಗಿ ನಿನ್ನ ಯಜ್ಞವನ್ನು ನಿಲ್ಲಿಸಿದೆನು. ಸಂಪತ್ತಿನ ಮದದಿಂದ ಯುಕ್ತನಾಗಿರುವವನು ಶಿಕ್ಷಕನಾಗಿರುವ ನನ್ನನ್ನು ಮರೆತು ಬಿಡುವನು. ಅವನ ಸಂಪತ್ತನ್ನು ನಾನು ಮೊದಲು ಅಪಹರಿಸುವೆನು. ಇಂದ್ರ! ನೀನು ಹೊರಡು, ನನ್ನ ಆಜ್ಞೆಯಂತೆ ನಡೆದುಕೊಂಡಿರು. ಅಹಂಕಾರಿಯಾಗಬೇಡ" ಇದು ಶ್ರೀಕೃಷ್ಣದೇವನ ಆಜ್ಞೆ.

ಆಗ ಕಾಮಧೇನುವು ಮುಂದೆ ಬಂದಳು. " ಮಹಾಸ್ವಾಮಿ, ನೀನು ಭೂಲೋಕದಲ್ಲಿ ಅವತರಿಸಿದಿ. ನನ್ನ ವಂಶದಲ್ಲಿ ಹುಟ್ಟಿರುವ ಗೋವುಗಳಿಗೆ ಬಂದಿರುವ ನಾನಾ ವಿಧವಾದ ಆಪತ್ತುಗಳಿಂದ ಅವುಗಳನ್ನು ರಕ್ಷಿಸಿದಿ. ಆದ್ದರಿಂದ ನಾವು ಅನಾಥರಲ್ಲ. ನಮಗೂ ಒಬ್ಬ ನಾಥನು ಇದ್ದಾನೆ ಎಂದು ತಿಳಿಸಿದಿ. ನಮ್ಮ ನಾಥನಾದ ನಿನ್ನನ್ನು ನನ್ನ ಹಾಲುಗಳಿಂದ ಅಭಿಷೇಕ ಮಾಡುತ್ತೇನೆ" ಎಂದಳು. ಕಾಮಧೇನು ತನ್ನ ಹಾಲುಗಳಿಂದ ಶ್ರೀಕೃಷ್ಣದೇವನನ್ನು ಅಭಿಷೇಕ ಮಾಡಿದಳು. ದೇವೇಂದ್ರನು ಆಕಾಶಗಂಗೆಯ ಜಲವನ್ನು ಐರಾವತ ಆನೆಯ ಸೊಂಡಿಲಿನಲ್ಲಿ ಕೊಟ್ಟನು. ದೇವಮಾತೆಯಾದ ಅದಿತಿ ಮುಂತಾದ ಮಾತೆಯರೂ ಕಶ್ಯಪ ಮುಂತಾದ ಋಷಿಗಳೂ ಶ್ರೀಕೃಷ್ಣದೇವನಿಗೆ ಅಭಿಷೇಕವನ್ನು ಮಾಡುವಂತೆ ಪ್ರೇರಿಸಿದರು. ಐರಾವತ ಆನೆಯು ಅಭಿಷೇಕವನ್ನು ಮಾಡಿತು.

ಅಭಿಷೇಕವು ಮುಗಿದ ಕೂಡಲೇ ದೇವೇಂದ್ರನು ಶ್ರೀಕೃಷ್ಣದೇವನಿಗೆ "ಗೋವಿಂದ" ಎಂದು ಹೆಸರನ್ನಿಟ್ಟನು. ಗಾಃ ವಿದಂತಿ ಇತಿ ಗೋವಿಂದಃ" ಅಂದರೆ ಗೋವುಗಳನ್ನು ಪಡೆಯುವವನು ಅಂದರೆ ಗೋವುಗಳಿಗೆ ಬರುವ ಎಲ್ಲಾ ಆಪತ್ತುಗಳನ್ನೂ ಪರಿಹರಿಸಿ ಆ ಗೋವುಗಳನ್ನು ಯಾವಾಗಲೂ ಸಂರಕ್ಷಿಸುತ್ತಿರುವವನು ಅಥವಾ ವೇದಗಳಿಂದಲೂ ವೇದಾನುಸಾರಿಯಾಗಿರುವ ಪುರಾಣ ಮುಂತಾದ ಪ್ರಮಾಣಗಳಿಂದಲೂ ಹೊಗಳಲ್ಪಡುತ್ತಿರುವವನು ಮುಂತಾದ ರೀತಿಯಿಂದ ಗೋವಿಂದ ಎಂಬ ಪದವು ಶ್ರೀಕೃಷ್ಣದೇವನಿಗೆ ಅನ್ವರ್ಥಕವಾಗಿದೆ. ದೇವೇಂದ್ರನು ಶ್ರೀಕೃಷ್ಣದೇವನಿಗೆ ಅಭಿಷೇಕವನ್ನು ಮಾಡಿಸಿದ ಕಾಲದಲ್ಲಿ ತುಂಬುರು ನಾರದ ಮುಂತಾದವರು ಗಾಯನ ಮಾಡಿದರು. ಅಪ್ಸರಃ ಸ್ತ್ರೀಯರು ನರ್ತನ ಮಾಡಿದರು. ಪಾರಿಜಾತ ಮುಂತಾದ ದೇವವೃಕ್ಷಗಳು ಪುಷ್ಪಗಳ ಮಳೆಗಳನ್ನು ಸುರಿಸಿದವು. ಗೋವುಗಳೆಲ್ಲವೂ ತಮ್ಮ ಹಾಲುಗಳಿಂದ ಅಭಿಷೇಕವನು ಮಾಡಿದವು. ಸ್ವಭಾವದಿಂದ ಕ್ರೂರವಾದ ಹುಲಿ ಮುಂತಾದ

ಪ್ರಾಣಿಗಳು ವೈರವನ್ನು ಮರೆತವು. ಶ್ರೀಕೃಷ್ಣದೇವನಿಗೆ "ಗೋವಿಂದ" ಎಂಬ ಬಿರುದನ್ನು ಕೊಟ್ಟು ದೇವೇಂದ್ರನು ಹಿಂದಿರುಗಿದನು. ವಸ್ತುಸ್ಥಿತಿಯನ್ನು ವಿಮರ್ಶಿಸಿದರೆ ದೇವೇಂದ್ರನು ಶ್ರೀಕೃಷ್ಣದೇವನಿಗೆ "ಗೋವಿಂದ" ಎಂಬ ಬಿರುದನ್ನು ಕೊಡಲಿಲ್ಲ. ಅನಾದಿಕಾಲದಿಂದಲೂ "ಗೋವಿಂದ" ಎಂಬ ಹೆಸರೂ ಇತರ ಅನಂತನಾಮಗಳೂ ಶ್ರೀಕೃಷ್ಣದೇವನಿಗೆ ಇದ್ದೇ ಇವೆ. ಅವುಗಳಲ್ಲಿ ಯಾವ ಹೆಸರನ್ನು ಭಕ್ತಿಯಿಂದ ಉಚ್ಚರಿಸಿದರೂ ಸಕಲ ಪಾಪಗಳ ಪರಿಹಾರವಾಗುತ್ತದೆ. ದೇವೇಂದ್ರನು ಮಾಡಿರುವ ಅತಿ ಪ್ರಬಲವಾದ ಪಾಪದ ಪರಿಹಾರಕ್ಕಾಗಿ ಶ್ರೀಕೃಷ್ಣನಿಗೆ ಹಿಂದೆಯೇ ಇದ್ದ "ಗೋವಿಂದ" ಎಂಬ ಹೆಸರನ್ನು ಭಕ್ತಿಯಿಂದ ಉಚ್ಚರಿಸಿದನೆಂದು ಹೇಳುವುದೇ ಅತ್ಯಂತ ಯುಕ್ತವಾಗಿದೆ.

## ಶ್ರೀಕೃಷ್ಣದೇವನು ವರುಣನಿಂದ ಪೂಜಿಸಲ್ಪಟ್ಟಿದ್ದು

(೨೬) ವಿಶೇಷಾರ್ಥ :- ಜಲಪತಿಹೃತಂ - ತಾತಂ ಆನೀಯ ವರುಣನಿಂದ ಅಪಹರಿಸಲ್ಪಟ್ಟ ನಂದನನ್ನು ತಂದನು.

ಕದಾಚಿತ್ ಏಕಾದಶ್ಯಾಂ ಉಪೋಷ್ಯ ದ್ವಾದಶ್ಯಾಂ ಸ್ನಾನಾರ್ಥಂ ಆಸುರೀಂ ವೇಲಾಂ ಅವಿಜ್ಞಾಯ ಯಮುನಾಜಲೇ ನಿಶಿ ಪ್ರವಿಷ್ಟಂ ಜಲಪಾಲಕೇನ ವರುಣ ಭೃತ್ಯೇನ ವರುಣಾಂತಿಕಂ ನೀತಂ ಸ್ವಪಿತರಂ ಜಲೇಪಶ್ಯದ್ಭಿಃ ಗೋಪಾಲಕೈಃ ಶ್ರುತ್ವಾ ವರುಣಸಮೀಪಂ ಪ್ರಾಪ್ಯ ತೇನ ಕ್ಷಮಾಪಿತಃ ತತ್ಕೃತಪೂಜಾಂ ಸ್ವೀಕೃತ್ಯ, ನಂದಗೋಪಮಾದಾಯ, ಗೋಕುಲಂ ಪ್ರಾಪ್ಯ.

ಒಮ್ಮೆ ಸಾಧನದ್ವಾದಶಿಯು ಬಂತು. ನಂದನು ಏಕಾದಶೀದಿನ ಉಪವಾಸವಾಗಿದ್ದನು. ಸಾಧನದ್ವಾದಶೀದಿನ ಸೂರ್ಯೋದಯಕಾಲಕ್ಕೆ ಸರಿಯಾಗಿ ಪಾರಣೆಯನ್ನು ಮಾಡಬೇಕು. ಅದಕ್ಕಿಂತ ಹಿಂದಾಗಲೀ ಮುಂದಾಗಲೀ ಮಾಡಕೂಡದು. ಆದ್ದರಿಂದ ಏಕಾದಶೀರಾತ್ರಿಯಲ್ಲಿ ಬಹಳ ಬೇಗನೆ ಏಳಬೇಕಾಯಿತು. ಆ ಕಾಲದಲ್ಲಿ ಗಡಿಯಾರಗಳಿಲ್ಲ. ನಕ್ಷತ್ರಗಳನ್ನು ನೋಡಿಯೇ ಕಾಲವನ್ನು ತಿಳಿಯಬೇಕಾಗಿತ್ತು. ಆ ದಿನ ರಾತ್ರಿಯಲ್ಲಿ ಮೇಘಗಳು ಆಕಾಶವನ್ನು ಮುಚ್ಚಿಕೊಂಡಿದ್ದವು. ಆದ್ದರಿಂದ ನಕ್ಷತ್ರಗಳೂ ತಿಳಿಯಲಿಲ್ಲ. ಬೇಗನೆ ಏಳಬೇಕೆಂಬ ಆಸೆಯಿಂದ ಸರಿಯಾದ ಕಾಲವನ್ನು ತಿಳಿಯದೆ ಅರ್ಧರಾತ್ರಿಕಾಲದಲ್ಲಿ ನಂದನು ಎದ್ದನು. ಎಲ್ಲಾ ಗೊಲ್ಲರನ್ನೂಎಬ್ಬಿಸಿದನು ಅವರೊಡನೆ ಸ್ನಾನಕ್ಕಾಗಿ ಯಮುನಾನದಿಗೆ ಹೋದನು. ನೀರಿನಲ್ಲಿ ಎಲ್ಲರೂ ಮುಳುಗಿದರು.

ಅರ್ಧರಾತ್ರಕಾಲವು ರಾಕ್ಷಸಸಂಚಾರಕಾಲವೆನಿಸುತ್ತದೆ. ವರುಣನ ದೂತರಾದ ಕೆಲವು ರಾಕ್ಷಸರು ವರುಣನ ಅಧೀನವಾದ ನೀರಿನಲ್ಲಿ ಎಲ್ಲೆಡೆಗಳಲ್ಲಿಯೂ ಅರ್ಧರಾತ್ರಿಕಾಲದಲ್ಲಿ ಸಂಚರಿಸುತ್ತಿರುತ್ತಾರೆ. ಅವರಲ್ಲಿ ಒಬ್ಬ ರಾಕ್ಷಸನು ನಂದನನ್ನು ನೋಡಿದನು. ತಮ್ಮ ಸಂಚಾರಕಾಲದಲ್ಲಿ ಯಾರನ್ನು ಬೇಕಾದರೂ ಹಿಡಿಯುವ ಶಕ್ತಿಯು ತಮಗಿದೆ. ಆ ಶಕ್ತಿಯಿಂದ ನಂದನನ್ನು ಹಿಡಿದು. ವರುಣಲೋಕಕ್ಕೆ ಕರೆದುಕೊಂಡು ಹೋದನು. ತನ್ನ ಯಜಮಾನನಾದ ವರುಣನ ವಂಶದಲ್ಲಿ ಒಪ್ಪಿಸಿದನು.

ಸ್ನಾನಾರ್ಥವಾಗಿ ಮುಳುಗಿದ ಎಲ್ಲಾ ಗೋಪಾಲಕರೂ ನೀರಿನಿಂದ ಮೇಲೆ ಬಂದರು. ನಂದನು ಕಾಣಿಸಲಿಲ್ಲ.

ಈ ವಿಷಯವನ್ನು ಶ್ರೀಕೃಷ್ಣದೇವನಿಗೆ ಕೃಷ್ಣ, ರಾಮ, ಎಂದು ಕೂಗುತ್ತಾ ತಿಳಿಸಿದರು. ಸರ್ವಜ್ಞನಾದ ಶ್ರೀಕೃಷ್ಣದೇವನು ವರುಣನ ಭೃತ್ಯನು ಮಾಡಿರುವ ಕೆಲಸವನ್ನು ತಿಳಿದು ನೀರಿನಲ್ಲಿ ಇಳಿದು. ವರುಣಲೋಕಕ್ಕೆ ಹೋದನು. ತನ್ನ ಪ್ರಭುವಾದ ಶ್ರೀಕೃಷ್ಣದೇವನು ತನ್ನ ಲೋಕಕ್ಕೆ ಬಂದಿರುವ ವಿಷಯವನುನ ವರುಣನು ತಿಳಿದನು. ಅತ್ಯಂತ ಭಕ್ತಿಯಿಂದ ಶ್ರೀಕೃಷ್ಣದೇವನನ್ನು ಸ್ವಾಗತಿಸಿ ತನ್ನ ಆಸನದಲ್ಲಿ ಕುಳ್ಳಿರಿಸಿ ಪಾದಗಳನ್ನು ತೊಳೆದನು. ಆ ಜಲದಿಂದ ತನ್ನ ದೇಹವನ್ನೂ ಎಲ್ಲಾ ವಸ್ತುಗಳನ್ನೂ ಪ್ರೋಕ್ಷಿಸಿ ಷೋಡಶೋಪಚಾರಪೂಜೆಯನ್ನು ಮಾಡಿದನು. ಬಂದ ಕಾರಣವನ್ನು ಕುರಿತು ಪ್ರಶ್ನಿಸಿ ವಿಷಯವನ್ನು ತಿಳಿದನು. ತನ್ನ ಸೇವಕನು ಮಾಡಿದ ಅಪರಾಧಕ್ಕಾಗಿ ಕ್ಷಮಾಪಣೆಯನ್ನು ಕೇಳಿದನು. ತನ್ನ ಲೋಕದಲ್ಲಿ ಕಾರಾಗೃಹದಲ್ಲಿ ಇಟ್ಟಿದ್ದ ನಂದನನ್ನು ಕಾರಾಗೃಹದಿಂದ ಬಿಡಿಸಿದನು. ವಿಶೇಷ ಮರ್ಯಾದೆಗಳೊಡನೆ ತಂದು ಶ್ರೀಕೃಷ್ಣದೇವನಿಗೆ ಒಪ್ಪಿಸಿದನು.

ವರುಣನ ಭೃತ್ಯರಾದ ರಾಕ್ಕಸರು ನಂದನನ್ನು ವರುಣಲೋಕಕ್ಕೆ ಕರೆದುಕೊಂಡು ಹೋದುದಾಗಿ ನಾವು ಹೇಳಿದೆವು. ನಿಜವಾದ ವಿಷಯವನ್ನು ಈಗ ಹೇಳುವೆವು. ವರುಣನ ಸೇವಕನು ನಂದನನ್ನು ವರುಣಲೋಕಕ್ಕೆ ಕರೆದುಕೊಂಡು ಹೋಗಲಿಲ್ಲ. ಶ್ರೀಕೃಷ್ಣದೇವನ ಸನ್ನಿಧಾನದಲ್ಲಿ ಅವನ ತಂದೆಯನ್ನು ಮುಟ್ಟುವ ಯೋಗ್ಯತೆಯು ಯಾವ ರಾಕ್ಷಸನಿಗಿದೆ? ವರುಣನೇ ಒಬ್ಬ ರಾಕ್ಷಸನಂತೆ ರೂಪವನ್ನು ಧರಿಸಿ ಸಂಚರಿಸುತ್ತಾ. ನಂದನನ್ನು ನೋಡಿದನು. ಶ್ರೀಕೃಷ್ಣದೇವನು ತನ್ನ ಪ್ರಭುವೆಂದು ತಿಳಿದು ಅವನಲ್ಲಿ ಅತ್ಯಂತ ಭಕ್ತಿಯನ್ನು ವರುಣನ್ನು ಮಾಡುತ್ತಿದ್ದನು. ಆ ಶ್ರೀಕೃಷ್ಣದೇವನು ತನ್ನ ಮಗನೆಂದು ನಂದನು ಹೇಳುತ್ತಿರುವನೆಂಬ ವಿಷಯವು ವರುಣನಿಗೆ ಜ್ಞಾಪಕಕ್ಕೆ ಬಂತು. ತಂದೆಯೇ ಇಲ್ಲದಿರುವ ತನ್ನ ಪ್ರಭುವಾದ ಶ್ರೀಕೃಷ್ಣದೇವನನ್ನು ತನ್ನ ಮಗನೆಂದು ಹೇಳುತ್ತಿರುವ ನಂದನು ತುಂಬಾ ಅಪರಾಧಿ ಎಂದು ತಿಳಿದನು. ಅದಕ್ಕಾಗಿ ಅವನನ್ನು ಶಿಕ್ಷಿಸಬೇಕೆಂದು ತೀರ್ಮಾನಿಸಿದನು. ಶೆಳೆದುಕೊಂಡು ಹೋಗಿ ಜೈಲಿನಲ್ಲಿಟ್ಟನು. ವರುಣನಿಗೆ ತನ್ನಲ್ಲಿರುವ ದೃಢಭಕ್ತಿಯನ್ನು ಶ್ರೀಕೃಷ್ಣದೇವನು ನೋಡಿದನು. ನಂದನನ್ನು ಬಿಡಿಸಿಕೊಂಡು ಬರುವ ನಿಮಿತ್ತದಿಂದ ವರುಣಲೋಕಕ್ಕೆ ಹೋದನು. ವರುಣನಿಂದ ಮಾಡಲ್ಪಟ್ಟ ಪೂಜೆಯನ್ನು ತಂದೆಯೊಡನೆ ಸ್ವೀಕರಿಸಿದನು. ತಂದೆಯನ್ನು ಕರೆದುಕೊಂಡು ಹಿಂದಿರುಗಿದನು. ನಂದನು ನಡೆದ ವಿಚಾರಗಳೆಲ್ಲವನ್ನೂ ಎಲ್ಲಾ ಗೊಲ್ಲರ ಮಧ್ಯದಲ್ಲಿ ತಿಳಿಸಿದನು. ವರುಣನ ಅಪಾರ ಸಂಪತ್ತನು ಹೇಳಿದನು. ಅಂತಹ ವರುಣನು ಶ್ರೀಕೃಷ್ಣದೇವನಲ್ಲಿ ತೋರಿಸಿರುವ ಭಕ್ತಿಯನ್ನು ತಿಳಿಸಿದನು. ಇದನ್ನೆಲ್ಲವನ್ನೂ ಕೇಳಿದ ಗೊಲ್ಲರೆಲ್ಲರೂ ವರುಣನಿಂದ ಪೂಜಿಸಲ್ಪಟ್ಟ ಶ್ರೀಕೃಷ್ಣದೇವನು ದೇವತೆಗಳಲ್ಲಿ ಉತ್ತಮನೆಂದು ತೀರ್ಮಾನಿಸಿದರು.

## ಗೊಲ್ಲರಿಗೆ ವೈಕುಂಠಲೋಕವನ್ನು ತೋರಿಸಿದ್ದು

(೨೭) ವಿಶೇಷಾರ್ಥ :- ಸ್ವಕೀಯಂ ಲೋಕಂ ನಂದಾದೀನಾಂ ಪ್ರದರ್ಶ್ಯ - ನಂದನೇ ಮೊದಲಾದವರಿಗೆ ತನ್ನ ಲೋಕವಾದ ವೈಕುಂಠವನ್ನು ತೋರಿಸಿದನು.

ಕದಾಚಿನ್ನಂದಾದೀನಾಮನುಗ್ರಹಾರ್ಥಂ ಸ್ವಮಹಿಮಖ್ಯಾಪನಾಯ ಬ್ರಹ್ಮಹ್ರದೇ ಸ್ನಾತಾನಾಂ ತೇಷಾಂ ದಿವ್ಯದೃಷ್ಟಿಂ ದತ್ವಾ, ಸ್ವಿಕೀಯಮಪ್ರಾಕೃತಂ ಮುಕ್ತಪ್ರಾಪ್ಯಂ ವೈಕುಂಠಲೋಕಂ ತತ್ರ ಚ ಭಂಧೋಽಭಿಮಾನಿಭಿರ್ದೇವೈಃ ಸ್ತೂಯಮಾನಂ ಸ್ವಸ್ವರೂಪಂ ಚ ದರ್ಶಯಿತ್ವಾ.

ಶ್ರೀಕೃಷ್ಣದೇವನ ನಿಜಸ್ವರೂಪವನ್ನು ತಿಳಿಯಬೇಕೆಂದು ಗೊಲ್ಲರೆಲ್ಲರೂ ಆಶಿಸಿದರು. ಶ್ರೀಕೃಷ್ಣದೇವನು ಅವರ ಆಸೆಯನ್ನು ಪೂರ್ತಿಮಾಡಬೇಕೆಂದೂ ತನ್ನ ಮಹಿಮೆಯನ್ನು ಅವರೆಲ್ಲರಿಗೂ ತಿಳಿಸಬೇಕೆಂದೂ ಸಂಕಲ್ಪಿಸಿದನು. ಅವರೆಲ್ಲರನ್ನೂ ಯಮುನಾ ನದಿಯಲ್ಲಿರುವ "ಬ್ರಹ್ಮಹ್ರದ" ಎಂಬ ಮಡುವಿಗೆ ಕರೆದುಕೊಂಡು ಬಂದನು. ಎಲ್ಲರನ್ನೂ ನೀರಿನಲ್ಲಿ ಮುಳುಗುವಂತೆ ಆಜ್ಞಾಪಿಸಿದನು. ಅವರೆಲ್ಲರೂ ನೀರಿನಲ್ಲಿ ಮುಳುಗಿದರು. ಅವರೆಲ್ಲರಿಗೂ ದಿವ್ಯದೃಷ್ಟಿಯನ್ನು ಕೊಟ್ಟನು. ಅವರೆಲ್ಲರಿಗೂ ನಿಜಸ್ವರೂಪವನ್ನು ತೋರಿಸಿದನು.

ಈ ಸಂಸಾರದಲ್ಲಿ ಬಿದ್ದಿರುವ ಒಬ್ಬೊಬ್ಬರೂ ಕರ್ಮಗಳಿಂದ ಬಿಗಿಯಲ್ಪಟ್ಟು ಉತ್ತಮವಾದ ದೇವತಾದಿ ಶರೀರಗಳನ್ನೂ ನೀಚವಾದ ಮೃಗ ಪಕ್ಷಿ ಮುಂತಾದ ಶರೀರಗಳನ್ನೂ ಪಡೆಯುತ್ತಿರುವರು. ತಮ್ಮ ಮತ್ತು ಶ್ರೀಹರಿಯ ಸ್ವರೂಪಗಳನ್ನು ತಿಳಿಯಲು ಅಶಕ್ತರಾಗಿರುವರು. ಅವರಿಗೆ ಶ್ರೀಹರಿಯ ಕರುಣೆಯಿಂದಲೇ ತಮ್ಮ ಮತ್ತು ಶ್ರೀಹರಿಯ ನಿಜಸ್ವರೂಪದ ಪರಿಜ್ಞಾನ ಏರ್ಪಡಬೇಕು. "ಇವರೆಲ್ಲರೂ ನನ್ನನ್ನು ಕಣ್ಣಾರೆ ನೋಡಲಿ. ನನ್ನಲ್ಲಿ ದೃಢವಾದ ಭಕ್ತಿಯನ್ನು ಮಾಡಲಿ" ಎಂದು ಶ್ರೀಕೃಷ್ಣದೇವನು ತೀರ್ಮಾನಿಸಿದನು. ಗೊಲ್ಲರೆಲ್ಲರಿಗೂ ತನ್ನ ನಿಜಸ್ವರೂಪವನ್ನು ತೋರಿಸಿದನು.

ಲಕ್ಷ್ಮೀದೇವಿಯರು ತಮ್ಮ ಹಸ್ತಕಮಲಗಳಿಂದ ವರ್ತುಲಾಕಾರವಾದ ಶ್ರೀಕೃಷ್ಣದೇವನ ಜಂಘಾಪ್ರದೇಶಗಳನ್ನು ಒತ್ತುತ್ತಿರುವರು. ರತ್ನದ ಕನ್ನಡಿಯಂತೆ ಮೊಣಕಾಲುಗಳು ಹೊಳೆಯುತ್ತಿವೆ. ಮೃದುವಾಗಿಯೂ ವರ್ತುಲಾಕಾರವುಳ್ಳದ್ದಾಗಿಯೂ ಇರುವ ತೊಡೆಗಳು ಬಾಳೆಗಿಡಗಳಂತಿವೆ. ಚಿಕ್ಕ ಆನೆಯ ಕುಂಭಸ್ಥಳಗಳಂತೆ ಶೋಭಿಸುತ್ತಿರುವ ಸೊಂಟದ ಹಿಂಭಾಗಗಳಿಂದ ಪ್ರಕಾಶಿಸುತ್ತಿರುವನು. ಉದಯಿಸುತ್ತಿರುವ ನೂರಾರು ಸೂರ್ಯರಿಗಿಂತ ಅಧಿಕವಾದ ಕಾಂತಿಯಿಂದ ಯುಕ್ತವಾಗಿರುವ ಸುಂದರವಾದ ಪಟ್ಟೆಮಡಿಯನ್ನು ಉಟ್ಟುಕೊಂಡಿರುವನು.

ವಿಚಿತ್ರವಾದ ರತ್ನಗಳಿಂದ ಶೋಭಿಸುತ್ತಿರುವ ಮತ್ತು ಸುವರ್ಣದಿಂದ ರಚಿತವಾದ ಉಡುದಾರವು ಸೊಂಟದಲ್ಲಿ ಹೊಳೆಯುತ್ತಿದೆ. ಅನಂತಕೋಟಿ ಬ್ರಹ್ಮಾಂಡಗಳನ್ನು ಧರಿಸಿರುವ ಹೊಟ್ಟೆಯು ಚಿಕ್ಕದಾಗಿಯೂ ಮೂರು ಅಡ್ಡರೇಖೆ (ಮಡಿಕೆ) ಗಳಿಂದ ಯುಕ್ತವಾಗಿಯೂ ಶೋಭಿಸುತ್ತಿದೆ. ಹೊಕ್ಕಳು ಆಳವಾದ ಸರೋವರದಂತೆಯೂ ಅದರಲ್ಲಿ ಬ್ರಹ್ಮಾಂಡವೆಂಬ ಕಮಲವೂ ಆ ಕಮಲದಲ್ಲಿ ಬ್ರಹ್ಮದೇವರು ಭ್ರಮರದಂತೆಯೂ ಶೋಭಿಸುತ್ತಿರುವರು. ಹೊಟ್ಟೆಯಲ್ಲಿ ಅಡ್ಡವಾಗಿಯೂ ಅತ್ಯಂತ ಮೃದುವಾಗಿಯೂ ಇರುವ ಮೂರು ರೇಖೆಗಳ ಕಾಂತಿಯು ನಡುಕಟ್ಟಿನ ಮೇಲೆ ವ್ಯಾಪಿಸಿತು.

ಹೊಟ್ಟೆಯು ತುಂಬಾ ಕೃಶವಾಗಿದೆ. ಎದೆಯು ತುಂಬಾ ಅಗಲವಾಗಿದೆ. ಅದರಲ್ಲಿ ಗಂಧವನ್ನು ಲೇಪನ ಮಾಡಿಕೊಂಡಿರುವನು. ಬಲಭಾಗದಲ್ಲಿ ಲಕ್ಷ್ಮೀದೇವಿಯರೂ ಎಡಭಾಗದಲ್ಲಿ ಧರಾದೇವಿಯರೂ ಆಲಿಂಗಿಸಿಕೊಂಡಿರುವ ಎಡತೊಡೆಯಲ್ಲಿ ರಮಾದೇವಿಯರು ತಬ್ಬಿಕೊಂಡು ಕುಳುತಿರುವರು. ಲಕ್ಷ್ಮೀದೇವಿಯರ ಎದೆಯಲ್ಲಿರುವ ಕುಂಕುಮದ ಗುರುತು ಶ್ರೀಹರಿಯ ವಕ್ಷಃಸ್ಥಳದಲ್ಲಿ ಶೋಭಿಸುತ್ತಿದೆ. ಎದೆಯ ಎಡಭಾಗದಲ್ಲಿ ಶ್ರೀವತ್ಸ ಎಂಬ ಚಿಹ್ನವು ಕಾಣಿಸುತ್ತಿದೆ. ಕೌಸ್ತುಭಮಣಿಯು ಚಂದ್ರನಂತೆ ಪ್ರಕಾಶಿಸುತ್ತಿದೆ.

ಮೂರು ಅಡ್ಡವಾದ ರೇಖೆಗಳಿಂದಲೂ ಶಂಖದಂತೆ ಗಂಭೀರವಾದ ಧ್ವನಿಯಿಂದಲೂ ವನಮಾಲೆಯಿಂದಲೂ ಪದಕಗಳಿಂದಲೂ ಶೋಭಿಸುತ್ತಿದೆ. ರತ್ನದ ತೊಡೆಗಳಿಂದಲೂ ಬಳೆಗಳಿಂದಲೂ

ಉಂಗುರಗಳಿಂದಲೂ ಶಂಖ ಚಕ್ರ ಗದಾ ಪದ್ಮಗಳಿಂದಲೂ ಹಸ್ತಕಮಲಗಳು ಅಲಂಕೃತವಾಗಿವೆ. ಲೆಕ್ಕಿಸಲು ಅವಶ್ಯವಾದ ಸೌಂದರ್ಯದಿಂದ ಪೂರ್ಣವಾಗಿಯೂ ಅನುಗ್ರಹವನ್ನು ಬೀರುತ್ತಲೂ ಇರುವ ಮುಖವು ಪದ್ಮದಂತಿದೆ.

ತುಟಿಯು ಅತ್ಯಂತ ಪಕ್ವವೂ ಮೃದುವೂ ರಸಭರಿತವೂ ಆಗಿರುವ ತೊಂಡೆಹಣ್ಣಿನಂತಿದೆ. ಹಲ್ಲಿನ ಪಂಕ್ತಿಯು ಮಲ್ಲಿಗೆ ಮೊಗ್ಗುಗಳ ಪಂಕ್ತಿಯಂತಿದೆ. ಮುಗುಳ್ನಗೆಯು ಬೆಳದಿಂಗಳಿನ ಸೌಂದರ್ಯವನ್ನು ಜಯಿಸಿದ ಕಪೋಲಗಳು ಇಂದ್ರನೀಲಮಣಿಯ ಗೋಡೆಗಳಂತೆ ಶೋಭಿಸುತ್ತಿವೆ. ಕರ್ಣಕುಂಡಲಗಳು ಎಳೆಯ ಸೂರ್ಯನಂತೆ ಪ್ರಕಾಶಿಸುತ್ತಿವೆ. ಮೂಗು ಸಂಪಿಗೆ ಪುಷ್ಪದ ಶೋಭೆಯನ್ನು ಧಿಕ್ಕರಿಸುತ್ತಿದೆ. ಕಣ್ಣುಗಳು ಕಮಲದಂತೆಯೂ ಕಣ್ಣಿನ ಮಧ್ಯದಲ್ಲಿರುವ ಕಪ್ಪುಭಾಗವು ಚಲಿಸುತ್ತಿರುವ ಭ್ರಮರದಂತೆಯೂ ಕಾಣಿಸುತ್ತಿದೆ. ಹುಬ್ಬುಗಳು ಇಂದ್ರನೀಲಮಣಿಯಿಂದಲೂ ನೀಲಕಮಲದಿಂದಲೂ ನಿರ್ಮಿತವಾದ ಶಾರ್ಙ್ಗಧನುಸ್ಸಿನಂತೆ ಬಗ್ಗಿವೆ. ಬಲಭಾಗದಲ್ಲಿರುವ ಶ್ರೀದೇವಿಯರ ಮತ್ತು ಎಡಭಾಗದಲ್ಲಿರುವ ಭೂದೇವಿಯರ ಮುಖಕಮಲಗಳನ್ನು ಚಂಚಲವಾದ ಕಡೆಗಣ್ಣಿನ ನೋಟದಿಂದ ತಿರುಗಿಸಿ ತಿರುಗಿಸಿ ನೋಡುತ್ತಿರುವನು. ಆ ಕಡೆಗಣ್ಣಿನ ನೋಟಗಳು ಭ್ರಮರದಂತೆ ಚಂಚಲವಾಗಿವೆ.

ತಲೆಯಲ್ಲಿ ಸುಂದರವಾದ ಊರ್ಧ್ವಪುಂಡ್ರದಿಂದಲೂ ಅದರ ಮಧ್ಯದಲ್ಲಿ ರತ್ನತಿಲಕದಿಂದಲೂ ಶೋಭಿಸಿದನು. ತಲೆಯ ಕೂದಲಿನ ಮೇಲೆ ಕಿರೀಟವನ್ನು ಧರಿಸಿದನು. ಆ ಕಿರೀಟವು ಸೂರ್ಯನಂತೆ ಶೋಭಿಸಿತು. ಅಮೂಲ್ಯವಾದ ಮುತ್ತಿನ ಸರಗಳಿಂದಲೂ ಭುಜಕೀರ್ತಿಯಿಂದಲೂ ಪಾದಾಭರಣಗಳಿಂದಲೂ ಶೋಭಿಸಿದನು. ಅನಂತ ಮನ್ಮಥರ ಸೌಂದರ್ಯಗಳಿಗೆ ತವರುಮನೆಯಂತೆ ಪ್ರಕಾಶಿಸಿದನು. ಸುವರ್ಣಮಂಟಪದ ಮಧ್ಯದಲ್ಲಿ ನಿರ್ಮಲವಾದ ಕಮಲದಲ್ಲಿ ಕುಳಿತಿರುವನು.

ಸಕಲ ಲೋಕಗಳ ಉತ್ಪತ್ತಿಗೂ ಪಾಲನೆಗೂ ಸಂಹಾರಕ್ಕೂ ಮುಕ್ತಿಗೂ ಕಾರಣನೂ, ಸ್ವಚ್ಛವಾದ ಶೇಷದೇವನ ಹೆಡೆಗಳೆಂಬ ಕೊಡೆಯ ಕೆಳಗೆ ಕುಳಿತಿರುವವನೂ ಆದ ಶ್ರೀಕೃಷ್ಣದೇವನನ್ನು ಎಲ್ಲಾ ಗೊಲ್ಲರೂ ನೋಡಿದರು. ವೇದಾಭಿಮಾನಿಗಳಾದ ಬ್ರಹ್ಮಮುಂತಾದ ಎಲ್ಲಾ ದೇವತೆಗಳೂ, ಸಂತುಷ್ಟರಾದ ನಾರದ ಮುಂತಾದ ಮುನಿಗಳೂ ಶ್ರೀಕೃಷ್ಣದೇವನನ್ನು ಅತ್ಯಂತ ಭಕ್ತಿಯಿಂದ ಸ್ತುತಿಸುತ್ತಿರುವರು. ಶ್ರೀಕೃಷ್ಣದೇವನ ಈ ಲೋಕವೂ ರೂಪವೂ ಪ್ರಾಕೃತವಲ್ಲ. ಮುಕ್ತರಿಂದಲೇ ಹೊಂದುವುದಕ್ಕೆ ಯೋಗ್ಯವಾದುದು.

ಈ ಲೋಕವನ್ನೂ ರೂಪವನ್ನೂ ನೋಡುತ್ತಾ ಆನಂದಪರವಶರಾದರು. ಸ್ವಲ್ಪಕಾಲವಾದ ಕೂಡಲೇ ಆ ರೂಪವು ಅದೃಶ್ಯವಾಯಿತು. ಎಲ್ಲರೂ ಸ್ವಪ್ನದಲ್ಲಿ ನೋಡಿದಂತೆ ಆ ರೂಪವನ್ನು ನೋಡಿ ಶ್ರೀಕೃಷ್ಣದೇವನಲ್ಲಿ ಅತ್ಯಂತ ಭಕ್ತಿಯಿಂದಲೂ ಭಯದಿಂದಲೂ ಹಿಂದಿರುಗಿದರು.

(೨೮) ವಿಶೇಷಾರ್ಥ :- ಗಾನಕೃಷ್ಟಾರ್ತಚಿತ್ತಾಃ ಚಾರ್ವಂಗೀಃ ಸ್ತನಭರನಮಿತಾಃ ವ್ರಜಗತವನಿತಾಃ ನರ್ಮವಾಕ್ಯೈಃ ಪ್ರೀಣಯನ್ ಕಾಲಿಂದ್ಯಾಂ ಅಮಲಜ್ಯೋತ್ಸ್ನಯಾ ದೀಪಿತಾಯಾಂ ಅರಮಯತ್.

ವೇಣುಗಾನದಿಂದ ಶ್ರೀಕೃಷ್ಣದೇವನು ವೃಂದಾವನದಲ್ಲಿರುವ ಸ್ತ್ರೀಯರ ಮನಸ್ಸುಗಳೆಲ್ಲವನ್ನೂ ಆಕರ್ಷಿಸಿದನು. ಅವರ ಮನಸ್ಸುಗಳೆಲ್ಲವೂ ಮನ್ಮಥನಿಂದ ಪೀಡಿತವಾದವು. ಸುಂದರವಾದ ಸರ್ವಾವಯವಗಳಿಂದ

ಯುಕ್ತರಾಗಿಯೂ, ಸ್ತನಗಳ ಭಾರದಿಂದ ಬಗ್ಗಿದವರೂ ಆಗಿರುವ ವೃಂದಾವಲದಲ್ಲಿರುವ ಸ್ತ್ರೀಯರನ್ನು ಚಮತ್ಕಾರವಾದ ಮಾತುಗಳಿಂದ ಸಂತೋಷಪಡಿಸಿದನು. ನಿರ್ಮಲವಾದ ಬೆಳದಿಂಗಳಿನಿಂದ ಪ್ರಕಾಶಿಸುತ್ತಿರುವ ಯಮುನಾನದಿಯ ಸಮೀಪದಲ್ಲಿ ರಾತ್ರಿಕಾಲದಲ್ಲಿ ತೃಪ್ತಿಪಡಿಸಿದನು.

"ತಸ್ಯಾಂ ರಾತ್ರೌ ಪೂರ್ಣಚಂದ್ರಿಕಯಾ ಪ್ರಕಾಶಿತಾಯಾಂ ಯಮುನಾತೀರೇ ವಿರಾಜಮಾನಂ ಮನೋಹರಂ ಕುಸುಮಿತವನಂ ಕ್ರೀಡಾರ್ಥಂ ಪ್ರವಿಶ್ಯ, ಅನಂಗವರ್ಧನಂ ವೇಣುಗಾನಂ ಕೃತ್ವಾ, ತಚ್ಛ್ರುತ್ವಾ ಮನ್ಮಥಪೀಡಯಾ ಗೋದೋಹನ ಶಿಶುಲಾನನಪತಿಸೇವನ ಪರಿವೇಷಣಾದಿ ನಾನಾವಿಧಸ್ವಸ್ವವ್ಯಾಪಾರಾನ್ ಪರಿತ್ಯಜ್ಯ, ಪತ್ಯಾದಿಕೃತವಿರೋಧಮನಾದೃತ್ಯ, ಸ್ವಸಮೀಪಂ ಪ್ರಾಪ್ತಾಭಿಃ ಕಮನೀಯಯುವತೀಭಿಃ ಗೋಪಸ್ತ್ರೀಭಿಃ ಸಹ ನಾನಾವಿಧೋಪಹಾನಪೂರ್ವಕಂ ರಮಮಾಣಃ ಸರ್ವಾನತೋಷಯತ್".

ಅಂದು ಪೂರ್ಣಬೆಳದಿಂಗಳನಿಂದ ಪ್ರಕಾಶಿಸುತ್ತಿರುವ ರಾತ್ರಿಯಲ್ಲಿ ಯಮುನಾನದಿಯ ತೀರದಲ್ಲಿರುವ ಸುಂದರವಾದ ಮತ್ತು ಅರಳಿದ ಪುಷ್ಪಗಳಿಂದ ಯುಕ್ತವಾಗಿರುವ ವನದೊಳಗೆ ಪ್ರವೇಶಿಸಿದನು. ಮನ್ಮಥವಿಕಾರವನ್ನು ಹೆಚ್ಚಿಸುವ ಕೊಳಲಿನ ಧ್ವನಿಯನ್ನು ಮಾಡಿದನು. ಈ ಕೊಳಲಿನ ಧ್ವನಿಯನ್ನು ಕೇಳಿದ ಸ್ತ್ರೀಯರೆಲ್ಲರೂ ಮನ್ಮಥನಿಂದ ಪೀಡಿತರಾದರು. ಹಾಲು ಕರೆಯುವುದು, ಶಿಶುಗಳನ್ನು ಲಾಲಿಸುವುದು, ಪತಿಯನ್ನು ಸೇವಿಸುವುದು, ಬಡಿಸುವುದು ಮುಂತಾದ ನಾನಾವಿಧವಾದ ತಮ್ಮ ತಮ್ಮ ಕೆಲಸಗಳನ್ನು ಬಿಟ್ಟರು. ಗಂಡನೇ ಮೊದಲಾದವರು ಅಡ್ಡಗಟ್ಟಿದರೂ ಲಕ್ಷಿಸಲಿಲ್ಲ. ಶ್ರೀಕೃಷ್ಣದೇವನನ್ನು ಸಮೀಪಿಸಿದರು. ಪರಮ ಸುಂದರಿಯರಾಗಿರುವ ಆ ಗೋಪಿಕಾಸ್ತ್ರೀಯರೊಡನೆ ನಾನಾವಿಧವಾದ ತಮಾಷೆ ಮಾತುಗಳನ್ನು ಆಡುತ್ತಾ ಅವರೊಡನೆ ಕ್ರೀಡಿಸುತ್ತಾ ಸರ್ವರನ್ನೂ ಸಂತೋಷಪಡಿಸಿದನು.

## ಶ್ರೀಕೃಷ್ಣನ ವೇಣುಗಾನ

ವಿಶೇಷಾರ್ಥವಿವರಣ :- ಅಂದು ಸೂರ್ಯನು ಅಸ್ತಮಿಸಿದನು. ಚಂದ್ರನು ಉದಯಿಸಿದನು. ಶ್ರೀಕೃಷ್ಣದೇವನು ಕ್ರೀಡಿಸುವುದಕ್ಕಾಗಿ ಯಮುನಾನದೀತೀರದಲ್ಲಿರುವ ಒಂದು ವನಕ್ಕೆ ಹೋದನು. ಬೆಳದಿಂಗಳಿನಿಂದ ಶೋಭಿಸುತ್ತಿರುವ ಆ ವನದಲ್ಲಿ ಪುಷ್ಪಗಳೆಲ್ಲವೂ ಅರಳಿದವು. ಮನ್ಮಥವಿಕಾರವನ್ನು ಹೆಚ್ಚಿಸುವುದಕ್ಕಾಗಿಯೂ ತನ್ನ ಅಂಗಸಂಗಕ್ಕೆ ಯೋಗ್ಯರಾದ ಸ್ತ್ರೀಯರನ್ನು ಆಕರ್ಷಿಸುವುದಕ್ಕಾಗಿಯೂ ಕೊಳಲನ್ನು ಊದುತ್ತಾ ನಾನಾವಿಧವಾದ ಸಂಗೀತಮಾರ್ಗಗಳನ್ನು ಹೊರಪಡಿಸಿದನು. ಆ ಸಂಗೀತವನ್ನು ಸರ್ವರೂ ಕೇಳಿದರು.

ಶ್ರೀಕೃಷ್ಣದೇವನ ಹೊಟ್ಟೆಯೊಳಗೆ ವಾಸಿಸುತ್ತಿರುವ ಸಕಲಜನರೂ ಅಲ್ಲಿಯೇ ಆನಂದಿಸಿದರು. ಅವನ ವಯಸ್ಸಿನ ಸಂಗಡಿಗರೆಲ್ಲರೂ ಸಂತೋಷಿಸಿದರು. ಗೋಪಸ್ತ್ರೀಯರ ಮನಸ್ಸುಗಳೆಲ್ಲವೂ ಆಕರ್ಷಿಸಲ್ಪಟ್ಟವು. ಮೃಗಗಳೂ ಮುನಿಗಳೂ ಮೈಮರೆತರು. ಆಕಾಶದಲ್ಲಿ ಬಂದು ಸಾಲುಸಾಲಾಗಿ ನಿಂತಿರುವ ದೇವತಾಸ್ತ್ರೀಯರು ಮೂರ್ಛಿತರಾದರು. ಸಂಗೀತದಲ್ಲಿ ವಿಶೇಷ ಪಂಡಿತರಾದ ಚಾರಣರೂ ಸಿದ್ಧರೂ ತಮಗೆ ಇಂತಹ ಪಾಂಡಿತ್ಯವಿಲ್ಲದ್ದರಿಂದ ಲಜ್ಜಿತರಾದರು. ದೇವತೆಗಳೆಲ್ಲರೂ ತಲೆಗಳನ್ನು ಬಗ್ಗಿಸಿದರು. ಶ್ರೀಕೃಷ್ಣದೇವನು ಎಲ್ಲಾ ಪ್ರಪಂಚವೂ ತನ್ನ ಅಧೀನವೆಂದು ತಿಳಿಸುತ್ತಾ ಕೊಳಲನ್ನು ಊದಿದನು.

ಪರಾಧೀನನಾಗದಿರುವ ಶ್ರೀಕೃಷ್ಣದೇವನು ಕೊಳಲಿನ ಅಧೀನನಾದನು. ಬೆಕ್ಕು ಮುಂಗುಸಿ ಮುಂತಾದ

ಪ್ರಾಣಿಗಳು ಜನ್ಮಸಿದ್ಧವಾದ ವೈರವನ್ನು ಮರೆತು ಅನ್ಯೋನ್ಯಸ್ನೇಹಭಾವದಿಂದ ಕೊಳಲಿನ ಗಾನವನ್ನು ಕೇಳಿದವು. ಕೊಳಲು ಪ್ರಪಂಚವೇ ತನ್ನ ಅಧೀನವಾಗುವಂತೆ ಮಾಡಿತು. ಆದ್ದರಿಂದ ಕೊಳಲು ಪರಮ ಮಾನ್ಯತೆಯನ್ನು ಪಡೆಯಿತು. ಮಧುರವಾದ ಮಾತುಗಳನ್ನು ಆಡುತ್ತಿರುವವರಿಗೆ ಲೋಕದಲ್ಲಿ ಅಸಾಧ್ಯವಾದ್ದು ಯಾವುದು?

ಶ್ರೀಕೃಷ್ಣದೇವನ ಮುಖದಂತೆ ಶೋಭಿಸುತ್ತಿರುವ ಚಂದ್ರನ ಕಿರಣಗಳು ಪ್ರತಿಕ್ಷಣದಲ್ಲಿಯೂ ಹೆಚ್ಚಿದವು. ಶ್ರೀಕೃಷ್ಣದೇವನ ದೇಹದ ಪರಿಮಳದಿಂದ ಯುಕ್ತವಾಗಿರುವ ಗಾಳಿಯು ಮೆಲ್ಲನೆ ಬೀಸಿತು. ಶ್ರೀಕೃಷ್ಣದೇವನ ವಿರಹವೆಂಬ ಬೆಂಕಿಯು ಮನಸ್ಸನ್ನು ಕೆರಳಿತು. ಶ್ರೀಕೃಷ್ಣದೇವನ ಕೋಮಲವಾದ ಮಾತುಗಳಂತಿರುವ ಕೊಳಲು ಧ್ವನಿಸಿತು. ಈ ಸಂದರ್ಭದಲ್ಲಿ ಮನ್ಮಥನ ಐದು ಬಾಣಗಳಿಂದ ಪೀಡಿತರಾದ ಗೋಪಿಕಾಸ್ತ್ರೀಯರು ಮಹಾಮಾನಿಷ್ಠರಾಗಿದ್ದರೂ ಮಾನವನ್ನೆಲ್ಲಾ ಬದಿಗಿಟ್ಟು ಮನ್ಮಥನ ತಂದೆಯಾದ ಶ್ರೀಕೃಷ್ಣದೇವನ ಸಕಲ ಶ್ರೇಯಸ್ಸುಗಳಿಗೂ ನಿಧಿಯಾದ ಸನ್ನಿಧಿಯನ್ನು ಹೊಂದಿದರು.

ಒಬ್ಬ ಗೋಪಿಕಾಸ್ತ್ರೀಯು ದನದಿಂದ ಹಾಲನ್ನು ಕರೆಯುತ್ತಿದ್ದಳು. ಅವಳು ಆ ಕೆಲಸವನ್ನು ಅರ್ಧದಲ್ಲೇ ಬಿಟ್ಟಳು. ಸಕಲ ಇಷ್ಟಾರ್ಥಗಳನ್ನೂ ಹಾಲಿನಂತೆ ಕರೆದು ಕೊಡುತ್ತಿರುವ ಶ್ರೀಕೃಷ್ಣದೇವನು ಇರುವಾಗ ಈ ಅಲ್ಪವಾದ ದನವನ್ನು ಕರೆದದ್ದರಿಂದ ಏನು ಲಾಭ? ಎಂದು ಅವಳು ತಿಳಿದಳು.

ಇನ್ನೊಬ್ಬಳು ಊಟವನ್ನು ಮಾಡುತ್ತಿದ್ದಳು. ಅರ್ಧ ಊಟದಲ್ಲಿಯೇ ಎದ್ದಳು. ಶ್ರೀಕೃಷ್ಣದೇವನ ಅಧರಾಮೃತಪಾನದ ಮುಂದೆ ಈ ಊಟವು ಯಾವ ಊಟ? ಎಂದು ತಿಳಿದಳು.

ಮತ್ತೊಬ್ಬಳು ಗಂಡನನ್ನು ಸೇವಿಸುತ್ತಿದ್ದಳು. ಅರ್ಧದಲ್ಲಿ ಅದನ್ನು ಬಿಟ್ಟಳು. ಸಕಲ ಕಲ್ಯಾಣಗುಣಗಳಿಂದ ಪೂರ್ಣನಾದವನೇ "ಭರ್ತಾ" ಎಂದು ಹೇಳಲ್ಪಡುವನು. ಅಂತಹ ಮಹಾಪುರುಷನು ಶ್ರೀಕೃಷ್ಣದೇವನನ್ನು ಬಿಟ್ಟರೆ ಇತರನಿಲ್ಲ. ಆದ್ದರಿಂದ ಈ ಗಂಡನನ್ನು ಬಿಟ್ಟು ಆ ಶ್ರೀಕೃಷ್ಣದೇವನನ್ನೇ ತೃಪ್ತಿಪಡಿಸಬೇಕು ಎಂದು ತೀರ್ಮಾನಿಸಿದಳು.

ಇನ್ನೊಬ್ಬಳು ಮಗನನ್ನು ಲಾಲಿಸುತ್ತಿದ್ದಳು. ಪರಮಪ್ರಿಯನಾಗಿರುವ ಆ ಮಗನನ್ನು ಕೆಳಗೆ ಬಿಟ್ಟಳು. ತಾನೇ ಹೋದಳು. ಶ್ರೀಕೃಷ್ಣದೇವನು ತನ್ನನ್ನು ಕನ್ಯೆಯೆಂದೂ ತಾಯಿಯಲ್ಲವೆಂದೂ ತಿಳಿಯಬೇಕೆಂದೇ ಹಾಗೆ ಮಾಡಿದಳು.

ಮತ್ತೊಬ್ಬಳು ಕಣ್ಣಿಗೆ ಕಾಡಿಗೆಯನ್ನು ಇಟ್ಟು ಅಲಂಕರಿಸಿಕೊಳ್ಳುತ್ತಿದ್ದಳು. ಅದನ್ನು ಬಿಟ್ಟು ಹೊರಟಳು. ಶ್ರೀಕೃಷ್ಣದೇವನನ್ನು ನೊಡುತ್ತಿರುವುದೇ ಕಣ್ಣುಗಳಿಗೆ ಅಲಂಕಾರವೆನಿಸುತ್ತದೆ. ಈ ಕಾಡಿಗೆಯನ್ನು ಧರಿಸಿದ ಮಾತ್ರದಿಂದ ಶ್ರೀಕೃಷ್ಣದೇವನನ್ನು ನೋಡಿದಂತಾಗುವುದೇ? ಎಂದು ಅವಳು ತಿಳಿದಳು.

ಇನ್ನೊಬ್ಬಳು ಕಾಲಿನ ಆಭರಣಗಳನ್ನು ಕೈಗಳಲ್ಲಿಯೂ ಕೈಗಳ ಆಭರಣಗಳನ್ನು ಕಾಲುಗಳಲ್ಲಿಯೂ ಅವಸರದಿಂದ ಧರಿಸಿಕೊಂಡು ಹೋದಳು. ಶ್ರೀಕೃಷ್ಣದೇವನ ಪಾದಗಳನ್ನು ಎಡೆಬಿಡದೆ ನಾನು ಸೇವಸುವೆನು. ಆಗ ಅವನ ಪಾದಗಳಲ್ಲಿರುವ ಅಭರಣಗಳೇ ನನ್ನ ಕೈಗಳಿಗೆ ಆಭರಣಗಳೆನಿಸುವವು ಎಂದು ಅವಳು ತಿಳಿದಳು. ಗಂಡನೇ ಮೊದಲಾದವರು ಅಡ್ಡಿಗಟ್ಟಿದರೂ ಯಾರೂ ಕೇಳಲಿಲ್ಲ. ಸರ್ವರೂ ಮನ್ಮಥನಿಂದ ಪೀಡಿತರಾಗಿ ತಮ್ಮ ತಮ್ಮ ಕೆಲಸಗಳನ್ನು ಬಿಟ್ಟು ಶ್ರೀಕೃಷ್ಣದೇವನ ಸಮೀಪಕ್ಕೆ ಬಂದರು.

# ಶ್ರೀಕೃಷ್ಣದೇವನು ಗೋಪಿಕಾಸ್ತ್ರೀಯರ ಭಕ್ತಿಯನ್ನು ಪರೀಕ್ಷಿಸಿದ್ದು

ಶ್ರೀಕೃಷ್ಣದೇವನು ತಾನು ಆನಂದಪೂರ್ಣನೆಂದೂ ತನಗೆ ಸ್ತ್ರೀಯರಿಂದಾಗಲೀ ಇತರರಿಂದ ಯಾರಿಂದಲಾಗಲೀ ಆಗಬೇಕಾದ ಪ್ರಯೋಜನವು ಯಾವುದೂ ಇಲ್ಲವೆಂದೂ ತಿಳಿಸುವುದಕ್ಕಾಗಿ ಆ ಸ್ತ್ರೀಯರನ್ನು ನೋಡಿ ಹೇಳಿದನು.

"ಗಂಡ, ತಂದೆ, ತಾಯಿ, ಮಕ್ಕಳು ಮುಂತಾದ ಸಕಲಬಂಧುಗಳನ್ನೂ ಇತರರನ್ನೂ ಸೇವಿಸುವುದೇ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸಕಲ ಇಷ್ಟಾರ್ಥಗಳನ್ನು ಕೊಡುತ್ತದೆ. ಆದ್ದರಿಂದ ನೀವೆಲ್ಲರೂ ವೃಂದಾವನಕ್ಕೆ ಹಿಂದಿರುಗಿ ಹೋಗಿರಿ, ನಿಮ್ಮನ್ನು ಸ್ಮರಿಸುತ್ತಿರುವ ಸರ್ವರಿಗೂ ಹಿತವಾದ ಕೆಲಸಗಳನ್ನು ಮಾಡಿರಿ" ಎಂದನು.

ಈ ಮಾತುಗಳನ್ನು ಸ್ತ್ರೀಯರು ಕೇಳಿದರು. ಉತ್ಸಾಹವು ಕುಗ್ಗಿತು. ಅಧೈರ್ಯವು ಹೆಚ್ಚಿತು. ಆದರೂ ಧೈರ್ಯವನ್ನು ತಂದುಕೊಂಡು ವಾದಾಡಲು ಆರಂಭಿಸಿದರು.

"ಮಹಾಪ್ರಭೋ! ನೀನು ತಂದೆ, ಮುಂತಾದವರಿಗೆ ಹಿತವಾದ ಕೆಲಸಗಳನ್ನು ಮಾಡಬೇಕೆಂದು ಆಜ್ಞಾಪಿಸಿರುವಿ. ಸಂತೋಷ ಅವರೆಲ್ಲರಿಗೂ ಹಿತವಾಗಬೇಕೆಂದು ನೀನು ನೆನೆಸುವುದಾದರೆ ನಮ್ಮನ್ನು ಹಿಂದಿರುಗಿ ಹೋಗಬೇಕೆಂದು ಆಜ್ಞಾಪಿಸಕೂಡದು. ಅದಕ್ಕೆ ಕಾರಣವನ್ನು ಹೇಳುತ್ತೇವೆ. ನಿನ್ನ ಆಜ್ಞೆಯಿಂದ ಹಿಂತಿರುಗಿದರೆ ಮಾರ್ಗದಲ್ಲೇ ನಿನ್ನ ವಿರಹಾಗ್ನಿಯನ್ನು ಸಹಿಸುವ ಶಕ್ತಿಯಿಲ್ಲದೆ ನಾವೆಲ್ಲರೂ ಆ ವಿರಾಹಗ್ನಿಯಿಂದ ಬೆಂದು ಹೋಗುವೆವು. ನಾವೆಲ್ಲವೂ ವಿರಹಾಗ್ನಿಯಿಂದ ಸತ್ತಕೂಡಲೇ ಪಿಶಾಚಗಳಾಗಿ ವೃಂದಾವನಪ್ರದೇಶಗಳಲ್ಲಿ ಸಂಚರಿಸುವೆವು. ಆಗ ವೃಂದಾವನಪ್ರದೇಶವು ನಮ್ಮ ಪಿಶಾಚಗಳಿಂದ ತುಂಬಲ್ಪಡುತ್ತದೆ. ಅವುಗಳು ನಮ್ಮ ಬಂಧುಗಳನ್ನು ಪೀಡಿಸುತ್ತವೆ. ಆದ್ದರಿಂದ ನಮ್ಮನ್ನು ಹಿಂದಿರುಗುವಂತೆ ಹೇಳಕೂಡದು."

" ಓ ಮಹಾನುಭಾವ! ಪಿತೃ ಮುಂತಾದವರ ಸೇವೆಯೂ ನಿನ್ನ ಅನುಗ್ರಹದ ಪ್ರಾಪ್ತಿಗೆ ಸಾಧನವೆಂದು ಜ್ಞಾನಿಗಳು ಹೇಳುತ್ತಿರುವರು. ಬ್ರಹ್ಮದೇವರು ನಮ್ಮನ್ನು ಜನ್ಮಾಂತರೀಯ ಪುಣ್ಯ ಪ್ರಭಾವದಿಂದ ನಿನ್ನ ಪಾದದ ಬುಡದಲ್ಲಿ ತಂದು ಸೇರಿಸಿರುವರು. ಪತ್ಯಾದಿಗಳ ಸೇವೆಯ ಫಲವನ್ನು ಸಂಪಾದಿಸಿಬಿಟ್ಟೆವು. ಇನ್ನುಮುಂದೆ ಪತಿ ಮುಂತಾದವರನ್ನು ಸೇವಿಸಬೇಕಾಗಿಲ್ಲ. ಆದ್ದರಿಂದ ನಮ್ಮನ್ನು ಹಿಂದಿರುಗಿಸಿ ಕಳುಹಿಸಬೇಡ.

" ಓ ಕೃಷ್ಣದೇವ! ನಾವು ಈಗ ನಾನಾವಿಧವಾದ ಯೋನಿಗಳಲ್ಲಿ ಹುಟ್ಟಿರುವೆವು. ಒಂದೊಂದು ಜನ್ಮದಲ್ಲಿಯೂ ತಂದೆ, ತಾಯಿ ಗಂಡ, ಮಕ್ಕಳು ಮುಂತಾದ ಬಂಧುಗಳು ನಮಗೆ ಏರ್ಪಟ್ಟಿರುವರು. ಅನಂತ ಜನ್ಮಗಳಲ್ಲಿ ನನ್ನ ಬಂಧುಗಳಾಗಿ ಹುಟ್ಟಿರುವ ಅನಂತಬಂಧುಗಳಲ್ಲಿ ಯಾವ ಜನ್ಮದ ಬಂಧುಗಳನ್ನು ನಾವು ಸೇವಿಸೋಣ? ಈ ಜನ್ಮದ ಬಂಧುಗಳನ್ನೇ ಸೇವಿಸಬೇಕೆಂದು ಹೇಳುವುದರಲ್ಲಿ ತಿರುಳಿಲ್ಲ. ಈ ಜನ್ಮದ ಬಂಧುಗಳನ್ನು ಸೇವಿಸುವುದಾದರೆ ಹಿಂದಿನ ಜನ್ಮದ ಬಂಧುಗಳನ್ನೂ ಅವಶ್ಯವಾಗಿ ಸೇವಿಸಬೇಕು. ಹಿಂದಿನ ಜನ್ಮದ ಬಂಧುಗಳನ್ನು ಸೇವಿಸುವುದು ಬೇಡವೆಂದು ಹೇಳುವುದಾದರೆ ಈ ಜನ್ಮದ ಬಂಧುಗಳನ್ನೂ ಸೇವಿಸುವುದು ಅಗತ್ಯವಿಲ್ಲ. ಅನಂತ ಬಂಧುಗಳು ನಮಗೆ ಸಮರಾಗಿರುವಾಗ ಈ ಜನ್ಮದ ಬಂಧುಗಳಲ್ಲಿ ಮಾತ್ರ ಪಕ್ಷಪಾತವನ್ನು ವಹಿಸಬಹುದೇ?"

" ಈ ಜನ್ಮದಲ್ಲಿ ಬಂಧುಗಳಾಗಿ ಹುಟ್ಟಿದವರು ಹಿಂದಿನ ಜನ್ಮಗಳಲ್ಲಿಯೂ ಬಂಧುಗಳಾಗಿ ಹುಟ್ಟಿರುವರೆಂದು

ಹೇಳಲು ಸಾಧ್ಯವಿಲ್ಲ. ಶತ್ರುಗಳಾಗಿಯೂ ಹುಟ್ಟಿರಬಹುದು. ಅನಾದಿಕಾಲದಿಂದ ಇಂದಿನವರೆಗೆ ಏರ್ಪಟ್ಟಿರುವ ಅನಂತಜನ್ಮಗಳಲ್ಲಿ ಶತ್ರುಗಳಾಗಿ ಅನೇಕ ಜನ್ಮಗಳಲ್ಲಿ ಹುಟ್ಟಿರುವುದೇ ಸಂಭಾವಿತವಾಗಿದೆ. ಅಸಂಖ್ಯ ಜನ್ಮಗಳಲ್ಲಿ ಶತ್ರುಗಳಾಗಿ ಹುಟ್ಟಿದವರಿಗೆ ನಾವು ಅಸಂಖ್ಯ ಜನ್ಮಗಳಲ್ಲಿ ದ್ರೋಹವನ್ನು ಮಾಡಿರುವುದೂ ಸಂಭಾವಿತವಾಗಿರುತ್ತದೆ. ಅನಂತಜನ್ಮಗಳಲ್ಲಿ ಶತ್ರುಗಳಾಗಿ ಹುಟ್ಟಿದವರಿಗೆ ಅನಂತ ಜನ್ಮಗಳಲ್ಲಿ ದ್ರೋಹವನ್ನು ಮಾಡಿರುವ ನಾವು ಈಗ ಒಂದು ಜನ್ಮದಲ್ಲಿ ಬಂಧುಗಳಾಗಿ ಹುಟ್ಟಿದ್ದಕ್ಕಾಗಿ ಉಪಕಾರವನ್ನು ಮಾಡಿದ್ದರಿಂದ ಏನು ಪ್ರಯೋಜನ?''

" ಮಹಾಪ್ರಭೋ! ನೀನು ಸರ್ವರಲ್ಲಿಯೂ ಅಂತರ್ಯಾಮಿಯಾಗಿರುವಿ. ನೀನೇ ಗಂಡನಲ್ಲಿದ್ದು ಗಂಡನೆಂದೂ ತಂದೆ ಮುಂತಾದವರಲ್ಲಿದ್ದೂ ತಂದೆ ಮುಂತಾದ ಹೆಸರುಗಳಿಂದಲೂ ಕರೆಯಲ್ಪಡುತ್ತಿರುವಿ. ನಿನ್ನನ್ನು ಬಿಟ್ಟು ಉಳಿದಿರುವ ತಂದೆ ಮುಂತಾದವರು ಒಂದೊಂದು ಜನ್ಮದಲ್ಲಿ ಬೇರೆ ಬೇರೆಯಾಗಿರುವರು. ಆದ್ದರಿಂದ ಈ ಜನ್ಮದಲ್ಲಿ ಗಂಡನಾಗಿರುವವನು ಹಿಂದಿನ ಜನ್ಮಗಳಲ್ಲಿ ಗಂಡನೆಂದು ಹೇಳುವಂತಿಲ್ಲ. ಆದ್ದರಿಂದಲೇ ಯಾವ ಗಂಡನೂ ನಿಯತಗಂಡನಲ್ಲ. ಇದರಂತೆಯೇ ತಂದೆ, ತಾಯಿ ಮುಂತಾದ ಸಕಲ ಬಂಧುಗಳೂ ನಿತ್ಯಬಂಧುಗಳಲ್ಲ. ಅನಿತ್ಯಬಂಧುಗಳೇ ಆಗಿರುತ್ತಾರೆ.

"ಎಲ್ಲಾ ಜನ್ಮಗಳಲ್ಲಿ ನಮಗೆ ಏರ್ಪಟ್ಟಿರುವ ಗಂಡ ಮುಂತಾದವರಲ್ಲಿ ನೀನೇ ಅಂತರ್ಯಾಮಿಯಾಗಿದ್ದು ಗಂಡ ಮುಂತಾದ ಹೆಸರುಗಳಿಂದ ಕರೆಯಲ್ಪಡುತ್ತಿರುವಿ. ಆದ್ದರಿಂದ ನಿತ್ಯ ತಂದೆ ನಿತ್ಯತಾಯಿ ನಿತ್ಯ ಗಂಡ ಮುಂತಾದ ಬಂಧುಗಳೆನಿಸುವಿ. ಅನಿತ್ಯರಾದ ಪತಿ ಮುಂತಾದವರನ್ನು ಸೇವಿಸುವುದಕ್ಕಿಂತ ನಿತ್ಯಪತಿಯಾಗಿಯೂ ನಿತ್ಯತಂದೆಯಾಗಿಯೂ ನಿತ್ಯತಾಯಿಯಾಗಿಯೂ ನಿತ್ಯಮಕ್ಕಳು ಮುಂತಾದ ಬಂಧುವಾಗಿಯೂ ಇರುವ ನಿನ್ನನ್ನೇ ಸೇವಿಸುವುದು ಯುಕ್ತವಲ್ಲವೇ? ನಿನ್ನನ್ನೇ ಸೇವಿಸುವೆವು. ಪತಿ ಮುಂತಾದವರನ್ನು ಸೇವಿಸಬೇಕು ಎಂದು ನೀನು ಹೇಳಿದಂತೆಯೇ ಮಾಡುವೆವು ನಿನ್ನನ್ನೇ ಸೇವಿಸುವೆವು. ಪತಿ ಮುಂತಾದವರನ್ನು ಸೇವಿಸಬೇಕು ಎಂದು ನೀನು ಹೇಳಿದಂತೆಯೇ ಮಾಡುವೆವು. ನಿನ್ನ ಆಜ್ಞೆಯನ್ನು ಮೀರಲಾರೆವು. ಹಿಂದಿರುಗಿ ಹೋಗುವಂತೆ ಆಜ್ಞಾಪಿಸಬೇಡ.''

" ಜಗತ್ತಿನಲ್ಲಿರುವ ಸರ್ವರಿಗೂ ತಂದೆಯಾಗಿರುವ ನೀನು ಜಗತ್ತಿನ ಮಧ್ಯದಲ್ಲಿರುವ ನಮಗೆ ತಂದೆಯಲ್ಲವೇ? ಸರ್ವರಿಗೂ ತಾಯಿಯಾಗಿರುವ ನೀನು ನಮಗೆ ತಾಯಿಯಲ್ಲವೇ? ಸರ್ವರಿಗೂ ಪತಿಯಾಗಿರುವ ನೀನು ನಮಗೆ ಪತಿಯಲ್ಲವೇ? ನೀನೇ ನಮ್ಮೆಲ್ಲರಿಗೂ ತಂದೆಯೂ ತಾಯಿಯೂ ಪತಿಯೂ ಆಗಿರುವಿ. ನಿನ್ನನ್ನು ಬಿಟ್ಟು ಇತರರನ್ನು ಸೇವಿಸಿದರೆ ತಂದೆ ಮುಂತಾದವರನ್ನು ಬಿಟ್ಟು ಇತರರನ್ನು ಸೇವಿಸಿದಂತಾಗುವುದಿಲ್ಲವೇ? ಇದರಿಂದ ಅನಂತವಾದ ಪಾಪಗಳು ಬರುವುದಿಲ್ಲವೇ? ಆದ್ದರಿಂದ ಪಾಪಗಳ ಮಳೆಗೆ ಕಾರಣವಾಗಿರುವ ಇತರರ ಸೇವೆಗಳನ್ನು ಮಾಡಲಾರೆವು. ಪುಣ್ಯಗಳ ಮಳೆಗಳಿಗೆ ಕಾರಣವಾಗಿರುವ ನಿನ್ನ ಸೇವೆಯನ್ನೇ ಮಾಡುವೆವು.''

"ಮಹಾಪ್ರಭೋ! ಪತಿಯನ್ನೂ "ಪ್ರಾಣಕಾಂತ'' ಮುಂತಾದ ಹೆಸರುಗಳಿಂದ ಕರೆಯುತ್ತಿರುವೆವು. ಈ ಹೆಸರಿನಲ್ಲಿರುವ "ಕಾಂತ'' ಎಂಬ ಹೆಸರನ್ನು ಎರಡು ವಿಧದಿಂದ ವ್ಯಾಖ್ಯಾನ ಮಾಡಬಹುದು. (೧) ಮನಸ್ಸಿಗೆ ಅತ್ಯಂತ ಪ್ರಿಯನಾದವನು ಇದು ಮೊದಲನೆಯ ಅರ್ಥ. ಯಾರಲ್ಲಿ ಸ್ಥೈರ್ಯಶೌರ್ಯ ಸೌಂದರ್ಯ ಮುಂತಾದ ಅನಂತಗುಣಗಳು ಪೂರ್ಣವಾಗಿವೆಯೋ ಅವನೇ ಅತ್ಯಂತ ಪ್ರಿಯನೆನಿಸುವನು. ನಿನ್ನಲ್ಲಿ ಅನಂತಗುಣಗಳು ಪೂರ್ಣವಾಗಿವೆ. ಆದ್ದರಿಂದ ನೀನೇ "ಕಾಂತ'' ಎಂಬ ಹೆಸರಿನಿಂದ ಹೇಳಲ್ಪಡುವುದಕ್ಕೆ ಅರ್ಹನಾಗಿರುವಿ.

(೨) "ಕಸ್ಯ ಅಂತಃ ಯಸ್ಮಾತ್ ಸಃ ಕಾಂತಃ" ಅಂದರೆ ಮದುವೆಯ ದಿನದಲ್ಲಿ ಪೂರ್ಣ ಸುಖ, ಮರುದಿನದಲ್ಲಿ ಅರ್ಧಸುಖ, ಕ್ರಮವಾಗಿ ಕೆಲದಿನಗಳಲ್ಲಿ ಶೂನ್ಯ ಸುಖ, ಎಂಬಂತೆ ಸುಖವನ್ನು ಬುಡಸಹಿತವಾಗಿ ನಾಶಮಾಡುವವನೇ ಕಾಂತನು. ನಮ್ಮ ಪತಿ ಎಂದು ಹೇಳಲ್ಪಡುತ್ತಿರುವ ಮನುಷ್ಯರೇ ಮೊದಲಾದವರೆಲ್ಲರೂ ಈ ದರ್ಜೆಗೆ ಸೇರಿದವರು. ಅವರೆಲ್ಲರು ಸುಖನಾಶಕರಾಗಿರುವುದರಿಂದ "ಕಾಂತ" ಎಂಬ ಹೆಸರಿನಿಂದ ಹೇಳಲ್ಪಟ್ಟರೂ ಯಾರಿಂದಲೂ ಅಪೇಕ್ಷಸಲ್ಪಡುವುದಿಲ್ಲ."

" ಮಹಾಪ್ರಭೋ, ನಮ್ಮ ಪತಿಗಳು ನಮ್ಮೊಡನೇ ಕ್ರೀಡಿಸುತ್ತಿರುವಾಗ ನೀನೂ ಅವರೊಳಗಿದ್ದೂ ನಮ್ಮೊಡನೆಯೂ ನಮ್ಮೊಳಗೆ ವಾಸಿಸುತ್ತಿರುವ ಲಕ್ಷ್ಮೀದೇವಿಯರೊಡನೆಯೂ ಕ್ರೀಡಿಸುತ್ತಿರುವಿ. ನಮ್ಮ ಸಂಗದಿಂದ ಏರ್ಪಡುವ ಸುಖವನ್ನು ನಮ್ಮ ಪತಿಗಳೂ ಅನುಭವಿಸಿದಂತೆ ನೀನೂ ಅನುಭವಿಸುತ್ತಿರುವಿ." ನೀನು ಅನುಭವಿಸುತ್ತಿರುವ ಸುಖವು. ದುಃಖಮಿಶ್ರಣವೇ ಇಲ್ಲದಿರುವುದೂ ಅಪರಿಮಿತವಾದುದೂ ಶ್ರೇಷ್ಠವಾದುದೂ ಆಗಿರುವ ಸಾರಸುಖವೆನಿಸುತ್ತದೆ. ಈ ಸುಖವನ್ನು ಎಲ್ಲರಲ್ಲಿಯೂ ಯಾವಾಗಲೂ ನೀನೊಬ್ಬನೇ ಅನುಭವಿಸುತ್ತಿರುವಿ."

" ನಮ್ಮ ಪತಿಗಳು ಅನುಭವಿಸುತ್ತಿರುವ ಸುಖವು ನೀನು ಅನುಭವಿಸಿ ಬಿಟ್ಟ ಮೇಲೆ ಉಳಿದ ಎಂಜಲೂ ಅತ್ಯಲ್ಪವಾದುದೂ ನಿಃಸಾರವಾದುದೂ ಆಗಿರುತ್ತದೆ."

"ಆದ್ದರಿಂದ ನಮ್ಮೊಡನೆ ನಮ್ಮ ಪತಿಗಳಿಗೆ ಸಂಗವು ಏರ್ಪಟ್ಟಾಗ ಏರ್ಪಡುವ ಸುಖಗಳಲ್ಲಿ ಶ್ರೇಷ್ಠವಾದ ಸುಖವನ್ನು ಮುಖ್ಯವಾಗಿ ಅನುಭವಿಸುತ್ತಿರುವವನು ನೀನೇ. ಅಧಮವಾದ ಸುಖವನ್ನು ಅನುಭವಿಸುತ್ತಿರುವವರು ನಮ್ಮ ಪತಿಗಳು. ನಮ್ಮೊಡನೆ ಯಾವಾಗಲೂ ಸಂಗವನ್ನು ಮಾಡುತ್ತಾ ಸಾರಸುಖವನ್ನು ಅನುಭವಿಸುತ್ತಿರುವುದು ನಿನಗೆ ಹೊಸದಲ್ಲ. ಅನಾದಿಕಾಲದಿಂದಲೂ ಅಸಂಖ್ಯಪತಿಗಳಲ್ಲಿಯೂ ಆ ಸುಖವನ್ನು ನೀನೇ ಅನುಭವಿಸುತ್ತಿರುವಿ."

" ನಮ್ಮ ಪತಿಗಳಿಗೆ ನಮ್ಮಿಂದ ಏರ್ಪಡುವ ಸುಖವು ಈ ಜನ್ಮಕ್ಕೆ ಮಾತ್ರ ಸಂಬಂಧಿಸಿದೆ. ಹಿಂದೂ ಇಲ್ಲ. ಮುಂದೂ ಇಲ್ಲ. ಅದೂ ಅಸಾರವಾದ ಅಲ್ಪವಾದ ಎಂಜಲೆನಿಸಿದ ದುಃಖಮಿಶ್ರಿತವಾದ ಸುಖ. ಆದ್ದರಿಂದ ನೀನೇ ನಮ್ಮ ಮುಖ್ಯ ಪತಿ ಎಂದು ನಾವು ತಿಳಿದಿರುವೆವು. ಇದಕ್ಕಾಗಿ ನಿನ್ನನ್ನೇ ವರಿಸಿರುವೆವು." ಇದು ಗೋಪಿಕಾಸ್ತ್ರೀಯರ ಸಯುಕ್ತಿಕವಾದ ಪ್ರಾರ್ಥನೆ.

" ಎಲೈ ಸ್ತ್ರೀಯರೆ! ನೀವೆಲ್ಲರೂ ಸಾಮಾನ್ಯ ಸ್ತ್ರೀಯರಲ್ಲ. ಸಕಲವೇದಗಳ ಮತ್ತು ವೇದಾನುಸಾರಿಗಳಾದ ಸ್ಮೃತಿಗಳ ಅರ್ಥಗಳನ್ನು ತಿಳಿದವರು. ವೇದಾನುಸಾರಿಗಳಾದ ಸ್ಮೃತಿಗಳಲ್ಲಿ "ಜುಗುಪ್ಸಿತಂ ಚ ಸರ್ವತ್ರ ಹ್ಯೌಪಪತ್ಯಂ ಕುಲಸ್ತ್ರಿಯಃ।."

ಅಂದರೆ ಪರಪುರುಷನನ್ನು ಸೇವಿಸುವುದು ಕುಲಸ್ತ್ರೀಯರಿಗೆ ಅತ್ಯಂತನಿಂದ್ಯವಾದುದು" ಎಂದು ಹೇಳುತ್ತಿದೆ. ಆದ್ದರಿಂದ ವೇದಗಳನ್ನೂ ವೇದಾನುಸಾರಿಗಳಾದ ಸ್ಮೃತಿಗ್ರಂಥಗಳನ್ನೂ ತಿಳಿದಿರುವ ನೀವು ಪತಿಗಳನ್ನು ಬಿಟ್ಟು ಪರಪುರುಷನಾದ ನನ್ನನ್ನು ಸೇವಿಸುವುದು ಧರ್ಮವಲ್ಲ" ಇದು ಶ್ರೀಕೃಷ್ಣದೇವನ ಮಾತು.

"ಕಿವಿಗಳ ವರೆಗೆ ಉದ್ದವಾಗಿರುವ ನೇತ್ರಗಳಿಂದ ಯುಕ್ತನಾದ ಸುಂದರಮೂರ್ತಿಯೇ! ಪತಿಯನ್ನು ಬಿಟ್ಟು ಪರಪುರುಷವನನ್ನು ಸೇವಿಸುವುದು ಅಧರ್ಮವೆಂದು ನೀನು ಹೇಳಿದೆ. ಅದು ಸರಿ. ನಿನ್ನನ್ನು ಬಿಟ್ಟು ಇತರರನ್ನು ಸೇವಿಸುವುದಾದರೆ ಪತಿಯನ್ನು ಬಿಟ್ಟು ಇತರರನ್ನು ಸೇವಿಸಬಾರದು. ನಿನ್ನನ್ನು ಸೇವಿಸುವುದಾದರೆ ಪತಿಯನ್ನು ಬಿಟ್ಟು ಸೇವಿಸಬಹುದು. ಆದ್ದರಿಂದ ಪತಿಯನ್ನು ಬಿಟ್ಟು ನಿನ್ನನ್ನು ಸೇವಿಸುವುದು ಅಧರ್ಮವಲ್ಲ. ಪರಮಧರ್ಮವೆನಿಸುತ್ತದೆ. ಆದ್ದರಿಂದಲೇ "ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ."

ಅಂದರೆ ಶ್ರೀಹರಿಯನ್ನು ಶರಣುಹೊಂದುವುದೇ ಪರಮಧರ್ಮವೆನಿಸುತ್ತದೆ." ಎಂದು ನೀನೇ ಹೇಳಿರುವಿ. ಆದ್ದರಿಂದಲೇ ಪತಿಸೇವಾ ಮುಂತಾದ ಸಕಲಧರ್ಮಗಳನ್ನೂ ಬಿಟ್ಟು ನಿನ್ನನ್ನೇ ಸೇವಿಸುವೆವು." ಇದು ಗೋಪಿಕಾಸ್ತ್ರೀಯರ ಪ್ರತ್ಯುತ್ತರ.

" ಎಲೈ ಸ್ತ್ರೀಯರೆ! ನಿಮ್ಮ ನಿಮ್ಮ ಪತಿಗಳನ್ನು ಬಿಟ್ಟು ಪರಪುರುಷನನ್ನು ಸೇವಿಸಬೇಡಿರಿ. ಇದು ಶ್ರೀಕೃಷ್ಣದೇವನ ಎಚ್ಚರಿಕೆ.

" ಶ್ರೀಕೃಷ್ಣದೇವಾ! ನಮ್ಮ ಪತಿಗಳನ್ನು ಬಿಟ್ಟು ಅವರಿಗೆ ಸಮಾನನನ್ನಾಗಲೀ ಅಧಮನನ್ನಾಗಲೀ ಸೇವಿಸಬಾರದು. ನಮ್ಮ ಪತಿಗಳಿಗಿಂತಲೂ ಸರ್ವರಿಗಿಂತಲೂ ಶ್ರೇಷ್ಠನಾದ ನಿನ್ನನ್ನು ಸೇವಿಸುವೆವು. ಇದರಲ್ಲಿ ಯಾವ ದೋಷವೂ ಇಲ್ಲ" ಇದು ಸ್ತ್ರೀಯರ ಪ್ರತ್ಯುತ್ತರ.

" ಎಲೈ ಸ್ತ್ರೀಯರೆ!, ಪರಪುರುಷಸಂಗವು ಅಧರ್ಮ ಎಂದು ಎಷ್ಟು ವಿಧದಿಂದ ಹೇಳಿದರೂ ನೀವು ಕೇಳುತ್ತಿಲ್ಲ. ಆದ್ದರಿಂದ ಅಧರ್ಮದಲ್ಲಿ ದೃಢವಾದ ನಂಬಿಕೆಯು ನಿಮಗೆ ಇದೆ. ಏನು ಮಾಡಲಿ. ಅಯ್ಯೋ" ಇದು ಶ್ರೀಕೃಷ್ಣದೇವನ ಮಾತು.

"ಮಹಾಪ್ರಭೋ! ನೀನು ಹೇಳಿದ್ದು ನಿಜ. ನಮಗೆ ಅಧರ್ಮದಲ್ಲಿ ದೃಢವಾದ ನಂಬಿಕೆ ಇದೆ. "ಅಧರ್ಮ" ಎಂದರೆ ಧರ್ಮವಿರುದ್ಧವಾದ ಕಾರ್ಯಗಳಲ್ಲಿ ನಮಗೆ ನಂಬಿಕೆಯಿಲ್ಲ. "ಅ" ಅಂದರೆ "ಅಃ ಇತಿ ಪರಬ್ರಹ್ಮ" ಅಂದರೆ ಪರಬ್ರಹ್ಮರೂಪಿಯಾದ ಶ್ರೀಕೃಷ್ಣದೇವನೇ "ಅ" ಎಂಬ ಹೆಸರಿನಿಂದ ಹೇಳಲ್ಪಡುವನು. ಅವನಿಗೆ ಪ್ರಿಯವಾದ ವೈಷ್ಣವಧರ್ಮವೇ "ಅಧರ್ಮ" ಎನಿಸುತ್ತದೆ. ಆ ಅಧರ್ಮದಲ್ಲಿ ಅಂದರೆ ವೈಷ್ಣವಧರ್ಮದಲ್ಲಿ ಅಂದರೆ 'ಪತಿಗಳೇ ಮೊದಲಾದವರನ್ನು ಬಿಟ್ಟು ಶ್ರೀಕೃಷ್ಣದೇವನನ್ನೇ ಸೇವಿಸಬೇಕು." ಎಂಬ ಧರ್ಮದಲ್ಲಿ ನಮಗೆ ದೃಢವಾದ ನಂಬಿಕೆ ಇದೆ" ಇದು ಗೋಪಿಕಾಸ್ತ್ರೀಯರ ಪ್ರತ್ಯುತ್ತರ.

ಹೀಗೆ ಗೋಪಿಕಾಸ್ತ್ರೀಯರೂ ಶ್ರೀಕೃಷ್ಣದೇವನೂ ಚರ್ಚಿಸಿದರು. ಗೋಪಿಕಾಸ್ತ್ರೀಯರ ಅತ್ಯಂತ ಭಕ್ತಿಯನ್ನು ತಿಳಿದು. ಅವರಿಗೆ ಅಂಗಸಂಗವನ್ನು ಕೊಟ್ಟನು. ಅವನು ಭಕ್ತಪ್ರಿಯನಲ್ಲವೇ? ॥ ೭ ॥

ಅಂತರ್ಧತ್ತೇ ಸ್ಮ ತಾಸಾಂ ಮದಹರಣಕೃತೇ ತ್ವೇಕಯಾ ಕ್ರೀಡಮಾನಃ
ಸ್ವಸ್ಕಂಧಾರೋಪಣಾದ್ಯೈಃ ಪುನರಪಿ ಪಿಹಿತೋ ಗರ್ವಶಾಂತ್ಯೈ ಮೃಗಾಕ್ಷ್ಯಾಃ ।
ಖಿನ್ನಾನಾಂ ಗೋಪಿಕಾನಾಂ ಬಹುವಿಧನುತಿಭಿರ್ಯೋ ವಹನ್ ಪ್ರೀತಿಮಾವಿಃ
ಪ್ರಾಪ್ತೋರಾಸೋತ್ಸವೇನ ನ್ಯರಮಯದಬಲಾಃ ಪ್ರೀಯತಾಂ ಮೇ ಹರಿಃ ಸಃ ॥ ೮ ॥

**ಪದಚ್ಛೇದ :-** ಅಂತರ್ಧತ್ತೇಸ್ಮ ತಾಸಾಂ ಮದಹರಣಕೃತೇ ತು ಏಕಯಾ ಕ್ರೀಡಮಾನಃ ಸ್ವಸ್ಕಂಧಾರೋಪಣಾದ್ಯೈಃ ಪುನಃ ಅಪಿ ಪಿಹಿತಃ ಗರ್ವಶಾಂತ್ಯೈ ಮೃಗಾಕ್ಷ್ಯಾಃ ಖಿನ್ನಾನಾಂ ಗೋಪಿಕಾನಾಂ ಬಹುವಿಧನುತಿಭಿಃ ಯಃ ವಹನ್ ಪ್ರೀತಿಂ ಆವಿಃ ಪ್ರಾಪ್ತಃ ರಾಸೋತ್ಸವೇನ ನ್ಯರಮಯತ್ ಅಬಲಾಃ ಪ್ರೀಯತಾಂ ಮೇ ಹರಿಃ ಸಃ।

**ಅನ್ವಯಾರ್ಥ :-** "ಯಃ" ಯಾವ ಶ್ರೀಕೃಷ್ಣದೇವನು "ತಾಸಂ" ಆ ಗೋಪಸ್ತ್ರೀಯರ "ಮದಹರಣಕೃತೇ"ಗರ್ವದ ಪರಿಹಾಕ್ಕಾಗಿ " ಅಂತರ್ಧತ್ತೇ ಸ್ಮ" ಅಂತರ್ಹಿತನಾದನೋ " ಏಕಯಾ ತು " ಒಬ್ಬ ಸ್ತ್ರೀಯೊಡನೆ "ಸ್ವಸ್ಕಂಧಾರೋಪಣಾದ್ಯೈಃ" ತನ್ನ ಹೆಗಲಿನಲ್ಲಿ ಏರಿಸುವುದು ಮುಂತಾದ ವ್ಯಾಪಾರಗಳಿಂದ "ಕ್ರೀಡಮಾನಃ" ಕ್ರೀಡಿಸುತ್ತಾ "ಮೃಗಾಕ್ಷ್ಯಾಃ" ಆ ಸ್ತ್ರೀಯ "ಗರ್ವಶಾಂತ್ಯೈ" ಗರ್ವವನ್ನು ಅಡಗಿಸುವುದಕ್ಕಾಗಿ "ಪುನಃ ಅಪಿ" ಇನ್ನೊಮ್ಮೆ "ಪಿಹಿತಃ" ಅಂತರ್ಹಿತನಾದನೋ "ಖಿನ್ನಾನಾಂ" ದುಃಖಿತರಾದ "ಗೋಪಿಕಾನಾಂ" ಗೋಪಿಕಾಸ್ತ್ರೀಯರ "ಬಹುವಿಧನುತಿಭಿಃ" ನಾನಾವಿಧವಾದ ಹೊಂದಿದನೂ "ರಾಸೋತ್ಸವೇನ" ರಾಸಕ್ರೀಡಾ ಎಂಬ ಉತ್ಸವದಿಂದ "ಅಬಲಾಃ" ಸ್ತ್ರೀಯರನ್ನು "ನ್ಯರಮಯತ್" ಸಂತೋಷಪಡಿಸಿದನೋ "ಸ:" ಆ ಶ್ರೀಕೃಷ್ಣದೇವನು "ಹರಿಃ" ಸಕಲ ಕ್ಲೇಶಗಳನ್ನು ಪರಿಹರಿಸಿದವನಾಗಿ "ಮೇ" ನನ್ನಲ್ಲಿ "ಪ್ರೀಯತಾಂ" ಪ್ರಿತನಾಗಲಿ.

(೨೯) **ವಿಶೇಷಾರ್ಥ :-** ತಾಸಾಂ ಮದಹರಣಕೃತೇ ಅಂತರ್ಧತ್ತೇ ಸ್ಮ - ಆ ಸ್ತ್ರೀಯರಿಗೆ ಗರ್ವವನ್ನು ಪರಿಹರಿಸುವುದಕ್ಕಾಗಿ ಅಂತರ್ಹಿತನಾದನು.

# ಗೋಪಿಕಾಸ್ತ್ರೀಯರ ಗರ್ವವನ್ನು ಪರಿಹರಿಸುವುದಕ್ಕಾಗಿ ಶ್ರೀಕೃಷ್ಣದೇವನು ಅದೃಶ್ಯನಾದದ್ದು.

ಕೃಷ್ಣಃ ಪೂರ್ವೋಕ್ತರೀತ್ಯಾ ಗೋಪಸ್ತ್ರೀಭಿಃ ಸಹ ವನೇ ವಿಹರನ್ ಸ್ವಾಂಗಸಂಗೇನ ಗರ್ವಿತಾನಾಂ ತಾಸಾಂ ಗರ್ವೋಪಶಮನದ್ವಾರಾ ಅನುಗ್ರಹಂ ಕರ್ತುಮದೃಶ್ಯೋ ಭೂತ್ವಾ.

ಶ್ರೀಕೃಷ್ಣದೇವನು ಹಿಂದೆ ಹೇಳಿದಂತೆ ಗೋಪಿಕಾಸ್ತ್ರೀಯರ ಜೊತೆಯಲ್ಲಿ ವಿಹರಿಸಿದನು. ಅಲ್ಲಿರುವ ಗೋಪಿಕಾಸ್ತ್ರೀಯರ ಸಂಖ್ಯೆಗೆ ಸಮಾನವಾದ ಸಂಖ್ಯೆಯಷ್ಟು ರೂಪಗಳನ್ನು ಸ್ವೀಕರಿಸಿದನು. ಒಬ್ಬೊಬ್ಬ ಸ್ತ್ರೀಯೊಡನೆ ಒಂದೊಂದು ರೂಪದಿಂದ ವಿಹರಿಸಿದನು. ಒಬ್ಬೊಬ್ಬ ಸ್ತ್ರೀಯ ಜೊತೆಯಲ್ಲಿ ವಿಹರಿಸುವಾಗಲೂ ಅವಳ ಜೊತೆಯಲ್ಲಿ ಮಾತ್ರ ವಿಹರಿಸುತ್ತಿರುವಂತೆಯೂ ಇತರ ಸ್ತ್ರೀಯರ ಜೊತೆಯಲ್ಲಿ ವಿಹರಿಸದಿರುವಂತೆಯೂ ಅವಳ ಮನಸ್ಸಿನಲ್ಲಿ ತೋರುವಂತೆ ಮಾಡಿದನು. ಇದರಿಂದ ಒಬ್ಬೊಬ್ಬರಿಗೂ ತನ್ನ ಜೊತಯಲ್ಲಿ ಮಾತ್ರ ವಿಹರಿಸುತ್ತಿರುವಂತೆಯೂ ಇತರರೊಡನೆ ವಿಹರಿಸದಿರುವಂತೆಯೂ ಆದ್ದರಿಂದಲೇ ತಾನೇ ಪರಮ ಸುಂದರಿಯೆಂಬ ಅಭಿಪ್ರಾಯವು ಹುಟ್ಟುವಂತೆಯೂ ಮಾಡಿದನು. ಆ ಅಭಿಪ್ರಾಯವು ಕ್ರಮವಾಗಿ ಬೆಳೆಯುವಂತೆಯೂ ಮಾಡಿದನು.

ಮೊದಲು ಭಕ್ತಿಯಿಂದ ಶ್ರೀಕೃಷ್ಣನನ್ನು ಸೇವಿಸುವುದಕ್ಕೆ ಆರಂಭಿಸಿದ ಗೋಪಿಕಾಸ್ತ್ರೀಯರು ಕ್ರಮವಾಗಿ ಕಾಮಿಗಳಾದರು. ಭಕ್ತಿಯಿಂದ ಯುಕ್ತರಾಗಿರುವಾಗ ಅನುಗ್ರಹಿಸಿದನು. ಕಾಮಿಗಳಾದಕೂಡಲೇ "ಕಾಮಿಗಳಿಗೆ ತಾನು ಸಿಗುವುದಿಲ್ಲ" ಎಂದು ತಿಳಿಸಬೇಕೆಂದು ತೀರ್ಮಾನಿಸಿದನು. ಗೋಪಿಕಾಸ್ತ್ರೀಯರ ವಾಕ್ಚಾತುರ್ಯವನ್ನೂ

ಅವರಿಗಿರುವ ವೈಷ್ಣವಧರ್ಮನಿಷ್ಠೆಯನ್ನೂ ನೋಡಿ ಅನುಗ್ರಹಿಸಿ. ಪ್ರಿಯವಾದ ಮಾತಗಳನ್ನು ಆಡಿದನು. ಆಲಿಂಗಿಸಿದನು. ಚುಂಬನ ಮುಂತಾದ ವ್ಯಾಪಾರಗಳನ್ನು ಮಾಡಿದನು. ಮಲಗಿದ್ದ ಮನ್ಮಥವಿಕಾರವನ್ನು ತಾನೇ ಎಬ್ಬಿಸಿದನು. ಕಾಮವಿಕಾರವು ಬಂದಕೂಡಲೇ "ಕಾಮಿಗಳಿಗೆ ತಾನು ಸಿಗುವವನಲ್ಲ" ಎಂದು ತಿಳಿಸುವುದಕ್ಕೋಸ್ಕರ ಅದೃಶ್ಯನಾದನು.

(೩೦) ವಿಶೇಷಾರ್ಥ :- ಏಕಯಾ ತು ಸ್ವಸ್ಕಂಧಾರೋಪಣಾದ್ಯೈಃ ಕ್ರೀಡಮಾನಃ ಮೃಗಾಕ್ಷ್ಯಾಃ ಗರ್ವಶಾಂತ್ಯೈ ಪುನರಪಿ ಪಿಹಿತಃ

ಒಬ್ಬ ಸ್ತ್ರೀಯೊಡನೆ ಮಾತ್ರ ವಿಹರಿಸಿದನು. ಅವಳು ಹೇಳಿದಂತೆ ನಡುದುಕೊಳ್ಳಲು ಆರಂಭಿಸಿದನು. ಪುಷ್ಪಾದಿಗಳಿಂದ ಅಲಂಕರಿಸಿಅವಳನ್ನು ಹೊತ್ತನು ಅವಳಿಗೂ "ತನಗೆ ಸಮಾನಳು ಯಾರೂ ಇಲ್ಲ" ಎಂಬ ಗರ್ವವು ಅವಳಿಗೆ ಬಂತು. ಅವಳ ಗರ್ವವನ್ನು ಅಡಗಿಸುವುದಕ್ಕಾಗಿ ಅದೃಶ್ಯನಾದನು.

## ಗೋಪಿಕಾಸ್ತ್ರೀಯರಿಗೆ ವಿಶೇಷ ವೈರಾಗ್ಯಪ್ರಾಪ್ತಿ

ವಿಶೇಷಾರ್ಥವಿವರಣ :- ಶ್ರೀಹರಿಭಕ್ತನು ತನ್ನ ಮನೆಯಲ್ಲಿಯೂ ಪತ್ನೀ ಪುತ್ರಾದಿಗಳಲ್ಲಿಯೂ ವಿರಕ್ತನಾಗುವನು. ಶ್ರೀಕೃಷ್ಣದೇವನನ್ನೇ ನೋಡಬೇಕೆಂದು ತೀರ್ಮಾನಿಸುವನು. ಅದಕ್ಕಾಗಿ ಸರ್ವಪ್ರಯತ್ನಗಳನ್ನೂ ಮಾಡುವನು. ಅರಣ್ಯಕ ಎಂದು ಪ್ರಸಿದ್ಧವಾಗಿರುವ ಉಪನಿಷತ್ತುಗಳನ್ನು ವಿಮರ್ಶಿಸುತ್ತಿರುವನು. ಅವನಂತೆ ಈ ಗೋಪಿಕಾಸ್ತ್ರೀಯರೂ ಪತಿಪುತ್ರಾದಿಗಳಲ್ಲಿ ವಿರಕ್ತರಾದರು. ಶ್ರೀಕೃಷ್ಣದೇವನನ್ನೇ ನೋಡಬೇಕೆಂದು ತೀರ್ಮಾನಿಸಿ. ಅದಕ್ಕಾಗಿಯೇ ಸರ್ವಪ್ರಯತ್ನಗಳನ್ನೂ ಮಾಡಿ ಕಾಡುಗಳಲ್ಲಿ ಸುತ್ತಿದರು.

ಒಮ್ಮೊಮ್ಮೆ ಒಂದೇ ಸಲ ಎಲ್ಲರಿಗೂ ಹುಚ್ಚು ಹಿಡಿದಂತಾಗುವುದುಂಟು. ಆಗ ಹೇಳಬೇಕಾದ ಮಾತುಗಳನ್ನು ತಿಳಿಯದೆ ಬಾಯಿಗೆ ಬಂದಂತೆ ಮಾತಾಡುತ್ತಿರುವರು. ಒಮ್ಮೊಮ್ಮೆ ಸರ್ವರಿಗೂ ಬುದ್ಧಿಯು ಸ್ವಾಧೀನದಲ್ಲಿ ಇರುವಂತೆ ಆಗುವುದೂ ಉಂಟು. ಆಗ ಹೇಳಬೇಕಾದ ಎಲ್ಲಾ ಮಾತುಗಳನ್ನೂ ವಿವೇಕದಿಂದ ಮಾತಾಡುತ್ತಿರುವರು. ಎಲ್ಲಾ ಯೋಗಿಗಳೂ ಶ್ರೀಕೃಷ್ಣದೇವನನ್ನು ಧ್ಯಾನದಿಂದಲೇ ವಶಪಡಿಸಿಕೊಳ್ಳಲು ಸಾಧ್ಯ. ಬೇರೆ ಮಾರ್ಗದಿಂದ ಸಾಧ್ಯವಿಲ್ಲ. ಅಂತಹ ಶ್ರೀಕೃಷ್ಣದೇವನನ್ನು ಎಲ್ಲಾ ಕಡೆಗಳಲ್ಲಿಯೂ ಹುಡುಕುತ್ತಾ ಮನಸ್ಸಿಗೆ ಬಂದಂತೆ ಮಾತಾಡುವುದಕ್ಕೆ ಆರಂಭಿಸಿದರು.

ಕೆಲವು ಗೋಪಿಕಾಸ್ತ್ರೀಯರು ಹುಚ್ಚಿಯರಂತೆಯೂ ಕೆಲವರು ಸ್ವಸ್ಥಚಿತ್ತರಂತೆಯೂ ನಡೆದುಕೊಂಡರು. ಅವರಲ್ಲಿ ಹುಚ್ಚಿಯಂತಿರುವವಳು ಒಬ್ಬಳು ಹೇಳುತ್ತಿರುವ ಮಾತುಗಳನ್ನು ಕೆಳಗೆ ಕೊಟ್ಟಿದ್ದೇವೆ.

## ಒಬ್ಬ ಗೋಪಿಕಾಸ್ತ್ರೀಯು ಶ್ರೀಕೃಷ್ಣನು ತಮ್ಮನ್ನು ಬಿಟ್ಟು ಹೋಗಲು ಕಾರಣವನ್ನು ಕಲ್ಪಿಸಿದ್ದು

"ಯದುಕುಲತಿಲಕ! ನೀನಿಲ್ಲದಿರುವ ಒಂದೊಂದು ಕ್ಷಣವು ನಮಗೆಲ್ಲರಿಗೂ ತುಂಬಾ ಆಯಾಸಕರವಾಗಿದೆ. ನಾವಿಲ್ಲದಿರುವ ಒಂದೊಂದು ಕ್ಷಣವೂ ನಿನಗೂ ಆಯಾಸಕರವಾಗಿದೆ. ಇದು ಸತ್ಯ.

ಅದರಲ್ಲಿಯೂ ನಮ್ಮಂತಹ ಪರಮಸುಂದರಿಯರನ್ನು ನೀನೇ ಪ್ರಾರ್ಥಿಸಿಕೊಂಡು ಬರಬೇಕು. ಹೀಗಿರುವಾಗ ನಾವೇ ನಿನ್ನ ಪ್ರಾರ್ಥನೆಯಲ್ಲದೆ ಬಂದಿರುವ ಸಂದರ್ಭವನ್ನು ನೀನು ವ್ಯರ್ಥಮಾಡಿಕೊಳ್ಳವಷ್ಟು ಮೂರ್ಖನಲ್ಲ. ಹೀಗಿದ್ದರೂ ನಮ್ಮೆಲ್ಲರನ್ನೂ ಸ್ವಲ್ಪ ಗೋಳಾಡಿಸಬೇಕೆಂದು ತೀರ್ಮಾನಿಸಿ. ಅದಕ್ಕಾಗಿಯೇ ಅದೃಶ್ಯನಾಗಿರುವಿ. ಆದರೆ ಹೆಚ್ಚುಕಾಲ ಪೂರ್ಣಹುಚ್ಚಿಯಂತಿರುವವಳ ಮಾತು ಇದು.

## ಇನ್ನೊಬ್ಬಳು ನಿಜವಾದ ಕಾರಣವನ್ನು ಹೇಳಿದ್ದು

"ನಮಗಿಂತಲೂ ಅನಂತಪಾಲು ಅಧಿಕಸೌಂದರ್ಯದಿಂದ ಯುಕ್ತಳಾಗಿರುವ ಲಕ್ಷ್ಮೀದೇವಿಯು ಶ್ರೀಕೃಷ್ಣದೇವನ ಎದೆಯಲ್ಲಿ ಯಾವಾಗಲೂ ವಾಸಿಸುತ್ತಿರುವಳು. ಅವನು ಮೆಟ್ಟಿದ್ದ ಕಲ್ಲುಗಳೆಲ್ಲವೂ ನಮಗಿಂತ ಸುಂದರಿಯರಾದ ಸ್ತ್ರೀಯರ ರೂಪವನ್ನು ಅಹಲ್ಯೆಯಂತೆ ಧರಿಸುತ್ತವೆ. ಆದ್ದರಿಂದ ಅವನು ಅಲ್ಪಸೌಂದರ್ಯವುಳ್ಳ ನಮ್ಮನ್ನು ಬಿಟ್ಟು ಹೋಗಿರುವುದು ಉಚಿತವೇ ಆಗಿದೆ." ಇದು ಶುದ್ಧಬಾವದಿಂದ ಯುಕ್ತಳಾಗಿರುವ ಸ್ತ್ರೀಯ ಮಾತು.

## ಅಶ್ವತ್ಥಮರವನ್ನು ಎಲ್ಲರೂ ಪ್ರಾರ್ಥಿಸಿದ್ದು

**ಎಲೈ ಅಶ್ವತ್ಥಮರವೇ, "ಮೂಲತೋ ಬ್ರಹ್ಮರೂಪಾಯ ಮಧ್ಯತೋ ವಿಷ್ಣುರೂಪಿಣೇ।**
**ಅಗ್ರತಃ ಶಿವರೂಪಾಯ ವೃಕ್ಷರಾಜಾಯ ತೇ ನಮಃ ॥**

ಈ ಪ್ರಮಾಣವಚನವು ನಿನ್ನಲ್ಲಿರುವ ದೇವತೆಗಳನ್ನು ವರ್ಣಿಸುತ್ತಿದೆ. ಈ ವಚನದಿಂದ ನಿನ್ನ ಬುಡದಲ್ಲಿ ಬ್ರಹ್ಮನೂ ಮಧ್ಯದಲ್ಲಿ ಶ್ರೀಹರಿಯೂ ತುದಿಯಲ್ಲ ಶಿವನೂ ವಿಶೇಷಸನ್ನಿಧಾನದಿಂದ ಯುಕ್ತನಾಗಿರುವಂತೆ ತಿಳಿಯುತ್ತಿದೆ. (೧) ನಾವೆಲ್ಲರೂ ಪರಮಪ್ರಿಯನಾದ ಶ್ರೀಕೃಷ್ಣದೇವನನ್ನು ನೋಡದರಿವುದರಿಂದ ಅನುಭವಿಸುತ್ತಿರುವ ಕಷ್ಟವನ್ನು ನೀನು ನೋಡುತ್ತಿರುವಿ. ನೀನು ನೋಡುತ್ತಿರುವ ನಮ್ಮ ಕಷ್ಟವನ್ನು ನಿನ್ನ ಮಧ್ಯದಲ್ಲಿರುವ ಶ್ರೀಕೃಷ್ಣದೇವನಿಗೆ ಹೇಳು. ಹಾಗೆ ಹೇಳಲು ನಿನಗೆ ಇಷ್ಟವಿಲ್ಲದಿದ್ದರೆ ಎರಡನೆಯ ಕೆಲಸವನ್ನು ಮಾಡು.

(೨) " ಅಗ್ನಿಗರ್ಭಃ" ಅಂದರೆ " ಹೊಟ್ಟೆಯೊಳಗೆ ಅಗ್ನಿಯನ್ನು ಧರಿಸಿದವನು" ಎಂಬ ಹೆಸರು ನಿನಗಿದೆ ಆದ್ದರಿಂದ ನಿನ್ನ ಹೊಟ್ಟೆಯೊಳಗಿರುವ ಅಗ್ನಿಯನ್ನು ನಮಗೆ ಕೊಡು. ಆ ಅಗ್ನಿಯಿಂದ ನಮ್ಮ ದೇಹವು ಸುಟ್ಟು ಬೂದಿಯಾಗಲಿ. ಅಗ್ನಿಯನ್ನು ಕೊಡಲೂ ನಿನಗೆ ಇಷ್ಟವಿಲ್ಲದಿದ್ದರೆ ಮೂರನೆಯ ಕೆಲಸವನ್ನು ಮಾಡು.

(೩) ನಿನ್ನಂತೆ ಮರದ ಸ್ಥಿತಿಯು ನಮಗೆ ಏರ್ಪಡುವಂತೆ ಮಾಡು. ಮರದ ಸ್ಥಿತಿಯು ಬಂದರೆ ಸುಖವಾಗಲೀ ದುಃಖವಾಗಲೀ ಯಾವುದೂ ತಿಳಿಯುವುದಿಲ್ಲ. ಆದ್ದರಿಂದ ಶ್ರೀಕೃಷ್ಣದೇವನ ವಿರಹದಿಂದ ಏರ್ಪಡುವ ದುಃಖವು ತಿಳಿಯಲಾರದು. ಮರದ ಸ್ಥಿತಿಯನ್ನೂ ನಮಗೆ ಕೊಡುವುದಕ್ಕೆ ನಿನಗೆ ಇಷ್ಟವಿಲ್ಲದಿದ್ದರೆ ನಾಲ್ಕನೆಯ ಕೆಲಸವನ್ನು ಮಾಡು.

(೪) ನಿನ್ನ ಹೆಸರನ್ನು ಕೊಡು. "ಶ್ವಃ ತಿಷ್ಠತಿ ಇತಿ ಶ್ವತ್ಥಃ, ಶ್ವತ್ಥ ನ ಭವತಿ ಇತಿ ಅಶ್ವತ್ಥಃ" ಅಂದರೆ "ನಾಳೆ ಇಲ್ಲದವನು" ಅಂದರೆ ಇಂದೇ ಸಾಯುವವನು" ಎಂದು ಆ ಹೆಸರಿನ ಅರ್ಥ, ಆ ಹೆಸರು ನಮಗೆ ಬಂದರೆ ಆ ಹೆಸರು ಅನ್ವರ್ಥಕವಾಗುವುದಕ್ಕೋಸ್ಕರ ನಾವೆಲ್ಲರೂ ಇಂದೇ ಸಾಯುವೆವು. ಆದ್ದರಿಂದ ನಮಗೆ ಶ್ರೀಕೃಷ್ಣದೇವನ ವಿರಹದಿಂದ ಏರ್ಪಡುವ ದುಃಖವು ಇಂದೇ ಮುಗಿಯುತ್ತದೆ. ನಾಳೆ ಆ ದುಃಖವನ್ನು ಅನುಭವಿಸುವ ದೌರ್ಭಾಗ್ಯವು ನಮಗಿಲ್ಲ. ಈ ನಾಲ್ಕರಲ್ಲಿ ಯಾವುದಾದರೂ ಒಂದನ್ನು ಮಾಡು."

ನೀನು ಈ ನಾಲ್ಕರಲ್ಲಿ ಯಾವುದಾದರೂ ಒಂದನ್ನು ಮಾಡಿದರೆ ನಿನ್ನನ್ನು ನಾವು ಅನುಗ್ರಹಿಸುವೆವು. ನೀನು ಮುಂದಿನ ಜನ್ಮದಲ್ಲಿ ಮನುಷ್ಯನಾಗಿ ಹುಟ್ಟು. ಮನುಷ್ಯಜನ್ಮವು ನಿನಗೆ ಬಂದಾಗ ನಾವು ಹೇಗೆ ಶ್ರೀಕೃಷ್ಣದೇವನ ವಿಯೋಗ ಎಂಬ ರೋಗದಿಂದ ಕಷ್ಟಬಡುತ್ತಿರುವೆವೋ ಆ ಸ್ಥಿತಿಯು ನಿನಗೆ ಏರ್ಪಡದಿರಲಿ. ನೀನು ಪತ್ನೀ ವಿಯೋಗವಿಲ್ಲದೇ ಸುಖವಾಗಿ ಬಾಳು.

" ಎಲೈ ಅಶ್ವತ್ಥಮರವೇ, ಒದ್ದೆ ಬಟ್ಟೆಯನ್ನು ಉಟ್ಟುಕೊಳ್ಳಬೇಕು. ನಿನ್ನ ಬುಡಕ್ಕೆ ನೀರನ್ನು ಚೆಲ್ಲಬೇಕು. ನಿನಗೆ ಪ್ರದಕ್ಷಿಣೆಯನ್ನು ಮಾಡಬೇಕು. ಹೀಗೆ ನಿನ್ನನ್ನು ಸೇವಿಸುವವರಿಗೆ ಅಭೀಷ್ಟವಾದ ಪತಿ ಪುತ್ರ ಧನ ಮುಂತಾದ ಸಕಲಾಭೀಷ್ಟ ಫಲಗಳೂ ಸಿಗುತ್ತವೆ ಎಂದು ಸ್ಮೃತಿ ಮುಂತಾದ ಪ್ರಮಾಣವಚನಗಳು ತಿಳಿಸುತ್ತವೆ."

" ಒದ್ದೆ ಬಟ್ಟೆಯನ್ನು ಉಟ್ಟುಕೊಂಡರೆ ಸ್ವಲ್ಪಕಾಲದಲ್ಲಿ ಆ ಬಟ್ಟೆಯು ಒಣಗುವ ಸಂಭವವಿದೆ. ನಮಗೆ ಹಾಗಿಲ್ಲ. ಶ್ರೀಕೃಷ್ಣದೇವನನ್ನು ಎಡೆಬಿಡದ ಹುಡುಕುತ್ತಿರುವೆವು. ಪ್ರತಿಕ್ಷಣದಲ್ಲಿಯೂ ಆಯಾಸದಿಂದ ಬೆವರು ಸುರಿಯುತ್ತಿದೆ. ಆ ಬೆವರಿನ ಪ್ರವಾಹವು ಶರೀರದಲ್ಲಿ ಯಾವಾಗಲೂ ಪ್ರವಹಿಸುತ್ತಿದೆ. ಬಟ್ಟೆಯು ಒಣಗುವ ಸಂಭವವೇ ಇಲ್ಲ."

"ಇತರರು ನಿನ್ನನ್ನು ಮಾತ್ರ ಪ್ರದಕ್ಷಣೆ ಮಾಡುತ್ತಾ ಸೇವಿಸುವರು. ನಾವು ಹಾಗಲ್ಲ. ನಿನ್ನನ್ನೂ ಕಾಡುಗಳಲ್ಲಿ ನಿನ್ನ ಜಾತಿಗೆ ಸೇರಿದ ಎಲ್ಲಾ ಮರಗಳನ್ನೂ ಶ್ರೀಕೃಷ್ಣದೇವನನ್ನೂ ಹುಡುಕುತ್ತಾ ಪ್ರದಕ್ಷಣೆ ಮಾಡುತ್ತಿರುವೆವು."

"ಇತರರು ನಿನ್ನ ಬುಡಕ್ಕೆ ಮಾತ್ರ ನೀರನ್ನು ಸುರಿಸುತ್ತಿರುವರು. ನಾವು ಹಾಗಲ್ಲ. ಕಣ್ಣೀರುಗಳ ಪ್ರವಾಹದಿಂದ ನಮ್ಮ ಕಟ್ಟೆಗಳಲ್ಲಿ ನೀರು ಹರಿಯುವಂತೆ ಮಾಡುತ್ತಿರುವೆವು."

" ಆದ್ದರಿಂದ ಬೇರೆ ಜನರು ಮಾಡುತ್ತಿರುವ ಸೇವೆಗಿಂತ ಉತ್ತಮರೀತಿಯಿಂದ ನಿನ್ನನ್ನು ಸೇವಿಸುತ್ತಿರುವೆವು. ಅಲ್ಪಸೇವೆಯನ್ನು ಮಾಡುತ್ತಿರುವ ಇತರರಿಗೆಲ್ಲರಿಗೂ ನೀನು ಫಲವನ್ನು ಕೊಡುತ್ತಿರುವಿ. ಉತ್ತಮ ಕಲ್ಪದಿಂದ ನಿನ್ನನ್ನು ಸೇವಿಸುತ್ತಿರುವ ನಮಗೆ ಆ ಸೇವೆಯ ಫಲವಾಗಿರುವ ಶ್ರೀಕೃಷ್ಣದೇವನ ದರ್ಶನವನ್ನು ಯಾಕೆ ಕೊಡುವುದಿಲ್ಲ? ವೇದ ಮತ್ತು ಸ್ಮೃತಿಗಳಲ್ಲಿ ಹೇಳಲ್ಪಟ್ಟ ನಿನ್ನ ಸೇವೆಗೆ ಫಲವು ಬಾರದಿದ್ದರೆ ವೇದಗಳೂ ಸ್ಮೃತಿವಚನಗಳೂ ಅಪ್ರಮಾಣವಾಗುವುದಿಲ್ಲವೇ?" ಸಕಲ ಹುಚ್ಚಿಯರೂ ಅಶ್ವತ್ಥಮರವನ್ನು ನೋಡಿ ಈ ಮಾತುಗಳನ್ನು ಹೇಳಿದರು.

## ಅಶ್ವತ್ಥಮರವು ಉತ್ತರವನ್ನು ಕೊಡದಿರಲು ಕಾರಣವನ್ನು ಕಲ್ಪಿಸಿದ್ದು

" ಈ ಅಶ್ವತ್ಥಮರವನ್ನು ಎಷ್ಟೋವಿಧದಿಂದ ಪ್ರಾರ್ಥಿಸಿದೆವು. ನಮಗೆ ಪ್ರಿಯವಾದ ಅಥವಾ ಅಪ್ರಿಯವಾದ ಉತ್ತರಗಳಲ್ಲಿ ಯಾವ ಉತ್ತರವನ್ನೂ ಕೊಡುತ್ತಿಲ್ಲ. ಅಯ್ಯೋ" ಇದು ಒಬ್ಬ ಹುಚ್ಚಿಯು ಹೇಳಿದ್ದು.

" ನಾವೆಲ್ಲರೂ ಶ್ರೀಹರಿಯ ಕೃಪೆಗೆ ಪಾತ್ರರಲ್ಲದವರು. ಆದ್ದರಿಂದ ನಮ್ಮನ್ನು ಯಾರೂ ಗೌರವಿಸಲಾರರು. ಈ ಅಶ್ವತ್ಥಮರವು ನಮ್ಮನ್ನು ನೋಡಿ ಉತ್ತರವನ್ನು ಕೊಡದಿರುವುದರಲ್ಲಿ ತಪ್ಪೇನಿದೆ.

ಶ್ರೀಕೃಷ್ಣದೇವನು ಯಾವ ಕಾರ್ಯವನ್ನು ಪುಣ್ಯವೆಂದು ಹೇಳುವನೋ ಆ ಕಾರ್ಯವೇ ಪುಣ್ಯವೆನಿಸುತ್ತದೆ. ನಾವು ಅವನ ಕೃಪೆಗೆ ಪಾತ್ರರಲ್ಲದಿರುವುದರಿಂದ ನಾವು ಮಾಡಿದ ಅಶ್ವತ್ಥ ಸೇವ ಮುಂತಾದ ಕಾರ್ಯಗಳು ಪುಣ್ಯ ಎಂದು ಅವನು ಅಂಗೀಕರಿಸಲಿಲ್ಲ. ಆದ್ದರಿಂದ ಪುಣ್ಯವಲ್ಲದಿರುವ ಈ ಸೇವೆಗೆ ಫಲವನ್ನು ಕೊಡದಿರುವುದರಲ್ಲಿ ಅಶ್ವತ್ಥಮರದ ಅಪರಾಧವೇನಿದೆ.

ಈ ಮಾತುಗಳಲ್ಲಿ ಮರವಾದುದರಿಂದ ಉತ್ತರವನ್ನು ಕೊಡಲಿಲ್ಲ ಎಂಬ ವಿಷಯವನ್ನು ತಿಳಿಯಲಿಲ್ಲ. ಶ್ರೀಹರಿಗೆ ವಿಮುಖರಾಗಿರುವ ಸರ್ವರೂ ಸರ್ವಜನರಿಗೂ ವಿಮುಖರಾಗುವರು ಎಂಬ ವಿಷಯದಲ್ಲಿ ಸರಿಯಾದ ತಿಳುವಳಿಕೆಯೂ ಇದೆ. ಆದ್ದರಿಂದ ಇದು ಅರ್ಧಹುಚ್ಚಿಯ ಮಾತು.

ಅಶ್ವತ್ಥವೃಕ್ಷವು ತನ್ನ ದೇಹದೊಳಗೆ ಇಟ್ಟುಕೊಂಡಿರುವ ಪರಮಪ್ರಿಯನಾದ ಶ್ರೀಕೃಷ್ಣದೇವನನ್ನು ಕೊಡುವುದಿಲ್ಲವೆಂದು ಸಕಲ ಗೋಪಿಕಾಸ್ತ್ರೀಯರಿಗೂ ಮಿತಿಮೀರಿದ ಕೋಪವೂ ದುಃಖವೂ ಏರ್ಪಟ್ಟಿತು. ಒಬ್ಬನಿಂದ ನಮಗೆ ಒಂದು ಕಾರ್ಯವಾಗಬೇಕಾದರೆ ಅವರಲ್ಲಿರುವ ದೋಷಗಳನ್ನು ಪರಿಗಣಿಸುವುದಿಲ್ಲ. ಆ ದೋಷಗಳನ್ನೇ ಗುಣಗಳೆಂದು ಹೊಗಳುವುದೂ ಉಂಟು. ಅದರಂತೆ ಅವರಲ್ಲಿ ಕೋಪವು ಬಂದಾಗ ಅವರಲ್ಲಿರುವ ಗುಣಗಳೆನ್ನೆಲ್ಲವನ್ನೂ ಲಕ್ಷಿಸದಿರುವುದುಂಟು. ಗುಣಗಳನ್ನು ದೋಷಗಳೆಂದು ದೂಷಿಸುವುದೂ ಉಂಟು.

ಅದರಲ್ಲಿ ಸ್ತ್ರೀಯರು ಕೋಪವು ಬಂದಾಗ ಗುಣಗಳನ್ನು ದೋಷಗಳೆಂದೂ ಸಂತೋಷ ಬಂದಾಗ ದೋಷಗಳನ್ನು ಗುಣಗಳೆಂದು ತಿಳಿಯುವ ವಿಷಯದಲ್ಲಿಯೂ ಪ್ರಚಾರ ಮಾಡುವ ವಿಷಯದಲ್ಲಿಯೂ ತುಂಬಾ ನಿಪುಣರು. ಆದ್ದರಿಂದ ಈ ಅಶ್ವತ್ಥ ಮರದಲ್ಲಿ ಕೋಪಾತಿರೇಕವು ಏರ್ಪಟ್ಟಿರುವ ಈ ಸಮಯದಲ್ಲಿ ಹುಚ್ಚಿಯರಾಗಿರುವ ಈ ಸ್ತ್ರೀಯರು ಅಶ್ವತ್ಥ ಮರದಲ್ಲಿಯಾವ ಸ್ವಾಭಾವಿಕಗುಣಗಳೆಲ್ಲವನ್ನೂ ದೋಷಗಳೆಂದು ಹೇಳುತ್ತಾ ಶಪಿಸುವುದಕ್ಕೆ ಆರಂಭಿಸಿದರು. ಇವರು ಶಾಪವನ್ನು ಕೊಡುವುದಕ್ಕಿಂತ ಪೂರ್ವದಲ್ಲಿಯೇ ಇದ್ದ ಗುಣಗಳನ್ನು ದೋಷಗಳೆಂದು ಭಾವಿಸಿ ತಮ್ಮ ಶಾಪದಿಂದಲೇ ಈ ದೋಷಗಳು ಏರ್ಪಟ್ಟಿವೆ ಎಂದು ತೃಪ್ತಿಪಟ್ಟರು.

ಅಶ್ವತ್ಥಮರವೇ ! (೧) ನಿನ್ನ ಹಣ್ಣನ್ನು ಯಾವ ಸಜ್ಜನರೂ ತಿನ್ನದಿರಲಿ (೨) ಕಾಗೆಗಳು ನಿನ್ನ ಹಣ್ಣನ್ನು ತಿನ್ನ ಬೇಕು. ಅವುಗಳ ಹೊಟ್ಟೆಯಲ್ಲಿ ನಿನ್ನ ಫಲವು ಅಮೇಧ್ಯದ ರೂಪವನ್ನು ಧರಿಸಬೇಕು. ಆ ಅಮೇಧ್ಯದಲ್ಲಿರುವ ನಿನ್ನ ಬೀಜಗಳು ಅಮೇಧ್ಯದೊಡನೆ ಗುದದ್ವಾರದಿಂದ ಹೊರಗೆ ಬರಬೇಕು. ಆ ಬೀಜಗಳಿಂದ ನಿನ್ನ ಜಾತಿಯಲ್ಲಿರುವ ಎಲ್ಲಾ ಅಶ್ವತ್ಥಮರಗಳೂ ಹುಟ್ಟಬೇಕು. ಆದ್ದರಿಂದಲೇ "ಕಾಕವಿಷ್ಠಾಸಮುದ್ಭವಃ" ಅಂದರೆ "ಕಾಗೆಗಳ ಮಲದಿಂದ ಹುಟ್ಟಿದವನು" ಎಂಬ ಅಪಕೀರ್ತಿಯು ನಿನಗೆ ಬರಬೇಕು. (೩) ರಾತ್ರಿಕಾಲದಲ್ಲಿ ನಾವೆಲ್ಲರೂ ಶ್ರೀಕೃಷ್ಣದೇವನನ್ನು ನೋಡದೆ ತುಂಬಾ ಕಷ್ಟಪಡುತ್ತಿರುವೆವು. ನಿನ್ನನ್ನು ರಾತ್ರಿಕಾಲದಲ್ಲಿಯೇ ಪ್ರಾರ್ಥಿಸುತ್ತಿರುವೆವು. ನೀನು ಹೃದಯದಲ್ಲಿ ಶ್ರೀಕೃಷ್ಣದೇವನನ್ನು ಇಟ್ಟುಕೊಂಡು ನಮಗೆ ಕೊಡದೆ ಗೋಳಾಡಿಸುತ್ತಿರುವಿ. ಆದ್ದರಿಂದ ಇನ್ನು ಮುಂದೆ ರಾತ್ರಿಕಾಲದಲ್ಲಿ ನಿನ್ನ ನೆರಳಿನಲ್ಲಿ ಯಾರೂ ಬಾರದಿರಲಿ. ಹಾಗೆ ಬಂದರೆ ಅವರು ಮಾಡುವ ಪುಣ್ಯಗಳೆಲ್ಲವೂ ನಶಿಸಲಿ.

**ದಿವಾ ಬಿಭೀತಕಛಾಯಾ ರಾತ್ರಾವಶ್ವತ್ಥಸಂಭವಾ ।**
**ದಿವಾನಿಶಂ ನರಛಾಯಾ ಹಂತಿ ಪುಣ್ಯಂ ಪುರಾತನಮ್ ॥**

ಅಂದರೆ " ಹಗಲಿನಲ್ಲಿ ಬಿಭೀತಕವೃಕ್ಷದ ನೆರಳಿನಲ್ಲಿಯೂ ರಾತ್ರಿಯಲ್ಲಿ ಅಶ್ವತ್ಥವೃಕ್ಷದ ನೆರಳಿನಲ್ಲಿಯೂ ರಾತ್ರಿ ಮತ್ತು ಹಗಲುಗಳಲ್ಲಿ ಮನುಷ್ಯನ ನೆರಳಿನಲ್ಲಿಯೂ ಹೋಗಕೂಡದು. ಹಾಗೆ ಹೋದರೆ ಸಂಗ್ರಹಿಸಿದ ಎಲ್ಲಾ ಪುಣ್ಯಗಳೂ ನಶಿಸುತ್ತವೆ" ಎಂದು ಧರ್ಮಶಾಸ್ತ್ರಕಾರರು ರಾತ್ರಿಕಾಲದಲ್ಲಿ ನಿನ್ನ ನೆರಳಿನಲ್ಲಿ ಬಂದವರನ್ನು ನಿಂದಿಸಲಿ. (೪) ಅತ್ಯಂತ ಕ್ರೂರವಾದ ಬೆಂಕಿಯು ನಿನ್ನ ಹೊಟ್ಟೆಯಲ್ಲಿ ಬೀಳಲಿ. ಆದ್ದರಿಂದ "ಅಗ್ನಿಗರ್ಭ" ಎಂಬ ಕೆಟ್ಟಹೆಸರು ನಿನಗೆ ಬರಲಿ. (೫) ಅಮಾವಾಸ್ಯಾ ಮುಂತಾದ ಪರ್ವಕಾಲಗಳನ್ನು ಬಿಟ್ಟು ಇತರ ದಿನಗಳಲ್ಲಿ ನೀನು ಅಸ್ಪೃಶ್ಯ ಅಂದರೆ ಮುಟ್ಟುವುದಕ್ಕೆ ಅನರ್ಹನಾಗು. ಆದ್ದರಿಂದಲೇ "ಅಶ್ವತ್ಥಸಾಗರೌ ಸೇವ್ಯೌ ನ ಸ್ಪೃಷ್ಟವ್ಯೌ ಕದಾಚನ".

ಅಂದರೆ "ಅಶ್ವತ್ಥಮರವನ್ನೂ ಸಮುದ್ರವನ್ನೂ ಸೇವಿಸಬೇಕು. ಆದರೆ ಮುಟ್ಟಬಾರದು." ಎಂದು ಧರ್ಮಶಾಸ್ತ್ರಕಾರರು ನಿನ್ನ ಅಸ್ಪೃಶ್ಯತ್ವವನ್ನು ಪ್ರಚಾರ ಮಾಡಲಿ. (೬) ನಾವೆಲ್ಲರೂ ನಿನ್ನಲ್ಲಿ ಪ್ರಾರ್ಥಿಸುತ್ತಿದ್ದೇವೆ. ನಿನಗೆ ನಮ್ಮ ಪ್ರಾರ್ಥನೆಯಲ್ಲಿ ಇಷ್ಟವಿಲ್ಲದಿದ್ದರೆ ನೀನು ನಿಂತಿರುವ ಸ್ಥಳವನ್ನು ಬಿಟ್ಟು ಬೇರೆ ಕಡೆಗೆ ಹೋಗಬೇಕಾಗಿತ್ತು. ಹಾಗೆ ಹೋಗದಿರುವುದರಿಂದ "ನಮ್ಮ ಪ್ರಾರ್ಥನೆಯನ್ನು ಮನಃಪೂರ್ವಕವಾಗಿ ಕೇಳುತ್ತಿರುವಿ" ಎಂದು ನಮಗೆ ತಿಳಿಯುತ್ತಿದೆ. ನಮ್ಮ ಪ್ರಾರ್ಥನೆಯನ್ನು ಕೇಳುತ್ತಿದ್ದರೂ ನಮಗೆ ಯಾವ ವಿಧವಾದ ಉತ್ತರವನ್ನೂ ಕೊಡುತ್ತಿಲ್ಲ. ಆದ್ದರಿಂದ ನೀನು ಈಗ ಮೂಕನಾದಂತೆ ಯಾವಾಗಲೂ ಮೂಕನಾಗು. (೭) ಕಿವಿ ಇದ್ದೂ ಕೇಳಿಸದವನಂತೆ ನಟಿಸುತ್ತಿರುವ ನೀನು ಯಾವಾಗಲೂ ಕಿವುಡನಾಗು. (೮) ಶ್ರೀಕೃಷ್ಣದೇವನು ನಿನ್ನ ಹೃದಯದಲ್ಲಿರುವುದು ನಿಜ. ಆ ವಿಷಯದಲ್ಲಿ 'ಮಧ್ಯತೋ ವಿಷ್ಣುರೂಪಿಣೇ" ಎಂಬ ಪ್ರಮಾಣವನ್ನು ಹಿಂದೆ ಹೇಳಿರುವೆವು. ನಿನ್ನ ಹೃದಯದಲ್ಲಿರುವ ಶ್ರೀಕೃಷ್ಣದೇವನು ನಿನ್ನ ಕಣ್ಣಿಗೆ ಕಾಣಿಸದಿರಲಿ. (೯) ನಮಗೆ ಪರಮಪ್ರಿಯನಾದ ಶ್ರೀಕೃಷ್ಣದೇವನನ್ನು ತೋರಿಸಿದರೆ ಅವನ ಜೊತೆಯಲ್ಲಿ ಸುಖಿಗಳಾಗಿ ವಾಸಿಸುವೆವು. ಅವನನ್ನು ನೀನು ತೋರಿಸುತ್ತಿಲ್ಲ. ಆದ್ದರಿಂದ ನಮ್ಮೆಲ್ಲರಿಗೂ ಸುಖವು ಬಾರದಂತೆ ಮಾಡುತ್ತಿರುವಿ. ಬ್ರಾಹ್ಮಣನಾಗಿ ಹುಟ್ಟಿದವನು ಪ್ರಬಲವಾದ ಬ್ರಹ್ಮಹತ್ಯಾ ಮುಂತಾದ ಪಾಪಗಳನ್ನು ಮಾಡಿದಾಗ ಅವನು ಸತ್ತರೂ ಸ್ವರ್ಗಕ್ಕೆ ಹೋಗದೆ ಇಲ್ಲಿಯೇ ಬ್ರಹ್ಮರಾಕ್ಷಸನಾಗಿ ತಿರುಗುತ್ತಿರುವನು. ನಮಗೆ ಸುಖವು ಏರ್ಪಡದಂತೆ ಮಾಡುತ್ತಿರುವ ನಿನ್ನಲ್ಲಿ ಬ್ರಹ್ಮರಾಕ್ಷಸನು ವಾಸಿಸುತ್ತಿರುವನೆಂಬ ಪ್ರಸಿದ್ಧಿಯು ಏರ್ಪಡಲಿ. ನಿನ್ನ ಕೆಳಗೆ ನಾವು ನಿಲ್ಲಬಾರದು. ಮುಂದೆ ಹೋಗುವೆವು."ಎಂದು ತೀರ್ಮಾನಿಸಿದರು. ಮುಂದೆ ಹೋರಟರು.

## ಜಾಜಿ ಮುಂತಾದ ಗಿಡಗಳನ್ನು ಪ್ರಾರ್ಥಿಸಿದ್ದು

ಜಾಜಿ ಮುಂತಾದ ಗಿಡಗಳನ್ನು ಸಮೀಪಿಸಿದರು. " ಎಲ್ಯೆ, ಜಾಜಿಯೇ, ಮಾಲತಿಯೇ, ಶ್ರೇಷ್ಠಳಾದ ತುಳಸಿಯೇ, ಮಲ್ಲಿಗೆಯೇ, ಶ್ರೀಕೃಷ್ಣದೇವನು ಸನ್ಯಾಸಿಗಳಿಗೆ ಅತ್ಯಂತ ಪ್ರಿಯನು. ಅವನಲ್ಲಿ ಕಾಮವಿಕಾರವಿಲ್ಲ. ನಾವೆಲ್ಲರೂ ಕಾಮಿಗಳು. ಅವನಿಗೆ ನಮ್ಮ ಅಪೇಕ್ಷೆಯಿಲ್ಲದಿದ್ದರೂ ನಮಗೆ ಅವನನ್ನು ಬಿಟ್ಟರಲು ಸಾಧ್ಯವಿಲ್ಲ. ನಾವು ಇಷ್ಟರ ವರೆಗೆ ಅನಂತ ಜನ್ಮಗಳನ್ನು ಸಂಪಾದಿಸಿರುವೆವು. ಆ ಅನಂತಜನ್ಮಗಳ ಮಧ್ಯದಲ್ಲಿ ಒಂದು ಜನ್ಮದಲ್ಲಿ, ಆ ಒಂದು ಜನ್ಮದಲ್ಲಿಯೂ ಯಾವಾಗಲೋ ಒಮ್ಮೆ ನಿಮ್ಮಲ್ಲಿ ಯಾರಾದರೂ ಒಬ್ಬರನ್ನು ಶ್ರೀಕೃಷ್ಣದೇವನ ಪಾದಗಳಲ್ಲಿ ಸಮರ್ಪಿಸಲಿಲ್ಲವೇ? ಹಾಗೆ ಸಮರ್ಪಿಸಿದ್ದರೆ ಶ್ರೀಕೃಷ್ಣದೇವನ ಪಾದಸ್ಪರ್ಶವನ್ನು ನಮಗೆ ಕೊಡಿರಿ. ಉಪಕಾರವನ್ನು ಮಾಡಿದವರಿಗೆ ಪ್ರತ್ಯುಪಕಾರವನ್ನು ಮಾಡುವುದು ಧರ್ಮವಲ್ಲವೇ? ನೀವು ತುಂಬಾ ಒಳ್ಳೆಯವರು. ನಮಗೆ ಉಪಕಾರವನ್ನು ಮಾಡಿರಿ."

## ತುಳಸಿಯನ್ನು ಪ್ರಾರ್ಥಿಸಿದ್ದು

"ತುಳಸಿಯೇ! ಒಳ್ಳೆ ಕುಲದಲ್ಲಿ ಹುಟ್ಟಿದ ಸ್ತ್ರೀಯರು ಕುಲಭೂಷಣರೆನಿಸುವರು. ನೀನೂ ಪರಿಶುದ್ಧವಾದ ಭೂಮಿಯಲ್ಲಿ ಹುಟ್ಟಿರುವಿ. ಶ್ರೇಷ್ಠರಿಂದ ಮಾನ್ಯರಾಗಿರುವ ಸ್ತ್ರೀಯರೂ ಪುರಷರೂ ಮಾನ್ಯರೆನಿಸುವುದರಲ್ಲಿ ಸಂಶಯವಿಲ್ಲ. ಶ್ರೇಷ್ಠರಾದ ಸನ್ಯಾಸಿಗಳೂ ಸಹ ನಿನ್ನನ್ನು ಅತ್ಯಂತ ಭಕ್ತಿಯಿಂದ ನಮಸ್ಕರಿಸುತ್ತಿರುವರು. ನಿನ್ನನ್ನು ಯತಿಗಳೇ ಮೊದಲಾದ ಮಾನ್ಯರು ಶ್ರೀಕೃಷ್ಣದೇವನ ಪಾದದಲ್ಲಿ ಸಮರ್ಪಿಸುತ್ತಿರುವರು. ನಿನಗೆ ಪ್ರತಿದಿನದಲ್ಲಿಯೂ ಶ್ರೀಕೃಷ್ಣದೇವನ ಪಾದಾರವಿಂದಗಳ ಸ್ಪರ್ಶವು ನಿಶ್ಚಯವಾಗಿಯೂ ಏರ್ಪಡುತ್ತಲೇ ಇದೆ. ನೀನು ಶ್ರೀಕೃಷ್ಣದೇವನ ಪಾದಗಳ ಸಮೀಪಕ್ಕೆ ಹೋಗುವಾಗ ನಿನ್ನ ಸಖಿಗಳಾದ ನಮ್ಮನ್ನೂ ಕರೆದುಕೊಂಡು ಹೋಗು. ಅಮ್ಮಾ ತುಳಸಿಯೇ! ಮನ್ಮಥಜನಕನಾದ್ದರಿಂದಲೇ ಪರಮ ಸುಂದರನಾದ ಶ್ರೀಕೃಷ್ಣದೇವನ ಮನಸ್ಸಿಗೆ ಕಮಲವನಗಳಲ್ಲಿರುವ ಅತ್ಯಧಿಕವಾದ ಪರಿಮಳವು ಸಹ ನೀನಿಲ್ಲದಿದ್ದರೆ ಪ್ರಿಯವಾಗುವುದಿಲ್ಲ.

## ಕುಲವಿರುದ್ಧವಾದ ಕೆಲಸಗಳನ್ನು ಮಾಡಬೇಡಿರಿ

" ಎಲ್ಲೆ, ಜಾಜಿ, ಮುಂತಾದ ಗಿಡಗಳೇ! ನೀವೆಲ್ಲರೂ ಹುಟ್ಟಿರುವುದು ವೃಂದಾವನದಲ್ಲಿ. ಆ ವೃಂದಾವನವು "ವೃಂದ" ಅಂದರೆ ಜನರ ಸಮೂಹವನ್ನು "ಅವನ" ಅಂದರೆ ರಕ್ಷಿಸುವ ಸ್ವಭಾವವುಳ್ಳದ್ದು. ಅದು ಮಾತ್ರವಲ್ಲ. ಚಂದ್ರನ ಆನಂದಕರವಾದ ಕಿರಣಗಳಿಂದ ಎಲ್ಲರ ಮನಸ್ಸನ್ನು ಆಕರ್ಷಿಸುತ್ತಿದೆ. ಅಂತಹ ವೃಂದಾವನದಲ್ಲಿ ಹುಟ್ಟಿರುವ ನೀವು ನಮಗೆ ಅತ್ಯಂತ ವೈರಿಯಾಗಿರುವ ಮನ್ಮಥನಿಗೆ ಅರವಿಂದ ಮುಂತಾದ ಬಾಣಗಳನ್ನು ತಯಾರಿಸಿ ಕೊಡುತ್ತಿರುವಿರಿ. ಆ ಬಾಣಗಳಿಂದ ನಮ್ಮನ್ನು ಗೋಳಾಡಿಸುತ್ತಿರುವಿರಿ. ನಿಮ್ಮ ಜನ್ಮಭೂಮಿಗೂ ಕುಲಕ್ಕೂ ವಿರುದ್ಧವಾದ ಕೆಲಸವನ್ನು ಮಾಡಬಹುದೇ? ಉತ್ತಮರಾದ ನೀವು ನಿಮ್ಮ ಕುಲಕ್ಕೆ ಯೋಗ್ಯವಾದ ರಕ್ಷಣವನ್ನು ಮಾಡಬೇಡವೆ?"

## ಜಾಜಿ ಮುಂತಾದ ಗಿಡಗಳಿಗೆ ಆಸೆಯನ್ನು ಹುಟ್ಟಿಸಿದ್ದು

ನಿಮ್ಮನ್ನು ಹೊಗಳಿದೆವು. ನಿಮ್ಮ ಕುಲದ ಮಹತ್ವವನ್ನು ತಿಳಿಸಿದೆವು. ಆಗಲೂ ನಿಮಗೆ ನಮ್ಮಲ್ಲಿ ಕರುಣೆಯು ಹುಟ್ಟಲಿಲ್ಲ. ನಿಮಗೆ ನಾವು ಮಾಡುವ ಉಪಕಾರವನ್ನಾದರೂ ತಿಳಿಸುವೆವು. ಆಗಲಾದರೂ ನಾವು ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರವನ್ನಾದರೂ ಮಾಡವಿರಾ? ನಮ್ಮ ಕಣ್ಣುಗಳಿಗೆ ದೊಡ್ಡ ಉತ್ಸವವನ್ನು ಕೊಡುತ್ತಿರುವ ಶ್ರೀಕೃಷ್ಣದೇವನನ್ನು ನಮಗೆ ತೋರಿಸಿರಿ. ಅವನನ್ನು ಮೊಸಳೆಯಿಂದ ತುಂಬಾ ಹೆದರಿದ ಗಜೇಂದ್ರನು ಸ್ತುತಿಸಿದನು. ವಿದ್ಯಾ ಮುಂತಾದ ಗುಣಗಳಿಲ್ಲದೆ ಬರೇ ಭಕ್ತಿಯಿಂದಲೇ ಮಾಡಿರುವ ಗಜೇಂದ್ರನ ಸ್ತುತಿಯನ್ನು ಕೇಳಿ ಪ್ರಸನ್ನನಾಗಿ ಶ್ರೀಕೃಷ್ಣದೇವನು ಅವನನ್ನು ರಕ್ಷಿಸಿದನು. ಇಷ್ಟು ಸುಲಭನಾದ ಶ್ರೀಕೃಷ್ಣದೇವನ ಪಾದಗಳಲ್ಲಿ ಶ್ರೀಕೃಷ್ಣದೇವನನ್ನು ತೋರಿಸಿದ್ದಕ್ಕಾಗಿ ನಿಮ್ಮನ್ನು ಸಮರ್ಪಿಸುವೆವು. ಶ್ರೀಹರಿನಿರ್ಮಾಲ್ಯವೆನಿಸಿದ ನಿಮ್ಮನ್ನು ಬ್ರಹ್ಮಾದಿ ದೇವತೆಗಳು ತಲೆಯ ಮೇಲೆ ಇಟ್ಟುಕೊಂಡು ಸತ್ಕರಿಸುವಂತೆ ಮಾಡುವೆವು."

"ಅಷ್ಟೇ ಅಲ್ಲ. ಶ್ರೀಕೃಷ್ಣದೇವನು ಅವನನ್ನು ನಮಸ್ಕರಿಸಿದವರಿಗೆ ಬಂಧುವೆನಿಸಿದನು. ನಿಬಿಡವಾದ

ಸೌಂದರ್ಯವು ಅವನಲ್ಲಿ ಸಮುದ್ರದಂತೆ ಅಪರಿಮಿತವಾಗಿದೆ. ಯದುಕುಲದಲ್ಲಿರುವ ಎಲ್ಲಾ ರಾಜರುಗಳ ಮಧ್ಯದಲ್ಲಿ ಅತ್ಯಂತ ಶ್ರೇಷ್ಠನೆನಿಸಿರುವನು. ಉತ್ತಮವಾದ ಮುತ್ತಿನ ಹಾರವನ್ನು ಧರಿಸಿರುವನು. ಅವನನ್ನು ನಮಗೆ ಕೊಡಿರಿ. ನಿಮ್ಮೆಲ್ಲರನ್ನೂ ಅವನ ಪಾದಗಳಲ್ಲಿ ತುಂಬಿಸುವೆವು. ನಮಗೆ ಉಪಕಾರವನ್ನು ಮಾಡಿರುವ ನಿಮ್ಮನ್ನು ನಮ್ಮ ತಲೆಯಲ್ಲಿಟ್ಟುಕೊಂಡು ಲಾಲಿಸುವೆವು. ಇಷ್ಟರ ಶ್ರೀಕೃಷ್ಣದೇವನನ್ನು ನೋಡದಿರುವುದರಿಂದ ನಿಮ್ಮನ್ನು ದ್ವೇಷಿಸುತ್ತಿರುವ ನಾವೆಲ್ಲರರೂ ನಿಮ್ಮನ್ನು ಪೂಜಿಸುವೆವು. ಈ ಪ್ರತ್ಯುಪಕಾರಕ್ಕಾಗಿಯಾದರೂ ನಮಗೆ ಶ್ರೀಕೃಷ್ಣದೇವನನ್ನು ತೋರಿಸುವಿರಾ?

## ಜಾಜಿ ಮುಂತಾದ ಗಿಡಗಳನ್ನು ಧಿಕ್ಕರಿಸಿದ್ದು

ಆಗ ಒಬ್ಬ ಸ್ತ್ರೀಯು ಹೇಳುತ್ತಾಳೆ " ಎಲೈ ಸ್ತ್ರೀಯರೆ! ನಾವೆಲ್ಲರೂ ಶ್ರೀಕೃಷ್ಣದೇವನ ಮಹಿಮೆಗಳನ್ನು ಮಾಲೆಗಳಂತೆ ಜೋಡಿಸಿ ಹೇಳುತ್ತಿರುವೆವು. ಈ ಪುಷ್ಪಗಳ ಮಾಲೆಗಳು ನಮ್ಮಲ್ಲಿಲ್ಲ. ಆದರೆ ಈ ಪುಷ್ಪಗಳ ಮಾಲೆಗಳನ್ನು ಶ್ರೀಕೃಷ್ಣದೇವನು ಧರಿಸುತ್ತಿರುವನು. ನಮಗೆ ಸಿಗದಿರುವ ಶ್ರೀಕೃಷ್ಣದೇವನ ಅಂಗಸಂಗವು ಈ ಪುಷ್ಪಗಳ ಮಾಲೆಗಳಿಗೆ ಏರ್ಪಡುತ್ತಿದೆ. ಆದ್ದರಿಂದ ಈ ಪುಷ್ಪಗಳು ನಮಗೆ ಸವತಿಯರೆನಿಸುತ್ತವೆ. ಇವುಗಳಿಗೆ ನಮ್ಮಲ್ಲಿ ಕರುಣೆಯು ಬಂದೀತೇ?"

'ಅದು ಮಾತ್ರವಲ್ಲ. ಅವನು ನಮಗೆ ಸಿಕ್ಕಿದರೆ ನಮ್ಮಲ್ಲಿ ಕರುಣೆಯಿಂದ ನಮ್ಮನ್ನು ಗಟ್ಟಿಯಾಗಿ ಆಲಿಂಗಿಸುವನು. ಆಗ ನಮ್ಮ ಎದೆಗೂ ಅವನ ಎದೆಗೂ ಮಧ್ಯದಲ್ಲಿ ಸಿಕ್ಕಿಕೊಂಡ ಈ ಪುಷ್ಪಗಳು ನಶಿಸುತ್ತವೆ. ಆದ್ದರಿಂದ ಇವುಗಳು ತಮಗೆ ಆಪತ್ತು ಬರುತ್ತದೆ ಎಂದು ತಿಳಿದು ಶ್ರೀಕೃಷ್ಣದೇವನು ಹೋದ ಹಾದಿಯು ತಮಗೆ ಗೊತ್ತಿದ್ದರೂ ನಮಗೆ ತಿಳಿಸುವುದಿಲ್ಲ. ನಮ್ಮ ವಿರೋಧಿಗಳಾದ ಈ ಪುಷ್ಪಗಳನ್ನು ಕೇಳಿ ಪ್ರಯೋಜನವಿಲ್ಲ. ಮುಂದೆ ಹೋಗೋಣ" ಎಂದಳು.

## ಒಬ್ಬ ಸ್ತ್ರೀಯು ಭ್ರಮರವನ್ನು ನೋಡಿ ಶ್ರೀಕೃಷ್ಣದೇವನನ್ನು ಪ್ರಾರ್ಥಿಸಿದ್ದು

ಒಂದು ಕಮಲದ ಮೇಲೆ ಕುಳಿತಿದ್ದ ಭ್ರಮರವು ಆ ಕಮಲವನ್ನು ಬಿಟ್ಟು ಇನ್ನೊಂದು ಕಮಲದ ಮೇಲೆ ಹಾರಿ ಹೋಯಿತು. ಈ ಎರಡು ಕಮಲಗಳು ಎರಡು ನಾಯಕಿಯರ ಮುಖಗಳೆಂದೂ ಭ್ರಮರವು ನಾಯಕನೆಂದೂ ಒಬ್ಬ ಗೋಪಿಕಾಸ್ತ್ರೀಯು ತನ್ನ ಮನಸ್ಸಿನಲ್ಲಿ ಕಲ್ಪನೆ ಮಾಡಿಕೊಂಡಳು. ಮೊದಲನೆಯ ಕಮಲವನ್ನು ಬಿಟ್ಟು ಹೋದ ಕೂಡಲೇ ಕಮಲವು ಮೊಗ್ಗಾಗಿ ಹೋಯಿತು. ಇದನ್ನು ಎರಡನೆಯ ನಾಯಕಿಯ ಮುಖವನ್ನು ನೋಡಿದ ಕೂಡಲೇ ನಾಯಕನು ಅವಳನ್ನು ಆಸೆಯಿಂದ ಅನುಸರಿಸಿಕೊಂಡಂತೆ ಹೋದುದರಿಂದ ಮೊದಲನೆಯ ನಾಯಕಿಯು ಕುಪಿತಳಾಗಿ ಮುಖವನ್ನು ಬಾಡಿಸಿಕೊಂಡಂತೆ ಕಲ್ಪಿಸಿದಳು. ಎರಡನೆಯ ಕಮಲದ ಕಡೆಗೆ ಹೋದ ಭ್ರಮರವು ಹಿಂದಿರುಗಿ ಮೊದಲನೆಯ ಕಮಲದ ಕಡೆಗೆ ಬಂತು. ಆಗ ದ್ವಿತೀಯ ನಾಯಕಿಯ ಕಡೆಗೆ ಹೋದ ನಾಯಕನು ಪುನಃ ಮೊದಲನೆಯ ಕಮಲವು ಮಂದಮಾರುತದಿಂದ ಮೆಲ್ಲಗೆ ಚಲಿಸಿತು. ಅದನ್ನು ಹಿಂದಿರುಗಿ ತನ್ನ ಕಡೆಗೆ ಬರುತ್ತಿರುವ ನಾಯಕನನ್ನು ನೋಡಿ ಕೋಪದಿಂದ " ಬೇಡ ಬೇಡ" ಎಂದು ಹೇಳುತ್ತಾ ಮುಖವನ್ನು ಮೊದಲನೆಯ

ನಾಯಕಿಯು ಆಡಿಸುತ್ತಿರುವಂತೆಯೂ ಆದರೂ ನಾಯಕನ ಮೇಲೆ ತನಗಿರುವ ಆಸೆಯಿಂದ ಮೆಲ್ಲಮೆಲ್ಲನೆ ಮುಖವನ್ನು ಆಡಿಸುತ್ತಿರುವಂತೆಯೂ ಕಲ್ಪಿಸಿದಳು. ಆ ಭ್ರಮರವು ಮೊದಲನೆಯ ಪುಷ್ಪದ ಸುತ್ತಲೂ ಪುನಃ ಪುನಃ ತಿರುಗುತ್ತಾ ಝೇಂಕಾರವನ್ನು ಮಾಡುತ್ತಾ ಆ ಪುಷ್ಪದ ಮೇಲೆ ಬಂದು ಕುಳಿತುಕೊಂಡಿತು. ಇದನ್ನು ಆ ನಾಯಕನು ಮೊದಲನೆಯ ನಾಯಕಿಯನ್ನು ಪುನಃ ಪುನಃ ಪ್ರಾರ್ಥಿಸಿ ಚಮತ್ಕಾರವಾದ ಮಾತುಗಳಿಂದ ಅವಳನ್ನು ಸಮಾಧನಾಪಡಿಸಿದಂತೆಯೂ ಕೊನೆಗೆ ಅವಳ ಮುಖಕ್ಕೆ ಮುದ್ದು ಕೊಟ್ಟಂತೆಯೂ ಕಲ್ಪಿಸಿದಳು. ಶ್ರೀಕೃಷ್ಣದೇವನ್ನು ತುಂಬಾ ಕನಿಕರವಾಗುವ ಮಾತುಗಳಿಂದ ಪ್ರಾರ್ಥಿಸಿದಳು.

" ಓ ನಾಥ! ನೀನು ಸಜ್ಜನರಿಗೆ ನಾಥನಲ್ಲವೇ? ಸಜ್ಜನರಾದ ನಮ್ಮನ್ನು ಕೈಬಿಡಬಹುದೇ? ದಯಾಳುಗಳಲ್ಲಿ ಅಗ್ರೇಸರನಾದ ನೀನು ನಮ್ಮಲ್ಲಿ ದಯೆಯನ್ನು ತೋರಿಸಬಾರದೇ? ಸಾಧುಗಳಿಗೆ ವಶನಾಗಿರುವ ನೀನು ಸಾಧುಗಳಾದ ನಮಗೆ ವಶನಾಗಬೇಡವೇ? ನೋಡು. ಭ್ರಮರರಾಜನು ತನ್ನ ಮೊದಲನೆಯ ಪತ್ನಿಗೆ ಕೋಪದಿಂದ ಮುಖವು ಬಾಡಿತು. ಅವಳನ್ನು ಸಮಾಧಾನ ಮಾಡಬೇಕೆಂದು ಹಿಂದಿರುಗಿದ್ದು. ಅವಳನ್ನುಬಿಟ್ಟುಹೋದುದರಿಂದ ಅಪರಾಧಿಯಾದ ಆ ರಾಜನು ಹೆದರುತ್ತಾ ಹಿಂದೆ ಸರಿದಳು. ಅವಳನ್ನು ಪುನಃ ಪುನಃ ಪ್ರಾರ್ಥಿಸಿದ ರಾಜನು ಕೊನೆಗೆ ಸಮಾಧಾನ ಪಡಿಸಿ ಚುಂಬಿಸಿದನು. ನೋಡಿದಿಯಾ ! ಕುಪಿತಳಾದ ಪತ್ನಿಯನ್ನು ಸಮಾಧಾನಪಡಿಸಿ ಅವನು ಚುಂಬಿಸಿದನು. ನಾವು ನಿನ್ನಲ್ಲಿ ಕುಪಿತರಾಗಲಿಲ್ಲ. ನಿನ್ನ ಸಂಗಕ್ಕಾಗಿ ಕಾದಿರುವರು. ಕೃಪಾಸಮುದ್ರನಾದ ನೀನು ನಮ್ಮನ್ನು ಬಿಡಬಹುದೇ? " ಇದು ಆ ಗೋಪಿಕಾಸ್ತ್ರೀಯು ಹೇಳಿದ ಮಾತು.

## ಸರೋವರವನ್ನು ಪ್ರಾರ್ಥಿಸಿದ್ದು

ಪದ್ಮಗಳಿಂದ ಅಲಂಕೃತನಾದ ಸರೋವರವನ್ನು ನೋಡಿದ ಗೋಪಿಕಾಸ್ತ್ರೀಯು ಆ ಸರೋವರವನ್ನು ಪ್ರಾರ್ಥಿಸುತ್ತಾಳೆ. " ಎಲೈ ಸರೋವರವೇ!, ನಮ್ಮ ಪತಿಯಾದ ಶ್ರೀಕೃಷ್ಣದೇವನ್ನು ಪುಷ್ಟವಾದ ಭುಜಗಳಿಂದ ಯುಕ್ತನಾಗಿರುವನು. ಅವನೇ ನಾರಾಯಣನು. ಅವನು ನಿನ್ನ ಹೊಟ್ಟೆಯಲ್ಲಿ ವಾಸಿಸುತ್ತಿರುವನು. ಈ ವಿಷಯದಲ್ಲಿ "ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ । ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ ॥

ಎಂಬ ಪ್ರಮಾಣವಚನವು ಆಧಾರವಾಗಿದೆ. " ನ ರೀಯತೇ ಇತಿ ನರಃ" ಅಂದರೆ " ಸಕಲ ವಸ್ತುಗಳು ನಶಿಸುತ್ತಿರುವ ಪ್ರಳಯಕಾಲದಲ್ಲಿಯೂ ನಾಶವನ್ನು ಪಡೆಯದಿರುವ ನಾರಾಯಣನು" ನರ ಎಂದು ಹೇಳಲ್ಪಡುವನು. " ನರಸ್ಯ ಇಮೇ ನಾರಾಃ" ಅಂದರೆ " ನರ ಎಂಬ ಹೆಸರಿನಿಂದ ಯುಕ್ತನಾಗಿರುವ ನಾರಾಯಣನಿಂದ ಮೊದಲು ಸೃಷ್ಟಿಸಲ್ಪಟ್ಟಿರುವ ನೀರು" ನಾರ ಎಂದು ಹೇಳಲ್ಪಡುತ್ತಿದೆ. " ನಾರಾಃ ಅಯನಾಃ ಯಸ್ಯ ಸಃ" ಅಂದರೆ " ತನ್ನಿಂದ ಮೊದಲು ಸೃಷ್ಟಿಸಲ್ಪಟ್ಟ ನೀರಿನಲ್ಲಿ ಮಲಗಿದವನು" ನಾರಾಯಣ ಎಂದು ಹೇಳಲ್ಪಡುವನು" ಎಂದು ಈ ಪ್ರಮಾಣವು ತಿಳಿಸುತ್ತದೆ.

" ನೀರಿನಲ್ಲಿ ಮಲಗಿರುವುದರಿಂದ "ನಾರಾಯಣ" ಎಂದು ಪ್ರಸಿದ್ಧನಾಗಿರುವ ಆ ಶ್ರೀಹರಿಯೇ ಈಗ "ಶ್ರೀಕೃಷ್ಣ" ಎಂಬ ಹೆಸರಿನಿಂದ ಅವತರಿಸಿರುವನು. ನಾರಾಯಣನು ಮಲಗಿರುವ ನೀರು ನಿನ್ನಲ್ಲಿದೆ. ಆದ್ದರಿಂದ

ನಾರಾಯಣನ ಅವತಾರನಾಗಿರುವ ಶ್ರೀಕೃಷ್ಣದೇವನೂ ನಿನ್ನಲ್ಲಿರುವ ನೀರಿನೊಳಗೆ ಯಾರಿಗೂ ಕಾಣಿಸದಂತೆ ಮಲಗಿರಬೇಕು. ಆದ್ದರಿಂದಲೇ ನಿನಗೆ ತಿಳಿಯದಿರಬೇಕು. ಸ್ವಲ್ಪ ಹುಡುಕಿ ನೋಡು. ಅವನು ಕಣ್ಣಿಗೆ ಬೀಳುವನು. ಅವನನ್ನು ನಮಗೆ ತೋರಿಸು ಅವನಲ್ಲಿ ನಮ್ಮ ದುರವಸ್ಥೆಯನ್ನು ತಿಳಿಸು.''

# ಸರೋವರವನ್ನು ಹೆದರಿಸಿದ್ದು

''ನೀನು ಶ್ರೀಕೃಷ್ಣದೇವನನ್ನು ನಮಗೆ ತೋರಿಸಲಾರೆಯಾ? ಅಥವಾ ಶ್ರೀಕೃಷ್ಣದೇವನಿಗೆ ನಮ್ಮ ದುರವಸ್ಥೆಯನ್ನು ತಿಳಿಸಲಾರೆಯಾ? ಹಾಗಾದರೆ ನಿನ್ನನ್ನು ನಾವೆಲ್ಲರೂ ಶಿಕ್ಷಿಸುವೆವು. ಮಾಧುರ್ಯವೇ ನಿನ್ನ ಸ್ವಭಾವವೆಂದು ಸರ್ವರೂ ಹೊಗಳುತ್ತಿರುವರು. ನೀನು ಶುಭ್ರವಾದ ಬಿಳಿಯ ಬಣ್ಣದಿಂದ ಯುಕ್ತಳಾಗಿರುವಿ. ತುಂಬಾ ತಣ್ಣಗಿರುವಿ. ಇಂದಿನಿಂದ ಆ ಮಾಧುರ್ಯಮುಂತಾದ ಗುಣಗಳು ಇಲ್ಲದಂತಾಗುವವು.''

''ನಿನ್ನ ತೀರದಲ್ಲಿ ನಾವೆಲ್ಲರೂ ಕುಳಿತು ಅಳುವೆವು. ನಮ್ಮ ಕಣ್ಣುಗಳಿಂದ ಧಾರೆ ಧಾರೆಯಾಗಿ ಕಣ್ಣೀರುಗಳು ಸುರಿಯುತ್ತವೆ. ಆ ಕಣ್ಣೀರುಗಳು ಬಿಸಿ ಬಿಸಿಯಾಗಿ ಕಾಡಿಗೆಯಿಂದ ಕಪ್ಪುಬಣ್ಣವು ಗಳ್ಳ ಉಪ್ಪಾಗಿಯೂ ಇರುತ್ತವೆ. ನಿನ್ನ ಪ್ರವಾಹದಲ್ಲಿರುವ ನೀರಿನೊಡನೆ ನಮ್ಮ ಕಣ್ಣೀರುಗಳ ಪ್ರವಾಹವು ಸೇರುತ್ತದೆ. ಇದರಿಂದ ನಿನ್ನ ನೀರುಗಳೆಲ್ಲವೂ ಬಿಸಿಯಾಗಿಯೂ ಕಪ್ಪುಬಣ್ಣವುಗಳಾಗಿಯೂ ಉಪ್ಪಾಗಿಯೂ ಆಗುತ್ತವೆ. ಹೀಗಾದ ಮೇಲೆ ನಿನ್ನಲ್ಲಿರುವ ಸ್ವಾಭಾವಿಕವಾದ ಮಾಧುರ್ಯ ಗುಣ ಮುಂತಾದ ಗುಣಗಳು ನಶಿಸುವುದಿಲ್ಲವೇ?''

# ಸರೋವರಕ್ಕೆ ಆಸೆಯನ್ನು ತೋರಿಸಿದ್ದು

'' ಓ ಪದ್ಮಿನಿಯೇ ನಮಗೆ ಶ್ರೀಕೃಷ್ಣದೇವನ್ನು ತೋರಿಸಿದರೆ ನಿನಗೆ ಬರುವ ಲಾಭವನ್ನು ಈಗ ತಿಳಿಸುವೆವು ಶ್ರೀಕೃಷ್ಣದೇವನನ್ನು ತೋರಿಸಿದರೆ ಅವನೊಡನೆ ನಿನ್ನ ಜಲದಲ್ಲಿ ವಿಹರಿಸುವೆವು. ಅವನ ಸಂಪರ್ಕದಿಂದ ನಿನ್ನ ಜಲದಲ್ಲಿ ಯಾವ ದೋಷವೂ ಇಲ್ಲದಂತೆ ಮಾಡುವೆವು. ನಮ್ಮ ಮೊಲೆಗಳಲ್ಲಿರುವ ಕುಂಕುಮಗಳು ಜಲಕ್ರೀಡಾಕಾಲದಲ್ಲಿ ನಿನ್ನ ನೀರಿನಲ್ಲಿ ಮಿಶ್ರಿತವಾಗುವವು. ಆ ಕುಂಕುಮಗಳಿಂದ ನಿನ್ನ ಜಲವು ಅಲಂಕೃತವಾಗುವಂತೆ ಮಾಡುವೆವು. ನಿನ್ನ ನೀರಿನಲ್ಲಿ ಕುತ್ತಿಗೆ ವರೆಗೆ ಮುಳುಗುವೆವು. ನಮ್ಮ ಸುಂದರವಾದ ಮುಖಗಳು ಮಾತ್ರ ನೀರಿನ ಮೇಲೆ ಕಾಣಿಸುವವು. ಆ ಮುಖಗಳು ಶ್ರೀಕೃಷ್ಣದೇವನ ಸಮಾಗಮವು ನಮಗೆ ಏರ್ಪಟ್ಟಿದ್ದರಿಂದ ತುಂಬಾ ಅರಳುವವು. ಆ ಅರಳಿದ ಮುಖಗಳು ಅರಳಿದ ಕಮಲಗಳಂತೆ ನಿನ್ನ ನೀರಿನ ಮೇಲ್ಭಾಗವನ್ನು ಅಲಂಕರಿಸುವವು. ಪರಬ್ರಹ್ಮಸ್ವರೂಪಿಯಾದ ಶ್ರೀಕೃಷ್ಣದೇವನು ನಮ್ಮೊಡನೆ ಮಾಡುತ್ತಿರುವ ರಾಸಕ್ರೀಡೆಯನ್ನು ನೋಡುವುದಕ್ಕಾಗಿ ಬ್ರಹ್ಮ ಮುಂತಾದ ಎಲ್ಲಾ ದೇವತೆಗಳು ಆಕಾಶಮಾರ್ಗದಿಂದ ಬಂದು ಶ್ರೀಕೃಷ್ಣದೇವನ ಮೇಲೆ ಪುಷ್ಪದ ಮಳೆಯನ್ನು ಸುರಿಸಿದರು. ಆ ಪುಷ್ಪಗಳಿಂದ ನಿನ್ನ ಜಲವು ಎಲ್ಲೆಡೆಗಳಲ್ಲಿಯೂ ತುಂಬುವಂತೆ ಮಾಡುವೆವು.

# ಸರೋವರವನ್ನು ಧಿಕ್ಕರಿಸಿದ್ದು

'' ಎಲೈ ಪದ್ಮಿನಿಯೇ ನೀನು ಶ್ರೀಕೃಷ್ಣದೇವನನ್ನು ನಮಗೆ ತೋರಿಸಿದರೆ ನಿನಗೆ ಮಾಡುವ ಉಪಕಾರವನ್ನು ಹೇಳಿದೆವು. ಇಷ್ಟು ಉಪಕಾರವನ್ನು ಮಾಡುವುದಾಗಿ ವಾಗ್ದಾನ ಮಾಡಿದರೂ ನೀನು ಶ್ರೀಕೃಷ್ಣದೇವನನ್ನು

ತೋರಿಸಲಿಲ್ಲ. ಇರಲಿ, ಇರಲಿ, ಐಶ್ವರ್ಯಮದದಿಂದ ಯುಕ್ತರಾದವರು ಇನ್ನೊಬ್ಬರ ಮಾತುಗಳನ್ನೂ ಕೂಡ ಕೇಳುವುದಿಲ್ಲ. ಹೀಗಿರುವಾಗ ಇನ್ನೊಬ್ಬರೊಡನೆ ಮಾತಾಡುವರೇ? ಅದರಂತೆ ನೀನು ನಿನ್ನ ಪ್ರವಾಹವೇಗದಿಂದ ಯಾರಿಗೂ ಇನ್ನೊಬ್ಬರ ಮಾತುಗಳೇ ಕೇಳದಂತೆ ಮಾಡುತ್ತಿರುವಿ. ಯಾರಿಗೂ ಇತರರ ಮಾತುಗಳೇ ಕೇಳದಂತೆ ಮಾಡುತ್ತಿರುವ ನೀನು ಸ್ವತಃ ನಮ್ಮ ಪ್ರಾರ್ಥನೆಯನ್ನು ಕೇಳುವಿಯಾ? ಸ್ವತಃ ನಮ್ಮ ಪ್ರಾರ್ಥನೆಯನ್ನು ಕೇಳದಿರುವ ನೀನು ನಮ್ಮೊಡನೆ ಮಾತಾಡುವಿಯಾ? ನೀನು ಮಾತಾಡಲಾರೆ. ದುರಹಂಕಾರಿಯಾದ ನಿನ್ನಲ್ಲಿ ಪ್ರಾರ್ಥಿಸುತ್ತಿರುವ ನಮ್ಮಷ್ಟು ಮೂರ್ಖರು ಯಾರೂ ಇಲ್ಲ."

" ಎಲೈ ಪದ್ಮಿನಿಯೇ! ನಿನ್ನಲ್ಲಿ ಅಸಂಖ್ಯವಾದ ಪದ್ಮಗಳಿವೆ. ಆ ಪದ್ಮಗಳೆಲ್ಲವೂ ನಿನ್ನ ಅಸಂಖ್ಯವಾದ ಮುಖಗಳಂತಿವೆ. ನಿನ್ನ ಈ ಅಸಂಖ್ಯವಾದ ಮುಖಗಳೂ ಭ್ರಮರಗಳಿಂದ ತುಂಬಿವೆ. ಆ ಭ್ರಮರಗಳು ನಿನ್ನ ಪತಿಗಳಂತಿವೆ. ಈ ಭ್ರಮರಗಳೆಂಬ ಪತಿಗಳು ನಿನ್ನ ಮುಖಗಳೆಂಬ ಕಮಲಗಳನ್ನು ಪುನಃ ಪುನಃ ಮುದ್ದು ಕೊಡುವಂತೆ ಪುನಃ ಪುನಃ ಕಮಲಗಳನ್ನು ಮುಟ್ಟಿ ಮುಟ್ಟಿ ತಿರುಗುತ್ತಿವೆ. ಇದರಿಂದ ಪತಿಗಳಿಂದ ಮುದ್ದಾಡಲ್ಪಡುತ್ತಿರುವ ಮುಖಸಮೂಹಗಳಿಂದ ಯುಕ್ತಳಾದ ನೀನು ಆನಂದಪರವಶಳಾಗಿರುವಿ. ನೀನು ಪತಿಯಿಂದ ವಿರಹದುಃಖವನ್ನು ಅನುಭವಿಸಿದವಳೇ ಅಲ್ಲ. ಹೀಗಿರುವಾಗ ನಿನಗೆ ಪತಿವಿರಹದಿಂದ ನಮಗೆ ಏರ್ಪಡುತ್ತಿರುವ ದುಃಖದ ಪರಿಜ್ಞಾನವಿದೆಯೇ? ಬಂಜೆಯು ಪ್ರಸವದುಃಖವನ್ನು ಅರಿಯುವಳೇ? ಇಲ್ಲ. ಇಲ್ಲ. ನಮ್ಮ ದುಃಖವನ್ನು ತಿಳಿಯದಿರುವ ನೀನು ನಮ್ಮ ಪ್ರಶ್ನೆಗೆ ಉತ್ತರವನ್ನು ಕೊಡದಿರುವುದೂ ನಮ್ಮ ಪತಿಯನ್ನು ತೋರಿಸದಿರುವುದೂ ಯುಕ್ತವೇ ಸರಿ. ಆದ್ದರಿಂದ ನಿನ್ನನ್ನು ಪ್ರಾರ್ಥಿಸುತ್ತಿರುವ ನಾವು ಮೂರ್ಖರೇ ಆಗಿರುವೆವು. ನೀನು ಹೇಳದಿದ್ದರೆ ಬೇಡ. ಮುಂದುವರಿಯುವೆವು."

## ಕಮಲಗಳನ್ನು ಪ್ರಾರ್ಥಿಸಿದ್ದು

ಈ ಸ್ತ್ರೀಯರು ಮುಂದೆ ಹೊರಟರು, ಕಮಲಗಳನ್ನು ನೋಡಿದರು. ಅವುಗಳನ್ನು ನೋಡಿ ಪ್ರಾರ್ಥಿಸಿದರು. " ಎಲೈ ಪದ್ಮಗಳಿರಾ, ಕ್ಷೀರಸಮುದ್ರರಾಜನ ಕನ್ಯೆಯಾಗಿರುವ ಲಕ್ಷ್ಮೀದೇವಿಯ ಅರಸನಾದ ಶ್ರೀಕೃಷ್ಣದೇವನು ನಿಮ್ಮ ವನಗಳಲ್ಲಿ ವಾಸಿಸುತ್ತಿರುವುದಾಗಿ ಸಜ್ಜನರೆಲ್ಲರೂ ಹೇಳುತ್ತಿರುವರು."

**ತುಲಸೀಕಾನನಂ ಯತ್ರ ಯತ್ರ ಪದ್ಮವನಾನಿ ಚ ।**
**ವಸಂತಿ ವೈಷ್ಣವಾಃ ಯತ್ರ ತತ್ರ ಸನ್ನಿಹಿತೋ ಹರಿಃ ॥**

ಅಂದರೆ " ಎಲ್ಲೆಲ್ಲಿ ತುಲಸಿಯ ವನಗಳೂ ಪದ್ಮವನಗಳೂ ವೈಷ್ಣವರ ಸಮೂಹಗಳೂ ಇವೆಯೋ ಅಲ್ಲಲ್ಲಿ ಶ್ರೀಹರಿಯು ಸನ್ನಿಹಿತನಾಗಿರುವನು" ಎಂದು ಅವರೆಲ್ಲರೂ ಘೋಷಿಸುತ್ತಿಲ್ಲವೇ? ಆ ಸಜ್ಜನರ ಮಾತುಗಳು ಸುಳ್ಳಾಗುವವೇ? ಇಲ್ಲ, ಇಲ್ಲ, ನಿಶ್ಚಯವಾಗಿಯೂ ನಿಮ್ಮ ವನಗಳಲ್ಲಿ ಶ್ರೀಕೃಷ್ಣದೇವನ್ನು ವಾಸಿಸುತ್ತಿರುವನು."

" ಎಲೈ ಪದ್ಮಗಳಿರಾ, ನಿಮ್ಮ ವನಗಳಲ್ಲಿ ವಾಸಿಸುತ್ತಿರುವ ಶ್ರೀಕೃಷ್ಣದೇವನಿಗೆ ನಮ್ಮ ದುರವಸ್ಥೆಯನ್ನು ತಿಳಿಸಲು ಇಷ್ಟವಿಲ್ಲದಿದ್ದರೆ ನೀವು ಇನ್ನೊಂದು ಕಾರ್ಯವನ್ನು ಮಾಡಿರಿ. ಬ್ರಹ್ಮದೇವನಿಗೆ "ಪದ್ಮಾಸನ" ಅಂದರೆ ಪದ್ಮದಲ್ಲಿ ಕುಳಿತಿರುವವನು ಎಂಬ ಹೆಸರಿದೆ. ಆ ಹೆಸರು ನಿಮ್ಮ ಮೇಲೆ ಬ್ರಹ್ಮದೇವನು ಕುಳಿತಿರುವುದಾಗಿ ತಿಳಿಸುತ್ತಿದೆ.

ಆದ್ದರಿಂದ ನೀವು ಅರಳಿರುವಾಗ ನಿಮ್ಮ ಮೇಲೆ ಕುಳಿತಿರುವ ಬ್ರಹ್ಮದೇವನು ನೀವು ಮೊಗ್ಗಾದಾಗ ನಿಮ್ಮ ಹೊಟ್ಟೆಯೊಳಗೆ ಸೇರುವನು. ಆಗ ಯಾರೂ ಇರುವುದಿಲ್ಲ. ಅಂತಹ ಸಂದರ್ಭವನ್ನು ನೋಡಿಕೊಂಡು ಗುಟ್ಟಾಗಿ ನಮ್ಮ ಪ್ರಾರ್ಥನೆಯನ್ನು ಬ್ರಹ್ಮದೇವನಿಗೆ ತಿಳಿಸಿರಿ."

"ಸರ್ವರಿಗೂ ಬ್ರಹ್ಮದೇವನು ಅವರವರ ಹಣೆಯಲ್ಲಿ ಅವರವರ ಭವಿಷ್ಯವನ್ನು ಬರೆದಿರುವನು. ನಾವು ಇನ್ನು ಎಷ್ಟು ದಿನಗಳ ವರೆಗೆ ಬದುಕಬೇಕೆಂದು ಬರೆದಿರುವನೋ ಆ ಹೆಚ್ಚಿನ ಆಯುಸ್ಸಿಗೆ ಸಂಬಂಧಿಸಿದ ಬರಹವನ್ನು ಅಳಿಸಿಬಿಡುವಂತೆ ಅವನಲ್ಲಿ ಪ್ರಾರ್ಥಿಸಿರಿ. ಇನ್ನು ಬದುಕಲಾರೆವು. ಇಂದೇ ನಮ್ಮ ಆಯುಸ್ಸು ಮುಗಿಯಲಿ. ಇದು ಬ್ರಹ್ಮದೇವನಲ್ಲಿ ನಮ್ಮ ಪ್ರಾರ್ಥನೆ. ಈ ಪ್ರಾರ್ಥನೆಯನ್ನು ತಿಳಿಸಿರಿ.

ಇಷ್ಟು ಪ್ರಾರ್ಥಿಸಿದರೂ ಉತ್ತರವನ್ನೂ ಕೊಡದಿರುವ ಕಮಲಗಳನ್ನು ನೋಡಿ ಒಬ್ಬ ಗೋಪಿಕಾಸ್ತ್ರೀಯು ಅವುಗಳು ಉತ್ತರವನ್ನು ಕೊಡದಿರುವುದಕ್ಕೆ ಕಾರಣವನ್ನು ಹೇಳುತ್ತಾ ಮುಂದೆ ಹೊರಡುವಂತೆ ಹೇಳುತ್ತಿರುವಳು.

" ಎಲೈ ಸಖಿಯರಿರಾ, ಈ ಕಮಲಗಳು ನಮ್ಮ ಶತ್ರುಗಳೊಡನೆ ಸಂಬಂಧವನ್ನು ಇಟ್ಟುಕೊಂಡಿವೆ, (೧) ಲಕ್ಷ್ಮೀದೇವಿಯು ಶ್ರೀಕೃಷ್ಣದೇವನ ಪತ್ನಿಯಾಗಿರುವಳು. ನಾವೆಲ್ಲರೂ ಶ್ರೀಕೃಷ್ಣದೇವನ ಪತ್ನಿಯರಾಗಬೇಕೆಂದು ಬಯಸುತ್ತಿರುವೆವು. ಆದ್ದರಿಂದ ಒಬ್ಬನನ್ನೇ ಪತಿಯಾಗಿ ಬಯಸುತ್ತಿರುವ ನಮಗೆಲ್ಲರಿಗೂ ಲಕ್ಷ್ಮೀದೇವಿಯು ಸವತಿಯೆನಿಸುವಳು. ಅವಳಿಗೆ "ಕಮಲಾ" ಎಂದು ಹೆಸರು. ಈ ಪದ್ಮಗಳಿಗೂ "ಕಮಲ" ಎಂದು ಹೆಸರು. ನಮ್ಮ ಸವತಿಯಾದ ಲಕ್ಷ್ಮೀದೇವಿಯ "ಕಮಲ" ಎಂಬ ಹೆಸರಿನಿಂದ ಯುಕ್ತವಾಗಿರುವ ಈ ಪದ್ಮಗಳು ಸವತಿಯಂತೆ ನಡೆದುಕೊಳ್ಳ ಬೇಡವೇ? ಆದ್ದರಿಂದ ಈ ಕಮಲಗಳು ಸವತಿಯಂತೆ ನಮ್ಮನ್ನು ದ್ವೇಷಿಸುತ್ತಿವೆ."

(೨) ನಮ್ಮ ಸವತಿಯಾದ ಲಕ್ಷ್ಮೀದೇವಿಯು ಯಾವಾಗಲೂ ಈ ಕಮಲಗಳಲ್ಲಿ ಕುಳಿತಿರುವಳು. ಆದ್ದರಿಂದಲೇ "ಪದ್ಮಾಲಯಾ" ಅಂದರೆ " ಪದ್ಮದಲ್ಲಿ ಕುಳಿತಿರುವವಳು" ಎಂದು ಲಕ್ಷ್ಮೀದೇವಿಗೆ ಹೆಸರು ಇರುತ್ತದೆ. ಆದ್ದರಿಂದ ನಮ್ಮ ಸವತಿಯಾದ ಲಕ್ಷ್ಮೀದೇವೀಯ ಮನೆಯಾಗಿರುವ ಈ ಕಮಲಗಳು ನಮಗೆ ವಿರೋಧಿಗಳಲ್ಲವೇ?

(೩) ಮನ್ಮಥನು ಯಾವಾಗಲೂ ನಮ್ಮನ್ನು ಸಂಕಟಪಡಿಸುತ್ತಿರುವ ವೈರಿಯಾದವನು. ಅವನು ಪತಿವಿರಹದಿಂದ ಪೀಡಿತರಾಗಿರುವ ನಮ್ಮನ್ನು ಐದು ವಿಧವಾದ ಬಾಣಗಳಿಂದ ಪೀಡಿಸುತ್ತಿರುವನು.

**ಅರವಿಂದಮಶೋಕಂ ಚ ಚೂತಂ ಚ ನವಮಲ್ಲಿಕಾ।**
**ನೀಲೋತ್ಪಲಂ ಚ ಪಂಚೈತೇ ಪಂಚಬಾಣಸ್ಯ ಸಾಯಕಾಃ॥**

ಅಂದರೆ "(೧) ಕೆಂಪುಕಮಲ, (೨) ನೀಲಕಮಲ, (೩) ಅಶೋಕಪುಷ್ಪ, (೪) ಮಾವಿನಪುಷ್ಪ (೫) ಹೊಸಮಲ್ಲಿಗೆಪುಷ್ಪ, ಹೀಗೆ ಮನ್ಮಥನಿಗೆ ಐದು ಬಾಣಗಳು" ಎಂದು ಮನ್ಮಥನ ಐದು ಬಾಣಗಳು ಅತಿ ಪ್ರಸಿದ್ಧವಾಗಿವೆ. ಈ ಐದು ಬಾಣಗಳ ಮಧ್ಯದಲ್ಲಿ "ಅರವಿಂದ" "ನೀಲೋತ್ಪಲ" ಎಂಬ ಎರಡು ಬಾಣಗಳ ರೂಪದಿಂದ ಈ ಕಮಲಗಳು ನಮ್ಮೆಲ್ಲರನ್ನೂ ಪೀಡಿಸುತ್ತಿವೆ. ಮನ್ಮಥನಿಂದ ಪ್ರಯೋಗಿಸಲ್ಪಟ್ಟು ನಮ್ಮನ್ನು ಪೀಡಿಸುತ್ತಿರುವ ಈ ಕಮಲಗಳು ನಮ್ಮ ವಿರೋಧಿಗಳಲ್ಲವೇ? " ಹೀಗೆ ಮೂರು ವಿಧದಿಂದ ನಮ್ಮ ಶತ್ರುಗಳಾಗಿರುವ ಈ ಕಮಲಗಳು

ನಮಗೆ ಯಾವ ವಿಧವಾದ ಉಪಕಾರವನ್ನೂ ಮಾಡಲಾರವು. ಆದ್ದರಿಂದ ಇಲ್ಲಿಂದ ಬೇರೆ ಸ್ಥಳಕ್ಕೆ ಹೋಗೋಣ'' ಎಂದಳು. ಇದನ್ನು ಕೇಳಿದ ಸರ್ವರೂ ಮುಂದೆ ಹೊರಟರು. ಮಾವಿನ ಗಿಡ ಮುಂತಾದ ಗಿಡಗಳನ್ನು ನೋಡಿದರು. ಅವುಗಳೆಲ್ಲವನ್ನೂ ಪ್ರಾರ್ಥಿಸಲು ಆರಂಭಿಸಿದರು.

## ಮಾವಿನಮರ ಮುಂತಾದ ಮರಗಳನ್ನು ಪ್ರಾರ್ಥಿಸಿದ್ದು

"ಎಲೈ ಮಾವಿನಮರವೇ, ಎಲೈ ತೆಂಗಿನಮರವೇ, ಎಲೈ ಹಲಸಿನಮರವೇ, ಎಲೈ ಹುಣಸೇಮರ ಮುಂತಾದ ಮರಗಳೇ, ನೀವೆಲ್ಲರೂ ಯಾವಾಗಲೂ ಪರೋಪಕಾರವನ್ನು ಮಾಡುತ್ತಿರುವಿರಿ. ಪುಷ್ಪಗಳಿಂದಲೂ ಫಲಗಳಿಂದಲೂ ತೊಗಟೆಗಳಿಂದಲೂ ಎಲೆಗಳಿಂದಲೂ ನೆರಳುಗಳಿಂದಲೂ ಚಿಗುರುಗಳಿಂದಲೂ ಪೊಟರೆಗಳಿಂದಲೂ ಸಕಲ ಜನರನ್ನೂ ಪೋಷಿಸುತ್ತಿರುವಿರಿ. ಶ್ರೀಕೃಷ್ಣದೇವನು ನಿಮ್ಮ ಮಧ್ಯದಲ್ಲಿ ನಡೆದುಕೊಂಡು ಹೋಗಿರುವನು. ಅವನು ಹೋದ ಹಾದಿಯನ್ನು ಹೇಳಿರಿ. ಹಾಗೆ ಹೇಳಿದರೆ ಆ ಹಾದಿಯನ್ನು ಹಿಡಿದು ಹೋಗುವೆವು. ಅವನನ್ನು ಕಂಡು ಹಿಡಿಯುವೆವು'' ಎಂದರು. ಆದರೆ ಆ ಮರಗಳು ಮಾತಾಡಲಿಲ್ಲ. ತುಂಬಾ ಕುಪಿತರಾದರು. ಆ ಮರಗಳನ್ನು ಧಿಕ್ಕರಿಸಲು ಆರಂಭಿಸಿದರು.

## ಹುಣಸೇಮರವನ್ನು ಧಿಕ್ಕರಿಸಿದ್ದು

"ಎಲೈ ಹುಣಸೇಮರವೇ, ಕೆಲವರು ಕಠೋರಸ್ವಭಾವದಿಂದ ಯುಕ್ತರಾಗಿರುವರು. ಆದರೆ ಕೊನೆಗೆ ಅತ್ಯಂತ ಮೃದುಸ್ವಭಾವದಿಂದ ಯುಕ್ತರಾಗುವರು. ಮತ್ತೆ ಕೆಲವರು ಮೊದಲು ಮೃದುಸ್ವಭಾವವುಳ್ಳವರಂತೆ ಕಂಡರೂ ಕೊನೆಗೆ ಕಠೋರ ಸ್ವಭಾವವನ್ನು ವ್ಯಕ್ತಪಡಿಸುವರು. ನೀನು ಹಾಗಲ್ಲ. ಮೊದಲಿನಿಂದ ಕೊನೆಯ ವರೆಗೂ ಕಠೋರಸ್ವಭಾವದಿಂದಲೇ ಯುಕ್ತನಾಗಿರುವಿ. ನೀನು ಹುಟ್ಟುವಾಗಲೇ ಸೊಟ್ಟು ಸೊಟ್ಟಾಗಿರುವಿ. ನಿನ್ನ ಹಣ್ಣುಗಳೂ ವಕ್ರವಾಗಿರುತ್ತವೆ. ಮೊದಲಿನಿಂದ ಕೊನೆಯ ವರೆಗೂ ವಕ್ರಸ್ವಭಾದಿಂದ ಯುಕ್ತನಾಗಿರುವ ನೀನು ಪರೋಪಕಾರವನ್ನು ಮಾಡಲಾರೆ.''

"ಅದು ಮಾತ್ರವಲ್ಲ, ನಿನ್ನಲ್ಲಿರುವ ಒಂದು ಚಿಕ್ಕ ಕೋಲೂ ಸಹ ಚಿಕ್ಕ ಮಕ್ಕಳನ್ನು ಹೊಡೆಯುವುದಕ್ಕೆ ಉಪಯುಕ್ತವಾಗುತ್ತದೆ. ಚಿಕ್ಕಮಕ್ಕಳನ್ನು ಹೊಡೆದು ಹೊಟ್ಟೆ ಉರಿಸುತ್ತಿರುವ ಸ್ವಭಾವದಿಂದ ಯುಕ್ತನಾಗಿರುವ ನೀನು ನಮಗೆ ಉಪಕಾರವನ್ನು ಮಾಡುವುದು ಸಾಧ್ಯವೇ? ಇಲ್ಲ. ಇಲ್ಲ. ಆದ್ದರಿಂದ ನೀನು ಬಿದ್ದಿರು. ಮುಂದೆ ಹೋಗುವೆವು.''

## ತೆಂಗಿನ ಮರವನ್ನು ಧಿಕ್ಕರಿಸಿದ್ದು

''ಎಲೈ ತೆಂಗಿನಮರವೇ ಯಾರಿಗೂ ಯಾವ ವಿಧವಾದ ಉಪಕಾರವನ್ನು ಮಾಡದಿರುವ ಪರಮಲೋಭಿಯು ನೀನು. " ಮನುಷ್ಯರು ನಿನ್ನಲ್ಲಿರುವ ಫಲಗಳನ್ನು ಅಪಹರಿಸುವರು'' ಎಂಬ ಭಯದಿಂದ ಆಕಾಶವನ್ನು ಮುಟ್ಟುತ್ತಿರುವಷ್ಟು ಎತ್ತರದಲ್ಲಿರುವ ನಿನ್ನ ತಲೆಯಲ್ಲಿ ನಿನ್ನ ಫಲಗಳನ್ನು ಧರಿಸಿರುವಿ. ಇದರಿಂದ ನಿನ್ನ ಫಲಗಳನ್ನು ಮನುಷ್ಯರು ಸುಲಭವಾಗಿ ತೆಗೆದುಕೊಳ್ಳಲು ಸಾಧ್ಯವಿಲ್ಲ.

"ಪಕ್ಷಿಗಳು ಆಕಾಶಮಾರ್ಗದಿಂದ ನಿನ್ನ ಫಲಗಳನ್ನು ಸುಲಭವಾಗಿ ಸಮೀಪಿಸಬಹುದು. ದಪ್ಪವಾದ ಸಿಪ್ಪೆಯೂ ಸಿಪ್ಪೆಯೊಳಗೆ ಗಟ್ಟಿಯಾದ ಕರಟವೂ ಕರಟದೊಳಗೆ ನಿನ್ನ ಫಲದ ತಿರುಳೂ ಇರುತ್ತದೆ. ಆ ತಿರುಳನ್ನು

ತಿನ್ನ ಬೇಕಾದರೆ ಅದರ ಮೇಲಿರುವ ಕರಟವನ್ನೂ ಕರಟದ ಮೇಲಿರುವ ದಪ್ಪವಾದ ಸಿಪ್ಪೆಯನ್ನು ತಿರುಳಿನಿಂದ ಬೇರ್ಪಡಿಸಬೇಕಾಗುತ್ತದೆ. ಇಷ್ಟು ಕಾರ್ಯವನ್ನು ಬರೇ ಕೊಕ್ಕಿನಿಂದಲೂ ಕಾಲುಗಳಿಂದಲೂ ಪಕ್ಷಿಗಳು ಮಾಡಲು ಶಕ್ತವಲ್ಲ. ಆದ್ದರಿಂದ ಪಕ್ಷಿಗಳು ನಿನ್ನ ಫಲಗಳನ್ನು ಮುಟ್ಟಿದರೂ ಅನುಭವಿಸಲು ಶಕ್ತವಾಗಲಾರವು."

" ಭೂಮಿಯಲ್ಲಿ ಸಂಚರಿಸುತ್ತಿರುವ ಮನುಷ್ಯರಿಗೂ ಆಕಾಶದಲ್ಲಿ ಸಂಚರಿಸುತ್ತಿರುವ ಪಕ್ಷಿಗಳಿಗೂ ಸುಲಭಸಾಧ್ಯವಲ್ಲದ ನಿನ್ನ ಫಲಗಳಿಂದ ಮನುಷ್ಯರಿಗೂ ಪಕ್ಷಿಗಳಿಗೂ ಉಪಕಾರವಿಲ್ಲವೆಂದು ನಾವು ಹೇಳಿದೆವು. ಅದು ಮಾತ್ರವಲ್ಲ. ಆ ಮಾರ್ಗದಲ್ಲಿ ಹೋಗುತ್ತಿರುವ ಪ್ರಯಾಣಿಕರ ತಲೆಯ ಮೇಲೆ ಬಿದ್ದು ಅವನನ್ನು ಕೊಲ್ಲುವ ಶಕ್ತಿಯೂ ನಿನ್ನ ಫಲಕ್ಕೆ ಇದೆ. ಇದರಿಂದ ಪರೋಪಾಕರವನ್ನು ಮಾಡದಿರುವ ನಿನ್ನ ಫಲಗಳು ಪರಾಪಕಾರವನ್ನು ಮಾಡುತ್ತಿರುವುದು ಪ್ರಸಿದ್ಧವಾಗಿದೆ."

"ತಲೆಯ ಮೇಲೆ ಬೀಳದಿದ್ದರೂ ನಿನ್ನ ಫಲಗಳು ಸುಲಭಸಾಧ್ಯವಿಲ್ಲ. ಕೊಂಬೆಗಳಲ್ಲದಿರುವ ನಿನ್ನ ಮರಗಳನ್ನು ತುಂಬಾ ಕಷ್ಟದಿಂದ ಏರಬೇಕು. ಫಲಗಳನ್ನು ಕೆಳಗೆ ಕೆಡಹಬೇಕು. ತುಂಬಾ ಜಾಗ್ರತೆಯಿಂದ ಮರದಿಂದ ಇಳಿಯಬೇಕು. ಕತ್ತಿ ಹಾರೆ ಮುಂತಾದವುಗಳ ಸಹಾಯದಿಂದ ತುಂಬಾ ಕಷ್ಟಪಟ್ಟು ಆ ಫಲಗಳ ಮೇಲಿರುವ ದಪ್ಪವಾದ ಸಿಪ್ಪೆಯನ್ನು ತೆಗೆಯಬೇಕು. ಆ ಮೇಲೆ ಕತ್ತಿ ಮುಂತಾದವುಗಳ ಸಹಾಯದಿಂದಲೇ ಆ ಫಲಗಳನ್ನು ಒಡೆಯಬೇಕು. ಆ ಮೇಲೆ ತುರಿಮಣೆ ಮುಂತಾದ ಆಯುಧಗಳ ಸಹಾಯದಿಂದ ಆ ಫಲಗಳ ತಿರುಳನ್ನು ತೆಂಗಿನಕಾಯಿ ಕರಟದಿಂದ ಬೇರ್ಪಡಿಸಬೇಕು. ಆಮೇಲೆಯೇ ಆ ಫಲಗಳ ತಿರುಳುಗಳನ್ನು ತಿನ್ನಬೇಕು."

"ನಿನ್ನ ಫಲಗಳನ್ನು ಸಂಪಾದಿಸುವುದೂ ಸಂಪಾದಿಸಿದ ಫಲಗಳನ್ನು ತಿನ್ನುವುದಕ್ಕೆ ಸಿದ್ಧವಾಗುವಂತೆ ಮಾಡುವುದೂ. ಬಲದಿಂದಲೇ ಸಾಧ್ಯವಾಗುತ್ತದೆ. ಬಲವಿಲ್ಲದವನಿಂದ ಸಾಧ್ಯವಾಗುವುದಿಲ್ಲ. ಆದ್ದರಿಂದ ಲೋಭಿಯಾದ ನಿನ್ನ ಫಲವು ಸಾಮಾನ್ಯ ಜನರಿಗೂ ಪಕ್ಷಿಗಳಿಗೂ ಉಪಯುಕ್ತವಾಗದೆ ಬಲಿಷ್ಠರ ವಶವಾಗುತ್ತದೆ. ನಮ್ಮಂತಹ ಅಬಲೆಯರಿಗೆ ಉಪಯುಕ್ತವಾಗಲಾರದು. ದುರ್ಬಲರಿಗೆ ಉಪಕಾರವಲ್ಲದಿರುವ ನಿನ್ನಿಂದ ಅಬಲೆಯರಾಗಿರುವ ನಮಗೇನು ಪ್ರಯೋಜನ?" ಎಂದು. ಮುಂದೆ ಹೊರಟರು. ಹಲಸಿನ ಮರವನ್ನು ನೋಡಿದರು. ಕೋಪದಿಂದ ಆ ಮರವನ್ನು ಧಿಕ್ಕರಿಸಿದರು.

## ಹಲಸಿನ ಮರವನ್ನು ಧಿಕ್ಕರಿಸಿದ್ದು

"ಎಲೈ ಹಲಸಿನಮರವೇ ನಿನ್ನ ಫಲಗಳನ್ನು ದೂರದಲ್ಲಿ ನೋಡತ್ತೇವೆ. ಪಕ್ವವಾದ ಫಲಗಳನ್ನು ಅಪಕ್ವವೆಂದೂ ಅಪಕ್ವವಾದ ಫಲಗಳನ್ನು ಪಕ್ವವೆಂದೂ ಭ್ರಮಿಸುತ್ತೇವೆ. ಆದ್ದರಿಂದ ಭೂಮಿಯಲ್ಲಿರುವ ನಮಗೆ ನಿನ್ನ ಫಲಗಳು ಪಕ್ವವಾಗಿವೆಯಾ? ಇಲ್ಲವಾ? ಎಂಬ ಪರಿಜ್ಞಾನವು ಇರುವುದಿಲ್ಲ. ಈ ಪರಿಜ್ಞಾನವಿಲ್ಲದಿರುವುದರಿಂದ ನಿನ್ನ ಫಲಗಳನ್ನು ಮನುಷ್ಯರು ಮೊದಲು ತಿನ್ನಲು ಅವಕಾಶವಿಲ್ಲ. ಆದರೆ ಆಕಾಶದಲ್ಲಿ ಸಂಚರಿಸುತ್ತಿರುವ ಕಾಗೆಗಳು ನಿನ್ನ ಫಲಗಳ ಮೇಲೆ ಕುಳಿತು ನಿನ್ನ ಫಲಗಳ ವಾಸನೆಯಿಂದ ಅವುಗಳು ಪಕ್ವವಾಗಿರುವ ವಿಷಯವನ್ನು ಮನುಷ್ಯರಿಗಿಂತ ಮೊದಲು ತಿಳಿಯುತ್ತವೆ. ಆದ್ದರಿಂದಲೇ ಮೊದಲು ನಿನ್ನ ಫಲಗಳನ್ನು ಕುಕ್ಕಿ ತಿನ್ನುತ್ತವೆ. ಕಾಗೆಗಳು ಕುಕ್ಕಿ ತಿನ್ನುತ್ತಿರುವುದನ್ನು ಕಂಡ ಮನುಷ್ಯರು ನಿನ್ನ ಫಲಗಳನ್ನು ಮರಗಳಿಂದ ಕೊಯ್ಯಲು ಪ್ರಯತ್ನಿಸುವರು."

"ನಿನ್ನ ಫಲಗಳನ್ನು ಕೊಯ್ದವರೂ ಅವುಗಳನ್ನು ಸುಲಭವಾಗಿ ತಿನ್ನಲು ಸಾಧ್ಯವಿಲ್ಲ. ಅವುಗಳ ಸಿಪ್ಪೆಯ ಸುತ್ತಲೂ ಕಠಿನವಾದ ಮುಳ್ಳುಗಳು ವ್ಯಾಪಿಸಿವೆ. ಆ ಮುಳ್ಳುಗಳಿಂದ ಒಳಗಿರುವ ಸೊಳೆಗಳನ್ನು ಬೇರ್ಪಡಿಸಬೇಕು. ಆಮೇಲೆಯೇ ಆ ಫಲಗಳ ಸೊಳೆಗಳನ್ನು ತಿನ್ನಲು ಸಾಧ್ಯವಾಗುತ್ತದೆ. ಇದೆಲ್ಲವನ್ನೂ ವಿಮರ್ಶಿಸಿದರೆ ನೀನೂ ಮಹಾ ಲೋಭಿಯೆಂದು ತಿಳಿಯುತ್ತದೆ."

"ನಿನ್ನ ಫಲಗಳು ಪಕ್ವವಾದ ವಿಷಯವು ಭೂಮಿಯಲ್ಲಿರುವ ಮನುಷ್ಯರಿಗೆ ತಿಳಿಯದಿರುವಂತೆ ಒಬ್ಬ ಮನುಷ್ಯನು ಹಣವಂತನಾ? ಅಲ್ಲವಾ? ಎಂದು ತಿಳಿಯದಿರುವುದೂ ಬಡವನಂತೆ ನಟಿಸುತ್ತಿರುವುದೂ ಅನುಭವಸಿದ್ಧವಲ್ಲವೇ? ನಿನ್ನ ಫಲವು ಮೊಟ್ಟಮೊದಲು ಕಾಗೆಗೆ ಸಮರ್ಪಣೆ ಯಾದಂತೆ ಲೋಭಿಯ ಹಣವೆಲ್ಲವೂ ಮೊಟ್ಟಮೊದಲು ಅಯೋಗ್ಯರ ವಶವಾಗುವುದು ಅನುಭವಸಿದ್ಧವಲ್ಲವೇ? ನಿನ್ನ ಫಲಗಳು ಎಲ್ಲಾ ಕಡೆಗಳಲ್ಲಿಯೂ ಮುಳ್ಳುಗಳಿಂದ ಸುತ್ತಲ್ಪಟ್ಟಂತೆ ಲೋಭಿಯ ಹಣವು ಎಲ್ಲಾ ಕಡೆಗಳಲ್ಲಿಯೂ ಅಯೋಗ್ಯರಿಂದ ಸುತ್ತಲ್ಪಟ್ಟಿರುವುದು ಅನುಭವಸಿದ್ಧವಲ್ಲವೇ? ಕಡುಲೋಭಿಯಾಗಿರುವ ನೀನು ಯಾರಿಗೂ ಉಪಕಾರವನ್ನು ಮಾಡದಿರುವವನು, ನೀನು ನಮಗೆ ಉಪಕಾರವನ್ನು ಮಾಡದಿರುವುದು ಆಶ್ಚರ್ಯವಲ್ಲ. ನೀನು ಉಪಕಾರವನ್ನು ಮಾಡುವುದು ಬೇಡ. ಮುಂದೆ ಹೋಗುವೆವು" ಎಂದು. ಮುಂದೆ ಹೊರಟರು. ಮಾವಿನಮರವನ್ನು ನೋಡಿ ಆ ಮರವನ್ನು ಕುರಿತು ಹೇಳಿದರು.

## ಮಾವಿನ ಮರವನ್ನು ಧಿಕ್ಕರಿಸಿದ್ದು

"ಎಲೈ ಮಾವಿನಮರವೇ ನಿನ್ನಲ್ಲಿ ಹೂವುಗಳೂ ಹಣ್ಣುಗಳೂ ತುಂಬಿವೆ. ನಿನ್ನ ಬುಡದಲ್ಲಿ ಸಂಚರಿಸುತ್ತಿರುವ ಮನುಷ್ಯರು ನಿನ್ನ ಹೂವುಗಳ ಸುಗಂಧದಿಂದ ತೃಪ್ತರಾಗುವರು. ನಿನ್ನ ಫಲಗಳನ್ನು ತಿಂದು ಆನಂದಿಸುವರು. ಆದ್ದರಿಂದ ಬುಡದಲ್ಲಿರುವ ಮನುಷ್ಯರನ್ನು ಸಂತೋಷಪಡಿಸುತ್ತಿರುವಿ. ಆಕಾಶದಲ್ಲಿ ಸಂಚರಿಸುತ್ತಿರುವ ಪಕ್ಷಿಗಳಲ್ಲಿ ಭ್ರಮರ ಮುಂತಾದ ಕೆಲವು ಪಕ್ಷಿಗಳು ನಿನ್ನ ಪುಷ್ಪಗಳಲ್ಲಿರುವ ಮಧುವನ್ನು ಕುಡಿಯುತ್ತಾ ಆನಂದಿಸುತ್ತಿರುವವು. ಗಿಳಿ ಮುಂತಾದ ಮತ್ತೆ ಕೆಲವು ಪಕ್ಷಿಗಳು ನಿನ್ನ ಫಲಗಳನ್ನು ತಿನ್ನುತ್ತಾ ಸಂತೋಷಿಸುತ್ತಿರುವವು. ಆದ್ದರಿಂದ ಆಕಾಶದಲ್ಲಿ ಸಂಚರಿಸುತ್ತಿರುವ ಪಕ್ಷಿಗಳನ್ನೂ ಸಂತೋಷಪಡಿಸುತ್ತಿರುವಿ. ಹೀಗೆ ಆಕಾಶಸಂಚಾರಿಗಳಾದ ಪಕ್ಷಿಗಳನ್ನೂ ಭೂಸಂಚಾರಿಗಳಾದ ಮನುಷ್ಯರನ್ನೂ ಸಂತೋಷಪಡಿಸುತ್ತಿರುವ ನೀನು ನಮಗೆ ಮಾತ್ರ ಸಂತೋಷವನ್ನು ಕೊಡುತ್ತಿಲ್ಲ. ಅದಕ್ಕೆ ಕಾರಣವನ್ನು ತಿಳಿಸುವೆವು."

"ಎಲೈ ಮಾವಿನಮರವೇ, ಮನ್ಮಥನು ನಮ್ಮನ್ನು ನಾನಾ ವಿಧದಿಂದ ಹಿಂಸಿಸುತ್ತಿರುವ ಪರಮವೈರಿಯಾಗಿರುವನು. (೧) ವಸಂತಋತುವು ಮನ್ಮಥವಿಕಾರವನ್ನು ಹೆಚ್ಚಿಸುತ್ತಿರುವ ಪುಷ್ಪ ಚಿಗುರು ಮುಂತಾದ ವಸ್ತುಗಳನ್ನು ಸೃಷ್ಟಿಸುತ್ತಿರುವುದರಿಂದ ಮನ್ಮಥನ ಮಂತ್ರಿಯೆನಿಸುವನು. ನಮ್ಮನ್ನು ಗೋಳಾಡಿಸುತ್ತಿರುವ ಮನ್ಮಥನ ಮಂತ್ರಿಯಾದ ವಸಂತಋತುವು ಬಂದಕೂಡಲೇ ನೀನು ಚಿಗುರುತ್ತಾ ತುಂಬಾ ಸಂತೋಷವನ್ನು ವ್ಯಕ್ತಪಡಿಸುತ್ತಿರುವಿ. (೨) ಕೋಗಿಲೆಯ, ಮಧುರವಾದ ಧ್ವನಿಯು ಮನ್ಮಥವಿಕಾರವನ್ನು ಹೆಚ್ಚಿಸುತ್ತದೆ. ಆದ್ದರಿಂದ ಕೋಗಿಲೆಯು ಮನ್ಮಥನ ಪಕ್ಷಪಾತಿಯೆನಿಸುತ್ತದೆ. ಈ ಕೋಗಿಲೆಗೆ ಬೇಕಾಗಿರುವ ಎಳೆಯ ಚಿಗುರುಗಳನ್ನು ಸೃಷ್ಟಿಸಿ ಕೊಡುತ್ತಾ ಕೋಗಿಲೆಗಳನ್ನು ಸಂತೋಷಪಡಿಸುತ್ತಿರುವಿ. (೩) ಗಿಳಿಗಳು ಮಧುರವಾದ ಮಾತುಗಳಿಂದ ಮನ್ಮಥವಿಕಾರವನ್ನು ಹೆಚ್ಚಿಸುತ್ತಿವೆ. ಆದ್ದರಿಂದ ಮನ್ಮಥನ ಸ್ತುತಿಪಾಠಕರಂತಿವೆ. ಅವುಗಳಿಗೆ ಪುಷ್ಪ ಮುಂತಾದ ಆಹಾರ ವಸ್ತುಗಳನ್ನು ಒದಗಿಸಿಕೊಡುತ್ತಾ

ಎಲ್ಲಾ ವಿಧವಾದ ಸಹಾಯವನ್ನು ಮಾಡುತ್ತಿರುವ ಮಿತ್ರನಂತಿರುವಿ. (೪) ಮನ್ಮಥನ ಐದು ಬಾಣಗಳಲ್ಲಿ ಒಂದಾದ ಚೂತಪುಷ್ಪ ಎಂಬ ಬಾಣವನ್ನು ನೀನು ಸೃಷ್ಟಿಸಿಕೊಡುತ್ತಿರುವಿ. ಹೀಗೆ ಎಲ್ಲಾ ವಿಧದಿಂದಲೂ ನಮ್ಮ ವೈರಿಯಾದ ಮನ್ಮಥನ ಮಂತ್ರಿಗಳೇ ಮುಂತಾದವರಿಗೆ ಸಹಾಯವನ್ನು ಮಾಡುತ್ತಿರುವ ನೀನು ನಮಗೆ ತೃಪ್ತಿಯನ್ನು ಕೊಡಲಾರೆ. ಮುಂದೆ ಹೋಗುವೆವು.'' ಎಂದು. ಮುಂದೆ ನಡೆದು. ಮಾಧವೀಲತೆಯನ್ನು ನೋಡಿ ಹೇಳಿದರು.

## ಮಾಧವೀಲತೆಯನ್ನು ಪ್ರಾರ್ಥಿಸಿದ್ದು

" ಎಲೈ ಮಾಧವಿಲತೆಯೇ, ನಿನ್ನ ಸುತ್ತಲೂ ಅಸಂಖ್ಯವಾದ ಲತೆಗಳು ಹುಟ್ಟಿವೆ. ಆದ್ದರಿಂದ ನೀನು ಇತರ ಲತೆಗಳ ಮೇಲೆ ಹೊಟ್ಟೆಕಿಚ್ಚಿನಿಂದ ಯುಕ್ತಳಾದವಳಲ್ಲ. ಆದ್ದರಿಂದಲೇ ನೀನ್ನೊಡನೆ ಇತರ ಲತೆಗಳೂ ಮಾಧವನ ಪಾದವನ್ನು ಸೇವಿಸಿದರೆ ನಿನಗೆ ಯಾವ ವಿಧವಾದ ಅಸಹನೆಯೂ ಏರ್ಪಡಲಾರದು. ಆ ಲತೆಗಳಂತೆ ನಾವೂ ಮಾಧವನನ್ನು ಸೇವಿಸುವೆವು. ನಮಗೆ ಮಾಧವನಾಮಕನಾದ ಶ್ರೀಕೃಷ್ಣದೇವನನ್ನು ತೋರಿಸು.''

''ಶ್ರೀಕೃಷ್ಣದೇವನಿಗೆ ನಮಗಿಂತ ಅನಂತ ಪಾಲು ಅಧಿಕ ಸೌಂದರ್ಯವುಳ್ಳ ಲಕ್ಷ್ಮೀದೇವಿಯು ಪತ್ನಿಯಾಗಿರುವಳು. ಅವಳಿಂದಲೂ ಶ್ರೀಕೃಷ್ಣದೇವನಿಗೆ ಆಗಬೇಕಾದ ಪ್ರಯೋಜನವಿಲ್ಲ. ಆದರೂ ಭಕ್ತವರ್ಯಳಾದ ಲಕ್ಷ್ಮೀದೇವಿಯನ್ನು ಗೌರವಿಸುವುದಕ್ಕಾಗಿಯೇ ಅವಳನ್ನು ಸಂತೋಷಪಡಿಸುತ್ತಿರುವಂತೆ ನಮ್ಮನ್ನೂ ಸಂತೋಷಪಡಿಸಲಾರನೇ? ಮಾಧವೀ ಅಂದರೆ ಮಾಧವನ ಪತ್ನೀ ಎಂಬ ಹೆಸರು ನಿನ್ನಲ್ಲಿದೆ. ಆದ್ದರಿಂದ ನಿನಗೆ ಮಾಧವನ ಪರಿಚಯವಿಲ್ಲ ಎಂದು ಹೇಳಕೂಡದು.''

''ನಿನಗೆ ಶ್ರೀಕೃಷ್ಣದೇವನನ್ನು ತೋರಿಸುವ ವಿಷಯದಲ್ಲಿ ಇಷ್ಟವಿಲ್ಲದಿದ್ದರೆ ನಮ್ಮನ್ನು ಈಗಲೇ ಕೊಂದು ಬಿಡು. ಮುಂದಿನ ಜನ್ಮದಲ್ಲಿ ನಿನ್ನಂತೆ ಮಾಧವೀಲತೆಯಾಗಿ ಹುಟ್ಟುವಂತೆ ಮಾಡು. ಆ ಜನ್ಮದಲ್ಲಿ ಶ್ರೀಕೃಷ್ಣದೇವನನ್ನು ನೋಡದಿದ್ದರೂ ಮಾಧವೀ ಅಂದರೇ ಮಾಧವನ ಪತ್ನೀ ಎಂಬ ಹೆಸರಿನಿಂದಲಾದರೂ ಧನ್ಯರಾಗಬಹುದಲ್ಲವೇ?

## ಅಶೋಕಮರವನ್ನು ಧಿಕ್ಕರಿಸಿದ್ದು

" ಎಲೈ ಅಶೋಕಮರವೇ ನಿನ್ನ ಹೆಸರೇ ಅಶೋಕ ಅಂದರೆ ದುಃಖವಿಲ್ಲದವನು ಎಂದು ತಿಳಿಸುತ್ತದೆ. ದುಃಖವೇ ಇಲ್ಲದವನಿಗೆ ಇತರರಾದ ನಮ್ಮ ಮನಸ್ಸಿನಲ್ಲಿರುವ ದುಃಖವು ತಿಳಿಯುತ್ತದೆಯೇ? ಪರರ ದುಃಖವನ್ನೇ ತಿಳಿಯದವನು ಪರೋಪಕಾರವನ್ನು ಮಾಡುವನೇ? ಆದ್ದರಿಂದ ನಿನ್ನಲ್ಲಿ ನಮ್ಮ ದುಃಖವನ್ನು ಹೇಳಿ ಫಲವಿಲ್ಲ.''

''ಅದು ಮಾತ್ರವಲ್ಲ. ನೀನು ಪುಷ್ಪಗಳನ್ನು ಹುಟ್ಟಿಸಿಯೇ ಪರೋಪಕಾರವನ್ನು ಮಾಡಬೇಕು. ಆ ಪುಷ್ಪಗಳು ನಿನ್ನಲ್ಲಿ ಹುಟ್ಟಬೇಕಾದರೆ ಹೆಂಗಸರು ನಿನ್ನನ್ನು ಎಡಗಾಲಿನಿಂದ ಒದೆಯಬೇಕು. ಈ ವಿಷಯವು ''ಪಾದಾಘಾತಾದ ಶೋಕಃ'' ಮುಂತಾದ ದೋಹದಶಾಸ್ತ್ರದಲ್ಲಿ ಪ್ರಸಿದ್ಧವಾಗಿದೆ. ಕಾಡುಕಾಡುಗಳಲ್ಲಿ ಸುತ್ತಿ ಕಾಲು ಬಿದ್ದುಹೋಗಿರುವ ನಮಗೆ ನಿನ್ನನ್ನು ಒದೆಯುವ ಶಕ್ತಿಯೂ ಇಲ್ಲ. ಹೀಗಾದ ಮೇಲೆ ನಿನ್ನಿಂದ ನಮಗೆ ಪ್ರಯೋಜನವು ಏರ್ಪಡುವುದು ಅಸಂಭಾವಿತವಾಗಿದೆ. ಆದ್ದರಿಂದ ಮುಂದೆ ಹೋಗುವೆವು.'' ಎಂದು ಮುಂದೆ ಹೊರಟು. ಪಾರಿಜಾತವೃಕ್ಷವನ್ನು ನೋಡಿ ಹೇಳಿದರು.

## ಪಾರಿಜಾತವೃಕ್ಷವನ್ನು ಪ್ರಾರ್ಥಿಸಿದ್ದು

"ಎಲೈ ಪಾರಿಜಾತಮರವೇ, ನೀನು ದೇವತೆಗಳಿಂದ ಮಾನ್ಯನಾದ ಮರವೆನಿಸುವಿ. ಆದ್ದರಿಂದ ದೇವತೆಗಳೆಲ್ಲರೂ ನಿನ್ನನ್ನು ಹೊಗಳುತ್ತಿರುವರು. ನೀನು ಕಲ್ಪವೃಕ್ಷವೆಂದು ಪ್ರಸಿದ್ಧನಾಗಿರುವಿ. ಆದ್ದರಿಂದ ದಾನಶೀಲನೆಂದು ನಿನ್ನನ್ನು ಸರ್ವರೂ ಹೊಗಳುತ್ತಿರುವರು. ಇಂತಹ ದಾನಶೀಲನಾದ ನೀನು ಶ್ರೀಕೃಷ್ಣದೇವನಿರುವ ಸ್ಥಳವನ್ನು ತಿಳಿಸು. ನಿನ್ನನ್ನು ಆಶ್ರಯಿಸಿದವರಿಗೆ ನಾನಾ ವಿಧವಾದ ರತ್ನಗಳನ್ನು ಕೊಡುವುದಾಗಿ ಶಾಸ್ತ್ರಗಳು ಹೇಳುತ್ತಿವೆ. ನಮಗೆ ಬೇರೆ ಯಾವ ರತ್ನಗಳೂ ಬೇಡ. ಶ್ರೀಕೃಷ್ಣನೆಂಬ ನೀಲಮಣಿಯನ್ನು ಕೊಡು" ಎಂದು ಪ್ರಾರ್ಥಿಸಿದರು. ಆಗ ಒಬ್ಬಳು ಅವರೆಲ್ಲರನ್ನೂ ನೋಡಿ ಹೇಳಿದಳು.

## ಪಾರಿಜಾತವೃಕ್ಷವನ್ನು ಧಿಕ್ಕರಿಸಿದ್ದು

"ಎಲೈ ಸ್ತ್ರೀಯರೆ! (೧) ಪಾರಿಜಾತವೃಕ್ಷಕ್ಕಿಂತಲೂ ಅನಂತಪಾಲು ಅಧಿಕವಾದ ಸಂಪತ್ತುಗಳನ್ನು ಶ್ರೀಕೃಷ್ಣದೇವನ ಪಾದವು ಕೊಡುತ್ತದೆ. ಶ್ರೀಕೃಷ್ಣದೇವನನ್ನು ಕೊಟ್ಟುಬಿಟ್ಟರೆ ಪಾರಿಜಾತವೃಕ್ಷದಿಂದ ಬರುವ ಸಂಪತ್ತುಗಳಗಿಂತಲೂ ಅನಂತಪಾಲು ಅಧಿಕವಾದ ಸಂಪತ್ತುಗಳನ್ನು ಶ್ರೀಕೃಷ್ಣದೇವನ ಪಾದಗಳಿಂದ ಪಡೆಯುವೆವು. ಇದರಿಂದ ಪಾರಿಜಾತವೃಕ್ಷವನ್ನು ಲಕ್ಷಿಸಲಾರೆವು. ಈ ಅಲಕ್ಷ್ಯಭಾವವು ತನ್ನಲ್ಲಿ ಖಂಡಿತವಾಗಿಯೂ ಬರುತ್ತದೆ ಎಂದು ಹೆದರಿದ ಈ ಪಾರಿಜಾತವೃಕ್ಷವು ನಮ್ಮ ಪತಿಯನ್ನು ತೋರಿಸಲಾರನು.

(೨) ಸಮುದ್ರಮಥನಕಾಲದಲ್ಲಿ ಮೊದಲು ಪಾರಿಜಾತವೃಕ್ಷವು ಹುಟ್ಟಿತು. ಅನಂತರದಲ್ಲಿ ಲಕ್ಷ್ಮೀದೇವಿಯು ಆವಿರ್ಭವಿಸಿದಳು. ಆದ್ದರಿಂದ ಈ ಪಾರಿಜಾತವೃಕ್ಷವು ಲಕ್ಷ್ಮೀದೇವಿಯ ಅಣ್ಣನೆನಿಸುವನು. ಲಕ್ಷ್ಮೀದೇವಿಯ ಪತಿಯಾದ ನಾರಾಯಣನನ್ನು ನಾವು ಪತಿಯಾಗಿ ವರಿಸಿರುವೆವು. ಆದ್ದರಿಂದ ಲಕ್ಷ್ಮೀದೇವಿಗೆ ನಾವು ಸವತಿಯರೆನಿಸುವೆವು. ಲಕ್ಷ್ಮೀದೇವಿಯ ಸವತಿಯರಾದ ನಮ್ಮನ್ನು ಲಕ್ಷ್ಮೀದೇವಿಯ ಅಣ್ಣನಾದ ಪಾರಿಜಾತವೃಕ್ಷವು ಅನುಗ್ರಹಿಸುವನೇ?

(೩) ದೇವೇಂದ್ರನು ಮೂರು ಲೋಕಗಳಿಗೂ ಅಧಿಪತಿಯಾಗಿರುವನು. ಅವನು ಈ ಪಾರಿಜಾತವೃಕ್ಷವನ್ನು ಪೂಜಿಸುತ್ತಿರುವನು. ಇದರಿಂದ ಪಾರಿಜಾತವೃಕ್ಷವು ತುಂಬಾ ಅಹಂಕಾರದಿಂದ ಯುಕ್ತವಾಗಿದೆ. ಈ ಅಹಂಕಾರಿಯು ನಮಗೆ ಉಪಕಾರವನ್ನು ಮಾಡುವನೇ? ಆದ್ದರಿಂದ ಇವನನ್ನು ಪ್ರಾರ್ಥಿಸಿದ್ದರಿಂದ ಫಲವಿಲ್ಲ. ಶ್ರೀಕೃಷ್ಣದೇವನನ್ನೇ ಪ್ರಾರ್ಥಿಸೋಣ." ಎಂದಳು. ಎಲ್ಲರೂ ಶ್ರೀಕೃಷ್ಣದೇವನನ್ನು ಪ್ರಾರ್ಥಿಸಿದರು.

## ಶ್ರೀಕೃಷ್ಣದೇವನನ್ನು ಸರ್ವರೂ ಒಟ್ಟುಗೂಡಿ ಪ್ರಾರ್ಥಿಸಿದ್ದು

"ಓ ಕೃಷ್ಣದೇವ, ಪರಮಸುಂದರನಾದ ನಿನ್ನನ್ನು ನೋಡಿದ ಕೂಡಲೇ ಸರ್ವರನ್ನೂ ಆಕರ್ಷಿಸುವ ಶಕ್ತಿಯು ನಿನ್ನಲ್ಲಿಲ್ಲವೇ? ನಿನ್ನ ಮುಖದಿಂದ ಹೊರಟ ವೇಣುಗಾನವನ್ನು ಕೇಳಿದ ಮಾತ್ರದಿಂದಲೇ ಬ್ರಹ್ಮರುದ್ರ ಮುಂತಾದ

ಸಕಲ ದೇವತೆಗಳೂ ಪರವಶರಾಗಿ ತಲೆಗಳನ್ನು ಬಗ್ಗಿಸಲಿಲ್ಲವೇ? "ಶರ್ವಶಕ್ರಪರಮೇಷ್ಠಿಪುರೋಗಾಃ ಕವಯ ಆನತಕಂಧರಗಾತ್ರಾಃ"

"ಬ್ರಹ್ಮ ರುದ್ರ ಇಂದ್ರ ಮುಂತಾದ ಸಕಲ ಜ್ಞಾನಿಶ್ರೇಷ್ಠರೂ ತಲೆಯನ್ನು ಬಗ್ಗಿಸಿ ವಿನಯದಿಂದ ಯುಕ್ತರಾದರು." ಮುಂತಾದ ಭಾಗವತವಾಕ್ಯಗಳು ಸುಳ್ಳೇ? ಅವುಗಳೆಲ್ಲವೂ ಸತ್ಯವಾಗಿದ್ದರೆ ನಮ್ಮನ್ನು ವಶಪಡಿಸಿಕೊಳ್ಳುವುದಕ್ಕೆ ನೀನು ಅದೃಶ್ಯನಾಗಬೇಕೆ? ನಮ್ಮನ್ನು ಬಿಟ್ಟು ದೂರದೇಶದವರೆಗೆ ಹೋಗಬೇಕೆ? ನಿನ್ನ ಸುಂದರವಾದ ಶರೀರವನ್ನು ನಮಗೆ ತೋರಿಸು ವೇಣುಗಾನವನ್ನು ಮಾಡು. ಇದರಿಂದಲೇ ವಶರಾಗವೆವು" ಎಂದು ಪ್ರಾರ್ಥಿಸಿದರು. ಇವರ ಭಕ್ತಿಯನ್ನು ನೋಡಿ ಶ್ರೀಕೃಷ್ಣದೇವನು ಪರವಶನಾದನು. ಆದರೂ ಇನ್ನೂ ಪರೀಕ್ಷಿಸಬೇಕೆಂದು ತಿಳಿದು ಅವರ ಕಣ್ಣುಗಳಿಗೆ ಕಾಣಿಸಲಿಲ್ಲ. ಆಗ ಶ್ರೀಕೃಷ್ಣದೇವನ ಕೊಳಲನ್ನು ಪ್ರಾರ್ಥಿಸಿದರು.

# ಕೊಳಲನ್ನು ಪ್ರಾರ್ಥಿಸಿದ್ದು

" ಎಲೈ ಕೊಳಲೇ ಸರ್ವಸಂಗವನ್ನು ಪರಿತ್ಯಾಗ ಮಾಡಿರುವ ಸಕಲ ಪರಮಹಂಸಯತಿಗಳಿಗೆ ಸಕಲ ವಿಧವಾದ ಅಭಿವೃದ್ಧಿಯನ್ನು ಶ್ರೀಕೃಷ್ಣದೇವನು ಕೊಡುವವನು. ನಮ್ಮಂತಹ ವಿಷಯಗಳಲ್ಲಿ ಆಸಕ್ತರಾದವರಲ್ಲಿ ವಿಶೇಷಪ್ರೀತಿಯನ್ನು ಮಾಡುವವನಲ್ಲ. ಇದು ನಮಗೆ ಗೊತ್ತು. ಆದರೂ ಉದಯಿಸುತ್ತಿರುವ ಮತ್ತು ಕಳಂಕವೇ ಇಲ್ಲದಿರುವ ಚಂದ್ರನಂತೆ ಪರಮ ಸುಂದರವಾಗಿರುವ ಅವನ ಮುಖವು ಅವನನ್ನು ನಾವೆಲ್ಲರೂ ಪ್ರಾರ್ಥಿಸುವಂತೆ ಮಾಡುತ್ತಿದೆ. ಅವನಿಗೆ ನಮ್ಮ ವಿರಹದಿಂದಲಾಗಲೀ ಬೇರೆ ಯಾವ ವಿಧದಿಂದಲಾಗಲೀ ದುಃಖವೇ ಇಲ್ಲ. ನಮಗೆ ಹಾಗಲ್ಲ ಅವನ ವಿರಹದಿಂದ ನಾವೆಲ್ಲರೂ ಬೆಂದು ಹೋಗುತ್ತಿರುವೆವು. ಅಂತಹ ಮೋಹಕಶಕ್ತಿಯು ಅವನಲ್ಲಿದೆ. ಅವನು ಯಾರು? ಎಂಬ ವಿಷಯವನ್ನು ನಾವು ತಿಳಿದಿರುವೆವು. ಇನ್ನು ಮುಂದೆ ಮುರ ಎಂಬ ದೈತ್ಯನೇ ಮೊದಲಾದ ದೈತ್ಯರನ್ನು ಸಂಹರಿಸುವ ಮಹಾನುಭಾವನು. ಅಂತಹ ಶ್ರೀಕೃಷ್ಣದೇವನಲ್ಲಿ ನಮ್ಮ ಕಷ್ಟವನ್ನು ಹೇಳು. ಅವನ ತುಟಿಯ ವರೆಗೆ ಹೋಗುತ್ತಿರುವ ನಿನಗೆ ಇದು ಅಸಾಧ್ಯವಲ್ಲ."

# ಕೊಳಲನ್ನು ಹೆದರಿಸಿದ್ದು

"ನೀನು ಶ್ರೀಕೃಷ್ಣದೇವನಲ್ಲಿ ನಮ್ಮ ಕಷ್ಟಗಳನ್ನು ತಿಳಿಸಲಾರೆಯಾ? ಹಾಗಾದರೆ ನಿನಗೆ ನಾವು ಮಾಡುವ ಶಿಕ್ಷೆಯನ್ನು ತಿಳಿಸುವೆವು. ನೀನು ಯಾವಾಗಲೂ ಶ್ರೀಕೃಷ್ಣದೇವನ ಕೈಗಳಲ್ಲಿ ವಾಸಿಸುತ್ತಿರುವಿ. ಆದ್ದರಿಂದ ನಿನ್ನನ್ನು ಶ್ರೀಕೃಷ್ಣದೇವನ ಕೈಗಳಿಂದ ಬಿಡಿಸುವ ಯೋಗ್ಯತೆಯು ನಮ್ಮಲ್ಲಿಲ್ಲ. ಶ್ರೀಕೃಷ್ಣದೇವನ ಕೈಗಳಲ್ಲಿ ವಾಸಿಸುತ್ತಿರುವವನಿಗೆ ಯಾರು ತಾನೇ ಕೆಡುಕನ್ನು ಮಾಡಲು ಸಮರ್ಥರು? ನಿನಗೆ ಯಾವ ವಿಧವಾದ ಕೆಡುಕನ್ನು ಮಾಡಲು ನಾವು ಸಮರ್ಥರಲ್ಲದಿದ್ದರೂ ನಿನ್ನ ವಂಶವನ್ನು ನಾಶಮಾಡಲು ಸಮರ್ಥರಾಗಿರುವೆವು."

"ನಾ ವೆಲ್ಲರೂ ಶ್ರೀಕೃಷ್ಣದೇವನ ವಿರಹದಿಂದ ಯುಕ್ತರಾಗಿರುವೆವು. ಆ ವಿರಹವು ಬೆಂಕಿಗಿಂತಲೂ ಉಗ್ರವಾಗಿ ನಮ್ಮ ಸುತ್ತಲೂ ಇರುವ ಕಾಡುಗಳನ್ನು ಸುಡುತ್ತದೆ. ಆಗ ಆ ಕಾಡಿನ ಮಧ್ಯದಲ್ಲಿರುವ ನಿನ್ನ ವಂಶದಲ್ಲಿ ಹುಟ್ಟಿರುವ ಬಿದಿರುಗಳೆಲ್ಲವೂ ಬೂದಿಯಾಗುತ್ತವೆ. ನಿನ್ನ ವಂಶವೆಲ್ಲಾ ನಿರ್ಮೂಲವಾಗುತ್ತಿರುವುದನ್ನು ನಿನ್ನ ಕಣ್ಣಿನಿಂದ ನೀನು ನೋಡುವಿ. ನಿನಗೆ ಯಾವ ವಿಧವಾದ ಕಷ್ಟವನ್ನು ಕೊಡಲು ಶಕ್ತರಾಗದಿದ್ದರೂ ನಿನ್ನ ವಂಶವನ್ನು

ನಿರ್ಮೂಲವಾಗುವಂತೆ ಮಾಡುತ್ತಾ ನಿನಗೆ ಸಹಿಸಲಾರದ ಕಷ್ಟವನ್ನು ಕೊಡುವೆವು. ಕುಲನಾಶಭಯದಿಂದಲಾದರೂ ಶ್ರೀಕೃಷ್ಣದೇವನಲ್ಲಿ ನಮ್ಮ ಕಷ್ಟವನ್ನು ತಿಳಿಸು'' ಎಂದು ಬೆದರಿಸಿದರು. ಉತ್ತರಸಿಗದೆ ಮುಂದೆ ನಡೆದರು. ವೃಂದಾವನವನ್ನು ಪ್ರಾರ್ಥಿಸುತ್ತಾ ಬೆದರಿಸಿದರು.

# ವೃಂದಾವನವನ್ನು ಬೆದರಿಸಿದ್ದು

"ಕೃಷ್ಣವರ್ತ್ಮ ಎಂಬ ಹೆಸರು ಎರಡು ವಿಧವಾಗಿದೆ (೧) ಕೃಷ್ಣಸ್ಯ ವರ್ತ್ಮ ಕೃಷ್ಣವರ್ತ್ಮ, ಇದು ಮೊದಲನೆಯ ವಿಧವಾಗಿದೆ. ಈ ವಿಧದಲ್ಲಿ ಈ ಹೆಸರು ನಪುಂಸಕಲಿಂಗವಾಗುತ್ತದೆ. ನಪುಂಸಕ ಲಿಂಗವಾದಾಗ ಈ ಪದವು " ಶ್ರೀಕೃಷ್ಣದೇವನು ಹೋದ ಹಾದಿ'' ಎಂಬ ಅರ್ಥವನ್ನು ತಿಳಿಸುತ್ತದೆ. (೨) ಕೃಷ್ಣಃ ವರ್ತ್ಮಾ ಯಸ್ಯ ಸಃ ಕೃಷ್ಣವರ್ತ್ಮಾ, ಇದು ಎರಡನೆಯ ವಿಧವಾಗಿದೆ. ಈ ವಿಧದಲ್ಲಿ ಈ ಹೆಸರು ಪುಲ್ಲಿಂಗವಾಗುತ್ತದೆ. ಪುಲ್ಲಿಂಗವಾದಾಗ ಈ ಪದವು " ಯಾವನು ಹೋದ ಹಾದಿಯು ಕಪ್ಪಾಗಿದೆಯೋ ಅವನು'' ಎಂಬ ಅರ್ಥವನ್ನು ತಿಳಿಸುತ್ತದೆ. ಅಂದರೆ ಬೆಂಕಿಯು ಯಾವ ಮಾರ್ಗದಲ್ಲಿ ಹೋಗುತ್ತದೆಯೋ ಆ ಮಾರ್ಗವೆಲ್ಲವೂ ಕಪ್ಪಾಗುತ್ತದೆ. ಆದ್ದರಿಂದ ಬೆಂಕಿಯೇ ಪುಲ್ಲಿಂಗವಾದ ಕೃಷ್ಣವರ್ತ್ಮಾ ಎಂಬ ಪದದಿಂದ ಹೇಳಲ್ಪಡುತ್ತದೆ.''

"ಎಲೈ ವೃಂದಾವನವೇ ನೀನು ನಪುಂಸಕಲಿಂಗವಾದ ಕೃಷ್ಣವರ್ತ್ಮವನ್ನು ಅಂದರೆ ಶ್ರೀ ಕೃಷ್ಣದೇವನು ಹೋದ ಹಾದಿಯನ್ನು'' ನನಗೆ ತಿಳಿಸುವಿಯಾ? ನಿನಗೆ ಇಷ್ಟವಿದ್ದರೆ ತಿಳಿಸು. ನಾವು ಸಂತೋಷಿಸುವೆವು. ನೀನು ತಿಳಿಸಲಾರೆಯಾ. ನಿನಗೆ ಶ್ರೀಕೃಷ್ಣದೇವನು ಹೋದ ಹಾದಿಯನ್ನು ತಿಳಿಸಲು ಇಷ್ಟವಿಲ್ಲದಿದ್ದರೆ ಬಿಡು. ಪುಲ್ಲಿಂಗವಾದ ಕೃಷ್ಣವರ್ತ್ಮವನ್ನು ಅಂದರೆ "ನಮಗೆ ಪ್ರಿಯನಾದ ಶ್ರೀಕೃಷ್ಣದೇವನ ವಿರಹದಿಂದ ಏರ್ಪಟ್ಟ ಬೆಂಕಿಯನ್ನು '' ನಾವು ಕೊಡುವೆವು. ಈ ಅಗ್ನಿಯಿಂದ ಬಳ್ಳಿಗಳಿಂದಲೂ ಮರಗಳಿಂದಲೂ ಗಿಡಗಳಿಂದಲೂ ಯುಕ್ತನಾದ ನೀನು ಬೂದಿಯಾಗುವಿ.

"ಚಕೋರ ಪಕ್ಷಿಗಳು ಚಂದ್ರನ ಕಿರಣಗಳನ್ನೇ ಪಾನ ಮಾಡುತ್ತಾ ಜೀವಿಸುತ್ತಿರುವವು. ಶ್ರೀಕೃಷ್ಣದೇವನು ಚಂದ್ರನಂತೆಯೂ ನಾವೆಲ್ಲರೂ ಅವನ ದರ್ಶನದಿಂದಲೇ ಜೀವಿಸುತ್ತಿರುವ ಚಕೋರಪಕ್ಷಿಗಳಂತೆಯೂ ಇರುವೆವು. ಶ್ರೀಕೃಷ್ಣದೇವನನ್ನು ನೋಡದಿದ್ದರೆ ನಾವೆಲ್ಲರೂ ಶ್ರೀಕೃಷ್ಣ ವಿರಹ ಎಂಬ ಅಗ್ನಿಯಿಂದ ಬೂದಿಯಾಗುವೆವು. ನಾವೂ ನಿನ್ನಲ್ಲಿರುವ ಬಳ್ಳಿ ಮುಂತಾದವುಗಳೂ ಬೂದಿಯಾದ ಮೇಲೆ ಈ ಪ್ರದೇಶವು ಶೂನ್ಯವಾಗುವುದು.

"ಎಲೈ ಬೃಂದಾವನವೇ, "ಬೃಂದ'' ಅಂದರೆ ಮರ ಬಳ್ಳಿ ಮುಂತಾದವುಗಳ ಗುಂಪನ್ನೂ ಗೋಪಿಕಾಸ್ತ್ರೀಯರ ಗುಂಪನ್ನೂ "ಅವನ'' ಅಂದರೆ ರಕ್ಷಿಸುತ್ತಿರುವುದರಿಂದ "ಬೃಂದಾವನ'' ಎಂಬ ಅನ್ವರ್ಥಕವಾದ ಹೆಸರಿನಿಂದ ನೀನು ಈಗ ಹೊಗಳಲ್ಪಡುತ್ತಿರುವಿ. ನಾವೆಲ್ಲರೂ ಬೂದಿಯಾಗಿ ಬಿಟ್ಟರೆ "ಬೃಂದವೂ'' ಇಲ್ಲ. ಬೃಂದವಿಲ್ಲದಿರುವುದರಿಂದ ಅದಕ್ಕೆ "ಅವನವೂ'' ಇಲ್ಲ. ನಿನ್ನ ಹೆಸರು ಅನ್ವರ್ಥಕವಾಗಲಾರದು.

"ಅದು ಮಾತ್ರವಲ್ಲ. ಇಷ್ಟರ ವರೆಗೆ ಎಲ್ಲಾ ಕವಿಗಳೂ ಸರ್ವರನ್ನೂ ರಕ್ಷಿಸುತ್ತಿರುವ ನಿನ್ನನ್ನು ನಾನಾ ವಿಧದಿಂದ ಹೊಗಳುತ್ತಿರುವರು. ನೀನು ಸರ್ವರನ್ನೂ ಸಂಹರಿಸುವುದಕ್ಕೆ ಕಾರಣನಾಗಿ ಬಿಟ್ಟರೆ ನಿನ್ನ ಹೆಸರನ್ನು ಯಾವ ಕವಿಯು ಹೊಗಳುವನು? ನಿನ್ನ ಹೆಸರು ಅನ್ವರ್ಥಕವಾಗುವುದಕ್ಕಾಗಿಯಾಗಲೀ ಕವಿಗಳು ನಿನ್ನನ್ನು

ಹೊಗಳುವುದಕ್ಕಾಗಿಯಾಗಲಿ ನೀನುಶ್ರೀಕೃಷ್ಣದೇವನು ಹೋದ ಹಾದಿಯನ್ನು ತಿಳಿಸಲೇಬೇಕು'' ಎಂದರು.

ವೃಂದಾವನದಿಂದ ಉತ್ತರವೂ ಬರಲಿಲ್ಲ. ಆಗ ಮರಗಳನ್ನು ಪ್ರಾರ್ಥಿಸುತ್ತಿರುವ ಈ ಸ್ತ್ರೀಯರನ್ನು ವಿವೇಕಿಯಾದ ಒಬ್ಬ ಸ್ತ್ರೀಯು ಹೇಳಿದಳು.

## ಹುಚ್ಚಿ ಮತ್ತು ವಿವೇಕಿಗಳ ಸಂಭಾಷಣೆ

" ಎಲೈ ಸಖಿಯೇ ಕೆಲವರಿಗೆ ಅಲೌಕಿಕವಾದ ವಿಷಯಗಳಲ್ಲಿ ಜ್ಞಾನವಿರುವುದಿಲ್ಲ. ಆದರೂ ಎಲ್ಲರಿಗೂ ಸಾಧಾರಣವಾಗಿ ತಿಳಿದಿರುವ ಲೌಕಿಕ ವಿಷಯಗಳಲ್ಲಿ ಜ್ಞಾನವಿರುತ್ತದೆ. ಈ ವೃಕ್ಷಗಳು ಲೌಕಿಕವಾದ ವಿಷಯಗಳಲ್ಲಿಯೂ ಜ್ಞಾನವಿಲ್ಲದಿರುವ ಮೂರ್ಖಪ್ರಾಣಿಗಳಾಗಿವೆ. ಹೀಗಿರುವಾಗ ಈ ಮರಗಳನ್ನು ಅಲೌಕಿನಾಗಿರುವ ಶ್ರೀಕೃಷ್ಣದೇವನನ್ನು ಕುರಿತು ಪ್ರಶ್ನಿಸಿ ಫಲವೇನು?'' ಇದು ಒಬ್ಬ ವಿವೇಕಿಯಾದ ಸ್ತ್ರೀಯು ಹೇಳಿದ್ದು.

ಯಾಕೆ? ಇದು ಒಬ್ಬ ಹುಚ್ಚಿಯ ಪ್ರಶ್ನೆ.

"ಬ್ರಹ್ಮದೇವನು ಕೆಲವು ಆಜ್ಞೆಗಳನ್ನು ಮಾಡಿರುವನು. ಆ ಆಜ್ಞೆಗಳು ನಡೆಯಲೇ ಬೇಕು. ಆ ಆಜ್ಞೆಗಳಲ್ಲಿ " ಮರಗಳಿಗೆ ಜ್ಞಾನವು ಏರ್ಪಡಕೂಡದು'' ಎಂದು ಒಂದು ಆಜ್ಞೆ. ಆದ್ದರಿಂದಲೇ ಮರಗಳಿಗೆ ಜ್ಞಾನವಿಲ್ಲ. " ಇದು ವಿವೇಕಿಯ ಉತ್ತರ.

" ಯದುಕುಲತಿಲಕನಾದ ಶ್ರೀಕೃಷ್ಣದೇವನ ವಿರಹವು ಏರ್ಪಟ್ಟದ್ದರಿಂದ ಜ್ಞಾನವೇ ಇಲ್ಲದಂತಿರುವ ಸ್ಥಿತಿಯು ನನಗೆ ಏರ್ಪಡುವುದರಲ್ಲಿ ತಪ್ಪಿಲ್ಲ. ಈ ಮರಕ್ಕೆ ಯಾರ ವಿರಹದ ಭಯವೂ ಇಲ್ಲ. ಹೀಗಿರುವಾಗ ಈ ಮರಕ್ಕೆ ಜ್ಞಾನವಿಲ್ಲದ ಸ್ಥಿತಿಯು ಬರಲು ಕಾರಣವೇನು?'' ಇದು ಹುಚ್ಚಿಯ ಪ್ರಶ್ನೆ. ಈ ಪ್ರಶ್ನೆಯನ್ನು ಕೇಳುತ್ತಿರುವ ವಿವೇಕಿಸ್ತ್ರೀಯೂ ಹುಚ್ಚಿಯಾಗಿಬಿಟ್ಟಳು. ಆದ್ದರಿಂದ ಅವಳೂ ಈ ಪ್ರಶ್ನೆಯನ್ನು ಅನುಮೋದಿಸಿದಳು.

" ಎಲೈ ಸಖಿಯೇ, ಇವನು ಯಾರು?'' ಇದು ಚಂದ್ರನನ್ನು ನೋಡಿ ಒಬ್ಬ ಹುಚ್ಚಿಯು ಮಾಡುತ್ತಿರುವ ಪ್ರಶ್ನೆ. ಇದು "ಪೀಯೂಷರಶ್ಮಿ'' ಅಂದರೆ ಅಮೃತಮಯವಾದ ಕಿರಣಗಳಿಂದ ಯುಕ್ತನಾಗಿರುವ ಚಂದ್ರ'' ಇದು ವಿವೇಕಿಯಾದ ಸ್ತ್ರೀಯ ಉತ್ತರ.

" ಇವನು ಪೀಯುಷರಶ್ಮಿಯಾ? ಹಾಗಾದರೆ ಕಾಲಕೂಟ ಎಂಬ ಅತಿ ಭಯಂಕರವಾದ ವಿಷವನ್ನು ಯಾಕೆ ಸುರಿಸುತ್ತಿರುವನು?'' ಇದು ಚಂದ್ರನ ಕಿರಣಗಳ ಸ್ಪರ್ಶದಿಂದ ಮಿತಿಮೀರಿದ ಕಾಮಬಾಧೆಯನ್ನು ಅನುಭವಿಸುತ್ತಿರುವ ಹುಚ್ಚಿಯ ಪ್ರಶ್ನೆ.

" ಶ್ರೀಕೃಷ್ಣದೇವನಿಗೆ "ಹರಿ'' ಎಂಬ ಹೆಸರಿದೆ. ಆ ಹೆಸರಿಗೆ ಭಕ್ತರ ಸಕಲ ವಿಧವಾದ ಕಷ್ಟಗಳನ್ನೂ ಪರಿಹರಿಸುವವನು ಎಂಬ ಅರ್ಥವು ಪ್ರಸಿದ್ಧವಾಗಿದೆ. ಆದರೆ ನಮ್ಮೆಲ್ಲರನ್ನೂ ಗೋಳಾಡಿಸುತ್ತಿರುವ ಶ್ರೀಕೃಷ್ಣದೇವನಿಗೆ ಹರಿ ಎಂಬ ಹೆಸರು ಯೋಗ್ಯವಲ್ಲ. ಆದರೂ ಹರಿ ಎಂಬ ಹೆಸರಿನಿಂದ ಶ್ರೀಕೃಷ್ಣದೇವನನ್ನು ಎಲ್ಲರೂ ಕರಿಯುತ್ತಿರುವರು. ಅದರಂತೆ ಚಂದ್ರನಲ್ಲಿ ಅಮೃತಮಯವಾದ ಕಿರಣಗಳಿಲ್ಲ. ಕಾಲಕೂಟದಂತಿರುವ ಕಿರಣಗಳೇ ಇವೆ. ವಿಷಮಯವಾದ ಕಿರಣಗಳಿರುವುದರಿಂದಲೇ ಅವನು ಪ್ರತಿಕ್ಷಣದಲ್ಲಿಯೂ ಕೃಶನಾಗುತ್ತಿರುವನು. ಅಂತಹ

ಚಂದ್ರನನ್ನು "ಪೀಯೂಷರಶ್ಮಿ" ಅಂದರೆ ಅಮೃತಮಯವಾದ ಕಿರಣಗಳುಳ್ಳವನು ಎಂದು ಕರೆಯುವುದರಲ್ಲಿ ತಪ್ಪೇನಿದೆ?" ಇದು ಚಂದ್ರನನ್ನು ನೋಡಿದ ಕೂಡಲೇ ಹುಚ್ಚಿಯಾದ ವಿವೇಕಿ ಸ್ತ್ರೀಯ ಉತ್ತರ.

## ರಾತ್ರಿ ಯನ್ನು ಪ್ರಾರ್ಥಿಸಿದ್ದು

" ಎಲೈ ರಾತ್ರಿಯೇ, ನೀನು ಒಬ್ಬ ಧನ್ಯಳಾದ ಕಾಮಿನಿಯಂತಿರುವಿ. ಕಾಮಿನಿಯು ತನ್ನ ಪತಿಯ ಕೈಗಳಿಂದ ಗಟ್ಟಿಯಾಗಿ ಆಲಿಂಗತಳಾಗಿ ಆನಂದಪರವಶಳಾಗಿರುವಳು. ಅವನಿಂದ ಮುದ್ದು ಕೊಡಲ್ಪಟ್ಟು ಅವನ ವಿಯೋಗವನ್ನು ಸಹಿಸಲಾರದೆ ಅವನು ಹೋಗುವ ಸ್ಥಳಗಳಲ್ಲೆಲ್ಲಾ ಹೋಗುತ್ತಿರುವಳು ಅವಳಂತೆ ನೀನೂ ಇರುವಿ."

" ಚಂದ್ರನು ನಿನ್ನ ಪತಿಯು. ಅವನ ಕಿರಣಗಳೇ ಕೈಗಳು. ಆ ಕಿರಣಗಳು ಅಮೃತರಸವನ್ನು ಸುರಿಸುತ್ತಿವೆ. ಅಮೃತರಸಮಯವಾದ ಆ ಕಿರಣಗಳು ನಿನ್ನಲ್ಲಿ ಎಲ್ಲಾ ಕಡೆಗಳಲ್ಲಿಯೂ ವ್ಯಾಪಿಸಿವೆ. ಇದರಿಂದ ಆನಂದಕರವಾದ ಅವನ ಕಿರಣಗಳೆಂಬ ಕೈಗಳಿಂದ ಎಲ್ಲಾ ಪ್ರದೇಶಗಳಲ್ಲಿಯೂ ಗಟ್ಟಿಯಾಗಿ ನೀನು ಆಲಿಂಗಸಲ್ಪಟ್ಟಂತಾಯಿತು. ಅವನು ಎತ್ತರದಲ್ಲಿದ್ದು ನಿನ್ನನ್ನು ಮುದ್ದಿಡುತ್ತಿರುವನು. ನೀನೂ ಕೆಳಗಣ ಪ್ರದೇಶದಲ್ಲಿದ್ದು ಅವನನ್ನು ಮುದ್ದಿಡುತ್ತಿರುವಿ.ಆದ್ದರಿಂದ ನಿನ್ನಂತೆ ಧನ್ಯಳಾದವಳು ಯಾರೂ ಇಲ್ಲ."

" ನಿನ್ನ ಪತಿಯಾದ ಚಂದ್ರನ ವಿರಹವನ್ನು ಸಹಿಸಲಾರದೆ ಅವನು ಹೋಗುತ್ತಿರುವ ಪ್ರದೇಶಗಳಲ್ಲೆಲ್ಲಾ ನೀನು ಅವನನ್ನು ಹಿಂಬಾಲಿಸಿಕೊಂಡು ಹೋಗುತ್ತಿರುವಿ. ಅವನು ಈ ಭೂಮಂಡಲದಲ್ಲಿ ಎಲ್ಲಾ ದಿಕ್ಕುಗಳಲ್ಲಿಯೂ ಸಂಚರಿಸುತ್ತಿರುವನು. ಅವನ ಹಿಂದೆಯೇ ಹೋಗುತ್ತಿರುವ ನೀನೂ ಸಹ ಎಲ್ಲಾ ದಿಕ್ಕುಗಳಲ್ಲಿಯೂ ಸಂಚರಿಸುತ್ತಿರುವಿ. ಎಲ್ಲಾ ದಿಕ್ಕುಗಳಲ್ಲಿಯೂ ಸಂಚರಿಸುತ್ತಿರುವ ನೀನು ಹೋಗುವ ಹಾದಿಯನ್ನು ಬಿಟ್ಟು ಬೇರೆ ಹಾದಿಯಲ್ಲಿ ಶ್ರೀಕೃಷ್ಣದೇವನು ಹೋಗಲು ಸಾಧ್ಯವಿಲ್ಲ. ಆದ್ದರಿಂದ ಖಂಡಿತವಾಗಿಯೂ ನೀನು ಅವನನ್ನು ನೋಡಲೇಬೇಕು."

" ಅವನನ್ನು ನೋಡಿದಾಗ ಅವನಲ್ಲಿ ನಮ್ಮ ಮನಸ್ಸಿನಲ್ಲಿರತಕ್ಕ ದುಃಖವನ್ನು ಹೇಳು. ಅವನು ಯಾರು? ಎಂದು ನಿನಗೆ ತಿಳಿಯದಿದ್ದರೆ ಅವನ ಲಕ್ಷಣಗಳನ್ನು ಹೇಳುವೆವು. ಅವನ ಕಣ್ಣುಗಳು ಅರಳಿದ ಕಮಲಪುಷ್ಪಗಳಿಂದ ಸುಂದರವಾಗಿವೆ. ಇಂತಹ ಕಣ್ಣುಗಳು ಯಾರಿಗೂ ಇಲ್ಲ. ಈ ಲಕ್ಷಣದಿಂದ ಅವನನ್ನು ಕಂಡುಹಿಡಿ. ನಾವು ಇನ್ನು ಮುಂದೆ ನಡೆಯಲಾರವು. ನಮ್ಮ ನಿತಂಬ ಪ್ರದೇಶಗಳು ತುಂಬಾ ಭಾರವಾಗಿವೆ. ಶ್ರೀಕೃಷ್ಣದೇವನ ವಿರಹದಿಂದಲೂ ತುಂಬಾ ದೂರದ ವರೆಗೆ ನಡೆದುಕೊಂಡು ಬಂದಿರುವುದರಿಂದಲೂ ತುಂಬಾ ಸೋತು ಹೋಗಿರುವೆವು. ಅವನಿಗೆ ನಮ್ಮ ಮನೋವೇದನೆಯನ್ನು ತಿಳಿಸಿ ಕರುಣಾಳುವಾದ ಅವನೇ ನಾವಿರುವ ಸ್ಥಳಕ್ಕೆ ಬರುವಂತೆ ಮಾಡಲಾರೆಯಾ? ನಿನ್ನನ್ನು ಪ್ರಾರ್ಥಿಸುವೆವು." ಎಂದು ಪ್ರಾರ್ಥಿಸಿದರು. ರಾತ್ರಿಯಿಂದ ಉತ್ತರವು ಬರಲಿಲ್ಲ. ಕುಪಿತರಾದ ಸ್ತ್ರೀಯರು ರಾತ್ರಿಯನ್ನು ಧಿಕ್ಕರಿಸಿದರು.

## ಗೋಪಿಕಾಸ್ತ್ರೀಯರು ರಾತ್ರಿಯನ್ನು ಧಿಕ್ಕರಿಸಿದ್ದು

"ಒಬ್ಬ ಪುರುಷನಾಗಲೀ ಸ್ತ್ರೀಯಾಗಲೀ ತನ್ನ ಸಹವಾಸವನ್ನು ಪಡೆದಿರುವರ ಸ್ವಭಾವ ಮತ್ತು ಗುಣಗಳಿಂದ ಯುಕ್ತರಾಗುವರು. ಈ ರಾತ್ರಿಯ ಸಹವಾಸವನ್ನು ಪಡೆದಿರುವವರ ಸ್ವಭಾವ ಮತ್ತು ಗುಣಗಳನ್ನು ಹೇಳುವೆವು. (೧)

ರಾಕ್ಷಸರೂ ಕಳ್ಳರೂ ಇವಳ ಜೊತೆಯಲ್ಲಿ ಸಂಚರಿಸುತ್ತಿರುವವರು. ಅವರೆಲ್ಲರೂ ಇತರರ ಪ್ರಾಣವನ್ನು ಅಪಹರಿಸುತ್ತಿರುವವರು. ಅವರ ಸಹವಾಸದಿಂದ ಯುಕ್ತಳಾಗಿರುವ ಈ ರಾತ್ರಿಗೆ ಅದೇ ಸ್ವಭಾವವು ಬಂದಿರುವುದರಲ್ಲಿ ಆಶ್ಚರ್ಯವಿಲ್ಲ. (೨) ಕರುಣಾಳುಗಳೂ ಜ್ಞಾನಿಗಳೂ ಈ ರಾತ್ರಿಯಲ್ಲಿ ಸಂಚರಿಸುತ್ತಿಲ್ಲ. ಆದ್ದರಿಂದ ನಮ್ಮ ಕಷ್ಟವನ್ನು ತಿಳಿದು ನಮಗೆ ಉಪಕಾರವನ್ನು ಮಾಡಬೇಕೆಂಬ ಬುದ್ಧಿಯು ಇವಳಿಗೆ ಏರ್ಪಡದಿರುವುದೂ ಆಶ್ಚರ್ಯವಲ್ಲ. (೩) ಕೃಷ್ಣಪಕ್ಷದಲ್ಲಿ ಚಂದ್ರನು ರಾತ್ರಿಯಲ್ಲಿ ಸಂಚರಿಸುವುದಿಲ್ಲ. ಆದ್ದರಿಂದ ಎಲ್ಲೆಲ್ಲಿಯೂ ಕತ್ತಲೆಯು ವ್ಯಾಪಿಸಿ ಈ ರಾತ್ರಿಯು ಅತ್ಯಂತ ಭಯಂಕರಳಾಗಿರುವಳು. ಯಾರಿಗೂ ಸಂತೋಷಕರವಾಗಿರುವುದಿಲ್ಲ. ಕೃಷ್ಣಪಕ್ಷದಲ್ಲಿ ಸರ್ವರಿಗೂ ಸಂತೋಷಕರಳಲ್ಲದಿರುವ ಈ ರಾತ್ರಿಯು ಶ್ರೀಕೃಷ್ಣದೇವನ ಪಕ್ಷದಲ್ಲಿ ಸೇರಿರುವ ನಮ್ಮನ್ನು ಸಂತೋಷಪಡಿಸುವಳೇ? ಆದ್ದರಿಂದ ಮುಂದೆ ಹೋಗೋಣ.'' ಎಂದು ಮುಂದೆ ನಡೆದು ಯಮುನೆಯನ್ನು ನೋಡಿದರು.

# ಯಮುನೆಯನ್ನು ಪ್ರಾರ್ಥಿಸಿದ್ದು

" ಎಲೈ ಯಮುನೆಯೇ, ಕಮಲದಂತೆ ಸುಂದರವಾದ ನೇತ್ರಗಳಿಂದ ಯುಕ್ತನಾಗಿರುವ ಶ್ರೀಕೃಷ್ಣದೇವನಿಗೆ ನಮ್ಮ ಕಷ್ಟಗಳನ್ನು ತಿಳಿಸು. (೧) ನೀನು "ಕೃಷ್ಣಾ" ಎಂಬ ಶ್ರೀಕೃಷ್ಣದೇವನ ಹೆಸರಿನಿಂದ ಯುಕ್ತಳಾಗಿರುವಿ (೨) ಶ್ರೀಕೃಷ್ಣದೇವನು ಅತಿನಿರ್ಮಲ ಸ್ವಭಾವದಿಂದ ಯುಕ್ತನಾಗಿರುವನು. ನೀನೂ ಅತ್ಯಂತ ನಿರ್ಮಲಳಾಗಿರುವಿ. ಆದ್ದರಿಂದ ಇಬ್ಬರೂ ಒಂದೇ ವಿಧವಾದ ಗುಣದಿಂದಲೂ ಯುಕ್ತರಾಗಿರುವಿರಿ.''

"ಒಂದೇ ಗುಣ ಮತ್ತು ಹೆಸರಿನಿಂದಯುಕ್ತರಾಗಿರುವ ನೀವಿಬ್ಬರೂ ಅನ್ಯೋನ್ಯ ಪ್ರೇಮದಿಂದ ಯುಕ್ತರಾಗಿರುವುದು ನ್ಯಾಯವಾಗಿದೆ. ಆದ್ದರಿಂದ ನಿನ್ನ ಶ್ರೀಕೃಷ್ಣದೇವನು ನೀನು ಹೇಳುವ ಪ್ರಿಯವಾದ ಮಾತಗಳನ್ನು ಖಂಡಿತವಾಗಿಯೂ ಕೇಳುವನು.''

"ಅದು ಮಾತ್ರವಲ್ಲ. ಪರಮ ಶಾಂತರಾದ ಬ್ರಾಹ್ಮಣರು ಶ್ರೀಕೃಷ್ಣದೇವನನ್ನು ಯಾವಾಗಲೂ ಪೂಜಿಸುತ್ತಿರುವರು. ಆದ್ದರಿಂದ ಆ ಬ್ರಾಹ್ಮಣರಿಗೆ ಶ್ರೀಕೃಷ್ಣದೇವನು ಇರುವ ಸ್ಥಳವು ಗೊತ್ತಿದೆ ಎಂದು ಹೇಳಲೇಬೇಕು. ಈ ಯಮುನೆಯ ಮಧ್ಯದಲ್ಲಿ ಬ್ರಹ್ಮಹ್ರದ ಎಂಬ ಮಡುವು ಇದೆ. ಆ ಮಡುವಿನಲ್ಲಿ ಶ್ರೀಕೃಷ್ಣದೇವನು ಯಾವಾಗಲೂ ವಾಸಿಸುತ್ತಿರುವುದಾಗಿ ಬ್ರಾಹ್ಮಣರು ಹೇಳುತ್ತಿರುವರು.

ಅಕ್ರೂರನೂ ಸಹ ಇದೇ ಬ್ರಹ್ಮಹ್ರದದಲ್ಲಿಯೇ ಶ್ರೀಕೃಷ್ಣದೇವನನ್ನು ಕೆಲದಿನಗಳ ಅನಂತರದಲ್ಲಿ ನೋಡುವುದಾಗಿ ನಮ್ಮ ಮನಸ್ಸಿಗೆ ತಿಳಿಯುತ್ತಿದೆ. ನಮ್ಮ ಮನಸ್ಸಿಗೆ ತೋರಿದ ವಿಷಯಗಳೆಲ್ಲವೂ ಶ್ರೀಕೃಷ್ಣದೇವನ ಅನುಗ್ರಹ ಬಲದಿಂದ ಸತ್ಯವಾಗಿಯೇ ನಡೆಯುತ್ತಿವೆ. ಎಲೈ ಸಖಿಯೇ ಈ ಕಾರಣದಿಂದಲೂ ಶ್ರೀಕೃಷ್ಣದೇವನು ನಿನ್ನಲ್ಲಿ ವಾಸಿಸುತ್ತಿರುವುದಾಗಿ ತೀರ್ಮಾನಿಸುವೆವು. ಅವನಲ್ಲಿ ನಮ್ಮ ಕಷ್ಟಗಳನ್ನು ಹೇಳಲಾರೆಯಾ?''

" ಎಲೈ ಯಮುನೆಯೇ, ಯಮನು ನಿನ್ನ ಸಹೋದರನು. ಅವನು ಪಾಪಿಷ್ಠರಾದ ಸಜ್ಜನರನ್ನೂ ದುರ್ಜನರನ್ನೂ ತನ್ನ ಲೋಕಕ್ಕೆ ಕರೆದುಕೊಂಡು ಹೋಗುವನು. ಅಲ್ಲಿ ಅವರವರ ಪಾಪಕ್ಕೆ ಯೋಗ್ಯವಾದ ಶಿಕ್ಷೆಯನ್ನು ಕೊಡುತ್ತಿರುವನು. ನೀನು ನಿನ್ನ ಸಹೋದರನಾದ ಯಮನಲ್ಲಿ ವಿಶೇಷವಾದ ಪ್ರೀತಿಯನ್ನಿಟ್ಟುಕೊಂಡುರುವಿ. ಸಹೋದರ ಸ್ನೇಹವು ಯಾರಿಗೆ ತಾನೇ ಇಲ್ಲ. ಆದರೆ ಸ್ತ್ರೀಯರಿಗೆ ಸಹೋದರ ಸ್ನೇಹಕ್ಕಿಂತ ಗಂಡನಲ್ಲಿರುವ ಪ್ರೀತಿಯು

ಅತ್ಯಧಿಕವಾದುದು. ಈ ವಿಷಯದಲ್ಲಿ ನೀನೇ ಉದಾಹರಣಳಾಗಿರುವಿ.

"ಪಾಪಗಳಲ್ಲಿ ಅಯೋಗ್ಯಜೀವರು ನಿನ್ನ ಪತಿಯಾದ ಶ್ರೀಕೃಷ್ಣದೇವನಲ್ಲಿ ಅನಾದ ಕಾಲದಿಂದಲೂ ದ್ವೇಷವನ್ನಿಟ್ಟುಕೊಂಡಿರುವವರು. ಅವರು ನಿನ್ನಲ್ಲಿಗೆ ಬಂದರೆ ಅವರನ್ನು ನಿನ್ನ ಅಣ್ಣನಾದ ಯಮನ ಲೋಕಕ್ಕೆ ಕಳುಹಿಸುವಿ. ಅವರಿಗೆ ಯಮದೇವನು ಕೊಡುತ್ತಿರುವ ನಾನಾ ವಿಧವಾದ ಶಿಕ್ಷೆಗಳನ್ನು ಸಂತೋಷದಿಂದ ಅಂಗೀಕರಿಸುವಿ."

ಯೋಗ್ಯಜೀವರು ನಿನ್ನ ಗಂಡನಾದ ಶ್ರೀಕೃಷ್ಣದೇವನಲ್ಲಿ ವಿಶೇಷವಾದ ಭಕ್ತಿಯನ್ನು ಇಟ್ಟುಕೊಂಡಿರುವವರು. ಆ ಭಕ್ತರು ಮಹಾಪಾಪಗಳನ್ನು ಮಾಡಿದ್ದರೂ ಅವರನ್ನು ನಿನ್ನ ಅಣ್ಣನಾದ ಯಮನ ಪಟ್ಟಣಕ್ಕೆ ಹೋಗದಂತೆ ಮಾಡುವಿ. ಯಮಲೋಕಕ್ಕೆ ಹೋಗದಂತೆ ಮಾಡುವ ನೀನು ಅಲ್ಲಿನ ಶಿಕ್ಷೆಗಳು ಏರ್ಪಡುವಂತೆ ಮಾಡುವಿಯಾ? ನಿನ್ನ ಗಂಡನ ಮೇಲೆ ನಿನಗಿರುವ ಪ್ರೀತಿಯಿಂದ ನಿನ್ನ ಅಣ್ಣನ ಲೋಕಕ್ಕೆ ಪಾಪಗಳನ್ನು ಮಾಡಿರುವ ಸಜ್ಜನರನ್ನು ಹೋಗದಂತೆಯೂ ಪತಿಯಾದ ಶ್ರೀಕೃಷ್ಣದೇವನ ಲೋಕಗಳಿಗೆ ಹೋಗುವಂತೆಯೂ ಮಾಡುತ್ತಾ "ಸಹೋದರನಲ್ಲಿರುವ ಪ್ರೀತಿಗಿಂತಲೂ ಪತಿಯಲ್ಲಿರುವ ಪ್ರೀತಿಯು ಸರ್ವೋತ್ಕೃಷ್ಟವಾದುದು" ಎಂದು ತಿಳಿಸುತ್ತಿರುವಿ."

" ಅದು ಮಾತ್ರವಲ್ಲ. ನಿನ್ನ ಗಂಡನ ಭಕ್ತರು ಪಾಪಗಳನ್ನು ಮಾಡಿದ್ದರೂ ಅವರಿಗೆ ನಿನ್ನ ಪತಿಯಾದ ಶ್ರೀಕೃಷ್ಣದೇವನ ಲೋಕವಾಗಿರುವ ಕ್ಷೀರಸಮುದ್ರ ಮುಂತಾದ ಸ್ಥಾನಗಳನ್ನು ಕೊಡುತ್ತಿರುವಿ. ಇದರಿಂದ ಶ್ರೀಕೃಷ್ಣದೇವನು ಇರುವ ಸ್ಥಳದಲ್ಲಿ ನಮ್ಮನ್ನು ಸೇರಿಸುವ ಶಕ್ತಿಯು ನಿನಗಿದೆ ಎಂದು ಸ್ಪಷ್ಟವಾಯಿತು. ಆದ್ದರಿಂದ ನಮ್ಮನ್ನು ನಮ್ಮ ಪತಿಯಾದ ಶ್ರೀಕೃಷ್ಣನೊಡನೆ ಸೇರಿಸು. ನಾವೆಲ್ಲರೂ ನಿನ್ನ ತೀರದಲ್ಲಿ ಅಲೆಯುತ್ತಿರುವೆವು. ಶ್ರೀಹರಿಭಕ್ತರಾದ ನಮ್ಮ ಪಾಪಗಳನ್ನೆಲ್ಲಾ ಪರಿಹರಿಸು. ಆ ಪಾಪಗಳಿಂದ ಯಮಲೋಕಕ್ಕೆ ಹೋಗದಂತೆ ಮಾಡು . ಗಂಡನಲ್ಲಿ ಅತ್ಯಂತ ಭಕ್ತಿಯಿಂದ ಯುಕ್ತಳಾಗಿರುವ ನೀನು ಗಂಡನಲ್ಲಿ ಅತ್ಯಂತ ಭಕ್ತಿಯುಳ್ಳ ನಮಗೂ ಗಂಡನನ್ನು ಕೊಡು."

"ಎಲೈ ಯಮುನೆಯೇ, ನಿನ್ನ ಪ್ರವಾಹದ ಮಧ್ಯದಲ್ಲಿ ನರ್ತನ ಮಾಡುತ್ತಿರುವ ಅಲೆಗಳನ್ನು ಮುಟ್ಟಿದ ಗಾಳಿಯು ನಿನ್ನ ತೀರದಲ್ಲಿ ಎಲ್ಲೆಲ್ಲಿ ಸಂಚರಿಸುತ್ತದೋ ಅಲ್ಲಲ್ಲಿ ವಾಸಿಸುತ್ತಿರುವ ಸರ್ವರಿಗೂ ಮಂಗಲ ಪರಂಪರೆಯನ್ನು ಕೊಡುತ್ತಿರುವಿ. ನಾವೆಲ್ಲರೂ ನಿನ್ನ ತೀರದಲ್ಲಿರುವ ಕಾಡುಗಳಲ್ಲಿ ದುಂಬಿಗಳಂತೆ ಎಡೆಬಿಡದೆ ಸಂಚರಿಸುತ್ತಿರುವೆವು. ಇಷ್ಟೇ ಅಲ್ಲ.. ಶ್ರೀಕೃಷ್ಣದೇವನ ಚರಿತ್ರೆಗಳನ್ನು ಗಾಯನ ಮಾಡುತ್ತಿರುವೆವು. ಬರೇ ಅಲೆಗಳ ಗಾಳಿಯ ಸ್ಪರ್ಶದಿಂದಲೇ ಸರ್ವರಿಗೂ ಮಂಗಲ ಪರಂಪರೆಯನ್ನು ಕೊಡುತ್ತಿರುವ ನೀನು ಶ್ರೀಕೃಷ್ಣಚರಿತ್ರ ಗಾಯನವೆಂಬ ಅಧಿಕ ಸಾಧನವನ್ನು ಮಾಡುತ್ತಿರುವ ನಮ್ಮನ್ನು ಉದಾಸೀನ ಭಾವದಿಂದ ನೋಡಬಹುದೇ?

## ಮಂದಮಾರುತವನ್ನು ಪ್ರಾರ್ಥಿಸಿದ್ದು

"ಎಲೈ ಗಾಳಿಯೇ, ನೀನು ಮೆಲ್ಲಮ್ಮೆಲನೆ ಬೀಸುತ್ತಿರುವಿ. ನೀನು ಬೀಸುತ್ತಿರುವಾಗ ಶ್ರೀಕೃಷ್ಣದೇವನ ಪಾದಗಳ ಪರಿಮಳವು ಬರುತ್ತಿದೆ. ಈ ಪರಿಮಳವು ಶ್ರೀಕೃಷ್ಣದೇವನ ಪಾದಕಮಲಗಳ ಸ್ಪರ್ಶವು ಏರ್ಪಟ್ಟಿರುವುದರಿಂದಲೇ ನಿನ್ನಲ್ಲಿ ಏರ್ಪಟ್ಟಿರಬೇಕು. ಆದ್ದರಿಂದ ನೀನು ಪರಮ ಮಾನ್ಯನಾಗಿರುವಿ. ಶ್ರೀಕೃಷ್ಣದೇವನನ್ನು ನೋಡಿರುವ ನೀನು

ಅವನನ್ನು ಇಲ್ಲಿಗೆ ಕರೆದುಕೊಂಡು ಬಾ.''

" ಶ್ರೀಕೃಷ್ಣದೇವನನ್ನು ಅಹಂಕಾರಿಗಳು ನೋಡಲಾರರು. ಅಹಂಕಾರವನ್ನು ಸಂಪೂರ್ಣವಾಗಿ ತೊರೆದವರೇ ನೋಡಲು ಅರ್ಹರಾಗುವರು. ನಮ್ಮ ಅಹಂಕಾರವೆಲ್ಲ ಅಡಗಿತು. ಈಗ ಪರಮಶಾಂತರಾಗಿರುವೆವು. ಆದ್ದರಿಂದ ನಾವೆಲ್ಲರೂ ಅವನನ್ನು ನೋಡಲು ಅರ್ಹರಾಗಿರುವೆವು. ಆದ್ದರಿಂದಲೇ ಶ್ರೀಕೃಷ್ಣದೇವನಿಗೆ ನಮಗೆ ದರ್ಶನವನ್ನು ಕೊಡಲು ಯಾವ ಅಡ್ಡಿಯೂ ಇಲ್ಲ. ನೀನು ಅವನಲ್ಲಿ ನಮ್ಮ ಈಗಿನ ಸ್ಥಿತಿಯನ್ನು ತಿಳಿಸಿ ಅವನನ್ನು ಕರೆದುಕೊಂಡು ಬರಬಹುದು.''

" ಶ್ರೀಕೃಷ್ಣದೇವನನ್ನು ಕರೆದುಕೊಂಡು ಬರಲಾರೆಯಾ? ನಮಗೆ ಉಪಕಾರವನ್ನು ಮಾಡದಿರುವ ನಿನ್ನ ಜಾತಿಯವರೆಲ್ಲರನ್ನೂ ನಾವು ನಮ್ಮಲ್ಲಿ ಧರಿಸಲಾರೆವು. ನಮ್ಮ ಹೃದಯದಲ್ಲಿ ನಿನ್ನ ಜಾತಿಯ ಪ್ರಾಣವಾಯುವು ಇದೆ. ಅದನ್ನು ನೀನು ಕರೆದುಕೊಂಡು ಹೋಗು. ಆ ವಾಯುವು ನಮ್ಮನ್ನು ಬಿಟ್ಟುಹೋದ ಕೂಡಲೇ ನಾವೆಲ್ಲರೂ ನಮ್ಮ ನಮ್ಮ ದೇಹಗಳನ್ನು ಬಿಡುವೆವು. ನೀನೂ ಇತರ ವಾಯುಗಳೂ ಅಯೋಗ್ಯವಾದ ದೇಹಗಳ ಸಂಬಂಧವನ್ನು ಇಟ್ಟುಕೊಂಡಿರುವಿರಿ. ನಮಗೆ ಅಯೋಗ್ಯ ದೇಹಗಳ ಸಂಬಂಧವು ಬೇಡ. ಶ್ರೀಕೃಷ್ಣದೇವನ ಪಾದಗಳಲ್ಲಿ ನಮ್ಮನ್ನು ಸೇರಿಸಿರಿ. ನಾವೆಲ್ಲರೂ ಈ ದೇಹಗಳನ್ನು ಬಿಟ್ಟು ಶ್ರೀಕೃಷ್ಣದೇವನ ಪಾದಗಳಲ್ಲಿ ಸೇರುವೆವು.

## ಮಂದಮಾರುತವನ್ನು ಧಿಕ್ಕರಿಸಿದ್ದು

"ಎಲೈ ವಾಯುವೇ, ಕಣ್ಣುಗಳು ನಿನ್ನನ್ನು ನೋಡಲು ಶಕ್ತವಲ್ಲ. ಆದರೆ ನಿನ್ನಲ್ಲಿರುವ ಸ್ಪರ್ಶ ಎಂಬ ಗುಣವು ತ್ವಗಿಂದ್ರಿಯ ಅಂದರೆ ಚರ್ಮ ಮುಂತಾದ ಎಲ್ಲಾ ಅವಯವಗಳಲ್ಲಿ ವ್ಯಾಪಿಸಿರುವ ಇಂದ್ರಿಯದಿಂದ ತಿಳಿಯುತ್ತಿದೆ. ಆದ್ದರಿಂದ ನಿನ್ನ ದೇಹವು ಅದೃಶ್ಯವಾಗಿಯೂ ಗುಣವು ದೃಶ್ಯವಾಗಿಯೂ ಇದೆ. ಶ್ರೀಹರಿಯು ಹಾಗಲ್ಲ. ಶ್ರೀಕೃಷ್ಣದೇವನ ದೇಹವೊಂದೇ ಯೋಗ್ಯರಿಗೆ ದೃಶ್ಯವಾಗಿಯೂ ಅಯೋಗ್ಯರಿಗೆ ಅದೃಶ್ಯವಾಗಿಯೂ ಇದೆ. ಆದ್ದರಿಂದ ದೇಹಮಾತ್ರ ಅದೃಶ್ಯವಾಗಿದ್ದು ಗುಣಗಳು ದೃಶ್ಯವಾಗಿರುವ ನೀನು ದೇಹವೊಂದೇ ಯೋಗ್ಯರಿಗೆ ದೃಶ್ಯವೂ ಅಯೋಗ್ಯರಿಗೆ ಅದೃಶ್ಯವೂ ಆಗಿರುವ ಶ್ರೀಕೃಷ್ಣದೇವನ ಸಾಮ್ಯವನ್ನು ಪಡೆಯುವೆಯಾ? ಇಲ್ಲವೇ ಇಲ್ಲ. ಶ್ರೀಕೃಷ್ಣದೇವನಿಗೆ ಸಮನೆಂದು ಭಾವಿಸಿ ಹೆಮ್ಮೆಪಡಬೇಡ. ಆ ಹೆಮ್ಮೆಯಿಂದ ನೀನು ನಮ್ಮ ಪ್ರಶ್ನೆಗೆ ಉತ್ತರವನ್ನು ಕೊಡಲಿಲ್ಲ, ಇರಲಿ ನಾವು ಮುಂದೆ ಹೋಗುವೆವು. '' ಎಂದು ಮುಂದೆ ಹೊರಟರು. ಪಕ್ಷಿಗಳನ್ನು ನೋಡಿ ಅವುಗಳನ್ನು ಪ್ರಾರ್ಥಿಸಿದರು.

## ಪಕ್ಷಿಗಳನ್ನು ಪ್ರಾರ್ಥಿಸಿದ್ದು ಮತ್ತು ನಿಂದಿಸಿದ್ದು

"ಎಲೈ ಪಕ್ಷಿಗಳೆ! ನಿಮ್ಮ ಬಾಯಿಗಳಿಂದ ಸಕಲ ಪಾಪಗಳನ್ನು ಪರಿಹರಿಸುವವನೂ ಪಾವನವಾದ ಎಲ್ಲಾ ವಸ್ತುಗಳಿಗೂ ಪಾವನತ್ವವನ್ನು ಕೊಡುವವನೂ ಆಗಿರುವ ಶ್ರೀಕೃಷ್ಣದೇವನನ್ನು ಹೊಗಳಿರಿ. ಅದರಿಂದ ನಿಮ್ಮ ಜನ್ಮವೂ ಸಫಲವಾಗುತ್ತದೆ. ನಿಮ್ಮ ಮಾತುಗಳನ್ನು ಕೇಳಿದ ಇತರರ ಜನ್ಮವೂ ಸಫಲವಾಗುತ್ತದೆ. ಕೇಳುವವರ ಕಿವಿಗೂ ಇಂಪಾಗಿರುತ್ತದೆ.

ನಿಮಗೆ ಶ್ರೀಕೃಷ್ಣದೇವನನ್ನು ಹೊಗಳಲೂ ಇಷ್ಟವಿಲ್ಲದಿದ್ದರೆ ನಿಮ್ಮ ಮಾತುಗಳನ್ನು ನಿಲ್ಲಿಸಿರಿ. ಶ್ರೀಕೃಷ್ಣದೇವನ

ಮಹಿಮೆಯನ್ನು ಹೇಳದಿರುವ ನಿಮ್ಮ ಮಾತುಗಳು ನಿಮ್ಮ ಗಂಟಲುಗಳನ್ನು ಒಣಗಿಸುತ್ತವೆ. ನಮ್ಮೆಲ್ಲರ ಕಿವಿಗಳಿಗೆ ಅಣಿಗಳಂತೆ ಕುಕ್ಕುತ್ತವೆ. ನಿಮಗೆ ಪ್ರಯೋಜನವಿಲ್ಲದ ಮತ್ತು ಪರರಿಗೆ ವ್ಯಥೆಯನ್ನು ಕೊಡುತ್ತಿರುವ ಈ ಮಾತುಗಳಿಂದ ಪ್ರಯೋಜನವೇನು? ಮುಂದೆ ಹೋಗುವೆವು." ಎಂದು ಹೇಳಿ ಮುಂದೆ ಹೊರಟರು. ಕೋಗಿಲೆಯನ್ನು ನೋಡಿ ಅದನ್ನು ಧಿಕ್ಕರಿಸಿದರು.

## ಕೋಗಿಲೆಯನ್ನು ನಿಂದಿಸಿದ್ದು

"ಈ ಕೋಗಿಲೆಯ ಸ್ವರವು ಶ್ರೀಕೃಷ್ಣದೇವನ ಸ್ವರದಂತಿದೆ. ಆ ಸ್ವರವನ್ನು ಕೇಳುವಾಗ ಶ್ರೀಕೃಷ್ಣದೇವನ ಜ್ಞಾಪಕವು ಬರುತ್ತಿದೆ. ಈ ಕೋಗಿಲೆಯು ಶ್ರೀಕೃಷ್ಣದೇವನ ಸನ್ನಿಧಾನದಲ್ಲಿ ಬಹುಕಾಲದ ವರೆಗೆ ವಾಸಿಸುತ್ತಿದ್ದು ಅವನಂತೆ ಮಧುರವಾದ ಸ್ವರದಿಂದ ಮಾತಾಡಲು ಅಭ್ಯಾಸವನ್ನು ಮಾಡಿರಬೇಕು. ಈಗಲೂ ಶ್ರೀಕೃಷ್ಣದೇವನನ್ನು ತನ್ನಲ್ಲಿ ಬಚ್ಚಿಟ್ಟುಕೊಂಡಿರಬೇಕು. ಇಲ್ಲದಿದ್ದರೆ ಇಷ್ಟು ಮಾಧುರ್ಯವು ಅದರ ಸ್ವರದಲ್ಲಿರಲಾರದು. ಆದರೂ ತನ್ನಲ್ಲಿ ಬಚ್ಚಿಟ್ಟುಕೊಂಡಿರುವ ಶ್ರೀಕೃಷ್ಣದೇವನನ್ನು ನಮಗೆ ಕೊಡುತ್ತಿಲ್ಲ."

ಈ ಕೋಗಿಲೆಯ ದುಷ್ಟತನವು ಅತ್ಯಂತ ಪ್ರಸಿದ್ಧವಾಗಿದೆ. ಕೋಗಿಲೆಗಳು ತಮ್ಮ ಮೊಟ್ಟೆಗಳನ್ನು ಕಾಗೆಗಳ ಮೊಟ್ಟೆಗಳನ್ನು ಕಾಗೆಗಳ ಮೊಟ್ಟೆಗಳ ಮಧ್ಯದಲ್ಲಿ ಇಟ್ಟುಬಿಡುತ್ತವೆ. ಕಾಗೆಗಳು ತಮ್ಮ ಮೊಟ್ಟೆಗಳೆಂದು ಭ್ರಮಿಸಿ ಆ ಮೊಟ್ಟೆಗಳನ್ನು ಬಹು ಜಾಗ್ರತೆಯಿಂದ ರಕ್ಷಿಸುತ್ತವೆ. ಆ ಮೊಟ್ಟೆಗಳಿಂದ ಮರಿಗಳು ಹುಟ್ಟುತ್ತವೆ. ಆ ಮರಿಗಳಿಗೆ ಹಾರುವ ಶಕ್ತಿಯು ಬರುವವರೆಗೆ ಕಾಗೆಗಳೇ ಆ ಮರಿಗಳನ್ನು ತಮ್ಮ ಮರಿಗಳೆಂದು ಭ್ರಮಿಸಿ ರಕ್ಷಿಸುತ್ತವೆ. ರೆಕ್ಕೆಯು ಬಂದ ಕೂಡಲೇ ಇವುಗಳು ಕಾಗೆಗಳ ಗೂಡುಗಳನ್ನು ಬಿಟ್ಟು ಹಾರಿಹೋಗುತ್ತವೆ. ಕೋಗಿಲೆಗಳ ಗೂಡುಗಳಲ್ಲಿ ಸೇರುತ್ತವೆ. ಆದ್ದರಿಂದಲೇ "ಪರಪುಷ್ಟಃ" ಅಂದರೆ ತನ್ನ ತಾಯಿ ಮತ್ತು ತಂದೆಗಳಾಗಿರುವ ಕೋಗಿಲೆಗಿಂತ ಭಿನ್ನವಾಗಿರುವ ಕಾಗೆಗಳಿಂದ ಬೆಳೆಯಿಸಲ್ಪಟ್ಟವುಗಳು ಎಂದು ಪ್ರಸಿದ್ಧವಾಗಿವೆ."

"ಅದು ಮಾತ್ರವಲ್ಲ ಕಾಗೆಗಳಿಂದ ಬೆಳೆಯಿಸಲ್ಪಟ್ಟ ಕೋಗಿಲೆಗಳು ಕಾಗೆಗಳ ಮೊಟ್ಟೆಗಳನ್ನೇ ನಾಶಮಾಡುತ್ತಾ ತಮ್ಮನ್ನು ಪೋಷಿಸಿರುವ ಕಾಗೆಗಳಿಗೆ ಅತ್ಯಂತ ದ್ರೋಹವನ್ನು ಮಾಡುತ್ತಿರುತ್ತವೆ. ಆದ್ದರಿಂದ ತಮ್ಮನ್ನು ಹುಟ್ಟಿಸಿ ಬೆಳೆಯಿಸಿದ ಕಾಗೆಗಳಿಗೆ ದ್ರೋಹವನ್ನು ಮಾಡುತ್ತಿರುವ ಈ ಕೋಗಿಲೆಗಳು ನಮಗೆ ದ್ರೋಹವನ್ನು ಮಾಡುತ್ತಿರುವುದು ಆಶ್ಚರ್ಯವಲ್ಲ. ಈ ಕೋಗಿಲೆಗಳಿಂದ ನಮಗೆ ಯಾವ ಪ್ರಯೋಜನವೂ ಆಗುವಂತಿಲ್ಲ."

" ಅದು ಮಾತ್ರವಲ್ಲ. ಪರಾನ್ನದಿಂದಲೇ ಜೀವನವನ್ನು ಮಾಡುತ್ತಿರುವ ಪರಮಲೋಭಿಗಳಾದ ಈ ಕೋಗಿಲೆಗಳು ಯಾರಿಗೆ ತಾನೇ ಉಪಕಾರವನ್ನು ಮಾಡುತ್ತವೆ? ಆದ್ದರಿಂದ ಮುಂದೆ ಹೋಗೋಣ ಎಂದು. ಮುಂದೆ ಹೊರಟರು. ಜಿಂಕೆಯನ್ನು ನೋಡಿ ಮಾತಾಡಿದರು.

## ಜಿಂಕೆಯನ್ನು ಪ್ರಾರ್ಥಿಸಿದ್ದು

"ಎಲೈ ಜಿಂಕೆಯೇ, ನಿನ್ನ ಎರಡು ಕಣ್ಣುಗಳು ತುಂಬಾ ಅರಳಿವೆ. ಕಣ್ಣುಗಳು ಇಷ್ಟು ಅರಳಬೇಕಾದರೆ ಬೇರೆ ಯಾವ ಕಾರಣವೂ ನಮಗೆ ತೋರುವುದಿಲ್ಲ ಶ್ರೀಕೃಷ್ಣದೇವನನ್ನೇ ನೀನು ನೋಡಿರಬೇಕು. ಆದ್ದರಿಂದಲೇ

ಶ್ರೀಕೃಷ್ಣದೇವನನ್ನು ನೋಡಿರುವ ನೀನು ಆಶ್ಚರ್ಯಪರಮನಾದ ಶ್ರೀಕೃಷ್ಣದೇವನು ಹೋದ ದಿಕ್ಕನ್ನೇ ಗುರಿಯಿಟ್ಟು ನೋಡಿತ್ತಿರುವಿ.

"ಅದು ಮಾತ್ರವಿಲ್ಲ. ನೀನು ನಿನ್ನ ಎರಡು ಕಿವಿಗಳನ್ನೂ ಅಲುಗಾಡಿಸದಂತೆ ಮೇಲ್ಮುಖವಾಗಿ ಎತ್ತಿಕೊಂಡಿರುವಿ. ಆದ್ದರಿಂದ ಶ್ರೀಕೃಷ್ಣದೇವನು ಕೊಳಲನ್ನು ಊದುತ್ತಾ ಹೋಗಿರಬೇಕು. ಆ ಕೊಳಲಿನ ಧ್ವನಿಯನ್ನು ಅತ್ಯಂತ ಭಕ್ತಿಯಿಂದ ಕೇಳುತ್ತಾ ಮೈಮರೆತು ಕಿವಿಗಳನ್ನು ನೆಟ್ಟಗೆ ಮಾಡಿಕೊಂಡಿರಬೇಕು. ಶ್ರೀಕೃಷ್ಣದೇವನು ನೀನಿರುವ ಪ್ರದೇಶವನ್ನು ಬಿಟ್ಟು ಮುಂದೆ ಹೋದರೂ ಅದನ್ನು ತಿಳಿಯದೆ ಮೈಮರೆತು ನೀನು ಕಿವಿಗಳನ್ನು ನೆಟ್ಟಗೆ ಮಾಡಿಕೊಂಡು ನಿಂತಿರಬೇಕು ಅವನು ಹೋದ ಹಾದಿಯು ನಿನಗೆ ತಿಳಿದಿದೆ. ನಮಗೆ ಆ ಹಾದಿಯನ್ನು ತಿಳಿಸಲಾರೆಯಾ? ಈ ಜಿಂಕೆಯು ತಿಳಿದ ವಿಷಯವನ್ನು ನಮಗೆ ಹೇಳಲಾರದು. ಆದ್ದರಿಂದ ನಾವೆಲ್ಲರೂ ಶ್ರೀಕೃಷ್ಣದೇವನನ್ನೇ ಪ್ರಾರ್ಥಿಸೋಣ" ಎಂದರು, ಸರ್ವರೂ ಶ್ರೀಕೃಷ್ಣದೇವನನ್ನು ಪ್ರಾರ್ಥಿಸಲು ಆರಂಭಿಸಿದರು.

## ಸರ್ವ ಸ್ತ್ರೀಯರೂ ಶ್ರೀಕೃಷ್ಣದೇವನನ್ನು ಪ್ರಾರ್ಥಿಸಿದ್ದು

ಓ ಕೃಷ್ಣದೇವ, ನೀನು ಅಪೌರುಷೇಯವೂ ಪರಮಪ್ರಮಾಣವೂ ಆಗಿರುವ ವೇದಗಳಿಗೆ ನಿಲುಕದವನು. ಆದ್ದರಿಂದಲೇ "ಯತೋ ವಾಚೋ ನಿವರ್ತಂತೇ" ಅಂದರೆ "ಶ್ರೀಹರಿಯನ್ನು ವರ್ಣಿಸುವುದಕ್ಕಾಗಿ ಹೊರಟ ವೇದಗಳೂ ವೇದಾಭಿಮಾನಿನಿಯರಾದ ಮಹಾಲಕ್ಷ್ಮೀದೇವಿಯರೂ ಆ ಶಕ್ತಿಯಿಂದ ಹಿಂದಿರುಗುತ್ತಿರುವರು" ಎಂದು ವೇದಗಳು ಹೇಳುತ್ತಿವೆ. ಅಪಾರ ಶಕ್ತಿಯಿಂದ ಯುಕ್ತವಾಗಿರುವ ವೇದಗಳಿಗೂ ವೇದಾಭಿಮಾನಿನಿಯರಾದ ಲಕ್ಷ್ಮೀದೇವಿಯರಿಗೂ ನಿಲುಕದ ನೀನು ಅಲ್ಪಶಕ್ತಿಯುಳ್ಳ ಮನುಷ್ಯರಿಗೆ ಸಿಗುವಿಯಾ? ಅಲ್ಪಶಕ್ತಿಯುಳ್ಳ ಮನುಷ್ಯರೂ ಆ ಮನುಷ್ಯರಲ್ಲಿ ಅಬಲೆಯರಾದ ನಾವೂ ನಿನ್ನನ್ನು ನೋಡಲೂ ತಿಳಿಯಲೂ ಶಕ್ತರಲ್ಲ. ಆದರೆ ನಮಗೆ ನಿಲುಕದ ನೀನು ನಮ್ಮ ಹೃದಯಕಮಲವನ್ನು ಬಿಟ್ಟು ಹೋಗಬೇಕಲ್ಲವೇ? ನಮ್ಮ ಹೃದಯಕಮಲವನ್ನು ಬಿಟ್ಟು ಅಗಲದೆ ಯಾಕೆ ಅಲ್ಲಿಯೇ ಕುಳಿತಿರುವಿ? " ಇದು ಒಬ್ಬ ಗೋಪಿಕಾಸ್ತ್ರೀಯ ದೀನವಾದ ಮಾತು.

"ಎಲೈ ಸಖಿಯೇ, "ಬ್ರಹ್ಮಣಾ ತ್ಯಕ್ತದೇಹಸ್ತು ಮೃತ ಇತ್ಯುಚ್ಯತೇ ಬುಧೈಃ" ಅಂದರೆ ಶ್ರೀಕೃಷ್ಣದೇವನು ಯಾರ ದೇಹವನ್ನು ಬಿಡುವನೋ ಅವನನ್ನು ಮೃತನಾದವನು ಎಂದು ಜ್ಞಾನಿಗಳು ಹೇಳುತ್ತಿರುವರು" ಎಂದು ಶಾಸ್ತ್ರವು ತಿಳಿಸುತ್ತದೆ. ನೀನು ನಿನ್ನ ಹೃದಯಕಮಲದಿಂದ ಶ್ರೀಕೃಷ್ಣದೇವನು ಬಿಟ್ಟು ಹೋಗಬಾರದೇ ಎಂದು ಪ್ರಾರ್ಥಿಸುತ್ತಿರುವಿ. ಶ್ರೀಹರಿಯು ನಿನ್ನ ದೇಹವನ್ನು ಬಿಟ್ಟು ಹೋಗಬೇಕೆಂದು ಬಯಸುತ್ತಿರುವ ನೀನು ಮರಣವನ್ನು ಬಯಸಿದಂತಾಗಲಿಲ್ಲವೇ? ಪ್ರಾಣಿಗಳಿಗೆ ಸಹಿಸುವುದಕ್ಕೆ ಸಾಧ್ಯವಿಲ್ಲದಿರುವ ಮರಣವನ್ನು ನೀನು ಬಯಸಬಹುದೇ?" ಇದು ಒಬ್ಬ ವಿವೇಕ ಸ್ತ್ರೀಯ ಮಾತು.

" ಸಖಿಯೇ, ಹೌದು. ಶ್ರೀಕೃಷ್ಣದೇವನ ಪಾದಗಳನ್ನು ನೋಡದಿರುವ ನಾನು ಮರಣವನ್ನು ಬಯಸುತ್ತಿರುವುದು ನಿಜ. ಬದುಕಿದ್ದರೆ ಬದುಕಿರುವವರೆಗೂ ಶ್ರೀಕೃಷ್ಣದೇವನ ವಿರಹದಿಂದ ಏರ್ಪಡುತ್ತಿರುವ ಸಹಿಸಲಾರದ ವೇದನೆಯನ್ನು ಅನುಭವಿಸುತ್ತಿರಬೇಕು. ಈಗಲೇ ಸತ್ತರೆ ಶ್ರೀಕೃಷ್ಣದೇವನ ವಿರಹದಿಂದ ಬರುವ ದುಃಖವು ಈ ಕ್ಷಣದಲ್ಲಿಯೇ ಮುಗಿಯುತ್ತದೆ. ಆದ್ದರಿಂದ ಅಪಾರ ವೇದನೆಗೆ ಸಾಧನವಾಗಿರುವ ಜೀವನಕ್ಕಿಂತ

ಸಕಲ ವೇದನೆಗಳನ್ನೂ ಈಗಲೇ ಪರಿಹರಿಸುವ ಮರಣವೇ ಮೇಲಲ್ಲವೇ?" ಇದು ವಿವೇಕ ಸ್ತ್ರೀಗೆ ಮೊದಲನೆಯ ಸ್ತ್ರೀಯ ಉತ್ತರ."

" ಎಲೈ ಸಖಿಯೇ ಪ್ರಗಲ್ಭಾ ಎಂಬ ನಾಯಿಕೆಯ ಲಕ್ಷಣವನ್ನು ಹೇಳುವೆನು. ಎಷ್ಟು ದುಃಖಗಳು ಬಂದರೂ ಆ ದುಃಖಗಳನ್ನು ಸ್ವಲ್ಪವೂ ಹೊರಗೆ ತೋರಿಸಬಾರದು. ಅತ್ಯಂತ ಧೀರಳಂತೆ ಕಾಣಿಸಬೇಕು. ಹೀಗಿರುವ ಸ್ತ್ರೀಯು ಪ್ರಗಲ್ಭಳೆನಿಸುವಳು. ಪ್ರಗಲ್ಭ ಸ್ತ್ರೀಯರಲ್ಲಿ ನಾಯಕನು ವಿಶೇಷವಾಗಿ ಗೌರವವನ್ನು ಮಾಡುವನು. ನಿನ್ನಲ್ಲಿ ಪ್ರಗಲ್ಭಳ ಲಕ್ಷಣವಿಲ್ಲ. ಆದ್ದರಿಂದ ಶ್ರೀಕೃಷ್ಣದೇವನ ವಿಶೇಷ ಗೌರವಕ್ಕೆ ಪಾತ್ರಳಾಗಲಾರೆ. ನಿನ್ನಲ್ಲಿ ಪ್ರಾಗಲ್ಭ್ಯವಿಲ್ಲ ಎಂಬ ವಿಷಯವನ್ನು ಈಗ ಸ್ಪಷ್ಟಪಡಿಸುವನು."

"ಶ್ರೀಕೃಷ್ಣದೇವನು ನಮ್ಮನ್ನೂ ನಿನ್ನನ್ನೂ ಬಿಟ್ಟು ಹೋಗಿ ಕೆಲವು ನಿಮಿಷಗಳಾಗಿವೆ. ಅಷ್ಟರಲ್ಲೇ ನಿನ್ನ ದೇಹವು ಕಾಮಜ್ವರದಿಂದ ಕೃಶವಾಯಿತು. ಕೆಲವು ಕ್ಷಣಗಳಲ್ಲಿಯೇ ನಿನ್ನ ಮನಸ್ಸಿನಲ್ಲಿ ದೈನ್ಯವೂ ಬಂತು. ಕೆಲವು ನಿಮಿಷಗಳಲ್ಲಿಯೇ ದೇಹವನ್ನು ಕೃಶವಾಗುವಂತೆ ಮಾಡಿಕೊಂಡು ಮನಸ್ಸಿನಲ್ಲಿ ಅಪಾರ ದೈನ್ಯವನ್ನು ಪಡೆದಿರುವ ನೀನು ಪ್ರಗಲ್ಭಳೆನಿಸುವೆಯಾ? ಅಪ್ರಗಲ್ಭಳಾದ ನಿನ್ನಲ್ಲಿ ಪ್ರಗಲ್ಭಾಪ್ರಿಯನಾದ ಶ್ರೀಕೃಷ್ಣದೇವನು ಗೌರವವನ್ನು ತೋರಿಸುವನಾ? ತೋರಿಸಲಾರನು. ಆದ್ದರಿಂದ ನೀನು ಪ್ರಾಗಲ್ಭ್ಯವನ್ನು ವಹಿಸು. ಶ್ರೀಕೃಷ್ಣದೇವನ ವಿಶೇಷ ಗೌರವಕ್ಕೆ ಪಾತ್ರಳಾಗು." ಇದು ದೀನಳೂ ಕೃಶಳೂ ಆಗಿರುವ ಸ್ತ್ರೀಯನ್ನು ನೋಡಿ ಹೇಳಿದ ಅವಳ ಸಖಿಯ ಮಾತು.

"ಎಲೈ ಸಖಿಯೈ ಶ್ರೀಕೃಷ್ಣದೇವನಿಗೆ "ದೀನನಾಥ" ಅಂದರೆ "ದೀನರಿಗೆ ನಾಥನು" ಎಂದು ಹೆಸರು. ನಾನು ದೀನಳಾಗಿರುವೆನು. ಶ್ರೀಕೃಷ್ಣದೇವನು ನನಗೆ ನಾಥನಾಗಿರುವನು. ಶ್ರೀಕೃಷ್ಣದೇವನು ದೀನನಾಥನೆನಿಸಿದ ಮಾತ್ರದಿಂದಲೇ ನನ್ನಲ್ಲಿರುವ ದೈನ್ಯವು ಅವನು ನನ್ನನ್ನು ಬಿಟ್ಟು ಹೋದುದರಿಂದ ಏರ್ಪಟ್ಟದೆ ಎಂದು ತಿಳಿಯಬೇಡ. ಆದರೆ ಅವನ ವಿಯೋಗವು ನನಗೆ ಏರ್ಪಟ್ಟಿರುವುದು ನಿಜ. ಆ ವಿಯೋಗವು ಬೆಂಕಿಗಿಂತಲೂ ಉಗ್ರವಾದುದು ಎಂಬ ವಿಷಯವೂ ನಿಜ. ಆ ವಿರಹವೆಂಬ ತೀವ್ರವಾದ ಅಗ್ನಿಯು ನನ್ನಲ್ಲಿ ಅಪಾರವಾದ ದೈನ್ಯವು ಏರ್ಪಡುವಂತೆ ಮಾಡಿರುವುದೂ ನಿಜ. ಈ ದೈನ್ಯವು ಅವನು ನನ್ನನ್ನು ಬಿಟ್ಟು ಹೋದುದಕ್ಕಾಗಿ ಏರ್ಪಟ್ಟಿಲ್ಲ. ಅವನ ವಿರಹವೆಂಬ ತೀವ್ರವಾದ ಅಗ್ನಿಯಿಂದ ಏರ್ಪಟ್ಟಿದೆ."

" ನನ್ನ ಅಂಗಗಳೆಲ್ಲವೂ ತುಂಬಾ ಕೃಶವಾಗಿವೆ. ಈ ಕೃಶತೆಯು ಯಾವಾಗಲೂ ಇದೆ. ಶ್ರೀಕೃಷ್ಣದೇವನು ನನ್ನನ್ನು ಬಿಟ್ಟುಹೋದ ಕ್ಷಣದಿಂದ ಈ ಕೃಶತೆಯು ಅಧಿಕವಾಯಿತು. ಇದೂ ನಿಜ. ಈ ಕೃಶತೆಯು ಅವನು ನನ್ನನ್ನು ಬಿಟ್ಟು ಹೋದುದರಿಂದ ಏರ್ಪಡಲಿಲ್ಲ. ಅವನ ವಿರಹ ಎಂಬ ತೀವ್ರವಾದ ಬೆಂಕಿಯ ಪ್ರಭಾವದಿಂದಲೇ ಏರ್ಪಟ್ಟಿದೆ."

"ನನ್ನಲ್ಲಿರುವ ದೇಹಕಾರ್ಶ್ಯವೂ ದೈನ್ಯವೂ ಶ್ರೀಕೃಷ್ಣದೇವನು ಬಿಟ್ಟು ಹೋಗಿದ್ದರಿಂದ ಏರ್ಪಟ್ಟಿದ್ದರೆ ನಾನು ಪ್ರಗಲ್ಭಳು ಎಂದು ಹೇಳಲು ಅವಕಾಶವಿದೆ. ಅವನು ನನ್ನನ್ನು ಬಿಟ್ಟು ಹೋದುದರಿಂದ ಏರ್ಪಡಲಿಲ್ಲ. ಆದ್ದರಿಂದ ನಾನು ಪ್ರಗಲ್ಭಳೇ ಆಗಿರುವೆನು. ಪ್ರಗಲ್ಭಾಪ್ರಿಯನಾದ ಶ್ರೀಕೃಷ್ಣದೇವನು ನನ್ನಲ್ಲಿ ಗೌರವವನ್ನು ಖಂಡಿತವಾಗಿಯೂ ತೋರಿಸುವನು." ಎಂದಳು.

ಈ ಸ್ತ್ರೀಯು ತನ್ನಲ್ಲಿರುವ ದೈನ್ಯಕ್ಕೂ ದೇಹಕಾರ್ಶ್ಯಕ್ಕೂ ಕಾರಣವನ್ನು ವಿಮರ್ಶಿಸುತ್ತಿರುವಳು. ಶ್ರೀಕೃಷ್ಣದೇವನ ವಿರಹವು ಕಾರಣವಲ್ಲವೆಂದು ಹೇಳುತ್ತಾ ಶ್ರೀಕೃಷ್ಣಗೆ ವನ ವಿರಹಾಗ್ನಿಯೇ ಕಾರಣವೆಂದು ದೃಢಪಡಿಸುತ್ತಿರುವ ಹುಚ್ಚಿ ಇವಳು.

"ಎಲೈ ಸಖಿಯರೆ! ನಾವೆಲ್ಲರೂ ಕಾತ್ಯಾಯನೀವ್ರತವನ್ನು ಮಾಡಿದೆವು. ಅಂದು " ನಿಮ್ಮೆಲ್ಲರನ್ನೂ ಸುಖಪಡಿಸುವೆನು" ಎಂದು ಶ್ರೀಕೃಷ್ಣದೇವನು ನಮ್ಮ ಮುಂದೆ ಪ್ರತಿಜ್ಞೆ ಮಾಡಿರುವನು. ಇಂದು ತನ್ನ ಪ್ರತಿಜ್ಞೆಗೆ ವಿರುದ್ಧವಾಗಿ ನಮ್ಮನ್ನು ಕಷ್ಟಪಡಿಸುತ್ತಿರುವನು. ಇವನು ಸುಳ್ಳು ಮಾತುಗಳನ್ನು ಹೇಳುವವನು ಎಂದು ನಮ್ಮೆಲ್ಲರಿಗೂ ತಿಳಿದ ಮೇಲೆ ಇವನನ್ನು ಪ್ರಾರ್ಥಿಸಬಹುದೇ? ಬೇಡ, ಬೇಡ, ನಾವೆಲ್ಲರೂ ಸುಳ್ಳುಗಾರನಾದ ಶ್ರೀಕೃಷ್ಣದೇವನನ್ನು ಮರೆಯೋಣ, ಮನೆಗೆ ಹೋಗೋಣ" ಎಂದು ಒಬ್ಬ ಗೋಪಿಕಾಸ್ತ್ರೀಯು ಹೇಳಿದಳು. ಅದನ್ನು ಕೇಳಿ ಎಲ್ಲಾ ಗೋಪಿಕಾಸ್ತ್ರೀಯರೂ ಒಟ್ಟುಗೂಡಿ ಹೇಳಿದರು.

"ಎಲೈ ಸಖಿಯೇ ನೀನು ಹೇಳಿದಂತೆ ಮಾಡಬೇಕೆಂದು ನಮಗೂ ತೋರುತ್ತದೆ. ಆದರೆ ಹಾಗೆ ಮಾಡಲು ಸಾಧ್ಯವಿಲ್ಲ. ಶ್ರೀಕೃಷ್ಣದೇವನ ಗಾಯನದಂತೆ ಕೋಗಿಲೆಗಳು ಹಾಡುತ್ತಿವೆ. ಅವನ ಚಮತ್ಕಾರವಾದ ಮಾತುಗಳಂತೆ ಗಿಳಿಗಳು ಮಾತಾಡುತ್ತಿವೆ. ಅವನ ತಲೆಗೂದಲುಗಳಂತೆ ನೀಲಬಣ್ಣವೂ ವರ್ತುಲವಾದ ಆಕಾರವೂ ಉಳ್ಳ ಭ್ರಮರಗಳು ಓಡಾಡುತ್ತಿವೆ. ಶ್ರೀಕೃಷ್ಣದೇವನ ಸುಂದರವಾದ ಮುಖದಂತೆ ಚಂದ್ರನು ಕಾಣಿಸುತ್ತಿರುವನು. ಎಲ್ಲೆಲ್ಲಿ ಹೋದರೂ ಅಲ್ಲಲ್ಲಿ ಕಾಣಿಸುತ್ತಿರುವ ಈ ಕೋಗಿಲೆ ಮುಂತಾದವುಗಳು ಶ್ರೀಕೃಷ್ಣದೇವನ ಸಂಗೀತ ಮುಂತಾದವುಗಳನ್ನು ನೆನಸುವಂತೆ ಮಾಡುತ್ತಾ ಅವನನ್ನು ಜ್ಞಾಪಕಪಡಿಸುತ್ತಿವೆ. ಅವನನ್ನು ಜ್ಞಾಪಕಪಡಿಸುತ್ತಾ ನಮ್ಮ ಬಾಯಿಗಳಿಂದ ಶ್ರೀಕೃಷ್ಣದೇವನ ಕಥೆಯನ್ನು ಈ ಕೋಗಿಲೆ ಮುಂತಾದವುಗಳು ಹೇಳಿಸುತ್ತಿವೆ. ಏನು ಮಾಡೋಣ" ಎಂದು ಮುಂದೆ ಹೊರಟರು.

## ಒಬ್ಬ ಸ್ತ್ರೀಯ ಶೋಕದಕತೆ

ಗೋಪಿಕಾಸ್ತ್ರೀಯರೆಲ್ಲರೂ ಅಹಂಕಾರಿಗಳಾದ ಕೂಡಲೇ ಅವರೆಲ್ಲರನ್ನೂ ಬಿಟ್ಟು ಅದೃಶ್ಯನಾಗಿ ಶ್ರೀಕೃಷ್ಣದೇವನು ಹೊರಟುಹೋದನು. ಅವರಿಗೆಲ್ಲರಿಗೂ ಅಹಂಕಾರವು ಕಡಿಮೆಯಾಯಿತು. ಶ್ರೀಕೃಷ್ಣದೇವನನ್ನು ಹುಡುಕುತ್ತಾ ಹೋದರು. ಆಗ ಕಾಡಿನ ಮಧ್ಯದಲ್ಲಿ ಒಂದೆಡೆಯಲ್ಲಿ ಶ್ರೀಕೃಷ್ಣದೇವನ ಹೆಜ್ಜೆಯ ಗುರುತುಗಳನ್ನು ಕಂಡರು. ಆ ಗುರುತುಗಳು ಹೋದ ಹಾದಿಯಲ್ಲಿಯೇ ಶ್ರೀಕೃಷ್ಣದೇವನು ಹೋಗಿರುವುದಾಗಿಯೂ ಆ ಮಾರ್ಗವನ್ನು ಅನುಸರಿಸಿಕೊಂಡು ಹೋದರೆ ಶ್ರೀಕೃಷ್ಣದೇವನನ್ನು ನೋಡಬಹುದೆಂದೂ ತೀರ್ಮಾನಿಸಿದರು.

ಆ ಹೆಜ್ಜೆಯ ಗುರುತನ್ನು ಅನುಸರಿಸಿಕೊಂಡು ಬಂದರು. ಆಗ ಆ ಹೆಜ್ಜೆಯ ಗುರುತಿನ ಪಕ್ಕದಲ್ಲಿ ಇನ್ನೊಂದು ಹಜ್ಜೆಯ ಗುರುತು ಕಾಣಿಸಿತು. ಆ ಹೆಜ್ಜೆಯ ಗುರುತು ಶ್ರೀಕೃಷ್ಣದೇವನ ಹೆಜ್ಜೆಯ ಗುರುತುಗಳಿಗೆ ತುಂಬಾ ಸಮೀಪದಲ್ಲಿ ಮುಂದುವರೆದಂತೆ ತಿಳಿಯಿತು. ಇದನ್ನು ನೋಡಿದ ಸ್ತ್ರೀಯರು ಅವನೊಬ್ಬನೇ ಹೋಗಲಿಲ್ಲವೆಂದೂ ಅವನೊಡನೆ ಇನ್ನೊಬ್ಬ ವ್ಯಕ್ತಿಯು ಹೋದಂತೆಯೂ ತೀರ್ಮಾನಿಸಿದರು.

ಆ ಹೆಜ್ಜೆಯ ಗುರುತುಗಳನ್ನು ದೃಷ್ಟಿಸಿ ನೋಡಿದರು. ಆ ಹೆಜ್ಜೆಯ ಗುರುತಿನಲ್ಲಿರುವ ಲಕ್ಷಣವನ್ನು

ಪರೀಕ್ಷಿಸಿದರು. ಅದು ಸ್ತ್ರೀಯ ಹೆಜ್ಜೆಯ ಗುರುತೆಂದೂ ಪುರುಷನ ಹೆಜ್ಜೆಯ ಗುರುತಲ್ಲವೆಂದೂ ತೀರ್ಮಾನಿಸಿದರು. ತಮ್ಮ ಗುಂಪಿನಲ್ಲಿ ಸೇರಿದ ಯಾರೋ ಒಬ್ಬ ಗೋಪಿಕಾಸ್ತ್ರೀಯನ್ನು ಕರೆದುಕೊಂಡು ಶ್ರೀಕೃಷ್ಣದೇವನು ಹೋಗಿರುವುದಾಗಿ ತೀರ್ಮಾನಿಸಿದರು. ಅವಳು ಭಾಗ್ಯವಂತಳೆಂದೂ ತಾವು ನಿರ್ಭಾಗ್ಯರೆಂದೂ ಭಾವಿಸಿದರು. ಅವಳಲ್ಲಿ ಹೊಟ್ಟೆಕಿಚ್ಚೂ ಏರ್ಪಟ್ಟಿತು.

ಆ ಎರಡು ಹೆಜ್ಜೆಗಳ ಗುರುತುಗಳನ್ನೂ ಅನುಸರಿಸಿಕೊಂಡು ಬಹುದೂರದವರೆಗೆ ಬಂದರು. ಒಂದೆಡೆಯಲ್ಲಿ ಎರಡನೆಯ ಹೆಜ್ಜೆಯ ಗುರುತು ಕಾಣಿಸಲಿಲ್ಲ. ಅಲ್ಲಿಂದ ಮುಂದಿನ ಮಾರ್ಗದಲ್ಲಿ ಯೂ ಎಲ್ಲೆಲ್ಲಿಯೂ ಕಾಣಿಸಲಿಲ್ಲ. ಆದ್ದರಿಂದ ಅವನೊಡನೆ ಹೋದ ಆ ಸ್ತ್ರೀಯು ಅಲ್ಲಿಂದ ಮುಂದೆ ನಡೆದುಕೊಂಡು ಹೋಗಲಿಲ್ಲವೆಂದು ತೀರ್ಮಾನಿಸಿದರು.

ಮೊದಲನೆಯ ಹೆಜ್ಜೆಯ ಗುರುತನ್ನು ತುಂಬಾ ದೃಷ್ಟಿಸಿ ನೋಡಿದರು. ಉಸುಗಿನ ಮಾರ್ಗದಲ್ಲಿ ನಡೆದು ಹೋದ ಶ್ರೀಕೃಷ್ಣದೇವನ ಆ ಹೆಜ್ಜೆಯ ಗುರುತು ಉಸುಗಿನಲ್ಲಿ ಹಿಂದಿಗಿಂತ ಆಳವಾಗಿ ಪ್ರವೇಶಿಸಿದಂತೆ ಕಾಣಿಸಿತು. ಹಿಂದಿನ ಹೆಜ್ಜೆಗಳು ಆಳವಿಲ್ಲದಿರುವುದನ್ನೂ ಮುಂದಿನ ಹೆಜ್ಜೆಗಳು ಆಳವಾಗಿರುವುದನ್ನೂ ಕಂಡ ಸ್ತ್ರೀಯರು ಶ್ರೀಕೃಷ್ಣದೇವನ ದೇಹವು ಹಿಂದೆ ಭಾರವಿಲ್ಲದೆಯೂ ಮುಂದೆ ಭಾರಸಹಿತವಾಗಿಯೂ ಇದ್ದಂತೆ ತೀರ್ಮಾನಿಸಿದರು.

ಅಲ್ಲಿಂದ ಮುಂದೆ ಕಾಲು ನಡೆಯಿಂದ ನಡೆದುಕೊಂಡು ಹೋಗದಿರುವ ಸ್ತ್ರೀಯನ್ನು ಶ್ರೀಕೃಷ್ಣದೇವನು ಆ ಪ್ರದೇಶದಿಂದ ಎತ್ತಿಕೊಂಡು ಹೋಗಿರುವುದಾಗಿಯೂ ಆದ್ದರಿಂದಲೇ ಅವಳ ಭಾರ ಮತ್ತು ಶ್ರೀಕೃಷ್ಣದೇವನ ದೇಹದ ಭಾರ ಇವುಗಳಿಂದ ಆ ಪ್ರದೇಶದಿಂದ ಅವನ ಹೆಜ್ಜೆಯು ಇಮ್ಮಡಿಯಾಗಿ ಉಸುಗಿನಲ್ಲಿ ಪ್ರವೇಶಿಸಿದೆಯೆಂದೂ ತೀರ್ಮಾನಿಸಿದರು.

ಶ್ರೀಕೃಷ್ಣನ ಆಳವಾದ ಹೆಜ್ಜೆಯ ಗುರುತುಗಳನ್ನೇ ಅನುಸರಿಸಿಕೊಂಡು ಬಂದರು. ಒಂದೆಡೆಯಲ್ಲಿ ಅವನ ಹೆಜ್ಜೆಯ ಗುರುತು ನಿಂತುಹೋಯಿತು. ಅಲ್ಲಿ ಸುತ್ತಲೂ ಪರೀಕ್ಷಿಸಿದರು. ಒಂದು ಪುಷ್ಪದ ಗಿಡದ ಬುಡದಲ್ಲಿ ಶ್ರೀಕೃಷ್ಣದೇವನ ಹೆಜ್ಜೆಯ ಮುಂಭಾಗ ಮಾತ್ರ ಭೂಮಿಯಲ್ಲಿ ಊರಿ ನಿಂತಂತೆಯೂ ಹಿಂಭಾಗ ಭೂಮಿಯನ್ನು ಸ್ಪರ್ಶಿಸದಂತೆಯೂ ಕಾಣಿಸಿತು. ಅಲ್ಲಿ ಆ ಸ್ತ್ರೀಗಾಗಿ ಪುಷ್ಪಗಳನ್ನು ಕೊಯ್ದಂತೆಯೂ ಎತ್ತರದಲ್ಲಿರುವ ಪುಷ್ಪಗಳನ್ನು ಕೊಯ್ಯುವುದಕ್ಕಾಗಿ ಅವನ ಹೆಜ್ಜೆಯ ಮುಂಭಾಗವನ್ನು ಮಾತ್ರ ಊರಿ ನಿಂತಿರುವುದಾಗಿಯೂ ತೀರ್ಮಾನಿಸಿದರು.

ಒಂದೆಡೆಯಲ್ಲಿ ಒಬ್ಬರ ಹಿಂದೆ ಇನ್ನೊಬ್ಬರು ಕುಳಿತ ಗುರುತನ್ನು ಕಂಡರು. ತಲೆಯ ಕೂದಲುಗಳನ್ನೂ ಕಂಡರು. ಅದನ್ನು ನೋಡಿದ ಸ್ತ್ರೀಯರು ಆ ಸ್ತ್ರೀಗೆ ಶ್ರೀಕೃಷ್ಣದೇವನು ತಲೆಯನ್ನು ಬಾಚಿ ಹೂವುಗಳನ್ನು ಮುಡಿಸಿರುವುದಾಗಿ ತೀರ್ಮಾನಿಸಿದರು.

ಅಲ್ಲಿಂದ ಮುಂದೆ ಶ್ರೀಕೃಷ್ಣದೇವನ ಕಾಲಿನ ಗುರುತು ಕಾಣಿಸಲಿಲ್ಲ. ಅವನ ಜೊತೆಯಲ್ಲಿ ಹೋದ ಸ್ತ್ರೀಯ ಕಾಲಿನ ಗುರುತು ಮಾತ್ರ ತಿಳಿಯಿತು. ಶ್ರೀಕೃಷ್ಣದೇವನ ಜೊತೆಯಲ್ಲಿ ಬಂದು ಅವನೊಡನೆ ಸುಖಿಸಿರುವ ಆ ಸ್ತ್ರೀಗೆ ಶ್ರೀಕೃಷ್ಣದೇವನು ಹೋದ ಹಾದಿಯು ತಿಳಿದಿರಬೇಕೆಂದೂ ಅವಳನ್ನೂ ಕೇಳಿ ಶ್ರೀಕೃಷ್ಣದೇವನು ಹೋದ ಹಾದಿಯನ್ನು ತಿಳಿಯಬಹುದೆಂದೂ ತೀರ್ಮಾನಿಸಿದರು.

ಅವಳ ಹೆಜ್ಜೆಯ ಗುರುತನ್ನು ಹಿಂಬಾಲಿಸಿಕೊಂಡು ಬಂದರು. ಆಗ ಅವಳು ಒಂದೆಡೆಯಲ್ಲಿ ಅಳುತ್ತಾ ಕುಳಿತಿರುವುದನ್ನು ಕಂಡರು. ಅವಳನ್ನು ನೋಡಿ ಕೇಳಿದರು. ಇವರೆಲ್ಲರೂ ಊಹಿಸಿದ ವಿಷಯಗಳೆಲ್ಲಾ ಸತ್ಯವೆಂದು ತಿಳಿಯಿತು. ಆಗ ಇವರೆಲ್ಲರೂ ಅವಳನ್ನು ಕುರಿತು ಅಪಹಾಸ ಮಾಡುತ್ತಾ ಮಾತಾಡಿದರು.

"ಎಲೈ ರಮಣಿಯೇ! ನೀನು ಪರಮ ಸುಂದರಿಯಾಗಿರುವಿ. ಆದ್ದರಿಂದಲೇ ನಮ್ಮೆಲ್ಲರನ್ನೂ ಬಿಟ್ಟು ನಿನ್ನೊಬ್ಬಳನ್ನೇ ಕರೆದುಕೊಂಡು ಶ್ರೀಕೃಷ್ಣದೇವನು ಬಂದಿರುವನು. ನಿನ್ನ ಹೆಗಲಿನ ಮೇಲೆ ಕೈಗಳನ್ನಿಟ್ಟುಕೊಂಡು ಸರಸಸಲ್ಲಾಪಗಳನ್ನು ಮಾಡುತ್ತಾ ಬಹುದೂರದ ವರೆಗೆ ಬಂದಿರುವನು. ಮುಂದೆ ಕಾಲು ನಡೆಯಿಂದ ನಡೆದುಕೊಂಡು ಬರಲು ನಿನಗೆ ಸಾಧ್ಯವಾಗಲಿಲ್ಲವೇ? ನಮ್ಮೆಲ್ಲರಿಗಿಂತಲೂ ನೀನೇ ಶ್ರೇಷ್ಠಳು ಎಂದು ತಿಳಿಸುವುದಕ್ಕಾಗಿ "ನಾನು ಮುಂದೆ ನಡೆಯಲು ಅಶಕ್ತಳಾಗಿರುವೆನು. ನಿನಗೆ ಬೇಕಾದಲ್ಲಿಗೆ ನನ್ನನ್ನು ಎತ್ತಿಕೊಂಡು ಹೋಗು" ಎಂದು ಹೇಳಿರುವಿ. ಅವನೂ ನಾಚಿಕೆಯನ್ನು ಬಿಟ್ಟು ಎತ್ತಿಕೊಂಡು ಬಹುದೂರದವರೆಗೆ ಬಂದನು. ತಲೆಯನ್ನು ಹಿಕ್ಕಬೇಕೆಂದೂ ಹೂಗಳನ್ನು ಮುಡಿಸಬೇಕೆಂದೂ ಗರ್ವಪೂರ್ಣವಾಗಿ ಹೇಳಿದಿ ಅದನ್ನೂ ಮಾಡಿದನು. ಸೌಂದರ್ಯಮದದಿಂದ ಪರಮ ಸುಂದರನಾದ ಶ್ರೀಕೃಷ್ಣದೇವನನ್ನು ವಶಪಡಿಸಿಕೊಂಡ ಮಹಾಗರ್ವಿಯು ನೀನು."

"ಅವನ ಪರಮಸೌಂದರ್ಯವು ನಮ್ಮೆಲ್ಲರ ಗರ್ವವನ್ನೂ ಅಡಗಿಸಿತು. ನಿನ್ನ ಗರ್ವವನ್ನು ಅಡಗಿಸುವುದೇನಾಶ್ಚರ್ಯ? ನಮ್ಮ ಗರ್ವವನ್ನು ಅಡಗಿಸುವುದಕ್ಕಾಗಿ ಉಪಯೋಗಿಸಿದ ಮೂಲಿಕೆಯನ್ನು ನಿನಗೂ ಉಪಯೋಗಿಸಿದನೇ? ನಮ್ಮ ಮುಂದೆ ಅದೃಶ್ಯನಾದಂತೆ ನಿನ್ನ ಮುಂದೆಯೂ ಅದೃಶ್ಯನಾದನೇ? ನಮ್ಮನ್ನು ಬಿಟ್ಟು ಬಹುದೂರದವರೆಗೆ ಹೋದಂತೆ ನಿನ್ನನ್ನೂ ಬಿಟ್ಟು ಬಹುದೂರದವರೆಗೆ ಹೋದನೇ? ಎಂದು ಪ್ರಶ್ನಿಸಿದರು."

" ಶ್ರೀಕೃಷ್ಣದೇವನು ತನ್ನನ್ನೂ ಬಿಟ್ಟು ಬಹುದೂರದ ವರೆಗೆ ಹೋದನು" ಎಂದು ಹೇಳುವುದು ತನ್ನ ಗೌರವಕ್ಕೆ ಹಾನಿ ಕೊಡುತ್ತದೆ. ಅವನ ಪರಮಸುಂದರವಾದ ರೂಪವನ್ನೂ ಅವನ ಸೌಂದರ್ಯದ ಮುಂದೆ ತನ್ನ ಸೌಂದರ್ಯವು ತೃಣಪ್ರಾಯವಾಗಿರುವುದನ್ನೂ ಸ್ಮರಿಸುತ್ತಿರುವಾಗ ಶ್ರೀಕೃಷ್ಣದೇವನು ತನ್ನ ಸೌಂದರ್ಯದಿಂದ ಮೋಹಿತನಾಗಲಿಲ್ಲವೆಂದು ತಿಳಿಯುತ್ತದೆ. ಆದ್ದರಿಂದಲೇ ಹಿಂದಿರುಗಿ ಬರಲಾರನೆಂಬ ನಂಬಿಕೆಯೂ ಏರ್ಪಡುತ್ತಿದೆ. ಈ ನಂಬಿಕೆಯಿಂದ ತನ್ನ ಮನಸ್ಸಿನಲ್ಲಿರುವ ಧೈರ್ಯವೆಲ್ಲವೂ ಹೋಗುತ್ತಿದೆ. " ನಾನೇ ಶ್ರೀಕೃಷ್ಣದೇವನನ್ನು ಬಿಟ್ಟೆನು. ಅವನಾಗಿ ನನ್ನನ್ನು ಬಿಡಲಿಲ್ಲ." ಎಂಬ ಗರ್ವದ ಮಾತುಗಳನ್ನೂ ಆಡಲು ಶಕ್ತಳಾಗಲಿಲ್ಲ. ತುಂಬಾ ಯೋಚಿಸಿದಳು. ಕೊನೆಗೆ ಒಂದು ವಿಧದಿಂದ ಉತ್ತರವನ್ನು ಕೊಟ್ಟಳು.

" ಎಲೈ ಸಖಿಯೇ! ಇಲ್ಲ ಇಲ್ಲ. ಶ್ರೀಕೃಷ್ಣದೇವ ನನ್ನನ್ನು ಬಿಟ್ಟು ಹೋಗಲೇ ಇಲ್ಲ. ನನ್ನ ಪುಣ್ಯವನು ನನ್ನನ್ನು ಬಿಟ್ಟು ಬಹುದೂರದವರೆಗೆ ಹೋಗಿದೆ. ಪುಣ್ಯಲಭ್ಯನಾದ ಶ್ರೀಕೃಷ್ಣದೇವನ ದರ್ಶನವು ಪುಣ್ಯವಿಲ್ಲದೆ ಸಿಗಲಾರದು. ಆ ಪುಣ್ಯವನ್ನು ಹುಡುಕುತ್ತಿರುವೆನು. ಆ ಪುಣ್ಯವು ಸಿರೆಬೆಟ್ಟರೆ ಪುಣ್ಯಲಭ್ಯನಾದ ಶ್ರೀಕೃಷ್ಣದೇವನನ್ನು ಇಲ್ಲಿಯೇ ನೋಡುವೆನು" ಎಂದಳು.

ಇವಳು ಪುಣ್ಯಹೀನಳೆಂದೂ ಆದ್ದರಿಂದಲೇ ಶ್ರೀಕೃಷ್ಣದೇವನನ್ನು ನೋಡುತ್ತಿಲ್ಲವೆಂದೂ ಹೇಳುತ್ತಾ ತನ್ನ ದೈನ್ಯವನ್ನು ಚೆನ್ನಾಗಿ ವ್ಯಕ್ತಪಡಿಸಿದಳು. ಈ ದೈನ್ಯದಿಂದ ತನ್ನ ಗೌರವವನ್ನು ಕಳೆದುಕೊಂಡಳು. ಆತ್ಮಗೌರವವನ್ನು

ರಕ್ಷಿಸುವುದಕ್ಕಾಗಿ ಇವಳು ಮಾಡಿದ ಪ್ರಯತ್ನಗಳೆಲ್ಲವೂ ವ್ಯರ್ಥವಾದವು.

ಸಕಲ ಸ್ತ್ರೀಯರು ತನ್ನನ್ನು ಕುರಿತು ಪ್ರಶ್ನಿಸಿದಾಗ "ಎಲ್ಲೈ ಸಖಿಯರೇ" ಎಂದು ಬಹುವಚನಾಂತವಾದ ಪದವನ್ನು ಉಪಯೋಗಿಸುತ್ತಾ ಉತ್ತರಿಸಬೇಕಾಗಿತ್ತು. "ಎಲ್ಲೈ ಸಖಿಯೇ" ಎಂದು ಏಕವಚನಾಂತವಾದ ಪದದಿಂದ ಉತ್ತರಿಸಿದುದು ಸರಿಯಲ್ಲ. ಹಾಗೆ ಉತ್ತರಿಸಿದ್ದರಿಂದ ಶ್ರೀಕೃಷ್ಣದೇವನ ವಿರಹದಿಂದ ಅವಳಿಗೆ ಬುದ್ಧಿಯು ಕೆಟ್ಟುಹೋಯಿತು ಎಂದು ತಿಳಿಯುತ್ತದೆ.

"ಎಲ್ಲೈ ಸಖಿಯೇ!, ನೀನು ಯಾರನ್ನೋ ಹುಡುಕುತ್ತಿರುವಂತೆ ತಿಳಿಯುತ್ತದೆ. ಯದುಕುಲತಿಲಕನಾದ ಶ್ರೀಕೃಷ್ಣದೇವನಿಗೆ ನಮ್ಮಿಂದಾಗಲೀ ಸುಂದರೀ ಸಾರ್ವಭೌಮಳಾಗಿರುವ ಲಕ್ಷ್ಮೀದೇವಿಯರಿಂದಾಗಲೀ ಆಗಬೇಕಾದ ಕಾರ್ಯವು ಯಾವುದೂ ಇಲ್ಲ. ಅವನನ್ನು ಲಕ್ಷ್ಮೀದೇವಿಯರೂ ಹುಡುಕುತ್ತಿರುವರು. ನಾವೆಲ್ಲರೂ ಹುಡುಕುತ್ತಿರುವೆವು. ನಮ್ಮಂತೆ ನೀನೂ ಹುಡುಕುತ್ತಿರುವೆಯಾ? ನಾವೆಲ್ಲರೂ ಸುಂದರಿಯರಲ್ಲ. ನಮ್ಮೆಲ್ಲರನ್ನೂ ಬಿಟ್ಟು ಶ್ರೀಕೃಷ್ಣದೇವನ ಹಿಂದೆ ಬಂದಿರುವ ನೀನು ಪರಮಸುಂದರಿಯೆಂಬ ವಿಷಯದಲ್ಲಿ ಸಂಶಯವಿಲ್ಲ. ನಿನ್ನನ್ನೂ ಶ್ರೀಕೃಷ್ಣದೇವನು ಬಿಟ್ಟು ಹೋದನೆ? ಅವನನ್ನು ನೀನು ಹುಡುಕುತ್ತಿರುವೆಯಾ?" ಎಂದರು.

ಅದನ್ನು ಕೇಳಿದಳು. ಈ ಸಖಿಯರು ತನ್ನನ್ನು ಅಪಹಾಸಮಾಡುತ್ತಿರುವುದನ್ನು ತಡೆಯಬೇಕೆಂದು ತೀರ್ಮಾನಿಸಿದಳು. ಅವರೆಲ್ಲರಿಗೂ ಮನಸ್ಸು ಕರಗುವಂತೆ ಮಾಡಬೇಕೆಂದು ತೀರ್ಮಾನಿಸಿದಳು. ಆದರೂ ತನ್ನ ಆತ್ಮಗೌರವವನ್ನು ಕಡಿಮೆ ಮಾಡಿಕೊಳ್ಳಬಾರದೆಂದು ತೀರ್ಮಾನಿಸಿದಳು. ಅವರೆಲ್ಲರನ್ನೂ ಏಕವಚನದಿಂದ ಸಂಬೋಧಿಸುತ್ತಾ ತನಗೆ ಬುದ್ಧಿಯು ಶ್ರೀಹರಿಯ ವಿಯೋಗದಿಂದ ಕೆಟ್ಟಿದೆಯೆಂದು ತಿಳಿಸುತ್ತಾ ಮಾತಾಡಿದಳು.

"ಎಲ್ಲೈ ಸಖಿಯೇ, ಶ್ರೀಕೃಷ್ಣದೇವನು ನನ್ನನ್ನು ಬಿಟ್ಟು ಹೋಗಿರುವನು. ಅದಕ್ಕಾಗಿ ನಾನು ಲಜ್ಜೆಯನ್ನು ಬಿಟ್ಟು ಅವನು ಹೋದಲ್ಲೆಲ್ಲಾ ಅವನನ್ನು ಹಿಂಬಾಲಿಸಿಕೊಂಡು ಹೋಗುವಷ್ಟು ಮಾನಕೆಟ್ಟವಳಲ್ಲ. ಕಳ್ಳಶಿರೋಮಣಿಯಾದ ಶ್ರೀಕೃಷ್ಣದೇವನು ಇಲ್ಲಿಂದ ಹೋಗುವಾಗ ನನ್ನ ಮನಸ್ಸನ್ನು ಕದ್ದುಕೊಂಡು ಹೋಗಿರುವನು. ಅವನೊಡನೆ ಹೋಗಿರುವ ನನ್ನ ಮನಸ್ಸನ್ನು ಹುಡುಕುತ್ತಿರುವೆನು. ಮನಸ್ಸು ಸಿಗಬೇಕಾದರೆ ಅದನ್ನು ಕದ್ದ ಕಳ್ಳನನ್ನು ಹುಡುಕಬೇಡವೇ? ಅದಕ್ಕಾಗಿ ಅವನನ್ನು ಹುಡುಕುತ್ತಿರುವೆನು. ಮನಸ್ಸು ಸಿಕ್ಕಿದರೆ ಅವನನ್ನು ಬಿಟ್ಟು ಬಿಡುವೆನು" ಎಂದಳು. ಶ್ರೀಕೃಷ್ಣದೇವನು ಮನಸ್ಸನ್ನು ಸೂರೆಗೊಂಡಿರುವನು ಎಂದು ಹೇಳುತ್ತಾ ಅಪಾರವಾದ ದೈನ್ಯವನ್ನು ವ್ಯಕ್ತಪಡಿಸಿದಳು. ಅಹಂಕಾರವನ್ನು ರಕ್ಷಿಸಿಕೊಳ್ಳಬೇಕೆಂದು ಸಂಕಲ್ಪಿಸಿದಳು. ಅಹಂಕಾರವನ್ನು ಬಿಟ್ಟಳು.

ಎಲ್ಲಾ ಗೋಪಿಕಾಸ್ತ್ರೀಯರ ಜೊತೆಯಲ್ಲಿ ಅವಳೂ ಸೇರಿಕೊಂಡಳು. ಸರ್ವರೂ ಒಟ್ಟುಗೂಡಿ ಅನ್ಯೋನ್ಯವಾಗಿ ಬುದ್ಧಿವಾದವನ್ನು ಹೇಳಿಕೊಂಡರು.

" ಎಲ್ಲೈ ಸಖಿಯರೆ! ನಿಮ್ಮ ಮನಸ್ಸುಗಳೆಲ್ಲವನ್ನೂ ಗಟ್ಟಿ ಮಾಡಿಕೊಳ್ಳಿರಿ. ನಮ್ಮೆಲ್ಲರ ಹೃದಯವೂ ಒಂದು ಕ್ಷಣದಲ್ಲಿ ಶ್ರೀಕೃಷ್ಣದೇವನನ್ನು ನೋಡದಿರುವುದಿಂದ ಚಂಚಲವಾಗಿದೆ. ಶ್ರೀಕೃಷ್ಣದೇವನು ನಮ್ಮೆಲ್ಲರ ಮನಸ್ಸುಗಳಲ್ಲಿರುವ ಅಧೈರ್ಯವನ್ನು ನೋಡಿ ಇಲ್ಲಿಗೆ ಬಾರದೆ ಇರಬಹುದು. ಅವನೂ ತನ್ನ ಮನಸ್ಸನ್ನು ಗಟ್ಟಿಮಾಡಿಕೊಳ್ಳಬಹುದು." ಎಂದರು.

"ಎಲೈ ಸಖಿಯರೆ!, ಒಂದೊಂದು ಕಾಡುಗಳಲ್ಲಿಯೂ ಪರಮಸುಂದರನಾದ ಶ್ರೀಕೃಷ್ಣದೇವನು ಸಂಚರಿಸುತ್ತಿರುವನು. ಅವನ ಹಿಂದೆ ನಮ್ಮ ಮನಸ್ಸುಗಳೂ ಸಂಚರಿಸುತ್ತಿರುವವು. ಅಟ್ಟಿಗಳನ್ನು ಗಟ್ಟಿಯಾಗುವಂತೆ ಮಾಡಲು ಯಾರಿಂದ ಸಾಧ್ಯ?" ಎಂದು ತಾವೇ ತಮ್ಮ ಪ್ರಶ್ನೆಗಳಿಗೆ ಉತ್ತರವನ್ನು ಕೊಟ್ಟರು.

**(೩೧) ಖಿನ್ನಾನಾಂ ಗೋಪಿಕಾನಾಂ ಬಹುವಿಧನುತಿಭಿಃ ಪ್ರೀತಿಂ ವಹನ್ ಆವಿಃ ಪ್ರಾಪ್ತಃ** - ಖೇದದಿಂದ ಯುಕ್ತರಾಗಿರುವ ಗೋಪಿಕಾಸ್ತ್ರೀಯರು ನಾನಾ ವಿಧವಾದ ಸ್ತೋತ್ರಗಳನ್ನು ಮಾಡಿದರು. ಆ ಸ್ತುತಿಗಳಿಂದ ಪ್ರಸನ್ನನಾದ ಶ್ರೀಕೃಷ್ಣದೇವನು ಪ್ರತ್ಯಕ್ಷನಾದನು.

**ವಿಶೇಷಾರ್ಥ - ತಾಭಿಃ ಸಮೇತಾಭಿಃ ಸ್ವದರ್ಶನಲಾಲಸಾಭಿಃ ಸರ್ವತ್ರ ವಿಚಾರ್ಯ ಪುನಃ ಯಮುನಾತೀರಂ ಪ್ರಾಪ್ತಾಭಿಃ ಗೋಪಸ್ತ್ರೀಭಿಃ ಕೃತೈಃ " ಜಯತಿ ತೇಽಧಿಕಂ" ಇತ್ಯಾದ್ಯನೇಕವಿಧಸ್ತೋತ್ರೈಃ ಸಂತುಷ್ಟಃ " ತಾಸಾಮಾವಿರ ಭೂಚ್ಛೌರಿಃ " ಇತ್ಯಾದ್ಯನೇಕಗುಣವಿಶಿಷ್ಟತಯಾ ತಾಸಾಂ ದೃಷ್ಟಿವಿಷಯೋ ಭೂತ್ವಾ.**

(ಅವರೆಲ್ಲರೂ ಒಟ್ಟುಗೂಡಿದರು. ಶ್ರೀಕೃಷ್ಣದೇವನನ್ನು ನೋಡಬೇಕೆಂಬ ಪ್ರಬಲವಾದ ಆಸೆಯಿಂದ ಪುನಃ ಎಲ್ಲೆಡೆಗಳಲ್ಲಿಯೂ ವಿಚಾರಿಸಿದರು. ಪುನಃ ಯಮುನಾನದಿಯ ದಡಕ್ಕೆ ಬಂದರು. "ಜಯತಿ ತೇಽಧಿಕಂ" ಮುಂತಾದ ಗೋಪೀಗೀತದಿಂದಲೂ ನಾನಾ ವಿಧವಾದ ಸ್ತುತಿಗಳಿಂದಲೂ ಶ್ರೀಕೃಷ್ಣದೇವನನ್ನು ಸ್ತುತಿಸಿದರು. ಆ ಸ್ತುತಿಗಳಿಂದ ಶ್ರೀಕೃಷ್ಣದೇವನು ಸಂತುಷ್ಟನಾದನು. "ತಾಸಾಮಾವಿರಭೂಚ್ಛೌರಿಃ" ಮುಂತಾದ ವಾಕ್ಯಗಳಲ್ಲಿ ಹೇಳಲ್ಪಟ್ಟ ಅನೇಕ ಗುಣವಿಶಿಷ್ಟನಾಗಿ ಗೋಪಿಕಾಸ್ತ್ರೀಯರಿಗೆ ಪ್ರತ್ಯಕ್ಷನಾದನು.)

ವಿಶೇಷಾರ್ಥ ವಿವರಣ - ಶ್ರೀಕೃಷ್ಣದೇವನು ಗೊಲ್ಲಸ್ತ್ರೀಯರ ಮಧ್ಯದಿಂದ ಕರೆದುಕೊಂಡು ಬಂದಿರುವ ಸ್ತ್ರೀಯಿಂದ ಎಲ್ಲಾ ಗೊಲ್ಲಸ್ತ್ರೀಯರೂ ಯುಕ್ತರಾದರು. ಅನ್ಯೋನ್ಯವಾಗಿ ಶ್ರೀಕೃಷ್ಣದೇವನ ಮಹಿಮೆಗಳನ್ನು ಹೇಳಿಕೊಳ್ಳಲು ಆರಂಭಿಸಿದರು.

# ಗೋಪಿಕಾಸ್ತ್ರೀಯರ ಜ್ಞಾನಪೂರ್ಣವಾದ ಸಂಭಾಷಣೆ

"ಎಲೈ ಸಖಿಯರೇ, ಬ್ರಹ್ಮದೇವನೂ ಸಹ ಶ್ರೀಕೃಷ್ಣದೇವನ ಆಜ್ಞೆಯನ್ನು ಪಾಲಿಸುತ್ತಿರುವವನೆಂಬ ವಿಷಯವು ಈಗ ನಮಗೆ ಅನುಭವಸಿದ್ಧವಾಗುತ್ತಿದೆ. ಶ್ರೀಕೃಷ್ಣದೇವನ ವಿರಹ ಎಂಬ ಬೆಂಕಿಯಿಂದ ನಾವು ಬೆಂದು ಹೋಗುತ್ತಿರುವೆವು. ಸ್ವಲ್ಪಕಾಲದ ವರೆಗೆ ಮೂರ್ಛೆಯು ಬಂದರೆ ಈ ಮೂರ್ಛಾಕಾಲದಲ್ಲಿ ಶ್ರೀಕೃಷ್ಣದೇವನ ವಿರಹ ಎಂಬ ಬೆಂಕಿಯಿಂದ ಏರ್ಪಡುತ್ತಿರುವ ಬಾಧೆಯು ತಿಳಿಯುವುದಿಲ್ಲ. ಅದಕ್ಕಾಗಿ ನಮಗೆ ಮೂರ್ಛೆಯನ್ನು ಕೊಡಬಾರದೇ? ಸ್ವಲ್ಪನಿದ್ರೆಯು ಬಂದರೆ ಸ್ವಪ್ನದಲ್ಲಾದರೂ ಶ್ರೀಕೃಷ್ಣದೇವನ ಆಲಿಂಗನವು ನಮಗೆ ಏರ್ಪಡುವ ಸಂಭವವಿದೆ. ಈ ಭಾಗ್ಯವು ನಮಗೆ ಏರ್ಪಡಬಹುದು ಎಂಬ ಸಂಶಯದಿಂದ ನಿದ್ರೆಯನ್ನೂ ಕೊಡುವುದಿಲ್ಲ. ಶ್ರೀಕೃಷ್ಣದೇವನ ಆಜ್ಞೆಯನ್ನು ಪಾಲಿಸುತ್ತಿರುವ ಬ್ರಹ್ಮದೇವನು ಮೂರ್ಛೆಯನ್ನೂ ನಿದ್ರೆಯನ್ನೂ ಕೊಡದೆ ಗೋಳಾಡಿಸುತ್ತಿರುವನು. ಅಯ್ಯೋ, ನಮ್ಮ ಕಷ್ಟಗಳನ್ನು ಕುರಿತು ಏನೆಂದು ಹೇಳಲಿ? ಏನು ಮಾಡಲಿ?"

" ಎಲೈ ಸಖಿಯರೆ! ಶ್ರೀಕೃಷ್ಣದೇವನ ಮಹಿಮೆಗಳ ಗಾನವು ಅಮೃತದಂತೆ ಅತ್ಯಂತ ರುಚಿಯುಳ್ಳದ್ದು. ಆ ಗಾನವೆಂಬ ಅಮೃತವನ್ನು ನಾವು ಯಾವ ಜನ್ಮದಲ್ಲಾದರೂ ಅನುಭವಿಸಿದ್ದರೆ ಅದಕ್ಕೆ ಫಲವಾಗಿ ತುಟಿಗಳ ಮಧ್ಯದಲ್ಲಿ ಹೊಳೆಯುತ್ತಿರುವ ಅಧರಾಮೃತವನ್ನು ನಮಗೆ ಕೊಡಲಿ. ಒಂದು ವಿಧವಾದ ಗಾನವೆಂಬ ಅಮೃತವನ್ನು ಅನುಭವಿಸಿರುವ ನಾವು ಇನ್ನೊಂದು ವಿಧವಾದ ಅಧರಾಮೃತವನ್ನೇ ಬಯಸುವೆವು. ನೀರಸವಾದ ವಸ್ತುವನ್ನು ಬಯಸಲಾರೆವು."

"ಶ್ರೀಕೃಷ್ಣದೇವನಿಗೆ ಎರಡು ವಿಧವಾದ ಪ್ರತಿಮೆಗಳಿವೆ (೧) ದೇವಾಲಯಗಳಲ್ಲಿರುವ ಪ್ರತಿಮೆಗಳು ಮುಂತಾದ ಸ್ಥಾವರಪ್ರತಿಮೆಗಳು ಮೊದಲನೆಯ ದರ್ಜೆಯಲ್ಲಿ ಸೇರಿರುತ್ತವೆ. (೨)ಭಗವದ್ಭಕ್ತರು ಮುಂತಾದ ಜಂಗಮಪ್ರತಿಮೆಗಳು ಎರಡನೆಯ ದರ್ಜೆಯಲ್ಲಿ ಸೇರಿದವುಗಳು. ಈ ಸ್ಥಾವರ ಅಥವಾ ಜಂಗಮವಾದ ಪ್ರತಿಮೆಗಳನ್ನು ಯಾವ ಜನ್ಮದಲ್ಲಾದರೂ ನಾವು ನೋಡಿದ್ದರೆ ಅದರಿಂದ ಪ್ರೀತನಾದ ಶ್ರೀಕೃಷ್ಣದೇವನು ತನ್ನನ್ನು ತೋರಿಸಲಿ."

## ಗೋಪಿಕಾಸ್ತ್ರೀಯರು ಶ್ರೀಕೃಷ್ಣದೇವನನ್ನು ಪ್ರಾರ್ಥಿಸಿದ್ದು

"ಓ ಶ್ರೀಕೃಷ್ಣದೇವಾ, ನಗುತ್ತಿರುವ ಸೌಮ್ಯವಾದ ಮುಖದಿಂದ ಯುಕ್ತನಾಗಿರುವಿ. ಎಲ್ಲಾ ಸೌಂದರ್ಯಗಳೂ ನಿನ್ನ ಶರೀರದಲ್ಲಿ ತುಂಬಿರುವವು. ನಾವು ನಮ್ಮ ಶರೀರಗಳನ್ನು ಬಿಡಲು ಸಿದ್ಧರಾಗಿರುವೆವು. ಆದರೆ ನಮ್ಮ ದೇಹಗಳಲ್ಲಿ ನಿನ್ನ ಉಗುರುಗಳ ಗುರುತುಗಳು ಹೊಳೆಯುತ್ತಿರುವವು. ನಿನ್ನ ಉಗುರುಗಳ ಗುರುತುಗಳಿಂದ ಪ್ರಕಾಶಿಸುತ್ತಿರುವ ಈ ಶರೀರಗಳು ತುಂಬಾ ಮಾನ್ಯವಾದವುಗಳು. ಆದ್ದರಿಂದ ಪರಮಮಾನ್ಯವಾದ ಈ ಶರೀರಗಳನ್ನು ಬಿಡಲಿಕ್ಕೂ ನಮಗೆ ಇಷ್ಟವಿಲ್ಲ. ನಿನ್ನನ್ನು ನೋಡದಿರುವ ದೇಹವನ್ನು ಇಟ್ಟುಕೊಳ್ಳಲೂ ಇಷ್ಟವಿಲ್ಲ. ಈ ದೇಹವನ್ನು ಇಟ್ಟುಕೊಳ್ಳಲೂ ಬಿಡಲೂ ಇಷ್ಟವಿಲ್ಲದೆ ನಾವು ತತ್ತಳಿಸುತ್ತಿರುವೆವು."

" ಕಾಡಿನಲ್ಲಿ ಒಬ್ಬ ಮನುಷ್ಯನು ಸಿಕ್ಕಿ ಬಿದ್ದಿರುವನು. ಅವನ ಕುತ್ತಿಗೆಯಲ್ಲಿ ಎರಡು ಉರುಳುಗಳನ್ನು ಬಲಭಾಗದಲ್ಲಿಯೂ ಎಡಭಾಗದಲ್ಲಿಯೂ ಹಾಕಿ ಎರಡು ಪಾರ್ಶ್ವಗಳಲ್ಲಿರುವ ಮರಗಳಿಗೆಬಿಗಿದಿರುವರು. ಬಲಭಾಗದ ಉರುಳು ಬಿಗಿದಾಗ ಆ ಬಾಧೆಯನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಕುತ್ತಿಗೆಯನ್ನು ಎಡಭಾಗಕ್ಕೆ ಸೆಳೆದರೆ ಎಡಭಾಗದ ಉರುಳು ಬಿಗಿಯುತ್ತದೆ. ಅದಕ್ಕಾಗಿ ಎಡಭಾಗಕ್ಕೆ ಸೆಳೆದರೆ ಬಲಭಾಗದ ಉರುಳು ಬಿಗಿಯುತ್ತದೆ. ಯಾವ ಕಡೆಗೂ ಸೆಳೆಯದೆ ಇದ್ದರೆ ಇದ್ದಸ್ಥಿತಿಯಲ್ಲಿಯೇ ಬಾಧಿಸುತ್ತದೆ. ಅವನ ಸ್ಥಿತಿಯು ನಮಗೆ ಏರ್ಪಟ್ಟು ಸಾಯುವುದಕ್ಕೂ ಇರುವುದಕ್ಕೂ ಸಾಧ್ಯವಿಲ್ಲದೆ ಒದ್ದಾಡುತ್ತಿರುವೆವು."

" ಓ ಶ್ರೀಕೃಷ್ಣದೇವ, ಮನ್ಮಥನು ನಮ್ಮನ್ನು ತುಂಬಾ ಪೀಡಿಸುತ್ತಿರುವನು. ಅವನ ಬಾಣಗಳಲ್ಲಿ ಅರವಿಂದ ಅಂದರೆ ಪದ್ಮ ಎಂಬ ಬಾಣವು ನಮ್ಮ ಕಣ್ಣಿನಲ್ಲಿ ಕುಳಿತಿದೆ. ಆದ್ದರಿಂದಲೇ ನಮ್ಮ ಕಣ್ಣುಗಳು ಪದ್ಮಗಳಂತಿವೆ. ಪದ್ಮಗಳಿಗೆ ಚಂದ್ರನು ವಿರೋಧಿಯಾಗಿರುವನು. ಆದ್ದರಿಂದಲೇ ಚಂದ್ರನು ಉದಯಿಸಿದ ಕೂಡಲೇ ಅರಳಿದ ಕಮಲಗಳನ್ನು ಮುಚ್ಚಿಸುವನು."

" ನಿನ್ನ ಮುಖವು ಚಂದ್ರನಂತೆ ಶೋಭಿಸುತ್ತಿದೆ. ನಿನ್ನ ಮುಖವನ್ನು ತೋರಿಸು. ನಿನ್ನನ್ನು ನೋಡಿದ ಕೂಡಲೇ

ಕಣ್ಣುಗಳನ್ನು ಮುಚ್ಚಿಕೊಂಡು ಆನಂದದಿಂದ ನಿದ್ರಿಸುವೆವು. ನಿನ್ನ ಮುಖವೆಂಬ ಚಂದ್ರನ ಕಾಂತಿಯಿಂದ ನಮ್ಮ ಕಣ್ಣುಗಳೆಂಬ ಪದ್ಮಗಳು ಮುಚ್ಚಲ್ಪಡಲಿ. ಅಂದರೆ ಮನ್ಮಥನ ಪದ್ಮ ಎಂಬ ಬಾಣವು ನಶಿಸಲಿ."

" ನಮ್ಮ ಮೊಲೆಗಳ ತುದಿಯಲ್ಲಿ ಕಪ್ಪು ಬಣ್ಣವಿದೆ. ಆ ಕಪ್ಪು ಬಣ್ಣಗಳೇ ನೀಲಕಮಲಗಳು, ಆ ನೀಲಕಮಲಗಳೇ ನೀಲೋತ್ಪಲ ಎಂಬ ಮನ್ಮಥನ ಬಾಣಗಳೆನಿಸುತ್ತವೆ. ನೀಲಕಮಲಗಳು ಸೂರ್ಯೋದಯವಾದ ಕೂಡಲೇ ಮುಚ್ಚಿಹೋಗುತ್ತವೆ. ನಿನ್ನ ಪಾದಗಳು ಸೂರ್ಯನಂತೆ ಪ್ರಕಾಶಿಸುತ್ತಿವೆ. ಆ ಪಾದಗಳನ್ನು ನಮ್ಮ ಮೊಲೆಗಳ ಮೇಲೆ ಇಟ್ಟು ಮರ್ದನ ಮಾಡು ಅದರಿಂದ ನಮ್ಮ ಮೊಲೆಗಳ ಮೇಲ್ಭಾಗದಲ್ಲಿರುವ ಕಪ್ಪುಬಣ್ಣವು ತೋರದಂತೆ ಮಾಡು. ಇದರಿಂದ ಮನ್ಮಥನ ಎರಡನೆಯ ನೀಲೋತ್ಪಲ ಎಂಬ ಬಾಣವು ನಶಿಸಲಿ."

" ಮನ್ಮಥನನ್ನು ಕೊಂದವನು ಅರ್ಧನಾರೀಶ್ವರನಾದ ಶ್ರೀರುದ್ರದೇವನು. ಅವನು ಒಬ್ಬನೇ ಆಗಿರುವನು. ನೀನು ನಮ್ಮೆಲ್ಲರನ್ನೂ ಗಟ್ಟಿಯಾಗಿ ಆಲಿಂಗನ ಮಾಡು. ಆ ಆಲಿಂಗನದಿಂದ ನಮ್ಮ ದೇಹವೂ ನಿನ್ನ ದೇಹವು ಏರ್ಪಟ್ಟಂತೆಯೂ ಆ ದೇಹದಲ್ಲಿ ಒಂದು ಭಾಗದಲ್ಲಿ ಪುರುಷಾಕಾರವೂ ಇನ್ನೊಂದು ಭಾಗದಲ್ಲಿ ಸ್ತ್ರೀಯರ ಆಕಾರವೂ ಏರ್ಪಡುವಷ್ಟು ಗಟ್ಟಿಯಾಗಿ ಆಲಿಂಗಿಸಿ ಅನೇಕ ಅರ್ಧನಾರೀಶ್ವರರು ಏರ್ಪಡುವಂತೆ ಮಾಡು. ಇದರಿಂದ ಒಬ್ಬ ಅರ್ಧನಾರೀಶ್ವರನಿಂದ ಕೊಲ್ಲಲ್ಪಟ್ಟ ಮನ್ಮಥನು ಅನೇಕ ಅರ್ಧನಾರೀಶ್ವರರನ್ನು ನೋಡಿ ಹೆದರುವಂತೆ ಮಾಡು. ಅವನ ದರ್ಪವು ಅಡಗಲಿ."

# ಗೋಪಿಕಾಸ್ತ್ರೀಯರು ಅಪರೋಕ್ಷಜ್ಞಾನಿಗಳು

" ಓ ರಮಣನೇ, ನೀನು ಇನ್ನು ಮುಂದೆ ಮುರ ಎಂಬ ದೈತ್ಯನನ್ನು ಸಂಹರಿಸುವಿ. ಆದ್ದರಿಂದ "ಮುರಾರಿ" ಎಂದು ಪ್ರಸಿದ್ಧನಾಗುವಿ. ನರಕಾಸುರನನ್ನು ಸಂಹರಿಸಿ ಅವನ ಜೈಲಿನಲ್ಲಿದ್ದ ಹದಿನಾರು ಸಾವಿರದ ನೂರು ಸುಂದರಿಯರನ್ನು ವಿವಾಹ ಮಾಡಿಕೊಳ್ಳುವಿ. ಆದ್ದರಿಂದ " ಸುಂದರೀಕಾಂತ" ಎಂದು ಪ್ರಸಿದ್ಧನಾಗುವಿ. ನೀನು ಈಗ ನಂದನ ಮಗನಂತೆ ನಟಿಸುತ್ತಿರುವಿ. ನೀನು ನಿಜವಾಗಿ ನಂದನ ಮಗನಲ್ಲ. ವಸುದೇವನ ಕುಮಾರನಾಗಿರುವಿ. ಇದು ನಮಗೆ ನಿನ್ನ ಅನುಗ್ರಹದಿಂದ ತಿಳಿದಿರುತ್ತದೆ. ಆದ್ದರಿಂದ "ಶೌರಿ" ಎಂದು ಪ್ರಸಿದ್ಧನಾಗುವಿ. ನರಕಾಸುರನನ್ನು ಮುಂದೆ ಸಂಹರಿಸುವಿ. ಆದ್ದರಿಂದ " ನರಕ ಮಥನ" ಎಂದು ಪ್ರಸಿದ್ಧನಾಗುವಿ. ನೀನು ಚಾತುರ್ಯದಿಂದ ಮಾತಾಡುತ್ತಿರುವಿ. ಆದ್ದರಿಂದ "ಪ್ರೌಢ" ಎಂದು ಪ್ರಸಿದ್ಧನಾಗುವಿ. ನೀನು ಕ್ಷೀರಸಮುದ್ರದ ಮಧ್ಯದಲ್ಲಿರುವ ಶ್ವೇತದ್ವೀಪದಲ್ಲಿ ವಾಸಿಸುತ್ತಿರುವ ವಾಸುದೇವನೇ ಆಗಿರುವಿ. ಇನ್ನು ಮುಂದೆ ಉಪ್ಪು ನೀರಿನ ಸಮುದ್ರದ ಮಧ್ಯದಲ್ಲಿ ದ್ವಾರಕಾ ಎಂಬ ಪಟ್ಟಣವನ್ನು ನಿರ್ಮಾಣಮಾಡಿ ಅಲ್ಲಿಯೇ ವಾಸಿಸುವಿ. ಆದ್ದರಿಂದ "ವಾರಾಶಿದಿಷ್ಣ" ಎಂದು ಪ್ರಸಿದ್ಧನಾಗುವಿ. ಕಲ್ಪವೃಕ್ಷವನ್ನೂ ಮೀರಿಸುವಷ್ಟು ದಾನ ಮಾಡುವಿ. ಇನ್ನು ಮುಂದೆ ಪಾರಿಜಾತವೃಕ್ಷವನ್ನು ದೇವಲೋಕದಿಂದ ಬಲಾತ್ಕಾರದಿಂದ ಅಪಹರಿಸಿ ತಂದು ದ್ವಾರಕೆಯಲ್ಲಿ ನಿಲ್ಲಿಸುವಿ. ಆದ್ದರಿಂದ "ಕರಜಿತಸುರವೃಕ್ಷ" ಎಂದು ಪ್ರಸಿದ್ಧನಾಗುವಿ. ನಿನ್ನ ಭಕ್ತರು ಅಹಂಕಾರಿಗಳಾದರೆ ಅವರನ್ನು ಶಿಕ್ಷಿಸುವಿ. ಪಾರಿಜಾತಾಪಹರಣ ಕಾಲದಲ್ಲಿ ಅಹಂಕಾರದಿಂದ ಯುದ್ಧಕ್ಕಾಗಿ ಬಂದಿರುವ ರುದ್ರ ಇಂದ್ರ ಮುಂತಾದ ಸಕಲ ದೇವತೆಗಳನ್ನೂ ಶಿಕ್ಷಿಸುವಿ. ಆದ್ದರಿಂದ "ಅಹಂಕೃತಾತ್ಮೀಯ ಶಿಕ್ಷ" ಎಂದೆನಿಸುವಿ. ನೀನು ನಿನ್ನ ಭಕ್ತರಿಗೆ ಎಲ್ಲಾ ವಿಧವಾದ ಜಯವನ್ನು ಕೊಡುತ್ತಿರುವಿ. ಇನ್ನು ಮುಂದೆ ನಿನ್ನ ಭಕ್ತನಾದ ಅರ್ಜುನನಿಗೆ ಸಾರಥ್ಯ ಮುಂತಾದ ಕೀಳುತರದ ಕಾರ್ಯಗಳನ್ನು ಮಾಡಿ

ಸಹಾಯವನ್ನು ಮಾಡುವಿ. ಆದ್ದರಿಂದ "ಸ್ವವಿಜಯ ಸಹಾಯ" ಎಂದೆನಿಸುವಿ. ನೀನು ನಿನ್ನ ಭಕ್ತರು ಮಾಡುತ್ತಿರುವ ಧರ್ಮಕಾರ್ಯಗಳ ಮಧ್ಯದಲ್ಲಿ ಬರುವ ವಿಘ್ನಗಳೆಲ್ಲವನ್ನೂ ಪರಿಹರಿಸುವಿ. ಇನ್ನು ಮುಂದೆ ಧರ್ಮರಾಜನಿಗೆ ವಿರೋಧಿಗಳಾದ ದುರ್ಯೋಧನನನ್ನೂ ಅವನ ಸೈನ್ಯಗಳ್ನೂ ಸಂಹರಿಸುವಿ. ಆದ್ದರಿಂದ "ಧ್ವಸ್ತಧರ್ಮಾಂತರಾಯ" ಎಂದು ಹೇಳಲ್ಪಡುವಿ."

"ನಿನ್ನ ಮಹಿಮೆಗಳಲ್ಲಿ "ನೀನು ವಸುದೇವನ ಮಗನೇ ಹೊರತು ನಂದನ ಮಗನಲ್ಲ" ಮುಂತಾದ ಹಿಂದೆ ನಡೆದ ವಿಷಯಗಳನ್ನೂ "ನರಕಾಸುರಸಂಹಾರ" ಮುಂತಾದ ಮುಂದೆ ನಡೆಯಲಿರುವ ವಿಷಯಗಳನ್ನೂ ನಾವು ತಿಳಿದಿರುವೆವು. ಹಿಂದೆ ನಡೆದ ಮತ್ತು ಮುಂದೆ ನಡೆಯಲಿರುವ ಎಲ್ಲಾ ವಿಷಯಗಳನ್ನೂ ತಿಳಿದಿರುವ ನಾವೆಲ್ಲರೂ ಅಪರೋಕ್ಷ ಜ್ಞಾನಿಗಳು. ಅಪರೋಕ್ಷಜ್ಞಾನಿಗಳಲ್ಲಿ ನೀನು ವಿಶೇಷ ಪ್ರೀತಿಯನ್ನು ಇಟ್ಟುಕೊಂಡವನಲ್ಲವೇ? ನೀನು ಅಪರೋರಕ್ಷಜ್ಞಾನಿಗಳಾದ ನಮ್ಮನ್ನು ಕೈಬಿಡಬಹುದೇ? ದರ್ಶನವನ್ನು ಕೊಡು. ನಮ್ಮನ್ನು ಗಟ್ಟಿಯಾಗಿ ಆಲಿಂಗಸು. ಮನ್ಮಥನ ದರ್ಪವನ್ನು ಅಡಗಿಸು" ಎಂದು ಪ್ರಾರ್ಥಿಸಿದರು.

ಶ್ರೀಕೃಷ್ಣದೇವನು ಸರ್ವವ್ಯಾಪಿಯೆಂದು ತಿಳಿದು ಎಲ್ಲಾ ಕಡೆಗಳಲ್ಲಿಯೂ ಅವನನ್ನು ಅಪರೋಕ್ಷಜ್ಞಾನಿಗಳು ಆರಾಧಿಸುತ್ತಿರುವರು. ಅವರಂತೆ ಈ ಗೋಪಿಕಾಸ್ತ್ರೀಯರೂ ಮರಗಳಲ್ಲಿಯೂ ಪಕ್ಷಿಗಳಲ್ಲಿಯೂ ಮೃಗಗಳಲ್ಲಿಯೂ ಶ್ರೀಕೃಷ್ಣದೇವನನ್ನು ವಿಚಾರಿಸಿದರು. ಇವರೆಲ್ಲರೂ ಹುಚ್ಚು ಹಿಡಿದವರಂತೆ ವಿಚಾರಿಸಿದರೂ ಅವರ ವಿಚಾರಣೆಯು ಅಪರೋಕ್ಷ ಜ್ಞಾನಿಗಳ ವಿಚಾರಣೆಯಂತಿತ್ತು. ಈ ವಿಚಾರಣೆಯನ್ನು ತಿಳಿದ ಶ್ರೀಕೃಷ್ಣದೇವನು ತುಂಬಾ ಸಂತುಷ್ಟನಾದನು. ಆ ಸಂತೋಷದ ಅತಿರೇಕದಿಂದ ಅವರಿಗೆ ಪ್ರತ್ಯಕ್ಷನಾಗಬೇಕೆಂದು ಅವನಿಗೆ ತೋರಿತು. ಆದರೂ ಈ ಸ್ತ್ರೀಯರ ರಮ್ಯವಾದ ಮಾತುಗಳನ್ನು ಕೇಳಬೇಕೆಂಬ ಆಸೆಯಿಂದ ಪ್ರತ್ಯಕ್ಷನಾಗಲಿಲ್ಲ. ಅವನು ಪ್ರತ್ಯಕ್ಷನಾಗಿಬಿಟ್ಟರೆ ಅವರ ಮನಸ್ಸಿನಿಂದ ಹೊರಡುತ್ತಿರುವ ಈ ಮಾತಗಳು ನಿಂತುಹೋಗವವಲ್ಲವೇ?

ಶ್ರೀಕೃಷ್ಣದೇವನು ಎಲ್ಲಾ ಅಪತ್ತುಗಳನ್ನೂ ಯಾವಾಗಲೂ ಜಯಿಸಿದವನು ಮತ್ತು ಯಾವಾಗಲೂ ಸುಖಪೂರ್ಣನು. ಆದ್ದರಿಂದ ಅವನು ಮಾಡುತ್ತಿರುವ ಯಾವ ವ್ಯಾಪಾರವೂ ದುಃಖಗಳ ಪರಿಹಾರಕ್ಕೂ ಸುಖದ ಪ್ರಾಪ್ತಿಗೂ ಕಾರಣವಾಗಲಾರದು. ಅವನ ಕೆಲಸಗಳು ನಿಷ್ಫಲವೂ ಅಲ್ಲ. ಅವನಿಗೆ ದುಃಖಪರಿಹಾರ ಮತ್ತು ಸುಖದ ಪ್ರಾಪ್ತಿ ಎಂಬ ಸ್ವಪ್ರಯೋಜನವಿಲ್ಲದಿದ್ದರೂ ಇತರರ ಪ್ರಯೋಜನಕ್ಕಾಗಿಯೇ ಎಲ್ಲಾ ಕಾರ್ಯಗಳನ್ನು ಮಾಡುತ್ತಿರುವನು.

# ಒಬ್ಬ ಗೋಪಿಕಾಸ್ತ್ರೀಯ ಶೋಕದಕತೆ

ಒಬ್ಬ ಗೋಪಿಕಾಸ್ತ್ರೀಯು ಶ್ರೀಕೃಷ್ಣದೇವನಲ್ಲಿ ಅಪಾರವಾದ ಭಕ್ತಿಯನ್ನಿಟ್ಟಿದ್ದಳು. ಅವಳ ಅಧಿಕವಾದ ಭಕ್ತಿಗೆ ಮೆಚ್ಚಿ ಅವಳನ್ನು ಈ ಗೋಪಿಕಾಸ್ತ್ರೀಯರ ಮಧ್ಯದಿಂದ ಕರೆದುಕೊಂಡು ಹೋಗಿ ತುಂಬಾ ಸಂತೋಷಪಡಿಸಿದನು. ಅವಳಿಗೂ "ತಾನೇ ಈ ಸ್ತ್ರೀಯರ ಮಧ್ಯದಲ್ಲಿ ಉತ್ತಮಳು" ಎಂಬ ಗರ್ವವು ಬಂತು. ಕಾಮುಕನು ಈ ಸಂದರ್ಭದಲ್ಲಿ ಅಂತಹ ಸ್ತ್ರೀಯನ್ನು ವಶಪಡಿಸಿಕೊಳ್ಳುವುದಕ್ಕಾಗಿ ಪ್ರಯತ್ನಿಸುವನು. ಅವಳು ಹೇಳಿದಂತೆ ಕುಣಿಯುವನು. ಇದು ಕಾಮುಕರ ನೀತಿ.

ಶ್ರೀಕೃಷ್ಣದೇವನು ಕಾಮುಕನಲ್ಲ. ಅವಳು ಹೇಳಿದಂತೆ ಕುಣಿಯುವವನಲ್ಲ. ಕಾಮುಕರ ನೀತಿಯನ್ನು ಜಯಿಸಿದವನು. ಭಕ್ತರಿಗೆ ಅನುಗ್ರಹವನ್ನು ಮಾಡುತ್ತಿರುವವನು. ಭಕ್ತರು ಗರ್ವಿಷ್ಠರಾದಾಗ ಅವರ ಗರ್ವವನ್ನು ಪರಿಹರಿಸುವುದಕ್ಕಾಗಿ ಮಾಡಬೇಕಾದ ಕಾರ್ಯಗಳನ್ನು ಮಾಡುವವನು. ಆದ್ದರಿಂದ ಆ ಗೋಪಿಕಾಸ್ತ್ರೀಯು ಭಕ್ತಿಯಿಂದ ಯುಕ್ತಳಾದಾಗ ಅವಳನ್ನು ಕರೆದುಕೊಂಡು ಹೋದನು. ಗರ್ವಿಷ್ಠಳಾದ ಕೂಡಲೇ ಅರ್ಧಹಾದಿಯಲ್ಲೇ ಕೈಬಿಟ್ಟನು.

ಶ್ರೀಕೃಷ್ಣದೇವನನಿಂದ ಕೈಬಿಡಲ್ಪಟ್ಟ ಆ ಸ್ತ್ರೀಯು ನಿಸ್ಸಾರವಾದ ಸಂಸಾರದಲ್ಲಿ ವಿರಕ್ತಳಾದಳು. ಸಕಲ ಜೀವ ಸಮುದಾಯದ ಮಧ್ಯದಲ್ಲಿ ದೇವತೆಗಳು ಉತ್ತಮರು. ಎಲ್ಲಾ ದೇವತೆಗಳೂ ಲಕ್ಷ್ಮೀದೇವಿಯರ ಮಕ್ಕಳು. ಆದ್ದರಿಂದ ಲಕ್ಷ್ಮೀ ದೇವಿಯರು ಸಕಲ ದೇವತೆಗಳಿಗಿಂತಲೂ ಉತ್ತಮರು. ಲಕ್ಷ್ಮೀದೇವಿಯರು ಶ್ರೀಕೃಷ್ಣದೇವನ ವಕ್ಷಃಸ್ಥಳದಲ್ಲಿರುವ ಶ್ರೀವತ್ಸ ಚಿಹ್ನದಲ್ಲಿ ಯಾವಾಗಲೂ ವಾಸಿಸುತ್ತಿರುವರು. ಆದ್ದರಿಂದ ಶ್ರೀಕೃಷ್ಣದೇವನು ಲಕ್ಷ್ಮೀದೇವಿಯರಿಗಿಂತಲೂ ಉತ್ತಮನು. ಇಂತಹ ಸರ್ವೋತ್ತಮನಾದ ಶ್ರೀಕೃಷ್ಣದೇವನು ಅತ್ಯಂತ ಶ್ರೇಷ್ಠವಾದ ಮುತ್ತುಗಳ ಸರಗಳಿಂದ ಅಲಂಕೃತವಾಗಿರುವ ಶ್ರೇಷ್ಠವಾದ ತನ್ನ ವಕ್ಷಃಸ್ಥಳದಲ್ಲಿ ಈ ಸ್ತ್ರೀಯನ್ನು ಧರಿಸಿದ್ದನು. ಸರೋವರದಲ್ಲಿ ಸಾರಸಪಕ್ಷಿಯು ವಿಹರಿಸಿದಂತೆ ಇವಳು ಆ ವಕ್ಷಃಸ್ಥಳದಲ್ಲಿ ವಿಹರಿಸಿದ್ದಳು. ತಾನು ವಿಹರಿಸಿರುವ ಶ್ರೀಕೃಷ್ಣದೇವನ ವಕ್ಷಃಸ್ಥಳವನ್ನೇ ಸ್ಮರಿಸುತ್ತಾ ಅತಿವೇಗದಿಂದ ಅವನನ್ನು ಹುಡುಕುತ್ತಾ ಓಡಲು ಆರಂಭಿಸಿದಳು.

ಶ್ರೀಕೃಷ್ಣದೇವನು ಪರಮಸುಂದರನಾದ ಮನ್ಮಥನಿಗೆ ಜನಕನು. ಆದ್ದರಿಂದ ಶ್ರೀಕೃಷ್ಣದೇವನಿಗಿಂತ ಸುಂದರನಾದವನು ಯಾರೂ ಇಲ್ಲ. ಅವನ ವಿರಹವನ್ನು ಸಹಿಸಲಾರದೆ ಓಡುತ್ತಾ ಬಂದ ಆ ಸ್ತ್ರೀಯು ಎಷ್ಟು ಓಡಿದರೂ ಶ್ರೀಕೃಷ್ಣದೇವನನ್ನು ನೋಡಲು ಶಕ್ತಳಾಗಲಿಲ್ಲ. ಅವಳ ಮನಸ್ಸಿನಲ್ಲಿ ಅಪಾರವಾದ ದುಃಖವು ಏರ್ಪಟ್ಟಿತು. ಆ ದುಃಖದಿಂದ ಶ್ರೀಕೃಷ್ಣದೇವನನ್ನು ಸ್ಮರಿಸುತ್ತಾ ಬ್ರಹ್ಮನನ್ನು ಕುರಿತು ಹೇಳಿದಳು.

" ಎಲೈ ಬ್ರಹ್ಮನೇ!, ಶ್ರೀಕೃಷ್ಣದೇವನು ಇಲ್ಲದ ಸ್ಥಳವಿಲ್ಲ. ಎಲ್ಲಾ ಸ್ಥಳಗಳಲ್ಲಿಯೂ ವಾಸಿಸುತ್ತಿರುವನು. ನಾನು ವಾಸಿಸುತ್ತಿರುವ ಸ್ಥಳದಲ್ಲಿ ಶ್ರೀಕೃಷ್ಣದೇವನು ಇಲ್ಲದಂತೆ ಮಾಡಲು ನಿನ್ನಿಂದ ಸಾಧ್ಯವಿಲ್ಲ. ಆದರೆ ಎಲ್ಲಾ ಕಡೆಗಳಲ್ಲಿಯೂ ವಾಸಿಸುತ್ತಿರುವ ಶ್ರೀಕೃಷ್ಣದೇವನು ನನ್ನ ಕಣ್ಣಿಗೆ ಕಾಣಿಸದಂತೆ ಮಾಡುವ ಶಕ್ತಿಯು ನಿನಗಿದೆ. ಇದೇ ಶ್ರೀಕೃಷ್ಣದೇವನನ್ನು ದೂರಕ್ಕೆ ಕರೆದುಕೊಂಡು ಹೋಗುವುದೆಂದೂ ಕಣ್ಣಿಗೆ ಕಾಣಿಸುವಂತೆ ಮಾಡುವುದೇ ಸಮೀಪಕ್ಕೆ ಕರೆದುಕೊಂಡು ಬರುವುದೆಂದೂ ಹೇಳಬಹುದು. ನೀನು ಶ್ರೀಕೃಷ್ಣದೇವನನ್ನು ದೂರದವರೆಗೆ ಕರೆದುಕೊಂಡು ಹೋಗಬೇಡ. ಸಮೀಪಕ್ಕೆ ಕರೆದುಕೊಂಡು ಬಾ" ಎಂದು ಪ್ರಾರ್ಥಿಸಿಕೊಂಡಳು.

## ಶ್ರೀಕೃಷ್ಣದೇವನನ್ನು ಎಲ್ಲಾ ಗೋಪಿಕಾಸ್ತ್ರೀಯರು ಒಟ್ಟುಗೂಡಿ ಪ್ರಾರ್ಥಿಸಿದ್ದು

"ಓ ಕೃಷ್ಣದೇವ!, ಹಗಲಿನಲ್ಲಿ ನಮ್ಮ ನಮ್ಮ ಮನೆಗಳಲ್ಲಿ ನಾವು ವಾಸಿಸುತ್ತಿರುವೆವು. ಆಗ ನೀನು ಕಾಡಿಗೆ ಹೋಗುವಿ. ಆ ಸಮಯದಲ್ಲಿ ನಿನ್ನನ್ನು ನೋಡದ ನಾವು ನೀಲವರ್ಣದಿಂದಲೂ ಮಂದಗಮನದಿಂದಲೂ ಪುಷ್ಟಿಯಿಂದಲೂ ಆನೆಯ ಮರಿಗೆ ಸಮಾನವಾದ ನಿನ್ನನ್ನು ಸ್ಮರಿಸುತ್ತಾ ಕಾಲವನ್ನು ಕಳೆಯುವೆವು. ಈಗ ಹಗಲಲ್ಲ.

ರಾತ್ರಿಕಾಲವಾಗಿದೆ. ಮನೆಯಲ್ಲಿ ನಾವು ವಾಸಿಸುತ್ತಿಲ್ಲ. ಕಾಡಿನಲ್ಲಿ ವಾಸಿಸುತ್ತಿರುವೆವು. ಈ ಭಯಂಕರವಾದ ಕಾಲದಲ್ಲಿ ಈ ಸ್ಥಳದಲ್ಲಿ ನೀನಿಲ್ಲದಿರುವಾಗ ನಮಗೆ ಭಯವಾಗುವುದಿಲ್ಲವೇ? ಈ ಸಮಯದಲ್ಲಿ ಕರುಣಾಸಮುದ್ರನಾದ ನೀನು ನಮ್ಮನ್ನು ಬಿಟ್ಟು ಹೋಗಬಹುದೇ?

"ಓ ಕೃಷ್ಣದೇವ!, ನೀನು ಶ್ರೇಷ್ಠನಲ್ಲವೇ? ನೀನು ಶ್ರೇಷ್ಠಸುಖವನ್ನೂ ಶೃಂಗಾರರಸವನ್ನೂ ಕೊಡುವವನಲ್ಲವೇ? ಬಾ. ಎಲೈ ಭೂದೇವಿಯೇ, ನಾವೆಲ್ಲರೂ ನಿನ್ನ ದಾಸಿಯರಾಗಿರುವೆವು. ನಮ್ಮ ಇಷ್ಟಾರ್ಥವನ್ನು ನೀನು ಪೂರ್ತಿ ಮಾಡಲಾರೆಯಾ? ನಾವೆಲ್ಲರೂ ಕಾಡಿನಲ್ಲಿ ತುಂಬಾ ಕಷ್ಟವನ್ನು ಅನುಭವಿಸುತ್ತಿರುವೆವು. ಶ್ರೀಕೃಷ್ಣದೇವನು ಈಗ ನಿನ್ನ (ಭೂದೇವಿಯ) ಭಾರವನ್ನು ಪರಿಹರಿಸುವುದಕ್ಕಾಗಿ ಅವತರಿಸಿದವನು. ಆದ್ದರಿಂದ ನಿನ್ನನ್ನು ಬಿಟ್ಟು ಹೋಗುವುದಿಲ್ಲ. ಈ ವಿಷಯದಲ್ಲಿ ಸಂಶಯವೇ ಬೇಡ. ನಿನ್ನ ಮಧ್ಯದಲ್ಲಿಯೇ ಎಲ್ಲಿಯಾದರೂ ವಾಸಿಸುತ್ತಿರುವನು. ಅವನು ವಾಸಿಸುವ ಸ್ಥಳದಲ್ಲಿ ವೇದವನ್ನು ತಿಳಿದಿರುವ ಜ್ಞಾನಿಗಳು ವೇದಗಳಿಂದ ಅವನನ್ನು ಸ್ತುತಿಸುತ್ತಾ ಕುಳಿತಿರುವರು. ಅವರ ಮಧ್ಯದಲ್ಲಿ ಕುಳಿತಿರುವ ಶ್ರೀಕೃಷ್ಣದೇವನನ್ನು ನೋಡಿ ಅವನಿಗಿ ನಮ್ಮ ಕಷ್ಟಗಳನ್ನು ತಿಳಿಸು."

" ವೇದವಾಕ್ಯಗಳಿಂದ " ನಮ್ಮನ್ನು ಕೈಬಿಡುವುದು ಯುಕ್ತವಲ್ಲ." ಎಂದು ಸಮರ್ಥಿಸು. ನಮ್ಮಲ್ಲಿ ಅನುಗ್ರಹ ಬುದ್ಧಿಯಿಲ್ಲದಿದ್ದರೂ " ನಮ್ಮನ್ನು ಕೈಬಿಡಬಾರದು" ಎಂದು ಸಮರ್ಥಿಸುತ್ತಿರುವ ವೇದಗಳಿಗೆ ಗೌರವವನ್ನು ಕೊಡುವುದಕ್ಕಾಗಿಯಾಗಲೀ ಅವನು ನಮ್ಮನ್ನು ಖಂಡಿತವಾಗಿಯೂ ಅನುಗ್ರಹಿಸುವನು. ವೇದವಾಕ್ಯಗಳಿಂದ ಶ್ರೀಕೃಷ್ಣದೇವನನ್ನು ಸ್ತುತಿಸುತ್ತಿರುವ ಬ್ರಹ್ಮಜ್ಞಾನಿಗಳೂ ಸಹ ನಮ್ಮನ್ನು ಅನುಗ್ರಹಿಸುವಂತೆ ಪ್ರಾರ್ಥಿಸುವರು. ಹೀಗೆ ವೇದವಾಕ್ಯಗಳಲ್ಲಿ ತನಗಿರುವ ಗೌರವಬುದ್ಧಿಯಿಂದಲೂ ಜ್ಞಾನಿಗಳ ಪ್ರಾರ್ಥನೆಯಿಂದಲೂ ನಮ್ಮನ್ನು ಅನುಗ್ರಹಿಸುವಂತೆ ಮಾಡು.

## ಭ್ರಮರಗಳ ಪ್ರೇಮ

" ಓ ಮಹಾಪ್ರಭೋ!, ನೋಡು. ಇಲ್ಲಿ ಒಂದು ಹೆಣ್ಣು ಭ್ರಮರವು ಸರೋವರದ ಸಮೀಪದಲ್ಲಿ ಹಾರುತ್ತಿದೆ. ಪುಷ್ಪಗಳಲ್ಲಿರುವ ಮಧುವನ್ನು ಕುಡಿದು ಆನಂದಪರವಶವಾಗಿದೆ. ಅದರ ಸುತ್ತಲೂ ಅಲ್ಲಲ್ಲಿ ಬ್ರಾಹ್ಮಣ ಶ್ರೇಷ್ಠರು ತಮ್ಮ ತಮ್ಮ ಆಶ್ರಮಗಳಲ್ಲಿ ನಿನ್ನನ್ನು (ಶ್ರೀಕೃಷ್ಣದೇವನನ್ನು) ಧ್ಯಾನಿಸುತ್ತಾ ಕುಳಿತಿರುವರು. ಈ ಭ್ರಮರವು ಅವರ ಧ್ಯಾನಕ್ಕೆ ಭಂಗವು ಬರಕೂಡದೆಂದು ತುಂಬಾ ಹೆದರಿಕೊಂಡು ಮೆಲ್ಲಮೆಲ್ಲನೆ ಝೇಂಕಾರವನ್ನು ಮಾಡುತ್ತಾ ಬರುತ್ತಿದೆ. ಆ ಹೆಣ್ಣು ಭ್ರಮರದ ಮೇಲಿರುವ ಪ್ರೇಮದಿಂದ ಅದರ ಹಿಂದೆ ಗಂಡು ಭ್ರಮರಗಳು ಗುಂಪು ಗುಂಪಾಗಿ ಬರುತ್ತಿವೆ. ಅವುಗಳೂ ಮುನಿಗಳ ಭಯದಿಂದ ಮೆಲ್ಲ ಮೆಲ್ಲನೆ ಝೇಂಕಾರವನ್ನು ಮಾಡುತ್ತಿವೆ. ಆ ಹೆಣ್ಣು ಭ್ರಮರವನ್ನು ಸಮಾಧಾನಪಡಿಸುತ್ತಿವೆ. ಕೊನೆಗೆ ಚುಂಬನವನ್ನು ಮಾಡಿಕೊಂಡು ಆಕಾಶಮಾರ್ಗದಲ್ಲಿ ಹಾರಿ ಹೋಗುತ್ತಿವೆ. ಪುನಃ ಅದೇ ಹೆಣ್ಣು ಭ್ರಮರದ ಹಿಂದೆಯೆ ಓಡುತ್ತಿವೆ. ಈ ರಾತ್ರಿಕಾಲದಲ್ಲಿ ಮುನಿಗಳ ಮಧ್ಯದಲ್ಲಿ ಹೆದರಿದ ಹೆಣ್ಣು ಭ್ರಮರವನ್ನು ಅದರ ಮೇಲಿರುವ ಪ್ರೇಮದಿಂದ ಹೆದರಿದ ಗಂಡು ಭ್ರಮರಗಳು ಸಮಾಧಾನಪಡಿಸಿ ಚುಂಬನವನ್ನು ಮಾಡಿಕೊಂಡು ಹೋಗುತ್ತಾ ಪುನಃ ಪುನಃ ಅನುಸರಿಸಿಕೊಂಡು ಹೋಗುತ್ತಿಲ್ಲವೇ? ಬುದ್ಧಿಶೂನ್ಯವಾದ ಆ ಭ್ರಮರಗಳಿಗೆ ಇರುವ ಚಾತುರ್ಯವೂ ಪ್ರೇಮವೂ ನಿನಗೆ ಬೇಡವೇ? ಹೆಣ್ಣು ಭ್ರಮರವು ಹೆದರಿಕೊಂಡು ಓಡುತ್ತಿರುವಾಗ ಗಂಡು ಭ್ರಮರಗಳ ಸಮೂಹವು ಪ್ರೇಮಪರವಶವಾಗಿ ಹಿಂಬಾಲಿಸಿಕೊಂಡು ಹೋಗಿ ಅದನ್ನು

ಚುಂಬಿಸುತ್ತಿದೆ. ಮತ್ತು ಪುನಃ ಪುನಃ ಹೆಣ್ಣು ಭ್ರಮರವನ್ನು ಹಿಂಬಾಲಿಸುತ್ತಿದೆ. ನಾವೆಲ್ಲರೂ ಹಾಗೆ ಓಡುತ್ತಿಲ್ಲ. ನಿನ್ನನ್ನು ಪ್ರಾರ್ಥಿಸುತ್ತಿರುವೆವು. ಚತುರಶಿಖಾಮಣಿಯಾದ ನೀನು ನಮ್ಮ ಮೇಲಿರುವ ಪ್ರೇಮದಿಂದ ನಮ್ಮನ್ನು ಚುಂಬಿಸಿ ತೃಪ್ತಿಪಡಿಸುವುದೂ ನಮ್ಮನ್ನು ಹಿಂಬಾಲಿಸಿಕೊಂಡು ಬರುವುದೂ ಯುಕ್ತವಲ್ಲವೇ?.

# ಸ್ತ್ರೀಯರ ಗರ್ವಪರಿಹಾರಕ್ಕೆಲುಪಾಯ

"ಓ ಶ್ರೀಕೃಷ್ಣದೇವ!, ಈ ಗೋವರ್ಧನಪರ್ವತದ ಸುತ್ತಲೂ ನಿಬಿಡವಾದ ಮರಗಳಿವೆ. ಆ ಮರಗಳೆಲ್ಲವೂ ಆಕಾಶವನ್ನು ಮುಟ್ಟುತ್ತಿವೆ. ಆ ಪರ್ವತದ ಮೇಲೆ ಏರಿ ನಿಂತು. ಕೋಗಿಲೆಯ ಧ್ವನಿಯಂತೆ ಅತಿಮಧುರವಾದ ಧ್ವನಿಯಿಂದ ಹಾಡು. ಆ ಹಾಡನ್ನು ಕೇಳಿದ ಯಾವ ಸ್ತ್ರೀಯು ನೀನು ಮಾಡಿರುವ ಎಲ್ಲಾ ಅಪರಾಧಗಳನ್ನು ಮರೆಯುವುದಿಲ್ಲ? ಯಾವ ಸ್ತ್ರೀಯ ಗರ್ವವು ಅಡಗುವುದಿಲ್ಲ? ನೀನು ಅಪರಾಧವನ್ನು ಮಾಡಲೇ ಇಲ್ಲ. ಮಾಡುವುದೂ ಇಲ್ಲ. ಹಾಗೆ ಮಾಡಿದ್ದರೂ ನಿನ್ನ ಹಾಡುಗಳನ್ನು ಕೇಳಿದ ಎಲ್ಲಾ ಸ್ತ್ರೀಯರೂ ಮನ್ನಿಸುವರು. ಸಕಲ ಸ್ತ್ರೀಯರ ಗರ್ವವೂ ಅಡಗುವುದು. ಇದಕ್ಕಾಗಿ ನೀನು ಅದೃಶ್ಯನಾಗಬೇಕೇ? ಕಣ್ಣಿಗೆ ಕಾಣಿಸಿಕೊಂಡೇ ಪರ್ವತವನ್ನು ಏರಿ ಗಾಯನವನ್ನು ಮಾಡಿ ಅದರಿಂದಲೇ ನಿನಗೆ ಇಷ್ಟವಾದ ಗರ್ವಪರಿಹಾರ ಮುಂತಾದ ಎಲ್ಲಾ ಕಾರ್ಯಗಳನ್ನೂ ಸಾಧಿಸು."

# ಮನ್ಮಥನಿಗೆ ಆಜ್ಞೆ

" ಎಲೈಮನ್ಮಥನೇ!, ನೀನು ನಮ್ಮ ಪತಿಯೂ ಶೇಷದೇವನ ಮೇಲೆ ಮಲಿಗಿದವನೂ ಆಗಿರುವ ಶ್ರೀಕೃಷ್ಣದೇವನ ಮಗನಾಗಿರುವಿ. ಆದ್ದರಿಂದ ನಮಗೂ ಮಗನಾಗಿರುವಿ. ನಿನ್ನ ತಾಯಿಯಾರಾಗಿರುವ ನಮಗೆ ನೀನು ದ್ರೋಹವನ್ನು ಮಾಡಕೂಡದು. ಸಕಲಸಜ್ಜನರಿಗೆ ನಮ್ಮ ಪತಿಯು ಬಂಧುವಾಗಿರುವನು. ನಾವು ಸಜ್ಜನರಾಗಿರುವುದರಿಂದ ಅವನ ಬಂಧುಗಳಾಗಿರುವೆವು. ನಿನ್ನ ತಾಯಂದರೂ ನಿನ್ನ ತಂದೆಯ ಬಂಧುಗಳೂ ಆಗಿರುವ ನಮ್ಮನ್ನು ನಿನ್ನ ತಂದೆಯ ಸಮೀಪದಲ್ಲಿ ಸೇರಿಸುವುದು ನಿನ್ನ ಧರ್ಮವಾಗಿದೆ. ಅಲ್ಲಿಗೆ ಕರೆದುಕೊಂಡು ಹೋಗು. ಇದು ನಮ್ಮ ಆಜ್ಞೆ. ನಮ್ಮ ಆಜ್ಞೆಯನ್ನು ಉಲ್ಲಂಘಿಸುವುದು ನಿನಗೆ ಧರ್ಮವಲ್ಲ."

" ಎಲೈ ಮನ್ಮಥನೇ! ನಾನು ಈಗ ಓಡಿ ಓಡಿ ಸೋತಿರುವೆನು. ನಡಿಯುವುದು ಮುಂತಾದ ವ್ಯಾಪಾರಗಳನ್ನು ಮಾಡುವ ಶಕ್ತಿಯಿಲ್ಲದವಳಾಗಿರುವೆನು. ನನ್ನ ಅಹಂಕಾರವೆಲ್ಲವೂ ಅಡಗಿತು. ನನ್ನಲ್ಲಿ ಕರುಣೆಯನ್ನು ತೋರಿಸು. ಅಹಂಕಾರವನ್ನು ಬಿಡು. ನನ್ನನ್ನು ಶ್ರೀಕೃಷ್ಣದೇವನ ಸಮೀಪಕ್ಕೆ ಕರೆದುಕೊಂಡು ಹೋಗು. ನನ್ನನ್ನು ಗೌರವಿಸು. ಅಥವಾ ನನ್ನಲ್ಲಿ ನಿನ್ನ ಪ್ರತಾಪವನ್ನು ತೋರಿಸಿದಂತೆ ಶ್ರೀಕೃಷ್ಣದೇವನಲ್ಲಿಯೂ ತೋರಿಸು. ಅವನನ್ನೇ ಇಲ್ಲಿಗೆ ಕರೆದುಕೊಂಡು ಬಾ."

"ಓ ಶ್ರೀಕೃಷ್ಣದೇವ!, ನನ್ನ ಅಹಂಕಾರವೆಲ್ಲವೂ ಅಡಗಿತು. ನೀನು ಅಹಂಕಾರವಿಲ್ಲದವನು. ನಾನು ಅಹಂಕಾರಿಯಾದಾಗ ನೀನೂ ಅಹಂಕಾರವು ಬಂದಂತೆ ನಟಿಸಿರುವಿ. ನೀನು ಅಹಂಕಾರಿಯಂತೆ ನಟಿಸುವುದನ್ನು ಬಿಟ್ಟು ಬಿಡು. ನಾನು ಒಮ್ಮೆ ಅಹಂಕಾರದಿಂದ ಯುಕ್ತಳಾಗಿರುವುದೇನೋ ನಿಜ. ನಾನು ಅಹಂಕಾರವೇ ಬಾರದಿರುವುದಕ್ಕೆ ರಮಾದೇವಿಯೇ? ರಮಾದೇವಿಗೆ ಅಜ್ಞಾನವೂ ಅನ್ಯಾಯವ್ಯಾಪಾರಗಳೂ ಅಹಂಕಾರವೂ ಇಲ್ಲ.

ಅಹಂಕಾರಾದಿಗಳಿಗೆ ಕಾರಣವಾಗಿರುವ ಪ್ರಕೃತಿಯ ಬಂಧವೇ ಇಲ್ಲದಿರುವ ರಮಾದೇವಿಗೆ ಅಜ್ಞಾನ ಮುಂತಾದವುಗಳು ಬರುವುದು ಹೇಗೆ ಸಾಧ್ಯ ನಾವೆಲ್ಲರೂ ಪ್ರಕೃತಿಯಿಂದ ಬದ್ಧರಾಗಿರುವೆವು. ಆದ್ದರಿಂದ ನಮ್ಮಲ್ಲಿ ಅಹಂಕಾರಾದಿಗಳು ಬರುವ ಸಂಭವವುಂಟು. ನನ್ನಲ್ಲಿ ಒಮ್ಮೆ ಏರ್ಪಟ್ಟಿರುವ ಅಹಂಕಾರವನ್ನು ಮನ್ನಿಸು.

"ಓ ಶ್ರೀಕೃಷ್ಣದೇವ!, ನೀನು ನಮ್ಮನ್ನು ಬಿಟ್ಟು ಹೋಗಿರುವುದಾಗಿ ನಾವು ಹೇಳಿದೆವು. ಎಲ್ಲಾ ಸ್ಥಳಗಳಲ್ಲಿಯೂ ವ್ಯಾಪಿಸಿಕೊಂಡಿರುವ ನೀನು ನಾವಿರುವ ಸ್ಥಳದಲ್ಲಿಲ್ಲವೇ? ನಮ್ಮ ಮುಂದೆಯೇ ನೀನು ನಿಂತಿರುವಿ. ಆದರೆ ನೀನು ನಿಂತಿರುವುದು ನಮ್ಮ ಕಣ್ಣುಗಳಿಗೆ ಕಾಣಿಸುವುದಿಲ್ಲ. ಇನ್ನೊಬ್ಬಳನ್ನು ಆಲಿಂಗಿಸುತ್ತಿರುವುದಾಗಿಯೂ ನಮ್ಮನ್ನು ಆಲಿಂಗಸದಂತೆ ಇರುತ್ತಿರುವುದಾಗಿಯೂ ತಿಳಿಯುತ್ತದೆ. ಹಾಗೆ ಮಾಡಬೇಡ. ನೀನು ನಮ್ಮ ಕಣ್ಣುಗಳಿಗೆ ಕಾಣಿಸು. ಇತರ ಸ್ತ್ರೀಯರನ್ನು ಆಲಿಂಗಿಸಿದಂತೆ ನಮ್ಮನ್ನೂ ಆಲಿಂಗಸು. ಈ ಆಲಿಂಗನ ಮುಂತಾದ ನಿನ್ನ ವ್ಯಾಪಾರಗಳು ನಮಗೆ ತಿಳಿಯುವಂತೆ ಮಾಡು."

## ಅದ್ವೈತ ಮತವೂ ಮೀಮಾಂಸಕಮತವೂ ಹೇಯವಾದುದು

"ಓ ಶ್ರೀಕೃಷ್ಣದೇವ!, ನಿನಗೆ ಜನಕನಿಲ್ಲ. ನೀನು ಎಲ್ಲಾ ಸ್ಥಳಗಳಲ್ಲಿ ವ್ಯಾಪಿಸಿರುವ ಆಕಾಶ ಮುಂತಾದ ಜಡವಸ್ತುಗಳಿಗೂ, ವ್ಯಾಪಿಸದಿರುವ ಪೃಥಿವೀ ಮುಂತಾದ ಜಡವಸ್ತುಗಳಿಗೂ, ಮುಕ್ತಿಯನ್ನು ಪಡೆದ ಜೀವರಿಗೂ, ಅಮುಕ್ತರಾದ ಜೀವರಿಗೂ ತಂದೆಯಾಗಿರುವಿ. ಈ ಎಲ್ಲಾ ವಸ್ತುಗಳಿಗೂ ನಿಯಾಮಕನಾಗಿರುವಿ. ಕೊನೆಗೆ ಈ ಎಲ್ಲಾ ವಸ್ತುಗಳನ್ನೂ ಸಂಹರಿಸುವಿ. ಸಕಲ ಜಗತ್ತುಗಳಿಗೂ ಜನಕನೂ ಪಾಲಕನೂ ಸಂಹಾರಕರ್ತನೂ ಆಗಿರುವ ನೀನು ಪ್ರಪಂಚವೂ ಒಂದೇ ಆಗಲು ಸಾಧ್ಯವೇ? ನೀನು ಇಲ್ಲದಿರಲು ಸಾಧ್ಯವೇ? ನೀನಿಲ್ಲದಿದ್ದರೆ ಈ ಪ್ರಪಂಚದ ಸೃಷ್ಟಿ ಮುಂತಾದ ವ್ಯಾಪಾರಗಳನ್ನು ಯಾರು ಮಾಡುವರು? ಆದ್ದರಿಂದ " ಜೀವನೂ ಪರಮಾತ್ಮನೂ ಒಂದೇ" ಎಂಬ ಅದ್ವೈತವಾದವೂ "ಈಶ್ವರನೇ ಇಲ್ಲ" ಎಂಬ ಮೀಮಾಂಸಕರ ವಾದವೂ ಸರಿಯಲ್ಲ."

"(೧) ನೀನು ಜನಕನಿಲ್ಲದವನು. ಪ್ರಪಂಚವು ಹುಟ್ಟಿರುವುದು. (೨) ನೀನು ಜನಕನು. ಪ್ರಪಂಚವು ನಿನ್ನಿಂದ ಹುಟ್ಟಿರುವುದು. (೩) ನೀನು ನಿಯಾಮಕನು. ಪ್ರಪಂಚವು ನಿನ್ನಿಂದ ಪ್ರೇರಿಸಲ್ಪಡುವುದು. (೪) ನೀನು ಪ್ರಪಂಚದ ಸಂಹಾರಕನು. ಪ್ರಪಂಚವು ನಿನ್ನಿಂದ ಸಂಹರಿಸಲ್ಪಡುವುದು. ಹೀಗೆ ನಾಲ್ಕು ಕಾರಣಗಳಿಂದ ನೀನೂ ಪ್ರಪಂಚವೂ ಅತ್ಯಂತ ಭಿನ್ನವೆಂದು ತಿಳಿಯುತ್ತದೆ. (೧) ಮುಕ್ತರಿಗೆ ನೀನೇ ನಿಯಾಮಕನಾಗಿರುವಿ. ಮುಕ್ತರೆಲ್ಲರೂ ನಿನ್ನಿಂದ ಪ್ರೇರಿಸಲ್ಪಡುವವರು. ಈ ಕಾರಣದಿಂದ ಮುಕ್ತರಿಗೂ ನನಗೂ ಭೇದವು ಸಿದ್ಧವಾಯಿತು. ಮುಕ್ತಿಯ ಅವಸ್ಥೆಯು ಜೀವನಿಗೆ ಏರ್ಪಡುತ್ತಿರುವಾಗ ಅವಿದ್ಯೆಯೇ ಇಲ್ಲವೆಂದು ಈ ಅದ್ವೈತಿಗಳೇ ಅಂಗೀಕರಿಸಿರುವರು. ಹಾಗಾದ ಮೇಲೆ ಮುಕ್ತಿಯ ಅವಸ್ಥೆಯಲ್ಲಿರುವ ಮುಕ್ತರಿಗೂ ನಿನಗೂ ಇರುವ ಭೇದವು " ಅವಿದ್ಯಕ" ಅಂದರೆ " ಸುಳ್ಳು" ಅಲ್ಲ. ಸತ್ಯವೆಂದೇ ಸರ್ವರೂ ಅಂಗೀಕರಿಸಲೇಬೇಕು. ಆದ್ದರಿಂದ " ಈ ಭೇದವು ಸುಳ್ಳು ಎಂದು ಹೇಳುತ್ತಿರುವ ಅದ್ವೈತಮತವು ತುಂಬಾ ಹೇಯವಾದುದು" ಎಂದು ಸಿದ್ಧವಾಯಿತು.

" ಸೃಷ್ಟಿಪಾಲನ ಸಂಹಾರ ಎಂಬ ಮೂರು ವ್ಯಾಪಾರಗಳು ಚಿಕ್ಕ ಜಡವಸ್ತುಗಳಿಗೆ ಏರ್ಪಡುತ್ತಿರುವ ವಿಷಯವು ಸರ್ವರಿಗೂ ಪ್ರತ್ಯಕ್ಷಸಿದ್ಧವಾಗಿದೆ. ಇವುಗಳನ್ನು ಯಾರಾದರೂ ಮಾಡುವವರು ಇರಲೇಬೇಕು. ಇದರಂತೆ ಎಲ್ಲಾ

ಪ್ರದೇಶಗಳಲ್ಲಿಯೂ ವ್ಯಾಪಿಸಿರುವ ಆಕಾಶ ಮುಂತಾದ ವಸ್ತುಗಳಿಗೂ ಸೃಷ್ಟಿಪಾಲನ ಸಂಹಾರಗಳನ್ನು ಮಾಡುವವನು ಇರಲೇಬೇಕು. ಈ ವ್ಯಾಪಾರಗಳು ನಮ್ಮಿಂದ ಸಾಧ್ಯವಿಲ್ಲ ಎಂಬ ವಿಷಯವನ್ನು ನಾವು ತಿಳಿದಿರುವೆವು. ಆದ್ದರಿಂದ ನಮಗಿಂತಲೂ ಅಧಿಕ ಶಕ್ತಿ ಮುಂತಾದ ಗುಣಗಳಿಂದ ಪೂರ್ಣನಾಗಿರುವ ಶ್ರೀಕೃಷ್ಣದೇವನೇ ಸರ್ವರಿಗೂ ಜನಕನೂ ಪಾಲಕನೂ ಸಂಹಾರಕನೂ ಆಗಿರುವವನೆಂದು ಸರ್ವರೂ ಅಂಗೀಕರಿಸಲೇಬೇಕು. ಆದ್ದರಿಂದ ಈಶ್ವರನೇ ಇಲ್ಲವೆಂದು ಹೇಳುತ್ತಿರುವ ಮೀಮಾಂಸಕರ ಮತವೂ ಸರಿಯಲ್ಲ."

# ಶ್ರೀಕೃಷ್ಣನ ಅಧರಾಮೃತಕ್ಕೆ ಮುಕ್ತಿಯೇ ಫಲ

"ಓ ಶ್ರೀಕೃಷ್ಣದೇವ!, ನನಗೆ ಮುದ್ದನ್ನು ಕೊಡುತ್ತಾ ತುಟಿಯಲ್ಲಿರುವ ಅಮೃತವನ್ನು ಕೊಡು. ಈ ವಿಧದಿಂದ ಅಧರಾಮೃತವನ್ನು ಕೊಡುತ್ತಿರುವ ನಿನಗೆ ನನ್ನ ಶರೀರವನ್ನು ಸಮರ್ಪಿಸುವೆನು. ಆ ಶರೀರದೊಡನೆ ನೀನು ವಿಹರಿಸು. ಈ ವಿಹಾರದಿಂದ ನನ್ನ ಎಲ್ಲಾ ಪಾಪಗಳೂ ಖಂಡಿತವಾಗಿಯೂ ನಶಿಸುತ್ತವೆ. ಪಾಪಗಳೇ ಸಂಸಾರಕ್ಕೆ ಕಾರಣವೆನಿಸುತ್ತವೆ. ಪಾಪಗಳೆಲ್ಲವೂ ನಶಿಸಿದರೆ ಸಂಸಾರಕ್ಕೆ ಕಾರಣವೇ ಇಲ್ಲದಂತಾಗುವುದು. ಸಂಸಾರಕ್ಕೆ ಕಾರಣವೇ ಇಲ್ಲದಂತಾದರೆ ನನಗೆ ಮುಕ್ತಿಯು ತಾನಾಗಿಯೇ ಸಿದ್ಧವಾಗುವುದು. ಆದ್ದರಿಂದ ನಿನ್ನ ಅಧರಾಮೃತದಾನವು ಸಂಸಾರದಿಂದ ಬಿಡುಗಡೆಗೆ ಕಾರಣವಾಗಿದೆ. ಅಧರಾಮೃತವನ್ನು ಕೊಡು."

ಶ್ರೀಕೃಷ್ಣದೇವನನ್ನು ಮಹಾಮುನಿಗಳು ಅನೇಕ ಜನ್ಮಗಳಲ್ಲಿ ಅಷ್ಟಾಂಗ ಯೋಗಾಭ್ಯಾಸವನ್ನು ಮಾಡುತ್ತಾ ಧ್ಯಾನಿಸುತ್ತಿರುವರು. ಆ ಧ್ಯಾನವು ಪಕ್ವವಾದ ಮೇಲೆ ಕೊನೆಯ ಜನ್ಮದಲ್ಲಿ ತಮ್ಮ ಶರೀರವನ್ನು ಬಿಟ್ಟು ಶ್ರೀಕೃಷ್ಣದೇವನ ಸನ್ನಿಧಾನವನ್ನು ಪಡೆಯುವರು. ಅಂತಹ ಶ್ರೀಕೃಷ್ಣದೇವನನ್ನು ತನ್ನೊಡನೆ ರತಿಕ್ರೀಡೆಯನ್ನು ಮಾಡುವ ಶೀಲದಿಂದ ಯುಕ್ತನಾಗಿರುವವನು ಎಂದು ಒಬ್ಬ ಗೋಪಿಕಾಸ್ತ್ರೀಯು ತಿಳಿದಳು. ಶ್ರೀಕೃಷ್ಣದೇವನ ವಿರಹದುಃಖದಿಂದ ಅವಳ ದೇಹವು ಕೃಶವಾಯಿತು. ದೇಹವು ಕೃಶವಾದುದರಿಂದ ಅವಳ ದೇಹದಲ್ಲಿರುವ ಹಾರ ಮುಂತಾದ ಆಭರಣಗಳು ಅವಳ ದೇಹದಿಂದ ಕೆಳಗೆ ಜಾರಿಬಿದ್ದವು. ಅವಳು ಅಯ್ಯೋ,ರಾಮ ಕೃಷ್ಣ ಎಂದು ಹೇಳುತ್ತಾ ದುಃಖದಿಂದ ಪೀಡಿತಳಾಗಿ ಕೆಳಗೆ ಬಿದ್ದು ಮೂರ್ಛಿತಳಾದಳು.

# ಎಲ್ಲಾ ಸ್ತ್ರೀಯರೂ ಪುನಃ ಶ್ರೀಕೃಷ್ಣದೇವನನ್ನು ಪ್ರಾರ್ಥಿಸಿದುದು

ಎಲ್ಲಾ ಸ್ತ್ರೀಯರೂ ಒಟ್ಟುಗೂಡಿದರು. ಪುನಃ ಶ್ರೀಕೃಷ್ಣದೇವನನ್ನು ಸ್ತುತಿಸಲು ಆರಂಭಿಸಿದರು. "ದೋಷಲೇಶವೂ ಇಲ್ಲದಿರುವ "ಓ ಶ್ರೀಕೃಷ್ಣದೇವ, ಮಲಯಪರ್ವತದಲ್ಲಿ ಗಂಧದ ಮರಗಳು ಎಲ್ಲಾ ಕಡೆಗಳಲ್ಲಿಯೂ ಇರುತ್ತವೆ. ಆ ಗಂಧದ ಮರಗಳ ಮಧ್ಯದಲ್ಲಿ ಗಾಳಿಯು ಮೆಲ್ಲ ಮೆಲ್ಲನೆ ಸಂಚರಿಸುತ್ತದೆ. ಈ ಗಾಳಿಯು ಮಲಯಾನಿಲವೆನಿಸುತ್ತದೆ. ಈ ಗಾಳಿಯ ಭಯದಿಂದ ಭೂಮಿದೇವಿಯೂ ನಡುಗುತ್ತಿರುವಳು. ಆದ್ದರಿಂದಲೇ ಈ ಗಾಳಿಯು ಬೀಸುತ್ತಿರುವಾಗ ಭೂಮಿಯಿಂದ ಧೂಳಿಗಳೆಲ್ಲವೂ ಹಾರುತ್ತಿರುತ್ತವೆ. ಈ ಮಲಯಾನಿಲವನ್ನು ನೋಡಿ ಭೂದೇವಿಯೇ ನಡುಗುತ್ತಿರುವಾಗ ಕಾಮುಕರು ನಡುಗುತ್ತಿರುವುದು ಆಶ್ಚರ್ಯವಲ್ಲ. ಕಾಮುಕರಿಗೆ ಕಾಮಬಾಧೆಯನ್ನು ಹೆಚ್ಚಿಸುತ್ತಾ ಈ ಮಲಯಾನಿಲವು ತುಂಬಾ ಪೀಡಿಸುತ್ತಿರುತ್ತದೆ.

"ದಂಪತಿಗಳಿಗೆ ಪರಸ್ಪರ ವಿಯೋಗವು ಪ್ರಳಯಕಾಲದ ಬೆಂಕಿಯಂತೆ ಅತ್ಯುಗ್ರವಾಗಿರುತ್ತದೆ. ಆದ್ದರಿಂದಲೇ ಈ ವಿಯೋಗವನ್ನು ಪ್ರಳಯಾಗ್ನಿ ಎಂದು ಹೇಳುವುದರಲ್ಲಿ ತಪ್ಪಿಲ್ಲ. ಮಲಯಾನಿಲವು ಈ ವಿಯೋಗ ಎಂಬ ಅಗ್ನಿಗೆ ತುಂಬಾ ಬಲವನ್ನು ಕೊಡುತ್ತಿರುತ್ತದೆ. ಪ್ರಳಯಕಾಲದ ಅಗ್ನಿಯು ಸರ್ವರಿಗೂ ಆಶ್ರಯವಾಗಿರುವ ಪ್ರಪಂಚವನ್ನು ಸುಟ್ಟು ಬೂದಿಮಾಡುತ್ತಿರುವಂತೆ ಈ ಮಲಯಾನಿಲದಿಂದ ಸಹಿತವಾದ ವಿಯೋಗಾಗ್ನಿಯು ಕಾಮುಕಪ್ರಪಂಚವನ್ನು ಸುಟ್ಟು ಬೂದಿ ಮಾಡುತ್ತಿರುತ್ತದೆ.

"ಓ ಶ್ರೀಕೃಷ್ಣದೇವ!, ನಮ್ಮೆಲ್ಲರಿಗೂ ಈಗ ನಿನ್ನ ವಿಯೋಗವು ಏರ್ಪಟ್ಟಿರುತ್ತದೆ. ಆ ವಿಯೋಗವು ಪ್ರಳಯಕಾಲದ ಬೆಂಕಿಯಂತೆ ಕಾಮುಕರಿಗೆ ಅತ್ಯುಗ್ರವಾಗಿದೆ ಎಂಬ ವಿಷಯವನ್ನು ನಾವು ಅನುಭವಿಸುತ್ತಿರುವೆವು. ಆ ವಿಯೋಗಾಗ್ನಿಗೆ ಅಧಿಕವಾದ ಬಲವು ಮಲಯಾನಿಲದಿಂದ ಏರ್ಪಡುತ್ತಿದೆ ಎಂಬ ವಿಷಯವನ್ನೂ ಅನುಭವಿಸುತ್ತಿರುವೆವು. ಈ ವಿರಹಾಗ್ನಿಯಿಂದ ತತ್ತಳಿಸುತ್ತಿರುವೆವು. ಈ ವಿರಹಾಗ್ನಿಯಿಂದ ಏರ್ಪಡುತ್ತಿರುವ ಬಾಧೆಯನ್ನು ಕಳೆದುಕೊಳ್ಳುವುದಕ್ಕಾಗಿ ಸಾಯಬೇಕೆಂದು ಆಶಿಸುವೆವು. ಆದರೆ ನಮ್ಮ ಪ್ರಾಣವಾಯುವು ನಮ್ಮನ್ನು ಬಿಟ್ಟು ಹೋಗದೆ ಶಾಶ್ವತವಾಗಿ ನಮ್ಮ ದೇಹದಲ್ಲೇ ಇರುವಂತೆ ತೋರುತ್ತಿದೆ. ಅದಕ್ಕಾಗಿ ತುಂಬಾ ದುಃಖಿಸುತ್ತಿರುವೆವು. ನೀನು ಬಾ. ಅಥವಾ ನಮ್ಮ ಪ್ರಾಣವಾಯುವನ್ನು ನಮ್ಮದೇಹದಿಂದ ಹೊರಡಿಸಿ ನಿನ್ನ ಪಾದಗಳಲ್ಲಿ ಸೇರಿಸು."

"ಓ ಶ್ರೀಕೃಷ್ಣದೇವ!, ನೀನು ಎಲ್ಲಾ ದೇವತೆಗಳಿಗೂ ಪ್ರಭುವಲ್ಲವೇ? ದೇವತೆಗಳ ಅವತಾರವಾಗಿರುವ ನಮಗೂ ಪ್ರಭುವಲ್ಲವೇ? ನಮ್ಮ ಪ್ರಭುವಾದ ನೀನು ನಮ್ಮನ್ನು ಕೈಬಿಡಬಹುದೇ? ದೇವೇಂದ್ರನು ಶಿಡಿಲಿನಿಂದ ಅತಿಭಯಂಕರವಾದ ಮಳೆಯನ್ನು ಸುರಿಸಿದನು. ಹರಿತವಾದ ಕತ್ತಿಯನ್ನು ಎಣ್ಣೆಯಲ್ಲಿ ಮುಳುಗಿಸಿ ಹರಿತವೂ ಜಾರುತ್ತಲೂ ಇರುವ ಆ ಕತ್ತಿ ಯಿಂದ ಕತ್ತರಿಸಲ್ಪಟ್ಟವನಿಗೆ ಕಪ್ಪುಬಣ್ಣದ ಹುಣ್ಣುಗಳಿಂದ ಏರ್ಪಡುತ್ತಿರುವ ದುಃಖವು ಅತಿಭಯಂಕರವಾದುದು. ನಮ್ಮೆಲ್ಲರಿಗೂ ಈ ಮಳೆಯಿಂದ ಇಂತಹ ದುಃಖವು ಏರ್ಪಟ್ಟಿತು. ಆಗ ನೀನು ನಮ್ಮೆಲ್ಲರನ್ನೂ ಕಾಪಾಡಲಿಲ್ಲವೇ? ಕಾಡಿನ ಬೆಂಕಿಯು ಎಲ್ಲಾ ಕಡೆಗಳಿಂದಲೂ ನಮ್ಮನ್ನು ಸುತ್ತಿಕೊಂಡು ಬಂತು. ಆದರ ಮಧ್ಯದಲ್ಲಿ ಸಿಕ್ಕಿರುವ ನಮ್ಮನ್ನು ರಕ್ಷಿಸಲಿಲ್ಲವೇ? ಭಕ್ತರಿಗೆ ಅಷ್ಟೈಶ್ವರ್ಯಗಳನ್ನು ಕೊಟ್ಟು ರಕ್ಷಿಸುತ್ತಿರುವ ನೀನು ಭಕ್ತರಾದ ನಮ್ಮನ್ನು ರಕ್ಷಿಸಬೇಡವೇ? ಭಕ್ತಾಭಿಮಾನಿ ಎಂಬ ಬಿರುದಿನಿಂದ ಯುಕ್ತನಾದ ನೀನು ನಿನ್ನ ಬಿರುದನ್ನು ಬಿಟ್ಟೆಯಾ? ಬಿಡದಿದ್ದರೆ ನಮ್ಮಲ್ಲಿ ಅಭಿಮಾನವನ್ನು ತೋರಿಸಬೇಡವೇ? ಈಗ ನೀನು ನಮ್ಮೆಲ್ಲರನ್ನೂ ರಕ್ಷಿಸದಿದ್ದರೆ ಹಿಂದೆ ನಮ್ಮನ್ನು ರಕ್ಷಿಸುವುದಕ್ಕಾಗಿ ಮಾಡಿರುವ ಪ್ರಯಾಸಗಳೆಲ್ಲವೂ ವ್ಯರ್ಥವಲ್ಲವೇ?"

"ಓ ಶ್ರೀಕೃಷ್ಣದೇವ!, ನಾವೆಲ್ಲರೂ "ನಮಗೆ ಸರಿಯಾದ ಸುಂದರಿಯರು ಯಾರೂ ಇಲ್ಲ. ಆದ್ದರಿಂದಲೇ ನಮ್ಮ ಸೌಂದರ್ಯವನ್ನು ನೋಡಿ ಮೋಹಿತನಾದಶ್ರೀಕೃಷ್ಣನು ನಮ್ಮ ಮನೆಯಲ್ಲಿಯೇ ವಾಸಿಸುತ್ತಿರುವನು" ಎಂದು ತಿಳಿದೆವು. ಸೌಂದರ್ಯಮದದಿಂದ ಯುಕ್ತರಾದೆವು. ಇದಕ್ಕಾಗಿ ನೀನು ನಮಗೆ ದರ್ಶನವನ್ನು ಕೊಡದೆ ಗೋಳಾಡಿಸುತ್ತಿರುವೆಯಾ? ಇದೇ ಕಾರಣವಾಗಿದ್ದರೆ ರುದ್ರದೇವನಿಂದ ಆರಂಭಿಸಿ ತೃಣಜೀವರ ವರೆಗೆ ಸರ್ವಜೀವರನ್ನೂ ನೀನು ಶಿಕ್ಷಿಸಬೇಕಾಗುವುದು. ಅದನ್ನು ಈಗ ವಿವರಿಸುವೆವು."

"ಚತುರ್ಮುಖನಾದ ಬ್ರಹ್ಮದೇವನೂ ವಾಯುದೇವರೂ ನಿನಗೆ ಯಾವ ವಿಧವಾದ ಅಪರಾಧವನ್ನೂ

ಮಾಡದಿರುವವರು. ಅವರು ಅಪರಾಧವನ್ನು ಮಾಡದಿರುವುದೂ ಸಹ ನಿನ್ನ ಅನುಗ್ರಹಬಲದಿಂದಲೇ ಹೊರತು ಸ್ವಶಕ್ತಿಯಿಂದಲ್ಲ. ರುದ್ರದೇವನೂ ಸಹ ಎಷ್ಟೋ ಸಲ ನಿನಗೆ ಅಪರಾಧವನ್ನು ಮಾಡಿರುವನು. ನಿನ್ನ ಅನುಗ್ರಹವು ಅವನಲ್ಲಿ ಏರ್ಪಟ್ಟಾಗ ಅಪರಾಧವನ್ನು ಮಾಡುವುದಿಲ್ಲ. ನೀನು ವಿಮುಖನಾದಾಗ ಅಪರಾಧವನ್ನು ಮಾಡುವನು. ರುದ್ರದೇವನ ಸ್ಥಿತಿಯೇ ಹೀಗಿರುವಾಗ ಅವನಿಗಿಂತ ಕೆಳಗಣ ದರ್ಜೆಗೆ ಸೇರಿರುವ ನಮ್ಮಂತಹ ಅಲ್ಪಜೀವರ ಪಾಡೇನು? ಅಪರಾಧಿಯಾದ ರುದ್ರದೇವನನ್ನು ಅನುಗ್ರಹಿಸಲಿಲ್ಲವೆ? ನಮ್ಮನ್ನೂ ಅನುಗ್ರಹಿಸಿ ದರ್ಶನವನ್ನು ಕೊಡು."

" ಓ ಶ್ರೀಕೃಷ್ಣದೇವ!, ಅನ್ನವೇ ಸಕಲ ದೋಷಗಳಿಗೂ ಮೂಲವೆನಿಸುತ್ತದೆ. ಅನ್ನವನ್ನು ತಿನ್ನುವವರೆಲ್ಲರೂ ಅನ್ನದಿಂದ ಬರುವ ಮನೋವಿಕಾರದಿಂದ ಯುಕ್ತರಾಗಿರುವರು. " ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ"

ಅಂದರೆ ಆಹಾರವನ್ನು ಬಿಟ್ಟವನಿಗೆ ವಿಷಯಗಳನ್ನು ಅನುಭವಿಸುವ ಶಕ್ತಿಯು ಕ್ಷೀಣಿಸುತ್ತದೆ. ಆ ಶಕ್ತಿಯು ಕ್ಷೀಣಿಸಿದ ಕೂಡಲೇ ವಿಷಯಗಳನ್ನು ಅನುಭವಿಸುವುದು ಕ್ರಮವಾಗಿ ನಿಂತುಹೋಗುತ್ತದೆ. ಇದರಿಂದ ವಿಷಯಗಳನ್ನು ಅನುಭವಿಸುವಾಗ ಬರುವ ಪಾಪಗಳು ಕಡಿಮೆಯಾಗುತ್ತಾ ಬರುತ್ತವೆ. ಆದ್ದರಿಂದ ಶ್ರೇಷ್ಠಾಪರಾಧ ಮುಂತಾದ ಸಕಲ ಪಾಪಗಳೂ ಹೋಗುವುದಕ್ಕೆ ಅನ್ನತ್ಯಾಗವೇ ಮುಖ್ಯ ಕಾರಣವೆನಿಸುತ್ತದೆ.

" ಅದು ಮಾತ್ರವಲ್ಲ. ಅನ್ನವನ್ನು ತಿನ್ನುತ್ತಾ ಪಾಪಗಳನ್ನು ಮಾಡುತ್ತಿರುವವರನ್ನು ಅನ್ನವನ್ನು ಬಿಟ್ಟಿರುವ ಮಹಾತ್ಮರು ಸಂಸಾರದಿಂದ ದಾಟಿಸುತ್ತಿರುವ ವಿಷಯದಲ್ಲಿ ಹಡಗಿನಂತಿರುವವರು. ಅವರೂ ದಾಟಿಸದಿದ್ದರೆ ಅನ್ನವನ್ನು ತಿನ್ನುತ್ತಾ ಪಾಪಗಳನ್ನು ಗಳಿಸುತ್ತಾ ಸಂಸಾರ ಸಮುದ್ರದಲ್ಲಿ ಮುಳುಗುತ್ತಿರುವ ನಮ್ಮಂತಹ ಜೀವರಿಗೆ ಸಂಸಾರದಿಂದ ಬಿಡುಗಡೆಯೇ ಆಗಲಾರದು."

" ಓ ಶ್ರೀಕೃಷ್ಣದೇವ!, ನಾವೆಲ್ಲರೂ ಅನ್ನವನ್ನು ತಿನ್ನುತ್ತಿರುವವರು. ಆದ್ದರಿಂದಲೇ ಪಾಪಗಳನ್ನು ಮಾಡುತ್ತಿರುವವರು. ನಾವು ನಿನಗೆ ಅನಂತ ಜನ್ಮಗಳಿಂದಲೂ ಅಪರಾಧಗಳನ್ನು ಮಾಡುತ್ತಿರುವೆವು. ಹಿಂದಿನ ಜನ್ಮಗಳಲ್ಲಿ ಮಾಡಿದ ಅನಂತ ಅಪರಾಧಗಳನ್ನು ಮನ್ನಿಸಿ ಈ ಜನ್ಮದಲ್ಲಿ ಒಮ್ಮೆ ದರ್ಶನವನ್ನು ಕೊಡಲಿಲ್ಲವೇ? ಅದರಂತೆ ಈ ಜನ್ಮದಲ್ಲಿ ಒಮ್ಮೆ ಮಾಡಿರುವ ಅಪರಾಧವನ್ನು ಮನ್ನಿಸಿ ಇನ್ನೊಮ್ಮೆ ದರ್ಶನವನ್ನು ಕೊಡು. ನಮ್ಮಂತೆಯೇ ಅಪರಾಧವನ್ನು ಮಾಡುತ್ತಿರುವ ರುದ್ರ ಮುಂತಾದ ಸಕಲ ಜೀವರನ್ನೂ ಅನುಗ್ರಹಿಸುತ್ತಿಲ್ಲವೇ? ಅವರನ್ನು ಅನುಗ್ರಹಿಸಿದಂತೆ ನಮ್ಮನ್ನೂ ಅನುಗ್ರಹಿಸು."

" ಓ ಮಹಾಪ್ರಭೋ!, ದೈತ್ಯರೆಲ್ಲರೂ ನಿನ್ನ ಭಕ್ತರಾದ ದೇವತೆಗಳು ವಾಸಿಸುತ್ತಿರುವ ಸ್ವರ್ಗಲೋಕಕ್ಕೆ ವಿರೋಧವನ್ನು ಮಾಡಬೇಕೆಂಬ ಅಭಿಪ್ರಾಯವುಳ್ಳವರು. ಅಂತಹ ದೈತ್ಯರಿಗೆ ನೀನು ದುಃಖವನ್ನು ಕೊಡುವುದು ನ್ಯಾಯವೆನಿಸುತ್ತದೆ. ನಿನ್ನ ಭಕ್ತರಾದ ನಮಗೆ ದುಃಖವನ್ನು ಕೊಡುತ್ತಿರುವುದು ನ್ಯಾಯವಲ್ಲ."

" ಮುಖ್ಯಪ್ರಾಣದೇವರು ಮನಃಪೂರ್ವಕವಾಗಿ ಬೃಹದ್ರಥಂತರ ಮುಂತಾದ ಸಾಮವೇದಗಳನ್ನು ಪಠಿಸುತ್ತಾ ನಿನ್ನನ್ನು ಸಂತೋಷಪಡಿಸುತ್ತಿರುವವರು. ಅವರ ಮುಖದಿಂದ ಹೊರಡುವ ಸಾಮವೇದಗಳ ಸ್ವರಗಳು ನಿನಗೆ ಅತ್ಯಂತ ಪ್ರಿಯವಾದವುಗಳು. ಆದ್ದರಿಂದ ವೇದಾಭ್ಯಾಸವನ್ನು ಮಾಡುತ್ತಾ ನಿನ್ನನ್ನು ಸಂತೋಷಪಡಿಸುವ ಅಧಿಕಾರಿಗಳಲ್ಲಿ ಮುಖ್ಯಪ್ರಾಣದೇವರೇ ಉತ್ತಮರು. ನಾವು ವೇದಾಭ್ಯಾಸವನ್ನು ಮಾಡುವ ಅಧಿಕಾರಿಗಳಲ್ಲ. ಆದ್ದರಿಂದ

ವೇದಾಭ್ಯಾಸವನ್ನು ಮಾಡಲಿಲ್ಲ ಎಂಬ ಕಾರಣವನ್ನು ಹೇಳಿ ನಮ್ಮನ್ನು ಅನುಗ್ರಹಿಸದಿರುವುದು ಯುಕ್ತವಲ್ಲ."

"ಪ್ರಣವಮಂತ್ರಗಳನ್ನು ತುಂಬಾ ಪ್ರೇಮದಿಂದ ಮನಃಪೂರ್ವಕವಾಗಿ ಜಪಿಸುತ್ತಾ ನಿನ್ನನ್ನು ಆರಾಧಿಸುವ ಅಧಿಕಾರವು ಪರಮಹಂಸರಿಗೆ ಇರುತ್ತದೆ. ಸ್ತ್ರೀಯರಾದ ನಮಗಿಲ್ಲ. ಆದ್ದರಿಂದ ಪ್ರಣವಮಂತ್ರಗಳನ್ನು ಜಪಿಸಲಿಲ್ಲವೆಂಬ ಕಾರಣವನ್ನು ಹೇಳಿ ನಮ್ಮನ್ನು ಅನುಗ್ರಹಿಸದಿರುವುದು ತರವಲ್ಲ."

" ನೀನು ಅಳುತ್ತಿರುವಾಗ ನಿನ್ನನ್ನು ಕೊಲ್ಲಬೇಕೆಂದು ಶಕಟಾಸುರನು ಬಂದನು. ನೀನುಅಳುತ್ತಿರುವಾಗ ಸಹೃದಯರಾದವರು ಯಾರೂ ನಿನಗೆ ವಿರೋಧವನ್ನು ಮಾಡಲಾರರು. ಅವನು ಆ ಸಮಯದಲ್ಲಿಯೂ ನಿನ್ನನ್ನು ಕೊಲ್ಲಬೇಕೆಂದು ಯತ್ನಿಸಿದನು. ಕೊನೆಗೆ ಅವನೇ ಸತ್ತನು. ಇದರಿಂದ ಎಲ್ಲಾ ದೈತ್ಯರೂ ನಿನ್ನನ್ನೂ ನಿನ್ನ ಭಕ್ತರನ್ನೂ ವಿರೋಧಿಸುವ ಸ್ವಭಾವವುಳ್ಳವರು ಎಂದು ಸ್ಪಷ್ಟಪಡಿಸಿದನು. ನೀನು ಅವರನ್ನು ನಿಗ್ರಹಿಸುವುದು ಉಚಿತವೇ ಹೊರತು ನಿನ್ನ ಭಕ್ತರಾದ ನಮ್ಮನ್ನಲ್ಲ. ಆದ್ದರಿಂದ ದಯೆಯನ್ನು ತೋರಿಸು."

"ನಿನ್ನ ವಕ್ಷಃಸ್ಥಳವು ಸೂರ್ಯನಂತೆ ಹೊಳೆಯುತ್ತಿದೆ ಎಂದು ನಾವು ತಿಳಿದುಕೊಂಡಿರುವೆವು. ನಿನ್ನನ್ನು ಅದ್ವೈತಿಗಳು ಒಂದು ಅವಯವವೂ ಇಲ್ಲದವನೆಂದು ಹೇಳುತ್ತಿರುವರು. ಪರಮಸುಂದರವಾದ ಶರೀರದಿಂದಲೂ ಅವಯವಗಳಿಂದಲೂ ಯುಕ್ತನಾಗಿರುವ ನಿನ್ನನ್ನು ಶರೀರವೇ ಇಲ್ಲದವನೆಂದೂ ಹೇಳುತ್ತಿರುವುದು ನಿನ್ನಲ್ಲಿ ಅವರಿಗೆ ಇರುವ ದ್ವೇಷವನ್ನು ಸೂಚಿಸುತ್ತಿದೆ. ನಾವು ಹಾಗಲ್ಲ. ನೀನು ದೇಹಯುಕ್ತನೆಂದೂ ಸೂರ್ಯನಂತೆ ಹೊಳೆಯುತ್ತಿರುವ ವಕ್ಷಃಸ್ಥಳ ಎಂಬ ಒಂದು ಅವಯವದಿಂದಲೂ ಇದರಂತಿರುವ ಇತರ ಅವಯವಗಳಿಂದಲೂ ಯುಕ್ತನಾಗಿರುವನೆಂದೂ ಹೇಳುತ್ತಾ ನಿನ್ನಲ್ಲಿ ಅಪಾರ ಭಕ್ತಿಯನ್ನು ವ್ಯಕ್ತಪಡಿಸುತ್ತಿರುವೆವು. ಅದಕ್ಕಾಗಿಯಾದರೂ ನೀನು ಪ್ರಸನ್ನನಾಗಿ ದರ್ಶನವನ್ನು ಕೊಡು."

"ಓ ಶ್ರೀಕೃಷ್ಣದೇವ ನಮ್ಮಲ್ಲಿ ಲಕ್ಷ್ಮೀದೇವಿಯವರು ಯಾವಾಗಲೂ ಸನ್ನಿಹಿತರಾಗಿರುವರು. ಲಕ್ಷ್ಮೀದೇವಿಯನ್ನೂ ಲಕ್ಷ್ಮೀದೇವಿಯ ವಿಶೇಷಸನ್ನಿಧಾನವುಳ್ಳ ಸ್ತ್ರೀಯರನ್ನೂ ನೀನು ಪರಿಗ್ರಹಿಸುವುದಾಗಿ ಜ್ಞಾನಿಗಳು ಹೇಳುತ್ತಿರುವರು. ಆದ್ದರಿಂದ ಲಕ್ಷ್ಮೀದೇವಿಯ ವಿಶೇಷ ಸನ್ನಿಧಾನಕ್ಕೆ ಪಾತ್ರರಾದ ನಮ್ಮನ್ನು ಅನುಗ್ರಹಿಸು. ನೀನು ಅಸುರರ ಸಂತೋಷಕ್ಕೆ ವಿರೋಧಿಯೆಂದೂ, ಭಕ್ತರಿಗೆ ಸಕಲ ವಿಧವಾದ ಇಷ್ಟಗಳನ್ನು ಕೊಡುತ್ತಿರು. ನನನೆಂದೂ, ಸಕಲ ಶಾಸ್ತ್ರಗಳು ಹೊಗಳುತ್ತಿವೆ. ಈಗ ನಿನ್ನ ಭಕ್ತರಾದ ನಮ್ಮನ್ನು ಕಷ್ಟಪಡಿಸುತ್ತಿರುವಿ. ನಮ್ಮದೇಹಗಳಲ್ಲಿ ವಾಸಿಸುತ್ತಾ ಇದನ್ನು ನೋಡುತ್ತಿರುವ ತತ್ವಾಭಿಮಾನಿಗಳಾದ ದೈತ್ಯರುಗಳಿಗೆ ಸಂತೋಷಪಡಿಸುತ್ತಿರುವಿ. ಇದು ನಿನ್ನ ಔದಾರ್ಯ ಮುಂತಾದ ಗುಣಗಳಿಗೆ ಉಚಿತವಲ್ಲ. ಆದ್ದರಿಂದ ನಮ್ಮನ್ನು ಸಂತೋಷಪಡಿಸು. ತತ್ವಾಭಿಮಾನಿ ದೈತ್ಯರುಗಳಿಗೆ ಅಪಾರ ದುಃಖಗಳನ್ನು ಕೊಡು."

"ಓ ಕೃಷ್ಣದೇವ!, ಬ್ರಹ್ಮದೇವನು ಸಕಲ ದೇವತೆಗಳನ್ನು ಕರೆದುಕೊಂಡು ಕ್ಷೀರಸಮುದ್ರದ ತೀರಕ್ಕೆ ಬಂದನು. ಆಗ ನೀನು ಬ್ರಹ್ಮದೇವನನ್ನು ಕುರಿತು ಹೇಳಿರುವ ಮಾತುಗಳಲ್ಲಿ " ಸಂಭವಂತು ಸುರಸ್ತ್ರಿಯಃ" ಅಂದರೆ "ನಾನು ಅವತಾರವನ್ನು ಸ್ವೀಕರಿಸಿದ ಸಮಯದಲ್ಲಿ ದೇವತಾಸ್ತ್ರೀಯರೆಲ್ಲರೂ ಭೂಮಿಯಲ್ಲಿ ಹುಟ್ಟಲಿ" ಎಂದು ಒಂದು ಆಜ್ಞೆಯನ್ನು ಮಾಡಿರುವಿ. ಆ ಆಜ್ಞೆಯನ್ನು ಈಗ ಜ್ಞಾಪಕಪಡಿಸುವೆವು. ನಿನ್ನ ಆಜ್ಞೆಯಂತೆ ನಾವೆಲ್ಲರೂ ಹುಟ್ಟಿರುವೆವು. ನಿನ್ನ ಆಜ್ಞೆಯಂತೆ ಹುಟ್ಟಿರುವ ನಮ್ಮೆಲ್ಲರ ಯೋಗಕ್ಷೇಮವನ್ನು ನಿರ್ವಹಿಸುವ ಭಾರವು ನಿನ್ನದಲ್ಲವೇ? ನಿನ್ನ ಆಜ್ಞೆಯಂತೆ

ಅಚರಿಸಿರುವ ನಮಗೆ ನೀನೇ ಕಷ್ಟವನ್ನು ಕೊಡಬಹುದೇ? ಹಾಗೆ ಕಷ್ಟವನ್ನು ಕೊಟ್ಟರೆ ನಿನ್ನ ಆಜ್ಞೆಗೆ ನೀನೇ ವಿರೋಧವಾಗಿ ನಡೆದುಕೊಂಡಂತಾಗುವುದಿಲ್ಲವೇ? ಸ್ವವಚನವ್ಯಾಘಾತ ಅಂದರೆ ತನ್ನ ಮಾತುಗಳಿಗೆ ತಾನೇ ವಿರೋಧವಾಗಿ ನಡೆದುಕೊಳ್ಳುವುದು ಮಹಾದೋಷವಲ್ಲವೇ? ಈ ಮಹಾದೋಷಕರವಾದ ಕಾರ್ಯವನ್ನು ನೀನು ಮಾಡಬಾರದು. ಅದು ಮಾತ್ರವಲ್ಲ. ನೀನು ವಾಗ್ದಾನ ಮಾಡಿದ ಮೇಲೆ ಅದರಂತೆ ನಡೆದುಕೊಳ್ಳದಿದ್ದರೆ ಋಣಿಯಾಗುವಿ. ನಿನ್ನ ಋಣವನ್ನು ಕಳೆದುಕೊಳ್ಳುವುದಕ್ಕಾಗಿಯಾದರೂ ನೀನು ನಮ್ಮನ್ನು ಅನುಗ್ರಹಿಸಬೇಕು."

"ಓ ಕೃಷ್ಣದೇವ!, ನೀನು ಜ್ಞಾನಿಪ್ರಿಯನು. ನಾವೆಲ್ಲರೂ ನೀನು ಎಲ್ಲಾ ದೇವತೆಗಳ ಮಧ್ಯದಲ್ಲಿ ಶ್ರೇಷ್ಠನೆಂದು ತಿಳಿದಿರುವೆವು. ಆದ್ದರಿಂದ (ಜ್ಞಾನಿಗಳಾದ) ನಮ್ಮಲ್ಲಿ ನೀನು ಪ್ರೀತಿಯನ್ನು ತೋರಿಸಲೇಬೇಕು. ಪ್ರಳಯಕಾಲದಲ್ಲಿ ನಿನ್ನೊಡನೆ ಮಲಗಿರುವ ಲಕ್ಷ್ಮೀದೇವಿಯು ನಿನ್ನ ಹಳೆಯ ಹೆಂಡತಿಯು. ಹೊಸಬಳಲ್ಲ. ಅವಳಲ್ಲಿ ನೀನು ವಿಶೇಷವಾಗಿ ಪ್ರೀತಿಯನ್ನು ಇಟ್ಟುಕೊಂಡಿರುವಿ. ಅವಳಲ್ಲಿಟ್ಟುಕೊಂಡಿರುವಷ್ಟು ಪ್ರೀತಿಯನ್ನು ಯಾರಲ್ಲಿಯೂ ಇಟ್ಟುಕೊಂಡಿಲ್ಲ. ಅವಳಲ್ಲಿ ಒಮ್ಮೆ ಸಂಗವನ್ನು ಮಾಡಿ ಬಿಟ್ಟಿರುವುದಾಗಿಯೂ ಇನ್ನು ಮುಂದೆ ಹೊಸ ಹೆಂಡತಿಯ ಸಂಗವನ್ನು ಮಾಡಬೇಕೆಂದೂ ಆಲೋಚಿಸುವವನಲ್ಲ. ಪೂರ್ಣಕಾಮನಾದ ನಿನಗೆ ಹೊಸ ಹೆಂಡತಿಯಿಂದಲೂ ಹಳೆಯ ಹೆಂಡತಿಯಿಂದಲೂ ಯಾರಿಂದಲೂ ಯಾವ ಲಾಭವೂ ಹಾನಿಯೂ ಇಲ್ಲ. ಲಕ್ಷ್ಮೀದೇವಿಯರನ್ನು ಈಗಲೂ ಸುಖಪಡಿಸುತ್ತಿರುವಿ. ಈ ವಿಷಯವನ್ನು ನಮಗೆ ನೀನು ತಿಳಿಸುತ್ತಿರುವಿ. ಅದರಂತೆ ನಮ್ಮೆಲ್ಲರನ್ನೂ ಅನುಭವಿಸಿದ ಹಳೆಯ ಹೆಂಡತಿಯರೆಂದು ಕೈಬಿಡಬೇಡ. ಹಳೆಯ ಹೆಂಡಿತಿಯಾದ ಲಕ್ಷ್ಮೀದೇವಿಯನ್ನು ಅನುಗ್ರಹಿಸುತ್ತಿರುವಂತೆ ಅನುಗ್ರಹಿಸು. ನೀನು ನಮ್ಮನ್ನು ಈಗ ಅನುಗ್ರಹಿಸದಿದ್ದರೆ ನಾವು ಈ ಶರೀರದಲ್ಲಿ ಇರಲಾರೆವು. ತೀಕ್ಷ್ಣವಾದ ಆಯುಧಗಳ ಮೇಲೆ ಬಿದ್ದು ಪ್ರಾಣಗಳನ್ನು ಕಳೆದುಕೊಳ್ಳುವೆವು."

" ಓ ಕೃಷ್ಣದೇವ!, ನೀನು ಈಗ ದರ್ಶನವನ್ನು ಕೊಟ್ಟರೆ ನಾಳೆ ಬೆಳಿಗ್ಗೆ ವೃಂದಾವನದಲ್ಲಿ ನಿನ್ನಿಂದ ಸಹಿತರಾಗಿ ದೊಡ್ಡ ಉತ್ಸವವನ್ನು ನಡೆಯಿಸುವೆವು. ನಾಳೆಯಿಂದ ಈ ದೇಹವು ಇರುವವರೆಗೂ ಪ್ರತಿದಿನವೂ ಈ ಉತ್ಸವವನ್ನು ಅವಿಚ್ಛಿನ್ನವಾಗಿ ನಡೆಯಿಸುವೆವು. ನೀನು ಈಗ ನಮಗೆ ದರ್ಶನವನ್ನು ಕೊಡದಿದ್ದರೆ ಈ ಕ್ಷಣದಲ್ಲಿಯೇ ದೇಹವನ್ನು ತ್ಯಜಿಸಿ ವೈಕುಂಠಲೋಕಕ್ಕೆ ಹೋಗುವೆವು. ಆ ವೈಕುಂಠಲೋಕಕ್ಕೆ ಹೋದವರಿಗೆ ನಿನ್ನ ವಿಯೋಗವೇ ಇಲ್ಲ. ನಿನ್ನ ದರ್ಶನವನ್ನು ಪಡೆಯದಿರುವ ದೌರ್ಭಾಗ್ಯವೇ ಇಲ್ಲ. ಆ ಲೋಕದಲ್ಲಿ ನಾಳೆ ಬೆಳಿಗ್ಗೆ ಆರಂಭಿಸಿ ಅನಂತಕಾಲದ ವರೆಗೂ ಶಾಶ್ವತವಾದ ಉತ್ಸವಗಳನ್ನು ನಡೆಯಿಸುವೆವು. ನಿನ್ನ ಇಷ್ಟದಂತೆ ಮಾಡು. ನಮಗೆ ನೀನು ಬಂದರೂ ಬಾರದಿದ್ದರೂ ಸುಖವು ಏರ್ಪಡುವುದರಲ್ಲಿ ಸಂಶಯವಿಲ್ಲ. ನೀನು ಬಂದರೆ ಈ ದೇಹವು ಇರುವ ವರೆಗೆ ಪರಿಮಿತವಾದ ಸುಖವು ಏರ್ಪಡುತ್ತದೆ. ನೀನು ಬಾರದಿದ್ದರೆ ವೈಕುಂಠದಲ್ಲಿ ಶಾಶ್ವತವಾದ ಸುಖವು ಏರ್ಪಡುತ್ತವೆ. ಎರಡು ವಿಧದಿಂದಲೂ ನಮಗೆ ಲಾಭ."

" ಓ ಗೋವಿಂದ!, ನಿನ್ನ ವಿಯೋಗವು ಏರ್ಪಟ್ಟಾಗ ಹಗಲಿನಲ್ಲಿಯೂ ಸಹ ಭಯಂಕರವಾಗಿ ನಮಗೆ ತೋರುತ್ತದೆ. ಈಗ ರಾತ್ರಿ ಕಾಲವಾಗಿದೆ. ಅದರಲ್ಲಿಯೂ ಎಲ್ಲಾ ದಿಕ್ಕುಗಳಲ್ಲಿಯೂ ಕತ್ತಲೆಯು ವ್ಯಾಪಿಸಿಕೊಂಡಿರುತ್ತದೆ. ಹೀಗಿರುವಾಗ ಈ ರಾತ್ರಿಯು ಭಯಂಕರವೆಂದು ಹೇಳಬೇಕಾದ್ದೇನಿದೆ? ಆದ್ದರಿಂದ ಈ ರಾತ್ರಿಯಲ್ಲಿ ನಮ್ಮನ್ನು ಕೈಬಿಡಬೇಡ."

" ಓ ಕೃಷ್ಣದೇವ!, ಈಗ ಹಿಮಕಾಲವಾಗಿದೆ. ಈಗ ರಾತ್ರಿಯು ಹಗಲಿಗಿಂತ ಅಧಿಕವಾಗಿದೆ. ಈ ರಾತ್ರಿಯು ಚಳಿಗಾಲದಲ್ಲಿ ಪತಿಯ ಸಂಪರ್ಕವಿಲ್ಲದಿರುವಾಗ ಅಸಂಖ್ಯವಾದ ಆಯುಧಗಳಿಂದ ಚುಚ್ಚಲ್ಪಡುತ್ತಿರುವಾಗ ಏರ್ಪಡುವ ವೇದನೆಯನ್ನು ಕೊಡುತ್ತದೆ. ಈ ಚಳಿಗಾಲದ ರಾತ್ರಿಯು ಎಷ್ಟು ಕಾಲವಾದರೂ ಮುಗಿಯುವುದಿಲ್ಲ. ನೀನು ಎಲ್ಲಾ ದೇಶಗಳಲ್ಲಿಯೂ ವ್ಯಾಪಿಸಿರುವಿ. ನೀನಿಲ್ಲದ ಸ್ಥಳವಿಲ್ಲ. ಎಲ್ಲಾ ದೇಶಗಳಲ್ಲಿಯೂ ವಾಸಿಸುತ್ತಿರುವ ಎಲ್ಲಾ ಭಕ್ತರನ್ನು ಅನುಗ್ರಹಿಸುತ್ತಿರುವಿ. ಭಕ್ತರಲ್ಲಿ ನಿನಗೆ ವೈಷಮ್ಯವಿಲ್ಲ. ಆದ್ದರಿಂದಲೇ ಸಮನೆನಿಸುವಿ. ಲಕ್ಷ್ಮೀ ಸಹಿತನಾದ ನಿನ್ನನ್ನು ನಮಸ್ಕರಿಸುವೆವು. ಎಲ್ಲಾ ಭಕ್ತರನ್ನೂ ಅನುಗ್ರಹಿಸುತ್ತಿರುವಂತೆ ನಮ್ಮನ್ನೂ ಅನುಗ್ರಹಿಸು. ನೀನು ಆಪ್ತಸಮಸ್ತಕಾಮ ಅಂದರೆ ಸಕಲ ಇಷ್ಟಾರ್ಥಗಳನ್ನೂ ಪಡೆದಿರುವವನು. ನಿನಗೆ ಯಾರಿಂದಲೂ ಯಾವ ಕಾರ್ಯವೂ ಆಗಬೇಕಾಗಿಲ್ಲ. ನೀನು ನಮ್ಮೊಡನೆ ಗೃಹಸ್ಥಧರ್ಮವನ್ನು ನಡೆಯಿಸುವುದರಿಂದಲೂ ಸನ್ಯಾಸಧರ್ಮವನ್ನು ಸ್ವೀಕರಿಸಿದ್ದರಿಂದಲೂ ನಿನಗೆ ಲಾಭವೂ ನಷ್ಟವೂ ಇಲ್ಲ. ಅದಕ್ಕಾಗಿ ಸನ್ಯಾಸಿಯಂತೆ ನೀನಿರಬೇಡ. ನಮ್ಮೊಡನೆ ಗೃಹಸ್ಥಧರ್ಮವನ್ನು ಪಾಲಿಸುತ್ತಾ ಚಳಿಗಾಲದ ಈ ರಾತ್ರಿಗಳು ಸುಖಮಯವಾಗುವಂತೆ ಮಾಡು."

"ಓ ಕೃಷ್ಣದೇವ!, ನೀನು ಸಮುದ್ರಮಥನಕಾಲದಲ್ಲಿ ಮಂದರಪರ್ವತ ಎಂಬ ಕಡಗೋಲನ್ನು ಹಿಡಿದು ಕ್ಷೀರ ಸಮುದ್ರವನ್ನು ಕಡೆದವನಾದೆ. ದೇವತೆಗಳಿಗೆ ಪಾರಿಜಾತವೃಕ್ಷ ಅಮೃತ ಮುಂತಾದ ಸಕಲ ಇಷ್ಟಾರ್ಥಗಳನ್ನೂ ಕೊಟ್ಟು ಅವರನ್ನು ಪೋಷಿಸಿದೆ. ಈಗ ನಮ್ಮೆಲ್ಲರ ಇಷ್ಟಾರ್ಥಗಳನ್ನೂ ಪೂರೈಸುವುದಕ್ಕಾಗಿ ಮೊಸರನ್ನು ಕಡೆಯುವ ಕಡಗೋಲನ್ನು ಧರಿಸಿರುವಿ. ನಮ್ಮ ಕೈಗಳು ಎಷ್ಟು ಕಾರ್ಯಗಳನ್ನು ಮಾಡಿದರೂ ಕುಗ್ಗದಿರುವ ಶಕ್ತಿಯಿಂದ ಯುಕ್ತವಾಗಿವೆ. ಆದರೂ ನೀನು ಮನೆಯಲ್ಲಿಲ್ಲದಿರುವಾಗ ಮೊಸರನ್ನು ಕಡೆಯುವದಕ್ಕೂ ಸಹ ಪ್ರಯತ್ನಿಸುತ್ತಿಲ್ಲ. ಆದ್ದರಿಂದ ನೀನಿರುವಾಗ ಸರ್ವೇಂದ್ರಿಯಗಳಿಗೂ ಶಕ್ತಿ, ಇಲ್ಲದಿರುವಾಗ ಶಕ್ತಿಯಿಲ್ಲದಿರುವಿಕೆ ಎಂಬ ಎರಡು ವಿಧವಾದ ಧರ್ಮಗಳನ್ನೂ ನಾವು ಅನುಭವಿಸುತ್ತಿರುವೆವು. ಹೀಗಿರುವಾಗ ನಿನ್ನ ಪಾದಗಳ ಸೇವೆಯನ್ನು ಬಿಟ್ಟು ಇತರ ಕಾರ್ಯಗಳನ್ನು ಯಾವ ವಿವೇಕಿಯಾದ ಸ್ತ್ರೀಯು ಮಾಡುವಳು?"

" ಓ ದೀನಬಂಧೋ! ನಾವೆಲ್ಲರೂ ದೀನರಾಗಿರುವೆವು. ನಮಗೆ ನೀನೇ ಬಂಧುವಾಗಿರುವಿ. ದೀನ ಬಂಧುವಾಗಿರುವ ನೀನು ದೀನನಾಗಿರುವ ನಮ್ಮಲ್ಲಿ ದಯೆಯನ್ನು ತೋರಿಸಬೇಡವೇ? ನಮ್ಮಲ್ಲಿ ದಯೆಯು ನಿನಗೆ ಏರ್ಪಡದೇ ಇದ್ದರೂ ಈ ಯಮುನೆಯಲ್ಲಿ ನಿನಗೆ ದಯೆಯಿದೆ."

" ಸೂರ್ಯದೇವನಲ್ಲಿ ನೀನು ಯಾವಾಗಲೂ ಸನ್ನಿಹಿತನಾಗಿರುವಿ. ಆದ್ದರಿಂದಲೇ **"ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ"** ಮುಂತಾದ ಪ್ರಮಾಣಗಳು ನೀನು ಸೂರ್ಯಮಂಡಲದ ಮಧ್ಯದಲ್ಲಿರುವವನು ಎಂದು ಹೊಗಳುತ್ತಿವೆ. ಸೂರ್ಯಮಂಡಲದ ಮಧ್ಯದಲ್ಲಿ ಯಾವಾಗಲೂ ವಾಸಿಸುತ್ತಿರುವ ನಿನ್ನ ಕೃಪೆಯು ಸೂರ್ಯದೇವನ ಮಗಳಾದ್ದರಿಂದ ಯಮುನೆಯಲ್ಲಿಯೂ ಇದೆ. ಅವಳಲ್ಲಿ ನಿನಗೆ ಪೂರ್ಣವಾದ ಕೃಪೆಯಿದೆ ಎಂಬ ವಿಷಯವನ್ನು ನೀನು ಅನೇಕ ಸಂದರ್ಭಗಳಲ್ಲಿ ತಿಳಿಸಿರುವಿ. ಅವುಗಳಲ್ಲಿ ಒಂದು ಸಂದರ್ಭವನ್ನು ಮಾದರಿಗಾಗಿ ಹೇಳುತ್ತೇವೆ.

" ಯಮುನೆಯಲ್ಲಿ ಕಾಳಿಯ ಎಂಬ ಸರ್ಪರಾಜನು ವಾಸಿಸುತ್ತಿದ್ದನು. ಅವನ ವಿಷದಿಂದ ಅವಳ ಜಲವು ವಿಷಮಯವಾಯಿತು. ಇದರಿಂದ ಅವಳು ಸರ್ವಜನರಿಂದ ಸೇವಿಸಲ್ಪಡುವ ಭಾಗ್ಯವನ್ನು ಕಳೆದುಕೊಂಡಳು. ಆಗ ನೀನು ಕಾಳಿಯನನ್ನು ನಿಗ್ರಹಿಸಿದಿ. ಅವಳ ಸೌಭಾಗ್ಯವನ್ನು ರಕ್ಷಿಸಿದಿ. ಯಮುನೆಯು ನಿನ್ನ ಕೃಪೆಗೆ ಪಾತ್ರಳೆಂಬ

ಆಚರಿಸಿರುವ ನಮಗೆ ನೀನೇ ಕಷ್ಟವನ್ನು ಕೊಡಬಹುದೇ? ಹಾಗೆ ಕಷ್ಟವನ್ನು ಕೊಟ್ಟರೆ ನಿನ್ನ ಆಜ್ಞೆಗೆ ನೀನೇ ವಿರೋಧವಾಗಿ ನಡೆದುಕೊಂಡಂತಾಗುವುದಿಲ್ಲವೇ? ಸ್ವವಚನವ್ಯಾಘಾತ ಅಂದರೆ ತನ್ನ ಮಾತುಗಳಿಗೆ ತಾನೇ ವಿರೋಧವಾಗಿ ನಡೆದುಕೊಳ್ಳುವುದು ಮಹಾದೋಷವಲ್ಲವೇ? ಈ ಮಹಾದೋಷಕರವಾದ ಕಾರ್ಯವನ್ನು ನೀನು ಮಾಡಬಾರದು. ಅದು ಮಾತ್ರವಲ್ಲ. ನೀನು ವಾಗ್ದಾನ ಮಾಡಿದ ಮೇಲೆ ಅದರಂತೆ ನಡೆದುಕೊಳ್ಳದಿದ್ದರೆ ಋಣಿಯಾಗುವಿ. ನಿನ್ನ ಋಣವನ್ನು ಕಳೆದುಕೊಳ್ಳುವುದಕ್ಕಾಗಿಯಾದರೂ ನೀನು ನಮ್ಮನ್ನು ಅನುಗ್ರಹಿಸಬೇಕು."

"ಓ ಕೃಷ್ಣದೇವ!, ನೀನು ಜ್ಞಾನಿಪ್ರಿಯನು. ನಾವೆಲ್ಲರೂ ನೀನು ಎಲ್ಲಾ ದೇವತೆಗಳ ಮಧ್ಯದಲ್ಲಿ ಶ್ರೇಷ್ಠನೆಂದು ತಿಳಿದಿರುವೆವು. ಆದ್ದರಿಂದ (ಜ್ಞಾನಿಗಳಾದ) ನಮ್ಮಲ್ಲಿ ನೀನು ಪ್ರೀತಿಯನ್ನು ತೋರಿಸಲೇಬೇಕು. ಪ್ರಳಯಕಾಲದಲ್ಲಿ ನಿನ್ನೊಡನೆ ಮಲಗಿರುವ ಲಕ್ಷ್ಮೀದೇವಿಯು ನಿನ್ನ ಹಳೆಯ ಹೆಂಡತಿಯು. ಹೊಸಬಳಲ್ಲ. ಅವಳಲ್ಲಿ ನೀನು ವಿಶೇಷವಾಗಿ ಪ್ರೀತಿಯನ್ನು ಇಟ್ಟುಕೊಂಡಿರುವಿ. ಅವಳಲ್ಲಿಟ್ಟುಕೊಂಡಿರುವಷ್ಟು ಪ್ರೀತಿಯನ್ನು ಯಾರಲ್ಲಿಯೂ ಇಟ್ಟುಕೊಂಡಿಲ್ಲ. ಅವಳಲ್ಲಿ ಒಮ್ಮೆ ಸಂಗವನ್ನು ಮಾಡಿ ಬಿಟ್ಟಿರುವುದಾಗಿಯೂ ಇನ್ನು ಮುಂದೆ ಹೊಸ ಹೆಂಡತಿಯ ಸಂಗವನ್ನು ಮಾಡಬೇಕೆಂದೂ ಆಲೋಚಿಸುವವನಲ್ಲ. ಪೂರ್ಣಕಾಮನಾದ ನಿನಗೆ ಹೊಸ ಹೆಂಡತಿಯಿಂದಲೂ ಹಳೆಯ ಹೆಂಡತಿಯಿಂದಲೂ ಯಾರಿಂದಲೂ ಯಾವ ಲಾಭವೂ ಹಾನಿಯೂ ಇಲ್ಲ. ಲಕ್ಷ್ಮೀದೇವಿಯರನ್ನು ಈಗಲೂ ಸುಖಪಡಿಸುತ್ತಿರುವಿ. ಈ ವಿಷಯವನ್ನು ನಮಗೆ ನೀನು ತಿಳಿಸುತ್ತಿರುವಿ. ಅದರಂತೆ ನಮ್ಮೆಲ್ಲರನ್ನೂ ಅನುಭವಿಸಿದ ಹಳೆಯ ಹೆಂಡತಿಯರೆಂದು ಕೈಬಿಡಬೇಡ. ಹಳೆಯ ಹೆಂಡಿತಿಯಾದ ಲಕ್ಷ್ಮೀದೇವಿಯನ್ನು ಅನುಗ್ರಹಿಸುತ್ತಿರುವಂತೆ ಅನುಗ್ರಹಿಸು. ನೀನು ನಮ್ಮನ್ನು ಈಗ ಅನುಗ್ರಹಿಸದಿದ್ದರೆ ನಾವು ಈ ಶರೀರದಲ್ಲಿ ಇರಲಾರೆವು. ತೀಕ್ಷ್ಣವಾದ ಆಯುಧಗಳ ಮೇಲೆ ಬಿದ್ದು ಪ್ರಾಣಗಳನ್ನು ಕಳೆದುಕೊಳ್ಳುವೆವು."

"ಓ ಕೃಷ್ಣದೇವ!, ನೀನು ಈಗ ದರ್ಶನವನ್ನು ಕೊಟ್ಟರೆ ನಾಳೆ ಬೆಳಿಗ್ಗೆ ವೃಂದಾವನದಲ್ಲಿ ನಿನ್ನಿಂದ ಸಹಿತರಾಗಿ ದೊಡ್ಡ ಉತ್ಸವವನ್ನು ನಡೆಯಿಸುವೆವು. ನಾಳೆಯಿಂದ ಈ ದೇಹವು ಇರುವವರೆಗೂ ಪ್ರತಿದಿನವೂ ಈ ಉತ್ಸವವನ್ನು ಅವಿಚ್ಛಿನ್ನವಾಗಿ ನಡೆಯಿಸುವೆವು. ನೀನು ಈಗ ನಮಗೆ ದರ್ಶನವನ್ನು ಕೊಡದಿದ್ದರೆ ಈ ಕ್ಷಣದಲ್ಲಿಯೇ ದೇಹವನ್ನು ತ್ಯಜಿಸಿ ವೈಕುಂಠಲೋಕಕ್ಕೆ ಹೋಗುವೆವು. ಆ ವೈಕುಂಠಲೋಕಕ್ಕೆ ಹೋದವರಿಗೆ ನಿನ್ನ ವಿಯೋಗವೇ ಇಲ್ಲ. ನಿನ್ನ ದರ್ಶನವನ್ನು ಪಡೆಯದಿರುವ ದೌರ್ಭಾಗ್ಯವೇ ಇಲ್ಲ. ಆ ಲೋಕದಲ್ಲಿ ನಾಳೆ ಬೆಳಿಗ್ಗೆ ಆರಂಭಿಸಿ ಅನಂತಕಾಲದ ವರೆಗೂ ಶಾಶ್ವತವಾದ ಉತ್ಸವಗಳನ್ನು ನಡೆಯಿಸುವೆವು. ನಿನ್ನ ಇಷ್ಟದಂತೆ ಮಾಡು. ನಮಗೆ ನೀನು ಬಂದರೂ ಬಾರದಿದ್ದರೂ ಸುಖವು ಏರ್ಪಡುವುದರಲ್ಲಿ ಸಂಶಯವಿಲ್ಲ. ನೀನು ಬಂದರೆ ಈ ದೇಹವು ಇರುವ ವರೆಗೆ ಪರಿಮಿತವಾದ ಸುಖವು ಏರ್ಪಡುತ್ತದೆ. ನೀನು ಬಾರದಿದ್ದರೆ ವೈಕುಂಠದಲ್ಲಿ ಶಾಶ್ವತವಾದ ಸುಖವು ಏರ್ಪಡುತ್ತವೆ. ಎರಡು ವಿಧದಿಂದಲೂ ನಮಗೆ ಲಾಭ."

"ಓ ಗೋವಿಂದ!, ನಿನ್ನ ವಿಯೋಗವು ಏರ್ಪಟ್ಟಾಗ ಹಗಲಿನಲ್ಲಿಯೂ ಸಹ ಭಯಂಕರವಾಗಿ ನಮಗೆ ತೋರುತ್ತದೆ. ಈಗ ರಾತ್ರಿ ಕಾಲವಾಗಿದೆ. ಅದರಲ್ಲಿಯೂ ಎಲ್ಲಾ ದಿಕ್ಕುಗಳಲ್ಲಿಯೂ ಕತ್ತಲೆಯು ವ್ಯಾಪಿಸಿಕೊಂಡಿರುತ್ತದೆ. ಹೀಗಿರುವಾಗ ಈ ರಾತ್ರಿಯು ಭಯಂಕರವೆಂದು ಹೇಳಬೇಕಾದ್ದೇನಿದೆ? ಆದ್ದರಿಂದ ಈ ರಾತ್ರಿಯಲ್ಲಿ ನಮ್ಮನ್ನು ಕೈಬಿಡಬೇಡ."

" ಓ ಕೃಷ್ಣದೇವ!, ಈಗ ಹಿಮಕಾಲವಾಗಿದೆ. ಈಗ ರಾತ್ರಿಯು ಹಗಲಿಗಿಂತ ಅಧಿಕವಾಗಿದೆ. ಈ ರಾತ್ರಿಯು ಚಳಿಗಾಲದಲ್ಲಿ ಪತಿಯ ಸಂಪರ್ಕವಿಲ್ಲದಿರುವಾಗ ಅಸಂಖ್ಯವಾದ ಆಯುಧಗಳಿಂದ ಚುಚ್ಚಲ್ಪಡುತ್ತಿರುವಾಗ ಏರ್ಪಡುವ ವೇದನೆಯನ್ನು ಕೊಡುತ್ತದೆ. ಈ ಚಳಿಗಾಲದ ರಾತ್ರಿಯು ಎಷ್ಟು ಕಾಲವಾದರೂ ಮುಗಿಯುವುದಿಲ್ಲ. ನೀನು ಎಲ್ಲಾ ದೇಶಗಳಲ್ಲಿಯೂ ವ್ಯಾಪಿಸಿರುವಿ. ನೀನಿಲ್ಲದ ಸ್ಥಳವಿಲ್ಲ. ಎಲ್ಲಾ ದೇಶಗಳಲ್ಲಿಯೂ ವಾಸಿಸುತ್ತಿರುವ ಎಲ್ಲಾ ಭಕ್ತರನ್ನು ಅನುಗ್ರಹಿಸುತ್ತಿರುವಿ. ಭಕ್ತರಲ್ಲಿ ನಿನಗೆ ವೈಷಮ್ಯವಿಲ್ಲ. ಆದ್ದರಿಂದಲೇ ಸಮನೆನಿಸುವಿ. ಲಕ್ಷ್ಮೀ ಸಹಿತನಾದ ನಿನ್ನನ್ನು ನಮಸ್ಕರಿಸುವೆವು. ಎಲ್ಲಾ ಭಕ್ತರನ್ನೂ ಅನುಗ್ರಹಿಸುತ್ತಿರುವಂತೆ ನಮ್ಮನ್ನೂ ಅನುಗ್ರಹಿಸು. ನೀನು ಆಪ್ತಸಮಸ್ತಕಾಮ ಅಂದರೆ ಸಕಲ ಇಷ್ಟಾರ್ಥಗಳನ್ನೂ ಪಡೆದಿರುವವನು. ನಿನಗೆ ಯಾರಿಂದಲೂ ಯಾವ ಕಾರ್ಯವೂ ಆಗಬೇಕಾಗಿಲ್ಲ. ನೀನು ನಮ್ಮೊಡನೆ ಗೃಹಸ್ಥಧರ್ಮವನ್ನು ನಡೆಯಿಸುವುದರಿಂದಲೂ ಸನ್ಯಾಸಧರ್ಮವನ್ನು ಸ್ವೀಕರಿಸಿದ್ದರಿಂದಲೂ ನಿನಗೆ ಲಾಭವೂ ನಷ್ಟವೂ ಇಲ್ಲ. ಅದಕ್ಕಾಗಿ ಸನ್ಯಾಸಿಯಂತೆ ನೀನಿರಬೇಡ. ನಮ್ಮೊಡನೆ ಗೃಹಸ್ಥಧರ್ಮವನ್ನು ಪಾಲಿಸುತ್ತಾ ಚಳಿಗಾಲದ ಈ ರಾತ್ರಿಗಳು ಸುಖಮಯವಾಗುವಂತೆ ಮಾಡು."

"ಓ ಕೃಷ್ಣದೇವ!, ನೀನು ಸಮುದ್ರಮಥನಕಾಲದಲ್ಲಿ ಮಂದರಪರ್ವತ ಎಂಬ ಕಡಗೋಲನ್ನು ಹಿಡಿದು ಕ್ಷೀರ ಸಮುದ್ರವನ್ನು ಕಡೆದವನಾದೆ. ದೇವತೆಗಳಿಗೆ ಪಾರಿಜಾತವೃಕ್ಷ ಅಮೃತ ಮುಂತಾದ ಸಕಲ ಇಷ್ಟಾರ್ಥಗಳನ್ನೂ ಕೊಟ್ಟು ಅವರನ್ನು ಪೋಷಿಸಿದೆ. ಈಗ ನಮ್ಮೆಲ್ಲರ ಇಷ್ಟಾರ್ಥಗಳನ್ನೂ ಪೂರೈಸುವುದಕ್ಕಾಗಿ ಮೊಸರನ್ನು ಕಡೆಯುವ ಕಡಗೋಲನ್ನು ಧರಿಸಿರುವಿ. ನಮ್ಮ ಕೈಗಳು ಎಷ್ಟು ಕಾರ್ಯಗಳನ್ನು ಮಾಡಿದರೂ ಕುಗ್ಗದಿರುವ ಶಕ್ತಿಯಿಂದ ಯುಕ್ತವಾಗಿವೆ. ಆದರೂ ನೀನು ಮನೆಯಲ್ಲಿಲ್ಲದಿರುವಾಗ ಮೊಸರನ್ನು ಕಡೆಯುವದಕ್ಕೂ ಸಹ ಪ್ರಯತ್ನಿಸುತ್ತಿಲ್ಲ. ಆದ್ದರಿಂದ ನೀನಿರುವಾಗ ಸರ್ವೇಂದ್ರಿಯಗಳಿಗೂ ಶಕ್ತಿ, ಇಲ್ಲದಿರುವಾಗ ಶಕ್ತಿಯಿಲ್ಲದಿರುವಿಕೆ ಎಂಬ ಎರಡು ವಿಧವಾದ ಧರ್ಮಗಳನ್ನೂ ನಾವು ಅನುಭವಿಸುತ್ತಿರುವೆವು. ಹೀಗಿರುವಾಗ ನಿನ್ನ ಪಾದಗಳ ಸೇವೆಯನ್ನು ಬಿಟ್ಟು ಇತರ ಕಾರ್ಯಗಳನ್ನು ಯಾವ ವಿವೇಕಿಯಾದ ಸ್ತ್ರೀಯು ಮಾಡುವಳು?"

" ಓ ದೀನಬಂಧೋ! ನಾವೆಲ್ಲರೂ ದೀನರಾಗಿರುವೆವು. ನಮಗೆ ನೀನೇ ಬಂಧುವಾಗಿರುವಿ. ದೀನ ಬಂಧುವಾಗಿರುವ ನೀನು ದೀನನಾಗಿರುವ ನಮ್ಮಲ್ಲಿ ದಯೆಯನ್ನು ತೋರಿಸಬೇಡವೇ? ನಮ್ಮಲ್ಲಿ ದಯೆಯು ನಿನಗೆ ಏರ್ಪಡದೇ ಇದ್ದರೂ ಈ ಯಮುನೆಯಲ್ಲಿ ನಿನಗೆ ದಯೆಯಿದೆ."

" ಸೂರ್ಯದೇವನಲ್ಲಿ ನೀನು ಯಾವಾಗಲೂ ಸನ್ನಿಹಿತನಾಗಿರುವಿ. ಆದ್ದರಿಂದಲೇ **"ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ"** ಮುಂತಾದ ಪ್ರಮಾಣಗಳು ನೀನು ಸೂರ್ಯಮಂಡಲದ ಮಧ್ಯದಲ್ಲಿರುವವನು ಎಂದು ಹೊಗಳುತ್ತಿವೆ. ಸೂರ್ಯಮಂಡಲದ ಮಧ್ಯದಲ್ಲಿ ಯಾವಾಗಲೂ ವಾಸಿಸುತ್ತಿರುವ ನಿನ್ನ ಕೃಪೆಯು ಸೂರ್ಯದೇವನ ಮಗಳಾದ್ದರಿಂದ ಯಮುನೆಯಲ್ಲಿಯೂ ಇದೆ. ಅವಳಲ್ಲಿ ನಿನಗೆ ಪೂರ್ಣವಾದ ಕೃಪೆಯಿದೆ ಎಂಬ ವಿಷಯವನ್ನು ನೀನು ಅನೇಕ ಸಂದರ್ಭಗಳಲ್ಲಿ ತಿಳಿಸಿರುವಿ. ಅವುಗಳಲ್ಲಿ ಒಂದು ಸಂದರ್ಭವನ್ನು ಮಾದರಿಗಾಗಿ ಹೇಳುತ್ತೇವೆ.

" ಯಮುನೆಯಲ್ಲಿ ಕಾಳಿಯ ಎಂಬ ಸರ್ಪರಾಜನು ವಾಸಿಸುತ್ತಿದ್ದನು. ಅವನ ವಿಷದಿಂದ ಅವಳ ಜಲವು ವಿಷಮಯವಾಯಿತು. ಇದರಿಂದ ಅವಳು ಸರ್ವಜನರಿಂದ ಸೇವಿಸಲ್ಪಡುವ ಭಾಗ್ಯವನ್ನು ಕಳೆದುಕೊಂಡಳು. ಆಗ ನೀನು ಕಾಳಿಯನನ್ನು ನಿಗ್ರಹಿಸಿದಿ. ಅವಳ ಸೌಭಾಗ್ಯವನ್ನು ರಕ್ಷಿಸಿದಿ. ಯಮುನೆಯು ನಿನ್ನ ಕೃಪೆಗೆ ಪಾತ್ರಳೆಂಬ

ವಿಷಯವನ್ನು ನೀನು ಹೀಗೆ ಪ್ರಕಟಿಸಿದಿ. ಅವಳಿಗಾಗಿಯಾದರೂ ಬರಬಾರದೇ? ನೀಲವಾದ ಮೇಘಗಳು ಮಳೆಯನ್ನು ಸುರಿಸಿ ಸರ್ವರನ್ನೂ ತೃಪ್ತಿಪಡಿಸಿದಂತೆ ಭಕ್ತರೆಲ್ಲರಿಗೂ ಇಷ್ಟಾರ್ಥವೃಷ್ಟಿಗಳನ್ನು ಸುರಿಸುತ್ತಿರುವ ನೀನು ನಮ್ಮ ಇಷ್ಟಾರ್ಥಗಳನ್ನು ಪೂರೈಸಬಾರದೇ?''

" ಓ ರಾಮಾವರ! ಅಂದರೆ ಬಲರಾಮನ ತಮ್ಮನೇ!, ನಾವೆಲ್ಲರೂ ಹಿಂದಿನ ಜನ್ಮದಲ್ಲಿ ಅಪ್ಸರ ಸ್ತ್ರೀಯರಾಗಿದ್ದೆವು. ಆಗ ಬ್ರಹ್ಮಮುಂತಾದ ದೇವತೆಗಳನ್ನು ಭಕ್ತಿಯಿಂದ ಪೂಜಿಸಿದೆವು. " ಮುಂದಿನ ಜನ್ಮದಲ್ಲಿ ನಿಮಗೆ ಶ್ರೀಕೃಷ್ಣದೇವನ ಅಂಗಸಂಗವು ಏರ್ಪಡಲಿ'' ಎಂದು ಆ ದೇವತೆಗಳಿಂದ ವರಗಳನ್ನು ಪಡೆದೆವು. ಆದ್ದರಿಂದ ನಿನ್ನ ಅಂಗವನ್ನು ಪಡೆಯುವುದಕ್ಕೆ ಬೇಕಾಗಿರುವ ಪುಣ್ಯಗಳನ್ನು ಪಡೆದಿರುವೆವು.''

" ದೇವತೆಗಳ ಮಧ್ಯದಲ್ಲಿ ಸಿದ್ಧ ಎಂಬ ಹೆಸರಿನಿಂದ ಪ್ರಸಿದ್ಧರಾಗಿರುವ ಕೆಲವು ದೇವತೆಗಳಿರುವರು. ಅವರೂ ಸಹ ನಮ್ಮ ಸೌಂದರ್ಯವನ್ನು ನೋಡಿ ಮೋಹಪರವಶರಾಗಿರುವರು. ಆದ್ದರಿಂದ ನಾವು ಪರಮಸುಂದರವಾದ ರೂಪಗಳುಳ್ಳವರಾಗಿರುವೆವು.''

" ದೇವತೆಗಳ ಮಧ್ಯದಲ್ಲಿ ನಾವು ಕೇಳುವ ಎಲ್ಲಾ ವಸ್ತುಗಳನ್ನೂ ಕೊಡುವ ಶಕ್ತಿಯುಳ್ಳ ಉದಾರ ಹೃದಯರೂ ಇರುವರು. ಅವರೆಲ್ಲರನ್ನೂ ನಾವು ಬಿಟ್ಟು ಬಿಟ್ಟೆವು. ದೇವಲೋಕದಲ್ಲಿ ಸಕಲ ಸೌಭಾಗ್ಯವೂ ತುಂಬಿದೆ. ಆ ಲೋಕವನ್ನೂ ಬಿಟ್ಟೆವು. ನಿನ್ನ ಅಂಗಸಂಗವನ್ನು ಪಡೆಯುವ ಆಸೆಯಿಂದ ನಾವಾಗಿಯೇ ಬಂದೆವು. **"ಸ್ವಯಮೇವಾಗತಾ ವರಾ"** ಅಂದರೆ '' ತಾನಾಗಿಯೇ ವರನ ಗುಣಗಳನ್ನು ಕೇಳಿ ಮೋಹಿಸಿ ಬಂದ ಕನ್ಯೆಯು ಉತ್ತಮಳು'' ಎಂಬ ನಾಣ್ನುಡಿಯಂತೆ ಬಂದಿರುವೆವು. ನೀನು ನಮ್ಮನ್ನು ಬಿಡುವುದಕ್ಕೆ ಕಾರಣವಾಗಿರುವ ಪುಣ್ಯವಿಲ್ಲದಿರುವಿಕೆಯೂ, ಸೌಂದರ್ಯವಿಲ್ಲದಿರುವಿಕೆಯೂ ನಮ್ಮಲ್ಲಿ ಇಲ್ಲ. ನಾವಾಗಿಯೇ ಪ್ರಾರ್ಥಿಸಿಕೊಂಡು ಬಂದಿರುವಿಕೆ ಎಂಬ ಸ್ವೀಕಾರಕ್ಕೆ ಯೋಗ್ಯವಾದ ಕಾರಣವೂ ಇದೆ. ಆದ್ದರಿಂದ ನೀನು ನಮ್ಮನ್ನು ಅನುಗ್ರಹಿಸಲೇಬೇಕು.

" ಸಜ್ಜನರಲ್ಲಿ ಪರಮ ಕರುಣಾಳುವೂ ದುರ್ಜನರಿಗೆ ಭೀತಿದಾಯಕವಾದ ತೇಜಸ್ಸಿನಿಂದ ಯುಕ್ತನೂ ಆಗಿರುವ ಓ ಶ್ರೀಕೃಷ್ಣದೇವ!, ನಾವೆಲ್ಲರೂ ಮನೆಗಳಲ್ಲಿರುವಾಗ ನೀನು ಕಾಡಿಗೆ ಹೋದ ಸಮಯದಲ್ಲಿ ತುಂಬಾ ಭಯದಿಂದ ಯುಕ್ತರಾಗಿ ಹಾಲು ಕರೆಯುವುದು ಮುಂತಾದ ವ್ಯಾಪಾರಗಳನ್ನೂ ಸಹ ಬಿಟ್ಟಿರುವೆವು. ಸುತ್ತಮುತ್ತಲೂ ಹುಲಿಮುಂತಾದ ಭಯಂಕರವಾದ ಪ್ರಾಣಿಗಳು ಕೂಗುತ್ತಿವೆ. ಇಂತಹ ಭಯಂಕರ ಸನ್ನಿವೇಶದಲ್ಲಿ ರಾತ್ರಿಕಾಲದಲ್ಲಿ ನೀನು ನಮ್ಮನ್ನು ಬಿಟ್ಟು ಹೋಗಬಹುದೇ? ಈಗ ನಮಗೆ ಭಯವು ಏರ್ಪಡಬಾರದೆ? ನೀನು ಬಂದು ನಮ್ಮ ಮನಸ್ಸಿನ ಭಯವನ್ನು ಪರಿಹರಿಸಬಾರದೇ?''

" ಓ ದಯಾಳೋ! ಶ್ರೀಕೃಷ್ಣದೇವ, ನಿನ್ನ ವಿರಹದಿಂದ ಏರ್ಪಡುತ್ತಿರುವ ದುಃಖಗಳನ್ನು ಮಹಾಪ್ರಯತ್ನದಿಂದ ತಡೆದು ನಿಲ್ಲಿಸುವುದಕ್ಕಾಗಿ ಪ್ರಯತ್ನಿಸುತ್ತಿರುವೆವು. ಈ ಭ್ರಮರವು ನಮ್ಮ ಸುತ್ತಲೂ ನಾನಾ ವಿಧದಿಂದ ಸುತ್ತುತ್ತಾ ಇರುವುದನ್ನು ನೋಡುವಾಗ ಈ ಭ್ರಮರದ ಲೀಲೆಗಳನ್ನು ಪುನಃ ಪುನಃ ನೋಡಬೇಕೆಂದು ತೋರುತ್ತದೆ. ಈ ಲೀಲೆಗಳನ್ನು ನೋಡಲು ಆರಂಭಿಸಿದರೆ ನಮ್ಮ ಮನಸ್ಸೆಂಬ ಭ್ರಮರವನ್ನು ಪೀಡಿಸುತ್ತಿರುವ ಈ ಭ್ರಮರದ ಬಾಧೆಯನ್ನು ಸಹಿಸಲಾರವು.''

" ಓ ಅಚ್ಯುತ!, ಸುಂದರವಾದ ವಸ್ತುಗಳನ್ನು ಈ ಕಣ್ಣುಗಳಿಂದ ನೋಡಬಾರದು. ನೋಡುವವನಿಗೆ ಆ

ವಸ್ತುಗಳಲ್ಲಿ ಆಸಕ್ತಿಯು ಏರ್ಪಡುತ್ತದೆ. ಆ ಆಸಕ್ತಿಯಿಂದ ಬುದ್ಧಿಯು ಕೆಡುತ್ತದೆ. ಬುದ್ಧಿಯು ಕೆಟ್ಟರೆ ನರಕ ಮುಂತಾದ ಅನರ್ಥಗಳನ್ನು ಅನುಭವಿಸಬೇಕಾಗುತ್ತದೆ. ಅದಕ್ಕೋಸ್ಕರ ನಮ್ಮ ಕಣ್ಣುಗಳಿಂದ ಹೊರಗಿನ ಯಾವ ವಸ್ತುಗಳನ್ನು ನೋಡಲಾರೆವು. ಕಮಲದಂತೆ ಸುಂದರವಾದ ನಿನ್ನ ಪಾದಗಳನ್ನು ನೋಡುವೆವು. ಕಮಲದಂತೆ ಸುಂದರವಾಗಿಯೂ ಮೆತ್ತಗೆಯೂ ಇರುವ ನಿನ್ನ ಕೈಗಳ ತೇಜಸ್ಸನ್ನು ನೋಡುವೆವು. ನಿನ್ನ ಹೊಕ್ಕಳನ್ನು ಅನೇಕ ಕವಿಗಳು ನಾನಾ ವಿಧದಿಂದ ವರ್ಣಿಸುತ್ತಿರುವರು. ಆ ಹೊಕ್ಕಳಿನಿಂದ ಬ್ರಹ್ಮಾಂಡ ಎಂಬ ಅದ್ಭುತವಾದ ಕಮಲವು ಹುಟ್ಟಿದೆ. ಆ ಕಮಲದಿಂದ ಚತುರ್ಮುಖ ಬ್ರಹ್ಮದೇವನು ಹುಟ್ಟಿರುವನು. ಆ ಬ್ರಹ್ಮನಿಗೆ ಈ ಕಮಲದಿಂದ ವಿಶೇಷ ಶಾಂತಿಯು ಏರ್ಪಟ್ಟಿದೆ. ಇಷ್ಟು ಸೌಭಾಗ್ಯದಿಂದ ಯುಕ್ತವಾಗಿರುವ ನಿನ್ನ ಹೊಕ್ಕಳನ್ನು ನೋಡುವೆವು. ನಮ್ಮ ಆಸೆಯು ಪೂರ್ಣವಾಗಲಿ.''

" ಓ ಉತ್ಪತ್ತಿರಹಿತನಾದ ಶ್ರೀಕೃಷ್ಣದೇವ!, ನಿನ್ನ ಪಾದಗಳನ್ನು ಯಾವಾಗಲೂ ಸ್ಮರಿಸುತ್ತಿರುವ ಭಕ್ತರ ಕಾಮ ಮುಂತಾದ ಎಲ್ಲಾ ದೋಷಗಳೂ ದೂರವಾಗುತ್ತವೆ. ಪಾದಗಳ ಸ್ಮರಣೆಯಿಂದ ದೋಷಗಳೆಲ್ಲವನ್ನೂ ಕಳೆದುಕೊಂಡ ಭಕ್ತರಿಗೆ ಯಾವಾಗಲೂ ನಿನ್ನ ಪಾದಗಳೇ ಪ್ರಿಯವೆನಿಸುತ್ತವೆ. ನಿನ್ನ ಪಾದಗಳನ್ನು ನಾವು ಯಾವಾಗಲೂ ಸ್ಮರಿಸುತ್ತಿರುವೆವು. ನಮಗೂ ಆ ಪಾದಗಳು ಅತ್ಯಂತ ಪ್ರಿಯವಾಗಿವೆ. ಆ ಪಾದಗಳನ್ನು ನಮ್ಮ ಎದೆಯಲ್ಲಿ ಇಡು. ನಮ್ಮಲ್ಲಿರುವ ಗರ್ವ ಮುಂತಾದ ದೋಷಗಳನ್ನು ಅಡಗಿಸು. ದೋಷಗಳು ಯಾರಲ್ಲಿಲ್ಲವೋ ಅವರು ಮಾಡುವ ಸ್ತೋತ್ರಗಳಿಂದ ಸಂತೋಷಪಡುವಿ. ನಮ್ಮ ಸ್ತುತಿಗಳಿಂದಲೂ ಸಂತುಷ್ಟನಾಗು. ಕೆಲವು ಕ್ಷಣಗಳ ಹಿಂದೆ ನೀನು ನಮ್ಮೊಡನೆ ವಿಹರಿಸಿದಿ. ಆಗ ಆಲಿಂಗನ ಚುಂಬನಾದಿಗಳನ್ನು ಮಾಡಿದಿ. ಆ ಆಲಿಂಗನಾದಿಗಳಿಂದ ನಿನ್ನ ಮಗನಾದ ಮನ್ಮಥನು ಅಡಗಿದ್ದನು. ಈಗ ಪುನಃ ನೀನು ಅದೃಶ್ಯನಾದಿ. ಈಗ ಮನ್ಮಥನು ಹಿಂದಿಗಿಂತ ಅಧಿಕವಾದ ವೇಗದಿಂದ ನಮ್ಮನ್ನು ಪೀಡಿಸುತ್ತಿರುವನು. ನೀನು ಬೇಗ ಬಾ. ಅವನನ್ನು ಅಡಗಿಸು. ಗರ್ವವು ನಮ್ಮನ್ನು ಬಿಟ್ಟು ಹೋದಂತೆ ಕಾಮವೂ ಇತರ ದೋಷಗಳೂ ಬಿಟ್ಟು ಹೋದರೆ ನೀನು ನಮ್ಮ ಸ್ತುತಿಗಳನ್ನು ಕೇಳುತ್ತಾ ಆನಂದಪರವಶನಾಗಿ ಈ ಸ್ಥಳವನ್ನು ಬಿಟ್ಟು ಎಲ್ಲಿಗೂ ಹೋಗಲಾರೆ.''

" ಎಲೈ ಸಂಪಿಗೆಮರವೇ!, ವಿಷ್ಣುಪಾದೋದಕವು ಎಲ್ಲಾವಿಧವಾದ ಜಯಗಳನ್ನು ಕೊಡುತ್ತದೆ. ನಿನ್ನಲ್ಲಿಯೂ ವಿಷ್ಣುಪಾದ ಅಂದರೆ ಆಕಾಶದಿಂದ ಸುರಿಯುತ್ತಿರುವ ನೀರು ಇದೆ. ನಿನ್ನ ಪುಷ್ಪಗಳಲ್ಲಿರುವ ಜೇನನ್ನು ಭ್ರಮರಗಳು ಕುಡಿಯುವುದಕ್ಕಾಗಿ ಬಂದರೆ ಸತ್ತು ಹೋಗುವವು. ಇತರ ಪಕ್ಷಿಗಳು ನಿನ್ನ ಪುಷ್ಪಗಳನ್ನು ಮುಟ್ಟುವ ಸಂದರ್ಭವಿಲ್ಲ. ಎತ್ತರದಲ್ಲಿರುವ ನಿನ್ನ ಪುಷ್ಪಗಳನ್ನು ಮನುಷ್ಯರು ಸುಲಭವಾಗಿ ಮುಟ್ಟಲು ಸಾಧ್ಯವಿಲ್ಲ.ಯಾರಿಂದಲೂ ಮುಟ್ಟಲ್ಪಡದೆ ಆದ್ದರಿಂದಲೇ ನಿರ್ಮಾಲ್ಯವೆನಿಸದಿರುವ ಪುಷ್ಪಗಳು ನಿನ್ನಲ್ಲಿವೆ. ವಿಷ್ಣುಪಾದೋದಕವೂ ನಿರ್ಮಾಲ್ಯವಲ್ಲದ ಪುಷ್ಪಗಳೂ ಶ್ರೀಕೃಷ್ಣದೇವನನ್ನು ಪೂಜಿಸುವುದಕ್ಕೆ ಯೋಗ್ಯವಾಗಿವೆ. ಈ ವಿಷ್ಣುಪಾದೋದಕವನ್ನೂ ನಿರ್ಮಾಲ್ಯವಲ್ಲದ ಪುಷ್ಪಗಳನ್ನೂ ಧರಿಸಿರುವ ನೀನು ಶ್ರೀಕೃಷ್ಣದೇವನನ್ನು ಪೂಜಿಸುವವರಲ್ಲಿ ಒಬ್ಬನಾಗಿರುವಿ. ಆದ್ದರಿಂದ ಅವನನ್ನು ತಿಳಿದಿರುವಿ. ಸಕಲ ದೋಷರಹಿತನಾದ ಅವನನ್ನು ತೋರಿಸು.''

" ಎಲೈ ಸಂಪಿಗೆಮರವೇ!, ಶ್ರೀಕೃಷ್ಣದೇವನು ಮಧು ಎಂಬ ದೈತ್ಯನನ್ನು ದ್ವೇಷಿಸುತ್ತಿರುವನು. ಈ ಜೇನುನೊಣವು ನಿನ್ನ ಪುಷ್ಪದಲ್ಲಿರುವ ಮಧು ಅಂದರೆ ಜೇನನ್ನು ದ್ವೇಷಿಸುತ್ತಿದೆ. ಈ ಜೇನುನೊಣಕ್ಕೆ ಶ್ರೀಕೃಷ್ಣದೇವನ ಪರಿಚಯವಿಲ್ಲ. ಹೀಗಿರುವಾಗ ಮಧುದ್ವೇಷವು ಶ್ರೀಕೃಷ್ಣದೇವನಲ್ಲಿದ್ದಂತೆ ಈ ಜೇನುನೊಣದಲ್ಲಿ ಹೇಗೆ ಬಂತು?''

ಈ ಮಾತುಗಳನ್ನು ಕೇಳಿದ ಒಬ್ಬ ಸಖಿಯು ಉತ್ತರವನ್ನು ಕೊಡುತ್ತಿದ್ದಾಳೆ." ಎಲೈ ಸಖಿಯೇ, ಶ್ರೀಕೃಷ್ಣದೇವನು ಅನೇಕ ಸ್ತ್ರೀಯರ ಮನೆಗಳಲ್ಲಿ ಸಂಚರಿಸುತ್ತಿರುವನು. ಈ ಜೇನುನೊಣವು ಆರು ಕಾಲುಗಳಿಂದ ಯುಕ್ತವಾದುದು. ಆದ್ದರಿಂದ ಶ್ರೀಕೃಷ್ಣದೇವನಿಗೂ ಜೇನುನೊಣಕ್ಕೂ ಬಹುಪದ ಎಂಬ ಒಂದೇ ಹೆಸರು ಬಂದಿರುತ್ತದೆ. ಆದ್ದರಿಂದ ಇಬ್ಬರಿಗೂ ಮಧುದ್ವೇಷ ಎಂಬ ಧರ್ಮವು ಒಂದೇ ಬಂದಿರುತ್ತದೆ."

ಈ ಮಾತುಗಳನ್ನು ಅನುಮೋದಿಸುತ್ತಾ ಇನ್ನೊಬ್ಬ ಸಖಿಯು ಉತ್ತರವನ್ನು ಕೊಡುತ್ತಿದ್ದಾಳೆ. " ಎಲೈ ಸಖಿಯೇ, ನೀನು ಹೇಳಿದ್ದು ಸರಿ. ಶ್ರೀಕೃಷ್ಣದೇವನಿಗೂ ಜೇನುನೊಣಕ್ಕೂ ಬಹುಪದ ಎಂಬ ಒಂದೇ ಹೆಸರು ಇರುವುದರಿಂದ ಮಧು ದ್ವೇಷ ಎಂಬ ಒಂದೇ ಧರ್ಮದಿಂದ ಇಬ್ಬರೂ ಯುಕ್ತರಾಗಿರುವುದು ನ್ಯಾಯವಾಗಿದೆ. ಎಲ್ಲಾ ಪುಷ್ಪಗಳಲ್ಲಿಯೂ ಮಧುವನ್ನು ಪಾನಮಾಡುತ್ತಿರುವ ಈ ಜೇನುನೋಣವು ಸಂಪಿಗೆಯ ಪುಷ್ಪದಲ್ಲಿ ಮಧುವನ್ನು ಪಾನಮಾಡದಿರುವುದರಿಂದ ಯಾರಿಗೂ ಕಷ್ಟವಿಲ್ಲ. ಈ ಶ್ರೀಕೃಷ್ಣದೇವನು ಎಲ್ಲಾ ಸ್ತ್ರೀಯರಲ್ಲಿ ವಿಹರಿಸುತ್ತಾ ನಮ್ಮನ್ನು ಕೈಬಿಟ್ಟಿರುವುದು ನಮಗೆ ವಿಷವನ್ನು ಕೊಟ್ಟಂತಾಗಿದೆ. ಈ ಕಷ್ಟವನ್ನು ಸಹಿಸಲಾರೆವು." ಎಂದಳು.

# ಕೊಳಲಿನ ಭಾಗ್ಯ

" ಜನ್ಮರಹಿತನಾದ ಓ ಕೃಷ್ಣದೇವ!, ನಿನ್ನ ಕೊಳಲಿನ ಭಾಗ್ಯವನ್ನು ಹೇಳುವೆವು. ಸನ್ಯಾಸಿಗಳು ಸರ್ವಸಂಗ ಪರಿತ್ಯಾಗವನ್ನು ಮಾಡಿದವರು. ಅವರಿಗೆ ಸಂಗೀತದಲ್ಲಿ ಅಭಿರುಚಿಯೇ ಇಲ್ಲ. ಅಂತಹ ಸನ್ಯಾಸಿಗಳನ್ನೂ ಸಹ ಮೋಹಿಸುವಂತೆ ಮಾಡುತ್ತಿರುವ ಗಾಯನವನ್ನು ಈ ಕೊಳಲು ಮಾಡುತ್ತಿದೆ. ನೀನು ನಮ್ಮೆಲ್ಲರನ್ನೂ ಆಕರ್ಷಿಸುವುದಕ್ಕಾಗಿ ಈ ಕೊಳಲನ್ನು ಉಪಯೋಗಿಸಿದೆ. ನಿನ್ನ ಉಪಯೋಗವು ಸಫಲವಾಯಿತು. ನಾವೆಲ್ಲರೂ ನಮ್ಮ ನಮ್ಮ ಪತಿಗಳನ್ನೂ ಮಕ್ಕಳನ್ನೂ ತಂದೆತಾಯಿಗಳನ್ನೂ ಸಕಲ ಬಂಧುಗಳನ್ನೂ ತೃಣೀಕರಿಸಿ ಈ ರಾತ್ರಿಯಲ್ಲಿ ಇಲ್ಲಿಗೆ ಬಂದಿರುವೆವು. ಲಕ್ಷ್ಮೀದೇವಿಯರು ಪ್ರಳಯಕಾಲದಲ್ಲಿ ಶ್ರೀಕೃಷ್ಣದೇವನ ದೇಹದಲ್ಲಿ ಕಟಕ ಅಂದರೆ ಬಳೆಗಳು ಮುಂತಾದ ಆಭರಣಗಳ ರೂಪಗಳನ್ನು ಧರಿಸಿ ಶ್ರೀಕೃಷ್ಣದೇವನನ್ನು ಸೇವಿಸುತ್ತಿರುವರು. ಶ್ರೀಕೃಷ್ಣದೇವನ ಸರ್ವಾಂಗ ಸಂಪರ್ಕವನ್ನು ಪಡೆಯುತ್ತಾ ಧನ್ಯದೇವನನ್ನು ಸೇವಿಸುತ್ತಿರುವರು. ಅವರಂತೆ ಈ ಕೊಳಲು ಶ್ರೀಕೃಷ್ಣದೇವನ ಕೆಳತುಟಿಯ ಸಂಪರ್ಕವನ್ನು ಯಾವಾಗಲೂ ಪಡೆಯುತ್ತಿದೆ. ಕೆಳತುಟಿಯ ಸಂಪರ್ಕವನ್ನು ಪಡೆಯುತ್ತಾ ಆ ತುಟಿಗಳಿಂದ ಹೊರಡುತ್ತಿರುವ ಶೋಭನಧಾರೆಯಿಂದ ಯುಕ್ತವಾಗಿರುವ ಅಧರಾಮೃತವನ್ನು ಯಾವಾಗಲೂ ಪಾನ ಮಾಡುತ್ತಿದೆ. ನಮಗೆ ಯೋಗ್ಯವಾಗಿರುವ ಅಧರಾಮೃತವನ್ನು ಪಾನ ಮಾಡುತ್ತಿರುವ ಈ ಕೊಳಲನ್ನು ನೋಡುತ್ತಿರುವ ನಮ್ಮ ಮನಸ್ಸಿನ ವೇದನೆಯನ್ನು ಏನೆಂದು ಹೇಳಲಿ. ಶ್ರೀಕೃಷ್ಣದೇವನ ಕೈಯಲ್ಲಿ ವಾಸಿಸುತ್ತಿರುವುದರಿಂದ ಮಾನ್ಯವಾದ ಈ ಕೊಳಲು ನಮಗೆ ಮಾತ್ರ ತುಂಬಾ ಕಷ್ಟವನ್ನು ಕೊಡುತ್ತಿದೆ.

" ಭಕ್ತರಿಗೆ ಎಲ್ಲಾ ವಿಧವಾದ ವರಗಳನ್ನು ಕೊಡುತ್ತಿರುವ ಓ ಕೃಷ್ಣದೇವ!, ನೀನು ವೇಣುಗಾನವನ್ನು ಮಾಡುತ್ತಿರುವಿ. ನಿನ್ನ ಕೊಳಲು ತನ್ನ ಗಾನದಿಂದ ನಮ್ಮೆಲ್ಲರನ್ನೂ ಸೋಲಿಸಿತು. ದೇವತೆಗಳಿಂದ ಮಾನ್ಯರಾದ ಬ್ರಹ್ಮ ರುದ್ರ ಮುಂತಾದವರ ತಲೆಯನ್ನು ಬಗ್ಗಿಸುವಂತೆ ಮಾಡಿತು. ಯಮುನಾನದಿಯು ನಿನ್ನ ವೇಣುಗಾನದಿಂದ ಪರವಶಳಾಗಿ ಉಕ್ಕಿಬಂದಳು. ನಿನ್ನ ಪಾದಕಮಲಗಳಲ್ಲಿ ತನ್ನಲ್ಲಿರುವ ಕಮಲಗಳನ್ನು ಅರ್ಪಿಸಿದಳು. ಇದನ್ನು ನೋಡುತ್ತಿರುವಾಗ ನಿನ್ನ ಪಾದಗಳಲ್ಲಿ ಕಮಲಗಳನ್ನು ಕಾಣಿಕೆಯಾಗಿ ಸಮರ್ಪಿಸುವಂತಿತ್ತು. ಬ್ರಹ್ಮ ಮುಂತಾದ

ದೇವತೆಗಳೂ ಯಮುನೆಯೂ ಪರವಶವಾಗಿರುವಾಗ ನಾವೆಲ್ಲರೂ ಪರವಶರಾಗಿ ನಿನ್ನ ಸಮೀಪಕ್ಕೆ ಬಂದಿರುವುದರಲ್ಲಿ ಆಶ್ಚರ್ಯವಿಲ್ಲ.''

" ಎಲೈ ಸಖಿಯೇ, ಈ ಕೊಳಲು ಎಲ್ಲಾ ವಿಧದಿಂದಲೂ ಲಕ್ಷ್ಮೀದೇವಿಯರ ಸಾಮ್ಯವನ್ನು ಪಡೆಯುತ್ತಿದೆ. ಲಕ್ಷ್ಮೀದೇವಿಯರ ದೇಹದಲ್ಲಿ ಶ್ರೀಕೃಷ್ಣದೇವನ ಉಗುರುಗಳ ಗುರುತುಗಳು ಅಲ್ಲಲ್ಲಿ ಕಾಣಿಸುತ್ತಿವೆ. ಆ ಗುರುತುಗಳಿಂದ ಶ್ರೀ ಲಕ್ಷ್ಮೀದೇವಿಯರ ದೇಹದಲ್ಲಿ ವಿಶೇಷವಾದ ಕಾಂತಿಯು ಏರ್ಪಡುತ್ತಿದೆ. ಜಿಂಕೆಯ ಕಣ್ಣುಗಳಂತೆ ಸುಂದರವಾದ ತನ್ನ ಕಣ್ಣುಗಳಿಂದ ಲಕ್ಷ್ಮೀದೇವಿಯರ ಸರ್ವಾಂಗಗಳನ್ನು ಶ್ರೀಕೃಷ್ಣದೇವನು ಪ್ರೇಮದಿಂದ ನೋಡುತ್ತಿರುವನು. ಅಸ್ವಾರಸ್ಯಗಳೆಲ್ಲವನ್ನೂ ಪರಿಹರಿಸುತ್ತಿರುವ ಪ್ರಿಯವೂ ಇಷ್ಟವೂ ಆಗಿರುವ ಶೃಂಗಾರರಸಗಳನ್ನು ಹರಿಸುತ್ತಿರುವ ಶ್ರೀಕೃಷ್ಣದೇವನ ಮಾತುಗಳಿಂದ ಲಕ್ಷ್ಮೀದೇವಿಯರು ಆನಂದಪರವಶರಾಗಿರುವರು. ಅವರಂತೆ ಈ ಕೊಳಲೂ ಶ್ರೀಕೃಷ್ಣದೇವನ ಉಗುರುಗಳಿಂದ ಯಾವಾಗಲೂ ಸ್ಪರ್ಶವನ್ನು ಪಡೆಯುತ್ತಾ ವಿಶೇಷವಾಗಿ ಶೋಭಿಸುತ್ತಿದೆ. ಶ್ರೀಕೃಷ್ಣದೇವನ ಕಣ್ಣುಗಳಿಂದಲೂ ನೋಡಲ್ಪಡುತ್ತಿದೆ. ಎಲ್ಲಾ ಅಸ್ವಾರಸ್ಯಗಳನ್ನೂ ಪರಿಹರಿಸುತ್ತಿರುವ ಪ್ರಿಯವೂ ಇಷ್ಟವೂ ಆಗಿರುವ ಅಧರಾಮೃತರಸವನ್ನು ಅನುಭವಿಸುತ್ತಾ ಶ್ರೀಕೃಷ್ಣದೇವನಿಂದ ಯಾವಾಗಲೂ ಮುದ್ದು ಕೊಡಲ್ಪಡುತ್ತಿದೆ. ಈ ಕೊಳಲಿನ ಭಾಗ್ಯವನ್ನು ಎಷ್ಟೆಂದು ಹೊಗಳೋಣ.''

"ಎಲೈ ಕೊಳಲೇ!, ನಿನ್ನ ಉದ್ದ ಉದ್ದವಾದ ಗಾಯನಗಳನ್ನು ಕೇಳಿದೆವು. ಆ ಗಾಯನಗಳೆಲ್ಲವೂ ಉದ್ದ ಉದ್ದವಾದ ಪ್ರಾರ್ಥನೆಗಳಂತಿದ್ದವು. ಆ ಪ್ರಾರ್ಥನೆಗಳನ್ನು ಕೇಳಿದ ನಮ್ಮ ಮನಸ್ಸುಗಳು ಸೋತುಹೋದವು. ನಾವೆಲ್ಲರೂ ನಿನ್ನ ಬಳಿಗೆ ಬಂದೆವು. ಶ್ರೀಕೃಷ್ಣದೇವನನ್ನು ಕರೆದುಕೊಂಡು ಬಾ. ಶ್ರೀಕೃಷ್ಣದೇವನು ತನ್ನ ಭಕ್ತರನ್ನು ಕೈಬಿಡುವವನಲ್ಲ. ಅವರುಗಳನ್ನು ಸತ್ಕರಿಸುವ ಭಾರವು ತನಗೆ ಮುಖ್ಯವಾಗಿ ಸೇರಿದ್ದೆಂದು ತಿಳಿದುಕೊಂಡಿರುವವನು. ಅಂತಹ ಮಹಾಪ್ರಭುವು ನಮ್ಮನ್ನು ಬಿಡಲಾರನು. ನಾವೆಲ್ಲರೂ ಅವನನ್ನು ಶರಣುಹೊಂದಿರುವೆವು. ಅವನಾಗಲೀ ನೀನಾಗಲೀ ಈಗಲೂ ನಮ್ಮ ಅಪರಾಧಗಳನ್ನು ಹೇಳುತ್ತಾ ತಿರಸ್ಕರಿಸುವುದು ಯುಕ್ತವಲ್ಲ.''

## ಬೃಂದಾವನದ ಭಾಗ್ಯ

" ಓ ಶ್ರೀಕೃಷ್ಣದೇವ!, ನಿನಗೆ ಜನ್ಮವಿಲ್ಲ. ನೀನು ಈಗ ವೈಕುಂಠದಲ್ಲಿರುವ ನಿನ್ನ ರೂಪದಿಂದ ಅವತರಿಸಿರುವಿ. ಕುರಿಗಳಿಂದ ವ್ಯಾಪ್ತವಾಗಿರುವ ಈ ವೃಂದಾವನವು ನಿನ್ನ ಅವತಾರದಿಂದ ಭೂಲೋಕದಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಪಡೆಯಿತು. ಲಕ್ಷ್ಮೀದೇವಿಯೂ ಸಹ ಈ ವೃಂದಾವನದಲ್ಲಿ ಬಂದು ವಾಸಿಸಲು ಆರಂಭಿಸಿದಳು. ಆ ಲಕ್ಷ್ಮೀದೇವಿಯು ತನ್ನಪತಿಯಾದ ನೀನು ಈಗ ಇಲ್ಲಿ ವಾಸಿಸುವ ವಿಷಯದಲ್ಲಿ ಉಪೇಕ್ಷೆಯನ್ನು ಮಾಡುತ್ತಿರುವುದನ್ನು ತಿಳಿದು ಈ ಸ್ಥಳವನ್ನು ಬಿಟ್ಟು ಹೋಗುವಳು. ಪುನಃ ಈ ಗೋಕುಲವು ಸಾಮಾನ್ಯ ಹಳ್ಳಿಯಾಗುವುದು. ಹಾಗೆ ಮಾಡಬೇಡ.''

## ಗೀತೆಯ ಭಾಗ್ಯ

" ಎಲೈ ದೇವತೆಗಳ ಮಧ್ಯದಲ್ಲಿ ರತ್ನದಂತಿರುವ ಸರ್ವೋತ್ತಮನಾದ ಶ್ರೀಕೃಷ್ಣದೇವ!, ನಿರ್ಜನವಾದ ಕಾಡಿನಲ್ಲಿ ನಿನ್ನ ಭಕ್ತರಾದ ನಮ್ಮನ್ನು ಬಿಟ್ಟು ಹೋಗಿರುವಿ. ನೀನು ಹಿಂದಿರುಗಿ ಬಾರದಿದ್ದರೆ.

ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್

ಎಂಬ ನಿನ್ನ ಮಾತುಗಳನ್ನು ನೀನು ಬಿಟ್ಟಂತಾಗುವುದು. ಆ ವಾಕ್ಯದಲ್ಲಿ " ನೀನು ನಿನ್ನ ಭಕ್ತರುಗಳನ್ನು ಕೈಬಿಡುವುದಿಲ್ಲ" ಎಂದು ಹೇಳಲಿಲ್ಲವೇ? ಪರಮಹಂಸರೆಂಬ ಸನ್ಯಾಸಿಗಳಿಂದ ಹೊಗಳಲ್ಪಟ್ಟಮತ್ತು ಪರಮ ಪಾವನವಾದ ನಿನ್ನ ಮಹಿಮೆಗಳನ್ನು ಹೊಗಳುತ್ತಿರುವಗೀತಾಶಾಸ್ತ್ರದ ವಾಕ್ಯಗಳನ್ನು ಸುಳ್ಳಾಗುವಂತೆ ಮಾಡಬಹುದೇ?"

## ಯಮನ ಪ್ರಭಾವ

" ಓ ಶ್ರೀಕೃಷ್ಣದೇವ, ನೀನು ಯಾರಲ್ಲಿ ಕರುಣೆಯನ್ನು ತೋರಿಸುವುದಿಲ್ಲವೋ ಅವರೆಲ್ಲರೂ ಸತ್ತಕೂಡಲೇ ಕಾಲದಂಡ ಎಂಬ ಅತ್ಯಂತ ಭಯಂಕರವಾದ ಆಯುಧವನ್ನು ಧರಿಸಿರುವ ಯಮನ ವಶರಾಗುವರು. ಕಲ್ಲಿನ ಮಯವಾಗಿರುವ ಪರ್ವತಗಳನ್ನು ಭೇದಿಸುವಷ್ಟು ಅತ್ಯಂತ ಸಮರ್ಥರಾಗಿದ್ದರೂ " ನಾನು ದೊಡ್ಡ ಯತಿ" ಎಂದು ದುರಹಂಕಾರದಿಂದ ಯುಕ್ತರಾಗಿದ್ದರೂ ಅವರೆಲ್ಲರಿಗೂ ತಾನು ಯಜಮಾನನು ಎಂಬ ದುರಹಂಕಾರದಿಂದ ಯುಕ್ತನಾದ ಯಮನು ತನ್ನ ವಶರಾದವರನ್ನು ಸೆಳೆದುಕೊಂಡು ಹೋಗಿ ನಾನಾವಿಧವಾದ ದಂಡನೆಯನ್ನು ಕೊಡುವನು. ನಮ್ಮಲ್ಲಿಯೂ ನೀನು ಕರುಣೆಸದಿದ್ದರೆ ಅದೇ ಗತಿಯು ಏರ್ಪಡುತ್ತದೆ ಹಾಗೆ ಮಾಡಬೇಡ."

## ನಾವು ನಿನ್ನ ಸಾಮ್ಯವನ್ನು ಪಡೆಯುವೆವು

" ಓ ಸರ್ವೇಶ್ವರನೇ, ನಿನಗೆ ಅನಾದಿಕಾಲದಿಂದಲೂ ನಾಶವಿಲ್ಲ. ನಾನಾ ವಿಧವಾದ ರೋಗಗಳಿಲ್ಲ. ಸರ್ವದೇಶಗಳಲ್ಲಿಯೂ ವ್ಯಾಪ್ತನಾದ ನಿನಗೆ ದೇಹಪುಷ್ಟಿಯಿಲ್ಲ. ನಾವು ಇನ್ನು ಮುಂದೆ ಅನ್ನಗಳನ್ನು ತಿನ್ನಲಾರೆವು. ನಮಗೆ ಬಂದ ರೋಗಗಳನ್ನು ಕಳೆದುಕೊಳ್ಳುವುದಕ್ಕಾಗಿ ಔಷಧಸೇವನ ಮುಂತಾದ ಯಾವ ವ್ಯಾಪಾರಗಳನ್ನೂ ಮಾಡಲಾರೆವು. ದೇಹಪೋಷಣೆಗೆ ಬೇಕಾದ ಯಾವ ಕೆಲಸಗಳನ್ನೂ ಮಾಡಲಾರೆವು. ನಿನ್ನನ್ನು ಸ್ಮರಿಸುತ್ತಾ ದೇಹಗಳನ್ನು ತ್ಯಜಿಸುವೆವು. ನಿನ್ನನ್ನು ಸ್ಮರಿಸುತ್ತಾ ದೇಹಗಳನ್ನು ಬಿಟ್ಟವರಿಗೆ ಪುನಃ ಜನ್ಮವಿಲ್ಲವೆಂದು ಶಾಸ್ತ್ರಗಳು ಹೇಳುತ್ತಿವೆ. ಆದ್ದರಿಂದ ನಮಗೆ ಪುನಃ ಜನ್ಮವಿಲ್ಲ. ಜನ್ಮವಿದ್ದವರಿಗೆ ನಾಶ ಮುಂತಾದ ದೋಷಗಳು ಬರುತ್ತವೆ. ನಾವೂ ನಿನ್ನಂತೆಯೇ ನಾಶವಿಲ್ಲದವರೂ ನಾನಾ ವಿಧವಾದ ರೋಗಗಳಿಲ್ಲದವರೂ ದೇಹಪುಷ್ಟಿಯಿಲ್ಲದವರೂ ಆಗಿ ನಿನ್ನ ಸಾಮ್ಯವನ್ನು ಹೊಂದುವೆವು."

ಗೋಪಿಕಾಸ್ತ್ರೀಯರು ಕೇವಲ ಹುಚ್ಚಿಯರಂತೆ ಮಾತಾಡಿದರು. ಜ್ಞಾನಿಗಳಂತೆಯೂ ಮಾತಾಡಿದರು. ಅರ್ಧ ಹುಚ್ಚಿಯರಂತೆಯೂ ಅರ್ಧಜ್ಞಾನಿಗಳಂತೆಯೂ ಮಾತಾಡಿದರು. ಈಗ ಜ್ಞಾನಿಶ್ರೇಷ್ಠರೆಂದು ತಿಳಿಸುತ್ತಾ ತಮ್ಮ ಜ್ಞಾನವನ್ನು ವಿಸ್ತಾರವಾಗಿ ತಿಳಿಸುತ್ತಿದ್ದಾರೆ.

## ಗೋಪಿಕಾಸ್ತ್ರೀಯರು ಜೀವೇಶ್ವರಭೇದವನ್ನು ತಿಳಿದ ಜ್ಞಾನಿಗಳು

" ಓ ಶ್ರೀಕೃಷ್ಣದೇವ!, ಯಜ್ಞವನ್ನು ಮಾಡುತ್ತಿರುವ ಯಜಮಾನನು ಮಂಜುಗಡ್ಡೆಯನ್ನು ನಮಸ್ಕರಿಸುವುದಿಲ್ಲ. ಅಗ್ನಿಯನ್ನು ನಮಸ್ಕರಿಸುವನು. ಮಂಜುಗಡ್ಡೆಯಲ್ಲಿರುವ ನಮಸ್ಕರಿಸಲ್ಪಡದಿರುವಿಕೆಯೂ

ಅಗ್ನಿಯಲ್ಲಿರುವ ನಮಸ್ಕರಿಸಲ್ಪಡುವಿಕೆಯೂ ಅತ್ಯಂತ ವಿರುದ್ಧವಾದ ಧರ್ಮಗಳು. ಇದರಿಂದ ಎಲ್ಲೆಲ್ಲಿ ಈ ಅತ್ಯಂತ ವಿರುದ್ಧವಾದ ಧರ್ಮಗಳಿವೆಯೋ ಅಲ್ಲಲ್ಲಿ ಅತ್ಯಂತ ಭೇದವಿದೆ" ಎಂಬ ನಿಯಮವು ಸಿದ್ಧವಾಯಿತು. ಈ ನಿಯಮಕ್ಕೆ ಎಲ್ಲೆಲ್ಲಿಯೂ ಭಂಗವಿಲ್ಲ."

" ಉತ್ಪತ್ತಿರಹಿತನಾದ ಓ ಶ್ರೀಕೃಷ್ಣದೇವ!, ಬ್ರಹ್ಮರುದ್ರ ಮುಂತಾದ ಸಕಲ ದೇವತೆಗಳು ತಮ್ಮ ಮನಸ್ಸುಗಳೆಂಬ ಶುದ್ಧವಾದ ಸರೋವರಗಳಲ್ಲಿ ನಿನ್ನನ್ನು ಧ್ಯಾನಿಸುತ್ತಿರುವರು. ನೀನು ಧ್ಯಾನಿಸಲ್ಪಡುತ್ತಿರುವಿ. ಧ್ಯಾನಿಸಲ್ಪಡುವಿಕೆಯೂ ಧ್ಯಾನಿಸುವುದೂ ಅತ್ಯಂತ ವಿರುದ್ಧವಾದ ಧರ್ಮಗಳು. ಅತ್ಯಂತ ವಿರುದ್ಧವಾದ ಈ ಎರಡು ಧರ್ಮಗಳಿಂದ ಯುಕ್ತರಾದ ನೀನೂ ಸಕಲ ದೇವತೆಗಳೂ ಮೇಲ್ಕಂಡ ನಿಯಮದಿಂದ ಅತ್ಯಂತ ಭಿನ್ನರಾದ ಮೇಲೆ ಮಧ್ಯಮಾಧಿಕಾರಿಗಳಾದ ಮನುಷ್ಯರೂ ಅಧಮಾಧಿಕಾರಿಗಳಾದ ದೈತ್ಯರೂ ನಿನ್ನಿಂದ ಅತ್ಯಂತ ಭಿನ್ನರೆಂದು ಅಂಗೀಕರಿಸಲೇಬೇಕು. ಈ ತ್ರಿವಿಧರಾದ ಅಧಿಕಾರಿಗಳ ಮಧ್ಯದಲ್ಲಿ ಸಕಲಜೀವರೂ ಸೇರಿರುವರು. ಆದ್ದರಿಂದ ನೀನು ಸಕಲಜೀವರಿಗಿಂತಲೂ ಅತ್ಯಂತ ಭಿನ್ನನೆಂದು ಅಂಗೀಕರಿಸಲೇಬೇಕು. ಹೀಗಿರುವಾಗ ನೀನೂ ಸರ್ವಜೀವರೂ ಅಭಿನ್ನರೆಂಬ ವಾದವು ಯುಕ್ತಿಬಾಹ್ಯವು."

"ನೀನೂ ಸರ್ವಜೀವರೂ ಅತ್ಯಂತ ಭಿನ್ನರು ಎಂಬ ವಿಷಯವು ಮೇಲ್ಕಂಡ ಯುಕ್ತಿಯಿಂದ ಸಿದ್ಧವಾಯಿತು. ಆದರೆ ಸರ್ವಜೀವರಿಗಿಂತ ಅತ್ಯಂತ ಭಿನ್ನನಾದ ನೀನು ಅವರಿಗಿಂತ ಉತ್ತಮನೇ? ಅವರಿಗಿಂತ ಅಧಮನೇ? ಅಥವಾ ಅವರಿಗೆ ಸಮನೇ? ಎಂಬ ವಿಷಯವನ್ನು ಈಗ ಸ್ಪಷ್ಟಪಡಿಸುತ್ತೇವೆ."

## ವಿಷ್ಣುವೇ ಸರ್ವೋತ್ತಮನು

**ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಮ್**

ಈ ವಾಕ್ಯವು ಋಗ್ವೇದದಲ್ಲಿ ಅಂಭ್ರಣೀಸೂಕ್ತದಲ್ಲಿದೆ. ಈ ಅಂಭ್ರಣೀಸೂಕ್ತದಲ್ಲಿ ಅಂಭ್ರಣೀ ಎಂದು ಪ್ರಸಿದ್ಧರಾಗಿರುವ ಮಹಾಲಕ್ಷ್ಮೀದೇವಿಯರು ತನ್ನ ಮಹಿಮೆಯನ್ನು ಹೇಳಿಕೊಳ್ಳುತ್ತಿದ್ದಾರೆ. " ಯಾರು ಯಾರನ್ನು ರುದ್ರಪದವಿಯಲ್ಲಿಯೂ ಬ್ರಹ್ಮ ಪದವಿಯಲ್ಲಿಯೂ ಸ್ಥಾಪಿಸಬೇಕೆಂದು ನಾನು ಸಂಕಲ್ಪಿಸುವೆನೋ ಅವರವರನ್ನು ರುದ್ರದೇವನನ್ನೂ ಬ್ರಹ್ಮದೇವನನ್ನೂ ಮಾಡುವೆನು. ಯಾರು ಯಾರನ್ನು ಋಷಿಪದವಿಯಲ್ಲಿಯೂ ಮಹಾಜ್ಞಾನಿಗಳ ಪದವಿಯಲ್ಲಿಯೂ ಕೂಡಿಸಬೇಕೆಂದು ಸಂಕಲ್ಪಿಸುವೆನೋ ಅವರವರನ್ನು ಆಯಾ ಪದವಿಯಲ್ಲಿ ಕೂಡಿಸುವೆನು. ಯಾರು ಯಾರನ್ನು ಮುಕ್ತರಾಗುವಂತೆ ಮಾಡಬೇಕೆಂದು ಸಂಕಲ್ಪಿಸುವೆನೋ ಅವರವರನ್ನು ಮುಕ್ತರಾಗುವಂತೆ ಮಾಡುವೆನು." ಎಂದು ಈ ವಾಕ್ಯದಲ್ಲಿ ಮಹಾಲಕ್ಷ್ಮೀದೇವಿಯರು ಹೇಳುತ್ತಿರುವರು. ಆದ್ದರಿಂದ ಬ್ರಹ್ಮದೇವನಿಗೂ ರುದ್ರದೇವನಿಗೂ ಪದವಿಯನ್ನು ಕೊಡುವವರೂ ಋಷಿಗಳಿಗೆ ಋಷಿಪದವಿಯನ್ನೂ ಮಹಾಜ್ಞಾನಿಗಳಿಗೆ ಮಹಾಜ್ಞಾನಿಗಳ ಪದವಿಯನ್ನೂ ಸರ್ವಜೀವರಿಗೆ ಮುಕ್ತಿಯನ್ನೂ ಕೊಡುವವರಾಗಿರುವ ಲಕ್ಷ್ಮೀದೇವಿಯರು ಬ್ರಹ್ಮದೇವನಿಗಿಂತಲೂ ರುದ್ರದೇವನಿಗಿಂತಲೂ ಋಷಿಗಳಿಗಿಂತಲೂ ಮಹಾಜ್ಞಾನಿಗಳಗಿಂತಲೂ ಮುಕ್ತಜೀವರಿಗಿಂತಲೂ ಉತ್ತಮರೆಂದು ಹೇಳಿದಂತಾಯಿತು. ಮುಕ್ತಜೀವರಿಗಿಂತ ಉತ್ತಮರಾದ ಮಹಾಲಕ್ಷ್ಮೀದೇವಿಯರು ಅವರಿಗಿಂತ ಅಲ್ಪಶಕ್ತಿಯುಳ್ಳ ಅಮುಕ್ತಜೀವರಿಗಿಂತ ಉತ್ತಮರೆಂದು ಹೇಳಬೇಕಾಗಿಲ್ಲ. ಆದ್ದರಿಂದ ಸರ್ವಜೀವರಿಗಿಂತಲೂ ಲಕ್ಷ್ಮೀದೇವಿಯರು ಉತ್ತಮರೆಂದು ಹೇಳಿದಂತಾಯಿತು.

**ಅಹಂ ರುದ್ರೇಭಿರ್ವಸುಭಿಶ್ಚರಾಮ್ಯಹಮಾದಿತ್ಯೈರುತ ವಿಶ್ವದೇವೈಃ**

" ಅದು ಮಾತ್ರವಲ್ಲ. ಅದೇ ಸೂಕ್ತದಲ್ಲಿರುವ ಈ ವಾಕ್ಯದಲ್ಲಿ " ನಾನು ಏಕಾದಶ ರುದ್ರರುಗಳಿಂದಲೂ ಅಷ್ಟವಸುಗಳಿಂದಲೂ ದ್ವಾದಶ ಆದಿತ್ಯರಿಂದಲೂ ಮೂವತ್ತಮೂರು ವಿಶ್ವೇದೇವತೆಗಳೇ ಮೊದಲಾದ ಸಕಲದೇವತೆಗಳಿಂದಲೂ ಸಹಿತಳಾಗಿ ಸಂಚರಿಸುತ್ತಿರುವೆನು'' ಎಂದು ಅದೇ ಮಹಾಲಕ್ಷ್ಮೀದೇವಿಯರೇ ಹೇಳುತ್ತಾ ಸಕಲ ದೇವತೆಗಳು ತನ್ನ ಪರಿವಾರಗಣದಲ್ಲಿ ಸೇರಿದವರೆಂದೂ ತಾನು ಅವರಿಂದ ಪೂಜಿಸಲ್ಪಡುವವಳೆಂದೂ ಹೇಳಿದ್ದಾರೆ. ಇದರಿಂದ ಸಕಲದೇವತೆಗಳ ಮಧ್ಯದಲ್ಲಿ ಮಹಾಲಕ್ಷ್ಮೀದೇವಿಯರೇ ಉತ್ತಮರೆಂದು ಹೇಳಿದಂತಾಯಿತು. ಉತ್ತಮಾಧಿಕಾರಿಗಳಾದ ಮನುಷ್ಯರಿಗಿಂತಲೂ ಅಧಮಾಧಿಕಾರಿಗಳಾದ ದೈತ್ಯರಿಗಿಂತಲೂ ಲಕ್ಷ್ಮೀದೇವಿಯರು ಉತ್ತಮರೆಂದು ಹೇಳಬೇಕಾಗಿಲ್ಲ. ಆದ್ದರಿಂದ ಸಕಲಜೀವರಿಗಿಂತಲೂ ಲಕ್ಷ್ಮೀದೇವಿಯರು ಉತ್ತಮರೆಂದು ಸಿದ್ಧವಾಯಿತು.''

**" ಇಂತಹ ಲಕ್ಷ್ಮೀದೇವಿಯರು ತಮ್ಮ ಪತಿಯ ವಿಷಯವನ್ನು ವಿಮರ್ಶಿಸುತ್ತಾ ಮಮ ಯೋನಿರಪ್ಸ್ವಂತಃ ಸಮುದ್ರೇ"**

ಅಂದರೆ " ನನ್ನ ಕಾರಣನು ಅಂದರೆ ಪತಿಯು ಸಮುದ್ರದ ನೀರಿನ ಮಧ್ಯದಲ್ಲಿ ವಾಸಿಸುತ್ತಿರುವ ನಾರಾಯಣನೇ ಆಗಿರುವನು.'' ಎಂದು ಹೇಳುತ್ತಾ ನಾರಾಯಣನೊಬ್ಬನೇ ತಮಗಿಂತ ಉತ್ತಮನೆಂದು ಹೇಳುತ್ತಿರುವರು.

" ಓ ಶ್ರೀಕೃಷ್ಣದೇವ!, ಈ ಸೂಕ್ತದ ವಾಕ್ಯಗಳನ್ನು ಪರ್ಯಾಲೋಚಿಸಿದಾಗ ಸಕಲ ಜೀವರ ಮಧ್ಯದಲ್ಲಿ ಲಕ್ಷ್ಮೀದೇವಿಯರೇ ಉತ್ತಮರೆಂದೂ ಲಕ್ಷ್ಮೀದೇವಿಯರಿಗಿಂತ ನಾರಾಯಣನಾಮಕನಾದ ನೀನೇ ಉತ್ತಮನೆಂದೂ ನಿನಗಿಂತ ಉತ್ತಮನು ಯಾರೂ ಇಲ್ಲವೆಂದೂ ಸ್ಪಷ್ಟವಾಗುತ್ತದೆ. ಆದ್ದರಿಂದ ಸರ್ವಜೀವರಿಗಿಂತ ಭಿನ್ನನಾದ ನೀನು ಸರ್ವಜೀವರಿಗೆ ಸಮನೂ ಅಲ್ಲ. ಅವರಿಗಿಂತ ಅಧಮನೂ ಅಲ್ಲವೆಂದು ಸಿದ್ಧವಾಯಿತು.''

" ಅದು ಮಾತ್ರವಲ್ಲ. ನಿನ್ನ ಶತ್ರುಗಳಾದ ದೈತ್ಯರು ನಾನಾ ವಿಧವಾದ ಅಭಿವೃದ್ಧಿಗಳನ್ನು ಪಡೆಯುತ್ತಿರುವರು. ಕೊನೆಗೆ ಅವರು ಅಧೋಗತಿಗಳನ್ನು ಪಡೆಯುವರು. ಪ್ರಳಯಕಾಲದ ಬೆಂಕಿಯ ಮಧ್ಯದಲ್ಲಿ ಸಿಕ್ಕಿದ ವಸ್ತುಗಳಂತೆ ಸಮೂಲವಾಗಿ ನಶಿಸುವರು. ಅವರ ನಾಶಕ್ಕೆ ಕಾರಣನಾದ ನೀನು ಅವರಿಗಿಂತ ಉತ್ತಮನಲ್ಲವೇ? ಅವರ ಗತಿಯೇ ಹೀಗಾದ ಮೇಲೆ ಅವರಿಗಿಂತ ಅಲ್ಪಶಕ್ತಿಯುಳ್ಳ ಮನುಷ್ಯರಿಗಿಂತ ನೀನು ಉತ್ತಮನಲ್ಲವೇ? ಆದ್ದರಿಂದ ನೀನೇ ಸರ್ವೋತ್ತಮನೆಂದು ಹೇಳಲೇಬೇಕು.''

" ಓ ಶ್ರೀಕೃಷ್ಣದೇವ!, "ನಿನಗೆ ಸಮನು ಯಾರೂ ಇಲ್ಲ. ನಿನಗಿಂತ ಉತ್ತಮನು ಇರುವನೇ? ಇಲ್ಲ ಇಲ್ಲ ನೀನು ಸರ್ವರಿಗಿಂತಲೂ ಉತ್ತಮನು'' ಎಂಬ ವಿಷಯದಲ್ಲಿ ಅಂಭ್ರಣೀಸೂಕ್ತವನ್ನು ಆಧಾರವಾಗಿ ಹೇಳಿದೆವು. ಇನ್ನೂ ಅನಂತ ಪ್ರಮಾಣಗಳಿವೆ. ಅವುಗಳಲ್ಲಿ ಕೆಲವು ಪ್ರಮಾಣಗಳನ್ನು ಈಗ ಉದಾಹರಿಸುವೆವು. ಈ ಪ್ರಮಾಣಗಳು ನೀನು ಸರ್ವೋತ್ತಮನು ಎಂಬ ವಿಷಯದಲ್ಲಿ ಮಹಾಜ್ಞಾನಿಗಳಿಗೆ ಅತ್ಯಂತ ಸಂಮತವಾಗಿವೆ. ಬೇರೆ ವಿಧವಾದ ಅರ್ಥವನ್ನು ಹೇಳುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲದವುಗಳು. ಸಾಕ್ಷಾತ್ತಾಗಿ ನಿನ್ನ ಸರ್ವೋತ್ತಮತ್ವವನ್ನು ಸಮರ್ಥಿಸುತ್ತಿವೆ.''

" ಏಷ ಸರ್ವೇಶ್ವರಃ" ಎಂಬ ಶ್ರುತಿಯು ನಿನ್ನ ಸರ್ವೋತ್ತಮತ್ವವನ್ನು ಹೇಳುತ್ತಿದೆ. "ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವಮಹಿಮ್ನಃ ಪರಮಂತಮಾಪ" ಅಂದರೆ " ಓ ವಿಷ್ಣುವೇ, ಇಷ್ಟರ ವರೆಗೆ ಹುಟ್ಟಿದವರಾಗಲೀ ಈಗ ಹುಟ್ಟುತ್ತಿರುವವರಾಗಲೀ ಇನ್ನು ಮುಂದೆ ಹುಟ್ಟುವವರಾಗಲೀ ಯಾರೂ ನಿನ್ನ ಮಹಿಮೆಗಳನ್ನು ಹೇಳಿದರೂ ಮುಗಿಯುವಂತಿಲ್ಲ" ಎಂದು ಹೇಳುತ್ತಾ ಇನ್ನೊಂದು ಶ್ರುತಿಯು ನಿನ್ನ ಸರ್ವೋತ್ತಮತ್ವವನ್ನು ಸಮರ್ಥಿಸುತ್ತಿದೆ. "ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯಃ" ಅಂದರೆ " ನಿನಗೆ ಸಮಾನನು ಯಾರೂ ಇಲ್ಲ. ನಿನಗಿಂತ ಉತ್ತಮನು ಯಾರಿರುವನು? " ಎಂದು ಹೇಳುತ್ತಾ ನಿನ್ನ ಸರ್ವೋತ್ತಮತ್ವವನ್ನು ನೀನು ಕೊಟ್ಟಿರುವ ದಿವ್ಯದೃಷ್ಟಿಯಿಂದ ನಿನ್ನನ್ನು ನೋಡುತ್ತಾ ಅರ್ಜುನನು ಹೇಳುತ್ತಿರುವುದಾಗಿ ನೀನೇ ಭಗವದ್ಗೀತೆಯಲ್ಲಿ ಹೇಳುತ್ತಿರುವಿ. ಹೀಗೆ ಸಕಲ ಪ್ರಮಾಣಗಳು ಅತಿ ಸ್ಪಷ್ಟವಾಗಿ ನಿನ್ನ ಸರ್ವೋತ್ತಮತ್ವವನ್ನು ಸಮರ್ಥಿಸುತ್ತಿರುವಾಗ ಕೆಲವು ವಾದಿಗಳು ಈ ಪ್ರಮಾಣಗಳನ್ನು ಧಿಕ್ಕರಿಸುವುದಕ್ಕಾಗಿ ಒಂದು ಉಪಾಯವನ್ನು ಕಂಡುಹಿಡಿದರು. ಆ ಉಪಾಯವನ್ನು ಮೊದಲು ವಿವರಿಸುವೆವು."

# ವೇದಗಳು ಸುಳ್ಳನ್ನು ಹೇಳಲಾರವು

" ಓ ಶ್ರೀಕೃಷ್ಣದೇವ, ಪ್ರಮಾಣಗಳು ಎರಡು ವಿಧವಾಗಿವೆ. (೧) ತತ್ತ್ವಾವೇದಕಪ್ರಮಾಣಗಳು ಅಂದರೆ ಸತ್ಯವನ್ನು ಹೇಳತಕ್ಕ ಪ್ರಮಾಣಗಳು. "ತತ್ವಮಸಿ" ಮುಂತಾದ ಪ್ರಮಾಣಗಳು. ಈ ದರ್ಜೆಯಲ್ಲಿ ಸೇರಿರುತ್ತವೆ. ಈ ಪ್ರಮಾಣಗಳು ಜೀವನೂ ನೀನೂ ಒಬ್ಬನೇ ಎಂದು ಹೇಳುತ್ತಿವೆ. ಜೀವನೂ ನೀನೂ ಒಬ್ಬನೇ ಆಗಿರುವುದರಿಂದ ನೀನು ಸರ್ವೋತ್ತಮನಲ್ಲ ಎಂದು ಸಿದ್ಧವಾಗುತ್ತದೆ. (೨) ಅತತ್ತ್ವಾವೇದಕಪ್ರಮಾಣಗಳು ಅಂದರೆ ಸುಳ್ಳು ಹೇಳತಕ್ಕ ಪ್ರಮಾಣಗಳು. " ಏಷ ಸರ್ವೇಶ್ವರಃ" ಎಂಬ ಪ್ರಮಾಣವೂ ಇದರಂತೆ ವಿಷ್ಣುಸರ್ವೋತ್ತಮತ್ವವನ್ನು ಸಮರ್ಥಿಸುವ ಇತರ ಪ್ರಮಾಣಗಳೂ ಈ ದರ್ಜೆಯಲ್ಲಿ ಸೇರಿರುತ್ತವೆ. ಈ ಪ್ರಮಾಣಗಳು ಸುಳ್ಳು ಹೇಳುತ್ತಿರುವುದರಿಂದ ಈ ಪ್ರಮಾಣಗಳಲ್ಲಿ ವಿಷ್ಣುಸರ್ವೋತ್ತಮತ್ವವು ಹೇಳಲ್ಪಟ್ಟರೂ ಅದನ್ನು ಅಂಗೀಕರಿಸಕೂಡದು. ಇದು ಅವರು ನೀನು ಸರ್ವೋತ್ತಮನಲ್ಲ ಎಂಬ ವಿಷಯವನ್ನು ಸಮರ್ಥಿಸುವುದಕ್ಕೆ ಕಂಡುಹಿಡಿದ ಉಪಾಯ."

ಓ ಶ್ರೀಕೃಷ್ಣದೇವ, ಈ ವಾದಗಳು ನಿನ್ನ ವೈರಿಗಳು. ಆದ್ದರಿಂದಲೇ ನಿನ್ನ ಸರ್ವೋತ್ತಮತ್ವವನ್ನು ಸಮರ್ಥಿಸುತ್ತಿರುವ ಪ್ರಮಾಣಗಳನ್ನು ಸುಳ್ಳು ಹೇಳುವ ಪ್ರಮಾಣಗಳೆಂದೂ " ನೀನೇ ಜೀವನು" ಎಂಬು ಹೇಳುತ್ತಿರುವಂತೆ ತೋರುತ್ತಿರುವ ಪ್ರಮಾಣಗಳನ್ನು ಸತ್ಯವನ್ನು ಹೇಳುವ ಪ್ರಮಾಣಗಳೆಂದೂ ಹೇಳುತ್ತಿರುವರು. ವೇದವಾಕ್ಯಗಳಲ್ಲಿ ಎಲ್ಲಾ ವಾಕ್ಯಗಳೂ ಪ್ರಮಾಣವಾಕ್ಯಗಳೆನಿಸುತ್ತವೆ. ಹೀಗಿರುವಾಗ " ತತ್ವಮಸಿ" ಮುಂತದ ವಾಕ್ಯಗಳೂ " ಏಷ ಸರ್ವೇಶ್ವರಃ" ಮುಂತಾದ ವಾಕ್ಯಗಳೂ ವೇದವಾಕ್ಯಗಳಾಗಿರುವಾಗ "ತತ್ವಮಸಿ" ಮುಂತಾದ ವಾಕ್ಯಗಳು ಸತ್ಯವನ್ನು ಹೇಳುತ್ತಿವೆಯೆಂದೂ "ಏಷ ಸರ್ವೇಶ್ವರಃ" ಮುಂತಾದ ವಾಕ್ಯಗಳು ಸುಳ್ಳು ಹೇಳುತ್ತಿವೆಯೆಂದೂ ಹೇಳಲು ಸಾಧ್ಯವೇ? ವೇದಗಳಿಗೆ ಪ್ರಾಮಾಣ್ಯವನ್ನು ಹೇಳುವುದಾದರೆ ಎಲ್ಲಾ ವಾಕ್ಯಗಳಿಗೂ ಅವಿರುದ್ಧವಾದ ಅರ್ಥಗಳನ್ನು ಹೇಳಬೇಕು. ವೇದಗಳಿಗೆ ಅಪ್ರಾಮಾಣ್ಯವನ್ನು ಹೇಳುವುದಾದರೆ ಎಲ್ಲಾ ವೇದವಾಕ್ಯಗಳೂ ಸುಳ್ಳನ್ನೇ ಹೇಳುತ್ತವೆ ಎಂಬ ಸಿದ್ಧಾಂತವನ್ನು ಅಂಗೀಕರಿಸಿ ಎಲ್ಲಾ ವಾಕ್ಯಗಳನ್ನೂ ಬಿಡಬೇಕು. ತಮಗೆ ಬೇಕಾದ ವಾಕ್ಯಗಳು

ಮಾತ್ರ ಪ್ರಮಾಣವೆಂದೂ ಅಸಮಂತವಾದ ವಾಕ್ಯಗಳು ಅಪ್ರಮಾಣವೆಂದೂ ಹೇಳುವುದು ಯುಕ್ತವಲ್ಲ. ಹಾಗೆ ಹೇಳಿದರೆ "ತತ್ವಮಸಿ" ಮುಂತಾದ ವಾಕ್ಯಗಳು ಸುಳ್ಳು ಹೇಳುವ ಪ್ರಮಾಣಗಳೆಂದೂ "ಏಷ ಸರ್ವೇಶ್ವರಃ" ಮುಂತಾದ ವಾಕ್ಯಗಳೇ ಸತ್ಯವನ್ನು ಹೇಳುವ ಪ್ರಮಾಣಗಳೆಂದೂ ಯಾರಾದರೂ ಹೇಳಿದರೆ ಅದಕ್ಕೆ ಈ ವಾದಿಯು ಯಾವ ಉತ್ತರವನ್ನು ಕೊಡಲು ಸಾಧ್ಯ? ಆದ್ದರಿಂದ ವೇದಗಳಲ್ಲಿ ಸತ್ಯವನ್ನು ಹೇಳುವ ವೇದಗಳು, ಸುಳ್ಳನ್ನು ಹೇಳುವ ವೇದಗಳು ಎಂದು ದ್ವೈವಿಧ್ಯವನ್ನು ಕಲ್ಪಿಸುವಷ್ಟು ಮೂರ್ಖತನವು ಯಾವುದೂ ಇಲ್ಲ. ಆದ್ದರಿಂದ ಹಾಗೆ ಹೇಳುವವರು ಕುರುಡರೆಂದು ಹೇಳಿದರೆ ತಪ್ಪಾಗಲಾರದು. ಎಲ್ಲಾ ವೇದವಾಕ್ಯಗಳೂ ಪ್ರಮಾಣವೆಂಬ ಮತವೇ ವೈದಿಕರಿಗೆ ಮಾನ್ಯವಾದುದು."

" ಅವುಗಳಲ್ಲಿ" ಏಷ ಸರ್ವೇಶ್ವರಃ ಮುಂತಾದ ವಾಕ್ಯಗಳಿಗೆ ವಿಷ್ಣುಸರ್ವೋತ್ತಮತ್ವವನ್ನು ಬಿಟ್ಟು ಬೇರೆ ಅರ್ಥವನ್ನು ಹೇಳಲು ಯಾರಿಂದಲೂ ಸಾಧ್ಯವಿಲ್ಲ. ಆದ್ದರಿಂದ ಆ ವಾಕ್ಯಗಳಲ್ಲಿ ಹೇಳಲ್ಪಟ್ಟ ವಿಷ್ಣು ಸರ್ವೋತ್ತಮತ್ವವನ್ನು ವೇದಪ್ರಾಮಾಣ್ಯವಾದಿಗಳು ಅಂಗೀಕರಿಸಲೇ ಬೇಕು.

## " ಏಷ ಸರ್ವೇಶ್ವರಃ" ಮುಂತಾದ ವಾಕ್ಯಗಳು ಬಲಿಷ್ಠವಾಗಿವೆ

"ತತ್ತ್ವಮಸಿ" ಮುಂತಾದ ವಾಕ್ಯಗಳಿಗೆ ವಿಷ್ಣುಸರ್ವೋತ್ತಮತ್ವಕ್ಕೆ ಅನುಕೂಲವಾಗಿಯೂ ಪ್ರತಿಕೂಲವಾಗಿಯೂ ಇರುವ ಎರಡು ಅರ್ಥಗಳಿವೆ. ಆ ಅರ್ಥಗಳಲ್ಲಿ ವಿಷ್ಣುಸರ್ವೋತ್ತಮತ್ವಕ್ಕೆ ಅನುಕೂಲವಾದ ಅರ್ಥವನ್ನು ಹೇಳಿದರೆ ಎರಡು ವಾಕ್ಯಗಳೂ ಅವಿರುದ್ಧವಾದ ಅರ್ಥವನ್ನು ಹೇಳುತ್ತಾ ಪ್ರಾಮಾಣ್ಯವನ್ನು ಪಡೆಯುತ್ತವೆ. ಆಗ " ಏಷ ಸರ್ವೇಶ್ವರಃ" ಮುಂತಾದ ವಾಕ್ಯಗಳು ವಿಷ್ಣುಸರ್ವೋತ್ತಮತ್ವವನ್ನು ಹೇಳುತ್ತವೆ. " ತತ್ತ್ವಮಸಿ" ಮುಂತಾದ ವಾಕ್ಯಗಳು ಆ ವಿಷ್ಣುಸರ್ವೋತ್ತಮತ್ವವನ್ನು ವಿರೋಧಿಸುವುದಿಲ್ಲ. ಆದ್ದರಿಂದ ಆ ಎರಡು ವಾಕ್ಯಗಳೂ ವಿಷ್ಣುಸರ್ವೋತ್ತಮತ್ವವನ್ನೇ ಸಮರ್ಥಿಸುತ್ತವೆ.

ವಿರುದ್ಧವಾದ ಅರ್ಥವನ್ನು ಹೇಳಿದರೆ ಪ್ರಬಲವಾದ "ಏಷ ಸರ್ವೇಶ್ವರಃ" ಮುಂತಾದ ಪ್ರಮಾಣಗಳಿಗೆ ವಿರುದ್ಧವಾದ ಅರ್ಥವನ್ನು ಹೇಳುತ್ತಿರುವುದರಿಂದ " ತತ್ತ್ವಮಸಿ" ಮುಂತಾದ ವಾಕ್ಯಗಳೇ ಅಪ್ರಮಾಣವೆನಿಸುತ್ತವೆ. ಆಗಲೂ " ಏಷ ಸರ್ವೇಶ್ವರಃ" ಮುಂತಾದ ವಿಷ್ಣುಸರ್ವೋತ್ತಮತ್ವವೇ ಸಿದ್ಧವಾಗುತ್ತವೆ.

## ಸುಳ್ಳಾದ ವಸ್ತುಗಳು ಯಾವ ಕಾರ್ಯವನ್ನೂ ಮಾಡಲಾರವು

" ಓ ಶ್ರೀಕೃಷ್ಣದೇವ, ನೀನು ನಾಶರಹಿತನಾದವನು, ಅಂತಹ ನಿನ್ನನ್ನೂ ಸುಳ್ಳೆಂದು ನಿನ್ನಿಂದ, ನಿರ್ಮಿತವಾದ ಪ್ರಪಂಚವನ್ನೂ ಸುಳ್ಳೆಂದೂ ಭೇದವೂ ಅಭೇದವೂ ನಿನ್ನ ಸರ್ವೋತ್ತಮತ್ವವೂ ವೇದ ಮುಂತಾದ ಪ್ರಮಾಣಗಳು ಸುಳ್ಳೆಂದೂ ಆಕಾರ ಗುಣಗಳು ಮುಂತಾದ ಯಾವ ಧರ್ಮಗಳೂ ಇಲ್ಲದಿರುವ ಪರಬ್ರಹ್ಮ ಮಾತ್ರ ಸತ್ಯವೆಂದು ಅದ್ವೈತಿಗಳು ಹೇಳುತ್ತಿರುವರು. ಅವರ ಮತದಲ್ಲಿ ವೇದವು ಸುಳ್ಳಾಗಿರುತ್ತದೆ. ಸುಳ್ಳಾಗಿರುವ ಯಾವ ವಸ್ತುವೂ ಯಾವ ಕಾರ್ಯವನ್ನೂ ಮಾಡಲು ಶಕ್ತವಲ್ಲ. ಹಗ್ಗವನ್ನು ನೋಡಿ "ಹಾವು" ಎಂದು ತಿಳಿದಿರುವಾಗ ಆ ಹಾವು ಯಾವ

ದೇಶದಲ್ಲಿಯೂ ಯಾವ ಕಾಲದಲ್ಲಿಯೂ ಇಲ್ಲ. ಆದ್ದರಿಂದ ಸುಳ್ಳೆಂದು ಹೇಳಲೇಬೇಕು. ಆ ಸುಳ್ಳಾದ ಹಾವು ಯಾರನ್ನಾದರೂ ಕಡಿದದ್ದುಂಟೇ? ಆ ಹಾವು ಕಡಿದು ಸತ್ತದ್ದುಂಟೇ? ಇಲ್ಲವೇ ಇಲ್ಲ. ಆದ್ದರಿಂದ "ಸುಳ್ಳಾದ ವಸ್ತುವು ಯಾವ ಕಾರ್ಯವನ್ನೂ ಮಾಡಲು ಶಕ್ತವಲ್ಲ." ಎಂಬ ಸಿದ್ಧಾಂತವನ್ನು ಅಂಗೀಕರಿಸಲೇಬೇಕು. ಹೀಗಾದ ಮೇಲೆ ಸುಳ್ಳಾದ ವೇದಗಳಿಂದ ಸತ್ಯವಾದ ಬ್ರಹ್ಮನ ಜ್ಞಾನವು ಹುಟ್ಟುವುದು ಸಾಧ್ಯವೇ? ಇಲ್ಲ. ಇಲ್ಲ. ಆದ್ದರಿಂದ ಪರಬ್ರಹ್ಮನನ್ನು ತಿಳಿಸುತ್ತವೆ ಎಂದು ಅವರು ಅಂಗೀಕರಿಸಿರುವ ವೇದಗಳೂ ಆ ವೇದಗಳಿಂದ ತಿಳಿಯುತ್ತಿರುವ ವಿಷ್ಣುಸರ್ವೋತ್ತಮತ್ವ ಜೀವೇಶ್ವರಭೇದ ಮುಂತಾದ ಪ್ರಮೇಯಗಳೂ ಸತ್ಯ ಎಂದು ಅಂಗೀಕರಿಸಲೇಬೇಕು.

## ಸತ್ಯವಾದ ಜ್ಞಾನವೇ ಕಾರಣವೆನಿಸುತ್ತದೆ

" ಓ ಶ್ರೀಕೃಷ್ಣದೇವ, ಅದ್ವೈತಿಗಳು ಹೇಳುವ ಒಂದು ವಿಷಯವು ಗಮನಾರ್ಹವಾಗಿದೆ. ಅದನ್ನು ಈಗ ವಿವರಿಸುವೆವು. ಹಗ್ಗವನ್ನು ಹಾವು ಎಂದು ತಿಳಿಯುವ ಸ್ಥಳದಲ್ಲಿ ಆ ಹಾವು ಸುಳ್ಳೆಂದೂ ಸುಳ್ಳಾದ ಆ ಹಾವು ಕಡಿಯಲಾರದೆಂದೂ ಕೊಲ್ಲಲಾರದೆಂದೂ ಯಾವ ಕಾರ್ಯವನ್ನೂ ಮಾಡಲಾರದೆಂದೂ ನೀನು ಹೇಳಿದಿ. ಸುಳ್ಳಾದ ಹಾವು ಕಡಿಯಲಾರದೆಂಬ ಅಂಶವನ್ನೂ ಕೊಲ್ಲಲಾರದು ಎಂಬ ಅಂಶವನ್ನೂ ಅಂಗೀಕರಿಸುವೆವು. ಆದರೆ ಆ ಸುಳ್ಳಾದ ಹಾವಿನಿಂದ ಯಾವ ಕಾರ್ಯವೂ ಏರ್ಪಡಲಾರದೆಂಬ ಅಂಶವನ್ನು ಮಾತ್ರ ಅಂಗೀಕರಿಸಲು ಶಕ್ಯವಿಲ್ಲ. ಸುಳ್ಳಾದ ಹಾವನ್ನು ನೋಡಿ ಸರ್ವರೂ ಹೆದರುತ್ತಿರುವರು ಮತ್ತು ನಡುಗುತ್ತಿರುವರು. ಆದ್ದರಿಂದ ಸುಳ್ಳಾದ ಹಾವು ಭಯವನ್ನೂ ನಡುಕವನ್ನೂ ಕೊಡುತ್ತಿರುವುದರಿಂದ " ಸುಳ್ಳಾದ ವಸ್ತುವಿನಿಂದ ಯಾವ ಕಾರ್ಯವೂ ಹುಟ್ಟಲಾರದು" ಎಂದು ಹೇಳುವುದು ಹೇಗೆ ಯುಕ್ತವಾಗುತ್ತದೆ? ಸುಳ್ಳಾದ ಹಾವಿನಿಂದ ಭಯವೂ ನಡುಕವೂ ಏರ್ಪಟ್ಟಂತೆ ಸುಳ್ಳಾದ ವೇದಗಳಿಂದ ಪರಬ್ರಹ್ಮನ ಜ್ಞಾನವು ಹುಟ್ಟಲಾರದೇ? ಇದು ಅದ್ವೈತಿಗಳ ಆಕ್ಷೇಪ, ಈ ಆಕ್ಷೇಪಕ್ಕೆ ಸಮಂಜಸವಾದ ಉತ್ತರವನ್ನು ಕೊಡುವೆವು.

" ಓ ಶ್ರೀಕೃಷ್ಣದೇವ, ಈ ದೃಷ್ಟಾಂತದಲ್ಲಿ ಸೂಕ್ಷ್ಮವಾಗಿ ಗಮನಿಸಬೇಕಾದ ಅಂಶವಿದೆ. ಅದನ್ನು ಈಗ ವಿವರಿಸುವೆವು. ಒಂದು ವಸ್ತುವು ಇದ್ದಾಗ ಒಂದು ಕಾರ್ಯವು ಹುಟ್ಟುತ್ತದೆ. ಅದೇ ವಸ್ತುವು ಇಲ್ಲದಿರುವಾಗ ಆ ಕಾರ್ಯವು ಹುಟ್ಟುವುದಿಲ್ಲ. ಅಂತಹ ಸ್ಥಳದಲ್ಲಿ ಆ ಕಾರ್ಯವನ್ನು ಕುರಿತು ಆ ವಸ್ತುವು ಕಾರಣವೆಂದು ಹೇಳಬೇಕು. ಇದು ಒಂದನೆಯ ನಿಯಮ. ಈ ನಿಯಮದಂತೆ ಸತ್ಯವಾದ ಸರ್ಪವು ಕಡಿಯುತ್ತದೆ. ಸತ್ಯವಾದ ಸರ್ಪವು ಇಲ್ಲದಿರುವಾಗ ಕಡಿಯುವುದಿಲ್ಲ. ಆದ್ದರಿಂದ ಕಡಿಯುವುದು ಎಂಬ ಕಾರ್ಯವನ್ನು ಕುರಿತು ಸತ್ಯವಾದ ಸರ್ಪವು ಕಾರಣ ಎಂಬ ಅಂಶವನ್ನು ಅಂಗೀಕರಿಸಲೇಬೇಕು."

" ಒಂದು ವಸ್ತುವು ಇಲ್ಲದಿರುವಾಗ ಒಂದು ಕಾರ್ಯವು ಹುಟ್ಟುತ್ತದೆ. ಅದೇ ವಸ್ತುವು ಇರುವಾಗ ಆ ಕಾರ್ಯವು ಹುಟ್ಟುವುದಿಲ್ಲ. ಅಂತಹ ಸ್ಥಳದಲ್ಲಿ ಆ ವಸ್ತುವು ಆ ಕಾರ್ಯವನ್ನು ಕುರಿತು ಕಾರಣವಲ್ಲ" ಎಂದು ಹೇಳಬೇಕು. ಇದು ಎರಡನೆಯ ನಿಯಮ. ಈ ನಿಯಮದಂತೆ ಸುಳ್ಳಾದ ಸರ್ಪವು ಇದ್ದಾಗ ಆ ಸರ್ಪವು ಕಡಿಯುವುದಿಲ್ಲ. ಸುಳ್ಳಾದ ಸರ್ಪವು ಇಲ್ಲದಿರುವಾಗ ಅಂದರೆ ಸತ್ಯವಾದ ಸರ್ಪವಿದ್ದಾಗ ಆ ಸರ್ಪವು ಕಡಿಯುತ್ತದೆ. ಆದ್ದರಿಂದ ಸುಳ್ಳಾದ ಸರ್ಪವು ಕಡಿತವನ್ನು ಕುರಿತು ಕಾರಣವಲ್ಲ ಎಂಬ ಅಂಶವನ್ನು ಅಂಗೀಕರಿಸಲೇಬೇಕು. ಅದ್ವೈತಿಗಳೂ ಸಹ ಈ ಅಂಶವನ್ನು ಅಂಗೀಕರಿಸಿರುವರು."

ಮೇಲ್ಕಂಡ ಎರಡು ನಿಯಮಗಳನ್ನು ಅಂಗೀಕರಿಸಿದ ಮೇಲೆ ಹಗ್ಗವನ್ನು ನೋಡಿ ಹಾವು ಎಂದು ತಿಳಿದ ಸ್ಥಳದಲ್ಲಿಯೂ ಸತ್ಯವಾದ ಹಾವು ಇದ್ದ ಸ್ಥಳದಲ್ಲಿಯೂ ಭಯಕ್ಕೂ ನಡುಕಕ್ಕೂ ಕಾರಣವಾದ ವಸ್ತುವು ಯಾವುದು ಎಂಬುದನ್ನು ವಿಮರ್ಶಿಸಬೇಕು. ಅದನ್ನು ಈಗ ವಿಮರ್ಶಿಸುವೆವು. ಗಾಢನಿದ್ರೆಯ ಕಾಲದಲ್ಲಿ ಮೈಯಲ್ಲಿ ಎಚ್ಚರವಿಲ್ಲದೆ ಮಲಗಿದಾಗ ಸತ್ಯವಾದ ಹಾವು ನಮ್ಮ ಮೈಯ ಸುತ್ತಲೂ ಓಡಾಡಿದರೂ ನಮಗೆ ಭಯವಾಗಲೀ ನಡುಕವಾಗಲೀ ಏರ್ಪಡುವುದಿಲ್ಲ. ಸತ್ಯವಾದ ಹಾವಿಲ್ಲದಿರುವಾಗ ಎಚ್ಚರವಿರುವಾಗಲೇ ಹಾವು ಬಂತೆಂದು ತಿಳಿದಾಗ ಭಯವೂ ನಡುಕವೂ ಏರ್ಪಡುವುದುಂಟು. ಆದ್ದರಿಂದ ಎರಡನೆಯ ನಿಯಮವನ್ನು ಅನುಸರಿಸಿ ಸತ್ಯವಾದ ಹಾವೂ ಸಹ ಭಯಕ್ಕೂ ನಡುಕಕ್ಕೂ ಕಾರಣವಲ್ಲವೆಂದು ತಿಳಿಯುತ್ತದೆ. ಹೀಗಿದ್ದ ಮೇಲೆ ಸುಳ್ಳಾದ ಹಾವು ಭಯಕ್ಕೂ ನಡುಕಕ್ಕೂ ಕಾರಣವೆಂದು ಹೇಳಲು ಸಾಧ್ಯವೇ? ಆದ್ದರಿಂದ ಸತ್ಯವಾದ ಹಾವಾಗಲೀ ಸುಳ್ಳಾದ ಹಾವಾಗಲೀ ಭಯಕ್ಕೂ ನಡುಕಕ್ಕೂ ಕಾರಣವಲ್ಲವೆಂದು ಸಿದ್ಧವಾಯಿತು.

ಮೈಯಲ್ಲಿ ಎಚ್ಚರವಿದ್ದಾಗಲೂ ಸತ್ಯವಾದ ಹಾವನ್ನಾಗಲೀ ಸುಳ್ಳಾದ ಹಾವನ್ನಾಗಲೀ ತಿಳಿದಾಗ ಮಾತ್ರ ಭಯವೂ ನಡುಕವೂ ಏರ್ಪಡುತ್ತದೆ. ತಿಳಿಯದಿರುವಾಗ ಭಯವೂ ನಡುಕವೂ ಏರ್ಪಡುವುದಿಲ್ಲ. ಆದ್ದರಿಂದ ಮೊದಲನೆಯ ನಿಯಮದಂತೆ ಸತ್ಯವಾದ ಅಥವಾ ಸುಳ್ಳಾದ ಸರ್ಪದ ಜ್ಞಾನವೇ ಭಯಕ್ಕೂ ನಡುಕಕ್ಕೂ ಕಾರಣವೆಂದು ಹೇಳಲೇಬೇಕು. ಹಾವು ಸುಳ್ಳಾಗಿರುವ ಸ್ಥಳದಲ್ಲಿಯೂ ಸತ್ಯವಾಗಿರುವ ಸ್ಥಳದಲ್ಲಿಯೂ ಹಾವಿನ ಜ್ಞಾನವು ಸತ್ಯವೇ ಆಗಿರುತ್ತದೆ. ಆದ್ದರಿಂದ " ಕಾರಣವಾಗಿರುವ ವಸ್ತುಗಳೆಲ್ಲವೂ ಸತ್ಯವೇ ಆಗಿರಬೇಕು." ಎಂಬ ನಿಯಮಕ್ಕೆ ಭಂಗವು ಬರಲಿಲ್ಲ. " ಸುಳ್ಳಾದ ಯಾವ ವಸ್ತುವೂ ಕಾರಣವಾಗಲಾರದು." ಎಂಬ ನಿಯಮಕ್ಕೂ ಭಂಗವು ಬರಲಿಲ್ಲ.

" ಆದ್ದರಿಂದ ವೇದ ಮುಂತಾದ ಪ್ರಮಾಣಗಳು ಸುಳ್ಳಾಗಿದ್ದರೆ ಆ ಸುಳ್ಳಾದ ಪ್ರಮಾಣಗಳು ಪರಬ್ರಹ್ಮನ ಜ್ಞಾನವನ್ನು ಹುಟ್ಟಿಸಲಾರವು. ತಾವು ಹೇಳಿದ ನಿರ್ಗುಣ ನಿರಾಕಾರವಾದ ಪರಬ್ರಹ್ಮನನ್ನು ಸುಳ್ಳಾದ ವೇದಗಳು ತಿಳಿಸುತ್ತವೆ ಎಂದು ಅದ್ವೈತಿಗಳು ಹೇಳುತ್ತಿರುವರು. ಇದು ಸಾಧ್ಯವಲ್ಲ. ಆದ್ದರಿಂದ ವೇದ ಮುಂತಾದ ಪ್ರಮಾಣಗಳನ್ನೂ ಆ ಪ್ರಮಾಣಗಳಿಂದ ತಿಳಿಯುವ ವಿಷ್ಣುಸರ್ವೋತ್ತಮ ಮುಂತಾದ ಸಿದ್ಧಾಂತಗಳನ್ನೂ ಸತ್ಯವೆಂದೇ ಹೇಳಬೇಕು. ಆದ್ದರಿಂದ ಅದ್ವೈತಿಗಳ ವಾದವು ಆಭಾಸವಾದದ್ದು."

## ಭಾಗವತದಶಮಸ್ಕಂಧವು ಜೀವೇಶ್ವರಭೇದವನ್ನು ಸಮರ್ಥಿಸುತ್ತಿದೆ

" ಓ ಶ್ರೀಕೃಷ್ಣದೇವ, ಭಾಗವತದಶಮಸ್ಕಂದದಲ್ಲಿ ಹೇಳಿರುವ ಸಕಲ ವಿಷಯಗಳೂ ನೀನೂ ಜೀವನೂ ಒಬ್ಬನೇ ಆಗಿದ್ದರೆ ಅಸಂಭಾವಿತವೆನಿಸುತ್ತವೆ. ಆ ವಿಷಯವನ್ನು ಈಗ ವಿವರಿಸುವೆವು. (೧) ನೀನು ಸಕಲ ಜೀವರಲ್ಲಿರುವ ಅಜ್ಞಾನ ಮುಂತಾದ ದೋಷಗಳನ್ನು ಪರಿಹರಿಸುವನೆಂದೂ ಯಾವ ದೋಷಗಳೂ ಇಲ್ಲದವನೆಂದೂ ಸ್ಪಷ್ಟಪಡಿಸಿರುವಿ. (೨) ಅತ್ಯದ್ಭುತವಾದ ಮತ್ತು ಯಾವ ಜೀವನಿಂದಲೂ ಮಾಡಲು ಸಾಧ್ಯವಿಲ್ಲದಿರುವ ಪೂತನಾ ಸಂಹಾರ ಮುಂತಾದ ಅಸಂಖ್ಯ ಲೀಲೆಗಳನ್ನು ಮಾಡಿರುವಿ.(೩) ಮುರಾಸುರ ನರಕಾಸುರ ಮುಂತಾದ ಅಸಂಖ್ಯ

ದೈತ್ಯರನ್ನು ಸಂಹರಿಸಿರುವಿ. (೪) ಜ್ಞಾನಿಗಳು ನಾನಾ ವಿಧವಾದ ಯಜ್ಞಗಳನ್ನು ಮಾಡಿ ನಿನ್ನನ್ನು ಸಂತೋಷಪಡಿಸುತ್ತಿರುವರು. (೫) ಆ ಜ್ಞಾನಿಗಳನ್ನು ದೈತ್ಯರು ಧಿಕ್ಕರಿಸುತ್ತಿರುವರು ಮತ್ತು ಪೀಡಿಸುತ್ತಿರುವರು. (೬) ದೈತ್ಯರಿಂದ ಪೀಡಿಸಲ್ಪಟ್ಟರೂ ದೇವತೆಗಳೂ ಜ್ಞಾನಿಗಳೂ ಕ್ರಮವಾಗಿ ತಮ್ಮ ತೇಜಸ್ಸನ್ನು ವೃದ್ಧಿಗೊಳಿಸಿಕೊಳ್ಳುವರು. (೭) ಆ ದೇವತೆಗಳಲ್ಲಿಯೂ ಪ್ರಧಾನರೆನಿಸಿದ ಬ್ರಹ್ಮರುದ್ರ ಮುಂತಾದವರು ಮೇಲ್ಕಂಡ ದೈತ್ಯರಿಂದ ಸಜ್ಜನರಿಗೆ ಏರ್ಪಟ್ಟಿರುವ ಬಾಧೆಯನ್ನು ಪರಿಹರಿಸಲು ಶಕ್ತರಾಗಲಿಲ್ಲ. (೮) ಬ್ರಹ್ಮ ಮುಂತಾದ ಸಕಲ ದೇವತೆಗಳು ಕ್ಷೀರಸಮುದ್ರದಲ್ಲಿರುವ ನಿನ್ನ ಮನೆಗೆ ಬಂದರು. (೯) ನಿನ್ನನ್ನು ಪುರುಷಸೂಕ್ತದಿಂದ ಸ್ತುತಿಸಿದ ಮುಂತಾದ ವಿಷಯಗಳು ಹೇಳಲ್ಪಟ್ಟಿವೆ. ಸರ್ವಜೀವರಲ್ಲಿ ಅನ್ಯೋನ್ಯ ಭೇದವಿಲ್ಲದಿದ್ದರೆ ದೈತ್ಯರು ದೇವತೆಗಳನ್ನು ಪೀಡಿಸಲು ಶಕ್ತರಾಗುವರೇ? ದೇವತೆಗಳು ತೇಜಸ್ವಿಗಳೂ ದೈತ್ಯರು ನಿಸ್ತೇಜರೂ ಆಗಲು ಸಾಧ್ಯವೇ? ದೈತ್ಯರಿಂದ ದೇವತೆಗಳು ಸೋಲಲು ಸಾಧ್ಯವೇ? ನೀನೂ ಸಕಲಜೀವರೂ ಒಂದೇ ವ್ಯಕ್ತಿಯಾಗಿದ್ದರೆ ಬ್ರಹ್ಮರುದ್ರ ಮುಂತಾದ ಸಕಲ ದೇವತೆಗಳು ನಿನ್ನ ಮನೆಗೆ ಯಾಕೆ ಬರಬೇಕು? ನಿನ್ನನ್ನು ಯಾಕೆ ಸ್ತುತಿಸಬೇಕು? ಆದ್ದರಿಂದ ಸಕಲ ಜೀವರೂ ಒಂದೇ ವ್ಯಕ್ತಿ ಎಂದೂ ನಿನಗೂ ಸಕಲಜೀವರಿಗೂ ಭೇದವಿಲ್ಲವೆಂದೂ ಹೇಳುವುದು ದಶಮಸ್ಕಂಧಭಾಗವತಕ್ಕೆ ಅತ್ಯಂತ ವಿರುದ್ಧವಾದುದು."

"ಓ ಶ್ರೀಕೃಷ್ಣದೇವ, ನಿನ್ನಲ್ಲಿ ಅನಂತಗುಣಗಳಿವೆ. ಆ ಅನಂತಗುಣಗಳ ಮಧ್ಯದಲ್ಲಿ ಒಂದೊಂದು ಗುಣಗಳೂ ಪೂರ್ಣವಾಗಿವೆ. ಸಕಲಜೀವರಲ್ಲಿ ಅಸಂಖ್ಯದೋಷಗಳಿವೆ. ನೀನು ಗುಣಗಳಿಂದ ಸಮುದ್ರನಂತಿರುವಿ. ನಿನ್ನಲ್ಲಿರುವ ಗುಣಗಳಿಗೆ ವಿರುದ್ಧವಾದ ದೋಷಗಳಿಂದ ಸಕಲ ಜೀವರೂ ಸಮುದ್ರದಂತಿರುವರು. ಇಂತಹ ಪರಸ್ಪರವಿರುದ್ಧ ಸ್ವಭಾವಗಳಿಂದ ಯುಕ್ತರಾಗಿರುವ ನಿನಗೂ ಸರ್ವಜೀವರಿಗೂ ಐಕ್ಯವನ್ನು ಹೇಳುವವರು ವೇದ ಮುಂತಾದ ಪ್ರಮಾಣವಚನಗಳಿಗೆ ಸಂಮತವಾದ ಮಾತುಗಳನ್ನು ಹೇಳುವವರೆಂದು ಹೇಳಲು ಸಾಧ್ಯವೇ? ಈ ವಿಧವಾದ ಮಾತುಗಳನ್ನು ಹೇಳುವವರು ಕತ್ತೆಗಳೆಂದು ಹೇಳಿದರೆ ತಪ್ಪಾಗುವುದೇ? ನೀನು ಜನ್ಮವಿಲ್ಲದವನು. ಜೀವರೆಲ್ಲರೂ ಜನ್ಮವುಳ್ಳವರು. ನಿನಗೂ ಜೀವರಿಗೂ ಅಭೇದವನ್ನು ಹೇಳುವವನು ಪರಮ ಮೂರ್ಖನು. ಮೂರ್ಖನ ಅಭಿಪ್ರಾಯದಿಂದ ಸಿದ್ಧವಾದ ಜೀವೇಶ್ವರಾಭೇದವು ಪ್ರಮಾಣಗಳಿಂದ ಹೇಳಲ್ಪಡುತ್ತದೆಯೇ? ಆದ್ದರಿಂದ ಜೀವರೂ ಶ್ರೀಹರಿಯೂ ಒಂದೇ ಎಂಬ ಮತವೂ ಸಕಲಜೀವರು ಅನ್ಯೋನ್ಯ ಭಿನ್ನರಲ್ಲವೆಂಬ ಮತವೂ ಸರ್ವಥಾ ನಿಂದ್ಯವಾದುದು.

## ಶ್ರೀಹರಿಯನ್ನು ಸುಳ್ಳೆಂದು ಹೇಳುವವನು ಮಾನ್ಯನಲ್ಲ

"ಓ ಶ್ರೀಕೃಷ್ಣದೇವ, ಪುರಾಣಗಳಲ್ಲಿ ಸಾತ್ವಿಕಪುರಾಣಗಳು ರಾಜಸಪುರಾಣಗಳು ತಾಮಸಪುರಾಣಗಳು ಎಂದು ಮೂರು ವಿಧವಾದ ಪುರಾಣಗಳಿವೆ. ಅವುಗಳಲ್ಲಿ ರಾಜಸಪುರಾಣಗಳಲ್ಲಿಯೂ ತಾಮಸಪುರಾಣಗಳಲ್ಲಿಯೂ ಮೋಹಕಭಾಗಗಳಿವೆ. ಆ ಭಾಗಗಳನ್ನು ಓದಿದವರಿಗೆ ವಿಪರೀತವಾದ ಜ್ಞಾನಗಳು ಏರ್ಪಡುವ ಸಂಭವವಿದೆ. ಆದರೂ ಆ ರಾಜಸಪುರಾಣಗಳಲ್ಲಿಯೂ ತಾಮಸಪುರಾಣಗಳ್ಲಿಯೂ ವಿಷ್ಣುಸರ್ವೋತ್ತಮತ್ವವನ್ನೂ ಪ್ರಪಂಚಸತ್ಯತ್ವವನ್ನೂ ಸಮರ್ಥಿಸುವ ಕೆಲವು ಭಾಗಗಳಿವೆ. ಆ ಭಾಗಗಳನ್ನು ಓದಿದವರಿಗೆ ವಿಪರೀತಜ್ಞಾನವು ಹುಟ್ಟಲಾರದು. ಸಾತ್ವಿಕಪುರಾಣಗಳಲ್ಲಿ ವಿಷ್ಣುಸರ್ವೋತ್ತಮತ್ವವೂ ಪ್ರಪಂಚಸತ್ಯತ್ವವೂ ಸಂಶಯಕ್ಕೆ ಅವಕಾಶವಿಲ್ಲದಂತೆ ಸ್ಪಷ್ಟಪಡಿಸಲ್ಪಟ್ಟಿವೆ. ಸಾತ್ವಿಕಸ್ಮೃತಿ ಗ್ರಂಥಗಳಲ್ಲಿಯೂ ಭಾರತ ಗ್ರಂಥದಲ್ಲಿಯೂ ಅನಾದಿಯಾದ ವೇದಗಳಲ್ಲಿಯೂ

ಬ್ರಹ್ಮಸೂತ್ರಗಳಲ್ಲಿಯೂ ತಮ್ಮ ಸರ್ವಸ್ವವಾದ ನಿಧಿಗಳಿಂತೆ ಶ್ರೀಹರಿಯ ಮಹಿಮೆಗಳಲ್ಲಿಯೂ ಪ್ರಪಂಚಸತ್ಯತ್ವವೂ ಸಮರ್ಥಿಸಲ್ಪಟ್ಟಿವೆ. ಶ್ರೀಹರಿಯಲ್ಲಿ ಅವಿದ್ಯೆಯಾಗಲೀ ಅವಿದ್ಯಾಮೂಲಕವಾದ ಸಂಸಾರವಾಗಲೀ ಇಲ್ಲವೆಂದು ಸಮರ್ಥಿಸಲ್ಪಟ್ಟಿವೆ. ಶ್ರೀಹರಿಯ ಸರ್ವೋತ್ತಮತ್ವವೂ ಸಮರ್ಥಿಸಲ್ಪಟ್ಟಿದೆ. ಆದರೆ ಅದ್ವೈತಿಗಳು ಈ ಪ್ರಮಾಣಗಳನ್ನು ಲಕ್ಷಿಸಲಿಲ್ಲ. ಇವುಗಳೆಲ್ಲ ಸುಳ್ಳೆಂದು ಹೇಳಿದರು. ತಮ್ಮ ಮನಸ್ಸಿಗೆ ತೋರಿದಂತೆ ಸಿದ್ಧಾಂತಗಳನ್ನು ಮಂಡಿಸಿದರು. ಶ್ರೀಹರಿಯೇ ಸುಳ್ಳೆಂದು ಹೇಳಿದರು. ಇಂತಹ ವಾದಿಗಳು ಶ್ರೋತ್ರಿಯರ ಸಭೆಗಳಲ್ಲಿ ಶೋಭಿಸಲಾರರು. ಇವರನ್ನು ವೇದಬಾಹ್ಯರಾದ ಬೌದ್ಧರಲ್ಲಿ ಸೇರಿದವರೆಂದು ಜ್ಞಾನಿಗಳು ಧಿಕ್ಕರಿಸುವರು.''

## ನಮ್ಮನ್ನು ನೀನು ನಿಗ್ರಹಿಸಕೂಡದು

" ಓ ಶ್ರೀಕೃಷ್ಣದೇವ, ನಿನ್ನ ಭಕ್ತರು ಗರ್ವಿಷ್ಟರಾದಾಗ ಅವರ ಗರ್ವವನ್ನು ನೀನು ಪರಿಹರಿಸಿ ಅವರನ್ನು ಉದ್ಧರಿಸುವಿ. ಕಾಳಿಯನು ಗರ್ವದಿಂದ ನಿನ್ನನ್ನು ತನ್ನ ದೇಹದಿಂದ ಬಿಗಿದು ಸಂಹರಿಸಬೇಕೆಂದು ಯತ್ನಿಸಿದನು. ನೀನು ಅವನ ಹೆಡೆಗಳ ಮೇಲೆ ನರ್ತನ ಮಾಡುತ್ತಾ ಅವನ ಗರ್ವವನ್ನು ಪರಿಹರಿಸಿದಿ. ಅವನ ಗರ್ವವೆಲ್ಲವೂ ಹೋಗಿ ಮೃತಪ್ರಾಯನಾದ ಅವನಿಗೆ ಅಭಯವನ್ನು ಕೊಟ್ಟು ರಕ್ಷಿಸಲಿಲ್ಲವೇ? ನಿನ್ನ ದ್ವೇಷಿಗಳು ಗರ್ವದಿಂದ ಯುಕ್ತರಾಗಿ ನಿನ್ನನ್ನು ಸಂಹರಿಸಬೇಕೆಂದು ಬಂದಾಗ ಅವರ ಗರ್ವವನ್ನೂ ಪರಿಹರಿಸಲಾರೆ. ಅವರನ್ನೂ ರಕ್ಷಿಸಲಾರೆ. ಶಕಟಾಸುರ ಮುಂತಾದ ದೈತ್ಯರು ಗರ್ವಿಷ್ಟರಾಗಿ ನಿನ್ನನ್ನು ಸಂಹರಿಸಬೇಕೆಂದು ಬಂದಾಗ ಅವರ ಗರ್ವವನ್ನು ಪರಿಹರಿಸಿದಿಯಾ? ರಕ್ಷಿಸಿದಿಯಾ? ಅವರ ಗರ್ವವನ್ನು ಹೆಚ್ಚಿಸಲಿಲ್ಲವೇ? ಕೊನೆಗೆ ಅವರನ್ನು ಸಂಹರಿಸಲಿಲ್ಲವೇ?''

" ಓ ಶ್ರೀಕೃಷ್ಣದೇವ, ನಾವೆಲ್ಲರೂ ನಿನ್ನ ಭಕ್ತರು. ನಮ್ಮಲ್ಲಿ ಗರ್ವವು ಬಂದದ್ದು ನಿಜ. ಭಕ್ತರಾದ ನಮಗೆ ಗರ್ವವು ಬಂದದ್ದಕ್ಕಾಗಿ ಕಾಲಿಯನನ್ನು ನಿಗ್ರಹಿಸಿದಂತೆ ನೀನು ಅದೃಶ್ಯನಾಗಿ ನಮ್ಮನ್ನು ಗೋಳಾಡಿಸಿದಿ. ಈಗ ನಮ್ಮ ಗರ್ವವೆಲ್ಲವೂ ಅಡಗಿತು. ಕಾಳಿಯನಂತೆ ನಾವು ಮೃತಪ್ರಾಯರಾಗಿರುವೆವು. ಕಾಳಿಯನಿಗೆ ಅಭಯವನ್ನು ಕೊಟ್ಟು ರಕ್ಷಿಸಿದಂತೆ ನಮಗೂ ಅಭಯವನ್ನು ಕೊಟ್ಟು ರಕ್ಷಿಸು. ಶಕಟಾಸುರನೇ ಮೊದಲಾದವರಂತೆ ನಾವೆಲ್ಲರೂ ನಿನ್ನ ದ್ವೇಷವನ್ನು ಮಾಡಿದವರಲ್ಲ. ನಿನ್ನ ದ್ವೇಷಿಗಳಾದ ದೈತ್ಯರನ್ನು ನಿಗ್ರಹಿಸಿದಂತೆ ನಮ್ಮನ್ನು ನಿಗ್ರಹಿಸಬೇಡ.''

" ಓ ಶ್ರೀಕೃಷ್ಣದೇವ, ಬ್ರಹ್ಮ ಮುಂತಾದ ದೇವತೆಗಳು ನಾನಾ ವಿಧವಾದ ಯಜ್ಞಗಳನ್ನು ಮಾಡಿ ನಿನ್ನನ್ನು ಆರಾಧಿಸುತ್ತಲೂ ಸ್ತುತಿಸುತ್ತಲೂ ಇರುವರು. ಸಜ್ಜನರಲ್ಲಿ ಕೃಪೆಯನ್ನು ತೋರಿಸುವುದೇ ದೊಡ್ಡ ನಿಧಿಯೆಂದು ಆ ದೇವತೆಗಳೆಲ್ಲರೂ ತಿಳಿದಿರುವರು. ಆ ದೇವತೆಗಳಲ್ಲಿ ನೀನೂ ಯಾವಾಗಲೂ ಕೃಪೆಯನ್ನು ಮಾಡುತ್ತಿರುವಿ. ಬ್ರಹ್ಮ ಮುಂತಾದ ದೇವತೆಗಳಂತೆ ಪುಣ್ಯವನ್ನು ನಾವು ಮಾಡಿದವರಲ್ಲ. ಸಜ್ಜನರಲ್ಲಿ ಅಪಾರ ಕೃಪೆಯನ್ನೂ ತೋರಿಸಿದವರಲ್ಲ. ಆದರೂ ನಾವು ನಮ್ಮ ಶಕ್ತ್ಯನುಸಾರವಾಗಿ ಹಿಂದಿನ ಅನಂತಜನ್ಮಗಳಲ್ಲಿಯೂ ಈ ಜನ್ಮದಲ್ಲಿಯೂ ಪುಣ್ಯಗಳನ್ನು ಮಾಡಿರುವೆವು. ಇಂತಹ ನಮ್ಮೆಲ್ಲರನ್ನೂ ಬ್ರಹ್ಮಾದಿದೇವತೆಗಳನ್ನು ರಕ್ಷಿಸಿದಂತೆ ನೀನು ರಕ್ಷಿಸಲೇಬೇಕು. ಅದು ಮಾತ್ರವಲ್ಲ. ನೀನು ಭೀತರಿಗೆ ಅಭಯವನ್ನು ಕೊಡುವವನಲ್ಲವೇ? ನಾವೆಲ್ಲರೂ ಈ ರಾತ್ರಿಕಾಲದಲ್ಲಿ ಗೂಬೆ ಮುಂತಾದ ಪಕ್ಷಿಗಳ ಮತ್ತು ಹುಲಿ ಮುಂತಾದ ಕ್ರೂರಮೃಗಗಳ ಧ್ವನಿಯನ್ನು ಕೇಳಿ ಹೆದರಿರುವೆವು. ನೀನು ನಮ್ಮೆಲ್ಲರ ಭಯವನ್ನು ಪರಿಹರಿಸು. ನಾವೆಲ್ಲರೂ ನಿನ್ನ ಬಂಧುಗಳಲ್ಲವೇ? ಆಪತ್ಕಾಲದಲ್ಲಿ ಸರ್ವರಿಗೂ ಬಂಧುವಾದುದರಿಂದ ಅಪದ್ಬಾಂಧವನೆನಿಸಿದ ನೀನು ನಿನ್ನ ಬಂಧುಗಳಾದ ನಮ್ಮ ಕೈಯನ್ನು ಬಿಡಬಹುದೇ?

# ನಮಗೆ ನಿನ್ನನ್ನು ತೋರಿಸು ಇದು ನಮ್ಮೆಲ್ಲರ ಕೊನೆಯ ಪ್ರಾರ್ಥನೆ

" ಓ ಶ್ರೀಕೃಷ್ಣದೇವ, ನಿನ್ನ ಮುಖವು ಕಮಲದಂತೆ ಸುಂದರವಾಗಿದೆ. ಎಲ್ಲಾ ವಿಧವಾದ ಸೌಂದರ್ಯರಸವೂ ನಿನ್ನ ಮುಖದಲ್ಲಿ ತುಂಬಿದೆ. ನಿನ್ನ ಎರಡು ಕಣ್ಣುಗಳಲ್ಲಿರುವ ಸೌಂದರ್ಯವನ್ನು ಸಕಲ ದೇವತೆಗಳೂ ಹೊಗಳುತ್ತಿರುವರು. ನಿನ್ನ ಮುಗುಳ್ನಗೆಯು ಮನ್ಮಥನ ಮನಸ್ಸನ್ನೂ ಜಯಿಸುತ್ತಿದೆ. ನಿನ್ನ ಈ ಮುಖವನ್ನೂ ಕಣ್ಣುಗಳನ್ನೂ ಮುಗುಳ್ನಗೆಯನ್ನೂ ಯಾವಾಗಲೂ ನೋಡುತ್ತಿರಬೇಕೆಂದು ನಮ್ಮ ಮನಸ್ಸು ಆಶಿಸುತ್ತಿದೆ. ನಿನಗೆ ಜನ್ಮವಿಲ್ಲ. ಆದ್ದರಿಂದ ನಿನಗೆ ಯಾವ ಆಸೆಯೂ ಇಲ್ಲ. ನಮಗೆ ಜನ್ಮವಿದೆ. ನಮಗೆ ಅಪಾರವಾದ ಆಸೆಗಳಿವೆ. ನಮ್ಮ ಆಸೆಗಳನ್ನು ನಿನಗೆ ಹೇಳಿದರೆ ತಿಳಿಯಲಾರದು. ತಿಳಿದರೂ ತಿಳಿಯದವನಂತೆ ನಟಿಸುತ್ತಿರುವಿ. ನಿನಗೆ ನಮ್ಮಲ್ಲಿ ದಯೆ ಇದೆ. ಆದರೂ ದಯೆಯಿಲ್ಲದವನಂತೆ ನಟಿಸುತ್ತಿರುವಿ. ಆದ್ದರಿಂದಲೇ ನಿನ್ನ ನಟನೆಯನ್ನು ಬದಿಗಿಟ್ಟು ನಮ್ಮಲ್ಲಿ ಕರುಣೆಯನ್ನು ತೋರಿಸು. ನಿನ್ನ ಮುಖವನ್ನೂ ಕಣ್ಣುಗಳನ್ನೂ ಮುಗುಳ್ನಗೆಯನ್ನೂ ತೋರಿಸು."

# ಸಕಲ ಗೋಪಿಯರಿಗೂ ಶ್ರೀಕೃಷ್ಣದೇವನು ಪ್ರತ್ಯಕ್ಷನಾದದ್ದು

ಗೋಪಿಕಾಸ್ತ್ರೀಯರ ಪರಿತಾಪಾವಸ್ಥೆಯನ್ನು ಸಮುದ್ರದಲ್ಲಿ ಮಲಗಿರುವ ಶ್ರೀಕೃಷ್ಣದೇವನಿಗೆ ತಿಳಿಸುವುದಕ್ಕಾಗಿ ಹೋದವನಂತೆ ಚಂದ್ರನು ಪಶ್ಚಿಮಸಮುದ್ರವನ್ನು ಸಮೀಪಸಿದನು. ಶ್ರೀಕೃಷ್ಣದೇವನು ಅದೃಶ್ಯನಾದ ಕಾಲದಲ್ಲಿ ಗೋಪಿಕಾಸ್ತ್ರೀಯರು ಏಕಾಗ್ರಚಿತ್ತದಿಂದ ಮಾಡಿರುವ ಸ್ತುತಿಗಳಿಂದ ಪುಣ್ಯಪರ್ವತಗಳೇ ಏರ್ಪಟ್ಟವು. ಆ ಪುಣ್ಯಪರ್ವತಗಳ ಶಿಖರದಿಂದ ಶ್ರೀಕೃಷ್ಣದೇವನೆಂಬ ಚಂದ್ರನು ಉದಯಿಸಿದನು. ಚಂದ್ರನು ಉದಯಿಸುತ್ತಿರುವಾಗ ತನ್ನ ಕಿರಣಗಳನ್ನು ಪರ್ವತಗಳ ಮೇಲೆ ವ್ಯಾಪಿಸುವಂತೆ ಮಾಡುವನು. ಕನ್ನೈದಿಲೆಗಳನ್ನು ಅರಳಿಸುವನು. ಆಕಾಶವನ್ನು ಬೆಳಗುವಂತೆ ಮಾಡುವನು. ಸಮುದ್ರದಲ್ಲಿ ನೀರು ಹೆಚ್ಚುವಂತೆ ಮಾಡುವನು. ಅದರಂತೆ ಶ್ರೀಕೃಷ್ಣದೇವನೆಂಬ ಚಂದ್ರನೂ ತನ್ನ ಕೈಗಳೆಂಬ ಕಿರಣಗಳಿಂದ ಸ್ತ್ರೀಯರ ಮೊಲೆಗಳೆಂಬ ಪರ್ವತಗಳನ್ನು ಸ್ಪರ್ಶಿಸಿದನು. ಅವರ ಕಣ್ಣುಗಳೆಂಬ ಕನ್ನೈದಿಲೆಗಳನ್ನು ಅರಳಿಸಿದನು. ಮನಸ್ಸುಗಳೆಂಬ ಆಕಾಶಗಳನ್ನು ಪ್ರಕಾಶಿಸುವಂತೆ ಮಾಡಿದನು. ಅವರ ಆನಂದವೆಂಬ ಸಮುದ್ರವು ಉಕ್ಕಿ ಬರುವಂತೆ ಮಾಡಿದನು.

ಶ್ರೀಕೃಷ್ಣದೇವನು ಅಲ್ಲಿರುವ ಸ್ತ್ರೀಯರ ಸಂಖ್ಯೆಗೆ ಸಮಾನಸಂಖ್ಯೆಯುಳ್ಳ ರೂಪಗಳನ್ನು ಸ್ವೀಕರಿಸಿದನು. ಒಬ್ಬೊಬ್ಬ ಸ್ತ್ರೀಯ ಜೊತೆಯಲ್ಲಿ ಒಂದೊಂದು ರೂಪದಿಂದ ವಿಹರಿಸಿದನು. ಎಲ್ಲರೂ ತಾವು ಮಾಡಿರುವ ಪುಣ್ಯಬಲದಿಂದ ಶ್ರೀಕೃಷ್ಣದೇವನೊಡನೆ ನಾನಾ ವಿಧವಾಗಿ ಕ್ರೀಡಿಸಿದರು.

# ಸಕಲ ಗೋಪಿಕಾಸ್ತ್ರೀಯರನ್ನೂ ನಾನಾವಿಧದಿಂದ ತೃಪ್ತಿಪಡಿಸಿದ್ದು

ಒಬ್ಬ ಗೋಪಿಕಾಸ್ತ್ರೀಯು ಶ್ರೀಕೃಷ್ಣದೇವನು ಅಗಿದ ತಾಂಬೂಲವನ್ನು ತಿಂದಳು. ಆ ತಾಂಬೂಲವು

ಶ್ರೀಕೃಷ್ಣದೇವನ ಮುಖಕಮಲದ ಸುಗಂಧದಿಂದ ಯುಕ್ತವಾಗಿತ್ತು. ಹೊಟ್ಟೆಯೊಳಗೆ ಮನ್ಮಥನ ಬಾಣಗಳಿಂದ ಏರ್ಪಟ್ಟಿರುವ ಹುಣ್ಣುಗಳನ್ನೆಲ್ಲಾ ಆ ತಾಂಬೂಲವು ಗುಣಪಡಿಸಿತು. ಈ ತಾಂಬೂಲದ ಭಕ್ಷಣದಿಂದಲೇ ಶ್ರೀಕೃಷ್ಣದೇವನ ವಿರಹದಿಂದ ಏರ್ಪಟ್ಟಿರುವ ವೇದನೆಗಳೆಲ್ಲವೂ ದೂರವಾದವು. ಶ್ರೀಕೃಷ್ಣದೇವನ ಸೌಂದರ್ಯವನ್ನು ಎಷ್ಟೆಂದು ವರ್ಣಿಸಲಿ?

ಇನ್ನೊಬ್ಬ ಗೋಪಿಕಾಸ್ತ್ರೀಯು ಶ್ರೀಕೃಷ್ಣದೇವನ ಕಂಠವನ್ನು ಕಮಲದಂತೆ ಸುಂದರವಾಗಿರುವ ತನ್ನ ಎರಡು ಕೈಗಳಿಂದ ಬಿಗಿದಳು. ಅಷ್ಟರಲ್ಲಿಯೇ ಅವಳ ಮುಖವು ಸಂತೋಷದಿಂದ ಅರಳಿತು. ಆ ಪುಣ್ಯವತಿಯು ಶ್ರೀಕೃಷ್ಣದೇವನ ಮುಖದಲ್ಲಿ ಮುದ್ದು ಕೊಟ್ಟಳು. ಸ್ತ್ರೀಯರು ಪುರುಷರ ಕಂಠವನ್ನೂ ಪುರುಷರು ಸ್ತ್ರೀಯರ ಕಂಠವನ್ನೂ ಹಿಡಿದುಕೊಂಡು ಅನ್ಯೋನ್ಯವಾಗಿ ಮುದ್ದು ಕೊಡುವುದು ಮುಂತಾದ ಲೀಲೆಗಳು ರಾಸಲೀಲೆಯೆನಿಸುತ್ತವೆ. ಆ ಗೋಪಿಕಾಸ್ತ್ರೀಯು ರಾಸಲೀಲೆಯಲ್ಲಿ ಮಾಡುವಂತೆ ಶ್ರೀಕೃಷ್ಣದೇವನು ಕಂಠವನ್ನು ಎರಡು ಕೈಗಳಿಂದ ಬಿಗಿದು ಮುದ್ದು ಕೊಟ್ಟಕೂಡಲೇ ಶ್ರೀಕೃಷ್ಣದೇವನಿಗೂ ಈ ರೀತಿಯಾದ ಲೀಲೆಯನ್ನು ಈ ಸ್ತ್ರೀಯ ಜೊತೆಯಲ್ಲಿ ಮಾಡಬೇಕೆಂಬ ಆಸೆಯು ಹುಟ್ಟಿತು. ಈ ಆಸೆಯನ್ನು ಬೆಳೆಸುತ್ತಾ ಪುನಃ ಪುನಃ ಮುದ್ದುಗಳನ್ನು ಕೊಟ್ಟಳು.

ಮತ್ತೊಬ್ಬ ಗೋಪಿಕಾಸ್ತ್ರೀಯ ತುಟಿಗಳನ್ನು ಶ್ರೀಕೃಷ್ಣದೇವನು ಕಡಿದನು. ಸುಂದರವಾದ ತಲೆಗೂದಲುಗಳಿಂದ ಅಲಂಕೃತನಾದ ಅವನ ಮುಖವನ್ನು ಈ ಗೋಪಿಕೆಯು ದೃಷ್ಟಿಸಿ ತನ್ನ ಚಂಚಲವಾದ ಕಡೆಗಣ್ಣುಗಳ ನೋಟದಿಂದ ನೋಡಿದಳು. ಶ್ರೀಕೃಷ್ಣದೇವನ ತೊಂಡೆಹಣ್ಣಿನಂತೆ ಮೃದುವಾಗಿರುವ ತುಟಿಗಳ ಸ್ಪರ್ಶವು ತನ್ನ ತುಟಿಗಳಿಗೆ ಏರ್ಪಟ್ಟದ್ದರಿಂದ ಉಂಟಾದ ಮುದ್ದಿನ ರುಚಿಯನ್ನು ಹುಬ್ಬುಗಳನ್ನು ಹಾರಿಸುತ್ತಾ ತಿಳಿಸಿದಳು.

ಇನ್ನೊಬ್ಬ ಗೋಪಿಕಾಸ್ತ್ರೀಯು ತಾನು ವಿವಾಹಿತವಲ್ಲವೆಂದೂ ವ್ಯಭಿಚಾರಿಣಿಯೆಂದು ತನ್ನನ್ನು ತಿಳಿಯಬಾರದೆಂದು ಸಂಕಲ್ಪಿಸಿದಳು. ಆನಂದದಿಂದ ಅವಳ ಕಣ್ಣುಗಳಿಂದ ಧಾರೆ ಧಾರೆಯಾಗಿ ನೀರು ಅವಳ ಕೈಗಳ ಮೇಲೆ ಸುರಿದವು. ಇದೇ ಕನ್ಯಾದಾನಕಾಲದಲ್ಲಿ ಕನ್ಯೆಯ ಕೈಯಲ್ಲಿ ಹಾಕುವ ಧಾರೋದಕವೆನಿಸಿತು. ಸಂತೋಷದಿಂದ ಅವಳ ಕೈಗಳಲ್ಲಿರುವ ಬಳೆಗಳು ಅನ್ಯೋನ್ಯವಾಗಿ ಸ್ಪರ್ಶಿಸಿ ಧ್ವನಿಸಿದವು. ಇದೇ ವಿವಾಹಕಾಲದ ಮಂಗಲವಾದ್ಯಧ್ವನಿಯೆನಿಸಿತು. ಮೆಲ್ಲನೆ ಶ್ರೀಕೃಷ್ಣದೇವನ ಹಸ್ತವನ್ನು ಮುಟ್ಟಿದಳು. ಇದೇ ಪಾಣಿಗ್ರಹಣವೆನಿಸಿತು. ಹೀಗೆ ಶ್ರೀಕೃಷ್ಣದೇವನ ಅಂಗಸಂಗಕ್ಕಿಂತ ಪೂರ್ವಕಾಲದಲ್ಲಿ ಶ್ರೀಕೃಷ್ಣದೇವನ ಪಾಣಿಗ್ರಹಣವನ್ನು ಕ್ರಮವಾಗಿ ಮಾಡಿಕೊಂಡು ಅವನೊಡನೆ ವಿಹರಿಸಿದಳು. ತಾನು ವ್ಯಭಿಚಾರಿಣಿಯಲ್ಲವೆಂದು ತಿಳಿಸಿದಳು.

ಇನ್ನೊಬ್ಬ ಗೋಪಿಕಾಸ್ತ್ರೀಯು ತನ್ನ ದೇಹವೇ ಶ್ರೀಕೃಷ್ಣದೇವನು ರತಿಕ್ರೀಡೆಯನ್ನು ಮಾಡುವುದಕ್ಕೆ ಯೋಗ್ಯವಾದ ಮಂದಿರವೆಂದು ನಂಬಿದಳು. ಆ ದೇಹವೆಂಬ ಮಂದಿರದಲ್ಲಿ ಎತ್ತರವೂ ಪುಷ್ಟವೂ ಆಗಿರುವ ಎರಡು ಮೊಲೆಗಳೇ ಕಲಶಗಳೆಂದು ನಂಬಿದಳು. ಆ ಮೊಲೆಗಳೆಂಬ ಕಲಶಗಳನ್ನು ಚಿಗುರುಗಳಿಂದ ಅಲಂಕರಿಸಬೇಕೆಂದು ತೀರ್ಮಾನಿಸಿದಳು. ತನ್ನ ಮೊಲೆಗಳ ಮೇಲೆ ಎಳೆ ಚಿಗುರುಗಳಂತೆ ಮೃದುವಾಗಿಯೂ ಕೆಂಪುಬಣ್ಣದಿಂದ ಯುಕ್ತವಾಗಿಯೂ ಇರುವ ಶ್ರೀಕೃಷ್ಣದೇವನ ಪಾದಗಳನ್ನು ಇಟ್ಟಳು. ಅದರಿಂದ ಕಲಶಗಳಿಗೆ ಅಲಂಕಾರವನ್ನು ಮಾಡಿದಂತಾಯಿತು. ಬಹುಕಾಲದವರೆಗೆ ಆ ಪಾದಗಳನ್ನು ಅಲ್ಲಿಂದ ತೆಗೆಯಲೇ ಇಲ್ಲ. ಅಲಂಕಾರಕ್ಕಾಗಿ ಉಪಯೋಗಿಸಿದ ಚಿಗುರನ್ನು ಕೂಡಲೇ ಯಾರಾದರೂ ತೆಗೆಯುವರೇ? ಬಹುಕಾಲದ ವರೆಗೆ ಎದೆಯಲ್ಲಿಟ್ಟುಕೊಂಡಿರುವ ಪಾದದ ಸ್ಪರ್ಶದಿಂದ ಮನ್ಮಥನ ವಿಕಾರವೆಲ್ಲವೂ ಅಡಗಿತು. ಎದೆಯಲ್ಲಿ ಇಡಲ್ಪಟ್ಟ

ಪಾದವು ಎದೆಯನ್ನೂ ಅಲಂಕರಿಸಿತು. ಮನ್ಮಥನನ್ನು ಜಯಿಸಿದ್ದಕ್ಕೆ ಧ್ವಜಸ್ತಂಭವೂ ಆಯಿತು. ಹರಿಸೇವಕರು ಒಂದು ಕಾರ್ಯಕ್ಕಾಗಿ ಮಾಡುವ ಒಂದು ವ್ಯಾಪಾರವು ಅನೇಕ ಫಲಗಳನ್ನು ಕೊಡುವುದು ಸ್ವಭಾವವಲ್ಲವೇ?

ಶ್ರೀಕೃಷ್ಣದೇವನ ಅಪಾರ ತೇಜಸ್ಸಿನಿಂದ ಯುಕ್ತವಾಗಿರುವ ಮುಖವು ಆಕಾರದಲ್ಲಿರುವ ಚಂದ್ರನನ್ನು ಧಿಕ್ಕರಿಸುತ್ತಿದೆ. ಆ ಮುಖವನ್ನು ಅತ್ಯಾಶೆಯಿಂದ ಸ್ತ್ರೀಯರು ನೋಡಿದರು. ಶ್ರೀಕೃಷ್ಣದೇವನ ಪಾದಗಳು ತಮ್ಮನ್ನು ಸ್ಮರಿಸುವವರಿಗೆ ಯುದ್ಧಗಳಲ್ಲಿ ಜಯವನ್ನು ಕೊಡುತ್ತಿವೆ. ಆ ಪಾದಗಳನ್ನು ತಮ್ಮ ಮೊಲೆಗಳಲ್ಲಿ ಸ್ತ್ರೀಯರು ಧರಿಸಿದರು. ಗೋಪಿಕಾಸ್ತ್ರೀಯರ ಗರ್ವವು ಅಡಗುವ ವರೆಗೆ ಶ್ರೀಕೃಷ್ಣದೇವನು ಅದೃಶ್ಯನಾಗಿದ್ದನು. ಈಗ ಆ ಗರ್ವವು ಅಡಗಿತು. ಶ್ರೀಕೃಷ್ಣದೇವನು ಸಿಕ್ಕಿದನು. ಶ್ರೀಕೃಷ್ಣದೇವನು ಸಿಕ್ಕಿದ ಮೇಲೆ ಅವನೊಡನೆ ವಿಹರಿಸುತ್ತಿರುವ ಯುಗಗಳನ್ನೂ ಕ್ಷಣವೆಂದು ಭಾವಿಸಿದರು.

## ರಾಸಲೀಲೆಯು ತತ್ವಜ್ಞಾನಪೂರ್ಣವಾದದ್ದು

ಗೋಪಿಕಾಸ್ತ್ರೀಯರು ಮುಗುಳ್ನಗೆಯಿಂದ ಯುಕ್ತರಾಗಿ ಶ್ರೀಕೃಷ್ಣದೇವನನ್ನು ಕಣ್ಣುಗಳಿಂದ ನೋಡಿದರು. ಇದು ಮೋಕ್ಷಕ್ಕೆ ಪೂರ್ವದಲ್ಲಿ ಏರ್ಪಡುವ ಅಪರೋಕ್ಷಜ್ಞಾನವೆಂದು ಹೇಳಬಹುದು. ಗೋಪಿಕಾಸ್ತ್ರೀಯರ ಎದೆಯಲ್ಲಿರುವ ಕುಪ್ಪಸಗಳ ಗಂಟನ್ನು ಬಿಚ್ಚಿದನು. ಇದೇ ಜೀವರ ಸ್ವರೂಪದೇಹದ ಮೇಲಿರುವ ಪ್ರಕೃತಿಬಂಧನವನ್ನು ಬಿಡಿಸಿದಂತಿತ್ತು. ಶ್ರೀಕೃಷ್ಣದೇವನು ಈ ಸ್ತ್ರೀಯರೊಡನೆ ವಿಹರಿಸಿ ವಿಚಿತ್ರವಾದ ಆನಂದವನ್ನು ಕೊಟ್ಟನು. ಇದೇ ಮುಕ್ತಿಯಲ್ಲಿ ಎಲ್ಲಾ ಮುಕ್ತರಿಗೂ ಏರ್ಪಡುತ್ತಿರುವ ಸ್ವರೂಪಸುಖದ ಅನುಭವದಂತಿತ್ತು. ಆ ಗೋಪಿಕಾಸ್ತ್ರೀಯರನ್ನು ಸೆಳೆದು ಗಟ್ಟಿಯಾಗಿ ಆಲಿಂಗಿಸಿದನು. ಆ ಆಲಿಂಗನದಿಂದ ಸ್ತ್ರೀಯರ ದೇಹವನ್ನು ತನ್ನ ದೇಹದೊಡನೆ ಒಂದೇ ದೇಹದಂತೆ ಮಾಡಿಕೊಂಡನು. ಇದೇ ಸಾಯುಜ್ಯ ಮೋಕ್ಷ ಅಂದರೆ ಶ್ರೀಕೃಷ್ಣದೇವನ ದೇಹದಲ್ಲಿ ಒಂದಾಗುವದು ಎಂಬ ಮುಕ್ತಿಯು ಏರ್ಪಟ್ಟಂತಾಯಿತು. ಗೋಪಿಕಾಸ್ತ್ರೀಯರನ್ನು ಗಟ್ಟಿಯಾಗಿ ಆಲಿಂಗಿಸಿದಾಗ ತನ್ನ ದೇಹದಲ್ಲಿರುವ ಗಂಧವೂ ತಿಲಕಗಳೂ ಗೋಪಿಕಾಸ್ತ್ರೀಯರ ದೇಹಗಳಲ್ಲಿ ಅಂಟಿಕೊಂಡವು. ಇದರಿಂದ ಸಾಧರ್ಮ್ಯವೋ ಅಂದರೆ ಪರಮಾತ್ಮನ ಅಲಂಕಾರಾದಿಗಳಿಗೆ ಸಮಾನವಾದ ಅಲಂಕಾರಾದಿಗಳನ್ನು ಧರಿಸುವಿಕೆ ಎಂಬ ಮುಕ್ತಿಯನ್ನು ಪಡೆಯುವಂತೆ ಮಾಡಿದನು. ಆ ಸ್ತ್ರೀಯರ ಹೆಗಲುಗಳಲ್ಲಿ ತನ್ನ ಕೈಗಳನ್ನೂ ತನ್ನ ಹೆಗಲುಗಳಲ್ಲಿ ಆ ಸ್ತ್ರೀಯರ ಕೈಗಳನ್ನೂ ಇಟ್ಟುಕೊಂಡು ಓಡಾಡಿದನು. ಇದರಿಂದ ಸಾರ್ಷ್ಟಿಮೋಕ್ಷ ಅಂದರೆ ಮುಕ್ತಿಯಲ್ಲಿ ಶ್ರೀಹರಿಯೂ ಭಕ್ತರೂ ಮಿತ್ರರಂತೆ ಅನ್ಯೋನ್ಯ ಹೆಗಲುಗಳಲ್ಲಿ ಕೈಗಳನ್ನಿಟ್ಟುಕೊಂಡು ಓಡಾಡುವಿಕೆ ಎಂಬ ಮುಕ್ತಿಯನ್ನು ಪಡೆಯುವಂತೆ ಮಾಡಿದನು. ಶ್ರೀಕೃಷ್ಣದೇವನು ಪರಬ್ರಹ್ಮನಲ್ಲವೇ? ಇವನು ಮಾಡಿದ ರಾಸಲೀಲೆಯು ಕೇವಲ ಕಾಮುಕರ ಲೀಲೆಯಲ್ಲ. ಹಾಗಾದರೆ ವ್ಯರ್ಥವಾದೀತು ಹಿಂದೆ ಹೇಳಿದ ತತ್ವಗಳನ್ನು ತಿಳಿಸುವುದಕ್ಕಾಗಿಯೇ ಶ್ರೀಕೃಷ್ಣದೇವನು ಮೇಲ್ಕಂಡ ಲೀಲೆಗಳನ್ನೆಲ್ಲಾ ಮಾಡಿರುವನು.

ಈ ಗೋಪಿಕಾಸ್ತ್ರೀಯರ ಜನ್ಮವು ಸಾರ್ಥಕವಾದುದು. ಅವರೆಲ್ಲರಿಗೂ ಅಭಿಮತವಾದ ರಾಸಕ್ರೀಡೆಯನ್ನು ಮಾಡುವುದಾಗಿ ಶ್ರೀಕೃಷ್ಣದೇವನು ಸಂಕಲ್ಪಿಸಿದನು. ಹಿಂದೆ ಶ್ರೀಕೃಷ್ಣದೇವನು ಅದೃಶ್ಯನಾಗಿದ್ದಾಗ ಇವರೆಲ್ಲರಿಗೂ ಬದುಕುವುದು ತುಂಬಾ ಅನಿಷ್ಟವಾಗಿತ್ತು. ಈಗ ಶ್ರೀಕೃಷ್ಣದೇವನ ಸಮಾಗಮ ಕಾಲದಲ್ಲಿ ಬದುಕುವುದೇ ತುಂಬಾ ಇಷ್ಟವಾಯಿತು.

# ರಾಸಕ್ರೀಡೆಯನ್ನು ಮಾಡಿದ್ದು

ಅನ್ಯೋನ್ಯವಾಗಿ ಕುತ್ತಿಗೆಗಳನ್ನು ಹಿಡಿದುಕೊಂಡು ಆಲಿಂಗಿಸಿದರು. ಉಗುರುಗಳಿಂದ ಗಾಯವನ್ನು ಮಾಡಿಕೊಂಡರು. ಮಧುರವಾದ ಮಾತುಗಳನ್ನು ಆಡಿಕೊಂಡರು. ಮೆಲ್ಲಮೆಲ್ಲನೆ ನಕ್ಕರು. ಚಂಚಲವಾದ ಕಡೆಗಣ್ಣುಗಳಿಂದ ನೋಡಿಕೊಂಡರು. ಮೆಲ್ಲಮೆಲ್ಲನೆ ತಂಗಾಳಿಯು ಬೀಸಿತು. ಸಂಗೀತವನ್ನು ಹಾಡಿದರು. ಚಂದ್ರನು ಬೆಳದಿಂಗಳಿನಿಂದ ಬೆಳಗಿದನು. ಆಲಿಂಗನ ಮುಂತಾದವುಗಳಿಂದಲೂ ತಂಗಾಳಿ ಮುಂತಾದವುಗಳಿಂದಲೂ ಶೃಂಗಾರರಸವು ಪುಷ್ಟಿಯನ್ನು ಪಡೆಯಿತು. ಅರಳಿದ ಪುಷ್ಪಗಳಿಂದ ಶೋಭಿಸುತ್ತಿರುವ ವೃಂದಾವನದಲ್ಲಿ ಗೋಪಿಕಾಸ್ತ್ರೀಯರಿಂದ ಸಹಿತನಾಗಿ ಶೃಂಗಾರರಸಭರಿತವಾದ ರಾಸೋತ್ಸವವನ್ನು ಶ್ರೀಕೃಷ್ಣದೇವನು ರಚಿಸಿದನು.

ಪರಮಪ್ರಿಯನಾದ ಶ್ರೀಕೃಷ್ಣದೇವನ ಎರಡು ಹೆಗಲುಗಳನ್ನೂ ತಮ್ಮ ಎರಡು ಕೈಗಳಿಂದಲೂ ಗಟ್ಟಿಯಾಗಿ ಹಿಡಿದರು. ಶ್ರೀಕೃಷ್ಣದೇವನಲ್ಲಿರುವ ಪ್ರೇಮಾತಿರೇಕದಿಂದ ಆ ಎರಡು ಕೈಗಳಲ್ಲಿಯೂ ರೋಮಗಳು ಎದ್ದು ನಿಂತವು. ಬಲಭಾಗದಲ್ಲಿಯೂ ಎಡಭಾಗದಲ್ಲಿಯೂ ಶ್ರೀಕೃಷ್ಣದೇವನನ್ನು ಆಲಿಂಗಿಸಿದರು. ಈ ಆಲಿಂಗನವನ್ನು ಮಾಡುತ್ತಿರುವುದನ್ನು ನೋಡಿದರೆ ತಮ್ಮನ್ನು ಇನ್ನೊಮ್ಮೆ ಬಿಟ್ಟು ಓಡಿಹೋಗದಂತೆ ಮಾಡುವುದಕ್ಕೆ ಪ್ರಯತ್ನಿಸುತ್ತಿರುವಂತೆ ಕಾಣಿಸಿತು. ಮಂಡಲಾಕಾರವಾಗಿ ನಿಂತಿರುವ ಈ ಸ್ತ್ರೀಯರ ಮಧ್ಯದಲ್ಲಿ ಎಲ್ಲಾ ಸಿದ್ಧರುಗಳ ದೃಷ್ಟಿಗಳೂ ಒಟ್ಟುಗೂಡಿದವು. ಆ ದೃಷ್ಟಿಗಳು ಕದಲಲಿಲ್ಲ. ಶೃಂಗಾರರಸವೂ ಉಕ್ಕಿ ಬಂತು. ಆ ಶೃಂಗಾರರಸವನ್ನೂ ಸಿದ್ಧರ ದೃಷ್ಟಿಗಳನ್ನೂ ಹೊರಗೆ ಬಿಡಬಾರದೆಂಬ ಅಭಿಪ್ರಾಯದಿಂದ ಒಬ್ಬರ ನ್ನೊಬ್ಬರು ಹಿಡಿಯುತ್ತಾ ನರ್ತಿಸಿದರು.

ಒಬ್ಬೊಬ್ಬ ಸ್ತ್ರೀಯರ ಬಲಗಡೆಯಲ್ಲಿಯೂ ಎಡಗಡೆಯಲ್ಲಿಯೂ ಶ್ರೀಕೃಷ್ಣದೇವನ ಮೂರ್ತಿಗಳು ನಿಂತವು. ಶ್ರೀಕೃಷ್ಣದೇವನ ಬಲಗಡೆಯಲ್ಲಿಯೂ ಎಡಗಡೆಯಲ್ಲಿಯೂ ಗೋಪಿಕಾ ಸ್ತ್ರೀಯರು ನಿಂತರು. ಶ್ರೀಕೃಷ್ಣದೇವನು ತನ್ನ ಬಲಗೈಯಿಂದ ತನ್ನ ಬಲಭಾಗದಲ್ಲಿರುವ ಸ್ತ್ರೀಯ ಎಡಗೈಯನ್ನೂ ಎಡಗೈಯಿಂದ ತನ್ನ ಎಡಭಾಗದಲ್ಲಿರುವ ಸ್ತ್ರೀಯ ಬಲಗೈಯನ್ನು ಹಿಡಿದನು. ಒಬ್ಬೊಬ್ಬ ಸ್ತ್ರೀಯು ತನ್ನ ಬಲಭಾಗದಲ್ಲಿರುವ ಶ್ರೀಕೃಷ್ಣದೇವನ ಮೂರ್ತಿಯ ಎಡಗೈಯನ್ನೂ ತನ್ನ ಎಡಭಾಗದಲ್ಲಿರುವ ಶ್ರೀಕೃಷ್ಣದೇವನ ಬಲಗೈಯನ್ನೂ ಹಿಡಿದಳು. ತಮ್ಮ ಮಧ್ಯದಲ್ಲಿ ಯಾರಾದರೂ ಒಬ್ಬ ಸ್ತ್ರೀಯನ್ನು ಹಿಂದಿನಂತೆ ಶ್ರೀಕೃಷ್ಣದೇವನು ಕರೆದುಕೊಂಡು ಓಡಿ ಹೋಗಬಹುದೆಂಬ ಭಯದಿಂದಲೇ ಸ್ತ್ರೀಯರೆಲ್ಲರೂ ಹೀಗೆ ಅನ್ಯೋನ್ಯವಾಗಿ ಹಿಡಿದುಕೊಂಡರು. ಶ್ರೀಕೃಷ್ಣದೇವನ ರೂಪಗಳೂ ಈ ಏರ್ಪಾಡನ್ನು ಅನುಮೋದಿಸಿದವು.

ಎಲ್ಲಾ ಸ್ತ್ರೀಯರು ತಮ್ಮ ಕಣ್ಣುಗಳಿಂದ ಸುತ್ತಲೂ ಇರುವ ಎಲ್ಲಾ ರಸವಿಶೇಷಗಳ ಸನ್ನಿವೇಶಗಳನ್ನು ನೋಡಿದರು. ಅವರ ಎದೆಯಲ್ಲಿರುವ ಕುಪ್ಪಸಗಳ ಗಂಟುಗಳೂ ತಲೆಯಲ್ಲಿರುವ ಜುಟ್ಟುಗಳ ಗಂಟುಗಳೂ ಸೊಂಟದಲ್ಲಿರುವ ಸೀರೆಗಳ ಗಂಟುಗಳೂ ಶಿಥಿಲವಾಗುತ್ತಾ ಬಂದವು. ಇಷ್ಟು ಗಂಟುಗಳೆಲ್ಲವೂ ಶಿಥಿಲವಾಗುತ್ತಿರುವಾಗ ಸರ್ವರಲ್ಲಿರುವ ಸಂಸಾರವೆಂಬ ಒಂದೇ ಒಂದುಗಂಟು ಶಿಥಿಲವಾಗುವುದರಲ್ಲಿ ಆಶ್ಚರ್ಯವಿಲ್ಲ. ಸರ್ವಸ್ತ್ರೀಯರ ಆಭರಣಗಳೂ ನಾನಾ ವಿಧವಾಗಿ ಧ್ವನಿಸಿದವು. ಸರ್ವರೂ ಮೈಮರೆತು ಕುಣಿದರು. ಹೀಗೆ ಕುಣಿಯುತ್ತಿರುವುದನ್ನು ಸಿದ್ಧರೇ ಮೊದಲಾದವರು ಎವೆಯಿಕ್ಕದೆ ನೋಡುತ್ತಿದ್ದರು. ಅವರ ಸ್ಥೈರ್ಯಗಳೆಲ್ಲವೂ ಈ ಸ್ತ್ರೀಯರ ಕಾಲುಗಳ ಅಡಿಯಲ್ಲಿ ಬಿದ್ದು ಪುಡಿ ಪುಡಿಯಾದಂತೆ ತೋರಿತು.

ಸರ್ವಸ್ತ್ರೀಯರೂ ನಾನಾ ರೂಪಿಯಾದಶ್ರೀಕೃಷ್ಣದೇವನ ಹೆಗಲಿನಲ್ಲಿ ತಮ್ಮ ಕೈಗಳ ಮಾಲೆಗಳನ್ನು ಸಮರ್ಪಿಸಿದರು. ಸಂತೋಷಪರವಶರಾಗಿ ನಾನಾ ವಿಧವಾದ ಲೀಲೆಗಳನ್ನು ಮಾಡುತ್ತಾ ನರ್ತನ ಮಾಡಿದರು. ತಮ್ಮ ಕಾರ್ಯಗಳೆಲ್ಲಾ ಕೈಗೂಡಿದ ಮೇಲೆ ಆನಂದಮೂರ್ತಿಯಾದ ಶ್ರೀಕೃಷ್ಣದೇವನನ್ನು ಆಲಿಂಗಿಸಿಕೊಂಡು ನರ್ತನ ಮಾಡುವುದರಲ್ಲಿ ಆಶ್ಚರ್ಯವೇನಿದೆ.

ಒಬ್ಬ ಸ್ತ್ರೀಯು ತನ್ನ ಎರಡು ಕೈಗಳಿಂದ ಮುಕ್ತರಾದ ಸರ್ವರಿಗೂ ಯಾವಾಗಲೂ ಸ್ವಾಮಿಯಾಗಿರುವ ಶ್ರೀಕೃಷ್ಣದೇವನ ಕಂಠವನ್ನು ಬಿಗಿದು ಆಲಿಂಗಿಸಿದಳು. ಆಗ ಅವಳ ತಲೆಯಲ್ಲಿರುವ ಜುಟ್ಟಿನ ಗಂಟು ಬಿಚ್ಚಿ ಹೋಯಿತು. ಬಿಚ್ಚಿದ ತಲೆಯ ಗಂಟನ್ನು ಪುನಃ ಕಟ್ಟುವುದಕ್ಕೆ ಅವಳೂ ಪ್ರಯತ್ನಿಸಲಿಲ್ಲ. ನಿತ್ಯಮುಕ್ತನೂ ಸರ್ವಕಾಲದಲ್ಲಿಯೂ ಮುಕ್ತಸಮೂಹಕ್ಕೆ ಅಧಿಪತಿಯೂ ಆಗಿರುವ ಶ್ರೀಕೃಷ್ಣದೇವನನ್ನು ಕೈಗಳಿಂದ ಕಟ್ಟಿಕೊಳ್ಳುವುದು ಮಹಾಕಾರ್ಯವಲ್ಲವೇ? ಇಂತಹ ಮಹಾಕಾರ್ಯವನ್ನು ಸಾಧಿಸಿದವಳು ಆಗಲೇ ಬಿಚ್ಚಿ ಹೋಗಿರುವ ತಲೆಯ ಗಂಟನ್ನು ಹಾಕುವ ಅಲ್ಪ ಕಾರ್ಯವನ್ನು ಮಾಡುವ ವಿಷಯದಲ್ಲಿ ಔದಾಸೀನ್ಯವನ್ನು ವಹಿಸುವುದರಲ್ಲಿ ಆಶ್ಚರ್ಯವೇನಿದೆ?

ತಲೆಯ ಕೂದಲುಗಳ ಗಂಟುಗಳೂ ಕುಪ್ಪಸಗಳ ಗಂಟುಗಳೂ ಸೀರೆಗಳ ಗಂಟುಗಳೂ ಶಿಥಿಲವಾಗುತ್ತಾ ಬಂದವು. ಆ ಗಂಟುಗಳನ್ನೆಲ್ಲಾ ಬಿಗಿಯುವುದಕ್ಕೆ ಪ್ರಯತ್ನಿಸಿದರೆ ಆ ಬಿಗಿಯುವ ಕಾಲದಲ್ಲಿ ಶ್ರೀಕೃಷ್ಣದೇವನ ಆಲಿಂಗನವನ್ನು ಮಾಡುವುದು ನಿಂತು ಹೋಗುತ್ತದೆ. ಈ ಭಯದಿಂದ ಸರ್ವಸ್ತ್ರೀಯರೂ ಆ ಕಾಲದಲ್ಲಿ ಶಿಥಿಲವಾದ ತಮ್ಮ ತಲೆಕೂದಲುಗಳ ಗಂಟುಗಳೇ ಮೊದಲಾದವುಗಳನ್ನೂ ಸರಿಪಡಿಸಿಕೊಳ್ಳಲು ಯತ್ನಿಸಲಿಲ್ಲ. ಆದರೆ ಇಷ್ಟೇ ಕಾರಣವೆಂದು ನಮಗೆ ತೋರುವುದಿಲ್ಲ. ರತಿಕ್ರೀಡೆಯು ಮುಗಿದ ಮೇಲೆ ಸರಿಪಡಿಸಿಕೊಳ್ಳಬೇಕಾದ ಈ ಗಂಟುಗಳನ್ನು ರತಿಕ್ರೀಡೆಯ ಮಧ್ಯದಲ್ಲಿ ಸರಿಪಡಿಸಿಕೊಳ್ಳುವುದು ಯುಕ್ತವಲ್ಲ ಎಂದು ತಿಳಿದೇ ಅವರೆಲ್ಲರೂ ರತಿಕ್ರೀಡೆಯ ಮಧ್ಯದಲ್ಲಿ ತಮ್ಮಗಂಟುಗಳನ್ನು ಸರಿಪಡಿಸಿಕೊಳ್ಳಲು ಯತ್ನಿಸಿಲ್ಲವೆಂದೇ ನಾವು ಭಾವಿಸುವೆವು.

ಒಬ್ಬ ಸ್ತ್ರೀಯು ಶ್ರೀಕೃಷ್ಣದೇವನ ಕೈಯನ್ನು ತನ್ನ ಕೈಯಿಂದ ಹಿಡಿದಳು. " ಎಲೈ ಕೈಯೇ, ನೀನು ಹಿಂದೆಯೇ ನನ್ನನ್ನು ಆಲಿಂಗಿಸಿದಿ. ಕೊನೆಗೆ ನಿನ್ನನ್ನು ನಂಬಿಕೊಂಡಿರುವ ನನ್ನನ್ನು ಬಿಟ್ಟು ಬಿಟ್ಟೆ. ಕರುಣಾಸಮುದ್ರನೂ ಕಮಲಗಳಂತೆ ಸುಂದರವಾದ ನೇತ್ರಗಳಿಂದ ಯುಕ್ತನೂ ಆಗಿರುವ ಶ್ರೀಕೃಷ್ಣದೇವನ ಕೈಗಳು ನನ್ನನ್ನು ವಂಚಿಸಬಾರದು'' ಎಂದು ಪ್ರಾರ್ಥಿಸುತ್ತಾ ಆ ಕೈಯನ್ನು ಚುಂಬಿಸಿದಳು.

ಒಬ್ಬ ಸ್ತ್ರೀಯ ಪುಣ್ಯವನ್ನು ಕುರಿತು ಶ್ರೀಕೃಷ್ಣದೇವನು ತುಂಬಾ ಹೊಗಳಿದನು. ಇದನ್ನು ನೋಡುತ್ತಿದ್ದ ಸಕಲ ಸಿದ್ಧರೂ ಅವಳನ್ನು ತುಂಬಾ ಗೌರವಿಸಿದರು. ಅವಳ ಧ್ವನಿಯು ವೀಣೆಯ ಧ್ವನಿಯಂತೆ ಅತ್ಯಂತ ಮನೋಹರವಾಗಿತ್ತು. ಆ ಧ್ವನಿಯಿಂದ ಶ್ರೀಕೃಷ್ಣದೇವನು ಹಾಡಿದಂತೆ ಅತಿ ಮಧುರವಾಗಿ ಹಾಡಿದಳು. ಅವಳ ಹಾಡನ್ನು ಕೇಳಿದ ಸರ್ವರೂ ಸಂಗೀತದಲ್ಲಿ ಅಪೂರ್ವವಾದ ರಾಗವಿಶೇಷಗಳನ್ನು ತಿಳಿದರು. ಅವಳ ಹಾಡನ್ನು ಕೇಳಿದ ಶ್ರೀಕೃಷ್ಣದೇವನು ತಾನೂ ಅವಳೊಡನೆ ಹಾಡಿದನು.

ಶ್ರೀಕೃಷ್ಣದೇವನು ಮಧುರ ಧ್ವನಿಯಿಂದ ಹಾಡುತ್ತಿದ್ದನು. ಅವನ ಸ್ವರವನ್ನು ಅನುಸರಿಸಿದ ಸ್ವರದಿಂದ ಒಬ್ಬ

ಗೋಪಿಕಾಸ್ತ್ರೀಯು ಹಾಡುತ್ತಿದ್ದಳು. ಕೋಗಿಲೆಯ ಧ್ವನಿಗಿಂತಲೂ ಅತಿಮಧುರವಾದ ಅವಳ ಧ್ವನಿಯನ್ನು ಕೇಳಿದ ಸರ್ವರು ಮೈಮರೆತು ಕೇಳುತ್ತಿದ್ದರು. ಅವರೆಲ್ಲರೂ ಪರವಶರಾದರು. ಅವರಿಗೆ ಈ ಸಂಗೀತಪಾರವಶ್ಯದಿಂದ ಪ್ರಪಂಚವೇ ಮರೆತು ಹೋಯಿತು. ಈ ಸಂದರ್ಭವನ್ನು ತಿಳಿದ ಆ ಗೋಪಿಕಾಸ್ತ್ರೀಯು ಎಲ್ಲರ ಮಧ್ಯದಲ್ಲಿ ಸ್ವಲ್ಪವೂ ಸಂಕೋಚವಿಲ್ಲದೆ ಶ್ರೀಕೃಷ್ಣದೇವನನ್ನು ಚುಂಬಿಸಿದಳು.

" ಓ ಶ್ರೀಕೃಷ್ಣದೇವ, ನೀನು ಸಕಲೇಷ್ಟಾರ್ಥಗಳಿಂದಲೂ ಪೂರ್ಣನಾಗಿರುವಿ. ನಮ್ಮಂತಹ ಅಲ್ಪಸ್ತ್ರೀಯರಿಂದ ನಿನಗೆ ಲಾಭವೂ ಇಲ್ಲ. ಆದರೂ ನಾನಾ ವಿಧವಾದ ಲೀಲೆಗಳನ್ನೇ ತೋರಿಸುತ್ತಾ ನಮ್ಮನ್ನು ಸಂತೋಷಪಡಿಸುತ್ತಿರುವಿ" ಎಂದು ಹೇಳುತ್ತಾ ಒಬ್ಬ ಗೋಪಿಕಾಸ್ತ್ರೀಯು ಶ್ರೀಕೃಷ್ಣದೇವನ ಕೈಯನ್ನು ಹಿಡಿದು ತನ್ನ ಎದೆಯ ಮೇಲೆ ಇಟ್ಟುಕೊಂಡಳು. ಆ ಕೈಯಿಂದ ತನ್ನ ಮೊಲೆಗಳನ್ನು ಒತ್ತಿದಳು. ಮೊಲೆಗಳ ಮೇಲಿರುವ ಕುಂಕುಮವು ಶ್ರೀಕೃಷ್ಣದೇವನ ಕೈಯಲ್ಲಿ ಗಟ್ಟಿಯಾಗಿ ಅಂಟಿಕೊಂಡಿತು. ಆ ಕೈಯಲ್ಲಿರುವ ಕುಂಕುಮವನ್ನು ನೋಡಿದ ಇತರ ಸ್ತ್ರೀಯರಿಗೆ ಹೊಟ್ಟೆಕಿಚ್ಚು ಏರ್ಪಟ್ಟಿತು. ಇದನ್ನು ತಿಳಿದ ಶ್ರೀಕೃಷ್ಣದೇವನು ಆ ಕೈಯನ್ನು ಅವಳ ಎದೆಯಲ್ಲಿಯೇ ಇಟ್ಟನು.

ಗೋಪಿಕಾಸ್ತ್ರೀಯರು ಅಪೂರ್ವವಾದ ಸಂಗೀತವನ್ನು ಸುಸ್ವರದಿಂದ ಹಾಡಿದರು. ಆ ಸಂಗೀತದಿಂದ ರಾಸಲೀಲೆಯು ವಿಶೇಷವಾಗಿ ಶೋಭಿಸಿತು. ಆ ರಾಸಲೀಲೆಯಲ್ಲಿ ಗೋಪಿಕಾಸ್ತ್ರೀಯರ ಸಂಖ್ಯೆಗೆ ಸಮವಾದ ಸಂಖ್ಯೆಯುಳ್ಳವನಾಗಿ ಶ್ರೀಕೃಷ್ಣದೇವನು ಶೋಭಿಸಿದನು. ಮಳೆಗಾಲದ ಮೇಘದಂತೆ ಸರ್ವರಿಗೂ ಬೇಕಾದ ಇಷ್ಟಾರ್ಥಗಳನ್ನು ಮಳೆಯಂತೆ ಸುರಿಸಿದನು. ದೇವತೆಗಳೆಲ್ಲರೂ ಈ ವೈಭವವನ್ನು ನೋಡಿ ಹೊಗಳಿದರು.

## ರಾಸವಿಲಾಸ ವೈಭವ

ಪರಮಸುಂದರಿಯರಾದ ಗೋಪಿಕಾಸ್ತ್ರೀಯರು ಮಂಡಲಾಕಾರವಾಗಿ ನಿಂತರು. ಅವರ ಕಿವಿಗಳಲ್ಲಿರುವ ಬೆಂಡೋಲೆಗಳು ಅತ್ಯಂತ ಪ್ರಕಾಶಿಸಿದವು. ಆ ಪ್ರಕಾಶವು ರಾತ್ರಿಕಾಲದಲ್ಲಿಯೂ ಆ ಪ್ರದೇಶವನ್ನೆಲ್ಲಾ ಬೆಳಕಿನಿಂದ ಯುಕ್ತವಾಗುವಂತೆ ಮಾಡಿತು. ಎಲ್ಲಾ ಸ್ತ್ರೀಯರ ಕಮಲಗಳಂತೆ ಸುಂದರವಾದ ಮುಖಗಳು ತಮ್ಮ ಪಕ್ಕದಲ್ಲಿರುವ ಶ್ರೀಕೃಷ್ಣದೇವನ ಕಪೋಲಗಳನ್ನು ಚುಂಬನ ಮಾಡುವ ವಿಷಯದಲ್ಲಿ ತುಂಬಾ ಆಸೆಯಿಂದ ಯುಕ್ತವಾದವು. ಎಲ್ಲಾ ಮುಖಗಳಲ್ಲಿಯೂ ಅನುರಾಗವು ಹರಿಯಲು ಆರಂಭಿಸಿತು. ನರ್ತನ ಮಾಡುವ ವೇಗದಿಂದ ಎಲ್ಲಾ ಸ್ತ್ರೀಯರ ತಲೆಗಳಲ್ಲಿರುವ ಜಡೆಗಳ  ಗಂಟುಗಳು ಬಿಚ್ಚಿ ಹೋಗುತ್ತಾ ಬಂದವು. ಎಲ್ಲಾ ಸ್ತ್ರೀಯರೂ ಆನಂದರಸವನ್ನು ಸುರಿಸುತ್ತಿರುವ ಶ್ರೀಕೃಷ್ಣದೇವನನ್ನು ತಮ್ಮ ಸಂತೋಷವನ್ನು ವೃದ್ಧಿ ಮಾಡಬೇಕೆಂದು ಪ್ರಾರ್ಥಿಸುತ್ತಾ ಬಂದರು. ಸರ್ವಸ್ತ್ರೀಯರ ದೇಹಗಳಲ್ಲಿಯೂ ಅರ್ಧಚಂದ್ರನಂತಿರುವ ಶ್ರೀಕೃಷ್ಣದೇವನ ಉಗುರುಗಳ ಗುರುತುಗಳು ಕಾಣಿಸಲು ಆರಂಭಿಸಿದವು. ಸರ್ವಸ್ತ್ರೀಯರೂ ಶ್ರೀಕೃಷ್ಣದೇವನ ಲೀಲೆಗಳನ್ನು ಎಡೆಬಿಡದೆ ಗಟ್ಟಿಯಾಗಿ ಹಾಡಿದರು. ವೃಂದಾವನದಲ್ಲಿರುವ ಮೃಗಗಳೆಲ್ಲವೂ ಈ ರಾಸಲೀಲೆಯನ್ನು ಎದ್ದು ನಿಂತಿರುವ ರೋಮಗಳಿಂದ ಯುಕ್ತವಾಗಿ ಮೈಮರೆತು ನೋಡಿದವು. ಆಕಾಶದಲ್ಲಿ ಎಲ್ಲೆಲ್ಲಿಯೂ ದೇವತೆಗಳು ಗುಂಪುಗುಂಪಾಗಿ ಸಂತೋಷಪಾರವಶ್ಯದಿಂದ ಶ್ರೀಕೃಷ್ಣದೇವನ ಮಹಿಮೆಗಳನ್ನು ಹೇಳುತ್ತಾ ಸುತ್ತಿಕೊಂಡರು.

ಆ ಪ್ರದೇಶದಲ್ಲಿರುವ ಮಂಟಪಗಳೆಲ್ಲವೂ ಅತ್ಯುತ್ತಮವಾದ ರತ್ನಗಳಿಂದ ಖಚಿತವಾಗಿದ್ದವು. ಆ ಮಂಟಪಗಳಲ್ಲಿ ಸ್ತ್ರೀಯರೆಲ್ಲರೂ ರಾಸಕ್ರೀಡೆಯನ್ನು ಮಾಡಿದರು. ಆ ಸ್ತ್ರೀಯರ ಕಾಲುಗಳಲ್ಲಿ ಪದ್ಮರಾಗಮಣಿಗಳಂತೆ ಅಂಗಾಲುಗಳೂ ಮುತ್ತುಗಳಂತೆ ಉಗುರುಗಳೂ ಶೋಭಿಸಿದವು. ಅದೇ ಕಾಲುಗಳಲ್ಲಿ ನರ್ತನಕಾಲದಲ್ಲಿ ನರ್ತನ ಮಾಡುತ್ತಿರುವ ನಾನಾ ರತ್ನಖಚಿತವಾದ ಕಾಲುಗಡಗಗಳೂ ಪ್ರಕಾಶಿಸಿದವು. ಇವುಗಳಿಂದ ಆ ಕ್ರೀಡಾಭೂಮಿಯ ವೈಭವವನ್ನು ಯಾರಿಂದಲೂ ವರ್ಣಿಸಲು ಸಾಧ್ಯವಿಲ್ಲದಂತಾಯಿತು.

ವೇಣುವಾದ್ಯದಲ್ಲಿ ಅತ್ಯಂತ ನಿಪುಣವಾದ ಶ್ರೀಕೃಷ್ಣದೇವನು ವೃಂದಾವನವಾಸಿಗಳಾದ ಸ್ತ್ರೀಯರಿಗೆ ಮರ್ಯಾದೆಯನ್ನು ಕೊಡುವುದಕ್ಕಾಗಿ ಅವರ ಮಧ್ಯದಲ್ಲಿ ಅಸಂಖ್ಯ ರೂಪಗಳಿಂದ ವೇಣುಗಾನವನ್ನು ಮಾಡುತ್ತಿರುವನು. ಬ್ರಹ್ಮ ವಾಯು ರುದ್ರ ಮುಂತಾದ ಸಕಲ ದೇವತೆಗಳು ತಮ್ಮ ತಮ್ಮ ಪತ್ನಿಯರಿಂದಲೂ ಪರಿವಾರಗಳಿಂದಲೂ ಸಹಿತರಾಗಿ ತಲೆಯನ್ನು ಬಗ್ಗಿಸುತ್ತಿರುವರು. ಅವರೆಲ್ಲರ ಕಣ್ಣುಗಳಿಗೆ ದೊಡ್ಡ ಉತ್ಸವವನ್ನು ನೋಡಿದ ತೃಪ್ತಿಯನ್ನು ಈ ಉತ್ಸವವು ಕೊಡುತ್ತಿದೆ. ಸರ್ವರೂ ತಾಳಗಳಿಗೆ ಅನುಗುಣವಾಗಿ ತಮ್ಮ ತಮ್ಮ ಹೆಜ್ಜೆಗಳನ್ನಿಟ್ಟರು. ಸುಂದರವಾದ ಸಂಗೀತಗಳನ್ನು ಹಾಡಿದರು. ಕಡೆಗಣ್ಣುಗಳ ನೋಟ, ಚುಂಬನ, ಮುಗುಳ್ನಗೆ ಮುಂತಾದ ವಿಲಾಸಗಳ ಸಮೂಹಗಳನ್ನು ತೋರಿಸಿದರು. ಪಕ್ಷಿಗಳು ಮೃಗಗಳು ಮುಂತಾದ ಚಲಿಸುವ ಜಂಗಮಜೀವರನ್ನೂ, ಮರಗಳು ಪರ್ವತಗಳು ಮುಂತಾದ ಚಲಿಸದಿರುವ ಸ್ಥಾವರಜೀವರನ್ನೂ ಈ ರಾಸಲೀಲೆಯು ತೃಪ್ತಿಪಡಿಸಿತು. ಶ್ರೀಕೃಷ್ಣದೇವನು ಕರುಣೆಯಿಂದ ಸರ್ವರನ್ನೂ ನೋಡಿದನು. ಈ ಕೃಪಾದೃಷ್ಟಿಯೇ ಸರ್ವರಿಗೂ ಅಮೃತದಂತೆ ತೃಪ್ತಿಕರವಾಗಿತ್ತು.

ಇಂದ್ರನೀಲಮಣಿಯಂತೆ ನೀಲವಾದ ದೇಹದಿಂದ ಯುಕ್ತನಾದ ಶ್ರೀಕೃಷ್ಣದೇವನ ಅಸಂಖ್ಯ ಮೂರ್ತಿಗಳು ಸ್ತ್ರೀಯರ ಪಾರ್ಶ್ವಗಳಲ್ಲಿ ಶೋಭಿಸುತ್ತಿವೆ. ಶುದ್ಧ ಭಂಗಾರದ ಮಣಿಗಳಂತೆಯೂ ಮುತ್ತುಗಳ ಮಣಿಗಳಂತೆಯೂ ಹೊಳೆಯುತ್ತಿರುವ ಅಸಂಖ್ಯಸ್ತ್ರೀಯರು ಅಸಂಖ್ಯರೂಪಗಳನ್ನು ಧರಿಸಿರುವ ಶ್ರೀಕೃಷ್ಣದೇವನ ಪಾರ್ಶ್ವಗಳಲ್ಲಿ ಶೋಭಿಸುತ್ತಿರುವರು. ಸಂತುಷ್ಟನಾದ ಶ್ರೀಕೃಷ್ಣದೇವನ ಕೈಗಳನ್ನು ಸ್ತ್ರೀಯರ ಕೈಗಳು ಹಿಡಿದಿವೆ. ಈ ಕೈಗಳು ಶ್ರೇಷ್ಠವಾದ ಹಗ್ಗದಂತಿವೆ. ಇದನ್ನೆಲ್ಲವನ್ನೂ ನೋಡುತ್ತಿರುವಾಗ ಇಂದ್ರನೀಲಮಣಿಗಳನ್ನೂ ಸುವರ್ಣಮಣಿಗಳನ್ನೂ ಮುತ್ತುಗಳ ಮಣಿಗಳನ್ನೂ ನಾನಾ ವರ್ಣಗಳಿಂದ ಯುಕ್ತವಾಗಿರುವ ಹಗ್ಗದಲ್ಲಿ ಜೋಡಿಸಿ ಮಾಡಿರುವ ಅದ್ಭುತವಾದ ಮಾಲೆಯಂತೆ ಕಾಣಿಸಿತು.

ಶ್ರೀಕೃಷ್ಣದೇವನ ಎದೆಯಲ್ಲಿ ಮುತ್ತುಗಳ ಮಾಲೆಯು ಶೋಭಿಸುತ್ತಿದೆ . ಅವನ ಕಾಂತಿಯು ಎಲ್ಲಾ ದಿಕ್ಕುಗಳಲ್ಲಿಯೂ ವ್ಯಾಪಿಸಿದೆ. ನೂರು ಮನ್ಮಥರ ಕಾಂತಿಗಳಿಗಿಂತಲೂ ಅಧಿಕವಾದ ಕಾಂತಿಗಳಿಂದ ಶೋಭಿಸುತ್ತಿರುವನು. ಶರತ್ಕಾಲದ ಕಮಲಗಳಂತೆ ನಿರ್ಮಲವಾದ ಕಣ್ಣುಗಳಿಂದ ಪ್ರಕಾಶಿಸುತ್ತಿರುವನು. ಸಕಲಾಭರಣಗಳನ್ನೂ ಧರಿಸಿರುವನು. ಇಂತಹ ಲಕ್ಷ್ಮೀ ಪತಿಯಿಂದ ಶೋಭಿಸುತ್ತಿರುವ ಈ ರಾಸಲೀಲೆಯ ಸೌಭಾಗ್ಯವನ್ನು ವರ್ಣಿಸಲು ಯಾರಿಂದಲೂ ಸಾಧ್ಯವಿಲ್ಲ.

ಪತ್ನಿಸಮೇತರಾದ ಎಲ್ಲಾ ದೇವತೆಗಳೂ ವಿಮಾನಗಳಲ್ಲಿ ಕುಳಿತು ಬಂದಿರುವರು. ನಾನಾ ವಿಧವಾದ ಬಣ್ಣಗಳಿಂದ ಯುಕ್ತವಾದ ಅವರ ವಿಮಾನಗಳೆಲ್ಲವೂ ಒಂದಕ್ಕೊಂದು ಸೇರಿದಂತೆ ಸಾಲುಸಾಲಾಗಿ ನಿಂತಿರುವವು.

ಆ ವಿಮಾನಗಳನ್ನು ನೋಡಿದಾಗ ರಾಸಲೀಲಮಂಟಪದ ಮೇಲೆ ವಸ್ತ್ರಗಳಿಂದ ಮೇಲ್ಕಟ್ಟನ್ನು ಕಟ್ಟಿದಂತಿತ್ತು. ಗಿಳಿ ಮುಂತಾದ ಪಕ್ಷಿಗಳೆಲ್ಲವೂ ಸಾಲು ಸಾಲಾಗಿ ನಿಂತು ಕೂಗಲು ಆರಂಭಿಸಿದವು. ಇವುಗಳನ್ನು ನೋಡಿದಾಗ ಸಂತುಷ್ಟರಾದ ಸ್ತುತಿಪಾಠಕರೆಲ್ಲರೂ ಒಟ್ಟುಗೂಡಿ ಸ್ತುತಿಸುತ್ತಿರುವಂತೆ ಕಾಣಿಸಿತು. ಸ್ವಲ್ಪ ಸ್ವಲ್ಪ ಮೇಘಗಳು ಮೆಲ್ಲ ಮೆಲ್ಲನೆ ಗರ್ಜಿಸಿದವು. ಈ ಮೇಘಗರ್ಜನೆಯು ಮದ್ದಳೆಯ ಧ್ವನಿಯಂತೆ ಕಾಣಿಸಿತು. ದೇವತೆಗಳೆಲ್ಲರೂ ಹೂವಿನ ಮಳೆಗಳನ್ನು ಸುರಿಸಿದರು. ದೇವಲೋಕದ ಪಾರಿಜಾತ ಮುಂತಾದ ಆ ಹೂಗಳು ಸ್ತ್ರೀಯರ ಹೆಜ್ಜೆಗಳಿಂದ ತುಳಿಯಲ್ಪಟ್ಟು ಪುಡಿ ಪುಡಿಯಾದವು. ಆ ಪುಷ್ಪಗಳ ಪುಡಿಗಳು ಎಲ್ಲಾ ಪ್ರದೇಶಗಳಲ್ಲಿಯೂ ವ್ಯಾಪಿಸಿದವು. ಕಮಲದ ಗಿಡಗಳ ಎಳೆಯ ಚಿಗುರುಗಳೆಲ್ಲವೂ ವಿಕಾಸವನ್ನು ಪಡೆಯುತ್ತಿವೆ. ಆ ಚಿಗುರುಗಳ ಮಧ್ಯದಲ್ಲಿರುವ ಕಮಲಗಳು ಶ್ರೀಕೃಷ್ಣದೇವನ ಪಾದದಲ್ಲಿರುವ ಕಾಂತಿಯಲ್ಲಿ ಅತ್ಯಲ್ಪವಾದ ಕಾಂತಿಯಿಂದ ಯುಕ್ತವಾಗಿವೆ. ಆ ಕಮಲಗಳ ವನದ ಮಧ್ಯದಲ್ಲಿ ಸಂಚರಿಸುತ್ತಾ ಬಂದಿರುವ ಗಾಳಿಯು ಮೆಲ್ಲ ಮೆಲ್ಲನೆ ಬೀಸುತ್ತಿದೆ. ಆ ಗಾಳಿಯು ತಣ್ಣಗಿದೆ. ಸರ್ಪಗಳು ಈ ಗಾಳಿಯನ್ನು ಭಕ್ಷಿಸುತ್ತಾ ಸಂತುಷ್ಟವಾಗುತ್ತಿವೆ ಮತ್ತು ಈ ಗಾಳಿಯಿಂದ ಬಿಸಿಲಿನ ಬೇಗೆಯು ಅಡಗುತ್ತಿದೆ. ಇಂತಹ ಗಾಳಿಯನ್ನು ಸೇವಿಸುತ್ತಾ ರಾಸಲೀಲೆಯನ್ನು ಮಾಡಿದರು.

ಈ ರಾಸಲೀಲೆಯನ್ನು ಮಾಡುತ್ತಿರುವಾಗ ಸುಂದರವಾದ ಕಾಲ್ಗಡಗ ಮುಂತಾದ ಆಭರಣಗಳು ಮನಸ್ಸುಗಳನ್ನು ಆಕರ್ಷಿಸುತ್ತಾ ಧ್ವನಿಸಿದವು. ಶ್ರೀಕೃಷ್ಣದೇವನ ಪರಮಸುಂದರವಾದ ಅಸಂಖ್ಯ ರೂಪಗಳು ಶೋಭಿಸಿದವು. ಹೆಗಲುಗಳಲ್ಲಿ ಕರಕಮಲಗಳ ಮಾಲೆಯು ಶೋಭಿಸಿತು. ಪ್ರಸಿದ್ಧವಾದ ರಾಸಲೀಲೆಯು ನಡೆಯಿತು.

## ರಾಸವಿಲಾಸ ಪ್ರಭಾವ

ಸೂರ್ಯದೇವನು ಉದಯಿಸುತ್ತಿರುವಾಗ ಪುಂಡರೀಕ ಅಂದರೆ ಕಮಲಗಳ ಮುಖವನ್ನು ಅರಳಿಸುವನು. ಕತ್ತಲೆಗಳನ್ನೆಲ್ಲವನ್ನೂ ಪರಿಹರಿಸುವನು. ಕವಿಗಳೆಲ್ಲರೂ ಸೂರ್ಯದೇವನನ್ನು ವರ್ಣಿಸುತ್ತಿರುವರು. ಶ್ರೀಕೃಷ್ಣದೇವನನ್ನು ನೋಡಿದ ಕೂಡಲೇ ಪುಂಡರೀಕ ಅಂದರೆ ಪುಂಡರೀಕಮುನಿಯೇ ಮುಂತಾದ ಸಕಲ ಮುನಿಗಳ ಮುಖವೂ ಅರಳುತ್ತದೆ. ಅವನ ಶತ್ರುಗಳನ್ನೆಲರನ್ನೂ ಕತ್ತಲೆಯನ್ನು ಅಡಗಿಸಿದಂತೆ ಅಡಗಿಸಿದನು. ಜ್ಞಾನಿಶ್ರೇಷ್ಠರಾದ ಶ್ರೀಮಧ್ವಾಚಾರ್ಯರು ಅವನನ್ನು ಹೊಗಳುತ್ತಿರುವರು. ಸೂರ್ಯನಂತೆ ಶೋಭಿಸುತ್ತಿರುವ ಪಾಂಡರಗಂನು ನರ್ತನ ಮಾಡುತ್ತಾ ಶೋಭಿಸಿದನು.

" ಯತೋ ವಾಚೋ ನಿವರ್ತಂತೇ" ಇತ್ಯಾದಿವೇದಗಳು ಶ್ರೀಕೃಷ್ಣದೇವನನ್ನೂ ಅವನ ಪಾದಗಳನ್ನೂ ವರ್ಣಿಸುವ ಶಕ್ತಿಯು ಋಗ್ವೇದ ಮುಂತಾದ ನಾಲ್ಕು ವೇದಗಳಲ್ಲಿಯೂ ವೇದಾನುಸಾರಿಯಾದ ಸಕಲ ಶಾಸ್ತ್ರಗಳಲ್ಲಿರುವ ಅನಂತ ವಾಕ್ಯಗಳಲ್ಲಿಯೂ ಇಲ್ಲವೆಂದು ಸಾರುತ್ತಿದೆ. ಅಂತಹ ಅದ್ಭುತ ಮಹಿಮೆಯಿಂದ ಯುಕ್ತನಾಗಿರುವ ಶ್ರೀಕೃಷ್ಣದೇವನ ಮಹಿಮೆಗಳನ್ನು ಕೋಗಿಲೆಗಳು ಗಾಯನ ಮಾಡುತ್ತಿವೆ. ಆ ಗಾಯನವು ಶ್ರೋತೃಗಳಾದ ಬ್ರಹ್ಮಾದಿದೇವತೆಗಳ ಕಿವಿಗಳಲ್ಲಿ ತುಂಬುತ್ತಿದೆ. ಎಲ್ಲಾ ದಿಕ್ಕುಗಳಲ್ಲಿಯೂ ವ್ಯಾಪ್ತವಾದ ಭ್ರಮರಗಳ ಧ್ವನಿಗಳು ತಾಳಗಳನ್ನು ಹಾಕುತ್ತಿವೆ. ಇಂತಹ ರಾಸೋತ್ಸವವನ್ನು ಜ್ಞಾನಿವರ್ಯರಾದ ಸಿದ್ಧರೂ ಜ್ಞಾನಶೂನ್ಯವಾದ ಮೃಗಗಳೂ ಮೈಮರೆತು ನೋಡುತ್ತಿವೆ. ಇದು ಆಶ್ಚರ್ಯವಲ್ಲವೇ?

ಕ್ಷೀರಸಮುದ್ರದಲ್ಲಿ ಒಬ್ಬಳು ರಮಾದೇವಿ ಒಂದು ಪಾರಿಜಾತವೃಕ್ಷ ಒಂದು ಮುಂತಾದ ವಸ್ತುಗಳು ಒಂದೊಂದೇ ಇವೆ. ಈ ರಾಸೋತ್ಸವದಲ್ಲಿ ಗೋಪಿಕಾಸ್ತ್ರೀಯರೆಂಬ ಅಸಂಖ್ಯರಮಾದೇವಿಯರೂ, ಶ್ರೀಕೃಷ್ಣಮೂರ್ತಿಗಳೆಂಬ ಅಸಂಖ್ಯ ಪಾರಿಜಾತವೃಕ್ಷಗಳೂ, ಶೋಭನ ಕಾಂತಿಗಳಿಂದ ಯುಕ್ತವಾಗಿರುವ ಮಂದಹಾಸಗಳೆಂಬ ಅಸಂಖ್ಯ ಅಮೃತಗಳೂ ಇವೆ. ಆದ್ದರಿಂದ ಈ ರಾಸೋತ್ಸವವು ಕ್ಷೀರಸಮುದ್ರವನ್ನು ಜಯಿಸಿತು ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಈ ರಾಸೋತ್ಸವವನ್ನು ಭ್ರಮರಗಳು, ರಾಜಹಂಸಗಳು, ಗಿಳಿಗಳು, ಕೋಗಿಲೆಗಳು, ನವಿಲುಗಳು ಮುಂತಾದ ಪ್ರಾಣಿಗಳು ಒಟ್ಟುಗೂಡಿ ಸುತ್ತಲೂ ನಿಂತು ನೋಡಿದವು. ಈ ಎಲ್ಲಾ ಪ್ರಾಣಿಗಳೂ ಸಹ ಯಾವ ವಿಧವಾದ ರಸಗಳನ್ನೂ ತಿಳಿದವುಗಳಲ್ಲ. ಹೀನ ಯೋನಿಗಳಲ್ಲಿ ಹುಟ್ಟಿದವುಗಳು. ಇಂತಹ ಪ್ರಾಣಿಗಳೇ ಸುತ್ತಲೂ ನಿಂತು ಆನಂದಪಾರವಶ್ಯದಿಂದ ನೋಡುತ್ತಿರುವಾಗ ಜ್ಞಾನಯುಕ್ತರಾದ ಮನುಷ್ಯರೇ ಮೊದಲಾದವರು ಪರವಶರಾಗುವುದರಲ್ಲಿ ಆಶ್ಚರ್ಯವೇನಿದೆ?

ಈ ರಾಸಕ್ರೀಡೆಗೆ ಚಂದ್ರನೇ ಮುಖ್ಯನಾಗಿದ್ದು ಆನಂದವನ್ನು ಕೊಡುವವನು. ಚಂದ್ರನು ಕ್ಷೀಣತೆ ಮುಂತಾದ ದೋಷಗಳಿಂದ ಯುಕ್ತನಾಗಿರುವವನು. ಇಂತಹ ಅಲ್ಪನಾದ ಚಂದ್ರನೇ ರಾಸೋತ್ಸವಕ್ಕೆ ವಿಶೇಷವಾದ ಕಳೆಯನ್ನು ಕೊಡುತ್ತಿರುವಾಗ ಲಕ್ಷ್ಮೀಪತಿಯಾದ ಶ್ರೀಕೃಷ್ಣದೇವನೆಂಬ ಚಂದ್ರನ ಸ್ವಾಭಾವಿಕವಾದ ಮತ್ತು ನಿತ್ಯವಾದ ಸೌಭಾಗ್ಯದಿಂದ ಯುಕ್ತವಾದ ಈ ರಾಸೋತ್ಸವವನ್ನು ಹೊಗಳಲು ಸಾಧ್ಯವೇ?

ಶ್ರೀಕೃಷ್ಣದೇವನ ರಾಸಲೀಲೆಯು ಪಕ್ಷಿಗಳಲ್ಲಿಯೂ ಮೃಗಗಳಲ್ಲಿಯೂ ಮರ ಮುಂತಾದ ಪ್ರಾಣಿಗಳಲ್ಲಿಯೂ ಆನಂದಬಾಷ್ಪಗಳನ್ನು ಸುರಿಸುವಂತೆ ಮಾಡಿತು. ರೋಮಾಂಚನಗಳು ಏರ್ಪಡುವಂತೆ ಮಾಡಿತು. ನನ್ನ ಮನಸ್ಸಿನಲ್ಲಿಯೂ ಶ್ರೀಕೃಷ್ಣದೇವನು ನರ್ತನವನ್ನು ಮಾಡಲಿ. ನನ್ನ ಕಣ್ಣುಗಳಲ್ಲಿಯೂ ಆನಂದಬಾಷ್ಪವು ಸುರಿಯುವಂತೆ ಮಾಡಲಿ. ನನ್ನ ಮೈಗಳಲ್ಲಿಯೂ ರೋಮಾಂಚನವು ಏರ್ಪಡುವಂತೆ ಮಾಡಲಿ.

ಶ್ರೀಕೃಷ್ಣದೇವನು ರಾಸಲೀಲೆಯನ್ನು ಮಾಡುತ್ತಿರುವ ಸಮಯದಲ್ಲಿ ನವಿಲು ಕುಣಿಯಿತು. ಮರಗಳು ಪುಷ್ಪಗಳ ಸಮೂಹಗಳನ್ನು ಸಮರ್ಪಿಸಿ ಪೂಜಿಸಿದವು. ಮಧುರಧ್ವನಿಯಿಂದ ಯುಕ್ತವಾದ ಭ್ರಮರಗಳು ಸಂಗೀತ ಸೇವೆಯನ್ನು ಮಾಡಿದವು. ಜಿಂಕೆ ಮುಂತಾದ ಮೃಗಗಳು ಕಣ್ಣುಗಳಿಂದ ನೋಡುತ್ತಾ ಧನ್ಯವಾದವು. ಶ್ರೇಷ್ಠವಾದ ಸರ್ಪಗಳೆಲ್ಲವೂ ಗುಂಪು ಗುಂಪಾಗಿ ಸಂತೋಷದಿಂದ ಹೆಡೆಗಳನ್ನೆಲ್ಲಾ ಎತ್ತಿಕೊಂಡು ಪ್ರದಕ್ಷಿಣೆಗಳನ್ನು ಮಾಡಿದವು. ನಾನು ನನ್ನ ಶಕ್ತ್ಯನುಸಾರ ಶ್ರೀಕೃಷ್ಣದೇವನ ರಾಸಲೀಲೆಯನ್ನು ಸ್ತುತಿಸಿದೆನು. ನವಿಲುಗಳೇ ಮೊದಲಾದ ಪ್ರಾಣಿಗಳಿಂದ ಶಕ್ತ್ಯನುಸಾರವಾಗಿ ಮಾಡಲ್ಪಟ್ಟನರ್ತನಸೇವೆ. ಪುಷ್ಪಾರ್ಚನೆ, ಸಂಗೀತಸೇವೆ, ದರ್ಶನಸೇವೆ, ಪ್ರದಕ್ಷಿಣಸೇವೆ ಮುಂತಾದ ಸೇವೆಗಳಿಂದ ತೃಪ್ತನಾಗಿ ಅನುಗ್ರಹಿಸುತ್ತಿರುವ ಶ್ರೀಕೃಷ್ಣದೇವನು ನನ್ನಿಂದ ಶಕ್ತ್ಯನುಸಾರವಾಗಿ ಮಾಡಲ್ಪಟ್ಟ ಸೇವೆಯಿಂದಲೂ ತೃಪ್ತನಾಗಲಿ.

ನಾನು ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳೆಂಬ ಆರು ಶತ್ರುಗಳಿಂದ ಯುಕ್ತನಾಗಿರುವೆನು. ವೃಂದಾವನದಲ್ಲಿ ನಡೆದ ರಾಸೋತ್ಸವವು ಈ ಆರು ಶತ್ರುಗಳನ್ನು ನಿಗ್ರಹ ಮಾಡುವ ಶಕ್ತಿಯಿಂದ ಯುಕ್ತವಾಗಿದೆ. ಈ ವಿಷಯವು ರಾಸಲೀಲೆಯ ಕಾಲದಲ್ಲಿ ಸ್ಪಷ್ಟವಾಯಿತು.

ಸರ್ಪಗಳಲ್ಲಿ ನವಿಲೂ ಮುಂಗುಸಿಯೂ ವೈರವನ್ನಿಟ್ಟುಕೊಂಡಿವೆ. ನವಿಲಿನ ವಿಷಯದಲ್ಲಿ ಮುಂಗುಸಿಯು ಮಾತ್ಸರ್ಯವನ್ನಿಟ್ಟುಕೊಂಡಿದೆ. ರಾಸಲೀಲೆಯು ಆರಂಭಿಸಿದ ಕೂಡಲೇ ಈ ಮೂರು ಪ್ರಾಣಿಗಳೂ ವೈರವನ್ನೂ ಮಾತ್ಸರ್ಯವನ್ನೂ ಮರೆತು ಒಟ್ಟುಗೂಡಿ ರಾಸಲೀಲೆಯನ್ನು ನೋಡಲು ಉದ್ಯುಕ್ತವಾದವು. ಗಂಡಬೇರುಂಡಪಕ್ಷಿಯು ಸಿಂಹದಲ್ಲಿಯೂ ಸಿಂಹವು ಆನೆಯಲ್ಲಿಯೂ ದ್ವೇಷವನ್ನೂ ಮಾತ್ಸರ್ಯವನ್ನೂ ಇಟ್ಟುಕೊಂಡಿದ್ದವು. ಹುಲಿಯು ಗೋವುಗಳಲ್ಲಿಯೂ ಜಿಂಕೆಗಳಲ್ಲಿಯೂ ದ್ವೇಷವನ್ನೂ ಮಾತ್ಸರ್ಯವನ್ನೂ ಇಟ್ಟುಕೊಂಡಿತ್ತು. ಬೇಟೆಗಾರರು ಪಕ್ಷಿಗಳಲ್ಲಿ ವೈರವನ್ನೂ ಮಾತ್ಸರ್ಯವನ್ನೂ ಇಟ್ಟುಕೊಂಡಿದ್ದರು.

ಈ ಎಲ್ಲಾ ಪ್ರಾಣಿಗಳೂ ಜನ್ಮಸಿದ್ಧವೂ ಅಪರಿಹಾರ್ಯವೂ ಆಗಿರುವ ವೈರಗಳನೂ ಮಾತ್ಸರ್ಯವನ್ನೂ ಮರೆತವು. ಅನ್ಯೋನ್ಯ ಮಿತ್ರರಂತೆ ಒಟ್ಟುಗೂಡಿ ರಾಸೋತ್ಸವವನ್ನು ನೋಡಲು ಆರಂಭಿಸಿದವು. ಇದರಿಂದ ಈ ರಾಸೋತ್ಸವವು ಸ್ವಾಭಾವಿಕವಾಗಿರುವ ವೈರವನ್ನೂ ಮಾತ್ಸರ್ಯವನ್ನೂ ಪರಿಹರಿಸಲು ಶಕ್ತಿಯುಳ್ಳದ್ದು ಎಂದು ಸ್ಪಷ್ಟವಾಯಿತು. ಈ ಎಲ್ಲಾ ಪ್ರಾಣಿಗಳೂ ಮಿತ್ರರಲ್ಲಿಯೂ ಶತ್ರುಗಳಲ್ಲಿಯೂ ಪತ್ನಿಗಳಲ್ಲಿಯೂ ಮಕ್ಕಳಲ್ಲಿಯೂ ಇರುವ ಸ್ವಾಭಾವಿಕವಾದ ಪ್ರೇಮವನ್ನೂ ವೈರವನ್ನೂ ಮರೆತವು. ಇದರಿಂದ ಕಾಮ ಅಂದರೆ ಆಸೆಯನ್ನೂ ಲೋಭ ಅಂದರೆ ಅತ್ಯಧಿಕವಾದ ಆಸೆಯನ್ನೂ ಮೋಹ ಅಂದರೆ ವಿಪರೀತ ಪ್ರೇಮವನ್ನೂ ಮದ ಅಂದರೆ ಅಹಂಕಾರವನ್ನೂ ಮರೆಯುವುದಕ್ಕೆ ಈ ರಾಸಲೀಲೆಯೇ ಕಾರಣವೆಂದು ತಿಳಿಯುತ್ತದೆ. ಹೀಗೆ ಪ್ರಾಣಿಗಳಲ್ಲಿರುವ ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯ ಎಂಬ ಆರು ಶತ್ರುಗಳನ್ನು ನಿಗ್ರಹ ಮಾಡುತ್ತಿರುವ ಈ ರಾಸಲೀಲೆಯು ನನ್ನ ಮನಸ್ಸಿನಲ್ಲಿರುವ ಈ ಆರು ಶತ್ರುಗಳನ್ನೂ ಸಂಹರಿಸಲಿ.

ಶ್ರೀಕೃಷ್ಣದೇವನ ಎರಡು ಹೆಗಲುಗಳಲ್ಲಿ ಗೋಪಿಕಾಸ್ತ್ರೀಯರು ತಮ್ಮ ಎರಡು ಕೈಗಳನ್ನು ಇಟ್ಟುಕೊಂಡಿರುವರು. ಆ ಸ್ತ್ರೀಯರ ಕೈಗಳ ಮೇಲೆ ಶ್ರೀಕೃಷ್ಣದೇವನು ತನ್ನ ಶ್ರೇಷ್ಠವಾದ ಕಪೋಲಗಳನ್ನು ಒರಗಿಸಿಕೊಂಡಿರುವನು. ಆ ಕಪೋಲಗಳು ತುಂಬಾ ಹೊಳೆಯುತ್ತಿವೆ. ತನ್ನ ತುಟಿಗಳನ್ನು ಮುಟ್ಟುತ್ತಿರುವಂತೆ ಕೊಳಲನ್ನು ಇಟ್ಟುಕೊಂಡಿರುವನು. ಆ ಕೊಳಲಿನ ರಂಧ್ರಗಳಲ್ಲಿ ಮಂಗಳಕರವಾದ ತನ್ನ ಬೆರಳುಗಳನ್ನು ಹಿಂದೆಯೂ ಮುಂದೆಯೂ ಓಡಾಡಿಸುತ್ತಿರುವನು. ಬೆರಳುಗಳೂ ದೇಹವೂ ಚಲಿಸುತ್ತಿರುವಾಗ ಶ್ರೀಕೃಷ್ಣದೇವನು ಧರಿಸಿದ ಹಾರ ಬಳೆ ಮುಂತಾದ ಆಭರಣಗಳು ಚಲಿಸುತ್ತಿವೆ. ಇಂದ್ರನೀಲಮಣಿಯಂತೆ ನೀಲವಾದ ದೇಹದಿಂದ ಯುಕ್ತನಾಗಿರುವ ಶ್ರೀಕೃಷ್ಣದೇವನನ್ನು ಬ್ರಹ್ಮಾದಿ ದೇವತೆಗಳು ಸ್ತುತಿಸುತ್ತಿರುವರು. ಸಕಲ ದೋಷಗಳಿಂದ ರಹಿತನಾಗಿರುವ ಈ ಶ್ರೀಕೃಷ್ಣದೇವನು ಈ ಸಂಸಾರದಲ್ಲಿ ಶ್ರೇಷ್ಠನೆನಿಸುವನು. ಅವನನ್ನು ನಾನು ಸೇವಿಸುವೆನು.

ಎಲೈ ಜೀವನೇ, ಶ್ರೀಕೃಷ್ಣದೇವನ ಸುಂದರವಾದ ಎದೆಯಲ್ಲಿ ಮುತ್ತಿನ ಹಾರಗಳು ಜೋಲಾಡುತ್ತಿವೆ. ಆ ಎದೆಯನ್ನು ಗೋಪಿಕಾಸ್ತ್ರೀಯರು ತಮ್ಮ ಕೈಗಳಿಂದ ಆಲಿಂಗಿಸಿಕೊಂಡಿರುವರು. ಶ್ರೀಕೃಷ್ಣದೇವನ ಮುಖವು ಚಂದ್ರನಂತೆ ಪ್ರಕಾಶಿಸುತ್ತಿದೆ. ಶ್ರೀಕೃಷ್ಣದೇವನು ನಾನಾ ವಿಧವಾದ ವಿಹಾರಕ್ಕೆ ಅನುಗುಣಗವಾಗಿ ಉತ್ಪಷ್ಟವಾದ ಕಡೆಗಣ್ಣುಗಳನ್ನು ಹಾರಿಸುತ್ತಿರುವನು. ಮುಗುಳುನಗೆಯಿಂದ ನಗುತ್ತಿರುವನು. ಸುಂದರವೂ ಅಮೂಲ್ಯವೂ ಆಗಿರುವ ಆಭರಣಗಳನ್ನು ಧರಿಸಿರುವನು. ನೀಲಮೇಘದಂತೆ ನೀಲವರ್ಣದಿಂದ ಯುಕ್ತನಾಗಿರುವನು. ಕರುಣಾಸಮುದ್ರನಾದ ಈ ಶ್ರೀಕೃಷ್ಣದೇವನ ದೇಹವೆಂಬ ಜೈಲನ್ನು ಸೇವಿಸು.

ವಿಸ್ತೀರ್ಣವಾದ ಪಾರಿಜಾತವೃಕ್ಷವು ನವರತ್ನ ಭರಿತವಾದ ರತ್ನಮಂಟಪದಂತಿದೆ. ಶೇಷದೇವನು ಕೊಡೆಯಂತಿರುವನು. ಪಾರಿಜಾತವೃಕ್ಷದ ಬೇರು ವೈಡೂರ್ಯಾದಿಗಳಿಂದ ಖಚಿತವಾದ ರತ್ನಸಿಂಹಾಹಸನದಂತಿದೆ. ಈ ಸಿಂಹಾಸನದಲ್ಲಿ ಶ್ರೀಕೃಷ್ಣದೇವನು ಕುಳಿತಿರುವನು. ಅವನ ಎರಡು ಪಾರ್ಶ್ವಗಳಲ್ಲಿಯೂ ಗೋಪಿಕಾಸ್ತ್ರೀಯರು ನಿಂತಿರುವರು. ಅವರು ಲಜ್ಜೆಯಿಂದ ಶ್ರೀಕೃಷ್ಣದೇವನ ಮುಖವನ್ನು ನೋಡುತ್ತಾ ಮರುಕ್ಷಣದಲ್ಲಿ ಪಾದವನ್ನು ನೋಡುತ್ತಿರುವರು. ಆಗ ಗೋಪಿಕಾಸ್ತ್ರೀಯರ ಕಡೆಗಣ್ಣಿನ ನೋಟಗಳು ಶ್ರೀಕೃಷ್ಣದೇವನ ಎರಡು ಪಾರ್ಶ್ವಗಳಲ್ಲಿಯೂ ತಲೆಯಿಂದ ಕೆಳಗೂ ಕೆಳಗಿನಿಂದ ಮೇಲೆಯೂ ಹೋಗುತ್ತಿರುತ್ತವೆ. ಇವರಿಂದ ಕಡೆಗಣ್ಣಿನ ನೋಟಗಳೆಂಬ ಚಾಮರಗಳಿಂದ ಬೀಸುತ್ತಿರುವಂತೆ ಕಾಣಿಸುತ್ತದೆ. ಸುತ್ತಲೂ ಬ್ರಹ್ಮರುದ್ರ ಮುಂತಾದ ದೇವತೆಗಳು ಸ್ತುತಿಪಾಠಕರಂತೆ ಶ್ರೀಕೃಷ್ಣದೇವನನ್ನು ಸ್ತುತಿಸ್ತುತಿರುವರು. ಈ ವೈಭವವನ್ನು ನೋಡುತ್ತಿರುವಾಗ ಶ್ರೀಕೃಷ್ಣದೇವನೇ ಸಕಲ ಪರಿವಾರಗಳಿಂದ ಸಹಿತನಾದ ಚಕ್ರವರ್ತಿಯಂತೆ ಕಾಣಿಸುತ್ತಿದ್ದನು.

ಚಕ್ರವರ್ತಿಯು ಜಲಕ್ರೀಡೆಯನ್ನಾಡುವುದು ಸಹಜ. ಆ ಜಲಕ್ರೀಡೆಯನ್ನು ಆಡುವಾಗ ಸುಂದರಿಯಾದ ಪತ್ನಿಯರಿರಬೇಕು. ಸರೋವರವಿರಬೇಕು. ಆ ಸರೋವರದಲ್ಲಿ ಮೀನುಗಳೂ ಸುಳಿಗಳೂ ಮಡುಗಳೂ ಪಾಚಿಗಳೂ ಅಲೆಗಳೂ ನೊರೆಗಳೂ ಕಮಲಗಳೂ ಇರಬೇಕು. ಎಲೈ ಮನಸ್ಸೇ " ಇಂದ್ರಿಯಾಣಾಂ ಮನಶ್ಚಾಸ್ಮಿ" ಮುಂತಾದ ಪ್ರಮಾಣಗಳನ್ನು ಅನುಸರಿಸಿ ನೀನು ಇಂದ್ರಿಯಗಳಿಗೆ ರಾಜನೆನಿಸುವಿ. ನೀನೂ ಜಲಕ್ರೀಡೆಯನ್ನಾಡಬೇಕು. ಶ್ರೀಕೃಷ್ಣದೇವನ ದೇಹವೇ ಸರೋವರವೆನಿಸುತ್ತದೆ. ಈ ಸರೋವರದಲ್ಲಿ ಶ್ರೀಕೃಷ್ಣದೇವನ ಅವಯವಗಳೇ ಸರೋವರದ ನೀರೆನಿಸುತ್ತವೆ. ಆ ಅವಯಗಳನ್ನು ನಿರಂತರವಾಗಿ ಧ್ಯಾನಿಸುವುದು ಅಂದರೆ ಅವುಗಳಲ್ಲಿ ಸ್ನಾನವನ್ನು ಮಾಡುವುದಕ್ಕೆ ಭಕ್ತಿಯೆಂಬ ರಮಣಿ ಇರಬೇಕು. ಶ್ರೀಕೃಷ್ಣದೇವನ ಅವಯಗಳಲ್ಲಿ ಮೀನುಗಳಂತೆ ಉದ್ದವೂ ಅಗಲವೂ ಆಗಿರುವ ಕಣ್ಣುಗಳೂ ಸುಳಿಗಳಂತೆ ವರ್ತುಲಾಕಾರವಾಗಿರುವ ಹೊಕ್ಕಳೂ, ಮಡುವಿನಂತೆ ಆಳವಾಗಿರುವ ಕಿವಿಗಳೂ ಪಾಚಿಗಳಂತಿರುವ ತಲೆಯ ಕೂದಲುಗಳೂ, ಅಲೆಗಳಂತಿರುವ ಸುಂದರವಾದ ಹುಬ್ಬುಗಳೂ, ಹೊಟ್ಟೆಯಲ್ಲಿರುವ ವಲಿಗಳು ಅಂದರೆ ಚರ್ಮದ ಮಡಿಕೆಗಳೂ, ನೊರೆಯಂತಿರುವ ಮಂದಹಾಸಗಳೂ, ಕಮಲಗಳಂತಿರುವ ಅಂಗೈಗಳೂ ಇರುತ್ತವೆ. ಇಂತಹ ಶ್ರೀಕೃಷ್ಣದೇವನ ಅವಯಗಳೆಂಬ ಸರೋವರ ಜಲದಲ್ಲಿ ಯಾವಾಗಲೂ ಸ್ಮರಣೆಯೆಂಬ ಸ್ನಾನವನ್ನು ಮಾಡು.

ಕಮಲವು ಸೂರ್ಯನು ಉದಯಿಸಿದ ಕೂಡಲೇ ಅರಳುತ್ತದೆ. ಎಲೈ ಕಮಲಗಳಂತೆ ಎಳೆ ಕೆಂಪಾಗಿರುವ ನನ್ನ ಕೈಗಳೇ! ಕಮಲಗಳಂತಿರುವ ಶ್ರೀಕೃಷ್ಣದೇವನ ಕಾಲುಗಳನ್ನು ನೀನು ಬಿಡಬೇಡ. ಯಾವಾಗಲೂ ಆರಾಧಿಸು. ನೀಲಕಮಲವು ಚಂದ್ರನು ಉದಯಿಸಿದ ಕೂಡಲೇ ಅರಳುತ್ತದೆ. ನೀಲಕಮಲದಂತೆ ನೀಲವಾಗಿರುವ ಎಲೈ ನನ್ನ ಕಣ್ಣುಗಳೇ, ನೀವಿಬ್ಬರೂ ಚಂದ್ರನಂತೆ ಪ್ರಕಾಶಿಸುತ್ತಿರುವ ಶ್ರೀಕೃಷ್ಣದೇವನ ಮುಖವನ್ನು ಬಿಡಬೇಡಿ. ಅವುಗಳನ್ನೇ ನೋಡಿರಿ. ಕಳ್ಳನು ಯಾವಾಗಲೂ ರಾತ್ರಿಯಲ್ಲಿ ಸಂಚರಿಸುತ್ತಿರುವನು. ಎಲೈ ಕಳ್ಳನಂತೆ ಯಾವಾಗಲೂ ಒಂದು ಕಡೆಯಲ್ಲಿ ನಿಲ್ಲದಿರುವ ಮನಸ್ಸೇ, ಕತ್ತಲೆಯಂತೆ ಕಪ್ಪಾಗಿರುವ, ಶ್ರೀಕೃಷ್ಣದೇವನ ತಲೆಗೂದಲುಗಳನ್ನು ನೀನು ಬಿಡಬೇಡ. ಅವುಗಳನ್ನೇ ಸ್ಮರಿಸುತ್ತಿರುವ ಕಪ್ಪೆಯು ನೀರನ್ನು ಬಿಡದೆ ಆಶ್ರಯಿಸುತ್ತದೆ. ಎಲೈ ಕಪ್ಪೆಗಳಂತೆ ಒಣಹರಟೆಗಳನ್ನು ಹರಟುತ್ತಿರುವ ನನ್ನ ನಾಲಿಗೆಯೇ, ಸಮುದ್ರದಂತೆ ಅಪಾರವಾಗಿರುವ ಶ್ರೀಕೃಷ್ಣದೇವನ ಕತೆಗಳನ್ನು ನೀನು ಬಿಡಬೇಡ. ಅವುಗಳನ್ನೇ ಹೇಳುತ್ತಿರು. ಬಾಗಿಲು ಮನೆಗೆ ರಕ್ಷೆಯಾಗಿರುತ್ತದೆ. ಎಲೈ ನನ್ನ ಮನೆಯಂತಿರುವ

ಎದೆಯೇ, ಬಾಗಿಲಿನಂತೆ ವಿಶಾಲವಾಗಿಯೂ ದೃಢವಾಗಿಯೂ ಇರುವ ಶ್ರೀಕೃಷ್ಣದೇವನ ಎದೆಯನ್ನು ಬಿಡಬೇಡ. ಅದನ್ನೇ ಆಲಿಂಗಿಸುತ್ತಿರು. ನಮ್ಮ ಮನೆಯಲ್ಲಿರುವ ಪಂಜರಗಳಲ್ಲಿ ಗಿಳಿಗಳು ವಾಸಿಸಿದರೆ ರಮ್ಯವಾದ ಮಾತುಗಳಿಂದ ನಮ್ಮನ್ನು ತೃಪ್ತಿಪಡಿಸುತ್ತವೆ. ಎಲೈ ಪಂಜರದಂತಿರುವ ನನ್ನ ಕಿವಿಯೇ, ನೀನು ಮನಸ್ಸನ್ನು ಆಕರ್ಷಿಸುತ್ತಿರುವ ಶ್ರೀಶುಕಾಚಾರ್ಯರೆಂಬ ಗಿಳಿಯನ್ನು ಬಿಡಬೇಡ. ಅವರ ಮಾತುಗಳನ್ನೇ ಯಾವಾಗಲೂ ಕೇಳುತ್ತಿರು.

ಸ್ತ್ರೀಯರ ದೇಹಗಳು ಅತ್ಯಂತ ನಿಂದಿತವಾಗಿರುವ ನೂರಾರು ಕ್ರಿಮಿಗಳಿಂದ ಎಲ್ಲಾ ಕಡೆಗಳಲ್ಲಿಯೂ ತುಂಬಿವೆ. ಆ ಕ್ರಿಮಿಗಳು ಸ್ತ್ರೀಯರ ದೇಹಗಳಲ್ಲಿರುವ ಅಮೇಧ್ಯಗಳನ್ನು ತಿನ್ನುತ್ತಾ ಪುಷ್ಟಿಯನ್ನು ಪಡೆದಿರುತ್ತವೆ. ಅದೇ ದೇಹಗಳು ಎಡೆಬಿಡದೆ ಹುಟ್ಟುತ್ತಿರುವ ಮತ್ತು ಹೊರಗೆ ಬರುತ್ತಿರುವ ಮೂತ್ರಗಳ ಪಾತ್ರೆಗಳಂತಿವೆ. ಅಸಂಖ್ಯವಾದ ಅಮೇಧ್ಯಗಳೂ ಕೀವುಗಳೂ ಆ ದೇಹಗಳಲ್ಲಿ ತುಂಬಿರುತ್ತವೆ. ಆದ್ದರಿಂದ ಸ್ತ್ರೀಯರ ದೇಹಗಳು ವಿವೇಕಿಗಳಿಗೆ ನಿಂದ್ಯವಾದವುಗಳು. ಎಲೈ ಮನಸ್ಸೇ, ನೀನು ಸ್ತ್ರೀಯರ ದೇಹಗಳೇ ತನ್ನ ಸರ್ವಸ್ವ ಎಂದು ಭ್ರಾಂತಿಯಿಂದ ಯುಕ್ತನಾಗಿರುವಿ. ಈ ಭ್ರಾಂತಿಯನ್ನು ಬಿಡು. ಶ್ರೀಕೃಷ್ಣದೇವನ ದೇಹದಲ್ಲಿ ಮೇಲ್ಕಂಡ ಅಥವಾ ಬೇರೆ ವಿಧವಾದ ಯಾವ ರೂಪಗಳೂ ಇಲ್ಲ. ಆನಂದ ಮುಂತಾದ ಎಲ್ಲಾ ಗುಣಗಳಿಂದಲೂ ಪೂರ್ಣವಾಗಿದೆ. ತನ್ನ ಭಕ್ತರ ಇಚ್ಛೆಯಂತೆ ಕುಣಿಯುತ್ತಿದೆ. ನೀಲಕಮಲದಂತೆ ನೀಲವಾಗಿದೆ. ಸರ್ವರಿಗೂ ಅತ್ಯಂತ ಪ್ರಿಯವಾಗಿದೆ. ಗೋಪಿಕಾಸ್ತ್ರೀಯರ ಆಸೆಯನ್ನು ಹೆಚ್ಚಿಸುತ್ತಿದೆ. ಇಂತಹ ಶ್ರೀಕೃಷ್ಣದೇವನನ್ನು ಯಾವಾಗಲೂ ಸ್ಮರಿಸುತ್ತಿರು.

## ಗೋಪಿಕಾಸ್ತ್ರೀಯರಿಗೂ ಶ್ರೀಕೃಷ್ಣದೇವನಿಗೂ ಪ್ರೇಮ ಸಂಭಾಷಣೆ

ನಮ್ಮೆಲ್ಲರ ಮನಸ್ಸುಗಳನ್ನೂ ಸೂರೆಗೊಂಡ ಪತಿಯೇ! ನೀನು ನಮ್ಮೆಲ್ಲರನ್ನೂ ಬಿಟ್ಟು ಇಲ್ಲಿಂದ ಎಲ್ಲಿಗೆ ಹೋದೆ? ಇದು ಒಬ್ಬ ಗೋಪಿಕಾಸ್ತ್ರೀಯ ಪ್ರಶ್ನೆ. ಬೇಟೆಯಾಡುವುದಕ್ಕಾಗಿ ಹೋದೆನು. ಇದು ಶ್ರೀಕೃಷ್ಣದೇವನ ಉತ್ತರ. ನಾವೆಲ್ಲರೂ ನಿನ್ನ ವಿರಹದಿಂದ ತತ್ತಳಿಸುತ್ತಿರುವ ಈ ಸಮಯದಲ್ಲಿಯೇ ನಮ್ಮನ್ನು ಬಿಟ್ಟು ಬೇಟೆಯಾಡಲು ನೀನು ಹೋದದ್ದು ಸರಿಯೇ? ಈ ಇಚ್ಛೆಯಾದರೂ ನಿನಗೆ ಈಗ ಹೇಗೆ ಹುಟ್ಟಿತು? ಇದೆಲ್ಲವೂ ನಮ್ಮನ್ನು ವಂಚಿಸುವುದಕ್ಕಾಗಿ ಹೇಳುತ್ತಿರುವ ಸಮಾಧಾನವಲ್ಲವೇ? ಇದು ಗೋಪಿಕಾಸ್ತ್ರೀಯ ಪ್ರಶ್ನೆ. ನಿನ್ನ ಸ್ತನಗಳು ದೊಡ್ಡ ದೊಡ್ಡ ಆನೆಗಳ ಕುಂಭಸ್ಥಳಗಳಂತೆ ಪುಷ್ಟವಾಗಿವೆ. ಅವುಗಳನ್ನು ನೋಡಿದ ಸಿಂಹಗಳು ನಿಮ್ಮನ್ನು ತಮಗಿಂತ ಬಲಿಷ್ಠವಾದ ಆನೆಗಳೆಂದು ತಿಳಿದವು. ನಿಮ್ಮ ಮೇಲೆ ಹಾರಿ ನಿಮ್ಮನ್ನು ಸಂಹರಿಸಲು ಸಾಧ್ಯವೇ? ಇಲ್ಲವೇ? ಎಂದು ಯೋಚಿಸುತ್ತಿದ್ದವು. ಆನೆಗಳೆಲ್ಲವೂ ನಿನ್ನನ್ನು ನೋಡಿ ತಮಗೆ ಎದಿರಾದ ಆನೆಯೆಂದು ತೀರ್ಮಾನಿಸಿ ನಿನ್ನಲ್ಲಿ ಸ್ಪರ್ಧೆ ಅಂದರೆ ಜಿದ್ದಿನಿಂದ ಯುಕ್ತವಾದವು. ಆ ಸಿಂಹಗಳನ್ನೂ ಆನೆಗಳನ್ನೂ ಸಂಹರಿಸಬೇಕೆಂದೂ ತೀರ್ಮಾನಿಸಿ ಬೇಟೆಯಾಡಲು ಹೊರಟೆನು. ಇದರಲ್ಲಿ ವಂಚನೆಯೇನಿದೆ? ಇದು ಶ್ರೀಕೃಷ್ಣದೇವನ ಉತ್ತರ. "ಹಾಗಾದರೆ ಬೇಟೆಯಾಡಿ ಯಾವ ಪ್ರಾಣಿಗಳನ್ನು ಸಂಹರಿಸಿದಿ?" ಇದು ಗೋಪಿಕಾದೇವಿಯ ಪ್ರಶ್ನೆ.

" ಎಲೈ ಸಖಿಯೇ! ಸಿಂಹಗಳೆಲ್ಲವೂ ನರಸಿಂಹಾವತಾರವನ್ನು ಸ್ವೀಕರಿಸಿರುವ ನನ್ನ ಜಾತಿಯಲ್ಲಿ ಹುಟ್ಟಿದವುಗಳು. ನನ್ನ ಜಾತಿಯಲ್ಲಿ ಹುಟ್ಟಿರುವ ಸಿಂಹಗಳನ್ನೂ ಹಂದಿಗಳನ್ನೂ ಕೊಂದರೆ ಸ್ವಜಾತಿದ್ವೇಷಿ ಎಂಬ ಹೆಸರು ಬರುವುದಿಲ್ಲವೇ? ಅದಕ್ಕಾಗಿ ಅವುಗಳನ್ನು ಸಂಹರಿಸಲಿಲ್ಲ. ರಾಮಾವತಾರ ಕಾಲದಲ್ಲಿ ನಾನು ಕಾಕಾಸುರವನ ಒಂದು ಕಣ್ಣನ್ನು ನಾಶಮಾಡಿದಾಗ ಪ್ರಪಂಚದಲ್ಲಿರುವ ಎಲ್ಲಾ ಕಾಗೆಗಳ ಒಂದು ಕಣ್ಣು ನಾಶವಾದ ವಿಷಯವು

ನನಗೆ ಜ್ಞಾಪಕಕ್ಕೆ ಬಂತು. ಜಿಂಕೆಗಳ ಮಧ್ಯದಲ್ಲಿ ಒಂದು ಜಿಂಕೆಯು ಚಂದ್ರನ ಮಧ್ಯದಲ್ಲಿದೆ. ಜಿಂಕೆಗಳ ಮಧ್ಯದಲ್ಲಿ ಒಂದು ಜಿಂಕೆಯನ್ನು ನಾನು ಕೊಂದರೆ ಪ್ರಪಂಚದಲ್ಲಿರುವ ಎಲ್ಲಾ ಜಿಂಕೆಗಳೂ ಸಾಯಬಹುದೆಂದೂ ಇದರಿಂದ ಚಂದ್ರನ ಮಧ್ಯದಲ್ಲಿರುವ ಜಿಂಕೆಯೂ ಸಾಯಬಹುದೆಂದೂ ನನಗೆ ಸಂಶಯವು ಬಂತು. ಹಾಗೆ ಚಂದ್ರನಲ್ಲಿರುವ ಜಿಂಕೆಯೂ ಸತ್ತುಹೋದರೆ ಚಂದ್ರನಲ್ಲಿಈಗ ಇರುವ ಜಿಂಕೆಯ ಗುರುತೆಂಬ ಕಳಂಕವು ಹೋಗಬಹುದೆಂಬ ಸಂಶಯವು ಬಂತು. ಹಾಗೆ ಚಂದ್ರನಲ್ಲಿರುವ ಕಳಂಕವು ಹೋದರೆ ನಿಷ್ಕಳಂಕವಾದ ನಿನ್ನ ಮುಖದ ಸಾದೃಶ್ಯವು ನಿಷ್ಕಳಂಕನಾದ ಚಂದ್ರನಿಗೆ ಏರ್ಪಡಬಹುದು ಎಂದು ಹೆದರಿದೆನು. ನಿನ್ನ ಮುಖದ ಸಾದೃಶ್ಯವು ಚಂದ್ರನಿಗೆ ಬರಬಹುದೇ? ಚಂದ್ರನು ಕಳಂಕಿಯೇ ಆಗಿ ಇರಲಿ. ನಿನ್ನ ಮುಖವು ಅಸದೃಶವಾಗಿಯೇ ಇರಲಿ. ಎಂದು ತೀರ್ಮಾನಿಸಿದೆನು. ಅದಕ್ಕಾಗಿ ಯಾವ ಜಿಂಕೆಯನ್ನೂ ಸಂಹರಿಸಲಿಲ್ಲ.

ನವಿಲುಗಳಿಗೆ ಶಿಖಂಡಿ ಅಂದರೆ "ನಪುಂಸಕ" ಎಂಬ ಹೆಸರು ಪ್ರಸಿದ್ಧವಾಗಿದೆ. ಅವುಗಳನ್ನು ಕೊಂದರೆ "ನಪುಂಸಕನನ್ನು ಸಂಹರಿಸಿದವನು" ಎಂಬ ಅಪಕೀರ್ತಿಯು ನನಗೆ ಬರುತ್ತದೆ. ಅದು ಮಾತ್ರವಲ್ಲ. ನಿನ್ನ ಜಡೆಗಳ ಮಧ್ಯದಲ್ಲಿ ನಾನಾ ಬಣ್ಣಗಳಿಂದ ಯುಕ್ತವಾದ ಹೂಗಳನ್ನು ಮುಡಿಸಿದರೆ ಆ ಜಡೆಗಳು ನವಿಲಿನ ಗರಿಗಳಂತೆ ಕಾಣಿಸುತ್ತವೆ. ಆದ್ದರಿಂದ ನಿನ್ನ ಜಡೆಗಳಿಗೆ ಸದೃಶವಾಗಿರುವ ಗರಿಗಳಿಂದ ಯುಕ್ತವಾದ ನವಿಲುಗಳನ್ನು ಸಂಹರಿಸಲು ನನಗೆ ಮನಸ್ಸು ಬರಲಿಲ್ಲ. ಕೊನೆಗೆ ನಿನ್ನ ಪಾಪಗಳನ್ನು ನೋಡಿದೆನು. ಆ ಪಾಪಗಳು ನನಗೂ ನಿನಗೂ ಆಗಬೇಕಾದ ಸಮಾಗಮಕ್ಕೆ ಪ್ರತಿಬಂಧಕವಾಗಿದ್ದವು. ಅವುಗಳನ್ನು ಕೊಂದರೆ ನಿನಗೂ ನನಗೂ ಸಂಗವು ನಿರ್ವಿಘ್ನವಾಗಿ ಏರ್ಪಡುತ್ತದೆ. ಎಂದು ತೀರ್ಮಾನಿಸಿದೆನು ಅವುಗಳನ್ನು ಬೇಟೆಯಾಡಿದೆನು. ಈಗ ಅವುಗಳೆಲ್ಲಾ ನಶಿಸಿದವು. ನಿನಗೂ ನನಗೂ ವಿಘ್ನವಿಲ್ಲದಂತೆ ಸಂಗವು ಏರ್ಪಡುವಂತಾಯಿತು. ಅದಕ್ಕಾಗಿ ನಾನೀಗ ಇಲ್ಲಿಗೆ ಬಂದಿರುವೆನು. ನನ್ನ ಬೇಟೆಯು ವ್ಯರ್ಥವಾಗಲಿಲ್ಲ." ಇದು ಶ್ರೀಕೃಷ್ಣದೇವನ ಪ್ರತ್ಯುತ್ತರ.

ಆಗ ಅಲ್ಲಿದ್ದ ಎಲ್ಲಾ ಗೋಪಿಕಾಸ್ತ್ರೀಯರೂ ಶ್ರೀಕೃಷ್ಣದೇವನನ್ನು ಸುತ್ತಿಕೊಂಡರು. " ಓ ಶ್ರೀಕೃಷ್ಣದೇವ, ನಮ್ಮೆಲ್ಲರನ್ನೂ ಬಿಟ್ಟು ನೀನು ಎಲ್ಲಿಗೆ ಮತ್ತು ಯಾಕೆ ಹೋದಿ? ಎಂದು ಪ್ರಶ್ನಿಸಿದರು.

"ಎಲ್ಲಾ ದಿಕ್ಕುಗಳಲ್ಲೂ ನಿಮ್ಮನ್ನು ಹುಡುಕುವುದಕ್ಕಾಗಿ ಹೋದೆನು" ಎಂದು ಉತ್ತರವನ್ನು ಕೊಟ್ಟನು. "ನಾವೆಲ್ಲರೂ ಇಲ್ಲಿಯೇ ಇದ್ದೆವು. ನಮ್ಮನ್ನು ನೀನು ನೋಡಲಿಲ್ಲವೇ? ನಾವೆಲ್ಲರೂ ಮಾತಾಡುತ್ತಿದ್ದೆವು. ನಮ್ಮನ್ನು ನೋಡದಿದ್ದರೂ ನಮ್ಮ ಮಾತುಗಳು ನಿನ್ನ ಕಿವಿಯಲ್ಲಿ ಬೀಳಲಿಲ್ಲವೇ? ನಮ್ಮ ಮಾತುಗಳನ್ನೂ ಕೇಳುತ್ತಿದ್ದಿ. ನಮ್ಮ ಸ್ವರಗಳೂ ನಿನಗೆ ತಿಳಿದಿವೆ. ಹೀಗಿರುವಾಗ" ನಮ್ಮನ್ನು ಹುಡುಕುವುದಕ್ಕಾಗಿ ಹೋಗಿರುವೆನು ಎಂದು ಸುಳ್ಳು ಹೇಳುತ್ತಿದ್ದೀ. ಇದು ಯುಕ್ತವೇ? ಇದು ಎಲ್ಲಾ ಸ್ತ್ರೀಯರ ಪ್ರತ್ಯುತ್ತರ.

ಎಲೈ ಗೋಪಿಕಾಸ್ತ್ರೀಯರೇ!, ನಾನು ಸುಳ್ಳು ಹೇಳುತ್ತಿಲ್ಲ. ನಿಜವಾಗಿಯೂ ಹೇಳುತ್ತಿರುವೆನು. ಇದು ರಾತ್ರಿ ಕಾಲವಾಗಿದೆ. ಚಂದ್ರನು ನಡುನೆತ್ತಿಯ ಮೇಲೆ ಬಂದಿರುವನು. ಅವನ ಕಿರಣಗಳೆಲ್ಲವೂ ದೂರ ದೂರದಲ್ಲಿರುವ ಮರಗಳ ಮಧ್ಯದಲ್ಲಿ ಮೇಲಿನಿಂದ ಕೆಳಗಿನ ವರೆಗೆ ಋಜುವಾಗಿ ಕಾಣಿಸುತ್ತಿವೆ. ಅವುಗಳ ಮಧ್ಯದಲ್ಲಿ ಬೆಳದಿಂಗಳಿನಂತೆ ಬಿಳಿಯ ಬಣ್ಣಗಳಿಂದ ಯುಕ್ತರಾಗಿರುವ ನೀವೆಲ್ಲರೂ ಸಂಚರಿಸುತ್ತಿದ್ದಿರಿ. ಬೆಳದಿಂಗಳಿನ ಬಣ್ಣವೂ ನಿಮ್ಮ ಬಣ್ಣವೂ ಒಂದೇ ಆಗಿರುವುದರಿಂದ ನೀನು ಯಾರು? ಬೆಳದಿಂಗಳು ಯಾವುದು? ಎಂದು ತಿಳಿಯಲು ನನ್ನಿಂದ ಸಾಧ್ಯವಾಗಲಿಲ್ಲ. ಆದ್ದರಿಂದ ನಿಮ್ಮನ್ನು ನೋಡಿದರೂ ನಾನು ಗುರುತು ಹಿಡಿಯಲಿಲ್ಲ. ನೀನು ಮಾತಾಡುತ್ತಿರುವಾಗ

ಗಿಳಿಗಳೂ ಮಾತಾಡುತ್ತಿದ್ದವು. ನಿಮ್ಮ ಮಾತುಗಳಿಗೂ ಗಿಳಿಗಳ ಮಾತುಗಳಿಗೂ ವ್ಯತ್ಯಾಸವು ತಿಳಿಯಲಿಲ್ಲ. ಆದ್ದರಿಂದ ನಿಮ್ಮ ಮಾತುಗಳನ್ನು ಕೇಳುತ್ತಿದ್ದರೂ ಆ ಮಾತುಗಳನ್ನು ನಿಮ್ಮ ಮಾತುಗಳೆಂದು ಗುರ್ತಿಸಲು ನನ್ನಿಂದ ಸಾಧ್ಯವಾಗಲಿಲ್ಲ. ನಿಮ್ಮ ಸ್ವರಗಳ ಪರಿಚಯವು ನನಗಿದೆ. ಆದರೆ ನಿಮ್ಮಸ್ವರಗಳ ಜೊತೆಯಲ್ಲಿ ಕೋಗಿಲೆ ಸ್ವರಗಳೂ ಕೇಳಿಸುತ್ತಿದ್ದವು. ನಿಮ್ಮ ಸ್ವರಗಳು ಯಾವುವು? ಕೋಗಿಲೆಗಳ ಸ್ವರಗಳು ಯಾವುವು? ಎಂದು ತಿಳಿಯಲು ನನ್ನಿಂದ ಸಾಧ್ಯವಾಗಲಿಲ್ಲ. ಆದ್ದರಿಂದ ನಿಮ್ಮ ಸ್ವರಗಳನ್ನು ತಿಳಿದಿದ್ದರೂ ಗುರ್ತಿಸಲು ನನ್ನಿಂದ ಸಾಧ್ಯವಾಗಲಿಲ್ಲ. ಇದು ಶ್ರೀಕೃಷ್ಣದೇವನ ಪ್ರತ್ಯುತ್ತರ.

## ಗೋಪಿಕಾಸ್ತ್ರೀಯರ ಧಾರ್ಮಿಕಪ್ರಶ್ನೆಗಳು ಮತ್ತು ಶ್ರೀಕೃಷ್ಣದೇವನ ಉತ್ತರಗಳು

ಗೋಪಿಕಾಸ್ತ್ರೀಯರೆಲ್ಲರೂ ಶ್ರೀಕೃಷ್ಣದೇವನ ಚಮತ್ಕಾರವಾದ ಮಾತುಗಳನ್ನು ಕೇಳಿದರು. ಶ್ರೀಕೃಷ್ಣದೇವನನ್ನು ಮಾತಿನ ಚಮತ್ಕಾರದಿಂದ ಜಯಿಸಲು ಯಾರಿಂದಲೂ ಸಾಧ್ಯವಿಲ್ಲವೆಂದು ತೀರ್ಮಾನಿಸಿದರು. ಆದರೂ ಧರ್ಮಶಾಸ್ತ್ರ ಸಂಬಂಧವಾದ ಕೆಲವು ಪ್ರಶ್ನೆಗಳನ್ನು ಮಾಡಬೇಕೆಂದೂ, ಅವುಗಳಿಗೆ ಶ್ರೀಕೃಷ್ಣದೇವನು ಕೊಡುವ ಪ್ರತ್ಯುತ್ತರಗಳನ್ನು ತಿಳಿಯಬೇಕೆಂದೂ ಆಶಿಸಿದರು. ಅದಕ್ಕಾಗಿ ಕೆಲವು ಪ್ರಶ್ನೆಗಳನ್ನು ಮಾಡಿದರು. ಶ್ರೀಕೃಷ್ಣದೇವನು ಕೃತಜ್ಞನಲ್ಲವೆಂದೂ ಕೃತಘ್ನನೆಂದೂ ಈ ಪ್ರಶ್ನೆಗಳನ್ನು ಮಾಡುತ್ತಾ ತಿಳಿಸಿದರು.

" ಓ ಶ್ರೀಕೃಷ್ಣದೇವ! (೧) ಕೆಲವರು ಉಪಕಾರವನ್ನು ಮಾಡಿದವರಿಗೆ ಮಾತ್ರ ಪ್ರತ್ಯುಪಕಾರವನ್ನು ಮಾಡುತ್ತಿರುವರು. (೨) ಮತ್ತೆ ಕೆಲವರು ಉಪಕಾರವನ್ನು ಮಾಡದವರಿಗೂ ಸಹ ಪ್ರತ್ಯುಪಕಾರವನ್ನು ಮಾಡುವರು. (೩) ಇನ್ನು ಕೆಲವರು ಉಪಕಾರವನ್ನು ಮಾಡಿದವರಿಗೂ ಮಾಡದವರಿಗೂ ಪ್ರತ್ಯುಪಕಾರವನ್ನು ಮಾಡುವುದಿಲ್ಲ ಈ ಮೂವರಲ್ಲಿ ಯಾರು ಉತ್ತಮರು." ಇದು ಗೋಪಿಕಾಸ್ತ್ರೀಯರ ಪ್ರಶ್ನೆ.

(೧) ಉಪಕಾರವನ್ನು ಮಾಡಿದವರಿಗೆ ಮಾತ್ರ ಪ್ರತ್ಯುಪಕಾರವನ್ನು ಮಾಡುವ ಕ್ರಮವು ಸರಿಯಲ್ಲ. ಉಪಕಾರವನ್ನು ಮಾಡದವನಿಗೆ ನಾವು ಉಪಕಾರವನ್ನು ಮಾಡದಿರುವುದರಿಂದಲೂ ಉಪಕಾರವನ್ನು ಮಾಡಿದವನಿಗೆ ಮಾತ್ರ ಪ್ರತ್ಯುಪಕಾರವನ್ನು ಮಾಡುತ್ತಿರುವುದರಿಂದಲೂ ನಾವು ಮಾಡುವ ಪ್ರತ್ಯುಪಕಾರವು ಸ್ವಾರ್ಥಕ್ಕಾಗಿಯೇ ಮಾಡುವ ಪ್ರತ್ಯುಪಕಾರವೆನಿಸುತ್ತದೆ. ಅಂತಹ ಸಂದರ್ಭದಲ್ಲಿ ಉಪಕಾರವನ್ನು ಮಾಡುವವನಲ್ಲಿ ಪ್ರತ್ಯುಪಕಾರವನ್ನು ಮಾಡುವವನಿಗೆ ಸ್ವಾಭಾವಿಕವಾದ ಸ್ನೇಹವು ಇರುವುದಿಲ್ಲ. ಫಲಾಪೇಕ್ಷೆಯಿಂದ ಪ್ರತ್ಯುಪಕಾರವನ್ನು ಮಾಡುವವರು ಅಧಮಾಧಿಕಾರಿಗಳೆನಿಸುವರು. ನಾನು ನಿಮ್ಮಿಂದ ಯಾವ ವಿಧವಾದ ಉಪಕಾರವನ್ನು ಬಯಸಿಯೂ ನಿಮಗೆ ಪ್ರತ್ಯುಪಕಾರವನ್ನು ಮಾಡುವವನಲ್ಲ. ಪೂರ್ಣಾನಂದನಾದ ನನಗೆ ಯಾರಿಂದಲೂ ಯಾವ ಪ್ರಯೋಜನವೂ ಆಗಬೇಕಾದ್ದಿಲ್ಲ. ಆದ್ದರಿಂದ ನಾನು ಈ ದರ್ಜೆಗೆ ಸೇರಿದವನಲ್ಲ.

(೨) " ಎರಡನೆಯ ದರ್ಜೆಗೆ ಸೇರಿರುವ ಪುರಷರಬಗ್ಗೆ ಹೇಳುವೆನು. ಕೆಲವರು ಇನ್ನೊಬ್ಬರ ಕಷ್ಟಗಳನ್ನು ನೋಡಿ ಮನಸ್ಸು ಕರಗುವ ಸ್ವಭಾವವುಳ್ಳವರು. ತಂದೆ ಮುಂತಾದ ಹಿರಿಯರು ಮಕ್ಕಳು ಮುಂತಾದವರಲ್ಲಿ ಉಪಕಾರವನ್ನು ಅಪೇಕ್ಷಿಸದೆ ಪ್ರತ್ಯುಪಕಾರವನ್ನು ಮಾಡುವ ಸ್ವಭಾವವುಳ್ಳವರಲ್ಲವೇ? ಅವರಂತೆ ಪರೋಪಕಾರವನ್ನು

ಮಾಡುವ ಸ್ವಭಾವವುಳ್ಳ ಈ ಮಹಾ ಪುರುಷರು ಸರ್ವಸ್ವವನ್ನು ಕಳೆದುಕೊಂಡರೂ ಪರೋಪಕಾರವನ್ನು ಮಾಡುವುದನ್ನು ಬಿಡುವುದಿಲ್ಲ. ಇವರ ಪ್ರತ್ಯುಪಕಾರವೂ ಸ್ನೇಹವೂ ನಿಷ್ಕಪಟವಾದುದು. ಇವರು ಮಧ್ಯಮಾಧಿಕಾರಿಗಳೆನಿಸುವರು. ಇವರನ್ನೇ ಸಂಪ್ರಜ್ಞಾತಸಮಾಧಿಸ್ಥರಾದ ಅಂದರೆ ಶ್ರೀಕೃಷ್ಣದೇವನನ್ನು ಧ್ಯಾನಿಸುತ್ತಾ ಹೊರಗಿನ ವಿಷಯಗಳನ್ನೂ ತಿಳಿಯುತ್ತಿರುವ ಜ್ಞಾನಿಗಳೆಂದು ಹೇಳುವರು. ಈ ದರ್ಜೆಯಲ್ಲಿ ಸೇರಿರುವವರು ಪರರಿಗೆ ಎಲ್ಲಾ ವಿಧವಾದ ಉಪಕಾರವನ್ನೂ ಮಾಡುತ್ತಿರುವರು."

"ತಂದೆಯು ಮಗನಿಗೆ ಸಂಪತ್ತನ್ನು ಬಯಸುವುದಿಲ್ಲವೇ? ಆ ಸಂಪತ್ತು ಬಂಧಕವಲ್ಲವೇ? ಬಂಧಕವಾದ ಸಂಪತ್ತನ್ನು ಮಗನಿಗೆ ಬಯಸುವವನು ಮಗನಿಗೆ ಹಿತಚಿಂತಕನೇ? ಆದ್ದರಿಂದ ಈ ದರ್ಜೆಗೆ ಸೇರಿದವರು ಹಿತಚಿಂತಕರೆಂದು ನಿಶ್ಚಯವಾಗಿ ಹೇಳುವಂತಿಲ್ಲ. ನಾನು ನನ್ನ ಭಕ್ತರಿಗೆ ಸಂಸಾರದಿಂದ ಬಿಡುಗಡೆಗೆ ಸಾಧನವಾಗಿರುವ ಉಪಕಾರಗಳನ್ನೇ ಮಾಡುತ್ತಿರುವೆನು. ಬಂಧಕವಾದ ಸಂಪತ್ತುಗಳು ಮುಂತಾದವುಗಳನ್ನು ಕೊಡುವುದಿಲ್ಲ. ಆದ್ದರಿಂದ ಈ ದರ್ಜೆಗೆ ಸೇರಿದವನಲ್ಲ."

(೩) "ಇನ್ನು ಮೂರನೆಯ ದರ್ಜೆಗೆ ಸೇರಿದವರನ್ನು ಕುರಿತು ಹೇಳುವೆನು. ಈ ದರ್ಜೆಗೆ ಸೇರಿದವರನ್ನು ಎರಡು ವಿಧವಾಗಿ ವಿಂಗಡಿಸಬಹುದು."

(೨) ಅ) "ಅಸಂಪ್ರಜ್ಞಾತಸಮಾಧಿಯುಳ್ಳವರು ಅಂದರೆ ಭಗವಂತನನ್ನು ಅಖಂಡವಾಗಿ ಧ್ಯಾನಿಸುತ್ತಿರುವವರು. ಧ್ಯಾನಕಾಲದಲ್ಲಿ ಪಕ್ಕದಲ್ಲಿ ನಗಾರಿಯನ್ನು ಬಾರಿಸಿದರೂ ಕೇಳದಿರುವಷ್ಟು ಏಕಾಗ್ರಚಿತ್ತದಿಂದ ಯುಕ್ತರಾಗಿರುವವರು. ಇವರು ಮೂರನೆಯ ದರ್ಜೆಯಲ್ಲಿ ಸೇರಿದವರಲ್ಲಿ ಮೊದಲನೆಯವರು."

"ಕೆಲವು ಮಹಾಪುರುಷರು ಪ್ರಬಲವಾದ ಪಾಪಗಳನ್ನೆಲ್ಲಾ ಕಳೆದುಕೊಂಡಿರುವರು. ಜ್ಞಾನಕ್ಕೆ ಪ್ರತಿಬಂಧಕವಾದ ಪಾಪಗಳೆಲ್ಲವನ್ನೂ ಕಳೆದುಕೊಂಡಿರುವುದರಿಂದ ಅವರು ನಿಷ್ಕಲ್ಮಷವಾದ ಜ್ಞಾನದಿಂದ ಯುಕ್ತರಾಗಿರುವರು. ಆದ್ದರಿಂದಲೇ ಜನ್ಮಾದಿ ದೋಷಗಳಿಂದ ರಹಿತನಾದ ನನ್ನನ್ನು (ಶ್ರೀಕೃಷ್ಣದೇವನನ್ನು) ಚೆನ್ನಾಗಿ ತಿಳಿದವರು. ನನ್ನ (ಶ್ರೀಕೃಷ್ಣದೇವನ) ಜ್ಞಾನದಿಂದ ಅವರೆಲ್ಲರೂ ತಮಗೆ ಕ್ಲಪ್ತವಾಗಿರುವ ಆನಂದವನ್ನು ಪೂರ್ಣವಾಗಿ ಅನುಭವಿಸುತ್ತಿರುವರು. ಅವರಲ್ಲಿ ಸುಖವು ಪೂರ್ಣವಾಗಿರುವುದರಿಂದಲೇ ಹೊರಗಿನ ವ್ಯಾಪಾರಗಳಲ್ಲಿ ಯಾವುದನ್ನೂ ಮಾಡುವ ಸಂದರ್ಭವಿಲ್ಲ. ಮಾಡುವುದೂ ಇಲ್ಲ. ಸುಖಕ್ಕಾಗಿಯಲ್ಲವೇ ಹೊರಗಿನ ವ್ಯಾಪಾರಗಳನ್ನು ಮಾಡಬೇಕು? ತಮ್ಮ ಮನಸ್ಸಿನಲ್ಲಿಯೇ ನನ್ನನ್ನು (ಶ್ರೀಕೃಷ್ಣದೇವನನ್ನು) ಸ್ಮರಿಸುತ್ತಿರುವ ಆನಂದಪೂರ್ಣರಾದ ಇವರಿಗೆ ಪರೋಪಕಾರವನ್ನು ಮಾಡಿದ್ದರಿಂದ ಯಾವ ಪ್ರಯೋಜನವೂ ಇಲ್ಲ. ಅದು ಮಾತ್ರವಿಲ್ಲ. ನನ್ನನ್ನು (ಶ್ರೀಕೃಷ್ಣದೇವನನ್ನು) ನಿರಂತರದಲ್ಲಿಯೂ ಅಖಂಡವಾಗಿ ಧ್ಯಾನಿಸುತ್ತಿರುವುದು ಎಂಬ ಮಹಾಸಾಧನದಿಂದ ಬರುವ ಮಹಾಪ್ರಯೋಜನವು ಪರೋಪಕಾರ ಮುಂತಾದ ಅಲ್ಪಸಾಧನಗಳಿಂದ ಏರ್ಪಡುವುದೂ ಇಲ್ಲ. ಈ ಅಧಿಕಾರಿಗಳು ಉತ್ತಮರೆನಿಸುವರು."

"ನನಗಿಂತ ಉತ್ತಮರು ಯಾರೂ ಇಲ್ಲ. ಆದ್ದರಿಂದ ನಾನು ಯಾರನ್ನೂ ಧ್ಯಾನಿಸಿ ಮಹಾಪ್ರಯೋಜನವನ್ನು ಪಡೆಯುವವನಲ್ಲ. ಆದ್ದರಿಂದ ನಾನು ಈ ದರ್ಜೆಗೂ ಸೇರಿದವನಲ್ಲ.

(೩) ಬ) "ಕೆಲವರು ತನ್ನನ್ನು ನಂಬಿದವರನ್ನೂ ನಂಬದಿರುವವರನ್ನೂ ಮೋಸಗೊಳಿಸುವವರು: ಅವರು

ಸ್ತ್ರೀಯರೇ ಮೊದಲಾದವರಲ್ಲಿ ವಿಶೇಷವಾದ ಮೋಹದಿಂದ ಯುಕ್ತರಾಗಿರುವವರು. ಇತರರೂ ಮಾಡಿರುವ ಉಪಕಾರವನ್ನು ಮರೆತು ಅವರಿಗೆ ದ್ರೋಹವನ್ನು ಮಾಡುವ ಸ್ವಭಾವವುಳ್ಳವರು. ಪರಮಾತ್ಮನನ್ನು ಮರೆತವರು ದೇಹವನ್ನು ಮಾತ್ರ ಗೌರವಿಸುತ್ತಿರುವವರು. ದೇವತೆಗಳೇ ಮೊದಲಾದ ಗುರುಗಳನ್ನು ದ್ರೋಹಿಸುವವರು. ಆದ್ದರಿಂದಲೇ ಯಜ್ಞಮುಂತಾದವುಗಳನ್ನು ಮಾಡುವುದೂ ಇಲ್ಲ. ದೇವತೆಗಳಿಗೆ ಹವಿಸ್ಸುಗಳನ್ನು ಸಮರ್ಪಿಸುವುದೂ ಇಲ್ಲ. ಇವರು ಪರಮ ನೀಚರೆನಿಸುವರು. ಇವರಲ್ಲಿಯೂ ನಾನು ಸೇರಿದವನಲ್ಲ.

" ಎಲೈ ಸಖಿಯರೆ, ನಾನು ಹಿಂದೆ ತಿಳಿಸಿರುವ ಅಧಮಾಧಿಕಾರಿಗಳಲ್ಲಿಯೂ ಮಧ್ಯಮಾಧಿ ಕಾರಗಳಲ್ಲಿಯೂ ಉತ್ತಮಾಧಿಕಾರಿಗಳಲ್ಲಿಯೂ ನೀಚಪುರುಷರಲ್ಲಿಯೂ ಸೇರಿದವನಲ್ಲವೆಂದು ಹೇಳಿದೆನು. ಹಾಗಾದರೆ ನಾನು ಯಾವ ದರ್ಜೆಗೆ ಸೇರಿದವನು? ಎಂಬ ಪ್ರಶ್ನೆಗೆ ಈಗ ಉತ್ತರವನ್ನು ಕೊಡುವೆನು. ಕಲ್ಪವೃಕ್ಷವು ತನ್ನನ್ನು ಸೇವಿಸುವವರಿಗೆ ಅವರು ಅಪೇಕ್ಷಿಸಿದ್ದಕ್ಕಾಗಿ ಅವರಿಗೆ ಅಯೋಗ್ಯವಾದ ಫಲವನ್ನು ಕೊಡುವುದಿಲ್ಲ. ಅಪೇಕ್ಷಿಸದಿರುವುದಕ್ಕಾಗಿ ಅವರಿಗೆ ಯೋಗ್ಯವಾದ ಫಲವನ್ನು ಕೊಡದೇ ಇರುವುದೂ ಇಲ್ಲ. ಅವರವರ ಯೋಗ್ಯತೇಯನ್ನು ಅನುಸರಿಸಿ ಅವರವರಿಗೆ ಯೋಗ್ಯವಾದ ಫಲವನ್ನು ಕೊಡುತ್ತದೆ. ಆ ಕಲ್ಪವೃಕ್ಷವನ್ನು ಸೇವಿಸುವುದರಿಂದ ಆ ಕಲ್ಪವೃಕ್ಷಕ್ಕೆ ಬರಬೇಕಾದ ಯಾವು ಪ್ರಯೋಜನವೂ ಇಲ್ಲ. ಆದರೂ ಕಲ್ಪವೃಕ್ಷದಿಂದ ಸರ್ವರಿಗೂ ಅವರವರ ಯೋಗ್ಯತಾನುಸಾರವಾದ ಫಲಗಳು ಸಿಗುತ್ತವೆ. ನಾನು ಕಲ್ಪವೃಕ್ಷದ ದರ್ಜೆಗೆ ಸೇರಿದವನು. ನನ್ನನ್ನು ಸೇವಿಸುವ ಭಕ್ತರು ನನ್ನಿಂದ ಯೋಗ್ಯವಾದ ಫಲಗಳನ್ನು ಬಯಸದಿರುವುದುಂಟು. ಅಯೋಗ್ಯವಾದ ಫಲಗಳನ್ನು ಬಯಸಿಕೊಂಡಿರುವುದೂ ಉಂಟು. ಅವರ ಬಯಕೆಗಳಲ್ಲಿ ಯೋಗ್ಯವಾದ ಬಯಕಗಳನ್ನೇ ನಾನು ನೆರವೇರಿಸುವೆನು. ಅಯೋಗ್ಯವಾದ ಬಯಕೆಗಳನ್ನು ನೆರವೇರಿಸವುದಿಲ್ಲ."

" ಎಲೈ ಸ್ತ್ರೀಯರೆ, ನನ್ನನ್ನೇ ನಂಬಿರುವ ನಿಮ್ಮ ಮಧ್ಯದಿಂದ ನಾನು ಅದೃಶ್ಯನಾದೆನು. ಇದಕ್ಕಾಗಿ ನೀವು ನನ್ನಲ್ಲಿ ದೋಷಗಳನ್ನು ಆರೋಪಿಸುವುದಕ್ಕಾಗಿ ಈ ಪ್ರಶ್ನೆಗಳನ್ನು ಮಾಡಿರುವಿರಿ. ನನ್ನನ್ನು ಉಪಾಸಿಸುವ ರೀತಿಯನ್ನು ತಿಳಿದರೆ ಈ ರೀತಿಯಾದ ಪ್ರಶ್ನೆಗಳನ್ನು ಮಾಡಲಾರಿರಿ. ಆದ್ದರಿಂದ ನನ್ನನ್ನು ಉಪಾಸಿಸುವ ರೀತಿಯನ್ನು ತಿಳಿಸುವೆನು. ಒಬ್ಬ ಬಡವನಿಗೆ ದೈವಸಹಾಯದಿಂದ ಅಪಾರವಾದ ಸಂಪತ್ತು ಬಂತು. ಸಂಪತ್ತು ಬಂತೆಂದು ಸಂತೋಷದಿಂದ ಆ ಸಂಪತ್ತನ್ನು ಅನುಭವಿಸುವುದಕ್ಕೆ ಆರಂಭಿಸುವಾಗಲೇ ಆ ಸಂಪತ್ತು ನಷ್ಟವಾಗುವುದು. ಆ ಸಮಯದಲ್ಲಿ ಆ ಬಡವನ ಮನಸ್ಸಿನಲ್ಲಿ ಅವನಿಗೆ ಸಿಕ್ಕಿದ ಸಂಪತ್ತನ್ನು ಬಿಟ್ಟು ಬೇರೈ ವಸ್ತುಗಳು ತೋರುವುದುಂಟೇ? ಅವನ ಮುಂದಿರುವ ಅಥವಾ ಹಿಂದಿರುವ ಯಾವ ವಸ್ತುಗಳೂ ತೋರುವುದಿಲ್ಲ. ಆ ಸಂಪತ್ತು ಒಂದೇ ತೋರುತ್ತದೆ. ನನ್ನ ಭಕ್ತನ ಮನಸ್ಸಿನಲ್ಲಿಯೂ ನಾನೇ ತೋರಬೇಕು. ಬೇರೆ ಯಾವ ವಸ್ತುಗಳೂ ತೋರಬಾರದು. ಹೀಗಿರುವ ಉಪಾಸನೆಯೇ ಉತ್ತಮವಾದ ಉಪಾಸನೆಯೆನಿಸುತ್ತದೆ.

" ನೀವೆಲ್ಲರೂ ಬಡವರಂತೆ ಹಿಂದೆ ನನ್ನನ್ನು ನೋಡಿದವರಲ್ಲ. ನಿಮ್ಮ ಯೋಗ್ಯತೆಯನ್ನು ತಿಳಿದು ನಿಮಗೆ ನನ್ನನ್ನು ತೋರಿಸಿದೆನು. ಇದರಿಂದ ಸಂಪತ್ತಿನಿಂದ ಯುಕ್ತರಾದಂತೆ ಆಗಿದ್ದಿರಿ. ಪುನಃ ನಾನು ಅದೃಶ್ಯನಾದೆನು. ನನ್ನನ್ನು ಬಿಟ್ಟು ಯಾರನ್ನೂ ಸ್ಮರಿಸದೇ ನನ್ನನ್ನೇ ಸ್ಮರಿಸಿದಿರಿ. ನನಗಾಗಿ ಲೌಕಿಕವಾದ ಸಂಪತ್ತುಗಳನ್ನೂ ಪಾರಲಕ್ಕಿಕಸಂಪತುಗಳನ್ನೂ ತ್ಯಜಿಸಿದಿರಿ. ಇದರಿಂದ ನಮ್ಮ ಉಪಾಸನೆಯು ಉತ್ತಮವಾದುದು ಎಂದು ತಿಳಿಸಿದಿರಿ. ನಾನು ಯಾವಾಗಲೂ ಯಾರಿಗೂ ಕಾಣಿಸದಿರುವುದೂ ನನ್ನನ್ನೂ ನೋಡಬೇಕೆಂಬ ಆಸೆಯನ್ನು ಯೋಗ್ಯರಿಗೆ ಹೆಚ್ಚಿಸುವುದಕ್ಕಾಗಿಯೇ ಹೊರತು ಬೇರೆ ಯಾವ ಕಾರಣದಿಂದಲೂ ಅಲ್ಲ. ನಿಮ್ಮ ಅನುಗ್ರಹಕ್ಕಾಗಿಯೇ

ಅದೃಶ್ಯನಾಗಿರುವ ನನ್ನನ್ನು ನೀವು ಕೋಪಿಸಬಾರದು."

"ನೀವೆಲ್ಲರೂ ನನ್ನಲ್ಲಿ ಭಕ್ತಿಯನ್ನು ಇಟ್ಟುಕೊಂಡಿರುವಿರಿ. ನಿಮ್ಮ ಭಕ್ತಿಯಲ್ಲಿ ಯಾವ ವಿಧವಾದ ದೋಷವೂ ಇಲ್ಲ. ನೀವು ಮಾಡಿರುವ ನಿಷ್ಕಪಟವಾದ ಸೇವೆಗೆ ಪ್ರತ್ಯುಪಕಾರವನ್ನು ಮಾಡಲು ನಾನು ಶಕ್ತನಲ್ಲ ಈಗ ಮಾತ್ರವಲ್ಲ. ದೇವಮಾನದ ಅಸಂಖ್ಯ ವರ್ಷಗಳ ವರೆಗೂ ನನ್ನಿಂದ ಪ್ರತ್ಯುಪಕಾರವನ್ನು ಮಾಡಲು ಸಾಧ್ಯವಿಲ್ಲ. ನಿಮ್ಮಂತೆಯೇ ನನ್ನನ್ನು ಆರಾಧಿಸುವ ಸ್ತ್ರೀಯರೂ ಪುರುಷರೂ ಆಗಿರುವ ಎಲ್ಲಾ ಭಕ್ತರೂ ಭಕ್ತಿ ಮತ್ತು ಜ್ಞಾನಗಳನ್ನೂ ಬಿಟ್ಟು ಇತರ ಸಾಧನಗಳಿಂದ ಜೀರ್ಣತೆಯನ್ನು ಪಡೆಯಲು ಅನರ್ಹವಾಗಿರುವ ಲಿಂಗಶರೀರಗಳನ್ನು ನನ್ನ ಭಕ್ತಿಯಿಂದಲೂ ಮಹಾತ್ಮ್ಯ ಜ್ಞಾನದಿಂದಲೂ ಜೀರ್ಣಿಸಿಕೊಳ್ಳುವರು. ಭಕ್ತಿ ಮತ್ತು ಜ್ಞಾನಗಳೂ ಪಕ್ವವಾಗದೆ ಅದೇ ಜನ್ಮದಲ್ಲಿಯೂ ಪಕ್ವವಾಗಿದ್ದರೆ ಮುಂದಿನ ಜನ್ಮಗಳಲ್ಲಿಯೂ ಮುಕ್ತಿಯನ್ನು ಪಡೆಯುವರು."

ಗೋಪಿಕಾಸ್ತ್ರೀಯರು ಶ್ರೀಕೃಷ್ಣದೇವನ ಈ ಉಪದೇಶದಿಂದ ತೃಪ್ತರಾದರು. ಅತ್ಯಂತ ಭಕ್ತಿಯಿಂದ ಶ್ರೀಕೃಷ್ಣದೇವನೊಡನೆ ಪ್ರತಿದಿನದಲ್ಲಿಯೂ ರಾಸಲೀಲೆಯನ್ನು ಮಾಡಿದರು.

## ರಾಸಲೀಲೆಯನ್ನು ಮಾಡಿರುವ ಶ್ರೀಕೃಷ್ಣದೇವನು ದೋಷಿಯಲ್ಲ

ಈ ಸಂದರ್ಭದಲ್ಲಿ ಸರ್ವರಿಗೂ ಏರ್ಪಡಬಹುದಾದ ಒಂದು ಸಂಶಯವನ್ನು ಈಗ ವಿವರಿಸುವೆನು. ಪ್ರಶ್ನೆ - ಶ್ರೀಕೃಷ್ಣದೇವನು ಧರ್ಮ ಸಂಸ್ಥಾಪನೆಗಾಗಿಯೂ ಅಧರ್ಮನಿಗ್ರಹಕ್ಕಾಗಿಯೂ ಅವತರಿಸಿದವನು. ಈ ವಿಷಯದಲ್ಲಿ "ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ। ಅಭ್ಯುತ್ಥಾನಮಧರ್ಮಸ್ಯ ತದಾಽಽತ್ಮಾನಂ ಸೃಜಾಮ್ಯಹಮ್" ಮುಂತಾದ ಅವನ ವಾಕ್ಯಗಳೇ ಪ್ರಮಾಣ. ತನ್ನ ಅವತಾರದ ಮುಖ್ಯಗುರಿಯಾಗಿರುವ ಧರ್ಮಸಂಸ್ಥಾಪನೆಯನ್ನೂ ಅಧರ್ಮ ನಿಗ್ರಹವನ್ನೂ ಮಾಡಬೇಕಾಗಿತ್ತು ಅದನ್ನು ಮಾಡಲಿಲ್ಲ. ತನ್ನ ಅವತಾರದ ಮುಖ್ಯಗುರಿಗೆ ಅತ್ಯಂತ ವಿರುದ್ಧವಾಗಿರುವ ಪರಸ್ತ್ರೀಸಂಗವನ್ನು ಮಾಡಿರುವನು. ಇದು ಧರ್ಮ ಎಂಬ ಸೇತುವನ್ನು ಏರ್ಪಡಿಸಿದವನೂ ಉಪದೇಶಿಸಿದವನೂ ರಕ್ಷಿಸುತ್ತಿರುವವನೂ ಆಗಿರುವ ಶ್ರೀಕೃಷ್ಣದೇವನಿಗೆ ಹೇಗೆ ಯುಕ್ತವಾಗುತ್ತದೆ? ಶ್ರೀಕೃಷ್ಣದೇವನು ಆತ್ಮಾರಾಮನು ಅಂದರೆ ಅವನಿಗೆ ಹೊರಗಿನ ವಿಷಯಗಳನ್ನು ಅನುಭವಿಸಿದ್ದರಿಂದ ಆನಂದವೂ ಬರಬೇಕಾದ ಅವಶ್ಯವಿಲ್ಲ. ತಾನು ತನ್ನಿಂದಲೇ ಆನಂದವನ್ನು ಅನುಭವಿಸುತ್ತಿರುವವನು. ಹೀಗಿರುವಾಗ ಅತಿನಿಂದ್ಯವಾದ ಪರಸ್ತ್ರೀಸಂಗವನ್ನು ಮಾಡಲು ಪ್ರಬಲವಾದ ಕಾರಣವು ಇದ್ದೇಇರಬೇಕು. ಆ ಕಾರಣವು ಯಾವುದು?

ಉತ್ತರ - ಯಾವುದೋ ಒಂದು ಸಂದರ್ಭದಲ್ಲಿ ಅಜೀಗರ್ತ ಎಂಬ ಋಷಿಗಳು ತಮ್ಮ ಮಗನನ್ನು ಮಾರಿದರು. ವಿಶ್ವಾಮಿತ್ರರು ನಾಯಿಯ ಮಾಂಸವನ್ನು ತಿನ್ನಲು ಪ್ರವೃತ್ತರಾದರು. ಸಪ್ತರ್ಷಿಗಳೂ ಹೆಣವನ್ನು ತಿನ್ನಲು ಉದ್ಯುಕ್ತರಾದರು. ಹಿರಿಯರಾದ ವಿಶ್ವಾಮಿತ್ರರೇ ಮೊದಲಾದವರು ಮಾಡಿರುವ ಈ ಕಾರ್ಯಗಳು ಧರ್ಮವೆನಿಸುತ್ತವೆಯೇ? ಅವರನ್ನೇ ಕೇಳಿದರೆ ಈ ಕಾರ್ಯಗಳೆಲ್ಲವೂ ಅಧರ್ಮ ಕಾರ್ಯಗಳೆಂದೇ ಹೇಳುವರು. ಅವರ ನಡತೆಗಳಿಗೂ ಮಾತುಗಳಿಗೂ ವಿರೋಧವು ಬಂದಾಗ ಅವರ ಮಾತುಗಳಂತೆ ನಡೆಯುವುದೇ ಧರ್ಮವೆನಿಸುತ್ತದೆ. ನಡತೆಯಂತೆ ನಡೆಯುವುದು ಅಧರ್ಮವೆನಿಸುತ್ತದೆ. ಅವರ ಮಾತುಗಳಿಗೂ ನಡತೆಗೂ

ವಿರೋಧವಿಲ್ಲದಿರುವಾಗ ಅವರ ಮಾತುಗಳಂತೆಯು ನಡತೆಯಂತೆಯೂ ನಡಯುವುದೇ ಧರ್ಮವೆನಿಸುತ್ತದೆ.

ಮಹಾತೇಜಸ್ವಿಗಳಾದ ಮಹನೀಯರುಗಳು ಅಧರ್ಮಕಾರ್ಯಗಳನ್ನು ಮಾಡಿದರೂ ಆ ಅಧರ್ಮಕಾರ್ಯಗಳಿಂದ ಅವರಿಗೆ ದೋಷವು ಬರಲಾರದು. ಮಹಾತೇಜಸ್ವಿಯಾದ ಅಗ್ನಿಯಲ್ಲಿ ಶುದ್ಧವಾದ ವಸ್ತುಗಳನ್ನೂ ಅಶುದ್ಧವಾದ ಅಮೇಧ್ಯ ಮುಂತಾದ ವಸ್ತುಗಳನ್ನೂ ಹಾಕಿದರೆ ಭಸ್ಮವಾಗುವುದುಂಟು. ಈ ಅಗ್ನಿಯು ಅಶುದ್ಧವಾದ ವಸ್ತುಗಳನ್ನು ಭಕ್ಷಣ ಮಾಡಿದ್ದರಿಂದ ಅಶುದ್ಧವಾಗುತ್ತದೆಯೇ? ಇಲ್ಲ. ಅಗ್ನಿಯಂತೆ ತೇಜಸ್ವಿಗಳೂ ನಾರಾಯಣ ಭಕ್ತರೂ ಆಗಿರುವ ಮಹನೀಯರುಗಳು ಧರ್ಮವಿರುದ್ಧವಾದ ಕಾರ್ಯಗಳನ್ನು ಮಾಡಿದರೂ ದೋಷವಿಲ್ಲ.

ಆ ಮಹನೀಯರು ಮಾಡಿರುವ ಧರ್ಮ ವಿರುದ್ಧವಾದ ಕಾರ್ಯಗಳನ್ನು ಮೇಲ್ಪಂಕ್ತಿಯಾಗಿ ಇಟ್ಟುಕೊಂಡು ನಮ್ಮಂತಹ ಅಲ್ಪವ್ಯಕ್ತಿಗಳು ಅಂತಹ ಕಾರ್ಯಗಳನ್ನು ಮನಸ್ಸಿನಲ್ಲಿಯೂ ಯೋಚಿಸಬಾರದು. ಹೀಗಿರುವಾಗ ದೇಹದಿಂದ ಮಾಡಕೂಡದೆಂದು ಹೇಳಬೇಕಾದ್ದೇನಿದೆ?

ರುದ್ರದೇವರು ವಿಷವನ್ನು ಕುಡಿದರು. ಅದನ್ನು ಜೀರ್ಣಿಸಿಕೊಂಡರು. ಅವರನ್ನು ಮೇಲ್ಪಂಕ್ತಿಯಾಗಿ ಇಟ್ಟುಕೊಂಡು ನಾವೂ ಸಹ ವಿಷವನ್ನು ಕುಡಿಯಬಹುದೆಂದು ಯೋಚಿಸಬಹುದೇ? ಹಾಗೆ ಕುಡಿದರೆ ನಮ್ಮ ಹೊಟ್ಟೆಯಲ್ಲಿ ಆ ವಿಷವು ಜೀರ್ಣಿಸುತ್ತದೆಯೇ? ಕೂಡಲೇ ಸಾಯುವುದಿಲ್ಲವೇ? ಆದ್ದರಿಂದ ಮಹನೀಯರು ಧರ್ಮವಿರುದ್ಧವಾದ ಕಾರ್ಯಗಳನ್ನು ಮಾಡಿರುವುದನ್ನು ನೋಡಿ ನಾವು ಅವರಂತೆ ಅಧರ್ಮಕಾರ್ಯಗಳನ್ನು ಯಾವ ಕಾರಣದಿಂದಲೂ ಮಾಡಕೂಡದು. ಹಾಗೆ ಮಾಡಿದರೆ ಬುಡಸಹಿತ ಹಾಳಾಗಿ ಹೋಗುವೆವು. ಅದಕ್ಕೂ ಹೆಚ್ಚು ಕಾಲವಿಲ್ಲ. ಕೂಡಲೇ ಹಾಳಾಗಿ ಹೋಗುವೆವು.

ಅದು ಮಾತ್ರವಲ್ಲ. ಮಹನೀಯರಾದ ವಿಶ್ವಾಮಿತ್ರರೇ ಮುಂತಾದವರು ದೇಹಾಭಿಮಾನವನ್ನು ತ್ಯಜಿಸಿದವರು. ಒಣಗಿದ ತೆಂಗಿನಕಾಯಿಯು ಗಿಡವನ್ನು ಹುಟ್ಟಿಸುತ್ತದೆಯೇ? ಅದರಂತೆ ದೇಹಾಭಿಮಾನವನ್ನು ಬಿಟ್ಟಿರುವ ಮಹನೀಯರು ಮಾಡುತ್ತಿರುವ ಶುಭಕಾರ್ಯಗಳಿಂದ ಸ್ವರ್ಗಾದಿಶುಭಫಲಗಳೂ ಅಶುಭಕಾರ್ಯ ಗಳಿಂದ ನರಕ ಮುಂತಾದ ಅನಿಷ್ಟಫಲಗಳೂ ಏರ್ಪಡುವುದಿಲ್ಲ. ಅವರು ಮಾಡುವ ಶುಭಾಶುಭಕರ್ಮಗಳಿಂದ ಅವರ ಪ್ರಾರಬ್ಧಕರ್ಮವು ಮಾತ್ರ ಕ್ಷೀಣಿಸುತ್ತದೆ. ಪ್ರಾರಬ್ಧಕರ್ಮವು ಕ್ಷೀಣಿಸಿದ ಕೂಡಲೇ ಈ ದೇಹದ ಸಂಬಂಧವು ಸಂಪೂರ್ಣ ತೊಲಗಿಹೋಗಿ ಮುಕ್ತಿಯು ಏರ್ಪಡುತ್ತದೆ. ಈ ಕಾರಣದಿಂದಲೂ ಮಹನೀಯರಿಗೆ ಪಾಪಕರ್ಮಗಳು ನರಕಾದ್ಯನರ್ಥಗಳಿಗೆ ಕಾರಣವಾಗಲಾರವು.

ವಿಧಿಬದ್ಧರಾದ ಮತ್ತು ಈಶ್ವರನ ಅಧೀನರಾದ ವಿಶ್ವಾಮಿತ್ರರೇ ಮೊದಲಾದವರು ಶಾಸ್ತ್ರವಿರುದ್ಧವಾದ ಕಾರ್ಯಗಳನ್ನು ಮಾಡಿದರೆ ದೋಷವಿಲ್ಲವೆಂದು ಸಿದ್ಧವಾಯಿತು. ಹೀಗಿರುವಾಗ ವಿಧಿಬದ್ಧನಲ್ಲದಿರುವ ಮತ್ತು ಸರ್ವನಿಯಾಮಕನಾಗಿರುವ ಶ್ರೀಕೃಷ್ಣದೇವನು ಮಾಡಿರುವ ಕಾರ್ಯಗಳು ಲೋಕದೃಷ್ಟಿಯಿಂದ ಶಾಸ್ತ್ರ ವಿರುದ್ಧವಾದ ಕರ್ಮಗಳಂತೆ ಕಂಡರೂ ಆ ಕರ್ಮಗಳೂ ಅವನಿಗೆ ದೋಷಕರವಲ್ಲವೆಂದೇ ತಿಳಿಯಬೇಕು.

ಶ್ರೀಹರಿಯ ಪಾದಸೇವೆಯಿಂದ ತೃಪ್ತರಾಗಿರುವವರೂ ಶ್ರೀಕೃಷ್ಣದೇವನ ಧ್ಯಾನಬಲದಿಂದಲೇ ಸಕಲ ಕರ್ಮಗಳ ಬಂಧನದಿಂದ ಬಿಡುಗಡೆಯನ್ನು ಪಡೆದವರೂ ಆಗಿರುವ ಮುನಿಗಳೂ ಸಹ ಪುತ್ರಾದಿಗಳಲ್ಲಿರುವ ಸ್ನೇಹದಿಂದಲೂ ಕರ್ಮಗಳಿಂದಲೂ ಬದ್ಧರಲ್ಲವೆಂದು ಹೇಳಿದ ಮೇಲೆ ತನ್ನ ಇಚ್ಛೆಯಿಂದಲೇ ಮನುಷ್ಯಾದಿಗಳ

ಮಧ್ಯದಲ್ಲಿ ಅವತರಿಸಿರುವ ಶ್ರೀಕೃಷ್ಣದೇವನಿಗೆ ಕರ್ಮಗಳಿಂದ ಬಂಧನವಿದೆಯೇ? ಗೋಪಿಯರ ಅವರ ಪತಿಗಳ ಮತ್ತು ಸರ್ವಪ್ರಾಣಿಗಳ ದೇಹಗಳಲ್ಲಿ ಶ್ರೀಕೃಷ್ಣದೇವನು ಅಂತರ್ಯಾಮಿಯಾಗಿ ವಾಸಿಸುತ್ತಿರುವನು. ಸರ್ವರೂ ಮಾಡುವ ಕರ್ಮಗಳಿಗೆ ಸಾಕ್ಷಿಯಾಗಿರುವನು. ತಾನು ಕ್ರೀಡಿಸುವುದಕ್ಕಾಗಿಯೇ ದೇಹವನ್ನು ಸ್ವೀಕರಿಸಿರುವನು. ಭಕ್ತರ ಅನುಗ್ರಹಕ್ಕಾಗಿಯೇ ಸ್ವೀಕರಿಸಿರುವ ಮನುಷ್ಯದೇಹದಂತಿರುವ ದೇಹದಿಂದ ಮನುಷ್ಯರಂತೆಯೇ ಕ್ರೀಡಿಸುತ್ತಿರುವನು. ಆ ಕ್ರೀಡೆಗಳೆಲ್ಲವನ್ನೂ ಕೇಳಿ ತಿಳಿದ ಮನುಷ್ಯನು ಶ್ರೀಕೃಷ್ಣದೇವನ ಮಹಿಮೆಗಳನ್ನು ತಿಳಿದು ಅವನಲ್ಲಿ ಅಪಾರಭಕ್ತಿಯನ್ನು ಪಡೆಯುವನು.

ಎಲ್ಲಾ ಗೋಪಿಕಾಸ್ತ್ರೀಯರು ಶ್ರೀಕೃಷ್ಣದೇವನೊಡನೆ ವಿಹರಿಸುತ್ತಿರುವ ಕಾಲದಲ್ಲಿಯೇ ಅವರವರ ಪತಿಗಳೊಡನೆ ಮನೆಯಲ್ಲಿಯೂ ವಾಸಿಸುತ್ತಿದ್ದರು. ಇವುಗಳೆಲ್ಲವೂ ಶ್ರೀಕೃಷ್ಣದೇವನ ಅಪಾರ ಮಹಿಮೆಗಳಿಗೆ ನಿದರ್ಶನವಾಗಿವೆ. ಆದ್ದರಿಂದ ಯಾರೂ ಶ್ರೀಕೃಷ್ಣದೇವನಲ್ಲಿ ವ್ಯಭಿಚಾರದ ಆರೋಪಣೆಯನ್ನು ಮಾಡಲಿಲ್ಲ. ತಮ್ಮ ತಮ್ಮ ಪತ್ನಿಯರಲ್ಲಿಯೂ ಅವರಿಗೆ ಸಂಶಯವು ಬರಲಿಲ್ಲ. ಇಂತಹ ಮಹಾಪುರುಷನಲ್ಲಿ ವ್ಯಭಿಚಾರದೋಷವನ್ನು ಆರೋಪಿಸಲು ಇತರರಿಂದ ಸಾಧ್ಯವೇ?

ಪ್ರತಿದಿನ ಶ್ರೀಕೃಷ್ಣದೇವನು ರಾತ್ರಿಕಾಲಗಳಲ್ಲಿ ರಾಸಕ್ರೀಡೆಯನ್ನು ಮಾಡಿದನು. ಅರುಣೋದಯಕಾಲದಲ್ಲಿ ಅವರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೋಗುವಂತೆ ಶ್ರೀಕೃಷ್ಣದೇವನು ಅನುಮತಿಯನ್ನು ಕೊಟ್ಟನು. ಅವರಿಗೆ ಇಷ್ಟವಿಲ್ಲದಿದ್ದರೂ ಶ್ರೀಕೃಷ್ಣದೇವನ ಆಜ್ಞೆಯಂತೆ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿದರು.

ಇಷ್ಟರ ವರೆಗೆ ಗೋಪಿಕಾಸ್ತ್ರೀಯರು ಶ್ರೀಕೃಷ್ಣದೇವನನ್ನು ಎಲ್ಲಾ ಕಡೆಗಳಲ್ಲಿಯೂ ಹುಡುಕಿದ ವಿಷಯವನ್ನು ಶ್ರೀಕೃಷ್ಣದೇವನು ಪ್ರತ್ಯಕ್ಷನಾದ ವಿಷಯವನ್ನೂ ವರ್ಣಿಸಿದೆವು.

ಇವುಗಳೆಲ್ಲವೂ ಭಾವಿಸಮೀರ ಶ್ರೀವಾದಿರಾಜಗುರುಸಾರ್ವಭೌಮರು ತಮ್ಮಿಂದ ರಚಿತವಾದ ಶ್ರೀರುಕ್ಮಿಣೀಶವಿಜಯದಲ್ಲಿ ಬರೆಯಲ್ಪಟ್ಟ ವಿಷಯಗಳು. ನನ್ನ ಕಲ್ಪನೆಗಳಲ್ಲ. ಆದ್ದರಿಂದ ಈ ವರ್ಣನದಿಂದ ಶ್ರೀವಾದಿರಾಜಗುರುಸಾರ್ವಭೌಮರ ಅಂತರ್ಯಾಮಿ ಯಾಗಿರುವ ಶ್ರೀಹಯವದನನು ಪ್ರೀತನಾಗಲಿ ॥೮॥

**ಹತ್ವಾ ಯಃಶಙ್ಖಚೂಡಂ ಮಣಿಮಥ ಸಮದಾದಗ್ರಜಾಯಾರ್ತಗೋಪೀ**<br>
**ಗೀತಾನೇಕಸ್ವಲೀಲೋ ಹೃತವೃಷಭಮಹಾಪೂರ್ವದೇವೋऽಮರೇಡ್ಯಃ।**<br>
**ಕೇಶಿಪ್ರಾಣಾಪಹಾರೀ ಸುರಮುನಿವದನಪ್ರಾರ್ಥಿತಾಶೇಷಕೃತ್ಯೋ**<br>
**ಹತ್ವಾ ಪುತ್ರಂ ಮಯಸ್ಯ ಸ್ವಜನಮಪಿಹಿತಂ ಮೋಚಯನ್ ಮೋಕ್ಷದಃ ಸ್ಯಾತ್ ॥**

**ಪದಚ್ಛೇದ** - ಹತ್ವಾ ಯಃ ಶಂಖಚೂಡಂ ಮಣಿಂ ಅಥ ಸಮದಾತ್ ಅಗ್ರಜಾಯ ಆರ್ತಗೋಪೀ ಗೀತಾನೇಕಸ್ವಲೀಲಃ ಹೃತವೃಷಭಮಹಾಪೂರ್ವದೇವಃ ಅಮರೇಡ್ಯಃ ಕೇಶಿಪ್ರಾಣಾಪಹಾರೀ ಸುರಮುನಿವದನ ಪ್ರಾರ್ಥಿತಾಶೇಷಕೃತ್ಯಃ ಹತ್ವಾ ಪುತ್ರಂ ಮಯಸ್ಯ ಸ್ವಜನಂ ಅಪಿಹಿತಂ ಮೋಚಯನ್ ಮೋಕ್ಷದಃ ಸ್ಯಾತ್.

**ಅನ್ವಯ** - ಯಃ ಅಥ ಶಂಖಚೂಡಂ ಹತ್ವಾ ಮಣಿಂ ಅಗ್ರಜಾಯ ಸಮದಾತ್, ಆರ್ತಗೋಪೀಗೀತಾನೇಸ್ವಲೀಲಃ ಹೃತವೃಷಭಮಹಾಪೂರ್ವದೇವಃ, ಅಮರೇಡ್ಯಃ, ಕೇಶಿಪ್ರಾಣಾಪಹಾರೀ,ಸುರಮುನಿವದನಪ್ರಾರ್ಥಿತಾಶೇಷಕೃತ್ಯಃ, ಮಯಸ್ಯ ಪುತ್ರಂ ಹತ್ವಾ, (ಗಿರಿದರ್ಯಾಂ)

ಅಪಿಹಿತಂ ಸ್ವಜನಂ ಮೋಚಯನ್, (ಸಃ) ಮೋಕ್ಷದಃ (ಮೇ) ಸ್ಯಾತ್.

ಅನ್ವಯಾರ್ಥ - "ಯಃ" ಯಾವ ಶ್ರೀಕೃಷ್ಣದೇವನು "ಅಥ" ಅನಂತರದಲ್ಲಿ "ಶಂಖಚೂಡಂ" ಶಂಖಚೂಡ ಎಂದು ಪ್ರಸಿದ್ಧನಾದ ದೈತ್ಯನನ್ನು "ಹತ್ವಾ" ಕೊಂದು "ಮಣಿಂ" ಅವನ ತಲೆಯಲ್ಲಿದ್ದ ಮಣಿಯನ್ನು "ಅಗ್ರಜಾಯ" ಅಣ್ಣನಾದ ಬಲರಾಮನಿಗೆ "ಸಮದಾತ್" ಕೊಟ್ಟನೋ "ಆರ್ತಗೋಪೀಗೀತಾನೇಕಸ್ವಲೀಲಃ" ದುಃಖಿತರಾದ ಗೋಪಿಕಾಸ್ತ್ರೀಯರಿಂದ ಗಾಯನ ಮಾಡಲ್ಪಟ್ಟು ಅನೇಕ ವಿಧವಾದ ತನ್ನ ಲೀಲೆಯುಳ್ಳವನಾದನೋ "ಹತವೃಷಭಮಹಾಪೂರ್ವದೇವಃ" ಕೊಲ್ಲಲ್ಪಟ್ಟ ಅರಿಷ್ಟ ಎಂಬ ಹೆಸರಿನಿಂದ ಪ್ರಸಿದ್ಧನಾಗಿರುವ ಪ್ರಬಲನಾದ ದೈತ್ಯನುಳ್ಳವನೋ "ಅಮರೇಡ್ಯಃ" ದೇವತೆಗಳಿಂದ ಸ್ತುತಿಸಲ್ಪಟ್ಟನೋ "ಕೇಶಿಪ್ರಾಣಾಪಹಾರೀ" ಕೇಶಿ ಎಂದು ಪ್ರಸಿದ್ಧನಾಗಿರುವ ದೈತ್ಯನ ಪ್ರಾಣಗಳನ್ನು ಹೀರಿದನೋ "ಸುರಮುನಿವದನಪ್ರಾರ್ಥಿತಾಶೇಷಕೃತ್ಯಃ" ಸುರಮುನಿಗಳಾದ ನಾರದರಿಂದ ಪ್ರಾರ್ಥಿ ಸಲ್ಪಟ್ಟು ಮುಂದೆ ಮಾಡಬೇಕಾದ ಎಲ್ಲಾ ಕೃತ್ಯಗಳುಳ್ಳವನೋ "ಮಯಸ್ಯ" ಮಯ ಎಂಬ ದೈತ್ಯನ "ಪುತ್ರಂ" ಮಗನಾದ ವ್ಯೋಮಾಸುರನನ್ನು "ಹತ್ವಾ" ಕೊಂದು (ಗಿರಿದರ್ಯಾಂ) ಗಿರಿಯ ಗುಹೆಯಲ್ಲಿ "ಅಪಿಹಿತಂ" ಮುಚ್ಚಲ್ಪಟ್ಟ "ಸ್ವಜನಂ" ತನ್ನ ಭಕ್ತರಾದ ಗೊಲ್ಲರನ್ನು "ಮೋಚಯನ್" ಬಿಡಿಸುತ್ತಿರುವವನಾದನೋ "(ಸಃ)" ಆ ಶ್ರೀಕೃಷ್ಣದೇವನು"(ಮೇ)' ನನಗೆ "ಮೋಕ್ಷದಃ" ಸಂಸಾರವೆಂಬ ಗುಹೆಯಲ್ಲಿರುವುದರಿಂದ ಏರ್ಪಟ್ಟ ಕ್ಲೇಶಗಳಿಂದ ಬಿಡಿಸುವವನು "ಸ್ಯಾತ್" ಆಗಲಿ.

(೩೩) ವಿಶೇಷಾರ್ಥ - ಯಃ ಶಂಖಚೂಡಂ ಹತ್ವಾ ಅಥ ಮಣಿಂ ಅಗ್ರಜಾಯ ಸಮದಾತ್ (ಶಂಖಚೂಡನನ್ನು ಸಂಹರಿಸಿ ಮಣಿಯನ್ನು ತನ್ನ ಅಣ್ಣನಿಗೆ ಕೊಟ್ಟನೂ)

ಶ್ರೀಕೃಷ್ಣಃ ಬಲರಾಮೇಣ ಸಹಿತಃ ಕದಾಚಿದ್ರಾತ್ರೌ ಕುಸುಮಿತವನೇ ಗೋಪಸ್ತ್ರೀಭಿಃ ಸಹ ವೇಣುನಾದಾದಿಭಿಃ ಕ್ರೀಡಾಂ ಕುರ್ವನ್ ತದಾ ಸ್ವಸಮೀಪಸ್ಥಗೋಪಾಂಗನಾ ಭೀಷಯಂತಂ ಕುಬೇರಭೃತ್ಯಂ ರುದ್ರಪ್ರಸಾದೇನಾತಿಗರ್ವಿತಂ ಶಂಖಚೂಡಾಸುರಂ ಹತ್ವಾ, ತಚ್ಛಿರಸಿ ವಿದ್ಯಮಾನಂ ರತ್ನಂ ಗೃಹೀತ್ವಾ ಬಲರಾಮಾಯ ದತ್ವಾ.

ವಿಶೇಷಾರ್ಥ ವಿವರಣ - ಒಂದು ದಿನದಲ್ಲಿ ಪೂರ್ಣಚಂದ್ರನು ಉದಯಿಸಿದನು. ಅವನ ಕಿರಣಗಳು ಎಲ್ಲಾ ಕಡೆಗಳಲ್ಲಿಯೂ ವ್ಯಾಪಿಸಿದವು. ಆ ರಾತ್ರಿಯಲ್ಲಿ ಕೆನ್ನೈದಿಲೆ ಮಲ್ಲಿಗೆ ಮುಂತಾದ ಪುಷ್ಪಗಳ ಪರಿಮಳಗಳನ್ನು ಎಲ್ಲಾ ದಿಕ್ಕುಗಳಲ್ಲಿಯೂ ಪ್ರಸರಿಸುತ್ತಾ ಗಾಳಿಯು ಮೆಲ್ಲನೆ ಬೀಸಿತು. ಶ್ರೀಕೃಷ್ಣದೇವನು ಕೊಳಲಿನಿಂದಲೂ ಕೊಳಲಿನ ಸಹಾಯವಿಲ್ಲದೆ ಬರೇ ಮುಖದಿಂದಲೂ ಹೊರಟ ವೇಣುಗಾನದಿಂದ ಸರ್ವಸ್ತ್ರೀಯರ ಮನಸ್ಸುಗಳನ್ನು ಆಕರ್ಷಿಸಿದನು. ಅವರೆಲ್ಲರೂ ಓಡಿ ಬಂದರು. ಈ ಶ್ರೇಷ್ಠವಾದ ವೇಣುಗಾನವನ್ನು ಕೇಳಿ ಮೂರ್ಛಿತರಾದರು.

ಆಗ ಅಲ್ಲಿಗೆ ಶಂಖಚೂಡ ಎಂಬ ದೈತ್ಯನು ಬಂದನು. ಅವನು ರುದ್ರದೇವರ ಮಿತ್ರನಾದ ಕುಬೇರನ ಸೇವಕನು. ಮಹಾಬಲಿಷ್ಠನು. ರುದ್ರದೇವರ ವರದಿಂದ ಅವಧ್ಯನಾಗಿರುವವನು. ಅವನು ಗೋಪಿಕಾಸ್ತ್ರೀಯರ್ರೆಲ್ಲರನ್ನೂ ಹೆದರಿಸಿದನು. ಅವರೆಲ್ಲರನ್ನೂ ಶ್ರೀಕೃಷ್ಣದೇವನ ಮುಂದೆಯೇ ಉತ್ತರಾಭಿಮುಖವಾಗಿ ಓಡಿಸಿಕೊಂಡು ಹೋದನು.

ಗೋಪಿಕಾಸ್ತ್ರೀಯರೆಲ್ಲರೂ " ಓ ಕೃಷ್ಣ, ಓ ರಾಮ, ನಮ್ಮನ್ನು ಕಾಪಾಡಬೇಕು" ಎಂದು ಕೂಗಿದರು. ಅವರೆಲ್ಲರನ್ನೂ ನೋಡಿ "ಹೆದರಬೇಡಿರಿ" ಎಂದು ಶ್ರೀಕೃಷ್ಣದೇವನು ಹೇಳಿದನು. ಬಲರಾಮನೂ ಶ್ರೀಕೃಷ್ಣದೇವನು ಎರಡು ಸಾಲ ವೃಕ್ಷಗಳನ್ನು ಕೈಗಳಲ್ಲಿ ಎತ್ತಿಕೊಂಡರು. ಅವನನ್ನು ಹಿಂಬಾಲಿಸಿಕೊಂಡು ಓಡಿದರು. ಕಾಲನಂತೆಯೂ ಮೃತ್ಯುವಿನಂತೆಯೂ ಉಗ್ರರೂಪವನ್ನು ಧರಿಸಿದ ಅವರಿಬ್ಬರನ್ನೂ ನೋಡಿದ ಶಂಖಚೂಡನು ತುಂಬ ಹೆದರಿದನು. 'ಸ್ತ್ರಿಯರನ್ನು ಮಾರ್ಗದಲ್ಲೇ ಬಿಟ್ಟನು ಆತ್ಮರಕ್ಷಣೆಗಾಗಿ ಓಡಿದನು. ಬಲರಾಮನು ಸ್ತ್ರೀಯರನ್ನು ರಕ್ಷಿಸುತ್ತಾ ನಿಂತನು. ಶ್ರೀಕೃಷ್ಣದೇವನು ಅವನು ಹೋಗುವ ಸ್ಥಳಗಳೆಲ್ಲೆಲ್ಲಾ ಅವನ ತಲೆಯಲ್ಲಿರುವ ಅಮೂಲ್ಯವಾದ ಆ ಪಟ್ಟಿನಿಂದಲೇ ಸತ್ತನು. ಅವನ ತಲೆಯಲ್ಲಿದ್ದ ಮಣಿಯನ್ನು ಕೊಟ್ಟು ತೃಪ್ತಿಪಡಿಸಿದನು. ಪ್ರಧಾನನಾದ ಶಂಖಚೂಡನನ್ನು ಸಂಹರಿಸಿ "ರಾತ್ರಿಯಲ್ಲಿ ಸಂಚರಿಸುತ್ತಿರುವ ದೈತ್ಯರೆಲ್ಲರನ್ನೂ ಇವನನ್ನು ಕೊಂದಂತೆಯೇ ಕೊಲ್ಲುವೆನು. ಇದು ನನ್ನ ಧರ್ಮ" ಎಂದು ತಿಳಿಸಿದನು. ಅವನ ತಲೆಯಲ್ಲಿದ್ದ ಮಣಿಯನ್ನು ಅಣ್ಣನಿಗೆ ಕೊಟ್ಟು ಸಾವಿರಾರು ಚಂದ್ರರಂತೆ ಪ್ರಕಾಶಿಸುತ್ತಿರುವ ಕೀರ್ತಿ ಎಂಬ ಮಣಿಯನ್ನೂ ಅಣ್ಣನಿಗೆ ಕೊಟ್ಟು ಸಾವಿರಾರು ಚಂದ್ರರಂತೆ ಪ್ರಕಾಶಿಸುತ್ತಿರುವ ಕೀರ್ತಿ ಎಂಬ ಮಣಿಯನ್ನೂ ಅಸಂಖ್ಯ ಸುಂದರಿಯರೆಂಬ ಮಣಿಗಳನ್ನೂ ತಾನು ಅನುಭವಿಸಿದನು.

(೩೪) ವಿಶೇಷಾರ್ಥ - ಆರ್ತಗೋಪೀಗೀತಾನೇಕಸ್ವಲೀಲ: ಶ್ರೀಕೃಷ್ಣಃ (ದುಃಖಿತರಾದ ಗೋಪಿಕಾಸ್ತ್ರೀಯರು ಶ್ರೀಕೃಷ್ಣದೇವನ ಲೀಲೆಗಳನ್ನು ಹಾಡಿದರು)

ಪ್ರತಿದಿನಂ ಗೋಭಿಃ ಸಹ ವನೇಷು ಸ್ವಸ್ಯ ಸಂಚಾರಸಮಯೇ ಸ್ವಮುಖಾರವಿಂದಾದರ್ಶನೇನ ದುಃಖಿತಾಭಿರ್ಗೋಪಸ್ತ್ರೀಭಿಸ್ತದ್ದುಃಖನಿವೃತ್ತಯೇ " ವಾಮಬಾಹುಕೃತವಾಮಕಪೋಲೋ ವಲ್ಗಿತ ಭ್ರುರಧರಾರ್ಪಿತವೇಣುಃ" ಇತ್ಯಾದಿನಾ ಪ್ರಕಾರೈರನುವರ್ಣಿತಚರಿತ್ರಃ -

ವಿಶೇಷಾರ್ಥ ವಿವರಣ - ಪ್ರತಿದಿನ ಶ್ರೀಕೃಷ್ಣದೇವನು ಬೆಳಿಗ್ಗೆ ಎದ್ದಕೂಡಲೇ ಪ್ರಾತಃಕಾಲದಲ್ಲಿ ಮಾಡಬೇಕಾಗಿರುವ ಎಲ್ಲಾ ಕಾರ್ಯಗಳನ್ನೂ ಮಾಡಿ ಮುಗಿಸುವನು. ತನ್ನ ಸಂಗಡಿಗರೊಡನೆ ದನಗಳನ್ನು ಓಡಿಸುತ್ತಾ ಕಾಡಿಗೆ ಹೋಗುವನು. ಬೆಳಗಿನಿಂದ ಸಾಯಂಕಾಲದವರೆಗೆ ಕಾಡಿನಲ್ಲಿಯೇ ವಾಸಿಸುತ್ತಿರುವನು. ಆ ಸಮಯವು ಗೋಪಿಕಾಸ್ತ್ರೀಯರಿಗೆ ದುಃಖಮಯವಾಗುತ್ತದೆ. ಆ ಸಮಯದಲ್ಲಿ ಗೋಪಿಕಾಸ್ತ್ರೀಯರೆಲ್ಲರೂ ಒಟ್ಟುಗೂಡಿ ಶ್ರೀಕೃಷ್ಣದೇವನ ವೇಣುಗಾನದ ಪ್ರಭಾವವನ್ನು ಹೊಗುಳುತ್ತಿರುವರು. ಗೋಪಿಕಾಸ್ತ್ರೀಯರು ಹಾಡಿರುವ ವೇಣುಗೀತೆಯನ್ನು ಈಗ ವಿವರಿಸುವೆವು.

ಶ್ರೀಕೃಷ್ಣದೇವನು ತನ್ನ ಎಡಭುಜವನ್ನು ಮೇಲೆ ಎತ್ತಿಕೊಂಡಿರುವನು. ಆಗ ಶ್ರೀಕೃಷ್ಣದೇವನ ಎಡಕೆನ್ನೆಯು ಆ ಎಡಭುಜದ ಮೇಲೆ ಒರಗಿದಂತೆ ಇರುತ್ತದೆ. ಹುಬ್ಬುಗಳನ್ನು ಹಾರಿಸುತ್ತಿರುವನು. ಕೆಳತುಟಿಯ ಮೇಲೆ ಕೊಳಲನ್ನು ತಾಗಿಸುವನು. ಕೋಮಲವಾದ ತನ್ನ ಬೆರಳುಗಳಿಂದ ಕೊಳಲಿನ ರಂಧ್ರಗಳನ್ನು ಕ್ರಮವಾಗಿ ಮುಚ್ಚುತ್ತಾ ಹಾಡುತ್ತಿರುವನು.

ಆಗ ದೇವಲೋಕದ ಪ್ರಸಿದ್ಧ ಸಂಗೀತಗಾರರಾದ ಸಿದ್ಧರಿಂದ ಸಹಿತರಾದ ದೇವತಾಸ್ತ್ರೀಯರು ವಿಮಾನಗಳಲ್ಲಿ ಕುಳಿತು ಶ್ರೀಕೃಷ್ಣದೇವನ ಸಂಗೀತವನ್ನು ಕೇಳುವುದಕ್ಕಾಗಿ ಬರುವರು. ಈ ಸಂಗೀತವನ್ನು ಕೇಳಿ ಆಶ್ಚರ್ಯಪಡುವರು. ಹಾಗೆಯೇ ಹಾಡಬೇಕೆಂದು ಪ್ರಯತ್ನಿಸುವರು. ಸಾಧ್ಯವಾಗದೇ ಲಜ್ಜಿತರಾಗುವರು. ಕೊನೆಗೆ ಅವರಲ್ಲಿ ಮನ್ಮಥವಿಕಾರವು ಏರ್ಪಡುವುದು. ಆ ಮನ್ಮಥವಿಕಾರದಿಂದ ಅವರ ಸೀರೆಯ ಗಂಟುಗಳು ಜಾರಿ ಕೆಳಗೆ ಬೀಳುವವು.

ಅವುಗಳನ್ನೂ ತಿಳಿಯದೆ ಮೂರ್ಛಿತರಾಗಿ ಅವರೂ ಕೆಳಗೆ ಬೀಳುವರು. ಎಲೈ ಸಖಿಯರೆ!, ಶ್ರೀಕೃಷ್ಣದೇವನ ವೇಣುಗಾನದ ಮಹಿಮೆಯನ್ನು ಎಷ್ಟೆಂದು ಹೊಗಳಲಿ?

ಎಲೈ ಸಖಿಯರೆ! ಕೇಳಿರಿ. ಶ್ರೀಕೃಷ್ಣದೇವನು ಮುತ್ತಿನ ಹಾರಗಳನ್ನು ಧರಿಸಿರುವನು. ಅವನ ಎದೆಯು ಮುತ್ತಿನ ಹಾರಗಳಿಂದ ಹೊಳೆಯುತ್ತಿದೆ. ಅವನು ನಗುವಾಗ ಅವನ ದಂತಪಂಕ್ತಿಯು ಮುತ್ತಿನ ಮಾಲೆಯಂತೆ ಶೋಭಿಸುತ್ತಿದೆ. ಅವನ ಎದೆಯಲ್ಲಿ ಮಿಂಚಿನಂತೆ ಹೊಳೆಯುತ್ತಿರುವ ಶ್ರೀವತ್ಸಚಿಹ್ನವಿದೆ. ಅವನು ಸಂಸಾರದುಃಖದಿಂದ ಪೀಡಿತರಾದವರಿಗೆ ಸರ್ವರಿಗೂ ಮುಕ್ತಿಸುಖವನ್ನು ಕೊಟ್ಟು ಸಂತೋಷಪಡಿಸುತ್ತಿರುವನು. ಅಂತಹ ಶ್ರೀಕೃಷ್ಣದೇವನು ಕೊಳಲನ್ನು ಊದುತ್ತಿರುವನು.

ಆಗ ವೃಂದಾವನದಲ್ಲಿರುವ ಎತ್ತುಗಳೂ ಗೋವುಗಳೂ ಈ ವೇಣುಗಾನದಿಂದ ಪರವಶವಾದ ಮನಸ್ಸುಗಳಿಂದ ಯುಕ್ತವಾಗಿ ಗುಂಪುಗುಂಪಾಗಿ ಶ್ರೀಕೃಷ್ಣದೇವನ ಸುತ್ತಲೂ ನಿಲ್ಲುತ್ತವೆ. ಬಾಯಿಯಲ್ಲಿ ಕಚ್ಚಿದ ಹುಲ್ಲುಗಳನ್ನು ಮುಂದೆ ಅಗಿಯುವುದನ್ನು ಮರೆಯುತ್ತವೆ. ಕಿವಿಗಳನ್ನು ಮೇಲ್ಮುಖವಾಗಿ ಮಾಡಿಕೊಂಡು ಅಲ್ಲಾಡಿಸದಂತೆ ನಿಂತುಬಿಡುತ್ತವೆ. ಚಿತ್ರದಲ್ಲಿ ಬರೆದ ಬೊಂಬೆಗಳಂತಾಗಿ ಬಿಡುತ್ತವೆ. ಆಹಾ ಇದೇನಾಶ್ಚರ್ಯ! ಇದು ಇನ್ನೊಬ್ಬಳ ಮಾತು.

ಎಲೈ ಸಖಿಯೇ, ನವಿಲಿನ ಗರಿಗಳಿಂದ ನಿರ್ಮಿತವಾದ ಶಿರೋಭೂಷಣದಿಂದಲೂ ಗಿರಿಗಳಲ್ಲಿ ಹುಟ್ಟಿರುವ ಮನಃಶಿಲಾ ಮುಂತಾದ ಧಾತುಗಳಿಂದಲೂ ಮಾವಿನ ಚಿಗುರು ಮುಂತಾದ ಚಿಗುರುಗಳಿಂದಲೂ ಜಟ್ಟಿಯ ವೇಷದಂತೆ ವೇಷವನ್ನು ಬಲರಾಮನೊಡನೆ ಒಮ್ಮೊಮ್ಮೆ ಶ್ರೀಕೃಷ್ಣದೇವನು ಧರಿಸುವುದುಂಟು. ಹಾಗೆ ಧರಿಸಿ ಗೋವುಗಳ ಹೆಸರುಗಳನ್ನು ಹೇಳುತ್ತಾ ಅವುಗಳನ್ನು ಕರೆಯುವುದುಂಟು.

ಆಗ ಅಲ್ಲಿ ಹರಿಯುತ್ತಿರುವ ನದಿಗಳು ತೀರದಲ್ಲಿರುವ ಅಥವಾ ಗಾಳಿಯಿಂದ ತರಲ್ಪಟ್ಟ ಶ್ರೀಕೃಷ್ಣದೇವನ ಪಾದಧೂಳಿಗಳನ್ನು ತಮ್ಮ ಸರ್ವಾಂಗಗಳಲ್ಲಿಯೂ ಧರಿಸುತ್ತಿರುವವು. ಆಗ ಅವುಗಳೆಲ್ಲವೂ ಪರಮ ಪುಣ್ಯಗಳಿಂದ ಯುಕ್ತವಾಗುವವು. ಅವುಗಳ ಮೇಲೆ ಶ್ರೀಕೃಷ್ಣದೇವನಿಂದ ಕಾಮವಿಕಾರವು ಏರ್ಪಟ್ಟು ಅವುಗಳ ಅಲೆಗಳೆಂಬ ಕೈಗಳು ನಡುಗುವವು. ಅವುಗಳ ವೇಗಗಳೂ ಕಡಿಮೆಯಾಗುತ್ತವೆ. ಕೊನೆಗೆ ಸರೋವರದಂತೆ ನಿಶ್ಚಲವಾದ ಅಲೆಗಳಿಂದ ಯುಕ್ತವಾಗಿ "ಸರಿತ್" ಅಂದರೆ " ಯಾವಾಗಲೂ ಹರಿಯುತ್ತಿರುವವುಗಳು" ಎಂಬ ಹೆಸರನ್ನು ಬಿಟ್ಟು ಬಿಡುತ್ತವೆ.

ಎಲೈ ಸಖಿಯೇ! ಮೂಲರೂಪಿಯಾದ ಪದ್ಮನಾಭನನ್ನು ಸನಕಾದಿಮುನಿಗಳು ಯಾವಾಗಲು ಸ್ತುತಿ ಸ್ತುತಿರುವರು. ಅವನ ಸಂಪತ್ತು ನಿಶ್ಚಲವಾದುದು. ಎಲ್ಲಾ ವೇದಗಳೂ ವಾಯುದೇವನ ಮುಖದಲ್ಲಿ ವಾಸಿಸುತ್ತಿರುವವು. ಪದ್ಮನಾಭನು ಆ ವೇದವಾಕ್ಯಗಳಿಗೆ ಅರ್ಥಗಳನ್ನು ಹೇಳುತ್ತಾ ಸರ್ವರಿಗೂ ವೇದಗಳನ್ನು ಉಪದೇಶಿಸುತ್ತಿರುವನು.

ಆ ಪದ್ಮನಾಭನಂತೆ ಶ್ರೀಕೃಷ್ಣದೇವನೂ ಸಹ ತನ್ನ ಸಂಗಡಿಗರಾದ ಗೊಲ್ಲಬಾಲಕರಿಂದ ಹೊಗಳಲ್ಪಡುತ್ತಿರುವನು. ಸ್ಥಿರವಾದ ಸಂಪತ್ತಿನಿಂದ ಯುಕ್ತನಾಗಿರುವನು. ಕಾಡು ಕಾಡುಗಳಲ್ಲಿ ಸುತ್ತುತ್ತಿರುವನು. ವಾಯುದೇವನ ಮುಖಗಳಂತಿರುವ ಪರ್ವತಗಳ ಮೇಲ್ಭಾಗದಲ್ಲಿ ಸಂಚರಿಸುತ್ತಿರುವ ದನಗಳ ಹೆಸರುಗಳನ್ನು ಒಂದೊಂದಾಗಿ ಹೇಳುತ್ತಾ ಅವುಗಳನ್ನು ಕರೆಯುತ್ತಿರುವನು.

ಪದ್ಮನಾಭನು ತನ್ನನ್ನು ಭಕ್ತಿಯಿಂದ ಆರಾಧಿಸುತ್ತಿರುವ ಭಕ್ತರನ್ನು ಪ್ರೇಮದಿಂದ ನೋಡುವನು. ಅವರೆಲ್ಲರೂ ತಮ್ಮ ಹೃದಯದಲ್ಲಿರುವ ಪದ್ಮನಾಭನನ್ನು ಭಕ್ತಿಯಿಂದ ನೋಡುತ್ತಿರುವರು. ಆದ್ದರಿಂದಲೇ ಜೀವನ್ಮುಕ್ತಿಯನ್ನು ಪಡೆದಿರುವರು. ಎರಡು ಕೈಗಳನ್ನು ತಲೆಯ ಮೇಲೆ ಜೋಡಿಸಿಕೊಳ್ಳುತ್ತಾ ನಮಸ್ಕರಿಸುತ್ತಿರುವರು. ಭಕ್ತಿಯ ಉದ್ರೇಕದಿಂದ ಅವರೆಲ್ಲರ ದೇಹಗಳಲ್ಲಿಯೂ ರೋಮಾಂಚವು ಏರ್ಪಡುತ್ತಿರುವುದು. ಅವರೆಲ್ಲರೂ ಕಾಡುಗಳಲ್ಲಿ ವಾಸಿಸುತ್ತಾ ನಿವೃತ್ತಿ ಧರ್ಮಗಳನ್ನು ಅನುಷ್ಠಿಸುತ್ತಿರುವರು. ಗ್ರೀಷ್ಮರ್ತುಗಳಲ್ಲಿ ಬೆಳಗಿನಿಂದ ಸಾಯಂಕಾಲದವರೆಗೂ ಬಿಸಿಲಿನಲ್ಲಿ ತಮ್ಮ ನಾಲ್ಕು ದಿಕ್ಕುಗಳಲ್ಲಿಯೂ ಬೆಂಕಿಯನ್ನು ಹಾಕಿಕೊಂಡವರಾಗಿ ಪಂಚಾಗ್ನಿ ತಪಸ್ಸನ್ನು ಮಾಡುತ್ತಿರುವರು. ವರ್ಷರ್ತುವಿನಲ್ಲಿ ಮಳೆಯಲ್ಲಿ ತಪಸ್ಸನ್ನೂ, ಹೇಮಂತರ್ತುವಿನಲ್ಲಿ ನೀರಿನ ಮಧ್ಯದಲ್ಲಿ ಕುತ್ತಿಗೆಯ ವರೆಗೆ ಮುಳುಗಿ ತಪಸ್ಸನ್ನು ಮಾಡುತ್ತಿರುವರು. ಇವರಲ್ಲಿ ಕೆಲವರು ಜೀವನ್ಮುಕ್ತರಾಗಿ ಪರಮಮೋಕ್ಷಕ್ಕಾಗಿ ಸಾಧನವನ್ನು ಮಾಡುತ್ತಿರುವರು. ಮತ್ತೆ ಕೆಲವರು ಮುಕ್ತ್ಯವಸ್ಥೆಯನ್ನು ಪಡೆಯುತ್ತಿರುವರು. ಇನ್ನು ಕೆಲವರು ಮುಕ್ತಿಯನ್ನು ಪಡೆದಿರುವರು. ಇವರೆಲ್ಲರೂ ಜ್ಞಾನಗಳನ್ನು ಹೆಚ್ಚು ಹೆಚ್ಚಾಗುವಂತೆ ಮಾಡಿಕೊಳ್ಳುತ್ತಾ ಕೊನೆಗೆ ಪೂರ್ಣವಾದ ಆನಂದವನ್ನು ಅನುಭವಿಸುತ್ತಿರುವರು.

ಈ ಪದ್ಮನಾಭನಂತಿರುವ ಮತ್ತು ವೇಣುಗಾನವನ್ನು ಮಾಡುತ್ತಿರುವ ಶ್ರೀಕೃಷ್ಣದೇವನನ್ನು ಭಕ್ತರಂತಿರುವ ಮರಗಳೂ ಬಳ್ಳಿಗಳೂ ಪುಷ್ಪಗಳ ಮತ್ತು ಫಲಗಳ ಭಾರದಿಂದ ತಲೆಯನ್ನು ಬಗ್ಗಿಸಿ ನಮಸ್ಕರಿಸುತ್ತಿರುತ್ತವೆ. ಈ ಮರಗಳ ಮತ್ತು ಬಳ್ಳಿಗಳ ಸಕಲ ಶಾಖೆಗಳೂ ಹೀಗೆಯೇ ಬಗ್ಗಿ ನಮಸ್ಕರಿಸುತ್ತಿರುತ್ತವೆ. ಪ್ರೇಮದಿಂದ ರೋಮಾಂಚನಗಳಿಂದ ಯುಕ್ತವಾಗಿವೆ. ಅಮೃತದಂತಿರುವ ರಸಗಳ ಧಾರೆಗಳನ್ನು ಸುರಿಸುತ್ತಿರುತ್ತವೆ. ಈ ವೇಣುಗಾನದ ಪ್ರಭಾವವನ್ನು ಏನೆಂದು ವರ್ಣಿಸಲಿ?

ಎಲೈ ಸಖಿಯೇ, ಶ್ರೀಕೃಷ್ಣದೇವನು ತನ್ನ ಕಂಠದಲ್ಲಿ ಸುಂದರವಾದ ಅರಳಿದ ಕನ್ನೈದಿಲೆಗಳ ಮಾಲೆಯನ್ನೂ ದೇವಲೋಕದ ಪರಿಮಳದಿಂದ ಯುಕ್ತವಾಗಿರುವ ತುಳಸಿಯ ಮಾಲೆಯನ್ನೂ ಧರಿಸುತ್ತಿರುವನು. ಆ ಮಾಲೆಗಳಲ್ಲಿರುವ ಜೇನಿನ ರಸವನ್ನು ಭ್ರಮರಗಳು ಕುಡಿಯುತ್ತಿವೆ. ಈ ಕುಡಿತದಿಂದ ಮತ್ತವಾದ ಭ್ರಮರಗಳು ಅತ್ಯಂತ ಪ್ರಿಯವಾಗಿರುವ ಸಂಗೀತವನ್ನು ಗಂಭೀರ ಧ್ವನಿಯಿಂದ ಹಾಡಲು ಆರಂಭಿಸುತ್ತವೆ. ಆ ಸಂಗೀತವನ್ನು ಕೇಳುತ್ತಾ ಶ್ರೀಕೃಷ್ಣದೇವನು ಹೊಗಳುವನು.

ಆಗ ಸರೋವರದಲ್ಲಿ ವಿಹರಿಸುತ್ತಿರುವ ಸಾರಸಪಕ್ಷಿಗಳೂ ಹಂಸಪಕ್ಷಿಗಳೂ ಒಟ್ಟುಗೂಡಿ ಈ ಸಂಗೀತವನ್ನು ಪರವಶವಾಗಿ ಏಕಾಗ್ರಮನಸ್ಸಿನಿಂದ ಕೇಳುತ್ತಿರುವವು. ಕಣ್ಣುಗಳನ್ನು ಅರ್ಧದ ವರೆಗೆ ಮುಚ್ಚಿಕೊಂಡು ಮೌನವ್ರತವನ್ನು ಧರಿಸಿ ಶ್ರೀಕೃಷ್ಣದೇವನನ್ನು ಸೇವಿಸುತ್ತಿರುವವು.

ಎಲೈ ಸಖಿಯರೇ, ಬಲರಾಮನಿಂದ ಸಹಿತನಾದ ಶ್ರೀಕೃಷ್ಣದೇವನು ಮಾಲೆಗಳನ್ನೂ ಕರ್ಣಾಭರಣಗಳನ್ನೂ ಧರಿಸಿರುವನು. ಈ ಮಾಲೆಗಳೂ ಕರ್ಣಾಭರಣಗಳೂ ಶ್ರೀಕೃಷ್ಣದೇವನ ದೇಹದಲ್ಲಿರುವುದರಿಂದ ಅವುಗಳಿಗೆ ವಿಶೇಷ ಶೋಭೆಯು ಏರ್ಪಟ್ಟಿರುತ್ತದೆ. ಪರ್ವತದ ಶಿಖರದಲ್ಲಿ ನಿಂತು ತುಂಬಾ ಸಂತುಷ್ಟನಾದಂತೆ ನಟಿಸುತ್ತಾ ಕೊಳಲಿನ ಧ್ವನಿಯಿಂದ ಗೋಪಿಕಾಸ್ತ್ರೀಯರನ್ನೂ ಗೋವುಗಳನ್ನೂ ಕರೆಯುತ್ತಿರುವನು. ಶ್ರೀಕೃಷ್ಣದೇವನು ಕರೆದಕೂಡಲೇ ಅವನ ಹೊಟ್ಟೆಯಲ್ಲಿರುವ ಸರ್ವ ಪ್ರಾಣಿಗಳೂ ತಲೆಯನ್ನು ಮೇಲ್ಮುಖವಾಗಿ ಮಾಡಿಕೊಂಡು ನೋಡುತ್ತಿರುತ್ತವೆ.

ಶ್ರೀಕೃಷ್ಣದೇವನ ಕೊಳಲಿನ ಧ್ವನಿಗಿಂತ ಅಧಿಕವಾದ ಧ್ವನಿಯನ್ನು ಮಾಡಿದರೆ ಅವನನ್ನು ಮೀರಿದಂತಾಗುವುದು ಎಂಬ ಭಯದಿಂದ ಮೇಘವು ಮೆಲ್ಲ ಮೆಲ್ಲಗೆ ವೇಣುಗಾನಕ್ಕೆ ಅನುಗುಣವಾಗಿ ಗರ್ಜಿಸುತ್ತಿರುತ್ತದೆ. ತನ್ನಂತೆಯೇ ನೀಲವರ್ಣದಿಂದ ಯುಕ್ತನಾಗಿರುವ ಶ್ರೀಕೃಷ್ಣದೇವನನ್ನು ತನ್ನ ಮಿತ್ರನೆಂದು ಭಾವಿಸಿ ಪುಷ್ಪಗಳಂತಿರುವ ಚಿಕ್ಕ ಚಿಕ್ಕ ಹನಿಗಳಿಂದ ಅಭಿಷೇಕ ಮಾಡಿಸುತ್ತವೆ. ತನ್ನ ನೆರಳುಗಳಿಂದ ಕೊಡೆಯನ್ನು ಹಿಡಿಯುತ್ತವೆ.

ಎಲೈ ಯಶೋದೆಯೇ! ನಿನ್ನ ಮಗನು ಗಂಧರ್ವರಿಗೆ ತಿಳಿದಿರುವ ವಿವಿಧವಾದ ಗೀತಮಾರ್ಗದಲ್ಲಿ ನಿಪುಣನಾಗಿರುವನು. ತಮ್ಮ ತಮ್ಮ ಜಾತಿಗಳಿಗೆ ಯೋಗ್ಯವಾದ ಸ್ವಭಾವದಲ್ಲಿಯೂ ವ್ಯಾಪಾರಗಳಲ್ಲಿಯೂ ನಿಪುಣನಾಗಿರುವನು. ಎಲ್ಲರಿಗೂ ಆಪತ್ತು ಬಂದಿರುವಾಗ ಆ ಆಪತ್ತುಗಳಲ್ಲಿ ಯಾವ ಆಪತ್ತನ್ನು ಯಾವ ರೀತಿಯಿಂದ ಪರಿಹರಿಸಬೇಕು ಎಂಬ ವಿಷಯದಲ್ಲಿಯೂ ನಿಪುಣನು. ಅದನ್ನು ತೊಂಡೆಹಣ್ಣಿನಂತೆ ಅತಿ ಮೃದುವಾಗಿರುವ ತನ್ನ ತುಟಿಗಳಲ್ಲಿ ಕೊಳಲನ್ನು ಇಡುವನು. ಕಿವಿಗೆ ಅತ್ಯಂತ ತೃಪ್ತಿಕರವಾಗಿರುವ ಷಡ್ಜಾದಿಸ್ವರಗಳನ್ನು ಬಾರಿಸುತ್ತಾ ವೇಣುವಾದ್ಯದಲ್ಲಿ ತನಗಿರುವ ಪಾಂಡಿತ್ಯವನ್ನು ವ್ಯಕ್ತಪಡಿಸುವನು. ಆಗ ದೇವತೆಗಳೂ ದೇವತಾಸ್ತ್ರೀಯರೂ ಆ ಗಾನವನುನ ಆಲಿಸಿ ಕೇಳುತ್ತಿರುವರು. ಸಂಗೀತದಲ್ಲಿ ಮಹಾಜ್ಞಾನಿಗಳಾಗಿದ್ದರೂ ಅಪೂರ್ವವಾಗಿರುವ ಮತ್ತು ತಾವು ಇಷ್ಟರವರೆಗೆ ಕೇಳದಿರುವ ಸಂಗೀತವನ್ನು ಕೇಳಿದ್ದರಿಂದ ಆಶ್ಚರ್ಯಯುಕ್ತರಾಗುದರು. ಆ ಸಂಗೀತದ ಸ್ವರತಾಳ ಮುಂತಾದವುಗಳನ್ನು ತಿಳಿಯಬೇಕೆಂದು ಪ್ರಯತ್ನಿಸುವರು. ಕೊನೆಗೆ ತಿಳಿಯಲು ಸಾಧ್ಯವಾಗದೆ ತಲೆಯನ್ನು ತಗ್ಗಿಸುವರು. ಮೂರ್ಛಿತರಾಗುವರು.

ಎಲೈ ಸ್ತ್ರೀಯರೆ, ಶ್ರೀಕೃಷ್ಣದೇವನ ಪಾದಗಳು ಧ್ವಜ, ವಜ್ರ, ಅಂಕುರ ಕಮಲ ಮುಂತಾದ ರೇಖೆಗಳಿಂದಲೂ ಮಚ್ಚೆಗಳಿಂದಲೂ ಆಭರಣಗಳಿಂದಲೂ ಯುಕ್ತವಾಗಿವೆ. ಆ ಪಾದಗಳ ಗುರುತುಗಳು ಸ್ವಾಭಾವಿಕವಾಗಿಯೂ ಇತರರಿಂದ ಸೋಲಿಸಲು ಸಾಧ್ಯವಿಲ್ಲದವುಗಳೂ ಆಗಿವೆ. ಆ ಪಾದಗಳಲ್ಲಿರುವ ಬೆರಳುಗಳು ಕಮಲದ ದಳಗಳಂತಿವೆ. ಇಂತಹ ಮೃದುವೂ ಸುಂದರವೂ ಆಗಿರುವ ಪಾದಗಳಿಂದ ಬೃಂದಾವನದಲ್ಲಿರುವ ಭೂಮಿಯಲ್ಲಿ ಕಾಲನ್ನಿಡುವನು. ಇಂತಹ ಪಾದಗಳ ಸ್ಪರ್ಶದಿಂದ ವೃಂದಾವನ ಭೂಮಿಗೆ ಗೋವುಗಳ ಕಠಿನವಾದ ಗೊರಸುಗಳ ಸ್ಪರ್ಶದಿಂದ ಏರ್ಪಟ್ಟಿರುವ ನೋವನ್ನು ಪರಿಹರಿಸುವನು. ದೊಡ್ಡ ಶರೀರದಿಂದ ಯುಕ್ತನಾಗಿ ಆನೆಯಂತೆಯೂ ಎತ್ತಿನಂತೆಯೂ ಗಂಭೀರವಾದ ನಡೆಯಿಂದ ನಡೆಯುತ್ತಿರುವನು. ಬೆಳಿಗ್ಗೆ ಅರುಣೋದಯಕಾಲದಲ್ಲಿ ನಮ್ಮೊಡನೆ ರಾಸಲೀಲೆಯನ್ನು ಮುಗಿಸಿ ನಮ್ಮ ನಮ್ಮ ಮನೆಗಳಿಗೆ ಕಳುಹಿಸಿದವನು ಸಾಯಂಕಾಲದ ವರೆಗೂ ಕಾಡಿನಲ್ಲಿಯೇ ವಾಸಿಸುತ್ತಿದ್ದು ಸಾಯಂಕಾಲದಲ್ಲಿ ಮನೆಗೆ ಹಿಂದಿರುಗಿ ಬರುವನು. ಹಗಲಿನಲ್ಲೆಲ್ಲಾ ಕಾಣಿಸದವನು ನಾನಾ ವಿಧವಾದ ವಿಲಾಸಗಳಿಂದ ಯುಕ್ತವಾದ ಕಡೆಗಣ್ಣಿನ ನೋಟಗಳಿಂದ ನಮ್ಮನ್ನು ನೋಡುವನು. ಆಗ ಕಾಮೋದ್ರೇಕವೂ ಮೋಹವೂ ನಮಗೆ ಏರ್ಪಡುತ್ತದೆ. ಆಗ ನಮ್ಮ ಜಡೆಗಳ ಗಂಟುಗಳೂ ಸೀರೆಗಳ ಗಂಟುಗಳೂ ಶಿಥಿಲವಾಗುತ್ತವೆ. ನಾವೆಲ್ಲರೂ ಒಂದೂ ತಿಳಿಯದ ಸ್ಥಾವರ ಜೀವರಂತಿರುವೆವು. ನಮ್ಮ ಸೀರೆ ಮುಂತಾದವುಗಳು ಜಾರಿ ಬಿದ್ದದ್ದೂ ನಮಗೆ ತಿಳಿಯುವುದಿಲ್ಲ.

ಎಲೈ ಯಶೋದೆಯೇ, ನಿನ್ನ ಮಗನು ಕೌಸ್ತುಭಮಣಿಯನ್ನು ಕಂಠದಲ್ಲಿ ಧರಿಸಿರುವನು. ಅವನ ಕಂಠದಲ್ಲಿರುವ ಮಾಲೆಗಳಲ್ಲಿ ತುಳಸೀ ಮಾಲೆಯ ಪರಿಮಳವು ಅವನಿಗೆ ತುಂಬಾ ಪ್ರಿಯವಾದುದು. ತುಳಸೀಮಾಲೆ ಯನ್ನು ಕಂಠದಲ್ಲಿ ಧರಿಸುತ್ತಾ ತನ್ನ ಪ್ರಿಯನಾದ ಒಬ್ಬ ಗೊಲ್ಲಬಾಲಕನ ಹೆಗಲಿನಲ್ಲಿ ಕೈಗಳನ್ನು ಇಟ್ಟುಕೊಂಡು

ಕಾಡಿನಿಂದ ಹಿಂದಿರುಗಿ ವೃಂದಾವನಕ್ಕೆ ಕೊಳಲನ್ನು ಊದುತ್ತಾ ಬರುತ್ತಿರುವನು. ಆಗ ಕೃಷ್ಣಮೃಗಗಳ ಪತ್ನಿಯರ ಮನಸ್ಸುಗಳೆಲ್ಲವೂ ಅತ್ಯಂತ ಆಸೆಯಿಂದ ಶ್ರೀಕೃಷ್ಣದೇವನನ್ನು ನೋಡುತ್ತಿರುವವು. ಗುಣಸಮುದ್ರನೂ ವೇಣುಗಾನವನ್ನು ಮಾಡುತ್ತಿರುವವನೂ ಆಗಿರುವ ಶ್ರೀಕೃಷ್ಣದೇವನ ಹಿಂದೆಯೇ ಬರುತ್ತಿರುತ್ತವೆ. ಅವುಗಳನ್ನು ನೋಡಿದರೆ ಮನೆಗಳನ್ನೂ ಪತಿಗಳನ್ನೂ ಮರೆತಿರುವ ನಾವೆಲ್ಲರೂ ಶ್ರೀಕೃಷ್ಣದೇವನ ಹಿಂದೆ ಹೋದಂತೆ ತೋರುತ್ತದೆ.

ಎಲೈ ಪುಣ್ಯವತಿಯಾದ ಯಶೋದೆಯೇ! ನಿನ್ನ ಮಗನು ಮಲ್ಲಿಗೆ ಮಾಲೆಗಳಿಂದ ಅಲಂಕೃತನಾಗಿರುವನು. ವಿವಾಹಕಾಲದಲ್ಲಿ ಕಟ್ಟು ಕಂಕಣಸೂತ್ರವನ್ನು ಕೈಯಲ್ಲಿ ಧರಿಸಿರುವನು. ಗೋವುಗಳಿಂದಲೂ ಗೋಪಾಲಕರಿಂದಲೂ ಯುಕ್ತನಾಗಿ ತನ್ನ ಪ್ರಿಯರಾದವರನ್ನು ತಮಾಷೆ ಮಾತುಗಳಿಂದ ತೃಪ್ತಿಪಡಿಸುತ್ತಿರುವನು. ಯಮುನಾ ನದೀತೀರದಲ್ಲಿ ನಮ್ಮೊಡನೆ ವಿಹರಿಸಿದನು. ಆಗ ಗಂಧದ ಪರಿಮಳವನ್ನು ಸಮರ್ಪಿಸುತ್ತಾ ವಾಯುದೇವನು ಮೆಲ್ಲಮೆಲ್ಲಗೆ. ಅನುಕೂಲನಾಗಿ ಬೀಸಿದನು. ಆಗ ದೇವತೆಗಳ ಸಮೀಪದಲ್ಲಿರುವ ಗಂಧರ್ವರೂ ಸ್ತುತಿಪಾಠಕರೂ ಸಂಗೀತದಿಂದಲೂ ಕಾಣಿಕೆಗಳಿಂದಲೂ ಶ್ರೀಕೃಷ್ಣದೇವನನ್ನು ಸಂತೋಷಪಡಿಸುತ್ತಾ ಸುತ್ತಿಕೊಂಡರು.

ಎಲೈ ಯಶೋದೆಯೇ, ವೃಂದಾವನದಲ್ಲಿರುವ ಗೋವುಗಳಲ್ಲಿ ನಿನ್ನ ಮಗನು ಅತ್ಯಂತ ಪ್ರೇಮವುಳ್ಳವನು. ಅವನ ಮಹಿಮೆಯನ್ನು ಇತರರಿಂದ ನಮಸ್ಕರಿಸುತ್ತಿರುವರು. ಸಾಯಂಕಾಲ ಎಲ್ಲಾ ಗೋವುಗಳನ್ನು ಹಿಂದಿರುಗಿಸಿಕೊಂಡು ವೇಣುಗಾನವನ್ನು ಮಾಡುತ್ತಾ ಬರುತ್ತಿರುವನು. ಅವನ ಸೇವಕರಾದ ಗೊಲ್ಲಬಾಲಕರೆಲ್ಲರೂ ಅವನ ಮಹಿಮೆಗಳನ್ನು ಹೊಗಳುತ್ತಿರುವರು. ಆಗ ಅವನು ವನಸಂಚಾರದಿಂದ ಏರ್ಪಟ್ಟ ಶ್ರಮವನ್ನು ಪರಿಹರಿಸಿಕೊಳ್ಳುವನು. ತನ್ನನ್ನು ನೋಡುವವರ ಕಣ್ಣುಗಳಿಗೆ ಉತ್ಸವವನ್ನು ಕೊಡುತ್ತಿರುವನು. ದೇವಕೀದೇವಿಯ ಹೊಟ್ಟೆಯಿಂದ ಅವತರಿಸಿರುವ ಶ್ರೀಕೃಷ್ಣದೇವನು ಚಂದ್ರನಂತೆ ಶೋಭಿಸುತ್ತಿರುವನು. ತನ್ನ ಅನಿಮಿತ್ತ ಬಂಧುಗಳ ಇಷ್ಟಾರ್ಥಗಳನ್ನು ಪೂರೈಸುತ್ತಿರುವನು.

ಎಲೈ ಸಖಿಯರೆ!, ಶ್ರೀಕೃಷ್ಣದೇವನ ವೇಣುಗಾನದ ಪ್ರಭಾವವನ್ನು ಹೇಳಿದೆವು. ಈಗ ಬಲರಾಮನ ಪ್ರಭಾವವನ್ನು ತಿಳಿಸುವೆನು. ವಾರುಣಿ ಎಂಬ ಮದ್ಯವನ್ನು ಇವನು ಯಾವಾಗಲೂ ಸೇವಿಸುತ್ತಿರುವನು. ಆ ಮದ್ಯದ ಪಾನದಿಂದ ಮದವು ಏರ್ಪಟ್ಟು ಆ ಮದದಿಂದ ಅವನ ಕಣ್ಣುಗಳು ಸ್ವಲ್ಪ ಸುತ್ತುತ್ತಿರುತ್ತವೆ. ಮಹಾಮಾನಿಗಳಾದ ಸ್ತ್ರೀಯರೂ ಸಹ ಇವನ ಕಾಲುಗಳಲ್ಲಿ ಬೀಳುವರು. ಇವನು ವನಮಾಲೆಯನ್ನು ಧರಿಸಿರುವನು. ಚಂದ್ರನಂತೆ ಶುಭ್ರವಾದ ಮುಖದಿಂದ ಯುಕ್ತನಾಗಿರುವನು. ಸುವರ್ಣಮಯವಾದ ಕುಂಡಲಗಳ ಕಾಂತಿಯಿಂದ ಕಪೋಲಗಳಲ್ಲಿ ಕಾಂತಿಯು ಏರ್ಪಡುವಂತೆ ಮಾಡುವನು. ಬೃಂದಾವನದಲ್ಲಿರುವ ಗೋವುಗಳಿಗೆ ಹಗಲಿನ ತಾಪವನ್ನು ಚಂದ್ರನಂತೆ ಪರಿಹರಿಸುತ್ತಿರುವನು. ಆನೆಯಂತೆ ಗಂಭೀರವಾದ ಗಮನವುಳ್ಳವನು. ಇಂತಹ ಬಲರಾಮನು ಸಾಯಂಕಾಲದಲ್ಲಿ ಚಂದ್ರನು ಉದಯಿಸಿದಂತೆ ನಮ್ಮೆಲ್ಲರಿಗೂ ದರ್ಶನವನ್ನು ಕೊಟುತ್ತಿರುವನು.

ಗೋಪಿಕಾಸ್ತ್ರೀಯರೆಲ್ಲರೂ ಹಗಲಿನಲ್ಲಿ ಶ್ರೀಕೃಷ್ಣದೇವನು ಕಾಡಿಗೆ ಹೋಗಿರುವಾಗ ಮೇಲ್ಕಂಡ ರೀತಿಯಿಂದ ಶ್ರೀಕೃಷ್ಣಲೀಲೆಗಳನ್ನು ಗಾಯನಮಾಡುತ್ತಾ ಕಾಲವನ್ನು ಕಳೆಯುತ್ತಿರುವರು.

## ಶ್ರೀಕೃಷ್ಣದೇವನು ಅರಿಷ್ಟಾಸುರನನ್ನು ಸಂಹರಿಸಿದ್ದು

(೩೫) ಹೃತವೃಷಭಮಹಾಪೂರ್ವದೇವಃ ಶ್ರೀಕೃಷ್ಣಃ - (ಅರಿಷ್ಟ ಎಂಬ ಹೆಸರಿನಿಂದಲೂ ವೃಷಭ

ರೂಪದಿಂದಲೂ ಯುಕ್ತನಾದ ದೈತ್ಯನನ್ನು ಶ್ರೀಕೃಷ್ಣದೇವನು ಸಂಹರಿಸಿದನು)

ವಿಶೇಷಾರ್ಥ - ಕದಾಚಿದ್ಗೋಕುಲಪೀಡಾರ್ಥಮಾಗತಮರಿಷ್ಟನಾಮಕಂ ರುದ್ರವರಾದವಧ್ಯಂ ಕಂಸಭೃತ್ಯಂ ವೃಷಭಾಸುರಂ ಹತ್ವಾ.

ವಿಶೇಷಾರ್ಥ ವಿವರಣ - ಒಮ್ಮೆ ಒಬ್ಬ ಅರಿಷ್ಟ ಎಂಬ ದೈತ್ಯನು ವೃಂದಾವನಕ್ಕೆ ಬಂದನು. ಅವನು ಎತ್ತಿನ ರೂಪದಿಂದ ಯುಕ್ತನಾಗಿದ್ದನು. ಇವನು ಕಂಸನ ಸೇವಕನು. ರುದ್ರದೇವರ ವರದಿಂದ ಯಾರಿಂದಲೂ ಕೊಲ್ಲಲು ಸಾಧ್ಯನಾಗದವನು. ಅವನು ಗೋವುಗಳನ್ನು ಹೆದರಿಸುತ್ತಾ ಬಂದನು. ಧೂಳಿನಿಂದ ವಿಷ್ಣುಪದವೆಂದು ಪ್ರಸಿದ್ಧವಾದ ಆಕಾಶವನ್ನು ಮಲಿನವಾಗುವಂತೆ ಮಾಡಿದನು. ಶ್ರೀಕೃಷ್ಣದೇವನಂತೆ ನೀಲವಾಗಿರುವ ಮೇಘಗಳನ್ನು ತಿವಿದನು. ಶ್ರೀಕೃಷ್ಣದೇವನ ಅವತಾರಕ್ಕೆ ಕಾರಣವೆಂದು ತಿಳಿದು ದೇವೇಂದ್ರನನ್ನು ತನ್ನ ಕೊಂಬಿನಿಂದ ಬೆದರಿಸುತ್ತಾ ಭೂಮಿಯನ್ನು ಕಾಲುಗಳಿಂದ ಕಷ್ಟಪಡಿಸಿದನು. ಶ್ರೀಕೃಷ್ಣದೇವನನ್ನು ತಿವಿದು ಕೊಲ್ಲಬೇಕೆಂದು ತನ್ನ ಕೊಂಬುಗಳನ್ನು ಮುಂದೆ ಚಾಚಿಕೊಂಡು ಬಂದನು. ಅವನ ಕೊಂಬುಗಳನ್ನು ಕಿತ್ತು ಸಂಹರಿಸಬೇಕೆಂದು ಸಂಕಲ್ಪಿಸಿದ ಶ್ರೀಕೃಷ್ಣದೇವನಿಗೆ ಇದು ಅನುಕೂಲವಾಯಿತು. ಅವನ ಕೊಂಬುಗಳನ್ನುನ ಅಪಾರ ಶಕ್ತಿಯುಳ್ಳ ಶ್ರೀಕೃಷ್ಣದೇವನು ಹಿಡಿದನು. ಭೂಮಿಯಲ್ಲಿ ಅವನನ್ನು ತಳ್ಳಿದನು. ಯಜ್ಞದಲ್ಲಿ ಪಶುವನ್ನು ಸಂಹರಿಸಿದಂತೆ ಸಂಹರಿಸಿದನು. ಯದುಪತಿಯಾದ ಶ್ರೀಕೃಷ್ಣದೇವನ ಮೃದುವಾದ ಕೈಯಿಂದ ಕೀಳಲ್ಪಟ್ಟ ಕೊಂಬು ದೈತ್ಯನ ಪ್ರಾಣವನ್ನು ಹೀರಿತು. ತನ್ನ ಶತ್ರುವಿನ ಕೈಯಲ್ಲಿ ಸೇರಿಬಿಟ್ಟರೆ ತನ್ನ ತಲೆಯಲ್ಲಿ ಧರಿಸಿ ಪೋಷಿಸಲ್ಪಟ್ಟ ಸ್ವಕೀಯನೂ ಸಹ ಶತ್ರುವಾಗುವುದು ಸಹಜವಲ್ಲವೇ? ಶ್ರೀಕೃಷ್ಣದೇವನ ನಾಮವನ್ನು ಸ್ಮರಿಸುವವರಿಗೂ ಸಹ ಅರಿಷ್ಟಗಳೆಲ್ಲವೂ ಸಮೂಲವಾಗಿ ನಶಿಸುತ್ತವೆ. ಹೀಗಿರುವಾಗ ಶ್ರೀಕೃಷ್ಣದೇವನೊಬ್ಬನನ್ನೇ ನಂಬಿರುವ ವೃಂದಾವನದಲ್ಲಿ. ಅರಿಷ್ಟ ಎಂಬ ದೈತ್ಯನು ಪುಷ್ಟಿಯನ್ನು ಪಡೆಯದೆ ನಶಿಸಿರುವುದು ಯುಕ್ತವೇ ಆಗಿರುತ್ತದೆ.

# ಶ್ರೀಕೃಷ್ಣದೇವನು ಕೇಶಿದೈತ್ಯನನ್ನು ಸಂಹರಿಸಿದ್ದು

(೩೬) ಕೇಶಿಪ್ರಾಣಾಪಹಾರೀ ಶ್ರೀಕೃಷ್ಣಃ -ಶ್ರೀಕೃಷ್ಣದೇವನು ಕೇಶಿ ಎಂಬ ದೈತ್ಯನ ಪ್ರಾಣವನ್ನು ಅಪಹರಿಸಿದನು.

ವಿಶೇಷಾರ್ಥ - ತಥಾ ಕೇಶಿನಾಮಾನಂ ತುರಗಸ್ವರೂಪಂ ಪಾರ್ವತೀವರಾದವಧ್ಯಂ ಭಕ್ಷಣಾರ್ಥಂ ಮುಖಂ ವ್ಯಾದಾಯ ಸ್ವಸಮೀಪಂ ಪ್ರಾಪ್ತಂ ತನ್ಮುಖೇ ಸ್ವಬಾಹುಂ ಪ್ರವೇಶ್ಯ ತತ್ರ ವರ್ಧಮಾನೇನ ಸ್ವಬಾಹುನಾ ಶೀರ್ಣಾಸ್ಯದಂತದಶನಚ್ಛದರುದ್ಧವಾಯುಂ ಮಹಾಸುರಂ ಹತ್ವಾ.

ವಿಶೇಷಾರ್ಥ ವಿವರಣ - ಕೇಶೀ ಎಂಬ ದೈತ್ಯನು ವೃಂದಾವನಕ್ಕೆ ಬಂದನು. ಅವನು ಅಶ್ವ ಅಂದರೆ ನಾಳೆ ಬದುಕುವ ಆಸೆಯಿಲ್ಲದವನು ಅಂದರೆ ಇಂದೇ ಸಾಯುವವನು ಎಂದು ತಿಳಿಸುವುದಕ್ಕಾಗಿ ಅಶ್ವ ಅಂದರೆ ಕುದುರೆಯ ರೂಪವನ್ನು ಧರಿಸಿದವನು. ಕಂಸನ ಪರಿವಾರದಲ್ಲಿ ಸೇರಿದವನು. ಪಾರ್ವತೀದೇವಿಯ ವರಬಲದಿಂದ ಯಾರಿಂದಲೂ ಸಂಹರಿಸಲು ಸಾಧ್ಯನಾಗದವನು. ಶ್ರೀಕೃಷ್ಣದೇವನನ್ನು ನುಂಗಬೇಕೆಂದು ಸಂಕಲ್ಪಿಸಿ ಬಾಯಿಯನ್ನು ತೆರೆದು ಶ್ರೀಕೃಷ್ಣದೇವನ ಅಭಿಮುಖವಾಗಿ ಬಂದನು. ಇದು ಅವನ ಬಾಯಿಯೊಳಗೆ ತನ್ನ ಕೈಗಳನ್ನು ಪ್ರವೇಶಿಸಿ ಅವನನ್ನು

ಸಂಹರಿಸಬೇಕೆಂದು ಸಂಕಲ್ಪಿಸಿರುವ ಶ್ರೀಕೃಷ್ಣದೇವನಿಗೆ ಅನುಕೂಲವಾಯಿತು. ಅವನ ಬಾಯಿಯೊಳಗೆ ಶ್ರೀಕೃಷ್ಣದೇವನು ತನ್ನ ಕೈಯನ್ನು ಪ್ರವೇಶಿಸಿದನು. ದುರ್ಬುದ್ಧಿಯುಳ್ಳ ಈ ದೈತ್ಯನು ಶ್ರೀಕೃಷ್ಣದೇವನ ಕೈಯನ್ನು ತಿನ್ನಬೇಕೆಂದು ಪ್ರಯತ್ನಿಸಿದನು. ಸಾಧ್ಯವಾಗಲಿಲ್ಲ. ಬಾಯಿಯಿಂದ ಹೊರಗೆ ತಳ್ಳ ಬೇಕೆಂದು ಪ್ರಯತ್ನಿಸಿದನು. ಅದೂ ಸಾಧ್ಯವಾಗಲಿಲ್ಲ. ಬಾಯಿಯಲ್ಲಿ ಸಿಕ್ಕಿದ ಕೈಯು ಕ್ರಮವಾಗಿ ಬೆಳೆಯುತ್ತಾ ಬಂದದ್ದರಿಂದ ಅವನ ಹಲ್ಲುಗಳೂ ತುಟಿಗಳೂ ನಶಿಸಿದವು. ಶ್ವಾಸವು ಬಿಗಿಯಲ್ಪಟ್ಟಿತು. ಇದನ್ನು ನೋಡಿದರೆ ಶ್ರೀಕೃಷ್ಣದೇವನು ತನ್ನ ಕೈಗಳನ್ನು ಅವನ ಬಾಯಿಯೊಳಗೆ ಹೋಗಿ ಎದೆಯಲ್ಲಿರುವ ಪ್ರಾಣವಾಯುವನ್ನು ಹೊರಪಡಿಸುವುದಕ್ಕಾಗಿ ಪ್ರಯತ್ನಿಸುವಂತಿತ್ತು. ಅವನ ಧೈರ್ಯವೆಲ್ಲವೂ ಜೀರ್ಣವಾಯಿತು. ಬಲವೆಲ್ಲವೂ ಅಡಗಿತು. ದೇಹದಲ್ಲಿ ನಡುಕವು ಹೆಚ್ಚಿತು. ಇಂದ್ರಿಯಗಳೆಲ್ಲವೂ ಶಿಥಿಲವಾದವು. ಅವನ ದೇಹವು ಎರಡು ಹೋಳಾಯಿತು. ಒಂದೊಂದು ಹೋಳುಗಳಲ್ಲಿ ಒಂದು ಕಣ್ಣು, ಮೂಗಿನ ಅರ್ಧಭಾಗ, ಬಾಯಿ ಮತ್ತು ಬಾಲಗಳು ಅರ್ಧಭಾಗದಂತೆ ಏರ್ಪಟ್ಟವು. ಅವನು ಸತ್ತನು.

(೩೭) ಅಮರೇಡ್ಯಃ ಶ್ರೀಕೃಷ್ಣಃ - ದೇವತೆಗಳೆಲ್ಲರೂ ಶ್ರೀಕೃಷ್ಣದೇವನನ್ನು ಸ್ತುತಿಸಿದರು.

ಬ್ರಹ್ಮ ಮುಂತಾದ ದೇವತೆಗಳು ಶ್ರೀಕೃಷ್ಣದೇವನ ಮೇಲೆ ಪುಷ್ಪಗಳ ಮಳೆಗಳನ್ನು ಸುರಿಸಿದರು ಮತ್ತು ವರೆಲ್ಲರೂ ಸ್ತುತಿಸಿದರು.

(೩೮) ಸುರಮುನಿವದನಪ್ರಾರ್ಥಿತಾಶೇಷಕೃತ್ಯಃ- (ಮುಂದೆ ಮಾಡಬೇಕಾದ ಎಲ್ಲಾ ಕಾರ್ಯಗಳನ್ನೂ ತಿಳಿಸುತ್ತಾ ನಾರದರು ಶ್ರೀಕೃಷ್ಣದೇವನನ್ನು ಪ್ರಾರ್ಥಿಸಿದರು.)

ವಿಶೇಷಾರ್ಥ - ದೇವಕಾರ್ಯಾರ್ಥಂ ಸ್ವಸಮೀಪಂ ಪ್ರಾಪ್ತೇನ ನಾರದೇನ ವಿಜ್ಞಾಪಿತಕಂಸವಧಾದ್ಯಾಗಾಮಿ ಸಕಲಕಾರ್ಯಸ್ತವಮನುಜ್ಞಾಪ್ಯ.

ವಿಶೇಷಾರ್ಥ ವಿವರಣ - ನಾರದರು ಮಥುರಾಪಟ್ಟಣಕ್ಕೆ ಬಂದರು. ಕಂಸನನ್ನು ಶ್ರೀಕೃಷ್ಣದೇವನು ಸಂಹರಿಸವುದಕ್ಕಾಗಿ ಅವತರಿಸಿರುವನು. ಸೋದರಮಾವನಾದ ಅವನನ್ನು ಕೊಲ್ಲಬೇಕಾದರೆ ಅವನಿಂದ ಶ್ರೀಕೃಷ್ಣದೇವನ ತಂದೆ ತಾಯಿಗಳಾದ ವಸುದೇವನಿಗೂ ದೇವಕೀದೇವಿಗೂ, ಬಂಧುಗಳಾದ ಯಾದವರಿಗೂ ಪ್ರಬಲವಾದ ದ್ರೋಹವನ್ನು ಅವನಿಂದ ಮಾಡಿಸಬೇಕು. ಇದರಿಂದ ಅವನನ್ನು ಕೊಂದರೂ ತಪ್ಪೆನಿಸುವುದಿಲ್ಲ. ಕಂಸನನ್ನು ನೋಡಿದರು. ಚಮತ್ಕಾರವಾಗಿ ಅವನಿಗೆ ತೃಪ್ತಿಯಾಗವಂತೆ ಮಾತನ್ನಾಡುತ್ತಾ ಅವನನ್ನು ನಿಂದಿಸಿದರು.

" ಓ ಕಂಸ! ನೀನು ಎಲ್ಲಾ ದೈತ್ಯರ ಮಧ್ಯದಲ್ಲಿ ಉತ್ತಮನಾಗಿರುವ ಕಾಲನೇಮಿಯ ಅವತಾರವಾಗಿರುವಿ. ನಿನ್ನ ಕಡೆಯಲ್ಲಿರುವ ಜರಾಸಂಧ ಮುಂತಾದವರೆಲ್ಲರೂ ದೈತ್ಯಶ್ರೇಷ್ಠರ ಅವತಾರರಾಗಿರುವರು. ಉಗ್ರಸೇನನು ನಿನ್ನ ತಂದೆಯಲ್ಲ. ಉಗ್ರಸೇನ ಪತ್ನಿಯಲ್ಲಿ ದ್ರುಮಿಳ ಎಂಬ ಗಂಧರ್ವನಿಗೆ ನೀನು ಮಗನಾಗಿ ಹುಟ್ಟಿರುವಿ. ವಸುದೇವನ ಪತ್ನಿಯಾದ ದೇವಕೀದೇವಿಯಲ್ಲಿ ವಸುದೇವನಿಂದ ಹುಟ್ಟಿದ ಶ್ರೀಕೃಷ್ಣದೇವನು ಎಲ್ಲಾ ದೇವತೆಗಳ ಮಧ್ಯದಲ್ಲಿಯೂ ಅತ್ಯುತ್ತಮನಾಗಿರುವ ಶ್ರೀಹರಿಯೇ ಆಗಿರುವನು. ಅವನ ಪಕ್ಷದಲ್ಲಿ ಸೇರಿರುವ ಯಾದವರೇ ಮೊದಲಾದವರೆಲ್ಲರೂ ದೇವತೆಗಳು. ನಿನ್ನ ಮನೆಯಲ್ಲಿ ಹುಟ್ಟಿರುವ ಶ್ರೀಕೃಷ್ಣನನ್ನು ತನ್ನ ಮಿತ್ರನಾದ ನಂದನ ಮನೆಗೆ ವಸುದೇವನು ಕರೆದುಕೊಂಡು ಹೋದನು. ದೇವತೆಗಳಿಗೂ ದೈತ್ಯರಿಗೂ ವೈರವು ನಿತ್ಯಸಿದ್ಧವಾದುದು. ಆದ್ದರಿಂದ ನೀನೂ ನಿನ್ನ

ಪಕ್ಷದಲ್ಲಿ ಸೇರಿದವರೂ ಶ್ರೀಕೃಷ್ಣನನ್ನೂ ಅವನ ಪಕ್ಷದಲ್ಲಿ ಸೇರಿದವರನ್ನೂ ವಿರೋಧಿಸುವುದರಲ್ಲಿ ತಪ್ಪಿಲ್ಲ. ನಿನ್ನ ಮನೆಯಲ್ಲಿ ಹುಟ್ಟಿದ ಶ್ರೀಕೃಷ್ಣನನ್ನು ತಮ್ಮ ಮಗನಲ್ಲವೆಂದೂ ನಂದನ ಮಗನೆಂದೂ ಪ್ರಚಾರ ಮಾಡಿ ನಿನಗೆ ದ್ರೋಹವನ್ನು ಮಾಡಿರುವ ವಸುದೇವ ಮತ್ತು ದೇವಕಿಯರ ದ್ರೋಹವು ಅಕ್ಷಮ್ಯವಾದುದು'' ಇದು ನಾರದರ ಚಮತ್ಕಾರವಾದ ಮಾತು.

ಈ ಮಾತುಗಳನ್ನು ವಿಮರ್ಶಿಸಿ ನೋಡಿದರೆ ನೀನು ದೊಡ್ಡ ದೈತ್ಯನೆಂದೂ ನಿನ್ನ ಕಡೆಯವರೆಲ್ಲರೂ ದೈತ್ಯರೆಂದೂ. ನೀನು ತಂದೆಗೆ ಹುಟ್ಟಿದವನಲ್ಲವೆಂದೂ, ವ್ಯಭಿಚಾರದಿಂದ ಹುಟ್ಟಿದವನೆಂದೂ ಕಂಸನನ್ನು ನಿಂದಿಸಿರುವುದು ಅತಿ ಸ್ಪಷ್ಟವಾಗಿದೆ. ಶ್ರೀಕೃಷ್ಣದೇವನು ದೇವತಾಸಾರ್ವಭೌಮನೆಂದೂ ಅವನ ಪಕ್ಷದಲ್ಲಿ ಸೇರಿದವರೆಲ್ಲರೂ ದೇವತೆಗಳೆಂದೂ, ಅವನು ತಂದೆಗೆ ಹುಟ್ಟಿದವನೆಂದೂ ಹೇಳುತ್ತಾ ಶ್ರೀಕೃಷ್ಣದೇವನನ್ನು ಸ್ತುತಿಸಿದರು. ವಸುದೇವ ಮತ್ತು ದೇವಕೀದೇವಿಯರನ್ನೂ ಅವರ ಪಕ್ಷದವರನ್ನೂ ದ್ವೇಷಿಸುವಂತೆ ತಿಳಿಸಿದರು. ನಾರದರ ಪ್ರಭಾವವನ್ನು ಏನೆಂದು ಬಣ್ಣಿಸಲಿ.

ಕಂಸನು ಇವರ ಮಾತುಗಳನ್ನು ಕೇಳಿದನು. ವಸುದೇವನನ್ನೂ ದೇವಕೀದೇವಿಯನ್ನೂ ಕೊಲ್ಲಬೇಕೆಂದು ಹೊರಟನು. ನಾರದರು ಅವನನ್ನು ತಡೆದು ನಿಲ್ಲಿಸಿದರು. " ಶ್ರೀಕೃಷ್ಣದೇವನನ್ನು ಮೊದಲು ಕೊಲ್ಲು. ಅವನು ಸತ್ತ ಮೇಲೆ ಪುತ್ರಶೋಕದಿಂದ ಯುಕ್ತರಾದ ತಾಯಿತಂದೆಗಳನ್ನು ಕೊಲ್ಲು'' ಎಂದು ಉಪದೇಶಿಸಿದರು. ಅವನಿಗೂ ನಾರದರ ಉಪದೇಶವು ತೃಪ್ತಿಕರವಾಯಿತು. ಅವರನ್ನು ಕೊಲ್ಲಲಿಲ್ಲ. ಶ್ರೀಕೃಷ್ಣದೇವನು ಅವತರಿಸುವ ವರೆಗೆ ವಸುದೇವನೂ ದೇವಕಿಯೂ ಜೈಲಿನಲ್ಲಿದ್ದರು. " ದೇವಕೀದೇವಿಯ ಎಂಟನೆಯ ಮಗನು ಕಂಸನಿಗೆ ಮೃತ್ಯುವಾಗುವನು'' ಎಂದು ಅಶರೀರವಾಣಿಯು ನುಡಿದುದೇ ಅವರಿಬ್ಬರ ಜೈಲಿಗೆ ಕಾರಣವಾಯಿತು. ಶ್ರೀಕೃಷ್ಣದೇವನ ಜನ್ಮಕಾಲದಲ್ಲಿ ವಸುದೇವನು ಮಾಡಿದ ಉಪಾಯದಿಂದ ಎಂಟನೆಯ ಮಗುವು ಹೆಣ್ಣೆಂದು ಕಂಸನು ಭ್ರಮಿಸಿದನು. ಎಂಟನೆಯ ಮಗುವು ಗಂಡಾಗದಿರುವುದನ್ನು ತಿಳಿದು ಅಶರೀರವಾಣಿಯು ಸುಳ್ಳೆಂದು ನಂಬಿದನು. ವಸುದೇವ ದೇವಕಿಯರಲ್ಲಿ ಕ್ಷಮಾಪಣೆಯನ್ನು ಕೇಳಿಕೊಂಡನು. ಅವರಿಬ್ಬರನ್ನು ಜೈಲಿನಿಂದ ಬಿಡಿಸಿದನು. ಇಂದು ಪುನಃ ನಾರದರ ಉಪದೇಶದಿಂದ ರಹಸ್ಯವು ಹೊರಗೆ ಬಿತ್ತು. ವಸುದೇವನಲ್ಲಿಯೂ ದೇವಕಿಯಲ್ಲಿಯೂ ಅತ್ಯಂತ ಕುಪಿತನಾದನು. ಅವರಿಬ್ಬರನ್ನೂ ಪುನಃ ಜೈಲಿನಲ್ಲಿ ತಳ್ಳಿದನು. ಅವನಲ್ಲಿ ಪಕ್ಷಪಾತವನ್ನು ಇಟ್ಟಿರುವ ಉಗ್ರಸೇನನನ್ನೂ ಇತರ ಕೆಲವು ಯಾದವರನ್ನೂ ಜೈಲಿನಲ್ಲಿಟ್ಟನು. ಅಕ್ರೂರನೇ ಮೊದಲಾದ ಕೆಲವು ಯಾದವರು ಅವನಲ್ಲಿ ಪ್ರೀತಿಯಿಲ್ಲದಿದ್ದರೂ ಪ್ರೀತಿ ಇದ್ದಂತೆ ನಟಿಸುತ್ತಾ ಅವನನ್ನು ಅನುಸರಿಸಿದರು.

ನಾರದರು ಕಂಸನಿಂದ ವಸುದೇವ ಮತ್ತು ದೇವಕೀದೇವಿಯರಿಗೆ ದ್ರೋಹವನ್ನು ಮಾಡಿಸಿದರು. ವಿಷಯವನ್ನು ಶ್ರೀಕೃಷ್ಣದೇವನಲ್ಲಿ ತಿಳಿಸಬೇಕೆಂದು ಬೃಂದಾವನಕ್ಕೆ ಬಂದರು. ಅಪರಾಧಕ್ಕೆ ಯೋಗ್ಯವಾದ ದಂಡನೆಯನ್ನು ಕೊಡುತ್ತಿರುವ ಶ್ರೀಕೃಷ್ಣದೇವನಲ್ಲಿ ಪ್ರಾರ್ಥಿಸಿಕೊಳ್ಳುವುದು ಉಚಿತವಲ್ಲವೇ? ಶ್ರೀಕೃಷ್ಣದೇವನ ಅವತಾರಕ್ಕೆ ಮುಖ್ಯಕಾರಣಗಳಲ್ಲಿ ಪೂತನಾಸಂಹಾರದಿಂದ ಆರಂಭಿಸಿ ಕೇಶೀ ಸಂಹಾರದ ವರೆಗಿನ ಕಾರ್ಯಗಳನ್ನು ನೋಡಿದ್ದಕ್ಕಾಗಿ ಕೃತಜ್ಞತೆಯನ್ನು ವ್ಯಕ್ತಪಡಿಸಿದರು. ಇನ್ನು ವ್ಯೋಮಾಸುರನ ಸಂಹಾರದಿಂದ ಆರಂಭಿಸಿ ವಿದೂರಥನ ಸಂಹಾರದ ವರೆಗಿನ ಕಾರ್ಯಗಳನ್ನು ಆದಷ್ಟು ಬೇಗನೆ ಮಾಡಬೇಕೆಂದು ಪ್ರಾರ್ಥಿಸಿದರು.

" ಓ ಶ್ರೀಕೃಷ್ಣದೇವ! ನೀನು ಕುದುರೆಯ ರೂಪದಿಂದ ಯುಕ್ತನಾಗಿರುವ ಕೇಶಿ ಎಂಬ ದೈತ್ಯನನ್ನು ಸಂಹರಿಸಿದಿ. ಇನ್ನು ಮುಂದೆ ಮಯಾಸುರನ ಮಗನಾಗಿರುವ ವ್ಯೋಮಾಸುರ, ಕುವಲಯಾಪೀಡ ಎಂಬ ಆನೆ, ಚಾಣೂರ ಮುಷ್ಟಿಕ ಮುಂತಾದ ಜಟ್ಟಿಗಳು, ಕಂಸ, ಶಂಖಿ. ಕಾಲಯವನ, ಮುರಾಸುರ, ನರಕಾಸುರ ಮುಂತಾದ ದೈತ್ಯರ ಸಂಹಾರವನ್ನು ನೋಡಬೇಕು. ಪಾರಿಜಾತಾಪಹಾರ, ಇಂದ್ರನ ಪರಾಜಯ, ಹದಿನಾರು ಸಾವಿರದ ನೂರಎಂಟು ಕನ್ಯೆಯರ ವಿವಾಹ, ನೃಗರಾಜನ ಮೋಕ್ಷ, ಶ್ಯಮಂತಕೋಪಾಖ್ಯಾನ, ಮೃತಪುತ್ರಪ್ರದಾನ, ಪೌಂಡ್ರಕವಧ, ಕಾಶೀಪುರಭಸ್ಮೀಕರಣ ದಂತವಕ್ತ್ರವಧ ಮುಂತಾದ ನಿನ್ನ ಲೀಲೆಗಳನ್ನು ನೋಡಬೇಕು'' ಎಂದು ಬೇಡಿದರು.

ಶ್ರೀಕೃಷ್ಣದೇವನು ಆನಂದಪೂರ್ಣನಾಗಿರುವನು. ಅವನಿಗೆ ಯಾವ ಕಾರ್ಯವನ್ನು ಮಾಡಿದ್ದರಿಂದಲೂ ಲಾಭವೂ ಹಾನಿಯೂ ಇಲ್ಲ. ಆದರೂ ಭಕ್ತರ ಪ್ರಾರ್ಥನೆಯನ್ನು ಪೂರ್ತಿಗೊಳಿಸುವನು. ಈ ನಾರದರ ಪ್ರಾರ್ಥನೆಗಾಗಿಯಾದರೂ ಈ ಕಾರ್ಯಗಳನ್ನೆಲ್ಲಾ ಬೇಗನೆ ಮಾಡಲಿ ಎಂದು ಪ್ರಾರ್ಥಿಸಿದರು. ಶ್ರೀಕೃಷ್ಣದೇವನನ್ನು ನಮಸ್ಕರಿಸಿದರು. ಅವನಿಂದ ಅನುಮತಿಯನ್ನು ಪಡೆದು. ಹೊರಟುಹೋದರು.

# ವ್ಯೋಮಾಸುರ ಸಂಹಾರ

(೩೯) ಮಯಸ್ಯ ಪುತ್ರಂ ಹತ್ವಾ ಅಪಿಹಿತಂ ಸ್ವಜನಂ ಮೋಚಯನ್ - ಮಯಾಸುರನ ಮಗನಾಗಿರುವ ವ್ಯೋಮಾಸುರನನ್ನು ಸಂಹರಿಸಿದನು. ಅವನಿಂದ ಗುಹೆಯಲ್ಲಿ ಮುಚ್ಚಲ್ಪಟ್ಟಿದ್ದ ಸ್ವಜನರನ್ನು ಬಿಡಿಸಿದನು.

ವಿಶೇಷಾರ್ಥ - ಕದಾಚಿದದ್ರಿಸಾನುಷು ಗಾಶ್ಚಾರಯನ್, ಸರ್ವಾನ್ ಗೋಪಾಲಾನಾಹೂಯ ಕಾಂಶ್ಚಿಚ್ಚೋರತ್ವೇನ ಕಾಂಶ್ಚಿತ್ಪಾಲಕತ್ವೇನ ಕಾಂಶ್ಚಿನ್ಮೋಚಯಿತೃತ್ವೇನ ವಿಭಜ್ಯ, ನಿಲಾಯನಕ್ರೀಡಾಂ ಕುರ್ವನ್, ತದಾ ತು ಕ್ರೀಡಾರ್ಥಮಾಗತಂ ಗೋಪಾಲವೇಷಧರಂ ಮೇಷಾಯಿತಾನ್ ಬಹೂನ್ ಗೋಪಾಲಾನ್ ಚೋರರೂಪೇಣಾದಾಯ ಗಿರಿದರ್ಯಾಂ ವಿನಿಕ್ಷಿಪ್ಯ ಶಿಲಯಾ ದ್ವಾರಂ ಪಿಧಾಯ, ಪುನರವಶೇಷಿತಾನ್ ಗೃಹೀತುಮುದ್ಯುಕ್ತಂ ವ್ಯೋಮನಾಮಕಂ ಮಯಪುತ್ರಂ ಚತುರ್ಮುಖವರಾದವಧ್ಯಂ ಮಹಾಸುರಂ ಹತ್ವಾ, ಪಿಧಾನಂ ನಿರ್ಭಿದ್ಯ ಸರ್ವಾನ್ಗೋಪಾನ್ಬಹಿರ್ನಿಸ್ಸಾರ್ಯ ಬ್ರಹ್ಮಾದಿಭಿರ್ಗೋಪಾಲೈಶ್ಚ ಸ್ತೂಯಮಾನಃ ಸಕಲಗೋಪಾಲೈಃ ಸಹ ಗೋಕುಲಂ ಪ್ರವಿಶ್ಯ, ಸರ್ವಾನ್ಸಂತೋಷ್ಯ, ಸುಖೇನ ಸ್ಥಿತವಾನ್.

ವಿಶೇಷಾರ್ಥ ವಿವರಣ - ಒಮ್ಮೆ ಶ್ರೀಕೃಷ್ಣದೇವನು ನಿಲಾಯನಕ್ರೀಡೆ ಅಂದರೆ ಕಳ್ಳರ ಆಟವನ್ನು ಆಡಿದನು. ಗೊಲ್ಲರನ್ನು ಮೂರು ವಿಧವಾಗಿ ವಿಂಗಡಿಸಿದನು. (೧) ಕುರಿಗಳ ವೇಷದಲ್ಲಿ ಕೆಲವು ಗೋಪಾಲಕರಿದ್ದರು. ಅವರನ್ನು ಕಳ್ಳರು ಕದಿಯಬೇಕು. (೨) ಕಳ್ಳರ ವೇಷದಲ್ಲಿ ಕೆಲವು ಗೋಪಾಲಕರಿದ್ದರು. ಅವರು ಕುರಿಗಳಾಗಿರುವ ಗೊಲ್ಲರನ್ನು ಕದಿಯಬೇಕು. (೩) ರಕ್ಷಕಭಟರ ವೇಷದಲ್ಲಿ ಕೆಲವು ಗೋಪಾಲಕರಿದ್ದರು. ಅವರು ಕಳ್ಳರನ್ನು ಹಿಡಿದು ಅವರು ಕದ್ದಿರುವ ಕುರಿಗಳನ್ನು ಬಿಡಿಸಿಕೊಂಡು ಬರಬೇಕು. ಹೀಗೆ ಶ್ರೀಕೃಷ್ಣದೇವನು ಗೊಲ್ಲರನ್ನು ಮೂರು ವಿಧವಾಗಿ ವಿಂಗಡಿಸಿ ಆಟವನ್ನು ಆಡುತ್ತಿದ್ದನು. ಆಗ ಮಯಾಸುರನ ಮಗನಾಗಿರುವ ವ್ಯೋಮಾಸುರನು ಬಂದನು. ಅವನನ್ನು ಬ್ರಹ್ಮದೇವರ ವರದಿಂದ ಯಾರೂ ಸಂಹರಿಸಲು ಸಾಧ್ಯವಿರಲಿಲ್ಲ. ಅಂತಹ ದೈತ್ಯನು ಗೊಲ್ಲಬಾಲಕರ ರೂಪವನ್ನು ಸ್ವೀಕರಿಸಿ ಶ್ರೀಕೃಷ್ಣದೇವನ ಸಮೀಪಕ್ಕೆ ಬಂದನು. ಸರ್ವಜ್ಞನಾದ ಶ್ರೀಕೃಷ್ಣದೇವನು ಇದನ್ನು ತಿಳಿದರೂ ತಿಳಿಯದಂತೆ

ನಟಿಸಿದನು. ತಮ್ಮ ಗುಂಪಿನಲ್ಲಿ ಸೇರಿಸಿಕೊಂಡನು. ಅವನು ಕಳ್ಳರ ಗುಂಪಿನಲ್ಲಿ ಸೇರಿದನು. ಕುರಿಗಳಾಗಿರುವ ಗೊಲ್ಲಬಾಲಕರೆಲ್ಲರನ್ನೂ ಕ್ರಮವಾಗಿ ಕದ್ದುಕೊಂಡು ಹೋದನು. ಒಂದು ಗಿರಿಯ ಅಡಿಯಲ್ಲಿರುವ ಗುಹಯಲ್ಲಿ ಅವರನ್ನೆಲ್ಲರನ್ನೂ ಪ್ರವೇಶ ಮಾಡಿಸಿದನು. ಆ ಗುಹೆಯನ್ನು ಒಂದು ಪರ್ವತದಿಂದ ಮುಚ್ಚಿದನು. ಈ ಕುರಿಗಳನ್ನು ಹಿಡಿಯಲು ಪೋಲಿಸಿನವರು ಶಕ್ತರಾಗಲಿಲ್ಲ. ಇವನಿಂದ ಕದಿಯಲ್ಪಟ್ಟ ಗೊಲ್ಲರು ಯಾರೂ ಹಿಂದಿರುಗಿ ಬರಲಿಲ್ಲ. ಇದರಿಂದ ಗೊಲ್ಲಬಾಲಕರ ಸಂಖ್ಯೆಯು ಕಡಿಮೆಯಾಗುತ್ತಾ ಬಂದು ಯಾರೂ ಹಿಂದಿರುಗಿ ಬರಲಿಲ್ಲ. ಇದರಿಂದ ಗೊಲ್ಲಬಾಲಕರ ಸಂಖ್ಯೆಯು ಕಡಿಮೆಯಾಗುತ್ತಾ ಬಂದು ಐದೋ ಆರೋ ಗೊಲ್ಲಬಾಲಕರು ಮಾತ್ರ ಉಳಿದರು. ಈ ವಿಷಯವನ್ನು ತಿಳಿದ ಶ್ರೀಕೃಷ್ಣದೇವನು, ಕುರಿಗಳನ್ನು ಕದ್ದುಕೊಂಡು ಹೋಗುತ್ತಿರುವ ವ್ಯೋಮಾಸುರನನ್ನು ಹಿಡಿದನು. ಅವನು ನಿಜರೂಪವನ್ನು ಸ್ವೀಕರಿಸಿದನು. ಬಿಡಿಸಿಕೊಳ್ಳುವುದಕ್ಕಾಗಿ ಪ್ರಯತ್ನಿಸಿದನು. ಶ್ರೀಕೃಷ್ಣದೇವನು ಅವನನ್ನು ಎರಡು ಕೈಗಳಿಂದ ಕೆಳಗೆ ತಳ್ಳಿದನು. ಪಶುಗಳನ್ನು ಕೊಂದಂತೆ ಕೊಂದನು. ಗುಹೆಯ ಮುಚ್ಚಳವನ್ನು ತೆರೆದನು. ಎಲ್ಲಾ ಗೋಪಾಲಬಾಲಕರನ್ನೂ ಹೊರಗೆ ಹೊರಡಿಸಿದನು. ಬ್ರಹ್ಮ ಮುಂತಾದ ದೇವತೆಗಳೂ ಗೊಲ್ಲಬಾಲಕರೂ ಶ್ರೀಕೃಷ್ಣದೇವನನ್ನು ಹೊಗಳಿದರು. ಶ್ರೀಕೃಷ್ಣದೇವನು ಸಕಲ ಗೋಪಾಲರೊಡನೆ ಬೃಂದಾವನದೊಳಗೆ ಪ್ರವೇಶಿಸಿದನು. ಸರ್ವರನ್ನೂ ಸಂತೋಷಪಡಿಸಿ ಸುಖವಾಗಿ ವಾಸಿಸಿದನು. ॥೯॥

**ಅಕ್ರೂರಾಕಾರಿತೋ ಯಾನ್ ವ್ರಜಯುವತಿಜನಾನ್ ಸಾಂತ್ವಯಿತ್ವಾಽಭಿತಪ್ತಾನ್**
**ಸ್ವಂ ರೂಪಂ ಮಜ್ಜತೇಽಸ್ಮೈ ವಿಲಸಿತಮಹಿಗಂ ದರ್ಶಯಂಸ್ತೇನ ವಂದ್ಯಃ।**
**ಯೋ ಗತ್ವಾ ಕಂಸಧಾನೀಂ ಹೃತರಜಕಶಿರಾಶ್ಚಾರುವೇಷಃ ಸುದಾಮ್ನಃ**
**ಪ್ರೀತಿಂ ಕುರ್ವಂಸ್ತ್ರಿವಕ್ರಾಂ ವ್ಯತನುತ ರುಚಿರಾಂ ಪೌರಮಹ್ಯೋಽವತಾತ್ಸಃ ॥೧೦॥**

ಪದಚ್ಛೇದ :- ಅಕ್ರೂರಾಕಾರಿತಃ ಯಾನ್ ವ್ರಜಯುವತಿಜನಾನ್ ಸಾಂತ್ವಯಿತ್ವಾ ಅಭಿತಪ್ತಾನ್ ಸ್ವಂ ರೂಪಂ ಮಜ್ಜತೇ ಅಸ್ಮೈ ವಿಲಸಿತಂ ಅಹಿಗಂ ದರ್ಶಯನ್ ತೇನ ವಂದ್ಯಃ ಯಃ ಗತ್ವಾ ಕಂಸಧಾನೀಂ ಹೃತರಜಕಶಿರಾಃ ಚಾರುವೇಷಃ ಸುದಾಮ್ನಃ ಪ್ರೀತಿಂ ಕುರ್ವನ್ ತ್ರಿವಕ್ರಾಂ ವ್ಯತನುತ ರುಚಿರಾಂ ಪೌರಮಹ್ಯಃ ಅವತಾತ್ ಸಃ

ಅನ್ವಯ - ಯಃ ಅಕ್ರೂರಾಕಾರಿತಃ (ಮಥುರಾಂ ಪ್ರತಿ) ಯಾನ್ ಅಭಿತಪ್ತಾನ್ ವ್ರಜಯುವತಿಜನಾನ್ ಸಾಂತ್ವಯಿತ್ವಾ, ಮಜ್ಜತೇ ಅಸ್ಮೈ ವಿಲಸಿತಂ ಅಹಿಗಂ ಸ್ವಂ ರೂಪಂ ದರ್ಶಯನ್ ತೇನ ವಂದ್ಯಃ ಕಂಸಧಾನೀಂ ಗತ್ವಾ ಹೃತರಜಕಶಿರಾಃ ಚಾರುವೇಷಃ ಸುದಾಮ್ನಃ ಪ್ರೀತಿಂ ಕುರ್ವನ್ ತ್ರಿವಕ್ರಾಂ ವ್ಯತನುತ ರುಚಿರಾಂ ಪೌರಮಹ್ಯಃ ಸಃ(ಮಾಂ) ಅವತಾತ್.

ಅನ್ವಯಾರ್ಥ - ''ಯಃ'' ಯಾವ ಶ್ರೀಕೃಷ್ಣದೇವನು ''ಅಕ್ರೂರಾಕಾರಿತಃ'' ಅಕ್ರೂರನಿಂದ ಕರೆಯಲ್ಪಟ್ಟವನಾಗಿ (ಮಥುರಾಂ ಪ್ರತಿ) ಮಥುರೆಯನ್ನು ಕುರಿತು ''ಯಾನ್'', ಹೋಗುತ್ತಿರುವವನಾಗಿ ''ಅಭಿತಪ್ತಾನ್'' ಸಂತಾಪದಿಂದ ಯುಕ್ತರಾಗಿರುವ ''ವ್ರಜಯುವತಿಜನಾನ್'' ಗೋಕುಲದಲ್ಲಿರುವ ತರುಣಿಯರನ್ನು ''ಸಾಂತ್ವಯಿತ್ವಾ'' ಸಮಾಧಾನಪಡಿಸಿದವನಾಗಿ ''ಮಜ್ಜತೇ'' ಸ್ನಾನವನ್ನು ಮಾಡುತ್ತಿರುವ ''ಅಸ್ಮೈ'' ಈ ಅಕ್ರೂರನಿಗೆ ''ವಿಲಸಿತಂ'' ಶೋಭಿಸುತ್ತಿರುವ ''ಅಹಿಗಂ'' ಶೇಷದೇವನ ದೇಹದಲ್ಲಿ ಮಲಗಿರುವ ''ಸ್ವಂ'' ತನ್ನ ''ರೂಪಂ'' ರೂಪವನ್ನು ''ದರ್ಶಯನ್'' ತೋರಿಸುತ್ತಿರುವವನಾಗಿ ''ತೇನ'' ಆ ಅಕ್ರೂರನಿಂದ ''ವಂದ್ಯಃ'' ನಮಸ್ಕರಿಸಲ್ಪಟ್ಟವನೂ ಸ್ತುತಿಸಲ್ಪಟ್ಟವನೂ ಆಗಿ ''ಕಂಸಧಾನೀಂ'' ಕಂಸನ ನಗರವಾಗಿರುವ ಮಥುರೆಯನ್ನು ''ಗತ್ವಾ''

ಹೋಗಿ "ಹೃತರಜಕಶಿರಾಃ" ಕತ್ತರಿಸಲ್ಪಟ್ಟ ಅಗಸನ ತಲೆಯುಳ್ಳವನಾಗಿ "ಚಾರುವೇಷ" ಸುಂದರವಾದ ಅಲಂಕಾರಗಳುಳ್ಳವನಾಗಿ "ಸುದಾಮ್ನಃ" ಸುದಾಮ ಎಂಬ ಭಕ್ತನಿಗೆ "ಪ್ರೀತಿಂ" ಪ್ರೀತಿಯನ್ನು "ಕುರ್ವನ್" ಮಾಡುತ್ತಿರುವವನಾಗಿ "ತ್ರಿವಕ್ರಾಂ" ಸೈರಂಧ್ರೀ ಎಂಬ ಹೆಸರುಳ್ಳ ಗೂನಿಯನ್ನು "ರುಚಿರಾಂ" ಸುಂದರವಾದ ರೂಪದಿಂದ ಯುಕ್ತಳಾದವಳನ್ನು "ವ್ಯತನುತ" ಮಾಡಿದನೋ "ಪೌರಮಹ್ಯಃ" ಪಟ್ಟಣಿಗರಿಂದ ಗೌರವಿಸಲ್ಪಟ್ಟ "ಸಃ" ಆ ಶ್ರೀಕೃಷ್ಣದೇವನು "ಅವತಾತ್" ರಕ್ಷಿಸಲಿ.

# ಅಕ್ರೂರನ ಭಕ್ತ್ಯುದ್ರೇಕ

**(೪೦) ವಿಶೇಷಾರ್ಥ - ಪೂರ್ವೋಕ್ತರೀತ್ಯಾ ಗೋಕುಲನಾಥೇ ಕೃಷ್ಣೇ ಅದ್ಭುತಾನಿ ಕರ್ಮಾಣಿ ಕುರ್ವತಿ ಸತಿ, ನಾರದಃ ಸುರಕಾರ್ಯಾರ್ಥಂ ಕಂಸಮೀಪಂ ಗತ್ವಾ ವಸುದೇವನ ಕೃತಂ ಗೋಕುಲಂ ಪ್ರತಿ ಕೃಷ್ಣನಯನಾದಿಕಂ ಸರ್ವಮುಕ್ತವಾನ್, ತದಾ ಕಂಸಃ ಕ್ರುದ್ಧಃ ಸಭಾರ್ಯಂ ವಸುದೇವಂ ನಿಗಡಬದ್ಧಂ ಕೃತ್ವಾ, ಸ್ವಮಂತ್ರಿಣಮಕ್ರೂರಮಾಹೂಯ, ಬಲರಾಮಕೃಷ್ಣೌ ಗೋಕುಲಾದಿಹ ಧನುರ್ಮಹೋತ್ಸವ ನಿರೀಕ್ಷಣಾರ್ಥಮಾನಯ, ತೌ ಹನಿಷ್ಯಾಮೀತ್ಯುಕ್ತ್ವಾ ಅಕ್ರೂರಂ ಗೋಕುಲಂ ಪ್ರತಿ ಪ್ರೇಷಿತವಾನ್, ಸಃ ಅಕ್ರೂರಃ ಪೂರ್ವಂ ಕಿಶೋರನಾಮಾ ಸುರಗಾಯಕಃ ಸ್ವಾಯಂಭುವಸ್ಯ ಚ ಮನೋಃ ಪರಮಾಂಶಯುಕ್ತಃ ತಥಾ ಚತುರ್ಮುಖಸ್ಯಾವೇಶಯುಕ್ತಃ ಕೃಷ್ಣಸೇವಾರ್ಥಮುತ್ಪನ್ನಃ ಕೃಷ್ಣಪಾದಾರವಿಂದದರ್ಶನೋತ್ಸುಕಮನಾಃ ರಥಮಾರುಹ್ಯ ಗೋಕುಲಂ ಪ್ರಾಪ್ಯ ಸಬಲಂ ಕೃಷ್ಣಂ ನತ್ವಾ ತೇನಾದೃತಃ ಕಂಸಚಿಕೀರ್ಷಿತಂ ಸರ್ವಮುಕ್ತ್ವಾ ಮಧುರಾಂ ಪ್ರತ್ಯಾಹೂತವಾನ್.**

ವಿಶೇಷಾರ್ಥ ವಿವರಣ - ಹಿಂದೇ ಹೇಳಿದಂತೆ ಗೋಕುಲನಾಥನಾದ ಶ್ರೀಕೃಷ್ಣದೇವನು ಅದ್ಭುತ ಕರ್ಮಗಳನ್ನು ಮಾಡುತ್ತಿದ್ದನು. ನಾರದರು ದೇವತೆಗಳ ಕಾರ್ಯವನ್ನು ಸಾಧಿಸುವುದಕ್ಕಾಗಿಯೇ ಅವತರಿಸಿದವರು. ಅವರು ಕಂಸನ ಸಮೀಪಕ್ಕೆ ಬಂದರು. ವಸುದೇವನು ತನ್ನ ಮಗನಾದ ಶ್ರೀಕೃಷ್ಣದೇವನನ್ನು ನಂದಗೋಕುಲಕ್ಕೆ ಎತ್ತಿಕೊಂಡುಹೋದ ವಿಷಯವನ್ನೂ ಇತರ ವಿಷಯಗಳನ್ನೂ ತಿಳಿಸಿದರು. ಆಗ ಕುಪಿತನಾದ ಕಂಸನು ಪತ್ನೀಸಹಿತನಾದ ವಸುದೇವನನ್ನು ಜೈಲಿನಲ್ಲಿ ಕಟ್ಟಿಹಾಕಿದನು. ತನ್ನ ಮಂತ್ರಿಯಾದ ಅಕ್ರೂರನನ್ನು ಕರೆದನು. "ಬಲರಾಮನನ್ನೂ ಶ್ರೀಕೃಷ್ಣನನ್ನೂ ಗೋಕುಲದಿಂದ ಕರೆದುಕೊಂಡು ಬಾ. ರುದ್ರದೇವನ ಧನುಸ್ಸು ನನ್ನಲ್ಲಿದೆ. ಅದಕ್ಕೆ ವಿಶೇಷ ವೈಭವದಿಂದ ಪೂಜೆಯನ್ನು ಮಾಡುವೆನು. ಇದೇ ಧನುರ್ಯಾಗವೆನಿಸುತ್ತದೆ. ಈ ಧನುರ್ಯಾಗವನ್ನು ನೋಡುವ ಉದ್ದೇಶದಿಂದ ಅವರಿಬ್ಬರೂ ಇಲ್ಲಿಗೆ ಬರಲಿ. ಅವರನ್ನು ಸಂಹರಿಸುವೆನು" ಎಂದು ಹೇಳಿದನು. ಗೋಕುಲಕ್ಕೆ ಅಕ್ರೂರನನ್ನು ಕಳುಹಿಸಿದನು. ಅಕ್ರೂರನು ಹಿಂದೆ ಕಿಶೋರ ಎಂದು ದೇವತೆಗಳಲ್ಲಿ ಸುಪ್ರಸಿದ್ಧನಾದ ಸಂಗೀತಗಾರನಾಗಿದ್ದನು. ಶ್ರೀಕೃಷ್ಣದೇವನನ್ನು ಸೇವಿಸುವುದಕ್ಕಾಗಿ ಅಕ್ರೂರ ಎಂಬ ಹೆಸರಿನಿಂದ ಅವತರಿಸಿದವನು. ಉತ್ತಮವಾಗಿಯೂ ಪೂಜ್ಯವಾಗಿಯೂ ಇರುವ ಕರ್ಮಗಳನ್ನೂ ಮಾಡುತ್ತಿದ್ದವನು. ಅವನಲ್ಲಿ ಸ್ವಾಯಂಭುವ ಎಂಬ ಮನುವಿನ ಪರಮಾಂಶವಿತ್ತು ಚತುರ್ಮುಖಬ್ರಹ್ಮದೇವನ ವಿಶೇಷಾದವೇಶವೂ ಇತ್ತು. ಆದ್ದರಿಂದ ಮಹಾವಿದ್ವಾಂಸನಾಗಿದ್ದನು. ಅವನು ಶ್ರೀಕೃಷ್ಣದೇವನ ಪಾದಗಳನ್ನು ನೋಡುವ ಆಸೆಯಿಂದ ಯುಕ್ತನಾಗಿ ಹೊರಟನು.

ಒಂದು ಸಿಂಹವು ಜಿಂಕೆಯ ಮರಿಯನ್ನು ಬಾಯಿಯಿಂದ ಹಿಡಿದಿತ್ತು! ಅಕಸ್ಮಾತ್ತಾಗಿ ಆ ಸಿಂಹದ ಬಾಯಿಯಿಂದ ಆ ಜಿಂಕೆಯ ಮರಿಯು ತಪ್ಪಿಸಿಕೊಂಡಿತು. ಅದೇ ಸಮಯದಲ್ಲಿ ಆ ಜಿಂಕೆಯ ಮರಿಯ ಬಂಧುಗಳಾದ ಜಿಂಕೆಗಳು ಅಕಸ್ಮಾತ್ತಾಗಿ ಕಣ್ಣಿಗೆ ಬಿದ್ದವು. ಆಗ ಜಿಂಕೆಯ ಮರಿಗೆ ಏರ್ಪಡುವ ಆನಂದವನ್ನು ಹೇಳಲು ಸಾಧ್ಯವೇ? ಇದರಂತೆ ಕಂಸನೆಂಬ ಸಿಂಹದ ಬಾಯಿಯಲ್ಲಿ ಸಿಕ್ಕಿದ್ದ ಅಕ್ರೂರನು ಅಕಸ್ಮಾತ್ತಾಗಿ ಕಂಸನ ಕೈಯಿಂದ ಬಿಡುಗಡೆಯನ್ನು ಪಡೆದನು. ತನ್ನ ಬಂಧುಗಳಾದ ಶ್ರೀಕೃಷ್ಣದೇವ ಮುಂತಾದವರನ್ನು ನೋಡಲಿಕ್ಕಾಗಿ ಹೊರಡುತ್ತಿರುವನು. ಇವನ ಆನಂದಕ್ಕೆ ಎಣೆಯುಂಟೇ? ಕಂಸನು ಅವನನ್ನು ಕರೆದು ಶ್ರೀಕೃಷ್ಣದೇವನನ್ನೂ ಬಲರಾಮನನ್ನೂ ಕರೆದುಕೊಂಡು ಬರುವಂತೆ ಹೇಳಿದ ಕೂಡಲೇ ಆನಂದಭರಿತನಾದನು. ತಾನು ಕೃತಕೃತ್ಯನಾದೆನೆಂದು ಭಾವಿಸಿದನು. ರಥದಲ್ಲಿ ಕುಳಿತು ಬೃಂದಾವನಕ್ಕೆ ಬರುತ್ತಿರುವಾಗ ಮಾರ್ಗದಲ್ಲಿ ತನ್ನ ನಾನಾ ವಿಧವಾದ ಆಸೆಗಳನ್ನು ವ್ಯಕ್ತಪಡಿಸಿದನು.

"ನಾನು ಇಂದು ಶ್ರೀಕೃಷ್ಣದೇವನನ್ನು ನೋಡುವೆನು. ಆದ್ದರಿಂದ ನಾನು ಮಾಡಿರುವ ಪುಣ್ಯವು ಅಪಾರವಾದುದು. ಅಥವಾ ವಿಷಯಗಳಲ್ಲಿ ಆಸಕ್ತನಾದ ನನಗೆ ಶ್ರೀಕೃಷ್ಣದೇವನ ದರ್ಶನವು ಸಿಗಲಾರದು. ಶೂದ್ರನಿಗೆ ವೇದಾಧ್ಯಯನವು ಏರ್ಪಡುವುದೆ? ಅಥವಾ ವಿಷಯಾಸಕ್ತನಾದ ನನಗೂ ಶ್ರೀಕೃಷ್ಣದೇವನ ದರ್ಶನವು ಸಿಗುವುದರಲ್ಲಿ ಸಂಶಯವಿಲ್ಲ. ನದಿಯ ಪ್ರವಾಹದಲ್ಲಿ ಬಿದ್ದವರಲ್ಲಿ ಯಾರಾದರೂ ಒಬ್ಬನು ದಾಟುವುದಿಲ್ಲವೇ? ನನ್ನ ಅಮಂಗಲಗಳೆಲ್ಲವೂ ನಷ್ಟವಾದುದರಿಂದಲೇ ಯೋಗಿಗಳು ಧ್ಯಾನಿಸುತ್ತಿರುವ ಶ್ರೀಕೃಷ್ಣದೇವನ ಪಾದಗಳನ್ನು ನೋಡುವೆನು. ಕಂಸನು ಶ್ರೀಕೃಷ್ಣದೇವನ ಪಾದಕಮಲಗಳನ್ನು ನೋಡುವುದಕ್ಕಾಗಿ ನನ್ನನ್ನು ಕಳುಹಿಸುತ್ತಿರುವನು. ಆದ್ದರಿಂದ ನನ್ನನ್ನು ಅನುಗ್ರಹಿಸುತ್ತಿರುವನು. ಹೀಗೆ ಯೋಚಿಸುತ್ತಾ ಶ್ರೀಕೃಷ್ಣದೇವನ ಪಾದಗಳನ್ನು ನಿರಂತರದಲ್ಲಿಉ/ ಯೂ ಸ್ಮರಿಸುತ್ತಾ ಬೃಂದಾವನವನ್ನು ಸಮೀಪಿಸಿದನು. ಆಗ ಶ್ರೀಕೃಷ್ಣದೇವನ ಪಾದದ ಗುರುತುಗಳನ್ನು ಕಂಡನು. ರಥದಿಂದ ಕೆಳಗೆ ಧುಮುಕಿದನು. ಶ್ರೀಕೃಷ್ಣದೇವನ ಪಾದದ ಗುರುತುಗಳಿಂದ ಯುಕ್ತವಾದ ಧೂಳಿಗಳಲ್ಲಿ ಬಿದ್ದು ಹೊರಳಾಡಿದನು. ಆಹಾ, ನನ್ನ ಪ್ರಭುವಾದ ಶ್ರೀಕೃಷ್ಣದೇವನ ಅಂಗಸಂಗದಿಂದ ಪರಮಮಾನ್ಯವಾದ ಮತ್ತು ಬ್ರಹ್ಮಾದಿದೇವತೆಗಳಿಂದ ತಲೆಯಲ್ಲಿ ಧರಿಸಲ್ಪಡುತ್ತಿರುವ ಮತ್ತು ಸಕಲ ಪಾಪಗಳನ್ನು ಪರಿಹರಿಸುತ್ತಿರುವ ಧೂಳಿಗಳು ನನ್ನನ್ನು ಪರಿಶುದ್ಧನಾಗುವಂತೆ ಮಾಡಲಿ" ಎಂದು ಪ್ರಾರ್ಥಿಸಿದನು.

ಅಲ್ಲಿಂದ ಬೃಂದಾವನಕ್ಕೆ ಹೊರಟು ಅಲ್ಲಿರುವ ನಂದನ ಮನೆಗೆ ಬಂದನು. ಆಗ ಶ್ರೀಕೃಷ್ಣದೇವನು ಅಣ್ಣನಿಂದ ಸಹಿತನಾಗಿ ದನಗಳ ಹಾಲನ್ನು ಕರೆಯುತ್ತಿದ್ದನು. ಇದರಂತೆ ನಿನ್ನ ಎಲ್ಲಾ ಇಷ್ಟಾರ್ಥಗಳನ್ನೂ ಕೊಡುವೆನು ಎಂದು ತಿಳಿಸಿದನು. ಮಳೆಗಾಲದ ಮೇಘದಂತೆ ನೀಲವಾದ ಶರೀರದಿಂದ ಯುಕ್ತನಾಗಿರುವ ಶ್ರೀಕೃಷ್ಣದೇವನ ಪಾದಗಳಲ್ಲಿ ಬಿದ್ದು ನಮಸ್ಕರಿಸಿದನು. ಇಷ್ಟರವರೆಗೆ ಏರ್ಪಡದಿರುವ ಶ್ರೀಕೃಷ್ಣದೇವನ ದರ್ಶನೋತ್ಸವವು ಇಂದು ಏರ್ಪಟ್ಟಿತು ಎಂದು ತೃಪ್ತನಾದನು.

ಈ ಉತ್ಸವದಿಂದ ಆನಂದವು ಮಿತಿಮೀರಿತು. ಆ ಆನಂದದಿಂದ ಕುಣಿದನು. ಹರೇ ನಾರಾಯಣ, ಗೋವಿಂದಾ, ಎಂಬ ನಾಮಗಳನ್ನು ಗಟ್ಟಿಯಾಗಿ ಗರ್ಜಿಸುತ್ತಾ ಹೇಳಿದನು. ಈ ನಾರಾಯಣನಾಮೋಚ್ಚಾರಣವನ್ನು ಎಷ್ಟೆಷ್ಟು ಗಟ್ಟಿಯಾಗಿ ಹೇಳುತ್ತಿರುವನೋ ಅಷ್ಟಷ್ಟು ಪಾಪಗಳ ಪರ್ವತಗಳನ್ನು ಭೇದಿಸಿದನು. ನಂದನ ಪುಣ್ಯಗಳನ್ನು ಹೊಗಳಿದನು.

ಶ್ರೀಕೃಷ್ಣದೇವನು ಅಕ್ರೂರನ ಭಕ್ತಿಗೆ ಮೆಚ್ಚಿದನು. ಚಂದ್ರನಂತೆ ಸುಂದರವಾದ ಮುಖದಿಂದ ಅವನನ್ನು ನೋಡಿದನು. ಶುಭ್ರವಾದ ಮುಗುಳುನಗೆಯಿಂದ ನಗುತ್ತಾ ಅವನನ್ನು ಎಬ್ಬಿಸಿದನು. ಶ್ರೀಕೃಷ್ಣದೇವನ ಶತ್ರುವಾದ ಕಂಸನ ಸಂದೇಶವನ್ನು ತಂದಿರುವ ತನ್ನನ್ನು ಅನುಗ್ರಹಿಸಲಾರನೆಂಬ ಸಂಶಯದಿಂದ ಅಕ್ರೂರನು ಹಿಂಜರಿದನು. ಆದರೆ ಶ್ರೀಕೃಷ್ಣದೇವನು ಪರಮ ಪ್ರೇಮದಿಂದ ಆಲಿಂಗಿಸುತ್ತಾ ಆ ಎಲ್ಲ ಸಂಶಯವನ್ನೂ ಪರಿಹರಿಸಿದನು. ಅನಾದಿಕಾಲದಿಂದಲೂ ಅಕ್ರೂರನಲ್ಲಿದ್ದ ಸಂಸಾರಬಂಧನದಿಂದ ಅವನನ್ನು ಬಿಡಿಸುವವನಂತೆ ಗಟ್ಟಿಯಾಗಿ ಆಲಿಂಗಿಸಿಕೊಂಡನು. ಶ್ರೀಕೃಷ್ಣದೇವನು ಅಕ್ರೂರನ ಮುಖವನ್ನು ನೋಡಿದ ಕೂಡಲೇ ಅವನು ಬಂದಿರುವ ಕಾರಣವನ್ನು ತಿಳಿದನು. ಸ್ನಾನ ರಾತ್ರಿಭೋಜನ ಮುಂತಾದ ಉಪಚಾರಗಳೆಲ್ಲವೂ ಮುಗಿದ ಮೇಲೆ ಸರ್ವಜ್ಞನಾಗಿದ್ದರೂ ಲೋಕದೃಷ್ಟಿಯನ್ನು ಅನುಸರಿಸಿ ಅಕ್ರೂರನನ್ನು ನೋಡಿ ಹೀಗೆ ಕೇಳಿದನು.

## ಶ್ರೀಕೃಷ್ಣದೇವನ ಪ್ರಶ್ನೆಗಳು

"ಅಕ್ರೂರ! (೧) ನೀನು ಕ್ಷೇಮವಾಗಿರುವೆಯಾ? (೨) ನನ್ನ ತಂದೆ ಮತ್ತು ತಾಯಿಗಳು ಕ್ಷೇಮವಾಗಿರುವರಾ? (೩) ವೇದಾಧ್ಯಯನ, ತೀರ್ಥಸ್ನಾನ, ದೇವತೆಗಳ ಪೂಜಾ ಮುಂತಾದ ಪುಣ್ಯಕಾರ್ಯಗಳನ್ನು ವಿಘ್ನವಿಲ್ಲದೆ ನಡಿಸುತ್ತಿರುವೆಯಾ? (೪) ಸಂಸಾರದಿಂದ ಬಿಡುಗಡೆಯನ್ನು ಪಡೆಯುವುದಕ್ಕಾಗಿ ಪ್ರಯತ್ನಿಸುತ್ತಿರುವೆಯಾ? (೫) ಕಂಸನ ಆಸೆಯೇನು? ನೀನು ಸರ್ವಜ್ಞನಾಗಿರುವಿ. ಎಲ್ಲವನ್ನೂ ತಿಳಿದ ನೀನು ನಾನು ಮಾಡಬೇಕಾದ ಕಾರ್ಯವು ಯಾವುದು? ಎಂದು ವಿಮರ್ಶಿಸಿ ಹೇಳು" ಎಂದು ಕೇಳಿದನು. ಅದಕ್ಕೆ ಅಕ್ರೂರನು ಉತ್ತರವನ್ನು ಕೊಟ್ಟನು.

## ಅಕ್ರೂರನ ಉತ್ತರ

" ಓ ಶ್ರೀಕೃಷ್ಣದೇವ, ನಿನ್ನ ಪ್ರಶ್ನೆಗಳ ಕ್ರಮವನ್ನು ಅನುಸರಿಸಿ ಉತ್ತರಿಸುವೆನು." " ಬ್ರಹ್ಮಣಾ ತ್ಯಕ್ತದೇಹಸ್ತು ಮೃತ ಇತ್ಯುಚ್ಯತೇ ನರಃ" ಅಂದರೆ "ಪರಬ್ರಹ್ಮಸ್ವರೂಪಿಯಾದ ಶ್ರೀಕೃಷ್ಣದೇವನು ಯಾವನ ದೇಹವನ್ನು ಬಿಟ್ಟು ಹೋಗುವನೋ ಅವನು ಮೃತನೆಂದೆನಿಸುವನು" ಎಂದು ಶಾಸ್ತ್ರವು ತಿಳಿಸುತ್ತದೆ. ಎಲ್ಲಾ ದೇಶಗಳಲ್ಲಿಯೂ ಎಲ್ಲಾ ಕಾಲಗಳಲ್ಲಿಯೂ ಇರುವವನೂ ಗುಣಪೂರ್ಣನೂ ಆಗಿರುವ ನೀನು ಯಾರ ದೇಹವನ್ನೂ ಬಿಟ್ಟು ಎಲ್ಲಿಗೂ ಹೋಗುವುದಿಲ್ಲ. ಆದ್ದರಿಂದಲೇ ಅನಂತ ಎಂದು ಪ್ರಸಿದ್ಧನಾಗಿರುವಿ. ಆದರೂ ಸರ್ವರ ದೇಹಗಳಲ್ಲಿಯೂ ಕೆಲಕಾಲದ ವರೆಗೆ ವಾಸಿಸುತ್ತಿರುವಂತೆಯೂ ಕ್ಲೃಪ್ತವಾದ ಕಾಲವು ಮುಗಿದ ಕೂಡಲೇ ಆ ದೇಹವನ್ನು ಬಿಡುತ್ತಿರವಂತೆಯೂ ನಟಿಸುತ್ತಿರುವಿ. ಹೀಗೆ ನಟಿಸುತ್ತಾ ಯಾರ ದೇಹದಲ್ಲಿ ಎಷ್ಟು ಕಾಲದ ವರೆಗೆ ನೀನು ವಾಸಿಸುತ್ತಿರುವಿಯೋ ಅಷ್ಟು ಕಾಲದ ವರೆಗೆ ಅವನಿಗೆ ಮರಣವಿಲ್ಲ. ಆ ಕಾಲವು ಮುಗಿದ ಮರುಕ್ಷಣದಲ್ಲಿಯೇ ಮರಣವು ಏರ್ಪಡುತ್ತದೆ.

(೧) " ಓ ಅನಂತನೇ!, ನೀನು ನನ್ನ ದೇಹದಲ್ಲಿ ವಾಸಿಸುತ್ತಿರುವ ವರೆಗೆ ನಾನು ಕ್ಷೇಮದಿಂದ ಯುಕ್ತನಾಗಿರುವೆನು." ಇಷ್ಟರ ವರೆಗೆ ನೀನು ನನ್ನ ದೇಹದಲ್ಲಿ ವಾಸಿಸುತ್ತಿರುವಿ. ಆದ್ದರಿಂದ ಈಗ ನಾನು ಕ್ಷೇಮದಿಂದ ಯುಕ್ತನಾಗಿರುವೆನು." ಇದು ನಿನ್ನ ಮೊದಲನೆಯ ಪ್ರಶ್ನೆಗೆ ಉತ್ತರ.

(೨) " ಕಾಡಿನ ಎಲ್ಲಾ ದಿಕ್ಕುಗಳಲ್ಲಿಯೂ ಬೆಂಕಿಯು ವ್ಯಾಪಿಸಿಕೊಂಡಿರುವಾಗ ಆ ಬೆಂಕಿಯ ಮಧ್ಯದಲ್ಲಿರುವ

ಎಲ್ಲಾ ವಸ್ತುಗಳೂ ಭಸ್ಮವಾಗುತ್ತವೆ. ನಿನ್ನ ಭಕ್ತರಿಗೆ ಕಷ್ಟಗಳು ಬಂದಾಗ ಆ ಕಷ್ಟಗಳೆಲ್ಲವನ್ನೂ ನೀನು ಕಾಡಿನ ಬೆಂಕಿಯಂತೆ ಭಸ್ಮ ಮಾಡುತ್ತಿರುವಿ. ಆದ್ದರಿಂದ ನಿನ್ನನ್ನು "ಶುಕ್ಲಕ್ಲೇಶವನಾನಲ" ಎಂದು ಜ್ಞಾನಿಗಳು ಕರೆಯುತ್ತಿರುವರು. ಆ ಹೆಸರಿನಿಂದ ಹೊಗಳಲ್ಪಡುವ ನೀನಿರುವಾಗ ನಿನ್ನ ಭಕ್ತರಿಗೆ ಯಾರಿಗೂ ಕ್ಲೇಶಗಳು ಏರ್ಪಡಲಾರವು. ನಿನ್ನ ತಂದೆಯೂ ತಾಯಿಯೂ ನಿನ್ನ ಭಕ್ತರಲ್ಲಿ ಉತ್ತಮರು. ಅವರ ಭಕ್ತಿಗೆ ಮೆಚ್ಚಿ ಅವರುಗಳಿಗೆ ಮಗನಾಗಿ ನೀನು ಅವತರಿಸಿರುವಿ. ನಿನ್ನ ಭಕ್ತರಿಗೆ ಯಾರಿಗೂ ಕ್ಲೇಶವಿಲ್ಲದಿರುವಾಗ ಭಕ್ತರಲ್ಲಿ ಉತ್ತಮರಾಗಿರುವ ನಿನ್ನ ತಂದೆಗೂ ತಾಯಿಗೂ ಕ್ಲೇಶವಿದೆಯೇ? ಇಲ್ಲ ಇಲ್ಲ."

" ನೀನು ಎಲ್ಲಾ ಜೀವರಿಗೂ ತಂದೆಯಾಗಿರುವಿ. ಆದ್ದರಿಂದ ವಸುದೇವನಿಗೂ ದೇವಕೀದೇವಿಗೂ ತಂದೆಯಾಗಿರುವಿ. ನೀನು ವಸುದೇವ ಮತ್ತು ದೇವಕಿಯರ ಮಗನಲ್ಲ. ಇದು ಸತ್ಯವಾದ ವಿಷಯವಾಗಿದೆ. ಆದರೆ ವಸುದೇವನನ್ನು ನಿನ್ನ ತಂದೆಯೆಂದೂ ದೇವಕಿಯನ್ನು ನಿನ್ನ ತಾಯಿಯೆಂದೂ ಎಲ್ಲರೂ ಹೇಳುತ್ತಿರುವರು. ಕಳ್ಳನಲ್ಲದವನಿಗೆ ಕಳ್ಳನೆಂಬ ಅಪವಾದವು ಬಂದಂತೆ ತಂದೆ ತಾಯಿಗಳಲ್ಲದವರಿಗೂ ತಂದೆ ತಾಯಿಗಳೆಂಬ ಅಪವಾದವು ಬಂದಿರುವಾಗ ಅದಕ್ಕೆ ಯೋಗ್ಯವಾದ ಶಿಕ್ಷೆಯಿಲ್ಲವೇ? ಅದರಂತೆ ತಂದೆತಾಯಿಗಳಲ್ಲದವರಿಗೆ ತಂದೆತಾಯಿಗಳೆಂಬ ಅಪವಾದವು ಬಂದಿರುತ್ತದೆ. ಕಳ್ಳನಲ್ಲದವನಿಗೆ ಕಳ್ಳನೆಂಬ ಅಪವಾದವು ಬಂದದ್ದಕ್ಕೋಸ್ಕರ ವಸುದೇವನಿಗೂ ದೇವಕಿಗೂ ಯೋಗ್ಯನಾದ ಶಿಕ್ಷೆಯನ್ನು ಕೊಡಲೇಬೇಕು. ಕಂಸನು ಅವರಿಬ್ಬರನ್ನೂ ಜೈಲಿನಲ್ಲಿಟ್ಟು ಕೈಗಳಲ್ಲಿಯೂ ಕಾಲುಗಳಲ್ಲಿಯೂ ಸಂಕೋಲೆಗಳಿಂದ ಬಿಗಿದಿರುವನು. ಇದು ಅವರಲ್ಲಿ ಬಂದಿರುವ ಅಪವಾದಕ್ಕೆ ಯೋಗ್ಯವಾದ ಶಿಕ್ಷೆಯೆನಿಸುತ್ತದೆ."

" ಓ ಶ್ರೀಕೃಷ್ಣದೇವ! ಉತ್ತಮಪುರುಷರಿಗೆ ಯಾವ ಶಿಕ್ಷೆಯೂ ಮನಸ್ಸಿಗೆ ಕಷ್ಟವನ್ನು ಕೊಡುವುದಿಲ್ಲ. ಶ್ರೀಹರಿಯ ನಿರಂತರ ಸ್ಮರಣೆಗೆ ಕಾರಣವಾಗಿದ್ದು ಮನಸ್ಸಿಗೆ ಹರ್ಷವನ್ನೇ ಕೊಡುತ್ತದೆ. ವಸುದೇವ ಮತ್ತು ದೇವಕಿಯರಿಗೂ ಈ ಸಂಕೋಲೆಯಿಂದ ಬಿಗಿಯಲ್ಪಡುವಿಕೆಯು ಮನಸ್ಸಿಗೆ ಯಾವ ವಿಧವಾದ ಸಂತಾಪವನ್ನೂ ಕೊಡುತ್ತಿಲ್ಲ. ಶ್ರೀಕೃಷ್ಣದೇವನನ್ನು ಹಗಲಿರುಳು ಅಖಂಡವಾಗಿ ಸ್ಮರಿಸುವಂತೆ ಮಾಡುತ್ತಿದೆ. ಆ ಸ್ಮರಣದಿಂದ ಅಪಾರವಾದ ಸಂತೋಷವನ್ನು ಕೊಡುತ್ತಿದೆ." ಇದು ನಿನ್ನ ಎರಡನೆಯ ಪ್ರಶ್ನೆಗೆ ಉತ್ತರ. ನಿನ್ನ ತಂದೆ ತಾಯಿಗಳು ಜೈಲಿನಲ್ಲಿರುವರು. ಆದರೂ ಸುಖಿಗಳಾಗಿರುವರು ಎಂಬ ವಿಷಯವನ್ನು ಈ ರೀತಿಯಿಂದ ಅಕ್ರೂರನು ಹೇಳಿರುವನು.

(೩) " ನಿನ್ನ ಪಾದಗಳಲ್ಲಿ ಅಂಟಿಕೊಂಡಿರುವ ಧೂಳಿಗಳಲ್ಲಿ ಗಂಗಾದಿಸಕಲತೀರ್ಥಗಳೂ ವಾಸಿಸುತ್ತಿವೆ. ಆ ಪಾದಧೂಳಿಗಳನ್ನು ಯಾವನು ತನ್ನ ದೇಹದಲ್ಲಿ ಚೆಲ್ಲಿಕೊಳ್ಳುವನೋ ಅವನು ಗಂಗಾತೀರ್ಥಗಳಲ್ಲಿ ಸ್ನಾನಮಾಡಿದ ಫಲವನ್ನು ಹೊಂದುವನು. ಇದು ಸಕಲ ಶಾಸ್ತ್ರಗಳ ಸಾರವೆನಿಸುತ್ತದೆ. ನಾನು ಇಲ್ಲಿಗೆ ಬರುತ್ತಿರುವಾಗ ನಿನ್ನ ಪಾದಗಳ ಗುರುತುಗಳನ್ನು ಕಂಡೆನು. ಆ ಧೂಳಿಗಳಲ್ಲಿ ಹೊರಳಾಡಿದನು. ಆದ್ದರಿಂದಲೇ ಸಕಲ ತೀರ್ಥಗಳಲ್ಲಿಯೂ ಸ್ನಾನ ಮಾಡಿದ ಪುಣ್ಯಗಳನ್ನು ಪಡೆದಿರುವೆನು.

"ನಿನ್ನ ದೇಹದಲ್ಲಿ ದೇವತೆಗಳೇ ಮೊದಲಾದ ಸರ್ವಜೀವರೂ ವಾಸಿಸುತ್ತಿರುವರು. ನಿನ್ನನ್ನು ಸತ್ಕರಿಸಿದವನಿಗೆ ಸಕಲ ದೇವತೆಗಳನ್ನೂ ಸತ್ಕರಿಸಿದ್ದರಿಂದ ಬರಬೇಕಾದ ಪುಣ್ಯವು ಬರುತ್ತದೆ. ನಾನು ಬಂದ ಕೂಡಲೇ ನಿನ್ನನ್ನು

ನಮಸ್ಕರಿಸಿದೆನು. ಇದರಿಂದ ನಿನ್ನ ದೇಹದಲ್ಲಿರುವ ಎಲ್ಲಾ ದೇವತೆಗಳನ್ನೂ ನಮಸ್ಕರಿಸಿ ಸತ್ಕರಿಸಿದದಂತಾಯಿತು. ನೀನಾಗಿಯೇ ನಿನ್ನಲ್ಲಿರುವ ಸಕಲ ದೇವತೆಗಳನ್ನೂ ನನ್ನಿಂದ ಪೂಜಿಸುವಂತೆ ಮಾಡಿಕೊಂಡಿರುವಿ. ಆಲಿಂಗನವು ಪೂಜೆಗೆ ಪ್ರತಿನಿಧಿಯಲ್ಲವೇ? ಈ ಪೂಜೆಯನ್ನು ಮಾಡುತ್ತಿರುವುದರಿಂದ ನಿನ್ನ ಅನುಗ್ರಹಕ್ಕೆ ಪಾತ್ರನಾಗಿರುವ ನನಗೆ ಯಾವ ವಿಧವಾದ ವಿಘ್ನವೂ ಏರ್ಪಡಲಾರದು. ಏರ್ಪಡಲೂ ಇಲ್ಲ.''

"ಕರ್ಮಣಾ ಜ್ಞಾನಮಾತನೋತಿ'' ಅಂದರೆ " ಎಲ್ಲಾ ಸತ್ಕರ್ಮಗಳೂ ಜ್ಞಾನಕ್ಕೆ ಸಾಧನ'' ಎಂದು ಶ್ರುತಿಗಳು ಸಾರುತ್ತಿವೆ. ನಾನು ನಿನ್ನನ್ನು ನೋಡಿದೆನು. ಪುಣ್ಯಗಳನ್ನು ಮಾಡದವನು ನಿನ್ನನ್ನು ನೋಡಲು ಸಾಧ್ಯವೇ? ಇಲ್ಲ ಇಲ್ಲ. ಆದ್ದರಿಂದ ನಾನು ಎಲ್ಲಾ ಪುಣ್ಯಗಳನ್ನೂ ಮಾಡಿರುವೆನೆಂದೇ ಹೇಳಬೇಕು.''

"ನಿನ್ನ ಮಾತುಗಳು ಸಕಲ ವೇದಾರ್ಥಗಳನ್ನೂ ತಿಳಿಸುತ್ತಿವೆ. ನಿನ್ನ ಮಾತುಗಳನ್ನು ನಾನು ಕೇಳಿದನು. ಆದ್ದರಿಂದ ಸಕಲ ವೇದಗಳನ್ನೂ ಅಧ್ಯಯನ ಮಾಡಿದಂತಾಯಿತು.'' ಇದು ನಿನ್ನ ಮೂರನೆಯ ಪ್ರಶ್ನೆಗೆ ಉತ್ತರ.

(೪) " ಶ್ರೀಹರಿಯ ಸಮೀಪದಲ್ಲಿರುವುದೇ ಸಾಮೀಪ್ಯ ಎಂಬ ಮುಕ್ತಿ ಎನಿಸುತ್ತದೆ. ಈಗ ನಾನು ನಿನ್ನ ಸಮೀಪದಲ್ಲಿರುವೆನು. ಆದ್ದರಿಂದ ನನಗೆ ಇಲ್ಲಿಗೆ ಬಂದ ಕೂಡಲೇ ಮುಕ್ತಿಯು ಬಂತು. ಸಂಸಾರವೇ ಇಲ್ಲ. ಹೀಗಿರುವಾಗ ಸಂಸಾರದಿಂದ ಬಿಡುಗಡೆಯೂ ಇಲ್ಲ. ನೀನು ಸಂಸಾರದಿಂದ ಬಿಡುಗಡೆಗಾಗಿ ಪ್ರಯತ್ನಿಸುತ್ತಿರುವಿಯಾ? ಎಂದು ನಾಲ್ಕನೆಯದಾಗಿ ಕೇಳಿರುವಿ. ಅದಕ್ಕೆ ಸಂಸಾರವೇ ಇಲ್ಲ. ಅದರಿಂದ ಬಿಡುಗಡೆಗೆ ಪ್ರಯತ್ನದ ಅವಶ್ಯಕತೆ ಏನು. ಎಂಬುದೇ ಉತ್ತರವೆನಿಸುತ್ತದೆ.''

" ಓ ಶ್ರೀಕೃಷ್ಣದೇವ!, ನಾನು ಎಲ್ಲವನ್ನೂ ತಿಳಿದಿರುವೆನೆಂದು ಹೇಳಿರುವಿ. " ಯೇನಾಶ್ರುತಂ ಶ್ರುತಂ ಭವತಿ'' ಮುಂತಾದ ವೇದಗಳು ನಿನ್ನನ್ನು ತಿಳಿದುಬಿಟ್ಟರೆ ಎಲ್ಲಾ ವಸ್ತುಗಳನ್ನೂ ತಿಳಿದ ಫಲವೂ ಬರುವುದಾಗಿ ಹೇಳುತ್ತಿವೆ. ನಿನ್ನನ್ನು ನೋಡಿಬಿಟ್ಟೆನು. ಎಲ್ಲಾ ವಸ್ತುಗಳನ್ನೂ ತಿಳಿದದ್ದರಿಂದ ಬರಬೇಕಾದ ಎಲ್ಲಾ ಫಲಗಳೂ ನನಗೆ ಬಂದವು. ಆದ್ದರಿಂದ ನಾನು ಎಲ್ಲಾ ವಸ್ತುಗಳನ್ನೂ ತಿಳಿದಿರುವೆನೆಂದು ನೀನು ಹೇಳಿರುವುದನ್ನು ನಾನು ಅಂಗೀಕರಿಸುವೆನು.''

ಸಂಸಾರದಿಂದ ಬಿಡುಗಡೆಗೆ ಪ್ರಯತ್ನಿಸುತ್ತಿರುವೆಯಾ? ಎಂದು ಕೇಳಿರುವಿ. ಸಂಸಾರವು ನನಗೆ ಶತ್ರುವಾಗಿದ್ದರೆ ಆ ಸಂಸಾರದಿಂದ ಬಿಡುಗಡೆಗೆ ನಾನು ಪ್ರಯತ್ನಿಸಬೇಕು. ಈಗ ಸಂಸಾರವು ನನಗೆ ಶತ್ರುವಲ್ಲ. ಮಿತ್ರನಾಗಿರುವುದು. ಸಂಸಾರದಲ್ಲಿ ನಾನಿರುವುದರಿಂದಲ್ಲವೇ ಕಂಸನು ಪರಮಸುಂದರನಾಗಿರುವ ನಿನ್ನನ್ನು ನೋಡುವುದಕ್ಕಾಗಿ ನನ್ನನ್ನು ಕಳುಹಿಸಿರುವನು. ಆದ್ದರಿಂದ ನನ್ನ ಮಿತ್ರನಾಗಿರುವ ಸಂಸಾರವೇ ನನಗಿರಲಿ. ಅದರಿಂದ ಬಿಡುಗಡೆಯೂ ಬೇಡ. ಬಿಡುಗಡೆಗಾಗಿ ನಾನು ಪ್ರಯತ್ನಿಸುವುದೂ ಇಲ್ಲ. ಓ ಸರ್ವಜ್ಞಶಿಖಾಮಣಿಯೇ!, ನೀನು ಪ್ರಶ್ನಿಸಿರುವುದೂ ನಾನು ಉತ್ತರವನ್ನು ಕೊಡುತ್ತಿರುವುದೂ ಮನುಷ್ಯರ ಕಣ್ಣುಗಳನ್ನು ಒರೆಸುವುದಕ್ಕಾಗಿಯೇ ಆಗಿದೆ.''

## ಶ್ರೀಕೃಷ್ಣದೇವನಿಗೆ ಕಂಸನ ಸಂದೇಶ ಮತ್ತು ಅವನ ಕರ್ತವ್ಯಗಳು

" ಓ ಶ್ರೀಕೃಷ್ಣದೇವ! ನೀನು ಇನ್ನು ಮುಂದೆ ಮಾಡಬೇಕಾದ ಕಾರ್ಯಗಳು ಯಾವುವು? ಎಂದು

ಪ್ರಶ್ನಿಸಿರುವಿ. ಅದಕ್ಕೆ ಉತ್ತರವನ್ನು ಕೊಡುವೆನು. ಈ ಉತ್ತರವಾಕ್ಯದಲ್ಲಿ ಎರಡು ವಿಧವಾದ ಅರ್ಥಗಳಿವೆ. ಅವುಗಳಲ್ಲಿ ಒಂದು ವಿಧವಾದ ಅರ್ಥವು ನಾನು ಕಂಸನ ದೂತನಾಗಿ ಬಂದಿರುವುದರಿಂದ ಅವನಿಗೆ ಸಂಮತವಾದ ಅರ್ಥವಾಗಿರುತ್ತದೆ. ಇನ್ನೊಂದು ಅರ್ಥವು ನಿನ್ನ ಭಕ್ತನೂ ಹಿತಚಿಂತಕನೂ ಆಗಿರುವ ನಾನು ಅವಶ್ಯವಾಗಿ ತಿಳಿಸಬೇಕಾದ ಮತ್ತು ಕಂಸನಲ್ಲಿರುವ ಅಭಿಪ್ರಾಯಕ್ಕೆ ವಿರುದ್ಧವಾಗಿಯೂ ನೀನು ಕಡ್ಡಾಯವಾಗಿ ತಿಳಿಯಬೇಕಾಗಿಯೂ ಇರತಕ್ಕ ಅರ್ಥವಾಗಿದೆ. ಅವುಗಳಲ್ಲಿ ಕಂಸನಿಗೆ ಸಂಮತವಾದ ಅರ್ಥವನ್ನು ಮೊದಲು ತಿಳಿಸುವೆನು.

"ನೀನು ಕಂಸನ ಸೋದರಳಿಯನಾಗಿರುವಿ. ನಿನ್ನಲ್ಲಿ ತುಂಬಾ ಪ್ರೀತಿಯನ್ನಿಟ್ಟಿರುವನು. ಆ ಪ್ರೀತಿಯಿಂದಲೇ ನೀನು ಬೃಂದಾವನದಲ್ಲಿ ವಾಸಿಸುತ್ತಿರುವ ಸಮಾಚಾರವನ್ನು ತಿಳಿದ ಕೂಡಲೇ ಮಥುರಾಪಟ್ಟಣಕ್ಕೆ ಕರೆಸಬೇಕೆಂದು ತೀರ್ಮಾನಿಸಿರುವನು. ಕಂಸನಲ್ಲಿ ರುದ್ರದೇವನು ಕೊಟ್ಟಿರುವ ಉತ್ತಮವಾದ ಒಂದು ಧನುಸ್ಸು ಇದೆ. ನೀನು ಬರುವ ಸುಸಂದರ್ಭದಲ್ಲಿ ಆ ಧನುಸ್ಸಿಗೂ ವಿಶೇಷಪೂಜೆಯನ್ನು ಮಾಡುವುದಾಗಿ ತೀರ್ಮಾನಿಸಿದ್ದಾನೆ. ಆ ಧನುಸ್ಸಿನ ಪೂಜೆಯೇ ಮುಖ್ಯವಲ್ಲ. ನಿನಗಾಗಿಯೇ ಈ ಏರ್ಪಾಡು. ನಿನ್ನ ಸೋದರಮಾವನು ಮಾಡುತ್ತಿರುವ ಈ ಉತ್ಸವವನ್ನು ಸಾರ್ಥಕವಾಗುವಂತೆ ಮಾಡುವುದಕ್ಕಾಗಿ ನೀನು ಮಥುರಾಪಟ್ಟಣಕ್ಕೆ ಬರಬೇಕು. ಅವನ ಶತ್ರುಗಳನ್ನೂ ಆ ಶತ್ರುಗಳ ಸೈನ್ಯಗಳನ್ನೂ ಸಂಹರಿಸಬೇಕು. ಅವನ ಮತ್ತು ನಿನ್ನ ಭಕ್ತರ ಮನಸ್ಸಿನಲ್ಲಿರುವ ವ್ಯಥೆಗಳನ್ನೆಲ್ಲಾ ಪರಿಹರಿಸಬೇಕು. ಕಡೆಗಣ್ಣಿನ ನೋಟದಿಂದ ನೋಡುತ್ತಾ ಹುಬ್ಬನ್ನು ಹಾರಿಸುತ್ತಾ ಸರ್ವರನ್ನೂ ಸಂತೋಷಪಡಿಸಬೇಕು." ಇನ್ನು ಶ್ರೀಕೃಷ್ಣದೇವನಿಗೆ ಹೇಳುವ ಗೂಢಾಭಿಪ್ರಾಯದ ಮಾತುಗಳನ್ನು ತಿಳಿಸುವೆವು.

"ಕಂಸನು ಧನುಸ್ಸಿನ ಪೂಜೆ ಎಂಬ ನೆಪವನ್ನು ಹಾಕಿರುವನು. ಈ ನಿಮಿತ್ತವನ್ನು ಹೊರಗೆ ಹೇಳುತ್ತಾ ನಿನ್ನನ್ನು ಮಥುರಾಪಟ್ಟಣಕ್ಕೆ ಬರುವಂತೆ ಮಾಡುವನು. ಅಲ್ಲಿ ನಿನಗೆ ಅಪ್ರಿಯವನ್ನು ಮಾಡಬೇಕೆಂದು ಆಶಿಸುವನು. ನೀನು ಅಲ್ಲಿಗೆ ಬರಬೇಕು. ಅವನ ಧನುರುತ್ಸವವನ್ನು ಕೆಡಿಸಬೇಕು. ಅವನನ್ನೂ ಅವನ ಸೈನ್ಯಗಳನ್ನೂ ಸಂಹರಿಸಬೇಕು. ನಿನ್ನ ಭಕ್ತರಾದ ಯಾದವರೆಲ್ಲರನ್ನೂ ಕಡೆಗಣ್ಣಿನ ನೋಟದಿಂದ ನೋಡುತ್ತಾ ಅವರ ಮನಸ್ಸಿನಲ್ಲಿರುವ ಕೊರತೆಗಳನ್ನೆಲ್ಲಾ ಪರಿಹರಿಸಬೇಕು."

"ಸಂಸಾರಪರಿಹಾರಕನಾದ ಓ ಶ್ರೀಕೃಷ್ಣದೇವ! ಜೇನುರಸದ ಮತ್ತು ಪೂರ್ಣಿಮಾಚಂದ್ರನ ಕಾಂತಿಯಿಂದ ಮನಸ್ಸಿಗೆ ವಿಶೇಷವಾದ ಉಲ್ಲಾಸವನ್ನು ಕೊಡುತ್ತಿರುವ ಮಥುರಾಪಟ್ಟಣಕ್ಕೆ ನಿನ್ನ ಭಕ್ತರಿಂದ ಸಹಿತನಾಗಿ ಬೇಗನೆ ಬರಬೇಕು." ಮೇಲ್ಕಂಡ ರೀತಿಯಿಂದ ಅಕ್ರೂರನು ಶ್ರೀಕೃಷ್ಣದೇವನಲ್ಲಿ ಪ್ರಾರ್ಥಿಸಿದನು.

## ಮಥುರಾಯಾತ್ರೆಗೆ ಸಿದ್ಧತೆ.

ಶ್ರೀಕೃಷ್ಣದೇವನು ಅವನ ಪ್ರಾರ್ಥನೆಯನ್ನು ಅಂಗೀಕರಿಸಿದನು. ನಂದನು ಎಲ್ಲಾ ಗೋಪಾಲಕರನ್ನು ಕರೆದು ಮರುದಿನ ಪ್ರಾತಃಕಾಲದಲ್ಲಿ ಮಥುರಾಪಟ್ಟಣಕ್ಕೆ ಹೊರಡುವುದಾಗಿಯೂ ಕಂಸನಿಗೆ ಕಾಣಿಕೆಯನ್ನು ಸಮರ್ಪಿಸುವುದಕ್ಕಾಗಿ ಹಾಲು ಬೆಣ್ಣೆ ಮೊಸರು ತುಪ್ಪ ಮುಂತಾದ ಸಕಲ ಪದಾರ್ಥಗಳನ್ನೂ ಸಿದ್ಧಪಡಿಸಬೇಕೆಂದೂ ಆಜ್ಞಾಪಿಸಿದನು. ಅವರೆಲ್ಲರೂ ಸಿದ್ಧರಾದರು.

ಗೋಪಿಕಾಸ್ತ್ರೀಯರು ಈ ಸಮಾಚಾರವನ್ನು ತಿಳಿದರು. ಶ್ರೀಕೃಷ್ಣದೇವನು ಮಥುರಾಪಟ್ಟಣಕ್ಕೆ ಹೋಗಬಾರದೆಂದೂ ಹೋದರೆ ಅಲ್ಲಿಯ ಸ್ತ್ರೀಯರು ಅವನನ್ನು ಹಿಂದಿರುಗಿ ಬರಲು ಬಿಡಲಾರರೆಂದೂ

ತೀರ್ಮಾನಿಸಿದರು. ಅವನು ಇಲ್ಲಿಂದ ಹೊರಡುವ ಸಂಕಲ್ಪವನ್ನು ನಿಲ್ಲಿಸಬೇಕೆಂದು ಅನ್ಯೋನ್ಯವಾಗಿ ಮಾತಾಡಿಕೊಳ್ಳಲು ಆರಂಭಿಸಿದರು. ನಾನಾ ವಿಧವಾದ ಪ್ರಲಾಪಗಳನ್ನು ಮಾಡಲು ಆರಂಭಿಸಿದರು.

**(೪೧) (ಮಥುರಾಪುರಂ) ಯಾನ್ ಅಭಿತಪ್ತಾನ್ ವ್ರಜಯುವತಿಜನಾನ್ ಸಾಂತ್ವಯಿತ್ವಾ**

ಮಥುರಾ ಪಟ್ಟಣವನ್ನು ಕುರಿತು ಹೊರಟವನು ದುಃಖದಿಂದ ಪೀಡಿತರಾಗಿರುವ ಗೊಲ್ಲಸ್ತ್ರೀಯರನ್ನು ಸಮಾಧಾನಪಡಿಸಿದನು.

ವಿಶೇಷಾರ್ಥ - ಸ್ವವಿರಹಾಸಹಿಷ್ಣುಭಿರ್ಗೋಪಸ್ತ್ರೀಭಿರ್ವಾರಿತಃ ಪುನರಹಂ ಆಯಾಸ್ಯಾಮೀತಿ ಸಾಂತ್ವ ಯಿತ್ವಾ ತಾ ಅನುಜ್ಞಾಪ್ಯ.

# ಗೋಪಿವಿಲಾಸ

ವಿಶೇಷಾರ್ಥ ವಿವರಣ - " ಮಳೆಗಾಲದ ಮೇಘಗಳಂತೆ ನೀಲವಾದ ದೇಹದಿಂದ ಯುಕ್ತನಾಗಿರುವ ಓ ಶ್ರೀಕೃಷ್ಣದೇವ! ನಿನ್ನ ರಮ್ಯವಾದ ಅಧರಾಮೃತದಿಂದಲೇ ಜೀವಿಸುತ್ತಿರುವ ನಮ್ಮನ್ನು ಬಿಟ್ಟು ಹೋಗಬೇಡ. ನಮ್ಮ ದುರದೃಷ್ಟವು ನಿನಗೂ ನಮಗೂ ವಿಯೋಗವನ್ನು ಏರ್ಪಡಿಸುತ್ತಿರಬೇಕು. ಆ ದುರದೃಷ್ಟವನ್ನು ನಿನ್ನ ಕಡೆಗಣ್ಣಿನ ನೋಟವು ಪರಿಹರಿಸಲಾರದೇ? ನಿನ್ನ ಕೃಪಾದೃಷ್ಟಿಯು ಯಾರಲ್ಲಿ ಬೀಳುತ್ತದೆಯೋ ಅವರೆಲ್ಲರೂ ಸಕಲ ಸೌಭಾಗ್ಯಗಳನ್ನೂ ಪಡೆಯುತ್ತಿಲ್ಲವೇ? ಕಂಸನು ನಿನಗೂ ನಮಗೂ ವಿಯೋಗವನ್ನು ಮಾಡಿಸುತ್ತಿರುವ ಮಹಾಪಾಪಿಯೆಂದು ತಿಳಿಯುತ್ತದೆ. ಅವನನ್ನು ಸಂಹರಿಸುವುದಕ್ಕಾಗಿ ಹೋಗುವಿಯಾ? ನಿನ್ನ ಕಡೆಗಣ್ಣಿನ ನೋಟದಿಂದ ಹೊರಟಿರುವ ಉಗ್ರವಾದ ಅಗ್ನಿಯಿಂದ ಇಲ್ಲಿಂದಲೇ ಅವನನ್ನು ಭಸ್ಮಮಾಡಬಹುದು. ಇದಕ್ಕಾಗಿ ನೀನು ಇಲ್ಲಿಂದ ಅಲ್ಲಿಗೆ ಹೋಗಬೇಕಾಗಿಲ್ಲ.

" ದೇಹೇऽಪಿ ಯತ್ರ ಪವನೋऽತ್ರ ಹರಿರ್ಯತೋऽ ಸೌ ಮುಂತಾದ ಪ್ರಮಾಣವಚನಗಳು " ಶ್ರೀಮುಖ್ಯಪ್ರಾಣದೇವನು ಯಾವ ದೇಹದಲ್ಲಿ ವಾಸಿಸುತ್ತಿರುವನೋ ಆ ದೇಹದಲ್ಲಿ ಶ್ರೀಹರಿಯು ವಾಸಿಸುತ್ತಿರುವನು. ಯಾವ ದೇಹದಲ್ಲಿ ಶ್ರೀಹರಿಯು ವಾಸಿಸುವುದಿಲ್ಲವೋ ಆ ದೇಹದಲ್ಲಿ ಮುಖ್ಯಪ್ರಾಣದೇವನು ವಾಸಿಸುವುದಿಲ್ಲ." ಎಂದು ತಿಳಿಸುತ್ತಿವೆ. ಈ ಪ್ರಮಾಣಗಳಲ್ಲಿ ಹೇಳಿರುವ " ಹರಿಯಿಲ್ಲದ ದೇಹದಲ್ಲಿ ಮುಖ್ಯಪ್ರಾಣದೇವನು ವಾಸಿಸುವುದಿಲ್ಲ" ಎಂಬ ವಿಷಯವು ಈಗ ನಮಗೆ ಪ್ರತ್ಯಕ್ಷ ಸಿದ್ಧವಾಗುತ್ತಿದೆ. ಓ ಶ್ರೀಕೃಷ್ಣದೇವ! ನೀನು ನಮ್ಮನ್ನು ಬಿಟ್ಟು ಮಥುರಾಪಟ್ಟಣಕ್ಕೆ ಹೋಗುತ್ತಿರುವಿ. ಆಗ ನಮ್ಮ ಪ್ರಾಣವಾಯುವೂ ಈ ದೇಹವನ್ನು ಬಿಟ್ಟು ನಿನ್ನ ಹಿಂದೆಯೇ ಹೊರಡುತ್ತಿರುವುದು ನಮಗೆ ಅನುಭವಸಿದ್ಧವಾಗುತ್ತಿದೆಯಲ್ಲವೇ?

ಕಂಸನು "ಧನು" ಎಂಬ ಯಾಗವನ್ನು ಆರಂಭಿಸಿದನು. ಈ ಧನುರ್ಯಾಗದಲ್ಲಿ ಧನುಸ್ಸಿನಲ್ಲಿ ಬಾಣವನ್ನು ಜೋಡಿಸಿ ಬಿಡಬೇಕು. ಮೊದಲನೆಯ ಬಾಣದಿಂದ ನಮ್ಮ ಮೃದುವಾದ ಶರೀರಗಳನ್ನು ಗುರಿಯಿಟ್ಟು ನಮ್ಮನ್ನು ವಿಧಿಯು ಹೊಡೆಯುತ್ತಿರುವನು. ಆ ವಿಧಿಯು ವಿವೇಕವಿಲ್ಲದವನು. ಶ್ರೀಕೃಷ್ಣದೇವನು ಇಲ್ಲಿಂದ ಹೊರಟಕೂಡಲೇ ಬಾಣದಿಂದ ಹೊಡೆಯಲ್ಪಟ್ಟವರಂತೆ ನಾವೆಲ್ಲರೂ ಸಾಯುವೆವು. ಅಯ್ಯೋ, ನಾವು ಯಾವ ಪಾಪವನ್ನು ಮಾಡಿರುವೆವೋ? ತಿಳಿಯದು."

" ಓ ಬ್ರಹ್ಮದೇವ!, ಅಕ್ರೂರನಲ್ಲಿ ನಿನ್ನ ವಿಶೇಷಾವೇಶವಿದೆಯೆಂದು ದೊಡ್ಡವರು ಹೇಳುತ್ತಿರುವುದನ್ನು ನಾವು ತಿಳಿದಿರುವೆವು. ಅವನು ನಿನ್ನ ಆವೇಶಬಲದಿಂದಲೇ ಅಸಾಧ್ಯ ಕಾರ್ಯಗಳನ್ನೆಲ್ಲಾ ಸಾಧಿಸುತ್ತಿರುವನು. ಈಗ ನಮ್ಮನ್ನು ಬಿಡಿಸಿ ಶ್ರೀಕೃಷ್ಣದೇವನನ್ನು ಮಥುರಾಪಟ್ಟಣಕ್ಕೆ ಕರೆದುಕೊಂಡು ಹೋಗುತ್ತಿರುವುದೂ ಅವನಲ್ಲಿ ಆವಿಷ್ಟನಾಗಿರುವ ನಿನ್ನ ವ್ಯಾಪಾರವೇ ಆಗಿರುತ್ತದೆ."

" ಎಲೈ ದಯೆಯಿಲ್ಲದ ಬ್ರಹ್ಮದೇವ! ನೀನು ನಮ್ಮೆಲ್ಲರನ್ನೂ ಕರೆದು " ಸಂಭವಂತು ಸುರಸ್ತ್ರಿಯಃ " ಅಂದರೆ, " ದೇವತಾಸ್ತ್ರೀಯರೆ! ನೀವೆಲ್ಲರೂ ಶ್ರೀಕೃಷ್ಣಾವತಾರಕಾಲದಲ್ಲಿ ಭೂಮಿಯಲ್ಲಿ ಅವತರಿಸಿರಿ. ಶ್ರೀಕೃಷ್ಣದೇವನ ಅಂಗಸಂಗವು ನಿಮಗೆ ಏರ್ಪಡುತ್ತದೆ." ಎಂದು ಆಜ್ಞಾಪಿಸಿದಿ. ಈ ಆಜ್ಞೆಯನ್ನು ನಾವೆಲ್ಲರೂ ಕೇಳಿ ತುಂಬಾ ಸಂತೋಷದಿಂದ ಭೂಮಿಯಲ್ಲಿ ಅವತರಿಸಿದೆವು. ಶ್ರೀಕೃಷ್ಣದೇವನು ನಿನ್ನ ಮಾತಿಗೆ ಮರ್ಯಾದೆಯನ್ನು ಕೊಡುವುದಕ್ಕಾಗಿ ನಮ್ಮೆಲ್ಲರಿಗೂ ಅಂಗಸಂಗವನ್ನು ಕೊಟ್ಟನು. ಅವನ ಆಲಿಂಗನದಿಂದ ನಮಗೆ ಅವನ ಅಂಗಸಂಗದಲ್ಲಿ ಮಿತಿಮೀರಿದ ಲೋಭವು ಏರ್ಪಟ್ಟಿತು. ಇಂತಹ ಆನಂದೋದ್ರೇಕದಲ್ಲಿರುವ ನಮಗೆ ಶ್ರೀಕೃಷ್ಣದೇವನ ದರ್ಶನವೂ ಏರ್ಪಡದಂತೆ ಮಾಡುತ್ತಿರುವೆಯಲ್ಲಾ. ದೀನರಾದ ನಮ್ಮ ವಿಷಯದಲ್ಲಿ ನೀನು ಇಷ್ಟು ನಿರ್ದಯನಾಗಬಹುದೆ?"

" ಶ್ರೀಕೃಷ್ಣದೇವನ ಎಲ್ಲಾ ವಿಲಾಸಗಳೂ ನಮ್ಮೆಲ್ಲರಿಗೂ ಪ್ರಿಯವಾಗಿಯೂ ಸರಸವಾಗಿಯೂ ಇವೆ. ಅವನು ಯಾವ ವೇಷವನ್ನು ಧರಿಸಿದರೂ ಆ ವೇಷವು ಶ್ರೇಷ್ಠವೆನಿಸುತ್ತದೆ. ಅವನ ಕಣ್ಣುಗಳು ಕಮಲದಂತೆ ಸುಂದರವಾಗಿವೆ. ಅವನ ಮುಗುಳ್ನಗೆಯು ಸುಂದರವಾಗಿಯೂ ಚಿತ್ತಾಕರ್ಷಕವಾಗಿಯೂ ಇದೆ. ಅಂತಹ ಶ್ರೀಕೃಷ್ಣದೇವನನ್ನು ಈ ಅಕ್ರೂರನು ದಯೆಯಿಲ್ಲದೆ ಮಥರಾಟ್ಟಣಕ್ಕೆ ಕರೆದುಕೊಂಡು ಹೋಗುತ್ತಿರುವನು. ನಾನಾವಿಧವಾಗಿ ಅಳುತ್ತಿರುವ ಸ್ತ್ರೀಯರಲ್ಲಿ ಎಂಥರಿಗೂ ದಯೆಯು ಹುಟ್ಟಲೇಬೇಕು. ಅಳುತ್ತಿರುವ ಸ್ತ್ರೀಯರನ್ನು ಲಕ್ಷ್ಯಮಾಡದೆ ಅವರ ಪತಿಯನ್ನು ಕರೆದುಕೊಂಡು ಹೋಗುತ್ತಿರುವನು. ಇಷ್ಟು ಕ್ರೂರವಾದ ಮನಸ್ಸುಳ್ಳವನಿಗೆ "ಅಕ್ರೂರ" ಅಂದರೆ "ಕಠಿಣಮನಸ್ಸಿಲ್ಲದವನು" ಎಂಬ ಅತ್ಯಂತ ವಿರುದ್ಧವಾದ ಹೆಸರನ್ನು ಯಾರು ಕೊಟ್ಟರೋ ತಿಳಿಯದು.

" ಈ ಅಕ್ರೂರನು ಮಹಾವಿಷ್ಣುಭಕ್ತನು. ಇವನನ್ನು ಶಪಿಸಿದರೆ ಶ್ರೀಕೃಷ್ಣದೇವನ ಅಪ್ರೀತಿಗೆ ಪಾತ್ರರಾಗುವೆವು. ಇವನಲ್ಲಿ ಯಾವ ತಪ್ಪೂ ಇಲ್ಲ. ಇವನು ಕಂಸನ ಕಡೆಯಿಂದ ದೂತನಾಗಿ ಬಂದಿರುವನು. ತನ್ನ ಯಜಮಾನನು ಹೇಳಿಕಳುಹಿಸಿರುವ ಕಾರ್ಯವನ್ನು ಮಾಡಿರುವನು. ಕಂಸನೇ ಈ ಎಲ್ಲಾ ದ್ರೋಹಗಳಿಗೂ ಕಾರಣನು. ಸಕಲ ಸಜ್ಜನರಿಗೂ ಅವನೇ ವಿರೋಧಿಯಾದವನು. ಅವನು ಮಾಡಬೇಕೆಂದು ನಿಶ್ಚಯಿಸಿರುವ ಧನುರ್ಯಾಗವು ಹಾಳಾಗಲಿ. ಉತ್ಸವದಲ್ಲಿ ಪೂಜಿಸಲ್ಪಡುವ ಧನುಸ್ಸು ಮುರಿದುಹೋಗಲಿ. ಶ್ರೀಕೃಷ್ಣದೇವನ ಮುಖವು ಮುಗುಳ್ನಗೆಯಿಂದ ಯುಕ್ತವಾಗಿದೆ. ಅವನು ಲಕ್ಷ್ಮೀಪತಿಯಾಗಿರುವನು. ನಮ್ಮ ಪ್ರಾಣಕ್ಕೆ ಸಮನಾಗಿರುವನು. ಅಂತಹ ಶ್ರೀಕೃಷ್ಣದೇವನನ್ನೂ ನಮ್ಮನ್ನೂ ಬಿಡಿಸುತ್ತಾ ನಮ್ಮ ಪ್ರಾಣವಾಯುವನ್ನು ನಮ್ಮ ದೇಹದಿಂದ ಹೊರಪಡಿಸುವಷ್ಟು ವೇದನೆಯನ್ನು ಕೊಡುತ್ತಿರುವನು. ಅಂತಹ ಕಂಸನ ದೇಹದಿಂದ ನಮ್ಮ ಪ್ರಭುವಾದ ಶ್ರೀಕೃಷ್ಣದೇವನು ಪ್ರಾಣವಾಯುವನ್ನು ಬಿಡಿಸಲಿ. ಅವನನ್ನು ಸಂಹರಿಸಲಿ."

" ಓ ಶ್ರೀಕೃಷ್ಣದೇವ! ಅನಂತ ವೇದಗಳನ್ನೂ ನೀನು ಜಯಿಸಿರುವಿ. ವೇದಾಂತಗಳನ್ನು ತಿಳಿದ ಜ್ಞಾನಿಗಳೂ

ನಿನ್ನನ್ನು ತಿಳಿಯಲು ಶಕ್ತರಲ್ಲ. ಹೀಗಿರುವಾಗ ಅಲ್ಪಶಕ್ತಿಯುಳ್ಳ ಸ್ತ್ರೀಯರಾಗಿರುವ ನಾವು ಶಕ್ತರಾಗುವೆವೇ? ನೀನು ಹೋಗಬೇಕೆಂದು ಸಂಕಲ್ಪಿಸಿದ ಮೇಲೆ ನಿನ್ನನ್ನು ತಡೆದು ನಿಲ್ಲಿಸುವ ಶಕ್ತಿಯು ಯಾರಿಗೂ ಇಲ್ಲ. ನೀನು ಹೋಗುವುದಾದರೆ ಹೋಗು. ಆದರೆ ಹೋದವನು ಅಲ್ಲಿಯೇ ನಿಲ್ಲಬೇಡ. ಹೋದ ಕಾರ್ಯವನ್ನು ಬೇಗನೆ ಮುಗಿಸಿಕೊಂಡು ಹಿಂದಿರುಗಿ ಬಾ. ನಿನಗೆ ಹಿಂದಿರುಗಿ ಬರುವುದಕ್ಕೆ ಇಷ್ಟವಿಲ್ಲದಿದ್ದರೆ ಅದಕ್ಕಾಗಿಯೂ ನಿರ್ಬಂಧಿಸುವುದರಲ್ಲಿ ಅರ್ಥವಿಲ್ಲ. ನೀನು ಹಿಂದಿರುಗಿ ಬಾರದಿದ್ದರೆ ಬೇಡ. ನಾವು ವಿನಯದಿಂದ ಪ್ರಾರ್ಥಿಸುವೆವು. ನಮ್ಮ ಪ್ರಾರ್ಥನೆಯನ್ನು ನೀನು ಪಾಲಿಸಲೇಬೇಕು. ನಾವೆಲ್ಲರೂ ಕೂಡಲೇ ಸಾಯಬೇಕು. ಮುಂದಿನ ಜನ್ಮದಲ್ಲಿ ನಿನ್ನ ಸಮೀಪದಲ್ಲಿ ಹುಟ್ಟಬೇಕು. ಈ ಪ್ರಾರ್ಥನೆಯನ್ನಾದರೂ ಪೂರೈಸು.''

"ಓ ಶ್ರೀಕೃಷ್ಣದೇವ! ನಮ್ಮ ಪ್ರಿಯನಾದ ನಿನ್ನನ್ನು ಇಲ್ಲಿಂದ ಕರೆದುಕೊಂಡು ಹೋಗಬೇಕೆಂದು ಅಕ್ರೂರನು ಸಂಕಲ್ಪಿಸಿರುವನು. ಅವನ ಸಂಕಲ್ಪವನ್ನು ಬ್ರಹ್ಮದೇವನು ಪೂರ್ತಿಗೊಳಿಸುತ್ತಿರುವನು. ಬ್ರಹ್ಮದೇವನು ತನ್ನ ಭಕ್ತರೆಲ್ಲರಿಗೂ ಸೌಖ್ಯವನ್ನು ಕೊಡುತ್ತಿರುವನು. ಅಕ್ರೂರನ ಸಂಕಲ್ಪವನ್ನು ಪೂರ್ತಿಮಾಡುತ್ತಿರುವುದರಿಂದ ಅವನಲ್ಲಿ ಬ್ರಹ್ಮದೇವನ ವಿಶೇಷ ಸನ್ನಿಧಾನವಿದೆ ಎಂದು ನಂಬಬಹುದು. ಆದ್ದರಿಂದಲೇ ಶ್ರೀಕೃಷ್ಣದೇವನ ಪಾದಾರವಿಂದಗಳನ್ನು ಸೇವಿಸುವುದಕ್ಕಾಗಿ ಕರೆದುಕೊಂಡು ಹೋಗುತ್ತಿರುವನು.''

ಗೋಪಿಕಾಸ್ತ್ರೀಯರೆಲ್ಲರೂ ಶ್ರೀಕೃಷ್ಣದೇವನಿಗೂ ತಮಗೂ ವಿಯೋಗವು ಏರ್ಪಡುತ್ತದೆಯೆಂದು ಹೆದರಿದರು. ಆ ಹೆದರಿಕೆಯಿಂದ ನಡುಗಿದರು. ಅವರ ಅಂಗಗಳೆಲ್ಲವೂ ಕೃಶವಾದವು. ಅಂಗಗಳು ಕೃಶವಾದುದರಿಂದ ಅಂಗಗಳಲ್ಲಿರುವ ಬಳೆಗಳೂ ಮುತ್ತಿನ ಸರಗಳೂ ಕೆಳಗೆ ಬಿದ್ದವು. ಚಿತ್ರದಲ್ಲಿ ಬರೆಯಲ್ಪಟ್ಟ ಬೊಂಬೆಗಳಂತೆ ಯಾವ ವ್ಯಾಪಾರಗಳನ್ನೂ ಮಾಡಲು ಶಕ್ತರಾಗಲಿಲ್ಲ. ಆ ಸ್ತ್ರೀಯರನ್ನು ಶ್ರೀಕೃಷ್ಣದೇವನು ನೋಡಿದನು. ಅಮೃತದಂತೆ ರುಚಿಯಾಗಿರುವ ಪ್ರೇಮವಾಕ್ಯಗಳಿಂದ ಸಮಾಧಾನಪಡಿಸಿದನು. ಕರುಣೆಯಿಂದ ಅವರನ್ನು ಪುನಃ ನೋಡುತ್ತಾ ಹೊರಟನು.

**(೪೨) ಮಜ್ಜತೇ ಅಸ್ಮೈ ವಿಲಸಿತಂ ಅಹಿಗಂ ಸ್ವಂ ರೂಪಂ ದರ್ಶಯನ್, ತೇನ ವಂದ್ಯಃ-**

ಸ್ನಾನವನ್ನು ಮಾಡುತ್ತಿರುವ ಈ ಅಕ್ರೂರನಿಗೆ ಪ್ರಕಾಶಮಾನವಾಗಿಯೂ ಶೇಷದೇವನ ದೇಹದಲ್ಲಿ ಇರುವ ತನ್ನ ರೂಪವನ್ನು ತೋರಿಸಿದನು ಮತ್ತು ಅಕ್ರೂರನಿಂದ ಸ್ತುತಿಸಲ್ಪಟ್ಟನು.

**ವಿಶೇಷಾರ್ಥ :- ಯಮುನಾತೀರಂ ಪ್ರಾಪ್ಯ, ಯಮುನಾಯಾಂ ಮಜ್ಜತೇ ಅಕ್ರೂರಾಯ ಶೇಷಸ್ಥ ಸ್ವಸ್ವರೂಪಂ ಪೌನಃಪುನ್ಯೇನ ದರ್ಶಯಿತ್ವಾ, ತೇನ ಸ್ತುತಃ** ಯಮುನಾನದಿಯ ತೀರಕ್ಕೆ ಬಂದನು. ಯಮುನಾನದಿಯಲ್ಲಿ ಮುಳುಗಿದ ಅಕ್ರೂರನಿಗೆ ಶೇಷದೇವನ ದೇಹದಲ್ಲಿ ಮಲಗಿರುವ ತನ್ನ ರೂಪವನ್ನು ತೋರಿಸಿದನು. ಅವನಿಂದ ಸ್ತುತಿಸಲ್ಪಟ್ಟನು.

ವಿಶೇಷಾರ್ಥ ವಿವರಣ - ಶ್ರೀಕೃಷ್ಣದೇವನ ರಥವು ಅತಿವೇಗವಾಗಿ ಹೊರಟಿತು. ಗೋಪಿಕಾಸ್ತ್ರೀಯರೆಲ್ಲರೂ ಆಸೆಯಿಂದ ರಥದ ಧ್ವಜಸ್ತಂಭವೂ ಅದರಲ್ಲಿರುವ ಬಾವುಟವೂ ಕಾಣಿಸುವ ವರೆಗೆ ಆ ದಿಕ್ಕನ್ನೇ ನೋಡುತ್ತಿದ್ದರು. ಅಷ್ಟರ ವರೆಗೆ ಶ್ರೀಕೃಷ್ಣದೇವನು ಹಿಂದಿರುಗಿ ಬರಬಹುದೆಂಬ ಆಸೆಯಿತ್ತು. ಬಾವುಟವು ಅದೃಶ್ಯವಾದಕೂಡಲೇ

ಸರ್ವರೂ ನಿರಾಶರಾಗಿ ಹಿಂದಿರುಗಿದರು. ತಮ್ಮತಮ್ಮ ಮನೆಗಳಲ್ಲಿ ಶ್ರೀಕೃಷ್ಣದೇವನನ್ನೇ ನಿರಂತರದಲ್ಲಿ ಸ್ಮರಿಸುತ್ತಾ ಒಂದೊಂದು ಕ್ಷಣವನ್ನೂ ಒಂದು ಯುಗದಂತೆ ತುಂಬಾ ಕಷ್ಟದಿಂದ ಕಳೆದರು.

ಶ್ರೀಕೃಷ್ಣದೇವನ ಜೊತೆಯಲ್ಲಿ ಹೊರಟಿರುವ ನಂದ ಮುಂತಾದ ಎಲ್ಲಾ ಗೊಲ್ಲರೂ ಅತಿವೇಗದಿಂದ ತಮ್ಮ ತಮ್ಮ ಬಂಡಿಗಳನ್ನು ಓಡಿಸುತ್ತಾ ಅಂದು ಸಂಜೆಯೊಳಗೆ ಮಥುರಾಪಟ್ಟಣದ ಊರ ಹೊರಗಿನ ಉದ್ಯಾನವನಕ್ಕೆ ಬಂದು ಸೇರಿದರು. ಶ್ರೀಕೃಷ್ಣದೇವನು ಅಲ್ಲಲ್ಲಿ ವಿಶ್ರಮಿಸಿಕೊಂಡು ಮೆಲ್ಲಗೆ ಬಂದನು. ಅವನ ಆಗಮನವನ್ನು ನಿರೀಕ್ಷಿಸುತ್ತಾ ಅವರೆಲ್ಲರೂ ಆ ಉದ್ಯಾನವನದಲ್ಲಿಯೇ ನಿಂತರು.

ಶ್ರೀಕೃಷ್ಣದೇವನ ರಥವು ಮಧ್ಯಾಹ್ನಕಾಲಕ್ಕೆ ಸರಿಯಾಗಿ ಯಮುನಾನದಿಯಲ್ಲಿಯರುವ ಬ್ರಹ್ಮಹ್ರದ ಮಡುವಿನ ಸಮೀಪಕ್ಕೆ ಬಂತು. ಅಲ್ಲಿ ಶ್ರೀಕೃಷ್ಣದೇವನೂ ಬಲರಾಮದೇವನೂ ರಥದಿಂದ ಇಳಿದು. ಸ್ನಾನವನ್ನೂ ಮಧ್ಯಾಹ್ನಕಾಲದಲ್ಲಿ ಮಾಡಬೇಕಾದ ಆಹ್ನೀಕಗಳನ್ನೂ ಮುಗಿಸಿ ಪುನಃ ರಥದಲ್ಲಿ ಏರಿ ಕುಳಿತರು.

ಅಕ್ರೂರನು ಶ್ರೀಕೃಷ್ಣದೇವನನ್ನೂ ಬಲರಾಮನನ್ನೂ ನಮಸ್ಕರಿಸಿದನು. ತನ್ನ ಮಾಧ್ಯಾಹ್ನಿಕ ಸ್ನಾನ ಮುಂತಾದ ಕರ್ಮಗಳನ್ನು ಮಾಡಿಕೊಂಡು ಬರುವುದಾಗಿ ಪ್ರಾರ್ಥಿಸಿ, ಇವರಿಬ್ಬರ ಅನುಮತಿಯನ್ನು ಪಡೆದನು. ಯಮುನಾ ನದಿಯಲ್ಲಿರುವ ಬ್ರಹ್ಮಹ್ರದದಲ್ಲಿ ಮುಳುಗಿದನು. ಆಗ ಅಲ್ಲಿ ಶೇಷದೇವನ ದೇಹದಲ್ಲಿ ಮಲಗಿರುವ ಶ್ರೀಕೃಷ್ಣದೇವನನ್ನೂ ಅವನನ್ನು ಶೇಷರೂಪದಿಂದ ಎತ್ತಿಕೊಂಡಿರುವ ಬಲರಾಮನನ್ನೂ ನೋಡಿದನು. ರಥದಲ್ಲಿದ್ದ ಶ್ರೀಕೃಷ್ಣದೇವನೂ ಬಲರಾಮನೂ ಇಲ್ಲಿಗೆ ಹೇಗೆ ಬಂದರು? ರಥದಲ್ಲಿಲ್ಲವೇ? ಎಂದು ಯೋಚಿಸಿದನು. ನೀರಿನಿಂದ ತಲೆಯನ್ನು ಹೊರಪಡಿಸಿ ರಥದ ಕಡೆಗೆ ನೋಡಿದನು. ಅಲ್ಲಿಯೂ ಮುಗುಳ್ನಗೆಯಿಂದ ತನ್ನನ್ನು ನೋಡುತ್ತಿರುವ ಅವರಿಬ್ಬರನ್ನು ನೋಡಿದನು. ಹಾಗಾದರೆ ನೀರಿನಲ್ಲಿ ನೋಡಿದ್ದು ಸುಳ್ಳೇ? ಇನ್ನೊಮ್ಮೆ ಮುಳುಗಿ ನೋಡುವೆನು ಎಂದು ನೀರಿನಲ್ಲಿ ಮುಳುಗಿದನು. ಅಲ್ಲಿ ಶೇಷದೇವನ ಎದುರಿನಲ್ಲಿ ಚಿಕ್ಕ ಹುಡುಗನ ರೂಪದಿಂದ ಓಡಾಡುತ್ತಿದ್ದ ಶ್ರೀಕೃಷ್ಣದೇವನನ್ನೂ ಬಲರಾಮನನ್ನೂ ನೋಡಿದನು.

ಪ್ರತಿದಿನ ಈ ಅಕ್ರೂರನು ಸ್ನಾನ ಮಾಡುತ್ತಿರುವ ಕಾಲದಲ್ಲಿ ಅಘಮರ್ಷಣಸೂಕ್ತ ಮುಂತಾದ ಸೂಕ್ತಗಳನ್ನೂ ಶೇಷಮಂತ್ರಗಳನ್ನೂ ಜಪಿಸುತ್ತಿದ್ದನು. ಮಂತ್ರಸಿದ್ಧಿಯನ್ನು ಪಡೆದಿರುವ ಈ ಅಕ್ರೂರನಿಗೆ ಪ್ರತಿದಿನ ಸ್ನಾನಕಾಲದಲ್ಲಿ ಶೇಷದೇವನ ದರ್ಶನವಾಗುತ್ತಿತ್ತು. ಇಂದು ಶ್ರೀಕೃಷ್ಣದೇವನನ್ನು ವೃಂದಾವನದಿಂದ ಇಲ್ಲಿಯ ವರೆಗೆ ತುಂಬಾ ಭಕ್ತಿಯಿಂದ ಕರೆದುಕೊಂಡು ಬಂದಿರುವನು. ಇವನು ಮಾಡಿರುವ ಈ ಸೇವೆಗೆ ಮಾಮೂಲಿನಂತೆ ಶೇಷದೇವನನ್ನು ತೋರಿಸುವುದು ಮಾತ್ರವಲ್ಲದೆ ತನ್ನ ವಿಶ್ವರೂಪವನ್ನೂ ಸಹ ಶ್ರೀಕೃಷ್ಣದೇವನು ತೋರಿಸಿದನು. ಈ ರೂಪವನ್ನು ಶ್ರೀಕೃಷ್ಣದೇವನ ವಿಶೇಷಾನುಗ್ರಹಕ್ಕೆ ಪಾತ್ರನಾಗದಿರುವ ಯಾವನೂ ನೋಡಲು ಸಾಧ್ಯವಿಲ್ಲ. ಈ ರೂಪವನ್ನು ಅಕ್ರೂರನು ನೋಡಿದನು.

## ಅಕ್ರೂರನು ಶ್ರೀಕೃಷ್ಣದೇವನ ವಿಶ್ವರೂಪವನ್ನು ನೋಡಿದ್ದು

ಸಾವಿರ ಸೂರ್ಯರ ಕಿರಣಗಳಿಗಿಂತಲೂ ಅಧಿಕವಾದ ಕಿರಣಗಳಿಂದ ಯುಕ್ತನಾಗಿರುವನು. ಅವನ ಈ ಕಿರಣಗಳು ಎಲ್ಲಾ ದಿಕ್ಕುಗಳನ್ನೂ ವ್ಯಾಪಿಸಿವೆ. ಅವನ ಪಾದಗಳು ಎಳೆಯ ಸೂರ್ಯನಂತೆ ಎಳೆ ಕೆಂಪಾಗಿವೆ. ಆ

ಕಾಲುಗಳನ್ನು ಮಹಾಲಕ್ಷ್ಮೀದೇವಿಯರು ಒತ್ತುತ್ತಾ ನಾನಾವಿಧವಾಗಿ ಬೇಡಿಕೊಳ್ಳುತ್ತಿರುವರು. ಅಂಗಾಲುಗಳು, ವಜ್ರ, ಅಂಕುರ, ಪತಾಕೆ, ಕಮಲ ಮುಂತಾದ ರೇಖೆಗಳಿಂದ ಶೋಭಿಸುತ್ತಿವೆ. ಬೆರಳುಗಳು ಎರಡಾಗಿ ಒಡೆದ ಹವಳದ ಮಧ್ಯಭಾಗದಂತೆ ಕೆಂಪಾಗಿ ಪ್ರಕಾಶಿಸುತ್ತಿವೆ. ಉಗುರುಗಳ ಪಂಕ್ತಿಗಳು ಕಳಂಕವಿಲ್ಲದ ಚಂದ್ರನ ಪಂಕ್ತಿಗಳಂತೆ ನಿರ್ಮಲವಾಗಿ ಹೊಳೆಯುತ್ತಿವೆ. ಕಾಲುಗಳು ಅಮೂಲ್ಯವಾದ ರತ್ನಗಳಿಂದ ಖಚಿತವಾದ ಕಾಲ್ಗಡಗಗಳಿಂದ ಪ್ರಕಾಶಿಸುತ್ತಿವೆ. ಜಂಘೆಗಳು ವರ್ತುಲಾಕಾರವಾಗಿವೆ ಮತ್ತು ಲಕ್ಷ್ಮೀದೇವಿಯರಿಂದ ಒತ್ತಲ್ಪಡುತ್ತಿವೆ. ಜಾನುಗಳು ರತ್ನಗನ್ನಡಿಯಂತೆ ಪ್ರಕಾಶಿಸುತ್ತಿವೆ. ತೊಡೆಗಳು ಮೃದುವಾಗಿಯೂ ವರ್ತುಲವಾಗಿಯೂ ಇರುವ ಬಾಳೆಯ ದಿಂಡಿನಂತೆ ಇವೆ. ಕಟಿಗಳು ಆನೆಯ ಮರಿಯ ಕುಂಭಸ್ಥಳಗಳಂತೆ ಪುಷ್ಟವಾಗಿವೆ. ಪೀತಾಂಬರವು ಸುಂದರವೂ ಉದಯಿಸುತ್ತಿರುವ ನೂರಾರು ಸೂರ್ಯರಿಗಿಂತಲೂ ಅಧಿಕವಾದ ಕಾಂತಿಯಿಂದ ಯುಕ್ತವೂ ಆಗಿದೆ. ಉಡುದಾರವು ನಾನಾವಿಧವಾದ ರತ್ನಗಳಿಂದಲೂ ಸುವರ್ಣದಿಂದಲೂ ನಿರ್ಮಿತವಾಗಿದ್ದು ಶ್ರೀಕೃಷ್ಣದೇವನ ಸೊಂಟವನ್ನು ಅಲಂಕರಿಸುತ್ತಿದೆ. ಹೊಟ್ಟೆಯು ಅನಂತಲೋಕಗಳಿಗೆ ಆಶ್ರಯವಾಗಿದೆ. ಆದರೂ ಖಾಲಿಹೊಟ್ಟೆಯಂತೆ ಚಿಕ್ಕದಾಗಿಯೂ ಮೂರುಮಡಿಕೆಗಳಿಂದ ಯುಕ್ತವಾಗಿಯೂ ಇದೆ. ಹೊಕ್ಕಳು ಸರೋವರದಂತೆ ಆಳವಾಗಿದೆ. ಆ ಹೊಕ್ಕಳಿನಿಂದ ಹುಟ್ಟಿದ ಕಮಲದಲ್ಲಿ ಬ್ರಹ್ಮದೇವನು ವಾಸಿಸುತ್ತಿರುವನು. ಆ ಬ್ರಹ್ಮನು ಗಂಭೀರವಾದ ಧ್ವನಿಯಿಂದ ಭ್ರಮರವು ಝೇಂಕಾರವನ್ನು ಮಾಡುತ್ತಿರುವಂತೆ ಮಂತ್ರಗಳನ್ನು ಗಟ್ಟಿಯಾಗಿ ಪಠಿಸುತ್ತಿರುವನು. ಹೊಟ್ಟೆಯಲ್ಲಿ ಮೂರು ರೇಖೆಗಳಿವೆ. ಆ ರೇಖೆಗಳು ಚಿಗುರುಗಳಂತೆ ಮೃದುವಾಗಿಯೂ, ಹೊಳೆಯುತ್ತಲೂ ಇವೆ. ಆ ಮೂರು ರೇಖೆಗಳ ಪಕ್ಕದಲ್ಲಿ ನವರತ್ನ ಖಚಿತವಾದ ನಡುಕಟ್ಟು ಇರುತ್ತದೆ. ಆ ನಡುಕಟ್ಟು ಮೂರು ರೇಖೆಗಳ ಕಾಂತಿಯಿಂದ ಹೊಳೆಯುತ್ತಿದೆ. ಎದೆಯು ವಿಶಾಲವಾಗಿದೆ. ಆ ಎದೆಯಲ್ಲಿ ಗಂಧವನ್ನು ಹಚ್ಚಿಕೊಂಡಿರುವನು. ಎಡತೊಡೆಯಲ್ಲಿ ಲಕ್ಷ್ಮೀದೇವಿಯರೂ ಬಲತೊಡೆಯಲ್ಲಿ ಭೂದೇವಿಯರೂ ಅವನ ಪುಷ್ಟವಾದ ಪಾರ್ಶ್ವಭಾಗಗಳನ್ನು ತಬ್ಬಿಕೊಂಡಿರುವರು. ಎಡತೊಡೆಯಲ್ಲಿ ಕುಳಿತಿರುವ ಲಕ್ಷ್ಮೀದೇವಿಯರ ಹಣೆಯಲ್ಲಿರುವ ಕುಂಕುಮವು ಶ್ರೀಹರಿಯ ಎದೆಯಲ್ಲಿ ಅಂಟಿಕೊಂಡಿದೆ. ಎದೆಯ ಎಡಭಾಗದಲ್ಲಿರುವ ಶ್ರೀವತ್ಸಚಿಹ್ನೆಯಲ್ಲಿಯೂ ಲಕ್ಷ್ಮೀದೇವಿಯರು ವಾಸಿಸುತ್ತಿರುವರು. ಕಂಠವು ವನಮಾಲೆಯಿಂದ ಅಲಂಕೃತವಾಗಿದೆ. ಆ ಕಂಠದಲ್ಲಿ ಉದಯಿಸುತ್ತಿರುವ ಸೂರ್ಯನಂತೆ ಹೊಳೆಯುತ್ತಿರುವ ಮತ್ತು ಅತಿ ಶ್ರೇಷ್ಠವಾದ ಕೌಸ್ತುಭಮಣಿಯು ಪ್ರಕಾಶಿಸುತ್ತಿದೆ. ನಾಲ್ಕು ಕೈಗಳಲ್ಲಿ ರತ್ನಖಚಿತವಾದ ಭುಜಕೀರ್ತಿಗಳು, ಬಳೆಗಳು, ಉಂಗುರಗಳು ಮುಂತಾದ ಆಭರಣಗಳೂ ಚಕ್ರ, ಶಂಖ, ಗದಾ, ಪದ್ಮ ಮುಂತಾದ ಆಯುಧಗಳೂ ಶೋಭಿಸುತ್ತಿವೆ. ಕಂಠವು ಮೂರು ರೇಖೆಗಳಿಂದ ಯುಕ್ತವಾಗಿಯೂ ಶಂಖದಂತೆ ಗಂಭೀರವಾದ ನಾಣ್ಯಗಳ ಸರವು ಜೋಲಾಡುತ್ತಿದೆ. ಮುಖಕಮಲವು ಅಪರಿಮಿತಸೌಂದರ್ಯದಿಂದ ತುಂಬಿದೆ. ಕೆಳತುಟಿಯು ಮೃದುವಾಗಿಯೂ ಪಕ್ವವಾಗಿಯೂ ಸ್ನಿಗ್ಧವಾಗಿಯೂ ಇರುವ ತೊಂಡೆಹಣ್ಣಿನಂತೆ ಹೊಳೆಯುತ್ತಿದೆ. ಹಲ್ಲುಗಳ ಪಂಕ್ತಿಯು ಮಲ್ಲಿಗೆಮೊಗ್ಗುಗಳ ಮಾಲೆಯಂತೆ ಪ್ರಕಾಶಿಸುತ್ತಿದೆ. ಮುಗುಳ್ನಗೆಯು ಬೆಳದಿಂಗಳಿನ ಸೌಂದರ್ಯವನ್ನು ಧಿಕ್ಕರಿಸುತ್ತಿದೆ. ಕೆನ್ನೆಗಳು ಇಂದ್ರನೀಲಮಣಿಯ ಗೋಡೆಗಳಂತೆ ಪ್ರಕಾಶಿಸುತ್ತಿವೆ. ಕರ್ಣಕುಂಡಲಗಳು ಎಳೆಯ ಸೂರ್ಯನಂತೆ ಹೊಳೆಯುತ್ತಿವೆ. ಮೂಗು ಹೊಸ ಸಂಪಿಗೆಪುಷ್ಪದ ಕಾಂತಿಯನ್ನು ಕದಿಯುತ್ತಿದೆ. ಕಣ್ಣುಗಳು ಕುಣಿಯುತ್ತಿರುವ ಭ್ರಮರಗಳಿಂದ ಅಲಂಕೃತವಾಗಿರುವ ಕಮಲಗಳಿಂತಿವೆ. ಹುಬ್ಬುಗಳು ಇಂದ್ರನೀಲಮಣಿಯಿಂದ ನಿರ್ಮಿತವಾಗಿರುವ ಶಾರ್ಙ್ಗಧನುಸ್ಸಿನ ಸೌಂದರ್ಯವನ್ನು ಜಯಿಸುತ್ತಿದೆ. ಕಡೆಗಣ್ಣಿನ ನೋಟವು ಪಾರ್ಶ್ವಗಳಲ್ಲಿರುವ ಶ್ರೀದೇವಿಯರ ಮತ್ತು ಭೂದೇವಿಯರ ಮುಖಗಳೆಂಬ ಕಮಲಗಳಲ್ಲಿ ಭ್ರಮರದಂತೆ ಲೀನವಾಗಿದೆ. ಹಣೆಯು ಸುಂದರವಾದ ಊರ್ಧ್ವಪುಂಡ್ರದ ಮಧ್ಯದಲ್ಲಿರುವ ರತ್ನತಿಲಕದಿಂದ ಶೋಭಿಸುತ್ತಿದೆ.

ತಲೆಯು ತಲೆಗೂದಲಿನ ರಾಶಿಯ ಮಧ್ಯದಲ್ಲಿ ಅದ್ಭುತ ಸೂರ್ಯನಂತೆ ಶೋಭಿಸುತ್ತಿರುವ ಕಿರೀಟದಿಂದ ಪ್ರಕಾಶಿಸುತ್ತಿದೆ. ಅಮೂಲ್ಯವಾದ ಮುತ್ತಿನ ಸರಗಳಿಂದಲೂ ಭುಜಕೀರ್ತಿ ಮುಂತಾದ ಆಭರಣಗಳಿಂದಲೂ ಶೋಭಿಸುತ್ತಿರುವನು. ಅನೇಕ ಕೋಟಿ ಮನ್ಮಥರ ಸೌಂದರ್ಯಗಳಿಗೆ ಮನೆಯಂತಿರುವನು. ಕಮಲಾಸನದಲ್ಲಿ ಕುಳಿತಿರುವನು. ಬ್ರಹ್ಮ ಮುಂತಾದ ದೇವತೆಗಳು ಮತ್ತು ಮುನಿಶ್ರೇಷ್ಠರು ಸಂತೋಷದಿಂದ ಸ್ತುತಿಸುತ್ತಿರುವರು. ಮತ್ತು ಹಾಡುತ್ತಿರುವರು. ಸರ್ವಭಕ್ತರನ್ನೂ ಕೃಪಾದೃಷ್ಟಿಯಿಂದ ನೋಡುತ್ತಾ ಆ ಭಕ್ತರಲ್ಲಿರುವ ಎಲ್ಲಾ ದೋಷಗಳನ್ನೂ ಕಳೆಯುತ್ತಿರುವನು. ಸಕಲ ಜೀವಜಡಾತ್ಮಕವಾದ ಪ್ರಪಂಚಕ್ಕೆ ಸೃಷ್ಟಿ, ಪಾಲನೆ, ಸಂಹಾರ ಮುಂತಾದವುಗಳನ್ನು ಕೊಡುತ್ತಿರುವ ಶ್ರೀಕೃಷ್ಣದೇವನನ್ನು ಅಕ್ರೂರನು ನೋಡಿದನು.

## ಅಕ್ರೂರನ ಧರ್ಮನಿಷ್ಠೆ

ಶ್ರೀಕೃಷ್ಣದೇವನ ಭಕ್ತರು ಪುಣ್ಯಕ್ಷೇತ್ರಗಳಲ್ಲಿ ವಾಸಿಸುತ್ತಿರುವರು. ಅತ್ಯಂತ ನಿರ್ಮಲವಾದ ಜ್ಞಾನದಲ್ಲಿ ವಿಶೇಷವಾದ ಪ್ರೀತಿಯನ್ನು ಇಟ್ಟುಕೊಂಡಿರುವರು. ಪರಂಪರೆಯಿಂದ ಬಂದಿರುವ ಪ್ರಭುವು ಶ್ರೀಕೃಷ್ಣದೇವನ ಪಕ್ಷದಲ್ಲಿ ಅಪ್ರಿಯನಾಗಿದ್ದರೆ ಆ ಪ್ರಭುವನ್ನೂ ಸಹ ದೂರದಲ್ಲಿ ಪರಿತ್ಯಜಿಸುವರು. ಪರಮಶಾಂತವಾದ ಮನಸ್ಸಿನಿಂದ ಯುಕ್ತರಾಗಿರುವರು. ಯಾವಾಗಲೂ ತೀರ್ಥಯಾತ್ರೆಯನ್ನು ಮಾಡುತ್ತಿರುವರು. ಅಂತಹ ಶ್ರೀಕೃಷ್ಣಭಕ್ತರು ಶ್ರೀಕೃಷ್ಣದೇವನನ್ನು ಅವನ ಅನುಗ್ರಹದಿಂದ ನೋಡುವರು.

ಅಕ್ರೂರನಲ್ಲಿಯೂ ಮೇಲ್ಕಂಡ ವಿಷ್ಣುಭಕ್ತರ ಎಲ್ಲಾ ಲಕ್ಷಣಗಳೂ ಪೂರ್ಣವಾಗಿವೆ. ಅವನು ಮಥುರಾಪಟ್ಟಣವೆಂಬ ಪುಣ್ಯಕ್ಷೇತ್ರದಲ್ಲಿ ವಾಸಿಸುತ್ತಿರುವವನು. ಅತ್ಯಂತ ನಿರ್ಮಲವಾದ ಜ್ಞಾನದಲ್ಲಿ ವಿಶೇಷವಾದ ಅಭಿರುಚಿಯುಳ್ಳನಾಗಿರುವವನು. ಪರಂಪರೆಯಿಂದ ಬಂದಿರುವ ಪ್ರಭುವಾಗಿರುವ ಕಂಸನು ಶ್ರೀಕೃಷ್ಣದೇವನ ಪಕ್ಷದಲ್ಲಿ ಅಪ್ರೀತಿಯುಳ್ಳವನಾದುದರಿಂದ ಅವನನ್ನು ಮನಸ್ಸಿನಿಂದ ಯುಕ್ತನಾಗಿರುವುದರಿಂದಲೇ ಅಕ್ರೂರ ಎಂದು ಪ್ರಸಿದ್ಧನಾಗಿರುವವನು. ಶ್ರೀಕೃಷ್ಣದೇವನ ವಾಸದಿಂದ ಪರಿಶುದ್ಧವಾಗಿರುವ ಬೃಂದಾವನಯಾತ್ರೆಯನ್ನು ಮಾಡಿರುವನು. ಇಂತಹ ಅಕ್ರೂರನಲ್ಲಿ ಶ್ರೀಕೃಷ್ಣದೇವನು ವಿಶೇಷಾನುಗ್ರಹವನ್ನು ಮಾಡಿರುವುದೂ ತನ್ನ ವಿಶ್ವರೂಪವನ್ನು ತೋರಿಸಿರುವುದೂ ಯೋಗ್ಯವೇ ಆಗಿದೆ.

ಶ್ರೀಕೃಷ್ಣದೇವನು ಅಕ್ರೂರನ ಭಕ್ತಿಗೆ ಮೆಚ್ಚಿದನು. ಅವನಿಗೆ ದರ್ಶನವನ್ನು ಕೊಟ್ಟನು. ಅವನು ಹೇಳಿದಂತೆ ಕುಣಿಯಲು ಸಿದ್ಧನಾಗಿರುವನು. ಈ ಸ್ಥಿತಿಯಲ್ಲಿ ವೇದಗಳಲ್ಲಿ ಹೇಳಲ್ಪಟ್ಟ ನಿತ್ಯ ನೈಮಿತ್ತಿಕ ಕರ್ಮಗಳನ್ನು ಅನುಷ್ಠಾನ ಮಾಡದಿದ್ದರೂ ಯಾವ ಹಾನಿಯೂ ಇಲ್ಲ. ಆದರೂ ಅಕ್ರೂರನು ಮಾಧ್ಯಾಹ್ನಿಕಸ್ನಾನವನ್ನೂ ಆಹ್ನಿಕವನ್ನೂ ಮಾಡುವುದಕ್ಕಾಗಿ ಶ್ರೀಕೃಷ್ಣದೇವನಿಂದ ಅನುಮತಿಯನ್ನು ಪಡೆದು ಹೊರಟಿರುವನು. ಆದ್ದರಿಂದ ಶ್ರೀಕೃಷ್ಣದೇವನು ವಶನಾದಮೇಲೆಯೂ ಮಾಡುತ್ತಿರುವ ಈ ಸ್ನಾನಾದಿಗಳೂ ಅತ್ಯಂತ ಮಾನ್ಯವೆನಿಸುತ್ತವೆ. ಸಕಲ ಪಾಪಗಳನ್ನೂ ಕಿತ್ತೊಗೆಯುತ್ತವೆ. ಈ ಕರ್ಮಗಳನ್ನು ಮಾಡುತ್ತಿರುವ ಅಕ್ರೂರನು ಭಕ್ತರಲ್ಲಿ ಉತ್ತಮನೆನಿಸುವನು. ಶಾಸ್ತ್ರೋಕ್ತರೀತಿಯಿಂದ ಒಮ್ಮೆ ಮಾಡಿರುವ ಸ್ನಾನವು ಶ್ರೀಕೃಷ್ಣದೇವನನ್ನು ತೋರಿಸಿತು. ಆದ್ದರಿಂದ ಈ ಬ್ರಹ್ಮನಷ್ಟು ಮಾನ್ಯವಾದ ತೀರ್ಥವು ಯಾವುದಿದೆ? ಯಮುನೆಯು ತನ್ನಲ್ಲಿ ಮಾಡಿರುವ ಬರೇ ಸ್ನಾನದಿಂದ ಅಕ್ರೂರನಿಗೆ ಶ್ರೀಕೃಷ್ಣದೇವನನ್ನು ತೋರಿಸಿದಳು. ಇಂತಹ ಮಾನ್ಯಳು ಯಾರಿರುವಳು!

# ಅಕ್ರೂರನು ಮಾಡಿದ ಸ್ತೋತ್ರ

" ಓ ಕೃಷ್ಣದೇವ! ನೀನು ಯಾರು? ಎಂಬ ವಿಷಯವು ತಿಳಿಯಿತು. ಸರ್ವರಿಗೂ ಕಾರಣನಾಗಿರುವ ನಾರಾಯಣನೇ ನೀನು. ನಿನ್ನ ನಾಭಿಕಮಲದಿಂದ ಬ್ರಹ್ಮನು ಹುಟ್ಟಿದನು. ಆ ಬ್ರಹ್ಮನು ಸಕಲಲೋಕಗಳನ್ನೂ ಸಕಲ ಲೋಕಗಳಲ್ಲಿರುವ ಸರ್ವರನ್ನೂ ಸೃಷ್ಟಿಸಿದನು. ಸಕಲದೇವತೆಗಳೂ ನಿನ್ನ ಅವಯವಗಳಿಂದ ಹುಟ್ಟಿರುವರು. ಅವರೆಲ್ಲರೂ ನಿನ್ನನ್ನು ಪೂರ್ಣವಾಗಿ ತಿಳಿಯಲಾರರು. ಯೋಗಿಗಳೇ ಮೊದಲಾದ ಜ್ಞಾನಿಗಳು ನಿನ್ನನ್ನು ಬೇರೆ ಬೇರೆ ಹೆಸರುಗಳಿಂದ ಆರಾಧಿಸುತ್ತಿರುವರು. ನೀನು ಸರ್ವಜೀವರನ್ನು ಉದ್ಧರಿಸುವುದಕ್ಕೋಸ್ಕರ ಮತ್ಸ್ಯ ಕೂರ್ಮ ಮುಂತಾದ ಅನಂತರೂಪಗಳನ್ನು ಸ್ವೀಕರಿಸುತ್ತಿರುವಿ. ನನ್ನ ಇಂದ್ರಿಯಗಳು ಕಾಮ ಮುಂತಾದ ಶತ್ರುಗಳಿಂದ ಪೀಡಿತವಾಗಿ ಅಮಾರ್ಗದಲ್ಲಿ ಹೋಗುತ್ತಿವೆ. ಅವುಗಳನ್ನು ಸರಿಯಾದ ಮಾರ್ಗದಲ್ಲಿ ತಿರುಗಿಸಲು ಶಕ್ತನಲ್ಲದೆ ಒದ್ದಾಡುತ್ತಿರುವೆನು. ಈಗ ಹೇಗೋ ನಿನ್ನ ಪಾದಗಳ ಸಮೀಪದಲ್ಲಿ ಬಂದು ಸೇರಿರುವೆನು. ನನ್ನನ್ನು ನೀನು ಅನುಗ್ರಹಿಸು. ಪುನಃ ದುರ್ವಿಷಯಗಳ ಕಡೆಗೆ ಹೋಗದಂತೆ ಈ ಮನಸ್ಸನ್ನು ನಿನ್ನಲ್ಲಿ ಲೀನವಾಗುವಂತೆ ಮಾಡು." ಎಂದು ಪ್ರಾರ್ಥಿಸಿದನು. ಅಷ್ಟರಲ್ಲಿ ತಾನು ನೋಡುತ್ತಿದ್ದ ಶ್ರೀಕೃಷ್ಣದೇವನ ರೂಪವು ಅದೃಶ್ಯವಾಯಿತು. ಯಾವುದೂ ಕಾಣಿಸಲಿಲ್ಲ. ಯಮುನಾನದಿಯ ಜಲವೊಂದೇ ಕಾಣಿಸಿತು. ನೀರಿನಿಂದ ಮೇಲೆ ಬಂದನು. ಮಧ್ಯಾಹ್ನಕಾಲದಲ್ಲಿ ಮಾಡಬೇಕಾದ ಕಾರ್ಯಗಳೆಲ್ಲವನ್ನೂ ಮುಗಿಸಿದನು. ಬೇಗ ಬೇಗನೆ ರಥದ ಕಡೆಗೆ ನಡೆದನು. ಶ್ರೀಕೃಷ್ಣದೇವನು ನಗುತ್ತಾ ಇವನನ್ನು ನೋಡಿದನು. " ಅಕ್ರೂರಾ, ನಿನ್ನನ್ನು ನೋಡಿದರೆ ಯಾವುದೋ ಒಂದು ಆಶ್ಚರ್ಯವನ್ನು ನೋಡಿದವನಂತೆ ತೋರುತ್ತದೆ. ಯಾವ ಆಶ್ಚರ್ಯವನ್ನು ನೋಡಿರುವಿ" ಎಂದು ಕೇಳಿದನು.

" ಓ ಕೃಷ್ಣದೇವ!ಪ್ರಪಂಚದಲ್ಲಿ ಇರುವ ಮತ್ತು ಇಲ್ಲದಿರುವ ಎಲ್ಲಾ ಆಶ್ಚರ್ಯವಸ್ತುವಿಲ್ಲ. ನಿನ್ನನ್ನು ನೋಡಿದೆನು. ಎಲ್ಲಾ ಆಶ್ಚರ್ಯವಸ್ತುಗಳನ್ನೂ ನೋಡಿಬಿಟ್ಟೆನು" ಎಂದು ಉತ್ತರಿಸಿದನು. ರಥವನ್ನು ಓಡಿಸಿಕೊಂಡು ಮಥುರಾಪಟ್ಟಣದ ಉಪವನಕ್ಕೆ ಬಂದನು. ಶ್ರೀಕೃಷ್ಣದೇವನು ಅಕ್ರೂರನನ್ನು ಮನೆಗೆ ಹೋಗುವಂತೆ ಹೇಳಿದನು. ಆಗ ಅಕ್ರೂರನು ಶ್ರೀಕೃಷ್ಣದೇವನನ್ನು ನೋಡುತ್ತಾ ಅತ್ಯಂತ ಭಕ್ತಿಯಿಂದ ಪ್ರಾರ್ಥಿಸಿದನು. ಮೈಮರೆತು ಸ್ತುತಿಸಲು ಪ್ರಾರಂಭಿಸಿದನು.

" ಓ ಶ್ರೀಕೃಷ್ಣದೇವ! ಸಂಸಾರವೆಂಬ ನಿಸ್ಸಾರವಾದ ಸಮುದ್ರದಲ್ಲಿ ಎಲ್ಲಾ ಜೀವರೂ ಬಿದ್ದಿರುವರು. ಈ ಸಮುದ್ರದಲ್ಲಿ ಜನ್ಮಮರಣ ವಾರ್ಧಕ್ಯಾವಸ್ಥೆ ಮುಂತಾದ ಅಲೆಗಳ ಹೊಡೆತದಿಂದ ಪೀಡಿಸಲ್ಪಡುತ್ತಿರುವರು. ಅಂತಹ ಜೀವರ ಬೆನ್ನಿನಲ್ಲಿ ಹೆಂಡತಿ ಮನೆ ಮುಂತಾದ ಮೂಟೆಗಳು ಹೊರಿಸಲ್ಪಟ್ಟಿವೆ. ಆ ಮೂಟೆಗಳನ್ನು ಕಟ್ಟಿರುವ ಹಗ್ಗಗಳೂ ಸಾಮಾನ್ಯವಾದ ಹಗ್ಗಗಳಾಗಿದ್ದರೆ ತುಂಡಾಗಿಬಿಡುತ್ತಿದ್ದವು. ಅಂತಹ ಹಗ್ಗಗಳಲ್ಲ. ಪ್ರತಿಕ್ಷಣದಲ್ಲಿ ತಾರುಣ್ಯವನ್ನು ಪಡೆಯುತ್ತಿರುವ ಮತ್ತು ತುಂಡಾಗಿರುವ ಪ್ರೇಮವೇ ಹಗ್ಗವೆನಿಸುತ್ತದೆ. ಈ ಹಗ್ಗದಿಂದ ಬಿಗಿಯಲ್ಪಟ್ಟ ಪತ್ನೀ ಪುತ್ರಾದಿ ಮೂಟೆಗಳು ಯಾರಿಗಾದರೂ ಸುಖವನ್ನು ಕೊಡುತ್ತವೆಯೇ? ಇಲ್ಲ ಇಲ್ಲ.

" ಓ ಕೃಷ್ಣದೇವ! ಈ ಸಂಸಾರವೆಂಬ ಸಮುದ್ರವನ್ನು ನಾನೂ ನಿನ್ನ ಇತರ ಭಕ್ತರೂ ದಾಟಬೇಕು. ಈ ಮೂಟೆಗಳ ಹೊರೆಯಿಂದ ಏರ್ಪಡುತ್ತಿರುವ ಕಷ್ಟಗಳಿಂದ ಬಿಡುಗಡೆಯನ್ನು ಪಡೆಯಬೇಕು. ಅದಕ್ಕಾಗಿ ಒಂದು ಹಡಗು ಬೇಕು. ಆ ಹಡಗು ಸುಂದರವಾಗಿರಬೇಕು. ಸರ್ವಸಂಗಪರಿತ್ಯಾಗವನ್ನು ಮಾಡಿರುವ ಸನ್ಯಾಸಿಗಳೂ ಸಹ

ಆ ಹಡಗಿನಿಂದ ಈ ಸಮುದ್ರವನ್ನು ದಾಟಬೇಕು. ಕೇತು ಪತಾಕೆ ಮುಂತಾದ ಲಕ್ಷಣಗಳಿಂದ ಯುಕ್ತವಾಗಿರಬೇಕು. ಸಂಸಾರಬೆಂಬ ಸಮುದ್ರದಲ್ಲಿ ಸಿಕ್ಕಿದ್ದರಿಂದ ಏರ್ಪಡುತ್ತಿರುವ ಎಲ್ಲಾ ಖೇದಗಳೂ ಬುಡಸಹಿತವಾಗಿ ಹೋಗಬೇಕು. "ನಿನ್ನ ಪಾದವು ಪತಾಕೆ, ಧ್ವಜರೇಖೆ ಮುಂತಾದ ಚಿಹ್ನೆಗಳಿಂದ ಅಲಂಕೃತವಾಗಿದೆ. ಸನ್ಯಾಸಿಗಳಿಂದ ಮಾನ್ಯವಾಗಿದೆ. ಸಂಸಾರಸಮುದ್ರದಲ್ಲಿ ಏರ್ಪಡುತ್ತಿರುವ ಮತ್ತು ಏರ್ಪಡಬಹುದಾದ ಸಕಲ ಖೇದಗಳನ್ನೂ ಬುಡಸಹಿತವಾಗಿ ಕಿತ್ತೊಗೆಯುತ್ತಿದೆ. ಹಿಂದೆ ಹೇಳಿರುವ ಮತ್ತು ಹೇಳದಿರುವ ಎಲ್ಲಾ ಗುಣಗಳಿಂದಲೂ ಪೂರ್ಣವಾಗಿದೆ. ಅಂತಹ ನಿನ್ನ ಪಾದವೆಂಬ ಹಡಗನ್ನು ಕೊಡು. ಸಂಸಾರವೆಂಬ ಸಮುದ್ರವನ್ನು ದಾಟಿಸು. ಈ ಹೊರೆಗಳಿಂದ ಏರ್ಪಡುತ್ತಿರುವ ಕಷ್ಟಗಳನ್ನು ತೊಲಗಿಸು. ಪುನಃ ಮನೆಗೆ ಹೋಗುವಂತೆಯೂ ಹೆಂಡತಿ ಮಕ್ಕಳು ಮನೆ ಮುಂತಾದ ವಸ್ತುಗಳನ್ನು ಹೊತ್ತು ಕಷ್ಟಪಡುವಂತೆಯೂ ಆಜ್ಞಾಪಿಸಬೇಡ." ಗೋಕುಲದಲ್ಲಿರುವ ಎಲ್ಲಾ ಸ್ತ್ರೀಯರನ್ನೂ ನಿನ್ನನ್ನೂ ಬಿಡಿಸಿ ಇಲ್ಲಿಗೆ ಕರೆದುಕೊಂಡು ಬಂದಿರುವೆನು. ಅವರೆಲ್ಲರೂ "ಪತಿವಿಯೋಗವನ್ನು ಏರ್ಪಡಿಸಿದ ನನಗೂ ಇದೇ ಗತಿಯು ಏರ್ಪಡಲಿ" ಎಂದು ಶಪಿಸಿರುವರು. ಆದ್ದರಿಂದಲೇ ಸೌಂದರ್ಯ ಸಮುದ್ರನಾಗಿರುವ ನಿನಗೆ ನನಗೂ ವಿಯೋಗವು ಏರ್ಪಡುತ್ತಿದೆ. ಅವರೆಲ್ಲರೂ ಕೊಟ್ಟಿರುವ ಶಾಪವು ಫಲಿಸಿತೆಂದು ಹೇಳಬಹುದು. ಆದ್ದರಿಂದಲೇ ನೀನು ನನ್ನನ್ನು ಮನೆಗೆ ಹೋಗಬೇಕೆಂದು ಆಜ್ಞಾಪಿಸುತ್ತಿರುವಿ. ಹಾಗೆ ಮಾಡಬೇಡ." "ಪುಣ್ಯವಿಲ್ಲದವನು ಯಾರು ತಾನೇ ಶ್ರೇಯಸ್ಸನ್ನು ಪಡೆಯಲು ಶಕ್ತನಾಗುವನು? ನಾನು ಪುಣ್ಯವಿಲ್ಲದವನು. ಆದ್ದರಿಂದಲೇ ನಿನ್ನನ್ನು ಬಿಟ್ಟು ಹೋಗುವ ದೌರ್ಭಾಗ್ಯವು ನನಗೆ ಏರ್ಪಟ್ಟಿದೆ ಎಂದು ನಂಬುವೆನು. ಪುಣ್ಯವಿಲ್ಲದವರು ಮೂಗರೂ ಕುರುಡರೂ ಕುಂಟರೂ ಕೈಗಳಿಲ್ಲದವರೂ ನಪುಂಸಕರೂ ಮೂಢರೂ ಆಗಿ ಹುಟ್ಟುವುದುಂಟು. ಪುಣ್ಯವಿಲ್ಲದ ನಾನೂ ಮುಂದಿನ ಜನ್ಮದಲ್ಲಿ ಹೀಗೆಯೇ ಹುಟ್ಟಬೇಕು. ಈ ಜನ್ಮದಲ್ಲಿಯೂ ನಾನು ಕುರುಡ ಮುಂತಾದವರಂತೆ ಆಗಬೇಕು. ಆದರೆ ನನ್ನ ಕುರುಡತನ ಮುಂತಾದ ದೋಷಗಳು ಹೇಗಿರಬೇಕು ಎಂಬ ವಿಷಯವನ್ನು ಕುರಿತು ಹೇಳುವೆನು." "ಸಜ್ಜನರನ್ನು ನಿಂದಿಸುವ ವಿಷಯದಲ್ಲಿ ಮೂಗನಾಗಬೇಕು. ಮೀನಲೋಚನಿಯಾಗಿರುವ ಸುಂದರಿಯರನ್ನು ನೋಡುವ ವಿಷಯದಲ್ಲಿ ಕುರುಡನಾಗಬೇಕು. ನಿನ್ನನ್ನು ಬಿಟ್ಟು ಹೊರಗಿನ ಮಾತುಗಳನ್ನು ಕೇಳುವ ವಿಷಯದಲ್ಲಿ ಕಿವುಡನಾಗಬೇಕು. ಪಾಪಕ್ಕೆ ಸಾಧನವಾಗಿರುವ ಪರಸ್ತ್ರೀಯರ ಮನೆಗಳಿಗೆ ಹೋಗುವ ವಿಷಯದಲ್ಲಿಯೂ ಇತರ ವಿಷಯಗಳಲ್ಲಿಯೂ ಕುಂಟನಾಗಬೇಕು. ಪಾಪಕಾರ್ಯಗಳನ್ನು ಮಾಡುವ ವಿಷಯದಲ್ಲಿ ಕೈಗಳಿಲ್ಲದವನಾಗಬೇಕು. ಗ್ರಾಮ್ಯವಿಷಯಗಳನ್ನು ಸೇವಿಸುವ ವಿಷಯದಲ್ಲಿ ನಪುಂಸಕನಾಗಬೇಕು. ಅಯೋಗ್ಯವಿಷಯಗಳನ್ನು ಸ್ಮರಿಸುವ ವಿಷಯದಲ್ಲಿ ಮೂಢನಾಗಬೇಕು."

## ಓ ಕೃಷ್ಣದೇವ! ನನಗೆ ಯೋಗ್ಯರಾದ ಶತ್ರುಗಳನ್ನು ಕೊಡು

"ಓ ಕೃಷ್ಣದೇವ! ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಎಂಬ ಆರು ಶತ್ರುಗಳು ಸರ್ವರನ್ನೂ ಗೋಳಾಡಿಸುತ್ತಿವೆ. ನಿನ್ನನ್ನು ಆಶ್ರಯಿಸಿದವರನ್ನು ಗೋಳಾಡಿಸಲಾರವು. ಅವರಿಗೆ ಬೇಕಾದ ಇಷ್ಟಾರ್ಥಗಳನ್ನು ಕೊಟ್ಟು ತಾವು ಶತ್ರುಗಳಲ್ಲವೆಂದು ತಿಳಿಸುವವು. ಲೋಕದಲ್ಲಿ ಶತ್ರುಗಳಿಗಿಂತಲೂ ಬಲಿಷ್ಠನನ್ನು ಆಶ್ರಯಿಸಿದವರಿಗೆ ಶತ್ರುಗಳಿಂದ ಬಾಧೆಯು ಏರ್ಪಡುವುದುಂಟೇ? ಉಪಕಾರಗಳು ಏರ್ಪಡುವುದಿಲ್ಲವೇ? ಅದರಂತೆ ಸರ್ವೋತ್ತಮನಾದ ನಿನ್ನನ್ನು ಆಶ್ರಯಿಸುವೆವು. ಕಾಮ ಕ್ರೋಧ ಮುಂತಾದ ಆರು ಶತ್ರುಗಳನ್ನು ಸಂಪಾದಿಸುವೆವು. ಆಗ ಆ ಆರು ಶತ್ರುಗಳು ಯಾವ ತೊಂದರೆಯನ್ನೂ ಕೊಡಲಾರವು. ಇಷ್ಟಾರ್ಥಗಳನ್ನೇ

ಪೂರೈಸುವವು." "(೧) ಅಧಿಕವಾದ ಆಸೆಯು ಕಾಮ ಎಂದೆನಿಸುತ್ತದೆ. ಈ ಕಾಮವು ಸ್ತ್ರೀಯರೇ ಮೊದಲಾದವರಲ್ಲಿ ಏರ್ಪಡದಿರಲಿ. ನಿನ್ನ ಪಾದಗಳನ್ನು ಸೇವಿಸುವ ವಿಷಯದಲ್ಲಿ ಹೆಚ್ಚಲಿ." "(೨) ಅಪೇಕ್ಷಿಸಿದ ವಸ್ತುಗಳನ್ನು ಮಹಾ ಪ್ರಯತ್ನದಿಂದ ಸಂಪಾದಿಸುವುದು, ನಾನಾ ವಿಧವಾದ ಉಪಾಯಗಳಿಂದ ರಕ್ಷಿಸುವುದು. ಯಾವ ಕಾರಣದಿಂದಲೂ ಖರ್ಚು ಮಾಡದಿರುವುದು ಮುಂತಾದ ವಿಷಯಗಳಲ್ಲಿರುವ ಅತ್ಯಾಸೆಯು ಲೋಭವೆನಿಸುತ್ತದೆ. ಈ ಲೋಭವು ಹಣ ಮುಂತಾದ ವಿಷಯಗಳಲ್ಲಿ ಏರ್ಪಡದಿರಲಿ. ನೀನೇ ಸರ್ವೋತ್ತಮನು ಎಂಬ ಬುದ್ಧಿಯನ್ನು ಗುರುಮುಖದಿಂದ ಓದಿ ಸಂಪಾದಿಸಬೇಕು. ಸಂಪಾದಿಸಿದ ಈ ಜ್ಞಾನವನ್ನು ಶ್ರುತಿಗಳಿಂದಲೂ ಸ್ಮೃತಿಗಳಿಂದಲೂ ಯುಕ್ತಿಗಳಿಂದಲೂ ದೃಢಪಡಿಸಿಕೊಳ್ಳಬೇಕು. ಸತ್ತರೂ ಬಿಡಲಾರೆನು ಎಂದು ದೃಢವಿಶ್ವಾಸವುಳ್ಳವನಾಗಬೇಕು. ಈ ವಿಧವಾದ ಲೋಭವು ನನ್ನಲ್ಲಿ ಹೆಚ್ಚಲಿ. (೩) ಇತರರಿಗಿಂತ ಅಧಿಕವಾದ ವಸ್ತುಗಳನ್ನು ಸಂಪಾದಿಸಬೇಕು ಎಂಬ ಬುದ್ಧಿಯಿಂದ ಮಾಡುವ ಮಹಾ ಪ್ರಯತ್ನವು ಮಾತ್ಸರ್ಯ ವೆನಿಸುತ್ತದೆ. ಈ ಮಹಾಪ್ರಯತ್ನವು ಬೇರೆ ವಸ್ತುಗಳ ವಿಷಯಗಳಲ್ಲಿ ಏರ್ಪಡದಿರಲಿ. ಶ್ರೀಹರಿಯು ಪೂಜಾರೂಪವಾದ ಪುಣ್ಯಗಳನ್ನು ಎಲ್ಲರಿಗಿಂತಲೂ ಅಧಿಕವಾಗಿ ಸಂಪಾದಿಸಬೇಕು ಎಂಬ ಬುದ್ಧಿಯಿಂದ ಮಾಡುವ ಮಹಾ ಪ್ರಯತ್ನವು ನನ್ನಲ್ಲಿ ಹೆಚ್ಚಲಿ. (೪) ಮದ್ಯ ಮುಂತಾದ ಮಾದಕ ಪದಾರ್ಥಗಳ ಸೇವನೆಯಿಂದ ಮದವು ತಲೆಗೆ ಏರಿ ನರ್ತನಾದಿಗಳನ್ನು ಮಾಡುತ್ತಾ ಇತರ ಕಾರ್ಯಗಳನ್ನು ಮಾಡುವ ವಿಷಯದಲ್ಲಿ ನಿರುದ್ಯೋಗವೂ ಮದವೆನಿಸುತ್ತದೆ. ಈ ಮದವು ಮದ್ಯಾದಿಗಳ ಸೇವನದಿಂದ ಏರ್ಪಡಬಾರದು. ನಿನ್ನ ಚರಿತ್ರೆಗಳನ್ನು ಯಾವಾಗಲೂ ಕೇಳುತ್ತಿರಬೇಕು. ಅದರಿಂದ ಹೊರಗಿನ ಎಲ್ಲಾ ವಿಷಯಗಳನ್ನೂ ಮರೆಯಬೇಕು. ಬೇರೆ ಯಾವ ಕಾರ್ಯಗಳನ್ನೂ ಮಾಡುವ ವಿಷಯದಲ್ಲಿ ನಿರುದ್ಯೋಗನಾಗಬೇಕು. (೫) ವಿರೋಧಿಗಳನ್ನು ಕೊಲ್ಲಬೇಕೆಂಬ ಇಚ್ಛೆಯೇ ಕ್ರೋಧವೆನಿಸುತ್ತದೆ. ಆ ಕ್ರೋಧವು ನನಗೆ ಬೇರೆ ಎಲ್ಲಿಯೂ ಏರ್ಪಡಕೂಡದು. ನಿನ್ನನ್ನು ವಿರೋಧಿಸುವ ಮತವನ್ನೂ, ಆ ಮತವನ್ನು ಅವಲಂಬಿಸಿದವರನ್ನೂ ಯುಕ್ತಿಗಳಿಂದಲೂ ಶಕ್ತಿಗಳಿಂದಲೂ ಸೋಲಿಸಬೇಕೆಂಬ ಇಚ್ಛೆಯು ಯಾವಾಗಲೂ ಇರಬೇಕು. ಈ ವಿಧವಾದ ಕ್ರೋಧವು ನನ್ನಲ್ಲಿರಲಿ. (೬) ಸ್ನೇಹವೇ "ರಾಗ" ಎಂದೆನಿಸುತ್ತದೆ ಈ ಸ್ನೇಹವು ಬಂಧುಗಳಲ್ಲಿ ಹುಟ್ಟಬಾರದು. ನಿನ್ನ ಭಕ್ತರಲ್ಲಿ ಯಾವಾಗಲೂ ಹುಟ್ಟಬೇಕು. ಈ ವಿಧವಾಗಿ ಆರು ಶತ್ರುಗಳನ್ನು ಸಂಪಾದಿಸಿದರೆ ಮತ್ತು ಬೆಳೆಸಿಕೊಂಡರೆ ಈ ಶತ್ರುಗಳೆಲ್ಲರೂ ನನಗೆ ಮಿತ್ರರಾಗಿ ನನ್ನನ್ನು ರಕ್ಷಿಸುವರು, ಈ ಸ್ಥಿತಿಯು ನನಗೆ ಏರ್ಪಡಲಿ." "ಓ ರುದ್ರದೇವ, ನೀನು ಸರ್ವರ ಮನಸ್ಸುಗಳಿಗೆ ಅಭಿಮಾನಿಯಾಗಿರುವಿ. ನೀನು ಮನ್ಮಥನನ್ನು ಸುಟ್ಟಿರುವಿ. ಆದ್ದರಿಂದ ನೀನು ಮನ್ಮಥನ ಪ್ರಬಲ ಶತ್ರುವಾಗಿರುವಿ. ನಿನ್ನ ಅಧೀನವಾದ ನನ್ನ ಮನಸ್ಸು ಮನ್ಮಥನ ವಶವಾಗದಂತೆ ಮಾಡು. ಶ್ರೀಹರಿಯು ನಿನ್ನ ತಾತನಾಗಿರುವನು. ನಿನಗೆ ಪರಮ ಪೂಜ್ಯನಾಗಿರುವನು. ಆದ್ದರಿಂದ ಅವನನ್ನು ಧ್ಯಾನಿಸುವುದರಲ್ಲಿಯೇ ನಿರತನಾಗುವಂತೆ ಮಾಡು." "ಓ ಸೂರ್ಯದೇವ, ನೀನು ಎಲ್ಲರ ಕಣ್ಣುಗಳಿಗೆ ಅಭಿಮಾನಿಯಾಗಿರುವಿ. ಶ್ರೀಹರಿಯು ಗಾಯತ್ರೀ ಎಂಬ ಹೆಸರಿನಿಂದ ನಿನ್ನ ಹೃದಯಕಮಲದಲ್ಲಿ ವಾಸಿಸುತ್ತಾ ನಿನಗೆ ವಿಶೇಷವಾದ ಕೀರ್ತಿಯನ್ನು ಕೊಡುತ್ತಿರುವನು. ನಿನ್ನನ್ನು ಎಲ್ಲಾ ವಿಧದಿಂದಲೂ ಅನುಗ್ರಹಿಸುತ್ತಿರುವ ಶ್ರೀಹರಿಯನ್ನು ನಿನ್ನ ಅಧೀನವಾದ ನನ್ನ ಕಣ್ಣುಗಳು ಯಾವಾಗಲೂ ನೋಡುವಂತೆ ಮಾಡು. ಕಣ್ಣಿಗೆ ಈ ರೀತಿಯಾದ ದೊಡ್ಡ ಹಬ್ಬವೇ ಏರ್ಪಡುವಂತೆ ಮಾಡು. ನೀನು ಉದಯಿಸಿದ ಕೂಡಲೇ ಕನ್ನೈದಿಲೆಯು ಮುಖವನ್ನು ಮುಚ್ಚಿಕೊಳ್ಳುತ್ತದೆ. ಆದ್ದರಿಂದ ನಿನ್ನ ಉದಯವನ್ನು ಸಹಿಸದಿರುವ ಕನ್ನೈದಿಲೆಯು ನಿನ್ನ ಶತ್ರುವೆನಿಸುತ್ತದೆ. ಸ್ತ್ರೀಯರೆಲ್ಲರೂ ಕನ್ನೈದಿಲೆಯಂತಿರುವ ಕಣ್ಣುಗಳನ್ನು ಧರಿಸಿರುವರು. ಆದ್ದರಿಂದಲೇ ಅವರೆಲ್ಲರೂ ನಿನ್ನ ಶತ್ರುವಿಗೆ ಆಶ್ರಯವನ್ನು ಕೊಟ್ಟಿರುವ ಮಹಾ ದ್ರೋಹಿಗಳು. ಅವರನ್ನು ನಿನ್ನ ಅಧೀನವಾಗಿರುವ ನನ್ನ ಕಣ್ಣುಗಳು ನೋಡದಂತೆ ಮಾಡು."

# ಸನ್ಯಾಸಿಗಳಿಗೆ ಯೋಗ್ಯಳಾದ ಪತ್ನಿ

" ಓ ವಿಠ್ಠಲ! ವಿವಾಹಕ್ಕೆ ಯೋಗ್ಯಳಾದ ಕನ್ಯೆಯು ಒಳ್ಳೆಯ ಕುಲದಲ್ಲಿ ಹುಟ್ಟಿದವಳಾಗಿರಬೇಕು. ಒಳ್ಳೆಯ ಸೀರೆಗಳನ್ನು ಧರಿಸಿರಬೇಕು. ಗಂಡನು ಸತ್ತಮೇಲೆಯೂ ಪತಿಯನ್ನು ಅನುಸರಿಸುವವಳಾಗಿರಬೇಕು. ನಾನಾ ವಿಧವಾದ ಅಲಂಕಾರಗಳಿಂದ ಭೂಷಿತಳಾಗಿರಬೇಕು. " ಅಪ್ರಜಾಂ ದಶಮೇ ವರ್ಷೇ ಸ್ತ್ರೀಪ್ರಜಾಂ ದ್ವಾದಶೇ ತ್ಯಜೇತ್" ಮುಂತಾದ ಧರ್ಮಶಾಸ್ತ್ರಗಳಲ್ಲಿ ಮಕ್ಕಳೇ ಆಗದವಳನ್ನು ವಿವಾಹವಾದ ಮೇಲೆ ಹತ್ತು ವರ್ಷಗಳು ಪೂರ್ತಿಯಾದ ಮೇಲೆಯೇ ಬಿಡಬೇಕೆಂದು ಹೇಳುತ್ತದೆ. ಆದ್ದರಿಂದ ಅವಳಿಗೆ ಮಕ್ಕಳೇ ಇಲ್ಲದಿರಬಾರದು. ಅಥವಾ ಹೆಣ್ಣುಮಗಳು ಮಾತ್ರವೂ ಇರಬಾರದು. ಗಂಡುಮಗನು ಹುಟ್ಟಬೇಕು. ಅವಳು ಗಂಡನನ್ನು ನಾನಾ ವಿಧವಾದ ವಸ್ತುಗಳನ್ನು ಅಪೇಕ್ಷಿಸಿ ಕಾಡಿಸುತ್ತಿರಬಾರದು. ಸಂತೋಷಪಡಿಸುತ್ತಲೇ ಇರಬೇಕು. ಅಂತಹ ಕನ್ಯೆಯನ್ನು ನಾನು ವಿವಾಹ ಮಾಡಿಕೊಳ್ಳಬೇಕೆಂದು ಬಯಸುತ್ತಿರುವೆನು. ನಾನು ಮಾತ್ರವಲ್ಲ. ಸರ್ವಸಂಗಪರಿತ್ಯಾಗವನ್ನು ಮಾಡಿರುವ ಸನ್ಯಾಸಿಗಳೇ ಮೊದಲಾದ ಸಕಲ ಸಜ್ಜನರೂ ಇಂತಹ ಕನ್ಯೆಯನ್ನು ವಿವಾಹ ಮಾಡಿಕೊಂಡೇ ಶ್ರೀಹರಿಯ ವಿಶೇಷಾನುಗ್ರಹವನ್ನು ಪಡೆದಿರುವರು. ಆ ಕನ್ಯೆಯ ಪ್ರಭಾವವನ್ನು ಈಗ ಹೇಳುವೆನು." " ಓ ವಿಠ್ಠಲ! ವಿರಕ್ತಿ ರಮಣಿಯನ್ನು ನಾನು ವಿವಾಹ ಮಾಡಿಕೊಳ್ಳುವೆನು. " ತದಾಮಿಷಂ ಪರಿತ್ಯಜ್ಯ ಸ ಸುಖಂ ಸಮವಿಂದತ" ಅಂದರೆ "ಕುರರ" ಎಂಬ ಪಕ್ಷಿಯು ಒಂದು ಮಾಂಸದ ತುಂಡನ್ನು ಕಚ್ಚಿಕೊಂಡು ಬಂತಂತೆ. ಆ ಕುರರ ಪಕ್ಷಿಯನ್ನು ಮಾಂಸದ ತುಂಡಿಗಾಗಿ ಎಲ್ಲಾ ಪಕ್ಷಿಗಳು ಸುತ್ತಿಕೊಂಡು ಗೋಳಾಡಿಸಲು ಆರಂಭಿಸಿದವಂತೆ. ಕೊನೆಗೆ ಆ ಕುರರ ಪಕ್ಷಿಯು ಮಾಂಸದ ತುಂಡಿನಲ್ಲಿ ಆಸೆಯನ್ನು ಬಿಟ್ಟು ಬಿಸಾಡಿಬಿಟ್ಟಿತಂತೆ. ಆಮೇಲೆ ಸುಖಿಯಾಯಿತಂತೆ" ಈ ವಿಷಯವು ಭಾಗವತದಲ್ಲಿ ಹೇಳಲ್ಪಟ್ಟಿದೆ. ಆದ್ದರಿಂದ ವಿರಕ್ತಿ ಎಂಬ ಕನ್ಯೆಯ ದುಃಖಗಳನ್ನೆಲ್ಲಾ ಪರಿಹರಿಸಿ ಪತಿಗೆ ಸುಖಸಮುದ್ರವನ್ನು ಕೊಡುವವಳೆಂದು ನಾನು ನಂಬಿದೆನು." " ಈ ವಿರಕ್ತಿ ಎಂಬ ರಮಣಿಯು ತಂದೆ ಅಂದರೆ ನನ್ನ ಮಾವನು ಸಜ್ಜನರು ಎಂದು ತಿಳಿದೆನು. ಈ ವಿರಕ್ತಿಯು ಎಲ್ಲೋ ಒಂದೆರಡು ವಿಷಯಗಳಲ್ಲಿದ್ದರೆ ಪ್ರಯೋಜನವಿಲ್ಲ. ಈ ವಿಧವಾದ ವಿರಕ್ತಿಯನ್ನು ಅವಲಂಬಿಸಿದವನು ಹಾಸ್ಯಾಸ್ಪದನಾಗುವುದೂ ಉಂಟು. ಆದ್ದರಿಂದ ಪ್ರಪಂಚದಲ್ಲಿರುವ ಎಲ್ಲಾ ವಸ್ತುಗಳಲ್ಲಿಯೂ ಏರ್ಪಡಬೇಕು. ಸ್ತ್ರೀಯರಿಗೆ ಮಾನರಕ್ಷಣೆಯು ಏರ್ಪಡುವುದಕ್ಕಾಗಿ ಈ ವಿರಕ್ತಿಮಣಿಯೂ ದಿಗಂತಗಳ ಅಂದರೆ ಎಲ್ಲಾ ದಿಕ್ಕುಗಳ ಕೊನೆಯ ವರೆಗೆ ವ್ಯಾಪ್ತಳಾಗಿರಬೇಕು. ಅಂದರೆ ದಿಗಂತವೇ ಸೀರೆಯಂತಿರಬೇಕು." "ಲೌಕಿಕಪತ್ನಿಯರು ಪತಿಯು ಬದುಕಿರುವಾಗಲೇ ದೇಹವನ್ನು ತ್ಯಜಿಸುವುದುಂಟು. ಪತಿಯ ಮರಣದ ವರೆಗೆ ಬದುಕಿದ್ದು ಪತಿಯನ್ನು ಸಂತೋಷಪಡಿಸುವವಳು ತುಂಬಾ ವಿರಳ. ಪತಿಯು ದೇಹವನ್ನು ತ್ಯಜಿಸಿದ ಮೇಲೆ ಬದುಕಿರುವ ಪತ್ನಿಯರು ಇರುವುದೂ ಉಂಟು. ಆದರೆ ಪತಿಯು ಹೋಗುವ ಸ್ಥಳಕ್ಕೆ ಅವನ ಜೊತೆಯಲ್ಲಿಯೇ ಹೋಗುವವಳು ಯಾರೂ ಇಲ್ಲ. ಈ ವಿರಕ್ತಿ ಎಂಬ ರಮಣಿಯು ಹಾಗಲ್ಲ. ತಾನು ಆಶ್ರಯಿಸಿದ ಪುರುಷರನ್ನು ಎಂದೆಂದಿಗೂ ಬಿಡಲಾರಳು. ಅವನ ಜೊತೆಯಲ್ಲಿಯೇ ಅವನು ಹೋಗುವ ಒಂದೊಂದು ಲೋಕಗಳಿಗೂ ಯಾವಾಗಲೂ ಹೋಗುವ ಧರ್ಮಪತ್ನಿಯೆಂದರೆ ಇವಳೇ ಸರಿ."

" ಪತ್ನಿಯು ನಾನಾವಿಧವಾದ ಆಭರಣಗಳಿಂದ ಯುಕ್ತಳಾಗಿದ್ದು ಪತಿಯನ್ನು ಸಂತೋಷ ಪಡಿಸಿರುವುದುಂಟು. ಅಲಂಕಾರರಹಿತಳಲ್ಲ. ಅದರಂತೆ ಈ ವಿರಕ್ತಿಯು ಬಂದ ಕೂಡಲೇ ಶ್ರೀಹರಿಯನ್ನು ಪೂಜಿಸುವುದು. ಶಾಸ್ತ್ರವನ್ನು ಶ್ರದ್ಧೆಯಿಂದ ಕೇಳುವುದು. ಕೇಳಿದ ವಿಷಯಗಳನ್ನು ಯುಕ್ತಿಗಳಿಂದ ವಿಮರ್ಶಿಸಿ

ನಿರ್ದುಷ್ಟವಾದ ಜ್ಞಾನವನ್ನು ಸಂಪಾದಿಸುವುದು. ಶ್ರೀಹರಿಯನ್ನು ನಮಸ್ಕರಿಸುವುದು ಮುಂತಾದ ಕಾರ್ಯಗಳನ್ನು ತನ್ನಿಂದ ಯುಕ್ತನಾದ ಪತಿಯಿಂದ ಮಾಡಿಸುತ್ತಿರುವಳು. ಇವುಗಳೇ ವಿರಕ್ತಿರಮಣಿಗೆ ಅಲಂಕಾರಗಳೆನಿಸುತ್ತದೆ.

## ಸನ್ಯಾಸಿಗಳಿಗೆ ಯೋಗ್ಯವಾದ ತಾಂಬೂಲ

" ಈ ವಿರಕ್ತಿರಮಣಿಯ ಸಂಬಂಧವು ಏರ್ಪಟ್ಟವನಿಗೆ ಮೋಕ್ಷವು ಸಿಗುತ್ತದೆ. ಇಲ್ಲದವನಿಗಿಲ್ಲ. ಆದ್ದರಿಂದ ಮೋಕ್ಷವೇ ಈ ವಿರಕ್ತಿ ಮಣಿಯ ಸಂಬಂಧದಿಂದ ಹುಟ್ಟುವ ಗಂಡುಮಗನೆಂದು ಹೇಳಬಹುದು. ಲೌಕಿಕಪತ್ನಿಯರ ಸಂಗವು ಹಗಲಿನಲ್ಲಿಯೂ ನಿಷಿದ್ಧವಾರಗಳು ಮತ್ತು ತಿಥಿಗಳಲ್ಲಿಯೂ ಯೋಗ್ಯವಲ್ಲ. ಈ ವಿರಕ್ತಿರಮಣಿಯ ಸಂಗವು ಹಾಗಲ್ಲ. ಎಲ್ಲಾ ದಿವಸಗಳಲ್ಲಿಯೂ ಎಲ್ಲಾ ತಿಥಿಗಳಲ್ಲಿಯೂ ಎಲ್ಲಾ ಕಾಲಗಳಲ್ಲಿಯೂ ಅತ್ಯಂತ ಶ್ಲಾಘ್ಯವೆನಿಸುತ್ತದೆ. ಅಂತಹ ಪರಮಮಾನ್ಯಳಾದ ವಿರಕ್ತಿರಮಣಿಯ ನಿತ್ಯಸಂಬಂಧವನ್ನು ಕೊಡು."

" ಓ ವಿಠ್ಠಲ!, ಸನ್ಯಾಸಿಗಳಿಗೆ ಯೋಗ್ಯವಾದ ತಾಂಬೂಲವನ್ನು ಕೊಡು. ನಿನಗೆ ವಿಠ್ಠಲ ಎಂಬ ಹೆಸರಿದೆ. ಆ ಹೆಸರಿನಲ್ಲಿ ವಿತ್, ಠ, ಲ ಎಂಬ ಮೂರು ಭಾಗಗಳಿವೆ. ತಾಂಬೂಲವನ್ನು ತಿನ್ನುವಾಗ ಒಂದೇ ವೀಳ್ಯದೆಲೆಯನ್ನು ತಿನ್ನಕೂಡದೆಂದು ಶಾಸ್ತ್ರವಿದೆ. "ವಿತ್" ಎಂಬ ಅಂಶವು ಎರಡು ಅಕ್ಷರಗಳ ಜೋಡಣೆಯಿಂದ ಏರ್ಪಟ್ಟಿದೆ. ಆದ್ದರಿಂದ "ವಿತ್" ಎಂಬ ಅಂಶವನ್ನು ಎರಡು ವೀಳ್ಯದೆಲೆಗಳು ಎಂದು ಹೇಳಬಹುದು. "ಠ" ಎಂಬ ಅಂಶವನ್ನು ಸುಣ್ಣವೆಂದು ಹೇಳಬಹುದು. "ಲ" ಎಂಬ ಅಕ್ಷರವು "ಪೂಗಫಲ" ಎಂಬ ಪದದ ಏಕದೇಶವಾಗಿದೆ. ಆದ್ದರಿಂದ "ಲ" ಎಂಬ ಅಕ್ಷರದಿಂದ ಪೂಗಫಲ ಅಂದರೆ ಅಡಿಕೆಯನ್ನು ಹೇಳಬಹುದು. ಇದರಿಂದ "ವಿಠ್ಠಲ" ಎಂಬ ಪದವೇ ಎರಡು ವೀಳ್ಯದೆಲೆಗಳಿಂದಲೂ ಸುಣ್ಣದಿಂದಲೂ ಯುಕ್ತವಾದ ತಾಂಬೂಲವೆಂದು ಹೇಳಿದಂತಾಯಿತು."

"ರಾಜರೇ ಮೊದಲಾದವರು ಈ ತಾಂಬೂಲವನ್ನು ಸೇವಿಸುವಾಗ ಪಚ್ಚಕರ್ಪೂರ ಮುಂತಾದ ಸುಗಂಧದ್ರವ್ಯಗಳನ್ನು ಸೇರಿಸಿ ಸೇವಿಸುವುದುಂಟು. ಬರೇ ಶುಷ್ಕವಾದ ತಾಂಬೂಲವನ್ನು ಸೇವಿಸುವುದಿಲ್ಲ. ಆದರಂತೆ ನಾನೂ "ವಿಠ್ಠಲ" ಎಂಬ ತಾಂಬೂಲನ್ನು ಸುಮ್ಮನೆ ಸೇವಿಸಲಾರೆನು. ಶ್ರೀಹರಿಯಲ್ಲಿರುವ ಗುಣಗಳ ಸಮೂಹವನ್ನು ಮನಸ್ಸಿನಲ್ಲಿ ಆವೃತ್ತಿಮಾಡುತ್ತಲೇ ವಿಠ್ಠಲ. ವಿಠ್ಠಲ ಎಂದು ಪುನಃ ಪುನಃ ಹೇಳುತ್ತಿರುವೆನು. ಈ ಗುಣಗಳು ಶುದ್ಧವಾಗಿರುವುದರಿಂದ ಕರ್ಪೂರದಂತೆಯೂ ಈ ಗುಣಗಳ ಧ್ಯಾನವು "ವಿಠ್ಠಲ" ಎಂಬ ತಾಂಬೂಲಕ್ಕೆ ಪಚ್ಚಕರ್ಪೂರ ಮುಂತಾದ ವಸ್ತುಗಳ ಮಿಶ್ರಣದಂತೆಯೂ ಪುನಃ ಪುನಃ ವಿಠ್ಠಲ, ಎಂಬ ಶಬ್ದವನ್ನು ಉಚ್ಚರಿಸುತ್ತಿರುವುದೇ ತಾಂಬೂಲಚರ್ವಣದಂತೆಯೂ ಏರ್ಪಡುತ್ತವೆ."

ತಾಂಬೂಲಚರ್ವಣವನ್ನು ಯಾವಾಗಲೂ ಮಾಡದಿರುವ ಸನ್ಯಾಸಿಗಳಿಗೂ ಈ ತಾಂಬೂಲಚರ್ವಣವು ಯೋಗ್ಯವೆನಿಸುತ್ತದೆ. ಮನ್ಮಥವಿಕಾರವನ್ನು ಅಡಗಿಸುತ್ತಿದೆ. ವಿಷಯಗಳಲ್ಲಿ ಹೆಚ್ಚು ಹೆಚ್ಚಾಗಿ ಬರುತ್ತಿರುವ "ರಾಗ" ಅಂದರೆ ಅಭಿಲಾಷೆಗಳನ್ನು ಅಡಗಿಸುತ್ತದೆ. ಶ್ರೀಹರಿಯಲ್ಲಿ "ರಾಗ" ಅಂದರೆ ಭಕ್ತಿಯನ್ನು ಹೆಚ್ಚಿಸುತ್ತದೆ. ಆದ್ದರಿಂದ ಸನ್ಯಾಸಿಗಳಿಗೆ ಅಯೋಗ್ಯವೂ ಮನ್ಮಥವಿಕಾರವನ್ನು ಹೆಚ್ಚಿಸುವ ಶಕ್ತಿಯುಳ್ಳದ್ದೂ "ರಾಗ" ಅಂದರೆ ಬಾಯಿಯಲ್ಲಿ ಕೆಂಪು ಬಣ್ಣವನ್ನು ಹೆಚ್ಚಿಸುವ ಶಕ್ತಿಯುಳ್ಳದ್ದೂ ಶ್ರೀಹರಿಯಲ್ಲಿ "ರಾಗ" ಅಂದರೆ ಭಕ್ತಿಯನ್ನು ಹೆಚ್ಚಿಸದಿರುವವರೂ ಆಗಿರುವ ತುಚ್ಛವಾಗಿರುವ ಲೌಕಿಕತಾಂಬೂಲಕ್ಕಿಂತ ಅನಂತ ಪಾಲು ಉತ್ತಮವೆಂದೂ ಸನ್ಯಾಸಿ ಮುಂತಾದ ಸರ್ವರಿಂದಲೂ

ಮಾನ್ಯವೆಂದೂ ಹೇಳುವುದರಲ್ಲಿ ಯಾವ ಸಂಶಯವೂ ಇಲ್ಲ."

"ಅದು ಮಾತ್ರವಲ್ಲ. ಲೌಕಿಕತಾಂಬೂಲವು ದುಡ್ಡು ಕೊಟ್ಟವರಿಗೆ ಮಾತ್ರ ಸಿಗುತ್ತದೆ. ಈ ವಿಠ್ಠಲನಾಮ ತಾಂಬೂಲ ಚರ್ವಣಮಾಡುವುದಕ್ಕೆ ಯಾವ ಖರ್ಚೂ ಇಲ್ಲ. ಲೌಕಿಕತಾಂಬೂಲವೂ ಮುಖದಲ್ಲಿರುವ ದುರ್ಗಂಧ ಮುಂತಾದ ಕೆಲವು ರೋಗಗಳನ್ನು ಮಾತ್ರ ಪರಿಹರಿಸುತ್ತದೆ. ವಿಠ್ಠಲತಾಂಬೂಲವು ಎಲ್ಲಾ ರೋಗಗಳಿಗೂ ಮೂಲವಾಗಿರುವ ಸಂಸಾರ ಎಂಬ ರೋಗವನ್ನೇ ಪರಿಹರಿಸುತ್ತದೆ. ಆದ್ದರಿಂದ ಅತ್ಯುತ್ತಮವಾದ ವಿಠ್ಠಲನಾಮಚರ್ವಣವೆಂಬ ತಾಂಬೂಲಚರ್ವಣವನ್ನೇ ನನಗೆ ಕೊಡು.

" ಓ ವಿಠ್ಠಲ, ಮನಸ್ಸಿಗೆ "ಸ್ವಾಂತ" ಎಂಬ ಹೆಸರಿದೆ. ಆ ಶಬ್ದವು ಎರಡು ವಿಧವಾದ ಅರ್ಥಗಳನ್ನು ತಿಳಿಸುತ್ತದೆ. (೧) ಶ್ರೀಹರಿಯ ಪಾದಕಮಲಗಳನ್ನು ಎಡೆಬಿಡದೆ ಸೇವಿಸುತ್ತಿರುವಂತೆ ಮಾಡುವ ಶಕ್ತಿಯುಳ್ಳದ್ದು. ಈ ಅರ್ಥವು ಮೊದಲನೆಯದು (೨) ತನಗೆ ದುರ್ವಿಷಯಗಳಲ್ಲಿ ಆಸೆಯನ್ನು ಹೆಚ್ಚಿಸಿ ದುರಹಂಕಾರದಿಂದ ಚೀರುತ್ತಿರುವ ಹಾವಿನಂತೆ ಮೃತ್ಯುವಾಗಿರುವುದು ಎಂಬ ಅರ್ಥವು ಎರಡನೆಯದು. ಈ ಎರಡು ಅರ್ಥಗಳಲ್ಲಿ ಮೊದಲನೆಯ ಅರ್ಥವು ನನ್ನ ಮನಸ್ಸಿನಲ್ಲಿರುವಂತೆ ಮಾಡು. ಎರಡನೆಯ ಅರ್ಥವು ಇಲ್ಲದಂತೆ ಮಾಡು" ಇದು ಅಕ್ರೂರನ ಪ್ರಾರ್ಥನೆ.

**(೪೩) ಕಂಸಧಾನೀಂ ಗತ್ವಾ,** ಮಥುರಾಪಟ್ಟಣವನ್ನು ಪ್ರವೇಶಿಸಿದನು.

**ವಿಶೇಷಾರ್ಥ - ಮಥುರಾಂ ಪ್ರಾಪ್ಯ ಅಕ್ರೂರಮಗ್ರೇ ಪ್ರೇಷ್ಯ, ತತ್ರೋಪವನೇ ಕೃತಾಹ್ನಿಕಃ, ಅಪರಾಹ್ನಕಾಲೇ ಗೋಪಾಲೈಃ ಸಹ ಮಥುರಾಂ ದ್ರಷ್ಟುಂ ರಾಜಮಾರ್ಗೇ ಗಚ್ಛನ್.**

ವಿಶೇಷಾರ್ಥ ವಿವರಣ - ಶ್ರೀಕೃಷ್ಣದೇವನು ಮಥುರಾಪಟ್ಟಣಕ್ಕೆ ಬಂದನು. ಅವನನ್ನು ಅಕ್ರೂರನು ತನ್ನ ಮನೆಗೆ ಬರಬೇಕೆಂದು ಪುನಃ ಪುನಃ ಪ್ರಾರ್ಥಿಸಿದನು. ಕಂಸನನ್ನು ಸಂಹರಿಸಿದ ಮೇಲೆ ಬರುವುದಾಗಿ ಹೇಳಿ ಅಕ್ರೂರನನ್ನು ಶ್ರೀಕೃಷ್ಣದೇವನು ಕಳುಹಿಸಿದನು. ಅಕ್ರೂರನ್ನು ಮನಸ್ಸಿಲ್ಲದಿದ್ದರೂ ಶ್ರೀಕೃಷ್ಣದೇವನ ಆಜ್ಞೆಯನ್ನು ಪಾಲಿಸುವುದೇ ತನ್ನ ಧರ್ಮವೆಂದು ತಿಳಿದು ಅಲ್ಲಿಂದ ಹೊರಟನು. ಕಂಸನಿಗೆ ಶ್ರೀಕೃಷ್ಣದೇವನನ್ನು ಕರೆದುಕೊಂಡು ಬಂದ ವಿಷಯವನ್ನು ತಿಳಿಸಿದನು. ತನ್ನ ಮನೆಗೆ ಹೋದನು. ಮೊದಲೇ ಆ ಸ್ಥಳಕ್ಕೆ ಬಂದು ಸೇರಿದ್ದ ನಂದ ಮುಂತಾದವರೊಡನೆ ಶ್ರೀಕೃಷ್ಣದೇವನು ಸೇರಿಕೊಂಡನು. ಸಾಯಂಕಾಲದಲ್ಲಿ ಮಾಡಬೇಕಾದ ಆಹ್ನಿಕಗಳನ್ನು ಮುಗಿಸಿ, ಅಂದು ಸಂಜೆ ಕೆಲವು ಗೊಲ್ಲ ಬಾಲಕರೊಡನೆ ಮಥುರಾಪಟ್ಟಣವನ್ನು ನೋಡುವುದಕ್ಕಾಗಿ ಹೊರಟನು.

## ಶ್ರೀಕೃಷ್ಣದೇವನು ಮಥುರಾಪುರವನ್ನು ಪ್ರವೇಶಿಸಿದ್ದು

ಒಂದೊಂದು ಮನೆಯ ಬಾಗಿಲುಗಳಲ್ಲಿಯೂ ಪಟ್ಟಣಿಗರು ತೆಂಗಿನಕಾಯಿ ಹಣ್ಣುಗಳು ತಾಂಬೂಲ ಮುಂತಾದ ಪೂಜಾಸಾಮಾಗ್ರಿಗಳನ್ನೂ ಪೂರ್ಣಕುಂಭಗಳನ್ನೂ ತೆಗೆದುಕೊಂಡು ಶ್ರೀಕೃಷ್ಣದೇವನನ್ನು ಅಭೂತಪೂರ್ವ ಸತ್ಕಾರದಿಂದ ಸ್ವಾಗತಿಸಿದರು. ಸ್ತ್ರೀಯರೆಲ್ಲರೂ ಈ ವಿಷಯವನ್ನು ತಿಳಿದರು. ಆಸೆಯಿಂದ ಮಹಡಿಗಳ ಮೇಲೆ ಏರಿದರು. ಅವಸರದಲ್ಲಿ ಕೈಗಳಲ್ಲಿ ಧರಿಸಬೇಕಾದ ಆಭರಣಗಳನ್ನು ಕಾಲುಗಳಲ್ಲಿಯೂ

ಕಾಲುಗಳಲ್ಲಿ ಧರಿಸಬೇಕಾದ ಆಭರಣಗಳನ್ನು ಕೈಗಳಲ್ಲಿಯೂ ಧರಿಸಿದರು. ಒಂದು ಕಿವಿ ಮುಂತಾದ ಅವಯಗಳಲ್ಲಿ ಆಭರಣಗಳನ್ನು ಧರಿಸಿ ಇನ್ನೊಂದು ಅವಯವಗಳಲ್ಲಿ ಮರೆತರು. ಹೀಗೆ ಅವಸರದಿಂದ ಸರ್ವಸ್ತ್ರೀಯರೂ ಶ್ರೀಕೃಷ್ಣದೇವನನ್ನು ನೋಡಬೇಕೆಂದು ಓಡಿ ಬಂದರು. ಶ್ರೀಕೃಷ್ಣದೇವನ ಮೇಲೆ ಅರಳುಗಳನ್ನೂ ಪುಷ್ಪಗಳನ್ನು ಚೆಲ್ಲಿದರು. ಶ್ರೀಕೃಷ್ಣದೇವನು ಕಡೆಗಣ್ಣಿನ ನೋಟದಿಂದ ಅವರೆಲ್ಲರನ್ನೂ ನೋಡಿದನು. ಮೆಲ್ಲಗೆ ನಗುತ್ತಾ ಅವರ ಮನಸ್ಸುಗಳನ್ನೆಲ್ಲವನ್ನೂ ಸೂರೆಗೊಂಡನು. ಬ್ರಾಹ್ಮಣರೆಲ್ಲರೂ ಮೊಸರು ಅಕ್ಷತೆಗಳು ನೀರಿನ ಕೊಡಗಳು ಮಾಲೆಗಳು ಗಂಧಗಳು ಮುಂತಾದ ಪೂಜಾಸಾಮಾಗ್ರಿಗಳಿಂದ ಪೂಜಿಸಿದರು. ಪಟ್ಟಣಿಗರೆಲ್ಲರೂ ಶ್ರೀಕೃಷ್ಣದೇವನನ್ನು ನಿರಂತರದಲ್ಲಿಯೂ ನೋಡುತ್ತಿದ್ದ ಗೋಪಿಕಾಸ್ತ್ರೀಯರ ಭಾಗ್ಯವನ್ನು ಹೊಗಳಿದರು. ಶ್ರೀಕೃಷ್ಣದೇವನು ಮಥುರಾಪಟ್ಟಣದ ಸೌಂದರ್ಯವನ್ನು ನೋಡುತ್ತಾ ಸಂತೋಷದಿಂದ ರಾಜಮಾರ್ಗದಲ್ಲಿ ಮುಂದೆ ನಡೆದನು.

## ಶ್ರೀಕೃಷ್ಣದೇವನು ಅಗಸನನ್ನು ಸಂಹರಿಸಿದ್ದು

**(೪೪) ಹೃತರಜಕಶಿರಾಃ ಶ್ರೀಕೃಷ್ಣಃ-** ಶ್ರೀಕೃಷ್ಣದೇವನು ಅಗಸನ ತಲೆಯನ್ನು ಉರುಳಿಸಿದನು.

**ವಿಶೇಷಾರ್ಥ - ತಸ್ಮಿನ್ ಮಾರ್ಗೇ ಆಯಾಂತಂ ಕುಂಜರಗತಂ ಕಂಸದಯಿತಂ ರಜಕಂ ವಸ್ತ್ರಾಣಿ ದೇಹೀತಿ ಪ್ರಾರ್ಥ್ಯ, ತೇನ ನಿರಾಕೃತಃ, ತಸ್ಯ ಶಿರಃ ಕರಾಗ್ರೇಣ ಛಿತ್ವಾ, ಸ್ವಯೋಗ್ಯವಾಸಾಂಸಿ ಗೃಹೀತ್ವಾ ಶೇಷಾಣಿ ಗೋಪೇಭ್ಯೋ ದತ್ವಾ।**

**ವಿಶೇಷಾರ್ಥವಿವರಣ-** ರಾಜಮಾರ್ಗದಲ್ಲಿ ಒಬ್ಬ ಅಗಸನು ಆನೆಯ ಮೇಲೆ ಕುಳಿತು ಒಗೆದ ಬಟ್ಟೆಗಳನ್ನು ಇಟ್ಟುಕೊಂಡು ಬರುತ್ತಿದ್ದನು. ಅವನು ಕಂಸನ ಬಟ್ಟೆಗಳನ್ನು ಒಗೆಯುವವನು. ಗಿರಿಜಾದೇವಿಯರ ವರಬಲದಿಂದ ಯಾರಿಂದಲೂ ಕೊಲ್ಲಲು ಸಾಧ್ಯನಾಗದವನು. ಅವನನ್ನು ಶ್ರೀಕೃಷ್ಣದೇವನು ನೋಡಿದನು. ಪೀತಾಂಬರವನ್ನು ಉಟ್ಟಿರುವವನಾಗಿದ್ದರೂ ಅವನ ಯೋಗ್ಯತೆಯನ್ನು ಬಹಿರಂಗಪಡಿಸುವುದಕ್ಕಾಗಿಯೂ ಅವನನ್ನು ನಿಗ್ರಹಿಸುವುದಕ್ಕಾಗಿಯೂ ವಸ್ತ್ರಗಳನ್ನು ಕೇಳಿದನು. "ನಮ್ಮಿಬ್ಬರಿಗೆ ಅರ್ಹವಾದ ವಸ್ತ್ರಗಳನ್ನು ಕೊಡು. ಇದರಿಂದ ನಿನಗೆ ಶ್ರೇಯಸ್ಸು ಏರ್ಪಡುತ್ತದೆ." ಎಂದು ಹೇಳಿದನು.

ಪರಿಪೂರ್ಣನಾದ ಶ್ರೀಕೃಷ್ಣದೇವನ ಈ ಪ್ರಾರ್ಥನೆಯನ್ನು ಅಗಸನು ನಿರಾಕರಿಸಿದನು. " ಎಲೋ ಬೆಟ್ಟಗಳಲ್ಲಿಯೂ ಕಾಡುಗಳಲ್ಲಿಯೂ ವಾಸಿಸುತ್ತಿರುವ ನೀವು ಇಂತಹ ವಸ್ತ್ರಗಳನ್ನು ಅಪೇಕ್ಷಿಸುವಿರಾ? ಈ ವಸ್ತ್ರಗಳು ರಾಜರಿಗೆ ಯೋಗ್ಯವಾದವುಗಳು. ನಿಮ್ಮ ಅಪೇಕ್ಷೆಯನ್ನು ತಿಳಿದ ರಾಜರು ನಿಮ್ಮನ್ನು ಬಿಡಲಾರರು. ಆದ್ದರಿಂದ ಓಡಿಹೋಗಿರಿ" ಎಂದನು.

ಶ್ರೀಕೃಷ್ಣದೇವನು ಈ ಮಾತುಗಳನ್ನು ಕೇಳಿದನು. " ಈ ಅಗಸನು ನನ್ನನ್ನು ಒದೆಯುವುದಕ್ಕಾಗಿ ಕಾಲುಗಳನ್ನಾಗಲೀ ಹೊಡೆಯುವುದಕ್ಕಾಗಿ ಕೈಗಳನ್ನಾಗಲೀ ತೋರಿಸಲಿಲ್ಲ. ಕೆಟ್ಟ ಮಾತುಗಳನ್ನು ಮಾತ್ರ ಹೇಳಿರುವನು. ಬಾಯಿಯಿಂದ ಮಾಡಿರುವ ಈ ಅಪರಾಧಕ್ಕೆ ತಲೆಯನ್ನು ಮಾತ್ರ ಉರುಳಿಸುವೆನು" ಎಂದು ತೀರ್ಮಾನಿಸಿದನು.

ತನ್ನ ಕೈಯ ತುದಿಯಿಂದ ಮೆಲ್ಲನೆ ಅವನ ತಲೆಯನ್ನು ತಟ್ಟಿದನು. ತಲೆಯು ಉರುಳಿತು. ಇದನ್ನು ನೋಡಿದ್ದ ಅವನ ಸೇವಕರೆಲ್ಲರೂ ಅಲ್ಲಿಂದ ಓಡಿಹೋದರು. ಮಡಿಬಟ್ಟೆಗಳ ಗಂಟುಗಳನ್ನು ಬಿಚ್ಚಿದನು. ತನಗೆ ಬೇಕಾದ ಬಟ್ಟೆಗಳನ್ನು ತಾನೂ ಬಲರಾಮನಿಗೆ ಬೇಕಾದ ಬಟ್ಟೆಗಳನ್ನು ಬಲರಾಮನೂ ಗೊಲ್ಲರಿಗೆ ಬೇಕಾದ ಬಟ್ಟೆಗಳನ್ನು ಗೊಲ್ಲರೂ ತೆಗೆದುಕೊಂಡರು. ಉಳಿದ ಬಟ್ಟೆಗಳನ್ನು ರಸ್ತೆಯಲ್ಲಿ ಹಾಸಿ ಆ ಬಟ್ಟೆಗಳ ಮೇಲೆ ಕಾಲುಗಳನ್ನಿಡುತ್ತಾ ಸರ್ವರೂ ನಡೆದರು.

# ಶ್ರೀಕೃಷ್ಣದೇವನು ಕ್ಷೌರಿಕನನ್ನು ಅನುಗ್ರಹಿಸಿದ್ದು

**(೪೫) ಚಾರುವೇಷಃ ಶ್ರೀಕೃಷ್ಣಃ - ಶ್ರೀಕೃಷ್ಣದೇವನು ಕ್ಷೌರಿಕನಿಂದ ಚೆನ್ನಾಗಿ ಅಲಂಕರಿಸಲ್ಪಟ್ಟನು.**

**ವಿಶೇಷಾರ್ಥ - ತತೋ ನಾಪಿತೇನ ಕೃತನಾನಾಲಂಕಾರಃ**

**ವಿಶೇಷಾರ್ಥವಿವರಣ** - ನಮಗೆ ಗಡ್ಡ ಮೀಸೆ ಮುಂತಾದವುಗಳು ಬೆಳೆದಾಗೆ ನಮ್ಮ ದೇಹವು ವಿಕಾರವಾಗಿಯೂ ಕ್ಷೌರವನ್ನು ಮಾಡಿಸಿಕೊಂಡಾಗ ಶುದ್ಧವಾಗಿಯೂ ಕಾಣಿಸುವುದುಂಟು. ಶ್ರೀಕೃಷ್ಣದೇವನ ದೇಹವು ನಮ್ಮ ದೇಹದ ಹಾಗಲ್ಲ. ಅವನ ದೇಹವು ಜ್ಞಾನಾನಂದಾದಿ ಗುಣಾತ್ಮಕವಾದುದು. ಆ ದೇಹದಲ್ಲಿ ತ್ಯಾಜ್ಯವಾದ ಯಾವ ಭಾಗವೂ ಇಲ್ಲ. ಆದ್ದರಿಂದ ಕ್ಷೌರದಿಂದ ಆಗಬೇಕಾದ ಪ್ರಯೋಜನವು ಯಾವುದೂ ಇಲ್ಲ. ಆದರೂ ಭಕ್ತಾಗ್ರೇಸರನಾದ ಒಬ್ಬ ಕ್ಷೌರಿಕನಿಂದ ಕ್ಷೌರವನ್ನು ಮಾಡಿಸಿಕೊಂಡನು. ಅವನು ತಲೆಗೂದಲುಗಳನ್ನೂ ಉಗುರು ಮುಂತಾದವುಗಳನ್ನೂ ಕತ್ತರಿಸುವಾಗ ಜ್ಞಾನಾನಂದಾತ್ಮಕವಾದ ತನ್ನ ದೇಹದಲ್ಲಿ ಆ ಭಾಗವು ಅದೃಶ್ಯವಾಗುವಂತೆಯೂ ಕತ್ತರಿಸಿದ್ದಕ್ಕೆ ಸರಿಯಾಗಿ ಶುದ್ಧವಾದಂತೆಯೂ ತೋರಿಸಿದನು. ಅದೇ ಸಮಯದಲ್ಲಿ ಅಯೋಗ್ಯರನ್ನು ವಂಚಿಸುವುದಕ್ಕಾಗಿ ಜಡವಾದ ತಲೆಗೂದಲು ಉಗುರು ಮುಂತಾದವುಗಳನ್ನು ಸೃಷ್ಟಿಸಿ ಅವುಗಳೆಲ್ಲವೂ ತನ್ನ ದೇಹದಿಂದ ಹೊರಪಡಿಸಲ್ಪಟ್ಟಂತೆ ಕಾಣಿಸಿದನು. ಅದೇ ಕ್ಷೌರಿಕನು ನಾನಾ ವಿಧವಾದ ಬಣ್ಣಗಳಿಂದಲೂ ಉಡುಗೆಗಳಿಂದಲೂ ಶ್ರೀಕೃಷ್ಣದೇವನನ್ನು ಅಲಂಕರಿಸಿದನು. ಈ ಕ್ಷೌರಿಕನ ಭಕ್ತಿಗೆ ಮೆಚ್ಚಿದನು. ಈ ಲೋಕದಲ್ಲಿ ಅಪರಿಮಿತವಾದ ಸಂಪತ್ತನ್ನೂ ಪರಲೋಕದಲ್ಲಿ ಸಾರೂಪ್ಯಮುಕ್ತಿಯನ್ನೂ ಕೊಟ್ಟನು. ಈ ಕ್ಷೌರಿಕನೂ ಮುಂದೆ ಹೇಳುವ ಸುಧಾಮ ಎಂಬ ಮಾಲಾಕಾರನೂ ವೈಕುಂಠದಲ್ಲಿ ಇದೇ ಕಾರ್ಯವನ್ನು ಮಾಡುತ್ತಾ ಶ್ರೀಹರಿಯನ್ನು ಸೇವಿಸುತ್ತಿದ್ದವರು. ಶ್ರೀಕೃಷ್ಣದೇವನು ಅವತರಿಸಿದಾಗ ತಾವೂ ಅವನನ್ನು ಸೇವಿಸುವುದಕ್ಕಾಗಿ ಅವತರಿಸಿದವರು.

# ಶ್ರೀಕೃಷ್ಣದೇವನು ಸುದಾಮನನ್ನು ಅನುಗ್ರಹಿಸಿದ್ದು

**(೪೬) ಸುದಾಮ್ನಃ ಪ್ರೀತಿಂ ಕುರ್ವನ್ - ಸುದಾಮನನ್ನು ಸಂತೋಷಪಡಿಸಿದನು**

**ವಿಶೇಷಾರ್ಥ** - ತತಃ ಸುದಾಮ್ನೋ ಮಾಲಾಕಾರಸ್ಯ ಗೃಹಂ ಗತ್ವಾ, ತೇನ ಪೂಜಿತಃ, ತಸ್ಮಾತ್ ಪುಷ್ಪಾಣಿ ಗೃಹೀತ್ವಾ ಅಲಂಕೃತಃ ತೌ ನಿಜಪಾರ್ಷದಾವನುಗೃಹ್ಯ.

**ವಿಶೇಷಾರ್ಥ**- ಕ್ಷೌರಿಕನು ಶ್ರೀಕೃಷ್ಣದೇವನನ್ನು ಸೇವಿಸಿದವನು. ಅದಕ್ಕೆ ಫಲವಾಗಿ ಮುಕ್ತಿಯನ್ನು ಪಡೆದನು. ಮುಂದೆ ಸುದಾಮ ಎಂಬ ಮಾಲಾಕಾರನನ್ನು ಅನುಗ್ರಹಿಸಬೇಕೆಂದು ಸಂಕಲ್ಪಿಸಿದನು. ರಾಜಮಾರ್ಗದಲ್ಲಿರುವ ಅವನ ಅಂಗಡಿಗೆ ಹೋದನು. ಸುದಾಮನು ಶ್ರೀಕೃಷ್ಣದೇವನನ್ನು ನೋಡಿ ಓಡಿಬಂದು ನಮಸ್ಕರಿಸಿ, ಆಸನದಲ್ಲಿ

ಕುಳ್ಳಿರಿಸಿ. ಪಾದಗಳನ್ನು ತೊಳೆದು, ಪುಷ್ಪಗಳ್ನು ಸಮರ್ಪಿಸಿ, ಗಂಧವನ್ನು ಹಚ್ಚಿ, ತಾಂಬೂಲವನ್ನು ಸಮರ್ಪಿಸಿದನು.

" ನನ್ನ ಜನ್ಮವು ಸಫಲವಾಯಿತು. ಪಿತೃಗಳು ದೇವತೆಗಳು ಋಷಿಗಳು ನನ್ನಲ್ಲಿ ಸಂತುಷ್ಟರಾದರು. ನೀನು ಎಲ್ಲಾ ಲೋಕಗಳ ಸೃಷ್ಟಿ ಮುಂತಾದವುಗಳನ್ನು ಮಾಡುವವನು. ಈ ಲೋಕದ ಕ್ಷೇಮಕ್ಕಾಗಿ ಅವತರಿಸಿರುವಿ. ಅವರವರ ಯೋಗ್ಯತೆಗಳನ್ನು ತಿಳಿದು ಅವರವರಿಗೆ ಯೋಗ್ಯವಾದ ಫಲಗಳನ್ನು ಕೊಡುತ್ತಿರುವ ನೀನು ವಿಷಮಸ್ವಭಾವುಳ್ಳವನಲ್ಲ. ನಾನು ಮಾಡಬೇಕಾದ ಸೇವೆಗಳನ್ನು ಆಜ್ಞಾಪಿಸು. ನಿನ್ನ ಆಜ್ಞೆಯಂತೆ ನಡೆದರೆ ನಾವು ಅನುಗೃಹೀತರಾಗುವೆವು.'' ಎಂದು ಪ್ರಾರ್ಥಿಸಿದನು.

ಶ್ರೀಕೃಷ್ಣದೇವನು ಅವನು ಕೊಟ್ಟ ಮಾಲೆಗಳನ್ನು ಸ್ವೀಕರಿಸಿದನು. ತಾನೂ ಅಣ್ಣನಾದ ಬಲರಾಮನೂ ಧರಿಸಿದರು. ಶರಣಾಗತನಾದ ಸುದಾಮನಿಗೆ ತನ್ನಲ್ಲಿ ನಿಶ್ಚಲವಾದ ಭಕ್ತಿಯನ್ನೂ ತನ್ನ ಭಕ್ತರಲ್ಲಿ ಅಧಿಕವಾದ ಸ್ನೇಹವನ್ನೂ ಪ್ರಾಣಿಗಳಲ್ಲಿ ದಯೆಯನ್ನೂ ವರವಾಗಿ ಕೊಟ್ಟನು. ಅವನಿಂದ ಅನುಮತಿಯನ್ನು ಪಡೆದು ಮುಂದೆ ಹೊರಟನು.

## ತ್ರಿವಕ್ರೆಗೆ ಅನುಗ್ರಹ

**(೪೭) ಶ್ರೀಕೃಷ್ಣಃ ತ್ರಿವಕ್ರಾಂ ರುಚಿರಾಂ ವ್ಯತನುತ** - ಶ್ರೀಕೃಷ್ಣದೇವನು ತ್ರಿವಕ್ರೆಯು ಸುಂದರಿಯಾಗುವಂತೆ ಮಾಡಿದನು.

**ವಿಶೇಷಾರ್ಥ** - ರಾಜಮಾರ್ಗೇ, ಗಚ್ಛನ್, ಗೃಹೀತಾನ್ವಿಲೇಪನಭಾಜನಾಂ ಕುಬ್ಜಾಂ ಕಂಸಧಾತ್ರೀಂ ಸೈರಂಧ್ರೀಂ ದೃಷ್ಟ್ವಾ, ಸುಗಂಧಂ ಪ್ರಾರ್ಥ್ಯ, ತದ್ದತ್ತಸುಗಂಧಾನುಲಿಪ್ತಾಂಗಸ್ತಸ್ಯೈ ಪ್ರಸನ್ನಸ್ತಾಮೃಜ್ವೀಂ ಕೃತ್ವಾ, ತಯಾ ಸ್ವಗೃಹಂ ಪ್ರತಿ ಪ್ರಾರ್ಥಿತಃ ಉಪಹಾಸಪೂರ್ವಮೇಷ್ಯಾಮಿ ತೇ ಗೃಹಮಿತ್ಯುಕ್ತ್ವಾ, ತಾಮನುಜ್ಞಾಪ್ಯ.

ವಿದೇಹನಗರದಲ್ಲಿ ಪಿಂಗಲಾ ಎಂಬ ವೇಶ್ಯಾಸ್ತ್ರೀ ಇದ್ದಳು. ಅವಳು ವ್ಯಭಿಚಾರವೃತ್ತಿಯಿಂದಲೇ ಜೀವಿಸುತ್ತಿದ್ದವಳು. ಕೆಲಕಾಲದ ಮೇಲೆ ಅವಳಿಗೆ ವೈರಾಗ್ಯವು ಬಂತು. ಶ್ರೀಹರಿಯೇ ತನ್ನ ಪತಿಯೆಂದು ಪರಪುರುಷರನ್ನು ಇಷ್ಟರವರೆಗೆ ಸೇವಿಸಿದ್ದು ತಪ್ಪೆಂದು ನಂಬಿದಳು. ಪರಪುರುಷರ ಸಂಗವನ್ನು ಬಿಟ್ಟಳು. ಶ್ರೀಹರಿಯನ್ನೇ ಅತ್ಯಂತ ಭಕ್ತಿಯಿಂದ ಆರಾಧಿಸಿದಳು. ಕೊನೆಗೆ ಶ್ರೀಹರಿಭಕ್ತಿಯಿಂದಲೇ ದೇಹವನ್ನು ಬಿಟ್ಟಳು. ಮುಂದಿನ ಜನ್ಮದಲ್ಲಿ ತ್ರಿವಕ್ರಾ ಎಂಬ ಹೆಸರಿನಿಂದ ಮಥುರಾಪಟ್ಟಣದಲ್ಲಿ ಹುಟ್ಟಿದಳು. ತರುಣಿಯಾಗಿದ್ದಳು. ಸುಂದರವಾದ ಆಕಾರವುಳ್ಳವಳಾಗಿದ್ದಳು. ಆದರೆ ಹಿಂದಿನ ಜನ್ಮದಲ್ಲಿ ವ್ಯಭಿಚಾರಿಣಿಯಾದುದರಿಂದ ಶರೀರವು ವಕ್ರವಾಗಿಯೂ ಕೊನೆಗೆ ಶ್ರೀಹರಿಯಲ್ಲಿ ಅಪಾರ ಭಕ್ತಿಯು ಏರ್ಪಟ್ಟಿದ್ದರಿಂದ ಸುಂದರವೂ ಆಗಿತ್ತು. ಅವಳ ದೇಹವು ಧನುಸ್ಸಿನ ಆಕಾರದಿಂದ ಮೂರು ಕಡೆಯಲ್ಲಿ ಬಗ್ಗಿತ್ತು. ಆದ್ದರಿಂದಲೇ ತ್ರಿವಕ್ರಾ ಅಂದರೆ ಮೂರು ಕಡೆಯಲ್ಲಿ ಬಗ್ಗಿರುವ ದೇಹವುಳ್ಳವಳಾದುದರಿಂದ "ಗೂನಿ" ಎಂದು ಪ್ರಸಿದ್ಧಳಾಗಿದ್ದಳು. ಕುಳ್ಳಿಯಾಗಿದ್ದಳು. ಕೈಯಲ್ಲಿ ಗಂಧದಿಂದ ತುಂಬಿದ ಪಾತ್ರೆಯನ್ನು ಎತ್ತಿಕೊಂಡು ಬರುತ್ತಿದ್ದ ಅವಳನ್ನು ಶ್ರೀಕೃಷ್ಣದೇವನು ನೋಡಿದನು. ಸರ್ವಜ್ಞನಾದ ಶ್ರೀಹರಿಗೆ ತಿಳಿಯದ ವಿಷಯವಿಲ್ಲ. ಅವಳನ್ನು ನೋಡಿದ ಕೂಡಲೇ ಅವಳನ್ನು ಅನುಗ್ರಹಿಸಬೇಕೆಂದು ತೀರ್ಮಾನಿಸಿದನು. ಶ್ರೀಹರಿಯು ಮಾಡುವ ಎಲ್ಲಾ ವ್ಯಾಪಾರಗಳಿಗೂ ಸರಿಯಾದ ಕಾರಣವುಂಟು. ಆದರೆ ನಮಗೆ ತಿಳಿಯುವುದಿಲ್ಲ. ಅವಳನ್ನು ಕುರಿತು ಕೇಳಿದನು.

" ಎಲೈ ಸುಂದರಿಯೇ! ನೀನು ಯಾರು? ಈ ಗಂಧವನ್ನು ಯಾರಿಗಾಗಿ ಸಿದ್ಧಪಡಿಸಿರುವಿ? ಈ ಗಂಧವನ್ನು ನಮ್ಮಿಬ್ಬರಿಗೆ ಕೊಡು. ಇದರಿಂದ ಬಹುಬೇಗನೆ ನಿನಗೆ ಯೋಗ್ಯವಾದ ಫಲವು ಏರ್ಪಡುತ್ತದೆ" ಎಂದನು. ಈ ಮಾತುಗಳನ್ನು ಕೇಳಿದ ತ್ರಿವಕ್ರೆಯು ಶ್ರೀಕೃಷ್ಣದೇವನ ಮುಖವನ್ನು ನೋಡಿದಳು. ಅವನ ಸುಂದರವಾದ ರೂಪದಿಂದಲೂ ಮಧುರವಾದ ಮಾತುಗಳಿಂದಲೂ ಮುಗುಳ್ನಗೆಯಿಂದಲೂ ಕಡೆಗಣ್ಣುಗಳ ಹೊಡೆತದಿಂದಲೂ ಪರವಶಳಾದಳು. ಅತಿ ವಿನಯದಿಂದ ಮಾತಾಡಿದಳು.

" ಓ ಸುಂದರ! ನಾನು ಕಂಸನ ದಾಸಿಯಾಗಿರುವೆನು. ನಾನು ತಯಾರಿಸಿದ ಗಂಧವು ಕಂಸನಿಗೆ ತುಂಬಾ ಪ್ರಿಯವಾದುದು. ಅವನಿಗಾಗಿ ಈ ಗಂಧವನ್ನು ತೆಗೆದುಕೊಂಡು ಹೋಗುತ್ತಿರುವೆನು. ಆದರೆ ಈ ಗಂಧವನ್ನು ಲೇಪನ ಮಾಡಿಕೊಳ್ಳುವುದಕ್ಕೆ ನೀವೇ ಅರ್ಹರು. ನಿಮ್ಮಿಬ್ಬರನ್ನು ಬಿಟ್ಟು ಅರ್ಹನಾದವನು ಬೇರೆ ಯಾರೂ ಇಲ್ಲ'' ಎಂದಳು. ಆ ಗಂಧವನ್ನು ಶ್ರೀಕೃಷ್ಣದೇವನ ಮತ್ತು ಬಲರಾಮನ ದೇಹಗಳಿಗೆ ಲೇಪನ ಮಾಡಿದಳು. ಆ ಗಂಧದಿಂದ ಅವರಿಬ್ಬರ ದೇಹಗಳೂ ವಿಶೇಷವಾಗಿ ಶೋಭಿಸಿದವು.

ಶ್ರೀಕೃಷ್ಣದೇವನು ಗೂನಿಯನ್ನು ಅನುಗ್ರಹ ದೃಷ್ಟಿಯಿಂದ ನೋಡಿದನು. ಅವಳ ದೇಹವು ಸುಂದರವಾಗಿದೆ. ಆದರೆ ವಕ್ರವಾಗಿದೆ. ಈ ವಕ್ರಭಾವವನ್ನು ಸರಿಪಡಿಸಿ ಅವಳನ್ನು ತನ್ನ ಪತ್ನಿಯಾಗಿ ಸ್ವೀಕರಿಸಬೇಕು. ಹಿಂದಿನ ಜನ್ಮದಲ್ಲಿ ನನ್ನನ್ನೇ ಪತಿಯೆಂದು ತಿಳಿದು ಸರ್ವಸಂಗವನ್ನು ಪರಿತ್ಯಜಿಸಿದ ಮಹಾತ್ಮಳಲ್ಲವೇ? ಎಂದು ಯೋಚಿಸಿದನು.

ಅವಳ ಪಾದಗಳನ್ನು ತನ್ನ ಕಾಲಿನಿಂದ ಒತ್ತಿದನು. ಗಲ್ಲವನ್ನು ಕೈಯಿಂದ ಹಿಡಿದು ಮೇಲೆ ಎತ್ತಿದನು. ಆದೇಕ್ಷಣದಲ್ಲಿ ಅವಳ ದೇಹದಲ್ಲಿದ್ದ ವಕ್ರತ್ವವು ಹೋಯಿತು. ಋಜುವಾದ ಆಕಾರವು ಏರ್ಪಟ್ಟಿತು. ಅಪ್ಸರಃ ಸ್ತ್ರೀಯಂತೆ ಪರಮ ಸುಂದರಿಯಾದಳು. ಅವಳನ್ನು ಅನುಗ್ರಹಿಸಿ ಮುಂದೆ ಹೊರಟನು.

ಆಗ ಅವಳು ಶ್ರೀಕೃಷ್ಣದೇವನ ಸೆರಗನ್ನು ಸೆಳೆದಳು. ಮುಗುಳ್ನಗೆಯಿಂದ ನಕ್ಕಳು. ಮನ್ಮಥನಿಂದ ಪೀಡಿತಳಾದಳು. " ನಿನ್ನನ್ನು ನೋಡಿದ ಕ್ಷಣದಿಂದ ಮನ್ಮಥನು ನನ್ನನ್ನು ಬಾಧಿಸುತ್ತಿರುವನು. ನಿನ್ನನ್ನು ಬಿಟ್ಟಿರಲಾರೆನು. ನಮ್ಮ ಮನೆಗೆ ಹೋಗೋಣ'' ಎಂದಳು.

" ಎಲೈ ಸುಂದರಿಯೇ! ನಾವು ಯಾತ್ರಿಕರಾಗಿ ಬಂದಿರುವೆವು. ನಮಗೂ ಒಂದು ಆಶ್ರಯವು ಬೇಕು. ನಿನ್ನ ಮನೆಯನ್ನು ಬಿಟ್ಟು ನಮಗೆ ಅತ್ಯಂತ ಪ್ರಿಯವಾದ ಆಶ್ರಯವು ಯಾವುದು? ಆದರೆ ಬಂದ ಕೆಲಸವನ್ನು ಮೊದಲು ಮಾಡಬೇಕು. ಆ ಕಾರ್ಯವನ್ನು ಮುಗಿಸಿಕೊಂಡು ಬರುವೆವು'' ಎಂದು ಹೇಳಿ ಅವಳನ್ನು ತೃಪ್ತಿ ಪಡಿಸಿ ಮುಂದೆ ಹೊರಟನು.

## ಪಟ್ಟಣಿಗರಿಂದ ಪೂಜೆ

**(೪೮) ಪೌರಮಹ್ಯಃ ಶ್ರೀಕೃಷ್ಣಃ** - ಪಟ್ಟಣಿಗರೆಲ್ಲರೂ ಶ್ರೀಕೃಷ್ಣದೇವನನ್ನು ತುಂಬಾ ಗೌರವಿಸಿದರು.

**ವಿಶೇಷಾರ್ಥ - ಸ್ವದರ್ಶನಾರ್ಥಮಾಗತೈಃ ಸ್ತ್ರೀಪುರಷೈರ್ಗಂಧಪುಷ್ಪಾಕ್ಷತಾದಿಭಿಃ ಪೂಜ್ಯಮಾನಃ ಸರ್ವಾನತೋಷಯತ್ -**

ಅಷ್ಟರಲ್ಲಿ ಶ್ರೀಕೃಷ್ಣದೇವನನ್ನು ನೋಡಬೇಕೆಂದು ಪಟ್ಟಣಿಗರಾಗಿರುವ ಸ್ತ್ರೀಯರು ಪುರುಷರೂ ಸರ್ವರೂ

ಬಂದರು. ಗಂಧ ಪುಷ್ಪ ಅಕ್ಷತೆ ಮುಂತಾದವುಗಳಿಂದ ಪೂಜಿಸಿದರು. ಸರ್ವರನ್ನೂ ಶ್ರೀಕೃಷ್ಣದೇವನು ಸಂತೋಷ ಪಡಿಸಿದನು. ॥೧೦॥

**ಶಾರ್ವಂ ಭಂಕ್ತ್ವಾ ಧನುರ್ಯೋ ಬಲಮಪಿ ಧನುಷೋ ರಕ್ಷಕಂ ಕುಂಜರಂ ತಂ**
**ಮಲ್ಲಾಂಶ್ಚಾಣೂರಪೂರ್ವಾನಪಿ ಸಹಸಹಜೋ ಮರ್ದಯಂಸ್ತುಂಗಮಂಚಾತ್ ।**
**ಭೋಜೇಶಂ ಪಾತಯಿತ್ವಾ ವ್ಯಸುಮಕೃತ ನಿಜಾನ್ನಂದಯನ್ ಪ್ರಾಪ್ಯ ಗರ್ಗಾತ್**
**ದ್ವೈಜಂ ಸಂಸ್ಕಾರಮಾಪ್ತೋ ಗುರುಮಥ ವಿದಿತಾಶೇಷವಿದ್ಯೋಽವತಾನ್ನಃ ॥೧೧॥**

ಪದಚ್ಛೇದ :- ಶಾರ್ವಂ ಭಂಕ್ತ್ವಾ ಧನುಃ ಯಃ ಬಲಂ ಅಪಿ ಧನುಷಃ ರಕ್ಷಕಂ ಕುಂಜರಂ ತಂ ಮಲ್ಲಾನ್ ಚಾಣೂರಪೂರ್ವಾನ್ ಅಪಿ ಸಹಸಹಜಃ ಮರ್ದಯನ್ ತುಂಗಮಂಚಾತ್ ಭೋಜೇಶಂ ಪಾತರಯಿತ್ವಾ ವ್ಯಸುಂ ಅಕೃತ ನಿಜಾನ್ ನಂದಯನ್ ಪ್ರಾಪ್ಯ ಗಾರ್ಗಾತ್ ದ್ವೈಜಂ ಸಂಸ್ಕಾರಂ ಆಪ್ತಃ ಗುರುಂ ಅಥ ವಿದಿತಾಸೇಷವಿದ್ಯಃ ಅವತಾತ್ ನಃ

ಅನ್ವಯ - ಯಃ ಸಹಸಹಜಃ ಶಾರ್ವಂ ಧನುಃ ಭಂಕ್ತ್ವಾ ಧನುಷಃ ರಕ್ಷಕಂ ಬಲಮಪಿ (ಭಂಕ್ತ್ವಾ) ತಂ ಕುಂಜರಂ ಚಾಣೂರಪೂರ್ವಾನ್ ಅಪಿ ಮರ್ದಯನ್ ತುಂಗಮಂಚಾತ್ ಭೋಜೇಶಂ ಪಾತಯಿತ್ವಾ ವ್ಯಸುಂ ಅಕೃತ ನಿಜಾನ್ ನಂದಯನ್ ಗರ್ಗಾತ್ ದ್ವೈಜಂ ಸಂಸ್ಕಾರಂ ಪ್ರಾಪ್ಯ, ಅಥ ಗುರುಂ ಆಪ್ತಃ ವಿದಿತಾಶೇಷವಿದ್ಯಃ ಸಃ ನಃ ಅವತಾತ್.

ಅನ್ವಯಾರ್ಥ - "ಯಃ" ಯಾವ ಶ್ರೀಕೃಷ್ಣದೇವನು, " ಸಹಸಹಜಃ" ಅಣ್ಣನಾದ ಬಲರಾಮನಿಂದ ಸಹಿತನಾಗಿ "ಶಾರ್ವಂ" ರುದ್ರದೇವನ ಸಂಬಂಧವಾಗಿರುವ "ಧನುಃ" ಧನುಸ್ಸನ್ನು "ಭಂಕ್ತ್ವಾ" ಮುರಿದು. "ಧನುಷಃ" ಧನುಸ್ಸಿನ "ರಕ್ಷಕಂ" ರಕ್ಷಕವಾಗಿರುವ "ಬಲಮಪಿ" ಸೈನ್ಯವನ್ನೂ ಸಹ ("ಭಂಕ್ತ್ವಾ") ಕೊಂದು "ತಂ" ಆ ಪ್ರಸಿದ್ಧವಾಗಿರುವ "ಕುಂಜರಂ" ಕುವಲಯಾಪೀಡವೆಂಬ ಆನೆಯನ್ನೂ "ಚಾಣೂರಪೂರ್ವಾನಪಿ" ಚಾಣೂರನೇ ಮೊದಲಾಗಿರುವ ಜಟ್ಟಿಗಳನ್ನೂ "ಮರ್ದಯನ್" ಕೊಂದವನಾಗಿ "ತುಂಗಮಂಚಾತ್" ಎತ್ತರವಾದ ಮಂಚದಿಂದ "ಭೋಜೇಶಂ" ಭೋಜದೇಶದ ಅಧಿಪತಿಯಾಗಿರುವ ಕಂಸನನ್ನು "ಪಾತಯಿತ್ವಾ" ಕೆಳಗೆ ತಳ್ಳಿ "ವ್ಯಸುಂ" ಸತ್ತವನನ್ನಾಗಿ "ಅಕೃತ" ಮಾಡಿದನೋ, "ನಿಜಾನ್" ಸ್ವಕೀಯರಾದ ತಂದೆ ಮುಂತಾದವರನ್ನು "ನಂದಯನ್" ಸಂತೋಷಪಡಿಸುತ್ತಿರುವವನೂ "ಗರ್ಗಾತ್" ಗರ್ಗಾಚಾರ್ಯರಿಂದ "ದ್ವೈಜಂ ಸಂಸ್ಕಾರಂ" ಉಪನಯನ ಸಂಸ್ಕಾರವನ್ನು "ಪ್ರಾಪ್ಯ" ಪಡೆದವನಾಗಿ "ಅಥ" ಅನಂತರದಲ್ಲಿ "ಗುರುಂ" ಸಾಂದೀಪಿನಿ ಎಂಬ ಗುರುವನ್ನು "ಆಪ್ತಃ" ಹೊಂದಿದವನಾಗಿ "ವಿದಿತಾಶೇಷವಿದ್ಯಃ" ತಿಳಿಯಲ್ಪಟ್ಟ ಸಕಲ ವಿದ್ಯೆಗಳುಳ್ಳವನಾಗಿಯೂ ಇರುವ "ಸಃ" ಆ ಶ್ರೀಕೃಷ್ಣದೇವನು "ನಃ" ನಮ್ಮನ್ನು "ಅವತಾತ್" ರಕ್ಷಿಸಲಿ.

## ಶ್ರೀಕೃಷ್ಣದೇವನು ರುದ್ರದೇವನ ಧನುಸ್ಸನ್ನು ಮುರಿದದ್ದು

**(೪೯) ಸಹಸಹಜಃ ಶಾರ್ವಂ ಧನುಃ ಭಂಕ್ತ್ವಾ** - ಶ್ರೀಕೃಷ್ಣದೇವನು ರುದ್ರದೇವನ ಧನುಸ್ಸನ್ನು ಮುರಿದು.

ಶ್ರೀಕೃಷ್ಣದೇವನು ರಾಜಮಾರ್ಗದಲ್ಲಿ ಹಿಂದೆ ಹೇಳಿದಂತೆ ದುಷ್ಟರಾದ ಅಗಸನೇ ಮೊದಲಾದವರನ್ನು

ನಿಗ್ರಹಿಸುತ್ತಾ ಸುದಾಮ ಮುಂತಾದ ಭಕ್ತರನ್ನು ಅನುಗ್ರಹಿಸುತ್ತಾ ಮುಂದೆ ನಡೆದನು. ಗಂಧವನ್ನು ಅರ್ಪಿಸಿದ್ದರಿಂದ ತ್ರಿವಕ್ರೆಯೂ ಕ್ಷೌರವನ್ನು ಮಾಡಿ ಅಲಂಕರಿಸಿದ್ದರಿಂದ ಕ್ಷೌರಿಕನೂ ಉತ್ತಮ ಪುಷ್ಪಗಳನ್ನು ಸಮರ್ಪಿಸಿದ್ದರಿಂದ ಸುದಾಮನೂ ಶ್ರೀಕೃಷ್ಣದೇವನ ವಿಶೇಷಾನುಗ್ರಹವನ್ನು ಪಡೆದರು. ಹೀಗಿರುವಾಗ ಶ್ರೀಕೃಷ್ಣದೇವನನ್ನು ಶಾಸ್ತ್ರೋಕ್ತವಾದ ಎಲ್ಲಾ ವಿಧಿಗಳನ್ನೂ ತಿಳಿದು ಕ್ರಮವಾಗಿ ಪೂಜಿಸುವವರು ವಿಶೇಷಾನುಗ್ರಹವನ್ನು ಪಡೆಯುವುದರಲ್ಲಿ ಆಶ್ಚರ್ಯವೇನಿದೆ?

ವಿಶೇಷಾರ್ಥ - ಸಬಲಃ ಕೃಷ್ಣಃ ಪೂರ್ವೋಕ್ತರೀತ್ಯಾ ರಾಜಮಾರ್ಗೇ ಗಚ್ಛನ್ ಧನುಷೋ ಗೃಹಂ ಪ್ರಾಪ್ಯ ರುದ್ರದತ್ತಂ ಸುಭಟೈರ್ಗುಪ್ತಂ ದನುರಾದಾಯ ಛಿತ್ವಾ.

ವಿಶೇಷಾರ್ಥವಿವರಣ - ರುದ್ರದೇವನು ಕಂಸನಿಗೆ ಒಂದು ಧನುಸ್ಸನ್ನು ಕೊಟ್ಟಿದ್ದನು. ಆ ಧನುಸ್ಸನ್ನು ದೇವತೆಗಳೂ ದೈತ್ಯರೂ ಒಟ್ಟುಗೂಡಿದರೂ ಎತ್ತಲು ಸಾಧ್ಯವಿಲ್ಲ. ಹೀಗಿರುವಾಗ ಆ ಧನುಸ್ಸನ್ನು ಮುರಿಯಲು ಯಾರಿಂದಲೂ ಸಾಧ್ಯವಿಲ್ಲವೆಂದು ಹೇಳಬೇಕಾದ್ದಿಲ್ಲ. ಶ್ರೀಕೃಷ್ಣದೇವನನ್ನು ಕೊಲ್ಲುವುದಕ್ಕಾಗಿ ಇದೇ ಧನುಸ್ಸಿನ ಉತ್ಸವವನ್ನು ಕಂಸನು ನಿಮಿತ್ತವಾಗಿ ಮಾಡಿಕೊಂಡಿದ್ದನು. ಆ ಧನುಸ್ಸನ್ನು ಮುರಿದುಬಿಟ್ಟರೆ ಕಂಸನ ಆಸೆಯು ವಿಫಲವಾಗುವುದಾಗಿಯೂ ತನ್ನ ಬಲವು ಅಪಾರವೆಂದು ತಿಳಿಸಿದಂತಾಗುವುದಾಗಿಯೂ ಶ್ರೀಕೃಷ್ಣದೇವನು ತೀರ್ಮಾನಿಸಿದನು.

ಮಾರ್ಗದಲ್ಲಿ ಸಂಚರಿಸುತ್ತಿರುವುದರಿಂದ ಈ ಧನುಸ್ಸು ಇರುವ ಸ್ಥಳವನ್ನು ತಿಳಿದುಕೊಂಡು ಅಲ್ಲಿಗೆ ಹೋಗಿ, ಧನುಸ್ಸಿನ ಸಮೀಪಕ್ಕೆ ಬಂದನು. ಧನುಸ್ಸನ್ನು ಕಾಯುವುದಕ್ಕಾಗಿ ನಿಂತಿರುವ ಕೆಲವು ಸೈನಿಕರು ಧನುಸ್ಸಿನ ಸಮೀಪಕ್ಕೆ ಹೋಗದಂತೆ ಅಡ್ಡಗಟ್ಟಿದರು. ಅವರನ್ನು ಶ್ರೀಕೃಷ್ಣದೇವನು ಲಕ್ಷ್ಯಮಾಡಲಿಲ್ಲ. ಎಡಗೈಯಿಂದ ಅಲಕ್ಷ್ಯವಾಗಿ ಧನುಸ್ಸನ್ನು ಎತ್ತಿದನು. ಆ ಧನುಸ್ಸಿನಲ್ಲಿ ಕಟ್ಟಿರುವ ಹಗ್ಗವನ್ನು ಬಲಗೈಯಿಂದ ಶೆಳೆದನು. ಮದಿಸಿದ ಆನೆಯು ಮೃದುವಾದ ಕಬ್ಬಿನ ಕೋಲನ್ನು ಮುರಿಯಲು ಆಯಾಸ ಪಡುತ್ತದೆಯೇ? ಅದರಂತೆ ಶ್ರೀಕೃಷ್ಣದೇವನಿಗೆ ಈ ಧನುಸ್ಸನ್ನು ಮುರಿಯಲು ಆಯಾಸವಿದೆಯೇ? ಆ ಧನುಸ್ಸು ಅಪರಿಮಿತ ಶಕ್ತಿಯಿಂದ ಯುಕ್ತನಾದ ಶ್ರೀಕೃಷ್ಣದೇವನ ಶಕ್ತಿಯನ್ನು ಸಹಿಸಲು ಶಕ್ತವಾಗಲಿಲ್ಲ. ಮಧ್ಯದಲ್ಲಿ ತುಂಡಾಯಿತು. ತುಂಡಾಗುವಾಗ ಭಯಂಕರವಾದ ಶಬ್ದವು ಈ ಶಬ್ದವನ್ನು ಕಂಸನು ಕೇಳಿದನು. ಅತಿ ಧೈರ್ಯದಿಂದ ಯುಕ್ತನಾಗಿದ್ದರೂ ತುಂಬಾ ಹೆದರಿದವನಾಗಿ. ಕೆಳಗೆ ಬಿದ್ದು ನಡುಗಲು ಆರಂಭಿಸಿದನು.

# ಶ್ರೀಕೃಷ್ಣದೇವನು ಕಂಸನ ಸೈನ್ಯವನ್ನು ಸಂಹರಿಸಿದ್ದು

**(೫೦) ಧನುಷಃ ರಕ್ಷಕಂ ಬಲಮಪಿ ಭಂಕ್ತ್ವಾ** - ಧನುಸ್ಸನ್ನು ರಕ್ಷಿಸುವ ಸರ್ವಸೈನ್ಯವನ್ನು ಸಂಹರಿಸಿದನು.

ವಿಶೇಷಾರ್ಥ - ತದ್ರಕ್ಷಕಸರ್ವಬಲಂ ಹತ್ವಾ, ಗೋಪೈಃ ಸಹ ಉಪವನಂ ಪ್ರಾಪ್ಯ ಕ್ಷೀರಾನ್ನಂ ಭುಕ್ತ್ವಾ, ರಾತ್ರಿಂ ಸುಖೇನ ನೀತ್ವಾ, ಪ್ರಾತರುತ್ಥಾಯ ಕೃತಾಹ್ನಿಕಃ ಕಂಸೇನ ಕಾರ್ಯಮಾಣಮಲ್ಲಕ್ರೀಡಾಂ ದ್ರಷ್ಟುಂ ಬಲರಾಮಾದಿಭಿರ್ವೃತಃ ರಂಗದ್ವಾರಂ ಸಮಾಸಾದ್ಯ.

ಆಗ ಧನುಸ್ಸನ್ನು ರಕ್ಷಿಸುವುದಕ್ಕಾಗಿ ಕಂಸನಿಂದ ಆಜ್ಞಾಪಿಸಲ್ಪಟ್ಟ ಸೈನಿಕರೆಲ್ಲರೂ ಯುದ್ಧಕ್ಕೆ ಬಂದರು. ಧನುಸ್ಸಿನ ಎರಡು ತುಂಡುಗಳಲ್ಲಿ ಒಂದು ತುಂಡನ್ನು ಬಲರಾಮನೂ ಇನ್ನೊಂದು ತುಂಡನ್ನು ಶ್ರೀಕೃಷ್ಣದೇವನೂ ಸ್ವೀಕರಿಸಿದರು. ಆ ತುಂಡುಗಳಿಂದ ಹೊಡೆದು ಎಲ್ಲಾ ಸೈನಿಕರನ್ನೂ ಸಂಹರಿಸಿದರು. ಇದನ್ನು ತಿಳಿದ ಕಂಸನು ಅವರಿಬ್ಬರನ್ನು ಸಂಹರಿಸುವುದಕ್ಕಾಗಿ ಅಪರಿಮಿತವಾದ ಸೈನ್ಯವನ್ನು ಕಳುಹಿಸಿದನು. ಆ ಸೈನ್ಯವನ್ನೂ ಅವರಿಬ್ಬರು ಸಂಹರಿಸಿ ಆ ಸ್ಥಳದಿಂದ ಹೊರಟರು. ಅವರಿಬ್ಬರ ವಿಚಿತ್ರಸಾಮರ್ಥ್ಯವನ್ನು ಕಂಡ ಪಟ್ಟಣಿಗರು ತುಂಬಾ ಆಶ್ಚರ್ಯದಿಂದ ಯುಕ್ತರಾದರು. ಅವರಿಬ್ಬರು ಗೊಲ್ಲರಿಂದ ಸಹಿತರಾಗಿ ಮಥರಾಪಟ್ಟಣದ ಉಪವನಕ್ಕೆ ಬಂದರು. ಕ್ಷೀರಾನ್ನವನ್ನು ಬಂಧುಸಮೇತರಾಗಿ ಭಕ್ಷಿಸಿದರು. ಸುಖವಾಗಿ ಮಲಗಿದರು. ಮರುದಿನ ಬೆಳಗಾಯಿತು. ಸರ್ವರೂ ಪ್ರಾತಃಕಾಲದಲ್ಲಿ ಮಾಡಬೇಕಾದ ಆಹ್ನೀಕಗಳೆಲ್ಲವನ್ನೂ ಮುಗಿಸಿಕೊಂಡರು. ಕಂಸನು ಜಟ್ಟಿಗಳ ಕಾಳಗವನ್ನು ಏರ್ಪಡಿಸಿರುವ ಸಮಾಚಾರವನ್ನು ತಿಳಿದರು. ಅದನ್ನು ನೋಡುವುದಕ್ಕಾಗಿ ಎಲ್ಲಾ ಗೊಲ್ಲರಿಂದಲೂ ಯುಕ್ತರಾಗಿ ಹೊರಟು ರಂಗಸ್ಥಳದ ಮಹಾದ್ವಾರಕ್ಕೆ ಬಂದರು.

## ಕಂಸನ ಭಯಾತಿರೇಕ

ಕಂಸನಿಗೆ ತುಂಬಾ ಭಯವು ಏರ್ಪಟ್ಟಿತು. ಅಂದು ರಾತ್ರಿ ನಿದ್ರೆಯೇ ಬರಲಿಲ್ಲ. ಭಯವು ಏರ್ಪಟ್ಟಾಗ ಭಯಕ್ಕೆ ಸಂಬಂಧಿಸಿದ ಮಾತುಗಳೂ ಧೈರ್ಯವನ್ನು ತುಂಬಾ ಪ್ರಯಾಸದಿಂದ ತಂದುಕೊಂಡಾಗ ಧೈರ್ಯದ ಮಾತುಗಳೂ ಅವನ ಬಾಯಿಯಿಂದ ಹೊರಟವು. ಆ ಮಾತುಗಳನ್ನು ಈಗ ಸಂಕ್ಷೇಪವಾಗಿ ತಿಳಿಸುವೆವು. ಈ ಮಾತುಗಳಲ್ಲಿ ಉತ್ತರಗಳೆಲ್ಲವೂ ಶ್ರೀಕೃಷ್ಣದೇವನ ಕಡೆಯಿಂದ ಬಂದಿರುವ ಶ್ರೀಕೃಷ್ಣಭಯ ಎಂಬ ಮಾತುಗಳೆಂದೂ ಪ್ರಶ್ನೆಗಳು ಕಂಸನ ಮಾತುಗಳೆಂದೂ ತಿಳಿಯಿರಿ.

ಪ್ರಶ್ನೆ :- ಎಲೈ, ನನ್ನ ಧೈರ್ಯಗಳನ್ನೆಲ್ಲಾ ಕಡಿಮೆಯಾಗುವಂತೆ ಮಾಡುತ್ತಿರುವ ನೀನು ಯಾರು?

ಉತ್ತರ :- ನಿನ್ನ ಮೃತ್ಯುವಿನ ಕಡೆಯಿಂದ ಬಂದಿರುವ ದೂತನು ನಾನು.

ಪ್ರಶ್ನೆ :- ಭೂಲೋಕದಲ್ಲಿ ನನ್ನ ಮೃತ್ಯುವು ಎಲ್ಲಿ ಇರುವನು?

ಉತ್ತರ :- ಭೂಲೋಕದಲ್ಲಿ ಮಾತ್ರವಲ್ಲ. ಎಲ್ಲಾ ಲೋಕಗಳಲ್ಲಿಯೂ ಒಳಗೂ ಹೊರಗೂ ಇರುವನು.

ಪ್ರಶ್ನೆ :- ನನ್ನ ಮೃತ್ಯುವು ಎಲ್ಲಾ ಲೋಕಗಳ ಒಳಗೂ ಹೊರಗೂ ಇದ್ದರೆ ಅವನ ಹೆಸರು ಪ್ರಸಿದ್ಧವಾಗುತ್ತಿತ್ತು. ಅವನ ಹೆಸರು ಯಾರಿಗೂ ತಿಳಿಯದು. ಆದ್ದರಿಂದ ಅವನು ಎಲ್ಲಾ ಲೋಕಗಳಲ್ಲಿಯೂ ಒಳಗೂ ಹೊರಗೂ ವ್ಯಾಪಿಸಿರುವನೆಂದು ಹೇಳುವುದು ಯುಕ್ತವಲ್ಲ.

ಉತ್ತರ :- ದೇವಕೀದೇವಿಯ ವಿವಾಹವು ಮುಗಿದು ಅವಳನ್ನು ಗಂಡನ ಮನೆಗೆ ಕರೆದುಕೊಂಡು ಹೋಗುತ್ತಿರುವಾಗ ಅಶರೀರವಾಣಿಯು ಏರ್ಪಟ್ಟಿತಲ್ಲವೇ? ಆ ಅಶರೀರವಾಣಿಯಲ್ಲಿ ದೇವಕೀದೇವಿಯ ಎಂಟನೆಯ ಮಗನು ನಿನಗೆ ಮೃತ್ಯು ಎಂದು ಹೇಳಲಿಲ್ಲವೇ? ಆದ್ದರಿಂದ ನಿನ್ನ ಶತ್ರುವು ಅಪ್ರಸಿದ್ಧನೆಂದು ಹೇಳುವುದು ಮೂರ್ಖತನದ ಮಾತಾಗಿದೆ.

ಪ್ರಶ್ನೆ:- ದೇವಕೀದೇವಿಯ ಎಲ್ಲಾ ಮಕ್ಕಳನ್ನೂ ಸಂಹರಿಸಿರುವೆನು. ಹೀಗಿರುವಾಗ ಅವಳ ಎಂಟನೆಯ ಮಗನು ಎಲ್ಲಿರುವನು?

ಉತ್ತರ :- ದೇವಕೀದೇವಿಯ ಎಂಟನೆಯ ಮಗನಿಗೆ ಮರಣವಿಲ್ಲ. ಅವನನ್ನು ಕೊಲ್ಲಲು ನಿನ್ನಿಂದ ಸಾಧ್ಯವಿಲ್ಲ. ನೀನು ಕೊಲ್ಲಲೂ ಇಲ್ಲ. ನಿನ್ನ ಕಡೆಯ ಪೂತನೆ ಮುಂತಾದವರೆಲ್ಲರನ್ನೂ ಅವನು ಸಂಹರಿಸಿರುವನು.

ಪ್ರಶ್ನೆ :- ಬೆಟ್ಟದಂತಿರುವ ಜಟ್ಟಿಗಳೂ ಪ್ರಸಿದ್ಧವಾದ ಸೈನ್ಯವೂ ಹತ್ತು ಸಾವಿರ ಆನೆಗಳ ಬಲವುಳ್ಳ ಕುವಲಯಾಪೀಡ ಎಂಬ ಆನೆ ಇವುಗಳೆಲ್ಲವೂ ನನ್ನಲ್ಲಿವೆ. ಇಂತಹ ನನ್ನನ್ನು ಸಂಹರಿಸಲು ಶಕ್ತಿ ಯುಳ್ಳ ಮೃತ್ಯುವು ಯಾರಿರುವನು?

ಉತ್ತರ:- ಶ್ರೀಕೃಷ್ಣದೇವನ ಭಯವೆಂದು ಪ್ರಸಿದ್ಧನಾಗಿರುವ ನಾನು ನಿನ್ನ ಮನಸ್ಸಿನಲ್ಲಿ ಪ್ರವೇಶಿಸಿಬಿಟ್ಟೆನು. ಪ್ರತಿಕ್ಷಣದಲ್ಲಿಯೂ ಬೆಳೆಯುತ್ತಾ ಬರುತ್ತಿರುವೆನು. ನೀನು ನೋಡುತ್ತಿರುವ ಒಂದೊಂದು ವಸ್ತುಗಳಲ್ಲಿಯೂ ನಾನಾ ವಿಧವಾದ ಸಾವಿರಾರು ಸಂಶಯಗಳನ್ನು ಏರ್ಪಡಿಸುತ್ತಿರುವನು. ಎಲ್ಲಾ ವಸ್ತುಗಳಿಂದಲೂ ಹೆದರಿಕೆಯನ್ನು ಕೊಡುತ್ತಿರುವೆನು. ಎಲೋ ಕಂಸನೇ! ಶ್ರೀಕೃಷ್ಣದೇವನು ಯಾವನ ದೇಹವನ್ನು ಬಿಟ್ಟು ಹೋಗಬೇಕೆಂದು ಸಂಕಲ್ಪಿಸುವನೋ ಆವಾಗ ತತ್ತ್ವಾಭಿಮಾನಿದೇವತೆಗಳೆಲ್ಲರೂ ಕೂಡಲೇ ಅವನ ದೇಹವನ್ನು ಬಿಟ್ಟು ಹೋಗಬೇಕೆಂದು ತೀರ್ಮಾನಿಸುವರು. ಅವರೆಲ್ಲರೂ ದೇಹವನ್ನು ಬಿಟ್ಟುಹೋಗಲು ಸಂಕಲ್ಪಿಸಿದ ಕೂಡಲೇ ಅವನ ದೇಹದಲ್ಲಿ ಯಾವ ಇಂದ್ರಿಯಗಳೂ ಕೆಲಸವನ್ನು ಮಾಡಲಾರವು. ಕುರುಡನೂ ಕಿವುಡನೂ ಮೂಗನೂ ವಿವೇಕಹೀನನೂ ಆಗುವನು. ಅವರೆಲ್ಲರೂ ದೇಹವನ್ನು ಬಿಟ್ಟು ಹೋದಮೇಲೆ ಕೊನೆಗೆ ಶ್ರೀಕೃಷ್ಣದೇವನು ಆ ದೇಹವನ್ನು ಬಿಟ್ಟು ಹೊರಡುವನು. ಅವನು ಹೊರಟ ಕೂಡಲೇ ಸರ್ವರೂ ಯಮಲೋಕವನ್ನು ಪಡೆಯುವರು. ಹೀಗಿರುವಾಗ ಅವನ ಮುಂದೆ ಬಲಿಷ್ಠರಾದ ಜಟ್ಟಿಗಳಾಗಲೀ ಅತಿಬಲಿಷ್ಠವಾದ ಕುವಲಯಾಪೀಡ ಎಂಬ ಆನೆಯಾಗಲೀ ನೀನಾಗಲೀ ನಿನ್ನ ಸೇವಕರಾಗಲೀ ಏನು ಮಾಡಬಲ್ಲರು?

ಪ್ರಶ್ನೆ:- ನೀನು ಭ್ರಾಂತನಾಗಿರುವಿ. ನನ್ನ ಮುಂದೆ ನನಗೆ ವಿರುದ್ಧವಾದ ಮಾತುಗಳನ್ನು ಆಡಬೇಡ. ಜಾಗ್ರತೆ.

ಉತ್ತರ:- ನಿನ್ನ ಮನಸ್ಸನ್ನು ಶ್ರೀಕೃಷ್ಣಭಯವೆಂಬ ನಾನು ವಶಪಡಿಸಿಕೊಂಡಿರುವೆನು. ಆದ್ದರಿಂದ ಭ್ರಾಂತಿಯೂ ವಿಪರೀತ ಭಾಷಣವೂ ನಿನ್ನಲ್ಲಿಯೇ ಇದೆ. ನಾನು ಭ್ರಾಂತನೂ ಅಲ್ಲ. ವಿಪರೀತವಾದ ಮಾತುಗಳನ್ನು ಆಡುತ್ತಲೂ ಇಲ್ಲ.

ಪ್ರಶ್ನೆ:- ನನ್ನ ಖಡ್ಗದಿಂದ ನಿನ್ನನ್ನು ಸಂಹರಿಸುವೆನು ಜಾಗ್ರತೆ.

ಉತ್ತರ:- ನಾನು ನಿನ್ನನ್ನು ಆಶ್ರಯಿಸಿಬಿಟ್ಟೆನು. ನೀನು ಖಡ್ಗವನ್ನು ಎತ್ತಬಹುದು. ಆದರೆ ಆ ಖಡ್ಗವು ನನ್ನನ್ನು ಸಂಹರಿಸಲಾರದು. ನಿನ್ನ ಕೈಯಿಂದ ಜಾರಿ ನಿನ್ನ ಮೇಲೆಯೇ ಬೀಳುವುದು. ನಿನ್ನನ್ನೇ ಸಂಹರಿಸುವುದು. ನಾನು ಶ್ರೀಕೃಷ್ಣಭಯ ಎಂದು ಪ್ರಸಿದ್ಧನಾಗಿರುವವನು. ಶ್ರೀಕೃಷ್ಣದೇವನ ಸೇವಕನು. ನನ್ನನ್ನು ಸಂಹರಿಸುವ ಶಕ್ತಿಯುಳ್ಳವನು ಹದಿನಾಲ್ಕು ಲೋಕಗಳಲ್ಲಿ ಯಾರಿರುವನು?

ಪ್ರಶ್ನೆ:- ಎಲೈ ಶ್ರೀಕೃಷ್ಣಭಯವೇ, ನೀನು ನಪುಂಸಕಲಿಂಗವಾದ "ಭಯಂ" ಎಂಬ ಹೆಸರಿನಿಂದ

ಕರೆಯಲ್ಪಡುತ್ತಿರುವಿ. ಆದ್ದರಿಂದ ನಪುಂಸಕನೇ ಆಗಿರುವಿ. ನಪುಂಸಕನಾದ ನೀನು ಯಾವ ಕಾರ್ಯವನ್ನು ಮಾಡುವ ಯೋಗ್ಯತೆಯುಳ್ಳವನಾಗಿರುವಿ?

ಉತ್ತರ :- ನಾನು ನಪುಂಸಕಲಿಂಗವಾದ "ಭಯಂ" ಎಂಬ ಹೆಸರಿನಿಂದ ಪ್ರಸಿದ್ಧನಾಗಿರುವುದು ನಿಜ ಆ ಹೆಸರಿನಲ್ಲಿಯೂ ಕೊನೆಯಲ್ಲಿ ಅಂದರೆ ಶಿರಸ್ಸಿನಲ್ಲಿ ನಪುಂಸಕಲಿಂಗದ ಪ್ರಧಾನಚಿಹ್ನವಾದ"ಂ" ಎಂಬ ಚಿಹ್ನವನ್ನು ಧರಿಸಿರುವುದೂ ನಿಜ. ನಿನ್ನ ಮೇಲೆ ನಪುಂಸಕತ್ವವನ್ನು ಹೊರಿಸುವುದಕ್ಕಾಗಿಯೇ ನಪುಂಸಕತ್ವವಿಲ್ಲವೆಂದೂ ನಿನ್ನಲ್ಲಿ ನಪುಂಸಕತ್ವವನ್ನು ಹೊರಿಸಿರುವೆನೆಂದೂ ಈಗ ಸ್ಪಷ್ಟವಾಗಿ ತಿಳಿಸುತ್ತಿರುವೆನು.

ವಾಯುದೇವನು ನನ್ನಿಂದಲೇ (ಶ್ರೀಕೃಷ್ಣದೇವನ ಭಯದಿಂದಲೇ) ಯಾವಾಗಲೂ ಸಂಚರಿಸುತ್ತಿರುವನು. ಅಗ್ನಿದೇವನು ತನ್ನಲ್ಲಿ ಹಾಕಿದ ವಸ್ತುಗಳನ್ನು ಪಕ್ವ ಮಾಡುತ್ತಿರುವನು ಸೂರ್ಯನು ಸಕಾಲದಲ್ಲಿ ಉದಯಿಸುತ್ತಿರುವನು. ಶ್ರೀಕೃಷ್ಣದೇವನು ಮಾತ್ರ ನನ್ನ ಅಧೀನನಲ್ಲ. ಅವನನ್ನು ಬಿಟ್ಟು ಎಲ್ಲಾ ಜೀವಜಡಾತ್ಮಕವಾದ ಪ್ರಪಂಚವು ನನ್ನ ಅಧೀನವೆಂದು ತಿಳಿ.

ನನ್ನ ಶಕ್ತಿಯನ್ನು ಹೇಳುತ್ತೇನೆ ಕೇಳು ನಾನು ಯಾರ ಮನಸ್ಸಿನಲ್ಲಿ ಪ್ರವೇಶಿಸಿರುವೆನೋ ಅವನ ಸಾಮರ್ಥ್ಯವು ನಿಷ್ಫಲವಾಗುತ್ತದೆ. ಅವನ ಮುಖವು ಬಾಡಿ ಹೋಗುತ್ತದೆ ಮತ್ತು ಬೆವರಿನಿಂದ ಯುಕ್ತವಾಗುತ್ತದೆ. ಅವನ ಶರೀರವು ನಡುಕದಿಂದ ಯುಕ್ತವಾಗುತ್ತದೆ. ಕಣ್ಣುಗಳು ಇಲ್ಲಿಯೂ ಅಲ್ಲಿಯೂ ನೋಡುತ್ತಾ ಚಾಂಚಲ್ಯವನ್ನು ಪಡೆಯುತ್ತವೆ. ಮನಸ್ಸು "ಏನು ಮಾಡಲಿ" ಎಂದು ಚಿಂತೆಯನ್ನು ಪಡೆಯುತ್ತದೆ. ಮಾತುಗಳು " ನಾನು ನಿನ್ನ ದಾಸನಾಗಿರುವೆನು" ಮುಂತಾದ ರೀತಿಯಿಂದ ದೈನ್ಯವನ್ನು ವ್ಯಕ್ತಪಡಿಸುತ್ತವೆ. "ಯಾವ ವೈಭವಗಳೂ ಬೇಡ" ಎಂದು ವೈರಾಗ್ಯವು ತೋರುತ್ತದೆ. ಸುಖಸಾಮಾಗ್ರಿಗಳೆಲ್ಲವನ್ನೂ ಪರಿತ್ಯಜಿಸುವಂತೆ ಮಾಡುತ್ತದೆ. ನಾಚಿಕೆ ಮರ್ಯಾದೆ ಕೀರ್ತಿ ಮುಂತಾದ ಎಲ್ಲಾ ಗುಣಗಳ ಹಾನಿಯೂ ಏರ್ಪಡುತ್ತದೆ. ನನ್ನ ಪ್ರಭಾವವು ನಿನಗೆ ತಿಳಿಯಿತೇ? ನನ್ನನ್ನು ನಪುಂಸಕನೆಂದು ಹೀಯಾಳಿಸಬೇಡ.

ಪ್ರಶ್ನೆ :- ಎಲೈ ಕೃಷ್ಣಭಯವೇ! ನೀನು ನನ್ನ ಮನಸ್ಸಿನೊಳಗೆ ಕುಳಿತುಕೊಂಡು ಬಾಯಿಗೆ ಬಂದಂತೆ ಬೊಗಳುತ್ತಿದ್ದೀ, ನನ್ನ ಮನಸ್ಸಿನಲ್ಲಿರಲು ನೀನು ಯಾರು? ಬೇಗನೆ ಹೊರಗೆ ಹೋಗು.

ಉತ್ತರ:- ಎಲೋ ಕಂಸ! ನೀನು ಹೇಳಿದಂತೆ ನಿನ್ನ ಮನಸ್ಸನ್ನು ಬಿಟ್ಟು ಹೊರಗೆ ಹೋಗಲು ನಾನು ಸಿದ್ಧನಾಗಿರುವೆನು. ಆದರೆ ನೀನು ಕೃಷ್ಣದೇವನ ಕಾಲುಗಳನ್ನು ಗಟ್ಟಿಯಾಗಿ ಹಿಡಿ. " ಓ ಶ್ರೀಕೃಷ್ಣದೇವ! ನಾನು ನಿನ್ನ ದಾಸನಾಗಿರುವೆನು. ನನ್ನನ್ನು ರಕ್ಷಿಸು" ಎಂದು ಹೇಳು. ಹೀಗೆ ಹೇಳಿ ಅವನಲ್ಲಿ ಶರಣಾಗತನಾದರೆ ನಾನು ನಿನ್ನನ್ನು ಬಿಟ್ಟು ಹೋಗುವೆನು. ಹಾಗೆ ಮಾಡದಿದ್ದರೆ ಇಲ್ಲಿಯೂ ಪರಲೋಕದಲ್ಲಿಯೂ ನಿನ್ನನ್ನು ನಾನು ಬಿಡಲಾರೆನು. ಶ್ರೀಕೃಷ್ಣದೇವನ ಭಕ್ತರ ಮನಸ್ಸುಗಳಲ್ಲಿ ಧೈರ್ಯ ಸ್ಥೈರ್ಯ ಮುಂತಾದ ಗುಣಗಳು ಪೂರ್ಣವಾಗಿರುತ್ತವೆ. ಅವುಗಳೆಲ್ಲಾ ಪೂರ್ಣವಾಗಿರುವ ಮನಸ್ಸಿನಲ್ಲಿ ಶ್ರೀಕೃಷ್ಣಭಯ ಎಂಬ ಹೆಸರುಳ್ಳ ನಾನು ವಾಸಿಸಲಾರೆನು. ಅಂತಹ ಮನಸ್ಸುಗಳು ನನ್ನ ಕ್ಷೇಮಕ್ಕೂ ಅಭಿವೃದ್ಧಿಗೂ ಕಾರಣವಾಗಿವೆ. ಆದ್ದರಿಂದ ನೀನು ಶ್ರೀಕೃಷ್ಣನ ವೈರಿಯಾಗಿರುವ ವರೆಗೆ ನಿನ್ನ ಮನಸ್ಸನ್ನು ಬಿಟ್ಟು ಹೊರಗೆ ಹೋಗಲಾರೆನು.

ನೀನು ರುದ್ರದೇವ, ಬ್ರಹ್ಮದೇವ, ಚಂದ್ರ, ಸೂರ್ಯ ಮುಂತಾದ ಯಾವ ದೇವತೆಗಳನ್ನು ಆಶ್ರಯಿಸಿದರೂ

ನಿನ್ನನ್ನು ಬಿಡಲಾರೆನು. ಸ್ವರ್ಗನರಕ ಮುಂತಾದ ಯಾವ ಲೋಕಗಳಿಗೆ ಹೋದರೂ ನಿನ್ನನ್ನು ಬಿಡಲಾರೆನು. ಈ ಲೋಕದಲ್ಲಿ ಯೇ ಸಾವಿರಾರು ಗೋಡೆಗಳು, ಪರ್ವತಗಳು, ಜ್ವಲಿಸುತ್ತಿರುವ ಬೆಂಕಿಗಳು ಮುಂತಾದವುಗಳ ಮಧ್ಯದಲ್ಲಿ ಆತ್ಮರಕ್ಷಣೆಯನ್ನು ಮಾಡಿಕೊಳ್ಳಬೇಕೆಂದು ಪ್ರಯತ್ನಿಸಿದರೂ ಕೃಷ್ಣವೈರಿಯಾದ ನಿನ್ನನ್ನು ಬಿಡಲಾರೆನು.

ಕಂಸ! ಭಯ ಎಂಬ ನನ್ನ ಜಾತಿಯ ವಸ್ತುವು ಯಾರನ್ನು ಆಶ್ರಯಿಸಿದೆಯೋ ಅವನ ಸ್ಥಿತಿಯನ್ನು ಹೇಳುವೆನು ಕೇಳು. ಅವನು ಯುದ್ಧಕ್ಕೆ ಹೋಗುವುದೇ ಇಲ್ಲ. ಹೋದರೂ ಶೂರರ ಹಿಂದೆ ನಿಂತು ತನ್ನನ್ನು ಕಾಪಾಡಿಕೊಳ್ಳಲು ಪ್ರಯತ್ನಿಸುವನು. ಮುಂದೆ ಹೋಗಲಾರನು. ಅವನ ಮುಂದೆ ಶತ್ರುವು ಬಂದಿರುವಾಗ ಶತ್ರುವನ್ನು ಕಣ್ಣೆತ್ತಿ ನೋಡಿ ಆಯುಧವನ್ನು ಪ್ರಯೋಗಿಸಲು ಶಕ್ತನಾಗಲಾರನು.ಆ ಆಯುಧವೂ ಶತ್ರುವಿನ ಮೇಲೆ ಬೀಳಲಾರದು. ನೆಲದಲ್ಲಿಯೇ ಬೀಳುತ್ತದೆ. ಅದೂ ಆಗಲೇ ಬೀಳುತ್ತದೆ. ಕೈಯಲ್ಲಿ ಒಂದು ಕ್ಷಣವೂ ಇರಲಾರದು. ಶತ್ರುವು ಎದುರಿಗೆ ಬಂದಕೂಡಲೇ ಅವನನ್ನು ಸ್ತುತಿಸಬೇಕೆಂಬ ಬುದ್ಧಿಯೂ ಬರುತ್ತದೆ. ಅವನನ್ನು ಸ್ತುತಿಸುವಾಗಲೂ ಹುಲ್ಲುಗಳನ್ನೂ ಬೆರಳುಗಳನ್ನೂ ಕಚ್ಚಿಕೊಂಡು ಸ್ತುತಿಸುತ್ತಿರುವನು. ಶತ್ರುವನ್ನು ನೋಡಿದ ಕೂಡಲೇ ನಡುಗುವನು. ಓಡುವಾಗ ಮುಗ್ಗರಿಸಿ ಬೀಳುವನು. ಎಲ್ಲರೂ ನಗುವ ಗತಿಯನ್ನು ಪಡೆಯುವನು. ಇಷ್ಟು ದುರ್ಗತಿಯನ್ನೂ ಪಡೆಯುವಂತೆ ನಾನೇ ಮಾಡುವೆನು.

" ಕಂಸನೆ! ಬೇರೆ ಕಥೆಯು ಇರಲಿ ನಿನ್ನ ಸ್ವಾನುಭವವನ್ನು ಹೇಳು. ನಿನ್ನ ಮನಸ್ಸನ್ನು ಈಗ ನಾನು ಸ್ವಾಧೀನಮಾಡಿಕೊಂಡಿರುವೆನು. ಈಗ ನಿನಗೆ ನಿದ್ದೆಯು ಬರುತ್ತಿದೆಯಾ? ಅರ್ಧನಿದ್ದೆಯೂ ಏರ್ಪಟ್ಟಾಗಲೂ ಒಳ್ಳೇ ಸ್ವಪ್ನಗಳನ್ನು ನೋಡುತ್ತಿರುವೆಯಾ? ನಿನ್ನ ಪ್ರತಿಬಿಂಬವನ್ನು ನೋಡಿದಾಗ ನಿನ್ನ ತಲೆಯು ಆ ಪ್ರತಿಬಿಂಬದಲ್ಲಿ ಕಾಣಿಸುತ್ತಿದೆಯಾ? ಎಚ್ಚರವಾಗಿರುವಾಗ ನಿನ್ನ ಶತ್ರುವನ್ನೇ ಯಾವಾಗಲೂ ಸ್ಮರಿಸುತ್ತಿಲ್ಲವಾ? ಎಲ್ಲೆಲ್ಲಿಯೂ ಶತ್ರುವು ಬಂದಂತೆ ನಿನಗೆ ತೋರುವುದಿಲ್ಲವೆ? ನಿನ್ನ ಮನಸ್ಸಿನಲ್ಲಿ ಧೈರ್ಯವಿದೆಯಾ? ನಿನ್ನ ಸೇವಕರೂ ಸೈನಿಕರೂ ಧೈರ್ಯವಂತರಾಗಿದ್ದಂತೆ ನೀನು ತಿಳಿಯುತ್ತಿರುವೆಯಾ? ನೀನು ಸುಖವನ್ನು ಬಯಸುತ್ತಿರುವಿ. ಆದರೆ ನಾನು ನಿನ್ನ ಮನಸ್ಸನ್ನು ವಶಪಡಿಸಿಕೊಂಡಿರುವೆನು. ಹೀಗಿರುವಾಗ ನಿನಗೆ ಸೌಖ್ಯವು ಬರುವ ಬಗೆ ಹೇಗೆ?"

ಮೇಲ್ಕಂಡ ರೀತಿಯಿಂದ ಕಂಸನು ಭೀತನಾದಾಗ ಹೇಳುವ ಮಾತುಗಳೆಲ್ಲವೂ ಪ್ರಶ್ನರೂಪವಾಗಿಯೂ ಸ್ವಲ್ಪ ಧೈರ್ಯವನ್ನು ಪಡೆದಾಗ ಹೇಳುವ ಮಾತುಗಳೆಲ್ಲವೂ ಉತ್ತರ ರೂಪವಾಗಿಯೂ ಪರಿಣಮಿಸಿದವು. ಇದರಿಂದ ಅವನಿಗೆ ಯಾವ ನಿರ್ಣಯವೂ ಏರ್ಪಡದೆ ಸಂದೇಹವು ಏರ್ಪಟ್ಟಿತು. ನಿದ್ರೆಯೇ ಬರಲಿಲ್ಲ. ನಿದ್ದೆ ಬಂದರೂ ಮರಣ ಸೂಚಕವಾದ ದುಃಸ್ವಪ್ನಗಳು ಏರ್ಪಟ್ಟವು. ಈ ಸ್ವಪ್ನಗಳಿಂದ ಯಾರೋ ತನ್ನನ್ನು ಕೊಲ್ಲಲಿಕ್ಕಾಗಿ ಬಂದಂತೆಯೂ ಅವನನ್ನು ಎದುರಿಸಿ ಜಗಳವಾಡುತ್ತಿರುವಂತೆಯೂ ಭಾವಿಸಿ ಎದ್ದು ಓಡಲೂ ಆರಂಭಿಸಿದನು.

## ಕುವಲಯಾಪೀಡ ಎಂಬ ಆನೆಯ ಸಂಹಾರ

**(೪೧) ತಂ ಕುಂಜರಂ ಮರ್ದಯನ್** - ಕುವಲಯಾಪೀಡ ಎಂಬ ಪ್ರಸಿದ್ಧವಾದ ಆನೆಯನ್ನು ಕೊಂದನು.

**ವಿಶೇಷಾರ್ಥ** - ತಸ್ಮಿನ್ನವಸ್ಥಿತಂ ಸ್ವಹನನಾರ್ಥಂ ಕಂಸೇನ ಸ್ಥಾಪಿತಂ ಸಾಂಬಷ್ಠಂ ಗಜಂ ಹತ್ವಾ.

**ವಿಶೇಷಾರ್ಥವಿವರಣ** - ಮರುದಿನ ಬೆಳಗಾಯಿತು. ಕಂಸನು ಅಂದಿನ ದಿನ ಕುವಲಯಾಪೀಡ ಎಂಬ

ಆನೆಯಿಂದ ಶ್ರೀಕೃಷ್ಣದೇವನನ್ನು ಸಂಹರಿಸಬೇಕೆಂದು ತೀರ್ಮಾನಿಸಿದನು. ರಂಗಸ್ಥಳದಲ್ಲಿ ಪಟ್ಟಣದಲ್ಲಿರುವ ಎಲ್ಲಾ ಜಾತಿಯ ಗಂಡಸರನ್ನೂ ಹೆಂಗಸರನ್ನೂ ಒಟ್ಟುಗೂಡಿಸಿದನು. ತಾನು ಉತ್ತಮವಾದ ಮಂಚದ ಮೇಲೆ ಕುಳಿತನು. ನಾನಾ ದೇಶಗಳ ರಾಜರು ಅವನ ಸುತ್ತಲೂ ಚಿಕ್ಕ ಚಿಕ್ಕ ಮಂಚಗಳಲ್ಲಿ ಕುಳಿತರು. ನಂದ, ಯಶೋದೆ ಮುಂತಾದ ಎಲ್ಲಾ ಗೊಲ್ಲರೂ ಅವರವರಿಗೆ ಯೋಗ್ಯವಾದ ಆಸನಗಳಲ್ಲಿ ಕುಳಿತರು. ರಂಗಸ್ಥಳದ ಮಹಾದ್ವಾರದಲ್ಲಿ ದೊಡ್ಡ ಆನೆಯನ್ನು ನಿಲ್ಲಿಸಿದನು. ಆ ಆನೆಯು ಕುವಲಯಾಪೀಡ ಅಂದರೆ ತನ್ನ ಭಾರದಿಂದ ಭೂಮಂಡಲವನ್ನು ಚೆನ್ನಾಗಿ ಪೀಡಿಸುವ ಶಕ್ತಿಯಿಂದ ಯುಕ್ತವಾದುದು ಎಂದು ಪ್ರಸಿದ್ಧವೂ ಹತ್ತುಸಾವಿರ ಆನೆಗಳ ಬಲದಿಂದ ಯುಕ್ತವೂ ಆಗಿತ್ತು. ರುದ್ರದೇವರ ವರಬಲದಿಂದ ಆ ಆನೆಯನ್ನು ಆ ಆನೆಯ ಮಾವಟಿಗನನ್ನೂ ಕೊಲ್ಲುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ. ಆ ಆನೆಯಿಂದ ರಂಗಸ್ಥಳದೊಳಗೆ ಶ್ರೀಕೃಷ್ಣದೇವನು ಬಂದಕೂಡಲೇ ಚಾಣೂರ, ಮುಷ್ಟಿಕ, ತೋಶಲಕ, ಶಲ ಮುಂತಾದ ಜಟ್ಟಿಗಳಿಂದ ಅವನನ್ನು ಕೊಲ್ಲಿಸಬೇಕು. ಆ ಜಟ್ಟಿಗಳಲ್ಲಿ ಚಾಣೂರನು ರುದ್ರದೇವರ ವರದಿಂದ ಯಾರಿಂದಲೂ ಸಂಹರಿಸಲು ಸಾಧ್ಯವಿಲ್ಲದವನು. ಆ ಜಟ್ಟಿಗಳಿಂದಲೂ ಶ್ರೀಕೃಷ್ಣದೇವನ ಸಂಹಾರವು ಅಸಾಧ್ಯವಾದರೆ ಅವನನ್ನು ಕೊಲ್ಲುವುದಕ್ಕಾಗಿ ತನ್ನ ಎಂಟು ಸಹೋದರರನ್ನು ನಿಲ್ಲಿಸಿದನು. ಅವರಲ್ಲಿ ಸುನೀಥ ಎಂಬುವವನು ಹಿಂದಿನ ಜನ್ಮದಲ್ಲಿ ವೃಕ ಎಂದು ಪ್ರಸಿದ್ಧನಾದ ದೈತ್ಯನಾಗಿದ್ದನು. ಆ ಜನ್ಮದಲ್ಲಿ ಅವನಿಗೆ ಏಳು ಜನ ದೈತ್ಯರು ತಮ್ಮಂದಿರಾಗಿ ಹುಟ್ಟಿದ್ದರು. ಅವರೇ ಈ ಜನ್ಮದಲ್ಲಿಯೂ ಸುನೀಥನಿಗೆ ಸಹೋದರರಾಗಿ ಹುಟ್ಟಿದರು. ಅವರಿಂದಲೂ ಶ್ರೀಕೃಷ್ಣದೇವನನ್ನು ಸಂಹರಿಸಲು ಸಾಧ್ಯವಾಗದಿದ್ದರೆ ತನ್ನ ಇಪ್ಪತ್ತು ಅಕ್ಷೌಹಿಣೀಸೈನ್ಯವನ್ನು ರಂಗಸ್ಥಳದ ಮಧ್ಯದಲ್ಲಿ ನಿಲ್ಲಿಸಿದನು. ರುದ್ರದೇವರ ವರದಿಂದ ಯುಕ್ತರಾದ ಅವರನ್ನು ಯಾರಿಂದಲೂ ಕೊಲ್ಲಲೂ ಸಾಧ್ಯವಿಲ್ಲ. ಅವರಿಂದಲೂ ಶ್ರೀಕೃಷ್ಣದೇವನನ್ನು ಸಂಹರಿಸಲು ಸಾಧ್ಯವಾಗದಿದ್ದರೆ ತಾನೇ ಶ್ರೀಕೃಷ್ಣದೇವನನ್ನು ಸಂಹರಿಸಬೇಕೆಂದು ತೀರ್ಮಾನಿಸಿದನು.

ಎಲ್ಲರೂ ರಂಗಸ್ಥಳದಲ್ಲಿ ತಮತಮಗೆ ಯೋಗ್ಯವಾದ ಆಸನಗಳಲ್ಲಿ ಕುಳಿತರು. ಕೊನೆಗೆ ಶ್ರೀಕೃಷ್ಣದೇವನು ರಂಗಸ್ಥಳದ ಮಹಾದ್ವಾರಕ್ಕೆ ಅಣ್ಣನಾದ ಬಲರಾಮನಿಂದ ಸಹಿತನಾಗಿ ಬಂದನು. ಆನೆಯು ಅಡ್ಡವಾಗಿ ನಿಂತಿರುವುದನ್ನು ನೋಡಿದನು. " ಮಾವಟಿಗನೇ! ಹಾದಿಯನ್ನು ಬಿಟ್ಟು ದೂರಕ್ಕೆ ಹೋಗು. ಹಾಗೆ ನೀನು ಹೋಗದಿದ್ದರೆ ಅತಿ ದೂರದಲ್ಲಿರುವ ಯಮಲೋಕಕ್ಕೆ ನಿನ್ನನ್ನು ಕಳುಹಿಸುವೆನು" ಎಂದು ಹೇಳಿದನು. ಆ ಮಾತುಗಳನ್ನು ಕೇಳಿದ ಮಾವಟಿಗನು. " ಎಲೋ ಗೊಲ್ಲಬಾಲಕನೇ! ನೀನು ಕಾಡಿನಲ್ಲಿ ವಾಸಿಸುತ್ತಿರುವ ಸಾಮಾನ್ಯಜನರಿಂದ ಮಾನ್ಯನಾಗಿರುತ್ತೀ. ನಾವೆಲ್ಲರೂ ಪಟ್ಟಣದಲ್ಲಿ ವಾಸಿಸುತ್ತಿರುವವರು. ಶತ್ರುಗಳ ಸಮೂಹಗಳೆಲ್ಲವನ್ನೂ ಆಯಾಸವಿಲ್ಲದಂತೆ ಸಂಹರಿಸುವ ವಿಷಯದಲ್ಲಿ ಸಿಂಹದಂತಿರುವವರು. ನಮ್ಮಲ್ಲಿರುವ ಬಲವೂ ಪಾಂಡಿತ್ಯವೂ ಕಾರ್ಯದಕ್ಷತೆಯೂ ಕಾಡಿನಲ್ಲಿ ವಾಸಿಸುತ್ತಿರುವ ನಿನಗೆ ಹೇಗೆ ಬಂದೀತು? ನಿಲ್ಲು, ನಿಲ್ಲು" ಎಂದನು.

ಶ್ರೀಕೃಷ್ಣದೇವನು ಈ ಮಾತುಗಳನ್ನು ಕೇಳಿದನು. ಈ ಮಾವಟಿಗನಲ್ಲಿ ಬಲ, ಪಾಂಡಿತ್ಯ, ಕಾರ್ಯದಕ್ಷತೆ ಎಂಬ ಮೂರು ಗುಣಗಳೂ ಇಲ್ಲವೆಂಬುದಾಗಿ ತಿಳಿಸಬೇಕೆಂದು ತೀರ್ಮಾನಿಸಿದನು. " ಎಲೋ ಮಾವಟಿಗನೇ! ನಾನು ಕಾಡಿನಲ್ಲಿ ವಾಸಿಸುತ್ತಿರುವುದಾಗಿ ನೀನು ಹೇಳಿದಿ. ಅದನ್ನು ನಾನು ಅಂಗೀಕರಿಸಿರುವೆನು. ಈಗ ನಿನ್ನ ಆನೆಯನ್ನು ಸಂಹರಿಸುವೆನು. ಆನೆಯನ್ನು ಸಂಹರಿಸುವ ಶಕ್ತಿಯು ಸಿಂಹಕ್ಕೆ ಹೊರತು ಇತರ ಪ್ರಾಣಿಗಿಲ್ಲ. ಕಾಡಿನಲ್ಲಿ

ಸಂಚರಿಸುತ್ತಿರುವ ನಾನು, ನಿನ್ನನ್ನೂ ನಿನ್ನ ಸಂಗಡಿಗರನ್ನೂ ಯಜಮಾನನನ್ನೂ ಪಟ್ಟಣಿಗರೆಂದೂ ಸಿಂಹಗಳೆಂದೂ ಹೇಳಿಕೊಳ್ಳುತ್ತಿರುವಿ. ಪಟ್ಟಣದಲ್ಲಿ ವಾಸಿಸುತ್ತಿರುವ ಸಿಂಹವು "ಗ್ರಾಮಸಿಂಹ" ಅಂದರೆ ನಾಯಿಯಲ್ಲವೇ? ಇದರಿಂದ ನಿನ್ನನ್ನೂ ನಿನ್ನ ಸಂಗಡಿಗರನ್ನೂ ಯಜಮಾನನ್ನೂ "ನಾಯಿ" ಎಂದು ನೀನೇ ಹೇಳಿದಂತಾಗಲಿಲ್ಲವೇ? ತನ್ನನ್ನೂ ತನ್ನ ಸಂಗಡಿಗರನ್ನೂ ತನ್ನ ಯಜಮಾನನನ್ನೂ "ನಾಯಿ" ಎಂದು ಹೇಳುತ್ತಿರುವ ನಿನ್ನ ಪಾಂಡಿತ್ಯವು ಅಪಾರವಾದುದು. ಇನ್ನು ಮುಂದೆ ನನ್ನ ಬಲ ಮತ್ತು ಕಾರ್ಯದಕ್ಷತೆಯನ್ನು ತಿಳಿಸುವೆನು." ಎಂದು ಹೇಳಿದನು.

ಆನೆಯನ್ನು ತನ್ನ ಕೈಯಿಂದ ಗುದ್ದಿದನು. ಆನೆಗೆ ತಲೆಯು ಸುತ್ತಲು ಆರಂಭಿಸಿತು. ಇದರಿಂದ ತನ್ನ ಬಲವನ್ನು ವ್ಯಕ್ತಪಡಿಸಿದನು. ಆನೆಯ ನಾಲ್ಕು ಕಾಲುಗಳ ಮಧ್ಯದಲ್ಲಿ ಪ್ರವೇಶಿಸಿದನು. ಆನೆಯ ಶ್ರೀಕೃಷ್ಣದೇವನನ್ನು ತನ್ನ ಶೊಂಡಿಲಿನಿಂದ ಹಿಡಿದೆಳೆಯಬೇಕೆಂದು ಪ್ರಯತ್ನಿಸಿತು. ಆದರೆ ಶ್ರೀಕೃಷ್ಣದೇವನಿರುವ ಸ್ಥಳವೇ ಆನೆಗೆ ತಿಳಿಯಲಿಲ್ಲ. ಇದರಿಂದ ತನ್ನ ಚಾತುರ್ಯವನ್ನು ವ್ಯಕ್ತಪಡಿಸಿದನು. ಇನ್ನೊಮ್ಮೆ ತನ್ನ ಅಪರಿಮಿತವಾದ ಬಲವನ್ನೂ ಚಾತುರ್ಯವನ್ನೂ ವ್ಯಕ್ತಪಡಿಸಬೇಕೆಂದು ತೀರ್ಮಾನಿಸಿದನು.

ಆನೆಯ ನಾಲ್ಕು ಕಾಲುಗಳ ಮಧ್ಯದಿಂದ ಹೊರಗೆ ಬಂದನು. ಆನೆಯ ಬಾಲವನ್ನು ಹಿಡಿದನು. ಆನೆಯನ್ನು ಶೆಳೆದುಕೊಂಡು ಬಹುದೂರದ ವರೆಗೆ ಹೋದನು. ಇದರಿಂದ ತನ್ನ ಬಲವನ್ನು ತಿಳಿಸಿದನು. ಬಾಲವನ್ನು ಬಿಟ್ಟನು. ಆನೆಯ ಮುಂದೆ ಬಂದನು. ಓಡಲು ಆರಂಭಿಸಿದನು. ಅವನನ್ನು ಅಟ್ಟಿಕೊಂಡು ಅವನ ಹಿಂದೆಯೇ ಆನೆಯು ಓಡಿಬಂತು. ಶ್ರೀಕೃಷ್ಣದೇವನು ಮುಗ್ಗರಿಸಿ ಕೆಳಗೆ ಬಿದ್ದಂತೆ ನಟಿಸಿದನು ಮರುಕ್ಷಣದಲ್ಲಿಯೇ ಎದ್ದು ಓಡಲು ಆರಂಭಿಸಿದನು. ಶ್ರೀಕೃಷ್ಣದೇವನು ಕೆಳಗೆ ಬಿದ್ದುದನ್ನು ನೋಡಿದ ಆನೆಯು ಅವನನ್ನು ತನ್ನ ದಂತಗಳಿಂದ ತಿವಿದು ಸಂಹರಿಸಬೇಕೆಂದು ತೀರ್ಮಾನಿಸಿತು. ಅತಿವೇಗದಿಂದ ತನ್ನ ದಂತಗಳಿಂದ ತಿವಿಯಿತು. ಆನೆಯ ದಂತಗಳು ಭೂಮಿಯನ್ನು ಮುಟ್ಟುವುದರೊಳಗೆ ಶ್ರೀಕೃಷ್ಣದೇವನು ಆ ಸ್ಥಳದಿಂದ ಎದ್ದು ಬಹುದೂರದವರೆಗೆ ಹೋಗಿದ್ದನು. ಆನೆಯ ಎರಡು ದಂತಗಳೂ ನೆಲದಲ್ಲಿ ಬಲವಾಗಿ ತಗಲಿದವು. ಇದರಿಂದ ಆ ದಂತಗಳು ಶಿಥಿಲವಾದವು. ಇದು ಶ್ರೀಕೃಷ್ಣದೇವನ ಅಪರಿಮಿತವಾದ ಚಾತುರ್ಯಕ್ಕೆ ಹೆಗ್ಗುರುತೆನಿಸಿತು.

ಶ್ರೀಕೃಷ್ಣದೇವನು ಭೂಮಿಯಲ್ಲಿ ಬಿದ್ದನೆಂದು ಆನೆಯು ಭ್ರಮಿಸಿತು. ಪತನಾದಿ ದೋಷಗಳಿಲ್ಲದಿರುವ ಶ್ರೀಕೃಷ್ಣದೇವನಿಗೆ ಪತನವು ಏರ್ಪಟ್ಟಿರುವುದಾಗಿ ತಿಳಿದುದಕ್ಕೆ ತಕ್ಕ ಫಲವನ್ನು ಅನುಭವಿಸಿತು. ತಿವಿಯುವುದಕ್ಕಾಗಿ ಪ್ರಯತ್ನಿಸಿದ ಆನೆಯ ದಂತಗಳು ಶಿಥಿಲಗಳಾಗಲಿಲ್ಲವೇ? ಬಾಯಿಯಲ್ಲಿ ಮಣ್ಣುಗಳೆಲ್ಲವೂ ವ್ಯಾಪಿಸಲಿಲ್ಲವೇ? ಮಿಥ್ಯಾಜ್ಞಾನವನ್ನು ಪಡೆಯದಿರುವ ಆನೆಯ ಬಾಯಿಯಲ್ಲಿ ಮಣ್ಣು ಬಿದ್ದದ್ದು ಮಿಥ್ಯಾಜ್ಞಾನದ ಫಲವಲ್ಲವೇ?

ಶ್ರೀಕೃಷ್ಣದೇವನು ತನ್ನ ಬಲ ಮತ್ತು ಚಾತುರ್ಯಗಳನ್ನು ಪುನಃ ವ್ಯಕ್ತಪಡಿಸಿದನು. ಕೊನೆಗೆ ಆನೆಯನ್ನು ಸಂಹರಿಸಬೇಕೆಂದು ತೀರ್ಮಾನಿಸಿದನು. ತನ್ನ ಕೈಗಳಿಂದ ಆನೆಯನ್ನು ಕೆಳಗೆ ತಳ್ಳಿ ಉರುಳಿಸಿದನು. ತನ್ನ ಎರಡು ಕಾಲುಗಳಿಂದ ಆನೆಯನ್ನು ಮರ್ದನ ಮಾಡಿದನು. ಅವನ ಕಾಲುಗಳ ಒದೆಗಳನ್ನು ಸಹಿಸಲಾರದೆ ಆನೆಯು ಸತ್ತು ಹೋಯಿತು. ಅದರ ಎರಡು ದಂತಗಳನ್ನೂ ಕೈಗಳಿಂದ ಕೀಳಿದನು. ಆ ದಂತಗಳಿಂದ ಆನೆಯ ಮಾವಟಿಗನನ್ನೂ ಆನೆಯ ಹಿಂದೆ ಬಂದಿರುವ ಎಲ್ಲಾ ಸೈನಿಕರನ್ನೂ ಸಂಹರಿಸಿದನು.

ಎರಡು ದಂತಗಳಲ್ಲಿ ಒಂದು ದಂತವನ್ನು ತಾನು ಕೈಯಲ್ಲಿ ಧರಿಸಿದನು. ಇನ್ನೊಂದು ದಂತವನ್ನು ಬಲರಾಮನ

ಕೈಯಲ್ಲಿ ಕೊಟ್ಟನು. ಆನೆಯ ದೇಹದಿಂದ ಹೊರಟಿರುವ ರಕ್ತದ ಬಿಂದುಗಳಿಂದ ವ್ಯಾಪಿಸಲ್ಪಟ್ಟ ದೇಹದಿಂದ ಯುಕ್ತನಾಗಿ ರಂಗಸ್ಥಳವನ್ನು ಪ್ರವೇಶಿಸಿದನು. ಇವನ ಉಗ್ರರೂಪವನ್ನು ನೋಡಿದವರಿಗೆ ಹಿರಣ್ಯಕಶಿಪುವನ್ನು ಸಂಹರಿಸಿರುವ ಶ್ರೀನರಸಿಂಹಸ್ವಾಮಿಯ ಉಗ್ರರೂಪದ ಸ್ಮರಣೆಯು ಬಂತು.

ಗಣಪತಿಯು ಒಂದು ದಂತದಿಂದ ಯುಕ್ತನಾಗಿರುವನು. ಅವನೇ ಎಲ್ಲಾ ವಿಘ್ನಗಳಿಗೂ ರಾಜನೆಂದೂ ಪ್ರಸಿದ್ಧನಾಗಿರುವನು. ಕಂಸನು ಯಮಲೋಕಕ್ಕೆ ಹೋಗಲು ಸಿದ್ಧನಾಗಿರುವನು. ಅವನು ಪುನಃ ಈ ಲೋಕಕ್ಕೂ ಬರಬಾರದು. ಪರಲೋಕದಲ್ಲಿಯೂ ಸ್ವರ್ಗ ಮುಂತಾದ ಉತ್ತಮಲೋಕಗಳಿಗೂ ಹೋಗಬಾರದು. ಈ ಎರಡು ಲೋಕಗಳಿಗೂ ಹೋಗದಂತೆ ಅವನಿಗೆ ವಿಘ್ನವನ್ನು ಮಾಡಬೇಕು. ಈ ಲೋಕಗಳಲ್ಲಿ ಹುಟ್ಟುವ ವಿಷಯದಲ್ಲಿ ವಿಘ್ನವನ್ನು ಮಾಡುವುದಕ್ಕಾಗಿ ಒಬ್ಬ ವಿಘ್ನರಾಜನೂ ಪರಲೋಕದ ವಿಷಯದಲ್ಲಿ ವಿಘ್ನವನ್ನು ಮಾಡುವುದಕ್ಕಾಗಿ ಇನ್ನೊಬ್ಬ ವಿಘ್ನರಾಜನೂ ಬೇಕು. ಅದಕ್ಕಾಗಿ ಎರಡು ವಿಘ್ನರಾಜರಂತೆ ಬಲರಾಮನೂ ಶ್ರೀಕೃಷ್ಣದೇವನು ಒಂದೊಂದು ದಂತಗಳನ್ನು ಸ್ವೀಕರಿಸದರಾಗಿ ರಂಗಸ್ಥಳವನ್ನು ಪ್ರವೇಶಿಸಿದರು.

ಇವರಿಬ್ಬರನ್ನು ರಂಗಸ್ಥಳದಲ್ಲಿರುವ ಸರ್ವರೂ ನೋಡಿದರು. ಅಲ್ಲಿದ್ದ ಭಕ್ತರೆಲ್ಲರೂ ಅಪಾರ ಭಕ್ತಿಯಿಂದ ಇವರಿಬ್ಬರ ಸುಂದರ ಮೂರ್ತಿಗಳನ್ನು ನೋಡಿ ಮೈಮರೆತರು. ದ್ವೇಷಗಳು ಇವರಿಬ್ಬರ ಮರಣವನ್ನು ಆಶಿಸಿದರು. ಉದಾಸೀನರಾದ ಜೀವರು ಭಕ್ತಿಯನ್ನೂ ದ್ವೇಷವನ್ನೂ ವ್ಯಕ್ತಪಡಿಸಲಿಲ್ಲ.

(೫೨) ಚಾಣೂರಪೂರ್ವಾನ್ ಮಲ್ಲಾನಪಿ ಮರ್ದಯನ್ (ಚಾಣೂರನೇ ಮೊದಲಾದ ಜಟ್ಟಿಗಳನ್ನು ಮರ್ದನ ಮಾಡಿದನು).

ವಿಶೇಷಾರ್ಥ - ಚಾಣೂರಾಖ್ಯಮಲ್ಲೇನ ಯುದ್ಧಾರ್ಥಮಾಹೂತಃ ತಂ ಹತ್ವಾ, ಬಲರಾಮೇಣ ಮುಷ್ಟಿಕಂ ಘಾತಯಿತ್ವಾ, ಅನ್ಯಾನ್ ದ್ರಾವಯಿತ್ವಾ,

ಚಾಣೂರ ಎಂಬ ಜಟ್ಟಿಯು ಶ್ರೀಕೃಷ್ಣದೇವನನ್ನು ಯುದ್ಧಕ್ಕಾಗಿ ಕರೆದನು. ಅವನನ್ನು ಕೊಂದನು. ಮುಷ್ಟಿಕನನ್ನು ಬಲರಾಮನಿಂದ ಕೊಲ್ಲಿಸಿದನು. ಉಳಿದ ಜಟ್ಟಿಗಳನ್ನು ಓಡಿಸಿದನು.

ವಿಶೇಷಾರ್ಥ ವಿವರಣ :- ಚಾಣೂರನು ಶ್ರೀಕೃಷ್ಣದೇವನನ್ನು ನೋಡಿದನು. "ರಾಜನು ದೇವತೆಯಾಗಿರುವನೆಂದೂ ಅವನನ್ನು ಸಂತೋಷಪಡಿಸಿದರೆ ಸಕಲ ಸಿದ್ಧಿಯು ಏರ್ಪಡುವುದಾಗಿಯೂ ಬ್ರಾಹ್ಮಣರು ಹೇಳುವತ್ತಿರುವರು. ಇಂತಹ ರಾಜನ ಪ್ರೀತಿಗಾಗಿ ನನ್ನೊಡನೆ ನೀನೂ ಮುಷ್ಟಿಕನೊಡನೆ ಬಲರಾಮನೂ ಯುದ್ಧವನ್ನು ಮಾಡಬೇಕು" ಎಂದನು. ಶ್ರೀಕೃಷ್ಣದೇವನು ಅವನ ಮಾತುಗಳನ್ನು ಅಂಗೀಕರಿಸಿದನು. ಶ್ರೀಕೃಷ್ಣದೇವನ ಭಕ್ತಿಯು ಸಂಸಾರವನ್ನು ಎದುರಿಸಿದಂತೆ ಶ್ರೀಕೃಷ್ಣದೇವನು ಚಾಣೂರನನ್ನೂ ಶ್ರೀಕೃಷ್ಣದೇವನ ಮಾಹಾತ್ಮ್ಯಜ್ಞಾನವು ಪಾಪಸಮೂಹವನ್ನು ಎದುರಿಸಿದಂತೆ ಶ್ರೀಬಲರಾಮದೇವನು ಮುಷ್ಟಿಕನನ್ನೂ ಎದುರಿಸಿದನು. ಬಲವಾದ ದ್ವಂದ್ವಯುದ್ಧಗಳೂ ನಡೆದವು. ಕೊನೆಗೆ ಶ್ರೀಕೃಷ್ಣದೇವನು ಚಾಣೂರನ ಎರಡು ಕಾಲುಗಳನ್ನು ಹಿಡಿದನು. ಗರ ಗರ ತಿರುಗಿಸಿ. ಕೆಳಗೆ ಅಪ್ಪಳಿಸಿದನು. ಚಾಣೂರನ ತಲೆಯು ಪುಡಿಪುಡಿಯಾಗಿ ಸತ್ತನು.

ಕಂಸನು ನಿತ್ಯನರಕಕ್ಕೆ ಹೊರಟಿರುವನು. ಅವನಿಗೆ ಹಾದಿಯಲ್ಲಿ ಯಾವ ವಿಘ್ನವೂ ಏರ್ಪಡಬಾರದು.

ನಿರ್ವಿಘ್ನವಾಗಿ ನಿತ್ಯನರಕಕ್ಕೆ ಹೋಗಿ ಸೇರಬೇಕು. ಅದಕ್ಕಾಗಿ ಅವನು ದಿಗ್ವಿಜಯಕ್ಕಾಗಿ ಹೊರಟಿರುವ ಸುಮುಹೂರ್ತಕಾಲದಲ್ಲಿ ಅವನ ಶಿಷ್ಯರು ಅವನಿಗೆ ತೆಂಗಿನಕಾಯಿಯನ್ನು ಸುತ್ತಿ ಒಡೆಯಬೇಕು.

ಶ್ರೀಕೃಷ್ಣದೇವನು ಕಂಸನ ಸೋದರಳಿಯನು. ಕಂಸನಿಗೆ ಶಿಷ್ಯನಂತಿರುವವನು. ಈ ಸುಮುಹೂರ್ತದಲ್ಲಿ ಕಂಸನಿಗೂ ತೆಂಗಿನಕಾಯಿಯನ್ನು ಸುತ್ತಿ ಒಡೆಯಬೇಡವೇ? ಶ್ರೀಕೃಷ್ಣದೇವನ್ನು ಅದಕ್ಕಾಗಿ ಅವನ ಮುಂದೆ ಚಾಣೂರನ ಕಾಲುಗಳನ್ನು ಹಿಡಿದು ಅಪ್ಪಳಿಸಿ ಶ್ರೀಕೃಷ್ಣದೇವನು ಸಂಹರಿಸಿರುವನು. ದೇವತೆಗಳು ಮನುಷ್ಯರೂ ಶ್ರೀಕೃಷ್ಣದೇವನನ್ನು ಸ್ತುತಿಸಿದರು.

ಮುಷ್ಟಿಕನು ಬಲರಾಮದೇವನೊಡನೆ ಉಗ್ರವಾದ ಯುದ್ಧವನ್ನು ಮಾಡಿದನು. ಬಲರಾಮದೇವನು ತಲೆಯನ್ನು ಅಂಗೈಯಿಂದ ಹೊಡೆದು ಅವನನ್ನು ಸಂಹರಿಸಿದನು. ಕೂಟತೋಶಲಕ ಎಂಬ ಎರಡು ಜಟ್ಟಿಗಳನ್ನು ಶ್ರೀಕೃಷ್ಣದೇವನು ಸಂಹರಿಸಿದನು. ಉಳಿದವರೆಲ್ಲರೂ ಆ ಸ್ಥಳದಿಂದ ಓಡಿಹೋದರು. ಸುನೀಥ ಮುಂತಾದ ಕಂಸನ ಸಹೋದರರನ್ನು ಬಲರಾಮದೇವನು ಪರಿಘಾಯುಧದಿಂದ ಸಂಹರಿಸಿದನು.

## ಕಂಸನ ಮೂಲ ಬಲ ಸಂಹಾರ

ಎಲ್ಲಾ ಜಟ್ಟಿಗಳನ್ನೂ ಕಂಸನ ಸಹೋದರರನ್ನೂ ನಿಗ್ರಹಿಸಿದ ವಿಷಯವನ್ನು ಕಂಸನ ಇಪ್ಪತ್ತು ಅಕ್ಷೌಹಿಣೀ ಸೈನ್ಯದಲ್ಲಿರುವ ಎಲ್ಲಾ ಸೈನಿಕರೂ ನೋಡಿದರು. ತಮ್ಮಲ್ಲಿರುವ ಒಬ್ಬೊಬ್ಬನನ್ನೂ ರುದ್ರದೇವನ ವರಬಲದಿಂದ ಯಾರಿಂದಲೂ ಕೊಲ್ಲಲು ಸಾಧ್ಯವಿಲ್ಲವೆಂಬ ದುರಹಂಕಾರದಿಂದ ಯುದ್ಧಕ್ಕೆ ಹೊರಟರು.

ಕಂಸನು ಇದನ್ನು ನೋಡಿದನು. ಕೋಪದಿಂದ ತನ್ನ ಸೈನಿಕರ ಕಡೆಗೆ ತಿರುಗಿದನು. " ಎಲೈ ಸೈನಿಕರೆ! (೧) ಕೃಷ್ಣನನ್ನು ನನ್ನ ನಗರದಿಂದ ಹೊರಗೆ ಅಟ್ಟಿಬಿಡಿರಿ (೨) ಅವನ ಕಡೆಯವರೆಲ್ಲರನ್ನೂ ಅಟ್ಟಿಬಿಡಿರಿ. (೩) ನಂದನನ್ನು ಸಂಹರಿಸಿರಿ. (೪) ಅತ್ಯಂತ ಹೀನನಾದ ಉಗ್ರಸೇನನನ್ನು ಭೂಮಿಯಲ್ಲಿ ತಳ್ಳಿಬಿಟ್ಟು ಮರ್ದನ ಮಾಡಿರಿ" ಎಂದು ಆಜ್ಞಾಪಿಸಿದನು.

ತನ್ನ ಇಪ್ಪತ್ತು ಅಕ್ಷೌಹಿಣೀ ಸೈನಿಕರಿಗೆ ಕಂಸನು ಮಾಡಿದ ಅಪ್ಪಣೆಯನ್ನು ಶ್ರೀಕೃಷ್ಣದೇವನು ಕೇಳಿದನು. ಕಂಸನ ಮುಂದೆ ಬಂದುನಿಂತನು. ಅವನನ್ನು ನೋಡಿ ಚಮತ್ಕಾರವಾಗಿ ಮಾತನಾಡಿದನು.

ಓ ಕಂಸ ಮಹಾರಾಜನೇ! ನೀವು ನನ್ನ ಸೋದರಮಾವನಾಗಿರುವಿರಿ. ನಿಮ್ಮ ಆಜ್ಞೆಯಂತೆ ನಡೆಯುವುದು ನಿಮ್ಮ ಸೋದರಳಿಯನಾಗಿರುವ ನನಗೆ ಮುಖ್ಯಕರ್ತವ್ಯವಾಗಿದೆ. ಆದ್ದರಿಂದ ನೀವು ಹೇಳಿರುವ ಎಲ್ಲಾ ಮಾತುಗಳಂತೆ ನಡೆದುಕೊಳ್ಳುವೆನು."

(೧) ಕೃಷ್ಣ ಎಂಬ ಹೆಸರಿನಿಂದ ಪ್ರಸಿದ್ಧನಾಗಿರುವ ನಾನು ಎಲ್ಲರ ಹೃದಯಕಮಲಗಳಲ್ಲಿಯೂ ವಾಸಿಸುತ್ತಿರುವೆನು. ಎಲ್ಲಾ ಜೀವರೂ ನಾನು ಹೃದಯಕಮಲಗಳ್ಲಿರುವ ವರೆಗೆ ಬದುಕುತ್ತಿರುವರು. ಬಿಟ್ಟು ಹೋದ ಕೂಡಲೇ ಸಾಯುವರು. ನೀವು ನಿಮ್ಮ ನಗರದಿಂದ ನನ್ನನ್ನು ಹೊರಡಿಸಬೇಕೆಂದು ನಿಮ್ಮ ಸೈನಿಕರಿಗೆ ಆಜ್ಞಾಪಿಸಿದಿರಿ. ದೇಹವೇ ನಗರವೆನಿಸುತ್ತದೆ. ನಿಮ್ಮ ದೇಹವನ್ನು ಬಿಟ್ಟು ನಾನು ಹೊರಗೆ ಹೊರಟರೆ ನಿಮ್ಮ ನಗರದಿಂದ

ಹೊರಟಂತಾಗುತ್ತದೆ. ಆದ್ದರಿಂದ ನಿಮ್ಮ ಅಪ್ಪಣೆಯಂತೆ ನಿಮ್ಮ ದೇಹವನ್ನು ಬಿಟ್ಟು ಹೊರಡುವೆನು. ನೀವು ಅಪೇಕ್ಷಿಸಿದ ಮರಣವು ನಿಮಗೆ ಸಿಗುತ್ತದೆ.

(೨) ನನ್ನ ಕಡೆಯವರನ್ನೆಲ್ಲಾ ನಿಮ್ಮ ನಗರದಿಂದ ಹೊರಡಿಸುವಂತೆ ಎರಡನೆಯದಾಗಿ ಪ್ರಾರ್ಥಿಸಿದಿರಿ. ಆ ಪ್ರಾರ್ಥನೆಯೂ ಪೂರ್ಣವಾಗುತ್ತದೆ. ಅಂಜಬೇಡಿರಿ. ಕಣ್ಣು ಕಿವಿ ಮುಂತಾದ ಎಲ್ಲಾ ಇಂದ್ರಿಯಗಳಿಗೂ ಅಭಿಮಾನಿಗಳಾದ ಎಲ್ಲಾ ದೇವತೆಗಳೂ ನನ್ನ ಕಡೆಯವರು. ನಿಮ್ಮ ನಗರವೆಂದು ಹೇಳಲ್ಪಡುವ ನಿಮ್ಮ ದೇಹದಲ್ಲಿ ಅವರೆಲ್ಲರೂ ಈಗ ವಾಸಿಸುತ್ತಿರುವರು. ನಿಮ್ಮಿಂದ ಎಲ್ಲಾ ಕಾರ್ಯಗಳನ್ನೂ ಮಾಡಿಸುತ್ತಿರುವರು. ನಾನು ಹೊರಡುವುದಕ್ಕೆ ಪೂರ್ವದಲ್ಲಿಯೇ ಗಂಟುಮೂಟೆಗಳನ್ನು ಕಟ್ಟಿಕೊಂಡು ಹೊರಡುವುದಕ್ಕೆ ಸಿದ್ಧರಾಗಿರುವರು. ನಾನು ಹೊರಟ ಕೂಡಲೇ ಅವರಾಗಿಯೇ ಹೊರಡುವರು.

(೩) ನೀವು ಮೂರನೆಯದಾಗಿ " ಮದ್ಭಟಾಃ ನಂದಂ ಮಾರಯತ" ಎಂದು ಆಜ್ಞಾಪಿಸಿದಿರಿ. ಈ ಮಾತುಗಳಿಗೆ " ಶ್ರೀಕೃಷ್ಣದೇವನ ತಂದೆಯಾಗಿರುವ ನಂದನನ್ನು ಕೊಲ್ಲಿರಿ" ಎಂಬ ಅರ್ಥವು ಮೊದಲನೆಯ ಅರ್ಥವಾಗುತ್ತದೆ. ನಂದನ ಮಗನಾಗಿ ನಟಿಸುತ್ತಾ ಅವನ ಮನೆಯಲ್ಲಿ ಇಷ್ಟರವರೆಗೆ ಬೆಳೆದಿರುವ ನಾನು ಈ ಕೆಲಸವನ್ನು ಮಾಡುವುದು ಮಹಾದ್ರೋಹವೆನಿಸುತ್ತದೆ. ಆದ್ದರಿಂದ ಈ ಕೆಲಸವನ್ನು ಮಾಡಲಾರೆನು."

" ಮದ್ಭಟಾ ನಂದಂ ಮಾರಯತ" ನನ್ನ ಸೈನಿಕರ ಆನಂದವನ್ನು ನಾಶಮಾಡಿರಿ" ಎಂಬುದು ಎರಡನೆಯ ಅರ್ಥವಾಗಿದೆ. ಈ ಅಪ್ಪಣೆಯಂತೆ ನಡೆಯಲು ನನ್ನಿಂದ ಸಾಧ್ಯವಾಗುತ್ತದೆ. ಆದ್ದರಿಂದ ನಿಮ್ಮ ಸೈನಿಕರನ್ನು ನಾನಾ ವಿಧವಾದ ಆಯುಧಗಳಿಂದ ಹಿಂಸಿಸುತ್ತಾ ಅವರೆಲ್ಲರಿಗೂ ಸುಖಲೇಶವೂ ಏರ್ಪಡದಂತೆ ಮಾಡುವೆನು. ನಿಮ್ಮ ಅಪ್ಪಣೆಯ ಎರಡನೆಯ ಅರ್ಥದಂತೆ ನಡೆಯಿಸಿ ನಿಮ್ಮನ್ನು ತೃಪ್ತಿಪಡಿಸುವೆನು.

(೪) " ನೀವು ನಾಲ್ಕನೆಯದಾಗಿ ಹೀನೋಗ್ರಸೇನಂ ಮರ್ದಯತ" ಅಂದರೆ " ಹೀನನಾದ ಉಗ್ರಸೇನ ಮಹಾರಾಜನನ್ನು ಮರ್ದನ ಮಾಡಿರಿ" ಎಂದು ಅಪ್ಪಣೆ ಮಾಡಿದಿರಿ. ನಿಮ್ಮಂತಹ ಸತ್ಪುತ್ರರನ್ನು ಪಡೆದಿರುವ ಉಗ್ರಸೇನಮಹಾರಾಜನು ಹೀನನಾಗಲಾರನು. ಆದ್ದರಿಂದ ಅವನನ್ನು ಸಂಹರಿಸುವುದು ನಿಮಗೆ ಇಷ್ಟವಾಗಿರಲಾರನು. ಆದ್ದರಿಂದ ಆ ವಾಕ್ಯಕ್ಕೆ ಬೇರೆ ಅರ್ಥವನ್ನೇ ಹೇಳಬೇಕು ಆ ಅರ್ಥವನ್ನು ಈಗ ವಿವರಿಸುವೆನು.

ತಂದೆಯು ಬದುಕಿರುವಾಗ ಅವನನ್ನು ಜೈಲಿನಲ್ಲಿ ಟ್ಟು ಅವನ ರಾಜ್ಯವನ್ನು ಅಪಹರಿಸಿ ಅನುಭವಿಸುತ್ತಿರುವ ನೀನಲ್ಲವೇ ಹೀನರು? ಪಿತೃದ್ರೋಹಿಗೆ ಸಹಾಯವನ್ನು ಮಾಡುತ್ತಿರುವ ನಿಮ್ಮ ಸೈನಿಕರಷ್ಟು ಉಗ್ರಸ್ವಭಾವವುಳ್ಳವರು ಯಾರಿರುವರು? ಇಂತಹ ಉಗ್ರಸ್ವಭಾವವುಳ್ಳ ಸೈನಿಕರಿಗೆ ಯಜಮಾನರಾಗಿರುವ ನೀವಲ್ಲವೇ ಉಗ್ರಸೇನರು? ಹೀನರೂ ಉಗ್ರಸೇನರೂ ಆಗಿರುವ ನಿಮ್ಮನ್ನು ಮರ್ದನಮಾಡಬೇಕೆಂದು ನೀವು "ಹೀನೋಗ್ರಹಸೇನಂ ಮರ್ದಯತ" ಎಂದು ಆಜ್ಞಾಪಿಸಿದಿರಿ. ಈ ಅಪ್ಪಣೆಯಂತೆ ನಾನು ನಡೆದುಕೊಳ್ಳುವೆನು. ಹೀನರೂ ಉಗ್ರಸೇನರೂ ಆಗಿರುವ ನಿಮ್ಮನ್ನು ಮರ್ದನ ಮಾಡುವೆನು." ಇದು ಶ್ರೀಕೃಷ್ಣದೇವನು ಕಂಸನನ್ನು ಕುರಿತು ಹೇಳಿದ ಚಮತ್ಕಾರವಾದ ಉತ್ತರ.

ಶ್ರೀಕೃಷ್ಣದೇವನ ಈ ಮಾತುಗಳನ್ನು ಕೇಳಿದ ಕಂಸನ ಮೂಲಬಲದಲ್ಲಿರುವ ಸೈನಿಕರೆಲ್ಲರೂ ಕಂಸನಲ್ಲಿ

ತಮಗಿರುವ ಭಕ್ತಿಯಿಂದ ಚೀರುತ್ತಾ ಯುದ್ಧಕ್ಕೆ ಹೊರಟರು. ಶ್ರೀಕೃಷ್ಣದೇವನೂ ಯುದ್ಧಕ್ಕಾಗಿ ಸಿದ್ಧನಾದನು. ದೇವೇಂದ್ರನು ಆಕಾಶದಲ್ಲಿ ನಿಂತು ಇದನ್ನೆಲ್ಲವನ್ನೂ ನೋಡುತ್ತಿದ್ದನು. ಆಗ ತನ್ನ ಅಲ್ಪಸೇವೆಯನ್ನು ಶ್ರೀಕೃಷ್ಣದೇವನಲ್ಲಿ ಸಲ್ಲಿಸಬೇಕೆಂದು ತೀರ್ಮಾನಿಸಿದನು. ತನ್ನ ಸಮೀಪದಲ್ಲಿರುವ ಮಾತಲಿ ಎಂಬ ಸಾರಥಿಯನ್ನು ಕರೆದನು. ತನ್ನ ರಥವನ್ನು ಓಡಿಸಿಕೊಂಡು ಹೋಗು. ಶ್ರೀಕೃಷ್ಣದೇವನು ಆ ರಥದಲ್ಲಿ ಕುಳಿತು ಯುದ್ಧವನ್ನು ಮಾಡಲಿ. ನನ್ನ ಈ ಸೇವೆಯಿಂದ ತೃಪ್ತನಾಗಲಿ. ಇಚ್ಛಾಮಾತ್ರದಿಂದ ಇವರೆಲ್ಲರನ್ನೂ ಸಂಹರಿಸುವ ಶಕ್ತಿಯುಳ್ಳ ಮಹಾಸ್ವಾಮಿಗೆ ನನ್ನ ರಥದ ಅಪೇಕ್ಷೆಯಿದೆಯೆ? ಎಂದು ಆಜ್ಞಾಪಿಸಿದನು.

ಮಾತಲಿಯು ದೇವೇಂದ್ರನ ರಥವನ್ನು ಶ್ರೀಕೃಷ್ಣದೇವನ ಮುಂದೆ ತಂದು ನಿಲ್ಲಿಸಿದನು. ದೇವೇಂದ್ರನ ಸೇವೆಯನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸಿದನು. ದೇವೇಂದ್ರನ ರಥದ ಮೇಲೆ ಶ್ರೀಕೃಷ್ಣದೇವನು ಏರಿ ಕುಳಿತನು ಜಲಪೂರ್ಣನಾದ ಸಮುದ್ರರಾಜನಿಗೆ ನಾವು ಕೊಡುವ ಅಲ್ಪವಾದ ತರ್ಪಣಜಲದ ಆವಶ್ಯಕತೆಯಿದೆಯೇ? ಅನಂತಬಲದಿಂದ ಪೂರ್ಣನಾದ ಶ್ರೀಕೃಷ್ಣದೇವನಿಗೆ ಈ ರಥದಿಂದಲೂ ಆಯುಧಗಳಿಂದಲೂ ಆಗಬೇಕಾದ್ದೇನಿದೆ? ಆದರೂ ಭಕ್ತನಾದ ದೇವೇಂದ್ರನ ಪ್ರಾರ್ಥನೆಯನ್ನು ಸ್ವೀಕರಿಸಿದನು.

ಸಕಲ ಸೈನಿಕರೂ ನಾನಾ ವಿಧವಾದ ಅಸ್ತ್ರಗಳಿಂದಲೂ ಶಸ್ತ್ರಗಳಿಂದಲೂ ಶ್ರೀಕೃಷ್ಣದೇವನನ್ನು ಪೀಡಿಸಲು ಯತ್ನಿಸಿದರು. ಸೂರ್ಯನು ಉಗ್ರಕಿರಣಗಳಿಂದ ಕತ್ತಲೆಯನ್ನು ಸಮೂಲವಾಗಿ ನಾಶಮಾಡಿದಂತೆ ಶ್ರೀಕೃಷ್ಣದೇವನು ಆಯುಧಗಳಿಂದ ಅವರೆಲ್ಲರನ್ನೂ ಸಂಹರಿಸಿದನು.

## ಕಂಸನ ಸಂಹಾರ

(೫೩) ತುಂಗಮಂಚೌತ್ ಭೋಜೇಶಂ ಪಾತಯಿತ್ವಾ ವ್ಯಸುಂ ಅಕೃತ - ಎತ್ತರವಾದ ಮಂಚದಿಂದ ಕಂಸನನ್ನು ಕೆಳಗೆ ಶ್ರೀಕೃಷ್ಣದೇವನು ಉರುಳಿಸಿ ಸಂಹರಿಸಿದನು.

ವಿಶೇಷಾರ್ಥ - ಮಂಚಸ್ಥಂ ಮಾತುಲಂ ಕಂಸಂ ಮೂರ್ಧ್ನಿ ಸಂಗೃಹ್ಯ ಭೂಮೌ ನಿಪಾತ್ಯ ಹತ್ವಾ ತದ್ಬಲಂ ಸಕಲಂ ಹತ್ವಾ.

ವಿಶೇಷಾರ್ಥ ವಿವರಣೆ - ಕಂಸನನ್ನು ಶ್ರೀಕೃಷ್ಣದೇವನು ನಿತ್ಯನರಕಕ್ಕೆ ಕಳುಹಿಸಬೇಕಾಗಿದೆ. ಅದಕ್ಕಾಗಿ ಅವನ ಪರಿವಾರಗಳನ್ನೆಲ್ಲವನ್ನೂ ಮೊದಲೇ ನಿತ್ಯನರಕಕ್ಕೆ ಕಳುಹಿಸಿದನು. ಬಾಲ್ಯದಲ್ಲಿ ಅವನನ್ನು ಸಾಕಿ ಬೆಳೆಸಿದ ಪೂತನೆಯನ್ನು ಮೊದಲು ಕಳುಹಿಸಿದನು. ಅಲ್ಲಿಗೆ ಹೋದಕೂಡಲೇ ಅವನನ್ನು ಸಾಕಿ ಬೆಳೆಯಿಸಬೇಡವೇ? ಅನಂತರದಲ್ಲಿ ಬಕಾಸುರ ಎಂಬ ಪಕ್ಷಿಯನ್ನೂ ತೃಣಾವರ್ತ ಎಂಬ ಗಾಳಿಯನ್ನೂ ಕಳುಹಿಸಿದನು. ಅಲ್ಲಿಗೆ ಹೋದಕೂಡಲೇ ಅವನಿಗೆ ಆಟಕ್ಕೆ ಪಕ್ಷಿಗಳೂ ವಿಹಾರಕ್ಕೆ ಗಾಳಿಯೂ ಬೇಡವೇ? ಅನಂತರದಲ್ಲಿ ವತ್ಸಾಸುರ ಎಂಬ ಕರುವನ್ನೂ ಶಕಟಾಸುರ ಎಂಬ ಬಂಡಿಯನ್ನೂ ಅರಿಷ್ಟಾಸುರ ಎಂಬ ಎತ್ತನ್ನೂ ಧೇನುಕಾಸುರ ಎಂಬ ಕತ್ತೆಯನ್ನೂ ಕಳುಹಿಸಿದನು. ಅಲ್ಲಿಗೆ ಹೋದಕೂಡಲೇ ಅವನ ಮೂಟೆಗಳನ್ನು ಹೊರಬೇಡವೆ? ಅನಂತರದಲ್ಲಿ ಸವಾರಿ ಮಾಡುವುದಕ್ಕಾಗಿ ಕೇಶಿ ಎಂಬ ಕುದುರೆಯನ್ನೂ ಆನೆಯನ್ನೂ ಕಳುಹಿಸಿದನು. ಅನಂತರದಲ್ಲಿ ಬಟ್ಟೆಗಳನ್ನು ಒಗೆದು ಶುದ್ಧಮಾಡುವುದಕ್ಕಾಗಿ ಅಗಸನನ್ನು ಕಳುಹಿಸಿದನು. ಮೈಗಳನ್ನು ಒತ್ತಿ ಉಪಚಾರವನ್ನು ಮಾಡುವುದಕ್ಕಾಗಿ

ಚಾಣೂರ ಮುಂತಾದ ಜಟ್ಟಿಗಳನ್ನು ಕಳುಹಿಸಿದನು. ಅನಂತರದಲ್ಲಿ ಅವನ ಎಲ್ಲಾ ಸೈನ್ಯವನ್ನೂ ಕಳುಹಿಸಿದನು. ಅವರೆಲ್ಲರನ್ನೂ ನಿತ್ಯನರಕ್ಕೆ ಕಳುಹಿಸಿದ ಮೇಲೆ ಅವರೆಲ್ಲರ ಪ್ರಭುವಾಗಿರುವ ಕಂಸನನ್ನು ಕಳುಹಿಸಬೇಕೆಂದು ತೀರ್ಮಾನಿಸಿದನು.

ಎತ್ತರವಾದ ಮಂಚದಲ್ಲಿ ಕುಳಿತಿರುವ ಕಂಸನನ್ನು ನೋಡಿದನು. ತಾನಿದ್ದ ಸ್ಥಳದಿಂದ ಒಂದು ನೆಗೆತದಿಂದ ಹಾರಿದನು. ಎರಡನೆಯ ಕ್ಷಣದಲ್ಲಿ ಮಂಚದ ಮೇಲೆ ನಿಂತನು. ಅತಿಕೋಪದಿಂದ ಕೆಂಡದಂತಿರುವ ಕಣ್ಣುಗಳಿಂದ ಯುಕ್ತನಾಗಿಯೂ ಖಡ್ಗವನ್ನೂ ಗುರಾಣಿಯನ್ನೂ ಧರಿಸಿದವನಾಗಿಯೂ ಇರುವ ಕಂಸನನ್ನು ನೋಡಿದನು. ಪಾಪ ಪುರುಷನಂತಿರುವ ಅವನ ಜುಟ್ಟನ್ನು ಹಿಡಿದು. ಮಂಚದಿಂದ ಕೆಳಗೆ ತಳ್ಳಿದನು. ಭೂಮಿಯಲ್ಲಿ ಉರುಳಿಸಿದನು. ತಲೆಯಲ್ಲಿರುವ ಜುಟ್ಟು ಕೆದರಲ್ಪಟ್ಟಿತು. ಆ ಜುಟ್ಟನ್ನೂ ಹಿಡಿದುಕೊಂಡೇ ಭೂಮಿಯಲ್ಲಿ ಅವನನ್ನು ಶೆಳೆದುಕೊಂಡು ಹೋದನು. ಎಡಗೈಯಿಂದ ಜುಟ್ಟನ್ನು ಹಿಡಿದು ಅವನನ್ನು ಎತ್ತಿ ಹಿಡಿದನು. ಬಲಗೈಯಿಂದ ಅವನ ತಲೆಯಲ್ಲಿ ಗುದ್ದುತ್ತಾ ಬಂದನು. ಕಾಲುಗಳಿಂದ ಒದೆಯುತ್ತಾ ಬಂದನು. ಅವನ ಕಿರೀಟಗಳು ಪುಡಿಯಾದವು. ಕಿವಿಯಲ್ಲಿರುವ ಕರ್ಣಕುಂಡಲಗಳು ಕೆಳಗೆ ಬಿದ್ದವು. ಆಭರಣಗಳೆಲ್ಲವೂ ಜಾರಿಬಿದ್ದವು. ಬಟ್ಟೆಯೆಲ್ಲವೂ ಹೋಗಿ ಬತ್ತಲೆಯಾದನು. ಅವನ ಸ್ಥಿತಿಯು ತುಂಬಾ ಶೋಚನೀಯವಾಗಿ. ಕೊನೆಗೆ ಸತ್ತನು. ಅವನ ಪರಿವಾರದಲ್ಲಿ ಸೇರಿದವರೆಲ್ಲರನ್ನೂ ಸಂಹರಿಸಿದನು. ತುಂಬಾ ಗರ್ವಿಷ್ಠಾನಾದ ಪುರುಷನು ಚಿಕ್ಕ ಹುಡುಗನಿಂದ ಪರಾಜಿತನಾದರೆ ಎಲ್ಲರ ಮುಂದೆ ಮುಖವನ್ನು ತೋರಿಸುವುದಕ್ಕೆ ಹಾಗು ಯಾರಿಗೂ ಮುಖವನ್ನು ತೋರಿಸಲು ಇಷ್ಟಪಡುವುದಿಲ್ಲ. ಶ್ರೀಕೃಷ್ಣದೇವನೂ ಅವನ ಭಕ್ತರಾದ ಸಕಲಜೀವರೂ ಇಲ್ಲದಿರುವ ಸ್ಥಳವೆಂದು ಭ್ರಮಿಸಿ ನಿತ್ಯನರಕಕ್ಕೆ ಹೋಗಿ. ಅಲ್ಲಿಯೇ ವಾಸಿಸಿದನು. ಅಲ್ಲಿಯೂ ಶ್ರೀಕೃಷ್ಣದೇವನಿಂದಲೂ ಶ್ರೀವಾಯುದೇವನಿಂದಲೂ ನಾನಾ ವಿಧವಾಗಿ ಶಿಕ್ಷಿಸಲ್ಪಡುತ್ತಾ ಯಾವಾಗಲೂ ದುಃಖವನ್ನು ಅನುಭವಿಸುತ್ತಿರುವನು. ಅವನ ದೇಹದಲ್ಲಿ ವಾಸಿಸುತ್ತಿದ್ದ ಕಾಲನೇಮಿ ಎಂಬ ದೈತ್ಯನಿಗೆ ಏರ್ಪಟ್ಟಿರುವ ದುಃಖ ಪರಂಪರೆಯನ್ನು ಹೇಳಿದೆವು.

ಅದೇ ದೇಹದಲ್ಲಿ ಭೃಗು ಎಂಬ ಋಷಿಗಳು ವಾಸಿಸುತ್ತಿದ್ದರು. ಅವರು ಅನಾದಿಕಾಲದಿಂದಲೂ ಶ್ರೀಕೃಷ್ಣ ದೇವನಲ್ಲಿ ಅಪಾರವಾದ ಭಕ್ತಿಯನ್ನು ಮಾಡುತ್ತಿದ್ದವರು. ಭಕ್ತಿಯ ಬಲದಿಂದ ಅವರು ಉತ್ತಮಲೋಕಗಳಿಗೆ ಹೋಗಿ ಸುಖವಾಗಿ ವಾಸಿಸುತ್ತಿರುವರು. ಕಂಸನ ದೇಹದಲ್ಲಿ ಅವನಿಗೆ ಬಲಾಧಿಕ್ಯವನ್ನು ಕೊಡುವುದಕ್ಕಾಗಿ ವಾಯುದೇವರು ವಾಸಿಸುತ್ತಿದ್ದರು. ಅವರೂ ಶ್ರೀಕೃಷ್ಣದೇವನಲ್ಲಿ ಪ್ರವೇಶಿಸಿದರು. ಕಂಸನ ದೇಹವನ್ನು ಭಿನ್ನ ಭಿನ್ನವಾಗಿ ಮಾಡದಂತೆ ಹಾಗೆಯೇ ಬಿಟ್ಟನು. ಅವನ ಪತ್ನಿಯರು ಆ ದೇಹವನ್ನು ನೋಡಿ ದುಃಖಪಡಬೇಡವೇ? ಅದಕ್ಕಾಗಿ ಆ ದೇಹವನ್ನು ಉಳಿಸಿದನು. ಅವನ ಪತ್ನಿಯರೆಲ್ಲರೂ ಬಂದರು. ರಣರಂಗದಲ್ಲಿ ಬಿದ್ದಿರುವ ತಮ್ಮ ಪತಿಯ ದೇಹವನ್ನು ನೋಡಿ ಅತ್ತರು. ಶ್ರೀಕೃಷ್ಣದೇವನು ಆ ಸ್ಥಳದಿಂದ ಯಮುನಾ ನದೀತೀರಕ್ಕೆ ಬಂದನು. ಸ್ನಾನಾದಿಗಳನ್ನು ಮಾಡಿ ತೃಪ್ತನಾದನು.

## ಸ್ವಜನರನ್ನು ಸಂತೋಷಪಡಿಸಿದನು

(೫೪) ನಿಜಾನ್ ನಂದಯನ್ - ಸ್ವಜನರಾದ ತಂದೆ ಮುಂತಾದವರನ್ನು ಸಂತೋಷಪಡಿಸಿದನು.

**ವಿಶೇಷಾರ್ಥ - ಸ್ವಪಿತರೌ ನಿಗಡಾದ್ವಿಮುಚ್ಯ ಸರ್ವಾನ್ಸಂತೋಷ್ಯ.**

ತನ ತಂದೆ ತಾಯಿಗಳನ್ನು ಸಂತೋಷಪಡಿಸಿದನು. ಶ್ರೀಕೃಷ್ಣದೇವನು ತನ್ನ ತಂದೆಯಾಗಿರುವ ವಸುದೇವನನ್ನೂ ತಾಯಿಯಾಗಿರುವ ದೇವಕೀದೇವಿಯನ್ನೂ ನೋಡಿ ನಮಸ್ಕರಿಸಿದನು. ಅವರನ್ನು ಜೈಲಿನಿಂದ ಬಿಡಿಸಿದನು. ಆಲಿಂಗನ ಮಾಡಿದನು. ನಿಮ್ಮನ್ನು ಸುಖಪಡಿಸಲಿಲ್ಲವೆಂದು ಹೇಳಿದನು. ಅವರಿಬ್ಬರೂ ಶ್ರೀಕೃಷ್ಣದೇವನ ಪ್ರಭಾವವನ್ನು ತಿಳಿದು ಅವನು ತಮ್ಮ ಮಗನಲ್ಲವೆಂದು ಸರ್ವೋತ್ತಮನಾದ ಶ್ರೀಹರಿಯೆಂದೂ ಭಾವಿಸಿ ಅವನನ್ನು ದೂರದಲ್ಲೇ ಸೇವಿಸಬೇಕೆಂದು ತೀರ್ಮಾನಿಸದರು. ಆದರೆ ಅವನು ಅವರನ್ನು ನೋಡಿ ಮೆಲ್ಲನೆ ನಕ್ಕನು. ಆ ಕ್ಷಣದಲ್ಲಿಯೇ ತಮ್ಮ ಮಗನೆಂದು ಭಾವಿಸಿದರು. ಆಲಿಂಗನಾದಿಗಳಿಂದ ತೃಪ್ತಿಪಡಿಸಿದರು. ಶ್ರೀಕೃಷ್ಣದೇವನು ತಂದೆತಾಯಿಗಳನ್ನು ಒಂದು ಜೈಲಿನಲ್ಲಿ ಬಿಡಿಸಿದನು. ಪುತ್ರಮೋಹ ಎಂಬ ಎರಡನೆಯ ಜೈಲಿನಲ್ಲಿ ಬಂಧನ ಮಾಡಿದನು.

ತಂದೆತಾಯಿಗಳನ್ನು ನೋಡಿ ಹೇಳಿದನು. "ನಾನು ಹೆಸರಿಗೆ ಮಾತ್ರ ನಿಮ್ಮ ಮಗನಾಗಿರುವೆನು. ಮಕ್ಕಳಿಂದ ತಂದೆ ತಾಯಿಗಳಿಗೆ ಏರ್ಪಡಬೇಕಾದ ಯಾವ ಸುಖವನ್ನೂ ಕೊಡಲಿಲ್ಲ. ಆದ್ದರಿಂದ ನನ್ನ ಜನ್ಮವು ವ್ಯರ್ಥವಾಯಿತು" ಎಂದನು.

ಅದಕ್ಕೆ ವಸುದೇವನೂ ದೇವಕಿದೇವಿಯರೂ "ನೀನು ನಮ್ಮ ವಂಶದಲ್ಲಿ ಅವತರಿಸಿದಿ. ಇದರಿಂದ ನಮ್ಮ ಕುಲವು ತಿಲಕದಂತೆ ಸರ್ವರಿಂದಲೂ ಮಾನ್ಯವಾಯಿತು. ನಮ್ಮ ಕೀರ್ತಿಯು ಎಲ್ಲಾ ಲೋಕಗಳಲ್ಲಿಯೂ ವ್ಯಾಪಿಸುವಂತೆ ಮಾಡಿದಿ. ಲೋಕಕಂಟಕರಾದ ಪೂತನಾ ಮುಂತಾದ ಎಲ್ಲಾ ದೈತ್ಯರನ್ನು ಸಂಹರಿಸಿದಿ. ವಂಶದ್ರೋಹಿಯಾದ ಕಂಸನನ್ನು ಸಂಹರಿಸಿದಿ. ಸಂಸಾರ ಎಂಬ ಬಂಧನದಿಂದ ನಮ್ಮನ್ನು ಬಿಡಿಸಿದಿ. ಆದ್ದರಿಂದ ನೀನು ಎಲ್ಲವನ್ನೂ ಮಾಡಿರುವಿ. ಯಾವುದನ್ನು ಮಾಡಲಿಲ್ಲ?" ಎಂದು ಹೇಳಿದರು.

ದೇವಕಿದೇವಿಯು ಅವನನ್ನು ಎತ್ತಿ ಮುದ್ದಾಡಿದಳು. ಪುಷ್ಪದಂತೆ ಮೃದುವಾದ ಕೈಗಳಿಂದ ಅವನ ಮೈಯನ್ನು ಒತ್ತಿದಳು. ಇದರಿಂದ ಪುಷ್ಪಗಳಿಂದ ಅವನನ್ನು ಪೂಜಿಸಿದಂತಾಯಿತು. ಆನಂದದಿಂದ ಅವನ ಎಲ್ಲಾ ಅವಯವಗಳನ್ನೂ ನೋಡಿದಳು. ಆಗ ಅವಳ ಕಣ್ಣುಗಳಿಂದ ಹೊರಟ ಆನಂದಭಾಷ್ಪಜಲಧಾರೆಯು ಅವನ ಮೈಯಲ್ಲಿ ಅಭಿಷೇಕವನ್ನು ಮಾಡಿತು. ಇದರಿಂದ ಅಭಿಷೇಕವನ್ನು ಮಾಡಿದಂತಾಯಿತು. ಮೊಲೆಗಳಿಂದ ಧಾರೆ ಧಾರೆಯಾಗಿ ಹಾಲು ಸುರಿಯಿತು. ಆ ಹಾಲನ್ನು ಶ್ರೀಕೃಷ್ಣದೇವನು ಕುಡಿದನು. ಇದರಿಂದ ನೈವೇದಸಮರ್ಪಣೆಯನ್ನು ಮಾಡಿದಂತಾಯಿತು. ಕಣ್ಣುಗಳಿಂದ ತಲೆಯಿಂದ ಕಾಲಿನವರೆಗೆ ಪುನಃ ಪುನಃ ನೋಡಿದಳು. ಇದರಿಂದ ಮಹಾ ಮಂಗಳಾರತಿಯನ್ನು ಮಾಡಿದಂತಾಯಿತು. ಮುಂದೆ ಬರಲಿರುವ ಮುಕ್ತಿಯೆಂಬ ಕಲ್ಪಲತೆಗೆ ಬೀಜವಾದ ಶ್ರೀಹರಿಯ ಆರಾಧನೆಯನ್ನು ಮಾಡಿ ತೃಪ್ತಳಾದಳು.

## ಉಗ್ರಸೇನನ ಪಟ್ಟಾಭಿಷೇಕ

ಶ್ರೀಕೃಷ್ಣದೇವನು ಕಂಸನನ್ನು ಸಂಹರಿಸಿದನು. ಆದ್ದರಿಂದ ರಾಜಧರ್ಮದಂತೆ ಶ್ರೀಕೃಷ್ಣದೇವನೇ ಮಥುರಾಪಟ್ಟಣದ ಪತಿಯಾಗಬೇಕಾಗಿತ್ತು. ಆದರೂ ತಾನು ರಾಜನಾಗಲ್ಲಿ. ಆಶ್ರಿತವತ್ಸಲನಾದ ಶ್ರೀಕೃಷ್ಣದೇವನು ಕಂಸನ ತಂದೆಯಾಗಿರುವ ಉಗ್ರಸೇನನನ್ನು ಕರೆಯಿಸಿದನು. ಅವನು ಬದುಕಿರುವಾಗ ಅವನ ಮಗನಾದ ಕಂಸನು ರಾಜನಾದದ್ದು ಅಯುಕ್ತವೆಂದೂ ಅದಕ್ಕಾಗಿ ಅವನನ್ನು ಸಂಹರಿಸಿ ಅವನ ತಂದೆಯಾದ ಉಗ್ರಸೇನನಿಗೆ

ಕ್ರಮಪ್ರಾಪ್ತವಾದ ರಾಜಪದವಿಯನ್ನು ಕೊಡುವುದಾಗಿಯೂ ಹೇಳಿದನು. ಈ ಮಾತುಗಳನ್ನು ಕೇಳಿದ ಉಗ್ರಸೇನನು ಶ್ರೀಕೃಷ್ಣದೇವನನ್ನು ಪ್ರಾರ್ಥಿಸಿದನು.

" ಓ ಶ್ರೀಕೃಷ್ಣದೇವ, ಸರ್ವೋತ್ತಮನಾದ ನಿನ್ನ ಆಜ್ಞೆಯನ್ನು ಯಾರೂ ಮೀರಬಾರದು. ಆದ್ದರಿಂದ ನಾನೂ ಮೀರುವಂತಿಲ್ಲ. ನೀನು ನನಗೆ ರಾಜ್ಯವನ್ನು ಕೊಡುವುದಾಗಿ ಆಜ್ಞಾಪಿಸಿದಿ. ನನಗೆ ಬೇಕಾದ ರಾಜ್ಯವನ್ನು ಹೇಳುವೆನು. ರಾಜನು ಎಲ್ಲಾ ಪ್ರಜೆಗಳಿಂದಲೂ ಪೂಜಿಸಲ್ಪಡುವನು. ಅವನಂತೆ ವೇದಾಂತ ಮುಂತಾದ ಸಕಲಶಾಸ್ತ್ರಗಳನ್ನು ಅಭ್ಯಾಸ ಮಾಡಿದವನು ಸರ್ವಲೋಕಗಳಲ್ಲಿಯೂ ಪೂಜಿಸಲ್ಪಡುವನು. ಆದ್ದರಿಂದ ಈ ರಾಜ್ಯಕ್ಕಿಂತ ವೇದಾಂತಾದಿ ಶಾಸ್ತ್ರಗಳೆಂಬ ರಾಜ್ಯವು ಸರ್ವೋತ್ಕೃಷ್ಟವಾದುದು. ನನಗೆ ಪ್ರಜೆಗಳ ಆಧಿಪತ್ಯವೆಂಬ ರಾಜ್ಯಾಧಿಪತ್ಯವು ಬೇಡ. ಶಾಸ್ತ್ರಗಳೆಂಬ ರಾಜ್ಯವನ್ನು ಕೊಡು. ಶಾಸ್ತ್ರಗಳನ್ನು ಯಾವಾಗಲೂ ಪರಿಶೀಲಿಸುತ್ತಾ ಆನಂದಭರಿತನಾಗುವೆನು.

"ಲೌಕಿಕವಾದ ರಾಜಪದವಿಯನ್ನು ವೃದ್ಧಿಗೊಳಿಸುವುದಕ್ಕೆ ಸೈನ್ಯಸಂಪತ್ತು ಅವಶ್ಯವಾಗಿದೆ. ಅದರಂತೆ ಶಾಸ್ತ್ರವೆಂಬ ರಾಜ್ಯವು ವೃದ್ಧಿಗೊಳ್ಳಬೇಕಾದರೆ ನಾನಾ ವಿಧವಾದ ನಿಯಮಗಳನ್ನು ಪಾಲಿಸಲೇಬೇಕು. ಈ ನಿಮಯಗಳಿಂದ ಮನಸ್ಸು ಶುದ್ಧವಾಗಿ ಸಚ್ಛಾಸ್ತ್ರಗಳನ್ನು ವಿಮರ್ಶಿಸುವ ಶಕ್ತಿಯು ಹೆಚ್ಚುತ್ತಾ ಬಂದು ಶಾಸ್ತ್ರದ ಫಲವಾದ ಜ್ಞಾನವೂ ಸ್ಥಿರವಾಗುತ್ತದೆ. ಆದ್ದರಿಂದ ಲೌಕಿಕವಾದ ಸೈನ್ಯಗಳಿಗಿಂತ ಜ್ಞಾನಾಭಿವೃದ್ಧಿಗೆ ಕಾರಣವಾಗಿರುವ ನಿಯಮಗಳೆಂಬ ಸೈನ್ಯಗಳು ಸರ್ವೋತ್ಕೃಷ್ಟವಾದವುಗಳು. ಅವುಗಳನ್ನು ಕೊಡು. ಲೌಕಿಕವಾದ ಸೈನ್ಯಗಳು ಬೇಡ."

"ಲೌಕಿಕಳಾದ ಪತ್ನಿಯು ರಾಜನನ್ನು ಸಂತೋಷಪಡಿಸುವಳು. ಸುಖ ದುಃಖ ಮುಂತಾದ ಪರಸ್ಪರ ವಿರುದ್ಧವಾದ ಗುಣಗಳು ಏರ್ಪಟ್ಟಾಗ ಅವುಗಳನ್ನು ಸಹಿಸುವ ಶಕ್ತಿಯು ಬರಬೇಕು. ಆ ಸಹನಶಕ್ತಿಯು ಪತ್ನಿಯಿಂದ ಏರ್ಪಡುವ ಸುಖಕ್ಕಿಂತಲೂ ಅಧಿಕವಾದ ಸುಖವನ್ನು ಕೊಡುತ್ತದೆ. ಆದ್ದರಿಂದ ಆ ಸಹನ ಶಕ್ತಿಯೇ ಪತ್ನಿಗಿಂತಲೂ ಶ್ರೇಷ್ಠಳಾದ ಪತ್ನಿಯೆನಿಸುವಳು. ಅವಳನ್ನೇ ಕೊಡು. ಲೌಕಿಕಪತ್ನಿಯು ಬೇಡ."

" ರಾಜನು ನಾನಾವಿಧವಾದ ಹಣಗಳಿಂದ ಯುಕ್ತನಾಗಿರುವನು. ಅವನಂತೆ ಶಾಸ್ತ್ರಗಳನ್ನು ಪರಿಶೀಲಿಸುತ್ತಿರುವವರೂ ಹಣಗಳಿಂದ ಯುಕ್ತರಾಗಿರಬೇಕು. ಜ್ಞಾನ, ಭಕ್ತಿ, ವೈರಾಗ್ಯ ಮುಂತಾದ ಗುಣಗಳೇ ಹಣಗಳೆನಿಸುತ್ತವೆ. ಲೌಕಿಕವಾದ ಹಣಕ್ಕಿಂತ ಈ ಹಣಗಳು ಅನಂತಪಾಲು ಉತ್ತಮ ಗಳೆನಿಸುತ್ತವೆ. ಈ ಹಣಗಳನ್ನು ಕೊಡು. ಲೌಕಿಕ ಹಣವು ಬೇಡ."

" ರಾಜನ ಎರಡು ಪಾರ್ಶ್ವಗಳಲ್ಲಿ ಬಿಳಿಬಣ್ಣದ ಚಾಮರಗಳನ್ನು ಬೀಸುತ್ತಿರುವರು. ಆ ಚಾಮರಗಳು ಎರಡು ಕಿವಿಗಳ ಪಕ್ಕಗಳಲ್ಲಿ ಕೆಳಗೂ ಮೇಲೂ ಸಂಚರಿಸುತ್ತಾ ರಾಜನಿಗೆ ವಿಶೇಷವಾದ ಶೋಭೆಯನ್ನು ಕೊಡುತ್ತಿರುತ್ತವೆ. ಶಾಸ್ತ್ರವನ್ನು ವಿಮರ್ಶಿಸುತ್ತಿರುವವರೂ ಸಹ ಎರಡು ಕಿವಿಗಳಿಂದಲೂ ಹಿರಿಯರಿಂದ ಶ್ರೀಹರಿಯ ಗುಣಗಳನ್ನು ಯಾವಾಗಲೂ ಕೇಳುತ್ತಿರಬೇಕು. ಒಂದು ಕ್ಷಣವೂ ಶಾಸ್ತ್ರಶ್ರವಣಗಳಿಲ್ಲದಿರಬಾರದು. ಅಖಂಡವಾಗಿ ಯಾವಾಗಲೂ ಮಾಡುತ್ತಿರುವ ಶಾಸ್ತ್ರಶ್ರವಣಗಳು ಕಿವಿಗಳಿಗೆ ಚಾಮರಗಳಂತೆ ಭೂಷಣಗಳೆನಿಸುತ್ತವೆ. ನಿನ್ನ ಅತ್ಯಂತ ಪರಿಶುದ್ಧವಾದ ಗುಣಗಳ ಶ್ರವಣಗಳು ಶುಭ್ರವಾದ ಅಂದರೆ ಬಿಳಿಬಣ್ಣದ ಚಾಮರಗಳೆನಿಸುತ್ತವೆ. ಈ ಶಾಸ್ತ್ರಶ್ರವಣಗಳೆಂಬ ಬಿಳಿಯ ಚಾಮರಗಳು ಮುಕ್ತಿಗೆ ಸಾಧನವೆನಿಸುತ್ತವೆ. ಆದ್ದರಿಂದ ಲೌಕಿಕಚಾಮರಗಳಿಗಿಂತ ಅತ್ಯುತ್ತಮವೆನಿಸಿದ ಶಾಸ್ತ್ರಶ್ರವಣಗಳೆಂಬ ಚಾಮರಗಳನ್ನೇ ಕೊಡು. ಲೌಕಿಕಚಾಮರಗಳು ಬೇಡ."

"ರಾಜನ ತಲೆಯ ಮೇಲೆ ಬಿಳಿಯ ಶ್ವೇತಛತ್ರವು ಶೋಭಿಸುತ್ತಿರುವುದುಂಟು. ಆ ಕೊಡೆಯು ಬಿಸಿಲಿನ ತಾಪವನ್ನು ಪರಿಹರಿಸಿ ರಾಜನನ್ನು ಸಂತೋಷಪಡಿಸುವುದುಂಟು. ಬಿಸಿಲಿಲ್ಲದಿರುವಾಗ ಅದರಿಂದ ಯಾವ ಫಲವೂ ಇಲ್ಲ. ಆದರೂ ರಾಜವೈಭವವೆಂದು ಹೇಳಲ್ಪಡುತ್ತಾ ರಾಜನನ್ನು ಸಂತೋಷಪಡಿಸುತ್ತಿದೆ. ನಿನ್ನ ಅಂಗೈಯನ್ನು ನನ್ನ ತಲೆಯಲ್ಲಿಡು. ಆ ಅಂಗೈಯು ಸಂಸಾರವೆಂಬ ಬಿಸಿಲಿನಿಂದ ಏರ್ಪಡುತ್ತಿರುವ ಎಲ್ಲಾ ತಾಪಗಳನ್ನೂ ಯಾವಾಗಲೂ ಪರಿಹರಿಸುತ್ತಾ ಸಕಲ ಭಕ್ತರನ್ನೂ ರಕ್ಷಿಸುತ್ತಿದೆ. ಯಾವಾಗಲೋ ಒಮ್ಮೆ ರಾಜನನ್ನು ಮಾತ್ರ ಸಂತೋಷಪಡಿಸುತ್ತಿರುವ ಶ್ವೇತಛತ್ರಕ್ಕಿಂತ ಸಕಲ ಸಜ್ಜನರನ್ನೂ ಯಾವಾಗಲೂ ಸಂಸಾರತಾಪದಿಂದ ಸಂರಕ್ಷಿಸುತ್ತಿರುವ ನಿನ್ನ ಕೈಗಳೆಂಬ ಶ್ವೇತಛತ್ರವು ಎಲ್ಲಾ ವಿಧದಿಂದಲೂ ಸರ್ವೋತ್ತಮವೆಂಬ ವಿಷಯದಲ್ಲಿ ಸಂಶಯವಿಲ್ಲ. ಆದ್ದರಿಂದ ನಿನ್ನ ಅಂಗೈಗಳೆಂಬ ಕಮಲದ ಕೊಡೆಗಳನ್ನು ನನ್ನ ತಲೆಯ ಮೇಲೆ ಯಾವಾಗಲೂ ಇಡು. ಲೌಕಿಕ ಶ್ವೇತಛತ್ರವು ಬೇಡ."

"ಶತ್ರುರಾಜರುಗಳಿಂದ ಬಾಧೆಯು ಏರ್ಪಡದಿರುವುದಕ್ಕಾಗಿ ಬಲವತ್ತರವಾದ ಕೋಟೆಯ ಮಧ್ಯದಲ್ಲಿ ರಾಜನು ವಾಸಿಸುವುದುಂಟು. ಕಲಿಯೂ ಅವನ ಪರಿವಾರದಲ್ಲಿ ಸೇರಿರುವ ದೈತ್ಯರೂ ಸಜ್ಜನರಿಗೆ ಶತ್ರುಗಳೆನಿಸುವರು. ಶ್ರೀಹರಿಯು ವಿಶೇಷವಾಗಿ ಸನ್ನಿಹಿತನಾಗಿರುವ ಕ್ಷೇತ್ರಗಳಲ್ಲಿ ಈ ಕಲಿಯಾಗಲೀ ಅವನ ಪರಿವಾರದಲ್ಲಿ ಸೇರಿರುವ ದೈತ್ಯರಾಗಲೀ ಯಾವ ಸಜ್ಜನರನ್ನೂ ಹೆಚ್ಚಾಗಿ ಬಾಧಿಸಲು ಶಕ್ತರಾಗಲಾರರು. ಆದ್ದರಿಂದ ಅಂತಹ ನಿನ್ನ ವಿಶೇಷಸನ್ನಿಧಾನದಿಂದ ಭೂಷಿತವಾಗಿರುವ ಕ್ಷೇತ್ರಗಳೇ ನನಗೆ ಕೋಟೆಯಾಗಿರಬೇಕು. ಆ ಕೋಟೆಯಲ್ಲಿ ಯಾವಾಗಲೂ ವಾಸಿಸುತ್ತಾ ಶಾಸ್ತ್ರಗಳನ್ನು ವಿಮರ್ಶಿಸುತ್ತಿರುವಂತೆ ನನ್ನನ್ನು ಅನುಗ್ರಹಿಸು. ಲೌಕಿಕವಾದ ಕೋಟೆಯು ಬೇಡ."

"ಕವಚವನ್ನು ಧರಿಸಿರುವ ರಾಜನನ್ನು ಶತ್ರುಗಳಿಂದ ಪ್ರಯೋಗಿಸಲ್ಪಟ್ಟ ಯಾವ ಆಯುಧಗಳೂ ಪೀಡಿಸಲಾರವು. ಸಜ್ಜನರ ಶತ್ರುಗಳಾದ ಕಲಿಯೂ ಅವನ ಪರಿವಾರದಲ್ಲಿ ಸೇರಿರುವ ದೈತ್ಯರೂ ಕಾಮ, ಕ್ರೋಧ, ಮುಂತಾದ ಆಯುಧಗಳಿಂದ ಸಜ್ಜನರನ್ನು ಹಿಂಸಿಸಲು ಉದ್ಯುಕ್ತರಾಗುವರು. ಈ ಸಜ್ಜನರಲ್ಲಿ ಶ್ರೀಮಧ್ವಾಚಾರ್ಯರು ಮುಂತಾದ ಪೂಜ್ಯರ ಕರುಣೆಯಿದ್ದರೆ ಕಾಮ, ಕ್ರೋಧ ಮುಂತಾದವುಗಳಿಂದ ಬಾಧೆಯು ಏರ್ಪಡಲಾರದು. ಆದ್ದರಿಂದ ಪೂಜ್ಯರ ಕರುಣೆಯೇ ಕವಚವೆನಿಸುತ್ತದೆ. ಆ ಕವಚವನ್ನು ಕೊಡು. ಲೌಕಿಕವಾದ ಕವಚವು ಬೇಡ."

" ಶತ್ರುಗಳು ಯುದ್ಧಕ್ಕೆ ಬಂದಾಗ ಅವರೊಡನೆ ಯುದ್ಧವನ್ನೂ ಮಾಡುವುದಕ್ಕೆ ರಥದ ಆವಶ್ಯಕತೆಯು ರಾಜನಿಗಿದೆ. ಸಜ್ಜನರು ತಮ್ಮ ಪರಿಶುದ್ಧವಾದ ಮನಸ್ಸುಗಳಿಂದ ಶ್ರೀಹರಿಯನ್ನು ಧ್ಯಾನಿಸುತ್ತಿರುವರು. ಶ್ರೀಹರಿಯು ಸಜ್ಜನರ ಭಕ್ತಿಗೆ ಮೆಚ್ಚಿ ಸಜ್ಜನರ ಮನಸ್ಸುಗಳಲ್ಲಿ ಸ್ಥಿರವಾಗಿ ನಿಂತುಬಿಡುವನು. ಆಗ ಅವನ ಪಾದಗಳಲ್ಲಿರುವ ಧ್ವಜರೇಖೆಗಳು ಮನಸ್ಸುಗಳಲ್ಲಿ ಸ್ಥಿರವಾಗಿ ನಿಂತುಬಿಡುತ್ತದೆ. ಸ್ಥಿರವಾಗಿ ನಿಂತಿರುವ ಧ್ವಜರೇಖೆಗಳಿಂದ ಯುಕ್ತವಾಗಿರುವ ಮನಸ್ಸುಗಳೇ ಧ್ವಜಸ್ತಂಭಗಳಿಂದ ಯುಕ್ತವಾಗಿರುವ ರಥಗಳೆನಿಸುತ್ತವೆ. ರಥಗಳು ಅತಿವೇಗದಿಂದ ಶತ್ರುಗಳನ್ನು ನಿಗ್ರಹಿಸುವುದಕ್ಕಾಗಿ ಮುನ್ನುಗ್ಗುತ್ತಿರುವಂತೆ ಶ್ರೀಹರಿಯ ನಿರಂತರ ಧ್ಯಾನದಿಂದ ಯುಕ್ತವಾಗಿರುವ ಮನಸ್ಸುಗಳೆಂಬ ರಥಗಳೂ ಕಲಿ ಮುಂತಾದ ದೈತ್ಯರನ್ನು ನಿಗ್ರಹಿಸುವದಕ್ಕಾಗಿ ಅತಿ ವೇಗದಿಂದ ಮುಂದುವರಿಯುತ್ತಿರಬೇಕು. ಓ ಕೃಷ್ಣದೇವ, ನಿನ್ನನ್ನು ಯಾವಾಗಲೂ ಧ್ಯಾನಿಸುತ್ತಾ ನಿನ್ನ ಪಾದಗಳಲ್ಲಿರುವ ಧ್ವಜರೇಖೆಯಿಂದ ಶೋಭಿಸುತ್ತಿರುವ ಮನಸ್ಸೆಂಬ ರಥವನ್ನು ಕೊಡು. ಲೌಕಿಕವಾದ ರಥವು ಬೇಡ."

" ರಾಜನ ರಥಗಳಿಗೆ ಯೋಗ್ಯವಾದ ಕುದುರೆಗಳು ಬೇಕು. ಅಯೋಗ್ಯವಾದ ಕುದುರೆಗಳು ಅಮಾರ್ಗದಲ್ಲಿ

ರಥವನ್ನು ಶೆಳೆದುಕೊಂಡು ಹೋಗಿ ರಾಜನಿಗೆ ನಾನಾ ವಿಧವಾದ ಆಪತ್ತುಗಳನ್ನು ಕೊಡುತ್ತವೆ. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂಬ ನಾಲ್ಕು ವೇದಗಳು ಯಾರಿಂದಲೂ ರಚಿಸಲ್ಪಟ್ಟಿಲ್ಲ. ಆದ್ದರಿಂದ ಪರಮಪ್ರಮಾಣಗಳೆನಿಸುತ್ತವೆ. ಈ ನಾಲ್ಕು ವೇದಗಳು ಸರಿಯಾದ ಮಾರ್ಗದಲ್ಲಿಯೇ ಹೋಗುತ್ತವೆ. ಅಮಾರ್ಗದಲ್ಲಿ ಹೋಗುವುದಿಲ್ಲ. ನನ್ನ ಮನಸ್ಸೆಂಬ ರಥಕ್ಕೆ ನಾಲ್ಕು ವೇದಗಳೆಂಬ ಕುದುರೆಗಳನ್ನು ಕಟ್ಟಬೇಕು. ಆ ವೇದಗಳು ಹೋದ ಮಾರ್ಗದಲ್ಲಿಯೇ ನನ್ನ ಮನಸ್ಸೆಂಬ ರಥವೂ ಹೋಗಬೇಕು. ಆಗ ನನಗೆ ಯಾವ ವಿಧವಾದ ವಿಪತ್ತೂ ಇಲ್ಲ. ಆದ್ದರಿಂದ ನನ್ನ ಮನಸ್ಸೆಂಬ ರಥದಲ್ಲಿ ನಾಲ್ಕು ವೇದಗಳೆಂಬ ಕುದುರೆಗಳನ್ನು ಕಟ್ಟಬೇಕು. ಲೌಕಿಕವಾದ ಕುದುರೆಗಳು ಬೇಡ."

"ಕುದುರೆಗಳನ್ನು ಓಡಿಸುವುದಕ್ಕೆ ಸಾರಥಿಯು ಬೇಕು. ಆ ಸಾರಥಿಯೂ ಸಮರ್ಥನಾಗಿರಬೇಕು. ಅಸಮರ್ಥನಾಗಿದ್ದರೆ. ಕುದುರೆಗಳನ್ನು ಅಮಾರ್ಗದಲ್ಲಿ ಓಡಿಸಿ ಯಜಮಾನನಾದ ರಾಜನಿಗೆ ಆಪತ್ತುಗಳು ಏರ್ಪಡುವಂತೆ ಮಾಡುವನು. ಮುಖ್ಯಪ್ರಾಣದೇವರು ಸರ್ವಜ್ಞರು. ಅವರು ವೇದಗಳ ನಿಜಾರ್ಥಗಳನ್ನು ತಿಳಿದವರು. ಅವರು ವೇದಗಳಿಗೆ ನಿಜಾರ್ಥವನ್ನು ತಿಳಿಸುತ್ತಾ ವೇದಗಳನ್ನು ಸನ್ಮಾರ್ಗದಲ್ಲಿ ಹೋಗುವಂತೆ ಮಾಡುತ್ತಾ ಸಜ್ಜನರಾದ ರಥಿಕರನ್ನು ರಕ್ಷಿಸುವರು. ಆದ್ದರಿಂದ ನನ್ನ ಮನಸ್ಸೆಂಬ ರಥವು ಸರಿಯಾಗಿ ಹೋಗುವುದಕ್ಕಾಗಿ ಮುಖ್ಯಪ್ರಾಣದೇವರೇ ಸಾರಥಿಯಾಗಿರಬೇಕು. ಲೌಕಿಕಸಾರಥಿಗಳು ಬೇಡ."

" ರಥ, ಕುದುರೆ, ಸಾರಥಿ ಮುಂತಾದ ಸಲಕರಣೆಗಳು ಏರ್ಪಟ್ಟರೂ ಶತ್ರುಗಳನ್ನು ಜಯಿಸುವುದಕ್ಕೆ ಆಯುಧಗಳು ಬೇಕು. ಆ ಆಯುಧಗಳೂ ಅತ್ಯಂತ ಬಲಿಷ್ಠವಾಗಿರಬೇಕು. ಇಲ್ಲದಿದ್ದರೆ ಅರ್ಜುನನ ರಥದಲ್ಲಿ ಕುಳಿತ ಉತ್ತರಕುಮಾರನ ಗತಿಯಾಗುವುದು. ಓ ಕೃಷ್ಣದೇವ, ಹರಿ, ನಾರಾಯಣ, ಗೋವಿಂದ ಮುಂತಾದ ನಿನ್ನ ಅನಂತ ಹೆಸರುಗಳೇ ಆಯುಧಗಳು. ಈ ಆಯುಧಗಳಿಂದ ಸೋಲದಿರುವ ಶತ್ರುಗಳೇ ಇಲ್ಲ. ನಿನ್ನ ಹೆಸರುಗಳನ್ನು ಹೇಳುವುದರಿಂದ ಸಂಸಾರವೇ ಓಡುತ್ತಿರುವಾಗ ಚಿಲ್ಲರೆ ಶತ್ರುಗಳ ಪಾಡೇನು? ಆದುದರಿಂದ ಕಲಿ ಮುಂತಾದ ಸಕಲ ಶತ್ರುಗಳನ್ನೂ ಜಯಿಸುವುದಕ್ಕೆ ಮುಖ್ಯಸಾಧನಗಳಾಗಿರುವ ನಿನ್ನ ಹೆಸರುಗಳೆಂಬ ಆಯುಧಗಳು ಬೇಕು. ಲೌಕಿಕವಾದ ಬೇರೆ ಆಯುಧಗಳು ಬೇಡ."

" ಅತ್ಯುತ್ತಮವಾದ ಕೋಟೆ, ಕವಚ, ರಥ, ಕುದುರೆ, ಸಾರಥಿ ಮತ್ತು ಆಯುಧಗಳನ್ನು ಪಡೆದಿರುವ ನಾನು ನಿಗ್ರಹಿಸುವ ಶತ್ರುಗಳೂ ಪಡೆಯುವ ಪ್ರಯೋಜನವೂ ಪ್ರಬಲವಾಗಿರಬೇಕು. ಅವುಗಳನ್ನು ಈಗ ಹೇಳುವೆನು. ಕಲಿಯನ್ನೂ ಅವನ ಸೇವಕರಾದ ಎಲ್ಲಾ ದೈತ್ಯರನ್ನೂ ಅವರ ಪಟ್ಟಣವಾಗಿರುವ ಸಂಸಾರವನ್ನೂ ಜಯಿಸಬೇಕು. ಮುಕ್ತರು ವಾಸಿಸುತ್ತಿರುವ ಅನಂತಾಸನ, ಶ್ವೇತದ್ವೀಪ, ವೈಕುಂಠ ಎಂಬ ಮೂರು ನಗರಗಳಿಗೂ ಹೋಗಬೇಕು. ಇವೆಲ್ಲವೂ ಬೇರೆ ಯಾವ ಕೋಟೆ ಮುಂತಾದ ಸಾಧನಗಳಿಂದ ಸಾಧ್ಯವಿಲ್ಲ. ಆದ್ದರಿಂದ ನನಗೆ ಹಿಂದೆ ಹೇಳಿರುವ ನಿನ್ನ ವಿಶೇಷ ಸನ್ನಿಧಾನವುಳ್ಳ ಕೋಟೆ ಮುಂತಾದವುಗಳನ್ನು ಕೊಡು. ಕಲಿ ಮುಂತಾದ ಶತ್ರುಗಳನ್ನೂ ಅವರ ಪಟ್ಟಣವಾಗಿರುವ ಸಂಸಾರವನ್ನೂ ಜಯಿಸುವಂತೆ ಮಾಡು. ಮುಕ್ತರು ವಾಸಿಸುತ್ತಿರುವ ಅನಂತಾಸನ ಮುಂತಾದ ನಗರಗಳಲ್ಲಿ ವಾಸಿಸುವಂತೆ ಮಾಡು. ಬೇರೆ ಯಾವ ಫಲವೂ ನನಗೆ ಬೇಡ."

" ಮಹಾಪ್ರಭೋ, ನೀನು ಯಾವಾಗಲೂ ಪೂರ್ಣನಾಗಿರುವಿ. ಆದ್ದರಿಂದ ನಿನಗೆ ಇತರರಿಂದ ಯಾರಿದಂಲೂ ಆಗಬೇಕಾದ ಯಾವ ಪ್ರಯೋಜನವೂ ಇಲ್ಲ. ನಿನ್ನ ಸೇವೆಯನ್ನು ಮಾಡುತ್ತಾ ನಿನ್ನ ಭಕ್ತರೆಲ್ಲರೂ

ಪೂರ್ಣರಾಗಿರುವರು. ಆದ್ದರಿಂದ ನಿನ್ನ ಭಕ್ತರಿಗೂ ಇತರರಿಂದ ಆಗಬೇಕಾದ ಯಾವ ಪ್ರಯೋಜನವೂ ಇಲ್ಲ. ಆದ್ದರಿಂದ ನಿನ್ನ ಭಕ್ತನಾದ ನಾನು ನಿನ್ನ ಸೇವೆಯನ್ನೇ ಯಾವಾಗಲೂ ಮಾಡುತ್ತಾ ಯಾವ ವಿಧವಾದ ಫಲವನ್ನೂ ಬಯಸದಂತೆ ಮಾಡು.''

'' ನನಗೆ ಯಾವ ವಿಧವಾದ ಪ್ರಯೋಜನವೂ ಬೇಡವೆಂದು ಹೇಳಿದೆನು. ಆ ಪ್ರಯೋಜನಗಳಿಗೆ ಸಾಧನವಾಗಿರುವ ಲೌಕಿಕವಾದ ರಾಜ್ಯ ಮುಂತಾದವುಗಳೂ ಬೇಡವೆಂದು ಹೇಳಿದೆನು. ಆದರೆ ಲೌಕಿಕವಾದ ರಾಜ್ಯವನ್ನೂ ಅದಕ್ಕೆ ಆವಶ್ಯಕವಾಗಿರುವ ಕವಚ, ರಥ, ಸಾರಥಿ, ಕುದುರೆಗಳು, ಆಯುಧ ಮುಂತಾದ ಎಲ್ಲಾ ಸಲಕರಣೆಗಳನ್ನೂ ಕೊಡುವುದಾಗಿ ನೀನು ಆಜ್ಞಾಪಿಸುತ್ತಿರುವಾಗ ಅವುಗಳೆಲ್ಲವನ್ನೂ ಬೇಡವೆಂದು ಧಿಕ್ಕರಿ ಸುತ್ತಿರುವುದು ನಿನ್ನ ಭಕ್ತನಾದ ನನಗೆ ಯೋಗ್ಯವಲ್ಲ. ಆದುದರಿಂದ ಅವುಗಳನ್ನೆಲ್ಲವನ್ನೂ ಸ್ವೀಕರಿಸುವೆನು. ಹೀಗೆ ಅವುಗಳೆಲ್ಲವನ್ನೂ ಸ್ವೀಕರಿಸವುದಕ್ಕೂ ಮುಖ್ಯವಾದ ಒಂದು ಕಾರಣವಿದೆ. ಆ ಕಾರಣವನ್ನು ಈಗ ನಿನ್ನಲ್ಲಿ ವಿಜ್ಞಾಪಿಸಿಕೊಳ್ಳುವೆನು.''

'' ಓ ಮಹಾಪ್ರಭೋ, ನೀನು ಸಕಲ ಭಾಗ್ಯಗಳಿಗೂ ಅಭಿಮಾನಿನಿಯಾಗಿರುವ ಲಕ್ಷ್ಮೀದೇವಿಯರಿಗೆ ಗಂಡನಾಗಿರುವಿ. ಆದುದರಿಂದ ನಿನ್ನ ಭಕ್ತರಿಗೆ ಈ ಲೋಕಗಳಲ್ಲಿಯೂ ಪರಲೋಕಗಳಲ್ಲಿಯೂ ಎಲ್ಲಾ ಭಾಗ್ಯಗಳನ್ನೂ ಕೊಡಲು ಶಕ್ತನಾಗಿರುವಿ. ಅದು ಮಾತ್ರವಲ್ಲ. ಯಾರಿದಂಲೂ ಕೊಡಲು ಸಾಧ್ಯವಿಲ್ಲದ ಮೋಕ್ಷವನ್ನೂ ನಿನ್ನ ಭಕ್ತರಿಗೆ ಕೊಡುತ್ತಿರುವಿ.''

'' ಇಂತಹ ನಿನ್ನನ್ನು ಅಸಂಖ್ಯರಾದ ಭಕ್ತರು ಸೇವಿಸುತ್ತಿರುವರು. ಶಾಸ್ತ್ರಗಳನ್ನೂ ಯಾವಾಗಲೂ ಅಧ್ಯಯನ ಮಾಡುತ್ತಾ ನಿನ್ನ ಗುಣಗಳ ವಿಷಯದಲ್ಲಿ ಜ್ಞಾನವನ್ನು ಪ್ರತಿದಿನಗಳಲ್ಲಿಯೂ ಹೆಚ್ಚಿಸಿಕೊಳ್ಳುತ್ತಿರುವರು. ಭಕ್ತಿಯು ಹೆಚ್ಚುತ್ತಾ ಬಂದಂತೆ ಅವರಲ್ಲಿ ಆನಂದವು ಹೆಚ್ಚುತ್ತಿರುತ್ತದೆ. ಆನಂದವು ಹೆಚ್ಚಿದಂತೆ ಅವರ ದೇಹಗಳಲ್ಲಿ ಆನಂದದ ಗುರುತುಗಳು ತಿಳಿಯುತ್ತಿವೆ. ಮೈಗಳಲ್ಲಿ ರೋಮಗಳು ಎದ್ದು ನಿಲ್ಲುತ್ತಿವೆ. ಕಣ್ಣುಗಳಿಂದ ಆನಂದದ ಕಣ್ಣೀರುಗಳು ಸುರಿಯುತ್ತಿರುತ್ತವೆ.''

'' ಈ ರೀತಿಯಾದ ಭಕ್ತಿಪರಿಪಾಕವನ್ನು ಪಡೆದವರಿಗೆ ಈ ಲೋಕದಲ್ಲಿ ಯಾವ ವಿಧವಾದ ಸಂಪತ್ತನ್ನೂ ನೀನು ಕೊಡುವುದಿಲ್ಲ. ಆ ಸಂಪತ್ತುಗಳು ಬಂದರೆ ಅಹಂಕಾರ ಮುಂತಾದ ದೋಷಗಳು ಬಂದು ನಿನ್ನ ಸೇವೆಯನ್ನು ಬಿಡುವ ಸಂದರ್ಭವು ಬರಬಹುದು. ಹಾಗೆ ಅಹಂಕಾರಾದಿಗಳು ಬಂದರೆ ಭಕ್ತನನ್ನು ನರಕದ ದ್ವಾರದಲ್ಲಿ ತಳ್ಳಿದಂತಾಗುವುದು ಎಂಬ ಅಭಿಪ್ರಾಯದಿಂದಲೇ ನಿನ್ನ ಭಕ್ತರ ಶ್ರೇಯಸ್ಸಿಗಾಗಿಯೇ ನೀನು ನಿನ್ನ ಭಕ್ತರಿಗೆ ಸಂಪತ್ತನ್ನು ಕೊಡುವುದಿಲ್ಲ.''

'' ಈ ರಹಸ್ಯವನ್ನು ತಿಳಿಯದ ಅಜ್ಞಾನಿಗಳು "ಶ್ರೀಕೃಷ್ಣಭಕ್ತರಿಗೆ ಈ ಲೋಕದಲ್ಲಿ ಯಾವ ಸಂಪತ್ತುಗಳೂ ಇಲ್ಲ. ಅಲ್ಪವಾದ ಈ ಲೋಕದ ಸಂಪತ್ತುಗಳೇ ಇಲ್ಲದವರಿಗೆ ಉತ್ತಮವಾದ ಪರಲೋಕದ ಸಂಪತ್ತುಗಳು ಬರುವುದು ಅಶಕ್ಯ.'' ಎಂದು ನಿನ್ನಲ್ಲಿ ಒಂದು ಅಪವಾದವನ್ನು ಹೊರಿಸಿರುವರು. '' ಈ ಅಪವಾದವು ಸುಳ್ಳು'' ಎಂದು ನಿನ್ನ ಭಕ್ತನಾದವನು ಯಾರಾದರೂ ಒಬ್ಬನು ತಿಳಿಸಲೇ ಬೇಕು.''

"ಅದಕ್ಕಾಗಿ ನೀನು ಕೊಡುವ ಎಲ್ಲಾ ಸಂಪತ್ತುಗಳನ್ನೂ ನಾನು ಸ್ವೀಕರಿಸುವೆನು. '' ನಿನ್ನ ಭಕ್ತರಿಗೂ ಈ

ಲೋಕದ ಎಲ್ಲಾ ಸಂಪತ್ತುಗಳೂ ಇವೆ'' ಎಂದು ತಿಳಿಸುವೆನು. ನಿನ್ನನ್ನು ಧಿಕ್ಕರಿಸುತ್ತಿರುವ ಅಯೋಗ್ಯರು ನಿನ್ನನ್ನು ಇನ್ನು ಮುಂದೆ ಧಿಕ್ಕರಿಸದಂತೆ ಮಾಡುವೆನು. ಆದರೆ ನನಗೆ ಈ ಸಂಪತ್ತುಗಳೆಲ್ಲವೂ ಬಂದದ್ದರಿಂದ ಗರ್ವವು ಬರಬಾರದು. ಎಲ್ಲಾ ಸಂಪತ್ತುಗಳನ್ನೂ ನನಗೆ ಕೊಡು. ಅಹಂಕಾರವು ಬಾರದಂತೆಯೂ ಮಾಡು. ಇದು ನನ್ನ ಪ್ರಾರ್ಥನೆ.''

ಹೀಗೆ ಉಗ್ರಸೇನನು ಭಕ್ತಿ ಪರವಶನಾಗಿ ಪ್ರಾರ್ಥಿಸಿದನು. ಶ್ರೀಕೃಷ್ಣದೇವನು ಉಗ್ರಸೇನನನ್ನು ಎತ್ತರವಾದ ಪೀಠದಲ್ಲಿ ಕುಳ್ಳಿರಿಸಿದನು. ಶಾಸ್ತ್ರೋಕ್ತವಿಧಿಯಿಂದ ಪಟ್ಟಾಭಿಷೇಕವನ್ನು ಮಾಡಿಸಿದನು. ಈ ಉತ್ಸವಕ್ಕೆ ಭೂಲೋಕದಲ್ಲಿಯೂ ದೇವಲೋಕದಲ್ಲಿಯೂ ಇರುವ ಸರ್ವರೂ ಬಂದರು. ತಮ್ಮಲ್ಲಿರುವ ಉತ್ತಮವಾದ ವಸ್ತುಗಳೆಲ್ಲವನ್ನೂ ಬಹುಮಾನಕ್ಕಾಗಿ ಉಡುಗರೆ ಮಾಡಿದರು. ಮೂರು ಲೋಕಗಳ ಅಧಿಪತಿಯಾದ ದೇವೇಂದ್ರನು "ಸುಧರ್ಮಾ'' ಎಂಬ ದೇವಸಭೆಯನ್ನೇ ಕೊಟ್ಟನು. ಹೀಗಿರುವಾಗ ಇತರ ದೇವತೆಗಳೆಲ್ಲರೂ ತಮ್ಮಲ್ಲಿರುವ ಅಮೂಲ್ಯಮಣಿಗಳು ಮುಂತಾದವುಗಳನ್ನು ಕೊಟ್ಟಿದ್ದರಲ್ಲಿ ಆಶ್ಚರ್ಯವೇನಿದೆ? ಯದುರಾಜರ ರಾಜ್ಯದಲ್ಲಿ ಪಟ್ಟಾಭಿಷಿಕ್ತನಾದ ಉಗ್ರಸೇವನನು ಮೂರು ಲೋಕಗಳಿಂದಲೂ ಮಾನ್ಯನಾದನು.

## ಉಗ್ರಸೇನನ ಮುಂದೆ ಶ್ರೀಕೃಷ್ಣದೇವನ ಪ್ರಮಾಣ

ಪಟ್ಟಾಭಿಷೇಕವು ಅತ್ಯಂತ ವೈಭವದಿಂದ ಮುಗಿಯಿತು. ಅಲ್ಲಿದ್ದ ಒಬ್ಬೊಬ್ಬ ಅಧಿಕಾರಿಗಳೂ ರಾಜನ ಮುಂದೆ ಬಂದು ನಿಂತರು. ತಮ್ಮ ಅಧಿಕಾರಕ್ಕೆ ಒಳಪಟ್ಟ ಒಂದೊಂದು ಕಾರ್ಯಗಳನ್ನೂ ಮಾಡುವೆವು ಎಂದು ಪ್ರಮಾಣಪೂರ್ವಕವಾಗಿ ಹೇಳಿದರು.

ಆಗ ಶ್ರೀಕೃಷ್ಣದೇವನೂ ಮುಂದೆ ಬಂದು ನಿಂತನು. "ಉಗ್ರಸೇನ ಮಹಾರಾಜರೇ, ನಿಮ್ಮ ಸೈನ್ಯದ ಮಧ್ಯದಲ್ಲಿ ನಾನು ಒಬ್ಬನಾಗಿರುವೆನು. ನಿಮ್ಮ ಮಾತುಗಳಂತೆ ನಡೆದುಕೊಳ್ಳುವೆನು'' ಎಂದು ಪ್ರತಿಜ್ಞೆ ಮಾಡಿದನು. ಈ ಎರಡು ಪ್ರತಿಜ್ಞೆಗಳೂ ಸತ್ಯವೇ ಆಗಿರುತ್ತವೆ. ಹದಿನಾಲ್ಕು ಲೋಕಗಳ ಮಧ್ಯದಲ್ಲಿರುವ ಶ್ರೀಕೃಷ್ಣದೇವನು ಉಗ್ರಸೇನನ ಸೈನ್ಯದ ಮಧ್ಯದಲ್ಲಿಲ್ಲವೇ? ಎಲ್ಲಾ ಭಕ್ತರೂ ಹೇಳಿದಂತೆ ಕೇಳುತ್ತಿರುವ ಭಕ್ತಪರಾಧೀನನಾದ ಶ್ರೀಕೃಷ್ಣದೇವನು ಉಗ್ರಸೇನನು ಹೇಳಿದಂತೆ ನಡೆಯುವುದರಲ್ಲಿ ತಪ್ಪೇನಿದೆ? ಯದುರಾಜನ ರಾಜ್ಯದಲ್ಲಿ ಶ್ರೀಕೃಷ್ಣದೇವನು ಉಗ್ರಸೇನನಿಗೆ ಪಟ್ಟಾಭಿಷೇಕವನ್ನು ಮಾಡಿಸಿದನು. ಇದರಿಂದ ಹಿಂದಿನ ಮತ್ತು ಮುಂದಿನ ಸಕಲ ಬ್ರಹ್ಮಾಂಡಗಳಿಗೂ ಅಧಿಪತಿಯಾದ ಶ್ರೀಹರಿಯು ತನ್ನ ಅಧೀನವಾಗಿರುವ ಈಗಿನ ಬ್ರಹ್ಮಾಂಡದಲ್ಲಿ ಭೂಲೋಕದಲ್ಲಿರುವ ಯದುರಾಜ್ಯ ಎಂಬ ಅಲ್ಪಪ್ರದೇಶದ ಆಧಿಪತ್ಯವನ್ನು ಕೆಲಕಾಲದ ವರೆಗೆ ಮಾತ್ರ ಉಗ್ರಸೇನನಿಗೆ ಕೊಟ್ಟದ್ದರಿಂದ ಶ್ರೀಕೃಷ್ಣದೇವನಿಗೆ ಗೌರವವೇನಾದರೂ ಕಡಿಮೆಯಾಯಿತೇ?

## ಶ್ರೀಕೃಷ್ಣದೇವನ ಪ್ರಾರ್ಥನೆ

ವಕ್ರನಾದ ತ್ರಿವಕ್ರೆಯ ಶರೀರವನ್ನು ಋಜುವಾಗುವಂತೆ ಮಾಡಿರುವ ಶ್ರೀಕೃಷ್ಣದೇವನು ನನ್ನ ಮನಸ್ಸಿನಲ್ಲಿಯೂ ಇಂದ್ರಿಯಗಳಲ್ಲಿಯೂ ಇರುವ ಎಲ್ಲಾ ವಕ್ರತೆಯನ್ನೂ ಅಂದರೆ ವಿಷಯಗಳಲ್ಲಿ ಆಸೆ ಮುಂತಾದ ಎಲ್ಲಾ ದೋಷಗಳನ್ನೂ ಪರಿಹರಿಸಲಿ. ಸದ್ವಿಷಯಗಳಲ್ಲಿ ಪ್ರವೃತ್ತವಾಗುವಂತೆ ಮಾಡಲಿ. ಚಾಣೂರ ಮುಂತಾದ

ಜಟ್ಟಿಗಳನ್ನು ಸಂಹರಿಸಿದ ಪ್ರಭುವು ನನ್ನ ಶತ್ರುಗಳೆಲ್ಲರನ್ನೂ ಸಂಹರಿಸಲಿ. ಸೋದರಮಾವನಾದ್ದರಿಂದ ಬಂಧುವಾದವನೂ ತನ್ನ ತಂದೆತಾಯಿಗಳನ್ನು ಬಂಧನ ಮಾಡಿರುವವನೂ ಆಗಿರುವ ಕಂಸನನ್ನು ಹಿಂಸಿಸಿದ ಶ್ರೀಹರಿಯು ಸಂಸಾರದಲ್ಲಿ ಹೆಚ್ಚಿನ ಬಂಧನಕ್ಕೆ ಕಾರಣರಾಗಿರುವವರೂ ಮಮತೆಯನ್ನು ಹೆಚ್ಚಿಸುವವರೂ ಆಗಿರುವ ಸ್ನೇಹಿತರೇ ಮೊದಲಾದ ಬಂಧುಗಳಿಗೂ ನನಗೂ ಸಂಬಂಧವನ್ನು ಕಡಿದುಹಾಕಲಿ. ಮಧುರವಾದುದರಿಂದ ಮಧುರಾ ಎಂದು ಪ್ರಸಿದ್ಧವಾಗಿರುವ ಮಧುರಾಪಟ್ಟಣದಲ್ಲಿ ಅವತರಿಸಿರುವ ಶ್ರೀಕೃಷ್ಣದೇವನು ಅತಿ ಮಧುರವಾದ ಶಾಸ್ತ್ರಾಭ್ಯಾಸ, ವ್ಯಾಖ್ಯಾನ ಮುಂತಾದ ಭಾರವನ್ನು ನನ್ನಲ್ಲಿ ಹೊರಿಸಲಿ. ರಂಗಸ್ಥಳದಲ್ಲಿ ಎಲ್ಲಾ ಮಲ್ಲರನ್ನೂ ಸಂಹರಿಸಿ ನರ್ತನಮಾಡಿದ ಶ್ರೀಕೃಷ್ಣದೇವನು ನನ್ನ ಮನಸ್ಸಿನಲ್ಲಿಯೂ ನರ್ತನಮಾಡಲಿ. ಮಧುರಾಪಟ್ಟಣವು ಶ್ರೀಕೃಷ್ಣದೇವನ ಅವತಾರದಿಂದ ಅಸದೃಶವಾದ ಪಟ್ಟಣವೆಂದು ಮೆರೆಯಿತು. ಅವನ ಸೌಂದರ್ಯವೂ ಅಸದೃಶವೆಂದು ಸರ್ವರಿಂದಲೂ ಹೊಗಳಲ್ಪಟ್ಟಿತು. ಅವನು ಕೊಡುವ ಮೋಕ್ಷ ಎಂಬ ಪುರುಷಾರ್ಥವೂ ಅಸದೃಶವೆಂದು ಸರ್ವರಿಂದಲೂ ಮಾನ್ಯವಾಯಿತು. ಆದುದರಿಂದ ಅವನನ್ನು ನನ್ನ ಮನಸ್ಸು ಯಾವಾಗಲೂ ಮರೆಯದಿರಲಿ. ನೀವೆಲ್ಲರೂ ಅವನನ್ನೇ ಸ್ಮರಿಸಿರಿ.

" ಮಧುರಾಪಟ್ಟಣದಲ್ಲಿ ತೀರ್ಥಗಳು ಶ್ರೀಕೃಷ್ಣದೇವನ ಉತ್ಕೃಷ್ಟವಾದ ಜಲಕ್ರೀಡಾದಿವಿಹಾರಗಳಿಂದ ಪರಮಪಾವನವಾಗಿವೆ. ಭೂಪ್ರದೇಶಗಳು ಶ್ರೀಕೃಷ್ಣದೇವನ ಸಂಚಾರದಿಂದ, ಅವನ ಕಾಲುಗಳಲ್ಲಿರುವ ವಜ್ರ, ಅಂಕುಶ ಪದ್ಮ ಮುಂತಾದ ಗುರುತುಗಳಿಂದ ಅಲಂಕರಿಸಲ್ಪಟ್ಟು ದೇವತೆಗಳಿಂದಲೂ ಮಾನ್ಯವಾಗಿವೆ. ಮನೆಗಳು ಶ್ರೀಕೃಷ್ಣದೇವನ ನಿರಂತರ ವಾಸದಿಂದ ಅವನ ಪತ್ನಿಯಾದ ಲಕ್ಷ್ಮೀದೇವಿಯರು ಆಸೆಯಿಂದ ಯಾವಾಗಲೂ ವಾಸಿಸುತ್ತಿರುವ ಮನೆಗಳಾಗಿವೆ. ಇಂತಹ ಶುಭಕರವಾದ ಮಧುರಾಪುರಿಯು ನಮ್ಮೆಲ್ಲರಿಗೂ ಎಲ್ಲಾ ಮಂಗಳಗಳನ್ನೂ ಶ್ರೇಯಸ್ಸುಗಳನ್ನೂ ಕೊಡಲಿ.

## ಉಗ್ರಸೇನನಿಗೆ ಮಂತ್ರಿಗಳಿಂದ ರಾಜನೀತಿಗಳ ಉಪದೇಶ

ಉಗ್ರಸೇನಮಹಾರಾಜನಿಗೆ ರಾಜನೀತಿಯ ಮರ್ಮವನ್ನು ತಿಳಿದಿರುವ ಮಂತ್ರಿಗಳು ರಾಜನೀತಿಯನ್ನು ಉಪದೇಶಿಸಿದರು. ಬಾಣವು ಹರಿತವಾಗಿರುತ್ತದೆ. ನಿಪುಣನಾದ ಸೈನಿಕನು ಆ ಬಾಣವನ್ನು ಬಿಟ್ಟರೆ ತಪ್ಪದೆ ಗುರಿಯನ್ನು ಹೊಂದುತ್ತದೆ. ಆ ಬಾಣದಂತೆ ರಾಜನ ಆಜ್ಞೆಯೂ ಉಗ್ರವೂ ಗುರಿಯನ್ನು ತಪ್ಪದೆಯೂ ಇರಬೇಕು. ಯುದ್ಧಕ್ಕಾಗಿ ರಾಜನು ಆಜ್ಞೆಯನ್ನು ಮಾಡಿದಾಗ ಸೈನಿಕರೆಲ್ಲರೂ ಹೆದರಿ ಹಿಂತಿರುಗಿ ನೋಡದಂತೆ ಮುಂದೆಯೇ ಹೋಗಬೇಕು. ಜಯಿಸಿದರೆ ಜಯಾಂಗನೆಯನ್ನು ಪಡೆದು ಹಿಂದಿರುಗಬೇಕು. ಜಯಿಸದಿದ್ದರೆ ಕೊನೆಯ ವರೆಗೂ ಯುದ್ಧವನ್ನು ಮಾಡಿ ಸಾಯಬೇಕು. ಪರಲೋಕದಲ್ಲಿ ದೇವಾಂಗನೆಯರನ್ನು ಪಡೆಯುವರು. ಈ ರೀತಿ ರಾಜನ ಆಜ್ಞೆಗೆ ಹೆದರಿ ಅದರಂತೆ ನಡೆಯುವ ಸೈನಿಕರು ಯಾರಲ್ಲಿರುವರೋ ಆ ರಾಜನು ಜಯಶೀಲನಾಗುವನು. ಆಜ್ಞಾಶಕ್ತಿಯೇ ಪ್ರಭುಶಕ್ತಿಯೆನಿಸುತ್ತದೆ.

(೧) ಯಾರಿಗೂ ಗುರುತುಹಿಡಿಯುವುದಕ್ಕೆ ಸಾಧ್ಯವಾಗದಂತೆ ಬೇರೆ ವೇಷಗಳನ್ನು ಧರಿಸಿ ಎಲ್ಲಾ ಕಡೆಗಳಲ್ಲಿಯೂ ಸಂಚರಿಸುತ್ತಾ ರಹಸ್ಯಗಳನ್ನು ತಿಳಿಯುವವನು ಚಾರನೆನಿಸುವನು. ಈ ಚಾರನಿಂದ ಶತ್ರುಗಳ ರಹಸ್ಯಗಳನ್ನೆಲ್ಲಾ ಯಾವಾಗಲೂ ತಿಳಿಯುತ್ತಿರಬೇಕು. (೨) ಯುದ್ಧಕ್ಕೆ ಉಪಯುಕ್ತವಾಗಿರುವ ಆನೆ ಕುದುರೆ

ಮುಂತಾದ ಸೈನ್ಯಗಳನ್ನು ಯಾವಾಗಲೂ ಸಿದ್ಧಪಡಿಸಿಕೊಳ್ಳಬೇಕು. (೩) ಶತ್ರುಗಳಿಂದ ಸುಲಭವಾಗಿ ಪ್ರವೇಶಿಸಲು ಸಾಧ್ಯವಾಗದಿರುವ ಕೋಟೆ ಮುಂತಾದ ಸ್ಥಳಗಳ ಮಧ್ಯದಲ್ಲಿ ವಾಸಿಸುತ್ತಿರಬೇಕು. ಇಂತಹ ರಾಜನೇ ಜಯಶೀಲನಾಗುವನು.

ತಮ್ಮ ಸಭೆಯಲ್ಲಿ ಉತ್ತಮರಾದ ಮಂತ್ರಿಗಳನ್ನಿಟ್ಟುಕೊಳ್ಳಬೇಕು. ಆ ಮಂತ್ರಿಗಳು ನೀತಿಶಾಸ್ತ್ರವನ್ನೂ ಹಳೆಯ ಎಲ್ಲಾ ವಿಷಯಗಳ್ನೂ ತಿಳಿದವರಾಗಿರಬೇಕು. ಅಂತಹ ಮಂತ್ರಿಗಳೊಡನೆ ವಿಮರ್ಶಿಸಿ ಮಾಡಬೇಕಾದ ಕೆಲಸಗಳನ್ನೂ ಬಿಡಬೇಕಾದ ಕೆಲಸಗಳನ್ನೂ ತೀರ್ಮಾನಿಸಬೇಕು. ಆ ತೀರ್ಮಾನದಂತೆಯೇ ನಡೆಯಬೇಕು. ಶತ್ರುಗಳ ಮಧ್ಯದಲ್ಲಿ ದಾನ ಅಂದರೆ ಹಣವನ್ನು ಕೊಡುವುದು ಮುಂತಾದ ಉಪಾಯಗಳಿಂದ ಅನ್ಯೋನ್ಯಕಲಹವು ಏರ್ಪಡುವಂತೆ ಮಾಡಿ ಅವರ ಶಕ್ತಿಯನ್ನು ಕುಗ್ಗಿಸಬೇಕು. ಹೀಗೆ ಮಾಡುವ ರಾಜನು ಜಯಶೀಲನಾಗುವನು.

ನೀತಿಶಾಸ್ತ್ರದಲ್ಲಿ ಹೇಳಿದಂತೆ ಮಂತ್ರಿಗಳೊಡಗೂಡಿ ಆಲೋಚಿಸುವುದು ನೀತಿಯೆನಿಸುತ್ತದೆ. ದಿಗ್ವಿಜಯಾದಿಗಳನ್ನು ಮಾಡುವುದಕ್ಕಾಗಿ ಯಾವಾಗಲೂ ಮಾಡುತ್ತಿರುವ ಉದ್ಯೋಗವು ಉತ್ಸಾಹವೆನಿಸುತ್ತದೆ. ಈ ಉತ್ಸಾಹವೂ ನೀತಿಯೂ ಒಟ್ಟುಗೂಡಿದಾಗ ನೀತಿಗೆ ಯೋಗ್ಯವಾದ ಕೀರ್ತಿಯೂ ಉತ್ಸಾಹಕ್ಕೆ ಯೋಗ್ಯವಾದ ಪ್ರತಾಪವೂ ಏರ್ಪಡುತ್ತದೆ. ನೀತಿ ಮಾತ್ರವಿದ್ದು ಉತ್ಸಾಹವಿಲ್ಲದಿದ್ದರೆ ಅಂದರೆ ಆಲಸ್ಯವು ಏರ್ಪಟ್ಟರೆ ಕೀರ್ತಿಯು ಬರಲಾರದು. ಪ್ರತಾಪವೂ ಏರ್ಪಡಲಾರದು.

ಇಲ್ಲಿ ಉತ್ಸಾಹ ಎಂಬ ಪದವು ಪುಲ್ಲಿಂಗವಾಗಿದೆ. ನೀತಿ ಎಂಬ ಪದವು ಸ್ತ್ರೀಲಿಂಗವಾಗಿದೆ. ಆದ್ದರಿಂದ ಉತ್ಸಾಹವೂ ನೀತಿಯೂ ಒಟ್ಟುಗೂಡಿದಂತಾಯಿತು. ಹೀಗೆ ಒಟ್ಟುಗೂಡಿದಾಗ ಮಕ್ಕಳು ಹುಟ್ಟುವುದು ಸಹಜವಾಗಿದೆ. ಸ್ತ್ರೀಯರಿಗೆ ಸ್ತ್ರೀಪ್ರಜ್ಞೆಯೂ ಗಂಡಸರಿಗೆ ಪುರುಷಪ್ರಜ್ಞೆಯೂ ಇಷ್ಟವಾಗಿರುವದರಿಂದ ಉತ್ಸಾಹದಿಂದ ಪ್ರತಾಪವೂ ನೀತಿಯಿಂದ ಕೀರ್ತಿಯೂ ಹುಟ್ಟಿರುವುದು ಯುಕ್ತವಾಗಿದೆ. ಆಲಸ್ಯ ಎಂಬ ಪದವು ನಪುಂಸಕ ಲಿಂಗವಾಗಿದೆ. ಆಲಸ್ಯವೂ ನೀತಿಯೂ ಒಟ್ಟುಗೂಡಿದಾಗ ಸ್ತ್ರೀಯೂ ನಪುಂಸಕನೂ ಒಟ್ಟುಗೂಡಿದಂತಾಯಿತು. ಅಂತಹ ಸಂದರ್ಭದಲ್ಲಿ ಕೀರ್ತಿಯೆಂಬ ಸ್ತ್ರೀಪ್ರಜ್ಞೆಯಾಗಲೀ ಪ್ರತಾಪವೆಂಬ ಪುರುಷಪ್ರಜ್ಞೆಯಾಗಲೀ ಹುಟ್ಟದಿರುವುದು ಅತ್ಯಂತ ಯುಕ್ತವಾಗಿದೆ.

(೧) ಒಳ್ಳೆಯ ಮಾತುಗಳಿಂದಲೇ ಶುತ್ರಗಳನ್ನು ವಶಪಡಿಸಿಕೊಳ್ಳುವುದು ಸಾಮೋಪಾಯವೆನಿಸುತ್ತದೆ. (೨) ಶತ್ರುಗಳಿಗೆ ಬೇಕಾದ ವಸ್ತುಗಳನ್ನು ಕೊಟ್ಟು ಅವರನ್ನು ವಶಪಡಿಸಿಕೊಳ್ಳುವುದು ದಾನೋಪಾಯವೆನಿಸುತ್ತದೆ. (೩) ಶತ್ರುಗಳಿಗೆ ಅಭಿಪ್ರಾಯಭೇದವು ಏರ್ಪಡುವಂತೆ ಮಾಡಿ ಅವರೆಲ್ಲರೂ ಅನ್ಯೋನ್ಯವಾಗಿ ಜಗಳಮಾಡಿಕೊಂಡು ಸಾಯುವಂತೆ ಮಾಡುವುದು ಭೇದೋಪಾಯವೆನಿಸುತ್ತದೆ. (೪) ಶತ್ರುಗಳ ಜೊತೆಯಲ್ಲಿ ತಾನೇ ಜಗಳವಾಡಿ ಅವರೆಲ್ಲರನ್ನೂ ನಿಗ್ರಹಿಸುವುದು ದಂಡೋಪಾಯವೆನಿಸುತ್ತದೆ. ಈ ಸಾಮ, ದಾನ, ಭೇದ, ದಂಡ ಎಂಬ ನಾಲ್ಕು ಉಪಾಯಗಳನ್ನು ಯಾವಾಗ ಉಪಯೋಗಿಸಬೇಕು ಎಂಬ ವಿಷಯವನ್ನು ತಿಳಿದು ಯಾವಾಗ ಯಾವ ಉಪಾಯವನ್ನು ಉಪಯೋಗಿಸಬೇಕೋ ಆಗ ಆ ಉಪಾಯವನ್ನು ಉಪಯೋಗಿಸಬೇಕು. ಈ ವಿಷಯವನ್ನು ತಿಳಿಯದೆ ಈ ಉಪಾಯಗಳನ್ನು ಮನಸ್ಸಿಗೆ ಬಂದಂತೆ ಉಪಯೋಗಿಸುವವನು ಎಷ್ಟು ಸಮರ್ಥನಾಗಿದ್ದರೂ ಪರಾಜಿತನಾಗುವನು.

"(೧) ಶತ್ರುಗಳೊಡನೆ ಸಂಧಾನ ಅಂದರೆ ರಾಜಿ ಮಾಡಿಕೊಳ್ಳುವುದು ಸಂಧಿಯೆನಿಸುತ್ತದೆ. (೨) ಜಗಳವನ್ನು ಮಾಡುವುದು ವಿಗ್ರಹವೆನಿಸುತ್ತದೆ. (೩) ಜಗಳಕ್ಕಾಗಿ ದಿಗ್ವಿಜಯಯಾತ್ರೆಯನ್ನು ಮಾಡುವುದು ಯಾನವೆನಿಸುತ್ತದೆ. (೪) ಜಗಳಕ್ಕಾಗಿ ಹೊರಡದೆ ಒಂದೇ ಸ್ಥಳದಲ್ಲಿರುವುದು ಆಸನವೆನಿಸುತ್ತದೆ. (೫) ಶತ್ರುಗಳಲ್ಲಿ ಪರಸ್ಪರ ಜಗಳವನ್ನು ಹುಟ್ಟಿಸುವುದು ದ್ವೈಧವೆನಿಸುತ್ತದೆ. (೬) ಶತ್ರುಗಳನ್ನು ಆಶ್ರಯಿಸುವುದು ಸಮಾಶ್ರಯವೆನಿಸುತ್ತದೆ. ಈ ಸಂಧಿ, ವಿಗ್ರಹ, ಯಾನ, ಆಸನ ದ್ವೈಧ, ಸಮಾಶ್ರಯ ಎಂಬ ಆರು ಗುಣಗಳನ್ನು ಯಾವ ಕಾಲದಲ್ಲಿ ಮಾಡಬೇಕೋ ಆ ಕಾಲವನ್ನು ತಿಳಿದಿರಬೇಕು. ಹಾಗೆ ತಿಳಿಯದೆ ತನ್ನ ಮನಸ್ಸಿಗೆ ಬಂದಂತೆ ಈ ಉಪಾಯಗಳನ್ನು ಉಪಯೋಗಿಸುವವನು ಅಪಕೀರ್ತಿಗೆ ಪಾತ್ರನಾಗುವನು."

" ಹಿಂದೆ ಹೇಳಿರುವ ಸಾಮ ಮುಂತಾದ ಹತ್ತು ಉಪಾಯಗಳಿಂದಲೂ ಹತ್ತು ದಿಕ್ಕುಗಳಲ್ಲಿರುವ ಎಲ್ಲಾ ಶತ್ರುಗಳನ್ನೂ ಜಯಿಸುವುದಕ್ಕೆ ಯಾವಾಗಲೂ ಪ್ರಯತ್ನಿಸದವನು ಸುಖಿಯಾಗಲಾರನು. ಕಣ್ಣು ಮುಂತಾದ ಐದು ಜ್ಞಾನೇಂದ್ರಿಯಗಳನ್ನು ಉಪಸ್ಥ ಮುಂತಾದ ಐದು ಕರ್ಮೇಂದ್ರಿಯಗಳನ್ನೂ ವಶಪಡಿಸಿಕೊಳ್ಳದ ಸನ್ಯಾಸಿಯಂತೆ ದುಃಖವನ್ನು ಪಡೆಯುವನು."

"ರಾಜನಲ್ಲಿರುವ ಕುಂತ ಮುಂತಾದ ಎಲ್ಲಾ ಆಯುಧಗಳೂ ಶತ್ರುಗಳಿಗೆ ಭಯವನ್ನೂ ತನ್ನ ಪ್ರಜೆಗಳಿಗೆ ಆನಂದವನ್ನೂ ಕೊಡುತ್ತಾ ಹುಲಿಯ ಹಲ್ಲಿನಂತಿರಬೇಕು. ಹುಲಿಯ ಹಲ್ಲುಗಳು ವೈರಿಗಳನ್ನು ಶೀಳುತ್ತವೆ. ಆದರೆ ತಮ್ಮ ಮರಿಗಳನ್ನು ಕಚ್ಚಿಕೊಂಡು ಹೋಗುತ್ತಿದ್ದರೂ ಸ್ವಲ್ಪವೂ ಬಾಧಿಸುತ್ತಿರುವುದಿಲ್ಲ. ಸಂತೋಷವನ್ನೇ ಕೊಡುತ್ತವೆ."

" ಗುಣವಂತರೂ ಒಳ್ಳೆಯ ಕುಲದಲ್ಲಿ ಹುಟ್ಟಿದವರೂ ಮನಸ್ಸಿನಲ್ಲಿ ಯೋಜಿಸಿದ್ದನ್ನೇ ಹೇಳುತ್ತಿರುವವರೂ ಹೇಳಿದ್ದನ್ನೇ ಮಾಡುತ್ತಿರುವವರೂ ಸಜ್ಜನರೆನಿಸುವರು. ಅಂತಹ ಸಜ್ಜನರ ಸಹವಾಸವನ್ನು ಮಾಡಬೇಕು. ಅಂತಹ ಸಜ್ಜನರನ್ನು ಬಿಟ್ಟರೂ ಸಹ ಅವರು ನಮಗೆ ಅಪಕಾರವನ್ನು ಮಾಡಲಾರರು. ನಮ್ಮ ವಿರೋಧಿಗಳನ್ನು ಎಲ್ಲಾ ದಿಕ್ಕುಗಳಲ್ಲಿಯೂ ನಿಗ್ರಹಿಸುತ್ತಾ ನಮ್ಮನ್ನು ಸಂತೋಷಪಡಿಸುವರು."

" ಯಾತ್ರಿಕರು ಹಗಲಿನಲ್ಲಿಯೂ ರಾತ್ರಿಯಲ್ಲಿ ಸಂಚರಿಸುತ್ತಿರುವರು. ರಾಜನ ಆಜ್ಞೆಗೆ ಭೀತರಾದ ಕಳ್ಳರು ಯಾವ ಯಾತ್ರಿಕರಿಗೂ ತೊಂದರೆಯನ್ನು ಕೊಡಬಾರದು. ಸೂರ್ಯನ ಬೆಳಕು ಹಗಲಿನಲ್ಲಿಯೂ ಚಂದ್ರನ ಬೆಳಕು ರಾತ್ರಿಯಲ್ಲಿಯೂ ಕಳ್ಳರ ಬಾಧೆಯಿಂದ ಜನರನ್ನು ಕಾಪಾಡಿದಂತೆ ರಾಜನ ಕಠೋರವಾದ ಆಜ್ಞೆಯು ಯಾತ್ರಿಕರನ್ನು ರಕ್ಷಿಸಬೇಕು. ಹೀಗೆ ಯಾರು ಮಾಡುವನೋ ಅವನ ಕೀರ್ತಿಯು ಎಲ್ಲಾ ದಿಕ್ಕುಗಳಲ್ಲಿಯೂ ವ್ಯಾಪಿಸುತ್ತದೆ."

"ಯಾವ ಪಕ್ಷದಲ್ಲಿ ನ್ಯಾಯವಿದೆಯೋ ಆ ಪಕ್ಷವನ್ನು ಸ್ವೀಕರಿಸಬೇಕು. ಅನ್ಯಾಯವಿರುವ ಪಕ್ಷವನ್ನು ಬಿಡಬೇಕು. ಇಂತಹ ರಾಜನಿಗೆ ಹಣವು ಪ್ರತಿಕ್ಷಣದಲ್ಲಿಯೂ ಹೆಚ್ಚುತ್ತದೆ."

" ಹಗಲಿನಲ್ಲಿ ಸೂರ್ಯನ ಬೆಳಕೂ ರಾತ್ರಿಯಲ್ಲಿ ಚಂದ್ರನ ಬೆಳಕೂ ಇರುತ್ತದೆ. ಈ ಬೆಳಕಿನಲ್ಲಿ ವ್ಯಭಿಚಾರ ಮುಂತಾದ ದುರ್ಮಾರ್ಗಗಳಲ್ಲಿ ಜನರು ಪ್ರವೃತ್ತರಾಗುವುದಕ್ಕೆ ಅಂಜುತ್ತಾರೆ. ಅದರಂತೆ ಯಾವ ರಾಜನ ರಾಜ್ಯದಲ್ಲಿ ಹಗಲಿನಲ್ಲಿಯೂ ರಾತ್ರಿಯಲ್ಲಿಯೂ ದುಷ್ಕರ್ಮಗಳನ್ನು ಮಾಡುವ ವಿಷಯದಲ್ಲಿ ಸರ್ವರೂ ಹೆದರುವರೋ ಆ ರಾಜನು ರಾಜಾ ಎಂಬ ಚಂದ್ರನ ಹೆಸರಿನಿಂದಲೂ ಇನ ಎಂಬ ಸೂರ್ಯನ ಹೆಸರಿನಿಂದಲೂ ಗೌರವಿಸಲ್ಪಡುವನು.

"ಫಲಗಳಿಂದ ಯುಕ್ತವಾಗಿರುವ ಹಲಸಿನ ಮರ ಮುಂತಾದವುಗಳನ್ನು ಕಳ್ಳರು ಏರದಿರುವಂತೆ ಮುಳ್ಳುಗಳನ್ನು ಆ ಮರದ ಸುತ್ತಲೂ ಕಟ್ಟಿರುವುದುಂಟು. ಅದರಂತೆ ಹಣದಿಂದ ಯುಕ್ತರಾಗಿರುವವರು ಪ್ರಾಯಶಃ ಕ್ಲೇಶಗಳಿಂದ ಯುಕ್ತರಾಗಿರುವರು. ಮರಗಳಲ್ಲಿರುವ ಹಣ್ಣುಗಳು ಕಡಿಮೆಯಾಗುತ್ತಾ ಬಂದಂತೆ ಮುಳ್ಳಿನ ಬಂಧನವು ಕಡಿಮೆಯಾಗುತ್ತಾ ಬರುತ್ತದೆ. ಎಲ್ಲಾ ಹಣ್ಣುಗಳೂ ಹೋದ ಮೇಲೆ ಮುಳ್ಳಿನ ಬಂಧನವೇ ಇರುವುದಿಲ್ಲ. ಅದರಂತೆ ತಮ್ಮಲ್ಲಿದ್ದ ಹಣವನ್ನು ಕಾಲಕಾಲಗಳಲ್ಲಿ ಪರೋಪಕಾರಕ್ಕಾಗಿ ವಿನಿಯೋಗಿಸುತ್ತಾ ಬಂದರೆ ಕಷ್ಟಗಳೆಲ್ಲವೂ ಕಡಿಮೆಯಾಗುತ್ತಾ ಬರುತ್ತವೆ. ಹಣವೆಲ್ಲವೂ ಖಾಲಿಯಾದರೆ ಎಲ್ಲಾ ಕಷ್ಟಗಳೂ ದೂರವಾಗುತ್ತವೆ."

"ಅನ್ಯಾಯವನ್ನು ಬಿಡಬೇಕು, ನ್ಯಾಯವನ್ನೇ ಅಂಗೀಕರಿಸಬೇಕು. ಹೀಗೆ ಮಾಡುವವನಿಗೆ ಎಲ್ಲರೂ ಎಲ್ಲಾ ವಿಧದಿಂದಲೂ ಸಹಾಯವನ್ನು ಮಾಡುವರು. ಅನ್ಯಾಯವನ್ನು ಬಿಟ್ಟವನನ್ನು ಅನ್ಯಾಯವು ಅಂದರೆ ಅನ್ಯರಿಂದ ಬರುವ ಲಾಭವು ಆಶ್ರಯಿಸುತ್ತದೆಯೆಂದು ಚಮತ್ಕಾರವಾಗಿ ಹೇಳುವುದುಂಟು. ಯಜಮಾನನು ಒಬ್ಬ ಸೇವಕನನ್ನು ಬಿಟ್ಟರೆ ಅವನು ಪುನಃ ಪುನಃ ಕಾಲಿನಲ್ಲಿ ಬಿದ್ದು ತನ್ನನ್ನು ಸೇರಿಸಿಕೊಳ್ಳಬೇಕೆಂದು ಪ್ರಾರ್ಥಿಸುವುದಿಲ್ಲವೇ? ಎಂದು ಈ ಚಮತ್ಕಾರವಾದ ಮಾತುಗಳನ್ನು ಸಮರ್ಥಿಸುವುದೂ ಉಂಟು."

" ಶ್ರೀಹರಿಯು ಹಣವನ್ನು ಕೊಟ್ಟಿರುವಾಗ ಆ ಹಣವನ್ನೆಲ್ಲವನ್ನೂ ಒಳ್ಳೆಯ ಕೆಲಸಗಳಿಗಾಗಿ ವಿನಿಯೋಗಿಸಿ ಅಪಾರವಾದ ಕೀರ್ತಿಯನ್ನು ಸಂಪಾದಿಸಬೇಕು. ಶೂರನು ತನ್ನ ಬಾಣ ಮುಂತಾದ ಆಯುಧಗಳಿಂದ ದುಷ್ಟರನ್ನು ನಿಗ್ರಹಿಸಿ ತನ್ನ ಶೌರ್ಯವನ್ನು ಹೆಚ್ಚಿಸಿಕೊಳ್ಳಬೇಕು. ಹೀಗೆ ಪ್ರತಿದಿನ ಮಾಡುತ್ತಿರುವವನೇ ಹಣವಂತನೆನಿಸುವನು. ಹೀಗೆ ಮಾಡದವನು ಬಡವನೆನಿಸುವನು."

" ಭಿಕ್ಷುಕರು ಬಂದಾಗ ಹಣವನ್ನು ಕೊಡದೆ ಆ ಹಣವನ್ನು ಭೂಮಿಯಲ್ಲಿ ಹೂಳುವವನು ತನಗೆ ಯೋಗ್ಯವಾದ ಮಣ್ಣನ್ನು ಭೂಮಿಯಿಂದ ತೆಗೆದುಕೊಂಡು ಹಣವನ್ನು ಭೂಮಿಗೆ ದಾನಮಾಡುವನು. ಹಣವನ್ನು ಭೂಮಿಯಲ್ಲಿ ಹೂಳುವುದಕ್ಕಾಗಿ ಹೊಂಡವನ್ನು ತೋಡಬೇಡವೇ? ಹಾಗೆ ಹೊಂಡವನ್ನು ತೋಡುವಾಗ ಮಣ್ಣನ್ನು ಭೂಮಿಯಿಂದ ತನಗೆ ಅಭಿಮುಖವಾಗಿ ತೆಗೆಯುವುದಿಲ್ಲವೇ? ಹಣವನ್ನು ಭೂಮಿಯಲ್ಲಿಟ್ಟು ಮುಚ್ಚುವಾಗ ಹಳ್ಳವನ್ನು ಮುಚ್ಚಿದ ಮೇಲೆ ಮಣ್ಣಿನ ರಾಶಿಯು ಉಳಿಯುವುದಿಲ್ಲವೇ? ಆ ಮಣ್ಣಿನ ರಾಶಿಯು ಇವನಿಗೆ ಸೇರಿದ್ದವೇ? ಭೂಮಿಯಲ್ಲಿಟ್ಟಿರುವ ಹಣವು ಹಿಂದಿರುಗಿ ಇವನಿಗೆ ಸಿಗುತ್ತದೆಯೇ? ಸಿಗದಿದ್ದರೆ ಭೂಮಿಗೆಯೇ ದಾನಮಾಡಿದಂತಾಗಲಿಲ್ಲವೇ? ಭೂಮಿಗೆ ಅಭಿಮುಖವಾಗಿ ಕೊಟ್ಟಿರುವ ಹಣವು ಭೂಮಿಗೆ ಸೇರಿದ್ದಲ್ಲವೇ? ಆದ್ದರಿಂದ ನಾವು ಹೇಳಿರುವ ಈ ವಿಷಯವೆಲ್ಲಾ ಸತ್ಯವೆಂದು ನಂಬಬಹುದು."

"ಸರ್ವೇಶ್ವರನಾದ ಶ್ರೀಕೃಷ್ಣದೇವನಲ್ಲಿ ನಿಷ್ಕಲಂಕವಾದ ಭಕ್ತಿಯನ್ನು ಮಾಡಬೇಕು. ಅವನ ಆಜ್ಞೆಯೇ ಧರ್ಮವೆನಿಸುತ್ತದೆ. ಆ ಧರ್ಮದಲ್ಲಿ ವಿಶೇಷವಾದ ಪ್ರೀತಿಯನ್ನು ಮಾಡಬೇಕು. ಶ್ರೀಕೃಷ್ಣದೇವನ ಭಕ್ತರಲ್ಲಿ ವಿಶೇಷವಾದ ಪ್ರೀತಿಯನ್ನು ತೋರಿಸಬೇಕು. ದುಷ್ಟರಲ್ಲಿ ಪ್ರೀತಿಯನ್ನು ಇಟ್ಟುಕೊಳ್ಳಬಾರದು. ನಿಷ್ಠುರವಾದ ಮಾತುಗಳನ್ನು ಆಡಬಾರದು. ದುರುಪದೇಶವನ್ನು ಮಾಡುತ್ತಿರುವವರ ಮಾತುಗಳನ್ನು ಕೇಳಬಾರದು. ಇಂತಹ ರಾಜನು ಎಲ್ಲಾ ವಿಧವಾದ ಶ್ರೇಯಸ್ಸುಗಳನ್ನೂ ಪಡೆಯುವನು."

"ಓ ಉಗ್ರಸೇನಮಹಾರಾಜನೇ, ನಿನ್ನ ಮಗನಾದ ಕಂಸನು ಶ್ರೀಕೃಷ್ಣದೇವನಲ್ಲಿ ನಿಷ್ಕಲ್ಮಷವಾದ ಭಕ್ತಿಯನ್ನು ಮಾಡಲಿಲ್ಲ. ಅವನ ಆಜ್ಞಾರೂಪವಾದ ಧರ್ಮಕಾರ್ಯಗಳನ್ನು ಮಾಡಲಿಲ್ಲ. ಶ್ರೀಕೃಷ್ಣನ ಭಕ್ತರಲ್ಲಿ ಸ್ವಲ್ಪವೂ ಗೌರವವನ್ನು ತೋರಿಸಲಿಲ್ಲ. ದುಷ್ಟರಾದ ಜರಾಸಂಧ ಮುಂತಾದವರಲ್ಲಿ ಪ್ರೀತಿಯನ್ನಿಟ್ಟಿದ್ದನು. ಸಹಿಸಲಾರದ ಕೆಟ್ಟಮಾತುಗಳನ್ನೇ ಆಡುತ್ತಿದ್ದನು. ಚಾಡಿ ಮಾತುಗಳನ್ನು ಕೇಳುತ್ತಿದ್ದನು. ಅವನ ಕುಲಕ್ಕೆ ಕಳಂಕವನ್ನು ತಂದನು. ಅಂತಹ ಕಂಸನ ಸಂಸಾರವು ನಾಯಿಪಾಲಾದ ವಿಷಯವು ನಿನಗೆ ತಿಳಿಯಿತಲ್ಲವೇ? ಅವನಂತೆ ಯಾವ ರಾಜನು ಇರುವನೋ ಅವನ ಸಂಸಾರವೂ ಇದೇಗತಿಯನ್ನು ಪಡೆಯುತ್ತದೆ."

"ವಿಷ್ಣುಭಕ್ತನನ್ನು ವಿಷ್ಣುವಿನ ಪತ್ನಿಯಾದ ಲಕ್ಷ್ಮೀದೇವಿಯು ಎಂದೆಂದಿಗೂ ಕೈಬಿಡುವುದಿಲ್ಲ. ವಿಷ್ಣುವಿನ ದ್ವೇಷಿಯಲ್ಲಿ ಅವಳು ಸ್ಥಿರವಾಗಿ ನಿಲ್ಲಲಾರಳು. ಮಹಾಪತಿವ್ರತೆಯಲ್ಲವೇ? ಆದ್ದರಿಂದ ಹೀಗಿರುವುದು ಲಕ್ಷ್ಮೀದೇವಿಗೆ ಅತ್ಯಂತ ಭೂಷಣವೆನಿಸುತ್ತದೆ."

"ಧರ್ಮ ಎಂಬ ಹೆಸರು ಎರಡು ವ್ಯಕ್ತಿಗಳನ್ನು ತಿಳಿಸುತ್ತದೆ. (೧) ವಿಷ್ಣುವಿಗೆ ಅತ್ಯಂತ ಪ್ರಿಯವಾದ ವೈಷ್ಣವ ಧರ್ಮವು ಮೊದಲನೆಯದು (೨) ಯಮದೇವನು ಎರಡನೆಯವನು. ಈ ಎರಡು ಧರ್ಮಗಳಲ್ಲಿ ವೈಷ್ಣವಧರ್ಮವು ಅತ್ಯಂತ ಶಕ್ತಿಯುಳ್ಳದ್ದು. ಈ ವೈಷ್ಣವಧರ್ಮವನ್ನು ಅನುಷ್ಠಿಸುತ್ತಿರುವವನು ಪಾಪಗಳನ್ನು ಮಾಡಿದರೂ ಯಮನು ಅವನನ್ನು ಶಿಕ್ಷಿಸಲು ಶಕ್ತನಲ್ಲ. ಆದ್ದರಿಂದ ಪಾಪಗಳನ್ನು ಮಾಡಿದರೂ ಅವನಿಗೆ ಯಮನ ಬಾಧೆಯಿಲ್ಲ. ವಿಷ್ಣುಧರ್ಮವನ್ನು ಮಾಡದಿರುವವನು ಮಾಡುವ ಎಲ್ಲಾ ಪಾಪಗಳಿಗೂ ಯಮದೇವನು ಶಿಕ್ಷೆಯನ್ನು ಕೊಡುವನು. ಆದ್ದರಿಂದ ಈ ಎರಡು ಧರ್ಮಗಳಲ್ಲಿ ವೈಷ್ಣವಧರ್ಮವೇ ಅತ್ಯಂತ ಬಲಿಷ್ಠವಾದುದು. ಯಮನು ದುರ್ಬಲನು. ಬಲಿಷ್ಠವಾದ ವೈಷ್ಣವಧರ್ಮವನ್ನು ಆಶ್ರಯಿಸಿದವನಿಗೆ ದುರ್ಬಲನಾದ ಯಮನ ಭಯವಿಲ್ಲ. ವೈಷ್ಣವಧರ್ಮಗಳನ್ನು ಆಶ್ರಯಿಸದವನನ್ನು ಯಮನು ಪೀಡಿಸುವನು. ಯಮನಿಗೆ ಪ್ರತಿದ್ವಂದ್ವಿಯಾಗಿರುವ ವೈಷ್ಣವಧರ್ಮವನ್ನು ಅನುಷ್ಠಿಸದಿರುವುದೇ ಇದಕ್ಕೆ ಕಾರಣ. ಯಮನಿಗೆ ವಿರೋಧಿಯೇ ಇಲ್ಲದಿರುವಾಗ ಪಾಪಿಯನ್ನೂ ಅವನ ಕುಲವನ್ನೂ ಯಮನು ಶಿಕ್ಷಿಸುವುದರಲ್ಲಿ ನ್ಯಾಯವಿದೆ."

"ವಿಷ್ಣುಭಕ್ತರೆಲ್ಲರೂ ಶ್ರೀವಿಷ್ಣುವಿನ ಚಿಕ್ಕ ಚಿಕ್ಕ ಮಕ್ಕಳಂತಿರುವವರು. ಅವರೆಲ್ಲರಲ್ಲೂ ಶ್ರೀಕೃಷ್ಣದೇವನು ತುಂಬಾ ಪ್ರೀತಿಯನ್ನಿಟ್ಟಿರುವನು. ವಿಷ್ಣುವಿನ ಪತ್ನಿಯಾಗಿರುವ ಮಹಾಲಕ್ಷ್ಮೀದೇವಿಯೂ ಸಹ ಅವನಂತೆಯೇ ವಿಷ್ಣುಭಕ್ತರಲ್ಲಿ ಪುತ್ರವಾತ್ಸಲ್ಯವನ್ನಿಟ್ಟಿರುವುದು ನ್ಯಾಯವಲ್ಲವೇ? ಅಂತಹ ವಿಷ್ಣುಭಕ್ತರಲ್ಲಿ ದ್ವೇಷವನ್ನು ಮಾಡುತ್ತಿರುವವನಲ್ಲಿಯೂ ಲಕ್ಷ್ಮೀ ದೇವಿಯು ಸ್ಥಿರವಾಗಿ ನಿಲ್ಲಲಾರಳು. ಅಂದರೆ ಕೆಲದಿನಗಳಲ್ಲಿಯೇ ಅವರೆಲ್ಲರೂ ಲಕಿನೀಕಟಾಕ್ಷವನ್ನು ಕಳೆದುಕೊಂಡು ಬಡವರಾಗುವರು.

"ದುಷ್ಟರಲ್ಲಿ ಪ್ರೀತಿಯನ್ನಿಟ್ಟುಕೊಂಡಿರುವವನು ಕ್ರಮವಾಗಿ ದೋಷವನ್ನು ಪಡೆಯುವನು. ದೋಷವು ಅವನಲ್ಲಿ ಬಂದ ಮೇಲೆ ಲಕ್ಷ್ಮೀದೇವಿಯೂ ಅವನನ್ನು ಬಿಡುವಳು. ಲಕ್ಷ್ಮೀದೇವಿಯು ಗುಣಗಳಲ್ಲಿ ವಿಶೇಷವಾದ ಪ್ರೀತಿಯನ್ನಿಟ್ಟುಕೊಂಡವಳಲ್ಲವೇ?"

"ಮೇಘವು ಅತಿಕಠೋರವಾದ ಧ್ವನಿಯಿಂದ ಗುಡುಗುಡಿಸುತ್ತದೆ. ಆ ಧ್ವನಿಯು ಹೊರುಡುವುದಕ್ಕಿಂತ ಮುಂಚಿತವಾಗಿಯೇ ಮಿಂಚು ಮೇಘವನ್ನು ಬಿಟ್ಟು ಓಡಿಹೋಗುತ್ತದೆ. ಮಿಂಚಿನಂತೆ ಚಂಚಲಳೂ

ಹೊಳೆಯುತ್ತಿರುವವಳೂ ಆಗಿರುವ ಲಕ್ಷ್ಮೀದೇವಿಯೂ ಮಿಂಚಿನ ಗುಣವುಳ್ಳವಳೇ. ಆದ್ದರಿಂದಲೇ ಕಠೋರಧ್ವನಿಯಿಂದ ಮಾತಾಡುವ ಪುರುಷನನ್ನು ಆಶ್ರಯಿಸಲಾರಳು. ಅತಿಮಧುರ ಧ್ವನಿಯಿಂದ ಮಾತಾಡುವ ವನನ್ನೇ ಆಶ್ರಯಿಸುವಳು."

"ಭೈರವ ಮುಂತಾದ ದುರ್ಮಂತ್ರಗಳನ್ನು ಕೆಲವರು ಮಹಾಮಂತ್ರಗಳೆಂದು ಭ್ರಮಿಸಿ ಅವುಗಳನ್ನೇ ಯಾವಾಗಲೂ ಜಪಿಸುತ್ತಿರುವರು. ಆ ಮಂತ್ರಗಳ ಸಿದ್ಧಿಯನ್ನು ಪಡೆಯುವರು. ಆ ಮಂತ್ರಗಳ ಬಲದಿಂದ ಎಷ್ಟೋ ಜನರನ್ನು ಸಂಹರಿಸುವುದೂ ಉಂಟು. ಈ ಹೆಮ್ಮೆಯಿಂದ ನರಸಿಂಹ ಮಂತ್ರವನ್ನು ಜಪಿಸಿ ಸಿದ್ಧಿಯನ್ನು ಪಡೆದರಿವ ವಿಷ್ಣುಭಕ್ತರನ್ನು ಸಂಹರಿಸಬೇಕೆಂದು ಭೈರವ ಮಂತ್ರಗಳನ್ನು ಪ್ರಯೋಗಿಸುವುದೂ ಉಂಟು. ಆದರೆ ಸೂರ್ಯನ ಮುಂದೆ ಸೂರ್ಯೋದಯವಾದ ಕೂಡಲೇ ಬಾಡಿಹೋಗಿರುವ ಕಪ್ಪುಕಮಲವು ತನ್ನ ಪ್ರತಾಪವನ್ನು ತೋರಿಸಬಲ್ಲುದೇ? ಇಲ್ಲ. ಇಲ್ಲ. ನರಸಿಂಹಮಂತ್ರದಿಂದ ಭೈರವ ಮಂತ್ರವು ಸೋತು ಹೋಗುತ್ತದೆ. ಯಾರನ್ನು ಕೊಲ್ಲಬೇಕೆಂದು ಈ ಮಂತ್ರವನ್ನು ಜಪಿಸಿದನೋ ಅವನನ್ನು ಕೊಲ್ಲಲು ಶಕ್ತವಾಗುವುದಿಲ್ಲ. ತಾನು ಯಾವ ಆಹುತಿಯನ್ನೂ ತೆಗೆದುಕೊಳ್ಳದೆ ಸುಮ್ಮನಿರಲೂ ಭೈರವಮಂತ್ರದಿಂದ ಸಾಧ್ಯವಾಗುವುದಿಲ್ಲ. ತನ್ನನ್ನು ಕಳುಹಿಸಿದವನನ್ನೇ ಬೆನ್ನಟ್ಟಿಕೊಂಡು ಬರುತ್ತದೆ. ಕೊನೆಗೆ ಅವನನ್ನೇ ಕೊಂದು ತೃಪ್ತವಾಗುತ್ತದೆ.

"ಎಷ್ಟೋ ಚಾಡಿಕೋರರು ರಾಜನಿಗೆ ದುರ್ಬೋಧನೆಯನ್ನು ಮಾಡುತ್ತಿರುವುದುಂಟು. ಆ ಚಾಡಿಯ ಬಲದಿಂದ ಎಷ್ಟೋ ಜನರನ್ನು ರಾಜನ ಮೂಲಕವಾಗಿ ಆಪತ್ತುಗಳಿಗೆ ಗುರಿಯಾಗುವಂತೆ ಮಾಡುವುದುಂಟು. ಅಂತಹ ಸಂದರ್ಭಗಳಲ್ಲಿ ರಾಜನು ಸರಿಯಾದ ಮಂತ್ರಿಗಳನ್ನಿಟ್ಟುಕೊಂಡು ವಿಮರ್ಶಿಸಬೇಕು. ಆಗ ಚಾಡಿಕೋರರ ಮಾತುಗಳಲ್ಲಿರುವ ಸ್ವಾರ್ಥಪರತೆಯು ತಿಳಿಯುತ್ತದೆ. ಆ ಚಾಡಿಯು ಫಲಿಸುವುದಿಲ್ಲ. ಅದು ಮಾತ್ರವಲ್ಲ. ಚಾಡಿಕೋರರ ಮಾತುಗಳಿಂದ ತನಗೆ ಏರ್ಪಟ್ಟಿರುವ ಅನರ್ಥಗಳನ್ನು ಸ್ಮರಿಸುತ್ತಾ ಚಾಡಿಕೋರರನ್ನೇ ದಂಡಿಸುವ ಸ್ಥಿತಿಯೂ ಏರ್ಪಡುತ್ತದೆ."

" ಕೆಲವು ರಾಜರು ವಿಷಯಗಳನ್ನು ಅನುಭವಿಸುವುದರಲ್ಲಿಯೇ ವಿಶೇಷವಾಗಿ ಆಸಕ್ತರಾಗಿರುವರು. ಪ್ರಜೆಗಳಿಗೆ ಬೇಕಾದ ಯಾವ ಕಾರ್ಯಗಳನ್ನೂ ಮಾಡುವುದಿಲ್ಲ. ಮನೆಗೆ ಬಂದಿರುವ ಅತಿಥಿಗಳಿಗೂ ಒಂದನ್ನೂ ಕೊಡುವುದಿಲ್ಲ. ಇದರಿಂದ ಪ್ರಜೆಗಳಾಗಲೀ ಅತಿಥಿಗಳಾಗಲೀ ಆ ರಾಜರನ್ನು ಸ್ತುತಿಸುವುದಿಲ್ಲ. ಅಂತಹ ರಾಜನಿಗೆ ಸುಖವು ಏರ್ಪಡಲಾರದು."

" ಲೋಭಿಯಾದ ರಾಜನು ಪ್ರಜೆಗಳನ್ನು ಪೀಡಿಸಿ ಹಣವನ್ನು ಸಂಪಾದಿಸುವುದುಂಟು. ಅಂತಹ ರಾಜನು ತನ್ನ ಮಕ್ಕಳನ್ನು ಮಾರಿ ಹಣವನ್ನು ಸಂಪಾದಿಸಿದವನಿಗೆ ಸಮನೆಂದು ತಿಳಿಯಬೇಕು. ಪ್ರಜೆಳನ್ನು ಸಂತೋಷಪಡಿಸುವ ರಾಜನು ಸಂತತಿ ಪರಂಪರೆಯನ್ನು ಪಡೆಯುವನು. ಪ್ರಜೆಗಳನ್ನು ಪೀಡಿಸುವವನು ಸಂತತಿನಾಶವನ್ನು ಹೊಂದುವನು.

"ಬ್ರಾಹ್ಮಣರು ಮುಂತಾದ ಪೂಜ್ಯರು ನಮ್ಮಲ್ಲಿಗೆ ಬಂದಾಗ ಅವರನ್ನು ಸತ್ಕರಿಸಬೇಕು. ಅವರು ಬಂದ ತಿಥಿ ಮುಂತಾದವುಗಳನ್ನು ವಿಮರ್ಶಿಸಬಾರದು. ಅವರು ಬಂದ ದಿನವೇ ಮಹಾಪುಣ್ಯದಿನವೆಂದು ಭಾವಿಸಬೇಕು. ಹೀಗೆ ಭಾವಿಸಿ ಮಾಡುತ್ತಿರುವ ಸತ್ಕಾರ್ಯವು ಮಹಾಪುಣ್ಯವನ್ನು ಕೊಡುತ್ತದೆ. ಇದರಿಂದಲೇ ಅವರಿಗೆ ಅತಿಥಿ ಅಂದರೆ ತಿಥಿನಿಯಮವಿಲ್ಲದವರು ಎಂದು ಹೆಸರು ಬಂದಿರುತ್ತದೆ. ಅವರನ್ನು ಸತ್ಕರಿಸದಿದ್ದರೆ ಆ ದಿನದಲ್ಲಿಯೂ ಅನಂತರದ

ಎಲ್ಲಾ ದಿನಗಳಲ್ಲಿಯೂ ನಾವು ಮಾಡುವ ಪಿತೃತರ್ಪಣ ದೇವಪೂಜೆ ಮುಂತಾದ ಎಲ್ಲಾ ಸತ್ಕರ್ಮಗಳೂ ನಿಷ್ಫಲವಾಗುವವು. ಅತಿಥಿಯು ತಾನು ಮನೆಗೆ ಬಂದಿರುವಾಗ ತನ್ನನ್ನು ಪೂಜಿಸದಿರುವುದರಿಂದ ಆ ತಿಥಿಯು ನಿಷ್ಫಲವಾಗುವಂತೆ ಮಾಡಿರುವ ಯಜಮಾನನಿಗೆ ಇನ್ನು ಮುಂದಿನ ತಿಥಿಗಳೆಲ್ಲವೂ ನಿಷ್ಫಲವಾಗಲಿ ಎಂದು ಶಪಿಸುವನು. ಅವನು ಶಪಿಸದಿದ್ದರೂ ಹಾಗೆಯೇ ನಡಿಯುತ್ತದೆ."

" ವಿಷಯ" ಎಂಬ ಪದದಲ್ಲಿ ಮೂರು ಅಕ್ಷರಗಳಿವೆ. ಇವುಗಳಲ್ಲಿ ಮೂರನೆಯ ಅಕ್ಷರವನ್ನು ತೆಗೆದು ಬಿಟ್ಟರೆ ಮೊದಲನೆಯ ಎರಡು ಅಕ್ಷರಗಳು "ವಿಷ" ಎಂದೆನಿಸುತ್ತವೆ. ಈ ಎರಡು ಅಕ್ಷರಗಳು ಪ್ರಾಣವನ್ನು ಹೀರುವ ವಿಷವನ್ನು ತಿಳಿಸುತ್ತವೆ. ವಿಷಯಗಳನ್ನು ನಾವು ಅನುಭವಿಸಬಹುದು. ಆದರೆ ಆ ವಿಷಯಗಳಲ್ಲಿ ಮೂರನೆಯ ಭಾಗಮಾತ್ರ ಜೀರ್ಣಿಸುತ್ತದೆ. ಉಳಿದ ಎರಡು ಭಾಗವು ವಿಷಯ ಎಂಬ ಪದದಲ್ಲಿರುವ ಮೊದಲನೆಯ ಎರಡು ಅಕ್ಷರಗಳಿಂದ ಹೇಳಲ್ಪಡುವ ವಿಷದಂತೆ ನಾನಾ ವಿಧವಾದ ಕಷ್ಟಗಳನ್ನು ಕೊಡುತ್ತದೆ. ಆದ್ದರಿಂದ ವಿಷಯಗಳನ್ನು ಅನುಭವಿಸಬಾರದು. ಇದು ಮಂತ್ರಿಗಳು ಉಗ್ರಸೇನಮಹಾರಾಜನಿಗೆ ಉಪದೇಶಿಸಿದ ರಾಜನೀತಿ.

ಉಗ್ರಸೇನಮಹಾರಾಜನು ಮಂತ್ರಿಗಳು ಉಪದೇಶಿಸಿದ ರಾಜನೀತಿಯನ್ನು ಕೇಳಿದನು. ಅವುಗಳೆಲ್ಲವನ್ನೂ ಅನುಷ್ಠಾನದಲ್ಲಿ ತಂದುಕೊಂಡನು. ಶ್ರೀಕೃಷ್ಣದೇವನಲ್ಲಿ ಅಪಾರವಾದ ಭಕ್ತಿಯನ್ನು ಮಾಡಿದನು. ವಿಷಯಗಳಲ್ಲಿ ಆಸೆಯನ್ನು ಬಿಟ್ಟನು.

## ಶ್ರೀಕೃಷ್ಣದೇವನು ಸರ್ವರನ್ನೂ ಸಂತೋಷಪಡಿಸಿದನು

ಕಂಸನ ಭಯದಿಂದ ಶ್ರೀಕೃಷ್ಣದೇವನ ಬಂಧುಗಳೆಲ್ಲರೂ ಮಥುರಾಪಟ್ಟಣವನ್ನು ಬಿಟ್ಟುಬೇರೆ ದೇಶಗಳಿಗೆ ಓಡಿ ಹೋಗಿದ್ದರು. ತುಂಬಾ ಕಷ್ಟದಿಂದ ಜೀವಿಸುತ್ತಿದ್ದರು. ಯಾದವರು, ವಾರ್ಷ್ಣೇಯರು, ಮಾಧವರು, ಅಂಧಕರು, ದಾಶಾರ್ಹರು, ಕುಕುರರು, ಮುಂತಾದ ಬಂಧುಗಳೆಲ್ಲರನ್ನೂ ಪುನಃ ಮಥುರಾ ಪಟ್ಟಣಕ್ಕೆ ಕರೆತರಿಸಿದನು. ಅವರವರಿಗೆ ಯೋಗ್ಯವಾದ ಮರ್ಯಾದೆಗಳನ್ನು ಮಾಡಿದನು. ತಮ್ಮ ತಮ್ಮ ಮನೆಗಳಲ್ಲಿ ಸುಖವಾಗಿ ವಾಸಿಸುವಂತೆ ಮಾಡಿದನು. ಅವರವರಿಗೆ ಬೇಕಾದಷ್ಟು ಹಣ ಮುಂತಾದ ವಸ್ತುಗಳನ್ನು ಕೊಟ್ಟು ತೃಪ್ತಿಪಡಿಸಿದನು. ಅವರೆಲ್ಲರೂ ಶ್ರೀಕೃಷ್ಣದೇವನ ಮತ್ತು ಬಲರಾಮದೇವನ ಭುಜಬಲದಿಂದ ರಕ್ಷಿಸಲ್ಪಟ್ಟರು. ಎಲ್ಲಾ ವಿಧವಾದ ಮನೋರಥಗಳನ್ನೂ ಪಡೆದರು. ಯಾವ ವಿಧವಾದ ಚಿಂತೆಯೂ ಅವರಿಗಿಲ್ಲ. ಪ್ರತಿದಿನ ಶ್ರೀಕೃಷ್ಣದೇವನ ಮುಖಕಮಲವನ್ನು ನೋಡುತ್ತಾ ಮುಕ್ತಿಸುಖವನ್ನು ಅನುಭವಿಸಿದರು. ಶ್ರೀಕೃಷ್ಣದೇವನ ಮುಖವು ಯಾವಾಗಲೂ ಆನಂದಪೂರ್ಣವಾಗಿದೆ ದಯಾರಸಮಿಶ್ರಿತವಾದ ಮುಗುಳುನಗೆಯಿಂದ ಕಡೆಗಣ್ಣುಗಳಂದ ನೋಟದಿಂದ ಕೂಡಿರುತ್ತದೆ. ಇಂತಹ ಭಾಗ್ಯವು ಯಾರಿಗೆ ತಾನೇ ಸಿಗುತ್ತದೆ.

## ನಂದನನ್ನು ವೃಂದಾವನಕ್ಕೆ ಕಳುಹಿಸಿದನು

ಶ್ರೀಕೃಷ್ಣದೇವನೂ ಶ್ರೀಬಲರಾಮದೇವನೂ ನಂದಗೋಪನನ್ನು ನೋಡಿದರು. ನಮಸ್ಕರಿಸಿದರು. ಗಟ್ಟಿಯಾಗಿ ತಬ್ಬಿಕೊಂಡರು. " ಎಲೈ ತಂದೆಯೇ, ನೀವೂ ನಿಮ್ಮ ಪತ್ನಿಯರಾದ ಯಶೋದಾ ದೇವಿಯರೂ ಮಾಡಿರುವ ಉಪಕಾರಗಳನ್ನು ಮರೆಯಲು ನಮ್ಮಿಂದ ಎಂದೆಂದಿಗೂ ಸಾಧ್ಯವಿಲ್ಲ. ನೀವಿಬ್ಬರೂ ನಮ್ಮಿಬ್ಬರ ತಂದೆ

ತಾಯಿಗಳಲ್ಲ. ನಮ್ಮಿಬ್ಬರ ತಂದೆ ತಾಯಿಗಳು ವಸುದೇವ ಮತ್ತು ದೇವಕೀದೇವಿಯರು. ಅವರಿಬ್ಬರೂ ನಮ್ಮಿಬ್ಬರನ್ನು ಪೋಷಿಸುವುದಕ್ಕೂ ರಕ್ಷಿಸುವುದಕ್ಕೂ ಶಕ್ತರಾಗಿರಲಿಲ್ಲ. ಅದಕ್ಕಾಗಿ ನಿಮ್ಮಿಬ್ಬರಲ್ಲಿ ತಂದುಬಿಟ್ಟರು. ನೀವಿಬ್ಬರೂ ಚಿಕ್ಕ ಕೂಸುಗಳಾಗಿರುವ ನಮ್ಮಿಬ್ಬರನ್ನು ನಿಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಲ್ಲಿಡಬೇಕಾದ ಪ್ರೀತಿಗಿಂತಲೂ ಅಧಿಕವಾದ ಪ್ರೀತಿಯಿಂದ ಲಾಲನೆ ಮಾಡುತ್ತಾ ರಕ್ಷಿಸಿದಿರಿ. ತಂದೆ ತಾಯಿಗಳು ಮಕ್ಕಳನ್ನು ರಕ್ಷಿಸಲು ಸಾಧ್ಯವಿಲ್ಲದೆ ಇನ್ನೊಬ್ಬರ ವಶದಲ್ಲಿ ಕೊಟ್ಟಾಗ ಆ ಮಕ್ಕಳನ್ನು ತಮ್ಮ ಮಕ್ಕಳಂತೆ ಯಾರು ರಕ್ಷಿಸುತ್ತಾರೋ ಅವರೇ ತಂದೆ ತಾಯಿಗಳು. ಆದ್ದರಿಂದ ನೀವೇ ನಮ್ಮಿಬ್ಬರ ತಂದೆ ತಾಯಿಗಳೆಂದು ಹೇಳುವುದು ಅತ್ಯಂತ ಯುಕ್ತವಾಗುತ್ತದೆ.

ನಮ್ಮಿಬ್ಬರಿಗೆ ನಿಜವಾದ ತಂದೆ ತಾಯಿಗಳು ಇಷ್ಟರ ವರೆಗೆ ನಮಗಾಗಿ ನಾನಾ ವಿಧವಾದ ಕಷ್ಟಗಳನ್ನು ಅನುಭವಿಸಿರುವರು. ಅವರ ಕಷ್ಟಗಳೆಲ್ಲಾ ಈಗ ದೂರವಾದವು. ಇನ್ನು ಮುಂದೆ ಅವರೆಲ್ಲರೂ ನಮ್ಮನ್ನು ನೋಡಿ ನಮ್ಮ ಜೊತೆಯಲ್ಲಿದ್ದು ನಾನಾವಿಧವಾದ ಸುಖಗಳನ್ನು ಅನುಭವಿಸಬೇಕಾಗಿದೆ. ನೀವು ಇಷ್ಟರ ವರೆಗೆ ನಮ್ಮಿಬ್ಬರ ಜೊತೆಯಲ್ಲಿ ವಾಸಿಸುತ್ತಿದ್ದು ಎಲ್ಲಾ ವಿಧವಾದ ಸುಖಗಳನ್ನೂ ಅನುಭವಿಸಿದಿರಿ. ಇನ್ನು ಕೆಲಕಾಲದ ವರೆಗೆ ನಮ್ಮಿಬ್ಬರ ವಿಯೋಗವು ನಿಮಗೆ ಏರ್ಪಡುತ್ತದೆ. ಆಗ ನಮ್ಮಿಬ್ಬರಲ್ಲಿರುವ ಸ್ನೇಹಾತಿರೇಕದಿಂದ ನಿಮ್ಮೆಲ್ಲರಿಗೂ ದುಃಖವು ಏರ್ಪಡುವುದು ಸಹಜವಾಗಿದೆ. ಇಷ್ಟರ ವರೆಗೆ ದುಃಖಿತರಾಗಿರುವ ನಮ್ಮ ತಂದೆತಾಯಿಗಳನ್ನು ಇಂದಿನಿಂದ ಸಂತೋಷಪಡಿಸುವುದೂ ಇಷ್ಟರ ವರೆಗೆ ಸುಖಿಗಳಾಗಿದ್ದ ನಿಮ್ಮನ್ನು ನಮ್ಮಿಬ್ಬರ ವಿಯೋಗದಿಂದ ದುಃಖಿತರಾಗುವಂತೆ ಮಾಡುವುದೂ ಅನಿವಾರ್ಯವಾಗಿದೆ. ಆದ್ದರಿಂದ ನಮ್ಮನ್ನು ಕ್ಷಮಿಸಿರಿ. ನೀವಿಬ್ಬರೂ ಪರಿವಾರಸಹಿತರಾಗಿ ವೃಂದಾವನಕ್ಕೆ ಹಿಂದಿರುಗಿರಿ. ನಾವು ನಮ್ಮ ತಂದೆ ತಾಯಿಗಳನ್ನು ತೃಪ್ತಿಪಡಿಸಿ ಕೆಲಕಾಲವು ಕಳೆದ ಮೇಲೆ ನಿಮ್ಮಲ್ಲಿಗೆ ಬರುತ್ತೇವೆ. ನಿಮ್ಮನ್ನು ಸರ್ವಥಾ ಬಿಟ್ಟುಬಿಟ್ಟೆವು ಎಂದು ತಿಳಿಯಬೇಡಿರಿ." ಇದು ಶ್ರೀಕೃಷ್ಣದೇವನು ಹೇಳಿದ ಸಮಯೋಚಿತವಾದ ಮಾತುಗಳು.

ಹೀಗೆ ಸಮಾಧಾನಕರವಾದ ಮಾತುಗಳಿಂದ ನಂದನನ್ನೂ ಯಶೋದೆಯನ್ನೂ ಎಲ್ಲಾ ಗೊಲ್ಲರನ್ನೂ ತೃಪ್ತಿಪಡಿಸಿದನು. ವಸ್ತ್ರಗಳನ್ನೂ ಅಲಂಕಾರವಸ್ತುಗಳನ್ನೂ ಸಂಸಾರಕ್ಕೆ ಬೇಕಾಗಿರುವ ಎಲ್ಲಾ ವಸ್ತುಗಳನ್ನೂ ಕೊಟ್ಟು ಉಪಚರಿಸಿದನು. ನಂದನೂ ಯಶೋದೆಯೂ ಗೊಲ್ಲರೂ ಶ್ರೀಕೃಷ್ಣದೇವನನ್ನು ಆಲಿಂಗಿಸಿದರು. ಪ್ರೇಮಾತಿರೇಕದಿಂದ ಅತ್ತರು. ಕಣ್ಣುಗಳಿಂದ ಧಾರೆಧಾರೆಯಾಗಿ ನೀರುಗಳನ್ನು ಸುರಿಸುತ್ತಾ ಹೊರಡುವುದಕ್ಕೆ ಇಷ್ಟವಿಲ್ಲದಿದ್ದರೂ ಶ್ರೀಕೃಷ್ಣದೇವನ ಆಜ್ಞೆಯನ್ನು ಮೀರಲಾರದೆ ವೃಂದಾವನಕ್ಕೆ ಹೊರಟುಹೋದರು.

## ವಸುದೇವನು ಮಾಡಿದ ಗೋದಾನ

ಶ್ರೀಕೃಷ್ಣದೇವನು ಅವತರಿಸಿದ ದಿನ ವಸುದೇವನು ಹತ್ತುಸಾವಿರ ಗೋದಾನಗಳನ್ನು ಮಾಡುವುದಾಗಿ ಸಂಕಲ್ಪಿಸಿದ್ದನು. ಪುತ್ರೋತ್ಸವವು ಅತಿ ಸಂತೋಷಕರವಲ್ಲವೇ? ಅದರಲ್ಲಿಯೂ ನಾರಾಯಣನ ಎಲ್ಲಾ ಲಕ್ಷಣಗಳಿಂದಲೂ ಭೂಷಿತನಾಗಿರುವ ಶ್ರೀಕೃಷ್ಣದೇವನ ಅವತಾರೋತ್ಸವಕ್ಕಿಂತ ಅಧಿಕವಾದ ಉತ್ಸವವು ಯಾವುದಿದೆ? ಆದ್ದರಿಂದ ಆ ಕಾಲದಲ್ಲಿ ವಸುದೇವನು ಸಂಕಲ್ಪಿಸಿದ್ದು ಅತ್ಯಂತ ಯೋಗ್ಯವೇ ಆಗಿರುತ್ತದೆ.

ಶ್ರೀಕೃಷ್ಣದೇವನು ಅವತರಿಸಿದ ದಿನದಿಂದ ಆರಂಭಿಸಿ ಈಗ ಎರಡು ದಿನಗಳ ಹಿಂದೆ ನಾರದರು

ಶ್ರೀಕೃಷ್ಣದೇವನ ವೃತ್ತಾಂತವನ್ನು ತಿಳಿಸುವ ವರೆಗೆ ಕಂಸನಿಗೆ ಶ್ರೀಕೃಷ್ಣದೇವನು ತನ್ನ ಮೃತ್ಯು ಎಂಬ ವಿಚಾರವು ತಿಳಿದಿರಲಿಲ್ಲ. ದೇವಕೀದೇವಿಯ ಎಂಟನೆಯ ಕೂಸು ಹೆಣ್ಣೆಂದೇ ಭ್ರಮಿಸಿದ್ದನು. ಅವನಿಗೆ ಈ ಭ್ರಾಂತಿಯು ನಿವೃತ್ತಿಯಾಗಬಾರದೆಂದೂ ಆ ಭ್ರಾಂತಿಯು ಇರುವ ವರೆಗೆ ತನ್ನ ಮಗನಿಗೆ ಯಾವ ಆಪತ್ತೂ ಬರಲಾರದೆಂದೂ ವಸುದೇವನು ಭ್ರಮಿಸಿದ್ದನು. ತಾನು ಸಂಕಲ್ಪಿಸಿದ ಹತ್ತು ಸಾವಿರ ಗೋದಾನಗಳನ್ನು ಕೊಟ್ಟುಬಿಟ್ಟರೆ ಈ ವಿಷಯವನ್ನು ತಿಳಿದ ಕಂಸನಿಗೆ ವಸುದೇವನ ಸಂತೋಷಕ್ಕೆ ಕಾರಣವು ಯಾವುದು? ಎಂಬ ವಿಮರ್ಶೆಗೆ ಅವಕಾಶವು ಏರ್ಪಡಬಹುದೆಂದೂ ಆ ವಿಮರ್ಶೆಯ ಫಲವಾಗಿ ದೇವಕೀದೇವಿಯ ಎಂಟನೆಯ ಮಗುವು ಹೆಣ್ಣಲ್ಲವೆಂದೂ ಶ್ರೀಕೃಷ್ಣನೇ ಆಗಿರುವನೆಂದೂ ಕಂಸನು ತಿಳಿದುಬಿಟ್ಟರೆ ಮುಂದೆ ನಡೆಯಬಹುವಾದ ಅನರ್ಥವನ್ನು ಸ್ಮರಿಸಿದ ವಸುದೇವನು ಇಷ್ಟರವರೆಗೂ ಆ ಗೋದಾನವನ್ನು ಕೊಟ್ಟಿರಲಿಲ್ಲ. ಈಗ ಕಂಸನು ಸತ್ತಕೂಡಲೇ ಅವನ ಚಿಂತೆಯೆಲ್ಲವೂ ದೂರವಾಯಿತು. ಆ ಹತ್ತುಸಾವಿರ ಗೋವುಗಳನ್ನು ದಾನಮಾಡಿದನು.

ಹತ್ತು ಸಾವಿರ ಬ್ರಾಹ್ಮಣರನ್ನು ಸಾಲುಸಾಲಾಗಿ ನಿಲ್ಲಿಸಿದನು. ಪತ್ನೀಸಹಿತರಾದ ಅಷ್ಟು ಬ್ರಾಹ್ಮಣರನ್ನೂ ವಸ್ತ್ರ ಮುಂತಾದ ಅಲಂಕಾರವಸ್ತುಗಳಿಂದ ಅಲಂಕರಿಸಿ ಪೂಜಿಸಿದನು. ಅವರ ಮುಂದೆ ಕರುಗಳಿಂದ ಸಹಿತವಾಗಿಯೂ ನಾನಾ ವಿಧವಾದ ಅಲಂಕಾರ ವಸ್ತುಗಳಿಂದಲೂ ಭಂಗಾರದ ಮಾಲೆಗಳಿಂದಲೂ ಅಲಂಕೃತವಾಗಿ ಇರುವ ಹತ್ತು ಸಾವಿರ ಗೋವುಗಳನ್ನು ನಿಲ್ಲಿಸಿದನು. ಏಕಕಾಲದಲ್ಲಿ ದಾನವನ್ನು ಮಾಡಿದನು. ಬ್ರಾಹ್ಮಣರೆಲ್ಲರೂ ಯಥೇಚ್ಛ ದಕ್ಷಿಣೆಯಿಂದ ತೃಪ್ತರಾದರು. ಗೋವುಗಳನ್ನು ಕರೆದುಕೊಂಡು ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿದರು.

## ಶ್ರೀಕೃಷ್ಣದೇವನ ಮತ್ತು ಬಲರಾಮನ ಉಪನಯನ

ಶ್ರೀಕೃಷ್ಣದೇವನು ವೃಂದಾವನದಲ್ಲಿರುವಾಗ ಗೋಪಿಕಾಸ್ತ್ರೀಯರೊಡನೆ ರಾಸಕ್ರೀಡೆಯನ್ನು ಮಾಡಿದನು. ಒಬ್ಬೊಬ್ಬ ಗೋಪಿಕಾಸ್ತ್ರೀಯರಲ್ಲಿಯೂ ಅಸಂಖ್ಯಮಕ್ಕಳನ್ನು ಪಡೆದನು. ಆ ಸ್ತ್ರೀಯರಲ್ಲಿ ಕೆಲವರು ಕನ್ಯೆಯರು. ಅವರನ್ನು ಶ್ರೀಕೃಷ್ಣದೇವನು ಶಾಸ್ತ್ರವಿಧಿಯಿಂದ ವಿವಾಹವನ್ನು ಮಾಡಿಕೊಳ್ಳಲಿಲ್ಲ ಮತ್ತೆ ಕೆಲವರು ಅಗ್ನಿಸಾಕ್ಷಿಕವಾಗಿ ಬೇರೆ ಪುರುಷರನ್ನು ವಿವಾಹ ಮಾಡಿಕೊಂಡವರು. ಶ್ರೀಕೃಷ್ಣದೇವನಿಗೆ ಇನ್ನೂ ಉಪಯನಯವೇ ಆಗಿಲ್ಲ. ಉಪನಯನವೇ ಆಗದವನು ಪರಸ್ತ್ರೀಯರಲ್ಲಿಯೂ ಗೋಪಕನ್ಯೆಯರಲ್ಲಿಯೂ ಮಕ್ಕಳನ್ನು ಪಡೆಯುವುದು ಪಾತಿತ್ಯಕ್ಕೆ ಕಾರಣವಲ್ಲವೇ? ಆದರೆ ಇದೆಲ್ಲವೂ ವಿಧಿಬದ್ಧರಾಗಿರುವ ಇತರರಿಗೆ ದೋಷವೆನಿಸುತ್ತದೆ. ವಿಧಿಬದ್ಧನಲ್ಲದ ಶ್ರೀಕೃಷ್ಣದೇವನಿಗೆ ದೋಷಕರವಲ್ಲ. ಆದ್ದರಿಂದಲೇ ಶ್ರೀಕೃಷ್ಣದೇವನು ಉಪನಯನಕ್ಕಿಂತ ಪೂರ್ವದಲ್ಲಿಯೇ ಅನ್ಯರ ಪತ್ನಿಯರಲ್ಲಿಯೂ ಅವಿವಾಹಿತರಾದ ಕನ್ಯೆಯರಲ್ಲಿಯೂ ಮಕ್ಕಳನ್ನು ಪಡೆದನು. ಮಕ್ಕಳನ್ನು ಪಡೆದ ಮೇಲೆ ಉಪನಯನವನ್ನು ಮಾಡಿಕೊಂಡನು. ಈ ಉಪನಯನವನ್ನು ಜ್ಞಾನಿಶ್ರೇಷ್ಠರಾಗಿರುವ ಗರ್ಗಾಚಾರ್ಯರೇ ಪುರೋಹಿತರಾಗಿ ನಡೆಯಿಸಿದರು. ಜ್ಞಾನಿಶ್ರೇಷ್ಠರಾಗಿರುವ ಬ್ರಹ್ಮ ಮುಂತಾದ ಸಕಲ ದೇವತೆಗಳೂ ಶ್ರೀವೇದವ್ಯಾಸರೇ ಮೊದಲಾದ ಸಕಲ ಮುನಿಗಳೂ ಕೊಂಡಾಡಿದರು.

(೫೫) ಗರ್ಗಾತ್ ದ್ವೈಜಂ ಸಂಸ್ಕಾರಂ ಪ್ರಾಪ್ಯ. - ಗರ್ಗಾಚಾರ್ಯರಿಂದ ಉಪನಯನಸಂಸ್ಕಾರವನ್ನು ಪಡೆದು.

ವಿಶೇಷಾರ್ಥ- "ಗರ್ಗಾದುಪನಯನಸಂಸ್ಕಾರಂ ಪ್ರಾಪ್ಯ"

**ವಿಶೇಷಾರ್ಥ ವಿವರಣ** - ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ಮೂರು ಜಾತಿಯವರು ಹುಟ್ಟುವಾಗ ಶೂದ್ರನಿಗೆ ಸಮಾನರಾಗಿರುವರು. ಆದ್ದರಿಂದ ಅವರೆಲ್ಲರಿಗೂ ತಾಯಿಯಿಂದ ಹುಟ್ಟುವುದು ಮೊದಲನೆಯ ಜನ್ಮವೆನಿಸುತ್ತದೆ. ಉಪನಯನವು ಏರ್ಪಟ್ಟ ಮೇಲೆ ಅವರೆಲ್ಲರಿಗೂ ವೇದೋಕ್ತವಾದ ಎಲ್ಲಾ ಕರ್ಮಗಳನ್ನೂ ಮಾಡುವ ಅಧಿಕಾರವು ಬರುತ್ತದೆ. ಆದ್ದರಿಂದ ಉಪನಯನವೇ ಎರಡನೆಯ ಜನ್ಮವೆನಿಸುತ್ತದೆ. ಹೀಗೆ ತಾಯಿಯ ಹೊಟ್ಟೆಯಿಂದ ಹೊರಗೆ ಬರುವಾಗ ಮೊದಲನೆಯ ಜನ್ಮವೂ ಉಪನಯನದಿಂದ ಎರಡನೆಯ ಜನ್ಮವೂ ಏರ್ಪಡುವುದರಿಂದಲೇ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ಮೂರು ಜಾತಿಯವರನ್ನು "ದ್ವಿಜ" ಅಂದರೆ ಎರಡು ಸಲ ಜನ್ಮವನ್ನು ತಾಳಿದವರು ಎಂದು ಹೇಳುವುದುಂಟು. ಈ ಮೂವರಿಗೆ ಮಾತ್ರ ಉಪನಯನವು ಸಂಬಂಧಿಸಿರುವುದರಿಂದ ಈ ಉಪನಯನವನ್ನು "ದ್ವೈಜಸಂಸ್ಕಾರ" ಎಂದು ಕರೆಯಬಹುದು.

ವಸುದೇವನು ಶ್ರೀಕೃಷ್ಣದೇವನಿಗೂ ಬಲರಾಮನಿಗೂ ಲೋಕದೃಷ್ಟಿಯಿಂದ ತಂದೆಯಾಗಿರುವನು. ಗಂಡುಮಕ್ಕಳಿಗೆ ಉಪನಯನ ಸಂಸ್ಕಾರವನ್ನು ತಂದೆಯೇ ಮಾಡಬೇಕು. ತಂದೆಯು ಬದುಕಿರುವಾಗ ಬೇರೆ ಜನರು ಮಾಡಲಿಕ್ಕಿಲ್ಲ. ನಂದನು ವಸುದೇವನ ತಂದೆಯಾಗಿರುವ ಶೂರಮಹಾರಾಜನಿಗೆ ವೈಶ್ಯಜಾತಿಯ ಪತ್ನಿಯಲ್ಲಿ ಮಗನಾಗಿ ಹುಟ್ಟಿದ್ದನು. ಆದ್ದರಿಂದ ವೈಶ್ಯ ಜಾತಿಯವನು. ಅವನು ಶ್ರೀಕೃಷ್ಣದೇವನನ್ನು ತನ್ನ ಮಗನೆಂದು ಭ್ರಮಿಸಿದ್ದರೂ ಯಾವುದೋ ಕಾರಣದಿಂದ ಇಷ್ಟರ ವರೆಗೂ ಉಪನಯನವನ್ನು ಮಾಡಿಸಲಿಲ್ಲ.

ಈಗ ವಸುದೇವನು ತನ್ನ ಮಕ್ಕಳಾಗಿರುವ ಶ್ರೀಕೃಷ್ಣದೇವನಿಗೂ ಶ್ರೀಬಲರಾಮನಿಗೂ ಉಪನಯನವನ್ನು ಮಾಡುವುದಾಗಿ ತೀರ್ಮಾನಿಸಿದನು. ತನ್ನ ಪುರೋಹಿತರಾದ ಗರ್ಗಾಚಾರ್ಯರನ್ನು ಕರೆಯಿಸಿದನು. ಅವರು ಬಂದರು. ಉಪನಯನಕ್ಕೆ ಬೇಕಾದ ಎಲ್ಲಾ ಸಾಮಗ್ರಿಗಳನ್ನೂ ಸಿದ್ಧಪಡಿಸಿದರು. ಬ್ರಹ್ಮಾದಿಸಕಲದೇವತೆಗಳೂ ವೇದವ್ಯಾಸಾದಿಸಕಲಮುನಿಗಳೂ ಸಕಲಸಜ್ಜನರೂ ಉಪನಯನಮಹೋತ್ಸವಕ್ಕೆ ಬಂದರು. ಕೆಲವರು ಉಪವಾಸವ್ರತ, ಮೌನವ್ರತ ಮುಂತಾದ ನಿಯಮಗಳನ್ನು ಸ್ವೀಕರಿಸಿದ್ದರು. ಅವರೆಲ್ಲರೂ ತಮ್ಮ ತಮ್ಮ ನಿಯಮಗಳನ್ನು ಪಾಲಿಸುತ್ತಾ ಉಪನಯನಮಹೋತ್ಸವವನ್ನು ನೋಡುವುದಕ್ಕಾಗಿ ಬಂದರು. ಶ್ರೀಹರಿಯ ಮಹೋತ್ಸವವನ್ನು ನೋಡುವುದಕ್ಕಾಗಿ ಎಲ್ಲಾ ನಿಯಮಗಳನ್ನು ಪಾಲಿಸುತ್ತಿರುವವರೂ ಬರುವುದು ಧರ್ಮವಲ್ಲವೇ?

ಶ್ರೀಕೃಷ್ಣದೇವನ ಉಪನಯನಮಹೋತ್ಸವವನ್ನು ನೋಡುವವರಿಗೆ ಉಪನಯನಾದಿ ಸಕಲ ಶಾಸ್ತ್ರೋಕ್ತನಿಯಮಾನುಷ್ಠಾನಗಳಿಗೆ ಕಾರಣವಾಗಿರುವ ಜನ್ಮವೇ ದೂರವಾಗುತ್ತದೆ. ಆದ್ದರಿಂದ ಈ ಉತ್ಸವಕ್ಕೆ ಎಲ್ಲರೂ ಬಂದಿರುವುದು ಅತ್ಯಂತ ಯುಕ್ತವಾಗಿದೆ. ಈ ಮಹನೀಯರೆಲ್ಲರೂ ಶ್ರೀಕೃಷ್ಣದೇವನ ಅನುಗ್ರಹದಿಂದ ಸಕಲ ವಿಧವಾದ ಇಷ್ಟಾರ್ಥಗಳನ್ನೂ ಪೂರ್ಣವಾಗಿ ಪಡೆದಿರುವರು. ಇಂತಹ ಮಹನೀಯರೂ ಸಹ ಈ ಉತ್ಸವಕ್ಕಾಗಿ ಬಂದಿರುವುದರಿಂದ ಈ ಉತ್ಸವದ ಮಹತ್ವವನ್ನು ಎಷ್ಟೆಂದು ಹೊಗಳಲಿ?

ಶ್ರೀಕೃಷ್ಣದೇವನ ಉಪನಯನ ಮಹೋತ್ಸವಕಾಲದಲ್ಲಿ ಮಧುರಾಪಟ್ಟಣದಲ್ಲಿ ನಾನಾವಿಧವಾದ ವಾದ್ಯಗಳೂ ಮುನಿಗಳಿಂದ ಹೇಳಲ್ಪಟ್ಟ ವೇದಘೋಷಗಳೂ ಸ್ತುತಿಪಾಠಕರಿಂದ ಮಾಡಲ್ಪಟ್ಟ ಸ್ತೋತ್ರ ಧ್ವನಿಗಳೂ ಘೋಷಿಸಲ್ಪಟ್ಟವು. ಅದೇ ಸಮಯದಲ್ಲಿ ದೇವಲೋಕದಲ್ಲಿ ಗಂಧರ್ವರ ಗಾಯನವೂ ದೇವತೆಗಳ ಸ್ತೋತ್ರಗಳೂ ಮಧುರಾಪಟ್ಟಣದ ಧ್ವನಿಗಳನ್ನು ಸ್ಪರ್ಧೆಯಿಂದ ಜಯಿಸಿದವು. ಸುಮಂಗಲಿಯರೆಲ್ಲರೂ ಅತ್ಯಂತ ಪ್ರೇಮಪರವಶರಾಗಿ

ಶ್ರೀಕೃಷ್ಣದೇವನ ಮೇಲೆ ಕೆಂಪು ಮಂತ್ರಾಕ್ಷತೆಗಳನ್ನು ಚೆಲ್ಲಿದರು. ಕಣ್ಣುಗಳಿಗೆ ಹಬ್ಬವನ್ನು ಕೊಡುತ್ತಿರುವ ಶ್ರೀಕೃಷ್ಣದೇವನನ್ನು ಎಡೆಬಿಡದೆ ನೋಡುತ್ತಾ ಮೈಮರೆತರು. ಅವನನ್ನು ತಬ್ಬಿಕೊಳ್ಳಬೇಕೆಂದು ಆಶಿಸಿದರು. ತ್ರಿವಕ್ರೆಯು ಮಾತ್ರ ಬ್ರಹ್ಮಚರ್ಯವ್ರತವನ್ನು ಸ್ವೀಕರಿಸಿರುವಶ್ರೀಕೃಷ್ಣದೇವನಿಗೂ ತನಗೂ ಶರೀರಸಂಬಂಧವು ಏರ್ಪಡುವುದು ದುರ್ಲಭವೆಂದು ಭಾವಿಸಿ ಅಪರಿಮಿತವಾದ ಚಿಂತೆಯಿಂದ ಯುಕ್ತಳಾದಳು.

ಬಲರಾಮನು ಶೇಷದೇವನ ಅವತಾರವಾಗಿರುವುದರಿಂದ ಶ್ರೀಕೃಷ್ಣದೇವನನ್ನು ಯಾವಾಗಲೂ ಸ್ತುತಿಸುತ್ತಿರುವನು. ಶ್ರೀಕೃಷ್ಣದೇವನು ಶೇಷದೇವನೇ ಮೊದಲಾದ ಸಕಲ ದೇವತೆಗಳಿಂದಲೂ ಸ್ತುತಿಸಲ್ಪಡುತ್ತಿರುವವನು. ಇವರಿಬ್ಬರ ಕಂಠಗಳಲ್ಲಿಯೂ ಈ ದಿನದಲ್ಲಿ ಯಜ್ಞೋಪವೀತಗಳು ಶೋಭಿಸಿದವು. ಒಂದೊಂದು ಯಜ್ಞೋಪವೀತಗಳಲ್ಲಿಯೂ ಮೂರು ಮೂರು ನೂಲುಗಳಿವೆ. ಈ ಒಂದೊಂದು ನೂಲುಗಳು ಒಂದೊಂದು ವೇದಗಳಂತೆ ಶೋಭಿಸುತ್ತಾ ಅವನ ಕಂಠದ ಸುತ್ತು ಮುತ್ತಲಿನ ಪ್ರದೇಶಗಳನ್ನು ಆಶ್ರಯಿಸಿದಂತೆ ಕಾಣಿಸಿದವು. ಬಲರಾಮನು ಶ್ರೀಕೃಷ್ಣದೇವನನ್ನು ಸ್ತುತಿಸುವುದಕ್ಕಾಗಿ ಮೂರು ವೇದಗಳನ್ನು ಧರಿಸಿದಂತೆ ಆ ನೂಲುಗಳನ್ನು ಧರಿಸಿದನು. ತಾಯಿಯಾದ ದೇವಕೀದೇವಿ, ತಂದೆಯಾದ ವಸುದೇವ, ಅಕ್ರೂರನೇ ಮೊದಲಾದ ಅಸಂಖ್ಯ ಸಜ್ಜನರು ಇವರ ತ್ರಿವಿಧವಾದ ಪ್ರೇಮಗಳೇ ಈ ಯಜ್ಞೋಪವೀತದಲ್ಲಿರುವ ಮೂರು ನೂಲುಗಳಂತೆ ಕಾಣಿಸಿದವು. ಯಜ್ಞೋಪವೀತದಲ್ಲಿರುವ ಒಂದೊಂದು ನೂಲುಗಳೂ ಮೂರು ಮೂರು ನೂಲುಗಳನ್ನು ಒಟ್ಟುಗೂಡಿಸಿ ಒಂದಾಗಿ ಮಾಡಲ್ಪಟ್ಟಿವೆ. ಈ ನೂಲುಗಳೇ ಶ್ರೀಕೃಷ್ಣದೇವನನ್ನು ಸ್ತುತಿಸುತ್ತಿರುವ ಒಂದೊಂದು ವೇದಗಳೆಂದು ಹಿಂದೆ ಹೇಳಿದೆವು. ಆದ್ದರಿಂದ ಶ್ರೀಕೃಷ್ಣದೇವನನ್ನು ಸ್ತುತಿಸುತ್ತಿರುವ ಒಂದೊಂದು ವೇದಗಳೂ ಅಸಂಖ್ಯವಾದ ಶ್ರೀಕೃಷ್ಣದೇವನ ಗುಣಗಳನ್ನು ತಿಳಿಸುತ್ತಿರುವುದಾಗಿ ತಿಳಿಯುತ್ತದೆ. ಹೀಗೆ ಸಕಲ ವೇದಪ್ರತಿಪಾದ್ಯನಾದ ಶ್ರೀಕೃಷ್ಣದೇವನಿಗೆ ಉಪನಯನದ ಆವಶ್ಯಕತೆ ಇದೆಯೇ? ಇದುಲೋಕದಲ್ಲಿರುವ ಸರ್ವರಿಗೂ ವೈದಿಕಕಾರ್ಯಗಳನ್ನು ಮಾಡಲೇಬೇಕು ಎಂದು ತಿಳಿಸುವುದಕ್ಕಾಗಿ ಆಡಿದ ನಾಟಕವೆಂದು ತಿಳಿಯಬೇಕು.

ಈ ಉಪನಯನಮಹೋತ್ಸವಕಾಲದಲ್ಲಿ ಉಪನಯನಹೋಮವು ನಡೆಯಿತು. ಆಗ ಅಗ್ನಿಯು ವಿಶೇಷವಾಗಿ ಜ್ವಲಿಸಿದನು. ಅದಕ್ಕೆ ಕಾರಣವಿದೆ. ಅಗ್ನಿದೇವನಿಗೆ ೧೬೦೦೦ ಗಂಡುಮಕ್ಕಳಿದ್ದರು. ಅವರೆಲ್ಲರೂ ಶ್ರೀಹರಿಯನ್ನು ಉದ್ದೇಶಿಸಿ ತಪಸ್ಸನ್ನು ಮಾಡಿದರು. ಶ್ರೀಹರಿಯಿಂದ ಸ್ತ್ರೀಯರಾಗಿ ಹುಟ್ಟಬೇಕೆಂದು ಆ ಜನ್ಮದಲ್ಲಿ ಶ್ರೀಕೃಷ್ಣದೇವನೇ ಪತಿಯಾಗಬೇಕೆಂದೂ ವರವನ್ನು ಬೇಡಿದರು. ಶ್ರೀಹರಿಯೂ ಆ ವರವನ್ನು ಕೊಟ್ಟಿರುವನು. ಅಗ್ನಿಕುಮಾರರೆಲ್ಲರೂ ಸ್ತ್ರೀಯರಾಗಿ ಆ ಕಾಲದಲ್ಲಿ ಭೂಲೋಕದಲ್ಲಿ ಹುಟ್ಟಿದ್ದರು. ಉಪನಯನದ ಆವಶ್ಯಕತೆಯಿಲ್ಲದ ಶ್ರೀಕೃಷ್ಣದೇವನು ಲೋಕವಿಡಂಬನಕ್ಕಾಗಿ ಇಂದು ಉಪನಯನಸಂಸ್ಕಾರದಿಂದ ಯುಕ್ತನಾಗಲಿಲ್ಲವೇ? ಅದರಂತೆ ವಿವಾಹದ ಆವಶ್ಯಕತೆ ಇಲ್ಲದಿರುವ ಶ್ರೀಕೃಷ್ಣದೇವನು ಇನ್ನು ಮುಂದೆ ಲೋಕವಿಡಂಬನಕ್ಕಾಗಿಯೇ ವಿವಾಹವನ್ನು ಮಾಡಿಕೊಳ್ಳುವನು. ಆಗ ತಾನು ಕೊಟ್ಟಿರುವ ವರವನ್ನು ಸತ್ಯವಾಗುವಂತೆ ಮಾಡುವುದಕ್ಕಾಗಿಯೇ ನನ್ನ ಮಕ್ಕಳನ್ನೂ ವಿವಾಹ ಮಾಡಿಕೊಳ್ಳುವನು. ಹಾಗೆ ನಡೆದುಬಿಟ್ಟರೆ ನಾನು ಶ್ರೀಕೃಷ್ಣದೇವನ ಮಾವನಾಗುವೆನು ಎಂಬ ಹೆಮ್ಮೆಯಿಂದ ಅಗ್ನಿದೇವನು ಅಧಿಕವಾಗಿ ಜ್ವಲಿಸಿದನು.

ಆಗ ಗರ್ಗಾಚಾರ್ಯರು ಸರ್ವಜ್ಞಶಿಖಾಮಣಿಯೂ ಪುರಾಣಪುರುಷನೂ ಆಗಿರುವ ಶ್ರೀಕೃಷ್ಣದೇವನಿಗೆ ಗಾಯತ್ರೀಮಂತ್ರವನ್ನು ಉಪದೇಶಿಸಿದರು. ಸರ್ವಜ್ಞನಾದ ಶ್ರೀಕೃಷ್ಣದೇವನಿಗೆ ಉಪದೇಶವೇ? ಅಲ್ಲ. ಅಲ್ಲ. "

ಉಪದೇಶ ಎಂಬ ನಿಮಿತ್ತದಿಂದ ನಿನ್ನ ಮಂತ್ರವನ್ನು ಆವೃತ್ತಿ ಮಾಡುವೆನು. ಈ ಮಂತ್ರವು ನಿನ್ನ ಗುಣಗಳನ್ನು ಹೇಳುತ್ತಿದೆ. ನಿನ್ನ ಗುಣಗಳನ್ನು ಪುನಃ ಪುನಃ ಸ್ಮರಿಸುತ್ತಿರುವ ಮತ್ತು ಹೇಳುತ್ತಿರುವ ನನಗೆ ಸದ್ಬುದ್ಧಿಯನ್ನು ಕೊಡು'' ಎಂದು ಪ್ರಾರ್ಥಿಸಿದರು. ಎಂದು ಹೇಳುವುದೇ ಯೋಗ್ಯವಾಗಿದೆ. ಈ ಗಾಯತ್ರೀಮಂತ್ರದ ಅರ್ಥವೂ ಅದೇ ಆಗಿರುತ್ತದೆ. ಆದ್ದರಿಂದ ನಮ್ಮ ಊಹೆಯು ಯೋಗ್ಯವಾಗಿದೆ.

ಈ ಉಪನಯನಕಾಲದಲ್ಲಿ ಅಸಂಖ್ಯವಾದ ಮತ್ತು ಸಲಕ್ಷಣವಾದ ಗೋವುಗಳನ್ನು ದಕ್ಷಿಣಾಸಹಿತವಾಗಿ ವಸುದೇವನು ಮುನಿಗಳಿಗೆ ದಾನಮಾಡಿದನು. ಉಪನಯನವಾದ ಮೇಲೆ ಗೊಲ್ಲರೊಡನೆ ದನಗಳನ್ನು ಕಾಯುವ ಕೆಲಸವನ್ನು ಮಾಡುವುದಿಲ್ಲವೆಂದೂ ವೇದೋಕ್ತ ಸಕಲಕಾರ್ಯಗಳನ್ನು ಮಾಡುತ್ತಿರುವನೆಂದೂ ತಿಳಿಸುವುದಕ್ಕಾಗಿಯೇ ಈ ಗೋದಾನವನ್ನು ಮಾಡಿರುವನೆಂದು ಹೇಳಬಹುದು.

ಶ್ರೀಕೃಷ್ಣದೇವನ ಕಂಠದಲ್ಲಿ ಯಜ್ಞೋಪವೀತವು ಶೋಭಿಸುತ್ತಿದೆ. ದೇಹದಲ್ಲಿ ಕೃಷ್ಣಾಜಿನವನ್ನು ಧರಿಸಿರುವನು. ಮುನಿಗಳೆಲ್ಲರೂ ಮರ್ಯಾದೆಯನ್ನು ಮಾಡುತ್ತಿರುವರು. ಒಂದೊಂದು ಕಾರ್ಯಗಳ ಆರಂಭದಲ್ಲಿಯೂ ಪ್ರಾಣಾಯಾಮವನ್ನು ಮಾಡುತ್ತಿರುವನು. ಅಂಗುಷ್ಠ ಮತ್ತು ತೋರ್ಬೆರಳುಗಳನ್ನು ಒಟ್ಟುಗೂಡಿಸ ತತ್ವೋಪದೇಶವನ್ನು ಮಾಡುತ್ತಿರುವವನಂತೆ ಜ್ಞಾನಮುದ್ರೆಯನ್ನು ಧರಿಸಿರುವನು. ಮಂತ್ರಗಳನ್ನೆಲ್ಲಾ ಧ್ಯಾನಿಸುತ್ತಿರುವನು. ಇವನನ್ನು ನೋಡಿದರೆ ವೇದವ್ಯಾಸರೂಪಿಯಾದ ಶ್ರೀಹರಿಯನ್ನು ನೋಡಿದಂತೆ ಕಾಣಿಸುತ್ತದೆ.

ಶ್ರೀವೇದವ್ಯಾಸರೂಪಿಯಾದ ಶ್ರೀಹರಿಯೂ ಕಂಠದಲ್ಲಿ ಯಜ್ಞೋಪವೀತವನ್ನೂ ದೇಹದಲ್ಲಿ ಕೃಷ್ಣಾಜಿನವನ್ನೂ ಧರಿಸಲಿಲ್ಲವೇ? ಮುನಿಸಮೂಹದಿಂದ ಮಾನ್ಯನಲ್ಲವೇ? ಶ್ರೀಕೃಷ್ಣದೇವನು ಪ್ರಾಣಾಯಾಮವನ್ನು ಮಾಡುತ್ತಿದ್ದರೆ ಶ್ರೀವೇದವ್ಯಾಸರು ಮುಖ್ಯಪ್ರಾಣದೇವರಿಗೆ ಗುರುವಾಗಿದ್ದು ಅವರನ್ನು ಪ್ರೇರಿಸುತ್ತಿಲ್ಲವೇ? ಜ್ಞಾನಮುದ್ರೆಯನ್ನು ಶ್ರೀಕೃಷ್ಣದೇವನಂತೆ ಯಾವಾಗಲೂ ಧರಿಸಲಿಲ್ಲವೇ? ಶ್ರೀವೇದವ್ಯಾಸರ ಸಾಮ್ಯವು ಶ್ರೀಕೃಷ್ಣದೇವನಂತೆ ಯಾವಾಗಲೂ ಧರಿಸಲಿಲ್ಲವೇ? ಆದ್ದರಿಂದ ಶ್ರೀವೇದವ್ಯಾಸರ ಸಾಮ್ಯವು ಶ್ರೀಕೃಷ್ಣದೇವನಲ್ಲಿ ಅತ್ಯಂತ ಯೋಗ್ಯವಾಗಿದೆ.

ಉಪನಯನವಾದ ಮೇಲೆ ಪ್ರತಿದಿನ ಅಗ್ನಿಕಾರ್ಯವನ್ನು ಮಾಡುತ್ತಾ ಅಗ್ನಿದೇವನನ್ನು ತೃಪ್ತಿಪಡಿಸಿದನು. ಅಗ್ನಿಯಲ್ಲಿ ಮಾಡುವ ಎಲ್ಲಾ ಹೋಮಗಳಲ್ಲಿಯೂ ಎಲ್ಲಾ ದೇವತೆಗಳಲ್ಲಿಯೂ ಒಳಗೆ ಸನ್ನಿಹಿತನಾಗಿದ್ದು ಶ್ರೀಕೃಷ್ಣದೇವನೇ ಎಲ್ಲಾ ಆಹುತಿಗಳನ್ನೂ ಸ್ವೀಕರಿಸುತ್ತಿರುವನು. ಆದ್ದರಿಂದ ಅಗ್ನಿಕಾರ್ಯದಲ್ಲಿಯೂ ತನಗೆಯೇ ಆಹುತಿಯನ್ನು ಕೊಟ್ಟು ತನ್ನ ಹೊಟ್ಟೆಯನ್ನೇ ತುಂಬಿಸಿದಂತಾಯಿತು. ತನ್ನ ಹೊಟ್ಟೆಯನ್ನು ಯಾರು ತಾನೇ ತುಂಬಿಸಿಕೊಳ್ಳಲಾರನು? ಆದ್ದರಿಂದ ತನ್ನ ತೃಪ್ತಿಗಾಗಿ ಅಗ್ನಿಕಾರ್ಯವನ್ನು ಮಾಡಿದ್ದು ಯೋಗ್ಯವೇ ಆಗಿದೆ.

ಶ್ರೀಕೃಷ್ಣದೇವನು ಪ್ರತಿದಿನದಲ್ಲಿಯೂ ಸಕಲವೇದಗಳ ತಾಯಿಯ ಸ್ಥಾನದಲ್ಲಿರುವ ಗಾಯತ್ರೀ ಮಂತ್ರವನ್ನು ಮೂರು ಕಾಲಗಳಲ್ಲಿಯೂ ಜಪಿಸಿದನು. ಈ ಮಂತ್ರವು ಸಹ ಶ್ರೀಕೃಷ್ಣದೇವನನ್ನೇ ಸ್ತುತಿಸುತ್ತದೆ. ತನ್ನ ಮಹಿಮೆಯನ್ನು ಯಾವನು ತಾನೇ ಹೊಗಳಲಾರನು.

ಹೀಗೆ ಶ್ರೀಕೃಷ್ಣದೇವನು ಬ್ರಹ್ಮಚರ್ಯವ್ರತವನ್ನು ಧರಿಸಿದನು. ಇದನ್ನು ನೋಡಿದ ಎಲ್ಲಾ ಮುನಿಗಳೂ

ದೇವತೆಗಳೇ ಮೊದಲಾದ ಸಜ್ಜನರೂ ಸಂತುಷ್ಟರಾದರು. ಅವನ ವಕ್ಷಃಸ್ಥಳದಲ್ಲಿರುವ ಕ್ಷೀರಸಮುದ್ರಕನ್ಯೆಯಾಗಿರುವ ಲಕ್ಷ್ಮೀದೇವಿಯರು ಮಾತ್ರ ಬ್ರಹ್ಮಚಾರಿಯ ವಕ್ಷಃಸ್ಥಳದಲ್ಲಿ ನಾರೀಮಣಿಯಾಗಿ ತಾನು ವಾಸಿಸುವುದು ಹೇಗೆ ಯುಕ್ತವಾಗುತ್ತದೆ ಎಂದು ನಾಚಿದರು.

ಪ್ರತಿದಿನ ಪ್ರಾತಃಕಾಲದಲ್ಲಿ "ಹೃದ್ರೋಗಂ ಮಮ ಸೂರ್ಯ ಹರಿಮಾಣಂ ಚ ನಾಶಯ" ಮುಂತಾದ ಮಂತ್ರಗಳಿಂದ ಸೂರ್ಯದೇವನನ್ನೂ " ಆಯುಷ್ಯಂ ತೇಜ ಆರೋಗ್ಯಂ ದೇಹಿ ಮೇ ಹವ್ಯವಾಹನ" ಇತ್ಯಾದಿ ಮಂತ್ರಗಳಿಂದ ಅಗ್ನಿದೇವನನ್ನೂ ಲೋಕವಿಡಂಬನಾರ್ಥವಾಗಿ ಪ್ರಾರ್ಥಿಸಿದನು. ಇದರಿಂದ ಸೂರ್ಯದೇವನೂ ಅಗ್ನಿದೇವನೂ "ದಾಸಾನುದಾಸರಾಗಿರುವ ನಮ್ಮಿಬ್ಬರನ್ನು ನಮ್ಮ ಪ್ರಭುವಾಗಿರುವ ಶ್ರೀಕೃಷ್ಣದೇವನೂ ಪ್ರಾರ್ಥಸುತ್ತಿರುವುದು ತುಂಬಾ ಶೋಚನೀಯ" ಎಂದು ನಾಚಿದರು.

ಹೀಗೆ ಶ್ರೀಕೃಷ್ಣದೇವನು ಉಪನಯನಸಂಸ್ಕಾರದಿಂದ ಯುಕ್ತನಾದನು. ಯಜ್ಞೋಪವೀತವನ್ನು ಧರಿಸಿದನು. ಅಗ್ನಿಕಾರ್ಯವನ್ನೂ, ಗಾಯತ್ರೀಜಪವನ್ನೂ ಮಾಡಿದನು. ಮಾತೃಭಕ್ತಿ ಮುಂತಾದ ಭಿಕ್ಷೆಗಳನ್ನು ಬೇಡಿದನು. ಸೂರ್ಯೋಪಸ್ಥಾನ, ಅಗ್ನಿಪ್ರಾರ್ಥನೆ ಮುಂತಾದ ಎಲ್ಲಾ ಕಾರ್ಯಗಳನ್ನೂ ಲೋಕವಿಡಂಬನಾರ್ಥವಾಗಿ ಮಾಡುತ್ತಾ ಬಂದನು.

## ಶ್ರೀಕೃಷ್ಣದೇವನ ವಿದ್ಯಾಭ್ಯಾಸ

(೫೬) ಗುರುಂ ಆಪ್ತಃ ಅಥ ವಿದಿತಾಶೇಷಕೃತ್ಯಃ ನಃ ಅವತಾತ್ - ಗುರುಗಳ ಮನೆಗೆ ಹೋದನು. ತಿಳಿಯಬೇಕಾದ ಎಲ್ಲಾ ವಿದ್ಯೆಗಳನ್ನೂ ತಿಳಿದನು. ಅವನು ನಮ್ಮನ್ನು ರಕ್ಷಿಸಲಿ.

ವಿಶೇಷಾರ್ಥ - ಲೋಕಶಿಕ್ಷಣಾಯ ಅವಂತಿಪುರವಾಸಿನಂ ಸಾಂದೀಪಿನೀಂ ಗುರುಂ ಬಲರಾಮೇಣ ಸಹ ಪ್ರಾಪ್ತಲೇ? ಸಕೃನ್ನಿಗದಿತಮಾತ್ರೇಣ ಸರ್ವಾ ವಿದ್ಯಾಃ ಪ್ರಾಪ್ಯ ಸರ್ವಾನತೋಷಯತ್.

ವಿಶೇಷಾರ್ಥ ವಿವರಣ - ಶ್ರೀಕೃಷ್ಣದೇವನಿಗೂ ಬಲರಾಮನಿಗೂ ಉಪನಯನವು ಮುಗಿಯಿತು. ಉಪನಯನವು ಮುಗಿದ ಕೂಡಲೇ ಗುರುಗಳ ಮನೆಗೆ ಹೋಗಬೇಕು. ಅಲ್ಲಿ ವಾಸಿಸಬೇಕು. ಗುರುಗಳೂ ಗುರುಪತ್ನಿಯರೂ ಹೇಳಿದ ಕೆಲಸಗಳನ್ನು ಮಾಡುತ್ತಿರಬೇಕು. ಭಿಕ್ಷೆ ಬೇಡಿ ಸಂಪಾದಿಸಿದ ಅನ್ನವನ್ನು ಗುರುಗಳಿಗೆ ಸಮರ್ಪಿಸಬೇಕು. ಅವರು ಅನುಮತಿಯನ್ನು ಕೊಟ್ಟರೆ ಆ ಅನ್ನವನ್ನು ತಿನ್ನಬೇಕು. ಇಲ್ಲದಿದ್ದರೆ ಅಂದಿನ ದಿನದಲ್ಲಿ ಉಪವಾಸವಿರಬೇಕು. ಗುರುಗಳು ಕರೆದ ದಿನ ವಿದ್ಯಾಭ್ಯಾಸವನ್ನು ಮಾಡಬೇಕು. ಹೀಗೆ ಬ್ರಹ್ಮಚಾರಿಗೆ ಅಸಂಖ್ಯ ನಿಯಮಗಳು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿವೆ.

ಈ ನಿಯಮಗಳಿಗೆ ಶ್ರೀಕೃಷ್ಣದೇವನು ಬದ್ಧನಲ್ಲ. ಸರ್ವಜ್ಞ ಶಿಖಾಮಣಿಯಾಗಿರುವ ಶ್ರೀಕೃಷ್ಣದೇವನಿಗೂ ಅವನ ಅನುಗ್ರಹದಿಂದ ಸರ್ವಜ್ಞನಾಗಿರುವ ಬಲರಾಮನಿಗೂ ವಿದ್ಯಾಭ್ಯಾಸದ ಆವಶ್ಯಕತೆಯೇ ಇಲ್ಲ. ಆದರೂ " ಬ್ರಹ್ಮಚಾರಿಯು ಗುರುಗಳಲ್ಲಿ ಗುರುಕುಲವಾಸವನ್ನು ಮಾಡುತ್ತಾ ವಿದ್ಯಾಭ್ಯಾಸವನ್ನು ಮಾಡಬೇಕು. ಎಂಬ ನೀತಿಯನ್ನು ತಿಳಿಸುವುದಕ್ಕಾಗಿ ಕಾಶೀದೇಶವಾಸಿಯಾಗಿಯೂ, ತತ್ಕಾಲದಲ್ಲಿ ಅವಂತೀನಗರದಲ್ಲಿರುವವರೂ ಆಗಿರುವ ಸಾಂದೀಪಿನೀ ಎಂಬ ಗುರುಗಳ ಮನೆಗೆ ಶ್ರೀಕೃಷ್ಣ ಬಲರಾಮದೇವರು ಹೋದರು. ಅವರ ಮನೆಯಲ್ಲಿಯೇ

ವಾಸಿಸಿದರು. ಬ್ರಹ್ಮಚಾರಿಗಳು ಮಾಡಬೇಕಾದ ಎಲ್ಲಾ ನಿಯಮಗಳನ್ನೂ ಪಾಲಿಸಿದರು.

ನಾಲ್ಕುವೇದಗಳನ್ನೂ ಅರವತ್ತನಾಲ್ಕು ವಿದ್ಯಾಗಳನ್ನೂ ಅಸಂಖ್ಯವರ್ಷಗಳ ವರೆಗೆ ಗುರುಗಳ ಮನೆಯಲ್ಲಿಯೇ ಇದ್ದು ಓದಿ ಮುಗಿಸಬೇಕು. ಎಲ್ಲಾ ವಿದ್ಯೆಗಳನ್ನೂ ವೇದಗಳನ್ನೂ ಓದಲು ಶಕ್ತಿಯಿಲ್ಲದವರು ಸ್ವಶಾಖೆಗೆ ಸಂಬಂಧಿಸಿದ ವೇದಗಳನ್ನು ತನಗೆ ಅಭಿಮತವಾಗಿರುವ ವಿದ್ಯೆಗಳನ್ನೂ ಕನಿಷ್ಠಪಕ್ಷ ಹನ್ನೆರಡು ವರ್ಷಗಳ ವರೆಗಾಗಲೀ ಅಧ್ಯಯನ ಮಾಡಬೇಕು.

ಶ್ರೀಕೃಷ್ಣದೇವನೂ ಬಲರಾಮನೂ ಅರವತ ನಾಲ್ಕು ದಿನಗಳಲ್ಲಿ ನಾಲ್ಕು ವೇದಗಳನ್ನೂ ಅರವತ್ತನಾಲ್ಕು ವಿದ್ಯೆಗಳನ್ನು ಓದಿ ಮುಗಿಸಿದರು. ಅವರಿಬ್ಬರೂ ಒಂದೇ ದಿನದಲ್ಲಿ ಅಷ್ಟು ವಿದ್ಯೆಗಳನ್ನು ತಿಳಿಯಲು ಶಕ್ತರು. ಓದದೆಯೇ ಎಲ್ಲಾ ವಿದ್ಯೆಗಳನ್ನೂ ತಿಳಿದವರು. ಆದರೂ ಲೋಕವಿಡಂಬನಾರ್ಥವಾಗಿ ಓದಲಿಕ್ಕೆ ಹೋದವರು ಕ್ರಮವಾಗಿ ಅಷ್ಟು ಗ್ರಂಥಗಳನ್ನು ಓದಬೇಡವೇ? ಹಾಗೆ ಓದುವುದಾದರೆ ಗುರುಗಳು ಒಮ್ಮೆ ಯಾದರೂ ಇವರಿಬ್ಬರ ಮುಂದೆ ಓದಬೇಡವೇ? ಗುರುಗಳು ಎಲ್ಲಾ ಗ್ರಂಥಗಳನ್ನು ಪಾರಾಯಣ ಮಾಡಲು ಒಂದೊಂದು ವಿದ್ಯೆಗೆ ಒಂದೊಂದು ದಿನವಾದರೂ ಅವಕಾಶವು ಬೇಡವೇ? ಅರವತ್ತನಾಲ್ಕು ವಿದ್ಯೆಗಳಿಗೆ ಅರವತ್ತನಾಲ್ಕು ದಿನಗಳಾದರೂ ಬೇಡವೇ? ಹೀಗೆ ಗುರುಗಳ ಶಕ್ತಿಯನ್ನು ಅನುಸರಿಸಿ ಒಂದೊಂದು ದಿನ ಒಂದೊಂದು ವಿದ್ಯೆಯಂತೆ ಅರವತ್ತನಾಲ್ಕು ದಿನಗಳಲ್ಲಿ ಅರವತ್ತನಾಲ್ಕು ವಿದ್ಯೆಗಳನ್ನು ಓದಿ ಮುಗಿಸಿದರು. ಸ್ವತಃ ಸರ್ವಜ್ಞರಾದ ಇವರಿಬ್ಬರೂ ಸರ್ವಜ್ಞರೆಂದು ಪ್ರಸಿದ್ಧರಾದರು. ॥೧೧॥

**ದತ್ವಾ ಪುತ್ರಂ ಪ್ರವಕ್ತ್ರೇ ಪ್ರತಿಗತಮಥುರಃ ಸಾಂತ್ವಯನ್ನುದ್ಧವಾಸ್ಯಾ**
**ದ್ಗೋಷ್ಠಸ್ಥಾನ್ನಂದಪೂರ್ವಾನರಮಯದಬಲಾಂ ಪ್ರೀತಿಕೃದ್ಯಃ ಶುಭಸ್ಯ ।**
**ಅಕ್ರೂರಸ್ಯಾಥ ತೇನ ಪ್ರತಿವಿದಿತಪೃಥಾಪುತ್ರಕೃತ್ಯೋ ಜರಾಯಾಃ**
**ಸೂನುಂ ನಿರ್ಭಿನ್ನಸೇನಂ ವ್ಯತನುತ ಬಹುಶೋ ವಿದ್ರುತಂ ನಃ ಸ ಪಾಯಾತ್ ॥೧೨॥**

**ಪದಚ್ಛೇದ :-** ದತ್ವಾ ಪುತ್ರಂ ಪ್ರವಕ್ತ್ರೇ ಪ್ರತಿಗತಮಥುರಃ ಸಾಂತ್ವಯನ್ ಉದ್ಧವಾಸ್ಯಾತ್ ಗೋಷ್ಠಸ್ಥಾನ್ ನಂದಪೂರ್ವಾನ್ ಅರಮಯತ್ ಅಬಲಾಂ ಪ್ರೀತಿಕೃತ್ ಯಃ ಶುಭಸ್ಯ ಅಕ್ರೂರಸ್ಯ ಅಥ ತೇನ ಪ್ರತಿವಿದಿತ ಪೃಥಾಪುತ್ರಕೃತ್ಯಃ ಜರಾಯಾಃ ಸೂನುಂ ನಿರ್ಭಿನ್ನಸೇನಂ ವ್ಯತನುತ, ಬಹುಶಃ ವಿದ್ರುತಂ ನಃ ಸಃ ಪಾಯಾತ್.

ಅನ್ವಯ - ಯಃ ಪ್ರವಕ್ತ್ರೇ ಪುತ್ರಂ ದತ್ವಾ ಪ್ರತಿಗತಮಥುರಃ ಉದ್ಧವಾಸ್ಯಾತ್ ಗೋಷ್ಠಸ್ಥಾನ್ ನಂದಪೂರ್ವಾನ್ ಸಾಂತ್ವಯನ್ ಅಬಲಾಂ ಅರಮಯತ್ ಶುಭಸ್ಯ ಅಕ್ರೂರಸ್ಯ ಪ್ರಿತಿಕೃತ್ ಅಥ ತೇನ ಪ್ರತಿವಿದಿತಪೃಥಾಪುತ್ರಕೃತ್ಯಃ ಜರಾಯಾಃ ಸೂನುಂ ನಿರ್ಭಿನ್ನಸೇನಂ ಬಹುಶಃ ವಿದ್ರುತಂ ವ್ಯತನುತ. ಸಃ ನಃ ಪಾಯಾತ್.

ಅನ್ವಯಾರ್ಥ - "ಯಃ" ಯಾವ ಶ್ರೀಕೃಷ್ಣದೇವನು "ಪ್ರವಕ್ತ್ರೇ" ಗುರುಗಳಾದ ಸಾಂದೀಪಿನ್ಯಾಚಾರ್ಯರಿಗೆ "ಪುತ್ರಂ" ಮಗನನ್ನು "ದತ್ವಾ" ಕೊಟ್ಟು "ಪ್ರತಿಗತಮಥುರಃ" ಮಥುರಾಪಟ್ಟಣಕ್ಕೆ ಹಿಂದಿರುಗಿ ಬಂದವನಾಗಿ "ಉದ್ಧವಾಸ್ಯಾತ್" ಉದ್ಧವನ ಮುಖದಿಂದ "ಗೋಷ್ಠಸ್ಥಾನ್" ವೃಂದಾವನದಲ್ಲಿರುವ "ನಂದಪೂರ್ವಾನ್" ನಂದನೇ ಮೊದಲಾದವರನ್ನು "ಸಾಂತ್ವಯನ್" ಸಮಾಧಾನಪಡಿಸಿದವನಾಗಿ "ಅಬಲಾಂ" ತ್ರಿವಕ್ರೆಎಂಬ ಸ್ತ್ರೀಯನ್ನು "ಅರಮಯತ್" ಸಂತೋಷಪಡಿಸಿದನೋ "ಶುಭಸ್ಯ" ಮಂಗಳ ಸ್ವಬಾವವುಳ್ಳ " ಅಕ್ರೂರಸ್ಯ" ಅಕ್ರೂರನಿಗೆ

"ಪ್ರೀತಿಕೃತ್" ಪ್ರೀತಿಯನ್ನು ಮಾಡಿದವನಾಗಿ "ಅಥ" ಅನಂತದಲ್ಲಿ "ಪ್ರತಿವಿದಿತಪೃಥಾಪುತ್ರಕೃತ್ಯಃ" ಸೋದರತ್ತೆಯಾದ ಪೃಥಾದೇವಿಯ ಮಕ್ಕಳಾದ ಪಾಂಡವರಿಗಾಗಿ ಮಾಡಬೇಕಾದ ಕೆಲಸಗಳನ್ನು ತಿಳಿದವನಾಗಿ "ಜರಾಯಾಃ" ಜರಾ ಎಂಬ ರಾಕ್ಷಸಿಯ "ಸೂನುಂ" ಮಗನಾದ ಜರಾಸಂಧನನ್ನು "ನಿರ್ಭಿನ್ನಸೇನಂ" ತಿಳಿಯಲ್ಪಟ್ಟ ಸೈನ್ಯವುಳ್ಳವನನ್ನಾಗಿಯೂ "ಬಹುಶಃ" ಅನೇಕ ಸಲ "ವಿದ್ರುತಂ" ಓಡಿಸಲ್ಪಟ್ಟವನನ್ನಾಗಿಯೂ "ವ್ಯತನುತ ಮಾಡಿದನೋ "ಸಃ" ಆ ಶ್ರೀಕೃಷ್ಣದೇವನು "ನಃ" ನಮ್ಮನ್ನು "ಪಾಯಾತ್" ರಕ್ಷಿಸಲಿ.

ವಿಗ್ರಹ - (ಪ್ರವಕ್ತಿ ಇತಿ ಪ್ರವಕ್ತಾ, ತಸ್ಮೈ ಪ್ರವಕ್ತ್ರೇ) (ಪ್ರತಿಗತಾ ಮಥುರಾ ಯೇನ ಸಃ ಪ್ರತಿಗತಮಥುರಃ) ಸಾಂತ್ವಯತಿ ಇತಿ ಸಾಂತ್ವಯನ್) (ಉದ್ಧವಸ್ಯ ಆಸ್ಯಂ ಉದ್ಧವಾಸ್ಯಂ, ತಸ್ಮಾತ್ ಉದ್ಧವಾಸ್ಯಾತ್) (ಗಾವಃ ತಿಷ್ಠಂತಿ ಅಸ್ಮಿನ್ ಇತಿ ಗೋಷ್ಠಂ, ಗೋಷ್ಠೇ ತಿಷ್ಠಂತಿ ಇತಿ ಗೋಷ್ಠಸ್ಥಾಃ ತಾನ್ ಗೋಷ್ಠಸ್ಥಾನ್) (ನಂದಃ ಪೂರ್ವಃ ಯೇಷಾಂ ತೇ ನಂದಪೂರ್ವಾಃ, ತಾನ್ ನಂದಪೂರ್ವಾನ್) (ಪ್ರೀತಿಂ ಕರೋತಿ ಇತಿ ಪ್ರೀತಿಕೃತ್) (ಪೃಥಾಯಾಃ ಪುತ್ರಾಃ ಪೃಥಾಪುತ್ರಾಃ ಪೃಥಾಪುತ್ರಾಣಾಂ ಕೃತ್ಯಂ ಪೃಥಾಪುತ್ರಕೃತ್ಯಂ, ಪ್ರತಿವಿದಿತಂ ಪೃಥಾಪುತ್ರಕೃತ್ಯಂ ಯೇನ ಸಃ ಪ್ರತಿವಿದಿತ ಪೃಥಾಪುತ್ರಕೃತ್ಯಃ) ನಿರ್ಭಿನ್ನಾ ಸೇನಾ ಯಸ್ಯ ಸಃ ನಿರ್ಭಿನ್ನಸೇನಃ ತಂ ನಿರ್ಭಿನ್ನಸೇನಂ)

**(೫೭) ವಿಶೇಷಾರ್ಥ - ಪ್ರವಕ್ತ್ರೇ ಪುತ್ರಂ ದತ್ವಾ ಪ್ರತಿಗತಮಥುರಃ**

ಗುರುಗಳಿಗೆ ಮಗನನ್ನು ಕೊಟ್ಟನು. ಮಥುರಾಪಟ್ಟಣಕ್ಕೆ ಹಿಂದಿರುಗಿದನು.

ಕೃಷ್ಣ: ಬಲರಾಮೇಣ ಸಹ ಪೂರ್ವೋಕ್ತರೀತ್ಯಾ ಸಕಲವಿದ್ಯಾಃ ಸಾಂದೀಪಿನೇರವಾಪ್ಯ, ತೇನ ಗುರುಣಾ ಶಿಷ್ಯಸಾಮರ್ಥ್ಯಾಭಿಜ್ಞೇನ ಗುರುದಕ್ಷಿಣಾರ್ಥಂ "ಪ್ರಭಾಸಕ್ಷೇತ್ರೇ ಸಮುದ್ರೇ ಮೃತಂ ಮಮ ಪುತ್ರಮಾನಯ" ಇತ್ಯುಕ್ತಃ, ರಥಮಾರುಹ್ಯ, ಪ್ರಭಾಸಕ್ಷೇತ್ರಂ ಪ್ರಾಪ್ಯ, ವರುಣವಚನೇನ ಸಮುದ್ರಸ್ಥಂ ಶಂಖರೂಪಧರಂ ಪಂಚಜನಾಖ್ಯಂ ದೈತ್ಯಂ ಹತ್ವಾ, ತದುದರೇ ಗುರುಪುತ್ರಮದೃಷ್ಟ್ವಾ, ಪಂಚಜನಾಂಗಪ್ರಭವಂ ಶಂಖಮಾದಾಯ, ಯಮಪುರೀಂ ಗತ್ವಾ, ಯಮೇನಾನೀತಂ ಗುರುಪುತ್ರಂ ಸ್ವಗುರವೇ ದತ್ವಾ, ಮಥುರಾಂ ಪ್ರಾಪ್ಯ.

# ಗುರುದಕ್ಷಿಣೆ ಸಮರ್ಪಣ

ವಿಶೇಷಾರ್ಥ ವಿವರಣ - ಶ್ರೀಕೃಷ್ಣದೇವನು ಹಿಂದೆ ಹೇಳಿದಂತೆ ಸಾಂದೀಪಿನ್ಯಾಚಾರ್ಯರಿಂದ ಸಕಲ ವಿದ್ಯೆಗಳನ್ನೂ ಓದಿದವನಂತೆ ನಟಿಸಿದನು. ವಿದ್ಯಾಭ್ಯಾಸವು ಮುಗಿದ ಕೂಡಲೇ ವಿದ್ಯಾಗುರುಗಳಿಗೆ ಕೊಡಬೇಕಾದ ಗುರುದಕ್ಷಿಣೆಯನ್ನು ಅವರಲ್ಲಿ ಕೇಳಿ ಅವರು ಅಪೇಕ್ಷಿಸಿದ ದಕ್ಷಿಣೆಯನ್ನು ಕೊಡಬೇಕು. ಇದು ಪರಂಪರಾಪ್ರಾಪ್ತವಾದ ಸಂಪ್ರದಾಯ. ಈ ಸಂಪ್ರದಾಯದಂತೆ ಗುರುಗಳಲ್ಲಿ ಪ್ರಶ್ನಿಸಿದನು. ಗುರುಗಳು ಅರವತ್ತ ನಾಲ್ಕು ದಿನಗಳಲ್ಲೇ ಸಕಲ ವಿದ್ಯೆಗಳನ್ನೂ ಓದಿ ತಿಳಿದವನೂ ಕಂಸಾದಿಪ್ರಬಲ ಶತ್ರುಗಳನ್ನು ಲೀಲೆಯಿಂದ ಸಂಹರಿಸಿದವನೂ ಆಗಿರುವ ಶ್ರೀಕೃಷ್ಣದೇವನ ಸಾಮರ್ಥ್ಯವನ್ನು ಸ್ಮರಿಸಿದರು. ಇವನಿಗೆ ಅಸಾಧ್ಯವಾದ ಕಾರ್ಯವು ಯಾವುದೂ ಇಲ್ಲವೆಂದು ನಿಶ್ಚಯಿಸಿದರು. ಪತ್ನಿಯ ಜೊತೆಯಲ್ಲಿ ಆಲೋಚಿಸಿದರು. ಎಷ್ಟೋ ವರ್ಷಗಳ ಹಿಂದೆ ಸಮುದ್ರಸ್ನಾನಕ್ಕಾಗಿ ಹೋದಾ ಸಮುದ್ರದಲ್ಲಿ ಬಿದ್ದು ಸತ್ತುಹೋದ ತಮ್ಮ ಮಗನ ಜ್ಞಾಪಕವು ಬಂತು. ಆ ಮಗನನ್ನು ತಂದು ಕೊಡಬೇಕೆಂದು ಕೇಳಿದರೆ ಅಘಟಿತಘಟನಾಶಕ್ತಿಯುಳ್ಳ ಶ್ರೀಕೃಷ್ಣದೇವನು ಖಂಡಿತವಾಗಿಯೂ ತಂದುಕೊಡುವನೆಂದು ತೀರ್ಮಾನಿಸಿದರು.

ಅದು ಮಾತ್ರವಲ್ಲ, ಶ್ರೀಕೃಷ್ಣದೇವನ ಪ್ರಭಾವವನ್ನು ತಿಳಿದ ಸಾಂದೀಪನ್ಯಾಚಾರ್ಯರು ಶ್ರೀಕೃಷ್ಣದೇವನ ಗುರುಸ್ಥಾನವನ್ನು ಪಡೆದಿರುವ ತಾನೂ ತನ್ನ ತಾಯಿ ಮತ್ತು ತಂದೆಗಳ ವಂಶ ಪರಂಪರೆಯೂ ತನ್ನ ಪತ್ನಿಯೂ ಅವಳ ತಾಯಿ ಮತ್ತು ತಂದೆಯರ ವಂಶಪರಂಪರೆಯೂ ಸದ್ಗತಿಯನ್ನು ಹೊಂದುವುದರಲ್ಲಿ ಸಂಶಯವಿಲ್ಲವೆಂದು ತೀರ್ಮಾನಿಸಿದರು. ಅದರಂತೆ ದುರ್ಮರಣದಿಂದ ಸತ್ತಿರುವ ತನ್ನ ಮಗನೂ ಶ್ರೀಕೃಷ್ಣದೇವನ ಕಟಾಕ್ಷಕ್ಕೆ ಪಾತ್ರನಾಗಿ ಸದ್ಗತಿಯನ್ನು ಪಡೆಯಬೇಕೆಂದು ತೀರ್ಮಾನಿಸಿದರು. ಅದಕ್ಕಾಗಿ ಅದೇ ಗುರುದಕ್ಷಿಣೆಯನ್ನು ಕೇಳಿದರು.

ಶ್ರೀಕೃಷ್ಣದೇವನು ಬಲರಾಮನಿಂದ ಸಹಿತನಾಗಿ ಸಂತೋಷದಿಂದ ರಥವನ್ನು ಏರಿದನು. ಗುರುಕುಮಾರನು ಸಮುದ್ರದಲ್ಲಿ ಬಿದ್ದು ಸತ್ತು ಹೋದ ಪ್ರಭಾಸಕ್ಷೇತ್ರಕ್ಕೆ ಬಂದನು. ಸಮುದ್ರತೀರದಲ್ಲಿ ಒಂದು ನಿಮಿಷದ ವರೆಗೆ ಕುಳಿತನು. ಸಮುದ್ರರಾಜನು ಶ್ರೀಕೃಷ್ಣದೇವನನ್ನು ನೋಡಿದನು. ರಾಮಾವತಾರಕಾಲದಲ್ಲಿ ಮೂರುದಿನಗಳ ವರೆಗೆ ತನ್ನ ತೀರದಲ್ಲಿ ದರ್ಭೆಯನ್ನು ಹಾಸಿಕೊಂಡು ಮಲಗಿದಾಗ ನಾನು ಉದಾಸೀನಾಗಿದ್ದುದನ್ನೂ ಆಗ ಶ್ರೀ ರಾಮದೇವನು ಕುಪಿತನಾದಾಗ ಕೆಂಡದಂತಿರುವ ಕಣ್ಣುಗಳಿಂದ ತನ್ನನ್ನು ನೋಡಿದುದನ್ನೂ ಅದೇ ಸಮಯದಲ್ಲಿ ತನ್ನಲ್ಲಿದ್ದ ತಿಮಿಂಗಿಲ ಮುಂತಾದ ಪ್ರಾಣಿಗಳು ಬೆಂದು ಹೋದುದನ್ನೂ ಸಮ್ಮರಿಸಿದನು. ಈಗಲೂ ತಾನು ಶರಣಾಗತನಾಗದಿದ್ದರೆ ಅದೇ ಗತಿಯು ಏರ್ಪಡುವುದಾಗಿ ಹೆದರಿದನು. ನಾನಾ ವಿಧವಾದ ರತ್ನಗಳನ್ನೂ ಪೂಜಾಸಾಮಗ್ರಿಗಳನ್ನೂ ತೆಗೆದುಕೊಂಡು ಶ್ರೀಕೃಷ್ಣದೇವನನ್ನು ಪೂಜಿಸಿದನು. ತನ್ನಿಂದಾಗಬೇಕಾದ ಸೇವೆಯನ್ನು ಕುರಿತು ಪ್ರಶ್ನಿಸಿದನು. ಶ್ರೀಕೃಷ್ಣದೇವನು ಎಲ್ಲಾ ವಿಷಯಗಳನ್ನೂ ವಿವರವಾಗಿ ತಿಳಿಸಿದನು.

ಈ ಮಾತುಗಳನ್ನು ಕೇಳಿದ ಸಮುದ್ರರಾಜನು ಆಲೋಚಿಸಿದನು. " ಸಾಂದೀಪಿನ್ಯಾಚಾರ್ಯರ ಮಗನು ಚಿಕ್ಕ ಹುಡುಗನಾಗಿರುವಾಗ ಸಮುದ್ರಸ್ನಾನಕ್ಕಾಗಿ ಬಂದಿರುವುದು ನಿಜ. ಅವನು ತನ್ನ ಅಲೆಗಳಿಂದ ಸಮುದ್ರದಲ್ಲಿ ಕೊಚ್ಚಿಕೊಂಡು ಹೋದುದೂ ನಿಜ. ಆದರೆ ಅವನನ್ನು ನಾನು ಕೊಲ್ಲಲಿಲ್ಲ. ಅದೇ ಸಮಯದಲ್ಲಿ ತನ್ನ ಮಧ್ಯದಲ್ಲಿ ವಾಸಿಸುತ್ತಿದ್ದ ಪಂಚಜನ ಎಂಬ ದೈತ್ಯನು ಆ ಸ್ಥಳಕ್ಕೆ ಬಂದನು. ನನ್ನ ಅಲೆಯಲ್ಲಿ ಕೊಚ್ಚಿಕೊಂಡು ಹೋಗುತ್ತಿದ್ದ ಬಾಲಕನನ್ನು ನೋಡಿದನು. ಆ ಬಾಲಕನನ್ನು ನುಂಗಿದನು. ಆ ದೈತ್ಯನ ಹೊಟ್ಟೆಯೊಳಗೆ ಹೋದ ಮೇಲೆ ಆ ಬಾಲಕನು ಸತ್ತನು.

ಆದ್ದರಿಂದ ಶ್ರೀಕೃಷ್ಣದೇವನ ಗುರುಕುಮಾರನ ಮರಣಕ್ಕೆ "ಪಂಚಜನ" ಎಂಬ ದೈತ್ಯನು ಕಾರಣನೇ ಹೊರತು ನಾನಲ್ಲ. ಆ ಬಾಲಕನು ಪಂಚಜನ ಎಂಬ ದೈತ್ಯನ ಹೊಟ್ಟೆಯೊಳಗೆ ಸೇರಿದವನು ಈಗ ಅಲ್ಲಿಲ್ಲ. ಅವನ ಕರ್ಮಾನುಗುಣವಾಗಿ ಯಮಲೋಕದಲ್ಲಿ ಈ ದುರ್ಮರಣದ ಫಲವನ್ನು ಅನುಭವಿಸುತ್ತಿರುವನು. ಆದರೂ ಶ್ರೀಕೃಷ್ಣದೇವನ ಗುರುಕುಮಾರನನ್ನು ಸಂಹರಿಸಿದ ಈ ಪಾಪಿಯಾದ ಪಂಚಜನದೈತ್ಯನು ಅದಕ್ಕೆ ಯೋಗ್ಯವಾದ ಮರಣದಂಡನೆಯನ್ನು ಅನುಭವಿಸಬೇಡವೇ? ಶ್ರೀಕೃಷ್ಣದೇವನು ಪಂಚಜನದೈತ್ಯನನ್ನು ಸಂಹರಿಸಲಿ. ಅವನ ಚರ್ಮವನ್ನೆಲ್ಲಾ ಸುಲಿಯಲಿ. ಪಾಂಚಜನ್ಯಶಂಖ ಎಂಬ ಶಂಖವನ್ನು ತಯಾರಿಸಲಿ. ಇಲ್ಲಿಂದ ಯಮಲೋಕಕ್ಕೆ ಹೋಗಿ ಗುರುಕುಮಾರನನ್ನು ನೋಡಲಿ." ಎಂದು ತೀರ್ಮಾನಿಸಿದನು.

" ಮಹಾಸ್ವಾಮಿ, ನಾನು ನಿನ್ನ ಗುರುಕುಮಾರನನ್ನು ಕೊಲ್ಲಲಿಲ್ಲ. ನನ್ನ ಮಧ್ಯದಲ್ಲಿರುವ ಪಂಚಜನ ಎಂಬ ದೈತ್ಯನನ್ನು ಸಂಹರಿಸು. ಅವನ ಹೊಟ್ಟೆಯೊಳಗೆ ಕೈಹಾಕಿ ನೋಡು. ಒಂದು ಪಕ್ಷ ತಪೋಬಲದಿಂದ ನಿನ್ನ ಗುರುಕುಮಾರನು ಸಾಯದೇ ಇಷ್ಟು ದಿನಗಳ ವರೆಗೆ ಬದುಕಿದ್ದರೂ ಬದುಕಿರಬಹುದು. ಬದುಕಿದ್ದರೆ ಅವನನ್ನು

ಕರೆದುಕೊಂಡು ಇಲ್ಲಿಂದಲೇ ನೀನು ಹಿಂದಿರುಗು. ಬದುಕದೆ ಇದ್ದರೆ ಯಮಲೋಕಕ್ಕೆ ಹೋಗಿ ನೋಡು. ಅಲ್ಲಿ ಖಂಡಿತವಾಗಿಯೂ ಇದ್ದೇ ಇರುವನು. ಅಲ್ಲಿಯೂ ಇಲ್ಲದೆ ಬೇರೆ ಎಲ್ಲಾದರೂ ಹುಟ್ಟಿದರೆ ಯಮದೇವನಿಂದ ಅವನಿರುವ ವಿಳಾಸವನ್ನು ತಿಳಿದುಕೊಂಡು ಅಲ್ಲಿಗೆ ಹೋಗಿ ಅವನನ್ನು ಕರೆದುಕೊಂಡು ಹೋಗಿ ನಿನ್ನ ಗುರುಗಳಿಗೆ ಅರ್ಪಿಸು." ಎಂದನು.

ಶ್ರೀಕೃಷ್ಣದೇವನು ಸಮುದ್ರರಾಜನ ಪ್ರಾರ್ಥನೆಯನ್ನು ಅಂಗೀಕರಿಸಿ ಸಮುದ್ರದಲ್ಲಿ ಮುಳುಗಿ ಪಂಚಜನ ಎಂಬ ದೈತ್ಯನನ್ನು ಸಂಹರಿಸಿದನು. ಅವನ ಚರ್ಮವನ್ನು ಸುಲಿದನು. ಅವನ ಹೊಟ್ಟೆಯೊಳಗೆ ಹುಡುಕಿ ನೋಡಿದನು. ಗುರುಕುಮಾರನು ಯಮಲೋಕದಲ್ಲಿರುವ ವಿಷಯವನ್ನು ತಿಳಿದಿದ್ದರೂ ಪಂಚಜನ ಎಂಬ ದೈತ್ಯನನ್ನು ಸಂಹರಿಸುವುದಕ್ಕಾಗಿ ತನ್ನ ಕೀರ್ತಿಯಂತೆ ಶುಭ್ರವಾಗಿರುವ ಪಾಂಚಜನ್ಯಶಂಖವನ್ನ ಸಂಪಾದಿಸುವುದಕ್ಕಾಗಿಯೂ ಈ ರೀತಿಯಲ್ಲಿ ನಟಿಸಿದನು.

ಪಂಚಜನ ಎಂಬ ದೈತ್ಯನ ದೇಹದಿಂದ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ಎಂಬ ಐದು ಜನರನ್ನು ಹೊರಗೆ ಹೊರಡಿಸಿದನು. ಆದ್ದರಿಂದ ಪಂಚಜನ ಎಂಬ ದೈತ್ಯನು "ಅಪಂಚಜನ" ಅಂದರೆ ಪ್ರಾಣಾದಿಪಂಚವಾಯುಗಳಿಂದ ರಹಿತನು ಅಂದರೆ ಸತ್ತನು ಎಂದು ಹೇಳಲಪ್ಪಟ್ಟನು. ಸಮುದ್ರರಾಜನ ಮಧ್ಯದಲ್ಲಿದ್ದ ಪಂಚಜನ ಎಂಬ ದೈತ್ಯನನ್ನು ಸಂಹರಿಸಿ ಸಮುದ್ರರಾಜನನ್ನೂ ಸಹ " ಅಪಂಚಜನ" ಅಂದರೆ ಪಂಚಜನ ಎಂಬ ದೈತ್ಯನಿಲ್ಲದವನು ಎಂದು ಹೇಳಲ್ಪಡುವಂತೆ ಮಾಡಿದನು. ಹೀಗೆ ಪಂಚಜನ ಎಂಬ ದೈತ್ಯನಿಗೂ ಸಮುದ್ರರಾಜನಿಗೂ ಅಪಂಚಜನತ್ವವು ಏರ್ಪಡುವಂತೆ ಮಾಡಿದ ಶ್ರೀಕೃಷ್ಣದೇವನ ಲೀಲೆ ಅತ್ಯದ್ಭುತವಾದದ್ದು.

ಶ್ರೀಕೃಷ್ಣದೇವನು ಅಲ್ಲಿಂದ ಹೊರಟು. ಯಮಲೋಕಕ್ಕೆ ಬಂದು. ಮಹಾದ್ವಾರದಲ್ಲಿ ನಿಂತು. ಪಾಂಚಜನ್ಯ ಶಂಖವನ್ನು ಊದಿದನು. ಗುರುಕುಮಾರನನ್ನು ನುಂಗಿರುವ ಪಂಚಜನ ಎಂಬ ದೈತ್ಯನನ್ನು ಸಂಹರಿಸಿ ಅವನ ದೇಹದ ಚರ್ಮವನ್ನು ಸುಲಿದು ಈ ಪಾಂಚಜನ್ಯ ಎಂಬ ಶಂಖವನ್ನು ತಯಾರಿಸಿರುವುದಾಗಿಯೂ ನೀನೂ ನಿನ್ನಲ್ಲಿರುವ ಗುರುಕುಮಾರನನ್ನು ನನಗೆ ಸಮರ್ಪಿಸದಿದ್ದರೆ ನಿನಗೂ ಇದೇ ಗತಿಯು ಏರ್ಪಡುವುದಾಗಿಯೂ ಈ ಶಂಖವನ್ನು ಊದುತ್ತಾ ತಿಳಿಸಿದನು.

ಯಮನು ಪಾಂಚಜನ್ಯ ಶಂಖದ ಧ್ವನಿಯನ್ನು ಕೇಳಿ ಶ್ರೀಕೃಷ್ಣದೇವನು ಬಂದಿರುವ ಸಮಾಚಾರವನ್ನು ತಿಳಿದನು. ಮಹಾಪುಣ್ಯಗಳಿಂದಲೂ ದುರ್ಲಭವಾಗಿರುವ ಶ್ರೀಕೃಷ್ಣದೇವನ ದರ್ಶನವು ತಾನಾಗಿಯೇ ಏರ್ಪಡುವುದಾಗಿ ಸಂತೋಷಿಸಿ. ಓಡಿ ಬಂದು. ಶ್ರೀಕೃಷ್ಣದೇವನನ್ನು ನೋಡಿ. ಷೋಡಶೋಪಚಾರಗಳಿಂದ ಪೂಜಿಸಿದನು. ಪುನಃ ಪುನಃ ನಮಸ್ಕರಿಸಿದನು. ರೋಮಾಂಚನಗಳಿಂದ ಭೂಷಿತನಾದನು.

" ಮಹಾಸ್ವಾಮಿ, ಸಕಲ ಭಾಗ್ಯಾಭಿಮಾನದೇವತೆಯಾಗಿರುವ ಲಕ್ಷ್ಮೀದೇವಿಯ ಪತಿಯು ನೀನು. ನಿನಗೆ ವಿದ್ಯಾಗುರುವಾಗಿರುವ ಸಾಂದೀಪಿನ್ಯಾಚಾರ್ಯರು ಮಹಾಭಾಗ್ಯಶಾಲಿಯಾಗಿರುವರು. ಅವರ ಮಗನು ಮಹಾಭಾಗ್ಯಶಾಲಿಯಲ್ಲವೇ? ಅಂತಹ ಭಾಗ್ಯಶಾಲಿಯು ಮುಕ್ತಿಯನ್ನು ಪಡೆಯದೇ ಪಾಪಿಗಳು ವಾಸಿಸುತ್ತಿರುವ ನನ್ನ ನಗರದಲ್ಲಿ ವಾಸಿಸಲು ಅರ್ಹನಾಗುವನೇ? ಇಲ್ಲ. ಇಲ್ಲ. ಅವನನ್ನು ಈಗಲೇ ವಿಮಾನದಲ್ಲಿ ಕುಳ್ಳಿರಿಸಿ ಮುಕ್ತಿಗೆ

ಕಳುಹಿಸುವೆನು. ನೀನು ಅವನ ತಾಯಿ ತಂದೆಗಳಿಗೆ ಅವನನ್ನು ತೋರಿಸಿ ಮುಕ್ತಿಗೆ ಕಳುಹಿಸು.'' ಎಂದು ಪ್ರಾರ್ಥಿಸಿದನು.

ಶ್ರೀಕೃಷ್ಣದೇವನು ಯಮನಿಂದ ಸಮರ್ಪಿಸಲ್ಪಟ್ಟ ಗುರುಕುಮಾರನನ್ನು ಕರೆದುಕೊಂಡು ಅವಂತಿಪಟ್ಟಣಕ್ಕೆ ಬಂದನು. ಸಾಯುವ ದಿನದಲ್ಲಿ ಚಿಕ್ಕ ಬಾಲಕನಾಗಿದ್ದ ತನ್ನ ಮಗನು ಎಷ್ಟೋವರ್ಷಗಳು ಕಳೆದ ಮೇಲೆ ಈಗ ಹಿಂದಿರುಗಿ ಬಂದಿರುವನು. ಸತ್ತ ದಿನದಿಂದ ಇಂದಿನ ವರೆಗೆ ಅವನು ಬದುಕಿದ್ದರೆ ಎಷ್ಟು ಬೆಳವಣಿಗೆಯು ಅವನ ದೇಹಕ್ಕೆ ಏರ್ಪಡುತ್ತಿತ್ತೋ ಅಷ್ಟು ಬೆಳವಣಿಗೆಯಿಂದ ಯುಕ್ತನಾಗಿದ್ದನು. ಅಂತಹ ಪುತ್ರನನ್ನು ನೋಡಿದ ಸಾಂದೀಪಿನ್ಯಾಚಾರ್ಯರೂ ಅವರ ಪತ್ನಿಯೂ ತುಂಬಾ ಸಂತುಷ್ಟರಾದರು.

"ಗುರುಗಳೇ ನೀವು ಕೇಳಿದ ಗುರುದಕ್ಷಿಣೆಯನ್ನು ಸಮರ್ಪಿಸಿದೆನು. ಇನ್ನೇನು ಬೇಕು? ಕೇಳಿರಿ'' ಎಂದನು. " ನಿಮ್ಮಂತಹ ಪ್ರಭಾವಶಾಲಿಗಳಾಗಿರುವ ಶಿಷ್ಯರನ್ನು ಪಡೆದಿರುವವರಿಗೆ ದುರ್ಲಭವಾದದ್ದು ಯಾವುದೂ ಇಲ್ಲ. ಇಷ್ಟೇ ಸಾಕು'' ಎಂದರು. ಆ ಮಾತುಗಳನ್ನು ಕೇಳಿದ ಶ್ರೀಕೃಷ್ಣದೇವನೂ ಶ್ರೀಬಲರಾಮನೂ ಗುರುಗಳನ್ನು ನಮಸ್ಕರಿಸಿ ಮಥುರಾ ಪಟ್ಟಣಕ್ಕೆ ಹಿಂದಿರುಗಿದರು.

(೫೮) ಉದ್ಧವಾಸ್ಯಾತ್ ಗೋಷ್ಠಸ್ಥಾನ್ ನಂದಪೂರ್ವಾನ್ ಸಾಂತ್ವಯನ್ - ಉದ್ಧವನ ಮುಖದಿಂದ ವೃಂದಾವನದಲ್ಲಿರುವ ನಂದನೇ ಮೊದಲಾದವರನ್ನು ಸಮಾಧಾನಪಡಿಸಿದನು.

ವಿಶೇಷಾರ್ಥ - ವೃಷ್ಣೀಣಾಂ ಪ್ರವರಂ ಸಖಾಯಂ ಬುದ್ಧಿಶಾಲಿನಂ ಉದ್ಧವಂ ಸ್ವವಿರಹೇಣ ದುಃಖಿತಾನ್ ಗೋಕುಲಸ್ಥಸರ್ವಸಜ್ಜನಾನ್ ಸ್ವಸಂದೇಶೈರ್ಹರ್ಷಯಿತುಂ ಪ್ರೇಷ್ಯ.

ವಿಶೇಷಾರ್ಥವಿವರಣ - ರಾಜನು ವಾಸಿಸುತ್ತಿರುವ ನಗರವು ಸುತ್ತಮುತ್ತಲಿರುವ ಎಲ್ಲಾ ಪಟ್ಟಣಗಳ ಮಧ್ಯದಲ್ಲಿ ವಿಶೇಷವಾಗಿ ಶೋಭಿಸುತ್ತದೆ. ಹೀಗಿರುವಾಗ ಬ್ರಹ್ಮ ಮುಂತಾದ ಸಕಲ ದೇವತೆಗಳಿಗೆ ತನ್ನ ಕೃಪಾಕಟಾಕ್ಷದಿಂದಲೇ ಸಕಲ ಭಾಗ್ಯಗಳನ್ನೂ ಕೊಡುವವರೂ ಸಕಲ ಭಾಗ್ಯದೇವತೆಯೂ ಪರಮಮಂಗಲವನ್ನು ಕೊಡುತ್ತಿರುವವರಾದುದರಿಂದ ಮಂಗಲದೇವತೆಯೆಂದು ಪ್ರಸಿದ್ಧರೂ ಆಗಿರುವ ಮಹಾಲಕ್ಷ್ಮೀದೇವಿಯರು ಪತಿಯಾಗಿರುವ ಶ್ರೀಕೃಷ್ಣದೇವನು ವಾಸಿಸುತ್ತಿರುವ ಮಥುರಾಪಟ್ಟಣದ ವೈಭವವನ್ನು ಹೇಳಲು ಯಾರು ಶಕ್ತರು? ಗೋಕುಲ, ವೃಂದಾವನ ಎಂಬ ಗೊಲ್ಲರು ವಾಸಿಸುತ್ತಿರುವ ಚಿಕ್ಕಹಳ್ಳಿಗಳು ವೈಕುಂಠಕ್ಕೆ ಸಮಾನವೆಂದೆನಿಸಿದ ಮೇಲೆ ಮಥುರಾಪಟ್ಟಣವೆಂಬ ಪ್ರಧಾನಪಟ್ಟಣವು ವೈಕುಂಠಸಮಾನತ್ವವನ್ನು ಪಡೆಯಿತು ಎಂದು ಹೇಳುವುದು ಆಶ್ಚರ್ಯವಲ್ಲ. ಶ್ರೀಕೃಷ್ಣದೇವನ ಪರಮ ಭಕ್ತರು ವಾಸಿಸುವ ಸ್ಥಳಗಳಲ್ಲಿಯೂ ಸಕಲ ಸಮೃದ್ಧಿಯು ಏರ್ಪಡುತ್ತಿರುವಾಗ ಶ್ರೀಕೃಷ್ಣದೇವನೇ ವಾಸಿಸುತ್ತಿರುವ ಸ್ಥಳವು ಬ್ರಹದೇವರು ವಾಸಿಸುತ್ತಿರುವ ಸತ್ಯಲೋಕಕ್ಕಿಂತ ಅಧಿಕವೆಂದೆನಿಸಿತು.

## ಉದ್ಧವನ ವೃಂದಾವನ ಯಾತ್ರೆ

ಮಥುರಾಪಟ್ಟಣದಲ್ಲಿ "ಉದ್ಧವ'' ಎಂಬ ಒಬ್ಬ ಯಾದವನಿದ್ದನು. ಅವನು ಬೃಹಸ್ಪತ್ಯಾಚಾರ್ಯರ ಮಗನೂ

ಶಿಷ್ಯನೂ ಆಗಿದ್ದನು. ಬುದ್ಧಿಯಲ್ಲಿಯೂ ಬೃಹಸ್ಪತ್ಯಾಚಾರ್ಯರಿಗೆ ಸಮಾನನಾಗಿದ್ದನು. ಎಲ್ಲಾ ಯಾದವರ ಮಧ್ಯದಲ್ಲಿಯೂ ಶ್ರೀಕೃಷ್ಣದೇವನಿಗೆ ತುಂಬಾ ಪ್ರಿಯನಾಗಿದ್ದನು. ಮಂತ್ರಿಯೂ ಆಗಿದ್ದನು. ಅವನನ್ನು ಶ್ರೀಕೃಷ್ಣದೇವನು ಕರೆದನು. ರಹಸ್ಯವಾಗಿ ಕೆಲವು ಮಾತುಗಳನ್ನು ಹೇಳಿದನು.

" ಓ ಉದ್ಧವ, ನನ್ನ ತಂದೆ ತಾಯಿಗಳಾಗಿರುವ ನಂದನೂ ಯಶೋದೆಯೂ ಇಲ್ಲಿಂದ ಹೊರಟು ವೃಂದಾವನಕ್ಕೆ ಹೋಗಿರುವರು. ಅವರು ಹೋಗುವಾಗ ನಾನು ಕೆಲವು ದಿನಗಳಲ್ಲಿಯೇ ವೃಂದಾವನಕ್ಕೆ ಬರುವುದಾಗಿ ಹೇಳಿರುವೆನು. ನನ್ನ ಮಾತುಗಳನ್ನು ಅವರು ನಂಬಿರುವರು. ನಾನು ಹಿಂದಿರುಗಿ ಬರುವುದಾಗಿ ಹೇಳಿರುವೆನು. ನನ್ನ ಮಾತುಗಳನ್ನು ಕೇಳಿ ಸುಖವಾಗಿ ಬಾಳಬಹುದೆಂದು ತಮ್ಮ ಪ್ರಾಣಗಳನ್ನು ಉಳಿಸಿಕೊಂಡಿರುವರು. ಅಲ್ಲಿರುವ ಗೋಪಿಕಾಸ್ತ್ರೀಯರೂ ಸಹ ಇದೇ ಆಶೆಯಿಂದಲೇ ಬದುಕಿರುವರು.

ಆದರೆ ಅವರ ಆಸೆಗಳೆಲ್ಲವೂ ಇನ್ನು ಮುಂದೆ ಉಳಿಯಲಾರವು. ನಾನು ಈಗ ಉಪನಯನಸಂಸ್ಕಾರವನ್ನು ಪಡೆದಿರುವೆನು. ಆದುದರಿಂದ ಇನ್ನು ಮುಂದೆ ಅನ್ಯರ ಪತ್ನಿಯರ ಮತ್ತು ಗೋಪಕನ್ಯೆಯರ ಜೊತೆಯಲ್ಲಿ ರಾಸಕ್ರೀಡೆ ಮುಂತಾದ ಲೀಲೆಗಳನ್ನು ಮಾಡುವ ಸಂಭವವಿಲ್ಲವೆಂದೂ ಅದಕ್ಕಾಗಿ ವೃಂದಾವನಕ್ಕೆ ಬರುವ ಸಂಭವವಿಲ್ಲವೆಂದೂ ಗೋಪಿಕಾಸ್ತ್ರೀಯರು ತೀರ್ಮಾನಿಸಿರುವರು. ನನಗೆ ವಸುದೇವ ಮತ್ತು ದೇವಕೀದೇವಿಯರು ಉಪನಯನವನ್ನು ಮಾಡಿರುವರು. ಇದರಿಂದ ನನ್ನ ತಂದೆ ತಾಯಿಗಳು ವಸುದೇವ ಮತ್ತು ದೇವಕಿಯರೆಂದೂ ತಾವಲ್ಲವೆಂದೂ ಆದುದರಿಂದ ತಂದೆ ತಾಯಿಗಳೆಂಬ ಅಭಿಮಾನದಿಂದ ಇಲ್ಲಿಗೆ ಶ್ರೀಕೃಷ್ಣದೇವನು ಬರುವ ಸಂಭವವಿಲ್ಲವೆಂದೂ ನಂದ ಮತ್ತು ಯಶೋದೆಯು ತೀರ್ಮಾನಿಸುವರು. ಇಷ್ಟರ ವರೆಗೆ ಬೇರೆ ಬೇರೆ ವಿಧವಾದ ಆಸೆಗಳಿಂದ ಪ್ರಾಣಗಳನ್ನು ಉಳಿಸಿಕೊಂಡಿರುವ ನಂದನೂ ಯಶೋದೆಯೂ ಗೋಪಿಕಾಸ್ತ್ರೀಯರೂ ತಮ್ಮ ಆಸೆಯು ನಿರಾಶೆಯಾದ ಮೇಲೆ ಇನ್ನು ಬದುಕಲಾರರು. ಆದ್ದರಿಂದ ನೀನು ಈ ಕ್ಷಣದಲ್ಲಿ ಹೊರಡು. ವೃಂದಾವನಕ್ಕೆ ಹೋಗು. ನನ್ನ ವಿರಹ ಎಂಬ ಬೆಂಕಿಯಿಂದ ಪ್ರಾಣವನ್ನು ಬಿಡಲು ಸಿದ್ಧರಾಗಿರುವ ಸರ್ವರನ್ನೂ ಬದುಕಿಸು. ನಾನು ಹೇಳಿರುವ ಕೆಲವು ಮಾತುಗಳನ್ನು ಅವರ ಮುಂದೆ ಹೇಳು. ಅವುಗಳನ್ನು ಕೇಳಿದರೆ ಅವರೆಲ್ಲರೂ ತೃಪ್ತರಾಗುರವರು. ಅಮೃತಪ್ರವಾಹದಲ್ಲಿ ತೇಲುತ್ತಿರುವವರಿಗೆ ಮರಣ ಭಯವುಂಟೇ? ಆದ್ದರಿಂದ ಅವರಿಗೆ ಮರಣವು ಏರ್ಪಡಲಾರದು.

ಉದ್ಧವನು ಶ್ರೀಕೃಷ್ಣನ ಆಜ್ಞೆಯನ್ನು ಅಂಗೀಕರಿಸಿದನು. ಆದರೂ ವೃಂದಾವನಕ್ಕೆ ಹೋಗಿ ಬರುವ ವರೆಗೆ ಶ್ರೀಕೃಷ್ಣದೇವನ ವಿರಹವು ತನಗೆ ಏರ್ಪಡುವುದಾಗಿ ಹೆದರಿದನು. ಆದರೂ ನಂದ ಮುಂತಾದವರಿಗೆ ಶ್ರೀಕೃಷ್ಣದೇವನ ವಿರಹದಿಂದ ಏರ್ಪಡಬಹುದಾದ ಆಪತ್ತುಗಳನ್ನು ಪರಿಹರಿಸುವುದಕ್ಕಾಗಿ ಶ್ರೀಕೃಷ್ಣದೇವನು ಹೇಳಿ ಕಳುಹಿಸಿರುವ ಮಾತುಗಳನ್ನು ಸ್ಮರಿಸಿದನು. ಆ ಮಾತುಗಳಿಂದ ತನಗೆ ಬಂದಿರುವ ಭಯವನ್ನು ಪರಿಹರಿಸಿಕೊಂಡನು. ವೃಂದಾವನದಲ್ಲಿರುವ ನಂದನೇ ಮೊದಲಾದವರಲ್ಲಿ ಶ್ರೀಕೃಷ್ಣದೇವನಿಗಿರುವ ಶರಣಾಗತವಾತ್ಸಲ್ಯವನ್ನು ಸ್ಮರಿಸುತ್ತಾ ಮಾರ್ಗದಲ್ಲಿ ಏರ್ಪಡಬಹುದಾದ ಆಯಾಸವನ್ನು ಮರೆತನು.

ಆ ದಿನ ಸೂರ್ಯಾಸ್ತಮನವಾಗುವ ಸಮಯದಲ್ಲಿ ಬೃಂದಾವನಕ್ಕೆ ಬಂದನು. ಆಗಲೇ ಗೋವುಗಳು ಕಾಡಿನಿಂದ ಹಿಂದಿರುಗಿ ಬರುತ್ತಿದ್ದವು. ಆ ಗೋವುಗಳ ಹಿಂದೆ ಗೊಲ್ಲಬಾಲಕರು ಗೋವುಗಳನ್ನು ಅಟ್ಟಿಸಿಕೊಂಡು

ಬರುತ್ತಿದ್ದರು. ಒಬ್ಬೊಬ್ಬ ಗೊಲ್ಲಬಾಲಕರ ಕೈಗಳಲ್ಲಿಯೂ ಒಂದೊಂದು ಕೊಳಲುಗಳು. ಆ ಕೊಳಲುಗಳಿಂದ ಹೊರಡುತ್ತಿರುವ ಸುಸ್ವರವಾದ ವೇಣುಗಾನ.

ಆ ಸಮಯದಲ್ಲಿ ಅಲ್ಲಿ ಒಂದು ಕರುವು ಓಡಿ ಬಂತು. ಆ ಕರುವು ಬಾಲವನ್ನು ಎತ್ತಿ ಕೊಂಡಿತ್ತು. ಅದರ ಎಳೆಯ ಗೊರಸುಗಳು ಭೂಮಿಗೆ ತಾಗುವಾಗ ಮೆಲ್ಲ ಮೆಲ್ಲನೆ ಧ್ವನಿಯು ಏರ್ಪಡುತ್ತಿತ್ತು. "ಅಂಬಾ" ಎಂದು ಗಟ್ಟಿಯಾಗಿ ಕೂಗುತ್ತಿತ್ತು. ಓಡಿಬಂದ ವೇಗದಲ್ಲಿ ಮೈಯೆಲ್ಲಾ ನಡುಗುತ್ತಿತ್ತು. ಆ ಕರುವನ್ನು ನೋಡಿದ ಅದರ ತಾಯಿಯು ಕರುವಿನ ಸಮೀಪಕ್ಕೆ ಅತಿವೇಗದಿಂದ ಓಡುತ್ತಾ ಬಂದು ಕರುವನ್ನು ಮೂಸಿ ಲಾಲಿಸಿತು. ಇದನ್ನು ಉದ್ಧವನು ನೋಡಿದನು. ನಾವೆಲ್ಲರೂ ಈ ಕರುವಿನಂತೆ ಶ್ರೀಕೃಷ್ಣದೇವನಲ್ಲಿ ಅಪಾರವಾದ ಭಕ್ತಿಯಿಂದ ಯುಕ್ತರಾಗಿರುವವರಲ್ಲವೇ? ಅವನು ತಾಯಿ ಗೋವಿನಂತೆ ನಮ್ಮ ಸಮೀಪಕ್ಕೆ ಓಡಿಬರಲಿ. ನಮ್ಮನ್ನು ಲಾಲಿಸಲಿ ಎಂದು ಪ್ರಾರ್ಥಿಸಿದನು.

ಆ ಗೊಲ್ಲಬಾಲಕರನ್ನೆಲ್ಲರನ್ನೂ ನೋಡಿದನು. ಗೋವಿನ ಹಿಂದೆ ಬರುತ್ತಿರುವ ಆ ಗೊಲ್ಲಬಾಲಕರ ದೇಹಗಳೆಲ್ಲಾ ಗೋವುಗಳ ಕಾಲುಗಳಿಂದ ಹೊರಟರುವ ಧೂಳಿಗಳಿಂದ ಹೊಂಬಣ್ಣದಿಂದ ಯುಕ್ತವಾಗಿದ್ದದು. ಅವರು ಕೈಗಳಲ್ಲಿ ಕೊಳಲು ಕೊಂಬು ಮುಂತಾದ ವಾದ್ಯಗಳನ್ನು ಧರಿಸಿದ್ದರು. ಇದನ್ನೆಲ್ಲಾ ನೋಡಿದ ಉದ್ಧವನಿಗೆ ಶ್ರೀಕೃಷ್ಣದೇವನ ಗೋಪಾಲಕವೇಷವು ಜ್ಞಾಪಕಕ್ಕೆ ಬಂತು. ಕಣ್ಣುಗಳಿಂದ ಆನಂದಕಣ್ಣೀರುಗಳನ್ನು ಸುರಿಸಿದನು. ಮೈಯಲ್ಲೆಲ್ಲಾ ರೋಮಗಳು ಎದ್ದು ನಿಂತವು.

ಆ ಗೋವುಗಳೆಲ್ಲವೂ ಉದ್ಧವನನ್ನು ನೋಡಿದವು. ಶ್ರೀಕೃಷ್ಣದೇವನು ಧರಿಸಿರುವ ಆಭರಣಗಳನ್ನೂ ವಸ್ತ್ರಗಳನ್ನೂ ಮಾಲೆಗಳನ್ನೂ ನಿರ್ಮಾಲ್ಯ ಎಂಬ ಭಾವದಿಂದ ಧರಿಸಿದ್ದನು. ಅವನನ್ನು ನೋಡಿದ ಕೂಡಲೇ ತಮ್ಮ ಸ್ವಾಮಿಯಾಗಿರುವ ಶ್ರೀಕೃಷ್ಣದೇವನ ಆಭರಣ ಮುಂತಾದವುಗಳಿಂದ ಯುಕ್ತನಾಗಿರುವುದರಿಂದ ಶ್ರೀಕೃಷ್ಣದೇವನೇ ತಮ್ಮಲ್ಲಿರುವ ಕರುಣೆಯಿಂದ ಹಿಂದಿರುಗಿ ಬಂದಿರುವನೆಂದು ಭ್ರಮಿಸಿದವು. ಕುತ್ತಿಗೆಯನ್ನು ನೆಟ್ಟಗೆ ಮಾಡಿಕೊಂಡು ತಲೆಯನ್ನು ಎತ್ತಿದವು. ಕಿವಿಗಳನ್ನು ನೆಟ್ಟಗೆ ಮಾಡಿಕೊಂಡವು. ಅವನನ್ನೇ ಎವೆಯಿಕ್ಕದೆ ನೋಡಿದವು. ಇದನ್ನೆಲ್ಲಾ ನೋಡಿದ ಉದ್ಧವನ ಮನಸ್ಸಿನಲ್ಲಿ ಏರ್ಪಟ್ಟ ಆನಂದಕ್ಕೆ ಎಣೆಯೇ ಇಲ್ಲ.

ವೃಂದಾವನದಲ್ಲಿರುವ ಎಲ್ಲಾ ಗೊಲ್ಲರೂ ಉದ್ಧವನನ್ನು ನೋಡಿದರು. ಅವರ ಕಣ್ಣುಗಳೆಲ್ಲವು ಅರಳಿದವು. ಮಿತಿಮೀರಿದ ಸಂತೋಷವನ್ನು ಪಡೆದರು. ಶ್ರೀಕೃಷ್ಣದೇವನು ಉದ್ಧವನನ್ನು ವೃಂದಾವನಕ್ಕೆ ಕಳುಹಿಸಿದನು. ಉದ್ಧವನು ಎಲ್ಲರ ಕಣ್ಣುಗಳಿಗೆ "ಉದ್ಧವ" ಅಂದರೆ ಉತ್ಸವವನ್ನು ಕೊಡುತ್ತಾ ವೃಂದಾವನದಲ್ಲಿ ಮೆರೆದನು.

ಉದ್ಧವನು ವೃಂದಾವನದಲ್ಲಿರುವ ಒಂದೊಂದು ಮನೆಗಳನ್ನೂ ಪರೀಕ್ಷಿಸಿ ನೋಡಿದನು. ಒಂದೊಂದು ಮನೆಗಳಲ್ಲಿಯೂ ಶ್ರೀಕೃಷ್ಣದೇವನ ಕಥೆಯೆಂಬ ಅಮೃತವು ಸರ್ವರಿಂದಲೂ ಸೇವಿಸಲ್ಪಡುತ್ತಿದೆ. ಶ್ರೀಕೃಷ್ಣದೇವನನ್ನು ಪೂಜಿಸುವುದಕ್ಕಾಗಿ ಸಿದ್ಧಪಡಿಸಿರುವ ಧೂಪಗಳ ಪರಿಮಳವು ಘಮಘಮಿಸುತ್ತಿದೆ. ಅಲ್ಲಿರುವ ಸ್ತ್ರೀಯರು ಪುರುಷರೂ ಶ್ರೀಕೃಷ್ಣದೇವನಿಗೆ ಸಮರ್ಪಿಸಿರುವ ಆಭರಣಗಳು ವಸ್ತ್ರಗಳು ಮಾಲೆಗಳು ಗಂಧಗಳು ಮುಂತಾದ ವಸ್ತುಗಳಿಂದ ಭೂಷಿತರಾಗಿರುವರು.

ಅಲ್ಲಿರುವ ಗಿಳಿಗಳು ಶ್ರೀಕೃಷ್ಣದೇವನನ್ನು "ಕೃಷ್ಣಾ" "ಕೃಷ್ಣಾ" ಎಂದು ಕರೆಯುತ್ತಿವೆ. ಕೋಗಿಲೆಗಳು

ಶ್ರೀಕೃಷ್ಣದೇವನ ಕೈಯಲ್ಲಿರುವ ಕೊಳಲಿನ ಧ್ವನಿಯಂತೆ ಧ್ವನಿಸುತ್ತಿವೆ. ಅಲ್ಲಿರುವ ಭ್ರಮರಗಳು ಕಮಲಗಳ ಮೇಲೆ ಅಲ್ಲಾಡದೆ ಕುಳಿತಿವೆ. ಆದರೆ ಜೇನನ್ನು ಕುಡಿಯುತ್ತಿಲ್ಲ. ಶ್ರೀಕೃಷ್ಣದೇವನ ಪಾದಕಮಲಗಳ ಸಾಮ್ಯವನ್ನು ಹೊಂದಿರುವ ಕಮಲಗಳ ಭಾಗ್ಯವನ್ನು ಸ್ಮರಿಸುತ್ತಾ ಮೈಮರೆತಿವೆ. ಹೀಗೆ ವೃಂದಾವನದಲ್ಲಿರುವ ಗಿಳಿ ಮುಂತಾದ ಎಲ್ಲಾ ಪಕ್ಷಿಗಳೂ ಶ್ರೀಕೃಷ್ಣಭಕ್ತರಂತೆ ಕಾಣಿಸಿದವು.

"ಶ್ರೀಕೃಷ್ಣದೇವನ ಆಗಮನವು ಯಾವಾಗಲೂ ಏರ್ಪಡಬಹುದು. ಆಗ ನಾವೆಲ್ಲರೂ ಸಿದ್ಧರಾಗದಿದ್ದರೆ ಅವನನ್ನು ಸ್ವಾಗತಿಸುವ ಭಾಗ್ಯವು ತಮಗೆ ಏರ್ಪಡದೆ ಹೋಗಬಹುದು.'' ಎಂಬ ಅಭಿಪ್ರಾಯದಿಂದ ಗೋಕುಲದಲ್ಲಿರುವ ಒಂದೊಂದು ಮನೆಗಳ ಮುಂಭಾಗಗಳಲ್ಲಿಯೂ ಪೂರ್ಣಕುಂಭಗಳನ್ನು ಧರಿಸಿಕೊಂಡು ಕಾದಿದ್ದರು. ಮಾವಿನ ಎಲೆ ಮುಂತಾದ ಚಿಗುರುಗಳಿಂದ ನಿರ್ಮಿತವಾದ ತೋರಣಗಳಿಂದಲೂ ಪತಾಕೆಗಳಿಂದಲೂ ಧ್ವಜಸ್ತಂಭಗಳಿಂದಲೂ ಊರನ್ನು ಅಲಂಕರಿಸಿದರು. ಫಲ ಮತ್ತು ವಸ್ತುಗಳನ್ನು ಸಮರ್ಪಿಸಲು ಸಿದ್ಧರಾಗಿದ್ದರು.

" ಶ್ರೀಕೃಷ್ಣದೇವನ ದರ್ಶನವು ನಮಗೆ ಏರ್ಪಡಲಿ'' ಎಂದು ಆಶಿಸುತ್ತಾ ಬೇರೆ ಯಾವ ಫಲವನ್ನೂ ಅಪೇಕ್ಷಿಸದೆ ಒಂದೊಂದು ಮನೆಗಳಲ್ಲಿಯೂ ಮೂರು ಕಾಲಗಳಲ್ಲಿ ಬ್ರಾಹ್ಮಣಪೂಜೆ ದೇವತಾಪೂಜೆಗಳನ್ನೂ ನಡೆಯಿಸುತ್ತಿದ್ದರು. ಶ್ರೀಕೃಷ್ಣದೇವನ ಲೀಲೆಗಳೆಂಬ ಅಮೃತದಿಂದ ತುಂಬಿರುವ ಕಥೆಗಳನ್ನೇ ಕೇಳುತ್ತಾ ಪ್ರಾಣವನ್ನು ಉಳಿಸಿಕೊಂಡಿರುವ ಮಹಾತ್ಮರಿಂದ ಯುಕ್ತವಾಗಿರುವ ಗೋಕುಲವನ್ನು ಉದ್ಧವನು ನೋಡಿ ಧನ್ಯನಾದನು.

ಉದ್ಧವನು ನಂದನ ಮನೆಯನ್ನು ವೇಗದಿಂದ ಪ್ರವೇಶಿಸಿದನು. ಇದನ್ನು ನೋಡಿದ ಎಲ್ಲಾ ಗೊಲ್ಲರೂ " ನಮ್ಮ ಮನೆಗೂ ಉದ್ಧವನು ಬಾರದಿರಲಾರನು. ಹಾಗೆ ಬಂದರೆ ಶ್ರೀಕೃಷ್ಣದೇವನ ಮಾತುಗಳನ್ನು ಹೇಳುತ್ತಾ ನಮ್ಮನ್ನು ಸಂತೋಷಪಡಿಸುವನು'' ಎಂದು ಮನಸ್ಸಿನಲ್ಲಿ ತುಂಬಾ ಸಂತೋಷದಿಂದ ಯುಕ್ತರಾದರು.

ನಂದನು ಉದ್ಧವನನ್ನು ಅತ್ಯಂತ ಭಕ್ತಿಯಿಂದ ಪೂಜಿಸಿದನು. ಉದ್ಧವನು ಶ್ರೀಕೃಷ್ಣದೇವನ ಪಾದಕಮಲಗಳಲ್ಲಿ ಭ್ರಮರದಂತೆ ಯಾವಾಗಲೂ ಆಸಕ್ತನಾಗಿರುವವನಲ್ಲವೇ? ಲಕ್ಷ್ಮೀಪತಿಯಾಗಿರುವ ಶ್ರೀಕೃಷ್ಣದೇವನ ಏಕಾಂತಭಕ್ತರು ಯಾರನ್ನೂ ಶ್ರೀಕೃಷ್ಣನಿಂದ ಅಭಿನ್ನನಾಗಿರುವವನೆಂದೂ ಸ್ವತಂತ್ರನೆಂದೂ ತಿಳಿದು ಪೂಜಿಸುವುದಿಲ್ಲ. ಶ್ರೀಕೃಷ್ಣದೇವನ ಭಕ್ತನೆಂದೇ ತಿಳಿದು ಪೂಜಿಸುವರು. ಆದ್ದರಿಂದ ಉದ್ಧವನನ್ನು ಶ್ರೀಕೃಷ್ಣ ಭಕ್ತಾಗ್ರೇಸರನೆಂದು ತಿಳಿದು ಪೂಜಿಸಿರುವುದು ಅತ್ಯಂತ ಯೋಗ್ಯವಾಗಿದೆ.

ಉದ್ಧವನು ನಂದನಲ್ಲಿ ಶ್ರೀಕೃಷ್ಣದೇವನಿಗಿರುವ ಅತಿಕರುಣೆಯನ್ನು ಕಥೆಕಥೆಯಾಗಿ ಹೇಳಿದನು. ಉದ್ಧವನ ಮಾತುಗಳನ್ನು ನಂದನೂ ಯಶೋದೆಯೂ ಆಸೆಯಿಂದ ಕೇಳಿದರು. ಅವರಿಬ್ಬರ ಮನಸ್ಸುಗಳು ಕರಗಿದವು. ಮೈಗಳಲ್ಲಿ ರೋಮಗಳು ಎದ್ದು ನಿಂತವು. ಮಾತುಗಳು ಬಾಯಿಯಿಂದ ಹೊರಡಲಿಲ್ಲ. ಕಣ್ಣುಗಳಲ್ಲಿ ಆನಂದದ ಕಣ್ಣೀರುಗಳು ಸುರಿದವು ಕಣ್ಣುಗಳನ್ನು ತೆರೆದು ನೋಡಲಿಕ್ಕೂ ಸಾಧ್ಯವಾಗಲಿಲ್ಲ.

ಉದ್ಧವನು ಕೊನೆಗೆ ಶ್ರೀಕೃಷ್ಣದೇವನು ಹೇಳಿ ಕಳುಹಿಸಿದ ಸಂದೇಶವನ್ನು ತಿಳಿಸಿದನು. " ಓ ಯಶೋದೆಯೇ, ಶ್ರೀಕೃಷ್ಣನು ನಿನ್ನ ತೊಡೆಯಲ್ಲಿ ಮಲಗಿದ್ದಾಗ ಒಮ್ಮೆ ಆಕಳಿಸಿದನು. ಇನ್ನೊಮ್ಮೆ ಮಣ್ಣು ತಿಂದನೆಂದು ಗೊಲ್ಲಬಾಲಕರು ದೂರಿದಾಗ ನಿಜಾಂಶವನ್ನು ಪರೀಕ್ಷಿಸುವುದಕ್ಕಾಗಿ ಬಾಯಿಯನ್ನು ತೆರೆದು ತೋರಿಸುವಂತೆ ನೀನು ಆಜ್ಞಾಪಿಸಿದಿ. ಬಾಯಿಯನ್ನು ನೋಡಿದಿ. ಆಗ ಶ್ರೀಕೃಷ್ಣದೇವನ ಬಾಯಿಯೊಳಗೆ ಹದಿನಾಲ್ಕು ಲೋಕಗಳನ್ನೂ ಆ

ಲೋಕಗಳ ಮಧ್ಯದಲ್ಲಿ ವಾಸಿಸುತ್ತಿರುವ ಸರ್ವರನ್ನೂ ನಿನ್ನನ್ನೂ ನೋಡಿದಿ. ಶ್ರೀಕೃಷ್ಣದೇವನ ಹೊಟ್ಟೆಯಲ್ಲಿ ವಾಸಿಸುತ್ತಿರುವ ನಿಮಗೂ ಅವನಿಗೂ ವಿಯೋಗವಿದೆಯೇ? ಅವನು ನಿಮ್ಮನ್ನು ಬಿಟ್ಟು ಬಹುದೂರಕ್ಕೆ ಹೋದನೇ? ಇನ್ನು ಮುಂದೆ "ಶ್ರೀಕೃಷ್ಣದೇವನು ನಮ್ಮನ್ನು ಬಿಟ್ಟು ಹೋದನು" ಎಂಬ ಹೊಲಸು ಮಾತುಗಳನ್ನು ಬಿಟ್ಟುಬಿಡಿರಿ."

ಓ ನಂದನೇ ಯಶೋದೆಯು ನನ್ನ ವಿಶ್ವರೂಪವನ್ನು ನನ್ನ ಬಾಯಿಯಲ್ಲಿ ನೋಡಿದುದನ್ನು ತಿಳಿಸಿದೆನು. ಈಗ ನೀನು ಪ್ರತ್ಯಕ್ಷವಾಗಿ ನೋಡಿರುವ ಒಂದೆರಡು ನಿದರ್ಶನಗಳನ್ನು ತಿಳಿಸುವೆನು. ದುರ್ಗಾವನದಲ್ಲಿ ನಿನ್ನನ್ನು ಒಂದು ಹೆಬ್ಬಾವು ನುಂಗಿತಲ್ಲವೇ? ಆಗ ಆ ಹೆಬ್ಬಾವಿನ ಮುಖದಿಂದ ನಿನ್ನನ್ನು ಬಿಡಿಸಬೇಕೆಂದು ಕೊಳ್ಳಿಗಳಿಂದ ಹೆಬ್ಬಾವನ್ನು ಎಲ್ಲರೂ ಹೊಡೆದರಲ್ಲವೇ? ಹೆಬ್ಬಾವಿನ ಬಾಯಿಯಿಂದ ಬಿಡಿಸಲು ಯಾರಿಂದ ಸಾಧ್ಯವಾಯಿತು? ಕೊನೆಗೆ ನಾನು ಬಂದು ನನ್ನ ಕಾಲಿನಿಂದ ಆ ಹೆಬ್ಬಾವನ್ನು ಮುಟ್ಟಿದೆನಲ್ಲವೆ? ಆ ಕ್ಷಣದಲ್ಲಿಯೇ ಆ ಜನ್ಮವನ್ನು ಬಿಟ್ಟು ವಿದ್ಯಾಧರರೂಪವನ್ನು ಆ ಹೆಬ್ಬಾವು ಸ್ವೀಕರಿಸಿತಲ್ಲವೇ? ಆಗ ವಿದ್ಯಾಧರನು ಹೇಳಿದ ಮಾತುಗಳನ್ನು ಸ್ಮರಿಸು.

"ನಾನು ಸುದರ್ಶನ ಎಂಬ ವಿದ್ಯಾಧರನು ಪರಮಸುಂದರನಾಗಿದ್ದೆನು. ನನ್ನಷ್ಟು ಸುಂದರನು ಯಾರೂ ಇಲ್ಲವೆಂಬ ಗರ್ವವು ನನ್ನಲ್ಲಿತ್ತು. ಕುರೂಪಿಗಳೂ ತಪಸ್ಸಿನಿಂದ ಕೃಶರೂ ಆಗಿರುವ ಅಂಗೀರಸ ಎಂಬ ಮುನಿಗಳನ್ನು ನೋಡಿದೆನು. ರೂಪಮದದಿಂದ ಅವರನ್ನು ಅಪಹಾಸ ಮಾಡಿದೆನು. ಅವರು ಕುಪಿತರಾದರು "ಹೆಬ್ಬಾವಿನ ಜನ್ಮವು ನಿನಗೆ ಏರ್ಪಡಲಿ" ಎಂದು ಶಪಿಸಿದರು. ಅವರ ಶಾಪದಿಂದ ನನಗೆ ಈ ಜನ್ಮವು ಬಂತು. ಇಂದು ಶ್ರೀಕೃಷ್ಣದೇವನ ಪಾದಸ್ಪರ್ಶದಿಂದ ನಾನು ದಿವ್ಯಶರೀರವನ್ನು ಪಡೆದಿರುವೆನು. ಓ ನಂದ, ಇವನನ್ನು ಮನುಷ್ಯನೆಂದು ತಿಳಿಯಬೇಡ. ಬ್ರಹ್ಮ ಮುಂತಾದ ದೇವತೆಗಳಿಗಿಂತ ಉತ್ತಮನೂ ಸಕಲಜಗತ್ತುಗಳಿಗೆ ಕಾರಣನೂ ಸ್ವತಂತ್ರನೂ ಆಗಿರುವ ಶ್ರೀಹರಿಎಂದು ನಂಬು. ಇವನ ಅನುಗ್ರಹದಿಂದ ಸರ್ವರೂ ಸಂಸಾರದಿಂದ ಮುಕ್ತರಾಗುವರು" ಎಂದನಲ್ಲವೇ?

ಓ ನಂದ, ಇನ್ನೊಂದು ಸಂದರ್ಭವನ್ನು ನಿನಗೆ ಜ್ಞಾಪಕಪಡಿಸುತ್ತಿರುವೆನು. ಸಾಧನದ್ವಾದಶೀ ದಿನದಲ್ಲಿ ನೀನು ಅರ್ಧರಾತ್ರಿಕಾಲದಲ್ಲಿ ಸ್ನಾನಮಾಡುವುದಕ್ಕಾಗಿ ಯಮುನಾನದಿಯಲ್ಲಿ ಮುಳುಗಿದಿ. ಆಗ ವರುಣನ ದೂತನೊಬ್ಬನು ನಿನ್ನನ್ನು ಶೆಳೆದುಕೊಂಡು ಹೋದನು. ಆಗ ನೀರಿನಲ್ಲಿ ಮುಳುಗಿದ ನೀನು ಮೇಲೆ ಬರಲಿಲ್ಲ. ಆಗ ಎಲ್ಲಾ ಗೊಲ್ಲರೂ ಕೂಗಿದರು. ಆಗ ನಾನು (ಶ್ರೀಕೃಷ್ಣದೇವನು) ನೀರಿನಲ್ಲಿ ಮುಳುಗಿ ವರುಣಲೋಕಕ್ಕೆ ಹೋದೆನು. ವರುಣನು ನನ್ನನ್ನು ಅತ್ಯಂತ ಭಕ್ತಿಯಿಂದ ಪೂಜಿಸಿದನು. "ಎಲೋ ನಂದ, ಇವನು ನಿನ್ನ ಮಗನಲ್ಲ. ಸರ್ವೋತ್ತಮನಾದ ಶ್ರೀಹರಿಯೇ ಆಗಿರುವನು" ಎಂದು ಹೇಳಲಿಲ್ಲವೇ?

ರೂಪಮದದಿಂದ ಅಂಗಿರಸಮುನಿಗಳನ್ನು ಅಪಹಾಸಮಾಡಿ ಶಾಪದಿಂದ ಹೆಬ್ಬಾವಿನ ಜನ್ಮವನ್ನು ಪಡೆದಿರುವ ವಿದಾಧರನಿಗೆ ಕಾಲಿನ ಸ್ಪರ್ಶಮಾತ್ರದಿಂದ ನಿಜರೂಪವನ್ನು ಕೊಟ್ಟವರು ಯಾರು? ಅವನಿಂದಲೂ ಲೋಕಪಾಲಕನಾದ ವರುಣನಿಂದಲೂ ಪೂಜಿಸಲ್ಪಟ್ಟವನು ಯಾರು? ಅವರಿಬ್ಬರೂ ಶ್ರೀಕೃಷ್ಣದೇವನು ನಿನ್ನ ಮಗನಲ್ಲವೆಂದೂ ಶ್ರೀಹರಿಯೆಂದೂ ಹೇಳಲಿಲ್ಲವೇ? ಶ್ರೀಹರಿಗೂ ಸರ್ವಜೀವರಿಗೂ ವಿಯೋಗವಿದೆಯೇ? ಆದ್ದರಿಂದ ನನಗೂ ವಿಯೋಗವು ಏರ್ಪಟ್ಟಿತೆಂಬ ಭ್ರಮವನ್ನು ಬಿಟ್ಟುಬಿಡು.

ಎಲೈ ಗೋಲ್ಲರೇ, ನೀವು ನನ್ನ ಲೋಕವನ್ನು ನೋಡಬೇಕೆಂದೂ ನನ್ನ ನಿಜಸ್ವರೂಪವನ್ನು ತಿಳಿಯಬೇಕೆಂದೂ ಆಶಿಸಿದಿರಿ. ನಿಮ್ಮ ಆಸೆಯನ್ನು ಪೂರ್ತಿ ಮಾಡಬೇಕೆಂದು ನಾನು ನಿಶ್ಚಯಿಸಿದೆನು. ಯಮುನಾನದಿಯಲ್ಲಿರುವ

ಬ್ರಹ್ಮಹ್ರದ ಎಂಬ ಸ್ಥಳಕ್ಕೆ ನಿಮ್ಮೆಲ್ಲರನ್ನೂ ಕರೆದುಕೊಂಡು ಹೋದನು. ನನ್ನ ಆಜ್ಞೆಯಿಂದ ನೀವೆಲ್ಲರೂ ಆ ನೀರಿನಲ್ಲಿ ಮುಳುಗಿದಿರಿ. ನನ್ನ ವೈಕುಂಠಲೋಕವನ್ನೂ ಅಲ್ಲಿ ನನಗಿರುವ ಸ್ಥಾನಮಾನಗಳನ್ನೂ ನಿಮ್ಮ ಕಣ್ಣುಗಳಿಂದಲೇ ನೋಡಿದಿರಿ. ನಾನೇ ಸರ್ವೋತ್ತಮನೆಂದು ತಿಳಿಯಿರಿ.

ಓ ಯಶೋದೆಯೇ, ಓ ನಂದನೇ, ಓ ಗೊಲ್ಲರೇ, ನಿಮಗೆ ಒಬ್ಬೊಬ್ಬರಿಗೂ ನನ್ನ ಮಹಿಮೆಯನ್ನು ಪ್ರತ್ಯೇಕವಾಗಿ ತಿಳಿಸಿರುವೆನು. ಇದರಿಂದ ನೀವೆಲ್ಲರೂ ತಿಳಿಯಬೇಕಾದ ಮುಖ್ಯವಾದ ಅಂಶವನ್ನು ಈಗ ವಿವರಿಸುವೆನು.

ಶ್ರೀಕೃಷ್ಣದೇವನು ಸಕಲ ಲೋಕಗಳ ಒಳಗೂ ಹೊರಗೂ ಇರುವ ಪರಬ್ರಹ್ಮನೆಂದು ತಿಳಿಯಿರಿ. ಆ ಭಾವನೆಯಿಂದಲೇ ಅವನನ್ನು ಆರಾಧಿಸಿರಿ. ಅವನು ನಿಮ್ಮನ್ನು ಬಿಟ್ಟು ಎಲ್ಲಿಗೂ ಹೋಗಲಿಲ್ಲ. ನೀವು ಅವನನ್ನು ಬಿಟ್ಟು ವಾಸಿಸುತ್ತಿಲ್ಲ. ಹಿಂದೆ ಅವನನ್ನು ನೋಡುತ್ತಿದ್ದಿರಿ. ಈಗ ನೋಡುತ್ತಿಲ್ಲ. ಇಷ್ಟೇ ವ್ಯತ್ಯಾಸ. ಈಗ ನಿಮಗೆ ಕಾಣಿಸದಿರುವುದು ನಿಮ್ಮ ಅನುಗ್ರಹಕ್ಕಾಗಿಯೇ ಹೊರತು ನಿಮ್ಮಲ್ಲಿ ಔದಾಸೀನ್ಯದಿಂದಲ್ಲ. ಯಾವಾಗಲೂ ನೋಡುತ್ತಿದ್ದರೆ ಶ್ರೀಕೃಷ್ಣದೇವನಲ್ಲಿ ನಿಮಗೆಲ್ಲರಿಗೂ ಅಸಡ್ಡೆಯು ಏರ್ಪಡುವ ಸಂಭವವಿದೆ. ಗಂಗಾತೀರದಲ್ಲಿ ಯಾವಾಗಲೂ ವಾಸಿಸುತ್ತಿರುವವರು ಗಂಗೆಯನ್ನು ಅಸಡ್ಡೆ ಮಾಡಿ ಪುಣ್ಯಕಾಲಗಳಲ್ಲಿ ಸಮೀಪದಲ್ಲಿರುವ ಪಂಚಕ್ರೋಶಿ ಮುಂತಾದ ತೀರ್ಥಗಳಿಗೆ ಓಡುವುದಿಲ್ಲವೇ? ಆ ಅಸಡ್ಡೆಯು ನಿಮಗೆ ಬರಬಾರದು. ಪುನಃ ಪುನಃ ಅವನನ್ನು ನೋಡಬೇಕೆಂಬ ಆಸೆಯು ಹೆಚ್ಚಾಗಬೇಕು. ಅದಕ್ಕಾಗಿಯೇ ಅದೃಶ್ಯನಾಗಿರುವನು. ಪರಮ ಕರುಣಾಳುವಾದ ಶ್ರೀಕೃಷ್ಣದೇವನಲ್ಲಿ ಯಾವ ಅಪರಾಧವನ್ನೂ ಹೊರಿಸದೆ ಏಕಾಂತ ಭಕ್ತಿಯಿಂದ ಭಜಿಸಿರಿ. ಬಹುಬೇಗನೆ ನಿಮ್ಮ ಕಣ್ಣುಗಳಿಗೆ ಕಾಣಿಸುವನು. ನಿಮಗೆ ಅವನು ಕಾಣಿಸದ ಸ್ಥಿತಿಯು ಎಂದೆಂದಿಗೂ ಏರ್ಪಡಲಾರದು" ಎಂದು ಶ್ರೀಕೃಷ್ಣದೇವನ ಸಂದೇಶವನ್ನು ತಿಳಿಸಿದನು. ಈ ಮಾತುಗಳನ್ನು ಕೇಳಿದ ನಂದನೂ, ಯಶೋದೆಯೂ ಗೊಲ್ಲರೂ ಶ್ರೀಕೃಷ್ಣದೇವನ ವಿರಹಬುದ್ಧಿಯನ್ನು ಬಿಟ್ಟು ಆನಂದಪೂರ್ಣರಾದರು.

ನಂದನ ಮನೆಯಿಂದ ಉದ್ಧವನು ಹೊರಟು. ಗೋಪಿಕಾಸ್ತ್ರೀಯರ ಮನೆಗಳಿಗೆ ಹೋದನು. ಒಂದೊಂದು ಮನೆಗಳೂ ಅತ್ಯುಗ್ರವಾದ ತಪಸ್ಸುಗಳನ್ನು ಮಾಡುತ್ತಾ ಆ ತಪಸ್ಸುಗಳಿಂದ ದೇಹಗಳನ್ನು ಒಣಗಿಸಿ ಅತಿಕೃಶವಾಗಿರುವಂತೆ ಮಾಡಿಕೊಂಡಿರುವ ಮುನಿಗಳ ಆಶ್ರಮಗಳಂತೆ ಕಾಣಿಸಿದವು. ಒಬ್ಬಳು ಶ್ರೀಕೃಷ್ಣದೇವನೊಡನೆ ಹಾಸಿಗೆಯಲ್ಲಿ ಮಲಗಬೇಕು ಎಂಬ ದೀಕ್ಷೆಯನ್ನು ವಹಿಸಿ ನೆಲದಲ್ಲಿ ಮಲಗಿದ್ದಳು. ಅವನು ತಿಂದ ತಾಂಬೂಲದ ಶೇಷವನ್ನೇ ತಿನ್ನಬೇಕೆಂಬ ದೀಕ್ಷೆಯಿಂದ ತಾಂಬೂಲವನ್ನೇ ಇನ್ನೊಬ್ಬಳು ತಿನ್ನಲಿಲ್ಲ. ಶ್ರೀಕೃಷ್ಣದೇವನು ಭೋಜನ ಮಾಡಿದ ಮೇಲೆ ಅವನ ಎಂಜಲನ್ನವನ್ನೇ ತಿನ್ನಬೇಕೆಂಬ ದೀಕ್ಷೆಯಿಂದ ಇನ್ನೊಬ್ಬಳು ಉಪವಾಸವ್ರತವನ್ನು ಸ್ವೀಕರಿಸಿದ್ದಳು. " ಮಲಗಿದರೆ ಸ್ವಪ್ನವು ಏರ್ಪಡಬಹುದು. ಹಾಗೆ ಏರ್ಪಟ್ಟರೆ ಆ ಸ್ವಪ್ನದಲ್ಲಿಯಾದರೂ ಶ್ರೀಕೃಷ್ಣದೇವನ ಸಂಗವು ಏರ್ಪಡಬಹುದು ಎಂಬ ಆಸೆಯಿಂದ ಮತ್ತೊಬ್ಬಳು ನಿದ್ರೆಬಾರದಿದ್ದರೂ ಯಾವಾಗಲೂ ಮಲಗಿದ್ದಳು. ಶ್ರೀಕೃಷ್ಣದೇವನೇ ಪತಿ, ಅವನಿಗೆ ಹುಟ್ಟಿದವನೇ ಮಗ, ಅವನು ವಾಸಿಸುತ್ತಿರುವ ಮನೆಯೇ ಮನೆ ಎಂದು ನಿಶ್ಚಯಿಸಿದ ಇನ್ನೊಬ್ಬಳು ತನ್ನ ಗಂಡನ ಪೂಜೆಯನ್ನೂ ಮಕ್ಕಳ ರಕ್ಷಣೆಯನ್ನೂ ಮನೆಯ ಕೆಲಸಗಳನ್ನೂ ಬಿಟ್ಟಳು. ಮತ್ತೊಬ್ಬಳು ನನ್ನ ತಲೆಯನ್ನು ರತಿಕ್ರೀಡೆಯು ಮುಗಿದ ಮೇಲೆ ಶ್ರೀಕೃಷ್ಣದೇವನೇ ಜಡೆಹಾಕಬೇಕು ಎಂದು ಸಂಕಲ್ಪಿಸಿ ತಲೆಗೂದಲುಗಳನ್ನು ಯಾವಾಗಲೂ ಬಿಚ್ಚಿಕೊಂಡಿದ್ದಳು. ರತಿಕ್ರೀಡೆಯು ಮುಗಿದ ಮೇಲೆ ನನ್ನ ದೇಹವನ್ನು

ಶ್ರೀಕೃಷ್ಣದೇವನೇ ಅಲಂಕರಿಸಬೇಕು ಎಂದು ಸಂಕಲ್ಪಿಸಿದ ಇನ್ನೊಬ್ಬಳು ಅಲಂಕಾರವನ್ನೇ ಧರಿಸಿರಲಿಲ್ಲ.

ಎಲ್ಲಾ ಗೋಪಿಕಾಸ್ತ್ರೀಯರೂ ತಮ್ಮ ಮನೆಗಳಲ್ಲಿರುವ ತುಳಸೀವೃಂದಾವನಗಳನ್ನು ಪ್ರತಿದಿನ ಪ್ರದಕ್ಷಿಣೆ ಮಾಡುತ್ತಿರುವರು. ಈ ತುಳಸೀವೃಂದಾವನದಂತೆ "ವೃಂದಾವನ" ಎಂಬ ಹೆಸರು ಈ ವನಕ್ಕಿಲ್ಲವೇ? ನಾವು ಈಗ ಪ್ರದಕ್ಷಿಣೆ ಮಾಡುತ್ತಿರುವಂತೆ ರಾಸಲೀಲೇಯಲ್ಲಿ ಶ್ರೀಕೃಷ್ಣದೇವನೊಡನೆ ಪ್ರದಕ್ಷಿಣಾಕಾರವಾಗಿ ರಾಸಲೀಲೆ ಯನ್ನಾಡಲಿಲ್ಲವೇ? "ಅಂತಹ ವೃಂದಾವನರಾಸಲೀಲೆಯು ತುಳಸೀ ವೃಂದಾವನವನ್ನು ಪ್ರದಕ್ಷಿಣೆ ಮಾಡುತ್ತಿರುವ ವಮಗೆ ಪುನಃ ಏರ್ಪಡಲಿ" ಎಂದು ಪ್ರಾರ್ಥಿಸಿದರು.

ಇನ್ನೊಬ್ಬ ಗೋಪಿಯು ಶ್ರೀಕೃಷ್ಣದೇವನೊಡನೆ ಮಾತಾಡುವುದೇ ಸಾರ್ಥಕವಾದ ಮಾತುಗಳು ಎಂದು ತೀರ್ಮಾನಿಸಿದವಳಾಗಿ ಸ್ವಜನರು. ತಂದೆ, ತಾಯಿ ಮುಂತಾದವರೊಡನೆ ಮಾತುಗಳನ್ನೇ ಬಿಟ್ಟಳು.

ಇನ್ನೊಬ್ಬಳು ಶೀತವಾಗಿಯೂ ಪರಿಮಳವಾಗಿಯೂ ಮೆಲ್ಲನೆಯೂ ಬೀಸುತ್ತಿರುವ ಗಾಳಿಯು, ತನ್ನನ್ನು ಬೇಯಿಸುತ್ತಿರುವ ಶ್ರೀಕೃಷ್ಣದೇವನ ವಿರಹ ಎಂಬ ಬೆಂಕಿಯನ್ನು ಹೆಚ್ಚಿಸಬಹುದು ಎಂದು ಆ ಗಾಳಿಯನ್ನೂ ಸೇವಿಸಲಿಲ್ಲ.

ಒಬ್ಬ ಸಖಿಯು ಹೇಳುತ್ತಿರುವ ಮಾತುಗಳನ್ನು ಇನ್ನೊಬ್ಬ ಗೋಪಿಕಾಸ್ತ್ರೀಯು ತುಂಬಾ ಆದರದಿಂದ ಕೇಳುತ್ತಿದ್ದಳು. " ಶ್ರೀಕೃಷ್ಣದೇವನು ನಿನ್ನ ಮನೆಗೆ ಖಂಡಿತವಾಗಿಯೂ ಬರುವನು. ಯೋಚಿಸಬೇಡ. " ಮುಂತಾದ ಮಾತುಗಳನ್ನು ಆ ಸಖಿಯು ಹೇಳುತ್ತಿದ್ದಳು. ಆದರೆ ಶ್ರೀಕೃಷ್ಣನ ಸಮಾಚಾರವನ್ನು ಹೇಳುತ್ತಿದ್ದ ಸಖಿಯು ಆ ಸಮಾಚಾರವನ್ನು ಬಿಟ್ಟು ಅನಾವಶ್ಯಕವಾದ ಲೌಕಿಕಮಾತುಗಳನ್ನು ಹೇಳುವುದಕ್ಕೆ ಆರಂಭಿಸಿದುದಾಗಿ ಗೋಪಿಕಾಸ್ತ್ರೀಯು ಭ್ರಮಿಸಿದಳು. ಈ ಭ್ರಮದಿಂದ ಗೋಪಿಕಾಸ್ತ್ರೀಗೆ ತುಂಬಾ ಸಂಕಟವು ಏರ್ಪಟ್ಟಿತು. ಆ ಮೇಲೆ ಸಖಿಯು ಹೇಳುತ್ತಿರುವ ಶ್ರೀಕೃಷ್ಣದೇವನ ಕಥೆಯನ್ನೂ ಕೇಳಲಿಲ್ಲ.

ಇನ್ನೊಬ್ಬ ಗೋಪಿಕಾಸ್ತ್ರೀಯು ಪಚ್ಚಕರ್ಪೂರ, ಕೇಸರಿ, ಕಸ್ತೂರಿ, ಮುಂತಾದ ಸುಗಂಧದ್ರವ್ಯಗಳಿಂದ ಮಿಶ್ರಿತವಾದ ಗಂಧದ ಚೂರ್ಣವನ್ನು ಸೇವಿಸಲಿಲ್ಲ. ಈ ಗಂಧದ ಚೂರ್ಣವನ್ನು ಶ್ರೀಕೃಷ್ಣದೇವನ ದೇಹಕ್ಕೆ ಲೇಪನ ಮಾಡಬೇಕು. ಅನಂತರದಲ್ಲಿ ಎರಡು ಕೈಗಳಿಂದ ಅವನನ್ನು ತಬ್ಬಿಕೊಳ್ಳಬೇಕು. ಆಗ ಅವನ ದೇಹದಲ್ಲಿ ಹಚ್ಚಲ್ಪಟ್ಟ ಗಂಧದ ಚೂರ್ಣವು ನನ್ನ ದೇಹದಲ್ಲಿ ಅಂಟಿಕೊಳ್ಳುತ್ತದೆ. ಶ್ರೀಕೃಷ್ಣದೇವನ ನಿರ್ಮಾಲ್ಯ ಬ್ರಹ್ಮ ಮುಂತಾದ ಎಲ್ಲಾ ವೈಷ್ಣವರಿಂದಲೂ ಮಾನ್ಯವಲ್ಲವೇ? ಅಂತಹ ನಿರ್ಮಾಲ್ಯವಾದ ಗಂಧದ ಚೂರ್ಣವನ್ನು ನಾನು ಧರಿಸುವುದು ಯೋಗ್ಯವಲ್ಲವೇ? ಎಂದಳು.

ಇನ್ನೊಬ್ಬ ಗೋಪಿಕಾಸ್ತ್ರೀಯು ಗಿಳಿಗಳ ಮಾತುಗಳನ್ನು ಕೇಳಿದಳು. ಶ್ರೀಕೃಷ್ಣದೇವನ ಮಾತುಗಳನ್ನು ಸ್ಮರಿಸಿದಳು. ಚಂದ್ರನನ್ನು ನೋಡಿದಳು. ಶ್ರೀಕೃಷ್ಣದೇವನ ಮುಖವನ್ನು ಸ್ಮರಿಸಿದಳು. ಕೋಗಿಲೆಗಳ ಧ್ವನಿಗಳನ್ನು ಕೇಳಿದಳು. ಶ್ರೀಕೃಷ್ಣದೇವನ ಮೃದುವಾದ ಸ್ವರಗಳನ್ನು ಸ್ಮರಿಸಿದಳು. ಭ್ರಮರಗಳನ್ನು ನೋಡಿದಳು. ಅವುಗಳಂತೆ ಕಪ್ಪಾಗಿರುವ ಶ್ರೀಕೃಷ್ಣದೇವನ ತಲೆಗೂದಲುಗಳನ್ನು ಸ್ಮರಿಸಿದಳು. ಮಾನ್ಯವಾಗಿಯೂ ಸುಗಂಧಪೂರ್ಣವಾಗಿಯೂ ಇರುವ ಪುಷ್ಪಗಳನ್ನು ನೋಡಿದಳು. ಶ್ರೀಕೃಷ್ಣದೇವನ ಅಂಗಗಳಲ್ಲಿರುವ ಮೃದುತ್ವವೂ ಪರಿಮಳವೂ ನೆನಪಿಗೆ ಬಂತು. ಈ ಎಲ್ಲಾ ವಸ್ತುಗಳೂ ಶ್ರೀಕೃಷ್ಣದೇವನ ಸ್ಮರಣಕ್ಕೆ ಕಾರಣವಾಗಿ ಅವನಲ್ಲಿಯೇ ಮನಸ್ಸು ಲೀನವಾಗುಂತೆ ಮಾಡಿದವು. ಇದರಿಂದ ಈ ಎಲ್ಲಾ ವಸ್ತುಗಳಲ್ಲಿಯೂ ವೈರಾಗ್ಯವನ್ನು ಪಡೆದು ಅವುಗಳೆಲ್ಲವನ್ನೂ ಬಿಟ್ಟುಬಿಟ್ಟಳು.

# ಭ್ರಮರಗೀತೆ

ಈ ಉದ್ಧವನು ಗೋಪಿಕಾಸ್ತ್ರೀಯರಿಗೆ ಶ್ರೀಕೃಷ್ಣದೇವನಲ್ಲಿರುವ ಭಕ್ತಿಪರವಶತೆಯನ್ನು ನೋಡಿ ಮೈಮರೆತನು. ಗೋಪಿಕಾಸ್ತ್ರೀಯರು ಈ ಉದ್ಧವನನ್ನು ಶ್ರೀಕೃಷ್ಣದೇವನ ಪಾದಗಳನ್ನು ಭ್ರಮರದಂತೆ ಬಿಡದಿರುವ ಭಕ್ತವರೇಣ್ಯನೆಂದು ತಿಳಿದರು. ಅದೇ ಸಮಯದಲ್ಲಿ ಆ ಮಾರ್ಗವಾಗಿ ಹಾರಿಹೋಗುತ್ತಿರುವ ಭ್ರಮರವನ್ನು ನೋಡಿದರು. ಆ ಭ್ರಮರವನ್ನು ಉದ್ಧವನೊಡನೆ ಹೋಲಿಸಿದರು. ಉದ್ಧವನ ಜೊತೆಯಲ್ಲಿ ಕೆಲವು ಮಾತುಗಳನ್ನಾಡಬೇಕೆಂದು ತೀರ್ಮಾನಿಸಿದರು. ಧಾರಾಳವಾಗಿ ಅವನೊಡನೆ ಮಾತಾಡಲು ನಾಚಿದರು. ನಿರ್ದಾಕ್ಷಿಣ್ಯವಾಗ ಕೆಲವು ಕಠೋರವಾದ ಮಾತುಗಳನ್ನೂ ಆಡಬೇಕಾಗಿದೆ. ಅಂತಹ ಮಾತುಗಳನ್ನು ಆಡಲು ಮನಸ್ಸಿಗೆ ಕಷ್ಟವಾಯಿತು. ಅದಕ್ಕಾಗಿ ಅದೇ ಭ್ರಮರವನ್ನು ನೋಡಿ ಉದ್ಧವನೊಡನೆ ಆಡಬೇಕಾದ ಮಾತುಗಳನ್ನಾಡಿದರು.

"ಎಲೈ ಭ್ರಮರವೇ, ನೀನು "ಮಧುಪ" ಅಂದರೆ ಪುಷ್ಪರಸವನ್ನು ಯಾವಾಗಲೂ ಪಾನಮಾಡುತ್ತಿರುವಿ, ನಾವೆಲ್ಲರೂ ಪುಷ್ಪ ಮುಂತಾದ ಎಲ್ಲಾ ವಿಷಯಗಳನ್ನೂ ದ್ವೇಷಿಸುತ್ತಿರುವೆವು. ಆದ್ದರಿಂದ ನಮ್ಮ ಮುಂದೆ ಓಡಾಡುವುದರಿಂದ ನಿನಗೆ ಪುಷ್ಪರಸವು ಸಿಗಲಾರದು. ಯಾಕೆ ನಮ್ಮ ಮುಂದೆ ಓಡಾಡುತ್ತಿರುವಿ? ಇಲ್ಲಿಂದ ಹೊರಡು. ದೊಡ್ಡ ದೊಡ್ಡ ಆನೆಗಳಿದ್ದಲ್ಲಿಗೆ ಹೋಗು. ಆ ಆನೆಗಳ ಕೆನ್ನೆಗಳಿಂದ ಮದಜಲಗಳು ಸುರಿಯುತ್ತಿರುತ್ತವೆ. ಆ ಮದಜಲಗಳಲ್ಲಿ ಪುಷ್ಪರಸವು ಸಿಗದ್ದಿರೂ ಪರಿಮಳವಾದರೂ ಇದೆ. ಆ ಪರಿಮಳದಿಂದಲಾದರೂ ನೀನು ತೃಪ್ತನಾಗಬಹುದು. ಅದು ಮಾತ್ರವಲ್ಲ. ನಮಮ ಸಮೀಪಕ್ಕೆ ನೀನು ಬರಲೇಬೇಡ. ಶ್ರೀಕೃಷ್ಣದೇವನ ವಿರಹ ಎಂಬ ಭಯಂಕರವಾದ ಅಗ್ನಿಯು ನಮ್ಮ ಮೃದುವಾದ ದೇಹಗಳನ್ನು ಬೇಯಿಸುತ್ತಿದೆ. ನಮ್ಮ ಸಮೀಪಕ್ಕೆ ಬಂದರೆ ನೀನೂ ಆ ಬೆಂಕೆಯಲ್ಲಿ ಬೆಂದೇ ಹೋಗುವಿ. ಆ ಬೆಂಕಿಯಲ್ಲಿ ಬಿದ್ದು ಸಾಯಬೇಕೆಂದು ಆಶಿಸುವಿಯೋ? ಎಲೈ ದಡ್ಡನೇ, ದೂರಕ್ಕೆ ಹೋಗು." ಇದು ಭ್ರಮರವನ್ನು ನೋಡಿ ಹೇಳಿದ ಮಾತು.

"ಎಲೈ ಉದ್ಧವನೇ, ನೀನು " ಮಧುಪ" ಅಂದರೆ "ಮಧು" ಎಂಬ ಯಾದವನ ಕುಲದಲ್ಲಿ ಹುಟ್ಟಿರುವಿ. ಈಗ ನಿನ್ನ ಪ್ರಭುವಾದ ಶ್ರೀಕೃಷ್ಣದೇವನು ಸಕಲ ಯಾದವರಿಗೂ ಪ್ರಭುವಾಗಿರುವನು. ನೀನು ಅವನಿಗೆ ಅತ್ಯಂತ ಪ್ರಿಯನಾಗಿರುವಿ. ಆದ್ದರಿಂದ ನಿನ್ನ ಪ್ರಭುವಿನ ಕೃಪೆಯಿಂದ ಆನೆಯ ಕುಂಭಸ್ಥಳಗಳ ಮೇಲೆ ಸಂಚರಿಸುವ ಅರ್ಹತೆಯನ್ನು ಪಡೆದಿರುವಿ. ಇಂತಹ ನೀನು ಗತಿಯಿಲ್ಲದ ನಮ್ಮ ಮುಂದೆ ಸಂಚರಿಸುವುದರಿಂದ ನಿನಗೆ ಯಾವ ಫಲವೂ ಇಲ್ಲ. ಅದು ಮಾತ್ರವಲ್ಲ. ಶ್ರೀಕೃಷ್ಣದೇವನ ವಿರಹದಿಂದ ಏರ್ಪಟ್ಟಿರುವ ಸಹಿಸಲಾರದ ಬೆಂಕಿಯು ನಮ್ಮ ದೇಹಗಳನ್ನೆಲ್ಲಾ ಸುಡುತ್ತಿದೆ. ನೀನು ನಮ್ಮ ಜೊತೆಯಲ್ಲಿದ್ದರೆ ಅದೇ ವಿರಹ ಎಂಬ ಬೆಂಕಿಯು ನಿನ್ನನ್ನೂ ಪೀಡಿಸುತ್ತದೆ. ಆ ಬೆಂಕಿಯಲ್ಲಿ ಬೀಳಬೇಕೆಂದು ಆಶಿಸುವೆಯಾ? ದಡ್ಡನೇ ದೂರಹೋಗು." ಇದು ಉದ್ಧವನನ್ನು ಕುರಿತು ಹೇಳಿದ ಮಾತು. ಹೀಗೆ ಒಂದೊಂದು ಸಂದರ್ಭದಲ್ಲಿಯೂ ಮೊದಲನೆಯ ಮಾತುಗಳು ಭ್ರಮರವನ್ನೂ ಎರಡನೆಯ ಮಾತುಗಳು ಉದ್ಧವನನ್ನೂ ಉದ್ದೇಶಿಸಿ ಹೇಳಿರುವ ಮಾತುಗಳೆಂದು ತಿಳಿಯಬೇಕು.

" ಎಲೈ ಭ್ರಮರವೇ, ನೀನು ಪುಷ್ಪಗಳ ರಾಶಿಯಲ್ಲಿ ಝೇಂಕಾರವನ್ನು ಮಾಡುತ್ತಾ ನಿನ್ನ ಪಾಂಡಿತ್ಯವನ್ನು ತೋರಿಸುತ್ತಿರುವಿ. ನಾವೆಲ್ಲರೂ ಶ್ರೀಕೃಷ್ಣದೇವನ ಸಂಗವಿಲ್ಲದಿರುವ ನಾನಾ ವಿಧರಾದ ಅಬಲೆಯರು.

ಪುಷ್ಪಾದಿಗಳನ್ನು ಧರಿಸದವರು. ನಮ್ಮ ಮುಂದೆ ಮಧುರಸದ ಆಸೆಯಿಂದ ಕುಣಿಯುತ್ತಾ ನಮ್ಮ ಮನಸ್ಸುಗಳಿಗೆ ಕಷ್ಟವನ್ನು ಕೊಡಬೇಡ. ಎಲೈ ಸಖಿಯರೆ, ನಾವೆಲ್ಲರೂ ಮನೆ, ಮಕ್ಕಳು, ಶತ್ರು, ಮಿತ್ರ ಮುಂತಾದ ಎಲ್ಲರನ್ನೂ ಮರೆತವರು, ನಮ್ಮಮುಂದೆ ಈ ಭ್ರಮರವು ಕುಣಿಯುತ್ತಿರುವುದು ನಮ್ಮ ಗ್ರಹಚಾರ.''

" ಎಲೈ ಉದ್ಧವನೇ, ನೀನು ದೇವಗುರುವಾಗಿರುವ ಬೃಹಸ್ಪತಿಯ ಮಗನೂ ಶಿಷ್ಯನೂ ಆಗಿರುವಿ. ನೀನು ನವಗ್ರಹಗಳಲ್ಲಿ ಒಬ್ಬನಾಗಿರುವುದರಿಂದ ಚಂದ್ರ ಮತ್ತು ಸೂರ್ಯನ ಸಾಲಿನಲ್ಲಿ ಸೇರುವದಕ್ಕೆ ಅರ್ಹನು. ಅಂತಹ ನೀನು ದೇವಸಭೆಯಲ್ಲಿ ನಿನ್ನ ಪಾಂಡಿತ್ಯವನ್ನು ತೋರಿಸು. ನಮ್ಮ ಮುಂದೆ ಶ್ರೀಕೃಷ್ಣದೇವನ ಸಮಾಚಾರವನ್ನು ಹೇಳುತ್ತಾ ಅವನನ್ನು ಸ್ಮರಿಸುವಂತೆ ಮಾಡಬೇಡ. ಸಂಕಟವನ್ನು ಕೊಡಬೇಡ. ಎಲೈ ಸಖಿಯರೆ, ಎಲ್ಲರನ್ನೂ ಬಿಟ್ಟಿರುವ ನಮ್ಮ ಮುಂದೆ ಶ್ರೀಕೃಷ್ಣದೇವನ ಸಮಾಚಾರವನ್ನು ಹೇಳುತ್ತಾ ಈ ಉದ್ಧವನು ನಮ್ಮನ್ನು ಸಂಕಟಪಡಿಸುತ್ತಿರುವನು. ಇದೆಲ್ಲವೂ ನಮ್ಮ ಗ್ರಹಚಾರ.''

"ಎಲೈ ಭ್ರಮರವೇ, ನೀನು ನಮ್ಮ ಮುಂದಿನಿಂದ ಪಶ್ಚಿಮಾಭಿಮುಖವಾಗಿ ಓಡಿದಿಡಿ, ನಮ್ಮನ್ನು ಬಿಟ್ಟು ಓಡಿಹೋದುದರಿಂದ ನಮಗೆ ಸ್ವಲ್ಪ ನೆಮ್ಮದಿ ಏರ್ಪಟ್ಟಿತು. ಅಷ್ಟರಲ್ಲಿ ಎಲ್ಲೆಲ್ಲೋ ಸುತ್ತಿಬಿಟ್ಟು ಪೂರ್ವದಿಕ್ಕಿನಿಂದ ಬಂದು ಪುನಃ ನಮ್ಮನ್ನು ಗೋಳಾಡಿಸುವುದಕ್ಕೆ ಆರಂಭಿಸಿದಿ. ಎಲೈ ಸಖಿಯರೆ, ಆಕಾಶದಲ್ಲಿ ಸಂಚರಿಸುತ್ತಿರುವ ಈ ಭ್ರಮರಕ್ಕೆ ಹೆದರಿಕೆಯೇ ಇಲ್ಲ. ನಮ್ಮ ಕಿವಿಗಳಲ್ಲಿರುವ ತುಳಸಿಯ ಸುಗಂಧದ ಆಸೆಯಿಂದ ಕಿವಿಯ ಪಕ್ಕದಲ್ಲಿಯೇ ಸಂಚರಿಸುತ್ತಾ ಝೇಂಕಾರವನ್ನು ಮಾಡುತ್ತಿದೆ. ಏನು ಮಾಡುವಿ.''

"ಎಲೈ ಉದ್ಧವನೇ ನೀನು ಬೃಹಸ್ಪತ್ಯಾಚಾರ್ಯನ ಅವತಾರವೆಂದು ನಾವು ಹೇಳಿದೆವು. ನಿನ್ನ ಮೂಲರೂಪವಾದ ಬೃಹಸ್ಪತ್ಯಾಚಾರ್ಯನು ಪಶ್ಚಿಮದಿಕ್ಕಿನಲ್ಲಿ ಅಸ್ತಮನವನ್ನು ಪಡೆಯುವನು. ಪುನಃ ಸ್ವಲ್ಪದಿನಗಳಲ್ಲಿಯೇ ಪೂರ್ವದಲ್ಲಿ ಉದಯಿಸುವನು. ನಿನ್ನ ಮೂಲರೂಪದಂತೆ ನೀನೂ ಸಹ ನಮ್ಮ ಪಕ್ಕದಿಂದ ಪಶ್ಚಿಮದಿಂದ ಹೋದವನು ಪುನಃ ಪೂರ್ವದಿಕ್ಕಿನಲ್ಲಿ ನಮ್ಮನ್ನು ಹುಡುಕಿಕೊಂಡು ಬರುತ್ತಿರುವಿ. ಬಂದವನು ಸುಮ್ಮನಿರಬಹುದು. ಅದೂ ಇಲ್ಲ. ಶ್ರೀಕೃಷ್ಣದೇವನ ಕಥೆಗಳನ್ನು ಹೇಳುತ್ತಾ ನಮಗೆ ಅವನಲ್ಲಿ ಆಸೆಯನ್ನು ಹೆಚ್ಚಿಸುತ್ತಿರುವಿ. ನೀನೂ ನಿನ್ನ ಮೂಲರೂಪವಾಗಿರುವ ಶ್ರೀಬೃಹಸ್ಪತ್ಯಾಚಾರ್ಯನೂ ಶ್ರೀಕೃಷ್ಣದೇವನಲ್ಲಿ ಅಪಾರ ಭಕ್ತಿಯನ್ನಿಟ್ಟುಕೊಂಡಿರುವಿರಿ. ನಾವೆಲ್ಲರೂ ಹಿಂದೆ ದೇತೆಗಳಾಗಿದ್ದು ಈಗ ಶ್ರೀಕೃಷ್ಣದೇವನನ್ನು ಸೇವಿಸುವುದಕ್ಕಾಗಿ ಗೊಲ್ಲಸ್ತ್ರೀಯರಾಗಿ ಹುಟ್ಟಿರುವೆವು. ದೇವಸ್ತ್ರೀಯರಾಗಿರುವ ನಮ್ಮಲ್ಲಿ ದೇವಗುರುವಾಗಿರುವ ಬೃಹಸ್ಪತ್ಯಾಚಾರ್ಯನಾಗಲೀ ಅವನ ಮಗನಾಗಿರುವ ನೀನಾಗಲೀ ಕರುಣೆಯನ್ನು ತೋರುಸುವುದರಲ್ಲಿ ನ್ಯಾಯವಿದೆ. ನೀನು ತುಂಬಾ ಧೈರ್ಯದಿಂದ ನಮ್ಮ ಮುಂದೆ ಶ್ರೀಕೃಷ್ಣದೇವನ ಉಪದೇಶಗಳನ್ನು ತಿಳಿಸುವುದಕ್ಕಾಗಿ ಪ್ರಯತ್ನಿಸುತ್ತಿರುವಿ ನಿನ್ನ ಧೈರ್ಯಕ್ಕೆ ಮೆಚ್ಚಿದೆವು.''

"ಎಲೈ ಆಕಾಶದಲ್ಲಿ ಹಾರುತ್ತಿರುವ ಭ್ರಮರವೇ, ಶ್ರೀಕೃಷ್ಣದೇವನ ವಿಯೋಗದಿಂದ ತತ್ತಳಿಸುತ್ತಾ ಎಲ್ಲಾ ಸುಖಸಾಮಗ್ರಿಗಳನ್ನೂ ಬಿಟ್ಟಿರುವ ನಮ್ಮ ಮುಂದೆ ತಿರುಗಾಡಿದ್ದರಿಂದ ನಿನಗೇನೂ ಲಾಭವಿಲ್ಲ. ನಮಗೂ ನಿನ್ನನ್ನೂ ನೋಡಿದ್ದರಿಂದ ಸಂತೋಷವಿಲ್ಲ. ನಮ್ಮ ಈ ಹಳ್ಳಿಯನ್ನು ಬಿಟ್ಟುಬಿಡು. ಬಹುದೂರದಲ್ಲಿರುವ ಮಥುರಾಪಟ್ಟಣಕ್ಕೆ ಹೋಗು. ಆದರೆ ನಮ್ಮ ಪತಿಯಾದ ಶ್ರೀಕೃಷ್ಣದೇವನ ತಲೆಗೂದಲಿನ ಸ್ಮರಣೆಯು ಬಂದು ಮನ್ಮಥವಿಕಾರವು

ಹೆಚ್ಚುತ್ತಿರುವುದರಿಂದ ನಿನ್ನನ್ನು ಇಟ್ಟುಕೊಳ್ಳಲೂ ಸಾಧ್ಯವಿಲ್ಲ. ಇಂತಹ ದುರವಸ್ಥೆಯು ನಮಗೆ ಏರ್ಪಟ್ಟಿದೆ. ಅಯ್ಯೋ ನಾವೇನು ಮಾಡೋಣ.''

" ಎಲೈ ಉದ್ಧವನೇ, ನೀನು ಆಕಾಶದಲ್ಲಿ ಸಂಚರಿಸುತ್ತಿರುವ ದೇವಗುರುವಾಗಿರುವ ಬೃಹಸ್ಪತ್ಯಾಚಾರ್ಯನ ಅವತಾರವಾಗಿರುವಿ. ಶ್ರೀಕೃಷ್ಣದೇವನ ಕೃಪೆಗೆ ಪಾತ್ರರಾಗಿರುವ ದೇವತೆಗಳೇ ಮುಂತಾದವರ ಸಹವಾಸವನ್ನು ಮಾಡಿದರೆ ನಿನಗೆ ಪ್ರಯೋಜನವುಂಟು. ನಾವು ಶ್ರೀಕೃಷ್ಣದೇವನ ಕೃಪೆಗೆ ಪಾತ್ರರಲ್ಲ. ಆದ್ದರಿಂದ ನಮ್ಮ ಮನೆಗಳಲ್ಲಿ ಸಂಚರಿಸಿದ್ದರಿಂದ ನಿನಗೆ ಯಾವ ಪ್ರಯೋಜನವೂ ಇಲ್ಲ. ಆದ್ದರಿಂದ ಈ ಗೊಲ್ಲರ ಹಳ್ಳಿಯನ್ನು ಬಿಟ್ಟುಬಿಡು. ಇಲ್ಲಿಂದ ಬಹುದೂರದಲ್ಲಿರುವ ಮಥುರಾಪಟ್ಟಣಕ್ಕೆ ಹೋಗು. ಅಲ್ಲಿ ಶ್ರೀಕೃಷ್ಣದೇವನ ಪಾದಗಳು ಸಂಚರಿಸುತ್ತಿವೆ. ಆ ಪಾದಗಳಲ್ಲಿ ಬಲಗಾಲಿನ ಅಂಗುಷ್ಠದಲ್ಲಿ ಶಬ್ದತತ್ವಕ್ಕೆ ಅಭಿಮಾನಿಯಾಗಿರುವ ಬೃಹಸ್ಪತ್ಯಾಚಾರ್ಯನು ವಾಸಿಸುತ್ತಾ ಶ್ರೀಕೃಷ್ಣದೇವನನ್ನು ಸೇವಿಸುತ್ತಿರುವನು. ನೀನೂ ಅವನೊಡನೆ ಸೇರಿ ಶ್ರೀಕೃಷ್ಣದೇವನನ್ನು ಸೇವಿಸಿ ಧನ್ಯನಾಗು . ನೀನಿಲ್ಲಿದ್ದರೆ ನಮಗೆ ತುಂಬಾ ಕಷ್ಟವಾಗುತ್ತದೆ. ನಿನ್ನ ತಲೆಗೂದಲು ಮುಂತಾದವುಗಳನ್ನು ನೋಡುವಾಗ ಶ್ರೀಕೃಷ್ಣದೇವನಿಗೆ ಸಮನಾಗಿರುವಿ. ಇಂತಹ ನಿನ್ನನ್ನು ನೋಡದಿರಲೂ ಸಾಧ್ಯವಿಲ್ಲ. ಆಲಿಂಗನಾದಿಗಳಿಂದ ತೃಪ್ತಿಪಡಿಸಬೇಕೆಂದೂ. ನಾವೂ ನಿನ್ನ ಆಲಿಂಗನಾದಿಗಳಿಂದ ತೃಪ್ತಿಯನ್ನು ಅನುಭವಿಸಬೇಕೆಂದೂ ಆಸೆಯ ಏರ್ಪಡುತ್ತದೆ. ಶ್ರೀಕೃಷ್ಣದೇವನಿಗಿಂತ ಭಿನ್ನನಾಗಿರುವ ನಿನ್ನನ್ನು ತೃಪ್ತಿಪಡಿಸುವುದೂ ನಿನ್ನಿಂದ ತೃಪ್ತಿಯನ್ನು ಪಡೆಯುವುದೂ ಧರ್ಮಕ್ಕೆ ಅತ್ಯಂತ ವಿರುದ್ಧವಾಗಿರುವುದರಿಂದ ಆ ಕಾರ್ಯವನ್ನು ಮಾಡಲೂ ಸಾಧ್ಯವಿಲ್ಲ. ಆದ್ದರಿಂದ ನೀನು ಮಥುರಾಪಟ್ಟಣಕ್ಕೆ ಹೋಗು. ನಮ್ಮ ಈ ವಿಧವಾದ ಕಷ್ಟಗಳನ್ನು ಪರಿಹರಿಸು.''

" ಎಲೈ ಭ್ರಮರವೆ, ವಂಸತಋತುವು ಮನ್ಮಥನಿಗೆ ತುಂಬಾ ಸ್ನೇಹಿತನಾಗಿರುತ್ತದೆ. ಆದ್ದರಿಂದಲೇ ವಸಂತನು ತನ್ನ ಕಾಲದಲ್ಲಿ ವಿಚಿತ್ರವಾದ ಪುಷ್ಪಗಳು ಮುಂತಾದವುಗಳನ್ನು ಸೃಷ್ಟಿಸಿ ಜನರಿಗೆ ಕಾಮವಿಕಾರವನ್ನು ಹೆಚ್ಚಿಸುವನು. ಆ ವಸಂತನು ನಿನಗೆ ಬೇಕಾದ ಪುಷ್ಪಗಳನ್ನು ಸೃಷ್ಟಿಸಿ ನಿನಗೆ ಪುಷ್ಪರಸವನ್ನು ಕೊಡುತ್ತಾ ಪೋಷಿಸುತ್ತಿರುವನು. ಆದ್ದರಿಂದಲೇ ನಿನ್ನನ್ನು ವಸಂತಪಕ್ಷಪಾತಿಯೆಂದು ಹೇಳಬಹುದು. ಆ ವಸಂತನು ಚೈತ್ರ ವೈಶಾಖ ಎಂಬ ಎರಡು ತಿಂಗಳುಗಳ ಮಧ್ಯದಲ್ಲಿ ತನ್ನ ಸ್ವರೂಪವನ್ನು ತೋರಿಸಿ ಜ್ಯೇಷ್ಠಮಾಸವು ಆರಂಭಿಸಿದ ಕೂಡಲೇ ಮರೆಯುವನು. ಅವನು ಮರೆಯುವಾಗ ನೀನು ಸಂಚರಿಸುವುದಿಲ್ಲ.''

" ಈ ವಸಂತನು ಮಾಧವ ಎಂಬ ಹೆಸರಿನಿಂದ ಪ್ರಸಿದ್ಧನಾಗಿರುವನು. ನಮ್ಮ ಶ್ರೀಕೃಷ್ಣದೇವನೂ ಅದೇ ಹೆಸರಿನಿಂದ ಪ್ರಸಿದ್ಧನಾಗಿರುವನು. ನಮ್ಮ ಮಾಧವನು ಕೆಲದಿನಗಳ ವರೆಗೆ ಕಾಡಿನಲ್ಲಿರುವ ನಮಗೆ ದರ್ಶನವನ್ನು ಕೊಟ್ಟು ಈಗ ದೇಶಾಂತರಕ್ಕೆ ಹೋಗಿ ನಮ್ಮನ್ನು ಕೈ ಬಿಡಲಿಲ್ಲವೇ? ನಮ್ಮ ಮಾಧವನಂತೆ ನಿನ್ನ ಸ್ನೇಹಿತನಾದ ಮಾಧವನೂ ಚಂಚಲ ಸ್ವಭಾವವುಳ್ಳವನಲ್ಲವೇ? ಅವನ ಸ್ನೇಹಿತನಾದ ನೀನೂ ಚಂಚಲಸ್ವಭಾವವುಳ್ಳವನಲ್ಲವೇ? ಚಂಚಲಸ್ವಭಾವವುಳ್ಳ ನೀನು ನಮ್ಮಲ್ಲಿ ತುಂಬಾ ಸ್ನೇಹವನ್ನು ತೋರಿಸುತ್ತಿರುವಿ. ನಮ್ಮಲ್ಲಿ ಸ್ನೇಹವನ್ನು ತೋರಿಸಿ ಏನು ಪ್ರಯೋಜನ, ಹೊರಟುಹೋಗು.''

" ಎಲೈ ಉದ್ಧವನೇ ನೀನು ಮಧು ಎಂಬ ರಾಜನ ವಂಶದಲ್ಲಿ ಹುಟ್ಟಿರುವಿ. ಶ್ರೀಕೃಷ್ಣದೇವನೂ ಅದೇ ವಂಶದಲ್ಲಿ ಹುಟ್ಟಿರುವನು. ಆದ್ದರಿಂದ ನೀವಿಬ್ಬರೂ "ಮಾಧವ'' ಎಂದೂ ಹೇಳಲ್ಪಡುತ್ತಿರುವಿರಿ. ಶ್ರೀಕೃಷ್ಣದೇವನೆಂಬ

ಮಾಧವನು ಈಗ ನಿನ್ನಲ್ಲಿ ಅಪಾರಕರುಣೆಯನ್ನು ತೋರಿಸುತ್ತಿರುವನು. ಆದ್ದರಿಂದ ಶ್ರೀಕೃಷ್ಣದೇವ ಎಂಬ ಮಾಧವನು ಇಂದು ನಿನ್ನವನಾಗಿರುವನು. ಅದೇ ಮಾಧವನು ಇಂದು ನಮ್ಮಲ್ಲಿ ಕರುಣೆಯನ್ನು ತೋರಿಸುತ್ತಿಲ್ಲ. ಆದ್ದರಿಂದ ಅವನನ್ನು ಇಂದು ನಮ್ಮವನೆಂದು ಹೇಳುವಂತಿಲ್ಲ. ನಿನ್ನ ಮಾಧವನು ಕಾಡುಗಳಲ್ಲಿ ವಾಸಿಸುತ್ತಿರುವ ನಮಗೆ ಕೆಲವು ದಿನಗಳ ವರೆಗೆ ದರ್ಶನವನ್ನು ಕೊಟ್ಟನು. ಈಗ ದರ್ಶನವನ್ನು ಕೊಡುತ್ತಿಲ್ಲ. ನೀನು ನಿನ್ನ ಮಾಧವನ ಮಿತ್ರನಲ್ಲವೇ? ನೀನೂ ಅವನಂತೆಯೇ ಆಕಾಶದಲ್ಲಿ ಕೆಲವು ದಿನಗಳು ಕಾಣಿಸುತ್ತಾ ಹೆಚ್ಚು ದಿನಗಳಲ್ಲಿ ಕಾಣಿಸದ ಬೃಹಸ್ಪತ್ಯಾಚಾರ್ಯನ ಅವತಾರವಲ್ಲವೇ? ನಿನ್ನ ಮಾಧವನ ಗುಣವು ನಿನಗೂ ಸ್ವಭಾವಸಿದ್ಧವಲ್ಲವೇ? ಆದ್ದರಿಂದ ಇಂದು ದರ್ಶನವನ್ನು ಕೊಟ್ಟು ಪುನಃ ನಿನ್ನ ಮಾಧವನಂತೆ ಅದೃಶ್ಯನಾಗುವ ನಿನ್ನೊಡನೆ ಸ್ನೇಹವನ್ನು ಬೆಳೆಸಿದ್ದರಿಂದ ನಮಗೂ, ನಮ್ಮ ಸ್ನೇಹವನ್ನು ಮಾಡಿದ್ದರಿಂದ ನಿನಗೂ ಏನೂ ಪ್ರಯೋಜನವಿಲ್ಲ. ಆದ್ದರಿಂದ ಹೊರಡು.

" ಎಲೈ ಸಖಿಯೇ ಈ ಭ್ರಮರವು ನಮಗೆ ಅಭಿಮುಖವಾಗಿಯೂ ಪಕ್ಕಗಳಲ್ಲಿಯೂ ಸುತ್ತಲೂ ಮೇಲೆಯೂ ಕೆಳಗೂ ತನ್ನ ಇಷ್ಟ ಬಂದಂತೆ ಸಂಚರಿಸುತ್ತಿದೆ. ಗಾಳಿಯೂ ಸಹ ಈ ಭ್ರಮರದೊಡನೆ ವೇಗದಿಂದ ಸಂಚರಿಸುತ್ತಾ ಈ ಭ್ರಮರದ ಸಂಚಾರವನ್ನು ಹೆಚ್ಚಿಸುತ್ತಿದೆ. ಈ ಭ್ರಮರವು ಸಂಚರಿಸುತ್ತಿರುವ ವೇಗವನ್ನು ನೋಡಿದರೆ ಮಹಾವೀರರಿಗೆ ಗರಡಿವಿದ್ಯೆಯನ್ನು ಅಭ್ಯಾಸ ಮಾಡಿಸುವುದಕ್ಕೋಸ್ಕರ ಸಂಚರಿಸುತ್ತಿರುವ ಗುರುವಿನಂತೆ ತಿಳಿಯುತ್ತದೆ.

" ಎಲೈ ಸಖಿಯೇ, ಈ ಉದ್ಧವನು ನಮ್ಮ ಮನೆಗಳಿಗೆ ಬಂದು ನಮ್ಮನ್ನು ಬಹಳ ಗೋಳಾಡಿಸುತ್ತಿರುವನು. ಶ್ರೀಕೃಷ್ಣದೇವನು ಹೇಳಿ ಕಳುಹಿಸಿದ ಮಾತುಗಳನ್ನು ನಮಗೆ ಹೇಳಬೇಕೆಂದು ನಮ್ಮ ಹಿಂದೆ ತಿರುಗಾಡುತ್ತಿರುವನು. ನಮಗೆ ಅಭಿಮುಖವಾಗಿಯೂ ಪಕ್ಕಗಳಲ್ಲಿಯೂ ಸುತ್ತಲೂ ಮಹಡಿಗೆ ಹೋದರೆ ಅಲ್ಲಿಯೂ, ಕೆಳಗೆ ಬಂದರೆ ಅಲ್ಲಿಯೂ ಬರುತ್ತಿರುವನು. ಇವನೇ ದ್ರೋಣಾಚಾರ್ಯ ಎಂಬ ರೂಪದಿಂದ ಭೂಮಿಯಲ್ಲಿ ಹುಟ್ಟಿರುವುದಾಗಿಯೂ ದ್ರೋಣಾಚಾರ್ಯರೂಪದಿಂದಲೂ ಉದ್ಧವ ಎಂಬ ರೂಪದಿಂದಲೂ ಹುಟ್ಟಿರುವಾಗ ಇವನಲ್ಲಿ ವಾಯುದೇವನ ವಿಶೇಷ ಸನ್ನಿಧಾನವಿರುವುದಾಗಿಯೂ ಆ ವಿಶೇಷಸನ್ನಿಧಾನದ ಬಲದಿಂದಲೇ ಶ್ರೀಕೃಷ್ಣದೇವನ ವಿಶೇಷಾನುಗ್ರಹಕ್ಕೆ ಪಾತ್ರನಾಗಿರುವುದಾಗಿಯೂ ಆ ಅನುಗ್ರಹದಿಂದಲೇ ವಿಶೇಷ ಶಕ್ತಿಯಿಂದ ಎಲ್ಲರನ್ನೂ ವಶಪಡಿಸಿಕೊಳ್ಳುವ ಬಲ ಯುಳ್ಳವನಾಗಿರುವುದಾಗಿಯೂ ಅರ್ಜುನ ಮುಂತಾದ ಮಹಾವೀರರಿಗೆ ಶಸ್ತ್ರಾಸ್ತ್ರ ವಿದ್ಯೆಗಳನ್ನು ಉಪದೇಶಿಸುತ್ತಾ ವಿಶೇಷ ಕೀರ್ತಿಯನ್ನು ಸಂಪಾದಿಸುತ್ತಿರುವುದಾಗಿಯೂ ನಾವು ಕೇಳಿರುವೆವು. ಇಂತಹ ಉದ್ಧವನು ಶ್ರೀಕೃಷ್ಣದೇವನ ಸಂದೇಶವನ್ನು ನಮಗೆ ತಿಳಿಸಿ ನಮ್ಮನ್ನು ವಶಪಡಿಸಿಕೊಳ್ಳುವುದರಲ್ಲಿ ಸಂಶಯವಿಲ್ಲ. ನಾವು ಅವನ ಕೈಗೆಸಿಗಬಾರದು. ಶ್ರೀಕೃಷ್ಣದೇವನ ಚಮತ್ಕಾರವಾದ ಮಾತುಗಳನ್ನು ಕೇಳಿ ಮೋಸಹೋಗಬಾರದು ಏನು ಮಾಡೋಣ? ಯೋಚಿಸಿರಿ."

" ಎಲೈ ಭ್ರಮರವೇ, ನೀನು ಈಗ ಅತ್ಯಂತ ಮಧುರವಾಗಿ ಹಾಡುತ್ತಿದ್ದೀ. ಈ ಮಧುರವಾದ ಶಬ್ದವನ್ನು ಕೇಳಿದ ದೇವರಾಜನಾದ ದೇವೇಂದ್ರನೂ ಸಹ ನಿನಗೆ ವಶನಾಗಿ ನಿನ್ನನ್ನು ಖಂಡಿತವಾಗಿಯೂ ಗೌರವಿಸುವುದರಲಿ ಸಂಶಯವಿಲ್ಲ. ಶಿಷ್ಯನಂತೆ ನಿನಗೆ ವಶನಾಗುವನು. ನೀನು ಹೇಗೆ ನಿನ್ನ ಪತ್ನಿಯಿಂದ ಸಹಿತನಾಗಿ ಕುಣಿಯುತ್ತಿರುವಿಯೋ ಆದರಂತೆ ಅವನೂ ತನ್ನ ಪತ್ನಿಯಾದ ಶಚೀದೇವಿಯೊಡನೆ ವಿಹರಿಸುವನು. ದೇವೇಂದ್ರನಲ್ಲಿಗೆ ಹೋಗು. ನಮ್ಮ ಮುಂದೆ ನೀನು ಕುಣಿದದ್ದರಿಂದ ಯಾವ ಲಾಭವೂ ಇಲ್ಲ. ನಾವು ಶ್ರೀಕೃಷ್ಣದೇವನ ವಿರಹದಿಂದ ತಲೆಗಳಲ್ಲಿಯೂ

ಕಿವಿಗಳಲ್ಲಿಯೂ ಪುಷ್ಪಗಳನ್ನು ಧರಿಸುತ್ತಿಲ್ಲ. ಇಷ್ಟು ಕುಣಿದದ್ದಕ್ಕೆ ಒಂದು ತೊಟ್ಟು ಮಧುಪಾನವೂ ಸಿಗಲಾರದು. ವ್ಯರ್ಥವಾಗಿ ಕುಣಿಯಬೇಡ."

"ಎಲೈ ಉದ್ಧವನೇ, ನೀನು ಬೃಹಸ್ಪತ್ಯಾಚಾರ್ಯನ ಅವತಾರವೆಂದು ನಾವು ಹೇಳಿದೆವು. ಆ ಬೃಹಸ್ಪತ್ಯಾಚಾರ್ಯನೂ ದೇವೇಂದ್ರನ ಪತ್ನಿಯಾಗಿರುವ ಶಚೀದೇವಿಯೂ ಸಮಾನರೆಂದು ನಾವು ಕೇಳಿರುವೆವು. ಶಚೀದೇವಿಯ ಪತಿಯಾಗಿರುವ ದೇನೀಂದ್ರನು ಬೃಹಸ್ಪತ್ಯಾಚಾರ್ಯರಿಗಿಂತ ಉತ್ತಮನೆಂಬ ವಿಷಯದಲ್ಲಿ ಸಂಶಯವಿಲ್ಲ. ಬೃಹಸ್ಪತ್ಯಾಚಾರ್ಯರಿಗಿಂತ ಉತ್ತಮನಾದ ದೇವೇಂದ್ರನು ಬೃಹಸ್ಪತ್ಯಾಚಾರ್ಯನ ಅವತಾರವಾಗಿರುವ ನಿನಗಿಂತಲೂ ಉತ್ತಮನೆಂಬ ವಿಷಯದಲ್ಲಿಯೂ ವಿವಾದವಿಲ್ಲ. ನಿನಗಿಂತಲೂ ಉತ್ತಮನಾದ ದೇವೇಂದ್ರನೂ ಸಹ ನಿನ್ನ ಮಾತುಗಳನ್ನು ಕೇಳಿದರೆ ಶಿಷ್ಯನಂತೆ ನಿನಗೆ ವಶನಾಗುವುದರಲ್ಲಿ ಸಂಶಯವಿಲ್ಲ. ನಿನಗೆ ಸಮಾನಳಾಗಿರುವ ಶಚೀದೇವಿಯಿಂದ ಸಹಿತನಾಗಿ ನಿನ್ನನ್ನು ಗೌರವಿಸುವುದರಲ್ಲಿಯೂ ಸಂಶಯವಿಲ್ಲ. ಆದ್ದರಿಂದ ಇಲ್ಲಿಂದ ಹೊರಡು. ದೇವಲೋಕಕ್ಕೆ ಹೋಗು. ದೇವೇಂದ್ರನು ಮಾಡುವ ಮರ್ಯಾದೆಗಳೆಲ್ಲವನ್ನೂ ಸ್ವೀಕರಿಸು.

" ಓ ಉದ್ಧವಾ, ನಾವೂ ಒಂದು ಕಾಲದಲ್ಲಿ ಅಪ್ಸರಃ ಸ್ತ್ರೀಯರಾಗಿದ್ದೆವು. ಆಗ ದೇವೇಂದ್ರನು ನಮ್ಮಲ್ಲಿ ವಿಶೇಷವಾದ ಪ್ರೀತಿಯನ್ನಿಟ್ಟಿದ್ದನು. ಆಗ ನೀನು ಬಂದಿದ್ದರೆ ನಾವೆಲ್ಲರೂ ದೇವೇಂದ್ರನಲ್ಲಿ ಹೇಳಿ ನಿನಗೆ ವಿಶೇಷವಾದ ಗೌರವವನ್ನು ಮಾಡಿಸುತ್ತಿದ್ದೆವು. ಆದರೆ ಈಗ ನಾವು ದೇವಲೋಕದಲ್ಲಿಲ್ಲ. ಆದ್ದರಿಂದ ದೇವೇಂದ್ರನ ಮೂಲಕವಾಗಿ ನಿನಗೆ ಮರ್ಯಾದೆಯನ್ನು ಮಾಡಿಸುವುದಕ್ಕೆ ನಾವೆಲ್ಲರೂ ಅಶಕ್ತರಾಗಿರುವೆವು. ಈಗ ನಾವು ನಂಬಿದ ಶ್ರೀಕೃಷ್ಣದೇವನೂ ನಮ್ಮ ಗಂಡನಲ್ಲ. ಅವನ ಮಿಂಡತಿಯರಾಗಿದ್ದರೂ ಅವನ ಸ್ನೇಹವನ್ನು ಸಂಪಾದಿಸಿದವರಲ್ಲ. ಆದ್ದರಿಂದಲೇ ಅವನು ನಮ್ಮೆಲ್ಲರನ್ನೂ ಮರೆತು ಭೂಮಂಡಲಕ್ಕೆ ಅಧಿಪತಿಯಾಗಿ ಮಥುರಾಪಟ್ಟಣದ ಸ್ತ್ರೀಯರೊಡನೆ ವಿಹರಿಸುತ್ತಿರುವನು. ಈ ವಿಷಯವನ್ನು ತಿಳಿದ ನಾವೆಲ್ಲರೂ ತುಂಬಾ ದುಃಖಿತರಾಗಿರುವೆವು. ನಮ್ಮಿಂದ ನಿನಗೆ ಯಾವ ವಿಧವಾದ ಸಹಾಯವೂ ಸಿಗಲಾರದು. ಆದ್ದರಿಂದ ನೀನು ಹೊರಡು."

" ಎಲೈ ಭ್ರಮರವೇ, ನೀನು ಮಾಧವ ಅಂದರೆ ವಸಂತಋತುವು ಬಂದಿರುವಾಗ ತುಂಬಾ ಸಂತೋಷದಿಂದ ಆಕಾಶದಲ್ಲಿ ಹಾರುತ್ತಿರುವಿ. ಆದ್ದರಿಂದ ವಸಂತನ ಪಕ್ಷಪಾತಿಯೆಂದು ನಿನ್ನನ್ನು ಹೇಳಬಹುದು. ಆ ವಸಂತಕಾಲದಲ್ಲಿ ವಿಶೇಷವಾಗಿ ಬೆಳೆಯುತ್ತಿರುವ ಪುಷ್ಪಗಳನ್ನೇ ಧನುಸ್ಸಾಗಿ ಮಾಡಿಕೊಂಡೂ ನಿನ್ನನ್ನೇ ಆ ಧನುಸ್ಸಿನಲ್ಲಿ ಕಟ್ಟುವ ಹಗ್ಗವಾಗಿ ಏರ್ಪಡಿಸಿಕೊಂಡೂ ಎಲ್ಲಾ ತರುಣರನ್ನೂ ವಸಂತನ ಮಿತ್ರನಾದ ಮನ್ಮಥನು ಜಯಿಸುತ್ತಿರುವುದಾಗಿ " ಧನುಃ ಪೌಷ್ಪಂ ಮೌರ್ವೀ ಮಧುಕರಮಯೀ" ಎಂದು ಮಹಾಕವಿಗಳು ಹೊಗುಳುತ್ತಿರುವರು. ಆದ್ದರಿಂದ ವಸಂತನ ಮಿತ್ರನಾದ ಮನ್ಮಥನ ಪುಷ್ಪಬಾಣದಲ್ಲಿ ನೀನು ಹಗ್ಗವಾಗಿರುವಿ. ವಸಂತಕಾಲವು ಬಂದಕೂಡಲೇ ಎಲ್ಲಾ ಪಕ್ಷಿಗಳೂ ನಾನಾವಿಧವಾದ ಧ್ವನಿಗಳನ್ನು ಮಾಡುತ್ತಾ ಸಂತೋಷದಿಂದ ಆಕಾಶದಲ್ಲಿ ಸಂಚರಿಸುತ್ತಿರುವವು. ಇದೇ ವಸಂತಕಾಲದಲ್ಲಿಯೇ ಸ್ತ್ರೀಯರೂ ಪುರುಷರೂ ಪಶುಗಳೂ ಪಕ್ಷಿ ಮುಂತಾದ ಎಲ್ಲಾ ಪ್ರಾಣಿಗಳೂ ನಾನಾ ವಿಧವಾದ ರಸಗಳನ್ನು ಅನುಭವಿಸುತ್ತಾ ಲೀಲೆಗಳನ್ನು ಮಾಡುತ್ತಿರುವರು. ನಿನ್ನ ಮಿತ್ರನಾದ ಅಂತಹ ವಸಂತಕಾಲವನ್ನು ಯಾವಾಗಲೂ ನಮ್ಮ ಜೊತೆಯಲ್ಲಿಯೇ ಇರುವಂತೆ ಮಾಡು. ಉದ್ಧವನು ನಮ್ಮ ಕಷ್ಟಗಳನ್ನೆಲ್ಲಾ ನೋಡಿ ಶ್ರೀಕೃಷ್ಣದೇವನನ್ನು ಕರೆದುಕೊಂಡು ಬರುವುದರಲ್ಲಿ ಸಂಶಯವಿಲ್ಲ. ಅವನು ಕರುಣಾಮಯನಲ್ಲವೇ? ಶ್ರೀಕೃಷ್ಣದೇವನು ಬಂದರೆ ಅವನೊಡನೆ ವಸಂತಋತುವಿನಲ್ಲಿ ವಿಹರಿಸುವೆವು."

" ಎಲೈ ಉದ್ಧವನೇ, ನೀನು "ಮಧುಕರ" ಅಂದರೆ ಎಲ್ಲರಿಗೂ ಜೇನಿನಂತೆ ಸುಖವನ್ನು ಕೊಡುತ್ತಿರುವಿ. ಮಧು ಎಂಬ ಯಾದವನ ವಂಶದಲ್ಲಿ ಹುಟ್ಟಿ ಆ ವಂಶವನ್ನೂ ವೃದ್ಧಿಗೊಳಿಸಿರುವಿ. "ಮಾಧವ" ಅಂದರೆ ಶ್ರೀಕೃಷ್ಣದೇವನಲ್ಲಿ ವಿಶೇಷವಾದ ಅಭಿಮಾನವುಳ್ಳವನಾಗಿರುವಿ. ಇದೆಲ್ಲವನ್ನೂ ನಾವು ತಿಳಿದಿರುವೆವು. ಹೀಗೆ ತಿಳಿಯಲು ಕಾರಣವನ್ನು ಹೇಳುವೆವು. ದೇವೇಂದ್ರನು ಅರ್ಜುನನಾಗಿ ಹುಟ್ಟಿರುವನು. ಸೂರ್ಯನು ಕರ್ಣನಾಗಿ ಹುಟ್ಟಿರುವನು. ಅರ್ಜುನನು ಶ್ರೀಕೃಷ್ಣದೇವನನ್ನು ಆಶ್ರಯಿಸುವನು. ಅದೇ ಅರ್ಜುನನು ಗಾಂಡೀವ ಎಂಬ ಧನುಸ್ಸಿನಸ ಹಾಯದಿಂದ ಕರ್ಣನನ್ನು ಸಂಹರಿಸುವನು. ಅಂತಹ ಅರ್ಜುನನಿಗೆ ಪಂಚಪ್ರಾಣಗಳಂತೆ ನೀನು ಅತ್ಯಂತ ಪ್ರಿಯನಾಗಿರುವಿ. ಆದ್ದರಿಂದಲೇ ದ್ರೋಣಾಚಾರ್ಯ ಎಂಬ ಎರಡನೆಯ ರೂಪವನ್ನು ಸ್ವೀಕರಿಸಿ ಕೃಷ್ಣಭಕ್ತನಾದ ಅರ್ಜುನನಿಗೆ ಧನುರ್ವಿದ್ಯೆಯನ್ನು ಎಲ್ಲರಿಗಿಂತಲೂ ಅಧಿಕವಾಗಿ ತಿಳಿಸಿರುವಿ. ದ್ರೋಣ ಎಂಬ ನಿನ್ನ ರೂಪಾಂತರದ ಪ್ರಿಯಶಿಷ್ಯನಾಗಿರುವ ಅರ್ಜುನನು ಶ್ರೀಕೃಷ್ಣದೇವನಿಗೆ ತುಂಬಾ ಪ್ರಿಯನಾಗಿರುವುದರಿಂದ ನೀನೂ ಶ್ರೀಕೃಷ್ಣದೇವನಿಗೂ ತುಂಬಾ ಪ್ರಿಯನೆಂದು ನಾವು ನಂಬುವೆವು. ಆದ್ದರಿಂದ ನಿನ್ನಲ್ಲಿ ಒಂದು ಪ್ರಾರ್ಥನೆಯನ್ನು ಮಾಡುವೆವು. ಶ್ರೀಕೃಷ್ಣದೇವನು ಭಕ್ತಪರಾಧೀನನು. ಅವನಲ್ಲಿ ಭಕ್ತರಾದ ನಮ್ಮ ಕಷ್ಟಗಳನ್ನೆಲ್ಲಾ ತಿಳಿಸು. ಅವನನ್ನು ಇಲ್ಲಿಗೆ ಕರೆದುಕೊಂಡು ಬಾ. ನಮ್ಮ ಜೊತೆಯಲ್ಲಿಯೇ ಇರುವಂತೆ ಮಾಡು. ನಾನಾವಿಧವಾದ ರಸಗಳಿಂದ ಯುಕ್ತವಾಗಿರುವ ರಾಸಕ್ರೀಡೆ ಮುಂತಾದ ಲೀಲೆಗಳಿಂದ ನಮ್ಮನ್ನು ಸಂತೋಷಪಡಿಸಲಿ."

ಗೋಪಿಕಾಸ್ತ್ರೀಯರೆಲ್ಲರೂ ಆಕಾಶದಲ್ಲಿ ಸಂಚರಿಸುತ್ತಿರುವ ಒಂದು ಭ್ರಮರವನ್ನು ನೋಡಿ ಅದನ್ನು ಉದ್ದೇಶಿಸಿ ಮಾತಾಡಿದಂತೆ ಮಾತಾಡುತ್ತಾ ಉದ್ಧವನಲ್ಲಿ ತಮಗಾಗಿರುವ ಅಪಾರವಾದ ದುಃಖಗಳನ್ನು ತಿಳಿಸುತ್ತಾ ಕೊನೆಗೆ ತಮ್ಮ ಪ್ರಾರ್ಥನೆಯನ್ನೂ ತಿಳಿಸಿದರು.

ಉದ್ಧವನು ಗೋಪಿಕಾಸ್ತ್ರೀಯರೆಲ್ಲರೂ ಶ್ರೀಕೃಷ್ಣದೇವನಲ್ಲಿಟ್ಟಿರುವ ಭಕ್ತ್ಯುದ್ರೇಕದಿಂದ ತಮ್ಮ ದೇಹಾದಿಗಳನ್ನೆಲ್ಲವನ್ನೂ ಮರೆತು " ಹಸತ್ಯಥೋ ರೋದಿತಿ ರೌತಿ ಗಾಯತ್ಯುನ್ಮಾದವನ್ನೃತ್ಯತಿ ಲೋಕಬಾಹ್ಯಃ" ಎಂಬಂತೆ ಹುಚ್ಚಿಯರಂತೆ ನಗುತ್ತಲೂ ಅಳುತ್ತಲೂ ಕಣ್ಣೀರುಗಳನ್ನು ಸುರಿಸುತ್ತಲೂ ಹಾಡುತ್ತಲೂ ಕುಣಿಯುತ್ತಲೂ ಇರುವುದನ್ನು ನೋಡಿದನು. ಅವರೇ ಧನ್ಯರೆಂದು ಹೊಗಳಿದನು. ಶ್ರೀಕೃಷ್ಣದೇವನು ಹೇಳಿಕಳುಹಿಸಿರುವ ಮಾತುಗಳನ್ನು ನಂದನಲ್ಲಿಯೂ ಯಶೋದೆಯಲ್ಲಿಯೂ ಅವರಲ್ಲಿಯೂ ಹೇಳಿದನು. ಈ ಮಾತುಗಳನ್ನು ಕೇಳಿದ ಕೂಡಲೇ ಎಲ್ಲಾ ಸ್ತ್ರೀಯರೂ ಶ್ರೀಕೃಷ್ಣದೇವನಿಗೂ ತಮಗೂ ವಿಯೋಗವು ಇಲ್ಲವೇ ಇಲ್ಲವೆಂದೂ ತಮ್ಮ ಅನುಗ್ರಹಕ್ಕಾಗಿಯೇ ಅದೃಶ್ಯನಾಗಿರುವನೆಂದೂ ನಂಬಿದರು. ಹಿಂದೆ ರಾಸಕ್ರಿಡಾಕಾಲದಲ್ಲಿ ತಮಗೆ ಗರ್ವವು ಬಂದಾಗ ಅದೃಶ್ಯನಾದುದನ್ನೂ, ಗರ್ವವು ಅಡಗಿ ಭಕ್ತಿಪರವಶತೆಯಿಂದ ಗೋಪಿಗೀತೆಂದು ಹಾಡಿದಾಗ ಪ್ರತ್ಯಕ್ಷನಾದುದನ್ನೂ ಆ ಸಮಯದಲ್ಲಿ ತಾವೆಲ್ಲರೂ ಶ್ರೀಕೃಷ್ಣದೇವನು ಅದೃಶ್ಯನಾದುದನ್ನು ಕುರಿತು ಆಕ್ಷೇಪಿಸಿದಾಗ ಕಲ್ಪವೃಕ್ಷದಂತೆ ತಾನು ಅವರವರ ಮನೋಭಾವಗಳನ್ನರಿತು ಫಲವನ್ನು ಕೊಡುವವನೆಂದು ಹೇಳಿದುದನ್ನೂ ಸ್ಮರಿಸಿದರು. ಶ್ರೀಕೃಷ್ಣದೇವನ ಮೇಲಿರುವ ಅಸಮಾಧಾನವನ್ನೆಲ್ಲಾ ತ್ಯಜಿಸಿದರು. ಭಕ್ತಿಯಿಂದ ಅವನನ್ನೇ ಸ್ಮರಿಸಿದರು. ಉದ್ಧವನು ಎಲ್ಲರನ್ನೂ ಸಮಾಧಾನಪಡಿಸಿದನು ಮಥುರಾಪಟ್ಟಣಕ್ಕೆ ಹಿಂದಿರುಗಿದನು.

ಕಿವಿಗಳಲ್ಲಿಯೂ ಪುಷ್ಪಗಳನ್ನು ಧರಿಸುತ್ತಿಲ್ಲ. ಇಷ್ಟು ಕುಣಿದದ್ದಕ್ಕೆ ಒಂದು ತೊಟ್ಟು ಮಧುಪಾನವೂ ಸಿಗಲಾರದು. ವ್ಯರ್ಥವಾಗಿ ಕುಣಿಯಬೇಡ.''

''ಎಲೈ ಉದ್ಧವನೇ, ನೀನು ಬೃಹಸ್ಪತ್ಯಾಚಾರ್ಯನ ಅವತಾರವೆಂದು ನಾವು ಹೇಳಿದೆವು. ಆ ಬೃಹಸ್ಪತ್ಯಾಚಾರ್ಯನೂ ದೇವೇಂದ್ರನ ಪತ್ನಿಯಾಗಿರುವ ಶಚೀದೇವಿಯೂ ಸಮಾನರೆಂದು ನಾವು ಕೇಳಿರುವೆವು. ಶಚೀದೇವಿಯ ಪತಿಯಾಗಿರುವ ದೇನೇಂದ್ರನು ಬೃಹಸ್ಪತ್ಯಾಚಾರ್ಯರಿಗಿಂತ ಉತ್ತಮನೆಂಬ ವಿಷಯದಲ್ಲಿ ಸಂಶಯವಿಲ್ಲ. ಬೃಹಸ್ಪತ್ಯಾಚಾರ್ಯರಿಗಿಂತ ಉತ್ತಮನಾದ ದೇವೇಂದ್ರನು ಬೃಹಸ್ಪತ್ಯಾಚಾರ್ಯನ ಅವತಾರವಾಗಿರುವ ನಿನಗಿಂತಲೂ ಉತ್ತಮನೆಂಬ ವಿಷಯದಲ್ಲಿಯೂ ವಿವಾದವಿಲ್ಲ. ನಿನಗಿಂತಲೂ ಉತ್ತಮನಾದ ದೇವೇಂದ್ರನೂ ಸಹ ನಿನ್ನ ಮಾತುಗಳನ್ನು ಕೇಳಿದರೆ ಶಿಷ್ಯನಂತೆ ನಿನಗೆ ವಶನಾಗುವುದರಲ್ಲಿ ಸಂಶಯವಿಲ್ಲ. ನಿನಗೆ ಸಮಾನಳಾಗಿರುವ ಶಚೀದೇವಿಯಿಂದ ಸಹಿತನಾಗಿ ನಿನ್ನನ್ನು ಗೌರವಿಸುವುದರಲ್ಲಿಯೂ ಸಂಶಯವಿಲ್ಲ. ಆದ್ದರಿಂದ ಇಲ್ಲಿಂದ ಹೊರಡು. ದೇವಲೋಕಕ್ಕೆ ಹೋಗು. ದೇವೇಂದ್ರನು ಮಾಡುವ ಮರ್ಯಾದೆಗಳೆಲ್ಲವನ್ನೂ ಸ್ವೀಕರಿಸು.

" ಓ ಉದ್ಧವಾ, ನಾವೂ ಒಂದು ಕಾಲದಲ್ಲಿ ಅಪ್ಸರಃ ಸ್ತ್ರೀಯರಾಗಿದ್ದೆವು. ಆಗ ದೇವೇಂದ್ರನು ನಮ್ಮಲ್ಲಿ ವಿಶೇಷವಾದ ಪ್ರೀತಿಯನ್ನಿಟ್ಟಿದ್ದನು. ಆಗ ನೀನು ಬಂದಿದ್ದರೆ ನಾವೆಲ್ಲರೂ ದೇವೇಂದ್ರನಲ್ಲಿ ಹೇಳಿ ನಿನಗೆ ವಿಶೇಷವಾದ ಗೌರವವನ್ನು ಮಾಡಿಸುತ್ತಿದ್ದೆವು. ಆದರೆ ಈಗ ನಾವು ದೇವಲೋಕದಲ್ಲಿಲ್ಲ. ಆದ್ದರಿಂದ ದೇವೇಂದ್ರನ ಮೂಲಕವಾಗಿ ನಿನಗೆ ಮರ್ಯಾದೆಯನ್ನು ಮಾಡಿಸುವುದಕ್ಕೆ ನಾವೆಲ್ಲರೂ ಅಶಕ್ತರಾಗಿರುವೆವು. ಈಗ ನಾವು ನಂಬಿದ ಶ್ರೀಕೃಷ್ಣದೇವನೂ ನಮ್ಮ ಗಂಡನಲ್ಲ. ಅವನ ಮಿಂಡತಿಯರಾಗಿದ್ದರೂ ಅವನ ಸ್ನೇಹವನ್ನು ಸಂಪಾದಿಸಿದವರಲ್ಲ. ಆದ್ದರಿಂದಲೇ ಅವನು ನಮ್ಮೆಲ್ಲರನ್ನೂ ಮರೆತು ಭೂಮಂಡಲಕ್ಕೆ ಅಧಿಪತಿಯಾಗಿ ಮಥುರಾಪಟ್ಟಣದ ಸ್ತ್ರೀಯರೊಡನೆ ವಿಹರಿಸುತ್ತಿರುವನು. ಈ ವಿಷಯವನ್ನು ತಿಳಿದ ನಾವೆಲ್ಲರೂ ತುಂಬಾ ದುಃಖಿತರಾಗಿರುವೆವು. ನಮ್ಮಿಂದ ನಿನಗೆ ಯಾವ ವಿಧವಾದ ಸಹಾಯವೂ ಸಿಗಲಾರದು. ಆದ್ದರಿಂದ ನೀನು ಹೊರಡು.''

" ಎಲೈ ಭ್ರಮರವೇ, ನೀನು ಮಾಧವ ಅಂದರೆ ವಸಂತಋತುವು ಬಂದಿರುವಾಗ ತುಂಬಾ ಸಂತೋಷದಿಂದ ಆಕಾಶದಲ್ಲಿ ಹಾರುತ್ತಿರುವಿ. ಆದ್ದರಿಂದ ವಸಂತನ ಪಕ್ಷಪಾತಿಯೆಂದು ನಿನ್ನನ್ನು ಹೇಳಬಹುದು. ಆ ವಸಂತಕಾಲದಲ್ಲಿ ವಿಶೇಷವಾಗಿ ಬೆಳೆಯುತ್ತಿರುವ ಪುಷ್ಪಗಳನ್ನೇ ಧನುಸ್ಸಾಗಿ ಮಾಡಿಕೊಂಡೂ ನಿನ್ನನ್ನೇ ಆ ಧನುಸ್ಸಿನಲ್ಲಿ ಕಟ್ಟುವ ಹಗ್ಗವಾಗಿ ಏರ್ಪಡಿಸಿಕೊಂಡೂ ಎಲ್ಲಾ ತರುಣರನ್ನೂ ವಸಂತನ ಮಿತ್ರನಾದ ಮನ್ಮಥನು ಜಯಿಸುತ್ತಿರುವುದಾಗಿ " ಧನುಃ ಪೌಷ್ಪಂ ಮೌರ್ವೀ ಮಧುಕರಮಯೀ'' ಎಂದು ಮಹಾಕವಿಗಳು ಹೊಗುಳುತ್ತಿರುವರು. ಆದ್ದರಿಂದ ವಸಂತನ ಮಿತ್ರನಾದ ಮನ್ಮಥನ ಪುಷ್ಪಬಾಣದಲ್ಲಿ ನೀನು ಹಗ್ಗವಾಗಿರುವಿ. ವಸಂತಕಾಲವು ಬಂದಕೂಡಲೇ ಎಲ್ಲಾ ಪಕ್ಷಿಗಳೂ ನಾನಾವಿಧವಾದ ಧ್ವನಿಗಳನ್ನು ಮಾಡುತ್ತಾ ಸಂತೋಷದಿಂದ ಆಕಾಶದಲ್ಲಿ ಸಂಚರಿಸುತ್ತಿರುವವು. ಇದೇ ವಸಂತಕಾಲದಲ್ಲಿಯೇ ಸ್ತ್ರೀಯರೂ ಪುರುಷರೂ ಪಶುಗಳೂ ಪಕ್ಷಿ ಮುಂತಾದ ಎಲ್ಲಾ ಪ್ರಾಣಿಗಳೂ ನಾನಾ ವಿಧವಾದ ರಸಗಳನ್ನು ಅನುಭವಿಸುತ್ತಾ ಲೀಲೆಗಳನ್ನು ಮಾಡುತ್ತಿರುವರು. ನಿನ್ನ ಮಿತ್ರನಾದ ಅಂತಹ ವಸಂತಕಾಲವನ್ನು ಯಾವಾಗಲೂ ನಮ್ಮ ಜೊತೆಯಲ್ಲಿಯೇ ಇರುವಂತೆ ಮಾಡು. ಉದ್ಧವನು ನಮ್ಮ ಕಷ್ಟಗಳನ್ನೆಲ್ಲಾ ನೋಡಿ ಶ್ರೀಕೃಷ್ಣದೇವನನ್ನು ಕರೆದುಕೊಂಡು ಬರುವುದರಲ್ಲಿ ಸಂಶಯವಿಲ್ಲ. ಅವನು ಕರುಣಾಮಯನಲ್ಲವೇ? ಶ್ರೀಕೃಷ್ಣದೇವನು ಬಂದರೆ ಅವನೊಡನೆ ವಸಂತಋತುವಿನಲ್ಲಿ ವಿಹರಿಸುವೆವು.''

" ಎಲೈ ಉದ್ಧವನೇ, ನೀನು "ಮಧುಕರ" ಅಂದರೆ ಎಲ್ಲರಿಗೂ ಜೇನಿನಂತೆ ಸುಖವನ್ನು ಕೊಡುತ್ತಿರುವಿ. ಮಧು ಎಂಬ ಯಾದವನ ವಂಶದಲ್ಲಿ ಹುಟ್ಟಿ ಆ ವಂಶವನ್ನೂ ವೃದ್ಧಿಗೊಳಿಸಿರುವಿ. "ಮಾಧವ" ಅಂದರೆ ಶ್ರೀಕೃಷ್ಣದೇವನಲ್ಲಿ ವಿಶೇಷವಾದ ಅಭಿಮಾನವುಳ್ಳವನಾಗಿರುವಿ. ಇದೆಲ್ಲವನ್ನೂ ನಾವು ತಿಳಿದಿರುವೆವು. ಹೀಗೆ ತಿಳಿಯಲು ಕಾರಣವನ್ನು ಹೇಳುವೆವು. ದೇವೇಂದ್ರನು ಅರ್ಜುನನಾಗಿ ಹುಟ್ಟಿರುವನು. ಸೂರ್ಯನು ಕರ್ಣನಾಗಿ ಹುಟ್ಟಿರುವನು. ಅರ್ಜುನನು ಶ್ರೀಕೃಷ್ಣದೇವನನ್ನು ಆಶ್ರಯಿಸುವನು. ಅದೇ ಅರ್ಜುನನು ಗಾಂಡೀವ ಎಂಬ ಧನುಸ್ಸಿನಸಹಾಯದಿಂದ ಕರ್ಣನನ್ನು ಸಂಹರಿಸುವನು. ಅಂತಹ ಅರ್ಜುನನಿಗೆ ಪಂಚಪ್ರಾಣಗಳಂತೆ ನೀನು ಅತ್ಯಂತ ಪ್ರಿಯನಾಗಿರುವಿ. ಆದ್ದರಿಂದಲೇ ದ್ರೋಣಾಚಾರ್ಯ ಎಂಬ ಎರಡನೆಯ ರೂಪವನ್ನು ಸ್ವೀಕರಿಸಿ ಕೃಷ್ಣಭಕ್ತನಾದ ಅರ್ಜುನನಿಗೆ ಧನುರ್ವಿದ್ಯೆಯನ್ನು ಎಲ್ಲರಿಗಿಂತಲೂ ಅಧಿಕವಾಗಿ ತಿಳಿಸಿರುವಿ. ದ್ರೋಣ ಎಂಬ ನಿನ್ನ ರೂಪಾಂತರದ ಪ್ರಿಯಶಿಷ್ಯನಾಗಿರುವ ಅರ್ಜುನನು ಶ್ರೀಕೃಷ್ಣದೇವನಿಗೆ ತುಂಬಾ ಪ್ರಿಯನಾಗಿರುವುದರಿಂದ ನೀನೂ ಶ್ರೀಕೃಷ್ಣದೇವನಿಗೂ ತುಂಬಾ ಪ್ರಿಯನೆಂದು ನಾವು ನಂಬುವೆವು. ಆದ್ದರಿಂದ ನಿನ್ನಲ್ಲಿ ಒಂದು ಪ್ರಾರ್ಥನೆಯನ್ನು ಮಾಡುವೆವು. ಶ್ರೀಕೃಷ್ಣದೇವನು ಭಕ್ತಪರಾಧೀನನು. ಅವನಲ್ಲಿ ಭಕ್ತರಾದ ನಮ್ಮ ಕಷ್ಟಗಳನ್ನೆಲ್ಲಾ ತಿಳಿಸು. ಅವನನ್ನು ಇಲ್ಲಿಗೆ ಕರೆದುಕೊಂಡು ಬಾ. ನಮ್ಮ ಜೊತೆಯಲ್ಲಿಯೇ ಇರುವಂತೆ ಮಾಡು. ನಾನಾವಿಧವಾದ ರಸಗಳಿಂದ ಯುಕ್ತವಾಗಿರುವ ರಾಸಕ್ರೀಡೆ ಮುಂತಾದ ಲೀಲೆಗಳಿಂದ ನಮ್ಮನ್ನು ಸಂತೋಷಪಡಿಸಲಿ."

ಗೋಪಿಕಾಸ್ತ್ರೀಯರೆಲ್ಲರೂ ಆಕಾಶದಲ್ಲಿ ಸಂಚರಿಸುತ್ತಿರುವ ಒಂದು ಭ್ರಮರವನ್ನು ನೋಡಿ ಅದನ್ನು ಉದ್ದೇಶಿಸಿ ಮಾತಾಡಿದಂತೆ ಮಾತಾಡುತ್ತಾ ಉದ್ಧವನಲ್ಲಿ ತಮಗಾಗಿರುವ ಅಪಾರವಾದ ದುಃಖಗಳನ್ನು ತಿಳಿಸುತ್ತಾ ಕೊನೆಗೆ ತಮ್ಮ ಪ್ರಾರ್ಥನೆಯನ್ನೂ ತಿಳಿಸಿದರು.

ಉದ್ಧವನು ಗೋಪಿಕಾಸ್ತ್ರೀಯರೆಲ್ಲರೂ ಶ್ರೀಕೃಷ್ಣದೇವನಲ್ಲಿಟ್ಟಿರುವ ಭಕ್ತ್ಯುದ್ರೇಕದಿಂದ ತಮ್ಮ ದೇಹಾದಿಗಳನ್ನೆಲ್ಲವನ್ನೂ ಮರೆತು " ಹಸತ್ಯಥೋ ರೋದಿತಿ ರೌತಿ ಗಾಯತ್ಯುನ್ಮಾದವನ್ನೃತ್ಯತಿ ಲೋಕಬಾಹ್ಯಃ" ಎಂಬಂತೆ ಹುಚ್ಚಿಯರಂತೆ ನಗುತ್ತಲೂ ಅಳುತ್ತಲೂ ಕಣ್ಣೀರುಗಳನ್ನು ಸುರಿಸುತ್ತಲೂ ಹಾಡುತ್ತಲೂ ಕುಣಿಯುತ್ತಲೂ ಇರುವುದನ್ನು ನೋಡಿದನು. ಅವರೇ ಧನ್ಯರೆಂದು ಹೊಗಳಿದನು. ಶ್ರೀಕೃಷ್ಣದೇವನು ಹೇಳಿಕಳುಹಿಸಿರುವ ಮಾತುಗಳನ್ನು ನಂದನಲ್ಲಿಯೂ ಯಶೋದೆಯಲ್ಲಿಯೂ ಅವರಲ್ಲಿಯೂ ಹೇಳಿದನು. ಈ ಮಾತುಗಳನ್ನು ಕೇಳಿದ ಕೂಡಲೇ ಎಲ್ಲಾ ಸ್ತ್ರೀಯರೂ ಶ್ರೀಕೃಷ್ಣದೇವನಿಗೂ ತಮಗೂ ವಿಯೋಗವು ಇಲ್ಲವೇ ಇಲ್ಲವೆಂದೂ ತಮ್ಮ ಅನುಗ್ರಹಕ್ಕಾಗಿಯೇ ಅದೃಶ್ಯನಾಗಿರುವನೆಂದೂ ನಂಬಿದರು. ಹಿಂದೆ ರಾಸಕ್ರಿಡಾಕಾಲದಲ್ಲಿ ತಮಗೆ ಗರ್ವವು ಬಂದಾಗ ಅದೃಶ್ಯನಾದುದನ್ನೂ, ಗರ್ವವು ಅಡಗಿ ಭಕ್ತಿಪರವಶತೆಯಿಂದ ಗೋಪಿಗೀತೆಂದು ಹಾಡಿದಾಗ ಪ್ರತ್ಯಕ್ಷನಾದುದನ್ನೂ ಆ ಸಮಯದಲ್ಲಿ ತಾವೆಲ್ಲರೂ ಶ್ರೀಕೃಷ್ಣದೇವನು ಅದೃಶ್ಯನಾದುದನ್ನು ಕುರಿತು ಆಕ್ಷೇಪಿಸಿದಾಗ ಕಲ್ಪವೃಕ್ಷದಂತೆ ತಾನು ಅವರವರ ಮನೋಭಾವಗಳನ್ನರಿತು ಫಲವನ್ನು ಕೊಡುವವನೆಂದು ಹೇಳಿದುದನ್ನೂ ಸ್ಮರಿಸಿದರು. ಶ್ರೀಕೃಷ್ಣದೇವನ ಮೇಲಿರುವ ಅಸಮಾಧಾನವನ್ನೆಲ್ಲಾ ತ್ಯಜಿಸಿದರು. ಭಕ್ತಿಯಿಂದ ಅವನನ್ನೇ ಸ್ಮರಿಸಿದರು. ಉದ್ಧವನು ಎಲ್ಲರನ್ನೂ ಸಮಾಧಾನಪಡಿಸಿದನು ಮಥುರಾಪಟ್ಟಣಕ್ಕೆ ಹಿಂದಿರುಗಿದನು.

# ತ್ರಿವಕ್ರೆಯನ್ನು ಸಂತೋಷಪಡಿಸಿದನು

(೫೯) ಅಬಲಾಂ ಅರಮಯತ್ - ತ್ರಿವಕ್ರೆಯನ್ನು ಸಂತೋಷಪಡಿಸಿದನು.

ವಿಶೇಷಾರ್ಥ - ಕಾಮುತಪ್ತಾಯಾಃ ಪೂರ್ವಮೇವ ಪ್ರಾರ್ಥನಾಂ ಕೃತವತ್ಯಾಃ ಸೈರಂಧ್ರ್ಯಾ ಗೃಹಂ ಪ್ರಾಪ್ಯತಯಾ ಸಹ ಕ್ರೀಡಾಂ ಕೃತ್ವಾ, ತಸ್ಯಾ ಮನೋರಥಂ ಕೃತ್ವಾ.

ವಿಶೇಷಾರ್ಥ ವಿವರಣೆ - ಹಿಂದಿನ ಜನ್ಮದಲ್ಲಿ ಪಿಂಗಲಾ ಎಂಬ ವೇಶ್ಯೆಯಾಗಿದ್ದು ಕೊನೆಗ ವೇಶ್ಯಾವೃತ್ತಿಯನ್ನು ಬಿಟ್ಟು ಶ್ರೀಕೃಷ್ಣದೇವನೇ ಪತಿಯೆಂದು ಅಪಾರ ಭಕ್ತಿಯನ್ನು ಮಾಡಿದವಳೂ, ಈ ಜನ್ಮದಲ್ಲಿ ತ್ರಿವಕ್ರೆ ಎಂಬ ಹೆಸರಿನಿಂದ ಹುಟ್ಟಿ ಅತಿ ಭಕ್ತಿಯಿಂದ ಶ್ರೀಕೃಷ್ಣದೇವನಿಗೆ ಗಂಧವನ್ನು ಸಮರ್ಪಿಸಿದವಳೂ. ಶ್ರೀಕೃಷ್ಣದೇವನ ಅನುಗ್ರಹದಿಂದ ವಕ್ರವಾದ ದೇಹವನ್ನು ಬಿಟ್ಟು ಋಜುವಾದ ಮತ್ತು ಸುಂದರವಾದ ದೇಹವನ್ನು ಪಡೆದವಳೂ, ಶ್ರೀಕೃಷ್ಣದೇವನನ್ನೇ ಪತಿಯೆಂದು ವರಿಸಿದವಳೂ. ಅವನಿಂದ ಆ ವರವನ್ನು ಪಡೆದವಳೂ ಆಗಿರುವ ಕಾಮಪೀಡಿತಳಾಗಿರುವ ತ್ರಿವಕ್ರೆಯನ್ನು ಶ್ರೀಕೃಷ್ಣನು ಸ್ಮರಿಸಿದನು ಹಿಂದಿನ ಜನ್ಮದಲ್ಲಿಯೂ ಈ ಜನ್ಮದಲ್ಲಿಯೂ ತನ್ನನ್ನೇ ಪತಿಯೆಂದು ನಂಬಿದ ತ್ರಿವಕ್ರೆಯನ್ನು ಎಲ್ಲರಿಗಿಂತಲೂ ಮೊದಲೇ ವಿವಾಹ ಮಾಡಿಕೊಳ್ಳಬೇಕೆಂದು ತೀರ್ಮಾನಿಸಿ. ಅವಳ ಮನೆಗೆ ಹೋದನು.

ಸಕಲ ಸುಖಸಾಮಗ್ರಿಗಳಿಂದ ತುಂಬಿದ ಮನೆಯನ್ನು ನೋಡಿದನು. ಶ್ರೀಕೃಷ್ಣದೇವನು ತಾನಾಗಿಯೇ ತನ್ನ ಮನೆಗೆ ಬರುತ್ತಿರುವುದನ್ನು ತ್ರಿವಕ್ರೆಯು ನೋಡಿದಳು. ಸಖಿಯರಿಂದ ಸಹಿತಳಾಗಿ ಸಂಭ್ರಮದಿಂದ ಎದ್ದು ಸ್ವಾಗತಿಸಿ ಪೂಜಿಸಿದಳು. ಶ್ರೀಕೃಷ್ಣದೇವನ ಜೊತೆಯಲ್ಲಿ ಬಂದಿರುವ ಉದ್ಧವನನ್ನೂ ಪೂಜಿಸಿದಳು. ಆಸನವನ್ನು ಕೊಟ್ಟಳು. ಆದರೆ ಉದ್ಧವನು ಆ ಆಸನವನ್ನು ಕೈಯಲ್ಲಿ ಮುಟ್ಟಿ ನೆಲದಲ್ಲಿಯೇ ಕುಳಿತನು. ಶ್ರೀಕೃಷ್ಣದೇವನು ಅಮೂಲ್ಯವಾದ ಹಾಸಿಗೆಯಿಂದ ಯುಕ್ತವಾಗಿರುವ ಶಯನಗೃಹವನ್ನು ಪ್ರವೇಶಿಸಿದನು. ತ್ರಿವಕ್ರೆಯು ಅಲಂಕೃತಳಾಗಿ ಶಯನಗೃಹಕ್ಕೆ ಹೋದಳು. ಶ್ರೀಕೃಷ್ಣದೇವನಿಗೆ ಗಂಧವನ್ನು ಸಮರ್ಪಿಸಿದ್ದರಿಂದ ಬಂದಿರುವ ಅಪಾರ ಪುಣ್ಯದಿಂದ ಶ್ರೀಕೃಷ್ಣದೇವನ ಅಂಗಸಂಗವನ್ನು ಪಡೆದಳು.

ಮೋಕ್ಷವನ್ನು ಕೊಡುವ ಶ್ರೀಕೃಷ್ಣದೇವನು ಸಿಗುವನೇ? ಅವನನ್ನು ಹೊಂದಿದ ಈ ತ್ರಿವಕ್ರೆಯು ಕೆಲವು ದಿನಗಳ ವರೆಗೆ ತನ್ನ ಮನೆಯಲ್ಲಿಯೇ ಇರಬೇಕೆಂದು ಪ್ರಾರ್ಥಿಸಿದಳು. ಅವಳು ಕೇಳಿದ ವರವನ್ನು ಕೊಟ್ಟನು. ನಂತರ ಅವಳಲ್ಲಿ "ವಿಶೋಕ" ಎಂಬ ಗಂಧರ್ವನು ಮಗನಾಗಿ ಹುಟ್ಟಿ, ನಾರದರ ಶಿಷ್ಯನಾದನು. ಪಂಚರಾತ್ರಾಗಮ ವನ್ನೂ ಸಕಲಶಾಸ್ತ್ರಗಳನ್ನೂ ತಿಳಿದ್ದುದ. ಶ್ರೀಭೀಮಸೇನನ ಸಾರಥಿಯಾಗಿ ಅವನನ್ನು ಸೇವಿಸಿದನು.

# ಅಕ್ರೂರನನ್ನು ಸಂತೋಷಪಡಿಸಿದನು

(೬೦) ಅಥ ಶುಭಸ್ಯ ಅಕ್ರೂರಸ್ಯ ಪ್ರೀತಿಕೃತ್ - ಯೋಗ್ಯನಾದ ಅಕ್ರೂರನನ್ನು ಸಂತೋಷಪಡಿಸಿದನು.

ವಿಶೇಷಾರ್ಥ - ಅಕ್ರೂರಸ್ಯ ಗೃಹಂ ಪ್ರಾಪ್ಯ, ತೇನ ಕೃತಾಂ ಪೂಜಾಂ ಸ್ವೀಕೃತ್ಯ.

ವಿಶೇಷಾರ್ಥ ವಿವರಣ - ತ್ರಿವಕ್ರೆಯ ಮನೆಯಿಂದ ಹೊರಟನು. ಬಲರಾಮನಿಂದಲೂ ಉದ್ಧವನಿಂದಲೂ

ಸಹಿತನಾಗಿ ಅಕ್ರೂರನ ಮನೆಗೆ ಬಂದನು. ಅಕ್ರೂರನು ಈ ಮೂವರನ್ನು ಅತ್ಯಂತ ಭಕ್ತಿಯಿಂದ ಸ್ವಾಗತಿಸಿದನು. ಆಸನಗಳಲ್ಲಿ ಕೂಡಿಸಿದನು. ಶ್ರೀಕೃಷ್ಣದೇವನ ಪಾದಗಳನ್ನು ತೊಳೆದು ಆ ಜಲವನ್ನು ತಲೆಯಲ್ಲಿ ಧರಿಸಿದನು. ಆಭರಣಾದಿಗಳಿಂದ ಪೂಜಿಸಿ ತನ್ನ ತೊಡೆಗಳ ಮೇಲೆ ಶ್ರೀಕೃಷ್ಣದೇವನ ಪಾದಗಳನ್ನಿಟ್ಟು ಒತ್ತುತ್ತಾ ಮಾತಾಡಿದನು.

" ಶ್ರೀಕೃಷ್ಣದೇವ, ಮಹಾಪಾಪಿಯಾದ ಕಂಸನನ್ನು ನಮ್ಮೆಲ್ಲರ ಪುಣ್ಯದಿಂದ ಸಂಹರಿಸಿದಿ. ನಮ್ಮ ಕುಲವನ್ನು ಉದ್ಧರಿಸಿದಿ ಮತ್ತು ಪರಿಶುದ್ಧವಾಗುವಂತೆ ಮಾಡಿದಿ. ನೀನು ಯಾರು? ಎಂಬ ವಿಷಯವನ್ನು ನನಗೆ ತಿಳಿದ ಮಟ್ಟಿಗೆ ಹೇಳುವನು."

" ಈ ಜೀವರನ್ನೂ ಜಡವಸ್ತುಗಳನ್ನೂ ನೀನೇ ಸೃಷ್ಟಿಸಿರುವಿ. ಎಲ್ಲರಲ್ಲಿಯೂ ನೀನೇ ಪ್ರವೇಶಿಸಿರುವಿ. ನಿನ್ನ ಶಕ್ತಿಯಿಂದಲೇ ಎಲ್ಲರಲ್ಲಿಯೂ ಇದ್ದು ಎಲ್ಲಾ ಕಾರ್ಯಗಳನ್ನೂ ಮಾಡಿಸುತ್ತಿರುವಿ. ಎಲ್ಲಾ ಹೆಸರುಗಳಿಂದಲೂ ಕರೆಯಲ್ಪಡುತ್ತಿರುವಿ. ಸೃಷ್ಟಿ, ಪಾಲನೆ, ಸಂಹಾರ ಮುಂತಾದ ಸರ್ವವ್ಯಾಪಾರಗಳನ್ನೂ ನೀನೇ ಸರ್ವರಿಗೂ ಮಾಡುತ್ತಿರುವಿ. ನಿನಗೆ ಸೃಷ್ಟಿ ಮುಂತಾದ ಯಾವ ವ್ಯಾಪಾರಗಳೂ ಯಾರಿಂದಲೂ ನಡೆಯುತ್ತಿಲ್ಲ. ಸರ್ವಸಜ್ಜನರನ್ನೂ ಸಂಸಾರದಿಂದ ನೀನೇ ಬಿಡಿಸುತ್ತಿರುವಿ. ನಿನಗೆ ಸಂಸಾರವಿಲ್ಲ. ಆದರಿಂದ ಬಿಡುಗಡೆಯೂ ಇಲ್ಲ. ನೀನು ನಿನ್ನ ಇಚ್ಛೆಯಿಂದ ವಸುದೇವನ ಮನೆಯಲ್ಲಿ ಅವತರಿಸಿದಿ. ಅಸಂಖ್ಯ ದೈತ್ಯರನ್ನು ಸಂಹರಿಸಿರುವಿ. ಇನ್ನು ಮುಂದೆಯೂ ಸಂಹರಿಸುವಿ. ಭೂಮಿಯ ಭಾರವನ್ನು ಪರಿಹರಿಸುವಿ. ನಿನ್ನ ಪಾದೋದಕವು ಬ್ರಹ್ಮ ಮುಂತಾದ ಸರ್ವರನ್ನೂ ಪರಿಶುದ್ಧರಾಗುವಂತೆ ಮಾಡುತ್ತಿದೆ. ಇಂತಹ ನೀನು ಇಂದು ನನ್ನ ಮನೆಗೆ ಬಂದು ನನ್ನ ಮನೆಯನ್ನೂ ಪಾವನವಾಗುವಂತೆ ಮಾಡಿರುವಿ. ನಿನ್ನನ್ನು ಬಿಟ್ಟು ಇತರರನ್ನು ಯಾವ ಪಂಡಿತನೂ ಆಶ್ರಯಿಸಲಾರನು. ನಿನ್ನನ್ನು ನಾನು ಅನೇಕ ಜನ್ಮಗಳಲ್ಲಿ ಮಾಡಿರುವ ಪುಣ್ಯಗಳಿಂದ ಆಶ್ರಯಿಸಿರುವೆನು. ನನಗೆ ಪತ್ನೀ ಪುತ್ರ ಮುಂತಾದವರಲ್ಲಿರುವ ಮೋಹಪಾಶವನ್ನು ಕಡಿದು ಹಾಕು. ನಿನ್ನಲ್ಲಿ ಅಪಾರವಾದ ಭಕ್ತಿಯನ್ನು ಕೊಡು." ಎಂದು ಪ್ರಾರ್ಥಿಸಿದನು.

ಶ್ರೀಕೃಷ್ಣದೇವನು ಪರಮಮಂಗಲಸ್ವಭಾವವುಳ್ಳ ಅಕ್ರೂರನ ಪ್ರಾರ್ಥನೆಯನ್ನು ಸಂತೋಷದಿಂದ ಕೇಳಿದನು. ಅವನಬಳಿ ಏಕಾಂತದಲ್ಲಿ ಕೆಲವು ಮಾತುಗಳನ್ನು ಹೇಳಿದನು.

## ಅಕ್ರೂರನನ್ನು ಹಸ್ತಿನಾವತಿಗೆ ಕಳುಹಿಸಿದನು

(೬೧) ತೇನ ಪ್ರತಿವಿದಿತಪೃಥಾಪುತ್ರಕೃತ್ಯಃ - ಅಕ್ರೂರನಿಂದ ಕುಂತಿಯ ಕುಮಾರರಾದ ಪಾಂಡವರ ವಿಷಯದಲ್ಲಿ ತಾನು ಮಾಡಬೇಕಾದ ಕರ್ತವ್ಯವನ್ನು ನಿರ್ಧರಿಸಿದನು.

ವಿಶೇಷಾರ್ಥ - ಹಸ್ತಿನಾಹ್ವಯಪುರಸ್ಥಾನ್ ಪಿತೃವಿಯುಕ್ತಾನ್ ವನಾದೃಷಿಭಿರಾನೀತಾನ್ ಕುರುಭಿಃ ಪೀಡ್ಯಮಾನಾನ್ ಪಾಂಡವಾನ್ ವಿಚಾರಯಿತುಮಕ್ರೂರಂ ಪ್ರೇಷ್ಯ ತದ್ವೃತ್ತಾಂತಂ ಶ್ರುತ್ವಾ.

ವಿಶೇಷಾರ್ಥ ವಿವರಣ - ಅಕ್ರೂರ! ನೀವು ಹೇಳಿದ ಮಾತುಗಳನ್ನು ಕೇಳಿದನು. ನೀನು ನನಗೆ ಚಿಕ್ಕಪ್ಪನ ಸ್ಥಾನದಲ್ಲಿರುವಿರಿ. ನೀವೆಲ್ಲರೂ ನನ್ನಂತಹ ಬಾಲಕರಿಗೆ ತತ್ತ್ವೋಪದೇಶವನ್ನು ಮಾಡಬೇಕು. ನನ್ನನ್ನು ಪ್ರಾರ್ಥಿಸುವ ನೆಪದಿಂದ ನನಗೆ ಅನೇಕ ತತ್ತ್ವೋಪದೇಶಗಳನ್ನು ಮಾಡಿದಿರಿ. ಗಂಗಾತೀರ್ಥಗಳಲ್ಲಿ ಸ್ನಾನ ಮಾಡಿದ ಮಾತ್ರದಿಂದ

ತತ್ವಜ್ಞಾನವು ಹುಟ್ಟಲಾರದು. ದೇವಾಲಯಗಳಲ್ಲಿರುವ ಕಲ್ಲಿನ ವಿಗ್ರಹಗಳನ್ನು ಪೂಜಿಸಿದ್ದರಿಂದಲೂ ತತ್ವಜ್ಞಾನವು ಹುಟ್ಟಲಾರದು. ಆದರೆ ಗಂಗಾದಿ ಸ್ನಾನಗಳೂ ದೇವಾಲಯದಲ್ಲಿರುವ ವಿಗ್ರಹಗಳ ಆರಾಧನೆಗಳೂ ವ್ಯರ್ಥವೆಂದು ನಾನು ಹೇಳುವುದಿಲ್ಲ. ತೀರ್ಥಗಳಲ್ಲಿಯೂ ವಿಗ್ರಹಗಳಲ್ಲಿಯೂ ಶ್ರೀಹರಿಯು ಸನ್ನಿಹಿತನಾಗಿರುವನೆಂದು ತಿಳಿದು ಆರಾಧಿಸಿದರೆ ಶ್ರೀಹರಿಯು ಪ್ರಸನ್ನನಾಗಿ ನಿಮ್ಮಂತಹ ಜ್ಞಾನಿಗಳ ಸಹವಾಸವನ್ನು ಒದಗಿಸುವನು. ಜ್ಞಾನಿಗಳು ತತ್ವೋಪದೇಶವನ್ನು ಮಾಡಿ ಜ್ಞಾನವನ್ನು ಹುಟ್ಟಿಸುವರು. ಆದ್ದರಿಂದ ತೀರ್ಥಗಳೂ ವಿಗ್ರಹಗಳೂ ಜ್ಞಾನಿಗಳು ತತ್ವೋಪದೇಶವನ್ನು ಮಾಡಿ ಜ್ಞಾನವನ್ನು ಹುಟ್ಟಿಸುವರು. ಆದ್ದರಿಂದ ತೀರ್ಥಗಳೂ ವಿಗ್ರಹಗಳೂ ಜ್ಞಾನಿಗಳ ಮೂಲಕವಾಗಿಯೇ ಜ್ಞಾನವನ್ನು ಹುಟ್ಟಿಸುವುದರಿಂದ ಜ್ಞಾನಿಗಳ ಆರಾಧನೆಯೇ ಶ್ರೇಷ್ಠವೆಂದು ನಾನು ಹೇಳಿದೆನು. ನನಗೆ ತತ್ವೋಪದೇಶಗಳನ್ನು ಮಾಡಿ ನನ್ನನ್ನು ಉದ್ಧರಿಸಿದಿರಿ. ಇನ್ನು ಅತಿ ಮುಖ್ಯವಾದ ಒಂದು ಕೆಲಸವನ್ನು ನೀವು ಮಾಡಬೇಕು. ಆ ವಿಷಯವನ್ನು ವಿಜ್ಞಾಪಿಸಿಕೊಳ್ಳುವೆನು.

ನನ್ನ ತಂದೆಯಾದ ವಸುದೇವನ ತಂಗಿ "ಪೃಥಾ" ಎಂದು ಪ್ರಸಿದ್ಧಳಾಗಿರುವಳು. ನಮ್ಮ ತಾತನಾದ ಶೂರಮಹಾರಾಜನಿಗೆ ಕುಂತಿದೇಶದ ದೊರೆಯಾಗಿರುವ ಕುಂತಿಭೋಜರಾಜನು ತುಂಬಾ ಸ್ನೇಹಿತನಾಗಿದ್ದನು. ಅವನಿಗೆ ಮಕ್ಕಳೇ ಇರಲಿಲ್ಲ. ಅವನು ಶೂರಮಹಾರಾಜನ ಮಗಳಾಗಿರುವ ಪೃಥಾದೇವಿಯನ್ನು ತನ್ನ ಮನೆಯಲ್ಲೀ ಯೇಇಟ್ಟುಕೊಂಡು ಬೆಳೆಯಿಸಿದನು. ಈ ಕಾರಣದಿಂದ ಪೃಥಾದೇವಿಯು ಕುಂತೀ ಎಂದು ಪ್ರಸಿದ್ಧಳಾದಳು. ಆ ಕುಂತೀದೇವಿಯನ್ನು ಪಾಂಡುಮಹಾರಾಜನಿಗೆ ಕೊಟ್ಟು ಕುಂತಿಭೋಜರಾಜನೇ ವಿವಾಹವನ್ನು ಮಾಡಿಸಿದನು.

ವಸುದೇವನ ಸಹೋದರಿಯೂ ನನ್ನ ಸೋದರತ್ತೆಯೂ ಆಗಿರುವ ಕುಂತಿದೇವಿಯೊಡನೆ ಅವಳ ಪತಿಯಾದ ಪಾಂಡುಮಹಾರಾಜನು ಬದರೀಕ್ಷೇತ್ರದಲ್ಲಿರುವ ನಾರಾಯಣಾಶ್ರಮದಲ್ಲಿ ತಪಸ್ಸನ್ನು ಮಾಡುತ್ತಿದ್ದನು. ಆಗ ಒಬ್ಬ ಬ್ರಾಹ್ಮಣದಂಪತಿಗಳು ಹಗಲಿನಲ್ಲಿ ಜಿಂಕೆಯ ರೂಪವನ್ನು ಸ್ವೀಕರಿಸಿ ಸಂಗವನ್ನು ಮಾಡುತ್ತಿದ್ದರು. ಅವರಲ್ಲಿ ಗಂಡುಜಿಂಕೆಯನ್ನು ಪಾಂಡುರಾಜನು ಸಂಹರಿಸಿದನು. ಸಾಯುವಕಾಲದಲ್ಲಿ ಆ ಬ್ರಾಹ್ಮಣನು ನಿಜರೂಪವನ್ನು ಸ್ವೀಕರಿಸಿದನು. "ನೀನು ಪತ್ನಿಯ ಸಂಗವನ್ನು ಮಾಡಿದರೆ ಸಾಯುವಿ" ಎಂದು ಶಪಿಸಿದನು. ಅಂದಿನಿಂದ ಪಾಂಡುರಾಜನು ಪತ್ನೀಸಂಗವನ್ನು ಬಿಟ್ಟನು. ಅವನ ಪತ್ನಿಯಾದ ಕುಂತೀದೇವಿಯಲ್ಲಿ ಯಮನಿಂದ ಧರ್ಮರಾಜನೂ, ವಾಯುವಿನಿಂದ ಭೀಮಸೇನನೂ ಇಂದ್ರನಿಂದ ಅರ್ಜುನನೂ ಮಕ್ಕಳಾಗಿ ಹುಟ್ಟಿದರು. ಪಾಂಡುರಾಜನ ಎರಡನೆಯ ಪತ್ನಿಯಾದ ಮಾದ್ರೀದೇವಿಯಲ್ಲಿ ನಾಸತ್ಯ ದಸ್ರ ಎಂಬ ಎರಡು ಅಶ್ವಿನೀದೇವತೆಗಳಿಂದ ನಕುಲ ಸಹದೇವ ಎಂಬ ಎರಡು ಮಕ್ಕಳಾಗಿ ಹುಟ್ಟಿದರು.

ಅರ್ಜುನನಿಗೆ ಹದಿನಾಲ್ಕನೆಯ ವರ್ಧಂತೀಯು ಬಂದಿತು. ಆ ದಿನ ಅನೇಕ ಬ್ರಾಹ್ಮಣರಿಗೆ ಸಂತರ್ಪಣೆಯು ನಡೆಯಿತು. ಕುಂತಿಯು ಮುನಿಗಳಿಗೆಲ್ಲಾ ಬಡಿಸುತ್ತಾ ಮನೆಯ ಎಲ್ಲಾ ಕಾರ್ಯಗಳನ್ನೂ ನೋಡಿಕೊಳ್ಳುತ್ತಿದ್ದಳು. ಆ ಸಮಯದಲ್ಲಿ ಮಾದ್ರೀದೇವಿಯನ್ನು ಏಕಾಂತದಲ್ಲಿ ಪಾಂಡುರಾಜನು ನೋಡಿ ಕಾಮಪೀಡಿತನಾಗಿ ಅವಳ ಸಂಗವನ್ನು ಮಾಡಿದ ಬ್ರಾಹ್ಮಣಶಾಪದಿಂದ ಸತ್ತನು.

## ಪಾಂಡುರಾಜನಲ್ಲಿ ಇಂದ್ರನಿಗೆ ಕೋಪ

ಪೂರ್ವದಲ್ಲಿ ದೇವೇಂದ್ರನು ತನ್ನ ಪತ್ನಿಯಾದ ಶಚೀದೇವಿಯೊಡನೆ ಸಂಗವನ್ನು ಮಾಡಬೇಕೆಂದು

ಸಂಕಲ್ಪಿಸಿದನು. ಆಗ ಪಾಂಡುರಾಜನು ತನ್ನ ಮೂಲರೂಪದಲ್ಲಿ ದೇವೇಂದ್ರನನ್ನು ನೋಡಬೇಕೆಂದು ಹೋಗಿದ್ದನು. ದೇವೇಂದ್ರನ ಜೊತೆಯಲ್ಲಿ ತುಂಬಾ ಹೊತ್ತಿನ ವರೆಗೆ ಮಾತಾಡುತ್ತಿದ್ದನು. ದೇವೇಂದ್ರನಿಗೆ ತನ್ನ ಆಸೆಯಂತೆ ಅಂದು ಶಚೀದೇವಿಯ ಸಂಗವು ಏರ್ಪಡಲಿಲ್ಲ. ಇದರಿಂದ ದೇವೇಂದ್ರ ಕುಪಿತನಾದನು. ಈ ಕೋಪವೇ ಪಾಂಡುರಾಜನಾಗಿ ಹುಟ್ಟಿದಾಗ ಅವನಿಗೆ ಪತ್ನೀಸಂಗವು ಏರ್ಪಡದೆ ಇರುವುದಕ್ಕೂ ಮಕ್ಕಳಿಲ್ಲದೆ ಇರುವುದಕ್ಕೂ ಕಾರಣವಾಯಿತು. ಸ್ತ್ರೀಸಂಗವನ್ನು ಮಾಡುತ್ತಿರುವಾಗಲೇ ಮರಣವು ಏರ್ಪಡುವುದಕ್ಕೂ ಕಾರಣವಾಯಿತು. "ತನಗಿಂತ ಉತ್ತಮರಾದ ದೇವತೆಗಳಲ್ಲಿ ಮಾಡುವ ಅತ್ಯಲ್ಪವಾದ ಅಪರಾಧವೂ ಸಹ ಪ್ರಬಲವಾದ ಅನರ್ಥವನ್ನು ಕೊಡುತ್ತದೆ." ಎಂಬ ವಿಷಯದಲ್ಲಿ ಇದೇ ನಿದರ್ಶನವನ್ನು ಹೇಳಬಹುದು. ಪಾಂಡುರಾಜನಿಗೆ ಬ್ರಾಹ್ಮಣಶಾಪವು ಬಂದಿರುವುದಾಗಿ ಹಿಂದೆ ಹೇಳಿದೆವು. ಆ ಬ್ರಾಹ್ಮಣನು ಪಾಂಡುರಾಜನ ಮೂಲರೂಪದ ಯೋಗ್ಯತೆಯನ್ನು ವಿಮರ್ಶಿಸುವಾಗ ಪಾಂಡುರಾಜನಗಪಾಂಡುರಾಜನಿಗೆ ಯಾವ ಹಾನಿಯನ್ನೂ ಕೊಡಲಾರದು. ದೇವೇಂದ್ರನ ಕೋಪವೇ ಪ್ರಧಾನ ಕಾರಣವಾಗಿಯೂ ಬ್ರಾಹ್ಮಣಶಾಪವು ಬರೇ ನಿಮಿತ್ತವಾಗಿಯೂ ಏರ್ಪಟ್ಟಿತೆಂದು ಹೇಳಲೇಬೇಕು.

ಪಾಂಡುರಾಜನು ತನ್ನ ಸಂಗದಿಂದ ಸ್ವರ್ಗಸ್ಥನಾದುದನ್ನು ಮಾದ್ರಿಯು ನೋಡಿದಳು. ಗಟ್ಟಿಯಾಗಿ ಕಿರಿಚಿಕೊಂಡಳು. ಈ ಶಬ್ದವನ್ನು ಕೇಳಿದ ಪಾಂಡವರೂ ಕುಂತೀದೇವಿಯೂ ಆ ಸ್ಥಳಕ್ಕೆ ಓಡಿಬಂದರು. ಆಗ ಮಾದ್ರಿಯು " ಮಕ್ಕಳನ್ನು ಕರೆದುಕೊಂಡು ಬರಬೇಡ. ನೀನೊಬ್ಬಳೇ ಬಾ." ಎಂದು ಹೇಳಿದಳು. ಕುಂತಿಯು ಮಕ್ಕಳನ್ನೆಲ್ಲರನ್ನೂ ದೂರದಲ್ಲೇ ನಿಲ್ಲಿಸಿದಳು. ತಾನೊಬ್ಬಳೇ ತನ್ನ ಗಂಡನ ಶವವನ್ನು ಸಮೀಪಿಸಿ ಪತಿಯ ಶವವನ್ನು ನೋಡಿದಳು. ನಡೆದ ಎಲ್ಲಾ ವಿಷಯಗಳನ್ನೂ ಮಾದ್ರಿಯಿಂದ ತಿಳಿದಳು. ಮಿತಿಮೀರಿದ ದುಃಖದಿಂದ ಯುಕ್ತಳಾಗಿ ಮಾದ್ರಿಯನ್ನು ಧಿಕ್ಕರಿಸಿದಳು. ತನ್ನ ಪತಿಯ ದೇಹದೊಡನೆ ತನ್ನ ದೇಹವನ್ನು ಸುಟ್ಟುಕೊಂಡು ಸಾಯಬೇಕೆಂದು ತೀರ್ಮಾನಿಸಿದಳು. ಅವಳೂ ಗಟ್ಟಿಯಾಗಿ ಅತ್ತಳು. ಅಳುವ ಧ್ವನಿಯನ್ನು ಪಾಂಡವರು ಕೇಳಿ ಓಡಿ ಬಂದರು. ಅವರೆಲ್ಲರೂ ಪಾಂಡುರಾಜನ ಶವವನ್ನು ನೋಡಿದರು. ಗಟ್ಟಿಯಾಗಿ ಅತ್ತರು. ಅಳುತ್ತಿರುವ ಧ್ವನಿಯನ್ನು ಋಷಿಶ್ರೇಷ್ಠರೆಲ್ಲರೂ ಕೇಳಿದರು. ಅವರೆಲ್ಲರೂ ಪರಮಕರುಣೆಯಿಂದ ಅಲ್ಲಿಗೆ ಬಂದರು. ಅವರೆಲ್ಲರೂ ಮಧ್ಯದಲ್ಲಿ ಕುಂತಿಯೂ ಮಾದ್ರಿಯೂ ಪತಿಯ ದೇಹದೊಡನೆ ತಮ್ಮ ದೇಹವನ್ನು ಸುಟ್ಟುಕೊಂಡು ಸಾಯುವುದಕ್ಕೆ ಅನುಮತಿಯನ್ನು ಕೊಡಬೇಕೆಂದು ಬೇಡಿದರು.

ಮುನಿಗಳೆಲ್ಲರೂ ದೀರ್ಘವಾಗಿ ಯೋಚಿನಸಿ ಉತ್ತರವನ್ನು ಕೊಟ್ಟರು. " ಮಕ್ಕಳು ಬದುಕಿರುವಾಗ ಮಕ್ಕಳನ್ನು ರಕ್ಷಿಸುವುದು ನಾರೀಮಣಿಯರ ಮುಖ್ಯ ಕರ್ತವ್ಯವಾಗಿದೆ. ಆದ್ದರಿಂದ ನೀವಿಬ್ಬರೂ ಪತಿಯ ದೇಹದೊಡನೆ ಸಹಗಮನವನ್ನು ಮಾಡಬಾರದು. ಯಾರಾದರೂ ಒಬ್ಬಳು ಮಕ್ಕಳ ರಕ್ಷಣಾರ್ಥವಾಗಿ ಜೀವಂತಳಾಗಿರಬೇಕು. ನಿಮ್ಮಿಬ್ಬರಲ್ಲಿ ಕುಂತಿಯು ಬದುಕಿರಲಿ. ಮಾದ್ರಿಯು ನಿಮ್ಮಿಬ್ಬರ ಮಧ್ಯದಲ್ಲಿ ಹೆಚ್ಚಾಗಿ ಹಟವನ್ನು ಮಾಡುತ್ತಿದ್ದಾಳೆ. ಅವಳ ಹಟದಂತೆ ಅವಳೇ ಸಹಗಮನವನ್ನು ಮಾಡಲಿ. ಇದಕ್ಕೆ ಮುಖ್ಯವಾದ ಇನ್ನೊಂದು ಕಾರಣವೂ ಇದೆ. ಆ ಕಾರಣವನ್ನು ಹೇಳುವೆವು."

" ಈ ಮಾದ್ರಿಯು ಮಕ್ಕಳಾಗಬೇಕೆಂದು ಆಶಿಸಿದಳು. ಮಕ್ಕಳು ಯಾವ ಮಂತ್ರವನ್ನು ಜಪಿಸಿದ್ದರಿಂದ ಹುಟ್ಟುವರೋ ಆ ಮಂತ್ರವನ್ನು ತನಗೆ ಉಪದೇಶಿಸುವಂತೆ ಕುಂತೀದೇವಿಗೆ ಆಜ್ಞಾಪಿಸಬೇಕೆಂದು ಪಾಂಡುರಾಜನಲ್ಲಿ ಪ್ರಾರ್ಥಿಸಿದಳು. ಪಾಂಡುರಾಜನೂ ಕುಂತೀದೇವಿಯನ್ನು ನೋಡಿ ಮಾದ್ರಿಗೆ ಮಂತ್ರವನ್ನು ಉಪದೇಶಿಸುವಂತೆ

ಆಜ್ಞಾಪಿಸಿದನು. ಅವಳು ಒಂದೇ ಸಲ ಈ ಮಂತ್ರವನ್ನು ಜಪಿಸಬೇಕೆಂದೂ ಎರಡನೆ ಸಲ ಜಪಿಸಿದರೆ ಫಲಿಸಲಾರದೆಂದೂ ಹೇಳಿ ಮಂತ್ರವನ್ನು ಉಪದೇಶಿಸಿದಳು.

" ಆಗ ಮಾದ್ರಿಯು ಆಲೋಚಿಸಿದಳು. ಒಂದೇಸಲ ಒಂದೇ ಹೆಸರಿನಿಂದ ಎಷ್ಟು ದೇವತೆಗಳನ್ನು ಕರೆಯಲು ಸಾಧ್ಯವೋ ಅಷ್ಟು ದೇವತೆಗಳನ್ನು ಕರೆದು ಅಷ್ಟು ಜನರಿಂದ ಅಷ್ಟು ಮಕ್ಕಳನ್ನು ಪಡೆಯಬೇಕೆಂದು ತೀರ್ಮಾನಿಸಿದಳು. ಅಶ್ವಿನಿದೇವತೆಗಳಿಗೆ ಇಬ್ಬರಿಗೂ "ನಾಸತ್ಯ" ಎಂಬ ಹೆಸರೂ "ದಸ್ರ" ಎಂಬ ಹೆಸರೂ ಒಂದೇ ಆಗಿದೆ. ಆ ಒಂದು ಹೆಸರಿನಿಂದ ಕರೆದರೆ ಎರಡು ದೇವತೆಗಳೂ ಬರುತ್ತಾರೆ. ಅವರಿಂದ ಎರಡು ಮಕ್ಕಳು ಹುಟ್ಟುವರು ಎಂದು ತೀರ್ಮಾನಿಸಿದಳು."

" ಆ ಮಂತ್ರವನ್ನು ಜಪಿಸಿದಳು. " ನಾಸತ್ಯ ಎಂಬ ದೇವತೆಯು ಬರಲಿ" ಎಂದು ಕರೆದಳು. ಇಬ್ಬರೂ ಬಂದರು. ಅವರಿಬ್ಬರಿಂದ ನಕುಲ ಸಹದೇವ ಎಂಬ ಎರಡು ಮಕ್ಕಳು ಹುಟ್ಟಿದರು. ಹೆಚ್ಚು ಮಕ್ಕಳು ಹುಟ್ಟಬೇಕು ಎಂಬ ಆಸೆಯಿಂದಲೇ ಹೀಗೆ ಮಾಡಿರುವಳು. ಈ ಸಂದರ್ಭದಲ್ಲಿ ಧರ್ಮದ ತತ್ವವನ್ನು ಅವಳು ಲಕ್ಷಿಸಲಿಲ್ಲ."

"ತನ್ನ ಪತಿಯ ಯೋಗ್ಯತೆಗಿಂತಲೂ ತನ್ನ ಯೋಗ್ಯತೆಗಿಂತಲೂ ಅಧಿಕವಾದ ಯೋಗ್ಯತೆಯುಳ್ಳ ದೇವತೆಯ ಮೂಲಕವಾಗಿ ಮಕ್ಕಳನ್ನು ಪಡೆದರೆ ಪಾತಿವ್ರತ್ಯಕ್ಕೆ ಭಂಗವು ಬರುವುದಿ ತನ್ನ ಪತಿಯ ಯೋಗ್ಯತೆಗೆ ಸಮಾನನಾದ ಯೋಗ್ಯತೆಯಿಂದ ಯುಕ್ತನಾಗಿರುವ ಪುರುಷನ ಸಂಗವನ್ನು ಮಾಡಿದ ಸ್ತ್ರೀಯು ಪಾತಿವ್ರತ್ಯವನ್ನು ಬಿಟ್ಟಂತಾಗುವುದು. ಅಶ್ವಿನೀದೇವತೆಗಳಿಬ್ಬರೂ ಮಾದ್ರೀದೇವಿಯ ಯೋಗ್ಯತೆಗಿಂತ ಅಧಿಕವಾದ ಯೋಗ್ಯತೆಯುಳ್ಳವರಾಗಿರುವುದರಲ್ಲಿ ಸಂಶಯವಿಲ್ಲ. ಆದರೆ ಪಾಂಡುರಾಜನ ಯೋಗ್ಯತೆಗೆ ಸಮಾನವಾದ ಯೋಗ್ಯತೆಯುಳ್ಳವರೇ ಹೊರತು ಅಧಿಕವಾದ ಯೋಗ್ಯತೆ ಯುಳ್ಳವರಲ್ಲ. ಆದ್ದರಿಂದ ಅವರ ಸಂಗವನ್ನ ಮಾಡಿ ಮಕ್ಕಳನ್ನು ಪಡೆದುದರಿಂದ ಮಾದ್ರೀದೇವಿಯ ಪಾತಿವ್ರತ್ಯದಲ್ಲಿ ಕಳಂಕವು ಏರ್ಪಟ್ಟಿತು. ಆದ್ದರಿಂದಲೇ ಅಂತ್ಯಕಾಲದಲ್ಲಿ ತನ್ನ ಸಂಗದಿಂದ ಪತಿಯ ಕಾರಣಳಾದಳು. ಈ ಮಾದ್ರಿಯ ಎಲ್ಲಾ ಸದ್ಗುಣಗಳಿಂದ ಯುಕ್ತಳಾಗಿದ್ದರೂ ಸಹ ಇದೇ ದೋಷದಿಂದ ಲೋಕದಲ್ಲಿ ಸರ್ವರಿಂದಲೂ ತನ್ನ ಗುಣಗಳಿಗೆ ಯೋಗ್ಯವಾದ ಮಾನ್ಯತೆಯನ್ನು ಪಡೆಯಲಿಲ್ಲ."

" ಈ ಮಾದ್ರೀದೇವಿಯು ತಾನು ಮಾಡಿದ ಪ್ರಬಲವಾದ ಅಶ್ವಿನೀದೇವತೆಗಳ ಸಂಗವೆಂಬ ಮಹಾಪಾಪಕಾರ್ಯದಿಂದ ಬಂದಿರುವ ದೋಷಗಳನ್ನೂ ಕಳಿದುಕೊಳ್ಳುವುದಕ್ಕಾಗಿ ತನ್ನ ಪತಿಯ ದೇಹದೊಡನೆ ತನ್ನ ದೇಹವನ್ನು ಸುಟ್ಟುಕೊಳ್ಳಲಿ. ಈ ಪ್ರಾಯಶ್ಚಿತ್ತದಿಂದ ಶುದ್ಧಳಾಗಿ ಪತಿಲೋಕವನ್ನು ಪಡೆಯಲಿ" ಎಂದು ಮುನಿಗಳು ಹೇಳಿದರು.

ಮಾದ್ರಿದೇವಿಯೂ ಮುನಿಗಳ ತೀರ್ಮಾನವನ್ನು ತಿಳಿದು ಸಂತುಷ್ಟಳಾದಳು. ತನ್ನ ಮಕ್ಕಳನ್ನು ಕುಂತೀದೇವಿಯ ವಶದಲ್ಲಿ ಒಪ್ಪಿಸಿದಳು. ಪಾಂಡುರಾಜನ ದೇಹದೊಡನೆ ಸಹಗಮನವನ್ನು ಮಾಡಿದಳು. ಅಶ್ವಿನೀದೇವತೆಗಳ ಸಂಗದಿಂದಲೂ ತನ್ನ ಪತಿಯ ಮರಣಕ್ಕೆ ಕಾರಣಳಾದ್ದರಿಂದಲೂ ಬಂದಿರುವ ಎಲ್ಲಾ ಪಾಪಗಳನ್ನೂ ಕಳೆದುಕೊಂಡು. ಪತಿಯ ಲೋಕವನ್ನು ಪಡೆದಳು.

ಪಾಂಡುರಾಜನ ಉತ್ತರಕ್ರಿಯೆಯನ್ನು ಮುನಿಗಳೆಲ್ಲರೂ ಪಾಂಡವರ ಮೂಲಕವಾಗ ಮಾಡಿಸಿದರು (೧)

ಪಾಂಡುರಾಜನು ಶ್ರೀವೇದವ್ಯಾಸರೂಪಿಯಾದ ಶ್ರೀಹರಿಯ ಮಗನು. (೨) ಶ್ರೀಹರಿಯ ಪರಮ ಭಕ್ತನು (೩) ಅವನಿಗೆ ಪರಮ ಭಕ್ತರಾದ ಮಕ್ಕಳು ಉತ್ತಮ ರೀತಿಯಿಂದ ಉತ್ತರಕ್ರಿಯೆಯನ್ನು ಮಾಡಿರುವರು. (೪) ತಾನೂ ಮಹಾಗುಣವಂತನು. ಈ ಎಲ್ಲಾ ಕಾರಣಗಳಿಂದ ಸಕಲಸಜ್ಜನರಿಂದಲೂ ಮಾನ್ಯರಾದ ಲೋಕಗಳಿಗೆ ಹೋದನು.

ಪಾಂಡುರಾಜನು ಸ್ವರ್ಗಸ್ಥನಾದ ಮೇಲೆ ನಿರ್ಗತಿಕರಾದ ಪಾಂಡವರನ್ನು ಕುಂತಿಯನ್ನೂ ಕರೆದುಕೊಂಡು ಎಲ್ಲಾ ಮುನಿಗಳೂ ಬದರೀಕ್ಷೇತ್ರದಲ್ಲಿರುವ ನಾರಾಯಣಾಶ್ರಮದಿಂದ ಹಸ್ತಿನಾವತೀನಗರಕ್ಕೆ ಬಂದರು. ಧೃತರಾಷ್ಟ್ರಮಹಾರಾಜನ ಮುಂದೆ ಪಾಂಡುರಾಜನ ಮರಣವೃತ್ತಾಂತವನ್ನು ತಿಳಿಸಿದರು. ಅವನ ಮಕ್ಕಳನ್ನು ಪತ್ನಿಯಾದ ಕುಂತೀದೇವಿಯನ್ನೂ ಸ್ವೀಕರಿಸಬೇಕೆಂದು ತಿಳಿಸಿದರು.

ಈ ಮುನಿಗಳ ಮಾತುಗಳನ್ನು ಧೃತರಾಷ್ಟ್ರನು ಕೇಳಿದನು. ಯಾವ ವಿಧವಾದ ಪ್ರತ್ಯುತ್ತರವನ್ನೂ ಹೇಳಲಿಲ್ಲ. ಭೀಷ್ಮಾಚಾರ್ಯರೂ ವಿದುರನೂ ತುಂಬಾ ಸಂತೋಷವನ್ನು ವ್ಯಕ್ತಪಡಿಸಿದರು. ಶಕುನಿ ಮತ್ತು ದುರ್ಯೋಧನನೇ ಮೊದಲಾದ ಧೃತಾರಾಷ್ಟ್ರನ ನೂರು ಮಕ್ಕಳು ನಗುತ್ತಾ ಮಾತಾಡಿದರು.

" ಪಾಂಡುರಾಜನು ಸತ್ತುಹೋದನಲ್ಲವೇ? ಅವನು ಸಾಯುವ ವರೆಗೆ ಬ್ರಾಹ್ಮಣಶಾಪದಿಂದ ಪತ್ನಿಯರ ಸಂಪರ್ಕವನ್ನು ಮಾಡಲಿಲ್ಲ. ಹೀಗಿರುವಾಗ ಅವನು ಬದುಕಿರುವಾಗ ಅವನಿಗೆ ಪತ್ನಿಯಲ್ಲಿ ಮಕ್ಕಳು ಹುಟ್ಟಲೇ ಇಲ್ಲ. ಸತ್ತ ಮೇಲೆ ಪರಪುರುಷನ ಸಂಪರ್ಕದಿಂದ ಅವನ ಪತ್ನಿಯರಲ್ಲಿ ಮಕ್ಕಳು ಹುಟ್ಟಿರಬೇಕು. ಹಾಗೆ ಹುಟ್ಟಿದ್ದರೆ ಪಾಂಡುರಾಜನಿಗಿಂತ ಉತ್ತಮರಲ್ಲಿ ಅವನ ಸ್ವಂತ ಜನರು ಪ್ರಾರ್ಥಿಸಿ ಅವರ ಮೂಲಕವಾಗಿ ಹುಟ್ಟಿರುವ ಮಕ್ಕಳು ಮಾತ್ರ ಧರ್ಮದಿಂದ ಪಾಂಡುರಾಜನ ಉತ್ತರಾಧಿಕಾರಿಗಳೆನಿಸುವರು. ಪಾಂಡುರಾಜನ ಸ್ವಂತ ಜನರಾಗಿರುವ ನಾವು ಯಾರೂ ಅವನ ಪತ್ನಿಯರಲ್ಲಿ ಮಕ್ಕಳನ್ನು ಹುಟ್ಟಿಸುವಂತೆ ಯಾರಲ್ಲಿ ಯೂ ಪ್ರಾರ್ಥಿಸಲಿಲ್ಲ. ಆದ್ದರಿಂದ ಈ ಕುಂತಿಯು ವ್ಯಭಿಚಾರದಿಂದ ಪರಪುರುಷರಿಂದ ಹಡೆದಿರುವ ಈ ಬಾಲಕರಿಗೆ ನಮ್ಮ ಮನೆಯಲ್ಲಿ ಪ್ರವೇಶಿಸಲು ಅರ್ಹತೆಯಿಲ್ಲ'' ಎಂದರು.

ಈ ಮಾತುಗಳನ್ನು ಕೇಳಿದ ಸರ್ವರೂ ಸುಮ್ಮನಾದರು. ಆಗ ವಾಯುದೇವನು ಆಕಾಶದಲ್ಲಿ ನಿಂತು ಅದೃಶ್ಯನಾಗಿ ಮಾತಾಡಿದನು. " ಈ ಐದು ಮಕ್ಕಳೂ ಪಾಂಡುರಾಜನು ಬದುಕಿರುವಾಗಿಲೇ ಅವನಿಂದ ಆಜ್ಞಪ್ತರಾದ ಅವನ ಪತ್ನಿಯರಲ್ಲಿ ಹುಟ್ಟಿದರು. ಯಮನಿಂದ ಧರ್ಮರಾಜನೂ, ವಾಯುದೇವನಿಂದ ಭೀಮನೂ, ಇಂದ್ರನಿಂದ ಅರ್ಜುನನೂ, ನಾಸತ್ಯ ದಸ್ರ ಎಂಬ ಇಬ್ಬರು ಅಶ್ವಿನಿ,ದೇವತೆಗಳಿಂದ ನಕುಲ ಮತ್ತು ಸಹದೇವರು ಹುಟ್ಟಿರುವರು. ಕುಂತೀ ಮತ್ತು ಮಾದ್ರಿಯರಿಗೆ ಅವರ ಪತಿಯಾದ ಪಾಂಡುರಾಜನಿಗಿಂತ ಉತ್ತಮನಾದ ಇನ್ನೊಬ್ಬ ಬಂಧುವಿಲ್ಲ. ಅವನು ಅನುಮತಿಯನ್ನು ಕೊಟ್ಟ ಮೇಲೆ ನಿಮ್ಮಲ್ಲಿ ಯಾರಲ್ಲಿಯೂ ಅನುಮತಿಯನ್ನು ಕೇಳಬೇಕಾಗಿಲ್ಲ. ಆದ್ದರಿಂದ ನಿಮಗೆಲ್ಲರಿಗೂ ತಿಳಿಯದಂತೆಯೇ ಅವರು ಹುಟ್ಟಿರುವುದರಲ್ಲಿ ತಪ್ಪಿಲ್ಲ. ನೀವು ಈ ಕಾರಣವನ್ನು ಹೇಳಿ ಮನೆಗೆ ಸೇರಿಸಕೂಡದೆಂದು ಪ್ರಯತ್ನಿಸುತ್ತಿರುವಿರಿ. ಆದರೆ ಅದು ನಿಮ್ಮಿಂದ ಸಾಧ್ಯವಾಗಲಾರದು. ನಿಮ್ಮ ಧೃತರಾಷ್ಟ್ರನಿಗೂ ತಂದೆಯಾಗಿರುವ ಶ್ರೀವೇದವ್ಯಾಸರೂಪಿಯಾದ ಶ್ರೀಹರಿಯೇ ಇವರನ್ನೂ ರಕ್ಷಿಸುತ್ತಿರುವಾಗ ನೀವು ಏನು ಮಾಡಬಲ್ಲಿರಿ. ಪರಮ ಧಾರ್ಮಿಕರಾದ ಈ ಬಾಲಕರನ್ನು ನೀವು ಸ್ವೀಕರಿಸಲೇಬೇಕು'' ಎಂದನು.

ಈ ಮಾತುಗಳನ್ನು ದುರ್ಯೋಧನ ಮುಂತಾದವರು ಕೇಳಿದರು. ಈ ಮಾತಿನಲ್ಲಿ ತಮಗೆ ನಂಬಿಕೆ ಇಲ್ಲವೆಂದರು. ಅವರ ಮಾತುಗಳನ್ನು ಕೇಳಿದ ಸರ್ವರೂ ತಮಗೆ ನಂಬಿಕೆಯು ಬಂದಂತೆ ತೋರಿಸಲಿಲ್ಲ. ಆಗ ಶ್ರೀವೇದವ್ಯಾಸರೂಪಿಯಾದ ಶ್ರೀಹರಿಯು ಅಲ್ಲಿ ಪ್ರತ್ಯಕ್ಷನಾದನು. ಅನಂತಗುಣಾತ್ಮಕವಾದ ದೇಹದಿಂದ ಯುಕ್ತನಾದ ಆ ಮಹಾಸ್ವಾಮಿಯು ಪಾಂಡವರನ್ನು ಕುಂತಿಯನ್ನೂ ಕರೆದುಕೊಂಡು ಪಾಂಡುರಾಜನು ವಾಸಿಸುತ್ತಿದ್ದ ಮನೆಯನ್ನು ಪ್ರವೇಶಿಸಿದನು. ಇದನ್ನು ನೋಡಿದ ಭೀಷ್ಮ ಧೃತರಾಷ್ಟ್ರ ಮುಂತಾದವರೆಲ್ಲರೂ ಅಶರೀರವಾಣಿಯನ್ನು ನಂಬಿದರು. ಸರ್ವರೂ ಪಾಂಡವರನ್ನೂ ಕುಂತೀದೇವಿಯನ್ನೂ ಗೌರವದಿಂದ ಸ್ವಾಗತಿಸಿದರು. ಇದನ್ನೆಲ್ಲವನ್ನೂ ನೋಡಿದ ದುರ್ಯೋಧನನೇ ಮೊದಲಾದ ಧೃತರಾಷ್ಟ್ರನ ಮಕ್ಕಳೂ ಶಕುನಿಯೂ ತುಂಬಾ ದುಃಖಿತರಾದರು.

" ಓ ಅಕ್ರೂರ, ಪಾಂಡವರ ವೃತ್ತಾಂತಗಳನ್ನೆಲ್ಲಾ ಸಂಕ್ಷೇಪವಾಗಿ ತಿಳಿಸಿದೆನು. ಅವರೆಲ್ಲರೂ ಈಗ ಹಸ್ತಿನಾವತಿಯಲ್ಲಿ ಪಾಂಡುರಾಜನ ಮನೆಯಲ್ಲಿ ವಾಸಿಸುತ್ತಿರುವರು. ಅವರನ್ನು ದುರ್ಯೋಧನ ಶಕುನಿ ಮುಂತಾದವರು ತುಂಬಾ ಕಷ್ಟಪಡಿಸುತ್ತಿರುವಂತೆ ತಿಳಿಯುತ್ತದೆ. ನೀನು ಅಲ್ಲಿಗೆ ಹೋಗು. ಎಲ್ಲಾ ವಿಷಯಗಳನ್ನೂ ಕುಂತಿಯಿಂದಲೂ ವಿದುರನಿಂದಲೂ ತಿಳಿ. ಧೃತರಾಷ್ಟ್ರನಿಗೆ ಬುದ್ಧಿವಾದವನ್ನೂ ಹೇಳು. ಅವನ ಪ್ರತ್ಯುತ್ತರವನ್ನು ನನ್ನಲ್ಲಿಗೆ ಬಂದು ತಿಳಿಸು. ಕುಂತೀದೇವಿಯು ಬಹಳ ಉತ್ತಮಿ. ಸ್ವಜನರಲ್ಲಿ ಬಹಳ ಅಭಿಮಾನವುಳ್ಳವಳು. ಅವಳ ಸೋದರಳಿಯನಾಗಿರುವ ನಾನು ಅವಳನ್ನು ಮರೆಯಬಾರದು. ಅವಳ ಮತ್ತು ಅವಳ ಮಕ್ಕಳ ಯೋಗಕ್ಷೇಮವನ್ನು ನಿರ್ವಹಿಸಲೇಬೇಕು" ಎಂದನು.

ಅಕ್ರೂರನು ಶ್ರೀಕೃಷ್ಣದೇವನಿಂದ ಆಜ್ಞಪ್ತನಾಗಿ ಮಥುರಾಪಟ್ಟಣದಿಂದ ಹೊರಟನು. ಹಸ್ತಿನಾವತಿಗೆ ಬಂದನು. ಧೃತರಾಷ್ಟ್ರ ಭೀಷ್ಮ ವಿದುರ ಮುಂತಾದವರನ್ನು ಕಂಡನು. ಅವರೆಲ್ಲರೂ ಅವನನ್ನು ವಿಶೇಷ ಮರ್ಯಾದೆಯಿಂದ ಸ್ವಾಗತಿಸಿದರು. ಅನಂತರದಲ್ಲಿ ಕುಂತೀದೇವಿಯನ್ನು ನೋಡಿದನು. ಅವಳು ಇವನನ್ನು ಬಹು ಮರ್ಯಾದೆಯಿಂದ ಸ್ವಾಗತಿಸಿದಳು. ಶೂರಮಹಾರಾಜನ ಮನೆಯಲ್ಲಿರುವ ಒಬ್ಬೊಬ್ಬರನ್ನೂ ವಿಚಾರಿಸಿದಳು. ಶ್ರೀಕೃಷ್ಣದೇವನು ತನ್ನಲ್ಲಿಯೂ ತನ್ನ ಮಕ್ಕಳಲ್ಲಿಯೂ ವಿಶೇಷ ಪ್ರೀತಿಯಿಂದ ತಮ್ಮ ಯೋಗಕ್ಷೇಮವನ್ನು ನಿರ್ವಹಿಸಬೇಕೆಂದು ಅಕ್ರೂರನನ್ನು ಕಳುಹಿಸಿದ ವಿಷಯಗಳನ್ನು ತಿಳಿದಳು. ಶ್ರೀಕೃಷ್ಣದೇವನಲ್ಲಿರುವ ಭಕ್ತವಾತ್ಸಲ್ಯವನ್ನು ಸ್ಮರಿಸಿ ಪರವಶಳಾದಳು. ತನ್ನ ವಿಚಾರವನ್ನು ಕುರಿತು ಹೇಳಲು ಆರಂಭಿಸಿದಳು.

" ಓ ಅಕ್ರೂರ, ಶ್ರೀಕೃಷ್ಣದೇವನಿಗೆ ತಿಳಿಯದಿರುವ ವಿಷಯವು ಯಾವುದೂ ಇಲ್ಲ. ಆದರೂ ಅವನ ಆಜ್ಞೆಯಂತೆ ನಾನು ತಿಳಿಸುವೆನು. ತಾನು ಮಕ್ಕಳನ್ನು ಕರೆದುಕೊಂಡು ಇಲ್ಲಿಗೆ ಬಂದಿರುವ ವಿಚಾರವನ್ನೂ ಇಲ್ಲಿ ತನ್ನನ್ನು ಮನೆಗೆ ಸೇರಿಸಕೂಡದೆಂದೂ ತಾನು ವ್ಯಭಿಚಾರಿಣಿಯೆಂದೂ ತನ್ನ ಮಕ್ಕಳು ಅಪರಿಶುದ್ಧರೆಂದೂ ಆದ್ದರಿಂದಲೇ ಅವರನ್ನು ಮನೆಗೆ ಸೇರಿಸಕೂಡದೆಂದೂ ದುರ್ಯೋಧನ ಶಕುನಿ ಮುಂತಾದವರು ಮಾಡಿದ ಅಟ್ಟಹಾಸವನ್ನೂ ಆ ಕಾಲದಲ್ಲಿ ಏರ್ಪಟ್ಟ ಅಶರೀರವಾಣಿಯನ್ನೂ ಶ್ರೀವೇದವ್ಯಾಸರೂಪಿಯಾದ ಶ್ರೀಹರಿಯು ತಮ್ಮನ್ನೆಲ್ಲರನ್ನೂ ಕರೆದುಕೊಂಡು ತನ್ನ ಪತಿಯು ವಾಸಿಸುತ್ತಿದ್ದ ಮನೆಗೆ ಕರೆದುಕೊಂಡು ಹೋದ ವಿಷಯವನ್ನೂ ಅನಂತರದಲ್ಲಿ ಧೃತರಾಷ್ಟ್ರ ಮುಂತಾದವರು ತಮ್ಮನ್ನು ಗೌರವದಿಂದ ಸ್ವಾಗತಿಸಿದ ವಿಷಯವನ್ನೂ ನೀನು ಶ್ರೀಕೃಷ್ಣದೇವನ ಮುಖದಿಂದ ತಿಳಿದಿರುವಿ. ಅದರ ಅನಂತರದಲ್ಲಿ ನಡೆದ ವಿಷಯಗಳನ್ನು ವಿಶದವಾಗಿ ತಿಳಿಸುವೆನು."

" ದುರ್ಯೋಧನ ಮುಂತಾದವರು ಮಾತ್ಸರ್ಯ ಮುಂತಾದ ಸಕಲ ದೋಷಗಳಿಂದ ಯುಕ್ತರಾಗಿರುವವರು. ಆದ್ದರಿಂದ ಅವರೆಲ್ಲರೂ ನನಗೂ ನನ್ನ ಮಕ್ಕಳಿಗೂ ಎಲ್ಲಾ ವಿಧವಾದ ದ್ರೋಹಗಳನ್ನೂ ಮಾಡಬೇಕೆಂದು ದೀಕ್ಷೆಯಿಂದ ಯುಕ್ತರಾಗಿರುವವರು. ಧೃತರಾಷ್ಟ್ರಮಹಾರಾಜರು ಸ್ವಭಾವದಿಂದ ಅತ್ಯುತ್ತಮರು. ಆದರೆ ಮಕ್ಕಳಲ್ಲಿ ವಿಶೇಷಪಕ್ಷಪಾತವುಳ್ಳವರು. ಆದ್ದರಿಂದ ಮಕ್ಕಳು ಮಾಡುತ್ತಿರುವ ಎಲ್ಲಾ ದ್ರೋಹಗಳನ್ನೂ ಸಹಿಸುತ್ತಿರುವವರು. ತಮ್ಮ ಮಕ್ಕಳು ಮಾಡುತ್ತಿರುವ ದ್ರೋಹಗಳನ್ನು ತಡೆದು ನಿಲ್ಲಿಸುವ ಸ್ವಭಾವವು ಅವರಲ್ಲಿಲ್ಲ. ಭೀಷ್ಮಮುಂತಾದವರು ಧೃತರಾಷ್ಟ್ರ ಮಹಾರಾಜರು ಮಾಡುತ್ತಿರುವ ಕಾರ್ಯಗಳು ತಪ್ಪೆಂದು ತಿಳಿದರೂ ಅವರನ್ನು ಖಂಡಿಸಿ ಅವರ ಮೂಲಕವಾಗಿ ದುರ್ಯೋಧನ ಮುಂತಾದವರಿಂದ ತನ್ನ ಮಕ್ಕಳಿಗೆ ಏರ್ಪಡುತ್ತಿರುವ ದ್ರೋಹವನ್ನು ತಡೆದು ನಿಲ್ಲಿಸಲು ಶಕ್ತಿಯಿದ್ದರೂ ಉದಾಸೀನರಾಗಿರುವರು."

" ವಿದುರನು ಒಬ್ಬನು ಮಾತ್ರ ದುರ್ಯೋಧನಾದಿಗಳು ಮಾಡುತ್ತಿರುವುದು ತಪ್ಪೆಂದೂ, ಧೃತರಾಷ್ಟ್ರ ಮಹಾರಾಜರು ತಮ್ಮ ಮಕ್ಕಳು ಮಾಡುತ್ತಿರುವ ದ್ರೋಹಗಳನ್ನು ತಡೆದು ನಿಲ್ಲಿಸದಿರುವುದು ತಪ್ಪೆಂದೂ, ಭೀಷ್ಮಾದಿಗಳು ಈ ವಿಷಯದಲ್ಲಿ ಉದಾಸೀನರಾಗಿರುವುದು ಯುಕ್ತವಲ್ಲವೆಂದು ಘಂಟಾಘೋಷವಾಗಿ ಯಾವಾಗಲೂ ಹೇಳುತ್ತಿರುವುದಾಗಿಯೂ ಆದರೆ ಅವನ ಪಕ್ಷದಲ್ಲಿ ಬೆಂಬಲವಿಲ್ಲದಿರುವುದರಿಂದ ಅವನ ಮಾತುಗಳಿಗೆ ಬೆಲೆಯು ಬರುತ್ತಿಲ್ಲವೆಂದೂ ತಿಳಿಸಿದಳು."

ಎಲ್ಲಾ ಹುಡುಗರೂ ಆಡುತ್ತಿರುವಾಗ ಎಲ್ಲಾ ಆಟಗಳಲ್ಲಿಯೂ ಸರ್ವರನ್ನೂ ಭೀಮಸೇನನೇ ಜಯಿಸಿದನು. ಹುಡುಗರೆಲ್ಲರೂ ಎರಡು ಗುಂಪುಗಳಾಗಿ ಜಗಳವನ್ನು ಮಾಡಿದ್ದುಂಟು. ಒಬ್ಬೊಬ್ಬನು ಒಬ್ಬೊಬ್ಬನೊಡನೆ ದ್ವಂದ್ವಯುದ್ಧವನ್ನು ಮಾಡಿದ್ದುಂಟು. ಯಾವುದಾದರೊಂದು ಗುರುತಿಸಿದ ಜಾಗವನ್ನು ಕುರಿತು ಹಾರಿದ್ದುಂಟು. ಅತಿವೇಗದಿಂದ ಎಲ್ಲರನ್ನೂ ಮಧ್ಯದಲ್ಲಿ ನಿಲ್ಲಿಸಿ ಅವರ ಸುತ್ತಲೂ ಓಡಿದ್ದುಂಟು. ಈ ವಿಧದಿಂದ ನಾನಾ ವಿಧವಾದ ಆಟಗಳನ್ನು ಎಲ್ಲರೂ ಆಡಿದರು. ಈ ವಿಧವಾದ ಆಟಗಳಲ್ಲಿ ಅತಿಬಲಿಷ್ಠರಾದ ಸಕಲ ರಾಜಕುಮಾರರನ್ನೂ ಭೀಮಸೇನನಾಗಲೀ ಅವನ ಗುಂಪಿಗೆ ಸೇರಿದವರಾಗಲೀ ಶ್ರೀಹರಿಯ ಅನುಗ್ರಹದಿಂದ ಜಯಿಸಿದರೇ ಹೊರತು ಉಳಿದವರು ಸರ್ವರೂ ಸೋತರು.

ಮರಗಳಲ್ಲಿ ಪಕ್ವವಾಗಿರುವ ದೊಡ್ಡ ಹಣ್ಣುಗಳನ್ನು ನೋಡಿದ ರಾಜಕುಮಾರರೆಲ್ಲರೂ ಮರಗಳ ಮೇಲೆ ಏರಿ ಹಣ್ಣುಗಳನ್ನು ಕೊಯ್ದು ತಿನ್ನುವುದಕ್ಕಾಗಿ ಪ್ರಯತ್ನಿಸಿದ್ದುಂಟು. ಅಂತಹ ಸಮಯದಲ್ಲಿ ಎಲ್ಲಾ ರಾಜಕುಮಾರರೂ ಮರಗಳ ಮೇಲೆ ಏರುವವರೆಗೆ ಭೀಮನು ಸುಮ್ಮನೆ ನಿಂತಿರುವನು. ಎಲ್ಲರೂ ಏರಿ ಮುಗಿದ ಮೇಲೆ ಆ ಮರದ ಬುಡವನ್ನು ಕಾಲಿನಿಂದ ಒದ್ದು ಮರವನ್ನು ಉರುಳಿಸುವನು. ರಾಜಕುಮಾರರೆಲ್ಲರಿಗೂ ಹಣ್ಣುಗಳು ಸಿಗಲಿಲ್ಲ. ಕೆಳಗೆ ಉರುಳಿಬಿದ್ದರು. ಇದನ್ನು ನೋಡುತ್ತಾ ಕೆಳಗೆ ಬಿದ್ದಿರುವ ಹಣ್ಣುಗಳನ್ನು ತಿಂದನು.

ಗಂಗಾನದಿಯಲ್ಲಿ ಈಸುವುದಕ್ಕಾಗಿ ಹೋಗುವುದುಂಟು. ಒಮ್ಮೆಮ್ಮೆ ಎಲ್ಲಾ ರಾಜಕುಮಾರರುಗಳನ್ನೂ ತನ್ನ ಕಂಕುಳುಗಳಲ್ಲಿಯೂ ಬೆನ್ನು ಹೆಗಲು ಮುಂತಾದ ಅವಯವಗಳಲ್ಲಿಯೂ ಎತ್ತಿಕೊಂಡು ಭೀಮನು ಈಸುವುದುಂಟು. ಆಗ ನೀರಿನಲ್ಲಿ ಎಲ್ಲರನ್ನೂ ಮುಳುಗಿಸುವುದುಂಟು. ಎಲ್ಲರೂ ನೀರು ಕುಡಿದು ತುಂಬಾ ಕಷ್ಟದಲ್ಲಿರುವುದನ್ನು ತಿಳಿದು ಅವರನ್ನೆಲ್ಲರನ್ನೂ ಬಿಟ್ಟು ಬಿಟ್ಟು ನಗುವುದುಂಟು. ಒಮ್ಮೆಮ್ಮೆ ಅವರನ್ನೆಲ್ಲರನ್ನೂ ಬೆನ್ನಿನ ಮೇಲೆ ಎತ್ತಿಕೊಂಡು ಗಂಗೆಯನ್ನು ದಾಟಿಸುವುದುಂಟು.

# ಭೀಮನನ್ನು ಕಪಟದಿಂದ ಕೊಲ್ಲಲು ಪ್ರಯತ್ನಿಸಿದರು

" ದುರ್ಯೋಧನಾದಿಗಳು ಭೀಮಸೇನನು ಈ ರೀತಿಯಾದ ಬಾಲಲೀಲೆಗಳನ್ನು ಮಾಡುತ್ತಿರುವುದನ್ನು ರಾಜಕುಮಾರರುಗಳೆಲ್ಲಾ ನೋಡಿದರು. ಅವರಲ್ಲಿ ದೇವತೆಗಳೇ ಮೊದಲಾದ ಸಜ್ಜನರು ಭೀಮಸೇನನ ವಿಚಿತ್ರಶಕ್ತಿಯನ್ನು ನೋಡಿ ಸಂತೋಷಪಟ್ಟರು. ಅಯೋಗ್ಯರಾದ ದುರ್ಯೋಧನ, ಶಕುನಿ ಮುಂತಾದವರು ಭೀಮಸೇನನನ್ನೂ ಅವನಲ್ಲಿ ವಿಶ್ವಾಸವನ್ನಿಟ್ಟವರನ್ನೂ ಕೊಲ್ಲಬೇಕೆಂದು ತೀರ್ಮಾನಿಸಿದರು."

" ಈ ಭೀಮಸೇನನನ್ನು ಬಲದಿಂದ ಸಂಹರಿಸಲು ಯಾರೂ ಶಕ್ತರಲ್ಲ. ಯಾವುದಾದರೊಂದು ಕಪಟಮಾರ್ಗದಿಂದ ಕೊಲ್ಲಬೇಕು. ಇವನ್ನು ಸತ್ತಕೂಡಲೇ ಅರ್ಜುನನನ್ನು ಕೊಲ್ಲಬೇಕು. ನಾವೆಲ್ಲರೂ ಒಟ್ಟುಗೂಡಿದರೆ ಅರ್ಜುನನನ್ನು ಕೊಲ್ಲುವುದು ಅಶಕ್ಯವಲ್ಲ. ಇವರಿಬ್ಬರೂ ಸತ್ತರೆ ಧರ್ಮರಾಜ, ನಕುಲ, ಸಹದೇವ ಎಂಬ ಉಳಿದ ಮೂರು ಮಕ್ಕಳು ಬದುಕಿದ್ದರೂ ಅವರಿಂದ ದುರ್ಯೋಧನನಿಗೂ ಅವನ ಕಡೆಯವರಿಗೂ ಯಾವ ವಿಧವಾದ ಅಪಾಯವೂ ಏರ್ಪಡುವ ಸಂಭವವಿಲ್ಲ. ಆ ಮೂವರೂ ದುರ್ಯೋಧನನು ಹೇಳಿದಂತೆ ಕೇಳಿಕೊಂಡು ಅವನ ದಾಸರಾಗಿ ಬಿದ್ದಿರಬೇಕು. ಇಲ್ಲದಿದ್ದರೆ ಅವರನ್ನೆಲ್ಲರನ್ನೂ ಜೈಲಿನಲ್ಲಿಡೋಣ. ಹೀಗೆ ಮಾಡಿಬಿಟ್ಟರೆ ದುರ್ಯೋಧನನಿಗೆ ತೊಂದರೆಯನ್ನು ಮಾಡುವ ವ್ಯಕ್ತಿಗಳೇ ಇಲ್ಲದಂತಾಗುತ್ತದೆ. ಆದ್ದರಿಂದ ನಾವೆಲ್ಲರೂ ಮೊದಲು ಭೀಮಸೇನನನ್ನು ಕಪಟ ಮಾರ್ಗದಿಂದ ಕೊಲ್ಲಬೇಕು. ಎಂದು ತೀರ್ಮಾನಿಸಿದರು."

" ಕ್ಷೀರಸಮುದ್ರವನ್ನು ಎಲ್ಲಾ ದೇವತೆಗಳೂ ದೈತ್ಯರೂ ಒಟ್ಟುಗೂಡಿ ಕಡೆದಾಗ ಆರಂಭದಲ್ಲಿ ಹಾಲಾಹಲ" ಎಂಬ ವಿಷವು ಮೇಲೆ ಬಂತು,ಲೋಕವನ್ನು ಭಸ್ಮ ಮಾಡುತ್ತಿರುವ ಆ ವಿಷದಿಂದ ತುಂಬಿದ ಪಾತ್ರೆಯನ್ನು ವಾಯುದೇವನು ತನ್ನ ಕೈಯಲ್ಲಿ ಧರಿಸಿದನು. ಇದನ್ನು ನೋಡಿದ ರುದ್ರನು ಆ ವಿಷವನ್ನು ತಾನೇ ಕುಡಿಯುವುದಾಗಿಯೂ ಪಾತ್ರೆಯನ್ನು ತನ್ನಲ್ಲಿ ಕೊಡುವಂತೆಯೂ ವಾಯುದೇವನಲ್ಲಿ ಪ್ರಾರ್ಥಿಸಿದನು. ವಾಯುದೇವನು ಆ ವಿಷದಲ್ಲಿ ಒಂದು ಚಿಟಿಕೆಯಷ್ಟು ವಿಷವನ್ನು ಕೈಯಲ್ಲಿಟ್ಟುಕೊಂಡು ತಿಕ್ಕಿದನು. ವಿಷದ ಎಲ್ಲಾ ಶಕ್ತಿಯನ್ನೂ ಅಡಗಿಸಿ ರುದ್ರನಿಗೆ ಕೊಟ್ಟನು ರುದ್ರನು ನಿಸ್ಸಾರವಾದ ವಿಷವನ್ನು ಕುಡಿದನು. ಆ ವಿಷವನ್ನೇ ಕುಡಿಯಲು ಶಕ್ತನಾಗಲಿಲ್ಲ. ಮೂರ್ಛಿತನಾದನು. ಶ್ರೀಹರಿಯ ಮತ್ತು ವಾಯುದೇವನ ಕೃಪಾದೃಷ್ಟಿಯಿಂದ ಎದ್ದು ನಿಂತನು. ವಾಯುದೇವನು ಎಲ್ಲಾ ವಿಷವನ್ನೂ ಅದರ ಪಾತ್ರೆಯನ್ನೂ ನುಂಗಿದನು. ಜೀರ್ಣಿಸಿಕೊಂಡನು."

" ರುದ್ರನು ತನಗೆ ಕೊಟ್ಟಿರುವ ವಿಷದಲ್ಲಿ ಒಂದು ಭಾಗವನ್ನು ಬಹಳ ಜಾಗ್ರತೆಯಿಂದ ಕಾಪಾಡುತ್ತಿದ್ದನು. ಶ್ರೀಶುಕಾಚಾರ್ಯರು ತಪಸ್ಸಿನಿಂದ ರುದ್ರನನ್ನು ಸಂತೋಷಪಡಿಸಿದರು. ಅವನಿಂದ ಈ ವಿಷವನ್ನು ಪಡೆದರು. ಶಕುನಿಯು ಶುಕ್ರಾಚಾರ್ಯರನ್ನು ಸಂತೋಷಪಡಿಸಿದನು. ಅವರಿಂದ ಈ ವಿಷವನ್ನು ಪಡೆದನು. ಈ ವಿಷವನ್ನು ಕುಡಿದ ರುದ್ರನೇ ಮೂರ್ಛಿತನಾಗಿರುವಾಗ ಭೀಮಸೇನನು ಈ ವಿಷದ ಭಕ್ಷಣದಿಂದ ಸಾಯುವುದರಲ್ಲಿ ಸಂಶಯವಿಲ್ಲವೆಂದು ಶಕುನಿಯು ತೀರ್ಮಾನಿಸಿದನು. ದುರ್ಯೋಧನನಬಳಿ ಈ ವಿಷವನ್ನು ಕೊಟ್ಟನು. ದುರ್ಯೋಧನನು ತನ್ನ ಅಡಿಗೆಯವನನ್ನು ಕರೆದು. " ಈ ವಿಷವನ್ನು ಭೀಮಸೇನನಿಗೆ ಎಲ್ಲಾ ವಿಧವಾದ ಭಕ್ಷ್ಯ ಮುಂತಾದ ಆಹಾರಗಳಲ್ಲಿ ಸೇರಿಸಿಕೊಡು" ಎಂದು ಆಜ್ಞಾಪಿಸಿದನು. ಈ ವಿಷಯವನ್ನು " ಯುಯುತ್ಸು" ಎಂಬ ದುರ್ಯೋಧನನ ತಮ್ಮನು ತಿಳಿದನು. ಅವನು ತುಂಬಾ ಯೋಗ್ಯನು. ಭೀಮಸೇನನಿಗೆ ಈ ವಿಷಯವನ್ನು ತಿಳಿಸಿದನು.

ಭೀಮಸೇನನು ಕಪಟಿಯಾದ ಅಡಿಗೆಯವನ್ನು ಆಹಾರದಲ್ಲಿ ಸೇರಿಸಿ ಕೊಟ್ಟಿರುವ ವಿಷವನ್ನು ಸಂತೋಷದಿಂದ ಸ್ವೀಕರಿಸಿದನು. ಈ ನಿಸ್ಸಾರವಾದ ವಿಷಕ್ಕಿಂತ ಅಧಿಕಬಲದಿಂದ ಯುಕ್ತವಾಗಿರುವ ಹಾಲಾಹಲವಿಷವನ್ನೂ ಆ ವಿಷದ ಪಾತ್ರೆಯನ್ನೂ ನುಂಗಿ ಜೀರ್ಣಿಸಿಕೊಂಡಿರುವ ವಾಯುದೇವರ ಅವತಾರವಾಗಿರುವ ಭೀಮಸೇನನು ಈ ವಿಷದಿಂದ ಅಂಜದಿರುವುದು ಆಶ್ಚರ್ಯವಲ್ಲ. ಈ ವಿಷವೂ ಭೀಮಸೇನನ ಹೊಟ್ಟೆಯಲ್ಲಿ ಜೀರ್ಣವಾಯಿತು."

" ಈ ವಿಷಯವನ್ನು ಧರ್ಯೋಧನ ಮುಂತಾದ ಅಯೋಗ್ಯರು ತಿಳಿದರು. ತುಂಬಾ ಸಂಕಟ ಪಟ್ಟರು. ಭೀಮಸೇನನನ್ನು ಸಂಹರಿಸುವುದಕ್ಕೆ ಇನ್ನೊಂದು ವಿಧವಾದ ಉಪಾಯವನ್ನು ಕಂಡುಹಿಡಿದರು. ಗಂಗಾನದಿಯಲ್ಲಿ " ಪ್ರಮಾಣಕೋಟಿ" ಎಂಬ ಮಡುವಿದೆ. ಯಾವ ನದಿಯಲ್ಲಿಯೂ ಮಧ್ಯದಲ್ಲಿ ಮಾತ್ರ ಆಳವಾಗಿದ್ದು ದಡದಲ್ಲಿ ನೀರು ಕಡಿಮೆಯಾಗಿರುತ್ತದೆ. ಪ್ರಮಾಣಕೋಟಿಯಲ್ಲಿ ಹಾಗಲ್ಲ. ಎರಡು ದಡಗಳ ಮಧ್ಯದಲ್ಲಿ ಎಲ್ಲೆಲ್ಲಿಯೂ ಒಂದು ಕೋಟಿ ಯೋಜನಕ್ಕಿಂತಲೂ ಅಧಿಕವಾದ ಆಳವಿದೆ. ಆದ್ದರಿಂದಲೇ ಆ ಮಡುವು " ಪ್ರಮಾಣಕೋಟಿ" ಅಂದರೆ " ಒಂದುಕೋಟಿ ಯೋಜನ ಪರಿಮಿತವಾದ ಆಳವುಳ್ಳದ್ದು " ಎಂದು ಪ್ರಸಿದ್ಧವಾಗಿದೆ."

" ಇಲ್ಲಿ ಒಂದು ಸಂಶಯವು ಬರುತ್ತದೆ. ಗಂಗೆಯು ಭೂಮಿಯಲ್ಲಿರುವ ಒಂದು ನದಿ. ಭೂಮಿಯು ಒಂದು ಲಕ್ಷ ಯೋಜನಗಳಷ್ಟು ದಪ್ಪವಾದದ್ದು. ಆದ್ದರಿಂದ ಭೂಮಿಯಲ್ಲಿರುವ ಗಂಗಾನದಿಯಲ್ಲಿರತಕ್ಕ ಮಡುವು ಒಂದು ಲಕ್ಷ ಯೋಜನಗಳಿಗಿಂತ ಅಧಿಕವಾದ ಆಳವುಳ್ಳದ್ದಾಗಿರುವುದು ಹೇಗೆ ಸಾಧ್ಯವಾಗುತ್ತದೆ? ಎಂಬುದೇ ಆ ಪ್ರಶ್ನೆ. ಆದರೆ ಗಂಗಾನದಿಯು ಕೆಲವು ಪ್ರದೇಶಗಳಲ್ಲಿ ಭೂಮಿಯನ್ನು ತನ್ನ ವೇಗದಿಂದ ದಾಟಿ ಘನೋದಕದ ವರೆಗೆ ಹೋಗಿ ಕೂರ್ಮರೂಪಿಯಾದ ಶ್ರೀಹರಿಯ ಬೆನ್ನನ್ನು ಮುಟ್ಟಿರುವುದಾಗಿ ಪುರಾಣಗಳಲ್ಲಿ ಸ್ಪಷ್ಟವಾಗಿದೆ. ಆದ್ದರಿಂದ ಒಂದು ಕೋಟಿ ಯೋಜನದಷ್ಟು ಆಳವಾಗಿರುವುದರಲ್ಲಿ ಆಶ್ಚರ್ಯವಿಲ್ಲ."

" ಆ ಪ್ರಮಾಣಕೋಟಿ ಎಂಬ ಮಡುವಿನ ತೀರದಲ್ಲಿ ನೀರನ್ನು ಮುಟ್ಟುತ್ತಿರುವಂತೆ ಆಕಾಶವನ್ನು ಮುಟ್ಟುತ್ತಿರುವ ಅಸಂಖ್ಯಮಹಡಿಗಳಿಂದ ಯುಕ್ತವಾದ ಮನೆಯನ್ನು ಕಟ್ಟಿಸಬೇಕು. ಆ ಮನೆಯಲ್ಲಿ ಮೇಲಿರುವ ಬೋಳುಮಾಳಿಗೆಯಲ್ಲಿ ಭೀಮಸೇನನನ್ನು ಮಲಗಿಸಬೇಕು. ಅವನು ಮೈಯಲ್ಲಿ ಎಚ್ಚರವಿಲ್ಲದಂತೆ ನಿದ್ರೆಯನ್ನು ಮಾಡುತ್ತಿರಬೇಕು. ಆ ಸಮಯದಲ್ಲಿ ಉಗ್ರವಾದ ಮಂತ್ರಗಳಿಂದ ಜಪಿಸಲ್ಪಟ್ಟ ಆದ್ದರಿಂದಲೇ ಅಚ್ಛೇದ್ಯಾಭೇದ್ಯವಾದ ಹಗ್ಗಗಳಿಂದ ಭೀಮಸೇನನ ಕೈಗಳನ್ನೂ ಕಾಲುಗಳನ್ನೂ ಕಟ್ಟಿಬಿಡಬೇಕು. ಆ ಮಹಡಿಯಿಂದ ಅವನ ದೇಹವನ್ನು ಗಂಗೆಗೆ ಅಭಿಮುಖವಾಗಿ ತಳ್ಳಬೇಕು. ಅವನ ತುಂಬಾ ಭಾರವುಳ್ಳ ದೇಹವು ಗಂಗೆಯಲ್ಲಿ ತುಂಬಾ ಎತ್ತರದಿಂದ ಬೀಳುತ್ತದೆ. ಆಗ ಅವನಿಗೆ ಎಚ್ಚರವು ಏರ್ಪಟ್ಟರು ಕೈಗಳನ್ನೂ ಕಾಲುಗಳನ್ನೂ ಬಿಡಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ತುಂಬಾ ಎತ್ತರದಿಂದ ಕೆಳಗೆ ಬಿದ್ದಿರುವ ಮತ್ತು ತುಂಬಾ ಭಾರವಾಗಿರುವ ಅವನ ದೇಹವು ಪ್ರತಿಕ್ಷಣದಲ್ಲಿಯೂ ನೀರಿನಲ್ಲಿ ಅತಿವೇಗದಿಂದ ಕೆಳಗೆ ಹೋಗುತ್ತದೆ. ಹೀಗಾಗಿ ಭೀಮಸೇನನು ಸಾಯುವನು. ಎಂದು ತೀರ್ಮಾನಿಸಿದರು.

" ಅದರಂತೆಯೇ ಮಹಡಿಯ ಮನೆಯನ್ನು ಕಟ್ಟಿಸಿದರು. ಭೀಮಸೇನನನ್ನು ತುಂಬಾ ಉಪಚರಿಸುತ್ತಾ ಅಲ್ಲಿಗೆ ಕರೆದುಕೊಂಡು ಹೋದರು. ಬೋಳುಮಾಳಿಗೆಯಲ್ಲಿ ಭೀಮಸೇನನನ್ನು ಮಲಗಿಸಿಕೊಂಡು ಅವನ ಸುತ್ತಲೂ ಧೃತರಾಷ್ಟ್ರನ ಮಕ್ಕಳೆಲ್ಲರೂ ಮಲಗಿದರು. ಈ ಕಪಟವನ್ನು ತಿಳಿಯದಿರುವ ರಾಜಕುಮಾರರೂ ಮಲಗಿದರು. ಅವನೊಬ್ಬನನ್ನು ಮಲಗಿಸಿದರೆ ಅವನು ಮಲಗದಿರಬಹುದು. ಅವನಿಗೆ ವಿಶ್ವಾಸವು ಹುಟ್ಟಬೇಡವೇ? ಅದಕ್ಕಾಗಿ ಸರ್ವರೂ ಮಲಗಿದರು."

" ಆ ಸಮಯದಲ್ಲಿ ಯುಯುತ್ಸುವು ಇವರ ಉದ್ದೇಶ್ಯವನ್ನು ಭೀಮಸೇನನಿಗೆ ರಹಸ್ಯವಾಗಿ ತಿಳಿಸಿದನು. ಇದನ್ನು ತಿಳಿದ ಭೀಮಸೇನನಿಗೆ ತುಂಬಾ ಸಂತೋಷವಾಯಿತು. ದುರ್ಯೋಧನ ಮುಂತಾದವರಿಗೆ ತನ್ನಲ್ಲಿರುವ ದ್ವೇಷವು ಸರ್ವರಿಗೂ ತಿಳಿಯುವಂತಾಗಬೇಕೆಂದೂ ಅದಕ್ಕೆ ಈಗ ಸರಿಯಾದ ಸಂದರ್ಭವು ಬಂತೆಂದೂ ತೀರ್ಮಾನಿಸಿದನು. ಅವರ ಮಧ್ಯದಲ್ಲಿ ಮಲಗಿದನು. ಘೋರನಿದ್ದೆಯು ಬಂದಂತೆ ನಟಿಸಿದನು. ಅವರೆಲ್ಲರೂ ಭೀಮಸೇನನ ದೇಹವನ್ನು ಬಿಗಿದು ಗಂಗೆಯಲ್ಲಿ ತಳ್ಳಿದರು."

" ಅವನ ದೇಹವು " ಪ್ರಮಾಣಕೋಟ" ಎಂಬ ಮಡುವಿನಲ್ಲಿ ಪಾತಾಳಕ್ಕೆ ಅಭಿಮುಖವಾಗಿ ಅತಿವೇಗದಿಂದ ಹೋಗುತ್ತಿತ್ತು. ಈ ಸಮಯದಲ್ಲಿ ಭೀಮಸೇನನು ಮೆಲ್ಲಗೆ ಆಕಳಿಸುವಂತೆ ನಟಿಸಿದನು. ಅವನ ದೇಹವು ಅಲ್ಲಾಡಿತು. ಆಗ ಮಂತ್ರಗಳಿಂದ ಜಪಸಲ್ಪಟ್ಟು ತನ್ನ ದೇಹವನ್ನು ಬಿಗಿದಿರುವ ಹಗ್ಗಗಳೆಲ್ಲವೂ ಕಡಿದು ಹೋದವು. ಈಸಿಕೊಂಡು ನೀರಿನ ಮೇಲೆ ಬಂದನು. ತಮ್ಮ ಪ್ರಯತ್ನಗಳೆಲ್ಲವೂ ವಿಫಲವಾದುದರಿಂದ ದೂರ್ಯೋಧನನೇ ಮೊದಲಾದ ಅಯೋಗ್ಯರೆಲ್ಲರೂ ತುಂಬಾ ದುಃಖಿಸಿದರು. ಯಯುತ್ಸು ಮುಂತಾದ ಸಜ್ಜನರೆಲ್ಲರೂ ಆನಂದಪರವಶರಾದರು."

" ಈ ಉಪಾಯದಿಂದಲೂ ಭೀಮಸೇನನನ್ನು ಸಂಹರಿಸಲು ಸಾಧ್ಯವಾಗದಿರುವುದನ್ನು ತಿಳಿದು ದುರ್ಯೋಧನ ಮುಂತಾದವರು ಪುನಃ ದೀರ್ಘವಾಗಿ ಆಲೋಚಿಸಿದರು. ಭೀಮಸೇನನನ್ನು ಕೊಲ್ಲುವುದಕ್ಕೆ ಶಕುನಿಯು ಇನ್ನೊಂದು ಉಪಾಯವನ್ನು ತಿಳಿಸಿದನು."

" ಸರ್ಪಗಳಲ್ಲಿ ಅತಿ ವಿಷದಿಂದ ಯುಕ್ತವಾಗಿರುವ ಎಂಟು ಗುಂಪುಗಳಿವೆ. ಶ್ರೀಶುಕ್ರಾಚಾರ್ಯರು ಉಪದೇಶಿಸಿರುವ ಮಂತ್ರಗಳನ್ನು ಜಪಿಸಿ ಆ ಸರ್ಪಗಳನ್ನು ನಾನು ವಶಪಡಿಸಿಕೊಂಡಿರುವೆನು. ಅವುಗಳನ್ನು ಒಂದು ಪಂಜರದಲ್ಲಿಟ್ಟು ರಕ್ಷಿಸುತ್ತಿರುವೆನು. ಭೀಮಸೇನನು ಆಟಗಳನ್ನು ಆಡಿ ತುಂಬಾ ಆಯಾಸದಿಂದ ಮಲಗಿರುವ ಸಮಯದಲ್ಲಿ ಅವನ ದೇಹದ ಮೇಲೆ ಈ ಎಲ್ಲಾ ಸರ್ಪಗಳನ್ನೂ ಬಿಡಬೇಕು. ಆ ಸರ್ಪಗಳೆಲ್ಲವೂ ಒಂದೂ ಬಿಡದಂತೆ ಪುನಃ ಪುನಃ ಕಡಿಯಬೇಕು. ಹೀಗೆ ಮಾಡಿದರೆ ಭೀಮಸೇನನು ಸಾಯುವನು ಎಂದು ತಿಳಿಸಿದನು."

" ಭೀಮಸೇನನು ಆಟಗಳನ್ನು ಆಡಿ ತುಂಬಾ ಆಯಾಸದಿಂದ ಊರಿನ ಹೊರಗೆ ಒಂದು ಮರದ ಕೆಳಗೆ ಮಲಗಿರುವುದನ್ನು ತಿಳಿದರು. ಅವನ ಮೇಲೆ ದುರ್ಯೋಧನನ ಸಾರಥಿಯು ಈ ಸರ್ಪಗಳನ್ನು ಬಿಟ್ಟನು. ಅವುಗಳೆಲ್ಲವೂ ಭೀಮಸೇನನ ವಿಶಾಲವಾದ ವಕ್ಷಃಸ್ಥಳದ ಮೇಲೆ ಬಂದು ಮಲಗಿದವು. ಒಂದೇ ಸಮಯದಲ್ಲಿ ಕಡಿದವು. ಅವುಗಳ ಹಲ್ಲುಗಳೆಲ್ಲವೂ ಪುಡಿ ಪುಡಿಯಾದವು. ಆದರೆ ಭೀಮಸೇನನ ದೇಹದಲ್ಲಿ ಒಂದು ಗಾಯವೂ ಏರ್ಪಡಲಿಲ್ಲ."

"ಭೀಮಸೇನನಿಗೆ ಸ್ವಪ್ನದಲ್ಲಿ ಇರುವೆಗಳು ಕಡಿದಂತಾಯಿತು. ಕೈಗಳನ್ನೂ ಕಾಲುಗಳನ್ನೂ ಒಮ್ಮೆ ಝಾಡಿಸಿದನು. ಆಗ ಆ ಸರ್ಪಗಳೆಲ್ಲವೂ ಬಹು ದೂರದ ವರೆಗೆ ಹೋಗಿ ಬಿದ್ದವು. ಒಮ್ಮೆ ಹೊರಳಿದನು. ಆಗ ಕೆಲವು ಸರ್ಪಗಳು ಇರುವೆಗಳಂತೆ ಇವನ ದೇಹದ ಅಡಿಯಲ್ಲಿ ಬಿದ್ದು ಸತ್ತವು. ಝಾಡಿಸುತ್ತಿರುವ ಕೈಗಳ ಅಡಿಯಲ್ಲಿ ಸಿಕ್ಕಿದ ದುರ್ಯೋಧನನ ಸಾರಥಿಯು ಸತ್ತನು. ಪುನಃ ಹಿಂದಿನಂತೆಯೇ ಮೈಮರತು ನಿದ್ದೆಯನ್ನು ಮಾಡಲು ಆರಂಭಿಸಿದನು."

" ಇದನ್ನು ಧುರ್ಯೋಧನ ಮುಂತಾದವರು ನೋಡಿದರು. ಈ ಸರ್ಪಗಳ ಮುಖದಿಂದ ಹೊರಟಿರುವ ಗಾಳಿಯ ಸ್ಪರ್ಶದಿಂದಲೂ ಕಣ್ಣುಗಳಿಂದ ಹೊರಡುತ್ತಿರುವ ವಿಷದ ಜ್ವಾಲೆಯಿಂದಲೂ ಲೋಕಗಳೆಲ್ಲವೂ

ಭಸ್ಮವಾಗುತ್ತಿವೆ. ಭೀಮಸೇನನನ್ನು ಈ ಸರ್ಪಗಳು ಕಡಿದಿವೆ. ಆದರೂ ಸಾಯಲಿಲ್ಲ. ಇವನ ದೇಹದಲ್ಲಿ ಯಾವ ವಿಕಾರವೂ ಏರ್ಪಡಲಿಲ್ಲ. ಈ ಸರ್ಪಗಳ ಮಹಾಪ್ರಯತ್ನಗಳೆಲ್ಲವೂ ನಿಷ್ಫಲವಾದವು. ಇಂತಹ ಸ್ವಾಭಾವಿಕ ಬಲವು ಯಾರಲ್ಲಿಯೂ ಇದ್ದಂತೆ ನಾವು ಕೇಳಲೂ ಇಲ್ಲ. ಹೀಗಿರುವಾಗ ನೋಡಿದ್ದುಂಟೇ?"

" ಹಿರಣ್ಯಕಶಪುವಿನ ಮಗನಾದ ಪ್ರಹ್ಲಾದನನ್ನು ಇಂತಹ ಎಷ್ಟೋ ಸರ್ಪಗಳು ಕಡಿದಿರುವುದಾಗಿಯೂ ಅವನ ದೇಹದಲ್ಲಿಯೂ ಈ ಸರ್ಪಗಳ ಕಡಿತದಿಂದ ಗಾಯಗಳು ಏರ್ಪಡದಿರುವುದಾಗಿಯೂ ನಾವು ಕೇಳಿರುವೆವು. ಆದರೆ ಅವನು ತನ್ನನ್ನು ಕಾಪಾಡಬೇಕೆಂದು ಶ್ರೀಹರಿಯಲ್ಲಿ ಪ್ರಾರ್ಥಿಸಿದನು. ಶ್ರೀಹರಿಯು ಅವನನ್ನು ಕಾಪಾಡಿದನೆಂದು ತಿಳಿಯುತ್ತದೆ. ಈ ಭೀಮಸೇನನು ಆತ್ಮರಕ್ಷಣಾರ್ಥವಾಗಿ ಶ್ರೀಹರಿಯನ್ನು ಪ್ರಾರ್ಥಿಸಲಿಲ್ಲ. ಸ್ವಶಕ್ತಿಯಿಂದಲೇ ಸರ್ಪಗಳನ್ನು ನಿಗ್ರಹಿಸಿದನು. ಆದ್ದರಿಂದ ಇವನಲ್ಲಿರುವ ಶಕ್ತಿಯು ಪ್ರಹ್ಲಾದನಲ್ಲಿಯೂ ಇಲ್ಲವೆಂದು ತೀರ್ಮಾನಿಸಬಹುದು. ಪ್ರಹ್ಲಾದನನ್ನು ಹಿರಣ್ಯಕಶಿಪುವಿನ ಸೇವಕರು ತಮ್ಮ ಇಷ್ಟದಂತೆ ಶೆಳೆದುಕೊಂಡು ಹೋಗುತ್ತಿದ್ದರು. ಈ ಭೀಮಸೇನನ್ನು ನಮ್ಮ ಇಷ್ಟದಂತೆ ಶೆಳೆದುಕೊಂಡು ಹೋಗಲು ಸಾಧ್ಯವಿಲ್ಲದಿರುವುದರಿಂದ ಇವನ ಶಕ್ತಿಯೇ ಅಧಿಕವೆಂದು ತೀರ್ಮಾನಿಸಬಹುದು."

" ಓ ಅಕ್ರೂರ, ನಾನು ನಮ್ಮೆಲ್ಲರ ಸ್ಥಿತಿಯನ್ನು ಈಗ ತಿಳಿಸಿದೆನು. ನನ್ನ ಮಕ್ಕಳೆಲ್ಲರೂ ಯಾವ ಕಪಟವನ್ನೂ ಅರಿಯದವರು. ಆ ಮಕ್ಕಳಲ್ಲಿಯೂ ಭೀಮಸೇವನನು ಶುದ್ಧವಾದ ಭಾಗವತ ಧರ್ಮದಲ್ಲಿ ದೃಢವಾದ ನಿಷ್ಠೆಯುಳ್ಳವನು. ಅವನನ್ನು ಕೊಲ್ಲುವುದೂ ಅದಕ್ಕಾಗಿ ಶ್ರೀಕೃಷ್ಣದೇವನನ್ನು ಕೊಲ್ಲುವುದೂ ಭೀಮಸೇನನು ಸತ್ತಕೂಡಲೇ ಅರ್ಜುನನನ್ನು ಕೊಲ್ಲುವುದೂ ಭೀಮಸೇನನ್ನೂ ಅರ್ಜುನನ್ನೂ ಕೊಂದ ಮೇಲೆ ಉಳಿದವರನ್ನು ದುರ್ಯೋದನನ ದಾಸರಾಗುವಂತೆ ಮಾಡುವುದೂ ಅದಕ್ಕೆ ಒಪ್ಪದಿದ್ದರೆ ಅವರನ್ನೆಲ್ಲರನ್ನೂ ಜೈಲಿನಲ್ಲಿಡುವುದೂ ದುರ್ಯೋಧನ ಮುಂತಾದವರ ಆಸೆ. ಮಕ್ಕಳ ಆಸೆಗೆ ಧೃತರಾಷ್ಟ್ರನು ವಿರೋಧವನ್ನು ಮಾಡುವವನಲ್ಲ. ಭೀಷ್ಮ ಮುಂತಾದವರು ಉದಾಸೀನರು. ವಿದುರನು ಮಾತ್ರ ನನ್ನ ಮಕ್ಕಳಿಗೆ ಶ್ರೇಯಸ್ಸನ್ನು ಬಯಸುವವನು. ಆದರೆ ಅವನ ಮಾತುಗಳನ್ನು ಕೇಳುವವರು ಈ ಊರಿನಲ್ಲಿ ಯಾರೂ ಇಲ್ಲ. ನಾನೂ ನನ್ನ ಮಕ್ಕಳೂ ತುಂಬಾ ಆಪತ್ತಿನಲ್ಲಿ ಸಿಕ್ಕಿರುವೆವು. ಈ ವಿಷಯಗಳನ್ನೆಲ್ಲಾ ಶ್ರೀಕೃಷ್ಣದೇವನಲ್ಲಿ ವಿಜ್ಞಾಪಿಸು. ನನ್ನನ್ನೂ ನನ್ನ ಮಕ್ಕಳನ್ನೂ ಈ ಆಪತ್ತಿನಿಂದ ಬಿಡಿಸುವಂತೆ ಪ್ರಾರ್ಥಿಸು' ಇದು ಅಕೂರ್ರನಲ್ಲಿ ಕುಂತೀದೇವಿಯ ಪ್ರಾರ್ಥನೆ.

ಅಕ್ರೂರನು ಅವಳ ಮನೆಯನ್ನು ಬಿಟ್ಟುಹೊರಟನು. ವಿದುರನ ಮನೆಗೆ ಬಂದನು. ಅವನೂ ಕುಂತೀದೇವಿಯು ಹೇಳಿರುವ ವಿಷಯಗಳನ್ನೇ ತಿಳಿಸಿದನು. ಭೀಷ್ಮಾದಿಗಳ ಮನೆಗೆ ಬಂದನು. ಅವರ ಜೊತೆಯಲ್ಲಿ ಮಾತಾಡಿದನು. ಅವರು ಉದಾಸೀನರು ಎಂಬ ವಿಷಯವನ್ನು ತೀರ್ಮಾನಿಸಿದರು. ಕೊನೆಗೆ ಧೃತರಾಷ್ಟ್ರನನ್ನು ನೋಡಿದನು. ಅವನಿಗೆ ಬುದ್ಧಿವಾದವನ್ನು ಹೇಳಿದನು.

" ಓ ಧೃತರಾಷ್ಟ್ರ ಮಹಾರಾಜ, ನೀನು ಕಣ್ಣಿಲ್ಲದವನಾಗಿರುವಿ. ನಿನ್ನ ತಮ್ಮನಾದ ಪಾಂಡುರಾಜನು ಅಣ್ಣನೇ ದೈವವೆಂದು ನಂಬಿದನು. ನಿನಗಾಗಿ ಎಲ್ಲಾ ದಿಕ್ಕುಗಳಲ್ಲಿಯೂ ದಿಗ್ವಿಜಯವನ್ನು ಮಾಡಿ ಧನರಾಶಿಯನ್ನು ನಿನ್ನ ಪಾದದಲ್ಲಿ ಸುರಿಸಿದವನು. ಕೊನೆಗೆ ತಪಸ್ಸಿಗಾಗಿ ಕಾಡಿಗೆ ಹೋಗಿ ಜೀವಿಸಿದವನು. ಋಷಿಶಾಪದಿಂದ ದಾಂಪತ್ಯಸುಖವನ್ನು ತ್ಯಜಿಸಿದವನು. ಅವನ ಅನುಮತಿಯಿಂದಲೇ ಅವನ ಪತ್ನಿಯರು ಉತ್ತಮರಾದ ದೇವತೆಗಳಿಂದ

ಮಕ್ಕಳನ್ನು ಪಡೆದಿರುವರು. ಇದು ಧರ್ಮಶಾಸ್ತ್ರಕ್ಕೆ ಸಂಮತವಾದ ಪುತ್ರೋತ್ಪಾದನವಾಗಿದೆ. ಈಗ ಪಾಂಡುರಾಜನು ಸ್ವರ್ಗಸ್ಥನಾಗಿರುವನು. ಅವನ ಪತ್ನಿಯೂ ಮಕ್ಕಳೂ ಈಗ ನಿನ್ನಲ್ಲಿಗೆ ಬಂದಿರುವರು."

" ಯಾವ ಪಾಂಡುರಾಜನ ಪ್ರಭಾವದಿಂದ ನೀನು ಇಷ್ಟು ವೈಭವದಿಂದ ಯುಕ್ತನಾಗಿರುವಿಯೋ ಅವನ ಮಕ್ಕಳಲ್ಲಿ ನೀನು ಅಸಡ್ಡೆಯನ್ನು ತೋರಿಸಬಾರದು. ಧರ್ಮದಿಂದ ಅವರಿಗೆ ಬರಬೇಕಾದ ಭಾಗವನ್ನು ನೀನು ಕೊಡಬೇಕು. ನಿನ್ನ ಮಕ್ಕಳಲ್ಲಿಯೂ ಪಾಂಡುರಾಜನ ಮಕ್ಕಳಾದ ಪಾಂಡವರಲ್ಲಿಯೂ ಯಾವ ವಿಧವಾದ ವೈಷಮ್ಯವನ್ನೂ ತೋರಿಸಬಾರದು. ಒಂದೇ ವಿಧವಾದ ಭಾವವನ್ನೇ ತೋರಿಸಬೇಕು. ಹೀಗೆ ಮಾಡಿದರೆ ನಿನಗೆ ಕೀರ್ತಿಯೂ ಪುಣ್ಯವೂ ಬರುತ್ತದೆ. ಕೃತಜ್ಞನಾದ ನಿನ್ನಲ್ಲಿ ಸರ್ವರೂ ವಿಶೇಷವಾದ ಪ್ರೀತಿಯನ್ನು ಮಾಡುವರು. ಆ ಜನ ಪ್ರೀತಿಯಿಂದ ದ್ರವ್ಯಸಂಪತ್ತಿನ ವೃದ್ಧಿಯೂ ಎಲ್ಲಾ ವಿಧವಾದ ಇಷ್ಟಾರ್ಥಗಳ ಲಾಭವೂ ಏರ್ಪಡುತ್ತದೆ."

" ಅದು ಮಾತ್ರವಲ್ಲ. ಪಾಂಡವರು ಪರಮ ಶ್ರೀಕೃಷ್ಣನ ಭಕ್ತರು. ಅವರನ್ನು ಸಂತೋಷಪಡಿಸಿದರೆ ಶ್ರೀಕೃಷ್ಣದೇವನು ನಿನ್ನಲ್ಲಿ ವಿಶೇಷಾನುಗ್ರಹವನ್ನು ಮಾಡುವನು. ಶ್ರೀಕೃಷ್ಣದೇವನು ಸಂತುಷ್ಟನಾದರೆ ಸಕಲ ಯಾದವರೂ ಸಕಲ ದೇವತೆಗಳೂ ಸಂತುಷ್ಟರಾಗುವರು. ಧರ್ಮ ಅರ್ಥ ಕಾಮ ಎಂಬ ಪುರುಷಾರ್ಥಗಳೂ ಕೊನೆಗೆ ಮುಕ್ತಿಯೂ ನಿನಗೆ ಏರ್ಪಡುತ್ತದೆ. ಇದಕ್ಕೆ ವಿರುದ್ಧವಾಗಿ ನಡೆದುಕೊಂಡರೆ ಈಗ ಹೇಳಿದ ಎಲ್ಲಾ ಫಲಗಳಿಗೂ ವಿಪರೀತವಾದ ಫಲಗಳೂ ಏರ್ಪಡುತ್ತವೆ. ಇದು ಶ್ರೀಕೃಷ್ಣದೇವನ ಅಪ್ಪಣೆ. ಇದನ್ನು ತಿಳಿದ ನೀನು ನಡೆದುಕೊಳ್ಳಬೇಕಾದ ಕಾರ್ಯಗಳನ್ನು ನಿರ್ಧರಿಸು." ಇದು ಅಕ್ರೂರನು ಹೇಳಿದ ಶ್ರೀಕೃಷ್ಣದೇವನ ಸಂದೇಶ.

ಈ ಮಾತುಗಳನ್ನು ಧೃತರಾಷ್ಟ್ರನು ಕೇಳಿದನು. ದೀರ್ಘವಾಗಿ ಆಲೋಚಿಸಿದನು. ಅಕೂರ್ರನ ಮಾತುಗಳೆಲ್ಲವೂ ನ್ಯಾಯಯುಕ್ತವಾದವುಗಳೆಂದು ತೋರಿತು. ಆದರೆ ತನ್ನ ಮಕ್ಕಳೆಲ್ಲರೂ ತನ್ನ ಮಾತಿಗೆ ಮರ್ಯಾದೆಯನ್ನು ಕೊಡಲಾರರೆಂದು ತೋರಿತು. ಮಕ್ಕಳ ಅಭಿಪ್ರಾಯಕ್ಕೆ ವಿರುದ್ಧವಾಗಿ ನಡೆದುಕೊಳ್ಳುವುದಕ್ಕೂ ಮನಸ್ಸಿಲ್ಲ. ಆದ್ದರಿಂದ ಸಂಕ್ಷಿಪ್ತವಾಗಿ ಒಂದೇ ಮಾತಿನಿಂದ ಉತ್ತರವನ್ನು ಕೊಟ್ಟನು.

" ಎಲ್ಲವೂ ಶ್ರೀಹರಿಯ ವಶದಲ್ಲಿದೆ. ಯಾರೂ ಸ್ವತಂತ್ರರಲ್ಲ. ಶ್ರೀಕೃಷ್ಣದೇವನು ಭೂಭಾರ ಪರಿಹಾರಾರ್ಥವಾಗಿ ಅವತರಿಸಿದವನು. ಅವನ ಇಷ್ಟದಂತೆ ನಡೆಯಲಿ." ಎಂದನು.

ಈ ಮಾತುಗಳನ್ನು ಅಕ್ರೂರನು ಕೇಳಿದನು. "ನಿನಗೆ ಮಕ್ಕಳನ್ನಿಟ್ಟುಕೊಳ್ಳುವ ಭಾಗ್ಯವಿಲ್ಲ." ಎಂದನು. ಎಲ್ಲರ ಅನುಮತಿಯನ್ನೂ ಪಡೆದು. ಅಲ್ಲಿಂದ ಹೊರಟನು. ಮಥುರಾಪಟ್ಟಣಕ್ಕೆ ಹಿಂದಿರುಗಿ ಬಂದು. ಕುಂತಿ, ವಿದುರ, ಭೀಷ್ಮಾದಿಗಳು, ಧೃತರಾಷ್ಟ್ರಮಹಾರಾಜ ಮುಂತಾದವರು ಹೇಳಿದ ಎಲ್ಲಾ ಮಾತುಗಳನ್ನೂ ಶ್ರೀಕೃಷ್ಣದೇವನ ಸನ್ನಿಧಾನದಲ್ಲಿ ವಿಜ್ಞಾಪಿಸಿದನು.

(೬೨) ಯಃ ಜರಾಯಾಃ ಸೂನುಂ ಬಹುಶಃ ನಿರ್ಭಿನ್ನಸೇನಂ ವಿದ್ರುತಂ ವ್ಯತನುತ ಸಃ ನಃ ಪಾಯಾತ್ - ಯಾವ ಶ್ರೀಕೃಷ್ಣದೇವನು ಜರಾಸಂಧನ ಸೈನ್ಯವನ್ನೆಲ್ಲಾ ಸಂಹರಿಸಿ ಅವನನ್ನು ಅನೇಕ ಸಲ ಓಡಿಸಿದನೋ ಅವನು ನಮ್ಮನ್ನೆಲ್ಲರನ್ನೂ ರಕ್ಷಿಸಲಿ.

**ವಿಶೇಷಾರ್ಥ - ಬ್ರಹ್ಮೇಶದೂರ್ವಾಸೋದತ್ತವರೈರಜೇಯಂ ಜರಾಸಂಧಂ ತತ್ಸೇನಾಂ ಸರ್ವಾಂ ಹತ್ವಾ ಬಹುಶಃ ಪಲಾಯಿತಂ ಕೃತ್ವಾ ಸರ್ವಾನತೋಷಯತ್,**

ಬ್ರಹ್ಮ ರುದ್ರ ಮತ್ತು ದೂರ್ವಾಸ ಋಷಿಗಳ ವಶಗಳಿಂದ ಸರ್ವರಿಂದಲೂ ಜಯಿಸಲು ಅಸಾಧ್ಯನಾದ ಜರಾಸಂಧನ ಎಲ್ಲಾ ಸೈನ್ಯಗಳನ್ನೂ ಸಂಹರಿಸಿ ಅನೇಕ ಸಂದರ್ಭಗಳಲ್ಲಿ ಅವನನ್ನು ಓಡಿಸಿದ ಶ್ರೀಕೃಷ್ಣದೇವನು ಸರ್ವರನ್ನೂ ಸಂತೋಷಪಡಿಸಿದನು.

## ಜರಾಸಂಧನ ಜನ್ಮ

ವಿಶೇಷಾರ್ಥ ವಿವರಣ - ಮಗಧದೇಶದ ರಾಜನ ಪತ್ನಿಯು ಗರ್ಭಿಣಿಯಾಗಿದ್ದಳು. ಅವಳ ಗರ್ಭದಲ್ಲಿ ಕಲಿಯ ಅನಂತರದಲ್ಲಿ ಎರಡನೆಯವನೂ ಅತಿ ದುಷ್ಟನೂ ಆಗಿರುವ "ವಿಪ್ರಚಿತ್ತಿ" ಎಂಬ ದೈತ್ಯನು ಪ್ರವೇಶಿಸಿದನು. ಅವಳು ಪ್ರಸವಿಸಿದಳು. ಆದರೆ ಅವಳ ದೇಹದಿಂದ ಪ್ರಸವಿಸುವ ಕಾಲದಲ್ಲಿ ದೇಹದ ಎರಡು ಹೋಳುಗಳು ಕೆಳಗೆ ಬಿದ್ದವು. ಆ ದೇಹದ ಹೋಳುಗಳಲ್ಲಿ ಬಲಭಾಗದ ಹೋಳಿನಲ್ಲಿ ಬಲಗೈ, ಬಲಗಾಲು, ಬಲಗಣ್ಣು, ಬಲಮೂಗು ಬಾಯಿ ಮುಂತಾದ ಅವಯವಗಳ ಎಡಭಾಗಗಳಿದ್ದವು. ಇಂತಹ ಪ್ರಸವವನ್ನು ಕಂಡ ದಾದಿಯರು ಆ ದೇಹದ ಎರಡು ಭಾಗಗಳನ್ನೂ ಹೊರಗೆ ಬಿಸಾಡಿ ಮನೆಯೊಳಗೆ ಬಂದರು. ಅದೇ ಮಾರ್ಗದಲ್ಲಿ ಹೋಗುತ್ತಿದ್ದ "ಜರಾ" ಎಂಬ ರಾಕ್ಷಸಿಯು ಈ ಹೋಳುಗಳನ್ನು ನೋಡಿದಳು. ಆ ಹೋಳುಗಳನ್ನು ಎರಡು ಕೈಗಳಲ್ಲಿ ತೆಗೆದುಕೊಂಡಳು. ಒಟ್ಟುಗೂಡಿಸಿ ಒಂದೇ ದೇಹದಂತೆ ಮಾಡಿದಳು. " ಜೀವ, ಜೀವ" ಅಂದರೆ " ಬದುಕು ಬದುಕು" ಎಂದು ಹೇಳಿದಳು. ಮರುಕ್ಷಣದಲ್ಲಿಯೇ ಆ ದೇಹದಲ್ಲಿ ಜೀವಿಯ ಪ್ರವೇಶವು ಏರ್ಪಟ್ಟಿತು. ಆ ಕೂಸು ಅಳಲು ಆರಂಭಿಸಿತು. ಅಳುವ ಧ್ವನಿಯನ್ನು ಕೇಳಿದ ದಾದಿಯರು ಓಡಿಬಂದರು. ಸುಂದರವಾದ ಮಗುವನ್ನು ನೋಡಿದರು. ಆ ಕೂಸನ್ನು ಎತ್ತಿಕೊಂಡು ಹೋಗಿ. ರಾಜನಿಗೆ ಅರ್ಪಿಸಿದರು. ಆ ಕೂಸು "ಜರಾ" ಎಂಬ ರಾಕ್ಷಸಿಯಿಂದ ಬದುಕಿಸಲ್ಪಟ್ಟಿರುವುದರಿಂದ (ಜರಾಯಾಃ ಸೂನುಃ) = ಜರಾಸೂನುಃ ಅಂದರೆ "ಜರಾ" ಎಂಬ ರಾಕ್ಷಸಿಯ ಮಗನು ಎಂದು ಪ್ರಸಿದ್ಧನಾದನು. "ಜರಾ" ಎಂಬ ರಾಕ್ಷಸಿಯಿಂದ ಜೋಡಿಸಲ್ಪಟ್ಟ ದೇಹವುಳ್ಳವನಾದ್ದರಿಂದ " ಜರಾಸಂಧ" ಅಂದರೆ " ಜರಾ ಎಂಬ ರಾಕ್ಷಸಿಯಿಂದ ಜೋಡಿಸಲ್ಪಟ್ಟ ದೇಹವುಳ್ಳವನು" ಎಂದು ಪ್ರಸಿದ್ಧನಾದನು.

## ಜರಾಸಂಧನಿಗೆ ವರಪ್ರಾಪ್ತಿ

ಎಲ್ಲಾ ಜೀವರುಗಳ ಮಧ್ಯದಲ್ಲಿ ಬ್ರಹ್ಮ ವಿಷ್ಣು ಮಹೇಶ್ವರರು ಉತ್ತಮರು ಎಂಬ ವಿಷಯದಲ್ಲಿ ವಿವಾದವು ಯಾರಿಗೂ ಇಲ್ಲ. ಸಾತ್ವಿಕರಾದ ದೇವತೆಗಳೂ ಋಷಿಗಳು ಮುಂತಾದವರೂ ವಿಷ್ಣುವೇ ಸರ್ವೋತ್ತಮನೆಂದು ನಂಬಿರುವರು. ವಿಷ್ಣುದ್ವೇಷಿಗಳಾದ ದೈತ್ಯರೆಲ್ಲರೂ ಶಿವನೇ ಸರ್ವೋತ್ತಮನೆಂದೂ ಬ್ರಹ್ಮನೇ ಸರ್ವೋತ್ತಮನೆಂದೂ ನಂಬಿರುವರು. ಜರಾಸಂಧನು ಬ್ರಹ್ಮದೇವನೇ ಸರ್ವೋತ್ತಮನೆಂದು ನಂಬಿ ಬ್ರಹ್ಮದೇವನನ್ನು ಕುರಿತು ತಪಸ್ಸನ್ನು ಮಾಡಿದನು. "ಅವಧ್ಯತ್ವ" ಅಂದರೆ 'ಯಾರಿಂದಲೂ ಕೊಲ್ಲಲಿಕ್ಕೆ ಸಾಧ್ಯವಾಗದಿರವಿಕೆ' ಎಂಬ ವರವನ್ನು ಬೇಡಿದನು. ಆದರೂ ಅವನಿಗೆ ಬ್ರಹ್ಮದೇವನಲ್ಲಿ ಪೂರ್ಣನಂಬಿಕೆ ಇಲ್ಲ. ಅದಕ್ಕಾಗಿ ರುದ್ರದೇವನನ್ನು ಕುರಿತು ಪುನಃ ತಪಸ್ಸನ್ನು ಮಾಡಿದನು. ಅವನಿಂದಲೂ ಅದೇ ವರವನ್ನು ಬೇಡಿದನು. ಬ್ರಾಹ್ಮಣರ ಮಧ್ಯದಲ್ಲಿ ದೂರ್ವಾಸ ಋಷಿಯು ರುದ್ರದೇವನ ಅವತಾರವೆಂದು ತಿಳಿದಿದ್ದನು. ದೂರ್ವಾಸರ ಮಾತಿನಲ್ಲಿ ಪೂರ್ಣ ನಂಬಿಕೆಯನ್ನಿಟ್ಟುಕೊಂಡಿದ್ದನು. ಆದ್ದರಿಂದ ಅವರನ್ನು ಅತಿ ಭಕ್ತಿಯಿಂದ ಆರಾಧಿಸಿ ಅವರಿಂದಲೂ ಅದೇ ವರವನ್ನು ಪಡೆದನು. ರುದ್ರದೇವರ ಮಾತುಗಳು ಸುಳ್ಳಾಗದಿರುವುದರಿಂದ ದೂರ್ವಾಸರ ಮಾತುಗಳೂ ಸುಳ್ಳಾಗಲಾರವೆಂದೂ ದೂರ್ವಾಸರ

ಮಾತಿನಂತೆ ತನಗೆ ವಿಷ್ಣುವಿನಿಂದಲೂ ಮರಣವು ಏರ್ಪಡದಿದ್ದರೆ ದೂರ್ವಾಸರಿಗಿಂತಲೂ ವಿಷ್ಣುವು ಅಧಮನೆಂದು ತಿಳಿಸಿದಂತಾಗುವುದೆಂದೂ ವಿಷ್ಣುದ್ವೇಷಿಯಾದ ಜರಾಸಂಧನು ನಂಬಿದನು.

# ಜರಾಸಂಧನ ಕನ್ಯೆಯರು

ಜರಾಸಂಧನಿಗೆ ''ಅಸ್ತಿ'' ''ಪ್ರಾಸ್ತಿ'' ಎಂಬ ಎರಡು ಕನ್ಯೆಯರಿದ್ದರು. ಅವರಿಬ್ಬರೂ ಅತಿ ಸುಂದರಿಯರಾಗಿದ್ದರು. ತನಗೆ ಶತ್ರುಗಳು ಅಧಿಕರಾಗಿರುವುದರಿಂದ ದಿಗ್ವಿಜಯಕ್ಕಾಗಿ ದೇಶಾಂತರಗಳಿಗೆ ಹೋಗಿರುವ ಕಾಲದಲ್ಲಿ ಆ ಕನ್ಯೆಯರನ್ನು ಯಾರೂ ಬಲಾತ್ಕಾರದಿಂದ ಅಪಹರಿಸಕೂಡದೆಂದು ರುದ್ರದೇವನಲ್ಲಿ ವರವನ್ನು ಬೇಡಿದನು. ರುದ್ರದೇವನು ತನ್ನ ಗಣಗಳಲ್ಲಿ ಸೇರಿದ ಕೆಲವು ಯಕ್ಷರನ್ನು ಈ ಕನ್ಯೆಯರನ್ನು ರಕ್ಷಿಸುವುದಕ್ಕಾಗಿ ಕಳುಹಿಸಿದ್ದನು. ಕಂಸನು ರುದ್ರದೇವನಿಂದ ಪಡೆದಿರುವ ಅಜೇಯತ್ವವರಬಲದಿಂದಲೇ ಆ ಯಕ್ಷರನ್ನು ಜಯಿಸಿ ಜರಾಸಂಧನ ಕನ್ಯೆಯರನ್ನು ಅಪಹರಿಸಿದನು. ಇದನ್ನು ತಿಳಿದ ಜರಾಸಂಧನು ಕಂಸನಲ್ಲಿ ಕುಪಿತನಾಗಲಿಲ್ಲ. ರುದ್ರದೇವನ ವರಬಲದಿಂದ ತನ್ನಂತೆಯೇ ಭೂಲೋಕದಲ್ಲಿಯೂ ಪಾತಾಳ ಮುಂತಾದ ಕೆಳಗಿನ ಎಲ್ಲಾ ಲೋಕಗಳಲ್ಲಿಯೂ ವಾಸಿಸುತ್ತಿರುವ ಸರ್ವರಿಂದಲೂ ಅಜೇಯನಾದ ಕಂಸನ ಬಲದಿಂದ ಸಂತುಷ್ಟನಾದನು. ಅವನಿಗೆ ತನ್ನ ಎರಡು ಕನ್ಯೆಯರನ್ನೂ ಕ್ರಮವಾಗಿ ವಿವಾಹಮಾಡಿ ಕಳುಹಿಸಿಕೊಟ್ಟಿದ್ದನು. ಕೆಲವು ದಿನಗಳ ಹಿಂದೆ ಶ್ರೀಕೃಷ್ಣದೇವನು ಕಂಸನನ್ನು ಸಂಹರಿಸಿದನು. ಇದರಿಂದ ದುಃಖಿತರಾಗಿರುವ ಕಂಸನ ಪತ್ನಿಯರು ಜರಾಸಂಧನ ಮನೆಗೆ ಬಂದು. ತಮ್ಮ ದುಃಖಗಳನ್ನು ತಿಳಿಸಿದರು.

ಕಂಸನ ಪತ್ನಿಯರಲ್ಲಿ ಮೊದಲನೆಯವಳು ''ಅಸ್ತಿ'' ಎಂದೂ ಎರಡನೆಯವಳು ''ಪ್ರಾಸ್ತಿ'' ಎಂದು ಪ್ರಸಿದ್ಧರಾಗಿರುವರು. ''ಅಸ್ತಿ'' ಅಂದರೆ ಯಾವಾಗಲೂ ಇರುವವಳು ಎಂದು ''ಪ್ರಾಸ್ತಿ'' ಅಂದರೆ ಚೆನ್ನಾಗಿ ಇರುವವಳು'' ಎಂದೂ ಅರ್ಥವಾಗುತ್ತದೆ. ಎಲ್ಲಾ ಸ್ತ್ರೀಯರೂ ಯಾವಾಗಲೂ ಇರುತ್ತಾರೆ. ಅವರವರ ಅಂತಸ್ತಿಗೆ ಸಮವಾಗಿ ಚೆನ್ನಾಗಿಯೂ ಇರುತ್ತಾರೆ. ಆದ್ದರಿಂದ ಮೇಲ್ಕಂಡ ಅರ್ಥದಿಂದ ಜರಾಸಂಧನು ಅವರಿಬ್ಬರಿಗೆ ಆ ಹೆಸರನ್ನಿಟ್ಟಿಲ್ಲವೆಂದು ಸ್ಪಷ್ಟವಾಗುತ್ತದೆ. ಗಂಡನ ಮನೆಯಲ್ಲಿರುವವರನ್ನೂ ತಂದೆಯ ಮನೆಯಲ್ಲಿರುವವರನ್ನೂ ಸರ್ವರನ್ನೂ ಯಮಲೋಕಕ್ಕೆ ಕಳುಹಿಸಿ ತಾನೊಬ್ಬಳೇ ಉಳಿಯುವವಳು ಮಾತ್ರ '' ಅಸ್ತಿ'' ಎಂದೂ ''ಪ್ರಾಸ್ತಿ'' ಎಂದೂ ಹೇಳುವುದಕ್ಕೆ ಅರ್ಹಳಾಗಿರುವಳು. ಈ ರೀತಿಯಾದ ಸ್ತ್ರೀಯರು ಪ್ರಪಂಚದಲ್ಲಿ ಅತ್ಯಂತ ವಿರಳರಾಗಿರುವರು. ಆದ್ದರಿಂದಲೇ ಈ ಹೆಸರು ಅವರಿಬ್ಬರಿಗೆ ಅತ್ಯಂತ ಯೋಗ್ಯವಾಗಿದೆ.

ತಮ್ಮ ಹೆಸರಿಗೆ ಯೋಗ್ಯವಾದ ಅರ್ಥದಂತೆ ಕಂಸನ ಪತ್ನಿಯರಿಬ್ಬರೂ ಕಂಸನನ್ನೂ ಅವನ ಪರಿವಾರಕ್ಕೆ ಸೇರಿರುವ ಪೂತನಾ ಮುಂತಾದ ಸರ್ವರನ್ನೂ ಯಮನ ಲೋಕಕ್ಕೆ ಕಳುಹಿಸಿದರು. ಅಲ್ಲಿ ಇನ್ನಾರು ಉಳಿಯಲಿಲ್ಲ. ತಂದೆಯಾದ ಜರಾಸಂಧನನ್ನೂ ಅವನ ಪರಿವಾರಗಳನ್ನೂ ಯಮಲೋಕಕ್ಕೆ ಮುಂದೆ ಎಲ್ಲಾ ವಿಷಯಗಳನ್ನೂ ತಿಳಿಸಿದರು. ಜರಾಸಂಧನು ತುಂಬಾ ಕುಪಿತನಾದನು. ಆ ಮಾರ್ಗವಾಗಿ ಹೋಗುತ್ತಿದ್ದ ನಾರದರನ್ನು ನೋಡಿದನು. '' ಶ್ರೀಕೃಷ್ಣನು ವಾಸಿಸುತ್ತಿರುವ ಮಥುರಾಪಟ್ಟಣವು ಇಲ್ಲಿಂದ ಎಷ್ಟು ದೂರದಲ್ಲಿದೆ'' ಎಂದು ಕೇಳಿದನು. ಶ್ರೀಕೃಷ್ಣದೇವನು ವಾಸಿಸುತ್ತಿರುವ ಸ್ಥಳವನ್ನು ತಿಳಿಸಿದರೂ ಆ ಸ್ಥಳಕ್ಕೆ ಗುರಿಯಿಟ್ಟು ಪ್ರಯೋಗಿಸಿದ ಆಯುಧವನ್ನು ವ್ಯರ್ಥವಾಗುವಂತೆ ಮಾಡುವ ಶಕ್ತಿಯು ಶ್ರೀಕೃಷ್ಣದೇವನಲ್ಲಿದೆಯೆಂದು ತಿಳಿದಿದ್ದರೂ ನಾರದರು ಜರಾಸಂಧನ

ಪ್ರಯತ್ನವು ನಿಷ್ಫಲವಾಗುವಂತೆ ಮಾಡಿದ ಮಹಾಪುಣ್ಯವು ತನಗೆ ಲಭಿಸಬೇಕೆಂಬ ಆಸೆಯಿಂದ ಯುಕ್ತರಾದರು. ನೂರ ಒಂದು ಯೋಜನ ದೂರದಲ್ಲಿದ್ದ ಮಥುರಾಪಟ್ಟಣವನ್ನು'' ಇಲ್ಲಿಂದ ನೂರು ಯೋಜನ ದೂರದಲ್ಲಿದೆ'' ಎಂದು ಸುಳ್ಳು ಹೇಳಿದರು. ಶ್ರೀಕೃಷ್ಣದೇವನ ಸೇವೆಗಾಗಿ ಹೇಳುವ ಯಾವ ಮಾತುಗಳೂ ಸುಳ್ಳೆನಿಸುವುದಿಲ್ಲ. ಆದ್ದರಿಂದ ನಾರದರು ಸುಳ್ಳು ಹೇಳಿದರೂ ದೋಷದಿಂದ ಲಿಪ್ತರಾಗಲಿಲ್ಲ.

## ಜರಾಸಂಧನ ಗದೆಯಿಂದ ಜರಾರಾಕ್ಷಸಿಯ ನಾಶ

ಜರಾಸಂಧನಿಗೆ ರುದ್ರದೇವನು ಒಂದು ಗದೆಯನ್ನು ಕೊಟ್ಟಿದ್ದನು. ಆ ಗದೆಯನ್ನು ಯಾವ ಸ್ಥಳವನ್ನು ಗುರಿಯಿಟ್ಟು ಹೊಡೆದರೂ ಆ ಸ್ಥಳವು ನಶಿಸುವುದಾಗಿಯೂ ಆ ಗದೆಯು ಪುನಃ ತನ ಪಾರ್ಶ್ವಕ್ಕೆ ಹಿಂದಿರುಗಿ ಬರುವುದಾಗಿಯೂ ಹೇಳಿದ್ದನು. ಜರಾಸಂಧನು ಆ ಗದೆಯನ್ನು ಕೈಯಲ್ಲಿ ತೆಗೆದುಕೊಂಡನು. ನೂರು ಯೋಜನದೂರದಲ್ಲಿ ಬೀಳಬೇಕೆಂದೂ ಅಲ್ಲಿರುವ ವಸ್ತುಗಳೆಲ್ಲವೂ ನಶಿಸಬೇಕೆಂದೂ ಸಂಕಲ್ಪಿಸಿ ಬಿಸಾಡಿದನು. ಆ ಗದೆಯು ಮಥುರಾಪಟ್ಟಣಕ್ಕಿಂತ ಒಂದು ಯೋಜನದ ಹಿಂದೆ ಬಿತ್ತು. ಮಥುರಾಪಟ್ಟಣಕ್ಕೆ ಯಾವ ವಿಧವಾದ ಹಾನಿಯೂ ಏರ್ಪಡಲಿಲ್ಲ. ಆ ಗದೆಯು ಬಿದ್ದ ಸ್ಥಳದಲ್ಲಿ ಜರಾಸಂಧನ ತಾಯಿಯಾದ "ಜರಾ'' ಎಂಬ ರಾಕ್ಷಸಿಯು ಹೊಗುತ್ತಿದ್ದಳು. ಅವಳ ತಲೆಯ ಮೇಲೆ ಆ ಗದೆಯು ಬಿತ್ತು. ಅವಳು ಸತ್ತಳು. ಆ ಗದೆಯು ಅವಳನ್ನು ಕೊಂದು ಹಿಂದಿರುಗಿ ಕೈಲಾಸಕ್ಕೆ ಹೋಯಿತು. ರುದ್ರದೇವನ ಪಾರ್ಶ್ವದಲ್ಲಿ ನಿಂತಿತು. ನಾರದರು ಮಾಡಿರುವ ಈ ಕೈಂಕರ್ಯದಿಂದ ಮಥುರಾಪಟ್ಟಣವು ನಶಿಸಲಿಲ್ಲ. ಮಥುರಾಪಟ್ಟಣವನ್ನು ರಕ್ಷಿಸುವುದಕ್ಕಾಗಿ ಶ್ರೀಕೃಷ್ಣದೇವನು ಸ್ವಸಾಮರ್ಥ್ಯವನ್ನು ಉಪಯೋಗಿಸಬೇಕಾದ ಸಂದರ್ಭವೂ ಏರ್ಪಡಲಿಲ್ಲ. ಜರಾಸಂಧನು ರುದ್ರದೇವನನ್ನು ಸಂತೋಷಪಡಿಸಿ ಸಂಪಾದಿಸಿದ ಗದೆಯಿಂದ ತನ್ನ ತಾಯಿಯನ್ನೇ ಕೊಲ್ಲುವಂತಾಯಿತು. ಆ ಗದೆಯು ಹಿಂದಿರುಗಿ ಕೈಲಾಸಕ್ಕೆ ಹೋಯಿತು. ಇದೆಲ್ಲವೂ ಶ್ರೀಕೃಷ್ಣದೇವನ ಮಹಿಮೆಯಲ್ಲವೇ?

ಜರಾಸಂಧನು ತನ್ನ ಪ್ರಯತ್ನವು ವಿಫಲವಾದುದನ್ನೂ ಗದೆಯು ತನ್ನ ತಾಯಿಯನ್ನು ಕೊಂದು ಕೈಲಾಸಕ್ಕೆ ಹೋದುದನ್ನೂ ತಿಳಿದನು. ತುಂಬಾ ಕೋಪದಿಂದ ಇಪ್ಪತ್ತು ಮೂರು ಅಕ್ಷೌಹಿಣೀ ಸೈನ್ಯಗಳನ್ನು ಒಟ್ಟುಗೂಡಿಸಿದನು.

ಜರಾಸಂಧನು ಕಂಸನ ಮರಣವೃತ್ತಾಂತವನ್ನು ತಿಳಿದ ಕೂಡಲೇ ಕಂಸನ ಮಗನನ್ನು ಕಂಸ ರಾಜ್ಯದಲ್ಲಿ ತಾನೇ ಪಟ್ಟಾಭಿಷೇಕವನ್ನು ಮಾಡಿದನು. ಅವನಿಗೆ ಎಲ್ಲಾ ರಾಜಮರ್ಯಾದೆಗಳನ್ನು ಸಮರ್ಪಿಸಿದನು. ಶ್ರೀರಾಮದೇವನು ರಾವಣನು ಬದುಕಿರುವಾಗಲೇ ರಾವಣನು ಸತ್ತಂತೆ ಭಾವಿಸಿ ವಿಭೀಷಣನಿಗೆ ಲಂಕಾಧಿಪತ್ಯವನ್ನು ಕೊಟ್ಟು ಪಟ್ಟಾಭಿಷೇಕವನ್ನು ಮಾಡಲಿಲ್ಲವೇ? ಅದರಂತೆ ಶ್ರೀಕೃಷ್ಣದೇವನೂ ಅವನ ಅನುಗ್ರಹಕ್ಕೆ ಪಾತ್ರನಾಗಿರುವ ಉಗ್ರಸೇನಮಹಾರಾಜನೂ ಬದುಕಿರುವಾಗಲೇ ಅವರಿಬ್ಬರನ್ನೂ ತೃಣೀಕರಿಸಿ ಕಂಸನ ಮಗನನ್ನು ಸಕಲ ಯಾದವ ರಾಜ್ಯಕ್ಕೆ ಜರಾಸಂಧನು ರಾಜನಾಗಿ ಮಾಡಿದನು. ಆ ಮಹಾರಾಜನನ್ನು ಮುಂದಿಟ್ಟುಕೊಂಡು ಯುದ್ಧಕ್ಕಾಗಿ ಹೊರಟನು. ಯುದ್ಧಕ್ಕೆ ಹೊರಡುವುದಕ್ಕೆ ಮುಂಚಿತವಾಗಿ ವಿಂದ, ಅನುವಿಂದ ಎಂಬ ಇಬ್ಬರು ಅಣ್ಣತಮ್ಮಂದಿರಾದ ರಾಜರುಗಳನ್ನು ಶ್ರೀಕೃಷ್ಣದೇವನ ಸಮೀಪಕ್ಕೆ ದೂತರಾಗಿ ಕಳುಹಿಸಿದನು. ಅವರಿಬ್ಬರೂ ಶ್ರೀಕೃಷ್ಣದೇವನ ಸಮೀಪಕ್ಕೆ ಬಂದರು. ಜರಾಸಂಧನು ಹೇಳಿಕಳುಹಿಸಿರುವ ಮಾತುಗಳನ್ನು ತಿಳಿಸಿದರು.

" ಎಲೋ ಕೃಷ್ಣ, ನನ್ನ ಮಕ್ಕಳಾದ ಅಸ್ತಿ ಪ್ರಾಸ್ತಿ ಎಂಬುವರನ್ನು ಕಂಸನಿಗೆ ಕೊಟ್ಟು ವಿವಾಹವನ್ನು ಮಾಡಿದ ಕಾಲದಲ್ಲಿ ನೀನು ಹುಟ್ಟಿರಲಿಲ್ಲ. ಆದ್ದರಿಂದಲೇ ನಿನ್ನ ಶಕ್ತಿಯನ್ನು ನಾನು ತಿಳಿದಿರಲಿಲ್ಲ. ತಿಳಿದಿದ್ದರೆ ನನ್ನ ಹೆಣ್ಣುಮಕ್ಕಳನ್ನು ಅವನಿಗೆ ಕೊಟ್ಟು ವಿವಾಹ ಮಾಡುತ್ತಿದ್ದಿಲ್ಲ. ಕಂಸನನ್ನು " ನೀನು ಕೊಲ್ಲುವಿದಿ" ಎಂದು ಅಶರೀರವಾಣಿಯಾಯಿತು. ಆದರೆ ಅವನೇ ಬಂದು ನನ್ನ ಮಕ್ಕಳನ್ನು ಅಪಹರಿಸಿಕೊಂಡು ಹೋದನು. ಇದಕ್ಕಾಗಿ ತುಂಬಾ ದುಃಖಿತನಾದೆನು. ನೀನು ಹುಟ್ಟಿದ ಮೇಲೆ ನಿನ್ನ ಯೋಗ್ಯತೆಯು ತಿಳಿಯಿತು. ಜಾರಚೋರಶಿಖಾಮಣಿಯೆಂದೂ ಆ ವಿಷಯದಲ್ಲಿ ಮಹಾಬಲಿಷ್ಠನೆಂದೂ ನಿನ್ನ ಬಲದ ಮುಂದೆ ಕಂಸನ ಬಲವು ಅತ್ಯಲ್ಪವೆಂದೂ ತಿಳಿದೆನು. ಪ್ರಪಂಚದಲ್ಲಿರುವ ಸರ್ವರನ್ನೂ ಲೀಲಾಮಾತ್ರದಿಂದ ಜಯಿಸಿರುವ ನಾನು ನಿನ್ನ ಈ ಬಲದ ಮುಂದೆ ಅತಿ ದುರ್ಬಲನೆಂದೂ ನೀನೇ ಬಲಿಷ್ಠರ ಸಮೂಹದಲ್ಲಿ ಅತಿ ಬಲಿಷ್ಠನೆಂದೂ ತೀರ್ಮಾನಿಸಿದೆನು. ಆದ್ದರಿಂದಲೇ ನನ್ನ ಅಳಿಯನನ್ನು ರಕ್ಷಿಸಲು ಪ್ರಯತ್ನಿಸಲಿಲ್ಲ. ಕಂಸನು ಸತ್ತಮೇಲೆ ಇನ್ನು ನಾನು ಮಾಡಬೇಕಾದ ಕೆಲಸವು ಒಂದೇ. ಅತಿ ದುರ್ಬಲನಾಗಿದ್ದರೂ ತನ್ನಲ್ಲಿರುವ ಜಾರಚೋರತನ ಮುಂತಾದ ಮಹಾಬಲದಿಂದ ಯುಕ್ತನಾಗಿರುವ ನಿನ್ನನ್ನು ನೋಡಬೇಕು. ಕಂಸನ ಮಗನನ್ನೂ ಪತ್ನಿಯರನ್ನೂ ಕರೆದುಕೊಂಡು ತಪಸ್ಸಿಗೆ ಕಾಡಿಗೆ ಹೋಗಬೇಕು. ತಪಸ್ಸನ್ನು ಮಾಡಿ ಅಳಿಯನ ಸನ್ನಿಧಿಯಲ್ಲಿ ಹೋಗಿ ಸೇರಬೇಕು. ಅದಕ್ಕಾಗಿ ಬಂದಿರುವೆನು. ನೀನು ಒಮ್ಮೆ ನನಗೆ ದರ್ಶನವನ್ನು ಕೊಡು. ನನ್ನ ಆಸೆಯನ್ನು ಪೂರ್ತಿಮಾಡು. ಇದು ಜರಾಸಂಧನ ವಿನಯಪೂರ್ವಕವಾದ ಪ್ರಾರ್ಥನೆ" ಎಂದು ಹೇಳಿದರು. ಬಲದ ಕೊಬ್ಬಿನಿಂದ ಹೇಳಿರುವ ಈ ಮಾತುಗಳನ್ನು ಶ್ರೀಕೃಷ್ಣದೇವನು ಕೇಳಿದನು. " ಹಾಗೆಯೇ ಆಗಲಿ" ಎಂದು ಸಂಕ್ಷಿಪ್ತವಾಗಿಯೂ ಅನೇಕಾರ್ಥಗರ್ಭಿತವಾಗಿಯೂ ಇರುವ ಉತ್ತರವನ್ನು ಕೊಟ್ಟನು. ಈ ಮಾತಿನಲ್ಲಿ ಅಡಗಿರುವ ಅನೇಕಾರ್ಥಗಳಲ್ಲಿ ಒಂದೆರಡು ಅರ್ಥಗಳನ್ನು ವಿವರಿಸುವೆನು.

ಅನಂತಾನಂತಕೋಟಿ ಬ್ರಹ್ಮಾಂಡಗಳನ್ನು ಇಚ್ಛಾಮಾತ್ರದಿಂದ ಪುಡಿಪುಡಿಯಾಗುವಂತೆ ಮಾಡುವ ಶಕ್ತಿಯುಳ್ಳವನು ನಾನು. ಇಂತಹ ನಾನು ಕಂಸನನ್ನು ಸಂಹರಿಸುವುದಕ್ಕೆ ನನ್ನ ಶಕ್ತಿಯನ್ನು ಉಪಯೋಗಿಸುವ ಅವಶ್ಯಕತೆಯಿದೆಯೇ? ಆನೆಯು ತನ್ನ ಪೂರ್ಣಶಕ್ತಿಯನ್ನು ಹುಲ್ಲನ್ನು ಎತ್ತುವುದಕ್ಕಾಗಿ ಉಪಯೋಗಿಸುತ್ತದೆಯೇ? ಆದ್ದರಿಂದ ನನ್ನ ಸ್ವಾಭಾವಿಕ ಬಲದಿಂದ ಕಂಸನನ್ನು ನಾನು ಸಂಹರಿಸಲಿಲ್ಲ ಎಂದು ಹೇಳಿರುವುದು ನಿಜ. ನನ್ನ ಮುಂದೆ ನೀನು ಅತಿದುರ್ಬಲನೆಂದು ಹೇಳಿರುವಿ. ಇದೂ ನಿಜ. ನಾನು ಅತಿ ಬಲಿಷ್ಠನೆಂದು ಹೇಳಿರುವಿ. ಅದೂ ನಿಜ. ಮುಂತಾದ ಅರ್ಥಗಳು "ಹಾಗೆಯೇ ಆಗಲಿ" ಎಂಬ ಮಾತಿನಲ್ಲಿ ಅಡಗಿವೆ. ಜರಾಸಂಧನು ತನ್ನಿಂದ ಯಾದವರಾಜ್ಯದಲ್ಲಿ ಪಟ್ಟಾಭಿಷಿಕ್ತನಾಗಿರುವ ತನ್ನ ಮೊಮ್ಮಗನನ್ನೂ ಪುತ್ರಿಯರನ್ನೂ ಮುಂದಿಟ್ಟುಕೊಂಡು ಯುದ್ಧಕ್ಕೆ ಬಂದನು.

## ಜರಾಸಂಧನ ಪ್ರಥಮಯುದ್ಧಾರಂಭ

ಆ ಸಮಯದಲ್ಲಿ ಶ್ರೀಕೃಷ್ಣದೇವನು ತನ್ನಿಂದ ಯಾದವರಾಜ್ಯದಲ್ಲಿ ಪಟ್ಟಾಭಿಷಿಕ್ತನಾಗಿರುವ ಕಂಸನ ತಂದೆಯಾಗಿರುವ ಉಗ್ರಸೇನನನ್ನು ಮುಂದಿಟ್ಟುಕೊಂಡು ಬಲರಾಮನಿಂದಲೂ ಸಕಲ ಯಾದವರಿಂದಲೂ ಸಹಿತನಾಗಿ ಯುದ್ಧಕ್ಕೆ ಹೊರಟನು. ಮಥುರಾಪಟ್ಟಣದ ಪೂರ್ವ, ದಕ್ಷಿಣ ಮತ್ತು ಪಶ್ಚಿಮದ್ವಾರಗಳಲ್ಲಿ ಪುರರಕ್ಷಣಾರ್ಥವಾಗಿ ಸಾತ್ಯಕಿ ಮುಂತಾದವರನ್ನು ನಿಲ್ಲಿಸಿದನು. ಉತ್ತರ ದಿಕ್ಕಿನಲ್ಲಿ ಪುರಪ್ರವೇಶವನ್ನು ಮಾಡಿ ಲೂಟಿ

ಮಾಡುವುದಕ್ಕಾಗಿ ಸಿದ್ಧನಾಗಿ ನಿಂತಿರುವ ಜರಾಸಂಧನನ್ನು ಎದುರಿಸುವುದಕ್ಕಾಗಿ ಆ ಮಾರ್ಗದಿಂದ ಬಲರಾಮಸಹಿತನಾಗಿ ಶ್ರೀಕೃಷ್ಣದೇವನು ಹೊರಟನು. ಆಗ ಶ್ರೀಕೃಷ್ಣದೇವನು ತನ್ನ ಆಯುಧಗಳೂ ರಥವೂ ಬಲರಾಮನ ಆಯುಧಗಳೂ ಬರಲಿ ಎಂದು ಸಂಕಲ್ಪಿಸಿದನು.

ಶ್ರೀಕೃಷ್ಣದೇವನ ಮತ್ತು ಬಲರಾಮನ ಆಯುಧಗಳು ದೇವಲೋಕದಿಂದ ಬಂದವು

ಆಗ್ಗೆ ಆಕಾಶಮಾರ್ಗದಿಂದ ಭೂಮಿಯಷ್ಟು ಭಾರವುಳ್ಳ ಭೂಮ್ಯಾತ್ಮಕವಾದ ಶ್ರೀಕೃಷ್ಣದೇವನ ರಥವೂ ನಾಲ್ಕು ವೇದಗಳೆಂಬ ಕುದುರೆಗಳೂ ಸುದರ್ಶನಚಕ್ರ, ಪಾಂಚಜನ್ಯ ಶಂಖ, ಶಾರ್ಙ್ಗ ಎಂಬ ಧನುಸ್ಸು, ನಂದಕ ಎಂಬ ಖಡ್ಗ ಕೌಮೋದಕೀ ಎಂಬ ಗದಾ ಮುಂತಾದ ಆಯುಧಗಳೂ ಬತ್ತಳಿಕೆಗಳೂ ಇಳಿದು ಬಂದವು. ದಾರುಕ ಎಂಬ ಸಾರಥಿಯು ಆ ರಥದಲ್ಲಿ ಸಾರಥ್ಯವನ್ನು ನಡೆಸಿದನು. ಶ್ರೀಕೃಷ್ಣದೇವನು ತನ್ನ ರಥದಲ್ಲಿ ಕುಳಿತನು. ಒನಕೆಯೂ ಸೌನಂದ ಎಂಬ ನೇಗಿಲೂ ಸಾಲಧ್ವಜದಿಂದ ಯುಕ್ತವಾಗಿರುವ ರಥವೂ ಬಾಣಬತ್ತಳಿಕೆಗಳೂ ಧನಸ್ಸೂ ಬಂದವು. ಅವುಗಳನ್ನು ಸ್ವೀಕರಿಸಿ ಬಲರಾಮನು ಜರಾಸಂಧನಿಂದ ಚೆನ್ನಾಗಿ ರಕ್ಷಿಸಲ್ಪಟ್ಟ ಸೈನ್ಯವನ್ನು ಎದುರಿಸಿ ಓಡಿಸಿದನು. ಎಲ್ಲಾ ಶತ್ರುಸೈನ್ಯಗಳೂ ಒಟ್ಟುಗೂಡಿದವು . ಬಲರಾಮವನನ್ನು ಎದುರಿಸಲು ಶಕ್ತವಾಗಲಿಲ್ಲ. ಅನಂತಶಕ್ತಿಯಿಂದ ಯುಕ್ತ ನಾಗಿರುವ ನಾನಾ ವಿಧವಾದ ಆಯುಧಗಳ ಮಳೆಯನ್ನು ಸುರಿಸುತ್ತಾ ರಾಜರ ಸಮೂಹಗಳಿಂದ ಸಹಿತನಾಗ ಶ್ರೀಕೃಷ್ಣದೇವನನ್ನು ಎದುರಿಸಿದನು.

ಶ್ರೀಕೃಷ್ಣದೇವನ ಮುಂದೆ ನಿಂತಿರುವ ಉಗ್ರಸೇನನನ್ನು ನೋಡಿದನು. ಕೋಪದಿಂದ ಅವನ ದೇಹವು ನಡುಗಿತು. ಅವನನ್ನು ನೋಡಿ ಹೇಳಿದನು.

## ಉಗ್ರಸೇನನನ್ನು ಜರಾಸಂಧನು ಅಪಹಾಸಮಾಡಿದ್ದು

" ಎಲೋ ಮಹಾಪಾಪಿಯೇ, ನನ್ನ ಮುಂದಿನಿಂದ ದೂರಕ್ಕೆ ಓಡು. ನೀನು ಆಸೆಯಿಂದ ಯುಕ್ತನಾಗಿರುವಿ. ನಿನ್ನ ಮಗನನ್ನು ಕೊಂದಿರುವ ಕೃಷ್ಣನು ಕೊಟ್ಟಿರುವ ನಿನ್ನ ಮಗನ ರಾಜ್ಯದಲ್ಲಿ ಪಟ್ಟಾಭಿಷಿಕ್ತನಾಗಿರುವಿ. ಇದರಿಂದ ನಿನ್ನ ದುರಾಶೆಯು ತಿಳಿಯುವುದಿಲ್ಲವೇ? ನಿನ್ನ ಮಗನನ್ನು ಕೊಲ್ಲುವುದಕ್ಕೂ ನೀನೇ ಕಾರಣನಾಗಿರುವಿ. ನಿನ್ನ ಮಗನನ್ನು ಕೊಂದಿರುವ ಕೃಷ್ಣನು ನಿನ್ನ ಶತ್ರುವಲ್ಲವೇ? ಅವನ ಪಕ್ಷದಲ್ಲಿ ಸೇರಿರುವಿ. ನಿನಗೆ ನಾಚಿಕೆಯಿಲ್ಲವೇ? ಮುದಿ ಆಡಿನಂತಿರುವ ನಿನ್ನನ್ನು ಕೊಲ್ಲುವುದು ಮಹಾಶೂರನಾದ ನನಗೆ ಯೋಗ್ಯವಲ್ಲ. ಸಿಂಹವು ಸಿಂಹವನ್ನು ಎದುರಿಸುತ್ತದೆ. ನರಿಯನ್ನು ಎದುರಿಸಲಾರದು. ಆದ್ದರಿಂದ ನೀನು ದೂರಕ್ಕೆ ಓಡು." ಎಂದನು.

ಈ ಮಾತುಗಳನ್ನು ಕೇಳಿದ ಉಗ್ರಸೇನನು ತುಂಬಾ ಕೋಪದಿಂದ ಯುಕ್ತನಾಗಿ. ಬತ್ತಳಿಕೆಯಿಂದ ತೀಕ್ಷ್ಣವಾದ ಒಂದು ಬಾಣವನ್ನು ತೆಗೆದು ಅದರಿಂದ ಹೊಡೆದು. ಗಟ್ಟಿಯಾಗಿ ಗರ್ಜಿಸಿದನು.

## ಶ್ರೀಕೃಷ್ಣದೇವ ಜರಾಸಂಧಯುದ್ಧ

ಜರಾಸಂಧನು ಇನ್ನೊಂದು ಧನುಸ್ಸನ್ನು ತೆಗೆದುಕೊಂಡನು. ಕೋಪಾತಿರೇಕದಿಂದ ಕಣ್ಣುಗಳನ್ನು ಕೆಂಡದಂತೆ ಮಾಡಿಕೊಂಡನು. ಉಗ್ರಸೇನನನ್ನು ಕೊಲ್ಲಬೇಕೆಂದು ವೇಗದಿಂದ ಮುಂದೆ ಬಂದನು. ಇದನ್ನು ನೋಡಿದ

ಶ್ರೀಕೃಷ್ಣದೇವನು ಉಗ್ರಸೇನನ ಮುಂದೆ ತನ್ನ ರಥವನ್ನು ನಿಲ್ಲಿಸುವಂತೆ ಸಾರಥಿಗೆ ಆಜ್ಞಾಪಿಸಿದನು. ಅನಂತಶಕ್ತಿಯಿಂದ ಪೂರ್ಣನಾಗಿರುವ ಶ್ರೀಕೃಷ್ಣದೇವನು ತನ್ನ ಮುಂದೆ ಬಂದು ನಿಂತದ್ದನ್ನು ಜರಾಸಂಧನು ನೋಡಿದನು. ಶಿಶುಪಾಲ, ಪೌಂಡ್ರಕ ವಾಸುದೇವ ಮುಂತಾದ ಸಕಲ ರಾಜರುಗಳ ಸಮೂಹಗಳಿಂದ ಯುಕ್ತನಾಗಿ ನಾನಾ ವಿಧವಾದ ಉತ್ತಮವಾಗಿರುವ ಅಸ್ತ್ರಗಳಿಂದ ಕೃಷ್ಣನನ್ನು ಆಯುಧಗಳಿಂದ ಹೊಡೆದನು. ಆ ಅಸ್ತ್ರ ಮತ್ತು ಶಸ್ತ್ರಗಳ ಮಳೆಗಳು ಮೇರು ಪರ್ವತದಲ್ಲಿ ಬಿದ್ದ ಮಳೆಗಳಂತೆ ವ್ಯರ್ಥವಾದವು. ಶ್ರೀಕೃಷ್ಣದೇವನು ಜರಾಸಂಧನು ಪ್ರಯೋಗಿಸಿದ ಶಸ್ತ್ರಗಳ ಮತ್ತು ಅಸ್ತ್ರಗಳ ಮಳೆಗಳನ್ನು ತುಂಡುತುಂಡಾಗುವಂತೆ ಮಾಡಿದನು. ಜರಾಸಂಧನ ಸಾರಥಿಯನ್ನು ಕೊಂದನು. ರಥವನ್ನು ಪುಡಿ ಪುಡಿಯಾಗುವಂತೆ ಮಾಡಿದನು. ಜರಾಸಂಧನ ಎಲ್ಲಾ ಆಯುಧಗಳನ್ನೂ ನಾಶಮಾಡಿದನು. ಅವನನ್ನೂ ಕೊಲ್ಲಬಹುದಾಗಿತ್ತು. ಆದರೆ ಕೊಲ್ಲಲಿಲ್ಲ. ಇಂತಹ ಮಹಾವಿಷ್ಣುದ್ವೇಷಿಯನ್ನು ಸಂಹರಿಸಿದ್ದರಿಂದ ಮಹಾಪುಣ್ಯವನ್ನೂ ಅಪಾರಕೀರ್ತಿಯನ್ನೂ ಭೀಮನು ಪಡೆಯಲಿ. ಭೀಮನ ಸ್ವಾಭಾವಿಕವಾದ ಭಕ್ತಿಯು ಎಲ್ಲರಿಗೂ ತಿಳಿಯಲಿ ಎಂಬ ಉದ್ದೇಶ್ಯದಿಂದ ಅವನನ್ನು ಕೊಲ್ಲಲಿಲ್ಲ.

ಹಂಸ, ಡಿಭಿಕ, ದ್ರುಮ, ಶಿಶುಪಾಲ, ಪೌಂಡ್ರಕವಾಸುದೇವ, ಕೀಚಕ, ಶಲ್ಯ, ಸಾಲ್ವ, ಏಕಲವ್ಯ ರುಕ್ಮಿ ಬಾಹ್ಲೀಕರಾಜ ನರಕಾಸುರನ ಮಗನಾದ ಭಗದತ್ತ, ಮೈಂದ ಮುಂತಾದವರ ರಥಗಳನ್ನೆಲ್ಲವನ್ನೂ ನಾಶಮಾಡಿದನು. ಅವರೆಲ್ಲರೂ ಓಡಿದರು. ಅವರೆಲ್ಲರ ಆಯುಧಗಳೂ ಧ್ವಜಸ್ಥಂಭಗಳೂ ಪತಾಕೆಗಳೂ ಸಾರಥಿಗಳೂ ರಥಗಳೂ ಕುದುರೆಗಳೂ, ಕವಚಗಳೂ, ಛಿನ್ನ ಛಿನ್ನವಾದವು. ವಸ್ತ್ರಗಳೂ ಆಭರಣಗಳೂ ಮಾಲೆಗಳೂ ಕಳಚಿ ಬಿದ್ದವು. ರಕ್ತವನ್ನು ವಾಂತಿ ಮಾಡುತ್ತಾ ತುಂಬಾ ಹೆದರಿದವರಾಗಿ ದಿಕ್ಕು ದಿಕ್ಕುಗಳಿಗೆ ಓಡಿದರು.

ಎಲ್ಲಾ ರಾಜರುಗಳೂ ಅತಿಶೋಚನೀಯ ದುರವಸ್ಥೆಯನ್ನು ಪಡೆದು ಓಡುತ್ತಿರುವಾಗ ಜರಾಸಂಧನೂ ಅವರೊಡನೆ ಓಡುತ್ತಿದ್ದನು.

## ಬಲರಾಮನಿಂದ ಜರಾಸಂಧನ ಪರಾಜಯ

ಜರಾಸಂಧನು ನಾನಾ ಆಯುಧಗಳಿಂದ ಯುಕ್ತವಾಗಿರುವ ಮತ್ತು ವಿಚಿತ್ರಶಕ್ತಿಯಿಂದ ಯುಕ್ತವಾಗಿರುವ ಇನ್ನೊಂದು ರಥದಲ್ಲಿ ಕುಳಿತವನಾಗಿ ಬಲರಾಮನ ಜೊತೆಯಲ್ಲಿ ಯುದ್ಧವನ್ನು ಮಾಡುವುದಕ್ಕಾಗಿ ಬಂದನು. ವೇಗವಾಗಿ ಬರುತ್ತಿರುವ ಜರಾಸಂಧನ ರಥವನ್ನು ಬಲರಾಮನು ತನ್ನ ಒನಕೆಯಿಂದ ಪುಡಿಪುಡಿಯಾಗುವಂತೆ ಮಾಡಿದನು. ಜರಾಸಂಧನು ಅತಿಬಲಿಷ್ಠವಾದ ಗದೆಯಿಂದ ಬಲರಾಮನ ವಿಶಾಲವಾದ ಎದೆಯಲ್ಲಿ ಹೊಡೆದನು. ಬಲರಾಮನು ತನ್ನ ಒನಕೆಯಿಂದ ಜರಾಸಂಧನನ್ನು ಹೊಡೆದನು. ಮಹಾಬಲಿಷ್ಠರಾದ ಅವರಿಬ್ಬರ ದೇಹಗಳೂ ವಜ್ರಾಯುಧಕ್ಕಿಂತಲೂ ಗಟ್ಟಿಯಾದವುಗಳು. ಈ ದೇಹಗಳಿಂದ ಯುಕ್ತರಾಗಿರುವ ಇವರಿಬ್ಬರೂ ಬಹುಕಾಲದ ವರೆಗೆ ಅತಿಘೋರವಾದ ಯುದ್ಧವನ್ನು ಮಾಡಿದರು. ಅವರ ಯುದ್ಧಕಾಲದಲ್ಲಿ ಆ ಪ್ರದೇಶದಲ್ಲಿದ್ದ ಎಲ್ಲಾ ಪರ್ವತಗಳೂ ಮರಗಳೂ ಬಂಡೆಕಲ್ಲುಗಳೂ ಪುಡಿಪುಡಿಯಾದವು.

ಆ ಸಮಯದಲ್ಲಿ ಶ್ರೀಕೃಷ್ಣದೇವನು ಎಲ್ಲಾ ರಾಜರುಗಳನ್ನೂ ಜಯಿಸಿ ಪಾಂಚಜನ್ಯ ಶಂಖವನ್ನು ಊದಿದನು. ಆ ಧ್ವನಿಯನ್ನು ಬಲರಾಮನು ಕೇಳಿದನು. ಹೆದರಿ ಓಡುತ್ತಿರುವ ರಾಜರುಗಳನ್ನೂ ನೋಡಿದನು. ಇದರಿಂದ ಅವನಿಗೆ

ಬಲವು ಹೆಚ್ಚಿತು. ಜರಾಸಂಧನನ್ನು ಬಿಟ್ಟನು. ಅಮೋಘವಾದ ತನ್ನ ಒನಕೆಯನ್ನು ಎತ್ತಿದನು. ಅದರಿಂದ ಜರಾಸಂಧನ ತಲೆಯಲ್ಲಿ ಹೊಡೆದನು. ಇದರಿಂದ ಜರಾಸಂಧನು ಬಹುಕಾಲದ ವರೆಗೆ ಮೂರ್ಛಿತನಾದನು. ಆಗ ಬಲರಾಮನು ಅವನನ್ನು ಕೈಸೆರೆ ಹಿಡಿದನು.

ಅದೇ ಸಮಯದಲ್ಲಿ ಶ್ರೀಕೃಷ್ಣದೇವನ ಆಯುಧಗಳ ಹೊಡೆತವನ್ನು ತಾಳಲಾರದೆ ಓಡುತ್ತಿದ್ದ ಏಕಲವ್ಯ ಎಂಬ ಬೇಡರ ದೊರೆಯು ಇದನ್ನು ನೋಡಿದನು. ಓಡುತ್ತಾ ಬಲರಾಮದೇವನ ಶಿರಸ್ಸಿನಲ್ಲಿ ನಾನಾವಿಧವಾದ ಅಸ್ತ್ರಗಳನ್ನು ಪ್ರಯೋಗಿಸಿದನು. ಕ್ರೋಧವಶ ಅಥವಾ ಕ್ರೋಧತಂತ್ರ ಅಂದರೆ ಕೋಪಪರಾಧೀನರಾದವರು ಎಂಬ ದೈತ್ಯರ ಸಮೂಹದಲ್ಲಿ ಪ್ರಧಾನನಾಗಿರುವ "ಮಣಿಮಾನ್"ಎಂಬ ದೈತ್ಯನೇ "ಏಕಲವ್ಯ" ಎಂಬ ಹೆಸರಿನಿಂದ ಹುಟ್ಟಿದನು.

## ಪ್ರದ್ಯುಮ್ನನ ಸೃಷ್ಟಿ, ಅವನಿಂದ ಏಕಲವ್ಯನ ಪರಾಜಯ

ಸೋತು ಓಡುತ್ತಿರುವ ಏಕಲವ್ಯನ ಜೊತೆಯಲ್ಲಿ ಯುದ್ಧವನ್ನು ತಾನು ಮಾಡುವುದು ಯುಕ್ತವಲ್ಲ ಎಂದು ಶ್ರೀಕೃಷ್ಣದೇವನು ತೀರ್ಮಾನಿಸಿದನು. ತನ್ನ ದೇಹದಿಂದ "ಪ್ರದ್ಯುಮ್ನ" ಎಂಬ ಮಗನನ್ನು ಸೃಷ್ಟಿಸಿದನು. ಅವನನ್ನು ಏಕಲವ್ಯನ ಜೊತೆಯಲ್ಲಿ ಯುದ್ಧಕ್ಕಾಗಿ ಕಳುಹಿಸಿದನು. ಪ್ರದ್ಯುಮ್ನನು ಬ್ರಹ್ಮಾಸ್ತ್ರ ಮುಂತಾದ ಅಸ್ತ್ರಗಳ ಸಮೂಹಗಳಿಂದ ಏಕಲವ್ಯನ ಜೊತೆಯಲ್ಲಿ ಯುದ್ಧವನ್ನು ಮಾಡಿದನು.

ಈ ಪ್ರದ್ಯುಮ್ನ ಮತ್ತು ಏಕಲವ್ಯರ ಯುದ್ಧಸಮಯದಲ್ಲಿ ಬಲರಾಮನು ಹಿಂದೆಯೇ ಮೂರ್ಛಿತನಾಗಿದ್ದ ಜರಾಸಂಧನನ್ನು ತನ್ನ ರಥಕ್ಕೆ ಎತ್ತಿಕೊಂಡು ಬಂದನು.

ಶ್ರೀಕೃಷ್ಣದೇವನಿಂದ ಸೃಷ್ಟಿಸಲ್ಪಟ್ಟ ಪ್ರದ್ಯುಮ್ನನು ಬಹುಕಾಲದವರೆಗೆ ಏಕಲವ್ಯನ ಜೊತೆಯಲ್ಲಿ ಯುದ್ಧವನ್ನು ಮಾಡಿ ಅವನ ಶಸ್ತ್ರಗಳನ್ನೂ ಅಸ್ತ್ರಗಳನ್ನೂ ನಾಶಮಾಡಿ ಅವನನ್ನು ಸೋಲಿಸಿದನು. ಅನಂತರದಲ್ಲಿ ಶ್ರೀಕೃಷ್ಣದೇವನು ಪ್ರದ್ಯುಮ್ನನನ್ನು ತನ್ನ ದೇಹದಲ್ಲಿ ಪ್ರವೇಶ ಮಾಡಿಸಿದನು. ಜರಾಸಂಧನ ಎಲ್ಲಾ ಸೈನ್ಯವನ್ನೂ ನಾಶಮಾಡಿದನು. ಇನ್ನೊಮ್ಮೆ ಯುದ್ಧಕ್ಕೆ ಬರಲಿ ಎಂದು ಸಂಕಲ್ಪಿಸಿ ಅವನನ್ನು ಬಿಟ್ಟನು.

ಜರಾಸಂಧನು ಹಿಂದೆ ಹೇಳಿದಂತೆ ಹದಿನೇಳು ಸಲ ಇಪ್ಪತ್ತಮೂರು ಅಕ್ಷೌಹಿಣೀಸೈನ್ಯಗಳಿಂದ ಸಹಿತನಾಗಿ ಯುದ್ಧಕ್ಕೆ ಬಂದನು. ಸೋತು ಓಡಿಹೋದನು. ಈ ವಿಷಯವನ್ನು ಮುಂದೆ ವಿವರಿಸುವೆವು ॥೧೨॥

**ಪುರ್ಯಾ ನಿರ್ಗತ್ಯ ರಾಮಾದಥ ಸಹಮುಸಲೀ ಪ್ರಾಪ್ಯ ಕೃಷ್ಣೋಽಭ್ಯನುಜ್ಞಾಂ**
**ಗೋಮಂತಂ ಚಾಪಿ ಮೌಲಿಂ ಖಗಪತಿವಿಹಿತಂ ವಾಸುದೇವಂ ಸೃಗಾಲಮ್ ।**
**ಹತ್ವಾ ಶತ್ರುಂ ಚ ಪುರ್ಯಾಮಧಿಜಲಧಿ ಪುರೀಂ ನಿರ್ಮಿತಾಂ ಬಂಧುವರ್ಗಾನ್ನಿನ್ಯೇ**
**ಯಃ ಸೋಽವತಾನ್ನಃ ಪ್ರಮಥಿತಯವನೋ ಮೌಚುಕುಂದಾಕ್ಷಿವಹ್ನೇಃ ॥೧೩॥**

**ಪದಚ್ಛೇದ :-** ಪುರ್ಯಾಃ, ನಿರ್ಗತ್ಯ, ರಾಮಾತ್ ಅಥ, ಸಹಮುಸಲೀ ಪ್ರಾಪ್ಯ, ಕೃಷ್ಣಃ ಅಭ್ಯನುಜ್ಞಾಂ,

ಗೋಮಂತಂ, ಚ, ಅಪಿ, ಮೌಲಿಂ ಖಗಪತಿವಿಹಿತಂ, ವಾಸುದೇವಂ, ಸೃಗಾಲಂ, ಹತ್ವಾ, ಶತ್ರುಂ, ಚ ಪುರ್ಯಾಂ, ಅದಿಜಲಧಿ, ಪುರೀಂ, ನಿರ್ಮಿತಾಂ, ಬಂಧುವರ್ಗಾನ್, ನಿನ್ಯೇ, ಯಃ ಸಃ ಅವತಾತ್, ನಃ, ಪ್ರಮಥಿತಯವನಃ, ಮೌಚುಕುಂದಾಕ್ಷಿವಹ್ನೇಃ.

ಅನ್ವಯ - ಯಃ ಸಹಸಮುಲೀ ಅಥ ಪುರ್ಯಾಃ ನಿರ್ಗತ್ಯ ರಾಮಾತ್ ಅಭ್ಯನುಜ್ಞಾಂ ಪ್ರಾಪ್ಯ ಗೋಮಂತಂ ಚ (ಪ್ರಾಪ್ಯ) ಖಗಪತಿವಿಹಿತಂ ಮೌಲಿಂ (ಪ್ರಾಪ್ಯ) ಸೃಗಾಲಂ ವಾಸುದೇವಂ ಶತ್ರುಂ ಚ ಪುರ್ಯಾಂ ಹತ್ವಾ, ಅಧಿಜಲಧಿ ನಿರ್ಮಿತಾಂ, ಪುರೀಂ, ಬಂಧುವರ್ಗಾನ್ ನಿನ್ಯೇ, ಮೌಚುಕುಂದಾಕ್ಷಿವಹ್ನೇಃ ಪ್ರಮಥಿತಯವನಃ ಸಃ ನಃ ಅವತಾತ್.

ಅನ್ವಯಾರ್ಥ - "ಯಃ" ಯಾವ ಶ್ರೀಕೃಷ್ಣನು, "ಸಹಮುಸಲೀ" ಬಲರಾಮನಿಂದ ಸಹಿತನಾಗಿ, "ಅಥ" ಅನಂತರದಲ್ಲಿ "ಪುರ್ಯಾಃ" ಮಥುರಾಪಟ್ಟಣದಿಂದ, "ನಿರ್ಗತ್ಯ" ಹೊರಟು, "ರಾಮಾತ್" ಪರಶುರಾಮರೂಪಿಯಾದ ಶ್ರೀಹರಿಯಿಂದ "ಅಭ್ಯನುಜ್ಞಾಂ" ಅನುಮತಿಯನ್ನು "ಪ್ರಾಪ್ಯ" ಪಡೆದು "ಗೋಮಂತಂ ಚ" ಗೊಮಂತಪರ್ವತವನ್ನೂ "(ಪ್ರಾಪ್ಯ)" ಪಡೆದು "ಖಗಪತಿವಿಹಿತಂ" ಪಕ್ಷಿರಾಜನಾದ ಗರುಡನಿಂದ ಕೊಡಲ್ಪಟ್ಟ "ಮೌಲಿಂ ಅಪಿ" ಕಿರೀಟವನ್ನೂ ಕೂಡ "(ಪ್ರಾಪ್ಯ)" ಪಡೆದು "ಸೃಗಾಲಂ" ಸೃಗಾಲ ಎಂಬ ಹೆಸರಿನಿಂದ ಯುಕ್ತನಾಗಿರುವ "ವಾಸುದೇವಂ" ವಸುದೇವನ ಮಗನಾಗಿರುವ "ಶತ್ರುಂ ಚ" ಶತ್ರುವನ್ನೂ ಕೂಡ "ಪುರ್ಯಾಂ" ಕರವೀರಪುರ ಎಂಬ ಪಟ್ಟಣದಲ್ಲಿ "ಹತ್ವಾ" ಕೊಂದು "ಅಧಿಜಲಧಿ" ಸಮುದ್ರದ ಮಧ್ಯದಲ್ಲಿ "ನಿರ್ಮಿತಾಂ" ನಿರ್ಮಾಣಮಾಡಲ್ಪಟ್ಟ "ಪುರೀಂ" ದ್ವಾರಕಾ ಎಂಬ ಪಟ್ಟಣವನ್ನು ಕುರಿತು "ಬಂಧುವರ್ಗಾನ್" ಬಂಧುಗಳ ಸಮೂಹಗಳನ್ನು "ನಿನ್ಯೇ" ಸಾಗಿಸಿದನೋ "ಮೌಚುಕುಂದಾಕ್ಷಿವಹ್ನೇಃ" ಮುಚುಕುಂದ ಎಂಬ ಭಕ್ತನ ಕಣ್ಣುಗಳಿಂದ ಹೊರಟಿರುವ ಅಗ್ನಿಯ ದೆಸೆಯಿಂದ " ಪ್ರಮಥಿತಯವನಃ" ಕಾಲಯವನ ಎಂಬ ದುಷ್ಟನನ್ನು ಸಂಹರಿಸಿದನೋ " ಸಃ" ಆ ಶ್ರೀಕೃಷ್ಣದೇವನು " ನಃ" ನಮ್ಮನ್ನು "ಅವತಾತ್" ರಕ್ಷಿಸಲಿ.

ವಿಗ್ರಹ - (ಮುಸಲಃ ಅಸ್ಯ ಅಸ್ತೀತಿ ಮುಸಲೀ, ಮುಸಲಿನಾ ಸಹ ವರ್ತತೇ ಇತಿ ಸಹಮುಸಲೀ), (ಖೇ ಗಚ್ಛಂತೀತಿ ಖಗಾಃ ಖಗಾನಾಂ ಪತಿಃ ಖಗಪತಿಃ, ಖಗಪತಿನಾ ವಿಹಿತಃ ಖಗಪತಿವಿಹಿತಃ ತಂ (ಖಗಪತಿವಿಹಿತಂ) (ವಸುದೇವಸ್ಯ ಅಪತ್ಯಂ ಪುಮಾನ್ ವಾಸುದೇವ) (ಜಲಾನಿ ಧೀಯಂತೇ ಅಸ್ಮಿನ್ ಇತಿ ಜಲಧಿಃ, ಜಲಧೌ ಅಧಿಜಲಧಿ) (ಬಂಧೂನಾಂ ವರ್ಗಾಃ ಬಂಧುವರ್ಗಾಃ ತಾನ್ ಬಂಧುವರ್ಗಾನ್) (ಪ್ರಮಥಿತಃ ಯವನಃ ಯೇನ ಸಃ ಪ್ರಮಥಿತಯವನಃ) (ಮುಚುಕುಂದಸ್ಯ ಇಮೇ ಮೌಚುಕುಂದೇ, ಮೌಚುಕುಂದೇ ಚ ತೇ ಅಕ್ಷಿಣೇ ಚ ಮೌಚುಕುಂದಾಕ್ಷಿಣೇ ಮೌಚುಕುಂದಾಕ್ಷಿಭ್ಯಾಂ ವಹ್ನಿಃ ಮೌಚುಕುಂದಾಕ್ಷಿವಹ್ನಿಃ, ತಸ್ಮಾತ್ ಮೌಚುಕುಂದಾಕ್ಷಿ ವಹ್ನೇಃ)

**(೬೩) ಸಹಮುಸಲೀ ಕೃಷ್ಣಃ ಅಥ ಪುರ್ಯಾಃ ನಿರ್ಗತ್ಯ, ರಾಮಾತ್ ಅಭ್ಯನುಜ್ಞಾಂ ಪ್ರಾಪ್ಯ -**

ಬಲರಾಮನಿಂದ ಸಹಿತನಾದ ಕೃಷ್ಣನು ಅನಂತರದಲ್ಲಿ ಮಥುರಾಪಟ್ಟಣದಿಂದ ಹೊರಟು ಪರಶುರಾಮನಿಂದ ಅನುಜ್ಞೆಯನ್ನು ಪಡೆದನು.

ವಿಶೇಷಾರ್ಥ - ಕೃಷ್ಣಃ ಬಲರಾಮೇಣ ಸಹಿತಃ ಪೂರ್ವೋಕ್ತರೀತ್ಯಾ ಜರಾಸಂಧಂ ಬಹುಶಃ ವಿದ್ರುತಂ ಕೃತ್ವಾ

ಬಲವತಾ ವಿರೋಧೇ ಅಲ್ಪಬಲೇನ ತತ್ರ ನ ಸ್ಥಾತವ್ಯಮಿತಿ ಲೋಕನೀತಿಂ ಪ್ರದರ್ಶಯಿತುಂ ಸ್ವೇಚ್ಛಯೈವ ಅತಿದುರ್ಗಂ ಗೋಮಂತಂ ಪರ್ವತಂ ದ್ರಷ್ಟುಂ ಮಥುರಾಯಾಃ ನಿರ್ಗತ್ಯ ಗಚ್ಛನ್ ಮಾರ್ಗೇ ಕ್ವಚಿತ್ ಪ್ರದೇಶೇ ವೃಕ್ಷಮೂಲನಿವಾಸಿನಂ ಶಿಷ್ಯಗಣಸಮಾವೃತಂ ಪರಶುರಾಮಂ ದೃಷ್ಟ್ವಾ ತೇನಾನುಮೋದಿತಃ ತೇನಾನುಜ್ಞಾಮಾದಾಯ.

## ಇನ್ನೊಮ್ಮೆ ಜರಾಸಂಧನ ಯುದ್ಧೋದ್ಯೋಗ

ಮೊದಲನೆಯ ಯುದ್ಧದಲ್ಲಿ ಸೋತು ಹೋದ ನಂತರ ಜರಾಸಂಧನು ತನ್ನ ಪರಿವಾರಗಳಿಂದ ಸಮೇತನಾಗಿ ಕಂಸನ ರಾಜ್ಯದಲ್ಲಿ ತನ್ನಿಂದ ಪಟ್ಟಾಭಿಷಿಕ್ತನಾದ ತನ್ನ ಮೊಮ್ಮಗನನ್ನು ಮುಂದಿಟ್ಟುಕೊಂಡವನಾಗಿ ತಲೆಯನ್ನು ಬಗ್ಗಿಸಿಕೊಂಡು ತನ್ನ ಊರಿಗೆ ಹೋಗಿ ಸೇರಿದನು. ಆಗ ದುರ್ಯೋಧನನಲ್ಲಿ ವಿಶೇಷ ಪಕ್ಷಪಾತವುಳ್ಳ ರಾಜಕುಮಾರರುಗಳೆಲ್ಲರೂ ತಮ್ಮ ತಮ್ಮ ತಂದೆಗಳನ್ನು ಶ್ರೀಕೃಷ್ಣನನ್ನು ಸಂಹರಿಸುವುದಕ್ಕಾಗಿ ಜರಾಸಂಧನಿಗೆ ವಿಶೇಷ ಸಹಾಯವನ್ನು ಮಾಡುವಂತೆ ಪ್ರೋತ್ಸಾಹಿಸಿದರು. ಎಲ್ಲಾ ರಾಜರುಗಳಿಂದಲೂ ಒಟ್ಟುಗೂಡಿಸಲ್ಪಟ್ಟ ಸೈನ್ಯಗಳ ಸಂಖ್ಯೆಯು ಇಪ್ಪತ್ತಮೂರು ಅಕ್ಷೌಹಿಣೀ ಪರಿಮಿತವಾಯಿತು. ಅಷ್ಟು ಸೈನ್ಯಗಳಿಂದ ಸಹಿತರಾದ ಎಲ್ಲಾ ರಾಜರುಗಳು ಜರಾಸಂಧನ ಸಮೀಪಕ್ಕೆ ಬಂದು ಯುದ್ಧಕ್ಕೆ ಪುನಃ ಹೊರಡುವಂತೆ ಪ್ರೋತ್ಸಾಹಿಸಿದರು. ಅವನು ಎಲ್ಲರನ್ನೂ ಕರೆದುಕೊಂಡು ಮಥುರಾಪಟ್ಟಣಕ್ಕೆ ಬಂದನು.

ಆಗ ಶ್ರೀಕೃಷ್ಣದೇವನು ಆಲೋಚಿಸಿದನು. " ಎಷ್ಟು ಸೈನಿಕರು ಬಂದರೂ ಅವರನ್ನು ಲೀಲಾಮಾತ್ರದಿಂದ ನಿಗ್ರಹಿಸಲು ನಾನು ಶಕ್ತನು. ಆದರೂ ಅಸಂಖ್ಯ ಸೈನಿಕರಿಂದ ಯುಕ್ತರಾಗಿ ಬಲಿಷ್ಠರಾದ ಶತ್ರುಗಳು ಬಂದಿರುವಾಗ ಅಲ್ಪಸಂಖ್ಯಾಕವಾದ ಸೈನ್ಯಗಳಿಂದ ಯುಕ್ತರಾದ ರಾಜರು ಮಾಡಬೇಕಾದ ಉಪಾಯವನ್ನು ತಿಳಿಸಬೇಕು. ಆದಕ್ಕಾಗ ಈಗ ನಾನು ಈ ಊರನ್ನು ಬಿಟ್ಟು ಹೊರಗೆ ಹೋಗುವೆನು' ಎಂದು ತೀರ್ಮಾನಿಸಿದನು. ಅಣ್ಣನಾದ ಬಲರಾಮನನ್ನು ಕರೆದುಕೊಂಡು ದಕ್ಷಿಣಾಭಿಮುಖವಾಗಿ ಹೊರಟನು. ಅವರಿಬ್ಬರ ಹಿಂದೆಯೇ ಸೈನ್ಯಸಹಿತನಾದ ಜರಾಸಂಧನೂ ಹೊರಟನು.

## ಪರಶುರಾಮ ಶ್ರೀಕೃಷ್ಣರ ಸಮಾಗಮ

ಮಾರ್ಗದಲ್ಲಿ ಪರಶುರಾಮರೂಪಿಯಾದ ತನ್ನನ್ನು ನೋಡಿದನು. ಶ್ರೀಹರಿಯು ಒಬ್ಬನೇ ಆಗಿದ್ದರೂ ಬೇರೆ ಬೇರೆ ರೂಪಗಳಿಂದ ವ್ಯವಹರಿಸುತ್ತಿರುವನು.

ಪರಶುರಾಮರೂಪಿಯಾದ ಶಿಷ್ಯಕೋಟಿಸಹಿತನಾದ ತನ್ನನ್ನು ನೋಡಿ ನಮಸ್ಕರಿಸಿದನು. ತನಗೆ ಶತ್ರುಗಳು ಹೆಚ್ಚಾಗಿರುವುದಾಗಿಯೂ ಅವರಿಂದ ಅಪಾಯವು ಏರ್ಪಡದಂತೆ "ದುರ್ಗ ಅಂದರೆ ಸುಲಭವಾಗಿ ಯಾರಿಂದಲೂ ಬರುವುದಕ್ಕೆ ಸಾಧ್ಯವಿಲ್ಲದ ಪ್ರದೇಶವನ್ನು ತಿಳಿಸಬೇಕು ಎಂದೂ ಪ್ರಾರ್ಥಿಸಿದನು. ಅದಕ್ಕೆ ಪರಶುರಾಮರೂಪಿಯಾದ ಪರಮಾತ್ಮನು "ಇಲ್ಲಿಯೇ ದಕ್ಷಿಣದಲ್ಲಿ ಗೋಮಂತ ಎಂಬ ಪರ್ವತವು ಇರುತ್ತದೆ. ಅಲ್ಲಿಗೆ ಹೋದರೆ ಶತ್ರುಗಳು ಪ್ರವೇಶಿಸಲು ಮತ್ತು ಆ ಪರ್ವತವನ್ನು ಏರಲು ಸಾಧ್ಯವಿಲ್ಲ. ಆ ಪ್ರದೇಶವನ್ನು ಆಶ್ರಯಿಸು" ಎಂದು ಆಜ್ಞಾಪಿಸಿದನು. ಅನಂತರದಲ್ಲಿ ಬಲರಾಮನೂ ಶ್ರೀಕೃಷ್ಣದೇವನೂ ಪರಶುರಾಮರೂಪಿಯಾದ ಶ್ರೀಹರಿಯನ್ನು ನಮಸ್ಕರಿಸಿ ಗಡ್ಡೆಗೆಣಸುಗಳನ್ನು ತಿಂದು ಪರಶುರಾಮದೇವನ ಅನುಮತಿಯನ್ನು ಪಡೆದು ದಕ್ಷಿಣಾಭಿಮುಖವಾಗಿ ಹೋಗಿ ಗೋಮಂತಪರ್ವತವನ್ನು ಏರಿದರು.

**(೬೪) ಗೋಮಂತಂ (ಪ್ರಾಪ್ಯ), ಖಗಪತಿವಿಹಿತಂ ಮೌಲಿಮಪಿ (ಪ್ರಾಪ್ಯ)**

ವಿಶೇಷಾರ್ಥ - ಗೋಮಂತಂ ಪ್ರಾಪ್ಯ ತತ್ರ ರಮಮಾಣಃ ತತ್ರ ಕ್ಷೀರಾಬ್ಧೌ ಮುಕ್ತಸ್ಥಾನಾದಮುಕ್ತ ಸೇವ್ಯಸ್ಥಲಂ ಪ್ರಾಪ್ಯ, ಸಂಸೃತಿಸ್ಥೈಃ ಸುರಾದ್ಯೈಃ ಸೇವ್ಯಮಾನಂ ನಾರಾಯಣಂ ದ್ರಷ್ಟುಮಾಗತಂ ನಾರಾಯಣಶಿರಸಿ ವಿದ್ಯಮಾನಂ ಕಿರೀಟಮಪಹೃತ್ಯ ಗಚ್ಛಂತಂ ತದ್ಗತಾಸುರಾವೇಶಪ್ರಕಟನಾರ್ಥಂ ದೈವೈಃ ಸಹ ಸುಪ್ತವದ್ವಿದ್ಯಮಾನೇನ ನಾರಾಯಣೇನೋಕ್ಷಿಪೇತಂ ವಿರೋಚನಸುತಂ ಬಲಿಂ ವಿಜಿತ್ಯ, ಪುರಪಾಲಕೇನ ಗರುಡೇನಾದಾಯ ಸ್ವಶಿರಃ ಸಮರ್ಪಿತಂ ಕಿರೀಟಂ ಪ್ರಾಪ್ಯ.

# ಬಲಿಚಕ್ರವರ್ತಿಯು ಶ್ರೀಹರಿಯ ಕಿರೀಟವನ್ನು ಕದ್ದನು

ವಿಶೇಷಾರ್ಥವಿವರಣ - ಅದೇ ಸಮಯದಲ್ಲಿ ವೈಕುಂಠದಲ್ಲಿ ಒಂದು ವಿಶೇಷವು ನಡೆಯಿತು. ವೈಕುಂಠದಲಿ ಎರಡು ಭಾಗಗಳಿವೆ. ಆ ಎರಡು ಭಾಗಗಳಲ್ಲಿ ಒಂದು ಭಾಗದಲ್ಲಿ ಮುಕ್ತರಾದ ಜೀವರು ಮಾತ್ರ ವಾಸಿಸುತ್ತಿರುವರು. ಇನ್ನೊಂದು ಭಾಗದಲ್ಲಿ ಅಮುಕ್ತರಾದ ಜೀವರೂ ಸಹ ಶ್ರೀಹರಿಯನ್ನು ಆರಾಧಿಸುವುದಕ್ಕಾಗಿ ಬರುವರು. ಅಮುಕ್ತರಾದ ಜೀವರಿಂದ ಪೂಜೆಯನ್ನು ಸ್ವೀಕರಿಸುವುದಕ್ಕಾಗಿ ಅಮುಕ್ತರು ಬರುವ ಪ್ರದೇಶಕ್ಕೆ ಶ್ರೀಹರಿಯು ಬಂದಿದ್ದನು. ದಿವ್ಯಸಿಂಹಾಸನದಲ್ಲಿ ಕುಳಿತಿದ್ದನು. ಅಮುಕ್ತರಾದ ಸರ್ವದೇವತೆಗಳೂ ತಮ್ಮ ತಮ್ಮ ಆಸನಗಳಲ್ಲಿ ಕುಳಿತಿದ್ದರು. ಆಗ ಪಾತಾಳಲೋಕದಿಂದ ಬಲಿಚಕ್ರವರ್ತಿಯು ಅಲ್ಲಿಗೆ ಬಂದನು. ಬಲಿಚಕ್ರವರ್ತಿಯು ಮಹಾವಿಷ್ಣುಭಕ್ತನೆಂಬ ವಿಷಯದಲ್ಲಿ ಯಾರಿಗೂ ವಿವಾದವಿಲ್ಲ. ಆದರೂ ಒಮ್ಮೊಮ್ಮೆ ಅವನಿಗೂ ಕಲಿಪ್ರವೇಶವು ಏರ್ಪಡುವುದುಂಟು. ಅಂತಹ ಸಂದರ್ಭದಲ್ಲಿ ಅವನೂ ಸಹ ಶ್ರೀಹರಿಯ ವಿರೋಧವನ್ನು ಮಾಡುವುದುಂಟು. ಈ ವಿಷಯವನ್ನು ಬಹಿರಂಗಪಡಿಸುವುದಕ್ಕಾಗಿ ಶ್ರೀಹರಿಯು ಎಲ್ಲಾ ದೇವತೆಗಳನ್ನೂ ಒಮ್ಮೆ ನೋಡಿ ಕಣ್ಣು ಹಾರಿಸಿ ಕಣ್ಣುಗಳನ್ನು ಮುಚ್ಚಿದನು. ಶ್ರೀಹರಿಯ ಅಭಿಪ್ರಾಯವನ್ನು ತಿಳಿದ ದೇವತೆಗಳು ತುಂಬಾ ನಿದ್ರೆ ಬಂದವರಂತೆ ನಟಿಸುತ್ತಾ ಕಣ್ಣುಗಳನ್ನು ಮುಚ್ಚಿಕೊಂಡರು. ಶ್ರೀಹರಿಯು ಕಣ್ಣುಗಳನ್ನು ಮುಚ್ಚಿಕೊಂಡು ಗೊರಕೆ ಹೊಡೆಯಲು ಆರಂಭಿಸಿದನು. ಅಷ್ಟರಲ್ಲಿ ಬಲಿಚಕ್ರವರ್ತಿಯು ನಿದ್ದೆಮಾಡುತ್ತಿರುವಂತೆ ನಟಿಸುತ್ತಿರುವ ಎಲ್ಲಾ ದೇವತೆಗಳೂ ನಿಜವಾಗಿಯೂ ನಿದ್ರೆ ಮಾಡುತ್ತಿರುವಂತೆ ಭ್ರಮಿಸಿದನು. ಶ್ರೀಹರಿಗೆ ನಿದ್ರಾದಿದೋಷಗಳು ಯಾವಾಗಲೂ ಇಲ್ಲವೆಂದೂ ಶ್ರೀಹರಿಯ ಪರಮಾನುಗ್ರಹದಿಂದ ದೇವತೆಗಳಿಗೂ ಕೂಡ ನಿದ್ರಾದಿದೋಷಗಳಿಲ್ಲವೆಂದೂ ಪರಮಾರ್ಥ ತತ್ವವನ್ನು ಮರೆತನು. ಅದೇ ಕಲಿಯ ಆವೇಶಬಲದಿಂದಲೇ ಶ್ರೀಹರಿಯು ತನ್ನ ಸಕಲ ಸಂಪತ್ತುಗಳನ್ನೂ ಅಪಹರಿಸಿ ತನ್ನ ಶತ್ರುವಾದ ದೇವೇಂದ್ರನಿಗೆ ಕೊಟ್ಟಿರುವ ವಿಷಯವನ್ನು ನೆನೆಸಿದನು. " ಈ ಹರಿಯು ನನ್ನ ವಿರೋಧಿಯಾಗಿರುವನು. ಇವನಿಗೆ ಈ ದೊಡ್ಡ ದೇವಸಭೆಯಲ್ಲಿ ಅವಮಾನವನ್ನು ಮಾಡಬೇಕು." ಎಂದು ತೀರ್ಮಾನಿಸಿದನು. ಗೊರಕೆ ಹೊಡೆದಂತೆ ನಟಿಸುತ್ತಿರುವ ಶ್ರೀಹರಿಯು ತಲೆಯಿಂದ ಅವನ ಕಿರೀಟವನ್ನು ಅಪಹರಿಸಿದನು. " ಎಲ್ಲರೂ ಏಳುವುದಕ್ಕಿಂತ ಮುಂಚಿತವಾಗಿ ಈ ಸ್ಥಳದಿಂದ ಓಡಿಹೋಗಬೇಕು" ಎಂದು ತೀರ್ಮಾನಿಸಿದನು. ಕಿರೀಟವನ್ನು ಎತ್ತಿಕೊಂಡು ಓಡಿಹೋದನು. ಆಗ ಶ್ರೀಹರಿಯ ಮುಂದೆ ನಿಂತಿದ್ದ ವೈಕುಂಠಪುರಪಾಲಕನಾದ ಗರುಡನು ಬಲಿಚಕ್ರವರ್ತಿಯನ್ನು ಬೆನ್ನಟ್ಟಿಕೊಂಡು ಹೋದನು. ಬಲಿಚಕ್ರವರ್ತಿಯು ಹೊರಟ ಕೂಡಲೇ ಶ್ರೀಹರಿಯೂ ಎಲ್ಲಾ ದೇವತೆಗಳೂ ನಿದ್ರೆಯಿಂದ ಎಚ್ಚರವಾದವರಂತೆ ನಟಿಸಿದರು.

ಬಲಿಚಕ್ರವರ್ತಿಯಲ್ಲಿಕಲಿಯ ಆವೇಶದಿಂದ ಏರ್ಪಟ್ಟ ಈ ವ್ಯಾಪಾರವನ್ನು ಬಹಿರಂಗವಾಗಿ ಹೇಳುತ್ತಾ ಎಲ್ಲರೂ ನಕ್ಕರು. ಗರುಡನು ಬಲಿಚಕ್ರವರ್ತಿ ಯನ್ನು ಪಾತಾಳದ ವರೆಗೆ ಓಡಿಸಿಕೊಂಡುಹೋಗಿ ಅವನನ್ನು ಸೋಲಿಸಿ ಅವನಿಂದ ಕಿರೀಟವನ್ನು ಅಪಹರಿಸಿ ವೈಕುಂಠವಾಸಿಯಾದ ಶ್ರೀಹರಿಯ ತಲೆಯಲ್ಲಿಡಬೇಕೆಂದು ವೈಕುಂಠಕ್ಕೆ ಅಭಿಮುಖವಾಗಿ ಹೋಗುತ್ತಿದ್ದನು. ಮಾರ್ಗದಲ್ಲಿ ಗೋಮಂತಶಿಖರದಲ್ಲಿ ಶ್ರೀಕೃಷ್ಣದೇವನನ್ನು ನೋಡಿದನು. ಅವನ ತಲೆಯಲ್ಲಿ ಆ ಕಿರೀಟವನ್ನು ಇಟ್ಟು ನಮಸ್ಕರಿಸಿದನು. ದೊಡ್ಡ ಆ ಕಿರೀಟವು, ಭೂಲೋಕದಲ್ಲಿ ವಾಸಿಸುವುದಕ್ಕಾಗಿ ಚಿಕ್ಕರೂಪವನ್ನು ಧರಿಸಿದ ಶ್ರೀಕೃಷ್ಣದೇವನ ಚಿಕ್ಕ ತಲೆಯಲ್ಲಿಟ್ಟಕೂಡಲೇ ಆ ತಲೆಯ ಆಕಾರಕ್ಕೆ ಸಮಾನವಾದ ಆಕಾರವನ್ನು ಧರಿಸಿತು. ಇದೇ ಕಿರೀಟವೇ ಇನ್ನೊಂದು ರೂಪವನ್ನು ಸ್ವೀಕರಿಸಿ ವೈಕುಂಠವಾಸಿಯಾದ ಶ್ರೀಹರಿಯ ದೊಡ್ಡ ತಲೆಗೆ ಸಮಾನವಾದ ಆಕಾರವನ್ನು ಹೊಂದಿ ಅಲ್ಲಿಯೂ ಶ್ರೀಹರಿಯ ತಲೆಯಲ್ಲಿ ಶೋಭಿಸಿತು.

ಗೋಮಂತಪರ್ವತದಲ್ಲಿ ಶ್ರೀಕೃಷ್ಣದೇವನನ್ನು ನಮಸ್ಕರಿಸಿದಾಗ ಶ್ರೀಕೃಷ್ಣದೇವನು ಸ್ಮರಿಸಿದಾಗ ನೀನು ಪುನಃ ಬಾ ಎಂದು ಆಜ್ಞಾಪಿಸಿದನು. ಹಾಗೆಯೇ ಆಗಲಿ ಎಂದು ಹೇಳಿ ಗರುಡದೇವನು ವೈಕುಂಠಕ್ಕೆ ಹೋದನು.

## ಗರುಡನಿಗೆ ಭೂಮಿಯಲ್ಲಿ ಅವತಾರವಿಲ್ಲ

ಶ್ರೀಹರಿಯು ರಾಮಾವತಾರವನ್ನೂ ಕೃಷ್ಣಾವತಾರವನ್ನೂ ಸ್ವೀಕರಿಸಿದಾಗ ಎಲ್ಲಾ ದೇವತೆಗಳೂ ತಮ್ಮ ತಮ್ಮ ಶಕ್ತ್ಯನುಸಾರವಾಗಿ ಶ್ರೀಹರಿಯನ್ನು ಸೇವಿಸುವುದಕ್ಕಾಗಿ ಭೂಮಿಯಲ್ಲಿ ಅವತರಿಸಿದರು. ಆಗ ಗರುಡದೇವನು ಅವತರಿಸಬೇಕೆಂದು ಸಂಕಲ್ಪಿಸಿದನು. ಆಗ ಶ್ರೀಹರಿಯು " ನೀನು ಭೂಮಿಯಲ್ಲಿ ಅವತರಿಸಬೇಡ. ಈ ಎರಡು ಅವತಾರಕಾಲಗಳಲ್ಲಿಯೂ ನಿನ್ನ ಮೂಲರೂಪದಿಂದಲೇ ನಿನ್ನಿಂದ ಸೇವೆಯನ್ನು ಸ್ವೀಕರಿಸುವೆನು." ಎಂದು ಹೇಳಿದನು.

ಅದರಂತೆ ರಾಮಾವತಾರದಕಾಲದಲ್ಲಿ ಇಂದ್ರಜಿತುವು ನಾಗಪಾಶದಿಂದ ಎಲ್ಲಾ ಕಪಿಗಳನ್ನೂ ಬಿಗಿದುಕೊಂಡಿರುವಾಗ ಗರುಡನನ್ನು ರಾಮದೇವನು ಸ್ಮರಿಸಿದನು. ಆಗ ಗರುಡದೇವನು ಓಡಿ ಬಂದನು. ಆಗ ಗರುಡನ ಭಯದಿಂದ ಸರ್ಪಗಳೆಲ್ಲವೂ ಕಪಿಗಳನ್ನೆಲ್ಲ ವನ್ನೂ ಬಿಟ್ಟು ಓಡಿ ಹೋದವು. ಗರುಡದೇವನ ರೆಕ್ಕೆಗಳಿಂದ ಸುರಿದ ಅಮೃತಬಿಂದುಗಳ ಮಳೆಯಿಂದ ಸತ್ತು ಹೋಗಿದ್ದ ಕಪಿಗಳೆಲ್ಲವೂ ಬದುಕಿದವು. ರಾಮಾವತಾರಕಾಲದಲ್ಲಿ ಈ ರೀತಿಯಿಂದ ಗರುಡನ ಮೂಲರೂಪದಿಂದಲೇ ಶ್ರೀಹರಿಯು ಸೇವೆಯನ್ನು ಸ್ವೀಕರಿಸಿದನು.

ಶ್ರೀಕೃಷ್ಣಾವತಾರಕಾಲದಲ್ಲಿ ಗರುಡನು ಬಲಿಚಕ್ರವರ್ತಿಯನ್ನು ಜಯಿಸಿ ಅಪಹರಿಸಿದ ಕಿರೀಟವನ್ನು ಅವನಿಂದ ಬಿಡಿಸಿಕೊಂಡು ಗೋಮಂತಪರ್ವತದ ಶಿಖರದಲ್ಲಿ ನಿಂತಿರುವ ಶ್ರೀಕೃಷ್ಣದೇವನ ತಲೆಯಲ್ಲಿಟ್ಟು ಮೂಲರೂಪದಿಂದಲೇ ಶ್ರೀಹರಿಯನ್ನು ತೃಪ್ತಿಪಡಿಸಿದನು.

## ಬಲರಾಮನ ವಿಹಾರ

ಶೇಷದೇವನಿಗೆ ವಾರುಣೀ ಎಂಬುವಳು ಪ್ರಥಮಪತ್ನೀ ಕಾಂತಿ ಎಂಬವಳು ಎರಡನೆಯ ಪತ್ನೀ, ಚಂದ್ರನ ಪತ್ನಿಯಾಗಿರುವ ಕಾಂತಿಗಿಂತ ಶೇಷದೇವನ ಪತ್ನಿಯಾಗಿರುವ ಕಾಂತಿಯು ಅತ್ಯಂತರೂಪವತೀ, ಶ್ರೀಎಂಬುವಳು ಮೂರನೆಯ ಪತ್ನೀ, ಶ್ರೀದೇವಿಯಲ್ಲಿ ಲಕ್ಷ್ಮೀದೇವಿಯ ವಿಶೇಷಸನ್ನಿಧಾನವಿತ್ತು. ಆದ್ದರಿಂದ ಅವಳು ಅತ್ಯಂತ ರೂಪವತಿಯಾಗಿದ್ದಳು. ಶೇಷದೇವನೇ ಬಲರಾಮನಾಗಿ ಹುಟ್ಟಿದನು. ಅವನನ್ನು ಸೇವಿಸುವುದಕ್ಕಾಗಿ ಶೇಷದೇವನ

ಪತ್ನಿಯರಾಗಿರುವ ವಾರುಣೀ, ಶ್ರೀ ಕಾಂತಿ ಎಂಬ ಮೂರು ಪತ್ನಿಯರೂ ಗೋಮಂತಶಿಖರಕ್ಕೆ ಬಂದರು. ಅದೇ ಪರ್ವತದ ಶಿಖರದಲ್ಲಿ ಕದಂಬ ಎಂಬ ಒಂದು ಮರವಿತ್ತು. ಆ ಮರದಲ್ಲಿ ಎಲ್ಲಾ ಕಡೆಗಳಲ್ಲೂ ಪೊಟರೆಗಳಿದ್ದವು. ಆ ಪೂಟರೆಗಳಿಂದ ಕಾದಂಬರೀ ಎಂಬ ಹೆಸರಿನಿಂದ ಪ್ರಸಿದ್ಧವಾದ ಮದ್ಯವು ಧಾರೆಧಾರೆಯಾಗಿ ಸುರಿಯಿತು. ಆ ಕಾದಂಬರೀ ಎಂಬ ಮದ್ಯಕ್ಕೆ ವಾರುಣೀ ಎಂಬ ಶೇಷದೇವನ ಪತ್ನಿಯು ಅಭಿಮಾನಿನಿಯಾಗಿದ್ದಳು. ಬಲರಾಮನು ವಾರುಣೀ, ಶ್ರೀ ಕಾಂತಿ ಎಂಬ ಮೂವರು ಪತ್ನಿಯರಿಂದ ಸಮೇತನಾಗಿ ಈ ಮದ್ಯವನ್ನು ಕುಡಿದು ಆ ಪರ್ವತದ ಮೇಲೆ ವಿಹರಿಸುತ್ತಿದ್ದನು.

ಗೋಮಂತಪರ್ವತದ ಮೇಲೆ ಶ್ರೀಕೃಷ್ಣದೇವನು ಹೋದದ್ದನ್ನು ಜರಾಸಂಧನು ನೋಡಿದನು. ಕೂಡಲೇ ಎಲ್ಲಾ ರಾಜರುಗಳಿಂದಲೂ ಸಹಿತನಾಗಿ ಓಡಿಬಂದು ಆ ಪರ್ವತದ ಸುತ್ತಲೂ ಎಲ್ಲರನ್ನೂ ನಿಲ್ಲಿಸಿದನು. ಎಲ್ಲರನ್ನೂ ನಾಲ್ಕು ಕಡೆಗಳಿಂದಲೂ ಪರ್ವತದ ಮೇಲೆ ಏರುವಂತೆಯೂ ಹುಡುಕುವಂತೆಯೂ ಆಜ್ಞಾಪಿಸಿದನು. ಎಲ್ಲರೂ ಹುಡುಕಿದರು. ಆದರೆ ಶ್ರೀಕೃಷ್ಣನು ಕಾಣಿಸಲಿಲ್ಲ. ಆ ಪರ್ವತದ ಮೇಲೆ ಪ್ರವರ್ಷಣ ಎಂಬ ಶಿಖರವಿದೆ. ಅದನ್ನು ಏರಲು ಯಾರಿಂದಲೂ ಸಾಧ್ಯವಿಲ್ಲ. ಶಿಖರದಲ್ಲಿ ಎಲ್ಲಾ ಕಡೆಗಳಿಂದಲೂ ನೀರು ಸುರಿಯುತ್ತಿರುತ್ತದೆ. ಆ ಶಿಖರದ ಮೇಲೆ ಬಲರಾಮನೂ ಶ್ರೀಕೃಷ್ಣನೂ ಹಿಂದೆ ಹೇಳಿದಂತೆ ವಿಹರಿಸುತ್ತಿದ್ದರು. ಆದ್ದರಿಂದಲೇ ರಾಜರಿಂದ ಯಾಂರಿದಲೂ ಕಂಡುಹಿಡಿಯಲು ಸಾಧ್ಯವಾಗಲಿಲ್ಲ. ಎಲ್ಲಾ ಕಡೆಗಳಲ್ಲೂ ಹುಡುಕಿದರೂ ಶ್ರೀಕೃಷ್ಣದೇವನು ಮತ್ತು ಬಲರಾಮನು ಸಿಕ್ಕದಿದ್ದುದನ್ನು ತಿಳಿದ ಜರಾಸಂಧನು ಇನ್ನೊಂದು ಯೋಜನೆಯನ್ನು ಮಾಡಿದನು. ಈ ಪರ್ವತದಲ್ಲಿರುವ ಮರಗಳೆಲ್ಲವನ್ನೂ ಕಡಿದು ಪರ್ವತದ ಸುತ್ತಲೂ ರಾಶಿ ಹಾಕಿ ಬೆಂಕಿಯನ್ನು ಹಚ್ಚಬೇಕು. ಹಾಗೆ ಮಾಡಿಬಿಟ್ಟರೆ ಈ ಪರ್ವತದಲ್ಲಿ ಎಲ್ಲಿದ್ದರೂ ಅವರಿಬ್ಬರೂ ಸುಟ್ಟು ಬೂದಿಯಾಗುವುದರಲ್ಲಿ ಸಂಶಯವಿಲ್ಲ. ಎಂದು ತೀರ್ಮಾನಿಸಿದನು. ಹಾಗೆಯೇ ಮಾಡಿದನು. ಇದನ್ನು ತಿಳಿದ ಶ್ರೀಕೃಷ್ಣದೇವನೂ ಬಲರಾಮನೂ ಆ ಪರ್ವತದ ಪ್ರವರ್ಷಣ ಎಂಬ ಶಿಖರದಿಂದ ಈ ರಾಜರುಗಳ ಸೈನ್ಯದ ಮಧ್ಯದಲ್ಲಿ ಹಾರಿದರು. ಇವರಿಬ್ಬರ ಭಾರವನ್ನು ಸಹಿಸಲಾರದೆ ಆ ಪರ್ವತವು ಹನ್ನೊಂದು ಯೋಜನದಷ್ಟು ಭೂಮಿಯಲ್ಲಿ ಪ್ರವೇಶಿಸಿತು..ಆಗ ಪರ್ವತದಲ್ಲಿರುವ ಎಲ್ಲಾ ಗುಹಾದ್ವಾರಗಳಿಂದಲೂ ನೀರು ಹೊರಗೆ ಸುರಿದು ಆ ನೀರಿನ ಧಾರೆಗಳಿಂದ ಎಲ್ಲಾ ಬೆಂಕಿಯೂ ಶಾಂತವಾಯಿತು.

## ಜರಾಸಂಧನ ದ್ವಿತೀಯ ಯುದ್ಧಾರಂಭ

ಶ್ರೀಕೃಷ್ಣದೇವನು ಪ್ರಥಮಯುದ್ಧಕಾಲದಲ್ಲಿ ವೈಕುಂಠದಿಂದ ಬಂದಿದ್ದ ಮತ್ತು ಆ ಯುದ್ಧವು ಮುಗಿದ ಕೂಡಲೇ ಹಿಂದಿರುಗಿ ಹೋಗಿದ್ದ ತನ್ನ ಮತ್ತು ಬಲರಾಮನ ರಥ ಆಯುಧ ಮುಂತಾದವುಗಳು ಬರಲಿ ಎಂದು ಸಂಕಲ್ಪಿಸಿದನು. ಮರುಕ್ಷಣದಲ್ಲಿಯೇ ಮೊದಲನೆಯ ಯುದ್ಧದಲ್ಲಿ ಬಂದಂತೆ ಗದಾ ಸುದರ್ಶನ ಚಕ್ರ ಮುಂತಾದವುಗಳೆಲ್ಲವೂ ಬಂದವು. ತನ್ನ ರಥದಲ್ಲಿ ತಾನೂ ಬಲರಾಮನ ರಥದಲ್ಲಿ ಬಲರಾಮನೂ ಕುಳಿತವರಾಗಿ ತಮ್ಮ ತಮ್ಮ ಆಯುಧಗಳಿಂದ ಎಲ್ಲಾ ರಾಜರುಗಳನ್ನೂ ಪೀಡಿಸುತ್ತಾ ಬಂದರು.

ಹಂಸ ಡಿಭಿಕ, ಏಕಲವ್ಯ, ಕೀಚಕ, ಶಿಶುಪಾಲ ಪೌಂಡ್ರಕವಾಸುದೇವ, ನರಕಾಸುರನ ಮಗನಾದ ಭಗದತ್ತ, ದಂತವಕ್ರ, ರುಕ್ಮಿ, ಸೌಭ ಎಂಬ ವಿಮಾನದ ಅಧಿಪತಿಯಾದ ಸಾಲ್ವ, ಮೈಂದ, ವಿವಿಧ ಇವರೆಲ್ಲರೂ ಕೃಷ್ಣನ ಸುತ್ತಲೂ ನಿಂತವರಾಗಿ ಆಯುಧಗಳಿಂದಲೂ, ಅಸ್ತ್ರಗಳಿಂದಲೂ ಮರಗಳಿಂದಲೂ ಬಂಡೆಕಲ್ಲುಗಳಿಂದಲೂ ಮಳೆಯನ್ನು

ಸುರಿಸಿದರು. ಶಲ್ಯ, ಬಾಹ್ಲೀಕ, ಸೋಮದತ್ತ, ಸೋಮದತ್ತನ ಮಗನಾದ ಭೂರಿಶ್ರವಸ್ಸು, ವಿರಾಟ, ಪಾಂಚಾಲರಾಜ ಮತ್ತು ಜರಾಸಂಧನಿಂದ ಜೈಲಿನಲ್ಲಿಡಲ್ಪಟ್ಟ ಇಪ್ಪತ್ತುಸಾವಿರ ವಿಷ್ಣುಭಕ್ತರಾದ ರಾಜರುಗಳು ಜರಾಸಂಧನ ಭಯದಿಂದ ಶ್ರೀಕೃಷ್ಣದೇವನ ಮೇಲೆ ಆಯುಧಗಳ ಮಳೆಗಳನ್ನು ಸುರಿಸಿದರು. ಇವರೆಲ್ಲರನ್ನೂ ಶ್ರೀಕೃಷ್ಣದೇವನು ಓಡಿಸಿದನು. ಎಲ್ಲರ ಸಾರಥಿಗಳೂ ಕುದುರೆಗಳೂ ಧ್ವಜಸ್ತಂಭಗಳೂ ಆಯುಧಗಳೂ, ಕವಚಗಳೂ ಪುಡಿಯಾದವು. ಎಲ್ಲರೂ ರಕ್ತವನ್ನು ವಾಂತಿಮಾಡುತ್ತಾ ಓಡಿದರು. ಶ್ರೀಕೃಷ್ಣದೇವನು ತನ್ನ ಪ್ರಿಯಳಾದ ರುಕ್ಮಿಣೀಗೋಸ್ಕರ ಅವಳ ಅಣ್ಣನಾದ ರುಕ್ಮಿಯನ್ನು ಕೊಲ್ಲಲಿಲ್ಲ. ಅವನ ಆಯುಧಗಳೆಲ್ಲವನ್ನೂ ಪುಡಿಪುಡಿ ಮಾಡಿ ಅವನನ್ನು ಓಡಿಸಿದನು.

ಬಲರಾಮನು ಜರಾಸಂಧನ ಜೊತೆಯಲ್ಲಿ ಬಹುಕಾಲದ ವರೆಗೆ ಯುದ್ಧವನ್ನು ಮಾಡಿದನು. ಕೊನೆಗೆ ತನ್ನ ಆಯುಧದಿಂದ ಅವನನ್ನು ಹೊಡೆದನು. ಅವನು ಬಹುಕಾಲದ ವರೆಗೆ ಮೂರ್ಛಿತನಾಗಿ ಬಿದ್ದಿದ್ದನು. ಕೊನೆಗೆ ಎಚ್ಚತ್ತವನಾಗಿ ಬಲರಾಮನನ್ನು ಗದೆಯಿಂದ ಹೊಡೆದನು. ಬಲರಾಮನು ಒಂದು ಕ್ಷಣದ ವರೆಗೆ ಮೂರ್ಛಿತನಾಗಿದ್ದನು. ಕೊನೆಗೆ ಎಚ್ಚತ್ತವನಾಗಿ ತನ್ನ ಹಲಾಯುಧವ ಎತ್ತಿ ಅದರಿಂದ ಜರಾಸಂಧನನ್ನು ಕೊಲ್ಲಬೇಕೆಂದು ಸಂಕಲ್ಪಿಸಿದನು.

## ಬಲರಾಮನಿಗೆ ವಾಯುದೇವರ ಆಜ್ಞೆ

ಆಗ ವಾಯುದೇವನು ಅದೃಶ್ಯನಾಗಿದ್ದು ಬಲರಾಮನನ್ನು ನೋಡಿ ಹೇಳಿದನು. " ಓ ಬಲರಾಮಾ! ಈ ಜರಾಸಂಧನಿಗೆ ಬ್ರಹ್ಮನೂ, ರುದ್ರನೂ, ರುದ್ರನ ಅವತಾರನಾಗಿರುವ ದೂರ್ವಾಸಋುಷಿಯೂ " ಅಜೇಯತ್ವ " ಅಂದರೆ " ಯಾರಿಂದಲೂ ಸೋಲದಿರುವಿಕೆ" ಎಂಬ ವರವನ್ನು ಕೊಟ್ಟಿರುವರು. ನೀನು ಶೇಷದೇವನ ಅವತಾರವಾಗಿರುವುದರಿಂದ ನಿನಗೆ ಸಮಾನರಾಗಿರುವ ರುದ್ರದೇವ ಮತ್ತು ರುದ್ರದೇವನ ಅವತಾರವಾಗಿರುವ ದೂರ್ವಾಸಋುಷಿ ಇವರಿಬ್ಬರ ವರಗಳನ್ನು ಸುಳ್ಳಾಗುವಂತೆ ಮಾಡಬಲ್ಲೆ. ಆದರೆ ನಿನಗಿಂತ ಉತ್ತಮನಾಗಿರುವ ಬ್ರಹ್ಮದೇವನ ವರವನ್ನು ಸುಳ್ಳಾಗುವಂತೆ ಮಾಡಬಲ್ಲೆ. ಆದರೆ ನಿನಗಿಂತ ಉತ್ತಮನಾಗಿರುವ ಬ್ರಹ್ಮದೇವನ ವರವನ್ನು ಸುಳ್ಳಾಗುವಂತೆ ಮಾಡಲು ಶಕ್ತನಲ್ಲ. ಆದ್ದರಿಂದ ನೀನು ಕೊಲ್ಲುವುದಕ್ಕಾಗಿ ಪ್ರಯತ್ನಿಸಿದರೆ ನಿನ್ನ ಆಯುಧ ವ್ಯರ್ಥವಾಗುವುದು. ನಿನ್ನ ಬಲವು ಹೇಗೆ ವ್ಯರ್ಥವಾಗಬಾರದೋ ಅದರಂತೆ ನಿನ್ನ ಆಯುಧವೂ ವ್ಯರ್ಥವಾಗಬಾರದು. ಆದ್ದರಿಂದ ನೀನು ನಿನ್ನ ಆಯುಧವನ್ನು ಅವನನ್ನು ಕೊಲ್ಲುವುದಕ್ಕಾಗಿ ಪ್ರಯೋಗಿಸಬೇಡ. ಬ್ರಹ್ಮದೇವನ ವರವನ್ನು ಸುಳ್ಳಾಗುವಂತೆ ಮಾಡಬೇಕಾದರೆ ಬ್ರಹ್ಮದೇವನಿಗೆ ಸಮಾನನಾದ ವಾಯುದೇವನಾಗಲೀ ಅವನ ಅವತಾರವಾಗಿರುವ ಭೀಮಸೇನನಾಗಲೀ ಶಕ್ತರು. ಆದ್ದರಿಂದ ಭೀಮಸೇನನೇ ಅವನನ್ನು ಕೊಲ್ಲಲಿ. ನೀನು ನಿನ್ನ ಆಯುಧವನ್ನು ಪ್ರಯೋಗಿಸಬೇಡ. ಹಿಂದಿನ ಯುದ್ಧದಲ್ಲಿ ನಿನ್ನಲ್ಲಿ ವಿಶೇಷ ಸನ್ನಿಧಾನದಿಂದ ಯುಕ್ತನಾದ ಶ್ರೀಕೃಷ್ಣನೇ ಜರಾಸಂಧನನ್ನು ಜಯಿಸಿದನು. ನೀನ್ನಲ್ಲಿ ಈಗ ಹಾಗಿಲ್ಲ. ಈಗ ನಿನ್ನಲ್ಲಿ ಶ್ರೀಕೃಷ್ಣದೇವನ ವಿಶೇಷ ಸನ್ನಿಧಾನವಿಲ್ಲ. ಆದ್ದರಿಂದ ನಿನ್ನಿಂದ ಸಾಧ್ಯವಾಗಲಾರದು." ಎಂದನು. ಬಲರಾಮನು ಈ ಮಾತುಗಳನ್ನು ಕೇಳಿ ಹಿಂದಿರುಗಿದನು.

ಆಗ ಶ್ರೀಕೃಷ್ಣದೇವನು ಜರಾಸಂಧನ ಎದೆಗೂ ಕುತ್ತಿಗೆಗೂ ಮಧ್ಯದಲ್ಲಿರುವ ಜತ್ರು ಎಂಬ ಎಲುಬಿನ ಪ್ರದೇಶವನ್ನು ತನ್ನ ಗದೆಯಿಂದ ಹೊಡೆದನು. ಆ ಪೆಟ್ಟಿನಿಂದ ಮೂರ್ಛಿತನಾದ ಜರಾಸಂಧನು ಬಹುಕಾಲದ ಮೇಲೆ ಎಚ್ಚತ್ತು ರಾಜರುಗಳ ಗುಂಪಿನ ಮಧ್ಯದಲ್ಲಿ ಕಾಣಿಸದಂತೆ ಓಡಿಹೋದನು.

# ಸೃಗಾಲವಾಸುದೇವನ ವೃತ್ತಾಂತ

**(೬೫) ಶ್ರೀಕೃಷ್ಣಃ ಸೃಗಾಲಂ ವಾಸುದೇವಂ ಶತ್ರುಂ ಚ ಪುರ್ಯಾಂ ಹತ್ವಾ**

**ವಿಶೇಷಾರ್ಥ - ಗೋಮಂತಪರ್ವತಸ್ಯ ಅಧಃಪ್ರದೇಶೇ ವಿದ್ಯಮಾನಕರವೀರಪುರಸ್ಥ ಪೂರ್ವಂ ವಸುದೇವಾತ್ ಕರವೀರೇಶ್ವರಸುತಾಯಾಂ ದನುಸ್ವರೂಪಭೂತಾಯಾಂ ಪುತ್ರಿಕಾಪುತ್ರ-ನ್ಯಾಯೇನೋತ್ಪನ್ನಂ ಪ್ರಾಗ್ದುಂಧುನಾಮಕಂ ಮಧುಸುತಂ ದೈತ್ಯಂ ಸೃಗಾಲವಾಸುದೇವಂ ಸ್ವಶತ್ರುಂ ಹತ್ವಾ ತತ್ರ ಚತುರೋ ಮಾಸಾನ್ ಉಷಿತ್ವಾ, ಮಹತ್ಯಾ ಸೇನಯಾ ಮಥುರಾಂ ಪ್ರಾಪ್ಯ.**

ಪೂರ್ವದಲ್ಲಿ ಕಶ್ಯಪರ ಪತ್ನಿಯಾದ ದನು ಎಂಬ ದೈತ್ಯಸ್ತ್ರೀಯು ಶ್ರೀಕೃಷ್ಣದೇವತಾರಕ್ಕಿಂತ ಸ್ವಲ್ಪ ಪೂರ್ವದಲ್ಲಿ ಕರವೀರಪುರದ ಮಹಾರಾಜನ ಮಗಳಾಗಿ ಹುಟ್ಟಿದ್ದಳು. ಆ ಮಹಾರಾಜನಿಗೆ ಅವಳೊಬ್ಬಳೆಮಗಳು. ಗಂಡು ಮಕ್ಕಳಿರಲಿಲ್ಲ. ಶ್ರೀಕೃಷ್ಣದೇವನ ತಂದೆಯಾದ ವಸುದೇವನು ಕರವೀರಪುರಕ್ಕೆ ಯಾತ್ರಾರ್ಥಿಯಾಗಿ ಹೋಗಿದ್ದನು. ಆಗ ಆ ದೇಶದ ರಾಜನು ತನ್ನ ಮಗಳನ್ನು ವಸುದೇವನಿಗೆ ಕೊಟ್ಟು ವಿವಾಹ ಮಾಡಿದನು. ಆಗ ತನಗೆ ಗಂಡು ಮಕ್ಕಳಿಲ್ಲದಿರುವುದರಿಂದ ಈ ಕನ್ಯೆಯಲ್ಲಿ ಹುಟ್ಟುವ ಗಂಡುಮನು ತನ್ನ ದೇಶಕ್ಕೆ ಅಧಿಪತಿಯಾಗಬೇಕೆಂದೂ ಆ ಮಗನನ್ನು ತನಗೆ ದತ್ತು ಕೊಡಬೇಕೆಂದೂ ವಸುದೇವನಲ್ಲಿ ಹೇಳಿದ್ದನು. ಈ ಕರಾರಿನಂತೆ ಮಗಳ ಮಕ್ಕಳನ್ನು ದತ್ತು ಸ್ವೀಕರಿಸುವುದು ಪುತ್ರಿಕಾಪುತ್ರಧರ್ಮವೆನಿಸುತ್ತದೆ. ಈ ನ್ಯಾಯದಿಂದ ವಸುದೇವನಿಗೆ ಆ ಕನ್ಯೆಯಲ್ಲಿ ಸೃಗಾಲ ಎಂಬ ಮಗನು ಹುಟ್ಟಿದನು. ಈ ಸೃಗಾಲನು ಹಿಂದಿನ ಜನ್ಮದಲ್ಲಿ ಮಧು ಎಂಬ ದೈತ್ಯನಿಗೆ ಧುಂಧು ಎಂಬ ಹೆಸರಿನಿಂದ ಮಗನಾಗಿ ಹುಟ್ಟಿದನು. ಆ ಸೃಗಾಲನು ಆ ದೇಶದ ಅಧಿಪತಿಯಾದನು. ಅವನು ವಸುದೇವನ ಮಗನಾದ್ದರಿಂದ ಸೃಗಾಲವಾಸುದೇವ ಎಂದು ಪ್ರಸಿದ್ಧನಾದನು. ವಸುದೇವನು ಆ ಮಗನು ಹುಟ್ಟುವ ವರೆಗೆ ಆ ಊರಿನಲ್ಲಿದ್ದು ಮಗನು ಹುಟ್ಟಿದ ಕೂಡಲೇ ಮಥುರಾಪಟ್ಟಣಕ್ಕೆ ಹಿಂದಿರುಗಿದನು. ಮಥುರಾಪಟ್ಟಣದಲ್ಲಿ ದೇವಕೀ ಮುಂತಾದ ಕನ್ಯೆಯರನ್ನು ವಿವಾಹ ಮಾಡಿಕೊಂಡನು. ದೇವಕೀದೇವಿಯ ವಿವಾಹ ಕಾಲದಲ್ಲಿ " ಅವಳ ಎಂಟನೇ ಮಗನು ಕಂಸನ ಮೃತ್ಯು" ಎಂಬ ಅಶರೀರವಾಣಿಯಾದ ಮೇಲೆ ಕಂಸನು ದೇವಕೀ ಮತ್ತು ವಸುದೇವನಲ್ಲಿಯೂ ವಸುದೇವನ ಬಂಧುಗಳಾದ ಎಲ್ಲಾ ಯಾದವರಲ್ಲಿಯೂ ದೀರ್ಘದ್ವೇಷವನ್ನು ಇಟ್ಟುಕೊಂಡಿದ್ದನು. ಹಿಂದಿನ ಯುದ್ಧದಲ್ಲಿ ಎಲ್ಲಾ ರಾಜರುಗಳ ಜೊತೆಯಲ್ಲಿ "ದಮಘೋಷ" ಎಂಬ ರಾಜನೂ ಕೂಡ ಶ್ರೀಕೃಷ್ಣನಿಂದ ಸೋತು ಹೋಗಿದ್ದನು. ಅವನುಶ್ರೀಕೃಷ್ಣದೇವನ ಅನೇಕ ಸೋದರತ್ತೆಯರಲ್ಲಿ ಒಬ್ಬ ಸೋದರತ್ತೆಯ ಮಗನು. ಅವನು ಹಿಂದಿನ ಜನ್ಮದಲ್ಲಿ ದನು ಎಂಬ ಗಂಧರ್ವನಾಗಿದ್ದನು. ಆದ್ದರಿಂದ ಯುದ್ಧದಲ್ಲಿ ಶ್ರೀಕೃಷ್ಣದೇವನಿಂದ ಸೋತು ಹೋಗಿದ್ದರೂ ಶ್ರೀಕೃಷ್ಣದೇವನಲ್ಲಿ ಸ್ವಾಭಾವಿಕವಾದ ಭಕ್ತಿಯನ್ನೇ ಇಟ್ಟುಕೊಂಡಿದ್ದನು. ದ್ವೇಷವನ್ನಿಟ್ಟುಕೊಂಡಿದ್ದಿಲ್ಲ. ಕರವೀರ ಎಂಬ ಪಟ್ಟಣವು ಮಹಾಲಕ್ಷ್ಮೀದೇವಿಯ ವಿಶೇಷ ಸನ್ನಿಧಾನವುಳ್ಳ ಕೊಲ್ಲಾಪುರ ಎಂದು ಈಗ ಪ್ರಸಿದ್ಧವಾಗಿದೆ. ದಮಘೋಷನು ಈ ಕ್ಷೇತ್ರಕ್ಕೆ ಹೋಗೋಣವೆಂದು ಶ್ರೀಕೃಷ್ಣದೇವನನ್ನು ಪ್ರಾರ್ಥಿಸಿದನು.

# ಸೃಗಾಲವಾಸುದೇವನ ಸಂಹಾರ

ಅವನ ಪ್ರಾರ್ಥನೆಯಂತೆ ಶ್ರೀಕೃಷ್ಣದೇವನು ಬಲರಾಮನಿಂದ ಸಹಿತನಾಗಿ ಕೊಲ್ಲಾಪುರಕ್ಕೆ ಹೋದನು. ಆಗ ಈ ವಿಷಯವನ್ನು ತಿಳಿದ ಸೃಗಾಲವಾಸುದೇವನು ಶ್ರೀಕೃಷ್ಣದೇವನಲ್ಲಿ ತುಂಬಾ ದ್ವೇಷದಿಂದ ಯುಕ್ತನಾಗಿ

ಯುದ್ಧಕ್ಕಾಗಿ ಬಂದನು. ಸೃಗಾಲವಾಸುದೇವನು ಸೂರ್ಯದೇವನನ್ನು ಆರಾಧಿಸಿ ತನಗೆ ಯಾರಿಂದಲೂ ಮರಣವು ಏರ್ಪಡಕೂಡದೆಂಬ ವರವನ್ನು ಪಡೆದಿದ್ದನು. ಸೂರ್ಯದೇವನೂ ಸಹ ಅವನಿಗೆ ಅಚ್ಛೇದ್ಯಾಭೇದ್ಯವಾದ ಒಂದು ರಥವನ್ನು ಕೊಟ್ಟಿದ್ದನು. ಆ ರಥದಲ್ಲಿ ಕುಳಿತವನಾಗಿ ಶ್ರೀಕೃಷ್ಣದೇವನೊಡನೆ ಯುದ್ಧಕ್ಕಾಗಿ ಬಂದನು. ಶ್ರೀಕೃಷ್ಣದೇವನು ಅವನು ಪ್ರಯೋಗಿಸಿದ ಎಲ್ಲಾ ಅಸ್ತ್ರಗಳನ್ನೂ ನಾಶಮಾಡಿ ತನ್ನ ಸುದರ್ಶನಚಕ್ರದಿಂದ ಅವನ ದೇಹವನ್ನು ಎರಡು ಹೋಳಾಗುವಂತೆ ಶೀಳಿದನು.

## ಶಕ್ರದೇವನ ಪಟ್ಟಾಭಿಷೇಕ

ಸೃಗಾಲವಾಸುದೇವನಿಗೆ "ಮಣಿಭದ್ರ" ಎಂದು ಪ್ರಸಿದ್ಧನಾದ ಗಂಧರ್ವನು " ಶಕ್ರದೇವ" ಎಂಬ ಹೆಸರಿನಿಂದ ಮಗನಾಗಿ ಹುಟ್ಟಿದನು. ಅವನು ತುಂಬಾ ವಿಷ್ಣುಭಕ್ತನು. ಅವನಿಗೆ ಅವನ ತಂದೆಯ ರಾಜ್ಯದಲ್ಲಿ ಶ್ರೀಕೃಷ್ಣದೇವನು ಪಟ್ಟಾಭಿಷೇಕ ಮಾಡಿದನು. ಈ ಯುದ್ಧದಲ್ಲಿ ಅತಿ ಬಲಿಷ್ಠರಾದ ಮತ್ತು ಅಧಿಕ ಸಂಖ್ಯಾಕರಾದ ಶತ್ರುಗಳು ಜಗಳಕ್ಕೆ ಬಂದಿರುವಾಗ ತನ್ನ ಸೈನಿಕರಿಂದ ಯುಕ್ತನಾಗಿ ಜಗಳವನ್ನಾಡಿದರೆ ಸೈನಿಕರ ನಾಶವು ಏರ್ಪಡುವುದು ನಿಶ್ಚಯವೆಂದೂ ಸೈನಿಕರ ಕ್ಷೇಮಕ್ಕಾಗಿ ತಾನೊಬ್ಬನೇ ಬಹುದೂರದ ವರೆಗೆ ಹೋಗಿ ಯುದ್ಧವನ್ನು ಮಾಡಿ ಶತ್ರುಗಳನ್ನು ಸಂಹರಿಸಬೇಕೆಂದೂ ನೀತಿಯನ್ನು ತಿಳಿಸಿದನು. ಈ ಸಲ ಯುದ್ಧದಲ್ಲಿ ಪರಾಜಿತನಾದ ಜರಾಸಂಧನು ತನ್ನ ಮಾನವು ಹೋದದ್ದಕ್ಕಾಗಿ ತುಂಬಾ ಖಿನ್ನನಾಗಿ ತಪಸ್ಸನ್ನು ಮಾಡಿ ದೇಹವನ್ನು ತ್ಯಜಿಸುವುದಾಗಿ ತೀರ್ಮಾನಿಸಿದನು. ಈ ವಿಷಯವನ್ನು ತಿಳಿದ ಎಲ್ಲಾ ರಾಜರುಗಳೂ ಅವನನ್ನು ಊರಿಗೆ ಹಿಂದಿರುಗುವಂತೆಯೂ ಪುನಃ ಸ್ವಲ್ಪ ದಿನಗಳೊಳಗೆ ಜಗಳಕ್ಕಾಗಿ ಬಂದು ಜಯಿಸಬಹುದೆಂದೂ ಹೇಳಿ ಹಿಂದಿರುಗಿಸಿದರು.

## ಜರಾಸಂಧನಿಗೂ ಶ್ರೀಕೃಷ್ಣದೇವನಿಗೂ ಇನ್ನೊಮ್ಮೆ ಯುದ್ಧ

ಮೂರು ತಿಂಗಳೊಳಗೆ ಪುನಃ ಇಪತ್ತಮೂರು ಅಕ್ಷೌಹಿಣೀ ಸೈನ್ಯಗಳಿಂದ ಯುಕ್ತನಾಗಿ ಜರಾಸಂಧನು ಇನ್ನೊಮ್ಮೆ ಯುದ್ಧಕ್ಕಾಗಿ ಬಂದನು. ಯಮುನಾ ನದಿಯ ಇನ್ನೊಂದು ತೀರದಲ್ಲಿ ಸೈನ್ಯಗಳನ್ನೆಲ್ಲಾ ಇಳಿಸಿದನು. ಈ ವಿಷಯವನ್ನು ತಿಳಿದ ಶ್ರೀಕೃಷ್ಣದೇವನು ಮೂರು ಕಡೆಗಳಿಂದಲೂ ಏಕಕಾಲದಲ್ಲಿ ತನ್ನ ಸೈನ್ಯವನ್ನು ಮೂರು ವಿಧವಾಗಿ ವಿಂಗಡಿಸಿ ಯುದ್ಧವನ್ನು ಆರಂಭಿಸಬೇಕೆಂದೂ ಹಾಗೆ ಮಾಡಿದರೆ ಶತ್ರುಸೈನಿಕರು ಏಕಕಾಲದಲ್ಲಿ ಮೂರು ಕಡೆಯಲ್ಲಿ ಯುದ್ಧವನ್ನು ಮಾಡಲು ಸಾಧ್ಯವಾಗದೆ ಪರಾಜಿತರಾಗುವರೆಂದೂ ತೀರ್ಮಾನಿಸಿದನು. ಜರಾಸಂಧನ ಸೈನಿಕರೆಲ್ಲರೂ ಅಂದು ರಾತ್ರಿ ಹೆಂಡವನ್ನು ಕುಡಿದು ಮೈಯಲ್ಲಿ ಎಚ್ಚರವಿಲ್ಲದಂತೆ ಮಲಗಿದ್ದರು. ಮರುದಿನ ಸೂರ್ಯೋದಯ ಕಾಲದಲ್ಲಿಯೂ ಕೂಡ ಎಚ್ಚತ್ತುಕೊಳ್ಳದೆ ಮೈಮರೆತು ಮಲಗಿರುವ ಈ ಸೈನಿಕರು ಮೂರು ಕಡೆಯಿಂದಲೂ ಮೂರು ವಿಧವಾಗಿ ವಿಂಗಡಿಸಲ್ಪಟ್ಟ ಯಾದವ ಸೈನಿಕರು ಸುತ್ತಿಕೊಂಡವರಾಗಿ ಯುದ್ಧವನ್ನು ಆರಂಭಿಸಿದರು. ಸೂರ್ಯೋದಯವಾದ ಮೇಲೆ ಆರಂಭಿಸಿದ ಈ ಯುದ್ಧವು ಧರ್ಮಯುದ್ಧವೆನಿಸುತ್ತದೆ. ಶತ್ರುಸೈನಿಕರೆಲ್ಲರೂ ಅವಸರ ಅವಸರವಾಗಿ ಎದ್ದು ಯುದ್ಧವನ್ನು ಮಾಡಲು ಪ್ರಯತ್ನಿಸಿದರು. ಆದರೆ ಅವರಿಂದ ಸಾಧ್ಯವಾಗಲಿಲ್ಲ. ಸರ್ವರೂ ತಮ್ಮ ತಮ್ಮ ಆಯುಧಗಳನ್ನೂ ವಾಹನಗಳನ್ನೂ ಬಿಟ್ಟು ಓಡಿದರು. ಅವುಗಳೆಲ್ಲವನ್ನೂ ಶ್ರೀಕೃಷ್ಣದೇವನು ಮಥುರಾಪಟ್ಟಣಕ್ಕೆ ಸಾಗಿಸಿದನು. ಈ ರೀತಿ ಈ ಯುದ್ಧದಲ್ಲಿಯೂ ಜರಾಸಂಧನು ಪಲಾಯಿಸಿದನು.

# ಬಾಣಾಸುರನ ಸಹಾಯದಿಂದ ಜರಾಸಂಧನು ಇನ್ನೊಮ್ಮೆ ಯುದ್ಧಕ್ಕೆ ಬಂದು ಪರಾಜಿತನಾದನು

ಆ ಯುದ್ಧದಲ್ಲಿ ಎಲ್ಲಾ ಆಯುಧಗಳೂ ವಾಹನಗಳೂ ಶ್ರೀಕೃಷ್ಣದೇವನ ವಶವಾದ್ದರಿಂದ ಮುಂದ ಯುದ್ಧವನ್ನು ಮಾಡಲು ಉಪಾಯವಿಲ್ಲದೆ ಜರಾಸಂಧನು ತುಂಬಾ ಚಿಂತಾಕ್ರಾಂತನಾದನು. ಆಗ ಅವನ ಮಿತ್ರರೆಲ್ಲರೂ ಬಾಣಾಸುರನಲ್ಲಿಗೆ ಹೋಗಿ ಸಹಾಯವನ್ನು ಕೇಳುವಂತೆ ವಿಜ್ಞಾಪಿಸಿಕೊಂಡರು. ಅದಕ್ಕೆ ಅವನು ತುಂಬಾ ಮಾಸಿಷ್ಠನಾದ್ದರಿಂದ ಅಂಗೀಕರಿಸಲಿಲ್ಲ. ಆಗ ಅವನ ಮಿತ್ರರೆಲ್ಲರೂ ಬಾಣಾಸುರನು ಶಿವಭಕ್ತನೆಂದೂ ಶಿವಭಕ್ತರಾದ ಸರ್ವರಿಗೂ ಗುರುವಾಗಿರುವ ನಿನಗೂ ಶಿಷ್ಯನೆಂದೂ ಆದ್ದರಿಂದ ಶಿಷ್ಯನಾದ ಬಾಣಾಸುರನಿಂದ ಸಹಾಯವನ್ನು ಬೇಡುವುದು ತಪ್ಪಿಲ್ಲವೆಂದೂ ಪ್ರಾರ್ಥಿಸಿದರು. ಅವರ ಮಾತುಗಳನ್ನು ಕೇಳಿದ ಮೇಲೆ ಜರಾಸಂಧನು ಬರುವ ಸಮಾಚಾರವನ್ನು ತಿಳಿದು ತುಂಬಾ ಮರ್ಯಾದೆಯಿಂದ ಸ್ವಾಗತಿಸಿದನು. ಜರಾಸಂಧನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ತನ್ನ ಸರ್ವಸ್ವವನ್ನೂ ಅರ್ಪಿಸಿದನು. ಜರಾಸಂಧನ ಆಗಮನಕ್ಕೆ ಕಾರಣವನ್ನು ತಿಳಿದು ಅಸಂಖ್ಯವಾದ ರಥಗಳನ್ನೂ ಕುದುರೆಗಳನ್ನೂ ಆನೆಗಳನ್ನೂ ಶಸ್ತ್ರಗಳನ್ನೂ ಕೊಟ್ಟನು. ತನ್ನ ಮಂತ್ರಿಗಳಲ್ಲಿ ಕುಂಭಾಂಡ, ಕೂಪಕರ್ಣ ಎಂಬ ಎರಡು ಮಂತ್ರಿಗಳನ್ನೂ ಮುನ್ನೂರು ಪ್ರಧಾನರಾದ ರಾಕ್ಷಸರನ್ನೂ ಸಹಾಯಕ್ಕಾಗಿ ಕಳುಹಿಸಿದನು. ಅವರೆಲ್ಲರನ್ನೂ ಮುನ್ನೂರು ಪ್ರಧಾನರಾದ ರಾಕ್ಷಸರನ್ನೂ ಸಹಾಯಕ್ಕಾಗಿ ಕಳುಹಿಸಿದನು. ಅವರೆಲ್ಲರನ್ನೂ ಕರೆದುಕೊಂಡು ವಾಹನಗಳು ಮತ್ತು ಆಯುಧಗಳನ್ನು ಸ್ವೀಕರಿಸಿ ಜರಾಸಂಧನು ಇನ್ನೊಮ್ಮೆ ಯುದ್ಧಕ್ಕೆ ಬಂದನು. ರಾಕ್ಷಸರು ತನ್ನ ಜೊತೆಯಲ್ಲಿ ಸಹಾಯಕ್ಕಾಗಿ ಬಂದಿರುವುದರಿಂದ ಸ್ವಲ್ಪ ಹಿಗ್ಗಿದನು. ಸಕಲ ದೇವತೆಗಳೂ ಸಕಲ ದೈತ್ಯರೂ ಒಟ್ಟುಗೂಡಿದರೂ ಕೂಡ ಎಲ್ಲರನ್ನೂ ಇಚ್ಛಾಮಾತ್ರದಿಂದ ಸಂಹರಿಸುವ ಶಕ್ತಿಯಿಂದ ಯುಕ್ತನಾದ ಶ್ರೀಕೃಷ್ಣನಲ್ಲಿ ಕುಂಭಾಂಡ ಕೂಪಕರ್ಣ ಎಂಬ ಅತ್ಯಲ್ಪರಾದ ರಾಕ್ಷಸರೆಲ್ಲಿ ? ಜರಾಸಂಧನ ಮೂರ್ಖತನಕ್ಕೆ ಏನು ಹೇಳೋಣ ಯುದ್ಧವು ಆರಂಭವಾಯಿತು. ಶ್ರೀಕೃಷ್ಣದೇವನು ಸಾತ್ಯಕಿಯನ್ನು ಕುಂಭಾಂಡನ ಜೊತೆಯಲ್ಲಿಯೂ ಕೃತವರ್ಮನನ್ನೂ ಜೊತೆಯಲ್ಲಿ ಯುದ್ಧವನ್ನು ಮಾಡುವುದಕ್ಕೆ ಆಜ್ಞಾಪಿಸಿದನನು. ಸಾತ್ಯಕಿಯ ಪೆಟ್ಟನ್ನು ತಾಳಲಾರದೆ ಕುಂಭಾಂಡನು ಓಡಿಹೋದನು. ಕೂಪಕರ್ಣನು ಓಡಿಹೋದನು. ಕೂಪಕರ್ಣನು ಕುಂಭಾಂಡನು ಓಡಿಹೋದದ್ದನ್ನು ನೋಡಿ ತಾನೂ ಓಡಿಹೋದನು. ಉಳಿದ ರಾಕ್ಷಸರೆಲ್ಲರೂ ಯಾದವರ ಪೆಟ್ಟನ್ನು ತಾಳಲಾರದೆ ಓಡಿಹೋದರು. ಹೀಗೆ ಬಾಣಾಸುರನಿಂದ ಸಹಾಯಕ್ಕಾಗಿ ಬಂದಿರುವ ರಾಕ್ಷಸರೆಲ್ಲರೂ ಓಡಿಹೋದದ್ದನ್ನು ನೋಡಿ ಎಲ್ಲಾ ರಾಜರುಗಳೂ ಜರಾಸಂಧನೂ ಓಡಿ ಹೋದರು. ಹೀಗೆ ಹದಿನೇಳು ಸಲ ಇಪ್ಪತ್ತಮೂರು ಅಕ್ಷೌಹಿಣೀಸೇನೆಗಳ ಸಮೇತವಾಗಿ ಯುದ್ಧಕ್ಕೆ ಬಂದು ಜರಾಸಂಧನು ಓಡಿಹೋದನು.

# ರುಕ್ಮಿಣಿ ಸ್ವಯಂವರದ ಉದ್ಯೋಗ

ಕುಂಡಿನಪುರದ ಅಧಿಪತಿಯಾದ ಭೀಷ್ಮಕರಾಜನ ಕುಮಾರಿಯಾದ ಲಕ್ಷ್ಮೀದೇವಿಯ ಅವತಾರಭೂತಳಾದ ರುಕ್ಮಿಣಿಯನ್ನು ಶ್ರೀಕೃಷ್ಣದೇವನಿಗೆ ಕೊಟ್ಟು ವಿವಾಹ ಮಾಡುವುದಾಗಿ ಭೀಷ್ಮಕರಾಜನೇ ಮೊದಲಾದವರು ತೀರ್ಮಾನಿಸಿದರು. ಆಗ ರುಕ್ಮಿಣಿಯ ಅಣ್ಣನೂ ಶ್ರೀಕೃಷ್ಣದ್ವೇಷಿಯೂ ಆದ ರುಕ್ಮಿಯು ಈ ವಿವಾಹವನ್ನು ನಿಲ್ಲಿಸಿದನು. ರುಕ್ಮಿಣೀದೇವಿಗೆ ಸ್ವಯಂವರ ಅಂದರೆ ಅವಳಾಗಿಯೇ ವರನನ್ನು ಚುನಾಯಿಸುವಂತೆ ಏರ್ಪಾಡು ಮಾಡಿದನು ಈ

ವಿಷಯವನ್ನು ತಿಳಿದ ಜರಾಸಂಧ, ಸಾಲ್ವ, ಪೌಂಡ್ರಕವಾಸುದೇವ, ಶಿಶುಪಾಲ ಮುಂತಾದವರೆಲ್ಲರೂ ಕುಂಡಿನಪುರಕ್ಕೆ ಬಂದರು.

## ಗರುಡನ ಪ್ರಭಾವ

ಈ ವಿಷಯವನ್ನು ತಿಳಿದ ಶ್ರೀಕೃಷ್ಣದೇವನು ಗರುಡನನ್ನು ಸ್ಮರಿಸಿದನು. ಕೂಡಲೇ ಗರುಡನು ಮುಂದೆ ಬಂದು ನಿಂತನು. ಅವನ ಮೇಲೆ ಏರಿದವನಾಗಿ ಶ್ರೀಕೃಷ್ಣದೇವನು ಕುಂಡಿನಪುರಕ್ಕೆ ಬಂದನು. ಗರುಡನು ಬರುವಾಗ ಅವನ ರೆಕ್ಕೆಗಳ ಗಾಳಿಯಿಂದಲೇ ಆ ಪಟ್ಟಣದಲ್ಲಿ ಬಂದು ಸೇರಿರುವ ರಾಜರುಗಳೆಲ್ಲರೂ ಉರುಳಿ ಬಿದ್ದರು. ಇದನ್ನು ನೋಡಿದ ರಾಜರುಗಳೆಲ್ಲರೂ ಈ ಪಕ್ಷಿಯ ಶಕ್ತಿಯೇ ಇಷ್ಟಿರುವಾಗ ಅದರ ಮೇಲೆ ಸವಾರಿಮಾಡಿಕೊಂಡು ಬಂದಿರುವ ಕೃಷ್ಣನ ಬಲವು ಎಷ್ಟಿರಬೇಕು. ಇಂತಹ ಕೃಷ್ಣನು ಬಂದಿರುವಾಗ ನಮಗೆಲ್ಲರಿಗೂ ಸುಖವು ಹೇಗಾದೀತು ಎಂದು ಹೇಳಿದರು. ಆ ಮಾತನ್ನು ಕೇಳಿದ ಜರಾಸಂಧನು ಹೇಳಿದನು.

## ಜರಾಸಂಧನ ಹೇಳಿಕೆ

"ಕ್ಷೀರಸಾಗರದಲ್ಲಿ ವಾಸಿಸುತ್ತಿರುವ ನಾರಾಯಣನು ಗರುಡನ ಮೇಲೆ ಸವಾರಿ ಮಾಡುತ್ತಿರುವುದಾಗಿ ನಾವು ಕೇಳಿದ್ದೆವು. ಈ ಕೃಷ್ಣನೂ ಕೂಡ ಈಗ ಗರುಡನ ಮೇಲೆ ಸವಾರಿ ಮಾಡಿಕೊಂಡು ಬಂದಿರುವನು. ಆದ್ದರಿಂದ ಈ ಕೃಷ್ಣನೂ ಕೂಡ ನಾರಾಯಣನೇ ಆಗಿರುವುದಾಗಿ ನಾವು ತೀರ್ಮಾನಿಸಬಹುದು. ಅದು ಮಾತ್ರವಲ್ಲ. ನಾರಾಯಣನು ಯಾವಾಗಲೂ ಜಯಶೀಲನೆಂದೂ ನಾವು ಕೇಳಿರುವೆವು. ಇವನೊಬ್ಬನೇ ನಮ್ಮೆಲ್ಲರನ್ನೂ ಅನೇಕ ಸಲ ಜಯಿಸಿರುವನು. ನಾವೆಲ್ಲರೂ ಒಟ್ಟುಗೂಡಿದರೂ ಕೂಡ ಒಮ್ಮೆಯೂ ಇವನನ್ನು ಜಯಿಸುವುದಕ್ಕೆ ಶಕ್ತರಾಗಲಿಲ್ಲ. ಇವನು ಮಾತ್ರವಲ್ಲ. ಇವನ ಅಣ್ಣನಾದ ಬಲರಾಮನೂ ಕೂಡ ಹಿಂದೊಮ್ಮೆ ನನ್ನನ್ನು ಕೊಲ್ಲುವುದಕ್ಕಾಗಿ ಒನಕೆಯನ್ನು ಎತ್ತಿದನು. ಆಗ " ಇವನನ್ನು ಕೊಲ್ಲಬೇಡ" ಎಂದು ಅಶರೀರವಾಣಿಯಾಯಿತು. ಆ ಮಾತನ್ನು ಕೇಳಿ ಬಲರಾಮನು ನನ್ನನ್ನು ಬಿಟ್ಟನು. ಹೀಗಿರುವಾಗ ನಮ್ಮನ್ನೆಲ್ಲಾ ಹುಲ್ಲಿನ ಕಡ್ಡಿಗಿಂತಲೂ ಕಡಿಮೆಯಾಗುವಂತೆ ಮಾಡಿದ ಈ ಕೃಷ್ಣನ ಬಲವನ್ನು ಏನೆಂದು ಹೇಳಲಿ! ಅವನ ಮೈಯಲ್ಲಿ ಒಂದು ಗಾಯವನ್ನೂ ಕೂಡ ಮಾಡುವುದಕ್ಕೆ ಅಶಕ್ತರಾದ ನಾವೆಲ್ಲರೂ ಈಗ ತುಂಬಾ ಆಪತ್ತಿನಲ್ಲಿ ಸಿಕ್ಕಿಕೊಂಡಿರುವೆವು. ಅಯ್ಯೋ! ನಮಗೆ ಕ್ಷೇಮವಾಗುವುದಕ್ಕೆ ಮಾರ್ಗ ಯಾವುದು" ಎಂದು ಹೇಳಿ ಜರಾಸಂಧನು ತಲೆಯನ್ನು ತಗ್ಗಿಸಿಕೊಂಡನು.

## ಶಿಶುಪಾಲ, ದಂತವಕ್ತ್ರರ ಹೇಳಿಕೆ

ಆಗ ದಂತವಕ್ತ್ರ, ಶಿಶುಪಾಲ ಇವರಿಬ್ಬರೂ ಜರಾಸಂಧನನ್ನು ನೋಡಿ ಹೇಳಿದರು. ಕೆಲವು ಸಂದರ್ಭಗಳಲ್ಲಿ ನಮಗೆ ಶ್ರೀಕೃಷ್ಣನಲ್ಲಿ ಭಕ್ತಿಯು ಹೆಚ್ಚುತ್ತದೆ. ಕೆಲವು ಸಂದರ್ಭಗಳಲ್ಲಿ ಕೋಪಬರುತ್ತದೆ. ಇದಕ್ಕೆ ಕಾರಣವೇ ತಿಳಿಯುವುದಿಲ್ಲ. ಒಂದು ಮಾತ್ರ ಹೇಳಬಲ್ಲೆವು. ಈ ಕೃಷ್ಣನು ಸರ್ವೋತ್ತಮನಾಗಿರುವ ಶ್ರೀಹರಿಯೇ ಆಗಿರುವನು ಎಂಬುವುದರಲ್ಲಿ ಯಾವ ಸಂಶಯವಿಲ್ಲ. ನಮಗೆ ಕ್ಷೇಮವಾಗಬೇಕಾದರೆ ಅವನು ನಮ್ಮ ಶತ್ರು ಎಂಬ ಭಾವವನ್ನು ಮರೆತು ಅವನನ್ನು ಆಶ್ರಯಿಸೋಣ. ಇದರಿಂದಲೇ ನಮಗೆ ಕ್ಷೇಮವಾಗುತ್ತದೆ. ಇದನ್ನು ಬಿಟ್ಟರೆ ಬೇರೆ ಮಾರ್ಗದಿಂದ ಕ್ಷೇಮವಿಲ್ಲ. ಎಂದು ನಮಗೆ ತೋರುತ್ತದೆ ಎಂದು ಅವರಿಬ್ಬರೂ ಹೇಳಿದರು.

# ಸಾಲ್ವನ ಹೇಳಿಕೆ

ಈ ಮಾತನ್ನು ಕೇಳಿದ ಸಾಲ್ವನು ಕೋಪದಿಂದ ನಡುಗುತ್ತಿರುವ ಜರಾಸಂಧನನ್ನು ನೋಡಿ ಹೇಳಿದನು. " ಶ್ರೀಕೃಷ್ಣನು ನಾರಾಯಣನ ಅವತಾರ ಎಂದು ಹೇಳುವುದು ಸತ್ಯ. ಸುಳ್ಳಲ್ಲ. ನಾವೆಲ್ಲರೂ ದೊಡ್ಡ ದೈತ್ಯರು. ಶ್ರೀಕೃಷ್ಣದೇವನು ನಮ್ಮನ್ನು ಕೊಲ್ಲುವುದಕ್ಕಾಗಿಯೇ ಹುಟ್ಟಿರುವವನು. ನಾವೆಲ್ಲರೂ ಹರಿಗೆ ಅತ್ಯಂತ ವಿರುದ್ಧರಾಗಿರುವುದು ನಮ್ಮ ಧರ್ಮವೆನಿಸುತ್ತದೆ. ಸ್ವಧರ್ಮದಿಂದ ಸತ್ತರೂ ಕೂಡ ಸದ್ಗತಿಯಾಗುತ್ತದೆ. ಇದರಲ್ಲಿ ಸಂಶಯವಿಲ್ಲ. ನಮ್ಮೆಲ್ಲರಿಗೂ ರುದ್ರನು ಪರಮಗತಿ ಎನಿಸುವನು. ನೀವು ಗುರುವಾಗಿರುವಿರಿ. ನಾರಾಯಣನು ಶತ್ರುವಾಗಿರುವನು. ಕೃಷ್ಣನು ಸರ್ವೋತ್ತಮನಾಗಿದ್ದರೂ ಅವನನ್ನು ನಾವೆಲ್ಲರೂ ಎದುರಿಸಲೇಬೇಕು. ಸತ್ತರೂ ನಮಗೆ ಸದ್ಗತಿಯುಂಟು ಎಂದು ಹೇಳಿದನು. ಈ ಮಾತುಗಳನ್ನು ಕೇಳಿದ ಜರಾಸಂಧನು " ಭಲೇ ಭಲೇ " ಎಂದನು. ಅಲ್ಲಿ ಸೇರಿರುವ ರುಕ್ಮಿ ಮುಂತಾದ ಸರ್ವರಾಜರುಗಳೂ ಶಿಶುಪಾಲ ಮತ್ತು ದಂತವಕ್ತ್ರರೂ ಕೂಡ ಸಾಲ್ವನ ಅಭಿಪ್ರಾಯವನ್ನು ಅನುಮೋದಿಸಿದರು.

# ಶ್ರೀಕೃಷ್ಣನಿಗೆ ಆಸನವಿಲ್ಲ

" ಶ್ರೀಕೃಷ್ಣನು ಈ ಸ್ವಯಂವರ ಮಹೋತ್ಸವಕ್ಕೆ ಬಂದಿರುವನು. ಅವನನ್ನು ನೋಡಿದ ರುಕ್ಮಿಣಿಯು ಅವನನ್ನು ಬಿಟ್ಟು ಯಾರನ್ನೂ ವರಿಸಲಾರಳು. ಶ್ರೀಕೃಷ್ಣನು ಸ್ವಯಂವರಮಂಟಪಕ್ಕೆ ಬಾರದಂತೆ ಮಾಡಬೇಕು" ಎಂದು ಎಲ್ಲಾ ರಾಜರುಗಳೂ ತುಂಬಾ ಯೋಚಿಸಿದರು.

ಶ್ರೀಕೃಷ್ಣನು ಗೊಲ್ಲರ ಮಧ್ಯದಲ್ಲಿ ಒಬ್ಬ ಗೊಲ್ಲನಾಗಿ ವಾಸಿಸುತ್ತಿದ್ದನು. ಆದ್ದರಿಂದ ಆಗಲೂ ರಾಜನಾಗಿರಲಿಲ್ಲ. ಈಗ ಕಂಸನನ್ನು ಸಂಹರಿಸಿರುವನು. ಆದ್ದರಿಂದ ಕಂಸನ ರಾಜ್ಯದಲ್ಲಿ ರಾಜನಾಗಬಹುದಾಗಿತ್ತು. ಆದರೆ ಕಂಸನ ತಂದೆಯಾದ ಉಗ್ರಸೇನನಿಗೆ ಪಟ್ಟಾಭಿಷೇಕವನ್ನು ಮಾಡಿ ಬಿಟ್ಟು ಅವನ ದಾಸನಾಗಿರುವನು. ಆದ್ದರಿಂದ ಸ್ವಯಂವರಮಂಟಪದಲ್ಲಿ ರಾಜರಾಗಿರುವವರಿಗೆ ಮಾತ್ರ ಸಿಂಹಾಸನಗಳೆಂದೂ ರಾಜರಲ್ಲದವರಿಗೆ ಆಸನಗಳಿಲ್ಲವೆಂದೂ ಅವರಿಗೆ ಯಾವ ವಿಧವಾದ ಸತ್ಕಾರಗಳೂ ಇಲ್ಲವೆಂದೂ ಅವರು ನೆಲದಲ್ಲಿಯೇ ಕೂಡ ಬೇಕೆಂದೂ ಭೀಷ್ಮಕರಾಜನ ಮೂಲಕವಾಗಿ ಸ್ವಯಂವರಕ್ಕಿಂತ ಮುಂಚಿತವಾಗಿಯೇ ಪ್ರಕಟನೆಯನ್ನು ಮಾಡಿಸಿ ಬಿಡೋಣ. ಭೀಷ್ಮಕರಾಜನು ಇದಕ್ಕೆ ಒಪ್ಪದಿದ್ದರೆ ಅವನ ಮಗನಾದ ರುಕ್ಮಿಯು ನಮ್ಮ ಅಧೀನನಾಗಿರುವನು. ಅವನ ಮೂಲಕವಾಗಿ ಪ್ರಕಟನೆಯನ್ನು ಹೊರಡಿಸಿ ಬಿಡೋಣ. ಈ ಪ್ರಕಟನೆಯನ್ನು ತಿಳಿದ ಕೂಡಲೇ ದುರಹಂಕಾರಿಯಾದ ಶ್ರೀಕೃಷ್ಣನು ಸಿಂಹಾಸನದಲ್ಲಿ ಕುಳಿತಿರುವ ನಮ್ಮ ಮುಂದೆ ನೆಲದಲ್ಲಿ ಕುಳಿತುಕೊಳ್ಳಲು ನಾಚಿದವನಾಗಿ ಸ್ವಯಂವರಮಹೋತ್ಸವವು ನಡೆಯುವದಕ್ಕಿಂತ ಪೂರ್ವದಲ್ಲಿಯೇ ತನ್ನ ಊರಿಗೆ ಹೋಗಿ ಸೇರುವನು. ಇದರಿಂದ ರುಕ್ಮಿಣಿಯು ಕೃಷ್ಣನನ್ನು ನೋಡುವ ಸಂದರ್ಭವಿಲ್ಲದಂತಾಗುತ್ತದೆ" ಎಂದು ತೀರ್ಮಾನಿಸಿದರು.

ಈ ರಾಜರುಗಳ ದುರಾಲೋಚನೆಯನ್ನು ಭೀಷ್ಮಕರಾಜನ ತಮ್ಮಂದಿರಾದ ಕ್ರಥ ಮತ್ತು ಕೈಶಿಕ ಎಂಬುವರು ತಿಳಿದರು. ಅತಿ ವೇಗದಿಂದ ಶ್ರೀಕೃಷ್ಣದೇವನ ಸಮೀಪಕ್ಕೆ ಬಂದರು. ಭಕ್ತಿಯಿಂದ ನಮಸ್ಕರಿಸಿದರು. ತಮ್ಮ ಮನೆಗೆ ಕರೆದುಕೊಂಡು ಹೋದರು. ದಿವ್ಯವಾದ ಆಸನದಲ್ಲಿ ಕುಳ್ಳಿರಿಸಿದರು.

# ರಾಜರುಗಳಿಗೆ ದೇವೇಂದ್ರನ ಆಜ್ಞೆ

ರಾಜರ ತೀರ್ಮಾನದಂತೆ ಶ್ರೀಕೃಷ್ಣನಿಗೆ ಸತ್ಕಾರವಿಲ್ಲ ಎಂಬ ಅಂಶವು ಭೀಷ್ಮಕರಾಜನ ಸಹೋದರರಿಂದಲೇ ಸುಳ್ಳಾಗುವಂತಾಯಿತು. ಸ್ವಯಂವರಮಂಟಪದಲ್ಲಿ ಶ್ರೀಕೃಷ್ಣದೇವನಿಗೆ ಆಸನವಿಲ್ಲ ಎಂಬ ಅಂಶವನ್ನು ಸುಳ್ಳಾಗುವಂತೆ ಮಾಡುವುದಕ್ಕಾಗಿಯೂ ಎಲ್ಲಾ ರಾಜರುಗಳೂ ಶ್ರೀಕೃಷ್ಣದೇವನ ದಾಸಾನುದಾಸರ ಸ್ಥಾನದಲ್ಲಿ ಕುಳಿತುಕೊಳ್ಳುವಂತೆಯೂ ಮಾಡುವುದಕ್ಕಾಗಿ ದೇವೇಂದ್ರನು ಮುಂದೆ ಬಂದನು. ದೇವೇಂದ್ರನು ಎಲ್ಲಾ ರಾಜರುಗಳ ಮಧ್ಯದಲ್ಲಿ ತನ್ನ ಆಜ್ಞೆಯನ್ನು ತಿಳಿಸುವುದಕ್ಕಾಗಿ ಒಬ್ಬ ದೂತನನ್ನು ಕಳುಹಿಸಿದನು. ಆ ದೂತನು ಆಕಾಶದಲ್ಲಿ ನಿಂತವನಾಗಿ ದೇವೇಂದ್ರನ ಆಜ್ಞೆಯನ್ನು ತಿಳಿಸಿದನು.

" ಎಲೈ ರಾಜರುಗಳಿರಾ, ನಾನು ದೇವೇಂದ್ರನಿಗೆ ತುಂಬಾ ಪ್ರಿಯನಾಗಿರುವವನು. ಯಾವಾಗಲೂ ಅವನ ಮುಂದೆಯೇ ಓಡಾಡುತ್ತಿರುವವನು. ನೀವೆಲ್ಲರೂ ದೇವೇಂದ್ರನ ಅಧೀನರು. ನಿಮಗೆಲ್ಲರಿಗೂ ದೇವೇಂದ್ರನು ಆಜ್ಞಾಪಿಸುತ್ತಿರುವನು. ಅವನ ಆಜ್ಞೆಯನ್ನು ತಿಳಿಸುತ್ತಿರುವೆನು. ಶ್ರೀಕೃಷ್ಣದೇವನು ಎಲ್ಲಾ ರಾಜರುಗಳಿಗೂ ದೊರೆಯಾಗಿರುವನೆಂದೂ ಅವನನ್ನು ಬಿಟ್ಟು ಇನ್ನೊಬ್ಬನು ಯಾವನೂ ರಾಜರುಗಳಿಗೆ ದೊರೆಯಲ್ಲವೆಂದೂ ಹೇಳಿ ಶ್ರೀಕೃಷ್ಣದೇವನಿಗೆ ನೀವೆಲ್ಲರೂ ಪಟ್ಟಾಭಿಷೇಕವನ್ನು ಮಾಡಿ ಪಟ್ಟಕಾಣಿಕೆಗಳನ್ನು ಸಮರ್ಪಿಸಬೇಕಂತೆ. ಕೂಡಲೇ ಈ ಕಾರ್ಯವನ್ನು ಮಾಡಬೇಕಂತೆ. ಇದು ದೇವೇಂದ್ರನ ಕಟ್ಟಪ್ಪಣೆ. ಈ ಆಜ್ಞೆಯನ್ನು ಮೀರುವವರ ತಲೆಯ ಮೇಲೆ ವಜ್ರಾಯುಧವನ್ನು ಪ್ರಯೋಗಿಸುವನಂತೆ. ಆದರೆ ಈ ಅಭಿಷೇಕ ಸಮಾರಂಭದಲ್ಲಿ ಸಾಲ್ವ, ರುಕ್ಮಿ ಶಿಶುಪಾಲ ಮತ್ತು ಜರಾಸಂಧ ಎಂಬ ನಾಲ್ವರು ಮಾತ್ರ ಸೇರಬೇಕಾಗಿಲ್ಲವಂತೆ ನೀವೆಲ್ಲರೂ ನಿಮ್ಮೆಲ್ಲರ ಕ್ಷೇಮಕ್ಕಾಗಿ ದೇವೇಂದ್ರನ ಆಜ್ಞೆಯನ್ನು ಪಾಲಿಸಿರಿ" ಎಂದು ಹೇಳಿ ಹೋದನು.

# ರಾಜರುಗಳ ತೀರ್ಮಾನ

ಅವನ ಮಾತುಗಳೆಲ್ಲವನ್ನೂ ಎಲ್ಲಾ ರಾಜರುಗಳೂ ಕೇಳಿದರು. ತುಂಬಾ ಕೋಪದಿಂದ ಅನ್ಯೋನ್ಯವಾಗಿ ಮಾತಾಡಿಕೊಂಡರು. " ಈ ದೇವೇಂದ್ರನು ಹಿಂದೆ ನಮ್ಮಲ್ಲಿ ಒಬ್ಬೊಬ್ಬನನ್ನೂ ನೋಡಿ ಹೆದರುತ್ತಿದ್ದನು. ಈಗ ಶ್ರೀಕೃಷ್ಣನನ್ನು ಆಶ್ರಯಿಸಿ ನಮ್ಮೆಲ್ಲರನ್ನೂ ಹೆದರಿಸುತ್ತಿರುವನು. ನಮಗೆಲ್ಲರಿಗೂ ರುದ್ರಾದಿ ದೇವತೆಗಳ ವರಗಳುಂಟು. ಆ ವರಗಳಿಂದ ನಮ್ಮನ್ನು ಯಾರೂ ಕೊಲ್ಲಲು ಸಾಧ್ಯವಿಲ್ಲ."

" ಹಿಂದೆ ದನುಎಂಬ ಗಂಧರ್ವನು ಶಾಪದಿಂದ ಕಬಂಧ ಎಂಬ ರಾಕ್ಷಸನಾಗಿ ಹುಟ್ಟಿದನು. ಆ ಕಬಂಧನನ್ನು ವರಬಲದಿಂದ ಯಾರೂ ಕೊಲ್ಲಲು ಶಕ್ತರಾಗಿರಲಿಲ್ಲ. ಅವನ ತಲೆಯ ಮೇಲೆ ದೇವೇಂದ್ರನು ವಜ್ರಾಯುಧವನ್ನು ಪ್ರಯೋಗಿಸಿದನು. ಕಬಂಧನು ಸಾಯಲಿಲ್ಲ. ಆದರೆ ಅವನ ತಲೆಯು ಹೊಟ್ಟೆಯೊಳಗೆ ಹೋಯಿತು. ಬದುಕಿರುವ ವರೆಗೂ ಹಾಗೆಯೇ ಇದ್ದನು."

ನಮ್ಮೆಲ್ಲರಿಗೂ ವರಬಲದಿಂದ ಮರಣವಿಲ್ಲದಿದ್ದರೂ ಅದೃಶ್ಯನಾದ ದೇವೇಂದ್ರನು ನಮ್ಮ ಮೇಲೆ ವಜ್ರಾಯುಧವನ್ನು ಪ್ರಯೋಗಿಸಿ ನಮ್ಮ ಕೈಕಾಲುಗಳು ತುಂಡಾಗುವಂತೆಯೂ ನಮ್ಮ ತಲೆಯೂ ಕಬಂಧನ ತಲೆಯಂತೆ ಹೊಟ್ಟೆಯೊಳಗೆ ಹೋಗುವಂತೆಯೂ ಮಾಡಿ ನಮ್ಮ ಜನ್ಮವೇ ಹಾಳಾಗುವಂತೆ ಮಾಡಬಹುದು."

" ಅದು ಮಾತ್ರವಲ್ಲ. ನಾವೆಲ್ಲರೂ ಒಟ್ಟುಗೂಡಿ ದೇವೇಂದ್ರನ ಜೊತೆಯಲ್ಲಿ ಜಗಳಕ್ಕೆ ಹೋದರೆ ಕೆಳಗಿನಿಂದ ಕೃಷ್ಣನು ಜಗಳಕ್ಕೆ ಬರುವನು. ಆಗ ಏಕಕಾಲದಲ್ಲಿ ಕೃಷ್ಣನ ಮತ್ತು ದೇವೇಂದ್ರನ ಪೆಟ್ಟುಗಳನ್ನು ಅನುಭವಿಸಲು ನಮ್ಮಿಂದ ಸಾಧ್ಯವೇ? ಆದ್ದರಿಂದ ದೇವೇಂದ್ರನ ಮಾತಿನಂತೆ ಕೃಷ್ಣನಿಗೆ ಪಟ್ಟಾಭಿಷೇಕವನ್ನು ಮಾಡಿ ಪಟ್ಟಕಾಣಿಕೆಯನ್ನು ಸಮರ್ಪಿಸುವುದೇ ನಮಗೆ ಶ್ರೇಯಸ್ಕರ'' ಎಂದು ತೀರ್ಮಾನಿಸಿದರು.''

## ದೇವೇಂದ್ರನು ನಾಲ್ಕು ಜನರಿಗೆ ಆಜ್ಞಾಪಿಸದಿರಲು ಕಾರಣ

ಸಾಲ್ವ, ರುಕ್ಮಿ ಶಿಶುಪಾಲ, ಜರಾಸಂಧ ಎಂಬ ನಾಲ್ವರಿಗೂ ದೇವೇಂದ್ರನು ಆಜ್ಞಾಪಿಸಿದ್ದರೆ ಅವರೂ ಪಟ್ಟಾಭಿಷೇಕ ಸಮಾರಂಭಕ್ಕೆ ಎಲ್ಲಾ ರಾಜರುಗಳಂತೆ ಹೋಗುತ್ತಿದ್ದರು. ಅವರು ಹೋಗಿದ್ದರೆ ಎಲ್ಲಾ ರಾಜರುಗಳ ತೇಜೋಭಂಗವಾದಂತೆ ಆ ನಾಲ್ವರ ತೇಜಸ್ಸುಗಳೂ ಹೋಗುತ್ತಿದ್ದವು. ಅವರ ತೇಜಸ್ಸುಗಳು ಹೋಗಿದ್ದರೆ ಶ್ರೀಕೃಷ್ಣ ದ್ವೇಷಿಗಳು ಯಾರೂ ಅವರನ್ನು ಆಶ್ರಯಿಸುತ್ತಿದ್ದಿಲ್ಲ. ಬದುಕುವ ಆಸೆಯಿಂದ ಶ್ರೀಕೃಷ್ಣದೇವನನ್ನೇ ಶರಣುಹೊಂದುತ್ತಿದ್ದರು. ಶರಣಾಗತರಾದ ಶ್ರೀಕೃಷ್ಣ ದ್ವೇಷಿಗಳನ್ನು ಶರಣಾಗತರಕ್ಷಕನೆಂಬ ಬಿರುದಿನಿಂದ ಯುಕ್ತನಾಗಿರುವ ಶ್ರೀಕೃಷ್ಣದೇವನು ಸಂಹರಿಸಲು ಸಾಧ್ಯವಾಗುತ್ತಿದ್ದಿಲ್ಲ. ಅವರನ್ನು ಸಂಹರಿಸದಿದ್ದರೆ ಭೂಭಾರಪರಿಹಾರಕ್ಕಾಗಿ ಅವತರಿಸಿರುವ ಶ್ರೀಕೃಷ್ಣದೇವನ ಅವತಾರವು ವ್ಯರ್ಥವಾಗುತ್ತಿತ್ತು. ಇದನ್ನೆಲ್ಲವನ್ನೂ ಯೋಚಿಸಿದ ದೇವೇಂದ್ರನು ಸಾಲ್ವ ಮುಂತಾದ ನಾಲ್ವರಿಗೆ ಆಜ್ಞಾಪಿಸಲಿಲ್ಲ.

" ದೇವೇಂದ್ರನೂ ಸಹ ನಾಲ್ವರಿಗೆ ಹೆದರಿದನು ಎಂದು ತಿಳಿದು ಅಯೋಗ್ಯರೆಲ್ಲರೂ ಆ ನಾಲ್ವರನ್ನು ಆಶ್ರಯಿಸಿ ಶ್ರೀಕೃಷ್ಣದೇವನಿಗೆ ದ್ರೋಹವನ್ನು ಮಾಡಲಿ. ಶ್ರೀಕೃಷ್ಣದೇವನಿಂದ ಕೊಲ್ಲಲ್ಪಡಲಿ'' ಎಂಬ ದೀರ್ಘಾಲೋಚನೆಯಿಂದಲೇ ದೇವೇಂದ್ರನು ಆ ನಾಲ್ವರಿಗೆ ಆಜ್ಞಾಪಿಸಲಿಲ್ಲ.

## ಶ್ರೀಕೃಷ್ಣದೇವನಿಗೆ ಪಟ್ಟಾಭಿಷೇಕ

ದೇವೇಂದ್ರನ ಆಜ್ಞೆಯಂತೆ ಎಲ್ಲಾ ರಾಜರುಗಳೂ ಶ್ರೀಕೃಷ್ಣದೇವನಿಗೆ ರಾಜಾಧಿರಾಜಪದವಿಯಲ್ಲಿ ಪಟ್ಟಾಭಿಷೇಕವನ್ನು ಮಾಡುವುದಕ್ಕೆ ಉದ್ಯುಕ್ತರಾದರು. ಆಗ ದೇವೇಂದ್ರನು ಶ್ರೇಷ್ಠವಾದ ತನ್ನ ಆಸನವನ್ನು ಕಳುಹಿಸಿ ಕೊಟ್ಟನು. ಆಕಾಶ ಮಾರ್ಗದಿಂದ ಇಳಿದು ಬಂದ ಆ ಆಸನದಲ್ಲಿ ಶ್ರೀಕೃಷ್ಣದೇವನನ್ನು ಕುಳ್ಳಿರಿಸಿದರು. ಶ್ರೀಕೃಷ್ಣದೇವನು ತನ್ನ ಪಕ್ಕದಲ್ಲಿ ಗರುಡನನ್ನೂ ಭೀಷ್ಮಕರಾಜನ ತಮ್ಮಂದಿರಾಗಿರುವ ಕ್ರಥ, ಕೈಶಿಕ ಎಂಬುವರನ್ನೂ ಕುಳ್ಳಿರಿಸಿಕೊಂಡನು.

ಎಲ್ಲಾ ರಾಜರುಗಳೂ ಮುನಿಶ್ರೇಷ್ಠರಿಂದ ಸಹಿತರಾಗಿ ಭಂಗಾರದ ಕೊಡಗಳಿಂದ ಅಭಿಷೇಕವನ್ನು ಮಾಡಿದರು. ಆಗ ಬ್ರಹ್ಮರುದ್ರ ಮುಂತಾದ ಎಲ್ಲಾ ದೇವತೆಗಳೂ ಶ್ರೀಕೃಷ್ಣದೇವನನ್ನು ಹೊಗಳಿದರು. ಗಂಧರ್ವಶ್ರೇಷ್ಠರು ಹಾಡಿದರು. ಎಲ್ಲಾ ರಾಜರು ರಾಜಾಧಿರಾಜನಾದ ಶ್ರೀಕೃಷ್ಣದೇವನಿಗೆ ಪಟ್ಟಕಾಣಿಕೆಗಳನ್ನು ಸಮರ್ಪಿಸಿದರು.

ಕೊನೆಗೆ ಭೀಷ್ಮಕರಾಜನು ಪಟ್ಟಕಾಣಿಕೆಯನ್ನು ಸಮರ್ಪಿಸುವುದಕ್ಕಾಗಿ ಬಂದನು. ಶ್ರೀಕೃಷ್ಣದೇವನು ಅವನು ಕೊಟ್ಟ ಕಾಣಿಕೆಗಳನ್ನು ಸ್ವೀಕರಿಸಿದನು. ಅವನನ್ನು ನೋಡಿ ಕೆಲವು ಬುದ್ಧಿವಾದಗಳನ್ನು ಹೇಳಿದನು.

# ಭೀಷ್ಮಕರಾಜನಿಗೆ ಶ್ರೀಕೃಷ್ಣದೇವನ ಆಜ್ಞೆ

ಓ ಭೀಷ್ಮಕರಾಜನೇ, ನೀನು ರುಕ್ಮಿಣಿಗೆ ಸ್ವಯಂವರವನ್ನು ಮಾಡುವುದಾಗಿ ಸಂಕಲ್ಪಿಸಿರುವಿಯಲ್ಲವೇ? ಈ ಸ್ವಯಂವರದಲ್ಲಿ ರುಕ್ಮಿಣಿಯು ತನಗೆ ಇಷ್ಟನಾದ ವರನನ್ನು ತರಿಸಬಹುದಲ್ಲವೇ? ಇವಳು ಯಾರು? ಎಂಬ ವಿಷಯವನ್ನು ತಿಳಿದಮೇಲಾದರೂ ನೀನು ಮಾಡುವ ಕಾರ್ಯವು ತುಂಬಾ ಅಯುಕ್ತವೆಂದು ನಿನಗೆ ತಿಳಿಯದಿರಲಿಕ್ಕಿಲ್ಲ. ಆದಕ್ಕಾಗಿ ಇವಳ ನಿಜಸ್ವರೂಪವನ್ನು ನಿನಗೆ ತಿಳಿಸುವೆನು.

ಈ ರುಕ್ಮಿಣಿಯು ಮಹಾಲಕ್ಷ್ಮೀದೇವಿಯ ಅವತಾರವಾಗಿರುವಳು. ಮಹಾಲಕ್ಷ್ಮೀದೇವಿಯು ಅನಾದಿಕಾಲದಿಂದಲೂ ಶ್ರೀಹರಿಯ ಪತ್ನಿಯಾಗಿರುವಳು. ಅವಳನ್ನು ಇನ್ನೊಬ್ಬನಿಗೆ ಕೊಟ್ಟು ವಿವಾಹವನ್ನು ಮಾಡುವುದಾಗಿ ಸಂಕಲ್ಪಿಸುವವರೆಲ್ಲರೂ ಲಕ್ಷ್ಮೀದೇವಿಯ ಕಟಾಕ್ಷಕ್ಕೆ ಪಾತ್ರರಾಗದೇ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಎಲ್ಲಾ ವಿಧವಾದ ಸಂಪತ್ತುಗಳನ್ನೂ ಕಳೆದುಕೊಂಡು ನಿತ್ಯನರಕದಲ್ಲಿ ಹೋಗಿ ಬೀಳುವರು.

ಒಬ್ಬನ ಪತ್ನಿಯನ್ನು ಮಾರ್ಕೆಟ್‌ನಲ್ಲಿ ಏಲಂ ಹಾಕುವಷ್ಟು ಪಾಪಕಾರ್ಯವು ಯಾವುದಾದರೂ ಇದೆಯೇ? ಒಬ್ಬನ ಪತ್ನಿಗೆ ಸ್ವಯಂವರವೂ ಸಹ, ಶಾಸ್ತ್ರಕ್ರಮದಿಂದ ಒಬ್ಬನನ್ನು ವಿವಾಹಮಾಡಿಕೊಂಡವಳು ಅವನನ್ನು ಬಿಟ್ಟು ಬಿಟ್ಟು ತನಗೆ ಇಷ್ಟ ಬಂದವನನ್ನು ವಿವಾಹ ಮಾಡಕೊಳ್ಳುವುದಕ್ಕಾಗಿ ಮಾಡುವ ಏರ್ಪಾಡಾಗುವುದಿಲ್ಲವೇ? ಆದ್ದರಿಂದ ರುಕ್ಮಿಣೀಸ್ವಯಂವರ ಎಂಬ ಮಹಾಪಾಪಕಾರ್ಯವನ್ನು ಮಾಡಬೇಡ.

# ಸಮುದ್ರರಾಜನು ಜನಕಮಹಾರಾಜನೂ ಮಾಡಿರುವ ಸ್ವಯಂವರವು ದೋಷಕರವಲ್ಲ

ನೀನು ಒಂದು ಪ್ರಶ್ನೆವನ್ನು ಮಾಡಬಹುದು. ಸಮುದ್ರರಾಜನಿಗೆ ಮಹಾಲಕ್ಷ್ಮೀದೇವಿಯು ಮಗಳಾಗಿ ಅವತರಿಸಿದಳು. ಜನಕಮಹಾರಾಜನಿಗೆ ಮಹಾಲಕ್ಷ್ಮೀದೇವಿಯು ಸೀತಾ ಎಂಬ ಹೆಸರಿನಿಂದ ಮಗಳಾಗಿ ಅವತರಿಸಿದಳು. ಆ ಮಹಾಲಕ್ಷ್ಮಿಯೂ ಸೀತೆಯೂ ಶ್ರೀಹರಿಯ ಅನಾದಿ ಪತ್ನಿಯರಲ್ಲವೇ? ಶ್ರೀಹರಿಯ ಅನಾದಿ ಪತ್ನಿಯರಾಗಿರುವ ಮಹಾಲಕ್ಷ್ಮಿಗೂ ಸೀತೆಗೂ ಸ್ವಯಂವರವು ಏರ್ಪಟ್ಟಿರುವುದಾಗಿಯೂ ಶ್ರೀಹರಿಯನ್ನೇ ಅವರಿಬ್ಬರೂ ವರಿಸಿರುವುದಾಗಿಯೂ ಪ್ರಸಿದ್ಧವಾಗಿದೆ. ರುಕ್ಮಿಣೀಸ್ವಯಂವರ ದೋಷಕರವೆಂದು ಹೇಳುವುದಾದರೆ ಲಕ್ಷ್ಮೀಸ್ವಯಂವರ, ಸೀತಾಸ್ವಯಂವರ ಮುಂತಾದವುಗಳೂ ದೋಷಕರವಲ್ಲೆ? ಎಂಬುದೇ ನಿನ್ನ ಪ್ರಶ್ನೆ. ಅದಕ್ಕೆ ಈಗ ಉತ್ತರವನ್ನು ಕೊಡುವೆನು.

ವರುಣನೂ ಜನಕರಾಜನೂ ಕ್ಷತ್ರಿಯರು. ಕ್ಷತ್ರಿಯರು ತಮ್ಮ ಹೆಣ್ಣುಮಕ್ಕಳಿಗೆ ಸ್ವಯಂವರವನ್ನು ನಡೆಯಿಸಬಹುದು. ಅದು ಮಾತ್ರವಲ್ಲ. ಅವರಿಬ್ಬರೂ ತಮ್ಮ ಮಗಳು ಶ್ರೀಹರಿಯನ್ನು ಬಿಟ್ಟು ಇನ್ನೊಬ್ಬನನ್ನು ಖಂಡಿತವಾಗಿಯೂ ವರಿಸಲಾರಳು ಎಂಬ ನಂಬಿಕೆಯುಳ್ಳವರು. ಅ ನಂಬಿಕೆಯಿಂದಲೇ ಎಲ್ಲಾ ದೇವತೆಗಳನ್ನೂ ರಾಜರನ್ನೂ ಕರೆಯಿಸಿ ಅವರೆಲ್ಲರೂ ಲಕ್ಷ್ಮೀದೇವಿಯ ಮತ್ತು ಸೀತಾದೇವಿಯ ಪತಿಯಾಗುವುದಕ್ಕೆ ಅನರ್ಹರೆಂದು ತೀರ್ಮಾನಿಸುವುದಕ್ಕಾಗಿಯೇ ಆ ಸ್ವಯಂವರವನ್ನು ಏರ್ಪಡಿಸಿದರು.

ನೀನು ಹಾಗಲ್ಲ. ಶಿಶುಪಾಲನನ್ನು ಈ ರುಕ್ಮಿಣಿಯು ಒಪ್ಪದಿದ್ದರೂ ಅವಳಿಂದ ಬಲಾತ್ಕಾರದಿಂದ ಮಾಲೆಯನ್ನು ಹಾಕಿಸಿ ವಿವಾಹವನ್ನು ಮಾಡಿಸುವುದಕ್ಕಾಗಿಯೇ ಈ ಸ್ವಯಂವರ ವ್ಯವಸ್ಥೆಯನ್ನು ಮಾಡಿರುವಿ. ಆದ್ದರಿಂದ ಈ ಸ್ವಯಂವರವನ್ನು ನಿಲ್ಲಿಸು. ಅನಾದಿ ಕಾಲದಿಂದ ನನ್ನ ಪತ್ನಿಯಾಗಿರುವ ಈ ರುಕ್ಮಿಣಿಯನ್ನು ನನಗೆ ಕೊಟ್ಟು ವಿವಾಹಮಾಡು.

ನಾನು ಈ ರೀತಿಯಿಂದ ನಿನ್ನ ಮಗಳನ್ನು ಕೇಳುತ್ತಿರುವುದು ನಿನ್ನ ಶ್ರೇಯಸ್ಸಿಗಾಗಿಯೇ ಹೊರತು ನಿನ್ನ ಮಗಳ ಮೇಲಿನ ಆಸೆಯಿಂದಲ್ಲ . ನನ್ನ ನಿಜಸ್ವರೂಪವನ್ನು ನೋಡಿದರೆ ನಾನು ಹೇಳಿರುವ ಈ ಮಾತುಗಳಲ್ಲಿ ನಿನಗೆ ನಂಬಿಕೆಯು ಬರುತ್ತದೆ. ಅದಕ್ಕಾಗಿ ನನ್ನ ನಿಜಸ್ವರೂಪವನ್ನು ನಿನಗೆ ತೋರಿಸುವೆನು.

## ಭೀಷ್ಮಕರಾಜನಿಗೆ ಶ್ರೀಕೃಷ್ಣದೇವನ ವಿಶ್ವರೂಪದರ್ಶನ

ಶ್ರೀಕೃಷ್ಣದೇವನು ತನ್ನ ಭೀಷ್ಮರಾಜನಿಗೆ ವಿಶ್ವರೂಪವನ್ನು ತೋರಿಸಿದನು. ಈ ವಿಶ್ವರೂಪದಲ್ಲಿ ಮತ್ಸ್ಯ ಮುಂತಾದ ಅನಂತ ರೂಪಗಳು ಕಾಣಿಸುತ್ತಿವೆ. ಒಂದೊಂದು ರೂಪಗಳಲ್ಲಿಯೂ ವಿಚಿತ್ರವಾದ ಕಿರೀಟಗಳು. ಕರ್ಣಕುಂಡಲಗಳು, ಭುಜಕೀರ್ತಿಗಳು, ಹಾರಗಳು ಮುಂತಾದ ಆಭರಣಗಳು ಶೋಭಿಸುತ್ತಿವೆ, ಕಿರೀಟದಲ್ಲಿ ಕೌಸ್ತುಭಮಣಿಯು ಶೋಭಿಸುತ್ತಿದೆ. ಆ ಮಣಿಯಿಂದ ಶ್ರೀಕೃಷ್ಣದೇವನು ಶೋಭಿಸುತ್ತಿಲ್ಲ. ಶ್ರೀಕೃಷ್ಣದೇವನ ಕಂಠದಲ್ಲಿರುವುದರಿಂದ ಆ ಮಣಿಯು ಶೋಬಿಸುತ್ತಿದೆ.

ಶ್ರೀಕೃಷ್ಣದೇವನು ಭೀಷ್ಮರಾಜನನ್ನು ಕುರಿತು ಹೇಳಿದನು. "ನನ್ನನ್ನು ಸೇವಿಸುತ್ತಿರುವ ಸ್ತ್ರೀಯರನ್ನು ನೋಡು. ನಿನ್ನ ಮಗಳಲ್ಲಿರುವ ಸೌಂದರ್ಯಕ್ಕಿಂತ ಅನಂತಪಾಲು ಅಧಿಕವಾದ ಸೌಂದರ್ಯದಿಂದ ಯುಕ್ತರಾಗಿರುವ ಅನಂತಸ್ತ್ರೀಯರು ನನ್ನನ್ನು ಸೇವಿಸುತ್ತಿರುವರು. ಇಂತಹ ವೈಭವದಿಂದ ಯುಕ್ತನಾದ ನಾನು ನಿನ್ನ ಮಗಳ ಮೇಲೆ ನನಗಿರುವ ಮೋಹದಿಂದ ನಿನ್ನ ಮಗಳನ್ನು ನನಗೆ ಕೊಟ್ಟು ವಿವಾಹವನ್ನು ಮಾಡು ಎಂದು ಹೇಳುತ್ತಿಲ್ಲ." ಎಂದನು.

ರುಕ್ಮಿಣೀದೇವಿಯರೇ ಅನಂತರೂಪಗಳನ್ನು ಸ್ವೀಕರಿಸಿ ಶ್ರೀಕೃಷ್ಣದೇವನನ್ನು ಹಿಂದೆ ಹೇಳಿದಂತೆ ಸೇವಿಸುತ್ತಿರುವರು. ಆದ್ದರಿಂದ ಆ ಸ್ತ್ರೀಯರೂ ರುಕ್ಮಿಣೀದೇವಿಯರೂ ಒಂದೇ ವ್ಯಕ್ತಿಯಾಗಿರುವುದರಿಂದ ಆ ಸ್ತ್ರೀಯಲ್ಲಿದ್ದ ಸಕಲ ಸೌಂದರ್ಯವೂ ರುಕ್ಮಿಣೀದೇವಿಯರಲ್ಲಿಯೂ ಇದ್ದೇ ಇದೆ. ಆದರೂ ಮನುಷ್ಯರ ಮಧ್ಯದಲ್ಲಿ ವಾಸಿಸುತ್ತಿರುವುದರಿಂದ ಮನುಷ್ಯರಿಗೆ ಎಷ್ಟು ಸೌಂದರ್ಯವನ್ನು ನೋಡಲು ಸಾಧ್ಯವೋ ಅಷ್ಟೇ ಸೌಂದರ್ಯವನ್ನು ರುಕ್ಮಿಣೀದೇವಿಯರು ತೋರಿಸುತ್ತಿರುವರು.

ಭೀಷ್ಮಕರಾಜನಿಗೆ ವಿಶ್ವರೂಪವನ್ನು ತೋರಿಸುವಾಗ ರುಕ್ಮಿಣೀದೇವಿಯರಲ್ಲಿ ಸರ್ವರಿಗೂ ಕಾಣಿಸುತ್ತಿರುವ ಸೌಂದರ್ಯಕ್ಕಿಂತ ಅನಂತಪಾಲು ಅಧಿಕವಾದ ಸೌಂದರ್ಯದಿಂದ ಯುಕ್ತವಾಗಿರುವ ರುಕ್ಮಿಣೀದೇವಿಯರ ರೂಪಗಳನ್ನೇ ತೋರಿಸಿದನು.

## ಭೀಷ್ಮಕರಾಜನ ವಾಗ್ದಾನ

ಭೀಷ್ಮಕರಾಜನು ಶ್ರೀಕೃಷ್ಣದೇವನ ವಿಶ್ವರೂಪವನ್ನು ನೋಡಿ ತುಂಬಾ ಹೆದರಿದನು. ಶ್ರೀಕೃಷ್ಣದೇವನ ಕಾಲುಗಳಲ್ಲಿ ನಮಸ್ಕರಿಸಿದನು. ಪ್ರಭೋ, ನೀನು ಹೇಳಿದಂತೆಯೇ ನಡೆದುಕೊಳ್ಳುವೆನು. ವ್ಯತ್ಯಾಸವಾಗಿ ನಡೆದುಕೊಳ್ಳಲಾರೆನು. ಎಂದು ಪ್ರತಿಜ್ಞೆಯನ್ನು ಮಾಡಿದನು. ಶ್ರೀಕೃಷ್ಣದೇವನು ತನ್ನ ವಿಶ್ವರೂಪವು ಅದೃಶ್ಯವಾಗುವಂತೆ ಮಾಡಿಕೊಂಡನು. ಗರುಡಾರೂಢನಾಗಿ ಮಥುರಾಪಟ್ಟಣಕ್ಕೆ ಹಿಂದಿರುಗಿದನು.

ಹಿಂದೆ ಹೇಳಿದಂತೆ ಶ್ರೀಕೃಷ್ಣದೇವನು ವಿಶ್ವರೂಪವನ್ನು ತೋರಿಸಿ ಭೀಷ್ಮಕರಾಜನನ್ನು ವಶಪಡಿಸಿಕೊಂಡನು. ಅವನಿಗೆ ಬುದ್ಧಿವಾದವನ್ನು ಹೇಳಿ ಅವನ ಮನಸ್ಸು ಪುನಃ ಚಲನವಾಗದಂತೆ ಮಾಡಿದನು. ಸ್ವಪ್ರಯೋಜನವು ಯಾವುದೂ ಇಲ್ಲದೆ ಭೀಷ್ಮಕರಾಜನಿಗಾಗಿಯೇ ಮಹಾಪ್ರಯತ್ನವನ್ನು ಮಾಡಿರುವ ಶ್ರೀಕೃಷ್ಣದೇವನಷ್ಟು ಕೃಪಾಳು ಯಾರಿರುವನು?

## ಜರಾಸಂಧನನ್ನು ಶ್ರೀಕೃಷ್ಣದೇವನು ಯಾಕೆ ಕೊಲ್ಲಲಿಲ್ಲ?

ಜರಾಸಂಧನನ್ನು ಹದಿನೇಳು ಸಲದ ಯುದ್ಧಗಳಲ್ಲಿಯೂ ಓಡಿಸಿದ ಶ್ರೀಕೃಷ್ಣದೇವನು ಅವನನುನ ಕೋಲ್ಲಬಹುದಾಗಿತು. ಕೊಲ್ಲದಿರುವುದಕ್ಕೆ ಮುಖ್ಯವಾದ ಒಂದು ಕಾರಣವಿದೆ. ಅವನನ್ನು ಭೀಮಸೇನನೇ ಕೋಲ್ಲಬೇಕು. ಇಂತಹ ಮಹಾಬಲಿಷ್ಠನೂ ರುದ್ರದೇವನ ವರದಿಂದ ಅವಧ್ಯನೂ ಆಗಿರುವ ಜರಾಸಂಧನನುನ ಸಂಹರಿಸಿದ್ದರಿಂದ ಅಪಾರ ಕೀರ್ತಿಯು ಬರುತ್ತದೆ. ವಿಷ್ಣುದ್ವೇಷಿಗಳಲ್ಲಿ ಪ್ರಧಾನವಾದ ಇವನನ್ನು ಸಂಹರಿಸಿದ್ದರಿಂದ ಮಹಾಪುಣ್ಯವೂ ಬರುತ್ತದೆ. ಈ ಅಪಾರ ಕೀರ್ತಿಗೂ ಅಪಾರ ಪುಣ್ಯಕ್ಕೂ ಭೀಮಸೇನನೇ ಅರ್ಹನಾಗಿರುವನು. ಅವನಿಂದ ಜರಾಸಂಧನನ್ನು ಕೊಲ್ಲಿಸಬೇಕು. ಎಂಬ ಕಾರಣದಿಂದಲೇ ಶ್ರೀಕೃಷ್ಣದೇವನು ಕೊಲ್ಲಲಿಲ್ಲ.

## ಜರಾಸಂಧನ ಆಸೆ

ಆದರೇ ಜರಾಸಂಧನು ಬೇರೆ ವಿಧವಾಗಿ ತಿಳಿದುಕೊಂಡನು. ರುದ್ರದೇವನು ನನಗೆ ಅವಧ್ಯತ್ವವರವನ್ನು ಕೊಟ್ಟಿರುವನು. ಆ ರುದ್ರದೇವನು ಸರ್ವೋತ್ತಮನು. ಈ ಕೃಷ್ಣನು ರುದ್ರನಿಗಿಂತ ಅಧಮನು. ರುದ್ರದೇವನ ವರದಿಂದ ಅವಧ್ಯನಾದ ನನ್ನನ್ನು ಕೊಲ್ಲಲು ಈ ಕೃಷ್ಣನು ಶಕ್ತನಲ್ಲ. ಆದ್ದರಿಂದಲೇ ಎಷ್ಟೋ ಸಂದರ್ಭಗಳಲ್ಲಿ ನನ್ನನ್ನು ಜಯಿಸಿರುವನು. ಕೊಲ್ಲಲಿಲ್ಲ. ಕೊಲ್ಲುವುದಕ್ಕೆ ಅವನಿಂದ ಸಾಧ್ಯವೂ ಇಲ್ಲ.

ಆದರೆ ರುದ್ರದೇವನು ನನಗೆ "ಅಜೇಯತ್ವ" ಅಂದರೆ " ಯಾರಿಂದಲೂ ಜಯಿಸುವುದಕ್ಕೆ ಸಾಧ್ಯವಾಗದಿರುವಿಕೆ" ಎಂಬ ವರವನ್ನು ಕೊಟ್ಟಿರುವನು. ಕೃಷ್ಣನು ಅನೇಕ ಸಲ ನನ್ನನ್ನು ಜಯಿಸಿರುವನು. ಇದರಿಂದ ರುದ್ರದೇವನ ವರವು ಸುಳ್ಳಾಗಲಿಲ್ಲವೇ? ಎಂದು ಕೇಳಬಹುದು. ಅದಕ್ಕೆ ಈಗ ಉತ್ತರವನ್ನು ಕೊಡುವೆನು. ನನಗೂ ಕೃಷ್ಣನಿಗೂ ಯುದ್ಧವು ಇನ್ನೂ ಮುಗಿಯಲಿಲ್ಲ. ಯುದ್ಧದ ಮಧ್ಯದಲ್ಲಿ ಯಾರಿಗೆ ಜಯ? ಯಾರಿಗೆ ಪರಾಜಯ? ಎಂದು ತೀರ್ಮಾನಿಸುವಂತಿಲ್ಲ. ಕೊನೆಯ ಯುದ್ಧದಲ್ಲಿ ಜಯಿಸಿದವನೇ ಜಯಶಾಲಿ ಎಂದು ತೀರ್ಮಾನಿಸಬೇಕು. ಆಗಲೂ ನಾನು ಜಯಿಸದಿದ್ದರೋ. ರುದ್ರದೇವನ ವರವು ಸುಳ್ಳೆಂದು ತೀರ್ಮಾನಿಸಬಹುದು. ಕೊನೆಯ ಯುದ್ಧದಲ್ಲಿ

ನಾನೇ ಜಯಿಸುವೆನು. ಕೃಷ್ಣನೇ ಸೋಲುವನು. ಅವನನ್ನು ನಾನೇ ಕೊಲ್ಲುವೆನು. ರುದ್ರದೇವನ ವರವು ಎಂದೆಂದಿಗೂ ಸುಳ್ಳಾಗುವುದಿಲ್ಲ ಎಂದು ತೀರ್ಮಾನಿಸಿದನು. ರುದ್ರದೇವನ ವರದಿಂದ ಅಜೇಯನಾದ ತನ್ನನ್ನು ಕೃಷ್ಣನು ಸೋಲಿಸಿದ್ದಕ್ಕಾಗಿ ರುದ್ರದೇವನ ವರವು ಸುಳ್ಳಾಯಿತೆಂದು ತಿಳಿದುಕೊಳ್ಳುವ ಸ್ವಭಾವವು ಜರಾಸಂಧನಲ್ಲಿಲ್ಲ. ಸೋತು ಹೋದರೂ ಅಜೇಯತ್ವ ವರವನ್ನು ಕೊಟ್ಟಿರತಕ್ಕ ರುದ್ರದೇವನನ್ನು ಹೊಗಳುವುದೇ ಜರಾಸಂಧ ಸ್ವಭಾವವಾಗಿತ್ತು. ಆದ್ದರಿಂದಲೇ ಒಂದೊಂದು ಯುದ್ದದಲ್ಲಿಯೂ ಸೋಲುತ್ತಿದ್ದರೂ " ಈ ಯುದ್ಧವೂ ಕೊನೆಯ ಯುದ್ಧವಲ್ಲ. ಕೊನೆಯ ಯುದ್ಧದಲ್ಲಿ ಖಂಡಿತವಾಗಿಯೂ ನಾನೇ ಜಯಿಸುವೆನು''. ಎಂಬ ಬಲವತ್ತರವಾದ ಆಸೆಯಿಂದ ಯುದ್ದಕ್ಕಾಗಿ ಪುನಃ ಪುನಃ ಪ್ರಯತ್ನಿಸುತ್ತಿದ್ದನು. ರುದ್ರದೇವನಿಗೆ ಅಪಮಾನಕರವಾದ ಮಾತಗಳನ್ನು ಎಂದೆಂದಿಗೂ ಆಡಿದವನಲ್ಲ.

## ಜರಾಸಂಧನ ಆವೇಶ

ಜರಾಸಂಧನು ಸಕಲ ರಾಜರುಗಳನ್ನೂ ನೋಡಿ ಹೇಳಲು ಆರಂಭಿಸಿದನು. " (೧) ಈ ಕೃಷ್ಣನು ನಮ್ಮನ್ನೆಲ್ಲರನ್ನೂ ಒಂದೊಂದು ಯುದ್ಧದಲ್ಲಿಲಯೂ ಜಯಿಸುತ್ತಾ ಬಂದಿರುವನು. ಇವನನ್ನು ಜಯಿಸಲು ನಮ್ಮಿಂದ ಯಾರಿಂದಲೂ ಯಾವ ಯುದ್ಧದಲ್ಲಿಯೂ ಸಾಧ್ಯವಾಗಲಿಲ್ಲ. ನಮ್ಮ ಪೌರುಷಕ್ಕೆ ಧಿಕ್ಕಾರವಿರಲಿ. (೨) ಕೃಷ್ಣನು ಇಲ್ಲಿಗೆ ಬಂದಾಗ ಅವನು ರಾಜನಲ್ಲವೆಂದೂ ಆದ್ದರಿಂದಲೇ ಅವನಿಗೆ ಸ್ವಯಂವರಮಂಟಪದಲ್ಲಿ ಆಸನವನ್ನು ಕೊಡಕೂಡದೆಂದೂ ಅರ್ಘ್ಯ ಮುಂತಾದ ಸ್ವಾಗತ ಮರ್ಯಾದೆಗಳನ್ನು ಮಾಡಕೂಡದೆಂದೂ ತೀರ್ಮಾನಿಸಿದೆವು. ಆ ನಮ್ಮ ತೀರ್ಮಾನವು ಬೇರೆ ವಿಧವಾಗಿ ಪರಿಣಮಿಸಿತು. ಎಲ್ಲಾ ರಾಜರುಗಳೂ ತಮಗೆ ಇಷ್ಟವಿಲ್ಲದಿದ್ದರೂ ದೇವೇಂದ್ರನ ಪೀಠದಲ್ಲಿ ಕುಳ್ಳಿರಿಸಿ ಎಲ್ಲಾ ರಾಜರುಗಳಿಗೂ ರಾಜನೆಂದು ಹೇಳುತ್ತಾ ಪಟ್ಟಾಭಿಷೇಕವನ್ನು ಮಾಡುವಂತಾಯಿತು. (೩) ಅದು ಮಾತ್ರವಲ್ಲ. ರುಕ್ಮಿಣಿಯನ್ನು ಕೃಷ್ಣನಿಗೆ ಕೊಟ್ಟು ವಿವಾಹವನ್ನು ಮಾಡುವುದಾಗಿ ಭೀಷ್ಮಕಮಹಾರಾಜನು ವಾಗ್ದಾನವನ್ನೂ ಮಾಡಿದ್ದಾಯಿತು. ಅಯ್ಯೋ, ಅನ್ಯಾಯಪರಂಪರೆಗೆ ಏನು ಮಾಡೋಣ?

ನಮಗೆ ಮೂರು ಕಾರ್ಯಗಳು ಮುಖ್ಯವಾಗಿ ನಡೆಯಬೇಕಾಗಿವೆ. (೧) ಕೃಷ್ಣನನ್ನು ನಾವು ಜಯಿಸಬೇಕು. (೨) ರುಕ್ಮಿಣಿಯನ್ನು ಕೃಷ್ಣನು ವಿವಾಹ ಮಾಡಿಕೊಳ್ಳಕೂಡದು. (೩) ಈ ಶಿಶುಪಾಲನು ದಮಘೋಷನ ಮಗನಾಗಿರುವನು. ಆದರೆ ದಮಘೋಷನು ಇವನನ್ನು ನನ್ನ ವಶದಲ್ಲಿ ಕೊಟ್ಟಿರುವನು. " ಇವನನ್ನು ನಿನ್ನ ಮಗನಂತೆ ಪಾಲಿಸು. ಇವನಿಗೆ ಮದುವೆಯನ್ನೂ ಮಾಡಿಸು'' ಎಂದು ಹೇಳಿರುವನು. ಆದ್ದರಿಂದ ಈ ಶಿಶುಪಾಲನು ನನ್ನ ದತ್ತಕಪುತ್ರನಂತಿರುವನು. ನನ್ನ ಪತ್ನಿಯ ಹೊಟ್ಟೆಯಲ್ಲಿ ಹುಟ್ಟಿರುವ ಸಹದೇವನಿಗಿಂತಲೂ ಇವನಲ್ಲಿ ಹೆಚ್ಚಿನ ಪ್ರೀತಿಯು ನನಗೆ ಇರುತ್ತದೆ.

ರುಕ್ಮಿಣಿಯು ಪರಮ ಸುಂದರಿಯಾಗಿರುವಳು. ಆ ರುಕ್ಮಿಣಿಯು ನನ್ನ ದತ್ತಕಪುತ್ರನಾಗಿರುವ ಶಿಶುಪಾಲನನ್ನೇ ವಿವಾಹ ಮಾಡಿಕೊಳ್ಳಬೇಕು. ಶಿವನೇ ಸರ್ವೋತ್ತಮನೆಂದು ಸಮರ್ಥಿಸುವ ಶೈವಾಗಮಗಳಲ್ಲಿ ರುಕ್ಮಿ ಸಾಲ್ವ, ಪೌಂಡ್ರಕ ವಾಸುದೇವ ಮುಂತಾದ ನೀವೆಲ್ಲರೂ ನನ್ನ ಶಿಷ್ಯರಾಗಿರುವಿರಿ. ನೀವೆಲ್ಲರೂ ನನ್ನ ಆಸೆಯನ್ನು ಪೂರ್ತಿ ಮಾಡಬೇಕು. ಎಂದು ಹೇಳಿದನು.

# ಸಾಲ್ವನ ಪ್ರತ್ಯುತ್ತರ

ಶ್ರೀಕೃಷ್ಣನು ರುಕ್ಮಿಣಿಸ್ವಯಂವರವನ್ನು ನಿಲ್ಲಿಸಿದನು. ಆಗಲಿ. ರುಕ್ಮಿಯು ರುಕ್ಮಿಣಿಯ ಅಣ್ಣನಾಗಿರುವನು. ತಂದೆಯಾದ ಭೀಷ್ಮಕರಾಜನು ಮುದುಕನಾಗಿಬಿಟ್ಟನು. ಬಲಿಷ್ಠನೂ ಅಲ್ಲ ಹೀಗಿರುವಾಗ ತನ್ನ ಮಗನೇ ಶಿಶುಪಾಲನಿಗೆ ರುಕ್ಮಿಣಿಯನ್ನು ಕೊಟ್ಟು ವಿವಾಹವನ್ನು ಮಾಡುವುದಾಗಿ ತೀರ್ಮಾನವನ್ನು ಮಾಡಿದ ಮೇಲೆ ಮಗನ ಇಷ್ಟವನ್ನು ತಂದೆಯು ತಡೆಯಲಾರನು. ತಡೆಯಬೇಕೆಂದು ಸಂಕಲ್ಪಿಸಿದರೂ ದುರ್ಬಲನಾದ ಅವನಿಂದ ಸಾಧ್ಯವೂ ಆಗಲಾರದು. ಆದ್ದರಿಂದ ರುಕ್ಮಿಯ ಅಭಿಪ್ರಾಯವನ್ನು ತಿಳಿದ ಭೀಷ್ಮಕರಾಜನೇ ಶಿಶುಪಾಲನಿಗೆ ಕನ್ಯಾದಾನವನ್ನು ಮಾಡಲಿ. ಭೀಷ್ಮಕರಾಜನು ಇಷ್ಟಪಡದಿದ್ದರೆ ಅವನನ್ನು ತಿರಸ್ಕರಿಸಿ ರುಕ್ಮಿಯೇ ಕನ್ಯಾದಾನವನ್ನು ಮಾಡಲಿ.

ಆದರೆ ಇಲ್ಲಿಯೂ ಒಂದು ಆಪತ್ತು ಇದೆ. ಕೃಷ್ಣನೇ ಬರಬಹುದು. ನಮ್ಮನ್ನೆಲ್ಲರನ್ನೂ ಜಯಿಸಿ ರುಕ್ಮಿಣಿಯನ್ನು ಅಪಹರಿಸಿಕೊಂಡು ಹೋಗಬಹುದು. ಹಾಗಾಗಿಬಿಟ್ಟರೆ ನಮ್ಮ ಸಂಕಲ್ಪದಂತೆ ಶಿಶುಪಾಲನಿಗೆ ಕನ್ಯಾದಾನವನ್ನು ಮಾಡುವುದಕ್ಕೆ ಸಾಧ್ಯವಾಗುತ್ತದೆಯೇ? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಈಗ ಸುಲಭವಾದ ಉಪಾಯವನ್ನು ಹೇಳುತ್ತೇನೆ. ಕೃಷ್ಣನನ್ನು ಮೊದಲು ಕೊಂದುಬಿಟ್ಟು ಆಮೇಲೆ ಶಿಶುಪಾಲನಿಗೆ ರುಕ್ಮಿಣಿಯನ್ನು ಕೊಟ್ಟು ವಿವಾಹ ಮಾಡಿಬಿಡೋಣ. ಇಲ್ಲಿಯೂ ಕೃಷ್ಣನನ್ನು ಕೊಲ್ಲುವುದು ಯಾರು? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೂ ಸುಲಭವಾದ ಉಪಾಯವನ್ನು ಹೇಳುವೆನು.

# ಕಾಲಯವನನ ಜನ್ಮ ವೃತ್ತಾಂತ

ಗರ್ಗಾಚಾರ್ಯರು ಸಕಲ ಯಾದವರಿಗೂ ಗುರುವಾಗಿರುವರು. ಅವರೇ ಕೃಷ್ಣನು ಸಾಯುವುದಕ್ಕೆ ಬೇಕಾದ ವ್ಯವಸ್ಥೆಯನ್ನು ಮಾಡಿರುವರು. ಅದು ನಮಗೆಲ್ಲರಿಗೂ ಮಂಗಲಕರವಾದ ಸಮಾಚಾರವಾಗಿದೆ. ಆ ವಿಷಯವನ್ನು ಸ್ವಲ್ಪ ವಿವರವಾಗಿ ಹೇಳುವೆನು. ಗರ್ಗಾಚಾರ್ಯರು ವಿವಾಹವನ್ನು ಮಾಡಿಕೊಂಡಮೇಲೆಯೂ ನೈಷ್ಠಿಕಬ್ರಹ್ಮಚರ್ಯ ವ್ರತವನ್ನು ಪಾಲಿಸುತ್ತಾ ಪತ್ನಿಯ ಸಂಗವನ್ನು ಮಾಡಲಿಲ್ಲ. ಆಗ ಅವರ ಭಾವಮೈದುನನು ಅವರನ್ನು ನಪುಂಸಕನೆಂದು ದೂಷಿಸುತ್ತಾ ಬಂದನು. ಒಮ್ಮೆ ಯಾದವರ ಸಭೆಯಲ್ಲಿ ಕೃಷ್ಣನ ಮುಂದೆ ನಪುಂಸಕ ಎಂದು ಕರೆದನು. ಆಗ ಕೃಷ್ಣನಿಂದ ಪ್ರೇರೇಪಿಸಲ್ಪಟ್ಟ ಸಕಲ ಯಾದವರೂ ಕೃಷ್ಣನೂ ಗಟ್ಟಿಯಾಗಿ ನಕ್ಕರು. ಅದನ್ನು ನೋಡಿದ ಗರ್ಗಾಚಾರ್ಯರಿಗೆ ತುಂಬಾ ಕೋಪವು ಬಂತು.

" ನಾನು ನಪುಂಸಕನೆಂದು ಹೇಳಿದ್ದನ್ನು ಕೇಳಿ ನೀವೆಲ್ಲರೂ ನಕ್ಕಿರುವಿರಿ. ನಾನು ನಪುಂಸಕನಲ್ಲವೆಂದು ತಿಳಿಸುವುದಕ್ಕಾಗಿ ಒಬ್ಬ ಮಗನನ್ನು ಪಡೆಯುವೆನು. ಆ ಮಗನು ಗಟ್ಟಿಯಾಗಿ ನಕ್ಕಿರುವ ಕೃಷ್ಣನನ್ನೂ ಯಾದವರನ್ನೂ ಸಂಹರಿಸುವನು" ಎಂದು ಪ್ರತಿಜ್ಞೆ ಮಾಡಿದರು. ಕಾಡಿಗೆ ಹೋದರು. ರುದ್ರದೇವನ ಪ್ರೀತ್ಯರ್ಥವಾಗಿ ಒಂದು ವರ್ಷದ ವರೆಗೆ ಉಕ್ಕಿನ ಪುಡಿಯನ್ನು ತಿನ್ನುತ್ತಾ ತಪಸ್ಸನ್ನು ಮಾಡಿದರು. ರುದ್ರದೇವನಿಂದ ಕೃಷ್ಣನನ್ನೂ ಸಕಲಯಾದವರನ್ನೂ ಸಂಹರಿಸುವ ಮಗನನ್ನು ವರವಾಗಿ ಪಡೆದರು."

ಗರ್ಗಾಚಾರ್ಯರು ವಿಷ್ಣುವೇ ಸರ್ವೋತ್ತಮನೆಂದು ನಂಬಿದವರು. ಅಂತಹ ಗರ್ಗಾಚಾಯರಿಗೆ ವಿಷ್ಣುವಿನ

ಅವತಾರವಾಗಿರುವ ಕೃಷ್ಣನನ್ನು ಕೊಲ್ಲಬೇಕೆಂಬ ಬುದ್ಧಿಯು ನಮ್ಮ ಗುಂಪಿನಲ್ಲಿ ಸೇರಿರುವ ಭಯಂಕರದೈತ್ಯರ ಆವೇಶದಿಂದ ಏರ್ಪಟ್ಟಿತು. ನಮ್ಮ ಗುಂಪಿನಲ್ಲಿ ಸೇರಿರುವ ದೈತ್ಯರ ಶಕ್ತಿಯನ್ನು ಎಷ್ಟೆಂದು ವರ್ಣಿಸಲಿ?

ಗರ್ಗಾಚಾರ್ಯರು ಈ ವರವನ್ನು ಪಡೆದಿರುವ ವಿಚಾರವನ್ನು ದೈತ್ಯಜಾತಿಯಲ್ಲಿ ಸೇರಿರುವ ಒಬ್ಬ ಅಪ್ಸರಃ ಸ್ತ್ರೀಯು ತಿಳಿದಳು. ಕೃಷ್ಣನನ್ನು ಕೊಲ್ಲುವ ಮಗನು ತುಂಬಾ ಬಲಿಷ್ಠನಾಗಿರಬೇಕು. ಅಂತಹ ಮಹಾಬಲಿಷ್ಠನಾದ ಮಗನನ್ನು ಇವರಿಂದ ಪಡೆಯಬೇಕು. ಎಂಬ ಆಸೆಯುಳ್ಳವಳಾಗಿ ಆ ಅಪ್ಸರಃ ಸ್ತ್ರೀಯು ಸಮಯವನ್ನು ಕಾಯುತ್ತಿದ್ದಳು.

ಆಗ ಯವನದೇಶದ ರಾಜನಿಗೆ ಮಕ್ಕಳಿರಲಿಲ್ಲ. ಈ ವರವನ್ನು ತಿಳಿದ ಯವನದೇಶದ ರಾಜನು ಗರ್ಗಾಚಾರ್ಯರನ್ನು ವಶಪಡಿಸಿಕೊಳ್ಳುವುದಕ್ಕಾಗಿ ಕೆಲವು ಗೊಲ್ಲಸ್ತ್ರೀಯರನ್ನು ಕರೆದುಕೊಂಡು ಹೋದನು. ಈ ಅಪ್ಸರಃ ಸ್ತ್ರೀಯೂ ಆ ಗೊಲ್ಲಸ್ತ್ರೀಯರ ಮಧ್ಯದಲ್ಲಿ ಅವರಂತೆ ವೇಷವನ್ನು ಧರಿಸಿ ಸೇರಿಕೊಂಡಳು. ಅವಳು ಗರ್ಗಾಚಾರ್ಯರನ್ನು ವಶಪಡಿಸಿಕೊಂಡಳು. ಅವಳಲ್ಲಿ ಒಬ್ಬ ಮಗನು ಹುಟ್ಟಿದನು.

ಕೃಷ್ಣನು ರುದ್ರದೇವನ ವೈರಿಯಾಗಿರುವನು. ಆದ್ದರಿಂದಲೇ ಅವನ ಪುರೋಹಿತನೇ ಅವನಿಗೆ ಸಂಹಾರಕನಾಗುವ ಮಗನು ಹುಟ್ಟಬೇಕೆಂದು ವರವನ್ನು ಬೇಡಿದನು. ರುದ್ರದ್ವೇಷಿಗಳಿಗೆ ಸ್ವಜನರೂ ವಿರೋಧಿಗಳಾಗುವರು ಎಂಬ ವಿಷಯದಲ್ಲಿ ಕೃಷ್ಣನನ್ನೇ ಉದಾಹರಣೆಯಾಗಿ ತಿಳಿಯಬೇಕು.

ನೈಷ್ಠಿಕಬ್ರಹಚರ್ಯವನ್ನು ಕಾಪಾಡುವುದಕ್ಕಾಗಿ ಪತ್ನಿಯ ಸಂಗವನ್ನೂ ಮಾಡದಿರುವ ಗರ್ಗಾಚಾರ್ಯರು ಗೋಪಾಲೀ ಎಂಬ ದೈತ್ಯಾಪ್ಸರಃ ಸ್ತ್ರೀಯ ಸಂಗದಿಂದ ನೈಷ್ಠಿಕಬ್ರಹ್ಮಚರ್ಯವನ್ನು ಕಳೆದುಕೊಂಡರು. ಇಷ್ಟರ ವರೆಗೆ ಮಾಡಿದ್ದು ಸರಿ.

ಮುಂದೆ ಅವರು  ಮಾಡಿರುವ ಅವಿವೇಕವನ್ನು ತಿಳಿಸುವೆನು. ಕೃಷ್ಣನಿಗೆ ದ್ರೋಹವನ್ನು ಮಾಡಿದ್ದಕ್ಕಾಗಿ ಪಶ್ಚಾತ್ತಾಪವನ್ನು ಹೊಂದಿದರು. ರುದ್ರದೇವನನ್ನು ಕುರಿತು ತಪಸ್ಸು ಮಾಡಿದ್ದು ಮಹಾಪಾಪವೆಂದು ಹೇಳುತ್ತಾ "ನನ್ನನ್ನು ರಕ್ಷಿಸು" ಎಂದು ಹೇಳಿ ಕೃಷ್ಣನನ್ನು ಶರಣುಹೊಂದಿದರು. ಕೃಷ್ಣನಿಂದ ಅನುಜ್ಞೆ ಯನ್ನು ಪಡೆದು ಅವನ ಪ್ರೀತ್ಯರ್ಥವಾಗಿ ತಪಸ್ಸನ್ನು ಮಾಡಿದರು. ಇದರಿಂದ ಅವರು ಶಿವಭಕ್ತಿಯನ್ನು ಬಿಟ್ಟು ವಿಷ್ಣುಭಕ್ತಿಯಲ್ಲಿ ಪುನಃ ತಿರುಗಿದರು.

ಶಿವಭಕ್ತಿಯು ಭಾಗ್ಯವಂತರಿಗೆ ಮಾತ್ರ ಸಿಗುವುದು. ಗರ್ಗಾಚಾರ್ಯರಂತಹ ನಿರ್ಭಾಗ್ಯರಿಗೆ ಸಿಗಲಾರದು. ಸಿಕ್ಕಿದರೂ ಕೆಲವು ದಿನಗಳಲ್ಲಿ ಬಿಟ್ಟು ಹೋಗುವುದು. ಎಂಬ ವಿಷಯದಲ್ಲಿ ಗರ್ಗಾಚಾರ್ಯರೇ ದೃಷ್ಟಾಂತ ಎಂದು ಹೇಳಬಹುದು. ನಿಮ್ಮಂತಹ ಭಾಗ್ಯವಂತರಿಗೆ ಮಾತ್ರ ನಿಶ್ಚಲವಾದ ಶಿವಭಕ್ತಿಯು ಇರುತ್ತದೆ.

ಗರ್ಗಾಚಾರ್ಯರ ಮಗನು ಯಾವಾಗಲೂ ಕೃಷ್ಣನನ್ನು ಕೊಲ್ಲುವುದಕ್ಕೆ ಕಾಲವನ್ನು ಎದುರು ನೋಡುತ್ತಿರುವದರಿಂದ ಕಾಲಯವನ ಎಂದು ಪ್ರಸಿದ್ಧನಾದನು. ಅವನು ನಿಮ್ಮ ಶಿಷ್ಯನೇ ಆಗಿರುವನು. ರುದ್ರದೇವನಲ್ಲಿ ಅತ್ಯಂತ ಭಕ್ತಿಯುಳ್ಳವನಾಗಿರುವನು. ಅಸಂಖ್ಯಾಕವಾದ ಸೈನ್ಯದಿಂದಲೂ ಯುಕ್ತನಾಗಿರುವನು. ಮಹಾಬಲದಿಂದ ಕೊಬ್ಬಿದವನಾಗಿರುವನು. ನೀವು ಅನುಮತಿಯನ್ನು ಕೊಟ್ಟರೆ ಅವನ ಸಮೀಪಕ್ಕೆ ಹೋಗುವೆನು.

ನಿಮ್ಮ ಆಜ್ಞೆಯನ್ನು ತಿಳಿಸುವೆನು. ಅವನ ಮೂಲಕವಾಗಿ ಕೃಷ್ಣನನ್ನು ಕೊಲ್ಲಿಸಿ ನಾವೆಲ್ಲರೂ ಇಷ್ಟದಂತೆ ಮೆರೆಯೋಣ. ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಟ್ಟು ವಿವಾಹ ಮಾಡಿಸಿಬಿಡೋಣ ಎಂದನು.

## ಜರಾಸಂಧನ ಪ್ರತ್ಯುತ್ತರ

ಈ ಮಾತುಗಳನ್ನು ಕೇಳಿದ ಜರಾಸಂಧನು ಕೀರೀಟದಿಂದ ಅಲಂಕೃತವಾದ ತನ್ನ ತಲೆಯನ್ನು ತಗ್ಗಿಸಿದನು. ತುಂಬಾ ಖಿನ್ನನಾದನು. ಕೈಯನ್ನು ಕೈಯಿಂದ ತಿಕ್ಕುತ್ತಾ ಭುಜಗಳನ್ನು ನೋಡುತ್ತಾ. " ನನ್ನ ಕಾರ್ಯದ ಸಾಧನೆಗಾಗಿ ಇನ್ನೊಬ್ಬನನ್ನು ನಾನು ಹೇಗೆ ಕೇಳಲಿ. ನನ್ನ ಭುಜಗಳನ್ನು ಯುದ್ಧಾರಂಭಕಾಲದಲ್ಲಿ ಶ್ರೀಕೃಷ್ಣದೇವನು ಒಂದು ಕೃಷ್ಣಸರ್ಪವನ್ನು ಗಡಿಗೆಯೊಳಗಿಟ್ಟು ಕಾಲಯವನನಿಗೆ ಕಳುಹಿಸಿದನು " ಎಲೋ ಕಾಲಯವನಾ, ಈ ಕೃಷ್ಣಸರ್ಪವನ್ನು ನೋಡು. ಇದರ ಸಮೀಪದಲ್ಲಿ ಯಾವ ಆಯುಧವೂ ಇಲ್ಲ. ತಾನು ಮಾತ್ರ ಇದೆ. ಆದರೂ ತನ್ನ ದಂತಗಳಿಂದಲೇ ಸರ್ವರನ್ನೂ ಕಡಿದು ಸಂಹರಿಸಬಲ್ಲುದು. ಈ ಸರ್ಪದಂತಿರುವವನು ನಾನು ಆಯುಧವಿಲ್ಲದಿದ್ದರೂ ನಿನ್ನನ್ನು ಸಂಹರಿಸಬಲ್ಲೆನು." ಎಂದು ಈ ಕೃಷ್ಣಸರ್ಪದ ದೃಷ್ಟಾಂತದಿಂದ ತಿಳಿಸಿದನು.

ಕಾಲಯವನನು ಈ ಕೃಷ್ಣಸರ್ಪವನ್ನು ನೋಡಿದನು. ಈ ಕೃಷ್ಣಸರ್ಪದ ಸುತ್ತಲೂ ಇರುವೆಗಳನ್ನು ತುಂಬಿಸಿದನು. ಆ ಇರುವೆಗಳೆಲ್ಲವೂ ಆ ಕೃಷ್ಣಸರ್ಪದ ಸರ್ವಾಂಗಗಳಲ್ಲಿಯೂ ಕಚ್ಚಿದವು. ನೋವನ್ನು ತಾಳಲಾರದೆ ಹಾವು ಸತ್ತು ಹೋಯಿತು. ಅದೇ ಗಡಿಗೆಯನ್ನು ಹಿಂತಿರುಗಿಸಿ ಶ್ರೀಕೃಷ್ಣದೇವನಿಗೆ ಕಳುಹಿಸಿದನು.

## ಕಾಲಯವನನ ದಡ್ಡತನ

ಎಲೋ ಕೃಷ್ಣಾ, ನೀನು ಕೃಷ್ಣಸರ್ಪದ ದೃಷ್ಟಾಂತದಿಂದ ಆಯುಧವಿಲ್ಲದಿದ್ದರೂ ನನ್ನನ್ನು ಕೊಲ್ಲಲಿಕ್ಕೆ ಶಕ್ತನೆಂದು ತಿಳಿಸಿರುವಿ. ಕೃಷ್ಣಸರ್ಪದ ಗತಿಯೇನಾಯಿತು? ಇರುವೆಗಳು ಸರ್ಪಕ್ಕಿಂತ ಅಲ್ಪಶಕ್ತಿಯಿಂದ ಯುಕ್ತವಾದವುಗಳು. ಆದರೂ ಅಸಂಖ್ಯವಾದ ಇರುವೆಗಳು ಕೃಷ್ಣಸರ್ಪವನ್ನು ಕೊಂದುಬಿಟ್ಟವು. ಇರುವೆಗಳಂತೆ ಮೂರು ಕೋಟಿ ಅಕ್ಷೌಹಿಣೀ ಸೈನ್ಯಗಳು ನನ್ನಲ್ಲಿವೆ. ಇಷ್ಟು ದೊಡ್ಡ ಸೈನ್ಯದ ಮಧ್ಯದಲ್ಲಿ ಸಿಕ್ಕಿಕೊಂಡ ನೀನು ಎಷ್ಟು ಬಲಿಷ್ಠನಾಗಿದ್ದರೂ ಈ ಕೃಷ್ಣಸರ್ಪದಂತೆ ಸಾಯುವಿ." ಎಂದು ಕಾಲಯವನನು ಮೇಲ್ಕಂಡ ತನ್ನ ವ್ಯಾಪಾರದಿಂದ ತಿಳಿಸಿದನು.

ಶ್ರೀಕೃಷ್ಣದೇವನು ಕಳುಹಿಸಿದ ಕೃಷ್ಣಸರ್ಪವನ್ನು ಅಸಂಖ್ಯವಾದ ಇರುವೆಗಳ ಮೂಲಕವಾಗಿ ಕೊಲ್ಲಿಸಿ ಕಳುಹಿಸಿದ ಕಾಲಯವನನ ಚಾತುರ್ಯವೇ ಶ್ರೀಕೃಷ್ಣದೇವನ ಚಾತುರ್ಯಕ್ಕಿಂತ ಅಧಿಕವೆಂದು ತಿಳಿಯುತ್ತದೆ. ಶ್ರೀಕೃಷ್ಣದೇವನ ಚಾತುರ್ಯವೇ ಅಧಿಕವಾಗಿರಬೇಕಲ್ಲವೇ? ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಈಗ ಉತ್ತರವನ್ನು ಕೊಡುವೆವು.

ಗರ್ಗಾಚಾರ್ಯರು " ಕೃಷ್ಣನಿಲ್ಲದಂತೆ ಮಾಡುವ ಮಗನನ್ನು ಪಡೆಯುವೆನು" ಎಂದು ಸಂಕಲ್ಪಿಸಿದರು. ರುದ್ರದೇವನು "ಕೃಷ್ಣನಿಲ್ಲದಂತೆ ಮಾಡುವ ಮಗನನ್ನು ಪಡೆಯುವಿ" ಎಂದು. ಗರ್ಗಾಚಾರ್ಯರಿಗೆ ವರವನ್ನು

ಕೊಟ್ಟಿರುವನು. ಈ ವರವನ್ನು ನಂಬಿದ ಸಾಲ್ವನು "ಭೂಮಿಯಲ್ಲಿ ಕಾಲಯವನನ ಸಹಾಯದಿಂದ ಕೃಷ್ಣನಿಲ್ಲದಂತೆ ಮಾಡುವೆವು" ಎಂದು ಹೇಳಿರುವನು. ಗರ್ಗಾಚಾರ್ಯರು, ರುದ್ರದೇವ ಮತ್ತು ಸಾಲ್ವ ಎಂಬ ಈ ಮೂವರ ಮಾತುಗಳಲ್ಲಿಯೂ ಕಾಲಯವನನು ಕೃಷ್ಣನಿಲ್ಲದಂತೆ ಮಾಡುವವನು ಎಂಬ ಅರ್ಥವು ಸ್ಪಷ್ಟವಾಗಿ ತಿಳಿಯುತ್ತದೆ.

ಕೃಷ್ಣ ಎಂಬ ಪದವು ಶ್ರೀಕೃಷ್ಣದೇವನನ್ನೂ ಕೃಷ್ಣಸರ್ಪವನ್ನೂ ತಿಳಿಸುತ್ತದೆ. ಕೃಷ್ಣನಿಲ್ಲದಂತೆ ಮಾಡುವವನು ಎಂಬ ವಾಕ್ಯಕ್ಕೆ ಕೃಷ್ಣಸರ್ಪವಿಲ್ಲದಂತೆ ಮಾಡುವವನು ಎಂಬ ಅರ್ಥವೂ ಪ್ರಾಮಾಣಿಕವಾಗಿದೆ. ಆದ್ದರಿಂದ ಗರ್ಗಾಚಾರ್ಯರು ಶ್ರೀಕೃಷ್ಣದೇವನ ಮೇಲಿನ ಕೋಪದಿಂದ ಕೃಷ್ಣದೇವನಿಲ್ಲದಂತೆ ಮಾಡುವ ಮಗನು ಹುಟ್ಟಬೇಕೆಂಬ ಅಭಿಪ್ರಾಯದಿಂದ ಕೃಷ್ಣನಿಲ್ಲದಂತೆ ಮಾಡುವ ಮಗನು ಹುಟ್ಟಬೇಕೆಂದು ವರವನ್ನು ಕೇಳಿರಬಹುದು. ಆದರೆ ಜ್ಞಾನಿವರ್ಯನೂ ಶ್ರೀವಿಷ್ಣುಭಕ್ತಾಗ್ರೇಸರನೂ ಆಗಿರುವ ರುದ್ರದೇವನು ವರವನ್ನು ಕೊಡುವಾಗ ಕೃಷ್ಣಸರ್ಪವನ್ನು ಕೊಲ್ಲುವ ಮಗನು ಹುಟ್ಟುವನು ಎಂಬ ಅಭಿಪ್ರಾಯದಿಂದ ಕೃಷ್ಣನನ್ನು ಕೊಲ್ಲುವ ಮಗನು ಹುಟ್ಟವನು ಎಂದು ಹೇಳಿರುವನು. ಸಾಲ್ವನು ರುದ್ರದೇವನ ಮಾತಿನ ಗೂಢಾರ್ಥವನ್ನು ತಿಳಿಯದೆ ಅಪಾರ್ಥವನ್ನು ಕಲ್ಪಿಸಿಕೊಂಡನು.

ಕಾಲಯವನನು ಕೃಷ್ಣಸರ್ಪವನ್ನು ಕೊಂದು ರುದ್ರದೇವನ ವರವನ್ನು ಸತ್ಯವಾಗುವಂತೆ ಮಾಡಿದನು. ಶ್ರೀಕೃಷ್ಣದೇವನನ್ನು ಕೊಲ್ಲುವುದಕ್ಕಾಗಿ ತಾನು ಹುಟ್ಟಿದವನೆಂದು ತಿಳಿದು ಮೋಸಹೋದನು. ಶ್ರೀಕೃಷ್ಣದೇವನು ಕಳುಹಿಸಿದ ಕೃಷ್ಣಸರ್ಪವನ್ನು ಇರುವೆಗಳ ಮೂಲಕವಾಗಿ ಕೊಲ್ಲಿಸಿ ಕಳುಹಿಸಿದ ಕಾಲಯವನನು ಚತುರನಲ್ಲ. ಮೋಸಹೋದನು ಎಂದು ತಿಳಿಯಬೇಕು.

ಕೃಷ್ಣಸರ್ಪವಿದ್ದ ಗಡಿಗೆಯಲ್ಲಿ ಇರುವೆಗಳನ್ನು ತುಂಬಿಸಿ ಆ ಇರುವೆಗಳಿಂದ ಕೊಲ್ಲಲ್ಪಟ್ಟ ಸರ್ಪವನ್ನು ತಂದು ತೋರಿಸಿದ ದೂತವನ್ನು ಶ್ರೀಕೃಷ್ಣದೇವನು ನೋಡಿದನು. ನಿರಾಯುಧನಾದ ನಾನು ಅಸಂಖ್ಯಾಕರಾದ ಕಾಲಯವನನ ಸೈನಿಕರಿಂದ ಸಾಯುವೆನೆಂದು ಕಾಲಯವನನು ತಿಳಿಸಿರುವನು. ಇದರಲ್ಲಿ ನಿಜಾಂಶವು ಯಾವುದು ಎಂದು ಸ್ಪಷ್ಟವಾಗುತ್ತದೆ ಎಂದು ಹೇಳಿ ದೂತನನ್ನು ಕಳುಹಿಸಿದನು.

## ಶ್ರೀಕೃಷ್ಣದೇವನ ಜಯ

ತನ್ನ ಭುಜಬಲದಿಂದಲೇ ಕಾಲಯವನನ್ನೂ ಅವನ ಎಲ್ಲಾ ಸೈನಿಕರನ್ನೂ ಜಯಿಸಿದನು. ಅವನ ಎಲ್ಲಾ ದ್ರವ್ಯಗಳನ್ನೂ ದ್ವಾರಕಾಪಟ್ಟಣಕ್ಕೆ ಸಾಗಿಸಿದನು. ಕಾಲಯವನನು ಬ್ರಹ್ಮಾಸ್ತ್ರ ಮುಂತಾದ ಅಸ್ತ್ರಗಳೆಲ್ಲವನ್ನೂ ಪ್ರಯೋಗಿಸಿದನು. ಅವುಗಳೆಲ್ಲವನ್ನೂ ವ್ಯರ್ಥವಾಗುವಂತೆ ಮಾಡಿ ಅಂಗೈಯಿಂದ ಅವನನ್ನು ಹೊಡೆದು ರಥದಿಂದ ಕೆಳಗೆ ಬೀಳಿಸಿದನು. ಒಂದು ಕ್ಷಣದೊಳಗೆ ಅವನ ವಾಹನವನ್ನೂ ಆಯುಧಗಳನ್ನೂ ನಶಿಸುವಂತೆ ಮಾಡಿ ಮೂರ್ಛಿತನಾಗುವಂತೆ ಮಾಡಿದನು. ಆಗ ಅವನನ್ನು ಕೊಲ್ಲಬಹುದಾಗಿತ್ತು. ಕೊಲ್ಲದಿರುವುದಕ್ಕೆ ಕಾರಣವುಂಟು. ಆ ಕಾರಣವನ್ನು ಈಗ ವಿವರಿಸುವೆವು.

# ಮುಚುಕುಂದನ ಚರಿತ್ರೆ

ಸೂರ್ಯವಂಶದಲ್ಲಿ ಸುಪ್ರಸಿದ್ಧನಾದ ಮಾಂಧಾತಾ ಎಂಬ ರಾಜನಿಗೆ ಮುಚುಕುಂದ ಎಂಬ ಮಗನು ಹುಟ್ಟಿದನು. ಅವನು ರಾಜ್ಯವನ್ನು ಪಾಲಿಸುತ್ತಿರುವ ಕಾಲದಲ್ಲಿ ಕೆಲವು ದೈತ್ಯರು ರುದ್ರದೇವನನ್ನು ಕುರಿತು ತಪಸ್ಸನ್ನು ಮಾಡಿದರು. ರುದ್ರದೇವನಿಂದ, ಯಾವ ದೇವತೆಯೂ ತಮ್ಮನ್ನು ಜಯಿಸಲು ಶಕ್ತನಾಗಬಾರದು ಎಂಬ ವರವನ್ನು ಪಡೆದರು. ಆ ವರಬಲದಿಂದ ದೇವತೆಗಳನ್ನು ತುಂಬಾ ಪೀಡಿಸುತ್ತಿದ್ದರು. ಅವರ ಪೀಡೆಯನ್ನು ಸಹಿಸಲಾರದ ದೇವತೆಗಳೆಲ್ಲರೂ ಮುಚುಕುಂದನಲ್ಲಿಗೆ ಬಂದರು. ತಮ್ಮನ್ನು ರಕ್ಷಿಸಬೇಕೆಂದು ಪ್ರಾರ್ಥಿಸಿದರು. ಮುಚುಕುಂದನು ಆ ದೈತ್ಯರ ಜೊತೆಯಲ್ಲಿ ಯುದ್ಧಕ್ಕಾಗಿ ಹೋದನು. ಅನೇಕ ಸಹಸ್ರವರ್ಷಗಳ ವರೆಗೆ ರಾತ್ರಿಹಗಲು ಎಡೆಬಿಡದೆ ಯುದ್ಧವನ್ನು ಮಾಡಿದನು. ಆಗ ದೇವಸೇನಾಪತಿಯಾಗಿ ಷಣ್ಮುಖನು ಬಂದನು. ಆ ಮೇಲೆ ದೇವತೆಗಳಿಗೆಲ್ಲಾ ದೈತ್ಯರ ಭಯವು ಹೋಯಿತು. ಆಗ ಮುಚುಕುಂದನನ್ನು ನೋಡಿ ಹೇಳಿದರು.

ಓ ಮುಚುಕುಂದನೇ, ನೀನು ಯುದ್ಧಕ್ಕಾಗಿ ಬಂದು ಅನೇಕ ಸಹಸ್ರವರ್ಷಗಳಾದವು. ಈಗ ನಿನ್ನ ಹೆಂಡತಿ. ಮಕ್ಕಳು, ಮಂತ್ರಿಗಳು, ಬಂಧುಗಳು ಮುಂತಾದ ಸರ್ವರೂ ಕಾಲಕ್ಕೆ ತುತ್ತಾಗಿರುವರು. ಯಾರೂ ಇಲ್ಲ. ಆದ್ದರಿಂದ ನೀನು ಊರಿಗೆ ಹೋಗಿ ಯಾರ ಜೊತೆಯಲ್ಲಿಯೂ ವಾಸಿಸುವಂತಿಲ್ಲ. ಇಷ್ಟು ದೀರ್ಘಕಾಲದ ವರೆಗೆ ದೇವತೆಗಳನ್ನು ಸಂತೋಷಪಡಿಸಿರುವ ನಿನಗೆ ಯಾವ ವರಗಳನ್ನು ಬೇಕಾದರೂ ನಾವು ಕೊಡವೆವು. ಆದರೆ ಮೋಕ್ಷವನ್ನು ಮಾತ್ರ ನಮ್ಮಲ್ಲಿ ಬೇಡಕೂಡದು. ನಮಗೆ ಮೋಕ್ಷವನ್ನು ಕೊಡುವ ಅಧಿಕಾರವಿಲ್ಲ. ಆ ಅಧಿಕಾರವು ಶ್ರೀವಿಷ್ಣುವಿಗೆ ಮಾತ್ರ ಇರುತ್ತದೆ. ನಮಗೆ ಅಧಿಕಾರವಿಲ್ಲದ ಮೋಕ್ಷವನ್ನು ನೀನು ಕೇಳಿದರೆ ನಮಗೆ ಅದನ್ನು ಕೊಡಲು ಶಕ್ತಿಯಿಲ್ಲವೆಂಬ ಉತ್ತರವನ್ನು ಕೊಡಬೇಕಾಗುತ್ತದೆ. ಆದ್ದರಿಂದ ಆ ವರವನ್ನು ಕೇಳಬೇಡ." ಎಂದರು.

ಅದನ್ನು ಕೇಳಿದ ಮುಚುಕುಂದನು "ತುಂಬಾ ನಿದ್ರೆಯು ಬರುತ್ತಿದೆ. ದೀರ್ಘಕಾಲದ ನಿದ್ರೆಯನ್ನು ಕೊಡಿರಿ. ಆ ನಿದ್ರೆಯಿಂದ ಯಾರು ಎಬ್ಬಿಸುವನೋ ಅವನು ಸುಟ್ಟು ಬೂದಿಯಾಗಲಿ." ಎಂದು ವರವನ್ನು ಬೇಡಿದನು. ದೇವತೆಗಳೆಲ್ಲರೂ ಅವನು ಬೇಡಿದ ವರವನ್ನು ಕೊಟ್ಟರು. ಮುಚುಕುಂದನೂ ಒಂದು ಗುಹೆಯಲ್ಲಿ ಹೋಗಿ ಮಲಗಿದನು.

" ಈ ಮುಚುಕುಂದನು ದೀರ್ಘಕಾಲದ ನಿದ್ರೆಯನ್ನೂ ನಿದ್ರಾಭಂಗವನ್ನು ಮಾಡುವವನ ಸಂಹಾರವನ್ನೂ ವರವಾಗಿ ಬೇಡಿರುವನು. ಈ ಎರಡು ವರಗಳಿಂದಲೂ ಇವನಿಗೆ ಯಾವ ಪ್ರಯೋಜನವೂ ಇಲ್ಲ ಈ ಎರಡು ವರಗಳಿಂದಲೇ ಇವನಿಗೆ ಮಹಾಪುಣ್ಯವು ಬರುವಂತೆ ಮಾಡಬೇಕು." ಎಂದು ದೇವತೆಗಳೆಲ್ಲರೂ ಸಂಕಲ್ಪಿಸಿದರು.

ಶ್ರೀಹರಿಯನ್ನು ನೋಡಿದರು. " ಈ ಮುಚುಕುಂದನು ವ್ಯರ್ಥವಾದ ಎರಡು ವರಗಳನ್ನು ಬೇಡಿರುವನು. ಈ ಎರಡು ವರಗಳಲ್ಲಿ ಎರಡನೆಯ ವರದಂತೆ ಸಾಯುವವನು ಮಹಾವಿಷ್ಣುದ್ವೇಷಿಯಾಗಿರಬೇಕು. ಅವನನ್ನು ಕೊಂದದ್ದರಿಂದ ಬರುವ ಮಹಾಪುಣ್ಯವು ಇವನಿಗೆ ಬರಲಿ. ನೀನು ಶ್ರೀಕೃಷ್ಣಾವತಾರವನ್ನು ಸ್ವೀಕರಿಸುವ ಕಾಲದಲ್ಲಿ ಕಾಲಯವನ ಎಂಬ ದೈತ್ಯನು ಹುಟ್ಟುವನು. ಅವನು ಶ್ರೀಕೃಷ್ಣರೂಪಿಯಾದ ನಿನ್ನನ್ನೇ ಸಂಹರಿಸುವುದಕ್ಕಾಗಿ ಹುಟ್ಟಿರುವುದರಿಂದ ಪ್ರಧಾನ ವಿಷ್ಣುದ್ವೇಷಿಗಳಲ್ಲಿ ಒಬ್ಬನಾಗಿರುವನು. ಅವನನ್ನು ಮುಚುಕುಂದನ ನೇತ್ರದಿಂದ

ಹೊರಟ ಅಗ್ನಿಯ ರೂಪದಿಂದ ನೀನೇ ಸಂಹರಿಸು. ಈ ಸಂಹಾರದಿಂದ ಬರುವ ಪುಣ್ಯಕ್ಕೆ ಅವನು ಪಾತ್ರನಾಗಲಿ" ಎಂದು ಪ್ರಾರ್ಥಿಸಿದರು. ಶ್ರೀಹರಿಯು ಈ ವರವನ್ನು ದೇವತೆಗಳಿಗೆ ಕೊಟ್ಟಿರುವನು. ಈ ವರವನ್ನು ಸತ್ಯವಾಗುವಂತೆ ಮಾಡುವುದಕ್ಕಾಗಿ ಕಾಲಯವನನನ್ನು ಶ್ರೀಕೃಷ್ಣದೇವನು ಸಂಹರಿಸಲಿಲ್ಲ. ಕಾಲಯವನನನ್ನು ಸೋಲಿಸಿ ಮುಚುಕುಂದನು ಮಲಗಿರುವ ಗುಹೆಯ ಕಡೆಗೆ ಓಡಿದನು. ಕಾಲಯವನನಿಗೆ ಮೂರ್ಛೆಯಿಂದ ಎಚ್ಚರವಾಯಿತು. ಕೂಡಲೇ ಕಾಲಯವನನು ಶ್ರೀಕೃಷ್ಣದೇವನನ್ನು ಬೆನ್ನಟ್ಟಿಕೊಂಡು ಓಡಿದನು. ಶ್ರೀಕೃಷ್ಣದೇವನನ್ನು ನೋಡಿ ತುಂಬಾ ದೂಷಿಸಿದನು. ಅಯೋಗ್ಯರ ಜೊತೆಯಲ್ಲಿ ಮಾತಾಡಕೂಡದು ಎಂಬ ನೀತಿಯನ್ನು ಸರ್ವರಿಗೂ ತಿಳಿಸಿ ಕೊಡುವುದಕ್ಕಾಗಿ ಶ್ರೀಕೃಷ್ಣದೇವನು ಅವನ ಯಾವ ಮಾತಿಗೂ ಪ್ರತ್ಯುತ್ತರವನ್ನು ಕೊಡಲಿಲ್ಲ.

## ಕಾಲಯವನನ ಸಂಹಾರ

ಕೊನೆಗೆ ಮುಚುಕುಂದನು ಮಲಗಿದ ಗುಹೆಯೊಳಗೆ ಹೋದನು. ಮರೆಯಾಗಿ ನಿಂತನು. ಕಾಲಯವನನು ಶ್ರೀಕೃಷ್ಣದೇವನು ಗುಹೆಯೊಳಗೆ ಹೋದದ್ದನ್ನು ನೋಡಿದನು. ತಾನೂ ಆ ಗುಹೆಯೊಳಗೆ ಪ್ರವೇಶಿಸಿ. ಅಲ್ಲಿ ಮಲಗಿರುವ ಮುಚುಕುಂದನನ್ನು ನೋಡಿ ಶ್ರೀಕೃಷ್ಣದೇವನೇ ಮಲಗಿರುವುದಾಗಿ ಭ್ರಮಿಸಿದನು. ಇಷ್ಟು ದೂರದ ವರೆಗೆ ತನ್ನನ್ನು ಓಡಿ ಬರುವಂತೆ ಮಾಡಿ ಈಗ ಒಂದೂ ತಿಳಿಯದಂತೆ ಮಲಗಿರುವನು ಎಂದು ಹೇಳುತ್ತಾ ಕಾಲಿನಿಂದ ಒದ್ದನು. ಮುಚುಕುಂದನಿಗೆ ಎಚ್ಚರವಾಯಿತು. ಎರಡು ಕಣ್ಣುಗಳನ್ನು ತೆರೆದು ನೋಡಿದನು. ಕಣ್ಣುಗಳಿಂದ ಅಗ್ನಿಯು ಹೊರಟಿತು. ಆ ಅಗ್ನಿಯ ರೂಪವನ್ನು ಧರಿಸಿ ಶ್ರೀಕೃಷ್ಣದೇವನೇ ಕಾಲಯವನನನ್ನು ಭಸ್ಮಮಾಡಿದನು.

## ತಾರತಮ್ಯ ಜ್ಞಾನದ ಮಹಿಮೆ

ಮುಚುಕುಂದನು ದೇವತೆಗಳ ತಾರತಮ್ಯವನ್ನು ತಿಳಿದು ಅವರನ್ನು ಸಂತೋಷಪಡಿಸಿದನು. ಅವನು ಕೇಳಿದ ಎರಡು ವರಗಳು ಅವನಿಗೆ ವ್ಯರ್ಥವಾಗಿದ್ದರೂ ಆ ದೇವತೆಗಳು ಶ್ರೀಹರಿಯಿಂದ ವರವನ್ನು ಪಡೆದು ವ್ಯರ್ಥವಾದ ವರಗಳಲ್ಲಿ ಒಂದು ವರದಿಂದ ಮಹಾವಿಷ್ಣುದ್ವೇಷಿಯನ್ನು ಸಂಹರಿಸಿದ್ದರಿಂದ ಮಹಾಪುಣ್ಯವನ್ನು ಸಂಪಾದಿಸುವಂತೆ ಮಾಡಿದರು. ರಾವಣ, ಹಿರಣ್ಯಕಶಿಪು ಮುಂತಾದವರು ಬ್ರಹ್ಮ ರುದ್ರ ಮುಂತಾದ ದೇವತೆಗಳನ್ನು ಸಂತೋಷ ಪಡಿಸಿರುವರು. ಆದರೆ ಬ್ರಹ್ಮಮುಂತಾದ ದೇವತೆಗಳೇ ಸರ್ವೋತ್ತಮರೆಂಬ ಭಾವನೆಯಿಂದ ಸಂತೋಷ ಪಡಿಸಿದರು. ತಾರತಮ್ಯವನ್ನು ತಿಳಿಯಲಿಲ್ಲ. ದೇವತೆಗಳನ್ನು ಸಂತೋಷಪಡಿಸಿದರೂ ಅನರ್ಥಪರಂಪರೆಗೆ ಗುರಿಯಾದರು. ಆದ್ದರಿಂದ ಮುಚುಕುಂದನಂತೆ ತಾರತಮ್ಯವನ್ನು ತಿಳಿದು ದೇವತೆಗಳನ್ನು ಸಂತೋಷಪಡಿಸುವವನು ಸಕಲ ಸೌಭಾಗ್ಯಗಳನ್ನೂ ಪಡೆಯುವವನು ಎಂಬ ವಿಷಯದಲ್ಲಿ ಮುಚುಕುಂದನೇ ದೃಷ್ಟಾಂತನಾಗಿರುವನು. ॥೧೩॥

> ರಾಜ್ಞಾ ಸಂಸ್ತೂಯಮಾನೋ ಹತಯವನಬಲೋ ಭೀತವನ್ಮಾಗಧೇಶಾ
> ದ್ಗೋಮಂತಂ ಪ್ರಾಪ್ಯ ಭೂಯೋ ಜಿತಮಗಧಪತಿರ್ಜಾತಶಾಂತಾಗ್ನಿಶೈಲಃ ।
> ಆಗತ್ಯ ದ್ವಾರಕಾಂ ಯೋ ಹೃದಿಕಸುತಗಿರಾ ಜ್ಞಾತಕೌಂತೇಯಕೃತ್ಯಃ
> ಪಶ್ಚಾತ್ತ್ವಾದಾಯ ಭೈಷ್ಮೀಂ ನೃಷು ಯುಧಿ ಜಿತವಾನ್ ಭೂಭೃತಃ ಪ್ರೀಯತಾಂ ನಃ ॥೧೪॥

**ಪದಚ್ಛೇದ :-** ರಾಜ್ಞಾ, ಸಂಸ್ತೂಯಮಾನಃ ಹತಯವನಬಲಃ ಭೀತವತ್, ಮಾಗಧೇಶಾತ್, ಗೋಮಂತಂ, ಪ್ರಾಪ್ಯ, ಭೂಯಃ ಜಿತಮಗಧಪತಿಃ, ಜಾತಶಾಂತಾಗ್ನಿಶೈಲಃ ದ್ವಾರಕಾಂ ಆಗತ್ಯ ಹೃದಿಕಸುತಗಿರಾ ಜ್ಞಾತಕೌಂತೇಯಕೃತ್ಯಃ, ಪಶ್ಯತ್ಸು, ಆದಾಯ ಭೈಷ್ಮೀಂ ನೃಷು ಯುಧಿ ಜಿತವಾನ್ ಭೂಭೃತಃ ಪ್ರೀಯತಾಂ ನಃ

ಅನ್ವಯ - ಯಃ ರಾಜ್ಞಾ ಸಂಸ್ತೂಯಮಾನಃ ಹತಯವನಬಲಃ ಮಾಗಧೇಶಾತ್ ಭೀತವತ್ ಭೂಯಃ ಗೋಮಂತಂ ಪ್ರಾಪ್ಯ ಜಿತಮಗಧಪತಿಃ, ಜಾತಶಾಂತಾಗ್ನಿಶೈಲಃ ದ್ವಾರಕಾಂ ಆಗತ್ಯ ಹೃದಿಕಸುತಗಿರಾ ಜ್ಞಾತಕೌಂತೇಯಕೃತ್ಯಃ, ನೃಷು ಪಶ್ಯತ್ಸು ಭೈಷ್ಮೀಂ ಆದಾಯ, ಭೂಭೃತಃ ಯುಧಿ ಜಿತವಾನ್, ಸಃ ನಃ ಪ್ರೀಯತಾಂ.

ಅನ್ವಯಾರ್ಥ - ಯಃ ಯಾವ ಶ್ರೀಕೃಷ್ಣದೇವನು ರಾಜ್ಞಾ ಮುಚುಕುಂದರಾಜನಿಂದ ಸಂಸ್ತೂಯಮಾನಃ ಸ್ತುತಿಸಲ್ಪಡುತ್ತಿರುವವನಾಗಿ ಹತಯವನಬಲಃ ಕಾಲಯವನನ ಸೈನ್ಯಗಳನ್ನೆಲ್ಲವನ್ನೂ ಕೊಂದವನಾಗಿ ಮಾಗಧೇಶಾತ್ ಜರಾಸಂಧನಿಂದ ಭೀತವತ್ ಹೆದರಿದವನಂತೆ ಭೂಯಃ ಇನ್ನೊಮ್ಮೆ ಗೋಮಂತಂ ಗೋಮಂತಪರ್ವತವನ್ನು ಪ್ರಾಪ್ಯ ಏರಿದವನಾಗಿ ಜಿತಮಗಧಪತಿಃ ಜರಾಸಂಧನನ್ನು ಜಯಿಸಿದವನಾಗಿ ಜಾತಶಾಂತಾಗ್ನಿಶೈಲಃ ಹಚ್ಚಲ್ಪಟ್ಟ ಮತ್ತು ನಾಶ ಮಾಡಲ್ಪಟ್ಟ ಅಗ್ನಿಯುಳ್ಳ ಗೋಮಂತಪರ್ವತವುಳ್ಳವನಾಗಿ ದ್ವಾರಕಾಂ ದ್ವಾರಕಾಪಟ್ಟಣವನ್ನು ಪ್ರಾಪ್ಯ ಹೊಂದಿದವನಾಗಿ ಹೃದಿಕಸುತಗಿರಾ ಹೃದಿಕ ಎಂಬ ಯಾದವನ ಮಗನಾದ ಕೃತವರ್ಮನ ಮಾತಿನಿಂದ ಜ್ಞಾತಕೌಂತೇಯಕೃತ್ಯಃ ಕುಂತಿಯ ಮಕ್ಕಳಾದ ಪಾಂಡವರ ಕಾರ್ಯಗಳನ್ನು ತಿಳಿದವನಾಗಿ ನೃಷು ಎಲ್ಲಾ ಜನರೂ ಪಶ್ಯತ್ಸು ಸತ್ಸು ನೋಡುತ್ತಿರುವಾಗ ಭೈಷ್ಮೀಂ ಭೀಷ್ಮಕರಾಜನ ರುಕ್ಮಿಣಿಯನ್ನು ಆದಾಯ ಕರೆದುಕೊಂಡು ಭೂಭೃತಃ ಎಲ್ಲಾ ರಾಜರುಗಳನ್ನೂ ಯುಧಿ ಯುದ್ಧದಲ್ಲಿ ಜಿತವಾನ್ ಜಯಿಸಿದನೋ ಸಃ ಆ ಶ್ರೀಕೃಷ್ಣದೇವನು ನಃ ನಮ್ಮ ವಿಷಯದಲ್ಲಿ ಪ್ರೀಯತಾಂ ಪ್ರೀತನಾಗಲಿ.

ವಿಗ್ರಹ-ಸಂಸ್ತೂಯತೇ ಇತಿ ಸಂಸ್ತೂಯಮಾನಃ, ಯವನಸ್ಯ ಬಲಂ ಯವನಬಲಂ ಹತಂ ಯವನಬಲಂ ಯೇನ ಸಃ ಹತಯವನಬಲಃ; ಭೀತಃ ಇವ ಭೀತವತ್; ಮಗಧಸ್ಯ ಅಯಂ ಮಾಗಧಃ, ಮಾಗಧಶ್ಚಾಸೌ ಈಶಶ್ಚ ಮಾಗಧೇಶಃ, ತಸ್ಮಾತ್ ಮಾಗಧೇಶಾತ್, ಮಗಧಾನಾಂ ಪತಿಃ ಮಗಧಪತಿಃ ಜಿತಃ ಮಗಧಪತಿಃ ಯೇನ ಸಃ ಜಿತಮಗಧಪತಿಃ;, ಜಾತಶ್ಚಾಸೌ ಶಾಂತಶ್ಚ ಜಾತಶಾಂತಃ, ಜಾತಶಾಂತಃ ಅಗ್ನಿಃ ಯಸ್ಯ ಸಃ ಜಾತಶಾಂತಾಗ್ನಿಃ, ಜಾತಶಾಂತಾಗ್ನಿಃ ಶೈಲಃ ಯಸ್ಯ ಸಃ ಜಾತಶಾಂತಾಗ್ನಿಶೈಲಃ; ಹೃದಿಕಸ್ಯ ಸುತಃ ಹೃದಿಕಸುತಃ ಹೃದಿಕಸುತಸ್ಯ ಗೀಃ ಹೃದಿಕಸುತಗೀಃ ತಯಾ ಹೃದಿಕಸುತಗಿರಾ; ಪಶ್ಯಂತಿ ಇತಿ ಪಶ್ಯಂತ, ತೇಷು ಪಶ್ಯತ್ಸು; ಭುವಂ ಬಿಭ್ರತಿ ಇತಿ ಭೂಭೃತಃ, ತಾನ್ ಭೂಭೃತಃ;

ರಾಜ್ಞಾ ಸಂಸ್ತೂಯಮಾನಃ ಹತಯವನಬಲಃ ಜಿತಮಗಧಪತಿಃ ಮಾಗಧೇಶಾತ್ ಭೀತವತ್ ಭೂಯಃ ಗೋಮಂತಂ ಪ್ರಾಪ್ಯ ಜಾತಶಾಂತಾಗ್ನಿಶೈಲಃ ದ್ವಾರಕಾಂ ಆಗತ್ಯ.

ಮುಚುಕುಂದಮಹಾರಾಜನಿಂದ ಸ್ತುತಿಸಲ್ಪಟ್ಟನು. ಅವನನ್ನು ಕಳುಹಿಸಿದನು. ಗುಹೆಯಿಂದ ಹೊರಗೆ ಬಂದನು. ಕಾಲಯವನನ ಎಲ್ಲಾ ಸೈನ್ಯವನ್ನೂ ಸಂಹರಿಸಿದನು. ಜರಾಸಂಧನನ್ನು ಜಯಿಸಿದನು. ಪುನಃ ಯುದ್ಧಕ್ಕೆ ಬಂದಿರುವ ಜರಾಸಂಧನಿಗೆ ಹೆದರಿದವನಂತೆ ನಟಿಸುತ್ತಾ ಪುನಃ ಗೋಮಂತಪರ್ವತನ್ನು ಏರಿದನು. ಆ ಪರ್ವತದ

ಸುತ್ತಲೂ ಬೆಂಕಿಯನ್ನು ಹಚ್ಚಿ ತನ್ನನ್ನೂ ಸುಡಬೇಕೆಂದು ಯತ್ನಿಸಿದಾಗ ಆ ಪರ್ವತದಿಂದ ಕೆಳಗೆ ಧುಮುಕಿದನು. ಆಗ ಪರ್ವತದಲ್ಲಿರುವ ರಂಧ್ರಗಳಿಂದ ಹೊರಗೆ ಬಂದಿರುವ ನೀರಿನ ಪ್ರವಾಹದಿಂದ ಬೆಂಕಿಯನ್ನು ಅಡಗಿಸಿ ದ್ವಾರಕೆಗೆ (ಆಲಿಸಿ) ಬಂದನು.

ವಿಶೇಷಾರ್ಥ - ಕೃಷ್ಣಃ ಪೂರ್ವೋಕ್ತರೀತ್ಯಾ ಕಾಲಯವನವಧಾನಂತರಂ ಮುಚುಕುಂದೇನ ದೃಷ್ಟಸ್ತೇನ ರಾಜ್ಞಾ " ವಿಮೋಹಿತೋಽಯಂ ಜನ ಈಶಮಾಯಯಾ" ಇತ್ಯಾದಿ ಬಹುಪ್ರಕಾರೈಃ ಸ್ತುತಸ್ತಮನುಜ್ಞಾಪ್ಯ ಸ್ವಯಮಪಿ ಗಿರಿಕಂದರಾನ್ನಿಷ್ಕ್ರಮ್ಯ, ಮಥುರಾಂ ಪ್ರಾಪ್ಯ, ಪುನಶ್ಚ ಯುದ್ಧಾರ್ಥಮಾಗತಂ ಜರಾಸಂಧಂ ಜಿತ್ವಾ, ಪುನಶ್ಚೋದ್ಯುಕ್ತಂ ದೃಷ್ಟ್ವಾ ಭೀತವದ್ಬಲರಾಮೇಣ ಸಹ ಗೋಮಂತಂ ಪ್ರಾಪ್ಯ, ತತ್ರಾಪಿ ಯುದ್ಧಾರ್ಥಮಾಗತೇನ ಜರಾಸಂಧೇನ ಗಿರಿ ಪರಿತ ಉತ್ಪಾದಿತಂ ವಹ್ನಿಮಧಃ ಉತ್ಪತತಾ ಸಾಗ್ರಜೇನ ಸ್ವೇನ ನಿಪೀಡಿತಾದ್ಭೂಮೌ ಏಕಾದಶಯೋಜನಂ ನಿಮಗ್ನಾತ್ಪರ್ವತಾದುತ್ಪನ್ನಾಜ್ಜಲಸಮೂಹಾನ್ನಾಶಯಿತ್ವಾ, ದ್ವಾರಕಾಂ ಪ್ರಾಪ್ಯ.

# ಮುಚುಕುಂದನ ಪ್ರಶ್ನೆ

ವಿಶೇಷಾರ್ಥ ವಿವರಣ - ಮುಚುಕುಂದನು ತನ್ನ ಕಣ್ಣುಗಳಿಂದ ಹೊರಟ ಅಗ್ನಿಯಿಂದ ಪರ್ವತಾಕಾರ ನಾಗಿರುವ ದೈತ್ಯನು ಸುಟ್ಟು ಬೂದಿಯಾದುದನ್ನು ನೋಡಿದನು. ಆಶ್ಚರ್ಯದಿಂದ ಯುಕ್ತನಾದನು. ತನ್ನ ಸುತ್ತಲೂ ನೋಡಿದನು. ತನ್ನ ತಲೆಯ ಪಕ್ಕದಲ್ಲಿ ತನ್ನನ್ನು ಕೃಪಾದೃಷ್ಟಿಯಿಂದ ನೋಡುತ್ತಿರುವ ಶ್ರೀಕೃಷ್ಣದೇವನನ್ನು ನೋಡಿದನು.

ಓ ಮಹಾಪುರುಷನೇ, ನೀನು ಯಾರು? ನಿನ್ನ ಪಾದಗಳು ಕಮಲದಂತೆ ಮೃದುವಾಗಿವೆ. ತುಂಬಾ ಮುಳ್ಳುಗಳಿಂದ ಯುಕ್ತವಾಗಿರುವ ಈ ಪರ್ವತದ ಗುಹೆಯೊಳಗೆ ಬರಲು ಕಾರಣವೇನು? ನಿನ್ನ ದೇಹದಲ್ಲಿರುವ ಬೆಳಕಿನಿಂದ ಈ ಗುಹೆಯೊಳಗಿರುವ ಕತ್ತಲೆಗಳೆಲ್ಲವೂ ಅಡಗಿವೆ. ಬ್ರಹ್ಮವಿಷ್ಣುಮಹೇಶ್ವರರು ಎಲ್ಲಾ ದೇವತೆಗಳಲ್ಲಿ ಶ್ರೇಷ್ಠರೆಂದು ನಾನು ತಿಳಿದಿರುವೆನು. ಆ ಮೂವರಲ್ಲಿ ನೀನು ಯಾರು? ನಿಜವಾಗಿ ಹೇಳು?

ನಾನು ಇಕ್ಷ್ವಾಕುರಾಜನ ವಂಶದಲ್ಲಿ ಹುಟ್ಟಿರುವ ಮಾಂಧಾತರಾಜನ ಮಗನು, ಮುಚುಕುಂದ ಎಂದು ಪ್ರಸಿದ್ಧನಾದವನು. ನಿದ್ದೆಯಿಲ್ಲದೆ ಅಸಂಖ್ಯವರ್ಷಗಳ ವರೆಗೆ ಯುದ್ಧವನ್ನು ಮಾಡಿದೆನು. ಕೊನೆಗೆ ಈ ಗುಹೆಯಲ್ಲಿ ಮಲಗಿದೆನು. ಈಗ ಯಾವನೋ ನನ್ನನ್ನು ಎಬ್ಬಿಸಿದನು. ಅವನು ತಾನು ಮಾಡಿರುವ ಪಾಪದಿಂದಲೇ ಬೂದಿಯಾದನು. ಅವನು ಸತ್ತ ಮೇಲೆ ನಿನ್ನನ್ನು ನೋಡಿದೆನು. ನಿನ್ನ ತೇಜಸ್ಸಿನ ಮುಂದೆ ನಮ್ಮೆಲ್ಲರ ತೇಜಸ್ಸುಗಳೂ ನಷ್ಟವಾದವು. ನಿನ್ನನ್ನು ನೋಡುವುದಕ್ಕೂ ನನ್ನಿಂದ ಸಾಧ್ಯವಿಲ್ಲದಂತಿದೆ ಎಂದನು.

# ಶ್ರೀಕೃಷ್ಣದೇವನ ಉತ್ತರ

"ಓ ಮುಚುಕುಂದ, ನಾನು ಅನಂತ ಅವತಾರಗಳನ್ನು ಸ್ವೀಕರಿಸಿರುವೆನು. ಅನಂತ ವ್ಯಾಪಾರಗಳನ್ನು ಮಾಡಿರುವೆನು. ಅನಂತ ಹೆಸರುಗಳಿಂದ ಯುಕ್ತನಾಗಿರುವೆನು. ಭೂಮಿಯಲ್ಲಿರುವ ಧೂಳಿಗಳನ್ನು ಎಣಿಸಿದರೂ ಎಣಿಸಬಹುದು. ಆದರೆ ನನ್ನ ಹೆಸರುಗಳನ್ನೂ ಅವತಾರಗಳನ್ನೂ ಲೀಲೆಗಳನ್ನೂ ಲೆಕ್ಕಿಸಲು ಯಾರಿಂದಲೂ ಸಾಧ್ಯವಿಲ್ಲ. ಭೂಭಾರಭೂತರಾದ ದೈತ್ಯರನ್ನು ಸಂಹರಿಸುವುದಕ್ಕಾಗಿ ಭೂಮಿಯಲ್ಲಿ ಅವತರಿಸಬೇಕೆಂದು

ಬ್ರಹ್ಮದೇವನು ನನ್ನಲ್ಲಿ ಬೇಡಿದನು. ಅದಕ್ಕಾಗಿ ಯದುಕುಲದಲ್ಲಿ ವಸುದೇವನಿಗೆ ಮಗನಾಗಿ ಅವತರಿಸಿದೆನು. ಆದುದರಿಂದ ವಾಸುದೇವನೆಂದು ನನ್ನನ್ನು ಎಲ್ಲರೂ ಕರೆಯುವರು. ಕಂಸ ಮುಂತಾದ ದೈತ್ಯರನ್ನು ಸಂಹರಿಸಿದೆನು. ನಿನ್ನ ಕಣ್ಣುಗಳಿಂದ ಅಗ್ನಿಯ ರೂಪವನ್ನು ಸ್ವೀಕರಿಸಿ ಈ ಕಾಲಯವನನನ್ನು ಸಂಹರಿಸಿದೆನು. ನಿನಗೆ ಅನುಗ್ರಹವನ್ನು ಮಾಡುವುದಕ್ಕಾಗಿಯೇ ಈ ಗುಹೆಗೆ ಬಂದೆನು. ನಿನಗೆ ಬೇಕಾದ ವರಗಳನ್ನು ಕೇಳು ಅವುಗಳನ್ನು ಕೊಡುವೆನು.'' ಎಂದು ಶ್ರೀಕೃಷ್ಣದೇವನು ಹೇಳಿದನು.

ಈ ಮಾತುಗಳನ್ನು ಕೇಳಿದ ಮುಚುಕುಂದನು ಶ್ರೀಕೃಷ್ಣದೇವನಿಗೆ ಸಾಷ್ಟಾಂಗನಮಸ್ಕಾರವನ್ನು ಮಾಡಿದನು. ನಾರಾಯಣನು ನಿನ್ನನ್ನು ಅನುಗ್ರಹಿಸುವನು ಎಂದು ಗರ್ಗಾಚಾರ್ಯರು ಹೇಳಿದ ಮಾತುಗಳನ್ನು ಸ್ಮರಿಸಿದನು. ತುಂಬಾ ಸಂತೋಷದಿಂದಲೂ ಭಕ್ತಿಯಿಂದಲೂ ಮಾತಾಡಿದನು.

## ಮುಚುಕುಂದನು ಮಾಡಿದ ಸ್ತೋತ್ರ

" ಓ ಪ್ರಭು!, ನಿನ್ನ ಮಾಯೆಯಿಂದ ಸರ್ವರೂ ಮೋಹಿತರಾಗಿರುವರು. ದುಃಖಗಳಿಗೆ ಕಾರಣವಾಗಿರುವ ವಿಷಯಗಳಲ್ಲಿ ಸರ್ವರೂ ಸುಖಕ್ಕಾಗಿ ಆಸಕ್ತರಾಗಿರುವರು. ಮನುಷ್ಯಜನ್ಮವು ದುರ್ಲಭವಾದುದು. ಮನುಷ್ಯಜನ್ಮದಲ್ಲಿಯೂ ಎಲ್ಲಾ ಅಂಗಗಳೂ ಪೂರ್ಣವಾಗಿರುವುದು ಅತ್ಯಂತ ದುರ್ಲಭವಾದುದು. ಇಂತಹ ಮನುಷ್ಯಜನ್ಮವು ಬಂದಾಗ ನಿನ್ನ ಪಾದಕಮಲಗಳನ್ನು ಸೇವಿಸದೆ ಅಯೋಗ್ಯವಾದ ಮಕ್ಕಳು, ಹೆಂಡತಿ, ದುಡ್ಡು, ಭೂಮಿ ಮುಂತಾದ ವಸ್ತುಗಳಲ್ಲಿಯೇ ಆಸಕ್ತರಾಗಿರುವವರಲ್ಲಿ ನಾನೊಬ್ಬನು. ನಾನು ಗಡಿಗೆಯಂತೆಯೂ ಗೋಡೆಯಂತೆಯೂ ಇರುವ ಈ ದೇಹದಲ್ಲಿಯೂ ದೇಹಕ್ಕೆ ಸಂಬಂಧಿಸಿದ ಪತ್ನೀಪುತ್ರರಲ್ಲಿಯೂ ವಿಶೇಷವಾದ ಮಮತೆಯಿಂದ ಯುಕ್ತನಾದೆನು. ನಿನ್ನನ್ನು ಲಕ್ಷಿಸದೆ ಆನೆ, ಕುದುರೆ ಮುಂತಾದ ಸೈನ್ಯಗಳಿಂದ ಸಹಿತನಾಗಿ ರಾಜ ಎಂಬ ಅಹಂಕಾರದಿಂದ ಭೂಮಿಯಲ್ಲಿ ವಿಷಯಗಳಲ್ಲಿ ಅತ್ಯಾಸೆಯಿಂದ ಯುಕ್ತನಾಗಿ ಹಸಿದ ಹಾವಿನ ಮುಂದೆ ತನ್ನನ್ನು ಮರೆತು ಓಡಾಡುತ್ತಿರುವ ಇಲಿಯಂತೆ ಸಂಚರಿಸಿದೆನು. ಜಾಗ್ರತೆಯಾಗಿರುವ ಹಾವು ಸಮಯವನ್ನು ನೋಡಿ ಇಲಿಯನ್ನು ನುಂಗಿದಂತೆ ನೀನು ನನ್ನನ್ನು ಸಂಹರಿಸಲು ಕಾದಿರುವಿ.''

ಹಿಂದೆ ನಾನು ರಾಜನೆಂದು ಹೇಳುತ್ತಾ ಆನೆ ಮುಂತಾದ ಪರಿವಾರಗಳ ಮಧ್ಯದಲ್ಲಿ ಮೆರೆದೆನು. ಇನ್ನು ಮುಂದೆ ನಾನು ಸಾಯಲೇಬೇಕು. ಸತ್ತ ಮೇಲೆ ನನ್ನ ದೇಹವನ್ನು ಯಾರಾದರೂ ಸುಟ್ಟರೆ ಬೂದಿಯಾಗುವುದು. ಯಾರೂ ಸುಡದಿದ್ದು ಕ್ರೂರಮೃಗಗಳೂ ತಿಂದರೆ ಅವುಗಳ ಹೊಟ್ಟೆಯಲ್ಲಿ ಅಮೇಧ್ಯದ ರೂಪವನ್ನು ತಾಳುವುದು. ಇಂತಹ ಅತಿ ತುಚ್ಛವಾದ ದೇಹದಲ್ಲಿ ಮಮತೆಯನ್ನಿಟ್ಟುಕೊಂಡು ಎಲ್ಲಾ ದಿಕ್ಕುಗಳನ್ನೂ ಜಯಿಸಿ ಸರಿಸಮಾನರಾದ ರಾಜರಿಂದ ನಮಸ್ಕರಿಸಲ್ಪಟ್ಟ ನಾನು ಹೆಂಗಸರ ಮುಂದೆ ಕೋತಿಯಂತೆ ಕುಣಿದೆನು.''

" ಸಜ್ಜನರ ಸಹವಾಸದಿಂದಲೇ ನಿನ್ನಲ್ಲಿ ಭಕ್ತಿಯು ಹುಟ್ಟುವುದು. ಭಕ್ತಿಯಿಂದಲೇ ಸಂಸಾರದಿಂದ ಬಿಡುಗಡೆಯು ಏರ್ಪಡುವುದು ನನಗೆ ರಾಜ್ಯದ ಸಂಬಂಧವು ಬಿಟ್ಟು ಹೋಯಿತು. ಇದು ನಿನ್ನ ಅನುಗ್ರಹದಿಂದಲೇ ಏರ್ಪಟ್ಟಿತು. ನಿನ್ನ ಪಾದಸೇವೆಯನ್ನು ಬಿಟ್ಟು ಬೇರೆ ವರವನ್ನು ಬೇಡಲಾರೆನು. ನಿನ್ನ ಪಾದಗಳ ಬುಡದಲ್ಲಿ ಸೇರಿದೆನು. ನನ್ನನ್ನು ರಕ್ಷಿಸು'' ಎಂದು ಪ್ರಾರ್ಥಿಸಿದನು.

# ಶ್ರೀಕೃಷ್ಣದೇವನ ಅನುಗ್ರಹ

" ಚಕ್ರವರ್ತಿಯೇ, ನಿನ್ನ ಬುದ್ಧಿಯು ಅತ್ಯಂತ ನಿರ್ಮಲವಾದುದು. ನಿನಗೆ ಬೇಕಾದ ವರಗಳನ್ನು ಕೊಡುವುದಾಗಿ ಆಸೆಯನ್ನು ತೋರಿಸಿದೆನು. ಆದರೆ ನೀನು ಮೋಸಹೋಗಲಿಲ್ಲ. ನನ್ನ ಅನುಗ್ರಹವನ್ನೇ ಬೇಡಿದಿ. ಇನ್ನು ಮುಂದೆ ನೀನು ಇಲ್ಲಿಂದ ಹೊರಡು. ಉಗ್ರವಾದ ತಪಸ್ಸನ್ನು ಮಾಡು. ಮುಂದಿನ ಜನ್ಮದಲ್ಲಿ ಬ್ರಾಹ್ಮಣಶ್ರೇಷ್ಠನಾಗಿ ಹುಟ್ಟು. ಆಗಲೂ ತಪಸ್ಸನ್ನು ಮಾಡಿ ಮುಕ್ತಿಯನ್ನು ಹೊಂದು." ಎಂದು ಶ್ರೀಕೃಷ್ಣದೇವನು ಆಜ್ಞಾಪಿಸಿದನು.

ಮುಚುಕುಂದನು ಅತ್ಯಂತ ಭಕ್ತಿಯಿಂದ ಶ್ರೀಕೃಷ್ಣದೇವನಿಗೆ ಪ್ರದಕ್ಷಿಣೆನಮಸ್ಕಾರಗಳನ್ನು ಮಾಡಿದನು. ಶ್ರೀಕೃಷ್ಣದೇವನ ಅನುಮತಿಯನ್ನು ಪಡೆದನು. ಎಲ್ಲಾ ವಸ್ತುಗಳ ಆಕಾರಗಳೂ ಕೃಶವಾದುದನ್ನು ನೋಡಿ ಕಲಿಯುಗವು ಸಮೀಪಿಸಿತೆಂದು ತಿಳಿದನು. ಗಂಧಮಾದನ ಪರ್ವತವನ್ನು ಹೊಂದಿ ತಪಸ್ಸನ್ನು ಮಾಡಿ ದೇಹವನ್ನು ತ್ಯಜಿಸಿದನು. ಮುಂದಿನ ಜನ್ಮದಲ್ಲಿ ಬ್ರಾಹ್ಮಣನಾಗಿ ಹುಟ್ಟಿದನು. ತಪಸ್ಸನ್ನು ಮಾಡಿ ಮುಕ್ತಿಯನ್ನು ಪಡೆದನು. ಮುಚುಕುಂದನು ಹೋದಕೂಡಲೇ ಶ್ರೀಕೃಷ್ಣದೇವನು ಗುಹೆಯಿಂದ ಹೊರಗೆ ಬಂದನು.

# ವಿರೋಧಪರಿಹಾರ

ಭಾಗವತಗ್ರಂಥದಲ್ಲಿ ಕಾಲಯವನನ ಸಂಹಾರಾನಂತರದಲ್ಲಿ ಜರಾಸಂಧನು ಶ್ರೀಕೃಷ್ಣದೇವನನ್ನು ಓಡಿಸಿಕೊಂಡು ಗೋಮಂತ ಪರ್ವತದ ವರೆಗೆ ಹೋದಂತೆಯೂ ಶ್ರೀಕೃಷ್ಣದೇವನೂ ಬಲರಾಮನೂ ಗೋಮಂತಪರ್ವತದ ಮೇಲೆ ಏರಿದಂತೆಯೂ, ಜರಾಸಂಧನು ಗೋಮಂತಪರ್ವತದ ಸುತ್ತಲೂ ಇರುವ ಮರಗಳನ್ನು ಕಡಿದು ಬೆಂಕಿಯನ್ನು ಹಚ್ಚಿದಂತೆಯೂ, ಜರಾಸಂಧನು ಅವರಿಬ್ಬರೂ ಸುಟ್ಟು ಬೂದಿಯಾದರೆಂದು ತಿಳಿದು ಸಂತೋಷದಿಂದ ಹಿಂದಿರುಗಿದಂತೆಯೂ ಇದೆ. ಭಾಗವತ ಗ್ರಂಥದಲ್ಲಿ ಹೇಳಿದಂತೆ ಶ್ರೀಗುರುಸಾರ್ವಭೌಮರೂ ಶ್ರೀಕೃಷ್ಣಚಾರಿತ್ರಮಂಜರೀಗ್ರಂಥದಲ್ಲಿ "ಭೀತವನ್ಮಾಗ್ರಧೇಶಾದ್ಗೋಮಂತಂ ಪ್ರಾಪ್ಯ ಭೂಯೋ ಜಿತಮಗಧಪತಿರ್ಜಾತಶಾಂತಾಗ್ನಿಶೈಲಃ ಆಗತ್ಯ ದ್ವಾರಕಾಂ" ಎಂಬ ಪಂಕ್ತಿಗಳಿಂದ ಹೇಳಿರುವರು. ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಹಿಂದೆ ನಾವು ಹೇಳಿದಂತೆ ಶ್ರೀಮಧ್ವಾಚಾರ್ಯರು ಹೇಳಿರುವರು.

ಈ ಎರಡು ಗ್ರಂಥಗಳೂ ಪರಮ ಪ್ರಮಾಣವಾಗಿರುವುದರಿಂದ ಈ ಎರಡು ಗ್ರಂಥಗಳಲ್ಲಿ ಹೇಳಿರುವ ವಿಷಯಗಳೂ ಸತ್ಯವೇ ಆಗಿವೆ. ಒಂದೊಂದು ಬ್ರಹ್ಮದೇವರ ದಿನಗಳಲ್ಲಿಯೂ ಶ್ರೀಕೃಷ್ಣದೇವನೂ ಜರಾಸಂಧ ಮುಂತಾದ ದೈತ್ಯರುಗಳೂ ಅವತರಿಸುವುದುಂಟು. ಶ್ರೀಕೃಷ್ಣದೇವನು ಜರಾಸಂಧ ಮುಂತಾದ ದೈತ್ಯರನ್ನು ಸೋಲಿಸುವುದುಂಟು. ಅಸಂಖ್ಯ ಬ್ರಹ್ಮದೇವರ ದಿನಗಳಲ್ಲಿ ಮಹಾಭಾರತತಾತ್ಪರ್ಯನಿರ್ಣಯಗ್ರಂಥದಲ್ಲಿ ಹೇಳಿದಂತೆಯೂ ಕೆಲವು ದಿನಗಳಲ್ಲಿ ಭಾಗವತಗ್ರಂಥದಲ್ಲಿ ಹೇಳಿದಂತೆಯೂ ಕಥೆಗಳೂ ನಡೆದಿವೆ. ಆದ್ದರಿಂದ ಎಲ್ಲವೂ ಸತ್ಯವೆಂದು ತಿಳಿಯಬೇಕು.

# ಜರಾಸಂಧನ ಪರಾಜಯ

ಶ್ರೀಕೃಷ್ಣದೇವನು ಮುಚುಕುಂದನು ಮಲಗಿದ್ದ ಗುಹೆಯಿಂದ ಹೊರಗೆ ಬಂದಾಗ ಜರಾಸಂಧನು ೨೩ ಅಕ್ಷೌಹಿಣೀ ಸೈನ್ಯಗಳಿಂದಲೂ ಶಿಶುಪಾಲ ಮುಂತಾದ ಕೆಲ ರಾಜರುಗಳಿಂದಲೂ ಸಹಿತನಾಗಿ ಯುದ್ಧಕ್ಕೆ ಬಂದನು.

ಶ್ರೀಕೃಷ್ಣದೇವನು ಜರಾಸಂಧನೊಡನೆಯೂ ಎಲ್ಲಾ ರಾಜರೊಡನೆಯೂ ತನ್ನ ಕೈಗಳಿಂದಲೇ ಯುದ್ಧವನ್ನು ಮಾಡಿ ಸರ್ವರನ್ನೂ ಸೋಲಿಸಿದನು. ಕೆಲವು ಸೈನಿಕರನ್ನು ಅಂಗೈಯಿಂದಲೂ ಮತ್ತೆ ಕೆಲವರನ್ನು ಗುದ್ದುಗಳಿಂದಲೂ ಉಳಿದವರನ್ನು ಮರಗಳಿಂದಲೂ ಹೊಡೆದು ಸಂಹರಿಸಿದನು. ಜರಾಸಂಧನು ಶ್ರೀಕೃಷ್ಣದೇವನ ಪೆಟ್ಟುಗಳನ್ನು ಸಹಿಸಲಾರದೆ ಮೂರ್ಛಿತನಾಗಿ ಬಿದ್ದನು. ಹೀಗೆ ಸರ್ವರನ್ನೂ ಜಯಿಸಿದನು. ಬಲರಾಮನೂ ಶ್ರೀಕೃಷ್ಣದೇವನೂ ಇಬ್ಬರೂ ಗೋಮಂತಪರ್ವತದಿಂದ ದ್ವಾರಕಾನಗರಕ್ಕೆ ಅಭಿಮುಖವಾಗಿ ಹಾರಿದರು. ಮರುಕ್ಷಣದಲ್ಲಿ ದ್ವಾರಕೆಯನ್ನು ಸೇರಿದರು.

ರುಕ್ಮಿಣೀದೇವಿಯನ್ನು ಶಿಶುಪಾಲನಿಗೆ ಕೊಟ್ಟು ವಿವಾಹವನ್ನು ಮಾಡಬೇಕೆಂದು ತಿರ್ಮಾನಿಸಿದ ರಾಜರುಗಳು ಮೊದಲು ಈ ವಿವಾಹಕ್ಕೆ ವಿಘ್ನಕಾರಿಯಾದ ಶ್ರೀಕೃಷ್ಣದೇವನನ್ನು ಸಂಹರಿಸಬೇಕೆಂದೂ ಅದಕ್ಕಾಗಿ ಕಾಲಯವನನನ್ನು ಕಳುಹಿಸಬೇಕೆಂದೂ ಮಾಡಿರುವ ತೀರ್ಮಾನವೂ ಫಲಕಾರಿಯಾಗಲಿಲ್ಲ. ಕೊನೆಗೆ ಶ್ರೀಕೃಷ್ಣದೇವನು ಬದುಕಿರುವಾಗಲೇ ರುಕ್ಮಿಣಿಯ ವಿವಾಹವನ್ನು ಮಾಡುವುದಾಗಿ ತೀರ್ಮಾನಿಸಿದರು. ವಿವಾಹಕಾಲದಲ್ಲಿ ಈ ವಿವಾಹವನ್ನು ನಿಲ್ಲಿಸುವುದಕ್ಕಾಗಿ ಶ್ರೀಕೃಷ್ಣದೇವನು ಬರುವುದಾಗಿ ತೀರ್ಮಾನಿಸಿದರು. ಎಲ್ಲಾ ರಾಜರುಗಳೂ ಯುದ್ಧಕ್ಕೆ ಸಿದ್ಧರಾಗಿ ಕುಂಡಿನಪುರಕ್ಕೆ ಬಂದರು. ವಿವಾಹಕ್ಕೆ ಕೆಲವು ದಿನಗಳಿಗಿಂತ ಪೂರ್ವದಲ್ಲಿ ರುಕ್ಮಿಣೀದೇವಿಯು ಒಬ್ಬ ಬ್ರಾಹ್ಮಣಶ್ರೇಷ್ಠರ ಕೈಯಲ್ಲಿ ಒಂದು ಪತ್ರವನ್ನು ಬರೆದು ಶ್ರೀಕೃಷ್ಣದೇವನಿಗೆ ಕಳುಹಿಸಿದಳು. ಆ ಬ್ರಾಹ್ಮಣರು ಅವಳ ಪತ್ರವನ್ನು ತಂದು ಶ್ರೀಕೃಷ್ಣದೇವನ ಪಾದಗಳಲ್ಲಿ ಸಮರ್ಪಿಸಿದರು. ಆ ಪತ್ರವನ್ನು ಶ್ರೀಕೃಷ್ಣದೇವನು ಓದಿದನು.

"ಓ ಶ್ರೀಕೃಷ್ಣದೇವ!, ಮಹಾಜ್ಞಾನಿಗಳೂ ವಿರಕ್ತಶಿಖಾಮಣಿಗಳೂ ಆಗಿರುವ ನಾರದರೇ ಮೊದಲಾದವರು ನಮ್ಮ ಮನೆಗೆ ಬಂದಿರುವಾಗ ನಿನ್ನ ಸೌಂದರ್ಯ ಮತ್ತು ಗುಣಗಳನ್ನು ಅವರಿಂದ ಕೇಳಿ ತಿಳಿದುಕೊಂಡೆನು. ನಿನ್ನ ಗುಣಗಳನ್ನು ಕಿವಿಯಿಂದ ಕೇಳುತ್ತಿರುವಾಗಲೇ ನನ್ನ ಸಂತಾಪವೆಲ್ಲಾ ಅಡಗಿತು. ನಿನ್ನನ್ನು ನೋಡಿಬಿಟ್ಟರೆ ಎಲ್ಲಾ ಲಾಭಗಳನ್ನೂ ಪಡೆದವಳಿಗೆ ಸಮಾನಳೆಂದು ತೀರ್ಮಾನಿಸಿದೆನು. ಸ್ತ್ರೀಯರಿಗೆ ಸ್ವಭಾವಸಿದ್ಧವಾದ ನಾಚಿಕೆಯನ್ನು ಬಿಟ್ಟು ನಿನಗೆ ಪತ್ರವನ್ನು ಬರೆಯಲು ಸಿದ್ಧಳಾದೆನು. ಕುಲ, ಶೀಲ, ರೂಪ, ವಿದ್ಯಾ, ಸಂಪತ್ತು, ವಯಸ್ಸು, ತೇಜಸ್ಸು ಮುಂತಾದ ಎಲ್ಲಾ ಗುಣಗಳಿಂದಲೂ ನನಗೆ ಯೋಗ್ಯನಾಗಿರುವ ಪತಿಯು ನೀನೇ ಆಗಿರುವಿ, ಬೇರೆ ಯಾರೂ ಇಲ್ಲ. ಆದ್ದರಿಂದ ನಿನ್ನನ್ನು ನಾನು ಮನಃಪೂರ್ವಕವಾಗಿ ವರಿಸಿರುವೆನು. ನನ್ನನ್ನು ನಿನಗೆ ಅರ್ಪಿಸಿರುವೆನು. ನರಿಯು ಸಿಂಹದ ಆಹಾರವನ್ನು ಅಪಹರಿಸಿದಂತೆ ನನ್ನನ್ನು ಶಿಶುಪಾಲನು ಅಪಹರಿಸಕೂಡದು. ಹಿಂದಿನ ಜನ್ಮಗಳಲ್ಲಿ ನಾನು ಮಾಡಿರುವ ಎಲ್ಲಾ ವಿಧವಾದ ಪುಣ್ಯಕಾರ್ಯಗಳಿಂದಲೂ ನೀನು ತೃಪ್ತನಾಗಿದ್ದರೆ ನೀನು ಬಂದು ನನ್ನ ಪಾಣಿಗ್ರಹಣವನ್ನು ಮಾಡು. ಶಿಶುಪಾಲನೇ ಮೊದಲಾದವರು ಮಾಡಕೂಡದು. ವಿವಾಹಕ್ಕಿಂತ ಹಿಂದಿನ ದಿನದಲ್ಲಿ ನೀನು ನಿನ್ನ ಸೈನ್ಯದಿಂದ ಸಹಿತನಾಗಿ ನಮ್ಮ ಊರಿಗೆ ಬಂದು ಎಲ್ಲಾ ರಾಜರುಗಳನ್ನೂ ಗೆದ್ದು ವೀರ್ಯಶುಲ್ಕ ಅಂದರೆ ಸಾಮರ್ಥ್ಯವೇ ದಕ್ಷಿಣೆಯಾಗಿ ಉಳ್ಳವಳಾದ ನನ್ನನ್ನು ಕರೆದುಕೊಂಡು ಹೋಗು. ನನ್ನ ತಾಯಿ ಮುಂತಾದ ಬಂಧುಗಳ ಮಧ್ಯದಲ್ಲಿ ಅಂತಃಪುರದಲ್ಲಿರುವ ನನ್ನನ್ನು ಅವರೆಲ್ಲರನ್ನೂ ಹಿಂಸಿಸದೆ ಹೇಗೆ ಕರೆದುಕೊಂಡು ಹೋಗುವುದು ಎಂಬ ಪ್ರಶ್ನೆಯು ಬರಬಹುದು. ಅದಕ್ಕೆ ಉಪಾಯವನ್ನು ಹೇಳುವೆನು. ವಿವಾಹಕ್ಕೆ ಪೂರ್ವದಿನದಲ್ಲಿ ನಮ್ಮ ಕುಲದೇವತೆಯ ಮಂದಿರಕ್ಕೆ ಮದುಮಗಳು ಹೋಗಬೇಕೆಂಬ ಸಂಪ್ರದಾಯವು ನಮ್ಮ ಮನೆಯಲ್ಲಿದೆ. ಆಗ ಕೆಲವು ಸಖಿಯರಿಂದ ಸಹಿತಳಾಗಿ

ನಾನು ಕುಲದೇವತಾಮಂದಿರಕ್ಕೆ ಹೋಗುವೆನು. ನನ್ನ ಬಂಧುಗಳು ಯಾರು ಬರುವುದಿಲ್ಲ. ಆ ಸಮಯದಲ್ಲಿ ನೀನು ಅಲ್ಲಿಗೆ ಬಂದು ನನ್ನನ್ನು ಕರೆದುಕೊಂಡು ಹೋಗು. ರುದ್ರಾದಿದೇವತೆಗಳು ನಿನ್ನ ಪಾದಕಮಲಗಳಲ್ಲಿರುವ ಧೂಳಿಯನ್ನು ತಮ್ಮ ಮನಸ್ಸಿನಲ್ಲಿರುವ ಅಜ್ಞಾನಾದಿದೋಷಗಳನ್ನು ಕಳೆದುಕೊಳ್ಳುವುದಕ್ಕಾಗಿ ಸೇವಿಸುತ್ತಾ ಇರುವರು. ನಿನ್ನ ಪಾದಕಮಲಗಳ ಸೇವೆಯ ಭಾಗ್ಯವು ನನಗೆ ಸಿಗದಿದ್ದರೆ ಈ ಜನ್ಮ ಮುಗಿಯುವವರೆಗೂ ವ್ರತಗಳನ್ನು ಮಾಡುತ್ತಾ ಕೃಶಳಾಗಿ ದೇಹವನ್ನು ಬಿಡುವೆನು. ಎಷ್ಟು ಜನ್ಮಗಳಾದರೂ ಆಗಲಿ. ನಿನ್ನ ಪಾದಗಳನ್ನು ಸೇರಿಯೇ ಸೇರುವೆನು.''

'' ಓ ಮಹಾಪ್ರಭೋ!, ನಿನಗೆ ಅಚ್ಯುತ ಎಂಬ ಹೆಸರು ಅತ್ಯಂತ ಪ್ರಸಿದ್ಧವಾಗಿದೆ. ಆ ಹೆಸರು ನಾಶವಿಲ್ಲದವನು ಎಂಬ ಅರ್ಥವನ್ನು ತಿಳಿಸುತ್ತಿದೆ. ಎಲ್ಲಾ ಜೀವರ ಸ್ವರೂಪದೇಹಗಳಿಗೂ ನಾಶವಿಲ್ಲ. ಆದರೆ ಅವರಿಗೆ ಯಾರಿಗೂ '' ಅಚ್ಯುತ'' ಎಂಬ ಹೆಸರಿಲ್ಲ. ಆದ್ದರಿಂದ ನಿನ್ನ ಸ್ವರೂಪದೇಹಕ್ಕೆ ನಾಶವಿಲ್ಲದಿರುವುದರಿಂದ ನಿನಗೆ ಅಚ್ಯುತ ಎಂಬ ಹೆಸರು ಬಂದಿಲ್ಲವೆಂದು ತೀರ್ಮಾನಿಸಬಹುದು.''

''ಬ್ರಹ್ಮದೇವನ ಹೊರಗೆ ಕಾಣಿಸುತ್ತಿರುವ ಜಡವಾದ ಸ್ಥೂಲದೇಹವು ಬ್ರಹ್ಮದೇವನ ನೂರು ವರ್ಷಗಳ ವರೆಗೆ ನಶಿಸುವುದಿಲ್ಲ. ಇಷ್ಟು ದೀರ್ಘಕಾಲದ ವರೆಗೆ ಅಂದರೆ ಮನುಷ್ಯಮಾನದಿಂದ ೩೧೧೦೪೦೦೦೦೦೦೦೦೦ ವರ್ಷಗಳ ವರೆಗೆ ಯಾರ ಸ್ಥೂಲದೇಹವೂ ಇರುವುದಿಲ್ಲ. ಇಷ್ಟು ದೀರ್ಘಕಾಲದ ವರೆಗೆ ನಶಿಸದಿರುವ ಸ್ಥೂಲದೇಹವುಳ್ಳ ಬ್ರಹ್ಮದೇವನಿಗೂ ಅಚ್ಯುತ ಎಂಬ ಹೆಸರಿಲ್ಲ. ಆದ್ದರಿಂದ ದೀರ್ಘಕಾಲದ ವರೆಗೆ ನಶಿಸದಿರುವ ಸ್ಥೂಲದೇಹವು ಇರುವುದರಿಂದಲೂ ನಿನಗೆ ಅಚ್ಯುತ ಎಂಬ ಹೆಸರು ಬಂದಿಲ್ಲವೆಂದು ತೀರ್ಮಾನಿಸಬಹುದು.''

'' ಆದ್ದರಿಂದ ಇತರರ ಸ್ಥೂಲದೇಹಕ್ಕೆ ನಾಶವಿರುವುದರಿಂದ ಅಚ್ಯುತ ಎಂಬ ಹೆಸರಿಲ್ಲವೆಂದೂ ನಿನ್ನ ಸ್ಥೂಲದೇಹಕ್ಕೆ ಮಾತ್ರ ನಾಶವಿಲ್ಲವೆಂದೂ ಆದ್ದರಿಂದಲೇ ಅಚ್ಯುತ ಎಂಬ ಬಿರುದು ನಿನಗೆ ಮಾತ್ರ ಇರುವುದಾಗಿಯೂ ತೀರ್ಮಾನಿಸುವೆನು.''

''ಬ್ರಹ್ಮ ಮುಂತಾದ ಸರ್ವಜೀವರಿಗೂ ಸ್ಥೂಲದೇಹದ ನಾಶವೇ ಮರಣವೆಂದೂ, ಸ್ಥೂಲದೇಹದ ನಾಶವಿಲ್ಲದಿರುವ ನಿನಗೆ ಯಾವ ವಿಧವಾದ ಮರಣವೂ ಇಲ್ಲವೆಂದೂ ಸಕಲ ಶಾಸ್ತ್ರಗಳೂ ಹೊಗಳುತ್ತಿವೆ. ಕನ್ಯೆಯು ತನ್ನ ಪತಿಗೆ ಮರಣವೇ ಬರಕೂಡದೆಂದು ಹೇಳುತ್ತಿರುವಳು. ನಾನು ಕನ್ಯೆಯಾದುದರಿಂದ ಮರಣವೇ ಇಲ್ಲದಿರುವುದರಿಂದ ಅಚ್ಯುತ ಎಂಬ ಬಿರುದಿನಿಂದ ಯುಕ್ತನಾಗಿರುವ ನಿನ್ನನ್ನೇ ವರಿಸುವೆನು.''

'' ಓ ಪ್ರಭೋ!, ನೀನು ಸಕಲಗುಣಗಳಿಂದ ಪೂರ್ಣನಾಗಿರುವಿ. ನಿನಗೆ ನನ್ನಿಂದಲಾಗಲೀ ಇತರರಿಂದಲಾಗಲೀ ಆಗಬೇಕಾದ ಯಾವ ವಿಧವಾದ ಲಾಭವೂ ಇಲ್ಲ. ವೇದ ಮುಂತಾದ ಸಕಲ ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ಸಕಲ ಧರ್ಮಗಳನ್ನೂ ರಕ್ಷಿಸುತ್ತಿರುವಿ. ಸತ್ಪಾತ್ರರು ನಿನ್ನನ್ನು ಭಕ್ತಿಯಿಂದ ಆರಾಧಿಸಿದುದಕ್ಕಾಗಿ ವೈಕುಂಠ ಮುಂತಾದ ನಿನ್ನ ಸ್ಥಾನಗಳನ್ನು ಕೊಟ್ಟು ಸಂತೋಷಪಡಿಸುತ್ತಿರುವಿ. ನಿನ್ನ ಈ ಗುಣಗಳನ್ನು ಸಾಮವೇದವು ಸುಸ್ವರದಿಂದ ಹಾಡುತ್ತಿದೆ. ಇಂತಹ ಮಹಿಮಾಶಾಲಿಯಾದ ನಿನ್ನನ್ನು ವಿವಾಹಮಾಡಿಕೊಂಡ ಕನ್ಯೆಯು ಧನ್ಯಳೆನಿಸುವಳು.''

'' ಓ ಕೃಷ್ಣದೇವ!, ಶಿಶುಪಾಲ ಮುಂತಾದ ಅಯೋಗ್ಯರು ಕಾಮಪರಾಧೀನರಾಗಿ ನನ್ನಲ್ಲಿ ಆಸೆಯನ್ನು ಮಾಡುತ್ತಿರುವರು. ಅವರೆಲ್ಲರನ್ನೂ ಶಿಕ್ಷಿಸುವುದಕ್ಕಾಗಿ ಅವರೊಡನೆ ಯುದ್ಧವನ್ನು ಮಾಡು. ಯಮದೂತರನ್ನು ಅವರಲ್ಲಿಗೆ ಕಳುಹಿಸು.''

"ಓ ಅನಂತಮನ್ಮಥರಿಗಿಂತಲೂ ಅಧಿಕವಾದ ಸೌಂದರ್ಯದಿಂದ ಯುಕ್ತನಾಗಿರುವ ರಮಣನೇ! ನೀನು ಎಲ್ಲಾ ಜೀವರ ದೇಹಗಳಲ್ಲಿಯೂ ವಾಸಿಸುತ್ತಿರುವಿ. ಆದ್ದರಿಂದ ನಿನ್ನನ್ನು ಹುಡುಕುವ ಅವಶ್ಯಕತೆ ಇಲ್ಲ. ನಿನ್ನ ಪಾದಸೇವೆಯನ್ನು ನನಗೆ ಕೊಡು."

"ಓ ಮಹಾಪ್ರಭೋ!, ನೀನು ಯಾರನ್ನು ಕಡೆಗಣ್ಣಿನಿಂದ ನೋಡುವಿಯೋ ಅವರ ಸಂಸಾರದ ತಾಪಗಳೆಲ್ಲವೂ ದೂರವಾಗುವವು. ನಾರದರು ನಮ್ಮ ಮನೆಗೆ ಬಂದ ದಿನದಲ್ಲಿಯೇ ನೀನು ನನ್ನ ಮನಸ್ಸನ್ನು ಕದ್ದೆ. ನಾನು ನಿನ್ನವಳಾಗಿಬಿಟ್ಟೆನು. ಇಲ್ಲಿಗೆ ಬೇಗನೆ ಬಾ. ಎಲ್ಲಾ ರಾಜರೊಡನೆ ಯುದ್ಧವನ್ನು ಮಾಡು. ನಿನ್ನವಳಾದ ನನ್ನನ್ನು ಕರೆದುಕೊಂಡು ಹೋಗು. ನನ್ನ ದೇಹದಲ್ಲಿರುವ ಗಂಧ ಮುಂತಾದವುಗಳಲ್ಲಿ ನಿನ್ನ ಪಾದಗಳಿಂದ ಗುರುತನ್ನು ಮಾಡು."

"ಓ ಮಹಾತ್ಮನೇ!, ನೀನು ನಾರದರಿಗೆ ರುಕ್ಮಿಣಿಯನ್ನು ವಿವಾಹಮಾಡಿಕೊಳ್ಳುವೆನೆಂದು ಹೇಳಿರುವುದಾಗಿ ನಾರದರು ನನಗೆ ತಿಳಿಸಿದರು. ಆ ಮಾತುಗಳನ್ನು ಕೇಳಿದಾಗ ಅಂಭ್ರಣೀಸೂಕ್ತದಲಿ ಲಕ್ಷ್ಮಿದೇವಿಯು ಹೇಳಿದಂತೆ ನಾನು ಬ್ರಹ್ಮನನ್ನೂ ಸ್ವರ್ಗಲೋಕಾಧಿಪತಿಯಾದ ಇಂದ್ರನನ್ನೂ ಅಗ್ನಿಯನ್ನೂ ದೇವತೆಗಳಿಂದ ಮಾನ್ಯರಾದ ನಾರದ ಮುಂತಾದ ಮುನಿಗಳನ್ನೂ ಸಚ್ಛಾಸ್ತ್ರಮಾರ್ಗದಲ್ಲಿ ನಿಪುಣರಾದ ಪಂಡಿತಾಗ್ರೇಸರರನ್ನೂ ಧಿಕ್ಕರಿಸಿದೆನು. ನೀನೇ ಸರ್ವೋತ್ತಮನೆಂದು ತಿಳಿದೆನು. ಸರ್ವರ ಸಂಸಾರವನ್ನು ಪರಿಹರಿಸುವವನೂ ನೀನೇ ಎಂದು ನಂಬಿದೆನು. ಜ್ಞಾನಿಪ್ರಿಯನಾದ ನೀನು ನನ್ನಲ್ಲಿರುವ ನೀನೇ ಸರ್ವೋತ್ತಮನೆಂಬ ಜ್ಞಾನಕ್ಕಾದರೂ ಮೆಚ್ಚಿ ನನ್ನನ್ನು ಅನುಗ್ರಹಿಸು.

"ಓ ದೇವದೇವ!, ನಿನಗೆ ಪ್ರಾಕೃತವಾದ ದೇಹವಿಲ್ಲ ಎಂಬ ತತ್ತ್ವವನ್ನು ತಿಳಿದಿರುವೆನು. ಈ ವಿಷಯವನ್ನು ನಾನು ಸ್ಪಷ್ಟಪಡಿಸುವೆನು. ಐವತ್ತುಕೋಟಿಯೋಜನವಿಸ್ತೀರ್ಣವಾದ ಈ ಬ್ರಹ್ಮಾಂಡದ ಸುತ್ತಲೂ ಹೊದಿಕೆಗಳಿವೆ. ಹತ್ತು ಹೊದಿಕೆಗಳಿಂದ ಯುಕ್ತವಾಗಿರುವ ಒಂದು ಬ್ರಹ್ಮಾಂಡದಲ್ಲಿ ಪೃಥಿವೀ, ಜಲ, ತೇಜಸ್ಸು, ವಾಯು, ಆಕಾಶ ಎಂಬ ಐದು ಭೂತಗಳು ಒಂದು ಭಾಗದಲ್ಲಿ ಇರುತ್ತವೆ. ಈ ಐದು ಭೂತಗಳಿಂದ ನಿರ್ಮಿತವಾದ ದೇಹವೇ ಪಾಂಚಭೌತಿಕದೇಹವೆಂದು ಪ್ರಸಿದ್ಧವಾಗಿದೆ. ಮೇಲೆ ಹೇಳಿದಂತಿರುವ ಹತ್ತು ಹೊದಿಕೆಗಳಿಂದ ಯುಕ್ತವಾಗಿರುವ ಅನಂತಕೋಟಿ ಬ್ರಹ್ಮಾಂಡಗಳನ್ನು ಒಟ್ಟುಗೂಡಿಸಿದರೂ ನಿನ್ನ ರೋಮದ ಒಂದು ರಂಧ್ರವನ್ನೂ ಮುಚ್ಚಲು ಸಾಧ್ಯವಾಗಲಾರದು. ಇಂತಹ ದೊಡ್ಡ ಶರೀರದಿಂದ ಯುಕ್ತನಾಗಿರುವ ನಿನ್ನ ದೇಹವನ್ನು ನಿರ್ಮಾಣಮಾಡುವುದಕ್ಕೆ ಯಾವುದೋ ಒಂದು ಬ್ರಹ್ಮಾಂಡದಲ್ಲಿ ಏಕದೇಶವಾಗಿರುವ ಪಂಚಭೂತಗಳಿಂದ ಸಾಧ್ಯವೇ? ಆದ್ದರಿಂದ ನಿನಗೆ ಪಾಂಚಭೌತಿಕಶರೀರವಿಲ್ಲವೆಂದು ತಿಳಿದಿರುವೆನು."

"ಓ ಎಲ್ಲಾ ಲೋಕಗಳಿಗೂ ನಾಥನಾದ ದೇವ!, ನಿನ್ನ ಭಕ್ತೆಯರಾದ ಗೋಪಿಕಾಸ್ತ್ರೀಯರಿಗೆ ನಾನಾವಿಧವಾದ ಆಪತ್ತುಗಳು ಬಂದವು. ಅವುಗಳನ್ನೆಲ್ಲಾ ಪರಿಹರಿಸಿ ಅವರೆಲ್ಲರನ್ನೂ ರಕ್ಷಿಸಿದಿ. ಇದರಿಂದ ತನ್ನ ಭಕ್ತರಿಗೆ ಸರ್ವರಿಗೂ ಬಂದಿರುವ ಎಲ್ಲಾ ವಿಪತ್ತುಗಳನ್ನೂ ಪರಿಹರಿಸುವೆ ಎಂದು ತಿಳಿಸಿದಿ. ನಾನು ನಿನ್ನ ಭಕ್ತರಲ್ಲಿ ಒಬ್ಬಳಾಗಿರುವೆನು. ಈಗ ತುಂಬಾ ದುರ್ದಶೆಯಲ್ಲಿರುವೆನು. ನೀನು ನನ್ನ ಈ ದುರ್ದಶೆಯನ್ನು ಪರಿಹರಿಸು, ದಯಾಸಮುದ್ರನೇ, ನಿನ್ನ ಪತ್ನಿಯಾಗಿ ಮಾಡಿಕೊಂಡು ನನ್ನನ್ನು ಉದ್ಧರಿಸು."

" ಓ ಪ್ರಭೋ!, ನನ್ನ ಬಂಧುಗಳಾಗಲೀ ನನ್ನ ತಂದೆಗೆ ಸ್ನೇಹಿತರಾದ ರಾಜರುಗಳಾಗಲಿ ಸಂಮತಿಸದಿದರುವುದರಿಂದ ನನ್ನನ್ನು ಕರೆದುಕೊಂಡು ಹೋಗುವ ವಿಷಯದಲ್ಲಿ ನಿನಗೆ ಸಂಕೋಚವಿರಬಹುದು. ಆದರೆ ಅನಾದಿಕಾಲದಿಂದಲೂ ನಾನು ನಿನ್ನ ಪತ್ನಿಯಲ್ಲವೇ? ಪತ್ನಿಯನ್ನು ಕರೆದುಕೊಂಡು ಹೋಗುವುದಕ್ಕಾಗಿ ನನ್ನ ತಂದೆಯಾದ ಭೀಷ್ಮಕರಾಜ, ನನ್ನ ಅಣ್ಣನಾದ ರುಕ್ಮಿ ಮತ್ತು ಇತರ ರಾಜರುಗಳ ಅನುಮತಿಯು ಬೇಕೇ? ಅವರು ಅನುಮತಿಸದಿದ್ದರೆ ಪತ್ನಿಯನ್ನು ಕರೆದುಕೊಂಡು ಹೋಗಬೇಡವೇ? ಅವರೆಲ್ಲರೂ ನಿನ್ನ ಪತ್ನಿಯನ್ನು ಅಯೋಗ್ಯನಾದ ಶಿಶುಪಾಲನಿಗೆ ಕೊಟ್ಟು ವಿವಾಹಮಾಡುತ್ತಿದ್ದರೆ ಇದನ್ನು ನೋಡುತ್ತಿರುವ ನೀನು ಸುಮ್ಮನಿರುವುದು ನ್ಯಾಯವೇ?"

" ಓ ಸರ್ವೇಶ್ವರನೇ!, ನಿನ್ನನ್ನು ಬಿಟ್ಟು ಉಳಿದಿರುವವರು ಯಾರೂ ನನ್ನನ್ನು ಅನುಭವಿಸಲು ಅನರ್ಹರು. ನಿನ್ನ ಎರಡು ಪಾದಗಳನ್ನು ಸೇವಿಸಲು ನಾನೊಬ್ಬಳೇ ಅರ್ಹಳಾಗಿರುವೆನು. ಆದ್ದರಿಂದ ನನ್ನನ್ನು ಕರೆದುಕೊಂಡು ಹೋಗು. ಹಾಗೆ ಮಾಡದಿದ್ದರೆ ಈ ರುಕ್ಮಿಣೀ ಎಂಬ ರೂಪವನ್ನು ಬಿಟ್ಟು ಇನ್ನೊಂದು ಜನ್ಮವನ್ನು ಪಡೆಯುವೆನು. ಮುಂದಿನ ಜನ್ಮದಲ್ಲಿ ನಿನ್ನ ಅನುಗ್ರಹಕ್ಕೆ ಪಾತ್ರಗಳಾಗುವೆನು. ಅದು ಮಾತ್ರವಲ್ಲ. ನನಗೂ ಇನ್ನೊಬ್ಬರಂತೆ ಜನ್ಮವಿಲ್ಲ. ಈ ರುಕ್ಮಿಣೀ ಎಂಬ ರೂಪವು ಅದೃಶ್ಯವಾಗುವಂತೆ ಮಾಡುವೆನು. ಶ್ರೀ ಎಂಬ ರೂಪದಿಂದ ನಿನ್ನ ವಕ್ಷಃಸ್ಥಳದಲ್ಲಿರುವ ಶ್ರೀವತ್ಸಚಿಹ್ನದಲ್ಲಿ ವಾಸಿಸುತ್ತಾ ನಿನ್ನ ಅಂಗಸಂಗವನ್ನು ಯಾವಾಗಲೂ ಅನುಭವಿಸುತ್ತಿರುವೆನು."

" ಓ ಪ್ರಾಣನಾಥ!, ನಿನ್ನನ್ನು ನಾನು ಆಶ್ರಯಿಸಿರುವವಳು, ಸೌಂದರ್ಯಸಮುದ್ರನಾದ ನಿನ್ನ ದರ್ಶನವನ್ನು ಕೊಡು. ಹಾಗೆ ಮಾಡದಿದ್ದರೆ ದಿಕ್ಕು ದಿಕ್ಕುಗಳಲ್ಲಿಯೂ ಸಂಚರಿಸುವೆನು. ಆಗ ನಿನ್ನನ್ನು ಒಂದು ಕ್ಷಣಕಾಲದ ವರೆಗೆ ನೋಡಿರುವ ಸ್ತ್ರೀಯರ ಭಾಗ್ಯವನ್ನಾಗಲಿ ನನಗೆ ಕೊಡು."

" ಓ ಮುಕುಂದನೇ!, ನೀನು ಲಕ್ಷ್ಮೀಪತಿಯೂ ಸ್ವತಂತ್ರನೂ ಆಗಿರುವ ನಾರಾಯಣನಾಗಿರುವಿ. ನಾನು ಲಕ್ಷ್ಮೀಯಾಗಿರುವೆನು. ನಿನ್ನ ಪತ್ನಿಯಾಗಿರುವ ನನ್ನನ್ನು ಸ್ವತಂತ್ರನಾಗಿರುವ ನಿನ್ನಿಂದ ಬಿಡಿಸಲು ಯಾರಿಂದಲೂ ಸಾಧ್ಯದಿಲ್ಲ. ಈ ವಿಷಯಕ್ಕಾಗಿ ನನ್ನ ಪ್ರಾರ್ಥನೆಯೂ ಅನಾವಶ್ಯಕ. ನನ್ನ ಪ್ರಾರ್ಥನೆಯನ್ನು ನಿಮಿತ್ತವಾಗಿಟ್ಟುಕೊಂಡು ಈ ಸಕಲ ಅಯೋಗ್ಯರ ಗರ್ವವನ್ನು ಮುರಿದು ನನ್ನನ್ನು ಕರೆದುಕೊಂಡು ಹೋಗು." ಇದು ರುಕ್ಮಿಣಿಯ ಪತ್ರದ ಸಾರಾಂಶ.

ಶ್ರೀಕೃಷ್ಣನು ಈ ಪತ್ರವನ್ನು ಓದಿದನು. ತುಂಬಾ ಸಂತುಷ್ಟನಾದನು. ರಹಸ್ಯವಾಗಿ ಪತ್ರವನ್ನು ತಂದುಕೊಟ್ಟಿರುವ ಬ್ರಾಹ್ಮಣಶ್ರೇಷ್ಠರನ್ನು ನೋಡಿದನು. ಅವಳು ನನ್ನನ್ನು ಸ್ಮರಿಸುತ್ತಿರುವಂತೆ ನಾನೂ ಅವಳನ್ನೇ ಸ್ಮರಿಸುತ್ತಿರುವೆನು. ಎಲ್ಲಾ ರಾಜರನ್ನೂ ನಿಗ್ರಹಿಸಿ ಅವಳನ್ನು ಕರೆದುಕೊಂಡು ಬರುವೆನೆಂದು ಪ್ರತಿಜ್ಞೆಯನ್ನು ಮಾಡಿದನು. ದಾರುಕ ಎಂಬ ಸಾರಥಿಯನ್ನು ಕರೆದನು. ರಥವನ್ನು ಸಿದ್ಧಪಡಿಸುವಂತೆ ಆಜ್ಞಾಪಿಸಿದನು. ಶೈಬ್ಯ, ಸುಗ್ರೀವ, ಮೇಘಪುಷ್ಪ, ಬಲಾಹಕ ಎಂಬ ನಾಲ್ಕು ಕುದುರೆಗಳಿಂದ ಯುಕ್ತವಾಗಿರುವ ರಥವನ್ನು ಸಿದ್ಧಪಡಿಸಿದನು. ಶ್ರೀಕೃಷ್ಣದೇವನು ರಥದಲ್ಲಿ ಕುಳಿತನು. ರುಕ್ಮಿಣಿಯ ಪತ್ರವನ್ನು ತಂದಿರುವ ಬ್ರಾಹ್ಮಣಶ್ರೇಷ್ಠನ ಕೈಯನ್ನು ಹಿಡಿದು, ತನ್ನ ರಥದಲ್ಲಿ ಹತ್ತಿಸಿಕೊಂಡನು. ಇದರಿಂದ ರುಕ್ಮಿಣೀದೇವಿಯ ಪತ್ರವನ್ನು ತಂದಿರುವ ಬ್ರಾಹ್ಮಣನ ಪಾಣಿಗ್ರಹಣವನ್ನು ಅಂದರೆ ಕೈಯ ಹಿಡಿಯುವಿಕೆಯನ್ನು ಮಾಡಿರುವ ತಾನು ರುಕ್ಮಿಣಿಯ ಪಾಣಿಗ್ರಹಣವನ್ನು ಖಂಡಿತವಾಗಿಯೂ ಮಾಡುವೆನೆಂದು ತಿಳಿಸಿದನು. ಮುಗುಳುನಗೆಯಿಂದ ನಗುತ್ತಾ ರಥವನ್ನು ಓಡಿಸುವಂತೆ ಆಜ್ಞಾಪಿಸಿದನು. ದ್ವಾರಕಾಪಟ್ಟಣದಿಂದ ಅತಿವೇಗದಿಂದ ರಥವು ಹೊರಟಿತು. ಒಂದು ದಿನದೊಳಗೆ ಕುಂಡಿನಪುರಕ್ಕೆ ಬಂತು.

# ರುಕ್ಮಿಣೀವಿವಾಹದ ಪೂರ್ವಾಂಗ ವ್ಯವಸ್ಥೆ

ಭೀಷ್ಮಕರಾಜನು ಶ್ರೀಕೃಷ್ಣದೇವನಿಗೆ ರುಕ್ಮಿಣಿಯನ್ನು ಕೊಟ್ಟು ವಿವಾಹ ಮಾಡುವುದಾಗಿ ಶ್ರೀಕೃಷ್ಣದೇವನ ಮುಂದೆ ಪ್ರತಿಜ್ಞೆಯನ್ನು ಮಾಡಿದ್ದು ನಿಜ. ಆದರೆ ರುಕ್ಮಿಯ ಭಯದಿಂದಲೋ ಸ್ನೇಹದಿಂದಲೋ ತನ್ನ ಪ್ರತಿಜ್ಞೆಯನ್ನು ಬಿಟ್ಟನು. ಶಿಶುಪಾಲನಿಗೆ ಕನ್ಯಾದಾನವನ್ನು ಮಾಡುವುದಾಗಿ ತೀರ್ಮಾನಿಸಿದನು. ಪಟ್ಟಣವನ್ನೆಲ್ಲಾ ಅಲಂಕರಿಸಿದನು. ಪಿತೃಗಳನ್ನೂ ದೇವತೆಗಳನ್ನೂ ಬ್ರಾಹ್ಮಣರನ್ನೂ ಪೂಜಿಸಿದನು. ಕನ್ಯೆಯನ್ನು ಅಲಂಕರಿಸಿದನು ಪುರೋಹಿತರು ಅಥರ್ವವೇದದಲ್ಲಿ ಹೇಳಿರುವ ಮಂತ್ರಗಳಿಂದ ಗ್ರಹಶಾಂತಿಗಳನ್ನು ಮಾಡಿಸಿದರು.

ಇದೇ ರೀತಿಯಲ್ಲಿ ದಮಘೋಷನೂ ಸಹ ತನ್ನ ಮಗನಾಗಿರುವ ಶಿಶುಪಾಲನ ವಿವಾಹಕ್ಕಾಗಿ ಮಾಡಬೇಕಾದ ಎಲ್ಲಾ ಕಾರ್ಯಗಳನ್ನೂ ಮಾಡಿಸಿದನು. ಮಹಾವೈಭವದಿಂದ ಕುಂಡಿನಪುರಕ್ಕೆ ಬಂದನು. ಭೀಷ್ಮಕಮಹಾರಾಜನು ದಮಘೋಷನನ್ನು ಮಹಾವೈಭವದಿಂದ ಸ್ವಾಗತಿಸಿದನು. ಪ್ರತ್ಯೇಕವಾದ ಮನೆಯಲ್ಲಿ ಅವನನ್ನು ಇಳಿಸಿದನು. ಜರಾಸಂಧ ಮುಂತಾದ ಶ್ರೀಕೃಷ್ಣದ್ವೇಷಿಗಳೆಲ್ಲರೂ ಬಂದರು. ಶ್ರೀಕೃಷ್ಣದೇವನು ಬರಬಹುದು. ರುಕ್ಮಿಣಿಯನ್ನು ಅಪಹರಿಸಿಕೊಂಡು ಹೋಗಬಹುದು ಎಂಬ ಭಯದಿಂದ ಸಕಲ ಸೈನ್ಯಗಳನ್ನೂ ಕರೆದುಕೊಂಡು ಎಲ್ಲಾ ರಾಜರುಗಳೂ ಬಂದರು. ಈ ವಿಷಯವನ್ನು ತಿಳಿದ ಬಲರಾಮನು ಶ್ರೀಕೃಷ್ಣದೇವನೊಬ್ಬನೇ ಕನ್ಯೆಯನ್ನು ಅಪಹರಿಸಿಕೊಂಡು ಬರುವುದಕ್ಕಾಗಿ ಹೋದದ್ದನ್ನು ತಿಳಿದು ಸಕಲ ಯಾದವ ಸೈನ್ಯಗಳಿಂದ ಸಹಿತನಾಗಿ ಬಂದನು.

# ರುಕ್ಮಿಣಿಯ ಚಿಂತೆ ಮತ್ತು ಅದರ ಪರಿಹಾರ

ವಿವಾಹಮುಹೂರ್ತಕ್ಕೆ ಒಂದು ರಾತ್ರಿ ಮಾತ್ರಉಳಿಯಿತು. ಶ್ರೀಕೃಷ್ಣದೇವನಿಗೆ ರಹಸ್ಯಪತ್ರವನ್ನು ತೆಗೆದುಕೊಂಡು ಹೋಗಿದ್ದ ಬ್ರಾಹ್ಮಣಶ್ರೇಷ್ಠರು ಇನ್ನೂ ಹಿಂದಿರುಗಿ ಬರಲಿಲ್ಲ. ನಮ್ಮ ತಂದೆಗೆ ವಿಶ್ವರೂಪವನ್ನು ತೋರಿಸಿ ಸ್ವಯಂವರ ಮಹೋತ್ಸವವನ್ನು ನಿಲ್ಲಿಸಿ ತನಗೇ ನನ್ನನ್ನು ಕೊಟ್ಟು ವಿವಾಹವನ್ನು ಮಾಡಬೇಕೆಂದು ಅವರಿಂದ ವಾಗ್ದಾನವನ್ನು ತೆಗೆದುಕೊಂಡಿರುವ ಶ್ರೀಕೃಷ್ಣದೇವನು ನನ್ನನ್ನು ಮದುವೆ ಮಾಡಿಕೊಳ್ಳುವುದಕ್ಕಾಗಿ ಮಹಾ ಪ್ರಯತ್ನವನ್ನು ಮಾಡಿರುವನು. ಅವರ ಪ್ರಯತ್ನವನ್ನು ತಿಳಿದು ನಾನು ಬ್ರಾಹ್ಮಣರ ಮೂಲಕವಾಗಿ ಪತ್ರವನ್ನೂ ಬರೆದು ಕಳುಹಿಸಿದೆನು. ಆದರೆ ಅವರು ಇನ್ನೂಬಂದಿಲ್ಲ. ನನ್ನಲ್ಲಿ ಏನಾದರೂ ಅಪರಾಧವು ಏರ್ಪಟ್ಟಿರಬಹುದೋ? ಯಾಕೆ ಅವರು ಇನ್ನೂ ಬರಲಿಲ್ಲ?" ಎಂದು ರುಕ್ಮಿಣೀದೇವಿಯು ಚಿಂತಿಸಲು ಆರಂಭಿಸಿದಳು.

ಅದೇ ಸಮಯದಲ್ಲಿ ರುಕ್ಮಿಣಿಯ ಎಡತೊಡೆ, ಎಡಗೈ, ಎಡಗಣ್ಣು ಈ ಮೂರು ಅವಯವಗಳು ಅದುರಿದವು. ಈ ಚಲನವು ಸ್ತ್ರೀಯರಿಗೆ ಶುಭವನ್ನು ಸೂಚಿಸುತ್ತದೆ. ರುಕ್ಮಿಣೀದೇವಿಯೂ ಈ ಚಲನದಿಂದ ತೃಪ್ತಿಯನ್ನು ಪಡೆದಳು. ಅಷ್ಟರಲ್ಲಿ ರಹಸ್ಯಸಂದೇಶವನ್ನು ತಿಳಿಸುವುದಕ್ಕಾಗಿ ಹೋಗಿದ್ದ ಅದೇ ಬ್ರಾಹ್ಮಣಶ್ರೇಷ್ಠರು ಹಿಂದಿರುಗಿ ಬಂದರು. ಅವರನ್ನು ರುಕ್ಮಿಣೀದೇವಿಯೂ ನೋಡಿದಳು. ಅವರ ಮುಖದಲ್ಲಿ ಸಂತೋಷದ ಕಳೆಯು, ನಡೆಯಲ್ಲಿ ಗಾಂಭೀರ್ಯವೂ ಇರುವುದನ್ನು ತಿಳಿದಳು. ಕಾರ್ಯವನ್ನು ಸಾಧಿಸಿಕೊಂಡು ಬಂದಿರುವುದಾಗಿ ಊಹಿಸಿದಳು. ಅವರನ್ನು ಪ್ರಶ್ನಿಸಿದಳು. ನಡೆದ ಎಲ್ಲಾ ವಿಷಯಗಳನ್ನೂ ತಿಳಿದಳು. ತನ್ನನ್ನು ಖಂಡಿತವಾಗಿಯೂ ಕರೆದುಕೊಂಡು

ಹೋಗುವುದಾಗಿ ಶ್ರೀಕೃಷ್ಣದೇವನು ಸತ್ಯಮಾಡಿರುವುದಾಗಿ ಹೇಳಿರುವ ಬ್ರಾಹ್ಮಣರ ಉಪಕಾರಕ್ಕೆ ಪ್ರತ್ಯುಪಕಾರವು ಯಾವುದೂ ತಿಳಿಯಲಿಲ್ಲ. ಕೊನೆಗೆ ಆ ಬ್ರಾಹ್ಮಣರಿಗೆ ಭಕ್ತಿಯಿಂದ ನಮಸ್ಕಾರವನ್ನು ಮಾಡಿದಳು.

## ಭೀಷ್ಮಕರಾಜ ಮತ್ತು ಪಟ್ಟಣಿಗರ ಮರ್ಯಾದೆ

ಭೀಷ್ಮಕಮಹಾರಾಜನು ಶ್ರೀಕೃಷ್ಣದೇವನೂ ಬಲರಾಮನೂ ಬಂದದ್ದನ್ನು ತಿಳಿದನು. ಮಹಾವೈಭವದಿಂದ ಅವರಿಬ್ಬರನ್ನೂ ಸ್ವಾಗತಿಸಿದನು. ಶ್ರೀಕೃಷ್ಣದೇವನು ದುಷ್ಟರಾದ ಜರಾಸಂಧ ಮುಂತಾದ ರಾಜರುಗಳು ತುಂಬಿರುವ ಕುಂಡಿನಪುರದ ಒಳಗೆ ಪ್ರವೇಶಿಸಲು ಇಷ್ಟಪಡಲಿಲ್ಲ. ಊರಿನ ಹೊರಗಿರುವ ಉದ್ಯಾನವನದಲ್ಲಿಯೇ ಇರುವುದಾಗಿ ಹೇಳಿದನು. ಭೀಷ್ಮಕ ರಾಜನು ಅಲ್ಲಿಯೇ ಶ್ರೀಕೃಷ್ಣದೇವನಿಗೂ ಬಲರಾಮನಿಗೂ ಅರ್ಘ್ಯ ಮುಂತಾದ ಯೋಗ್ಯವಾದ ಎಲ್ಲಾ ಸತ್ಕಾರಗಳನ್ನೂ ಮಾಡಿದನು.

ಇಷ್ಟರಲ್ಲಿ ಊರನಲ್ಲಿರುವ ಸರ್ವರಿಗೂ ಶ್ರೀಕೃಷ್ಣದೇವನು ಬಂದಿರುವ ಸಮಾಚಾರವು ತಿಳಿಯಿತು. ಬೇರೆ ರಾಜರುಗಳು ಬಂದಿರುವಾಗ ಭೀಷ್ಮಕರಾಜನನ್ನು ಬಿಟ್ಟು ಉಳಿದವರು ಯಾರೂ ಆ ರಾಜರುಗಳನ್ನು ಎದುರುಗೊಳ್ಳುವುದಕ್ಕಾಗಿ ಬಂದಿರಲಿಲ್ಲ. ಶ್ರೀಕೃಷ್ಣದೇವನು ಬಂದಿರುವಾಗ ಮಾತ್ರ ಸರ್ವರೂ ಶ್ರೀಕೃಷ್ಣದೇವನನ್ನು ಸ್ವಾಗತಿಸುವುದಕ್ಕಾಗಿ ಬಂದರು. ಇದರಿಂದ ಪಟ್ಟಣವು ಖಾಲಿಯಾಯಿತು. ಉದ್ಯಾನವನವೇ ಪಟ್ಟಣವಾಯಿತು.

ಬಂದವರೆಲ್ಲರೂ ಫಲಗಳು ಕಾಣಿಕೆಗಳು ಪೀತಾಂಬರಗಳು ಮುಂತಾದ ಅಸಂಖ್ಯ ವಸ್ತುಗಳನ್ನು ಶ್ರೀಕೃಷ್ಣದೇವನಿಗೆ ಸಮರ್ಪಿಸಿದರು. ಬೇರೆ ಯಾರಿಗೂ ಕಾಣಿಕೆಗಳನ್ನು ಸಮರ್ಪಿಸಲಿಲ್ಲ. ಆದ್ದರಿಂದ ಆ ರಾಜರುಗಳೆಲ್ಲರೂ ಮರ್ಯಾದೆಗೆ ಅರ್ಹರಲ್ಲವೆಂದೂ ಶ್ರೀಕೃಷ್ಣದೇವನೊಬ್ಬನೇ ಮರ್ಯಾದೆಗೆ ಅರ್ಹನೆಂದೂ ಸ್ಪಷ್ಟವಾಗಿ ತಿಳಿಸಿದರು.

ಅಲ್ಲಿ ಸೇರಿರುವ ಸಕಲ ಜನರೂ ಆಶ್ಚರ್ಯದಿಂದ ಹೊಗಳಲು ಆರಂಭಿಸಿದರು. " ಶ್ರೀಕೃಷ್ಣದೇವನು ಮನ್ಮಥನಂತೆ ಸುಂದರನಾಗಿರುವನು. ಆದರೆ ಮನ್ಮಥನಿಗೆ ಶರೀರವಿಲ್ಲ. ಇವನು ನೀಲವರ್ಣದಿಂದ ಯುಕ್ತವಾಗಿರುವ ಕೋಮಲವಾದ ಶರೀರವುಳ್ಳವನು. ಚಂದ್ರನಂತೆ ಸರ್ವರಿಗೂ ಸಂತೋಷವನ್ನು ಕೊಡುತ್ತಿರುವನು. ಆದರೆ ಚಂದ್ರನಲ್ಲಿ ಮೊಲದ ಆಕಾರ ಎಂಬ ಕಳಂಕವಿದೆ. ಇವನಲ್ಲಿ ದೋಷ ಮುಂತಾದ ಯಾವ ಕಳಂಕವೂ ಇಲ್ಲ. ಸೂರ್ಯನಂತೆ ಪ್ರಕಾಶಿಸುತ್ತಿರುವನು. ಆದರೆ ಸೂರ್ಯನು ತನ್ನನ್ನು ನೋಡುತ್ತಿರುವವರ ಕಣ್ಣುಗಳಿಗೆ ವ್ಯಥೆಯನ್ನು ಕೊಡುತ್ತಿರುವನು. ಇವನನ್ನು ನೋಡುತ್ತಿರುವವರಿಗೆ ಕಣ್ಣುಗಳಲ್ಲಿರುವ ಎಲ್ಲಾ ಬಾಧೆಯೂ ಹೋಗುತ್ತಿದೆ. ಆದ್ದರಿಂದ ಇವನಿಗೆ ಸಮಾನನು ಮನ್ಮಥನೂ ಅಲ್ಲ ಚಂದ್ರನೂ ಅಲ್ಲ. ಸೂರ್ಯನೂ ಅಲ್ಲ. ಯಾರೂ ಅಲ್ಲ.

" ಪರಮಸುಂದರಿಯಾದ ರುಕ್ಮಿಣಿಯು ಲಕ್ಷ್ಮೀದೇವಿಯೇ ಆಗಿರುವಳು. ಇಲ್ಲದಿದ್ದರೆ ಇಂತಹ ಸೌಂದರ್ಯವು ಅವಳಲ್ಲಿರಲು ಸಾಧ್ಯವಿಲ್ಲ. ಈ ಶ್ರೀಕೃಷ್ಣದೇವನು ಲಕ್ಷ್ಮೀಪತಿಯಾದ ನಾರಾಯಣನೇ ಆಗಿರುವನು. ಇಲ್ಲದಿದ್ದರೆ ಇಂತಹ ಮಾಹಾತ್ಮ್ಯವು ಅವನಲ್ಲಿರಲು ಸಾಧ್ಯವಿಲ್ಲ. ನಾವು ಮಾಡಿರುವ ಪುಣ್ಯಕ್ಕಾಗಿ ಬ್ರಹ್ಮದೇವನು ವರವನ್ನು ಕೊಡುವುದಾಗಿದ್ದರೆ ರುಕ್ಮಿಣಿಯನ್ನು ಶ್ರೀಕೃಷ್ಣದೇವನು ವಿವಾಹಮಾಡಿಕೊಳ್ಳಲಿ."

"ನಮ್ಮೆಲ್ಲರ ಪುಣ್ಯದಿಂದ ಪುರುಷಶ್ರೇಷ್ಠನೂ ನೀಲಮಣಿಯಂತಿರುವವನೂ ಆಗಿರುವ ಶ್ರೀಕೃಷ್ಣದೇವನು ಬಂಗಾರದ ಬಣ್ಣದಿಂದ ಯುಕ್ತಳಾಗಿರುವ ರುಕ್ಮಿಣಿಯ ಪಾಣಿಗ್ರಹಣವನ್ನು ಮಾಡಿಕೊಂಡರೆ ಬಂಗಾರದ ಸರದ ಮಧ್ಯದಲ್ಲಿ ಇಂದ್ರನೀಲ ಮಣಿಯ ಪದಕವು ಸೇರಿದಂತೆ ಭೂಷಣವಾಗುತ್ತದೆ. ಕಬ್ಬಿಣದಂತಿರುವ ಶಿಶುಪಾಲ ಮುಂತಾದವರು ಪಾಣಿಗ್ರಹಣವನ್ನು ಮಾಡಿಕೊಂಡರೆ ಬಂಗಾರದ ಸರದಲ್ಲಿ ಕಬ್ಬಿಣದ ಗುಂಡು ಸೇರಿದಂತಾಗುತ್ತದೆ." ಹೀಗೆ ಹೇಳುತ್ತಾ ಸರ್ವರೂ ಶ್ರೀಕೃಷ್ಣದೇವನನ್ನು ಕಣ್ಣುಗಳಿಂದಲೇ ಕುಡಿಯುತ್ತಿರುವಂತೆ ಎವೆಯಿಕ್ಕದೆ ಯಾವಾಗಲೂ ನೋಡುತ್ತಿದ್ದರು. ಶ್ರೀಕೃಷ್ಣದೇವನು ಅವರೆಲ್ಲರನ್ನೂ ದಯಾರಸಭರಿತವಾಗಿರುವ ಕಣ್ಣುಗಳಿಂದ ನೋಡುತ್ತಾ ಮುಗುಳು ನಗೆಯಿಂದ ಸಂತೋಷಪಡಿಸಿದನು.

# ಕುಲದೇವ ಯಾತ್ರೆ

ವಿವಾಹಕ್ಕಿಂತ ಪೂರ್ವದಿನದಲ್ಲಿ ಭೀಷ್ಮಕಮಹಾರಾಜನ ಕುಲದೇವನಾಗಿರುವ ರುದ್ರದೇವನ ದೇವಾಲಯಕ್ಕೆ ಕನ್ಯೆಯು ಹೋಗಿ ಅವನನ್ನು ಪೂಜಿಸಿಕೊಂಡು ಬರಬೇಕು. ಇದು ಪರಂಪರಾಪ್ರಾಪ್ತವಾದ ಸಂಪ್ರದಾಯ. ಈ ಸಂಪ್ರದಾಯದಂತೆ ರುಕ್ಮಿಣಿಯೂ ವಾದ್ಯಘೋಷದಿಂದ ಸಹಿತಳಾಗಿ ತನ್ನ ಮೊಮ್ಮಗನಾಗಿರುವ ರುದ್ರದೇವನ ಮಂದಿರಕ್ಕೆ ಹೋದಳು. ಸುಮಂಗಲೀ ಸ್ತ್ರೀಯರು ಅವಳಿಂದ ಪಾರ್ವತೀಪರಮೇಶ್ವರರ ಪೂಜೆಯನ್ನು ಮಾಡಿಸಿದರು. ಪೂಜೆಯು ಮುಗಿಯಿತು. ಅನಂತರದಲ್ಲಿ ಸುಮಂಗಲಿಯರನ್ನೂ ಅರಿಶಿನ, ಕುಂಕುಮ, ಮೊರದ ಬಾಗಿನ ಮುಂತಾದವುಗಳಿಂದ ಪೂಜಿಸಿದಳು.

ರುದ್ರದೇವನ ಮಂದಿರಕ್ಕೆ ಹೋಗುವಾಗ ಸಂಪ್ರದಾಯದಂತೆ ನಡೆದುಕೊಂಡೇ ಹೋಗಿದ್ದಳು. ಹಿಂದಿರುಗಿ ಬರುವಾಗ ಆನೆಯ ಮೇಲೆ ಕುಳಿತುಕೊಂಡು ಬರಬೇಕಾಗಿತ್ತು. ರುಕ್ಮಿಣಿಯು ಆಲೋಚಿಸಿದಳು. "ನನ್ನ ತಂದೆಯ ಮನೆಯ ಕುಲದೇವತೆಯಾದ ನನ್ನ ಮೊಮ್ಮಗನಾಗಿರುವ ರುದ್ರನ ಮಂದಿರಕ್ಕೆ ಹೋಗುವಾಗ ನಡೆದುಕೊಂಡು ಹೋಗಿರುವೆನು. ಈಗ ನನ್ನ ಮನೆಯ ದೇವನಾಗಿರುವ ಶ್ರೀಕೃಷ್ಣದೇವನನ್ನು ನೋಡುವುದಕ್ಕಾಗಿ ಹೋಗುತ್ತಿರುವೆನು. ಈ ಸಂದರ್ಭದಲ್ಲಿ ನಾನು ಅವಶ್ಯವಾಗಿ ನಡೆದುಕೊಂಡೇ ಹೋಗಬೇಕು. ವಾಹನದಲ್ಲಿ ಏರಿಕೊಂಡು ಹೋಗಕೂಡದು" ಎಂದು ತೀರ್ಮಾನಿಸಿದಳು. ಆನೆಯು ಬೇಡವೆಂದು ಹೇಳಿದಳು. ನಡೆದುಕೊಂಡೇ ಬಂದಳು. ತನಗಿಂತ ಚಿಕ್ಕವನಾಗಿರುವವನ ಮನೆಗೆ ಯಾವುದೋ ಒಂದು ಕಾರಣದಿಂದ ನಡೆದುಕೊಂಡು ಹೋದವಳು ತನ್ನಿಂದ ಮಾನ್ಯನಾದವನ ಮನೆಗೆ ಹೋಗುವಾಗ ನಡೆದುಕೊಂಡು ಹೋಗುವುದು ಧರ್ಮವಲ್ಲವೇ?

# ರುಕ್ಮಿಣೀ ಕೃಷ್ಣ ಸಂದರ್ಶನ

ರುಕ್ಮಿಣೀದೇವಿಯು ಹಿಂದಿರುಗಿ ಬರುತ್ತಿರುವಾಗ ಅಪಾರವಾದ ಸೌಂದರ್ಯನ್ನು ವ್ಯಕ್ತಪಡಿಸಿದಳು. ಅವಳನ್ನು ನೋಡಿದ ಸರ್ವರೂ ಮನ್ಮಥಪರವಶರಾದರು. ತಮ್ಮ ತಮ್ಮ ವಾಹನಗಳಿಂದ ಎಚ್ಚರವಿಲ್ಲದಂತೆ ಕೆಳಗೆ ಬಿದ್ದರು. ರುಕ್ಮಿಣಿಯ ಮಗನಾಗಿರುವ ಮನ್ಮಥನೇ "ತನ್ನ ತಾಯಿಯನ್ನು ತಂದೆಯಾದ ಶ್ರೀಕೃಷ್ಣದೇವನು ಕರೆದುಕೊಂಡು ಹೋಗಲಿ" ಎಂದು ಸಂಕಲ್ಪಿಸಿ ಎಲ್ಲಾ ರಾಜರುಗಳೂ ಮೂರ್ಛಿತರಾಗುವಂತೆ ಮಾಡಿದನೆಂದು ಹೇಳಬಹುದು. ರುಕ್ಮಿಣಿಯು ಶ್ರೀಕೃಷ್ಣದೇವನನ್ನು ಸಮೀಪಿಸಿದಳು. ತಲೆಯನ್ನು ಎತ್ತಿದಳು. ಶ್ರೀಕೃಷ್ಣದೇವನನ್ನು

ನೋಡಿದಳು. ಶ್ರೀಕೃಷ್ಣದೇವನೂ ತನ್ನ ಕೈಯಿಂದ ರುಕ್ಮಿಣೀದೇವಿಯ ಕೈಯನ್ನು ಹಿಡಿದನು. ರಥದಲ್ಲಿ ಏರಿಸಿದನು. ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡನು.

ಅಷ್ಟರಲ್ಲಿ ಎಲ್ಲಾ ರಾಜರುಗಳೂ ಎಚ್ಚತ್ತುಕೊಂಡರು. ನರಿಗಳ ಮಧ್ಯದಲ್ಲಿ ಸಿಂಹಿಣಿಯನ್ನು ಕರೆದುಕೊಂಡು ಹೋಗುತ್ತಿರುವ ಸಿಂಹದಂತಿರುವ ಶ್ರೀಕೃಷ್ಣದೇವನನ್ನು ನೋಡಿದರು. ಕತ್ತಲೆಗಳೆಲ್ಲವೂ ತಮಗೆ ಪರಮಶತ್ರುವಾಗಿರುವ ಸೂರ್ಯನನ್ನು ಸುತ್ತಿಕೊಂಡಂತೆ ತಮ್ಮ ತಮ್ಮ ಸೈನ್ಯಗಳಿಂದ ಸಹಿತರಾಗಿ ಶ್ರೀಕೃಷ್ಣದೇವನನ್ನು ಸುತ್ತಿಕೊಂಡರು.

ಬಲರಾಮನು ಯಾದವಸೈನ್ಯದಿಂದ ಸಹಿತನಾಗಿ ಅವರೊಡನೆ ಯುದ್ಧಮಾಡಿದನು. ಶ್ರೀಕೃಷ್ಣದೇವನು ಇವರೆಲ್ಲರನ್ನೂ ಅಲಕ್ಷ್ಮ ಮಾಡಿ ರುಕ್ಮಿಣೀಸಹಿತನಾಗಿ ಮೆಲ್ಲನೆ ಮುಂದೆ ನಡೆದನು. ಕೆಲವು ರಾಜರುಗಳು ಯಾದವರ ಪೆಟ್ಟುಗಳನ್ನು ಸಹಿಸಲಾರದೆ ಶರಣಾಗತರಾದರು. ಮತ್ತೆ ಕೆಲವರು ಕೊನೆಯ ವರೆಗೂ ಯುದ್ಧವನ್ನು ಮಾಡಿ ದೇಹವನ್ನು ತ್ಯಜಿಸಿದರು. ಮತ್ತೆ ಕೆಲವರು ಓಡಿಹೋದರು. ಜರಾಸಂಧನೇ ಮೊದಲಾದ ರಾಜರುಗಳು ಶಿಶುಪಾಲನನ್ನು ನೋಡಿದರು.

" ಈಗ ನಮಗೆ ಕಾಲವು ಅನುಕೂಲವಾಗಿಲ್ಲ. ಆದ್ದರಿಂದ ಸೋತೆವು. ಕಾಲವು ಅನುಕೂಲವಾದಾಗ ಪುನಃ ಜಯಿಸೋಣ. ನೀನು ದುಃಖಿಸಬೇಡ. ನಾನು ಹದಿನೇಳು ಸಲದ ಯುದ್ಧದಲ್ಲಿ ಸೋತೆನು. ಹದಿನೆಂಟನೆಯ ಯುದ್ಧದಲ್ಲಿ ಜಯಿಸಿದೆನು. ಸೋತದ್ದಕ್ಕಾಗಿ ದುಃಖಿಸಲಿಲ್ಲ. ಜಯಿಸಿದ್ದಕ್ಕಾಗಿ ಸಂತೋಷಿಸಲಿಲ್ಲ. ಜಯವೂ ಪರಾಜಯವೂ ಈಶ್ವರನ ಅಧೀನವೇ ಹೊರತು ನಮ್ಮ ಅಧೀನವಲ್ಲ ಎಂದು ಸಮಾಧಾನವನ್ನು ಮಾಡಿಕೊಳ್ಳಲಿಲ್ಲವೇ? ಅದರಂತೆ ನೀನೂ ಸಮಾಧಾನವನ್ನು ಮಾಡಿಕೊ" ಎಂದು ಬುದ್ಧಿವಾದವನ್ನು ಹೇಳಿದನು. ಹೆಂಡತಿಯನ್ನು ಕಳೆದುಕೊಂಡವನಂತೆ ದುಃಖಿತನಾಗಿದ್ದ ಶಿಶುಪಾಲನು ಸಮಾಧಾನವನ್ನು ಪಡೆದು. ಹಿಂದಿರುಗಿ ಊರಿಗೆ ಹೋದನು.

# ರುಕ್ಮಿಯ ಆಕ್ರೋಶ

ರುಕ್ಮಿಣಿಯ ಅಣ್ಣನಾದ ರುಕ್ಮಿಗೆ ತುಂಬಾ ಕೋಪವು ಬಂತು. " ದುರ್ಬುದ್ಧಿ ಯುಳ್ಳ ಕೃಷ್ಣನೆಂಬ ಗೊಲ್ಲನು ನನ್ನ ತಂಗಿಯನ್ನು ಸಾವಿರಾರು ರಾಜರುಗಳನ್ನು ಹೊಡೆದಟ್ಟಿ ರಾಕ್ಷಸವಿಧಿಯಿಂದ ಸೆಳೆದುಕೊಂಡು ಹೋಗಿರುವನು. ಇದು ನಮ್ಮೆಲ್ಲರಿಗೂ ತುಂಬಾ ಅಪಮಾನಕರವಾದದ್ದು. ಕೃಷ್ಣನ ವೀರ್ಯಮದವನ್ನು ಅಡಗಿಸುವೆನು. ಕೃಷ್ಣನನ್ನು ಕೊಂದು ರುಕ್ಮಿಣಿಯನ್ನು ಹಿಂದಿರುಗಿಸಿಕೊಂಡು ಬರುತ್ತೇನೆ. ಹಾಗೆ ಮಾಡದಿದ್ದರೆ ಕುಂಡಿನಪುರದೊಳಗೆ ಪುನಃ ಪ್ರವೇಶಿಸಲಾರೆನು." ಎಂದು ಪ್ರತಿಜ್ಞೆಯನ್ನು ಮಾಡಿದನು. ಶ್ರೀಕೃಷ್ಣದೇವನನ್ನು ಬೆನ್ನಟ್ಟಿಕೊಂಡು ಹೋದನು. ಪರಮಾತ್ಮನ ಸಾಮರ್ಥ್ಯವು ಅಲ್ಪನಾದ ರುಕ್ಮಿಗೆ ಹೇಗೆ ತಿಳಿಯುತ್ತದೆ? ಒಂದು ಅಕ್ಷೌಹಿಣೀಸೈನ್ಯದಿಂದ ಯುಕ್ತನಾಗಿ ತನ್ನ ರಥದಲ್ಲಿ ಕುಳಿತವನಾಗಿ ಧನುಸ್ಸಿನಿಂದಲೂ ಬಾಣಗಳಿಂದಲೂ ಸಹಿತನಾಗಿ ಅನಂತಶಕ್ತಿಯಿಂದ ಯುಕ್ತನಾಗಿರುವ ಶ್ರೀಕೃಷ್ಣದೇವನನ್ನು ಸಂಹರಿಸುವುದಾಗಿ ಸಂಕಲ್ಪಿಸಿ ಬಂದನು.

" ಎಲೋ ಕೃಷ್ಣಾ, ನನ್ನ ತಂಗಿಯನ್ನು ಬಿಟ್ಟುಬಿಡು. ಇಲ್ಲದಿದ್ದರೆ ನನ್ನ ಒಂದು ಬಾಣದಿಂದ ನಿನ್ನನ್ನು ಕೊಲ್ಲುವೆನು." ಎಂದು ಗರ್ಜಿಸಿದನು. ಈ ಮಾತನ್ನು ಕೇಳಿದ ಶ್ರೀಕೃಷ್ಣದೇವನು ಅವನ ಧನುಸ್ಸನ್ನು ಕತ್ತರಿಸಿ ಅವನನ್ನು

ಆರು ಬಾಣಗಳಿಂದ ಹೊಡೆದನು. ರುಕ್ಮಿಯು ಯಾವ ಯಾವ ಆಯುಧವನ್ನು ಶ್ರೀಕೃಷ್ಣದೇವನಿಗೆ ಹೊಡೆಯಬೇಕೆಂದು ಸ್ವೀಕರಿಸಿದನೋ ಆ ಎಲ್ಲಾ ಆಯುಧಗಳನ್ನೂ ಅವನು ಸ್ವೀಕರಿಸಿದ ಎಲ್ಲಾ ಧನುಸ್ಸುಗಳನ್ನೂ ಶ್ರೀಕೃಷ್ಣದೇವನು ಕತ್ತರಿಸಿದನು. ರುಕ್ಮಿಯು ರಥದಿಂದ ಕೆಳಗೆ ಧುಮುಕಿ ಖಡ್ಗವನ್ನು ತೆಗೆದುಕೊಂಡನು. ಶ್ರೀಕೃಷ್ಣದೇವನು ಅವನ ಖಡ್ಗವನ್ನು ಎಳ್ಳಿನ ಪುಡಿಯಂತೆ ಪುಡಿ ಪುಡಿಯಾಗುವಂತೆ ಮಾಡಿದನು.

## ರುಕ್ಮಿಯ ಮಾನಭಂಗ

ಅವನನ್ನು ಕೊಲ್ಲುವುದಕ್ಕಾಗಿ ಖಡ್ಗವನ್ನು ತೆಗೆದುಕೊಂಡು ಹೊರಟನು. ಇದನ್ನು ರುಕ್ಮಿಣಿಯು ನೋಡಿದಳು. ಹೆದರಿದಳು. ಪತಿಯ ಪಾದಗಳ ಮೇಲೆ ಬಿದ್ದು, ಓ ದೇವದೇವ, ನನ್ನ ಅಣ್ಣನನ್ನು ಕೊಲ್ಲಬಾರದು ಎಂದು ಪ್ರಾರ್ಥಿಸಿದಳು. ಭಯದಿಂದ ನಡುಗುತ್ತಿರುವವಳೂ ದುಃಖದಿಂದ ಬಾಡಿದ ಮುಖ ಮತ್ತು ಒಣಗಿದ ಕಂಠಗಳಿಂದ ಯುಕ್ತಳೂ ಆಗಿರುವ ರುಕ್ಮಿಣಿಯನ್ನು ನೋಡಿದ ಶ್ರೀಕೃಷ್ಣದೇವನು ಹಿಂದಿರುಗಿದನು. ಕೊಲ್ಲಲಿಲ್ಲ. ಆದರೂ ಅವನ ಅಹಂಕಾರವನ್ನು ಅಡಗಿಸಬೇಕೆಂದು ತೀರ್ಮಾನಿಸಿದನು. ಅವನ ಕೈಗಳನ್ನೂ ಕಾಲುಗಳನ್ನೂ ಬಟ್ಟೆಯಿಂದ ಬಿಗಿದನು. ಅವನ ತಲೆಕೂದಲನ್ನೂ ಮೀಸೆಯನ್ನು ಕತ್ತರಿಸಿ ವಿಕಾರವು ಏರ್ಪಡುವಂತೆ ಮಾಡಿದನು. ಹಣವನ್ನು ಕಳೆದುಕೊಂಡವನಿಗೆ ಕ್ಷೌರವಾಯಿತು ಎಂದು ಹೇಳುವುದು ಲೋಕರೂಢಿಯಾಗಿದೆ. ರುಕ್ಮಿಯ ಮನೆಯಿಂದ ಸಕಲ ಸಂಪತ್ತುಗಳಿಗೆ ಅಭಿಮಾನಿನಿಯಾಗಿರುವ ಲಕ್ಷ್ಮೀದೇವಿಯು ಹೋಗುತ್ತಿರುವಾಗ ಅವನಿಗೆ ಕ್ಷೌರವನ್ನು ಮಾಡಿದ್ದು ಯುಕ್ತವೇ ಆಗಿದೆ.

## ಬಲರಾಮನ ಉಪದೇಶ

ಅಷ್ಟರಲ್ಲಿ ಎಲ್ಲಾ ರಾಜರುಗಳನ್ನೂ ಜಯಿಸಿ ಬಲರಾಮನು ಯಾದವಸೈನ್ಯಸಹಿತನಾಗಿ ಅಲ್ಲಿಗೆ ಬಂದನು. ಹೆಣದಂತೆ ಬಿದ್ದಿರುವ ರುಕ್ಮಿಯನ್ನು ನೋಡಿದನು. ಕರುಣೆಯಿಂದ ಅವನ ಕೈಗಳನ್ನೂ ಕಾಲುಗಳನ್ನೂ ಕಟ್ಟಿನಿಂದ ಬಿಡಿಸಿದನು. "ಕೃಷ್ಣಾ, ರುಕ್ಮಿಣಿಯ ಅಣ್ಣನಾದ ರುಕ್ಮಿಗೆ ತುಂಬಾ ಅಪಮಾನ ಮಾಡಿದಿ. ಅವನನ್ನು ಕೊಂದಂತಾಯಿತು. ಹೀಗೆ ಮಾಡಬಾರದಿತ್ತು." ಎಂದು ಹೇಳಿ ರುಕ್ಮಿಣಿಯನ್ನು ನೋಡಿದನು. "ರುಕ್ಮಿಣಿಯೇ, ನಿನ್ನ ಅಣ್ಣನಿಗೆ, ಕ್ಷೌರವನ್ನು ಮಾಡಿ ನನ್ನ ತಮ್ಮನು ತುಂಬಾ ಅಪಮಾನ ಮಾಡಿರುವನು. ಅದಕ್ಕಾಗಿ ಅವನ ಮೇಲೆ ಕೋಪಿಸಬೇಡ. ಕೊಲ್ಲಲೇ ಬೇಕಾದ ಅಪರಾಧವನ್ನು ಮಾಡಿದ್ದರೂ ಬಂಧುವನ್ನು ಕೊಲ್ಲಕೂಡದು. ಅವನನ್ನು ಹಾಗೆಯೇ ಬಿಟ್ಟು ಬಿಡಬೇಕು. ಅವನು ಮಾಡಿರುವ ಅಪರಾಧವೇ ಅವನಿಗೆ ಮರಣದಂಡನೆಗೆ ಸಮವೆನಿಸುತ್ತದೆ. ಸತ್ತವನನ್ನು ಪುನಃ ಕೊಲ್ಲುವುದು ಯೋಗ್ಯವಾಗುತ್ತದೆಯೇ? ಕೃಷ್ಣನನ್ನೂ ನಾವು ದೂಷಿಸಿ ಪ್ರಯೋಜನವಿಲ್ಲ. ಸುಖವನ್ನೂ ದುಃಖವನ್ನೂ ಕೊಡುವವನು ಶ್ರೀಹರಿಯೇ ಹೊರತು ಬೇರೆ ಯಾರೂ ಅಲ್ಲ. ಆದ್ದರಿಂದ ನಿನ್ನ ಅಣ್ಣನಿಗೆ ಇಷ್ಟು ಅಪಮಾನವು ಏರ್ಪಡುವುದಕ್ಕೂ ತಾನು ಮಾಡಿದ ಕರ್ಮವೇ ಕಾರಣ ಶ್ರೀಕೃಷ್ಣನಲ್ಲ. ಕ್ಷತ್ರಿಯರಲ್ಲಿ ತನ್ನ ಅಣ್ಣತಮ್ಮಂದಿರನ್ನೂ ಸಂಹರಿಸುವುದುಂಟು. ಇಷ್ಟು ಘೋರವಾದ ಧರ್ಮದಿಂದ ಅಪಮಾನ ಮಾಡಿರುವನು. ನೀನು ಕ್ಷತ್ರಿಯ ಧರ್ಮದ ಮರ್ಮವನ್ನು ತಿಳಿದು ಶಾಂತಳಾಗು." ಎಂದು ಉಪದೇಶಿಸಿದನು. ಈ ಉಪದೇಶವನ್ನು ಕೇಳಿದ ರುಕ್ಮಿಣಿಯು ಶಾಂತಳಾದಳು.

ರುಕ್ಮಿಯು ಅಲ್ಲಿಂದ ಹೊರಟನು. ತಾನು ಪ್ರತಿಜ್ಞೆ ಮಾಡಿದಂತೆ ಶ್ರೀಕೃಷ್ಣದೇವನನ್ನೂ ಸಂಹರಿಸಲಿಲ್ಲ. ರುಕ್ಮಿಣಿಯನ್ನೂ ಹಿಂದಿರುಗಿ ಕರೆದುಕೊಂಡು ಬರಲೂ ಇಲ್ಲ. ಆದ್ದರಿಂದ ಕುಂಡಿನಪುರದೊಳಗೆ ಪ್ರವೇಶಿಸಲಿಲ್ಲ. ಭೋಜಕಟ ಎಂಬ ನಗರವನ್ನು ಹೊಸದಾಗಿ ಸೃಷ್ಟಿಸಿದನು. ಅಲ್ಲಿಯೇ ವಾಸಿಸಿದನು. ಅವನು ಶ್ರೀಕೃಷ್ಣದೇವನೊಡನೆ ಯುದ್ಧವನ್ನು ಮಾಡುತ್ತಿರುವಾಗ ಅವನು ಸ್ವೀಕರಿಸಿದ ಒಂದೊಂದು ಧನುಸ್ಸುಗಳನ್ನೂ ಶ್ರೀಕಷ್ಣದೇವನು ಕತ್ತರಿಸಿದನು. ಅದನ್ನು ನೋಡಿದ ರುಕ್ಮಿಯು ಅಚ್ಛೇದ್ಯಾಭೇದ್ಯವಾದ ಧನುಸ್ಸನ್ನು ಸಂಪಾದಿಸಬೇಕೆಂದೂ ಆ ಧನುಸ್ಸನ್ನು ಸ್ವೀಕರಿಸಿಕೊಂಡು ಶ್ರೀಕೃಷ್ಣ ನೊಡನೆ ಯುದ್ಧಕ್ಕೆ ಬರಬೇಕೆಂದೂ ಆ ಧನುಸ್ಸಿನ ಸಹಾಯದಿಂದ ಶ್ರೀಕೃಷ್ಣನನ್ನು ಸಂಹರಿಸಬೇಕೆಂದೂ ತೀರ್ಮಾನಿಸಿ ರುದ್ರದೇವನನ್ನು ಕುರಿತು ತಪಸ್ಸನ್ನು ಮಾಡಿದನು. ರುದ್ರದೇವನು ಪ್ರತ್ಯಕ್ಷನಾದನು. ಅಚ್ಛೇಧ್ಯಾಭೇದ್ಯವಾದ ಧನುಸ್ಸನ್ನು ಬೇಡಿದನು. ಆದರೆ ಶ್ರೀಕಷ್ಣದೇವನಲ್ಲಿ ವಿರೋಧವನ್ನು ಮಾಡಕೂಡದು. ಹಾಗೆ ಮಾಡಿದರೆ ಈ ಧನುಸ್ಸು ನಿನ್ನನ್ನು ಬಿಟ್ಟು ನನ್ನಲ್ಲಿಗೆ ಹಿಂದಿರುಗಿ ಬರುತ್ತದೆ ಎಂದು ಹೇಳಿದನು. ಆ ಧನುಸ್ಸಿನ ಸಹಾಯದಿಂದ ಪ್ರಪಂಚದಲ್ಲಿರುವ ಸರ್ವರಾಜರನ್ನೂ ಗೆದ್ದನು. ಆ ಧನುಸ್ಸಿನಲ್ಲಿರುವ ಆಸೆಯಿಂದ ಶ್ರೀಕೃಷ್ಣನೊಡನೆ ಯುದ್ಧಕ್ಕೆ ಬರಲಿಲ್ಲ.

# ಕ್ರಮವಾದ ವಿವಾಹ

ಶ್ರೀಕೃಷ್ಣದೇವನು ರುಕ್ಮಿಯ ಮಾನಭಂಗವನ್ನು ಮಾಡಿದ ಮೇಲೆ ಅಲ್ಲಿಂದ ಹೊರಟನು. ಬಲರಾಮ ಮುಂತಾದ ಸಕಲ ಯಾದವರಿಂದಲೂ ರುಕ್ಮಿಣಿಯಿಂದಲೂ ಸಹಿತನಾಗಿ ದ್ವಾರಕಾಪಟ್ಟಣಕ್ಕೆ ಬಂದನು. ಕೃಷ್ಣನು ಬಂದ ನಂತರ ದ್ವಾರಕೆಯಲ್ಲಿ ದೊಡ್ಡ ಉತ್ಸವವು ನೆರವೇರಿತು.

ರುಕ್ಮಿಣಿದೇವಿಯನ್ನು ಬಹುವಿಜೃಂಭಣೆಯಿಂದ ವಿವಾಹಮಾಡಿಕೊಳ್ಳಬೇಕೆಂದು ಶ್ರೀಕೃಷ್ಣದೇವನು ಸಂಕಲ್ಪಿಸಿದನು. ದ್ವಾರಕೆಯ ಸಮೀಪದಲ್ಲಿರುವ ಮೂಲಮಾಧವ ಎಂಬ ಕ್ಷೇತ್ರಕ್ಕೆ ಸಕಲ ಯಾದವರನ್ನೂ ಕರೆದುಕೊಂಡು ಹೋದನು. ರುಕ್ಮಿಣಿಯ ಕಡೆಯಲ್ಲಿ ಭೀಷ್ಮಕರಾಜ ಮುಂತಾದವರಲ್ಲಿ ಯಾರೂ ಇಲ್ಲದಿದ್ದರೆ ವಿವಾಹವು ಶೋಭಿಸಲಾರದು ಎಂದು ತೀರ್ಮಾನಿಸಿ ಯಾದವರನ್ನು ಸಮವಾಗಿ ವಿಂಗಡಿಸಿದನು. ತನ್ನ ಕಡೆಯಲ್ಲಿ ತನ್ನ ಬಂಧುಗಳಾಗಿರುವ ವಸುದೇವ ದೇವಕೀ ಮುಂತಾದವರನ್ನು ಇಟ್ಟುಕೊಂಡನು. ರುಕ್ಮಿಣಿಯ ಕಡೆಯಲ್ಲಿ ಒಬ್ಬ ಯಾದವನನ್ನು ಭೀಷ್ಮಕರಾಜನೆಂದೂ ಅವನ ಪತ್ನಿಯನ್ನು ಭೀಷ್ಮಕರಾಜನ ಪತ್ನಿಯೆಂದೂ ಇದರಂತೆಯೇ ಈ ರುಕ್ಮಿಣಿಯ ಬೇರೆ ಬೇರೆ ಬಂಧುಗಳ ಸ್ಥಾನದಲ್ಲಿ ಬೇರೆ ಬೇರೆ ಯಾದವರನ್ನೂ ಅವರವರ ಪತ್ನಿಯರ ಸ್ಥಾನದಲ್ಲಿ ಅವರವರ ಪತ್ನಿಯರನ್ನೂ ಏರ್ಪಡಿಸಿದನು.

ವಿವಾಹಕ್ಕೆ ಪೂರ್ವದಲ್ಲಿ ವಿವಾಹವನ್ನು ನಿಶ್ಚಯಮಾಡುವುದಕ್ಕೋಸ್ಕರ ವರನ ಕಡೆಯ ಸುಮಂಗಲಿಯರು ಮಂಗಲವಾದ್ಯಗಳೊಡನೆ ಕನ್ಯೆಯ ಮನೆಗೆ ಬಂದರು. ಸೂರ್ಯನಂತೆ ಪ್ರಕಾಶಿಸುತ್ತಿರುವ ಬಂಗಾರದ ಹರಿವಾಣದಲ್ಲಿ ಕರ್ಣಾಭರಣ ಮುಂತಾದ ಮಂಗಲ ವಸ್ತುಗಳನ್ನು ತಂದಿಟ್ಟರು.

# ಕನ್ಯಾಪ್ರಾರ್ಥನೆ

ಎಲೈ ಪೂಜ್ಯ ಸುಮಂಗಲಿಯರೇ, ಬಂಗಾರದ ಮಾಲೆಯಂತೆ ನಿಮ್ಮ ಕನ್ಯೆಯು ಹಳದಿಬಣ್ಣದಿಂದ ಯುಕ್ತಳಾಗಿರುವಳು. ಅವಳನ್ನು ಇಂದ್ರನೀಲಮಣಿಯಂತೆ ನೀಲವರ್ಣದಿಂದ ಯುಕ್ತನಾಗಿರುವ ಶ್ರೀಕೃಷ್ಣನಿಗೆ ಕೊಡಿರಿ. ಇವರಿಬ್ಬರೂ ಒಟ್ಟುಗೂಡಿದರೆ ಬಂಗಾರದ ಮಾಲೆಯಲ್ಲಿ ನೀಲಮಣಿಯ ಪದಕವು ಸೇರಿದಂತೆ ಅನ್ಯೋನ್ಯವಾಗಿ ಶೋಭಿಸುವರು. ಅದು ಮಾತ್ರವಲ್ಲ. ರುಕ್ಮಿಣಿಯು ಮಿಂಚಿನಂತೆ ಹೊಳೆಯುತ್ತಿರುವಳು. ಶ್ರೀಕೃಷ್ಣನು ಮಳೆಗಾಲದ ಮೇಘದಂತೆ ನೀಲವರ್ಣದಿಂದ ಯುಕ್ತನಾಗಿರುವನು. ಇವರಿಬ್ಬರೂ ಒಟ್ಟುಗೂಡಿದರೆ ಮಳೆಗಾಲದ ಮೇಘವು ಮಿಂಚಿನಿಂದ ಯುಕ್ತವಾದಾಗ ಮಳೆಯನ್ನು ಸುರಿಸಿದಂತೆ ನಿಮ್ಮೆಲ್ಲರಿಗೂ ಎಲ್ಲಾ ಪುರುಷಾರ್ಥಗಳನ್ನೂ ಮಳೆಯಂತೆ ಸುರಿಸುವನು.

ಈ ರುಕ್ಮಿಣಿಯು ವಿದರ್ಭರಾಜನ ವಂಶದಲ್ಲಿ ಹುಟ್ಟಿದವಳು. ಶ್ರೀಕೃಷ್ಣನು ಚಂದ್ರವಂಶದಲ್ಲಿ ಹುಟ್ಟಿದವನು. ಇವರಿಬ್ಬರ ವಂಶವೂ ಪರಮಮಾನ್ಯವಾಗಿರುವುದರಿಂದ ಈ ರುಕ್ಮಿಣಿಯನ್ನು ಶ್ರೀಕೃಷ್ಣನಿಗೆ ಕೊಟ್ಟು ವಿವಾಹ ಮಾಡುವುದು ಅತ್ಯಂತ ಶ್ಲಾಘ್ಯವಾದುದು. ಈ ರುಕ್ಮಿಣಿಯು ಕ್ಷೀರಸಮುದ್ರದಲ್ಲಿ ಹುಟ್ಟಿರುವ ಲಕ್ಷ್ಮೀದೇವಿಯೇ ಆಗಿರುವಳು. ಈ ಶ್ರೀಕೃಷ್ಣದೇವನು ಪುರುಷೋತ್ತಮನಾಗಿರುವ ನಾರಾಯಣನೇ ಆಗಿರುವನು. ಆದ್ದರಿಂದಲೂ ಇವರಿಬ್ಬರ ಸಂಬಂಧವು ಅತ್ಯಂತ ಮಾನ್ಯವಾಗಿದೆ. ಈ ರುಕ್ಮಿಣಿಯು ರತ್ನದಂತಿರುವಳು. ಶ್ರೀಕೃಷ್ಣದೇವನು ಅಲಂಕಾರದಂತಿರುವನು. ಅಲಂಕಾರ ಮತ್ತು ರತ್ನಗಳ ಯೋಗದಂತೆ ಇವರಿಬ್ಬರ ಸಂಬಂಧವು ಅತ್ಯಂತವಾಗಿ ಶೋಭಿಸುತ್ತದೆ.

ಈ ರುಕ್ಮಿಣಿಯು ಯಾವಾಗಲೂ ಪದ್ಮವನ್ನು ಆಶ್ರಯಿಸಿಕೊಂಡಿರುವುದರಿಂದ "ಪದ್ಮಾಲಯ" ಎಂಬ ಹೆಸರಿನಿಂದ ಪ್ರಸಿದ್ಧಳಾಗಿರುವಳು. ಇದರಿಂದ ರುಕ್ಮಿಣೀದೇವಿಯು ಕುಳಿತಿರುವ ಕಮಲವು ನೀರಿನಿಂದ ಹುಟ್ಟಿರುವುದಾಗಿ ತಿಳಿಯುತ್ತದೆ. ಶ್ರೀಕೃಷ್ಣನು ನೀರಿನ ಮೇಲೆ ವಾಸಿಸುತ್ತಿರುವುದರಿಂದ "ನಾರಾಯಣ" ಎಂದು ಪ್ರಸಿದ್ಧನಾಗಿರುವನು. ಇದರಿಂದ ಶ್ರೀಕೃಷ್ಣದೇವನು ನೀರಿನ ಮೇಲೆ ಮಲಗಿದಂತೆ ತಿಳಿಯುತ್ತದೆ. ಶ್ರೀಕೃಷ್ಣನು ಮಲಗಿರುವ ನೀರಿಗೂ ರುಕ್ಮಿಣಿಯು ಕುಳಿತಿರುವ ಕಮಲಕ್ಕೂ ಯಾವಾಗಲೂ ಸಂಬಂಧವಿದೆ. ಆದ್ದರಿಂದ ಅವರಿಬ್ಬರಿಗೂ ಸಂಬಂಧವು ಏರ್ಪಟ್ಟರೂ ಆ ಸಂಬಂಧವೂ ಶಾಶ್ವತವಾಗಿರುವುದರಲ್ಲಿ ಸಂಶಯವಿಲ್ಲ. ಆದ್ದರಿಂದ ನಿಮ್ಮ ರುಕ್ಮಿಣಿಯನ್ನು ಶ್ರೀಕೃಷ್ಣನಿಗೆ ಕೊಟ್ಟು ವಿವಾಹವನ್ನು ನೆರವೇರಿಸಿರಿ" ಎಂದು ವರನ ಕಡೆಯವರು ಪ್ರಾರ್ಥಿಸಿದರು.

# ಕನ್ಯಾದಾನಕ್ಕೆ ನಿಬಂಧನೆ

(೧) "ಶ್ರೀಕೃಷ್ಣನು ತನ್ನ ಪತ್ನಿಯಿಂದ ಕಷ್ಟವಾದ ಕೆಲಸಗಳನ್ನು ಮಾಡಿಸಕೂಡದು. (೨) ಪತ್ನಿಯನ್ನು ಯಾವಾಗಲೂ ಬಿಡಕೂಡದು. (೩) ಪತ್ನಿಯಲ್ಲಿ ಕೋಪಿಸಕೂಡದು. (೪) ಪತ್ನಿಯನ್ನು ಕಳುಹಿಸು ಎಂದು ಹೇಳಿ ಕಳುಹಿಸಿದರೆ ಕೂಡಲೇ ಅವಳನ್ನು ಕಳುಹಿಸಬೇಕು. (೫) ಬೇರೆ ಮದುವೆ ಮಾಡಿಕೊಳ್ಳಕೂಡದು. (೬) ಬಂಧುಗಳಾದ ನಮ್ಮನ್ನು ಯಾವಾಗಲೂ ಸ್ಮರಿಸಬೇಕು. ಈ ಆರು ಕರಾರುಗಳನ್ನು ಒಪ್ಪಿದರೆ ನಮ್ಮ ರುಕ್ಮಿಣಿಯನ್ನು ಕೊಡುವೆವು" ಎಂದು ರುಕ್ಮಿಣಿಯ ಬಂಧುಗಳು ಹೇಳಿದರು.

# ವರನ ಬಂಧುಗಳ ಪ್ರತ್ಯುತ್ತರ

(೧) ಎಲ್ಲೈ ಸುಮಂಗಲಿಯರೇ!, ಶ್ರೀಕೃಷ್ಣನು ಪತ್ನಿಯಿಂದ ಕಷ್ಟವಾದ ಕೆಲಸಗಳನ್ನು ಮಾಡಿಸಕೂಡದು ಎಂದು ಹೇಳಿರುವಿರಿ. ರುಕ್ಮಿಣಿಯು ಶ್ರೀಕೃಷ್ಣನ ಪತ್ನಿಯಾಗಿಬಿಟ್ಟರೆ ಶ್ರೀಕೃಷ್ಣನ ಗೃಹಿಣೀ ಅಂದರೆ ಮನೆಯ ಯಾಜಮಾನಿಯೆನಿಸುವಳು. ಗೃಹಿಣಿಯಾದವಳ ವಶದಲ್ಲಿ ಮನೆಯೂ ಮಕ್ಕಳೂ ಮನೆಯಲ್ಲಿರುವ ಎಲ್ಲಾ ವಸ್ತುಗಳೂ ಇರಲೇಬೇಕು. ಆ ವಸ್ತುಗಳ ಮೇಲಿನ ಅಧಿಕಾರವು ಇತರರಿಗೆ ಏರ್ಪಡುವುದೇ ಇಲ್ಲ. ಕೊಡಲೂ ಕೂಡದು. ಆ ಕೆಲಸಗಳನ್ನೆಲ್ಲವನ್ನೂ ಇವಳೊಬ್ಬಳೇ ಮಾಡಲು ಶಕ್ತಳು. ಇತರರಿಂದ ಮಾಡಲೂ ಸಾಧ್ಯವಿಲ್ಲ. ಇವನ ಮನೆಯನ್ನೂ ಮಕ್ಕಳು ಮತ್ತು ಪರಿವಾರಗಳನ್ನೂ ತಿಳಿದರೆ ಇವಳೊಬ್ಬಳಿಂದಲೇ ಸಾಧ್ಯವೇ ಹೊರತು ಇತರರಿಂದ ಸಾಧ್ಯವಿಲ್ಲ ಎಂಬ ವಿಷಯವು ಸ್ಪಷ್ಟವಾಗುತ್ತದೆ. ಅದಕ್ಕಾಗಿ ವಿವರಿಸುವೆವು. ಶ್ರೀಕೃಷ್ಣನಲ್ಲಿ ಬ್ರಹ್ಮಾಂಡ ಎಂಬ ಒಂದು ಮನೆಯಿದೆ. ಆ ಮನೆಯಲ್ಲಿ ಪಾತಾಲ, ರಸಾತಲ, ತಲಾತಲ, ಮಹಾತಲ, ಸುತಲ, ವಿತಲ, ಅತಲ, ಭೂಮಿ, ಭುವಃ, ಸ್ವಃ ಮಹಃ ಜನಃ ತಪಃ, ಸತ್ಯಂ ಎಂಬ ಹದಿನಾಲ್ಕು ಮಹಡಿಗಳಿವೆ. ಆ ಮನೆಯಲ್ಲಿಯೂ ಮನೆಯಲ್ಲಿರಬೇಕಾದ ಯಾವ ವಸ್ತುಗಳಿಗಾಗಿಯೂ ಅಲೆಯಬೇಕಾದ್ದಿಲ್ಲ. ಮೇರು ಎಂಬ ಬಂಗಾರದ ಪರ್ವತವಿದೆ. ವಿಶಾಲವಾದ ಭೂಲೋಕ ಎಂಬ ಭೂಮಿ ಇದೆ. ಆ ಭೂಮಿಯಲ್ಲಿ ಎಲ್ಲಾ ಧಾನ್ಯಗಳೂ, ರತ್ನಗಳಿಂದ ತುಂಬಿರುವ ನಿಧಿಗಳೂ, ಉಪ್ಪು, ಕಬ್ಬಿಣ ಹಾಲು, ತುಪ್ಪ, ಮೊಸರು, ಹಾಲು, ಸಿಹಿನೀರು ಮುಂತಾದ ವಸ್ತುಗಳ ಬೇರೆ ಬೇರೆ ಸಮುದ್ರಗಳಿವೆ, ಬ್ರಹ್ಮದೇವರು ಮುಂತಾದ ಮಕ್ಕಳುಗಳು ಇದ್ದಾರೆ. ಆ ಮಕ್ಕಳುಗಳನ್ನೂ ಈ ರುಕ್ಮಿಣಿಯು ಪ್ರಸವಿಸಬೇಕಾಗಿಲ್ಲ. ಶ್ರೀಕೃಷ್ಣನು ಅವರನ್ನೂ ತನ್ನ ಹೊಕ್ಕಳಿನಿಂದಲೇ ಪ್ರಸವಿಸಿರುವನು. ಬ್ರಹ್ಮ ಮುಂತಾದವರ ಮಕ್ಕಳುಗಳು ಅವರ ಪತ್ನಿಯರು ಮನೆಗಳು ಮುಂತಾದವುಗಳನ್ನು ರುಕ್ಮಿಣಿಯು ನೋಡಿಕೊಂಡಿರಬೇಕು. ಈ ಕಾರ್ಯವು ಇವಳಿಗೆ ಕ್ಲೇಶಕರವೂ ಅಲ್ಲ. ಈ ಎಲ್ಲಾ ಕಾರ್ಯಗಳನ್ನೂ ಲೀಲೆಯಿಂದ ಕಡೆಗಣ್ಣಿನಿಂದ ನೋಡಿದ ಮಾತ್ರದಿಂದಲೇ ಮಾಡುವಳು. ಆದ್ದರಿಂದ ನಿಮ್ಮ ಮೊದಲನೆಯ ನಿಬಂಧನೆಯನ್ನು ಒಪ್ಪಿದೆವು.'' ಎಂದು ಶ್ರೀಕೃಷ್ಣನ ಕಡೆಯ ಸುಮಂಗಲಿಯರು ಹೇಳಿದರು.

(೨) ರುಕ್ಮಿಣಿಯನ್ನು ಶ್ರೀಕೃಷ್ಣನು ಯಾವ ಕಾರಣದಿಂದಲೂ ಯಾವಾಗಲೂ ಬಿಡಕೂಡದು ಎಂದು ಹೇಳಿರುವಿರಿ. ಈ ಮಾತುಗಳನ್ನು ಕೇಳುವಾಗ ನಿಮಗೆ ಶ್ರೀಕೃಷ್ಣನ ಸ್ವಭಾವವು ಇನ್ನೂ ತಿಳಿಯಲಿಲ್ಲವೆಂದು ನಮಗೆ ಸ್ಪಷ್ಟವಾಗುತ್ತದೆ. ಅದಕ್ಕಾಗಿ ಅವನ ಸ್ವಭಾವವನ್ನು ವಿವರಿಸುವೆವು. ಪತ್ನಿಯಲ್ಲಿ ಎಷ್ಟು ಪ್ರೀತಿಯುಳ್ಳವನೂ ಸಹ ಸಾವಿರಾರು ಜನಗಳ ಮಧ್ಯದಲ್ಲಿ ಸಭೆಯಲ್ಲಿ ಹೆಂಡತಿಯನ್ನು ತೊಡೆಯಲ್ಲಿ ಕುಳ್ಳಿರಿಸಿಕೊಳ್ಳಲಾರನು. ಆದರೆ ಶ್ರೀಕೃಷ್ಣನು ಸಭೆಯಲ್ಲಿಯೂ ರುಕ್ಮಿಣಿಯನ್ನು ತನ್ನ ತೊಡೆಯಲ್ಲಿ ಕುಳ್ಳಿರಿಸಿಕೊಳ್ಳುವನು. ಹೀಗಿರುವಾಗ ಏಕಾಂತದಲ್ಲಿ ರುಕ್ಮಿಣಿಯನ್ನು ಬಿಟ್ಟಿರುವನೇ? ಸಮೀಪದ ಹಳ್ಳಿಗಳಿಗೆ ಹೋಗುವಾಗ ಪತ್ನಿಯನ್ನು ಜೊತೆಯಲ್ಲಿಯೇ ಕರೆದುಕೊಂಡು ಹೋಗುವವರುಂಟೇ? ಶ್ರೀಕೃಷ್ಣನು ಮತ್ಸ್ಯ ಮುಂತಾದ ಅನಂತಾವತಾರಗಳನ್ನು ಸ್ವೀಕರಿಸುವಾಗಲೂ ರುಕ್ಮಿಣೀದೇವಿಯನ್ನು ಜೊತೆಯಲ್ಲಿಯೇ ಕರೆದುಕೊಂಡು ಹೋಗುತ್ತಿರುವನು. ಸ್ನಾನ, ಅಭ್ಯಂಜನ, ಭೋಜನ ನಾನಾ ವಿಧವಾದ ವ್ಯಾಪಾರಗಳನ್ನು ಮಾಡುತ್ತಿರುವಾಗ ಪತ್ನಿಯನ್ನು ಜೊತೆಯಲ್ಲಿ ಕೂಡಿಸಿಕೊಳ್ಳುವವರುಂಟೇ? ಶ್ರೀಕೃಷ್ಣನು ಆ ಕಾಲಗಳಲ್ಲಿಯೂ ಸಹ ರುಕ್ಮಿಣಿಯನ್ನು ತನ್ನ ಜೊತೆಯಲ್ಲಿಯೇ ಇಟ್ಟುಕೊಂಡಿರುವನು. ತನ್ನ ದೇಹದಲ್ಲಿ ಪತ್ನಿಯನ್ನು ಆಭರಣಗಳ ಸ್ಥಾನದಲ್ಲಿ ಧರಿಸಿರುವವರುಂಟೇ? ಶ್ರೀಕೃಷ್ಣನು ರುಕ್ಮಿಣೀದೇವಿಯನ್ನು ನಾನಾ ವಿಧವಾದ ಆಭರಣಗಳ

ರೂಪವನ್ನು ಧರಿಸುವಂತೆ ಮಾಡಿ ತನ್ನ ದೇಹದಲ್ಲಿ ಧರಿಸುತ್ತಿರುವನು. ಪತ್ನಿಯನ್ನು ವಾದ್ಯಗಳ ರೂಪದಿಂದ ಧರಿಸುವವರುಂಟೇ? ರುಕ್ಮಿಣಿಯನ್ನು ಶ್ರೀಕೃಷ್ಣನು ಕೊಳಲು ಮುಂತಾದ ರೂಪಗಳನ್ನು ಧರಿಸುವಂತೆ ಮಾಡಿ ತನ್ನ ಕೈಯಲ್ಲಿ ಧರಿಸಿ ತನ್ನ ತುಟಿಯ ಮೇಲಿಟ್ಟು ಅಧರಾಮೃತವನ್ನು ಕುಡಿಸುತ್ತಿರುವನು. ರುಕ್ಮಿಣಿಯು ಇಲ್ಲದಿರುವ ದೇಶವೇ ಇಲ್ಲ. ಹಾಗೆ ಇದ್ದರೆ ಅಂತಹ ದೇಶವನ್ನೇ ಶ್ರೀಕೃಷ್ಣನು ಬಿಟ್ಟಿರುವನು ಎಂದು ತಿಳಿಯಿರಿ. ಆದ್ದರಿಂದ ರುಕ್ಮಿಣಿಯನ್ನು ಬಿಡಕೂಡದು ಎಂಬ ನಿಮ್ಮ ನಿಬಂಧನೆಯನ್ನು ನಾವು ಒಪ್ಪಿರುವೆವು.

(೩) ರುಕ್ಮಿಣಿಯ ಮೇಲೆ ಕೋಪವನ್ನು ಮಾಡಕೂಡದು ಎಂದು ನೀವು ಹೇಳಿರುವಿರಿ. ಈ ವಿಷಯವು ನಮಗೆ ಸಂಮತವಾಗಿದೆ. ಪ್ರಳಯಕಾಲವು ಶ್ರೀಕೃಷ್ಣನಿಗೆ ತುಂಬಾ ಕೋಪಕಾಲವೆನಿಸುತ್ತದೆ. ಅಷ್ಟು ಕೋಪವು ಯಾವಾಗಲೂ ಇಲ್ಲ. ಆ ಕಾಲದಲ್ಲಿ ಬ್ರಹ್ಮ ಮುಂತಾದ ಮಕ್ಕಳನ್ನೂ ರುದ್ರ ಮುಂತಾದ ಮೊಮ್ಮಕ್ಕಳೇ ಮೊದಲಾದ ಸರ್ವಜೀವರನ್ನೂ ಶ್ರೀಕೃಷ್ಣನು ನಿರ್ದಾಕ್ಷಿಣ್ಯದಿಂದ ಸಂಹರಿಸುವನು. ಅಂತಹ ಪ್ರಬಲ ಕೋಪಕಾಲದಲ್ಲಿಯೂ ರುಕ್ಮಿಣಿಯಲ್ಲಿ ಕೋಪಿಸಲಾರನು. ಆಗಲೂ ಇವಳನ್ನು ತನ್ನ ಎರಡು ಕೈಗಳಿಂದ ಆಲಿಂಗಿಸಿಕೊಂಡು ಸಂತೋಷಪಡಿಸುತ್ತಿರುವನು. ಅದು ಮಾತ್ರವಲ್ಲ. ಶ್ರೀಕೃಷ್ಣನಿಗೂ ರುಕ್ಮಿಣಿಗೂ ವಿಯೋಗವಿದೆ ಎಂದು ತಿಳಿಯುವವನಲ್ಲಿ ಕುಪಿತನಾಗುವನು. ಆದ್ದರಿಂದ ನೀವು ಹೇಳಿರುವ ಮೇಲ್ಕಂಡ ನಿಬಂಧನೆಯು ನಮಗೆ ಸಂಮತವಾಗಿದೆ.

ರತಿಕ್ರೀಡಾಕಾಲದಲ್ಲಿ ರುಕ್ಮಿಣಿಯ ಜಡೆಯನ್ನು ಹಿಡಿದು ಸ್ತನಗಳ ಪಾರ್ಶ್ವದಲ್ಲಿ ಉಗುರುಗಳಿಂದ ಗಾಯಗಳನ್ನು ಮಾಡುತ್ತಾ ಮೃದುವಾದ ತುಟಿಗಳನ್ನು ಕಡಿಯುತ್ತಾ ಗಾಯಗಳನ್ನು ಮಾಡುತ್ತಿರುವನು. ಆದರೆ ಅದು ಕೋಪದಿಂದಲ್ಲ. ಆಟಕ್ಕಾಗಿಯೇ ಎಂದು ತಿಳಿಯಿರಿ.

(೪) ರುಕ್ಮಿಣಿಯನ್ನು ಕಳುಹಿಸಬೇಕೆಂದು ಹೇಳಿಕಳುಹಿಸಿದ ಕೂಡಲೇ ಕಳುಹಿಸಬೇಕೆಂದು ನಾಲ್ಕನೆಯ ನಿಬಂಧನೆಯನ್ನು ಹೇಳಿದಿರಿ. ಇದು ಮಾತ್ರ ಸಾಧ್ಯವಿಲ್ಲ. ನಮ್ಮ ಶ್ರೀಕೃಷ್ಣನು ತನ್ನ ಭಕ್ತರ ಮನೆಗೆ ಲಕ್ಷ್ಮೀ ರೂಪಿಯಾದ ರುಕ್ಮಿಣಿಯನ್ನು ಹೆಚ್ಚಾಗಿ ಕಳುಹಿಸುವುದಿಲ್ಲ. ಹಾಗೆ ಕಳುಹಿಸಿದರೆ ಅವರೆಲ್ಲರಿಗೂ ಅಹಂಕಾರವು ಬಂದು ಅವನನ್ನು ಮರೆತು ಬಿಡುವುದಿಲ್ಲವೇ? ಉತ್ತಮ ಭಕ್ತರಾಗಿರುವ ಪ್ರಹ್ಲಾದ ಅಂಬರೀಷ ಮುಂತಾದವರಿಗೆ ಲಕ್ಷ್ಮೀದೇವಿಯು ಅವರ ಮನೆಗೆ ಬಂದರೂ ಅಹಂಕಾರವು ಬರುವುದಿಲ್ಲ. ಶ್ರೀಹರಿಯ ಆರಾಧನೆಯನ್ನು ಬಿಡದಂತೆ ಮಾಡುತ್ತಿರುವರು. ಅವರ ಮನೆಗೆ ಕಳುಹಿಸುವನು. ನೀವು ಅವರಂತಹ ಉತ್ತಮ ಭಕ್ತರೆಂದು ಹೇಳುವಂತಿಲ್ಲ. ಆದ್ದರಿಂದ ನಿಮಗೆ ಅಹಂಕಾರ ಬರಬಾರದೆಂಬ ಸದುದ್ದೇಶದಿಂದಲೇ ನಿಮ್ಮ ಮನೆಗೆ ಕಳುಹಿಸಲಾರನು.

ಅದು ಮಾತ್ರವಲ್ಲ. ನಿಮ್ಮ ಮನೆಗೆ ಈಗ ಲಕ್ಷ್ಮೀರೂಪಿಯಾದ ರುಕ್ಮಿಣಿಯನ್ನು ಕಳುಹಿಸಿರುವನು. ರುಕ್ಮಿಣಿಯಲ್ಲಿ ಆಸೆಯುಳ್ಳ ನೀವು ಅವಳನ್ನು ಇಟ್ಟುಕೊಂಡಿರಬಾರದೇ? ಅವಳನ್ನು ಹಿಂದಿರುಗಿಸಿ ಶ್ರೀಕೃಷ್ಣನಿಗೆ ಕೊಡಬೇಕೆಂದು ಪ್ರಯತ್ನಿಸುತ್ತಿಲ್ಲವೇ? ಇದರಿಂದ ನಿಮಗೂ ಶ್ರೀಕೃಷ್ಣನ ಅನುಗ್ರಹವೇ ಬೇಕು. ರುಕ್ಮಿಣಿಯು ಬೇಡ ಎಂಬ ಅಭಿಪ್ರಾಯವು ಇರುವುದಾಗಿ ತಿಳಿಯುತ್ತದೆ. ಆದ್ದರಿಂದ ನೀವು ರುಕ್ಮಿಣಿಯನ್ನು ಈಗ ಅಪೇಕ್ಷಿಸುತ್ತಿಲ್ಲ. ಇನ್ನು ಮುಂದೆಯೂ ಅಪೇಕ್ಷಿಸಬೇಡಿರಿ. ಶ್ರೀಕೃಷ್ಣನು ಕಳುಹಿಸದಿರುವುದಕ್ಕೆ ಕುಪಿತರಾಗಬೇಡಿರಿ.

(೫) ಶ್ರೀಕೃಷ್ಣನು ರುಕ್ಮಿಣಿಯನ್ನು ಬಿಟ್ಟು ಇನ್ನೊಬ್ಬಳನ್ನು ಮದುವೆ ಮಾಡಿಕೊಳ್ಳಕೂಡದು ಎಂದು ಐದನೆಯ ನಿಬಂಧನೆಯನ್ನು ಹೇಳಿದಿರಿ. ಅದಕ್ಕೆ ನಾವು ಒಪ್ಪಿದೆವು. ರುಕ್ಮಿಣಿಯನ್ನು ಬಿಟ್ಟು ಇತರ ಸ್ತ್ರೀಯರನ್ನು ವಿವಾಹ ಮಾಡಿಕೊಳ್ಳುವುದಿಲ್ಲ. ಆದರೆ ನೀವು ಶ್ರೀಕೃಷ್ಣನು ಬೇರೆ ಕನ್ಯೆಯನ್ನು ವಿವಾಹ ಮಾಡಿಕೊಳ್ಳಲೇಕೂಡದು ಎಂದು ಹೇಳುವುದರಲ್ಲಿ ಅರ್ಥವಿಲ್ಲ. ಬೇರೆ ವಿವಾಹವನ್ನು ಮಾಡಿಕೊಂಡರೂ ಆ ಕನ್ಯೆಯಲ್ಲಿ ಅಂತರ್ಗತಳಾಗಿರುವ ರುಕ್ಮಿಣಿಯನ್ನೇ ಸಂತೋಷಪಡಿಸುವುದಾಗಿದ್ದರೆ ರುಕ್ಮಿಣಿಗಾಗಲೀ ಅವಳ ಬಂಧುಗಳಾದ ನಿಮಗಾಗಲೀ ಯಾವ ಹಾನಿಯೂ ಇಲ್ಲ. ಆದ್ದರಿಂದ ರುಕ್ಮಿಣಿಯನ್ನು ಬಿಟ್ಟು ಇತರ ಕನ್ಯೆಯನ್ನು ವಿವಾಹ ಮಾಡಿಕೊಳ್ಳುವುದಿಲ್ಲವೆಂದೂ ಯಾವಳಾದರೂ ಶ್ರೀಕೃಷ್ಣನ ಪತ್ನಿಯಾಗಬೇಕೆಂದು ಅವನಲ್ಲಿಯೇ ವರವನ್ನು ಬೇಡಿದ್ದರೆ ಅವಳನ್ನು ವಿವಾಹ ಮಾಡಿಕೊಳ್ಳುವುದಾಗಿಯೂ ಅವಳ ಒಳಗಿರುವ ರುಕ್ಮಿಣಿಯನ್ನೇ ಸಂತೋಷಪಡಿಸುವುದಾಗಿಯೂ ನಾವು ಒಪ್ಪಿಗೆಯನ್ನು ಕೊಡುವೆವು.

(೬) ಶ್ರೀಕೃಷ್ಣನು ಅವನ ಬಂಧುಗಳಾದ ನಮ್ಮನ್ನು ಸ್ಮರಿಸುತ್ತಿರಬೇಕು ಎಂದು ಆರನೆಯ ನಿಬಂಧನೆಯನ್ನು ಹೇಳಿದಿರಿ. ಯಾವ ವಸ್ತುವು ನಮ್ಮ ಕಣ್ಣಿನ ಮುಂದಿಲ್ಲವೋ ಆ ವಸ್ತುವಿನ ಸ್ಮರಣೆಯು ಏರ್ಪಡುವ ಸಂಭವವಿದೆ. ಆದ್ದರಿಂದ ಆ ವಸ್ತುವನ್ನು ಸ್ಮರಿಸಬೇಕು ಎಂದು ಹೇಳುವುದರಲ್ಲಿ ನ್ಯಾಯವಿದೆ. ಯಾವ ವಸ್ತುವು ಯಾವಾಗಲೂ ನಮ್ಮ ಕಣ್ಣಿನ ಮುಂದೆಯೇ ಇದೆಯೋ ಆ ವಸ್ತುವಿನ ಸ್ಮರಣೆಯು ಏರ್ಪಡುವ ಸಂಭವವೇ ಇಲ್ಲ. ಆದ್ದರಿಂದ ಆ ವಸ್ತುವನ್ನು ಸ್ಮರಿಸಬೇಕು ಎಂದು ಪ್ರಾರ್ಥಿಸುವುದರಲ್ಲಿ ಅರ್ಥವಿಲ್ಲ. ಸರ್ವವ್ಯಾಪಿಯಾದ ಶ್ರೀಕೃಷ್ಣನು ಯಾವಾಗಲೂ ಎಲ್ಲಾ ವಸ್ತುಗಳನ್ನೂ ನೋಡುತ್ತಿರುವನು. ಆದ್ದರಿಂದ ಅವನಿಗೆ ಯಾವ ವಸ್ತುವಿನ ಸ್ಮರಣೆಯೂ ಇಲ್ಲ. ಅವುಗಳನ್ನು ನೋಡುತ್ತಲೇ ಇರುವನು. ಸ್ಮರಿಸುತ್ತಿಲ್ಲ. ಕಣ್ಣಿನ ಮುಂದಿಲ್ಲದಿರುವ ವಸ್ತುವನ್ನಲ್ಲವೇ ಸ್ಮರಿಸಬೇಕು. ಆದ್ದರಿಂದ ನಿಮ್ಮನ್ನು ಸ್ಮರಿಸಲಾರನು. ನೋಡುತ್ತಲೇ ಇರುವನು. ಬಂಧುಗಳನ್ನು ಸ್ಮರಿಸಿದ್ದರಿಂದ ಬರುವ ಲಾಭವು ಉಪಕಾರವಲ್ಲವೇ? ಆ ಉಪಕಾರವನ್ನು ಮಾಡುವನು. ಈ ಆರನೆಯ ನಿಬಂಧನೆಯನ್ನು ಅಂಗೀಕರಿಸದಿದ್ದರೂ ಆ ನಿಬಂಧನೆಯಿಂದ ಬರುವ ಪ್ರಯೋಜನವು ನಿಮಗೆ ಸಿಗುವುದರಿಂದ ನೀವು ನಿಮ್ಮ ಕನ್ಯೆಯನ್ನು ನಮ್ಮ ಹುಡುಗನಿಗೆ ಕೊಡುವುದರಲ್ಲಿ ಯಾವ ವಿಧವಾದ ಆಕ್ಷೇಪಣೆಯೂ ಇರಲಾರದು ಎಂದು ಶ್ರೀಕೃಷ್ಣನ ಕಡೆಯ ಸುಮಂಗಲಿಯರು ಹೇಳಿದರು. ಅದಕ್ಕೆ ರುಕ್ಮಿಣಿಯ ಕಡೆಯ ಸುಮಂಗಳಿಯರು ಸಂಮತಿಸಿದರು.

ವಧುವಿನ ಕಡೆಯ ಸುಮಂಗಲಿಯರು ಕೇಳಿರುವ ಎಲ್ಲಾ ನಿಬಂಧನೆಗಳಿಗೂ ವರನ ಕಡೆಯ ಸುಮಂಗಲಿಯರು ಸಮರ್ಪಕವಾದ ಉತ್ತರಗಳನ್ನು ಕೊಟ್ಟರು. ಇನ್ನು ಮುಂದೆ ವರನ ಕಡೆಯವರು ಕೇಳಬೇಕಾದ ವರದಕ್ಷಿಣೆಯ ಪ್ರಶ್ನೆಯು ಬರಬೇಕು. ಆಗ ವಧುವಿನ ಕಡೆಯವರೇ ಆ ಪ್ರಶ್ನೆಯನ್ನು ಕುರಿತು ತಮ್ಮ ಅಭಿಪ್ರಾಯವನ್ನು ತಿಳಿಸಿದರು. ಶ್ರೀಕೃಷ್ಣದೇವನ ಯೋಗ್ಯತೆಗೆ ಯೋಗ್ಯವಾಗಿರುವ ಅತ್ಯಧಿಕವಾದ ವರದಕ್ಷಿಣೆಯನ್ನು ಕೊಡಲು ನಾವು ಶಕ್ತರಲ್ಲ. ಆನೆ, ಕುದುರೆ, ರಥ ಮುಂತಾದ ಸೈನ್ಯಗಳನ್ನೂ ಎಲ್ಲಾ ವಸ್ತುಗಳನ್ನೂ ಕೊಡಬಹುದು. ಆದರೆ ಅದು ನಮ್ಮಿಂದ ಸಾಧ್ಯವಿಲ್ಲ. ಪದ್ಮದಂತೆ ಸುಂದರವಾದ ಮುಖವುಳ್ಳ ರುಕ್ಮಿಣಿಯನ್ನು ಮಾತ್ರ ಕೊಡುವೆವು ಎಂದರು.

ಆ ಮಾತುಗಳನ್ನು ಕೇಳಿದ ಶ್ರೀಕೃಷ್ಣದೇವನ ಕಡೆಯ ಸುಮಂಗಲಿಯರು ತುಂಬಾ ಸಂತೋಷದಿಂದ ಹೇಳಿದರು. ಶ್ರೀಕೃಷ್ಣದೇವನಲ್ಲಿ ಆನಂದವು ಪೂರ್ಣವಾಗಿದೆ. ಅವನಿಗೆ ಯಾವ ವರದಕ್ಷಿಣೆಯಿಂದಲೂ ಆಗಬೇಕಾದ

ಯಾವ ಲಾಭವೂ ಇಲ್ಲ. ಆದ್ದರಿಂದ ಅವನಿಗೆ ವರದಕ್ಷಿಣೆಯೇ ಬೇಡ. ಈ ರುಕ್ಮಿಣಿಯ ಕಡೆಗಣ್ಣಿನ ನೋಟಕ್ಕೆ ವಿಚಿತ್ರ ಶಕ್ತಿ ಇದೆ. ಬ್ರಹ್ಮರುದ್ರ ಮುಂತಾದ ಎಲ್ಲಾ ದೇವತೆಗಳೂ ಈ ಕಡೆಗಣ್ಣಿನ ನೋಟದಿಂದ ಅಪರಿಮಿತವಾದ ಭಾಗ್ಯವನ್ನು ಪಡೆದಿರುವರು. ಆ ಕಡೆಗಣ್ಣಿನ ನೋಟವನ್ನೇ ಅಪೇಕ್ಷಿಸುವನು. ಅದನ್ನೇ ಕೊಡಿರಿ ಎಂದರು. ಮದುವೆಯ ವಿಷಯದಲ್ಲಿ ಮೊದಲು ಮಾತಾಡಿಕೊಳ್ಳಬೇಕಾದ ಎಲ್ಲಾ ವಿಷಯಗಳಲ್ಲಿಯೂ ಎರಡು ಪಕ್ಷದವರಿಗೂ ತೃಪ್ತಿ ಏರ್ಪಟ್ಟಿತು.

ಇನ್ನು ಮುಂದೆ ಇಬ್ಬರ ಜಾತಕಗಳಿಗೂ ಯೋಗ್ಯವಾದ ಮುಹೂರ್ತವನ್ನು ನೋಡಬೇಕು. ಅವರಿಬ್ಬರ ವಿಷಯದಲ್ಲಿ ಮುಹೂರ್ತವನ್ನೂ ನೋಡಬೇಕಾಗಿಲ್ಲ. ಶುಭಗ್ರಹಗಳು ಉಚ್ಚಸ್ಥಾನದಲ್ಲಿದ್ದಾಗ ಶುಭಫಲಗಳನ್ನೂ ನೀಚಸ್ಥಾನದಲ್ಲಿರುವಾಗ ಅನಿಷ್ಟ ಫಲಗಳನ್ನೂ ಕೊಡುವುದಾಗಿ ಜ್ಯೋತಿಃಶಾಸ್ತ್ರವು ತಿಳಿಸುತ್ತದೆ. ಇವರಿಬ್ಬರ ದೇಹ ಗಳಲ್ಲಿಯೂ ಎಲ್ಲಾ ಶುಭಗ್ರಹಗಳೂ ಉಚ್ಚಸ್ಥಾನಗಳಲ್ಲಿಯೇ ಇವೆ. ನೀಚಸ್ಥಾನಗಳಲ್ಲಿ ಯಾವ ಶುಭಗ್ರಹವೂ ಇಲ್ಲ.

ಪಾಪಗ್ರಹಗಳು ನೀಚಸ್ಥಾನಗಳಲ್ಲಿದ್ದರೆ ಶುಭಫಲವೂ ಉಚ್ಚಸ್ಥಾನಗಳಲ್ಲಿದ್ದರೆ ಅಶುಭ ಫಲವೂ ಏರ್ಪಡುವುದಾಗಿಯೂ ಜ್ಯೋತಿಃಶಾಸ್ತ್ರವು ತಿಳಿಸುತ್ತಿದೆ. ಅವರಿಬ್ಬರ ದೇಹಗಳಲ್ಲಿಯೂ ಪಾಪಗ್ರಹಗಳು ಉಚ್ಚಸ್ಥಾನಗಳಲ್ಲಿಲ್ಲ. ನೀಚಸ್ಥಾನಗಳಲ್ಲಿಯೇ ಇವೆ.

ರುಕ್ಮಿಣೀ ಮತ್ತು ಶ್ರೀಕೃಷ್ಣದೇವರ ಮುಖಗಳು ಚಂದ್ರನಂತಿವೆ. ಆದ್ದರಿಂದ ಮುಖಗಳಲ್ಲಿ ಚಂದ್ರನು ಯಾವಾಗಲೂ ವಾಸಿಸುತ್ತಿರುವನೆಂದು ಹೇಳಬಹುದು. ಇವರಿಬ್ಬರು ಕೃಪಾದೃಷ್ಟಿಯಿಂದ ಯಾರನ್ನು ನೋಡುವರೋ ಅವನು ಬುಧ ಅಂದರೆ ಮಹಾಜ್ಞಾನಿಯಾಗುವನು. ಅದು ಮಾತ್ರವಲ್ಲ. ಇವರಿಬ್ಬರ ಮುಗುಳು ನಗೆಗಳು ಬುಧಗ್ರಹದಂತೆ ಮೆಲ್ಲನೆ ಪ್ರಕಾಶಿಸುತ್ತವೆ. ಆದ್ದರಿಂದ ಇವರಿಬ್ಬರ ಮುಗುಳುನಗೆಯಲ್ಲಿ ಬುಧನು ಯಾವಾಗಲೂ ವಾಸಿಸಿದಂತಾಯಿತು. ಇವರಿಬ್ಬರ ಕೈಗಳು ಉದಯಿಸುತ್ತಿರುವ ಸೂರ್ಯನಂತೆ ಎಳೆಕೆಂಪಾಗಿವೆ. ಆದ್ದರಿಂದ ಇವರಿಬ್ಬರ ಕೈಗಳಲ್ಲಿ ಸೂರ್ಯನು ವಾಸಿಸಿದಂತಾಯಿತು. ಇವರಿಬ್ಬರ ಹೊಟ್ಟೆಗಳು ಅನೇಕ ಕಾವ್ಯಗಳಿಂದ ಹೊಗಳುವುದಕ್ಕೆ ಅರ್ಹವಾಗಿವೆ. ಆದ್ದರಿಂದ ಕಾವ್ಯ ಎಂಬ ಹೆಸರಿನಿಂದ ಪ್ರಸಿದ್ಧನಾದ ಶುಕ್ರಾಚಾರ್ಯನು ಇವರಿಬ್ಬರ ಹೊಟ್ಟೆಗಳನ್ನು ಆಶ್ರಯಿಸಿದಂತಾಯಿತು. ಇವರಿಬ್ಬರ ಸೊಂಟಗಳು ಗುರು ಅಂದರೆ ದೊಡ್ಡದಾಗಿವೆ. ಆದ್ದರಿಂದ ಇವರಿಬ್ಬರ ಸೊಂಟಗಳನ್ನು ಗುರುವು ಆಶ್ರಯಿಸಿದಂತಾಯಿತು.

ಆದ್ದರಿಂದ ಗ್ರಹರಾಜನಾಗಿರುವ ಸೂರ್ಯನೂ ಶುಭಗ್ರಹಗಳಾಗಿರುವ ಚಂದ್ರ, ಬುಧ, ಗುರು, ಶುಕ್ರರೂ ಈ ಐದು ಶುಭಗ್ರಹಗಳೂ ಇವರಿಬ್ಬರಿಗೂ ಯವಾಗಲೂ ಉಚ್ಚ ಅಂದರೆ ತೊಡೆಗಿಂತ ಮೇಲನ ಸ್ಥಾನಗಳಲ್ಲಿರುವರು.

ಇವರಿಬ್ಬರ ಕಾಲುಗಳನ್ನು ಮಂದಗಾಮಿಯಾದ ಶನಿಯು ಆಶ್ರಯಿಸಿರುವನು. ಆದ್ದರಿಂದಲೇ ಇವರಿಬ್ಬರ ಗಮನವೂ ಮೆಲ್ಲಗೆ ಏರ್ಪಡುತ್ತಿವೆ. ಇವರಿಬ್ಬರ ಕಾಲುಗಳನ್ನು ಹಿಡಿದವರಿಗೆ ಮಂಗಲವು ಏರ್ಪಡುತ್ತಿದೆ. ಆದ್ದರಿಂದ ಮಂಗಲ ಅಂದರೆ ಕುಜಗ್ರಹವು ನೀಚ ಸ್ಥಾನದಲ್ಲಿ ಇದ್ದಂತಾಯಿತು. ಇವರಿಬ್ಬರ ಅಂಗಾಲುಗಳಲ್ಲಿ ಕೇತು ಅಂದರೆ ಧ್ವಜಚಿಹ್ನೆಯು ಯಾವಾಗಲೂ ಇದೆ. ಆದ್ದರಿಂದ ಇವರಿಬ್ಬರ ಕಾಲುಗಳ ಅಡಿಯಲ್ಲಿ ಕೇತುಗ್ರಹವು ಇದ್ದಂತಾಯಿತು. ಇವರಿಬ್ಬರ ದೇಹದ ಕಾಂತಿಯಿಂದ ಕತ್ತಲೆಗಳೆಲ್ಲವೂ ಹೆದರಿ ಓಡುತ್ತಿವೆ. ಆದ್ದರಿಂದ ಕತ್ತಲೆಯಂತೆ ಕಪ್ಪಾಗಿರುವ ರಾಹುಗ್ರಹವು ಇವರಿಬ್ಬರನ್ನು ನೋಡಿ ಓಡುತ್ತಿರುವಂತೆ ತಿಳಿಯುತ್ತದ. ಹೀಗೆ ಮಂಗಲ, ಶನಿ, ರಾಹು, ಕೇತು ಎಂಬ ನಾಲ್ಕು ಪಾಪಗ್ರಹಗಳೂ ನೀಚ ಅಂದರೆ ತೊಡೆಗಿಂತ ಕೆಳಗಿನ ಸ್ಥಾನದಲ್ಲಿ ಯಾವಾಗಲೂ ಇರುತ್ತವೆ.

ಹೀಗೆ ಐದು ಶುಭಗ್ರಹಗಳು ಉಚ್ಚಸ್ಥಾನಗಳಲ್ಲಿಯೂ ನಾಲ್ಕುಪಾಪಗ್ರಹಗಳು ನೀಚಸ್ಥಾನಗಳಲ್ಲಿಯೂ ಯಾವಾಗಲೂ ಇರುವುದರಿಂದ ಇವರಿಬ್ಬರಿಗೂ ಮುಹೂರ್ತವನ್ನೇ ನೋಡಬೇಕಾಗಿಲ್ಲ. ಯಾವಾಗಲೂ ಶುಭಮುಹೂರ್ತಗಳೇ ಆಗಿರುತ್ತವೆ. ಆದ್ದರಿಂದ ಯಾವಾಗ ಬೇಕಾದರೂ ವಿವಾಹವನ್ನು ಮಾಡಬಹುದು ಎಂದು ನಿಪುಣರಾದ ಜೋಯಿಸರು ಹೇಳಿದರು.

ರುಕ್ಮಿಣೀ ಮತ್ತು ಶ್ರೀಕೃಷ್ಣರು ಯಾರನ್ನು ಕೃಪಾದೃಷ್ಟಿಯಿಂದ ನೋಡುತ್ತಿರುವರೋ ಅವರಿಗೆ ಚಂದ್ರಬಲ ತಾರಾಬಲ ಎಂಬ ಬಲಗಳೂ ಇರುತ್ತವೆ. ಅದು ಮಾತ್ರವಲ್ಲ. ಶ್ರೀಕೃಷ್ಣದೇವನ ತಾರಮಂತ್ರ ಅಂದರೆ ಪ್ರಣವಮಂತ್ರವನ್ನು ಜಪಿಸುವವರಿಗೂ ಎಲ್ಲಾ ಬಲಗಳೂ ಇರುತ್ತವೆ. ಲೋಕರೂಢಿಯನ್ನು ಅನುಸರಿಸಿ ಮುಹೂರ್ತವನ್ನು ಇಡುವೆವು ಎಂದು ಹೇಳುತ್ತಾ ಅವರಿಬ್ಬರ ಮದುವೆಗೆ ಮುಹೂರ್ತವನ್ನು ದೈವಜ್ಞರು ನಿಶ್ಚಯಿಸಿದರು.

ಈ ಮುಹೂರ್ತದಿನವು ಎರಡು ಮೂರು ದಿನಗಳ ಮಧ್ಯದಲ್ಲಿಯೇ ಇತ್ತು. ವೈಭವದ ಏರ್ಪಾಡುಗಳು ನಡೆಯುತ್ತಿದ್ದವು. ಅವುಗಳನ್ನು ನೋಡುತ್ತಿರುವ ಸರ್ವ ಯಾದವರಿಗೂ ಒಂದು ಕ್ಷಣದಂತೆ ಕಳೆಯಿತು. ರುಕ್ಮಿಣೀದೇವಿಯರಿಗೆ ಮಾತ್ರ ಅದೇ ಎರಡು ದಿನಗಳು ಅನೇಕ ಕಲ್ಪಗಳ ಹಾಗೆ ಕಳೆದವು.

ಎರಡು ಕಡೆಯವರೂ ನಿಶ್ಚಯ ತಾಂಬೂಲವನ್ನು ಮಾಡಿಕೊಂಡರು. ಅನ್ಯೋನ್ಯವಾಗಿ ಅರಿಶಿನ ಎಣ್ಣೆಗಳನ್ನು ಕೊಟ್ಟರು. ಶ್ರೀಕೃಷ್ಣದೇವನು ಸ್ನಾತಕವ್ರತವನ್ನು ಧರಿಸಿದನು. ಕಾಶಿಯಾತ್ರೆಗೆ ಹೊರಟನು. ಆಗ ಮಾವನ ಸ್ಥಾನದಲ್ಲಿರುವ ಯಾದವನು ಶ್ರೀಕೃಷ್ಣದೇವನನ್ನು ಅಡ್ಡಗಟ್ಟಿದನು. ಶ್ರೀಕೃಷ್ಣದೇವನನ್ನು ನೋಡಿ ಹೇಳಿದನು.

ಕೃಷ್ಣಾ, ಎಲ್ಲಿಗೆ ಹೋಗುತ್ತಿರುವಿ? ಇದು ಮಾವನ ಪ್ರಶ್ನೆ.

ಉತ್ತರ - ಕಾಶಿಯಾತ್ರಗೆ.

ಪ್ರಶ್ನೆ - ಕಾಶಿಯಾತ್ರೆಯ ಫಲವೇನು?

ಉತ್ತರ - ಸಂಸಾರದಿಂದ ಬಿಡುಗಡೆ

ಪ್ರಶ್ನೆ - ಯಾರ ಸಂಸಾರದ ಬಿಡುಗಡೆ

ಉತ್ತರ - ನನ್ನ ಸಂಸಾರದ ಬಿಡುಗಡೆ.

ಪ್ರಶ್ನೆ - ನಿನ್ನನು ಆರಾಧಿಸುವವರ ಸಂಸಾರದಿಂದ ಅವರನ್ನು ಬಿಡಿಸುತ್ತಿರುವ ನಿನಗೆ ಸಂಸಾರವಿದೆಯೇ? ಇಲ್ಲದಿರುವ ಸಂಸಾರದಿಂದ ಬಿಡುಗಡೆಯಿದೆಯೇ? ಇದಕ್ಕಾಗಿ ನೀನು ಕಾಶೀಯಾತ್ರೆಗೆ ಹೋಗಬೇಕಾದ ಅವಶ್ಯಕತೆಯಿದ್ದೆಯೇ?

ಉತ್ತರ - ಸಂಸಾರವು ನನಗಿಲ್ಲದಿದ್ದರೆ ಬೇಡ. ಹಣವನ್ನು ಸಂಪಾದಿಸುವುದಕ್ಕಾಗಿ ಹೋಗುತ್ತಿರುವೆನು.

ಪ್ರಶ್ನೆ - ಸಕಲ ಸಂಪತ್ತುಗಳಿಗೂ ಅಭಿಮಾನಿನಿಯಾಗಿರುವ ಲಕ್ಷ್ಮೀದೇವಿಗೆ ನೀನು ಪತಿಯಲ್ಲವೇ? ಎಲ್ಲಾ

ಸಂಪತ್ತುಗಳೂ ನಿನ್ನ ಅಧೀನವಲ್ಲವೇ? ನೀನು ಹಣವನ್ನು ಸಂಪಾದಿಸುವುದಕ್ಕಾಗಿ ಕಾಶಿಯಾತ್ರೆಗೆ ಹೋಗಬೇಕಾದ ಅವಶ್ಯಕತೆಯಿದೆಯೇ?

ಉತ್ತರ - ಹೌದು. ನಾನು ಹಣವನ್ನು ಸಂಪಾದಿಸುವುದಕ್ಕಾಗಿ ಹೋಗಬೇಕಾಗಿಲ್ಲ. ಗಂಗಾತೀರ್ಥಗಳ ಸ್ನಾನಕ್ಕಾಗಿ ಹೋಗುವೆನು.

ಪ್ರಶ್ನೆ - ಗಂಗಾತೀರ್ಥಗಳು ನಿನ್ನ ಪಾದಗಳ ಸ್ಪರ್ಶವು ಏರ್ಪಟ್ಟ ಭೂಮಿಯಲ್ಲಿ ಇರುತ್ತವೆ ಎಂದು ಸಕಲ ಶಾಸ್ತ್ರಗಳೂ ಹೇಳುತ್ತಿವೆ. ನೀನು ಎಲ್ಲೆಲ್ಲಿ ಹೆಜ್ಜೆಗಳನ್ನಿಟ್ಟಿರುತ್ತೀಯೋ ಅಲ್ಲಲ್ಲಿ ಗಂಗಾದಿತೀರ್ಥಗಳು ವಾಸಿಸುತ್ತಿವೆ. ನೀನು ಗಂಗಾದಿತೀರ್ಥಗಳಲ್ಲಿ ಸ್ನಾನಮಾಡುವುದಕ್ಕಾಗಿ ಹೋಗುವುದಾಗಿದ್ದರೆ ಎಲ್ಲಾ ತೀರ್ಥಗಳೂ ನಿನ್ನ ಕಾಲುಗಳಲ್ಲಿರುವ ಧ್ವಜ ಅಂಕುಶ ಮುಂತಾದ ರೇಖೆಗಳಿಂದ ಯುಕ್ತವಾಗಿರುವ ನಿನ್ನ ಹೆಜ್ಜೆಗಳಿರುವ ಪ್ರದೇಶಗಳಿಗೆ ಹೋಗು. ಆ ಪ್ರದೇಶಗಳು ನಿನ್ನ ಮುಂದೆ ಇಲ್ಲ. ನಿನ್ನ ಹಿಂದೆಯೆ ಇವೆ. ಆದ್ದರಿಂದ ಹಿಂದಿರುಗು.

ಓ ಕೃಷ್ಣದೇವ!, ಸಕಲ ತೀರ್ಥಕ್ಷೇತ್ರಗಳಲ್ಲಿರುವ ಮಹಾತ್ಮರೆಲ್ಲರೂ ಶಾಲಿಗ್ರಾಮ ಮುಂತಾದ ನಿನ್ನ ವಿಗ್ರಹಗಳಲ್ಲಿ ಸನ್ನಿಹಿತನಾಗಿರುವ ನಿನ್ನನ್ನು ಪುರುಷಸೂಕ್ತ ಮುಂತಾದ ಮಂತ್ರಗಳಿಂದ ಅಭಿಷೇಕ ಮಾಡಿ ಪೂಜಿಸುತ್ತಿರುವರು. ಪ್ರತಿಕ್ಷಣದಲ್ಲಿಯೂ ಎಲ್ಲಾ ತೀರ್ಥಗಳಲ್ಲಿಯೂ ಅನೇಕ ಬಾರಿ ಸ್ನಾನ ಮಾಡುತ್ತಿರುವ ನಿನಗೆ ಕಾಶೀಯಾತ್ರೆಯ ಅವಶ್ಯಕತೆಯಿದೆಯೇ?

ಉತ್ತರ - ನನ್ನ ಭಕ್ತರೆಲ್ಲರೂ ಎಲ್ಲಾ ತೀರ್ಥಕ್ಷೇತ್ರಗಳಲ್ಲಿಯೂ ನನ್ನನ್ನು ಕುಳ್ಳಿರಿಸಿ ಎಲ್ಲಾ ತೀರ್ಥಜಲಗಳಿಂದಲೂ ಪ್ರತಿಕ್ಷಣದಲ್ಲಿಯೂ ಸ್ನಾನಮಾಡಿಸುವುದು ನಿಜ. ತೀರ್ಥಗಳಿಂದ ಕೊಡ ಮುಂತಾದವುಗಳಿಂದ ತಂದಿರುವ ನೀರುಗಳನ್ನು ನನ್ನ ತಲೆಯ ಮೇಲೆ ಸುರಿದು ಸ್ನಾನ ಮಾಡಿಸುತ್ತಿರುವ ನಾನು ಆ ತೀರ್ಥಗಳಲ್ಲಿ ಮುಳುಗಿ ಸ್ನಾನವನ್ನು ಮಾಡಬೇಕೆಂದು ಆಶಿಸುವೆನು. ಯಾವ ಭಕ್ತನೂ ನನ್ನನ್ನು ಮುಳುಗಿಸಿ ಸ್ನಾನವನ್ನು ಮಾಡಿಸುತ್ತಿಲ್ಲ. ಅದಕ್ಕಾಗಿ ನಾನು ತೀರ್ಥಕ್ಷೇತ್ರಗಳಿದ್ದಲ್ಲಿಗೆ ಹೋಗಿ ತೀರ್ಥಗಳಲ್ಲಿ ಮುಳುಗಿ ಸ್ನಾನವನ್ನು ಮಾಡಬೇಕು. ಅದಕ್ಕಾಗಿ ಕಾಶೀಯಾತ್ರೆಗೆ ಹೊರಟಿರುವೆನು.

ಪ್ರಶ್ನೆ - " ಎಷ್ಟೋ ಭಕ್ತರು ಸ್ನಾನವನ್ನು ಮಾಡುವಾಗ ಅಘಮರ್ಷಣಸೂಕ್ತ ಮುಂತಾದ ಮಂತ್ರಗಳನ್ನು ಪಠಿಸುತ್ತಾ ಗಂಗಾದಿತೀರ್ಥಗಳ ಮಧ್ಯದಲ್ಲಿ ಸನ್ನಿಹಿತನಾಗಿರುವವನೂ ತನ್ನ ಸನ್ನಿಧಾನ ಬಲದಿಂದಲೇ ಎಲ್ಲಾ ತೀರ್ಥಗಳನ್ನೂ ಪರಿಶುದ್ಧವಾಗುವಂತೆ ಮಾಡುತ್ತಿರುವವನೂ ಆಗಿರುವ ನಿನ್ನನ್ನು ಸ್ಮರಿಸುತ್ತಾ ಸ್ನಾನಮಾಡುತ್ತಿರುವರು. ಎಲ್ಲಾ ತೀರ್ಥಗಳ ಒಳಗೂ ನೀನು ಸನ್ನಿಹಿತನಾಗಿರುವಂತೆ ಸ್ಮರಿಸುತ್ತಿರುವ ಎಲ್ಲಾ ಭಕ್ತರೂ ನಿನ್ನನ್ನು ಎಲ್ಲಾ ತೀರ್ಥಗಳಲ್ಲಿ ಮುಳುಗಿಸಿ ಸ್ನಾನ ಮಾಡಿಸಿದಂತಾಗಲಿಲ್ಲವೇ? ಹೀಗೆ ಪ್ರತಿಕ್ಷಣದಲ್ಲಿಯೂ ಎಲ್ಲಾ ತೀರ್ಥಗಳಲ್ಲಿಯೂ ಮುಳುಗಿ ಸ್ನಾನವನ್ನು ಮಾಡುತ್ತಿರುವ ನೀನು ಮುಳುಗಿ ಸ್ನಾನ ಮಾಡುವುದಕ್ಕಾಗಿ ಕಾಶೀಯಾತ್ರೆಗೆ ಹೋಗಬೇಕಾದ ಅವಶ್ಯಕತೆಯಿದೆಯೇ?

"ಓ ಶ್ರೀಕೃಷ್ಣದೇವ!, ನಿನ್ನ ಗುಣಗಳ ಸಂಕೀರ್ತನವೂ ನಿನ್ನ ಪ್ರೀತ್ಯರ್ಥವಾಗಿ ನರ್ತನ ಮುಂತಾದ ಸೇವೆಗಳೂ ಏರ್ಪಡುತ್ತಿರುವ ಸ್ಥಳಗಳಲ್ಲಿ ಗಂಗಾ ಮುಂತಾದ ಸಕಲ ತೀರ್ಥಗಳೂ ವಾಸಿಸುತ್ತಿರುವುದಾಗಿ ಸಕಲ ಶಾಸ್ತ್ರಗಳೂ

ಹೇಳುತ್ತಿವೆ. ನೀನು ಸಕಲ ತೀರ್ಥಗಳಲ್ಲಿ ಸ್ನಾನ ಮಾಡಬೇಕೆಂಬ ಆಸೆಯುಳ್ಳವನಾಗಿದ್ದರೆ ನಿನ್ನ ಗುಣಗಳ ಸಂಕೀರ್ತನವೂ ನಿನ್ನ ತೃಪ್ತ್ಯರ್ಥವಾಗಿ ನರ್ತನ ಮುಂತಾದ ಸೇವೆಗಳೂ ಏರ್ಪಡುತ್ತಿರುವ ಸ್ಥಳಗಳಿಗೆ ಹೋಗು. ಕಾಶೀಯಾತ್ರೆಯನ್ನು ಮಾಡಿದ್ದರಿಂದ ನಿನಗೆ ಬರುವ ಲಾಭವೇನು?

" ಓ ಪ್ರಭೋ!, ಪ್ರಪಂಚದಲ್ಲಿರುವ ಸರ್ವರೂ ಎಲ್ಲಾ ತೀರ್ಥಗಳ ಸ್ನಾನ ಮುಂತಾದ ಸಕಲ ಪುಣ್ಯಕರ್ಮಗಳನ್ನು ಮಾಡಿ ಆ ಕರ್ಮಗಳಿಂದ ಬಂದಿರುವ ಪುಣ್ಯಗಳನ್ನು ನಿನಗೆ ಸಮರ್ಪಿಸುತ್ತಿರುವರು. ಪುಣ್ಯಕರ್ಮಗಳನ್ನು ಮಾಡದೆಯೇ ನಿನಗೆ ಪುಣ್ಯಗಳು ಬರುತ್ತವೆ. ಆ ಪುಣ್ಯಗಳನ್ನೂ ನೀನು ಅನುಭವಿಸುವುದಿಲ್ಲ. ನಿನ್ನ ಭಕ್ತರಿಗೆ ಅನಂತಪಾಲು ಅಧಿಕವಾಗುವಂತೆ ಮಾಡಿ ಹಿಂದಿರುಗಿ ಕೊಡುತ್ತಿರುವಿ. ಇಂತಹ ನಿನಗೆ ಗಂಗಾದಿಸ್ನಾನಗಳ ಅವಶ್ಯಕತೆಯಿದೆಯೇ?

" ಓ ಶ್ರೀಕೃಷ್ಣದೇವ!, ಗಂಗೆ ಮುಂತಾದ ಸಕಲತೀರ್ಥಗಳೂ ನಿನ್ನ ಪಾದಕಮಲಗಳ ಸಂಬಂಧದಿಂದ ಪರಿಶುದ್ಧವಾಗಿವೆ. ಈ ಗಂಗಾದಿತೀರ್ಥಗಳೂ ಸಹ ನಮ್ಮಂತಹ ಪಾಪಿಗಳು ತಮ್ಮಲ್ಲಿ ಮುಳುಗುವುದರಿಂದ ಅಶುದ್ಧವಾಗುವುದುಂಟು. ಈ ತೀರ್ಥಗಳಲ್ಲಿ ಮಹಾಭಗವದ್ಭಕ್ತರೂ ಸಹ ಸ್ನಾನಮಾಡುತ್ತಿರುವರು. ಆ ಭಗವದ್ಭಕ್ತರುಗಳು ನಿನ್ನನ್ನು ಯಾವಾಗಲೂ ಹೃದಯದಲ್ಲಿ ಧ್ಯಾನಿಸುತ್ತಿರುವುದರಿಂದ ಅತ್ಯಂತ ಪರಿಶುದ್ಧರಾದವರು. ಅವರು ಈ ಗಂಗಾದಿತೀರ್ಥಗಳಲ್ಲಿ ಸ್ನಾನ ಮಾಡುತ್ತಿರುವುದರಿಂದ ಗಂಗಾದಿತೀರ್ಥಗಳು ನಮ್ಮಂತಹ ಮಹಾ ಪಾಪಿಗಳು ಸ್ನಾನ ಮಾಡುತ್ತಿರುವುದರಿಂದ ತಮ್ಮಲ್ಲಿ ಬಂದಿರುವ ಪಾಪಗಳನ್ನೆಲ್ಲವನ್ನೂ ಪರಿಹರಿಸಿಕೊಳ್ಳುವರು. ಆ ಗಂಗಾದಿತೀರ್ಥಗಳ ಪಾಪಗಳನ್ನೆಲ್ಲವನ್ನೂ ಪರಿಹರಿಸುವ ಶಕ್ತಿಯುಳ್ಳ ನಿನಗೆ ಗಂಗಾದಿಸ್ನಾನಗಳ ಅವಶ್ಯಕತೆಯಿದೆಯೇ? ನಿನ್ನ ಕಾಲನ್ನು ತೊಳೆದ ನೀರಾಗಿರುವ ಗಂಗಾತೀರ್ಥಗಳಲ್ಲಿ ನಿನಗೆ ಸ್ನಾನದ ಅವಶ್ಯಕತೆಯಿದೆಯೇ?"

" ಓ ವಿಶ್ವಂಭರಮೂರ್ತಿಯೇ!, ನಿನ್ನ ದೇಹದಲ್ಲಿ ಒಂದೊಂದು ರೋಮರಂಧ್ರಗಳಲ್ಲಿ ಅನಂತಕೋಟಿ ಬ್ರಹ್ಮಾಂಡಗಳು ಪ್ರವೇಶಿಸಿದರೂ ಆ ರಂಧ್ರಗಳನ್ನು ಮುಚ್ಚಲು ಸಾಧ್ಯವಿಲ್ಲ. ಇಂತಹ ದೊಡ್ಡ ದೇಹವನ್ನು ನಿರ್ಮಿಸಲು ಒಂದು ಬ್ರಹ್ಮಾಂಡದಲ್ಲಿರುವ ಪೃಥಿವೀ, ಜಲ, ತೇಜಸ್ಸು, ವಾಯು, ಆಕಾಶ ಎಂಬ ಅತ್ಯಲ್ಪವಾದ ಐದು ಭೂತಗಳಿಂದ ಸಾಧ್ಯವೇ? ಆದ್ದರಿಂದ ನಿನ್ನ ಶರೀರವು ಪಂಚಭೂತಗಳಿಂದ ನಿರ್ಮಿತವಾದುದಲ್ಲ. ಬ್ರಹ್ಮಾಂಡದ ಒಳಗೂ ಹೊರಗೂ ವ್ಯಾಪಿಸಿರುವ ಈ ಶರೀರವನ್ನು ಒದ್ದೆಮಾಡುವುದಕ್ಕೆ ಬೇಕಾದಷ್ಟು ನೀರುಗಳು ಎಲ್ಲೆಲ್ಲಿಯೂ ಇಲ್ಲ. ಗಂಗೆಯು ಎಲ್ಲಾ ನದಿಗಳಲ್ಲಿಯೂ ಅತಿ ದೊಡ್ಡವಳು. ಅವಳೂ ಸಹ ತ್ರಿವಿಕ್ರಮರೂಪಿಯಾದ ನಿನ್ನ ಕಾಲಿನಲ್ಲಿರುವ ಅಂಗುಷ್ಠದ ತುದಿಯನ್ನು ಪೂರ್ತಿಯಾಗಿ ಒದ್ದೆಮಾಡಲು ಶಕ್ತಳಾಗಲಿಲ್ಲ. ನಿನ್ನ ಇಡೀ ದೇಹವನ್ನು ಒದ್ದೆಮಾಡುವಷ್ಟು ಜಲವು ಪ್ರಪಂಚದಲ್ಲಿ ಎಲ್ಲಿಯೂ ಇಲ್ಲವೇ ಇಲ್ಲ. ಹೀಗಿರುವಾಗ ಭೂಮಿಯಲ್ಲಿ ಇದೆಯೇ? ಆದ್ದರಿಂದ ಗಂಗಾದಿತೀರ್ಥಗಳಲ್ಲಿ ಸ್ನಾನಕ್ಕಾಗಿ ಹೋಗುವೆನು ಎಂದು ಹೇಳುತ್ತಾ ಎಲ್ಲಿಗೂ ಹೋಗಬೇಡ. ಹಿಂದಿರುಗು. ಈ ಮೂಲಮಾಧವಕ್ಷೇತ್ರದಲ್ಲಿ ರುಕ್ಮಿಣಿಯ ವಿವಾಹವನ್ನು ಮಾಡಿಕೊಳ್ಳು. ಇದರಿಂದ ಈ ಪ್ರಪಂಚದಲ್ಲಿರುವ ಎಲ್ಲಾ ಕ್ಷೇತ್ರಗಳಿಗಿಂತಲೂ ಈ ಮೂಲಮಾಧವಕ್ಷೇತ್ರವು ಸರ್ವೋತ್ತಮಕ್ಷೇತ್ರವೆಂದು ಪ್ರಸಿದ್ಧವಾಗುವಂತೆ ಮಾಡು."

" ನೀನು ಸರ್ವತ್ರ ವ್ಯಾಪ್ತನಾಗಿರುವಿ. ನೀನು ಎಲ್ಲಿಗೂ ಹೋಗಲು ಸಾಧ್ಯವಿಲ್ಲ. ನೀನು ಎಲ್ಲಿಗಾದರೂ ಹೋಗುವುದಾದರೆ ನೀನು ಎಲ್ಲಾ ಕಡೆಗಳಲ್ಲೂ ಇಲ್ಲದೆ ಪರಿಮಿತವಾದ ಸ್ಥಳದಲ್ಲಿ ಇರುವವನಾಗಿರಬೇಕು. ಹಾಗಿದ್ದರೆ ಮಾತ್ರ ನೀನು ಇಲ್ಲದಿರುವ ಸ್ಥಳಕ್ಕೆ ನೀನು ಹೋಗುವುದೂ ನೀನು ಹೋದಕೂಡಲೇ ಹಿಂದೆ ನೀನಿದ್ದ ಸ್ಥಳದಲ್ಲಿ ನೀನಿಲ್ಲದಿರುವುದೂ ಸಾಧ್ಯವಾಗುತ್ತದೆ. ಎಲ್ಲಾ ಸ್ಥಳಗಳಲ್ಲಿಯೂ ವ್ಯಾಪಿಸಿರುವ ನೀನು ಒಂದು ಸ್ಥಳವನ್ನು ಬಿಟ್ಟು ಇನ್ನೊಂದು ಸ್ಥಳಕ್ಕೆ ಹೋಗುವುದು ಎಂಬ ಕಾಶೀಯಾತ್ರೆ ಮುಂತಾದವುಗಳು ಅಸಂಭಾವಿತವೆಂದೂ ಕಾಶೀಯಾತ್ರೆ ಮುಂತಾದ ಹೆಸರುಗಳಿಂದ ನೀನು ನಮ್ಮನ್ನು ವಂಚಿಸಬೇಡ ಎಂದೂ ವಿನಯದಿಂದ ಪ್ರಾರ್ಥಿಸಿಕೊಳ್ಳುವೆನು" ಎಂದು ಪ್ರಾರ್ಥಿಸಿದನು.

ಶ್ರೀಕೃಷ್ಣದೇವನು ಹಿಂದಿರುಗಿದನು. ಕಾಶೀಯಾತ್ರೆ ಎಂಬ ನಾಟಕವು ಮುಗಿಯಿತು. ಎಲ್ಲಾ ದೇವತೆಗಳೂ ಶ್ರೀಕೃಷ್ಣದೇವನ ದಾಸರು ಎಂದು ತಿಳಿಸುವುದಕ್ಕಾಗಿ ರುಕ್ಮಿಣೀಸ್ವಯಂವರನಾಟಕವು ಆರಂಭವಾಯಿತು. ರುಕ್ಮಿಣೀದೇವಿಯರು ವಿವಾಹಕಾಲದಲ್ಲಿ ಬ್ರಹ್ಮ ಮುಂತಾದ ಸಕಲದೇವತೆಗಳೂ ಮೂಲಮಾಧವಕ್ಷೇತ್ರಕ್ಕೆ ಬಂದಿದ್ದರು. ಆಗ ರುಕ್ಮಿಣೀದೇವಿಯರು ಆಲೋಚಿಸಿದರು. ಬಂದಿರುವ ಇವರೆಲ್ಲರ ಯೋಗ್ಯತೆಗಳನ್ನು ಪರೀಕ್ಷಿಸಿ ಶ್ರೀಕೃಷ್ಣದೇವನೇ ಸರ್ವೋತ್ತಮನೆಂದು ತೀರ್ಮಾನಿಸುವೆನು. ಸ್ವಯಂವರಮಹೋತ್ಸವದಲ್ಲಿ ಎಲ್ಲರ ಯೋಗ್ಯತಾಂಶಗಳನ್ನೂ ತಿಳಿದಿರುವ ಸಖಿಯೊಬ್ಬಳು ಮದುಮಗಳ ಪಕ್ಕದಲ್ಲಿರಬೇಕು. ಅವಳು ಒಬ್ಬೊಬ್ಬ ರಾಜರುಗಳ ಯೋಗ್ಯತಾಂಶವನ್ನು ಮದುಮಗಳಿಗೆ ಹೇಳುತ್ತಾ ಬರಬೇಕು. ಆ ಮಾತುಗಳನ್ನು ಕೇಳಿದ ಮದುಮಗಳು ಆ ವರನು ಸಂಮತನಾಗಿದ್ದರೆ ಅವನ ಕುತ್ತಿಗೆಯಲ್ಲಿ ಮಾಲೆಯನ್ನು ಹಾಕಬೇಕು. ಇಷ್ಟವಿಲ್ಲದಿದ್ದರೆ ಮುಂದೆ ಹೋಗಬೇಕು. ಇದು ಸ್ವಯಂವರದ ಸಂಪ್ರದಾಯ.

ನನ್ನ ಸ್ವಯಂವರದಲ್ಲಿ ಬ್ರಹ್ಮ ಮುಂತಾದ ಸರ್ವದೇವತೆಗಳು ಬಂದಿರುವರು. ಇವರೆಲ್ಲರ ಯೋಗ್ಯತಾಂಶಗಳನ್ನು ನಾನೊಬ್ಬಳೇ ಚೆನ್ನಾಗಿ ತಿಳಿದವಳು. ಬೇರೆ ಯಾರೂ ಇಲ್ಲ. ಆದ್ದರಿಂದ ನಾನೊಬ್ಬಳೇ ಸಖಿಯಾಗಿಯೂ ಮದುಮಗಳಾಗಿಯೂ ನಟಿಸಬೇಕಾಗಿದೆ. ಎಂದು ತೀರ್ಮಾನಿಸಿದಳು. ಒಬ್ಬೊಬ್ಬ ದೇವತೆಯನ್ನು ಸಮೀಪಿಸಿದಾಗ ತನ್ನ ಬುದ್ಧಿಯಿಂದ ಆ ದೇವತೆಯ ಯೋಗ್ಯತಾಂಶವನ್ನು ತನ್ನ ಮನಸ್ಸಿನಲ್ಲೇ ಹೇಳಿಕೊಳ್ಳುವಳು. ಈ ಮಾತುಗಳನ್ನು ತನ್ನ ಬುದ್ಧಿ ಎಂಬ ಸಖಿಯು ಹೇಳುತ್ತಿರುವುದಾಗಿಯೂ ಈ ಮಾತುಗಳಿಗೆ ಕೊಡುವ ಉತ್ತರಗಳನ್ನು ತನ್ನ ಮಾತುಗಳೆಂದೂ ತೀರ್ಮಾನಿಸಿ ರುಕ್ಮಿಣೀದೇವಿಯು ಸ್ವಯಂವರ ಎಂಬ ನಾಟಕವನ್ನು ಆಡಲು ಆರಂಭಿಸಿದಳು.

ರುಕ್ಮಿಣೀದೇವಿಯು ಸ್ವಯಂವರ ಮಂಟಪವನ್ನು ಪ್ರವೇಶಿಸಿದಳು. ಬ್ರಹ್ಮ ಮತ್ತು ವಾಯುದೇವರು ಸಮವಾದ ಆಸನಗಳಲ್ಲಿ ಕುಳಿತಿದ್ದರು. ಆಗ ಬುದ್ಧಿ ಎಂಬ ಸಖಿಯು ಬ್ರಹ್ಮದೇವನನ್ನು ತೋರಿಸಿ ಹೇಳಿದಳು. " ಎಲೈ ರುಕ್ಮಿಣಿಯೇ, ಇವನ ಯೋಗ್ಯತೆಯನ್ನು ತಿಳಿಸುವೆನು. ಈ ಬ್ರಹ್ಮಕಲ್ಪದ ಆರಂಭದಲ್ಲಿ ಪ್ರಳಯಸಮುದ್ರವು ಎಲ್ಲಾ ಪ್ರದೇಶಗಳಲ್ಲಿಯೂ ವ್ಯಾಪಿಸಿತ್ತು. ಆ ಸಮುದ್ರದಲ್ಲಿ ಮುಕ್ತಶೇಷದೇವನು ಮಲಗಿದ್ದನು. ಆ ಕಾಲದಲ್ಲಿ ಮುಕ್ತರಾದ ಸಕಲ ದೇವತೆಗಳೇ ಮೊದಲಾದವರು ನಾರಾಯಣನ ಪಾದಗಳನ್ನು ಸೇವಿಸುತ್ತಿದ್ದರು. ಆ ನಾರಾಯಣನ ಹೊಕ್ಕಳಿನಿಂದ ಒಂದು ಕಮಲವು ಹುಟ್ಟಿತು. ಆ ಕಮಲದಲ್ಲಿ ಈ ಬ್ರಹ್ಮದೇವನು ಹುಟ್ಟಿದನು. ಕಮಲದಿಂದ

ಹುಟ್ಟಿರುವುದರಿಂದ ಈ ಬ್ರಹ್ಮನಿಗೆ "ಪದ್ಮಯೋನಿ" ಎಂಬ ಹೆಸರು ಬಂದಿರುತ್ತದೆ. ಇವನ ತಂದೆಯಾಗಿರುವ ನಾರಾಯಣನಿಗೆ ಆತ್ಮಾ, ಸ್ವಯಂ, ಅ, ಎಂಬ ಹೆಸರುಗಳಿವೆ. ಆದ್ದರಿಂದ "ಆತ್ಮಾ" "ಸ್ವಯಂ" "ಅ" ಎಂಬ ಹೆಸರುಗಳಿಂದ ಯುಕ್ತನಾಗಿರುವ ನಾರಾಯಣನಿಂದ ಹುಟ್ಟಿರುವ ಈ ಬ್ರಹ್ಮನಿಗೆ "ಆತ್ಮಯೋನಿ" "ಸ್ವಯಂಭೂ" "ಅಜ" ಎಂಬ ಮೂರು ಹೆಸರುಗಳು ಬಂದಿರುತ್ತವೆ. ನಾರಾಯಣನನ್ನು ಹೊಗಳುತ್ತಿರುವ ಅನಂತವೇದಗಳನ್ನು ಈ ಬ್ರಹ್ಮನು ತನ್ನ ಮನಸ್ಸಿನಲ್ಲಿ ಆವೃತ್ತಿ ಮಾಡುತ್ತಾ ನಾರಾಯಣನನ್ನು ಯಾವಾಗಲೂ ಹೊಗಳುತ್ತಿರುವನು. ಆದ್ದರಿಂದ ಇವನನ್ನು "ವೇದಗರ್ಭ" ಎಂದು ಎಲ್ಲಾ ಜ್ಞಾನಿಗಳೂ ಕರೆಯುತ್ತಿರುವರು."

"ಬ್ರಹ್ಮದೇವನು ಹುಟ್ಟಿದಾಗ ಪ್ರಳಯಕಾಲದ ದೊಡ್ಡ ಬಿರುಗಾಳಿಯು ಏರ್ಪಟ್ಟಿತು. ಆ ಬಿರುಗಾಳಿಯಿಂದ ಪ್ರಳಯ ಸಮುದ್ರದಲ್ಲಿ ಸಹಸ್ರಾರು ದೊಡ್ಡ ದೊಡ್ಡ ಅಲೆಗಳು ಏರ್ಪಟ್ಟವು. ಆ ಅಲೆಗಳಿಂದ ತಾನು ಕುಳಿತಿರುವ ಕಮಲದ ಬುಡವು ಎಲ್ಲಿದೆ ಎಂಬುದೇ ತಿಳಿಯಲಿಲ್ಲ. ತಾನು ಕುಳಿತಿರುವ ಕಮಲಕ್ಕೆ ಮೂಲವು ಈ ಸಮುದ್ರದಲ್ಲಿದೆಯೆಂದೂ ಆ ಮೂಲವೇ ತನ್ನ ತಂದೆಯೆಂದೂ ನಿಶ್ಚೈಸಿಕೊಂಡನು. ತನ್ನ ತಂದೆಯನ್ನು ನೋಡಬೇಕೆಂದು ಆಶಿಸಿದನು. ತಪಸ್ಸನ್ನು ಮಾಡಿ ತಂದೆಯನ್ನು ನೋಡಬೇಕೆಂದು ತೀರ್ಮಾನಿಸಿದನು. ಇಂದ್ರಿಯಗಳನ್ನೆಲ್ಲವನ್ನೂ ಜಯಿಸಿ ತಪಸ್ಸನ್ನು ಮಾಡಿದನು. ತಪೋಬಲದಿಂದ ಪ್ರಳಯಸಮುದ್ರದ ಮಧ್ಯದಲ್ಲಿ ಮಲಗಿರುವ ಶೇಷದೇವನನ್ನು ನೋಡಿದನು. ಶೇಷದೇವನ ದೇಹವು ಸಮುದ್ರದಲ್ಲಿರುವ ದೊಡ್ಡ ದೊಡ್ಡ ಅಲೆಗಳಿಂದ ಕೆಳಗೆ ಮೇಲೆ ಹೋಗುತ್ತಾ ಉಯ್ಯಾಲೆಯಂತೆ ಶೋಭಿಸಿತು. ಆ ಶೇಷದೇವನ ಸಾವಿರ ಹೆಡೆಗಳಲ್ಲಿ ದೊಡ್ಡ ದೊಡ್ಡ ರತ್ನಗಳಿದ್ದವು. ಆ ರತ್ನಗಳಿಂದ ಹೊರಟಿರುವ ಸಹಸ್ರಾರು ಕಿರಣಗಳು ಅನೇಕ ಲಕ್ಷ ಸೂರ್ಯರುಗಳನ್ನೂ ಚಂದ್ರರುಗಳನ್ನೂ ತೃಣೀಕರಿಸುತ್ತಿದ್ದವು. ಅಂತಹ ಶೇಷದೇವನ ದೇಹದ ಮಧ್ಯದಲ್ಲಿ ಸಮುದ್ರರಾಜನ ಮಗಳಾಗಿರುವ ಲಕ್ಷ್ಮೀದೇವಿಯಿಂದ ಸಹಿತನಾಗಿ ಮಲಗಿರುವ ನಾರಾಯಣನನ್ನು ನೋಡಿದನು. ಇವನೇ ತನ್ನ ತಂದೆಯಂದು ತೀರ್ಮಾನಿಸಿದನು. ಶ್ರೀನಾರಾಯಣನೂ ಕಮಲದಂತೆ ವಿಶಾಲವಾದ ಕಣ್ಣುಗಳಿಂದ ಇವನನ್ನು ನೋಡಿದನು. ಅನಂತ ಸಹಸ್ರಕೈಗಳಿಂದ ಯುಕ್ತನಾಗಿರುವ ನಾರಾಯಣನನ್ನು ಮುಕ್ತರಾದ ಬ್ರಹ್ಮಮುಂತಾದ ಸಕಲ ದೇವತೆಗಳೂ ಸೇವಿಸುತ್ತಿರುವುದನ್ನು ನೋಡಿದನು. ಈ ನಾರಾಯಣನೂ ಲಕ್ಷ್ಮೀದೇವಿಯೂ ಇವನಲ್ಲಿ ವಿಶೇಷಾನುಗ್ರಹವನ್ನು ಮಾಡಿದರು. ಈ ಅನುಗ್ರಹದಿಂದ ಸಕಲ ಪ್ರಪಂಚವನ್ನು ಸೃಷ್ಟಿಸಿದನು. ಯಾವಾಗಲೂ ಶ್ರೀಹರಿಯನ್ನು ಸ್ಮರಿಸುತ್ತಾ ಪ್ರಪಂಚದಲ್ಲಿರುವ ಸರ್ವರ ಮಧ್ಯದಲ್ಲಿ ಧನ್ಯನೆಂದೆನೆಸಿದನು. ಸರ್ವವಿಷ್ಣುಭಕ್ತರ ಮಧ್ಯದಲ್ಲಿಯೂ ಇವನೇ ಶ್ರೇಷ್ಠನೆಂದೆನಿಸಿದನು.

" ಎಲೈ ರುಕ್ಮಿಣಿಯೇ, ಇವನನ್ನು ನೋಡು. ಇವನ ಎಲ್ಲಾ ಪ್ರಾಣಗಳಿಗೂ ಇಂದ್ರಿಯಾಭಿಮಾನಿ ದೇವತೆಗಳಿಗೂ ಅಧಿಪತಿಯಾದುದರಿಂದ ಮುಖ್ಯಪ್ರಾಣನೆಂದೆನಿಸುವನು. ಇವನು ಎಲ್ಲಾ ಗುಣಗಳಿಂದಲೂ ಬ್ರಹ್ಮನಿಗೆ ಸಮಾನನು. ಸೃಷ್ಟಿಕಾಲದಲ್ಲಿ ಬ್ರಹ್ಮದೇವನ ದೇಹದಲ್ಲಿ ಎಲ್ಲಾ ಇಂದ್ರಿಯಾಭಿಮಾನಿದೇವತೆಗಳೂ ಇದ್ದರು. ಅವರೆಲ್ಲರಿಗೂ ನಾನು ಶ್ರೇಷ್ಠನೇ ಹೊರತು ನೀನಲ್ಲ ಎಂಬ ಕಲಹವು ಏರ್ಪಟ್ಟಿತು. ಬ್ರಹ್ಮದೇವನ ದೇಹದಲ್ಲಿ ಬ್ರಹ್ಮನೂ ನಾರಾಯಣನೂ ಈ ದೇವತೆಗಳಲ್ಲಿ ಶ್ರೇಷ್ಠನಾದವನನ್ನು ತೀರ್ಮಾನಿಸುವುದಕ್ಕೋಸ್ಕರ ನಾರಾಯಣನ ಮತ್ತು ಬ್ರಹ್ಮನ ಶಕ್ತಿಯನ್ನು ವ್ಯಕ್ತಪಡಿಸದೇ ಉದಾಸೀನರಾಗಿದ್ದರು."

" ಒಬ್ಬೊಬ್ಬ ದೇವತೆಯೂ ಬ್ರಹ್ಮನ ದೇಹವನ್ನು ಬಿಟ್ಟು ಕ್ರಮದಿಂದ ಹೊರಗೆ ಹೋಗಿರಿ. ಯಾರು ದೇಹವನ್ನು ಬಿಟ್ಟು ಹೋಗುವಾಗ ದೇಹವು ಬೀಳುತ್ತದೋ ಅವನು ಉತ್ತಮನೆಂದು ತಿಳಿಯಿರಿ. ಪುನಃ ಒಬ್ಬೊಬ್ಬರಾಗಿ ದೇಹದೊಳಗೆ ಪ್ರವೇಶಿಸಿರಿ. ಯಾರು ಪ್ರವೇಶಿಸುವಾಗ ದೇಹವು ಎದ್ದುನಿಲ್ಲುವುದೋ ಅವನು ಶ್ರೇಷ್ಠನೆಂದು ತಿಳಿಯಿರಿ" ಎಂದು ಶ್ರೀಹರಿಯು ಆಜ್ಞಾಪಿಸಿದನು. ಶ್ರೀಹರಿಯ ಆಜ್ಞೆಯಂತೆ ಕಣ್ಣು, ಕಿವಿ ಮುಂತಾದ ಒಂದೊಂದು ಇಂದ್ರಿಯಾಭಿಮಾನಿದೇವತೆಗಳೂ ಕ್ರಮವಾಗಿ ದೇಹವನ್ನು ಬಿಟ್ಟು ಹೋದರು. ಆಗ ಆಯಾ ಇಂದ್ರಿಯಗಳಿಂದ ನೋಡುವುದು ಕೇಳುವುದು, ಮುಂತಾದ ವ್ಯಾಪಾರಗಳು ನಡಿಯಲಿಲ್ಲ. ಅಷ್ಟೇ ಹೊರತು ದೇಹವು ಬೀಳಲಿಲ್ಲ. ಮುಖ್ಯಪ್ರಾಣದೇವನು ದೇಹವನ್ನು ಬಿಟ್ಟು ಹೊರಡಲಿಕ್ಕೆ ಉದ್ಯುಕ್ತನಾದನು. ಆಗ ಆ ದೇಹದಲ್ಲಿರುವ ಎಲ್ಲಾ ದೇವತೆಗಳಿಗೂ ದೇಹದಲ್ಲಿರಲು ಸಾಧ್ಯವಾಗಲಿಲ್ಲ. ಓ ಮುಖ್ಯಪ್ರಾಣದೇವ, ನೀನಿಲ್ಲದೆ ನಮ್ಮಿಂದ ಈ ದೇಹದಲ್ಲಿರಲು ಸಾಧ್ಯವಿಲ್ಲ. ನೀನೇ ಶ್ರೇಷ್ಠನು. ನಾವೆಲ್ಲರೂ ನಿನ್ನ ದಾಸರು ಎಂದು ಕೂಗಿಕೊಂಡರು. ಪುನಃ ಎಲ್ಲಾ ದೇವತೆಗಳೂ ಒಬ್ಬೊಬ್ಬರಾಗಿ ದೇಹದಲ್ಲಿ ಪ್ರವೇಶಿಸಿದರು. ಯಾರು ಪ್ರವೇಶಿಸಿದರೂ ದೇಹವು ಎದ್ದು ನಿಲ್ಲಲಿಲ್ಲ. ಮುಖ್ಯಪ್ರಾಣದೇವರು ಪ್ರವೇಶಿಸಿದ ಕೂಡಲೇ ಎದ್ದುನಿಂತಿತು. ಇದರಿಂದ ಮುಖ್ಯಪ್ರಾಣದೇವನ ಶಕ್ತಿಯು ಸ್ಪಷ್ಟವಾಯಿತು. ಇವನ ಪ್ರಭಾವವನ್ನು ಇನ್ನೂ ಹೇಳುವೆನು. ಒಂದೊಂದು ಜೀವನೂ ಒಂದೊಂದು ದಿನದಲ್ಲಿ ೨೧೬೦೦ ಸಲ ಶ್ವಾಸವನ್ನು ಬಿಡುತ್ತಿರುವನು. ಒಂದೊಂದು ಸಲ ಶ್ವಾಸವನ್ನು ಬಿಡುತ್ತಿರುವಾಗ ಆ ಜೀವನ ದೇಹದೊಳಗೆ ಇರುವ ಮುಖ್ಯಪ್ರಾಣದೇವನು " ಹಂಸಃ ಸೋಽಹಂ ಸ್ವಾಹಾ" ಎಂಬ ಮಂತ್ರವನ್ನು ಜಪಿಸುತ್ತಾ ಶ್ರೀಹರಿಯನ್ನು ಸಂತೋಷಪಡಿಸುತ್ತಿರುವನು. ಮತ್ತು ಪ್ರಾಣಿಗಳನ್ನು ಬದುಕಿಸುತ್ತಿರುವನು. ಅನಂತಜೀವರುಗಳ ಅನಂತ ದೇಹಗಳಲ್ಲಿ ಒಂದೊಂದು ದಿನಗಳಲ್ಲಿಯೂ ೨೧೬೦೦ ಹಂಸಮಂತ್ರಗಳನ್ನು ಜಪಿಸುತ್ತಾ ಶ್ರೀಹರಿಯನ್ನು ಸಂತೋಷಪಡಿಸುತ್ತಲೂ ಅನಂತಜೀವರನ್ನು ಬದುಕಿಸುತ್ತಲೂ ಇರುವ ಮುಖ್ಯಪ್ರಾಣದೇವನ ವಿಷ್ಣುಭಕ್ತಿಯನ್ನೂ ಸಕಲ ಲೋಕರಕ್ಷಕತ್ವ ಶಕ್ತಿಯನ್ನು ವರ್ಣಿಸಲು ಯಾರು ಶಕ್ತರು? ಶ್ರೀಹರಿಯೂ ಈ ಮುಖ್ಯಪ್ರಾಣನನ್ನು ತೊಡೆಯಲ್ಲಿ ಕುಳ್ಳಿರಿಸಿಕೊಂಡು ಲಾಲಿಸುತ್ತಿರುವನು. ಶ್ರೀಹರಿಯ ಲಾಲನೆಗೆ ಪಾತ್ರನಾಗಿರುವ ಇವನ ಮಹಿಮೆಯನ್ನು ಎಷ್ಟೆಂದು ವರ್ಣಿಸಲಿ?"

" ಎಲೈ ರುಕ್ಮಿಣಿಯೇ! ರುದ್ರ ಇಂದ್ರ ಮುಂತಾದ ಎಲ್ಲಾ ದೇವತೆಗಳೂ ಆಗಾಗ್ಗೆ ದೈತ್ಯಾವೇಶದಿಂದ ಯುಕ್ತರಾಗಿ ಸರ್ವೋತ್ತಮನಾದ ಶ್ರೀಹರಿಯನ್ನು ವಿರೋಧಿಸುವುದೂ ಉಂಟು. ಅದಕ್ಕೆ ತಕ್ಕ ಶಿಕ್ಷೆಯನ್ನು ಅನುಭವಿಸುವುದೂ ಉಂಟು. ಇವನಲ್ಲಿ ದೈತ್ಯಾವೇಶವಿಲ್ಲ. ಯಾವಾಗಲೂ ವೈಷ್ಣವಧರ್ಮಗಳನ್ನು ಅವಿಚ್ಛಿನ್ನವಾಗಿ ಮಾಡುತ್ತಿರುವನು. ಶ್ರೀಹರಿಯು ಇವನ ಭಕ್ತಿಗೆ ಮೆಚ್ಚಿ ಮುಂದಿನ ಕಲ್ಪದಲ್ಲಿ ಬ್ರಹ್ಮಪದವಿಯನ್ನು ಇವನಿಗೆ ಕೊಡುವನು. ಈಗ ಬ್ರಹ್ಮಪದವಿಯಲ್ಲಿರುವ ಬ್ರಹ್ಮನು ಮುಕ್ತಿಯನ್ನು ಪಡೆದ ಕೂಡಲೇ ಈ ಮುಖ್ಯಪ್ರಾಣನು ಬ್ರಹ್ಮಪದವಿಯನ್ನು ಪಡೆಯುವನು."

" ಹಿಂದೆ ಎಲ್ಲಾ ದೇವತೆಗಳೂ ದೈತ್ಯರು ಒಟ್ಟು ಗೂಡಿ ಹಾಲಿನ ಸಮುದ್ರವನ್ನು ಕಡೆದರು. ಆರಂಭದಲ್ಲಿ ಸಮುದ್ರದಿಂದ "ಹಾಲಾಹಲ" ಎಂಬ ವಿಷವು ಎಲ್ಲಾ ಲೋಕಗಳನ್ನೂ ಸುಡುತ್ತಾ ಬಂತು. ಆ ವಿಷದ ಪಾತ್ರೆಯನ್ನು ಈ ಮುಖ್ಯಪ್ರಾಣನು ತೆಗೆದುಕೊಂಡನು. ರುದ್ರನು ತಾನು ಕುಡಿಯುವುದಾಗಿ ಹೇಳಿ ಆ ವಿಷವನ್ನು ಬೇಡಿದನು. ಆಗ ವಾಯುದೇವನು ಆ ವಿಷದ ಶಕ್ತಿಯನ್ನು ತಿಳಿಸುವುದಕ್ಕಾಗಿ ಆ ಪಾತ್ರೆಯಲ್ಲಿರುವ ವಿಷದಲ್ಲಿ ಒಂದು ಚಿಟಿಕೆಯಷ್ಟು

ವಿಷವನ್ನು ತೆಗೆದನು. ಅಂಗೈಯಲ್ಲಿಟ್ಟುಕೊಂಡು ಚೆನ್ನಾಗಿ ತಿಕ್ಕಿದನು. ವಿಷದ ಶಕ್ತಿಯನ್ನೆಲ್ಲಾ ಅಡಗಿಸಿದನು. ಆ ಒಂದು ಚಿಟಿಕೆಯಷ್ಟು ವಿಷವನ್ನು ಕೊಟ್ಟನು. ಆ ವಿಷವನ್ನು ರುದ್ರನು ಕುಡಿದನು. ಮೂರ್ಛಿತನಾದನು. ವಾಯುದೇವನು ವಿಷವನ್ನೂ ವಿಷದ ಪಾತ್ರೆಯನ್ನೂ ನುಂಗಿದನು. ಇವನನ್ನು ಆ ವಿಷವು ಬಾಧಿಸಲಿಲ್ಲ. ಜೀರ್ಣವಾಯಿತು. ನೀರ್ವೀರ್ಯವಾದ ಒಂದು ಚಿಟಿಕೆಯಷ್ಟು ವಿಷವು ರುದ್ರದೇವನನ್ನು ಮೂರ್ಛಿತನಾಗುವಂತೆ ಮಾಡಿರುವಾಗ ಪೂರ್ಣಶಕ್ತಿ ಯುಳ್ಳ ವಿಷವನ್ನೂ ವಿಷದ ಪಾತ್ರೆಯನ್ನೂ ನುಂಗಿ ಜೀರ್ಣಿಸಿಕೊಂಡಿರುವ ಈ ವಾಯುದೇವನ ಶಕ್ತಿಯನ್ನು ವರ್ಣಿಸಲು ನಾವು ಶಕ್ತರೇ?"

" ಎಲೈ ರುಕ್ಮಿಣಿಯೇ!, ಮೋಕ್ಷವನ್ನು ಕೊಡುವ ಅಧಿಕಾರವು ನಾರಾಯಣನಿಗೊಬ್ಬನಿಗೆ ಹೊರತು ಬೇರೆ ಯಾರಿಗೂ ಇಲ್ಲ ಎಂಬ ವಿಷಯದಲ್ಲಿ ಯಾರಿಗೂ ವಿವಾದವಿಲ್ಲ. ಆದರೆ ನಾರಾಯಣನು ವಾಯುದೇವನಿಗೆ ಉತ್ತಮಾಧಿಕಾರಿಯನ್ನು ನೋಡಿ ಮೋಕ್ಷವನ್ನು ಕೊಡುವ ಅಧಿಕಾರವನ್ನು ಕೊಟ್ಟಿರುವನು. ಆದ್ದರಿಂದ ಶ್ರೀಹರಿಯ ಆಜ್ಞೆಯಿಂದ ತನಗೆ ಪ್ರಿಯನಾದ ಭಕ್ತನಿಗೆ ಮೋಕ್ಷವನ್ನು ಕೊಡುವ ಅಧಿಕಾರವನ್ನೂ ಪಡೆದಿರುವನು."

" ಎಲೈ ರುಕ್ಮಿಣಿಯೇ!, ವಾಯುದೇವನು ಮೂಲರೂಪದಲ್ಲಿ ಮಾತ್ರ ಶ್ರೀಹರಿಯನ್ನು ಸೇವಿಸುತ್ತಿಲ್ಲ. ಶ್ರೀಹರಿಯು ಭೂಮಿಯಲ್ಲಿ ಅವತರಿಸಿದಾಗಲೂ ಭೂಮಿಯಲ್ಲಿ ಅವತರಿಸಿ ಶ್ರೀಹರಿಯನ್ನು ಸೇವಿಸುತ್ತಿರುವನು. ಶ್ರೀಹರಿಯು ರಾಮಾವತಾರವನ್ನು ಸ್ವೀಕರಿಸಿದಾಗ "ಹನೂಮಾನ್" ಎಂಬ ಹೆಸರಿನಿಂದ ಭೂಮಿಯಲ್ಲಿ ಅವತರಿಸಿ ಅಕ್ಷಕುಮಾರ ಮುಂತಾದ ರಾಕ್ಷಸರನ್ನು ಸಂಹರಿಸಿದನು. ಶ್ರೀಕೃಷ್ಣನಾಗಿ ಅವತರಿಸಿದಾಗ "ಭೀಮ" ಎಂಬ ಹೆಸರಿನಿಂದ ಅವತರಿಸಿ ಇತರರಿಂದ ಅಸಾಧ್ಯವಾದ ಸೇವೆಯನ್ನು ಮಾಡುತ್ತಿರುವನು. ಇನ್ನು ಮುಂದೆ "ಮಧ್ವ" ಎಂಬ ರೂಪವನ್ನು ಸ್ವೀಕರಿಸಿ ಶ್ರೀವೇದವ್ಯಾಸರೂಪಿಯಾದ ಶ್ರೀಹರಿಯನ್ನು ಸೇವಿಸುವನು." ಎಂದು ಬುದ್ಧಿಸಖಿಯು ರುಕ್ಮಿಣಿಯನ್ನು ಕುರಿತು ಹೇಳಿದಳು.

ಈ ಮಾತುಗಳನ್ನು ಕೇಳಿದ ರುಕ್ಮಿಣೀದೇವಿಯು ಬ್ರಹ್ಮನನ್ನೂ ವಾಯುದೇವನನ್ನೂ ಕೃಪಾಕಟಾಕ್ಷದಿಂದ ನೋಡಿದಳು. ಅವರಿಬ್ಬರೂ ಅತ್ಯಂತ ಭಕ್ತಿಯಿಂದ ನಮಸ್ಕರಿಸಿದರು. ಅವರಿಬ್ಬರನ್ನೂ ಮಕ್ಕಳೆಂದು ಭಾವಿಸಿದಳು. ಅವರಿಬ್ಬರ ಪ್ರಭುವಾಗಿರುವ ಶ್ರೀಹರಿಯೇ ತನ್ನ ಪತಿಯೆಂದು ತೀರ್ಮಾನಿಸಿ ಮುಂದೆ ನಡೆದಳು. ಆಗ ಬುದ್ಧಿಸಖಿಯು ಹೇಳಿದಳು. ಎಲೈ ರುಕ್ಮಿಣಿಯೇ, ಇಲ್ಲಿ ನೋಡು. ಇವನು ರುದ್ರನು. ಈ ರುದ್ರನು ಚತುರ್ಮುಖಬ್ರಹ್ಮನ ಮಗನು. ಅವನ ಪಕ್ಕದಲ್ಲಿರುವವನು ಪಕ್ಷಿರಾಜನಾದ ಗರುಡನು. ಗರುಡನ ಪಕ್ಕದಲ್ಲಿರುವವನು ಸರ್ಪಗಳಿಗೆ ರಾಜನಾದ ಶೇಷನು. ಈ ಮೂವರೂ ಜ್ಞಾನ, ಬಲ, ಆನಂದ ಮುಂತಾದ ಎಲ್ಲಾ ಗುಣಗಳಿಂದಲೂ ಸಮಾನರು. ಇವರೆಲ್ಲರೂ ಮುಕುಂದನ ಸೇವೆಯಲ್ಲಿ ನಿರತರಾಗಿರುವವರು."

" ಈ ಮೂವರ ಮಧ್ಯದಲ್ಲಿ ರುದ್ರನ ಪ್ರಭಾವವನ್ನು ಹೇಳಿರುವೆನು. ಈ ರುದ್ರನು ದೇವತೆಗಳ ವಿರೋಧಿಗಳಾದ ದೈತ್ಯರನ್ನು ನಿಗ್ರಹಿಸುವ ವಿಷಯದಲ್ಲಿ ಅತ್ಯಂತ ಸಮರ್ಥನು. ಹಿಂದೆ ಕೆಲವು ದೈತ್ಯರು ಮಯ ಎಂಬ ದೈತ್ಯನಿಂದ ನಿರ್ಮಿತವಾದ ಅಚ್ಛೇದ್ಯಾಭೇದ್ಯವಾದ ಮೂರು ಪಟ್ಟಣಗಳಲ್ಲಿ ವಾಸಿಸುತ್ತಾ ಸರ್ವರನ್ನೂ ಪೀಡಿಸುತ್ತಿದ್ದರು. ಇದನ್ನು ತಿಳಿದ ಈ ರುದ್ರನು ಶ್ರೀಹರಿಯ ಅನುಗ್ರಹಬಲದಿಂದ ಆ ಮೂರು ಪಟ್ಟಣಗಳನ್ನು ಭೇದಿಸಿ ಎಲ್ಲಾ ದೈತ್ಯರನ್ನೂ ಸಂಹರಿಸಿದನು. ಶ್ರೀಹರಿಯ ಪಾದೋದಕವಾಗಿರುವ ಗಂಗೆಯನ್ನು ತನ್ನ ಜಡೆಯಲ್ಲಿ

ಯಾವಾಗಲೂ ಧರಿಸಿರುವ ಮಹಾವಿರಕ್ತಶಿಖಾಮಣಿಯು ಇವನು. ಇಂತಹ ವಿರಕ್ತನನ್ನು ಯಾವ ಸ್ತ್ರೀಯೂ ವಶಪಡಿಸಿಕೊಳ್ಳುವುದು ಅಸಾಧ್ಯ. ಆದರೂ ಗೌರಿಯು ತಪಸ್ಸಿನ ಬಲದಿಂದ ಈ ರುದ್ರನನ್ನು ವಶಪಡಿಸಿಕೊಂಡಿರುವಳು. ಇಂತಹ ಮಹತ್ವವುಳ್ಳವನು ರುದ್ರನು. ಈ ಶೇಷದೇವನನ್ನು ನೋಡು."

" ಪಾತಾಳ ಲೋಕಕ್ಕಿಂತ ಕೆಳಗೆ ಕೂರ್ಮರೂಪಿಯಾದ ಶ್ರೀಹರಿಯು ಕುಳಿತಿರುವನು. ಅವನ ಬೆನ್ನಿನಲ್ಲಿ ಆಮೆಯ ರೂಪದಿಂದ ವಾಯುದೇವನು ಮಲಗಿರುವನು. ಆ ವಾಯುದೇವನ ಬೆನ್ನಿನಲ್ಲಿ ಬಾಲವನ್ನು ಊರಿಕೊಂಡು ಈ ಶೇಷದೇವನು ನಿಂತಿರುವನು. ಈ ಶೇಷದೇವನಿಗೆ ಸಾವಿರಹೆಡೆಗಳಿವೆ. ಆ ಹೆಡೆಗಳನ್ನು ಅರಳಿಸಿಕೊಂಡಾಗ ಅದರ ಕೆಳಗೆ ಕುಳಿತಿರುವ ಶ್ರೀಹರಿಗೆ ಕೊಡೆಯನ್ನು ಹಿಡಿದಂತಾಗುತ್ತದೆ. ಆ ಸಾವಿರ ಹೆಡೆಗಳ ಮಧ್ಯದಲ್ಲಿ ಒಂದು ಹೆಡೆಯಲ್ಲಿ ದೊಡ್ಡ ಈ ಭೂಮಿಯು ಸಾಸಿವೆ ಕಾಳಿನಂತೆ ಎಲ್ಲೋ ಒಂದು ಮೂಲೆಯಲ್ಲಿ ಬಿದ್ದಿರುತ್ತದೆ. ಎಲ್ಲಾ ನದಿಗಳು ಸಮುದ್ರಗಳು ಬೆಟ್ಟಗಳು ಮುಂತಾದ ಎಲ್ಲಾ ವಸ್ತುಗಳಿಂದ ತುಂಬಿರುವ ಭೂಮಿಯನ್ನು ಅನಾಯಾಸದಿಂದ ಧರಿಸಿರುವ ಈ ಶೇಷನನ್ನು ನೋಡು."

" ಈ ಗರುಡನನ್ನು ನೋಡು. ಇವನು ರೆಕ್ಕೆಗಳನ್ನು ಬೀಸಿಕೊಂಡು ಬರುತ್ತಿರುವನು. ಆಗ ಇವನ ರೆಕ್ಕೆಗಳಿಂದ ಹೊರಟ ಗಾಳಿಯು ಪರ್ವತಗಳನ್ನೂ ಸಮುದ್ರಗಳನ್ನೂ ದ್ವೀಪಗಳನ್ನೂ ನಡುಗಿಸುತ್ತದೆ. ಇವನ ಪ್ರಭಾವವನ್ನು ಇವನ ಶತ್ರುಗಳಾದ ಸರ್ಪಗಳು ಹೊಗಳುತ್ತಿವೆ. ಇವನು ಮಹಾಬಲಿಷ್ಠನಾದ ಚಕ್ರವರ್ತಿಯನ್ನು ಸೋಲಿಸಿ ಅವನಿಂದ ಶ್ರೀಹರಿಯ ಕಿರೀಟವನ್ನು ಕಿತ್ತುಕೊಂಡು ಹಿಂದಿರುಗಿ ಬರುತ್ತಿರುವಾಗ ಗೋಮಂತಪರ್ವತದ ಮೇಲೆ ವಿಹರಿಸುತ್ತಿರುವ ತನ್ನ ಪ್ರಭುವಾದ ಶ್ರೀಕೃಷ್ಣದೇವನಿಗೆ ಸಮರ್ಪಿಸಿದನು. ಇಂತಹ ಮಹಾ ಶಕ್ತಿ ಸಂಪನ್ನನಾದ ಗರುಡನನ್ನು ನೋಡು."

ಈ ಗರುಡನು ಘೋರವಾದ ತಪಸ್ಸನ್ನು ಮಾಡಿ ಶ್ರೀಹರಿಯ ವಾಹನತ್ವವನ್ನು ಪಡೆದನು. ಈ ಶೇಷನೂ ಸಹ ತಪೋಬಲದಿಂದ ಶ್ರೀಹರಿಯ ಹಾಸಿಗೆಯ ಸ್ಥಾನವನ್ನು ಪಡೆದನು. ಶ್ರೀಹರಿಯ ವಾಹನತ್ವವೂ ಹಾಸಿಗೆಯ ಸ್ಥಾನವೂ ಇಂದ್ರಾದಿಗಳಿಗೆ ತಪಸ್ಸಿನಿಂದಲೂ ಸಿಗಲಾರದು. ಇಂದ್ರಾದಿ ಸಕಲ ದೇವತೆಗಳ ಮಧ್ಯದಲ್ಲಿ ಕೆಲವರು ಶೇಷದೇವನಲ್ಲಿಯೂ ಉಳಿದವರು ಗರುಡದೇವನಲ್ಲಿಯೂ ಪ್ರವೇಶಿಸಿ ಮುಕ್ತಿಯನ್ನು ಪಡೆಯುವರು. ಇವರಿಬ್ಬರಲ್ಲಿ ಯಾರಾದರೂ ಒಬ್ಬನನ್ನು ಪ್ರವೇಶಿಸದೇ ಯಾರಿಗೂ ಮುಕ್ತಿಯಾಗಲಾರದು. ಆದ್ದರಿಂದ ಈ ಗರುಡನೂ ಶೇಷನೂ ಮುಕ್ತಿಮಾರ್ಗರೆನಿಸುವರು."

ರುಕ್ಮಿಣಿಯು ಈ ಮಾತುಗಳನ್ನು ಕೇಳಿದಳು. ಗರುಡನು ಪರ್ವತದಂತೆ ಎತ್ತರವಾಗಿರುವ ತನ್ನ ಹೆಗಲಿನ ಮೇಲೆ ಮಳೆಗಾಲದ ಮೇಘದಂತೆ ಸರ್ವರಿಗೂ ಎಲ್ಲಾ ವಿಧವಾದ ಇಷ್ಟಾರ್ಥಗಳನ್ನೂ ಕೊಡುತ್ತಿರುವ ಶ್ರೀಕೃಷ್ಣದೇವನನ್ನು ಎತ್ತಿಕೊಂಡಿರುವನು. ಶೇಷದೇವನು ತನ್ನ ದೇಹವೆಂಬ ಮುತ್ತಿನ ಹಾರದ ಮಧ್ಯದಲ್ಲಿ ನೀಲಮಣಿಯಂತೆ ಶೋಭಿಸುತ್ತಿರುವ ಶ್ರೀಕೃಷ್ಣದೇವನನ್ನು ಧರಿಸುತ್ತಾ ಸೇವಿಸುತ್ತಿರುವನು. ರುದ್ರನು ಹಂಸಪಕ್ಷಿಯಂತೆ ಶ್ರೀಕೃಷ್ಣದೇವನ ಪಾದಗಳನ್ನು ಸೇವಿಸುತ್ತಿರುವನು. ಈ ಮೂವರ ಭಕ್ತಿಗೆ ಮೆಚ್ಚಿದಳು. ಕೃಪಾದೃಷ್ಟಿಯಿಂದ ಇವರನ್ನು ನೋಡುತ್ತಾ ಮುಂದೆ ನಡೆದಳು.

ಎಲೈ ರುಕ್ಮಿಣಿಯೇ, ಇವನು ದೇವೇಂದ್ರನು, ಇವನು "ಬಲ" ಎಂಬ ಅತಿಬಲಿಷ್ಠನಾದ ದೈತ್ಯನನ್ನು ಸಂಹರಿಸಿರುವನು. ಇವನು ತ್ರಿವಿಕ್ರಮನೆಂಬ ಶ್ರೀಹರಿಯ ಪರಮಾನುಗ್ರಹದಿಂದ ಮೂರು ಲೋಕಗಳ ಆಧಿಪತ್ಯವನ್ನು ಪಡೆದನು. ಇವನಿಗಾಗಿ ಶ್ರೀಹರಿಯ ಕ್ಷೀರಸಮುದ್ರವನ್ನು ಮಥಿಸಿದನು. ಕ್ಷೀರಸಮುದ್ರದಿಂದ ಪಾರಿಜಾತವೃಕ್ಷ, ಐರಾವತ ಆನೆ, ಉಚ್ಚೈಶ್ರವಸ್ಸು ಎಂಬ ಕುದುರೆ ಮುಂತಾದ ವಸ್ತುಗಳನ್ನು ಮಥಿಸಿ ಸಂಪಾದಿಸಿ ಇವನಿಗೆ ಕೊಟ್ಟನು. ವಿಚಿತ್ರ ಸೌಭಾಗ್ಯವು ಇವನಿಗೆ ಏರ್ಪಡುವಂತೆ ಮಾಡಿದನು. ಇವನು ದೇವತೆಗಳ ಮಧ್ಯದಲ್ಲಿ ಎತ್ತರವಾದ ಆಸನದಲ್ಲಿ ಕುಳಿತವನಾಗಿ ಸಕಲ ದೇವತೆಗಳನ್ನು ರಕ್ಷಿಸುತ್ತಿರುವನು. ಇಂದ್ರಪದವಿಗೆ ಯೋಗ್ಯವಾದ ಮಹಾವೈಭವದಿಂದ ಯುಕ್ತನಾಗಿರುವನು.

ಎಲೈ ರುಕ್ಮಿಣಿಯೇ, ಇವನು ಬೃಹಸ್ಪತಿ ಎಂಬ ಹೆಸರಿನಿಂದ ಪ್ರಸಿದ್ಧನಾಗಿರುವನು. ಈ ಬೃಹಸ್ಪತಿಯು ಎಲ್ಲಾ ದೇವತೆಗಳಿಗೂ ಗುರುವಾಗಿರುವನು. ಅವನ ಪಕ್ಕದಲ್ಲಿರುವವನು ಯಮನು. ಆ ಯಮನು "ಧರ್ಮದೇವತೆ" ಯೆನಿಸುವನು. ಅವನ ಪಕ್ಕದಲ್ಲಿರುವವನು ಚಂದ್ರನು. ಈ ಚಂದ್ರನು ಅಮೃತಮಯವಾದ ಕಿರಣಗಳಿಂದ ಯುಕ್ತನಾಗಿರುವುದರಿಂದ "ಸುಧಾಕರ" ಎಂದು ಪ್ರಸಿದ್ಧನಾಗಿರುವನು. ಅವನ ಪಕ್ಕದಲ್ಲಿರುವವನು ಸೂರ್ಯನು. ಈ ಸೂರ್ಯನು ಅಸಂಖ್ಯವಾದ ಕಿರಣಗಳಿಂದ ಯುಕ್ತನಾಗಿರುವುದರಿಂದ "ಸಹಸ್ರರಶ್ಮಿ" ಎಂದು ಪ್ರಸಿದ್ಧನಾಗಿರುವನು. ಅವನ ಪಕ್ಕದಲ್ಲಿರುವವನು ವರುಣನು. ಈ ವರುಣನು ಅಸಂಖ್ಯರತ್ನಗಳ ಉತ್ಪತ್ತಿಸ್ಥಾನನಾಗಿರುವುದರಿಂದ "ರತ್ನಾಕರ" ಎಂದು ಪ್ರಸಿದ್ಧನಾಗಿರುವನು. ಈಗ ಹೇಳಿರುವ ದೇವತೆಗಳ ಮಹತ್ವವನ್ನು ನಾನು ಪ್ರತ್ಯೇಕವಾಗಿ ಹೇಳಬೇಕಾದ್ದಿಲ್ಲ. ಅವರವರಿಗೆ ಪ್ರಸಿದ್ಧವಾಗಿರುವ ಹೆಸರುಗಳೇ ಅವರ ಮಹತ್ವಗಳನ್ನು ತಿಳಿಸುತ್ತವೆ."

ಎಲೈ ರುಕ್ಮಿಣಿಯೇ, ಈ ದೇವತೆಗಳನ್ನು ನೋಡು. ಇವರೆಲ್ಲರೂ ಶ್ರೀಹರಿಯನ್ನು ಅತ್ಯಂತ ಭಕ್ತಿಯಿಂದ ಯಾವಾಗಲೂ ಸೇವಿಸುತ್ತಿರುವರು. ಕಣ್ಣು ಮುಚ್ಚಿದರೆ ಮತ್ತು ನಿದ್ರೆಯನ್ನು ಮಾಡಿದರೆ ಆ ಕಾಲದಲ್ಲಿ ಶ್ರೀಹರಿಯ ಸೇವೆಯನ್ನು ಮಾಡುವ ಭಾಗ್ಯವು ತಪ್ಪಿಹೋಗುತ್ತದೆಯೆಂದು ಹೆದರಿ ಕಣ್ಣುಗಳನ್ನು ಮಚ್ಚದವನ್ನೂ ನಿದ್ರೆಯನ್ನು ಬಿಟ್ಟಿರುವರು. ಆದರಿಂದಲೇ "ಅನಿಮಿಷ" ಅಂದರೆ ಕಣ್ಣುಗಳನ್ನು ಮುಚ್ಚುವವರೆಂದೂ "ಅಸ್ವಪ್ನ" ಅಂದರೆ ನಿದ್ರೆಯನ್ನು ಬಿಟ್ಟಿರುವವರೆಂದೂ ಪ್ರಸಿದ್ಧರಾಗಿರುವರು. ಶ್ರೀಹರಿಯ ಅಪಾರ ಕರುಣೆಗೆ ಪಾತ್ರರಾಗಿರುವರು. ಅವನು ಕರುಣೆಯಿಂದ ಸಮುದ್ರಮಥನವನ್ನು ಮಾಡಿಸಿ ಅಮೃತವನ್ನು ತರಿಸಿದನು. ಅಮೃತವನ್ನು ಇವರಿಗೆ ಉಣಿಸಿದನು. ಇದರಿಂದ ಇವರಿಗೆ ಮರಣವೇ ಇಲ್ಲದಂತಾಯಿತು." ಎಂದು ಬುದ್ಧಿಸಖಿಯು ಹೇಳಿದಳು.

ಆಗ ರುಕ್ಮಿಣೀದೇವಿಯು ದೇವೇಂದ್ರನ ಅಪಾರವಾದ ಸಂಪತ್ತಿಗೂ ಎಲ್ಲಾ ದೇವತೆಗಳ ಮರಣದ ಪರಿಹಾರಕ್ಕೆ ಕಾರಣವಾದ ಅಮೃತದ ಉತ್ಪತ್ತಿಗೂ ಕಾರಣನಾದ ಶ್ರೀಹರಿಯೇ ತನ್ನ ಪತಿಯೆಂದು ತೀರ್ಮಾನಿಸಿದವಳಾಗಿ ದೇವೇಂದ್ರನನ್ನೂ ಎಲ್ಲಾ ದೇವತೆಗಳನ್ನೂ ಕೃಪಾದೃಷ್ಟಿಯಿಂದ ನೋಡುತ್ತಾ ಮುಂದೆ ನಡೆದಳು.

ಬುದ್ಧಿಸಖಿಯು ಶ್ರೀಕೃಷ್ಣದೇವನನ್ನು ತೋರಿಸುತ್ತಾ ಹೇಳಲು ಆರಂಭಿಸಿದಳು. " ಎಲೈ ರುಕ್ಮಿಣಿಯೇ, ಇವನು ಶ್ರೀಹರಿಯು ಭಕ್ತರಿಗೆ ಮುಕ್ತಿಯನ್ನು ಕೊಡುವವನಾದ್ದರಿಂದ ಮುಕುಂದ ಎಂಬ ಬಿರುದಿನಿಂದ ಯುಕ್ತನಾಗಿರುವನು. ಜ್ಞಾನ ಮತ್ತು ಆನಂದ ಮುಂತಾದ ಗುಣಗಳೇ ಇವನ ಸರ್ವಾವಯವಗಳೂ ಆಗಿರುತ್ತವೆ.

ಇವನ ದೇಹಕ್ಕೂ ಅವಯವಗಳಿಗೂ ನಾಶವಿಲ್ಲ. ಇವನಲ್ಲಿ ಯಾವ ದೋಷಗಳೂ ಇಲ್ಲ. ಇವನು ಗುಣಸಮುದ್ರನು. ಇವನು ಈಗ ಭೂಮಿಯಲ್ಲಿರುವ ಸಕಲ ಸಜ್ಜನರನ್ನು ರಕ್ಷಿಸುವುದಕ್ಕಾಗಿ ಶ್ರೀಕೃಷ್ಣ ಎಂಬ ಹೆಸರಿನಿಂದ ಅವತರಿಸಿರುವನು. ಎಲ್ಲಾ ಪ್ರಾಣಿಗಳನ್ನೂ ಇವನೇ ಸೃಷ್ಟಿಸುವನು, ಪಾಲಿಸುವನು ಮತ್ತು ಸಂಹರಿಸುವನು. ಇವನ ಮಹಿಮೆಯನ್ನು ಶಾಸ್ತ್ರಗಳಿಂದಲೇ ತಿಳಿಯಬೇಕು. ಇವನ ದೇಹದಲ್ಲಿರುವ ಒಂದೊಂದು ರೋಮಗಳ ರಂಧ್ರಗಳಲ್ಲಿ ಅನಂತ ಬ್ರಹ್ಮಾಂಡಗಳು ವಾಸಿಸಬಹುದು. ಇಂತಹ ಮಹಾನುಭಾವನಿಗೆ ಸಮಾನನಾದವನು ಜೀವರಾಶಿಗಳಲ್ಲಿ ಯಾರಿರುವನು? ಸಮಸ್ತ ವೇದಗಳು, ಮಹಾಭಾರತ ಮುಂತಾದ ಇತಿಹಾಸಗಳು, ಹದಿನೆಂಟು ಪುರಾಣಗಳು, ಸ್ಮೃತಿಗಲು, ಒಟ್ಟುಗೂಡಿ ಇವನಿಗೆ ಸಮಾನನು ಯಾರೂ ಇಲ್ಲವೆಂದು ಹೇಳುತ್ತವೆ. ಸಮುದ್ರವನ್ನು ಕಡೆದ ಲಕ್ಷ್ಮೀದೇವಿಯನ್ನು ಇವನು ಪಡೆದಿರುವನು. ಇವನ ಪಾದವು ಬ್ರಹ್ಮಾಂಡಕಟಾಹವನ್ನು ಒಡೆದು ಗಂಗೆಯನ್ನು ಸೃಷ್ಟಿಸಿತು. ಬ್ರಹ್ಮದೇವನು ಇವನ ಪಾದವನ್ನು ಪೂಜಿಸಿದನು. ಇವನು ಮತ್ಸ್ಯ ಕೂರ್ಮ ಮುಂತಾದ ನಾನಾ ವಿಧವಾದ ಅವತಾರಗಳನ್ನು ಮಾಡಿ ಅತಿಪ್ರಬಲರಾದ ಎಲ್ಲಾ ದೈತ್ಯರನ್ನೂ ಸಂಹರಿಸಿ ಭೂಮಿಯ ಭಾರವನ್ನು ಪರಿಹರಿಸಿದವನು." ಹೀಗೆ ಬುದ್ಧಿಸಖಿಯು ಹೇಳಿ ನಿಲ್ಲಿಸಿದಳು.

ಆ ಮಾತುಗಳನ್ನು ರುಕ್ಮಿಣೀದೇವಿಯೂ ಕೇಳಿದಳು. ಯಾವ ವಿಧವಾದ ಪ್ರತ್ಯುತ್ತರವನ್ನೂ ಕೊಡಲಿಲ್ಲ. ಮಾಲೆಯನ್ನು ಧರಿಸಿದವಳಾಗಿ ಶ್ರೀಕೃಷ್ಣದೇವನ ಪಾದಗಳನ್ನು ನೋಡುತ್ತಾ ನಿಂತಳು. ಆದರೆ ಈ ಮಾತುಗಳನ್ನು ಕೇಳಿದಾಗ ಏರ್ಪಟ್ಟ ರೋಮಾಂಚ ಮುಂತಾದ ಆನಂದ ಚಿಹ್ನೆಗಳು ಶ್ರೀಕೃಷ್ಣದೇವನನ್ನೇ ರುಕ್ಮಿಣಿಯು ಅಪೇಕ್ಷಿಸುತ್ತಿರುವುದಾಗಿ ತಿಳಿಸಿದನು.

ರುಕ್ಮಿಣೀದೇವಿಯ ವಿವಾಹಕಾಲದಲ್ಲಿ ಸೀತಾಸ್ವಯಂವರ ಕಥೆಯನ್ನು ಹಾಡುಕಟ್ಟಿ ಸುಮಂಗಲಿಯರು ಹಾಡಿದರು. ಆಗ ಶ್ರೀ ಕೃಷ್ಣದೇವನು ಮೆಲ್ಲನೆ ನಕ್ಕನು. ರುಕ್ಮಿಣೀದೇವಿಯ ದೇಹದಲ್ಲಿ ರೋಮಾಂಚವು ಏರ್ಪಟ್ಟಿತು. ಆ ನಗುವೂ ರೂಮಾಂಚವೂ ಅದೇ ಸೀತೆಯು ರುಕ್ಮಿಣಿಯೆಂದೂ ಶ್ರೀರಾಮನು ಶ್ರೀಕೃಷ್ಣನೆಂದೂ ತಿಳಿಸುತ್ತಾ ಸೀತಾಸ್ವಯಂವರದ ಹಾಡು ಯಾಕೆ? ರುಕ್ಮಿಣೀ ಸ್ವಯಂವರದ ಹಾಡನ್ನೇ ಹಾಡಬಾರದೇ? ಎಂದು ತಿಳಿಸಿದವು.

ರುಕ್ಮಿಣಿಯು ಶ್ರೀಕೃಷ್ಣದೇವನನ್ನೂ, ಶ್ರೀಕೃಷ್ಣದೇವನು ರುಕ್ಮಿಣಿಯನ್ನು ನೋಡಬೇಕಾದ ಸಂದರ್ಭವು ಬಂತು. ಆಗ ಕಮಲದಂತಿರುವ ರುಕ್ಮಿಣಿಯ ಮುಖವನ್ನು ಶ್ರೀಕೃಷ್ಣದೇವನು ನೋಡಿದನು. ಶ್ರೀಕೃಷ್ಣದೇವನ ಕಣ್ಣುಗಳಲ್ಲಿ ಸೂರ್ಯನು ವಾಸಿಸುತ್ತಿರುವನು. ಆ ಸೂರ್ಯನನ್ನು ನೋಡಿದ ಕೂಡಲೇ ರುಕ್ಮಿಣಿಯ ಮುಖವೆಂಬ ಕಮಲವು ಅರಳಿತು. ರುಕ್ಮಿಣೀದೇವಿಯು ನೀಲಕಮಲದಂತೆ ನೀಲವಾಗಿರುವ ತನ್ನ ಕಣ್ಣುಗಳಿಂದ ಸರೋವರದಂತೆ ಆಳವಾಗಿರುವ ಶ್ರೀಕೃಷ್ಣದೇವನ ಹೊಕ್ಕಳನ್ನು ನೋಡಿದಳು. ನೀಲಕಮಲವು ಸರೋವರವನ್ನು ಆಶ್ರಯಿಸುವುದು ಯುಕ್ತವೇ ಆಗಿರುತ್ತದೆ.

ಜೀರಿಗೆ ಬೆಲ್ಲಗಳನ್ನು ವಧೂವಿನ ಕಡೆಯವರೂ ವರನ ಕಡೆಯವರೂ ಅನ್ಯೋನ್ಯವಾಗಿ ಚೆಲ್ಲಿಕೊಳ್ಳಬೇಕೆಂದೂ ಅದರಲ್ಲಿ ಮೊದಲು ಚೆಲ್ಲಿದವರು ವಧುವಿನ ಕಡೆಯವರಾಗಿದ್ದರೆ ಸಂಸಾರದಲ್ಲಿ ವಧುವಿನ ಕೈಮೇಲಾಗುವುದೆಂದೂ ವರನ ಕಡೆಯವರು ಮೊದಲು ಚೆಲ್ಲಿದರೆ ವರನ ಕೈಮೇಲಾಗುವುದೆಂದೂ ಪರಂಪರಾಪ್ರಾಪ್ತವಾದ ಸಂಪ್ರದಾಯ. ಆ ಸಂಪ್ರದಾಯದಂತೆ ಶ್ರೀಕೃಷ್ಣದೇವನ ವಿವಾಹದಲ್ಲಿ ಬೆಲ್ಲ ಜೀರಿಗೆಗಳನ್ನು ಎರಡು ಕಡೆಯವರೂ ಚೆಲ್ಲಿಕೊಂಡರು. ಆಗ ರುಕ್ಮಿಣಿಯ ಕಡೆಯವರೇ ಮೊದಲು ಚೆಲ್ಲಿದರು. ಆದ್ದರಿಂದ ರುಕ್ಮಿಣಿಯ ಕೈಯೇ ಮೇಲೆನಿಸಿತು.

ಇದಕ್ಕೆ ಕಾರಣವುಂಟು. ಲಕ್ಷ್ಮೀದೇವಿಯು ಶ್ರೀಕೃಷ್ಣದೇವನ ವಕ್ಷಃಸ್ಥಳದಲ್ಲಿ ಒಂದು ರೂಪದಿಂದ ವಾಸಿಸುತ್ತಿರುವಳು. ರುಕ್ಮಿಣೀರೂಪದಿಂದ ಜೀರಿಗೆಬೆಲ್ಲವನ್ನು ಚೆಲ್ಲುತ್ತಿರುವ ತನ್ನ ರೂಪಾಂತರ ಕೈಮೇಲಾಗಬೇಕೆಂಬ ಅಭಿಪ್ರಾಯದಿಂದ ವಕ್ಷಃಸ್ಥಳವನ್ನು ಆಕ್ರಮಿಸಿ ಕುಳಿತಿರುವ ಲಕ್ಷ್ಮೀದೇವಿಯು ಶ್ರೀಕೃಷ್ಣದೇವನಿಂದಲೂ ಅವನ ಪಕ್ಷದವರಿಂದಲೂ ಜೀರಿಗೆ ಬೆಲ್ಲವನ್ನು ರುಕ್ಮಿಣೀದೇವಿಯ ಮೇಲೆ ಮೊದಲು ಚೆಲ್ಲದಂತೆ ಮಾಡಿರಬಹುದೆಂದು ಊಹಿಸುವೆವು.

" ಎಲೈ ರಮಾದೇವಿಯ ಅವತಾರಗಳಾಗಿರುವ ರುಕ್ಮಿಣಿಯೇ, ಇವನು ರುದ್ರನು. ಇವನನ್ನು "ಉಗ್ರ" ಅಂದರೆ ಉಗ್ರಸ್ವಭಾವದವನೆಂದು ಕರೆಯುವರು. ಈ ವಾಯುವನ್ನು "ಚಂಚಲ" ಅಂದರೆ ಯಾವಾಗಲೂ ಚಂಚಲಸ್ವಭಾವವುಳ್ಳವನೆಂದು ಕರೆಯುವರು. ಈ ಶೇಷನನ್ನು "ಗೂಢಪಾತ್" ಕಾಲಿಲ್ಲದವನೆಂದು ಹೇಳುವರು. ಈ ಬ್ರಹ್ಮನನ್ನು "ವೃದ್ಧ" ಅಂದರೆ ಮುದುಕನೆಂದು ಕರೆಯುವರು. ಈ ಅಗ್ನಿಯನ್ನು "ಜ್ವಲನ" ಅಂದರೆ ಸುಡುತ್ತಿರುವವನು ಎಂದು ಹೇಳುತ್ತಿರುವರು. ಈ ಸೂರ್ಯನನ್ನು "ತಪನ" ಅಂದರೆ ಸಂತಾಪವನ್ನು ಕೊಡುತ್ತಿರುವವನು ಎಂದು ಹೇಳುತ್ತಿರುವರು. ಈ ಗರುಡನನ್ನು "ಸದ್ವಕ್ರತುಂಡ" ಅಂದರೆ ಸೊಟ್ಟು ಮೂತಿಯವನೆಂದು ಹೇಳುತ್ತಿರುವರು. ಈ ಪೂಷಾ ಎಂಬ ದೇವತೆಯನ್ನು "ಅದಂತಕ" ಅಂದರೆ ಹಲ್ಲಿಲ್ಲದವನೆಂದು ಹೇಳುತ್ತಿರುವರು. ಈ ವರುಣನನ್ನು "ಜಲರಾಟ್" ಅಂದರೆ "ಜಡರಾಟ್" ಮೂರ್ಖರ ರಾಜನೆಂದು ಹೇಳುತ್ತಿರುವರು. ಈ ಇಂದ್ರನನ್ನು "ಗೋತ್ರಾಸಹ" ಅಂದರೆ ಕುಲವಿರೋಧಿ ಎಂದು ಹೇಳುತ್ತಿರುವರು." ಎಂದು ಬುದ್ಧಿಸಖಿಯು ಹೇಳುತ್ತಾ ಅವರವರ ಹೆಸರಿನಿಂದಲೇ ಅವರವರನ್ನು ಧಿಕ್ಕರಿಸುವಂತೆ ಮಾಡಿದಳು.

" ಈ ಬ್ರಹ್ಮನು ವೈದಿಕಶಿಖಾಮಣಿಯೆನಿಸುವನು. ಈ ವಾಯುವು ಯಾವಾಗಲೂ ಹಂಸಮಂತ್ರವನ್ನು ಜಪಿಸುತ್ತಿರುವನು. ಈ ರುದ್ರನು ತುಂಬಾ ವೈರಾಗ್ಯಬುದ್ಧಿಯುಳ್ಳವನು. ಆ ದೇವೇಂದ್ರನು ತುಂಬಾ ಕೆಲಸಗಳಿಂದ ಯುಕ್ತನಾಗಿರುವನು. ಸೂರ್ಯನು ಹಗಲಿರುಳು ಸಂಚರಿಸುವುದರಲ್ಲಿಯೇ ಪ್ರೀತಿಯುಳ್ಳವನು. ಚಂದ್ರನು "ದೋಷಾಕರ" ಅಂದರೆ ದೋಷಗಳಿಗೆ ಮೂಲಸ್ಥಾನನೆನಿಸುವನು. ಮನ್ಮಥನು "ಅನಂಗ" ಅಂದರೆ ಅಂಗವಿಲ್ಲದವನು" ಎಂದು ಹೇಳುತ್ತಾ ಅವರಲ್ಲಿರುವ ದೋಷಗಳನ್ನು ಸ್ಪಷ್ಟಪಡಿಸಿದಳು. ಈ ದೋಷಗಳಿಂದ ಯುಕ್ತರಾಗಿರುವ ದೇವತೆಗಳನ್ನು ತಿರಸ್ಕರಿಸಿ ಸಕಲ ದೋಷರಹಿತನೂ ಗುಣಪೂರ್ಣನೂ ಆಗಿರುವ ಶ್ರೀಹರಿಯನ್ನು ತನ್ನ ಪತಿಯಾಗಿ ರುಕ್ಮಿಣೀದೇವಿಯು ವರಿಸಿದಳು.

ಯಾವನ ಮಗನು ಬ್ರಹ್ಮನೋ, ಸರ್ಪರಾಜನಾದ ಶೇಷದೇವನು ಯಾವನಿಗೆ ಹಾಸಿಗೆಯೋ, ಪಕ್ಷಿರಾಜನಾದ ಗರುಡನು ಯಾವನ ರಥವೋ, ರುದ್ರದೇವನು ಯಾವನ ಪಾದವನ್ನು ತೊಳೆದ ಗಂಗೆಯನ್ನು ಯಾವಾಗಲೂ ತಲೆಯಲ್ಲಿ ಧರಿಸಿರುವನೋ, ದೇವೇಂದ್ರನು ಯಾರಿಂದ ಕೊಡಲ್ಪಟ್ಟ ಸಾಮ್ರಾಜ್ಯವನ್ನು ಅನುಭವಿಸುತ್ತಿರುವನೋ, ಸೂರ್ಯಚಂದ್ರರು ವಿಷ್ಣುಪದವೆನಿಸುವ ಆಕಾಶದಲ್ಲಿ ಯಾವಾಗಲೂ ಸಂಚರಿಸುತ್ತಿರುವರೋ, ಯಾವ ಪತ್ನಿಯು ಲಕ್ಷ್ಮೀದೇವಿಯೋ ಅಂತಹ ದ್ವಾರಕಾನಾಯಕನಾದ ಶ್ರೀಕೃಷ್ಣದೇವನನ್ನು ರುಕ್ಮಿಣೀದೇವಿಯು ವರಿಸಿದಳು.

ರುಕ್ಮಿಣೀದೇವಿಯು ತನ್ನ ಕೈಯಲ್ಲಿದ್ದ ಮಾಲೆಯನ್ನು ನೋಡಿದಳು. ಆ ಮಾಲೆಯಲ್ಲಿ ಸಂಪಿಗೆ ಪುಷ್ಪಗಳಿದ್ದವು. ಈ ಸಂಪಿಗೆ ಪುಷ್ಪವು ಅಬ್ಜವಸತಿ ಅಂದರೆ ಜೇನನ್ನು ಕುಡಿಯುವುದಕ್ಕಾಗಿ ಕಮಲದ ಮೇಲೆ ಕುಳಿತಿರುವ ಭ್ರಮರಕ್ಕೂ

ಅಬ್ಜವಸತಿ ಅಂದರೆ ಕಮಲಾಸನನಾಗಿರುವ ಬ್ರಹ್ಮನಿಗೂ ಪ್ರಿಯವಾದುದಲ್ಲ. ಆದ್ದರಿಂದ ಸಂಪಿಗೆಯಿಂದ ಯುಕ್ತವಾಗಿರುವ ಈ ಮಾಲೆಯನ್ನು ಬ್ರಹ್ಮನಿಗೆ ಅರ್ಪಿಸುವಂತಿಲ್ಲ. ಈ ಮಾಲೆಯಲ್ಲಿ ಗರಿಕೆಹುಲ್ಲು ಇರುತ್ತದೆ. ಈ ಗರಿಕೆಹುಲ್ಲು ದುರ್ಗಾದೇವಿಗೆ ಅಪ್ರಿಯವಾದುದು. ಆದ್ದರಿಂದ ದುರ್ಗಾದೇವಿಯ ಅವತಾರಳಾಗಿರುವ ನಾನು ಹಾಕಿಕೊಳ್ಳುವಂತಿಲ್ಲ. ಈ ಮಾಲೆಯಲ್ಲಿ ಕೇತಕೀ ಪುಷ್ಪ ಇರುತ್ತದೆ. ಕೇತಕಿಯನ್ನು ರುದ್ರನು ಸ್ವೀಕರಿಸುವುದಿಲ್ಲ. ಆದ್ದರಿಂದ ರುದ್ರನಿಗೆ ಹಾಕುವಂತಿಲ್ಲ. ಈ ಮಾಲೆಯಲ್ಲಿ ನೀಲಕಮಲಗಳಿವೆ. ನೀಲಕಮಲಗಳು ಸೂರ್ಯೋದಯವಾದ ಕೂಡಲೇ ಬಾಡಿ ಹೋಗುತ್ತವೆ. ಆದ್ದರಿಂದ ಸೂರ್ಯನಿಗೆ ಅಪ್ರಿಯವಾದ ನೀಲಕಮಲಗಳಿಂದ ಯುಕ್ತವಾಗಿರುವ ಈ ಮಾಲೆಯನ್ನು ಸೂರ್ಯನಿಗೆ ಹಾಕುವಂತಿಲ್ಲ. ಕೆಂಪು ಕಮಲಗಳು ಚಂದ್ರೋದಯವಾದಕೂಡಲೇ ಬಾಡುತ್ತವೆ. ಆದ್ದರಿಂದ ಚಂದ್ರನಿಗೆ ಕೆಂಪು ಕಮಲಗಳು ಅಪ್ರಿಯವಾದವುಗಳು. ಕೆಂಪುಕಮಲಗಳಿಂದ ಯುಕ್ತವಾಗಿರುವ ಈ ಮಾಲೆಯನ್ನು ಚಂದ್ರನಿಗೆ ಹಾಕುವಂತಿಲ್ಲ. ತುಳಸಿಯು ಗಣೇಶನಿಗೆ ಅಪ್ರಿಯವಾದುದು. ಆದ್ದರಿಂದ ತುಳಸಿಯಿಂದ ಯುಕ್ತವಾಗಿರುವ ಈ ಮಾಲೆಯನ್ನು ಗಣೇಶನಿಗೆ ಹಾಕುವಂತಿಲ್ಲ. ಈ ಕದಂಬಮಾಲೆಯು ಸಕಲಶ್ಲಾಘ್ಯವಾದ ಎಲ್ಲಾ ಪುಷ್ಪಗಳಿಂದ ಯುಕ್ತವಾಗಿದ್ದರೂ ಈ ಮಾಲೆಯಲ್ಲಿರುವ ಕೆಲವು ಪುಷ್ಪಗಳು ಕೆಲವು ದೇವತೆಗಳಿಗೆ ಯೋಗ್ಯವಲ್ಲದಿರುವುದರಿಂದಲೂ ಶ್ರೀವಿಷ್ಣುವಿಗೆ ಯೋಗ್ಯವಾಗಿರುವುದರಿಂದಲೂ ಶ್ರೀಕೃಷ್ಣದೇವನ ಕಂಠದಲ್ಲಿಯೇ ಹಾಕುವುದಾಗಿ ತೀರ್ಮಾನಿಸಿದಳು. ಅದು ಮಾತ್ರವಲ್ಲ. ಶ್ರೀಹರಿಗೆ ಸಮರ್ಪಿಸಿದ ಮಾಲೆಯನ್ನೇ ಸಕಲದೇವತೆಗಳೂ ಸ್ವೀಕರಿಸುವರು. ಶ್ರೀಹರಿಗೆ ಸಮರ್ಪಿಸದಿರುವ ಮಾಲೆಯನ್ನು ಯಾವ ದೇವತೆಯೂ ಸ್ವೀಕರಿಸಲಾರನು. ಆದ್ದರಿಂದ ಈ ಮಾಲೆಯನ್ನು ಶ್ರೀಕೃಷ್ಣದೇವನ ಕಂಠದಲ್ಲಿಯೇ ಹಾಕಬೇಕೆಂದು ಸಂಕಲ್ಪಿಸಿದಳು. ಸಂತೋಷವು ಉಕ್ಕಿ ಬಂತು. ಮೈಯೆಲ್ಲಲ್ಲಾ ರೋಮಾಂಚಗಳು ಏರ್ಪಟ್ಟವು. ಆ ಮಾಲೆಯನ್ನು ಶ್ರೀಕೃಷ್ಣದೇವನ ಕಂಠದಲ್ಲಿ ಸಮರ್ಪಿಸಿದಳು.

ಭೀಷ್ಮಕರಾಜನಾಗಿ ನಟಿಸುತ್ತಿರುವ ಯಾದವನು ರುಕ್ಮಿಣಿಯ ಕೈಯಲ್ಲಿ ಧಾರೆಯೆರೆದನು. ಆಗ ರುಕ್ಮಿಣಿಯ ಕಣ್ಣುಗಳಲ್ಲಿ ಪ್ರೇಮದಿಂದ ಆನಂದಬಾಷ್ಪವು ಧಾರೆಯಾಗಿ ಸುರಿಯಿತು. ಆನಂದಭಾಷ್ಪಧಾರೆಯಿಂದ ಸಹಿತವಾದ ಧಾರೋದಕ ಜಲವನ್ನು ಶ್ರೀಕೃಷ್ಣದೇವನ ಕೈಯಲ್ಲಿ ಕೊಟ್ಟನು. ಕದಂಬಮಾಲೆಯೊಡನೆ ರುಕ್ಮಿಣಿಯು ತನ್ನ ಪ್ರೇಮ ಎಂಬ ಮಾಲೆಯನ್ನು ಸಮರ್ಪಿಸಿದಳು. ಕಡೆಗಣ್ಣಿನ ನೋಟದಿಂದ ಶ್ರೀಕೃಷ್ಣದೇವನ ತಲೆಯಿಂದ ಕಾಲಿನ ವರೆಗೆ ಪುನಃ ಪುನಃ ನೋಡಿದಳು. ಇದರಿಂದ ಆರತಿಯನ್ನು ಮಾಡಿದಂತಾಯಿತು. ಮೆಲ್ಲನೆ ಪುನಃ ಪುನಃ ನಕ್ಕಳು. ಇದರಿಂದ ಅಮೃತರಸವನ್ನು ನೈವೇದ್ಯ ಸಮರ್ಪಣೆ ಮಾಡಿದಂತಾಯಿತು ಹೀಗೆ ಶ್ರೀಕೃಷ್ಣದೇವನನ್ನು ಪೂಜಿಸಿ ಪೂಜೆಯ ಫಲವನ್ನು ಪಡೆದಂತೆ ಶ್ರೀಕೃಷ್ಣದೇವನ ಪಾರ್ಶ್ವದಲ್ಲಿ ಕುಳಿತಳು.

ವಧೂವರರನ್ನು ಭಂಗಾರದ ಆಸನಗಳಲ್ಲಿ ಕುಳ್ಳಿರಿಸಿ ಅಲಂಕೃತರಾದ ಮಂಗಳ ಪದಗಳನ್ನು ಹಾಡುತ್ತಿರುವ ಸುಮಂಗಲಿಯರು ಆರತಿ ಮಾಡಿದರು. ಕುಂಕುಮದಿಂದ ಕೆಂಪಾಗಿರುವ ಮಂತ್ರಾಕ್ಷತೆಗಳನ್ನು ಅವರಿಬ್ಬರ ತಲೆಯ ಮೇಲೆ ಚೆಲ್ಲಿದರು. ಅದಕ್ಕೆ ಪ್ರತಿಯಾಗಿ ವಧೂವರರು ಅಕ್ಷತವಾದ ಅಂದರೆ ನಾಶರಹಿತವಾದ ಮುಕ್ತಿರೂಪವಾದ ಫಲವನ್ನು ಅವರೆಲ್ಲರಿಗೂ ಅನುಗ್ರಹಿಸಿದರು. ಅನಂತರದಲ್ಲಿ ರುಕ್ಮಿಣಿಯೂ ಶ್ರೀಕೃಷ್ಣನೂ ಕೈಗಳನ್ನು ಹಿಡಿದುಕೊಂಡವರಾಗಿ ಲಾಜಹೋಮ ಅಂದರೆ ಅರಳಿನಿಂದ ಹೋಮವನ್ನು ಮಾಡಿದರು. ನಾಲ್ಕನೆಯ ದಿನದಲ್ಲಿ ನಾಗಬಲಿಯನ್ನೂ ಮಾಡಿದರು. ಈ ರೀತಿಯಾಗಿ ರುಕ್ಮಿಣಿಯನ್ನು ಶ್ರೀಕೃಷ್ಣದೇವನು ಕ್ರಮದಿಂದ ವಿವಾಹ ಮಾಡಿಕೊಂಡನು.

(೨೦) ಹೃದಿಕಸುತಗಿರಾ ಜ್ಞಾತಕೌಂತೇಯಕೃತ್ಯಃ ಹೃದಿಕ :- ಎಂಬ ಯಾದವನ ಮಗನಾದ ಕೃತವರ್ಮನ ಮಾತಿನಿಂದ ಪಾಂಡವರು ಮಾಡಿರುವ ಕೆಲಸಗಳನ್ನು ತಿಳಿದನು.

ವಿಶೇಷಾರ್ಥ - ಕದಾಚಿತ್ಸಭಾಯಾಂ ನೃಪೈಃ ಸೇವ್ಯಮಾನಃ ಪಾಂಚಾಲರಾಜಂ ದ್ರುಪದಂ ಪ್ರಬಲೈಃ ಕುಂತೀಸುತೈರ್ಯುದ್ಧೇ ಬದ್ಧಂ ಶ್ರುತ್ವಾ ಪ್ರಹೃಷ್ಟಹೃದಯಸ್ತದ್ವೃತ್ತಾಂತಂ ವೇದಿತುಂ ಹಸ್ತಿನಪುರಂ ಪ್ರತಿ ಕೃತವರ್ಮಾಣಂ ಪ್ರೇಷ್ಯ ತದ್ವಚನೇನ ಸರ್ವಂ ಶ್ರುತ್ವಾ.

ಭೀಮಸೇನನು ಗದಾಯುದ್ಧವನ್ನು ಅಭ್ಯಾಸ ಮಾಡಬೇಕೆಂದು ತೀರ್ಮಾನಿಸಿದನು. ಶ್ರೀಕೃಷ್ಣದೇವನಲ್ಲಿ ಗದಾಯುದ್ಧವನ್ನು ಅಭ್ಯಾಸ ಮಾಡಿದರೆ ಶ್ರೀಕೃಷ್ಣದೇವನು ಕೊಡುವ ಗದಾಪ್ರಹಾರಕ್ಕೆ ತಾನೂ ಪ್ರತಿಯಾಗಿ ಗದಾಪ್ರಹಾರವನ್ನು ಕೊಡಬೇಕಾದ ಸಂದರ್ಭವು ಏರ್ಪಡುತ್ತದಲ್ಲವೇ? ಶ್ರೀಕೃಷ್ಣದೇವನನ್ನು ಯಾವ ಕಾರಣದಿಂದಲೂ ಎದುರಿಸಿ ನಿಲ್ಲಕೂಡದೆಂದೂ ಹಾಗೆ ಮಾಡುವುದು ಶುದ್ಧವಾದ ಭಾಗವತಧರ್ಮಕ್ಕೆ ವಿರೋಧವಾಗುತ್ತದೆಂದೂ ತೀರ್ಮಾನಿಸಿದ ಶ್ರೀಭೀಮಸೇನನು ಶ್ರೀಕೃಷ್ಣದೇವನಿಂದ ಗದಾಯುದ್ಧವನ್ನು ಅಭ್ಯಾಸ ಮಾಡಿದನು. ಸಾಂದೀಪಿನಿ ಆಚಾರ್ಯರ ಮನೆಯಲ್ಲಿ ವಿದ್ಯಾಭ್ಯಾಸವನ್ನು ಮಾಡುತ್ತಿದ್ದಾಗ ಅವರ ಮುಂದೆ ಲೀಲೆಯಿಂದ ಶ್ರೀಕೃಷ್ಣದೇವನೂ ಬಲರಾಮನೂ ಗದಾಯುದ್ಧವನ್ನು ಮಾಡುತ್ತಿದ್ದಾಗ ಶ್ರೀಕೃಷ್ಣದೇವನಿಂದ ತಿಳಿದಿರುವ ಹೊಸ ಹೊಸ ಗದಾಯುದ್ಧದ ಮರ್ಮಗಳನ್ನು ಶ್ರೀಭೀಮಸೇನನಿಗೆ ಬಲರಾಮನು ಹೇಳಿಕೊಟ್ಟನು. ಅರ್ಜುನನು ಅತ್ಯುತ್ತಮವಾದ ಅಸ್ತ್ರಗಳನ್ನು ಶ್ರೀಕೃಷ್ಣದೇವನಿಂದ ಅಭ್ಯಾಸ ಮಾಡಿದನು. ಸಹದೇವನು ಉದ್ಧವನಿಂದ ಸಕಲ ನೀತಿಗಳನ್ನು ತಿಳಿದನು. ಮೂರು ವರ್ಷಗಳ ವರೆಗೆ ಭೀಮಸೇನನೂ ಅರ್ಜುನನೂ ಸಹದೇವನೂ ಮಥುರಾಪಟ್ಟಣದಲ್ಲಿದ್ದು ಶ್ರೀಕೃಷ್ಣದೇವನಿಂದ ಅನುಮತಿಯನ್ನು ಪಡೆದು ಶ್ರೀಕೃಷ್ಣದೇವನ ಮಗನಾಗಿರುವ ವಿಶೋಕನಿಂದ ಸಹಿತರಾಗಿ ಹಸ್ತಿನಾವತಿಗೆ ಹಿಂದಿರುಗಿ ಬಂದರು. ಆ ವಿಶೋಕನು ತ್ರಿವಕ್ರೆಯಲ್ಲಿ ಹುಟ್ಟಿದವನು. ನಾರದರಿಂದ ಪಂಚರಾತ್ರಾಗಮಗಳನ್ನು ಓದಿದವನು. ಶ್ರೀಭೀಮಸೇನನ ರಥದಲ್ಲಿ ಸಾರಥಿಯಾದನು. ಹಸ್ತಿನಾವತಿಗೆ ಬಂದ ಮೇಲೆ ಶ್ರೀಭೀಮಸೇನನು ಶ್ರೀವೇದವ್ಯಾಸರಲ್ಲಿ ವಿದ್ಯೆಯನ್ನು ಪುನಃ ಓದಿದನು. ಅರ್ಜುನ ಮುಂತಾದ ದೇವಾಂಶಸಂಭೂತರಿಗೆ ಪರವಿದ್ಯೆಯನ್ನು ಉಪದೇಶಿಸಿದನು. ಭಗವಂತನಿಗೆ ವಿರುದ್ಧವಾದ ಎಲ್ಲಾ ಮಾರ್ಗಗಳನ್ನೂ ಖಂಡಿಸಿದನು. ಬಾಹುಯುದ್ಧದಿಂದಲೂ ವಾಗ್ಯುದ್ಧದಿಂದಲೂ ಅತಿಬಲಿಷ್ಠರಾದ ಸರ್ವರನ್ನೂ ಜಯಿಸಿದನು. ಸ್ವಭಾವಸಿದ್ಧವಾದ ಪ್ರತಿಭೆಯುಳ್ಳವನಾಗಿದ್ದರೂ ಶ್ರೀವೇದವ್ಯಾಸರ ಉಪದೇಶದಿಂದ ಅತ್ಯಧಿಕ ಪ್ರತಿಭಾವಂತನಾದನು. ಧರ್ಮರಾಜನೂ ಸಹ ವೇದವ್ಯಾಸರ ಉಪದೇಶದಿಂದ ಪರವಿದ್ಯೆಯಲ್ಲಿ ನಿಪುಣನಾಗಿ ಶ್ರೀಕೃಷ್ಣನಲ್ಲಿ ಅತ್ಯಂತ ಭಕ್ತಿಯಿಂದ ಯುಕ್ತನಾದನು. ಐವರು ಪಾಂಡವರೂ ಧರ್ಮಮಾರ್ಗನಿರತರಾಗಿ ಸಂತೋಷದಿಂದ ಕಾಲವನ್ನು ಕಳೆದರು.

## ದ್ರೋಣರ ಚರಿತ್ರೆ

ಭರದ್ವಾಜರ ಮಗನಾಗಿರುವ ದ್ರೋಣರು ಬ್ರಾಹ್ಮಣಧರ್ಮವನ್ನು ಚೆನ್ನಾಗಿ ಪಾಲಿಸುತ್ತಿದ್ದರು. ಇನ್ನೊಬ್ಬರಿಂದ ಯಾವ ವಸ್ತುಗಳನ್ನೂ ತೆಗೆದುಕೊಳ್ಳುತ್ತಿದ್ದಿಲ್ಲ. ಹೊಲದ ಯಜಮಾನನು ಹೊಲದಲ್ಲಿರುವ

ಧಾನ್ಯಗಳನ್ನು ಸಾಗಿಸಿಕೊಂಡು ಹೋದ ಮೇಲೆ ಅಲ್ಲಿ ಬಿದ್ದಿರುವ ಧಾನ್ಯಗಳ ಕಾಳುಗಳಿಂದಲೂ ಧಾನ್ಯಗಳ ಗೊಂಚಲುಗಳಿಂದಲೂ ಬೀದಿಗಳಲ್ಲಿ ಬಿದ್ದಿರುವ ಧಾನ್ಯಗಳ ಕಾಳುಗಳಿಂದಲೂ ಜೀವಿಸುತ್ತಿದ್ದರು. ಇದೇ ಶಿಲ ಮತ್ತು ಉಂಛವೃತ್ತಿ ಎನಿಸುತ್ತದೆ. ಆ ವಸ್ತುಗಳನ್ನೂ ಮರುದಿನಕ್ಕೆ ಇಟ್ಟುಕೊಳ್ಳುತ್ತಿದ್ದಿಲ್ಲ. ಇದೇ ಅಶ್ವಸ್ತನವೃತ್ತಿ ಎನಿಸುತ್ತದೆ.

ಅವರಿಗೆ "ಅಶ್ವತ್ಥಾಮ" ಎಂಬ ಮಗನಿದ್ದನು. ಅವನು ದುರ್ಯೋಧನ ಮುಂತಾದ ಧೃತರಾಷ್ಟ್ರನ ಮಕ್ಕಳ ಜೊತೆಯಲ್ಲಿ ಆಟವಾಡುತ್ತಿದ್ದನು. ಮಧ್ಯಾಹ್ನಕಾಲದಲ್ಲಿ ದುರ್ಯೋಧನಾದಿಗಳು ಹಾಲನ್ನು ಕುಡಿಯುವುದಕ್ಕಾಗಿ ಅವರ ಮನೆಗೆ ಹೋದಾಗ ಅಶ್ವತ್ಥಾಮನೂ ತನ್ನ ಮನೆಗೆ ಹಾಲಿಗಾಗಿ ಬರುತ್ತಿದ್ದನು. ಆಗ ಅವನ ತಾಯಿಯ ಹಿಟ್ಟನ್ನು ಕಲಸಿ ಹಾಲು ಎಂದು ಕೊಡುತ್ತಿದ್ದಳು. ಅದನ್ನು ಕುಡಿದು ದುರ್ಯೋಧನಾದಿಗಳ ಬಳಿಗೆ ಬಂದು "ನಾನೂ ಹಾಲನ್ನು ಕುಡಿದೆನು" ಎಂದು ಕುಣಿಯುತ್ತಾ ಹೇಳುತ್ತಿದ್ದನು. ಒಮ್ಮೆ ಅವರು ಇವನಿಗೆ ನಿಜವಾದ ಹಾಲನ್ನು ಕುಡಿಸಿದರು. ಹಾಲಿನ ರುಚಿಯನ್ನು ತಿಳಿದನು. ಇನ್ನೊಂದು ದಿನದಲ್ಲಿ ತಾಯಿಯು ಹಿಟ್ಟನ್ನು ಕಲಸಿ ಹಾಲು ಎಂದು ಹೇಳಿ ಕೊಟ್ಟಾಗ "ಇದು ಹಾಲಲ್ಲ. ನಿಜವಾದ ಹಾಲನ್ನು ಕೊಡು" ಎಂದು ಹೇಳುತ್ತಾ ಗಟ್ಟಿಯಾಗಿ ಅತ್ತನು.

ಈ ಅಳುವ ಧ್ವನಿಯನ್ನು ದ್ರೋಣರು ಕೇಳಿ ಕಾರಣವನ್ನು ತಿಳಿದರು. ಮಹಾವಿರಕ್ತರಾದ ದ್ರೋಣರಿಗೆ ಶ್ರೀಹರಿಯ ಸಂಕಲ್ಪದಿಂದ ಪುತ್ರನಲ್ಲಿ ಸ್ನೇಹವೂ ವಾತ್ಸಲ್ಯವೂ ಏರ್ಪಟ್ಟಿತು. ಅವರ ಪತ್ನಿಯಾದ ಕೃಪೀದೇವಿಯು ಗೋವನ್ನು ಸಂಪಾದಿಸಿಕೊಂಡು ಬರುವಂತೆ ಪ್ರೇರಿಸಿದಳು. ತುಂಬಾ ಖಿನ್ನರಾದರು. ಗೋವನ್ನು ಸಂಪಾದಿಸುವು ದಕ್ಕಾಗಿ ಹೊರಟು ಆಲೋಚಿಸಿದರು. "ಶ್ರೀಹರಿಯು ಸರ್ವರಿಗೂ ಯಜಮಾನನು. ಗುರುವು ಪರದೇವತೆಯಾಗಿರುವವನು. ಅವನಿಂದ ಪ್ರತಿಗ್ರಹವನ್ನು ಸ್ವೀಕರಿಸಿದರೆ ದೋಷವಿಲ್ಲ. ಆದ್ದರಿಂದ ಅವನಲ್ಲಿಗೆ ಹೋಗಿ ಬೇಡುವೆನು." ಎಂದು ತೀರ್ಮಾನಿಸಿ ಪರಶುರಾಮದೇವನಲ್ಲಿಗೆ ಬಂದರು. ತನ್ನ ಬಾಲಕನಿಗಾಗಿ ಒಂದು ಗೋವನ್ನು ಬೇಡಿದರು, ಶ್ರೀಪರಶುರಾಮನು ಆಲೋಚಿಸಿದನು.

ಶ್ರೀಮಧ್ವಾಚಾರ್ಯರ ಶಿಷ್ಯರ ಸಂತತಿಯಲ್ಲಿ ಕಲಿಯುಗದಲ್ಲಿ ಹುಟ್ಟಿರುವ ಕೆಲವರು ಮಾತ್ರ ಪಾಪಯೋಗ್ಯರಲ್ಲ. ಉಳಿದವರೆಲ್ಲರೂ ಪ್ರಾಯಶಃ ಪಾಪಯೋಗ್ಯರಾಗಿರುವರು. ದೇವತೆಗಳು ಭೂಮಿಯಲ್ಲಿ ಅವತರಿಸಿದಾಗ ಪ್ರಬಲವಾದ ಕಾರಣವಿದ್ದರೆ ಮಾತ್ರ ಅವರಿಗೆ ಮಕ್ಕಳು ಹುಟ್ಟುವುದಿಲ್ಲ. ಇಲ್ಲದಿದ್ದರೆ ಹುಟ್ಟಲೇಬೇಕು. ಹಾಗೆ ಹುಟ್ಟಿದರೆ ಆ ವಂಶದಲ್ಲಿ ನೂರು ತಲೆಯ ವರೆಗೆ ಪ್ರಾಯಶಃ ಪಾಪಯೋಗ್ಯರಾಗಿರುವುದಿಲ್ಲ. ಇಂತಹ ಸಂದರ್ಭದಲ್ಲಿ ಕಲಿಯು ಪ್ರವೇಶಿಸುವುದೂ ತನ್ನ ಪ್ರತಾಪವನ್ನು ಹೆಚ್ಚಿಸುವುದೂ ಅಶಕ್ಯವಾಗುತ್ತದೆ.

(೧) ಈಗ ಕಲಿಯುಗವು ಸನ್ನಿಹಿತವಾಗುತ್ತಿದೆ. ಆದ್ದರಿಂದ ಕಲಿಯು ಪ್ರವೇಶಿಸಲೇಬೇಕು. ಅವನ ಪ್ರತಾಪವನ್ನು ಹೆಚ್ಚಿಸಲೂಬೇಕು. ಅದಕ್ಕಾಗಿ ಇನ್ನು ಮುಂದೆ ದೇವತೆಗಳ ಸಂತತಿಯು ಇರಬಾರದು. ಭೂಭಾರಪರಿಹಾರಾರ್ಥವಾಗಿ ಅವತರಿಸಿರುವ ಎಲ್ಲಾ ದೇವತೆಗಳೂ ಭೂಭಾರವನ್ನು ಪರಿಹರಿಸಿ ಮುಗಿಯಲಿ. ಅನಂತರದಲ್ಲಿ ಅವರನ್ನು ಈ ದ್ರೋಣನು ಅವನ ಮಗನಾದ ಅಶ್ವತ್ಥಾಮನೂ ಸಂಹರಿಸಲಿ. ಇದರಿಂದ ಅವರಿಗೆ ಸಂತತಿಯಿಲ್ಲದಂತಾಗುತ್ತದೆ. ಇದು ಇವರನ್ನು ಸಂಹರಿಸಿದ್ದರಿಂದಾಗುವ ಮೊದಲನೆಯ ಪ್ರಯೋಜನ. (೨) ಅವರೆಲ್ಲರೂ ಮಹಾವಿಷ್ಣುಭಕ್ತರಾದ ಪಾಂಡವರಿಗಾಗಿ ಸಾಯಲಿ. ಇದರಿಂದ ಸತ್ತವರಿಗೆ ಮೋಕ್ಷವೂ ಮೋಕ್ಷದಲ್ಲಿ ಆನಂದ ಮುಂತಾದ ಗುಣಗಳ ವೃದ್ಧಿಯೂ ಏರ್ಪಡಲಿ. ಇದು ಪಾಂಡವರಿಗಾಗಿ ಸತ್ತಿದ್ದರಿಂದ ಬರುವ ಎರಡನೆಯ ಪ್ರಯೋಜನ.

ಇಷ್ಟು ತೀರ್ಮಾನಿಸಿದ ಶ್ರೀಪರುಶುರಾಮದೇವನು ಮೆಲ್ಲನೆ ನಗುತ್ತಾ ಹೇಳಿದನು. " ನಾನು ಎಲ್ಲವನ್ನೂ ಸರ್ವರಿಗೂ ಕೊಟ್ಟು ಮುಗಿಯಿತು. ಈಗ ನನ್ನಲ್ಲಿ ಉಳಿದಿರುವುದು ನನ್ನ ಶರೀರ, ವಿದ್ಯೆ ಮತ್ತು ಆಯುಧ, ಈ ಮೂರರಲ್ಲಿ ನೀನು ಅಪೇಕ್ಷಿಸುವ ಒಂದನ್ನು ಕೇಳು ಎಂದನು. ಈ ಮಾತುಗಳನ್ನು ಕೇಳಿದ ದ್ರೋಣಾಚಾರ್ಯರು ಧೀರ್ಘವಾಗಿ ಯೋಚಿಸಿದರು.

" (೧) ಓ ಮಹಾಪ್ರಭೋ, ನೀನು ಸರ್ವರಿಗೂ ಯಜಮಾನನಾಗಿರುವಿ. ಸರ್ವೋತ್ತಮನಾಗಿರುವಿ. ಸ್ವತಂತ್ರನಾಗಿರುವಿ. ನಿನಗೆ ಸಮಾನನು ನೀನೇ ಹೊರತು ಇನ್ನೊಬ್ಬನಿಲ್ಲ. ನಿನ್ನನ್ನು ತೆಗೆದುಕೊಂಡವನು ನಿನಗೆ ಯಜಮಾನನಾಗಬೇಕು. ನಿನ್ನ ಯಜಮಾನತ್ವವನ್ನು ಅಪೇಕ್ಷಿಸುವವನು ನಿತ್ಯನರಕದಲ್ಲಿ ಬೀಳುವನು. ಆದ್ದರಿಂದ ನಿನ್ನನ್ನು ಬಯಸಲಾರೆ. (೨) ಸರ್ವೋತ್ತಮನಾದ ನಿನ್ನ ಕೈಯಲ್ಲಿರುವ ಆಯುಧಗಳು ಸರ್ವೋತ್ತಮವಾದವುಗಳು. ನನ್ನಂಥವರು ಅತ್ಯಂತ ದುರ್ಬಲರು. ನಿನ್ನ ಆಯುಧಗಳನ್ನು ಎತ್ತಲೂ ಅಸಮರ್ಥರು. ಅವುಗಳಿಂದ ನಮಗಾಗುವ ಲಾಭವೇನು? ಆದ್ದರಿಂದ ಆಯುಧಗಳನ್ನೂ ಬಯಸಲಾರೆ. (೩) ನಿನ್ನಲ್ಲಿರುವ ವಿದ್ಯೆಯು ನಿರ್ದೋಷವಾದುದು. ಅತ್ಯಂತ ಸೂಕ್ಷ್ಮವಾದುದು. ಸಕಲ ತತ್ವಗಳನ್ನೂ ಸ್ಪಷ್ಟವಾಗಿ ತಿಳಿಸತಕ್ಕದ್ದು. ಅಂತಹ ವಿದ್ಯೆಯನ್ನು ನನ್ನ ಯೋಗ್ಯತೆಯನ್ನು ಅನುಸರಿಸಿ ಕೊಡು'' ಎಂದು ಬೇಡಿದರು.

ಶ್ರೀಪರಶುರಾಮನು ವಿದ್ಯೆಯನ್ನು ಕೊಡುವುದಾಗಿ ಅಂಗೀಕರಿಸಿದನು. ಹನ್ನೆರಡು ವರ್ಷಗಳ ವರೆಗೆ ಸಕಲ ವಿದ್ಯೆಗಳನ್ನೂ ಅಸ್ತ್ರವಿದ್ಯೆಗಳನ್ನು ಶಸ್ತ್ರವಿದ್ಯೆಗಳನ್ನೂ ಉಪದೇಶಿಸಿದನು. ಶ್ರೀಪರಶುರಾಮದೇವನಿಂದ ಅನುಮತಿಯನ್ನು ಪಡೆದ ದ್ರೋಣಾಚಾರ್ಯರು ತನ್ನ ಮಿತ್ರನಾಗಿರುವ ದ್ರುಪದರಾಜನಲ್ಲಿಗೆ ಬಂದರು.

" ಈ ದ್ರುಪದನು ದ್ರೋಣಾಚಾರ್ಯರ ತಂದೆಯಾಗಿರುವ ಭರದ್ವಾಜರಲ್ಲಿ ಶಸ್ತ್ರವಿದ್ಯೆ ಮುಂತಾದ ಸಕಲ ವಿದ್ಯೆಗಳನ್ನು ಅಭ್ಯಾಸ ಮಾಡಿದವನು. ಆದ್ದರಿಂದ ತನ್ನ ತಂದೆಗೆ ಶಿಷ್ಯನಾಗಿರುವ ದ್ರುಪದನು ತನಗೂ ಶಿಷ್ಯನಿಗೆ ಸಮಾನನಾಗುವನು. ಶಿಷ್ಯನ ಎಲ್ಲಾ ದ್ರವ್ಯವೂ ಗುರುವಿಗೆ ಸೇರಿದ್ದು. ಆದ್ದರಿಂದ ಶಿಷ್ಯನಿಗೆ ಯಾವ ವಸ್ತುಗಳನ್ನು ತೆಗೆದುಕೊಂಡರೂ ಪ್ರತಿಗ್ರಹವೆನಿಸುವುದಿಲ್ಲ. ನಾನು ನನ್ನ ಮಗನಿಗಾಗಿ ಗೋವನ್ನು ಅಪೇಕ್ಷಿಸಿದೆನು. ಆ ಗೋವನ್ನು ಇತರರಿಂದ ತೆಗೆದುಕೊಳ್ಳಬಾರದೆಂಬ ಅಭಿಪ್ರಾಯದಿಂದ ಪರಶುರಾಮನಲ್ಲಿಗೆ ಹೋದೆನು. ಅವನು ಗೋವಿಲ್ಲವೆಂದು ಹೇಳಿ ವಿದ್ಯೆಯನ್ನು ಕೊಟ್ಟನು. ಈಗ ದ್ರುಪದರಾಜನಲ್ಲಿಗೆ ಹೋಗುತ್ತಿರುವೆನು. ಅವನು ನಮ್ಮ ತಂದೆಯ ಶಿಷ್ಯನಾಗಿರುವುದರಿಂದ ಅವನಲ್ಲಿ ಪ್ರತಿಗ್ರಹವನ್ನು ಮಾಡುವುದರಲ್ಲಿ ದೋಷವಿಲ್ಲ.

ಅದು ಮಾತ್ರವಲ್ಲ. ನಮ್ಮ ತಂದೆಯವರಲ್ಲಿ ಅವನು ವಿದ್ಯಾಭ್ಯಾಸವನ್ನು ಮಾಡುತ್ತಿರುವಾಗ ನನ್ನಲ್ಲಿರುವ ಪ್ರೇಮಾತಿಕರೇಕದಿಂದ " ನನ್ನ ತಂದೆಯು ನನಗೆ ರಾಜ್ಯವನ್ನು ಕೊಟ್ಟರೆ ಆ ರಾಜ್ಯದಲ್ಲಿ ಅರ್ಧರಾಜ್ಯವನ್ನು ನಿನಗೆ ಕೊಡುವೆನು''. ಎಂದು ಹೇಳಿರುವನು. ಅವನ ಹೇಳಿಕೆಯಂತೆ ಅವನ ರಾಜ್ಯದಲ್ಲಿ ಅರ್ಧರಾಜ್ಯವನ್ನು ನನಗೆ ಕೊಡುವನು. ಅರ್ಧರಾಜ್ಯವು ನನಗೆ ಬೇಡ. ನನ್ನ ಮಗನಿಗಾಗಿ ಒಂದು ಗೋವನ್ನು ಕೊಟ್ಟರೆ ಸಾಕು. ಅದನ್ನೂ ಅವನಲ್ಲಿ ಬೇಡುವುದಿಲ್ಲ. ನಾನು ಹೋದಕೂಡಲೇ ನನ್ನ ಹೆಸರನ್ನು ಕೇಳಿದ ದ್ರುಪದನು ತನ್ನ ಪ್ರತಿಜ್ಞೆಯಂತೆ ಅರ್ಧ ರಾಜ್ಯವನ್ನು ಕೊಡುವನು. ಆ ರಾಜ್ಯದಲ್ಲಿ ಒಂದು ಗೋವನ್ನು ಮಾತ್ರ ಸ್ವೀಕರಿಸಿ ಉಳಿದ ಅರ್ಧ ರಾಜ್ಯವನ್ನು ಅವನಿಗೆ ಹಿಂದಿರುಗಿಸಿ ಕೊಡುವೆನು'' ಹೀಗೆ ತೀರ್ಮಾನಿಸಿ ದ್ರುಪದ ರಾಜನನ್ನು ನೋಡಿ " ನಿನ್ನ ಮಿತ್ರನಾಗಿರುವ ದ್ರೋಣನು ಬಂದಿರುವೆನು.'' ಎಂದು ಹೇಳಿ ಕಳುಹಿಸಿದರು.

ಈ ಮಾತುಗಳನ್ನು ದ್ರುಪದನು ಕೇಳಿದನು. ಶ್ರೀಹರಿಸಂಕಲ್ಪದಿಂದ ಅವನಿಗೆ ತುಂಬಾ ಅಹಂಕಾರವು ಏರ್ಪಟ್ಟಿತು. ಅಹಂಕಾರದಿಂದ " ನಾನು ರಾಜನು. ನೀನು ಬಡವನು. ಬಡವನು ರಾಜನಿಗೆ ಮಿತ್ರನಾಗುವುದು ಅಸಂಭಾವಿತ. ಆದ್ದರಿಂದ ಎಲೋ ಬ್ರಾಹ್ಮಣ ನಿನ್ನ ಇಷ್ಟವಿದ್ದಲ್ಲಿಗೆ ಹೋಗು" ಎಂದನು. ಈ ಮಾತುಗಳನ್ನು ಕೇಳಿದ ದ್ರೋಣಾಚಾರ್ಯರಿಗೆ ಇಂದ್ರಿಯಗಳನ್ನೆಲ್ಲಾ ಜಯಿಸಿದ್ದರೂ ಶ್ರೀಹರಿಯ ಇಚ್ಛೆಯಿಂದ ಕೋಪವು ಬಂತು. ನಾನು ಪ್ರತಿಗ್ರಹವನ್ನು ಬಿಟ್ಟಿರುವೆನು. ಇವನು ನನ್ನ ತಂದೆಯ ಶಿಷ್ಯನಾಗಿರುವುದರಿಂದ ನನ್ನ ಶಿಷ್ಯನಾಗಿರುವನು. ಇವನ ಹಣವೆಲ್ಲಾ ನನ್ನ ಹಣವಾಗಿರುವುದರಿಂದ ಇವನಲ್ಲಿ ಪ್ರತಿಗ್ರಹವನ್ನು ಮಾಡುವುದು ದೋಷಕರವಲ್ಲವೆಂದು ತೀರ್ಮಾನಿಸಿ ಇವನಲ್ಲಿಗೆ ಬಂದೆನು.

ಈ ಪಾಪಿಯು ಕಠೋರವಾದ ಮಾತುಗಳಿಂದ ನನ್ನನ್ನು ನಿಂದಿಸಿರುವನು. ಆದ್ದರಿಂದ ಕೌರವರನ್ನು ಶಿಷ್ಯರಾಗುವಂತೆ ಮಾಡಿಕೊಳ್ಳುವೆನು. ಅವರಿಂದ ಗೋವನ್ನು ಸಂಪಾದಿಸುವೆನು ಮತ್ತು ಅವರಿಂದ ಇವನ ಗರ್ವವನ್ನು ಪರಿಹರಿಸುವೆನು ಎಂದು ಸಂಕಲ್ಪಿಸಿದರು. ಪಾಂಡವರು ಮತ್ತು ಕೌರವರು ಆಡುತ್ತಿರುವ ಹಸ್ತಿನಾವತಿಪಟ್ಟಣದ ಹೊರಗಣಪ್ರದೇಶಕ್ಕೆ ಬಂದರು. ಆಗ ಧರ್ಮರಾಜನ ಉಂಗುರವೂ ಚಂಡೂ ಅಲ್ಲಿರುವ ಭಾವಿಯಲ್ಲಿ ಬಿತ್ತು. ಆ ಉಂಗುರುವನ್ನೂ ಚಂಡನ್ನೂ ಭಾವಿಯಿಂದ ಹೊರಗೆ ತೆಗೆಯುವುದಕ್ಕೆ ಎಲ್ಲಾ ಬಾಲಕರೂ ಪ್ರಯತ್ನಿಸಿದರು. ಈ ಭಾವಿಯು ಎಷ್ಟು ಆಳವಾಗಿದ್ದರೂ ಈ ಭಾವಿಯೊಳಗೆ ನಾನು ಧುಮುಕುವೆನು. ಉಂಗುರವನ್ನು ಎಲ್ಲಿದ್ದರೂ ಹುಡುಕಿ ತೆಗೆಯುವೆನು ಪುನಃ ಮೇಲೆ ಹಾರಿ ಬರುವೆನು ಎಂದು ಭೀಮಸೇನದೇವರು ಹೇಳಿದರು.

ಈ ಮಾತುಗಳನ್ನು ದ್ರೋಣಾಚಾರ್ಯರು ಕೇಳಿದರು. " ನೀವೆಲ್ಲರೂ ಭರತರಾಜನ ವಂಶದಲ್ಲಿ ಹುಟ್ಟಿದವರು. ಅಸ್ತ್ರವಿದ್ಯೆಯನ್ನು ತಿಳಿಯದವರು ಮಾಡುವ ಕೆಲಸವನ್ನು ಮಾಡುತ್ತಿರುವಿರಿ. ದೇವತೆಗಳಿಂದ ಮಾನ್ಯವಾದ ಅಸ್ತ್ರಗಳನ್ನು ತಿಳಿಯದಿರುವ ನಿಮಗೆ ಧಿಕ್ಕಾರವಿರಲಿ" ಎಂದರು. ಈ ಮಾತುಗಳನ್ನು ಕೇಳಿದ ಬಾಲಕರು ಈ ಬ್ರಾಹ್ಮಣರು ಅಸ್ತ್ರವಿದ್ಯೆಯನ್ನು ತಿಳಿದವರೆಂದು ತೀರ್ಮಾನಿಸಿದರು. ಚಂಡನ್ನೂ ಉಂಗುರವನ್ನೂ ತೆಗೆದುಕೊಡಬೇಕೆಂದು ಪ್ರಾರ್ಥಿಸಿದರು.

ಆಗ ದ್ರೋಣರು ಚಿಕ್ಕ ಒಂದು ಬಾಣವನ್ನು ಅಭಿಮಂತ್ರಿಸಿ ಚಂಡಿಗೆ ಗುರಿಯಿಟ್ಟು ಬಿಟ್ಟರು. ಅದು ಚಂಡನ್ನು ಮುಟ್ಟಿತು. ಆ ಬಾಣಕ್ಕೆ ಅದೇ ವಿಧವಾದ ಇನ್ನೊಂದು ಚಿಕ್ಕ ಬಾಣವನ್ನು ಜೋಡಿಸಿದರು. ಇದೇ ರೀತಿಯಿಂದ ಕ್ರಮವಾಗಿ ಜೋಡಿಸುತ್ತಾ ದಿವ್ಯಾಸ್ತ್ರಬಲದಿಂದ ಚಂಡನ್ನು ಭಾವಿಯಿಂದ ಹೊರಗೆ ತೆಗೆದರು. ಉಂಗುರವನ್ನು ತೆಗೆದುಕೊಡಬೇಕೆಂದು ಸರ್ವಬಾಲಕರೂ ಪ್ರಾರ್ಥಿಸಿದರು. ಆಗ ದ್ರೋಣರು " ನನಗೆ ಭೋಜನವನ್ನು ಕೊಡಬೇಕು" ಎಂದರು. ಈ ಮಾತುಗಳನ್ನು ಧರ್ಮರಾಜನು ಕೇಳಿದನು. ಕೇಳಿದಷ್ಟು ಹಣವನ್ನೂ ಆಹಾರವನ್ನೂ ಕೊಡುವುದಾಗಿ ಪ್ರತಿಜ್ಞೆ ಮಾಡಿದನು. ಕೂಡಲೇ ಉಂಗುರವನ್ನೂ ತೆಗೆದುಕೊಟ್ಟರು.

ಅಶ್ವತ್ಥಾಮರಿಗಾಗಿ ಗೋವನ್ನು ಶ್ರೀಪರಶುರಾಮದೇವರಲ್ಲಿ ಬೇಡುವುದಕ್ಕೆ ಹೋಗಿದ್ದ ದ್ರೋಣರು ಹನ್ನೆರಡು ವರ್ಷಗಳ ವರೆಗೆ ವಿದ್ಯಾಭ್ಯಾಸವನ್ನು ಮಾಡುತ್ತಿರುವಾಗ ಅಶ್ವತ್ಥಾಮಾಚಾರ್ಯರು ಶಿಲೋಂಛ ವೃತ್ತಿ ಯಿಂದ ಆಹಾರ ಸಾಮಗ್ರಿಯನ್ನು ಸಂಗ್ರಹಿಸಿ ತಾಯಿಯನ್ನು ಪೋಷಿಸುತ್ತಿದ್ದರು. ಆದ್ದರಿಂದ ಧರ್ಮರಾಜ ಮುಂತಾದ

ಬಾಲಕರೊಡನೆ ಆಟಕ್ಕಾಗಿ ಬರುತ್ತಿದ್ದಿಲ್ಲ. ಅವರು ಅಲ್ಲಿದ್ದರೆ ತನ್ನ ತಂದೆಯನ್ನು ಗುರುತು ಹಿಡಿಯುತ್ತಿದ್ದರು.

" ಈ ದ್ರೋಣರು ಹಸ್ತಿನಾವತಿಯಲ್ಲಿಯೇ ವಾಸಿಸುತ್ತಿದ್ದರೂ ರಾಜನ ಮನೆಗೆ ಒಂದು ದಿನವೂ ಹೋದವರಲ್ಲ. ಆದ್ದರಿಂದ ಯಾವ ರಾಜಕುಮಾರರೂ ದ್ರೋಣರನ್ನು ಇಷ್ವರ ವರೆಗೆ ನೋಡಿದವರಲ್ಲ. ಆದ್ದರಿಂದ " ನೀವು ಯಾರು?'' ಎಂದು ಕೇಳಿದರು. "ನನ್ನ ವಿಷಯವನ್ನು ನಿಮ್ಮ ಪಿತಾಮಹನಾದ ಭೀಷ್ಮನು ಹೇಳುವನು'' ಎಂದು ದ್ರೋಣರು ಹೇಳಿದರು. ಕೂಡಲೇ ಭೀಷ್ಮರಲ್ಲಿಗೆ ಓಡಿದರು. ನಡೆದ ವಿಷಯಗಳನ್ನು ಹೇಳಿದರು. ಭೀಷ್ಮರು ಅವರ ದೇಹದ ಲಕ್ಷಣಗಳನ್ನೆಲ್ಲಾ ಕೇಳಿದರು. ಕಪ್ಪುಬಣ್ಣವುಳ್ಳವರೆಂದೂ ಮುದುಕರೆಂದೂ ಬ್ರಾಹ್ಮಣರೆಂದೂ ಹೇಳಿದರೂ. ಅವರಲ್ಲಿರುವ ಮಹಾಸ್ತ್ರವಿದ್ಯೆಯನ್ನು ತಿಳಿದರು. ದ್ರೋಣರ ಮನೆಗೆ ಹೋದರು. ಹನ್ನೆರಡು ವರ್ಷಗಳ ವರೆಗೆ ಪರಶುರಾಮನಿಂದ ಅಸ್ತ್ರವಿದ್ಯೆಯನ್ನು ಅಭ್ಯಾಸಿಸಿದ ವಿಷಯವನ್ನೂ ತಿಳಿದರು. ಅವರಲ್ಲಿ ಈ ಎಲ್ಲಾ ಬಾಲಕರನ್ನೂ ಶಿಷ್ಯರಾಗುವಂತೆ ಮಾಡಿದರು.

ದ್ರೋಣಾಚಾರ್ಯರು " ಯಾವನು ನನ್ನ ಇಷ್ಟವನ್ನು ನೇರವೇರಿಸುವೆನೆಂದು ಪ್ರತಿಜ್ಞೆ ಮಾಡುವನೋ ಅವನನ್ನುಧನುರ್ಧಾರಿಗಳಲ್ಲಿ ಶ್ರೇಷ್ಠನಾಗುವಂತೆ ಮಾಡುವೆನು'' ಎಂದು ಹೇಳಿದರು. ಅರ್ಜುನನು ಆ ಪ್ರತಿಜ್ಞೆಯನ್ನು ಮಾಡಿದನು. ಈ ಅರ್ಜುನನು ಉನ್ಮಾದನ ಮುಂತಾದ ಅನೇಕ ಅಸ್ತ್ರಗಳನ್ನು ಶ್ರೀಕೃಷ್ಣದೇವನಿಂದ ತಿಳಿದಿರುವನು. " ಈ ಅಸ್ತ್ರಗಳನ್ನು ಆಪತ್ಕಾಲಗಳಲ್ಲಿಯೇ ಬಿಡಬೇಕು. ಇತರ ಕಾಲಗಳಲ್ಲಿ ಬಿಡಕೂಡದು.'' ಎಂದು ಶ್ರೀಕೃಷ್ಣದೇವನು ಆಜ್ಞಾಪಿಸಿರುವನು. ಆದ್ದರಿಂದ ಯಾವಾಗಲೂ ಈ ಅಸ್ತ್ರಗಳನ್ನು ತಿಳಿಯಬೇಕು ಎಂಬ ಆಸೆಯು ಅರ್ಜುನನಿಗೆ ಇತ್ತು. ಅದಕ್ಕಾಗಿ ಅವನು ಆ ರೀತಿಯಿಂದ ಪ್ರತಿಜ್ಞೆ ಮಾಡಿದನು.

ಆಕಳಿಸುತ್ತಿರುವಾಗ ಬ್ರಾಹ್ಮಣರು ತಮಗೆ ತಿಳಿಯದಂತೆ ಸರ್ವರೂ ಸುಖಿಗಳಾಗಲಿ ಎಂದು ವರವನ್ನು ಕೊಡುವುದುಂಟು. ಅದು ಬುದ್ಧಿಪೂರ್ವಕವಾದ ವರವಲ್ಲ. ಆ ವರವು ತಮೋಯೋಗ್ಯರ ವಿಷಯದಲ್ಲಿ ಸುಳ್ಳಾಗುತ್ತದೆ. ಬುದ್ಧಿಪೂರ್ವಕವಾಗಿ ಲಕ್ಷ್ಮೀಪತಿಯಾದ ನಾರಾಯಣನನ್ನು ಬಿಟ್ಟು ಯಾರಿಂದಲೂ ವರವನ್ನು ಬೇಡಕೂಡದು. ಇದು ಭೀಮಸೇನದೇವರ ದೃಢಸಂಕಲ್ಪ. ಆದ್ದರಿಂದ ದ್ರೋಣಾಚಾರ್ಯರಿಂದ ಮೇಲ್ಕಂಡ ವರವನ್ನು ಭೀಮಸೇನದೇವರು ಬೇಡಲಿಲ್ಲ. ಅರ್ಜುನನು ಈ ಪ್ರತಿಜ್ಞೆಯನ್ನು ಮಾಡಿ ಗುರುಗಳಾದ ದ್ರೋಣಾಚಾರ್ಯರಿಂದ ವರವನ್ನು ಪಡೆಯಲಿ ಎಂದು ತೀರ್ಮಾನಿಸಿದರು. ಮತ್ತು ಅರ್ಜುನನಿಂದ ಪ್ರತಿಜ್ಞೆಯನ್ನು ಮಾಡಿಸಿದರು.

## ಭೀಮಸೇನದೇವರು ಅಸ್ತ್ರವಿದ್ಯೆಯಲ್ಲಿ ಪ್ರಖ್ಯಾತರಾಗದಿರಲು ಕಾರಣ

ಈ ವಿಷಯದಲ್ಲಿ ಇನ್ನೊಂದು ಕಾರಣವೂ ಇದೆ. ಭೀಷ್ಮ ಮುಂತಾದವರೊಡನೆ ನಮಗೆ ಯುದ್ಧವು ಏರ್ಪಡುತ್ತದೆ. ಗುರುಸ್ಥಾನದಲ್ಲಿರುವವರೊಡನೆ ನಾನು ಯಾವಾಗಲೂ ಯುದ್ಧವನ್ನು ಮಾಡಲಾರೆನು. ಅವರನ್ನು ಅರ್ಜುನನು ಎದುರಿಸಿ ಯುದ್ಧವನ್ನು ಮಾಡಲಿ. ಅದಕ್ಕಾಗಿ ಅಸ್ತ್ರಗಳನ್ನೆಲ್ಲಾ ಚೆನ್ನಾಗಿ ತಿಳಿಯಲಿ. ಇದರಿಂದ ನನಗೆ ಧರ್ಮಲಾಭವಾಗುತ್ತದೆ ಎಂದು ಭೀಮಸೇನದೇವರು ತೀರ್ಮಾನಿಸಿದರು.

ಅರ್ಜುನನು ಮೇಲ್ಕಂಡ ಪ್ರತಿಜ್ಞೆಯನ್ನು ಮಾಡಿದ ಕೂಡಲೇ ದ್ರೋಣರು ಅವನಲ್ಲಿ ಅತ್ಯಧಿಕವಾದ

ಸ್ನೇಹವನ್ನು ಮಾಡಿದರು. ಮಹಾಸ್ತ್ರಗಳನ್ನೆಲ್ಲಾ ಅವನಿಗೆ ಉಪದೇಶಿಸಿದರು. ಅವನಲ್ಲಿ ವಿಶೇಷವಾಗಿ ಪಕ್ಷಪಾತವನ್ನು ತೋರಿಸಿದರು. ಅವನನ್ನು ತುಂಬಾ ಹೊಗಳಿದರು. ರಹಸ್ಯವಾದ ಸಕಲ ವಿದ್ಯೆಗಳನ್ನೂ ಅವನಿಗೆ ಉಪದೇಶಿಸಿದರು. ಅವನನ್ನು ಬಿಟ್ಟು ಉಳಿದ ಯಾರಿಗೂ ಯಾವ ವಿಧದಿಂದಲೂ ಅಷ್ಟು ವಿದ್ಯೆಯನ್ನು ಉಪದೇಶಿಸಲಿಲ್ಲ.

ಭೀಮಸೇನದೇವರು ಸ್ವಾಭಾವಿಕವಾದ ಪ್ರತಿಭೆಯ ಬಲದಿಂದ ಎಲ್ಲವನ್ನೂ ತಿಳಿದಿರುವರು. ದ್ರೋಣಾಚಾರ್ಯರಿಗೆ ಅರ್ಜುನನಲ್ಲಿ ಅಪಾರ ಸ್ನೇಹವು ಏರ್ಪಡಬೇಕು. ಆ ಸ್ನೇಹದಿಂದ ಅವನನ್ನು ಸಕಲಾಸ್ತ್ರಗಳನ್ನು ತಿಳಿದವನಾಗುವಂತೆ ಮಾಡಬೇಕು ಎಂಬ ಉದ್ದೇಶದಿಂದ ಗುರುಶುಶ್ರೂಷಾದಿಗಳನ್ನು ಅರ್ಜುನನು ಮಾಡಿದಂತೆ ಮಾಡಲಿಲ್ಲ. ದ್ರೋಣಾಚಾರ್ಯರು ಲಕ್ಷ್ಯವೇಧ ಅಂದರೆ ಹಾರುತ್ತಿರುವ ಪಕ್ಷಿಯ ರೆಕ್ಕೆಯಲ್ಲಿರುವ ನಿರ್ದಿಷ್ಟವಾದ ರೋಮವನ್ನು ಕತ್ತರಿಸುವುದು ಮುಂತಾದ ಗುರಿಯ ಪರೀಕ್ಷೆ ಮುಂತಾದ ಮಹಾಪ್ರಯತ್ನದಿಂದಲೂ ಅಸಾಧ್ಯವಾದ ಅಸಂಖ್ಯಪರೀಕ್ಷೆಗಳನ್ನಿಟ್ಟರು. ಆ ಎಲ್ಲಾ ಪರೀಕ್ಷೆಗಳಲ್ಲಿಯೂ ಅರ್ಜುನನೊಬ್ಬನೇ ಜಯಶಾಲಿಯಾದನು. ಉಳಿದವರು ಯಾರೂ ತೇರ್ಗಡೆಯನ್ನು ಪಡೆಯಲಿಲ್ಲ. ಭೀಮಸೇನದೇವರು ಎಲ್ಲಾ ಪರೀಕ್ಷೆಗಳಲ್ಲಿಯೂ ಅರ್ಜುನನಿಗಿಂತ ಅಧಿಕವಾದ ಸ್ವಾಭಾವಿಕಶಕ್ತಿ ಯುಳ್ಳವರಾಗಿದ್ದರೂ ಸೋತಂತೆ ನಟಿಸಿದರು. "ಸ್ವಾಭಾವಿಕವಾದ ಭುಜಬಲವೂ ಶ್ರೀಹರಿಯ ವಿಶೇಷಾನುಗ್ರಹವೂ ತನ್ನಲ್ಲಿರುವುದರಿಂದ ಶತ್ರುಗಳನ್ನೆಲ್ಲರನ್ನೂ ಭುಜಬಲದಿಂದಲೇ ಸಂಹರಿಸಬಲ್ಲೆನು. ಅಸ್ತ್ರವಿದ್ಯೆಯ ಆವಶ್ಯಕತೆಯು ನನಗಿಲ್ಲ. ಅರ್ಜುನನಲ್ಲಿ ನನ್ನಂತೆ ಭುಜಬಲವೂ ಶ್ರೀಹರಿಯ ವಿಶೇಷಾನುಗ್ರಹವೂ ಅಧಿಕವಾಗಿಲ್ಲದಿರುವುದರಿಂದ ಅವನಿಗೆ ಅಸ್ತ್ರವಿದ್ಯೆಯ ಆವಶ್ಯಕತೆಯಿದೆ. ಆದ್ದರಿಂದ ಅವನೇ ಪರೀಕ್ಷೆಯಲ್ಲಿ ಉತ್ತೀರ್ಣನಾಗಲಿ ದ್ರೋಣಾಚಾರ್ಯರ ವಿಶೇಷಪ್ರೀತಿಗೆ ಪಾತ್ರನಾಗಲಿ" ಎಂಬ ಉದ್ದೇಶದಿಂದ ಭೀಮಸೇನದೇವರು ಹಾಗೆ ನಟಿಸಿದರು.

ದ್ರೋಣಾಚಾರ್ಯರನ್ನು ಸೇವಿಸುವ ವಿಷಯದಲ್ಲಿಯೂ ಭೀಮಸೇನದೇವರು ಅರ್ಜುನನನ್ನೇ ಮುಂದೆ ಕಳುಹಿಸಿದರು. ಇದರಿಂದ ದ್ರೋಣಾಚಾರ್ಯರು ಅವನಲ್ಲಿ ವಿಶೇಷವಾದ ಪ್ರೀತಿಯನ್ನಿಟ್ಟರು. ಅದೇ ಸಮಯದಲ್ಲಿ ಎಲ್ಲಾ ರಾಜಕುಮಾರರು ದ್ರೋಣಾಚಾರ್ಯರಲ್ಲಿಗೆ ಅಸ್ತ್ರವಿದ್ಯೆಯನ್ನು ಅಭ್ಯಾಸಮಾಡುವುದಕ್ಕಾಗಿ ಬಂದರು. ಅವರೆಲ್ಲರಿಗೂ ಪರಶುರಾಮದೇವನಿಂದ ತಾನು ತಿಳಿದಿರುವ ಸಕಲಾಸ್ತ್ರಗಳನ್ನೂ ಉಪದೇಶಿಸಿದರು. ಈ ಅಸ್ತ್ರಗಳನ್ನು ದ್ರೋಣಾಚಾರ್ಯರಲ್ಲದೆ ಬೇರೆ ಯಾರೂ ತಿಳಿದಿರಲಿಲ್ಲ. ಈ ರಾಜಕುಮಾರರು ಇತರ ರಾಜರುಗಳಿಂದ ಮನಸ್ಸಿನಿಂದಲೂ ನೆನಸದಿರುವ ವಿಚಿತ್ರವೂ ದಿವ್ಯವೂ ಆಗಿರುವ ಅಸ್ತ್ರಗಳನ್ನೆಲ್ಲವನ್ನೂ ದ್ರೋಣಾಚಾರ್ಯರಿಂದ ಅಭ್ಯಾಸಮಾಡಿದರು. ಹಿಂದಿನಕಾಲದಲ್ಲಿ ಅಸದೃಶವೀರರೆಂದು ಪ್ರಸಿದ್ಧರಾದ ಭರತ, ಮಾಂಧಾತ, ಮರುತ್ತ ಮುಂತಾದ ಯಾವ ರಾಜರುಗಳೂ ದ್ರೋಣಾಚಾರ್ಯರ ಶಿಷ್ಯರಾದ ಈ ರಾಜಕುಮಾರರಿಗೆ ಸಮಾನರೆನಿಸಲಿಲ್ಲ.

## ದ್ರೋಣಾಚಾರ್ಯರು ಕರ್ಣನನ್ನೂ ಏಕಲವ್ಯನನ್ನೂ ನಿರಾಕರಿಸಲು ಕಾರಣ

ಅದೇ ಸಮಯದಲ್ಲಿ ಕರ್ಣ ಏಕಲವ್ಯ ಎಂಬ ಇಬ್ಬರು ದ್ರೋಣಾಚಾರ್ಯರಲ್ಲಿ ಅಸ್ತ್ರವಿದ್ಯೆಯನ್ನು ಅಭ್ಯಾಸ ಮಾಡಬೇಕೆಂದು ಬಂದರು. ಆಗ ಪರಶುರಾಮದೇವನ ಶಿಷ್ಯರೂ ಬ್ರಾಹ್ಮಣರೂ ಆಗಿರುವ ದ್ರೋಣಾಚಾರ್ಯರು

ನೀಚಜಾತಿಯಾದ ಸೂತಜಾತಿಯಲ್ಲಿ ಹುಟ್ಟಿರುವ ಕರ್ಣನಿಗೆ ಅಸ್ತ್ರವಿದ್ಯೆಯನ್ನು ಉಪದೇಶಿಸಲಾರೆನೆಂದು ಹೇಳಿ ಅವನನ್ನು ಸ್ವೀಕರಿಸಲಿಲ್ಲ. ಏಕಲವ್ಯನು ಬೇಡರ ಜಾತಿಯಲ್ಲಿ ಹುಟ್ಟಿದವನೆಂಬ. ಅದೇ ಕಾರಣವನ್ನು ಹೇಳಿ ಅವನನ್ನೂ ಶಿಷ್ಯನಾಗಿ ಸ್ವೀಕರಿಸಲಿಲ್ಲ.

## ಕರ್ಣನು ಪರಶುರಾಮದೇವರಲ್ಲಿ ಅಸ್ತ್ರವಿದ್ಯೆಯನ್ನು ಅಭ್ಯಾಸ ಮಾಡಿದನು

ಮಹಾದುರಹಂಕಾರಿಯಾದ ಕರ್ಣನು ಹೀಗೆ ಆಲೋಚಿಸಿದನು. " ಈ ಬ್ರಾಹ್ಮಣನು ವಿದ್ಯಾಮದದಿಂದ ನನ್ನನ್ನು ತಿರಸ್ಕರಿಸಿರುವನು. ಇವನು ಪುರುಷೋತ್ತಮನಾಗಿರುವ ಭೃಗುಕುಲದಲ್ಲಿ ಅವತರಿಸಿರುವ ಯಾವ ಪರಶುರಾಮನಿಂದ ಅಸ್ತ್ರವಿದ್ಯೆಯನ್ನು ತಿಳಿದಿರುವನೋ ಆ ಪರಶುರಾಮನಿಂದಲೇ ಅಸ್ತ್ರವಿದ್ಯೆಗಳನ್ನು ತಿಳಿಯುವೆನು" ಎಂದು ತೀರ್ಮಾನಿಸಿದನು. ಪರಶುರಾಮದೇವನ ಆಶ್ರಮಕ್ಕೆ ಬಂದು ಅವನನ್ನು ನೋಡಿದನು. ಇವನೂ ಇವನ ಶಿಷ್ಯನಾದ ದ್ರೋಣಾಚಾರ್ಯನಂತೆಯೇ ತಾನು ಸೂತಜಾತಿಯವನೆಂದು ತಿಳಿದರೆ ತನಗೆ ಅಸ್ತ್ರವಿದ್ಯೆಯನ್ನು ಉಪದೇಶಿಸದೆ ತಿರಸ್ಕರಿಸಬಹುದೆಂಬ ಭಯದಿಂದ ಯುಕ್ತನಾದನು. ತಾನು ಬ್ರಾಹ್ಮಣನೆಂದು ಸುಳ್ಳು ಹೇಳಿದನು. ಅಸ್ತ್ರವಿದ್ಯೆಯನ್ನು ಉಪದೇಶಿಸಬೇಕೆಂದು ಪ್ರಾರ್ಥಿಸಿದನು.

ಸರ್ವಜ್ಞನಾದ ಶ್ರೀಪರಶುರಾಮದೇವನು ತಾನು ಸುಳ್ಳು ಹೇಳಿದರೂ ಅದನ್ನು ತಿಳಿಯುವನೆಂಬ ವಿಷಯಯವನ್ನು ಮರೆತನು. ದ್ರೋಣಾಚಾರ್ಯರ ಶಿಷ್ಯನೂ ಅಸ್ತ್ರಜ್ಞಚೂಡಾಮಣಿಯೂ ಆಗಿರುವ ಅರ್ಜುನನನ್ನು ದ್ರೋಣಾಚಾರ್ಯರ ಗುರುವಾಗಿರುವ ಪರಶುರಾಮನ ಶಿಷ್ಯನಾಗಿರುವ ಕರ್ಣನು ಕೊಲ್ಲಲು ಶಕ್ತನಾಗಿರುವನು ಎಂಬ ದೃಢವಾದ ನಂಬಿಕೆಯು ದುರ್ಯೋಧನನಿಗೆ ಏರ್ಪಡಬೇಕು. ಈ ಉದ್ದೇಶದಿಂದಲೇ ಕರ್ಣನು ಹೇಳಿದ ಸುಳ್ಳು ಮಾತನ್ನು ನಂಬಿದವನಂತೆ ನಟಿಸಿದ ಶ್ರೀಪರಶುರಾಮದೇವನು ಕರ್ಣನಿಗೆ ದಿವ್ಯವಾದ ಅಸ್ತ್ರಗಳನ್ನೂ ಶ್ರೀಹರಿಯ ಸರ್ವೋತ್ತಮತ್ವವನ್ನೂ ಸಕಲ ವಿದ್ಯೆಗಳನ್ನೂ ಉಪದೇಶಿಸಿದನು. ಕರ್ಣನೂ ಶ್ರೀಪರಶುರಾಮದೇವನನ್ನು ಬಿಟ್ಟು ಹೋಗಲು ಇಷ್ಟವಿಲ್ಲದೆ ನಾಲ್ಕುವರ್ಷಗಳ ವರೆಗೆ ಅಲ್ಲಿಯೇ ವಿದ್ಯಾಭ್ಯಾಸ ಮಾಡುತ್ತಾ ವಾಸಿಸಿದನು.

## ಕರ್ಣನಿಗೆ ಪರಶುರಾಮದೇವನಿಂದ ಶಾಪ

ಒಮ್ಮೆ ಶ್ರೀಪರಶುರಾಮದೇವನು ಕರ್ಣನು ಹೇಳಿದ ಸುಳ್ಳನ್ನು ಬಹಿರಂಗಪಡಿಸಬೇಕೆಂದು ತೀರ್ಮಾನಿಸಿದನು. ನಿದ್ರಾ ಮುಂತಾದ ಸಕಲದೋಷಗಳೂ ಅವನಲ್ಲಿ ಯಾವಾಗಲೂ ಇಲ್ಲ. ಜ್ಞಾನ ಮುಂತಾದ ಸಕಲ ಗುಣಗಳೂ ಅವನಲ್ಲಿ ಯಾವಾಗಲೂ ಪೂರ್ಣವಾಗಿವೆ. ಆದರೂ ತೂಕಡಿಸಿದವನಂತೆ ನಟಿಸಿದನು. ಪಕ್ಕದಲ್ಲಿದ್ದ ಕರ್ಣನ ತೊಡೆಯ ಮೇಲೆ ತಲೆಯನ್ನಿಟ್ಟು ಮಲಗಿದನು.

ಈ ಕರ್ಣನು ಹಿಂದಿನ ಜನ್ಮದಲ್ಲಿ ಸುಗ್ರೀವನಾಗಿ ಹುಟ್ಟಿದಾಗ ಅಣ್ಣನೂ ತನಗಿಂತ ಉತ್ತಮ ದೇವತೆಯಾಗಿರುವ ಇಂದ್ರದೇವನ ಅವತಾರವೂ ಆಗಿರುವ ವಾಲಿಯನ್ನು ಸಂಹರಿಸುವುದಕ್ಕೆ ಕಾರಣನಾಗಿದ್ದನು. ಈ ಮಹಾಪರಾಧಕ್ಕಾಗಿ ಯೋಗ್ಯವಾದ ಶಿಕ್ಷೆಯನ್ನು ಕರ್ಣನಾಗಿ ಹುಟ್ಟಿದಾಗ ಅನುಭವಿಸಬೇಕು. ಹೇತಿ ಎಂಬ ರಾಕ್ಷಸನು ಪ್ರಹ್ಲಾದ ಮುಂತಾದ ದೈತ್ಯರಂತೆ ಮಹಾವಿಷ್ಣುಭಕ್ತನು. ದೇವೇಂದ್ರನ ಸೇವಕನು. ಅವನು ಸೇವಾಕಾಲದಲ್ಲಿ

ದೇವೇಂದ್ರನನ್ನು ಸೇವಿಸಲಿಲ್ಲ. ಇದರಿಂದ ಕುಪಿತನಾದ ದೇವೇಂದ್ರನು "ಭೂಮಿಯಲ್ಲಿ ಕೀಟವಾಗಿ ಹುಟ್ಟು" ಎಂದು ಶಪಿಸಿದನು. ಆ ಶಾಪದಿಂದ ಆ ಹೇತಿ ಎಂಬ ರಾಕ್ಷಸನು ಶ್ರೀಪರಶುರಾಮದೇವನ ಆಶ್ರಮದಲ್ಲಿ ಕೀಟವಾಗಿ ಹುಟ್ಟಿದನು. ಅವನಲ್ಲಿ ದೇವೇಂದ್ರನು ಪ್ರವೇಶಿಸಿದನು. ಹಿಂದಿನ ಜನ್ಮದಲ್ಲಿ ತನ್ನ ಮಗನಾಗಿ ಅವತರಿಸಿದ್ದ ವಾಲಿಯನ್ನು ಕೊಲ್ಲಿಸಿದವನೂ ಈ ಜನ್ಮದಲ್ಲಿ ತನ್ನ ಮಗನಾಗಿ ಅವತರಿಸಿರುವ ಅರ್ಜುನನಲ್ಲಿ ವಿಶೇಷ ಸ್ಪರ್ಧೆಯಿಂದ ಯುಕ್ತನೂ ಆಗಿರುವ ಕರ್ಣನಿಗೆ ಶ್ರೀಪರಶುರಾಮದೇವನಿಂದ ಶಾಪವನ್ನು ಕೊಡಿಸಬೇಕೆಂದು ತೀರ್ಮಾನಿಸಿದನು. ಕರ್ಣನ ತೊಡೆಯ ಕೆಳಗಣ ಭಾಗದಿಂದ ಮೇಲಿನ ಚರ್ಮದ ವರೆಗೆ ಕೊರೆದು ರಂಧ್ರವನ್ನು ಮಾಡಿದನು. ಇದರಿಂದ ಬಾಣದಿಂದ ತೊಡೆಯ ಸೀಳಲ್ಪಟ್ಟಂತಾಯಿತು. ಅವನ ತೊಡೆಯಿಂದ ರಕ್ತದ ಧಾರೆಯು ಸುರಿಯಿತು. ಪರಶುರಾಮದೇವನು ಮೆಲ್ಲನೆ ಎಚ್ಚರವಾದಂತೆ ನಟಿಸಿದನು. ರಕ್ತಧಾರೆಯನ್ನು ನೋಡಿದನು. ನನ್ನ ದೇಹದ ಪರಿಶುದ್ಧಿಗೆ ವಿರೋಧಿಯಾದ ರಕ್ತವು. ಇಷ್ಟು ಸುರಿಯುತ್ತಿದ್ದರೂ ನನ್ನನ್ನು ಏಕೆ ಎಬ್ಬಿಸಲಿಲ್ಲ. ನೀನು ಯಾರು? ಎಂದು ಪ್ರಶ್ನಿಸಿದನು. ಅದಕ್ಕೆ ಕರ್ಣನು ಉತ್ತರವನ್ನು ಕೊಟ್ಟನು. "ಭೃಗುಕುಲದಲ್ಲಿ ಅವತರಿಸಿರುವ ನಿನ್ನ ಮಗನು ನಾನು. ಎಲ್ಲಾ ಪ್ರಪಂಚಕ್ಕೂ ನೀನೊಬ್ಬನೇ ತಾಯಿಯೂ ತಂದೆಯೂ ಶ್ರೇಷ್ಠನಾದ ಗುರುವೂ ಆಗಿರುವಿ. ಆದ್ದರಿಂದ ಎಲ್ಲಾ ವಿಧದಿಂದಲೂ ನಾನು ನಿನ್ನ ಮಗನಾಗಿರುವೆನು. ಆದ್ದರಿಂದ ಭಾರ್ಗವಗೋತ್ರದಲ್ಲಿ ಹುಟ್ಟಿರುವ ಬ್ರಾಹ್ಮಣನೆಂದು ಇಲ್ಲಿಗೆ ಬಂದಿರುವಾಗ ನಾನು ಹೇಳಿರುವೆನು. ಆ ಮಾತೂ ಸತ್ಯವಾಗಿದೆ. ಆದರೆ ಲೋಕದೃಷ್ಟಿಯಿಂದ ಸೂತಜಾತಿಯಲ್ಲಿ ಹುಟ್ಟಿದವನು." ಎಂದನು. ಅದೇ ಸಮಯದಲ್ಲಿ ಆ ಕೀಟವನ್ನು ಪರಶುರಾಮದೇವನು ನೋಡಿದನು ಆಗ ಆ ಕೀಟವು ಆ ಶರೀರವನ್ನು ಬಿಟ್ಟುತು ನಿಜಸ್ವರೂಪವನ್ನು ಪಡೆಯಿತು. ದೇವಲೋಕದಿಂದ ವಿಮಾನವು ಬಂತು. ಅದರಲ್ಲಿ ಕುಳಿತನು ಪೂರ್ಣಗುಣನಾದ ಶ್ರೀಪರಶುರಾಮದೇವನ ಅನುಗ್ರಹದಿಂದ ದೇವಲೋಕವನ್ನು ಪಡೆದನು.

ಪರಶುರಾಮದೇವನ ಕರ್ಣನನ್ನು ನೋಡಿದನು. "ಓ ಕರ್ಣಾ, ನೀನು ನನ್ನ ಮುಂದೆ ಸುಳ್ಳು ಹೇಳಿರುವಿ. ಆದ್ದರಿಂದ ನನ್ನ ಸಮೀಪದಲ್ಲಿರಲು ನೀನು ಅರ್ಹನಲ್ಲ. ಆದರೂ ನನ್ನಲ್ಲಿ ಅಪಾರಭಕ್ತಿಯನ್ನು ಇಟ್ಟುಕೊಂಡಿರುವಿ. ಈ ಭಕ್ತಿಯೂ ಎಂದಿಗೂ ವ್ಯರ್ಥವಾಗಲಾರದು. ಜಿದ್ದಿಲ್ಲದೆ ನೀನು ಯಾರ ಜೊತೆಯಲ್ಲಿ ಯುದ್ಧಕ್ಕೆ ಹೋದರೂ ಸರ್ವರನ್ನೂ ಜಯಿಸುತ್ತೀ. ಜಿದ್ದಿನಿಂದ ಯುಕ್ತನಾಗಿ ಯುದ್ಧಕ್ಕೆ ಹೋದರೆ ಸೋಲುತ್ತಿ ಮತ್ತು ಅಸ್ತ್ರಸಮೂಹಗಳನ್ನೆಲ್ಲ ವನ್ನೂ ಮರೆತುಬಿಡುವವನಾಗುತ್ತೀ, ಹೋಗು" ಎಂದನು.

ಹೀಗೆ ದುರಹಂಕಾರಿಯಾದ ಕರ್ಣನು ಪರಶುರಾಮದೇವನಿಂದ ಅಸ್ತ್ರವಿದ್ಯೆ ಮುಂತಾದ ಸಕಲ ವಿದ್ಯೆಗಳನ್ನು ಅಭ್ಯಾಸ ಮಾಡಿದನು. ಕೊನೆಗೆ ಪರಶುರಾಮನ ಶಾಪದಿಂದ ಆ ವಿದ್ಯೆಯೂ ಅರ್ಜುನನಲ್ಲಿ ಜಿದ್ದಿನಿಂದ ಯುಕ್ತ ನಾಗಿರುವುದರಿಂದ ಅರ್ಜುನನನ್ನು ನಿಗ್ರಹಿಸುವುದಕ್ಕೆ ಉಪಯೋಗವಿಲ್ಲದಂತಾಯಿತು.

## ಏಕಲವ್ಯನಿಗೆ ದ್ರೋಣರಿಂದ ಅಸ್ತ್ರವಿದ್ಯಾಭ್ಯಾಸ

ಏಕಲವ್ಯನು ದ್ರೋಣಾಚಾರ್ಯರು ತನ್ನನ್ನು ನಿರಾಕರಿಸಿದ ಮೇಲೂ ದ್ರೋಣಾಚಾರ್ಯರಲ್ಲಿ ಅಪರಿಮಿತವಾದ ಭಕ್ತಿಯನ್ನು ಇಟ್ಟುಕೊಂಡಿದ್ದನು. ದ್ರೋಣಾಚಾರ್ಯರ ಪ್ರತಿಮೆಯನ್ನು ಪೂಜಿಸುತ್ತಾ ಇತರರ

ಉಪದೇಶವಿಲ್ಲದೆ ಅಸ್ತ್ರವಿದ್ಯೆಯನ್ನು ಅಭ್ಯಾಸಮಾಡಿದನು. ಅವನಿಗೆ ನಿಶ್ಚಲವಾದ ಗುರುಭಕ್ತಿಯಿಂದ ಎಲ್ಲಾ ಅಸ್ತ್ರವಿದ್ಯೆಗಳೂ ಮನಸ್ಸಿನಲ್ಲಿ ತಾನಾಗಿಯೇ ಹೊಳೆದವು. ಕೆಲವು ಕಾಲದ ಅನಂತರದಲ್ಲಿ ದುರ್ಯೋಧನಾದಿಗಳೂ ಧರ್ಮರಾಜ ಮುಂತಾದ ಪಾಂಡುಕುಮಾರರೂ ಬೇಟೆಯಾಡುವುದಕ್ಕಾಗಿ ಕಾಡಿಗೆ ಹೋಗಿದ್ದರು. ಆಗ ಧರ್ಮರಾಜನ ಮುಂದೆ ಹೋಗುತ್ತಿದ್ದ ಬೇಟೆನಾಯಿಯು ಒಂದು ಜಿಂಕೆಯನ್ನು ನೋಡಿತು. ಆ ಜಿಂಕೆಯನ್ನು ಸಂಹರಿಸಬೇಕೆಂದು ಆ ಜಿಂಕೆಯ ಕಡೆಗೆ ಓಡಿತು. ಆಗ ಗಟ್ಟಿಯಾಗಿ ಬೊಗಳಿತು.

ಆ ಶಬ್ದವನ್ನು ದೂರದಲ್ಲಿ ದ್ರೋಣಾಚಾರ್ಯರ ವಿಗ್ರಹವನ್ನಿಟ್ಟುಕೊಂಡು ಅಸ್ತ್ರವಿದ್ಯೆಯನ್ನು ಅಭ್ಯಾಸಮಾಡುತ್ತಿದ್ದ ಏಕಲವ್ಯನು ಕೇಳಿದನು. ಶಬ್ದವು ಕೇಳಿದ ಕಡೆಗೆ ಗುರಿಯಿಟ್ಟು ಬಾಣಗಳನ್ನು ಬಿಟ್ಟನು. ಆ ಬಾಣಗಳು ನಾಯಿಯ ಬಾಯಿಯೊಳಗೆ ಪ್ರವೇಶಿಸಿದವು. ನಾಯಿಯ ಬಾಯಿಯಲ್ಲಿ ಸ್ವಲ್ಪವೂ ಎಡೆಯಿಲ್ಲದಂತೆ ಬಾಣಗಳು ತುಂಬಿದವು. ನಾಯಿಯಿಂದ ಬಾಯಿಯನ್ನು ಮುಚ್ಚಲು ಸಾಧ್ಯವಾಗಲಿಲ್ಲ. ಆಗ ಬಾಯಿಯಲ್ಲಿ ಯಾವ ಕಾರ್ಯವೂ ಏರ್ಪಡಲಿಲ್ಲ. ಆ ನಾಯಿಯು ಬಾಣಗಳಿಂದ ತುಂಬಲ್ಪಟ್ಟ ಬಾಯಿಯನ್ನು ತೋರಿಸುತ್ತಾ ಧರ್ಮರಾಜನ ಮುಂದೆ ಬಂದು ನಿಂತಿತು.

ಈ ವಿಚಿತ್ರವ್ಯಾಪಾರವನ್ನು ಪಾಂಡವರೂ ಕೌರವರೂ ನೋಡಿದರು. ಇಂತಹ ವಿಚಿತ್ರವಾದ ವ್ಯಾಪಾರವನ್ನು ಮಾಡಿದವನನ್ನು ಹುಡುಕಿದರು. ಬಹುದೂರದಲ್ಲಿ ದ್ರೋಣಾಚಾರ್ಯರ ಮಣ್ಣಿನ ವಿಗ್ರಹವನ್ನು ನೋಡಿದರು. ಆ ವಿಗ್ರಹವನ್ನು ಸಮೀಪಿಸಿದರು. ಆ ವಿಗ್ರಹವನ್ನು ಪೂಜಿಸುತ್ತಾ ಧನುಸ್ಸನ್ನಿಟ್ಟುಕೊಂಡು ಅಸ್ತ್ರವಿದ್ಯೆಯನ್ನು ಅಭ್ಯಾಸ ಮಾಡುತ್ತಿರುವ ಏಕಲವ್ಯನನ್ನು ನೋಡಿದರು. ಈ ಏಕಲವ್ಯನು ಹಿಂದೆ ಪಿಶಾಚಗಳಿಂದ ಪೈಶಾಚ ಎಂದು ಪ್ರಸಿದ್ಧವಾದ ಅಸ್ತ್ರಸಮೂಹಗಳನ್ನು ತಿಳಿದಿದ್ದನು. ಈಗ ದಿವ್ಯವಾದ ಅಸ್ತ್ರಗಳನ್ನು ತಿಳಿಯಬೇಕೆಂಬ ಆಸೆಯಿಂದ ದ್ರೋಣಾಚಾರ್ಯರ ವಿಗ್ರಹವನ್ನು ಯಾವಾಗಲೂ ಪೂಜಿಸುತ್ತಿರುವನು.

ನಾಯಿಯ ಬೊಗಳಿದ್ದನ್ನು ಕೇಳಿ ನಾಯಿಯನ್ನು ನೋಡದೆಯೇ ನಾಯಿಯ ಬಾಯಿಯನ್ನು ಗುರಿಯಿಟ್ಟು ಬಾಣಗಳನ್ನು ಬಿಟ್ಟಿರುವನು. ಆ ಬಾಣಗಳೂ ನಾಯಿಯ ಬಾಯಿಯಲ್ಲಿ ಗಾಯವನ್ನು ಏರ್ಪಡಿಸದೆ ಬಾಯಿಯನ್ನು ತುಂಬಿಸಿವೆ. ಈ ವಿಚಿತ್ರ ಶಕ್ತಿಯು ದ್ರೋಣಾಚಾರ್ಯರ ಶಿಷ್ಯರಲ್ಲಿ ಪ್ರಧಾನನೆಂದು ಪ್ರಸಿದ್ಧನಾದ ಅರ್ಜುನನಲ್ಲಿಯೂ ಇಲ್ಲದಿರುವುದನ್ನು ಸರ್ವರೂ ತಿಳಿದರು. ಅರ್ಜುನನು ದ್ರೋಣಾಚಾರ್ಯರ ಸಮೀಪಕ್ಕೆ ಬಂದನು. ಈ ವಿಷಯವನ್ನು ದ್ರೋಣಾಚಾರ್ಯರಲ್ಲಿ ವಿಜ್ಞಾಪಿಸಿದನು. "ನಿಮ್ಮ ಶಿಷ್ಯರಲ್ಲಿ ನನ್ನನ್ನು ಪ್ರಧಾನನಾಗುವಂತೆ ಮಾಡುವೆನೆಂದು ಪ್ರತಿಜ್ಞೆ ಮಾಡಿದಿರಿ. ಈಗ ಏಕಲವ್ಯ ಎಂಬ ಶಿಷ್ಯನನ್ನು ನನಗಿಂತಲೂ ಉತ್ತಮನನ್ನಾಗುವಂತೆ ಮಾಡಿದಿರಿ. ನಿಮ್ಮ ಪ್ರತಿಜ್ಞೆಯ ಸುಳ್ಳಾಯಿತಲ್ಲವೇ?" ಎಂದು ಹೇಳಿದನು.

ಈ ಮಾತುಗಳನ್ನು ಕೇಳಿದ ದ್ರೋಣಾಚಾರ್ಯರು ಏಕಲವ್ಯನಿದ್ದಲ್ಲಿಗೆ ಬಂದರು. ಏಕಲವ್ಯನು ಅತ್ಯಂತ ಭಕ್ತಿಯಿಂದ ಅವರನ್ನು ಪೂಜಿಸಿದನು. ಅವರು ಗುರುದಕ್ಷಿಣೆಯನ್ನು ಕೇಳಿದರು. ಅವನು ಯಾವ ವಸ್ತುವನ್ನು ಕೇಳಿದರೂ ಕೊಡುವುದಾಗಿ ಹೇಳಿದನು. ಅವರು ಅವನ ಬಲಗೈಯಲ್ಲಿರುವ ಅಂಗುಷ್ಠವನ್ನು ಕೊಡಬೇಕೆಂದು ಕೇಳಿದರು. ಅವನೂ ಕತ್ತರಿಸಿ ಬಲಗೈಯ ಅಂಗುಷ್ಠವನ್ನು ಕೊಟ್ಟನು. ಅವತ್ತಿನವರೆಗೆ ಏಕಲವ್ಯನು ಅಸ್ತ್ರವಿದ್ಯೆಯಲ್ಲಿ ಅರ್ಜುನನ್ನು ಮೀರಿಸಿದ್ದನು. ಅಂದಿನಿಂದ ಅವನ ಬಲಗೈಯ ಅಂಗುಷ್ಠವಿಲ್ಲದಿರುವುದರಿಂದ ಅಸ್ತ್ರವಿದ್ಯಾಭ್ಯಾಸವು

ಹೆಚ್ಚಲಿಲ್ಲ. ಅರ್ಜುನನ ಅಭ್ಯಾಸವು ಹಿಂದಿನಂತೆಯೇ ಮುಂದುವರೆಯಿತು. ಆದ್ದರಿಂದ ಅರ್ಜುನನು ದ್ರೋಣಾಚಾರ್ಯರ ಶಿಷ್ಯರಲ್ಲಿ ಪ್ರಧಾನನೆನಿಸಿದನು. ದ್ರೋಣಾಚಾರ್ಯರು ಅರ್ಜುನನಿಗೆ ಕೊಟ್ಟ ವರವೂ ಸತ್ಯವಾಗುವಂತಾಯಿತು.

ದ್ರೋಣಾಚಾರ್ಯರು ಏಕಲವ್ಯನ ಅತ್ಯಂತ ಗುರುಭಕ್ತಿಗೆ ಮೆಚ್ಚಿದರು. ಅಂದಿನಿಂದ ರೈವತ ಪರ್ವತದಲ್ಲಿ ವಾಸಿಸುತ್ತಿರುವ ಏಕಲವ್ಯನು ಯಾರಿಗೂ ತಿಳಿಯದಂತೆ ಹೋದನು. ಅವನಿಗೆ ದಿವ್ಯವಾದ ಅಸ್ತ್ರಗಳನ್ನು ಉಪದೇಶಿಸಿದರು. ಅರ್ಜುನನಿಗೆ ಎಲ್ಲರಿಗೂ ತಿಳಿದಂತೆ ಉಪದೇಶಿಸಿದರು. ಹೀಗೆ ಏಕಲವ್ಯನನ್ನೂ ಅರ್ಜುನನ್ನೂ ಧನುರ್ಧಾರಿಗಳಲ್ಲಿ ಶ್ರೇಷ್ಠರಾಗುವಂತೆ ಮಾಡಿದರು.

# ಭೀಮಸೇನದೇವರೊಬ್ಬರೇ ಶುದ್ಧ ಭಾಗವತ ಧರ್ಮನಿರತರು

ಭೀಮಸೇನದೇವರು ಸ್ವಾಭಾವಿಕವಾದ ಪ್ರತಿಭೆಯಿಂದ ಸಕಲವಿಧವಾದ ಅಸ್ತ್ರವಿದ್ಯೆಯನ್ನು ಅರ್ಜುನಾದಿಗಳಿಗಿಂತ ಅಧಿಕವಾಗಿಯೇ ತಿಳಿದಿರುವರು. ಆದರೂ ಅಸ್ತ್ರಯುದ್ಧವು ಶುದ್ಧವಾದ ಭಾಗವತಧರ್ಮವಲ್ಲವೆಂದು ತಿಳಿದರು. ಈ ಅಸ್ತ್ರಯುದ್ಧದಲ್ಲಿ ಅಸ್ತ್ರಗಳಿಗೆ ಅಭಿಮಾನಿಗಳಾದ ದೇವತೆಗಳಲ್ಲಿ ಶತ್ರುಗಳನ್ನು ನಿಗ್ರಹಿಸುವಂತೆ ಪ್ರಾರ್ಥಿಸಬೇಕು. ಇದರಿಂದ ಶತ್ರುನಿಗ್ರಹರೂಪವಾದ ಫಲವನ್ನು ಅಪೇಕ್ಷಿಸಿ ಮಾಡುತ್ತಿರುವ ಈ ಅಸ್ತ್ರಯುದ್ಧವು ಕಾಮ್ಯಕರ್ಮವೆನಿಸುತ್ತದೆ. ದೇವತೆಗಳಲ್ಲಿಯಾಗಲೀ ಶ್ರೀಹರಿಯಲ್ಲಾಗಲೀ ಶ್ರೀಹರಿಮಾಹಾತ್ಮ್ಯ ಜ್ಞಾನವನ್ನೂ ಶ್ರೀಹರಿಭಕ್ತಿಯನ್ನೂ ಶ್ರೀಹರಿಯು ಕೊಟ್ಟದ್ದರಿಂದ ತೃಪ್ತಿಯನ್ನೂ ಅಪೇಕ್ಷಿಸಬೇಕೇ ಹೊರತು ಯಾವ ವಿಧವಾದ ಇತರ ಫಲಗಳನ್ನೂ ಬಯಸಬಾರದು. ಇದೇ ಶುದ್ಧವಾದ ಭಾಗವತಧರ್ಮವೆನಿಸುತ್ತದೆ. ದೇವತೆಗಳಲ್ಲಿಯೂ ಶ್ರೀಹರಿಯಲ್ಲಿಯೂ ಯಾವ ಫಲವನ್ನೂ ಬಯಸುವುದು ಭಾಗವತಧರ್ಮವಲ್ಲವೆಂದ ಮೇಲೆ ದ್ರೋಣಾಚಾರ್ಯರೇ ಮೊದಲಾದವರಿಂದ ಕಾಮ್ಯ ಫಲವನ್ನು ಕೊಡುವ ಅಸ್ತ್ರವನ್ನು ಬಯಸುವುದು ಭಾಗವತಧರ್ಮವಾಗುತ್ತದೆಯೇ? ಭೀಮಸೇನದೇವರು ಯಾವಾಗಲೂ ಶುದ್ಧವಾದ ಭಾಗವತಧರ್ಮದಲ್ಲಿಯೇ ನಿರತರಾಗಿರುವರು. ಕಾಮ್ಯಕರ್ಮವನ್ನು ಯಾವಾಗಲೂ ಮಾಡಿದವರಲ್ಲ. ಶ್ರೀಹರಿಯನ್ನೂ ಕೂಡ ಯಾವ ವಿಧವಾದ ಫಲವನ್ನೂ ಬೇಡಿದವರಲ್ಲ.

ಪಾಂಡವರು ಏಕಚಕ್ರಾನಗರದಲ್ಲಿರುವಾಗ ಧರ್ಮರಾಜ ಮುಂತಾದವರು ಭಿಕ್ಷೆಯನ್ನು ಬೇಡಿ ಜೀವಿಸಿದರು. ಈ ಭಿಕ್ಷೆಯನ್ನು ಬೇಡುವುದು ಬ್ರಾಹ್ಮಣರಿಗೆ ಧರ್ಮವೇ ಹೊರತು ಕ್ಷತ್ರಿಯರಿಗೆ ಧರ್ಮವಲ್ಲ. ಭೀಮಸೇನದೇವರು ಭಿಕ್ಷೆಯನು ಬೇಡುವ ನೆಪದಿಂದ ದೊಡ್ಡ ಗಡಿಗೆಯನ್ನು ತೆಗೆದುಕೊಂಡು ಒಂದೊಂದು ಮನೆಗಳ ಮುಂದೆ ನಿಂತು "ಹುಂ" ಎಂದು ಹುಂಕಾರವನ್ನು ಮಾಡುತ್ತಿದ್ದರು. ಈ ಹುಂಕಾರವನ್ನು ಕೇಳಿದ ಕೂಡಲೇ ಮನೆಯಲ್ಲಿರುವವರು ಹೆದರಿದವರಾಗಿ ಭಿಕ್ಷೆಯನ್ನು ನೀಡುತ್ತಿದ್ದರು. ಇದು ರಾಜರುಗಳು ವೈಶ್ಯರನ್ನು ಬೆದರಿಸಿ ಅವರಿಂದ ಕಂದಾಯವನ್ನು ವಸೂಲು ಮಾಡುವಂತಿತ್ತು. ಆದ್ದರಿಂದ ಈ ಭಿಕ್ಷಾಟನವೂ ಕೂಡ ಅಧಿಕಾರಪೂರ್ವಕವಾದ ರಾಜಧರ್ಮವೇ ಹೊರತು ಬ್ರಾಹ್ಮಣರ ಭಿಕ್ಷಾಟನವಾಗಲಿಲ್ಲ.

ಭೀಮಸೇನದೇವರು ಶ್ರೀಹರಿಯನ್ನು ಬಿಟ್ಟು ಇತರ ದೇವತೆಗಳನ್ನು ಯಾರನ್ನೂ ನಮಸ್ಕರಿಸಲೂ ಇಲ್ಲ. ಪೂಜಿಸಲೂ ಇಲ್ಲ. ಶ್ರೀಹರಿಗೆ ಯಾವ ವಿಧದಿಂದಲೂ ವಿರುದ್ಧವಾದ ಕಾರ್ಯವನ್ನು ಯಾವಾಗಲೂ ಮಾಡಲಿಲ್ಲ. ಯುದ್ಧಕ್ಕೆ ಬೇಕಾದ ಸಕಲ ಸಿದ್ಧತೆಯಿಂದಲೂ ಯುಕ್ತರಾಗಿ ಯಾವ ಸಿದ್ಧತೆಯು ಇಲ್ಲದಿರುವವನ ಜೊತೆಯಲ್ಲಿ ಯುದ್ಧಕ್ಕೆ ಹೋಗುವುದೂ ಯುದ್ಧರಂಗದಿಂದ ಹೆದರಿ ಓಡುವುದೂ ಕಪಟಯುದ್ಧವನ್ನು ಮಾಡುವುದೂ ವಿಷ್ಣುದ್ವೇಷಿಗಳಿಗೆ ಉತ್ತರಕ್ರಿಯೆಯನ್ನು ಮಾಡುವುದೂ ಇತರರಿಂದ ಮಾಡಿಸುವುದೂ ಅವರಿಗೆ ಪ್ರಿಯವಾದ ಕೆಲಸಗಳನ್ನು ಮಾಡುವುದೂ ಇತರರಿಂದ ಮಾಡಿಸುವುದೂ ಮಹಾನರ್ಥಗಳಿಗೆ ಕಾರಣವೆನಿಸುತ್ತವೆ. ಭೀಮಸೇನದೇವರು ಈ ಕೆಲಸಗಳನ್ನು ಯಾವಾಗಲೂ ಮಾಡಿದವರಲ್ಲ.

ಶ್ರೀಹರಿಯನ್ನು ತನ್ನ ಎದುರಿನಲ್ಲಿಯೇ ನಿಂದಿಸಬೇಕಾಗಿಲ್ಲ. ಎಲ್ಲೋ ಯಾವಾಗಲೋ ನಿಂದಿಸಿದನೆಂದು ತಿಳಿದರೆ ಕೂಡಲೇ ಅವನ ನಾಲಿಗೆಯನ್ನು ಶೀಳಿ ಬಿಡುತ್ತಿದ್ದರು. ಶ್ರೀಹರಿಗೆ ವಿರುದ್ಧವಾದ ಕಾರ್ಯವನ್ನು ಮಾಡುತ್ತಿರುವವರನ್ನು ತಾನೇ ಕೊಲ್ಲುವರು. ಅಥವಾ ಇತರರಿಂದ ಕೊಲ್ಲಿಸುವರು. ವಿಷ್ಣುಸರ್ವೋತ್ತಮತ್ವ ವಿಷಯಕವಾದ ಜ್ಞಾನದ ವಿಷಯದಲ್ಲಿಯೂ ಭಾಗವತಧರ್ಮದ ವಿಷಯದಲ್ಲಿಯೂ ಸಂಶಯವು ಈ ಭೀಮಸೇನದೇವರಿಗೆ ಯಾವಾಗಲೂ ಇಲ್ಲ.

ಹಿಂದೆ ದೇವೇಂದ್ರನು ವೃತ್ರಾಸುರನನ್ನು ಸಂಹರಿಸಿದನು. ಇದರಿಂದ ದೇವೇಂದ್ರನಿಗೆ ಬ್ರಹ್ಮಹತ್ಯಾದೋಷವು ಬಂತು. ಆ ಬ್ರಹ್ಮಹತ್ಯೆಯು ಚಂಡಾಲಸ್ತ್ರೀಯ ವೇಷವನ್ನು ಧರಿಸಿ ದೇವೇಂದ್ರನನ್ನು ಬೆನ್ನಟ್ಟಿಕೊಂಡು ಬಂತು. ದೇವೇಂದ್ರನು ಉತ್ತರಾಭಿಮುಖವಾಗಿ ಓಡುತ್ತಾ ಮಾನಸಸರೋವರದ ಮಧ್ಯದಲ್ಲಿರುವ ಕಮಲದ ನಾಳದಲ್ಲಿ ಪ್ರವೇಶಿಸಿದನು. ಒಂದು ಸಹಸ್ರವರ್ಷಗಳು ಮುಗಿಯುವ ವರೆಗೆ ನರಸಿಂಹಮಂತ್ರವನ್ನು ಜಪಿಸಿದನು.

ಬ್ರಹ್ಮಹತ್ಯೆಯು ಮಾನಸಸರೋವರದವರೆಗೆ ಓಡಿಸಿಕೊಂಡು ಬಂತು. ಶ್ರೀವಿಷ್ಣುಪಾದೋದಕವಾಗಿರುವ ಗಂಗೆಯ ನೀರಿನಿಂದ ಯುಕ್ತವಾಗಿರುವ ಮಾನಸಸರೋವರವನ್ನು ದಾಟಿಕೊಂಡು ಬರಲು ಶಕ್ತಿಯಿಲ್ಲದೆ ಅಲ್ಲಿಯೇ ನಿಂತಿತು.

## ದೇವತೆಗಳಿಗೆ ಪಾಪಗಳೂ ಪುಣ್ಯಸಾಧನವಾಗುತ್ತವೆ

ದೇವೇಂದ್ರನು ಲೋಕರಕ್ಷಣಾರ್ಥವಾಗಿ ವೃತ್ರಾಸುರನನ್ನು ಸಂಹರಿಸಿದನು. ಲೋಕರಕ್ಷಣಾರ್ಥವಾಗಿ ದುಷ್ಟರನ್ನು ಸಂಹರಿಸುವುದು ಪಾಪಕಾರ್ಯವಲ್ಲ. ಅದು ಮಾತ್ರವಲ್ಲ. ಈ ವೃತ್ರಸಂಹಾರವನ್ನು ನಿಮಿತ್ತವಾಗಿಟ್ಟುಕೊಂಡು ಇಂದು ಗಂಗಾ ಮಧ್ಯದಲ್ಲಿ ಒಂದು ಸಾವಿರ ವರ್ಷಗಳ ವರೆಗೆ ನರಸಿಂಹಮಂತ್ರವನ್ನು ಜಪಿಸಿದ್ದರಿಂದ ಮಹಾಪುಣ್ಯವನ್ನು ಸಂಪಾದಿಸಲಿಲ್ಲವೇ? ಆದ್ದರಿಂದ ದೇವತೆಗಳು ಮಾಡುವ ಒಂದೊಂದು ಪಾಪವೂ ಅಪಾರವಾದ ಪುಣ್ಯಕ್ಕೆ ಸಾಧನವಾಗುತ್ತದೆ. ಆದ್ದರಿಂದಲೇ ವೃತ್ರಸಂಹಾರವೂ ಪುಣ್ಯಸಾಧನವೇ ಹೊರತು ಪಾಪಸಾಧನವಲ್ಲ.

ಪಾಪವೆಂದು ಹೇಳುವುದಾದರೂ ಪಾಪಪರಿಹಾರಕ್ಕಾಗಿ ಒಂದು ಸಾವಿರ ವರ್ಷಗಳ ವರೆಗೆ ನರಸಿಂಹ ಮಂತ್ರವನ್ನು ಜಪಿಸುತ್ತಿರುವಾಗ ದೇವೇಂದ್ರನ ಸ್ಥಾನದಲ್ಲಿ ದೇವೇಂದ್ರನಿಗೆ ಎಲ್ಲಾ ವಿಧದಿಂದಲೂ ಸಮಾನನಾಗಿರುವ ಮನ್ಮಥನನ್ನು ಎಲ್ಲಾ ದೇವತೆಗಳೂ ಕುಳ್ಳಿರಿಸಬಹುದಾಗಿತ್ತು. ಆದರೆ ದೇವತೆಗಳ ಒಂದು ನಿಯಮವಿದೆ. ಒಬ್ಬ ದೇವತೆಯ ಸ್ಥಾನದಲ್ಲಿ ಇನ್ನೊಬ್ಬ ದೇವತೆಯನ್ನು ಕುಳ್ಳಿರಿಸಕೂಡದು ಎಂಬುವುದೇ ಆ ನಿಯಮ. ಆ ನಿಯಮದಿಂದ

ಮನ್ಮಥನನ್ನು ಕುಳ್ಳಿರಿಸಲಿಲ್ಲ.

## ನಹುಷನ ಚರಿತ್ರೆ

ಆ ಕಾಲದಲ್ಲಿ ಆಯು ಎಂಬ ರಾಜನ ಮಗನಾಗಿರುವ ನಹುಷನು ಮಹಾಧರ್ಮಿಷ್ಠನೂ ಮಹಾಬಲಿಷ್ಠನೂ ಆಗಿದ್ದನು. ಅವನನ್ನು ದೇವತೆಗಳು ಇಂದ್ರಪದವಿಯಲ್ಲಿ ಕುಳ್ಳಿರಿಸಿದರು. ಅವನು ಕಣ್ಣುಗಳ ಮುಂದೆ ಬರುವ ದೇವತೆಗಳು ಋಷಿಗಳು ಮುಂತಾದವರ ತಪಸ್ಸುಗಳೂ ಬಲಗಳೂ ಅವನಲ್ಲಿ ಸೇರುವಂತೆ ವರವನ್ನು ಕೊಟ್ಟರು. ಇದರಿಂದ ಅವನ ಮುಂದೆ ಬರುವ ದೇವತೆಗಳು ಮತ್ತು ಮುನಿಗಳು ಮುಂತಾದವರ ಸಕಲ ತಪಸ್ಸುಗಳೂ ಬಲಗಳೂ ಅವನಲ್ಲಿ ಸೇರಿದವು. ಇದರಿಂದ ಅವನಿಗೆ ಅಹಂಕಾರವು ಅಧಿಕವಾಯಿತು.

ಅವನು ದೇವೇಂದ್ರನ ಪತ್ನಿಯಾದ ಶಚೀದೇವಿಯನ್ನು ಬಯಸಿದನು. ಸಪ್ತರ್ಷಿಗಳು ಹೊರುತ್ತಿರುವ ಪಲ್ಲಕ್ಕಿಯಲ್ಲಿ ತನ್ನ ಮನೆಗೆ ಬರಬೇಕೆಂದು ತನ್ನ ಪತಿಯು ಹೇಳಿರುವುದಾಗಿ ಅವನನ್ನು ವಂಚಿಸುವುದಕ್ಕಾಗಿ ಶಚೀದೇವಿಯು ತಿಳಿಸಿದಳು. ಅದಕ್ಕೆ ಅವನು ಒಪ್ಪಿದನು. ಸಪ್ತರ್ಷಿಗಳನ್ನು ಕರೆದು ತನ್ನನ್ನು ಶಚೀದೇವಿಯ ಮನೆಗೆ ಕರೆದುಕೊಂಡು ಹೋಗಬೇಕೆಂದು ಹೇಳಿದನು. ಅವನ ಮುಂದೆ ಹೋಗಿರುವ ಅವರೆಲ್ಲರ ತಪಸ್ಸುಗಳೂ ಶಕ್ತಿಯೂ ಅವನಲ್ಲಿ ಹೋಗಿ ಸೇರಿರುವುದರಿಂದ ಅವರೆಲ್ಲರೂ ಉಪಾಯವಿಲ್ಲದೆ ಅವನನ್ನು ಹೊತ್ತುಕೊಂಡು ಹೊರಟರು.

ಆಗ ಅಗಸ್ತ್ಯರು ವೇದವು ಪ್ರಮಾಣವಾ? ಇಲ್ಲವಾ? ಎಂದು ಪ್ರಶ್ನಿಸಿದರು. ಅದಕ್ಕೆ ಅವನು ಪ್ರಮಾಣವೆಂದು ಉತ್ತರವನ್ನು ಕೊಟ್ಟರೆ " ನ ಪರಸ್ತ್ರಿಯಂ ಗಚ್ಛೇತ್" ಅಂದರೆ ಪರಸ್ತ್ರೀಸಂಗವನ್ನು ಮಾಡಕೂಡದು ಎಂಬ ವೇದವಾಕ್ಯದಿಂದಲೇ ಇವನನ್ನು ಶಚೀಸಂಗಕಾರ್ಯದಿಂದ ಹಿಂದಿರುಗಿಸಲು ಪ್ರಯತ್ನಿಸುವೆನು. ಅಪ್ರಮಾಣ ಎಂದು ಹೇಳಿದರೆ ನೀನು ಹೇಳುವುದು ಸರಿಯಲ್ಲ ಎಂದು ವಾದಿಸುವೆನು. ಆಗ ಅವನು ಕುಪಿತನಾಗಿ ನನ್ನಲ್ಲಿ ಅಪರಾಧವನ್ನು ಮಾಡಿದರೆ ಶಾಪವನ್ನು ಕೊಡುವೆನು. ಎಂದು ತೀರ್ಮಾನಿಸಿ ಈ ಪ್ರಶ್ನೆಯನ್ನು ಮಾಡಿದರು. ಆಗ ನಹುಷನು ವೇದವು ಪ್ರಮಾಣವಲ್ಲ ಎಂದನು ಅದಕ್ಕೆ ಅಗಸ್ತ್ಯರು " ಪ್ರಮಾಣವೇ ಹೊರತು ಅಪ್ರಮಾಣವಲ್ಲ" ಎಂದು ಉತ್ತರವನ್ನು ಕೊಟ್ಟರು. ಈ ಮಾತನ್ನು ಕೇಳಿದ ನಹುಷನಿಗೆ ತುಂಬಾ ಕೋಪವು ಬಂತು. ಅಗಸ್ತ್ಯರ ತಲೆಯನ್ನು ಒದ್ದನು. ಅಗಸ್ತ್ಯರ ಜಡೆಯ ಮಧ್ಯದಲ್ಲಿ ಭೃಗುಋಷಿಯು ಯಾವಾಗಲೂ ವಾಸಿಸುತ್ತಿದ್ದರು. ನಹುಷನು ಅವರನ್ನು ಒಂದು ದಿನವೂ ನೋಡಲಿಲ್ಲ. ಆದ್ದರಿಂದ ಅವರ ತಪೋಬಲವೂ ಬಾಹುಬಲವೂ ಅವನಲ್ಲಿ ಸೇರಲಿಲ್ಲ. ಆದರೂ ಸಕಲ ದೇವತೆಗಳ ಮತ್ತು ಋಷಿಗಳ ತಪೋಬಲದಿಂದಲೂ ಬಾಹುಬಲದಿಂದಲೂ ಯುಕ್ತನಾಗಿರುವ ನಹುಷನನ್ನು ಶಪಿಸುವ ಶಕ್ತಿಯು ಅವರಲ್ಲಿಲ್ಲ. ಅದಕ್ಕಾಗಿ ಆ ಭೃಗುಋಷಿಯಲ್ಲಿ ಬ್ರಹ್ಮದೇವನು ಸನ್ನಿಹಿತನಾದನು. ಆ ಬ್ರಹ್ಮದೇವನು ಸಕಲ ದೇವತೆಗಳಲ್ಲಿ ಉತ್ತಮನು. ಆದ್ದರಿಂದ ಅವನಿಗಿಂತ ಅಧಮರಾಗಿರುವ ದೇವತೆಗಳ ವರದಿಂದ ಬ್ರಹ್ಮದೇವನಲ್ಲಿರುವ ತಪಃಶಕ್ತಿಯು ನಹುಷನಲ್ಲಿ ಹೋಗಿ ಸೇರಲಾರದು. ಆ ಬ್ರಹ್ಮದೇವನು ನಹುಷನನ್ನು ನೋಡಿ ಹೇಳಿದನು.

## ನಹುಷನಿಗೆ ಬ್ರಹ್ಮದೇವರ ಶಾಪ

" ಎಲೋ ನಹುಷಾ, ನೀನು ಅಗಸ್ತ್ಯನನ್ನೂ ಅವನ ಜಡೆಯ ಮಧ್ಯದಲ್ಲಿ ವಾಸಿಸುತ್ತಿರುವ ಭೃಗುಋಷಿಯನ್ನೂ ಆ ಭೃಗುಋಷಿಯ ಒಳಗಿರುವ ನನ್ನನ್ನೂ ಒದ್ದಿರುವಿ. ಆದ್ದರಿಂದ ಹೆಬ್ಬಾವಾಗಿ ಹುಟ್ಟು. ಒಮ್ಮೆ ಮೂರು ದಿನಗಳ

ವರೆಗೆ ಉಪವಾಸವಾಗಿದ್ದು ಮೂರನೆಯ ದಿನದಲ್ಲಿ ರಾತ್ರಿಯಲ್ಲಿ ಮಹಾಬಲಿಷ್ಠನಾದ ಒಬ್ಬ ಪುರುಷನನ್ನು ಹಿಡಿಯುವಿ. ಅವನು ನಿನ್ನ ವಶನಾಗಲಿ. ಅವನನ್ನು ಸಂಹರಿಸಲು ನೀನು ಶಕ್ತನಾಗಲಾರೆ. ಅವನೂ ನಿನ್ನಿಂದ ತನ್ನನ್ನು ಬಿಡಿಸಿಕೊಳ್ಳಲು ಶಕ್ತನಾಗಿದ್ದರು ಬಿಡಿಸಕೊಳ್ಳಲಾರನು. ಆಗ ನಿನ್ನಲ್ಲಿ ಬಂದು ಸೇರಿರುವ ಎಲ್ಲಾ ದೇವತೆಗಳ ಮತ್ತು ಋಷಿಗಳ ಬಲವೆಲ್ಲವೂ ನಿನ್ನ ಬಲವೂ ಅವನನ್ನು ಸೇರುವುದು. ನೀನು ಕೇಳಿದ ಎಲ್ಲಾ ಪ್ರಶ್ನೆಗಳಿಗೂ ಒಬ್ಬನು ಉತ್ತರವನ್ನು ಕೊಡುವನು. ಆಗ ನಿನ್ನ ಹೆಬ್ಬಾವಿನ ಶರೀರವು ಹೋಗಿ ಸ್ವರ್ಗವನ್ನು ಪಡೆಯುವಿ. ಈ ಎಲ್ಲಾ ವಿಷಯಗಳ ಸ್ಮರಣವು ನಿನಗೆ ಎಲ್ಲಾ ಕಾಲಗಳಲ್ಲಿಯೂ ಇರುತ್ತದೆ.'' ಎಂದು ನಹುಷನನ್ನು ಶಪಿಸಿದನು.

ಹೀಗೆ ಬ್ರಹ್ಮದೇವನು ಶಪಿಸಿದ ಕೂಡಲೇ ನಹುಷನು ಹೆಬ್ಬಾವಾಗಿ ಕೆಳಗೆ ಬಿದ್ದನು. ೨೮ನೆಯ ಮಹಾಯುಗದಲ್ಲಿ ಭೀಮಸೇನದೇವರು ಧನುಸ್ಸನ್ನು ಕೈಯಲ್ಲಿ ಧರಿಸಿ ಬೇಟೆಯಾಡುತ್ತಾ ಹಿಮಾಚಲದ ದಕ್ಷಿಣಭಾಗದಲ್ಲಿರುವ ಶಿಖರಗಳಲ್ಲಿ ಸಂಚರಿಸುತ್ತಿರುವಾಗ ಹೆಬ್ಬಾವಿನ ರೂಪದಿಂದ ಯುಕ್ತನಾಗಿರುವ ನಹುಷನ ದೇಹದ ಮಧ್ಯದಲ್ಲಿ ಸಿಕ್ಕಿಕೊಂಡರು.

## ಅವತಾರ ಕಾಲದಲ್ಲಿ ದೇವತೆಗಳ ಗುಣಗಳು ಮತ್ತು ಧರ್ಮಗಳು

ಶ್ರೀಹರಿಯು ಭೂಮಿಯಲ್ಲಿ ಅವತರಿಸಿರುವಾಗ ಅವನ ಮೂಲರೂಪದಲ್ಲಿರುವ ಗುಣಗಳು ಪೂರ್ಣವಾಗಿ ವ್ಯಕ್ತವಾಗಿರುತ್ತವೆ. ವಾಯುದೇವರು ಮೂಲರೂಪದಲ್ಲಿರುವ ಎಲ್ಲಾ ಗುಣಗಳನ್ನೂ ಅವತಾರ ರೂಪಗಳಲ್ಲಿ ಬರಬೇಕೆಂದು ಅಪೇಕ್ಷಿಸಿದರೆ ಅವರ ಇಚ್ಛಾಮಾತ್ರದಿಂದಲೇ ಮೂಲರೂಪದಲ್ಲಿರುವ ಎಲ್ಲಾ ಗುಣಗಳೂ ಅವತಾರರೂಪಗಳಲ್ಲಿ ವ್ಯಕ್ತವಾಗುತ್ತವೆ. ವಾಯುದೇವರನ್ನು ಬಿಟ್ಟು ಉಳಿದ ದೇವತೆಗಳು ಮೂಲರೂಪಗಳಲ್ಲಿರುವ ಎಲ್ಲಾ ಗುಣಗಳೂ ಅವತಾರರೂಪಗಳಲ್ಲಿ ವ್ಯಕ್ತವಾಗಬೇಕೆಂದು ಅಪೇಕ್ಷಿಸಲೂ ಕೂಡದು. ಅಪೇಕ್ಷಿಸಿದರೂ ವ್ಯಕ್ತವಾಗಲಾರದು. ಹಿಂದೆ ಇದ್ದುದಕ್ಕಿಂತ ಸ್ವಲ್ಪ ಅಧಿಕವಾದ ಗುಣಗಳು ವ್ಯಕ್ತವಾಗುವಂತೆ ಅಪೇಕ್ಷಿಸಬಹುದು. ಹಾಗೆ ಅಪೇಕ್ಷಿಸಿದರೆ ಸ್ವಲ್ಪ ಅಧಿಕವಾಗಿ ವ್ಯಕ್ತವಾಗುವುದು. ಮನುಷ್ಯಾದಿಜನ್ಮಗಳಲ್ಲಿ ಹುಟ್ಟಿರುವಾಗ ವಾಯುದೇವರು ತನ್ನ ಮೂಲರೂಪದಲ್ಲಿರುವ ಎಲ್ಲಾ ಗುಣಗಳನ್ನೂ ಇತರ ದೇವತೆಗಳು ಸ್ವಲ್ಪ ಅಧಿಕವಾದ ಗುಣಗಳನ್ನೂ ವ್ಯಕ್ತವಾಗುವಂತೆ ಮಾಡಿಕೊಳ್ಳಲು ಸಾಧ್ಯವಿದ್ದರೂ ಹಾಗೆ ಮಾಡಿಕೊಳ್ಳದಿದ್ದರೆ ಅವರಿಗೆ ಧರ್ಮವೃದ್ಧಿಯು ಏರ್ಪಡುತ್ತದೆ. ಆ ದೇವತೆಗಳಲ್ಲಿ ಶ್ರೀಹರಿಯ ಅನುಗ್ರಹವು ಅಧಿಕವಾಗುತ್ತದೆ.

ವಾಯುದೇವನ ಅವತಾರವಾಗಿರುವ ಭೀಮಸೇನದೇವರು ಹೆಬ್ಬಾವಿನ ರೂಪದಿಂದ ಯುಕ್ತನಾದ ನಹುಷನ ಸಮೀಪಕ್ಕೆ ಬಂದರು. ಆಗ ನಹುಷನಿಗೆ ವಾಯುದೇವರಿಗಿಂತ ಅಲ್ಪ ಯೋಗ್ಯತೆಯುಳ್ಳ ದೇವತೆಗಳಿಂದ ಕೊಡಲ್ಪಟ್ಟ ವರದಿಂದ ಭೀಮಸೇನದೇವರಲ್ಲಿರುವ ಮನುಷ್ಯಾವತಾರಕ್ಕೆ ಯೋಗ್ಯವಾಗಿ ವ್ಯಕ್ತವಾಗಿರುವ ಎಲ್ಲಾ ಬಲ ಮುಂತಾದ ಗುಣಗಳೂ ನಹುಷನಲ್ಲಿ ಹೋಗಿ ಸೇರಲಿಲ್ಲ. ಅದೇ ಬಲದಿಂದಲೇ ನಹುಷನಿಂದ ಬಿಡಿಸಿಕೊಳ್ಳಬಹುದಾಗಿತ್ತು. ಆದರೂ ಭೀಮಸೇನದೇವರು ದೇವತೆಗಳ ಮತ್ತು ಬ್ರಹ್ಮದೇವನ ವರಕ್ಕೆ ಮರ್ಯಾದೆಯನ್ನು ಕೊಡುವುದಕ್ಕಾಗಿ ಆ ಬಲವು ದೇವತೆಗಳ ವರದಿಂದ ತಡೆಯಲ್ಪಟ್ಟಂತೆ ನಟಿಸಿದರು. ಅಂತಹ ಸಂದರ್ಭದಲ್ಲಿ ಮೂಲರೂಪದಲ್ಲಿರುವ ಎಲ್ಲಾ ಬಲವೂ ಬರುವಂತೆ ಅಪೇಕ್ಷಿಸಬಹುದಾಗಿತ್ತು. ಶ್ರೀಹರಿಯ ವಿಶೇಷಾನುಗ್ರಹಕ್ಕಾಗಿಯೂ

ಧರ್ಮವೃದ್ಧಿಗಾಗಿಯೂ ಹಾಗೆ ಅಪೇಕ್ಷಿಸಲಿಲ್ಲ. ನಹುಷನು ಕೆಲವು ಪ್ರಶ್ನೆಗಳನ್ನು ಕೇಳಿದನು. ಅದಕ್ಕೆ ಉತ್ತರವನ್ನು ಕೊಡುವುದಾಗಿದ್ದರೆ ಬಿಡುವುದಾಗಿ ಹೇಳಿದನು.

## ಭೀಮಸೇನದೇವರ ಧರ್ಮನಿಷ್ಠೆ

ನಹುಷನು ಕೇಳಿದ ಪ್ರಶ್ನೆಗಳಿಗೆ ಉತ್ತರವನ್ನು ಕೊಟ್ಟು ಜೀವಿಸುವುದು ವಿದ್ಯೋಪಜೀವನವೆನಿಸುತ್ತದೆ. ಇದು ವಿದ್ಯೆಯನ್ನು ಮಾರಿದ್ದಕ್ಕೆ ಸಮಾನವಾಗುತ್ತಿದೆ. ಈ ಕೆಲಸವನ್ನು ಬ್ರಾಹ್ಮಣನೂ ಸಹ ಮಾಡಕೂಡದು. ಹೀಗಿರುವಾಗ ಕ್ಷತ್ರಿಯನು ಮಾಡಬಹುದೇ? ಆದ್ದರಿಂದ ಭೀಮಸೇನದೇವರು ತನ್ನ ಆತ್ಮರಕ್ಷಣೆಗಾಗಿ ನಹುಷನ ಪ್ರಶ್ನೆಗಳಿಗೆ ಉತ್ತರವನ್ನು ಕೊಡಲಿಲ್ಲ.

ಸಕಲದೇವತೆಗಳ ಮತ್ತು ಋಷಿಗಳ ಬಲದಿಂದ ಪೂರ್ಣನಾಗಿರುವ ನಹುಷನು ತನ್ನನ್ನು ಬಿಡಿಸಿಕೊಳ್ಳುವುದಕ್ಕೆ ಯಾವ ವಿಧವಾದ ಪ್ರಯತ್ನವನ್ನೂ ಮಾಡದಿರುವ ಭೀಮಸೇನದೇವರನ್ನು ಅಲ್ಲಾಡಿಸಲೂ ಶಕ್ತನಾಗಲಿಲ್ಲ. ಒಂದು ಹೆಜ್ಜೆ ಯಷ್ಟು ಪ್ರದೇಶದ ವರೆಗೆ ಮುಂದುವರೆಯಲೂ ಶಕ್ತನಾಗಲಿಲ್ಲ. ಭೀಮಸೇನದೇವರಿಗೆ ಏರ್ಪಟ್ಟ ಈ ಸ್ಥಿತಿಯನ್ನು ತಿಳಿದರೆ ಬಹುದೂರದಲ್ಲಿರುವ ಕುಂತೀದೇವಿಯೂ ಸಮೀಪದಲ್ಲಿರುವ ಸಹೋದರರೂ ಕಷ್ಟಪಡುವರು. ಅವರು ಆ ರೀತಿಯಿಂದ ಕಷ್ಟಪಡಕೂಡದು ಎಂದು ತಾಯಿ ಮತ್ತು ಸಹೋದರರಲ್ಲಿರುವ ಸ್ನೇಹದಿಂದ ಬೇಗನೆ ನಹುಷನಿಂದ ಬಿಡಿಸಿಕೊಳ್ಳಬೇಕೆಂದು ತೋರಿತು. ಹಾಗೆ ಬಿಡಿಸಿಕೊಳ್ಳದಿದ್ದರೆ ನಹುಷನಲ್ಲಿರುವ ಎಲ್ಲಾ ಬಲವೂ ನನ್ನಲ್ಲಿ ಬರುತ್ತದೆ. ಆ ಮೇಲೆ ದುರ್ಬಲನಾದ ನಹುಷನು ನನ್ನ ಭಾರವನ್ನು ಸಹಿಸಲಾರದೆ ತಾನಾಗಿಯೇ ಕಾಲಕ್ರಮದಿಂದ ಸೋತುಹೋಗುವನು.

"ಶ್ರೀಹರಿಯು ನನ್ನ ದೇಹವು ಅತಿದೃಢವಾಗಿರಲಿ ಎಂದು ಆಜ್ಞಾಪಿಸಿರುವನು. ಆದ್ದರಿಂದ ನಹುಷನು ನನ್ನನ್ನು ತಿನ್ನಬೇಕೆಂದು ಮಾಡುವ ಎಲ್ಲಾ ಪ್ರಯತ್ನಗಳಿಂದಲೂ ಅವನ ದೇಹವೇ ಶಿಥಿಲವಾಗುತ್ತದೆ. ಆ ಮೇಲೆ ಅವನೇ ನನ್ನನ್ನು ಬಿಡುವನು. ಆ ಮೇಲೆ ನಾನು ಹೋಗುವೆನು" ಎಂದು ತೀರ್ಮಾನಿಸಿದರು. ಶ್ರೀಹರಿಯನ್ನು ಯಾವಾಗಲೂ ಸ್ಮರಿಸುತ್ತಿರುವಂತೆ ಸ್ವಭಾವದಿಂದಲೇ ಸ್ಮರಿಸುತ್ತಾ ಕಾಲವನ್ನು ಕಳೆದರು. ಈ ನಹುಷನ ದೇಹದ ಬಂಧನದಿಂದ ಬಿಡುಗಳೆಯಾಗಲಿ ಎಂದು ಶ್ರೀಹರಿಯನ್ನು ಸ್ಮರಿಸಲಿಲ್ಲ. ಅದೇ ಸಮಯದಲ್ಲಿ ಶ್ರೀಹರಿಯ ಆಜ್ಞೆಯಂತೆ ಬ್ರಹ್ಮದೇವರು ನಹುಷನನ್ನು ಶಪಿಸುವಾಗ ಹೇಳಿದಂತೆ ನಹುಷನಲ್ಲಿದ್ದ ಎಲ್ಲಾ ದೇವತೆಗಳ ಮತ್ತು ಋಷಿಗಳ ತಪಸ್ಸುಗಳ ಬಲವೂ ಭೀಮಸೇನದೇವರಲ್ಲಿ ಬಂದವು. ನಹುಷನ ದೇಹವು ಮೆಲ್ಲಮೆಲ್ಲನೆ ಶಿಥಿಲವಾಯಿತು.

ಅದೇ ಸಮಯದಲ್ಲಿ ಧರ್ಮರಾಜನು ಅಪಶಕುನಗಳನ್ನು ಕಂಡನು. ಭೀಮಸೇನದೇವರು ಆಶ್ರಮದಲ್ಲಿಲ್ಲದಿರುವುದನ್ನು ತಿಳಿದನು. ಭೀಮಸೇನದೇವರು ಹೋದ ಹಾದಿಯಲ್ಲಿ ಅವರ ದೇಹದ ಗಾಳಿಯಿಂದ ಉರುಳಿಬಿದ್ದಿರುವ ಮರಗಳಿಂದ ಭೀಮಸೇನದೇವರು ಹೋದ ಹಾದಿಯನ್ನು ತಿಳಿದುಕೊಂಡು ನಹುಷನಿದ್ದಲ್ಲಿಗೆ ಬಂದನು. ಭೀಮಸೇನದೇವರ ಮೇಲಿರುವ ಪ್ರೇಮದಿಂದ ಅವನು ಕೇಳಿದ ಪ್ರಶ್ನೆಗಳಿಗೆಲ್ಲಾ ಉತ್ತರವನ್ನು ಕೊಟ್ಟನು. ನಹುಷನೂ ಹೆಬ್ಬಾವಿನ ರೂಪವನ್ನು ಬಿಟ್ಟು ವಿಮಾನದಿಂದ ಸ್ವರ್ಗಲೋಕಕ್ಕೆ ಹೋದನು. ಇದರಿಂದ ನಹುಷನು ಕೇಳಿದ ಪ್ರಶ್ನೆಗಳಿಗೆ ಉತ್ತರವನ್ನು ಕೊಟ್ಟು ತನ್ನ ದೇಹದ ರಕ್ಷಣೆಯನ್ನು ಭೀಮಸೇನದೇವರು ಮಾಡಿಕೊಳ್ಳಲಿಲ್ಲವೆಂದು ಸ್ಪಷ್ಟವಾಗುತ್ತದೆ.

ಇನ್ನೊಮ್ಮೆ ಒಬ್ಬ ಬ್ರಾಹ್ಮಣನ ಅರಣಿಕಾಷ್ಠಗಳನ್ನೂ ಅಗ್ನಿಪಾತ್ರವನ್ನೂ ಮೃಗರೂಪಿಯಾದ ಯಮನು ಅಪಹರಿಸಿದನು. ಆ ಮೃಗವನ್ನು ಬೆನ್ನಟ್ಟಿಕೊಂಡು ಧರ್ಮರಾಜನನ್ನು ಬಿಟ್ಟು ಉಳಿದ ನಾಲ್ಕು ಪಾಂಡವರು ಹೋದರು. ಮೃಗರೂಪಿಯಾದ ಯಮನು ಅದೃಶ್ಯನಾದನು. ನಾಲ್ವರು ಪಾಂಡವರು ತುಂಬಾ ನೀರಡಿಕೆಯಿಂದ ಯುಕ್ತರಾಗಿ ನೀರನ್ನು ಕುಡಿಯಲು ಒಬ್ಬೊಬ್ಬರಾಗಿ ಹೋದರು. ಆಗ ಅದೃಶ್ಯನಾದ ಯಮನು " ನಾನು ಕೇಳುವ ಪ್ರಶ್ನೆಗಳಿಗೆ ಉತ್ತರವನ್ನು ಕೊಟ್ಟು ನೀರನ್ನು ಕುಡಿಯಿರಿ. ಹಾಗೆಯೇ ಕುಡಿಯಬೇಡಿರಿ'' ಎಂದನು. ಇದು ವಿದ್ಯೋಪಜೀವನವೆಂದೂ ಈ ವಿದ್ಯೋಪಜೀವನವನ್ನು ಬ್ರಾಹ್ಮಣನು ಕೂಡ ಮಾಡಕೂಡದೆಂದೂ ಕ್ಷತ್ರಿಯನು ಸರ್ವಥಾ ಮಾಡಕೂಡದೆಂದೂ ಹೇಳುತ್ತಾ ಭೀಮಸೇನದೇವರು ಪ್ರಶ್ನೆಗಳಿಗೆ ಉತ್ತರವನ್ನು ಕೊಡಲಿಲ್ಲ. ಬಲಾತ್ಕಾರದಿಂದ ನೀರನ್ನು ಕುಡಿದರು.

ದೇವತೆಗಳೂ ಸಹ ಭೂಲೋಕದಲ್ಲಿ ಅವತರಿಸಿದಾಗ ಅತ್ಯಂತ ಬಲಿಷ್ಠರಾಗಿದ್ದರೂ ಹಸಿವು ನೀರಡಿಕೆ ಮುಂತಾದ ಮನುಷ್ಯಸ್ವಭಾವದಿಂದ ಯುಕ್ತರಾಗಿರುವರು. ಶ್ರೀಹರಿಯಲ್ಲಿ ಮಾತ್ರ ಈ ನಿಯಮವಿಲ್ಲ. ಆದ್ದರಿಂದ ಭೀಮಸೇನದೇವರು ನೀರಡಿಸಿದ್ದೂ ಬಲಾತ್ಕಾರದಿಂದ ನೀರನ್ನು ಕುಡಿದದ್ದೂ ಅನಂತರದಲ್ಲಿ ನಿದ್ರಿಸಿದ್ದೂ ಆಶ್ಚರ್ಯವಿಲ್ಲ. ಭೀಮಾದಿಗಳಲ್ಲಿರುವ ಸದ್ಗುಣಗಳು ಅವರವರು ಮಾಡುವ ಕೆಲಸಗಳಿಂದ ವ್ಯಕ್ತವಾಗುತ್ತವೆ.

ಯಮನಿಗಿಂತ ಭೀಮಸೇನದೇವರೂ ಅರ್ಜುನನೂ ಅಧಿಕಬಲವುಳ್ಳವರೆಂಬ ವಿಷಯದಲ್ಲಿ ಸಂಶಯವಿಲ್ಲ. ಯಮನು ತನ್ನಲ್ಲಿರುವ ಶಕ್ತಿಯಿಂದ ಭೀಮಸೇನದೇವರನ್ನು ಮಲಗಿಸಿದನು. ಅವರೂ ಸಹ ಅವನಲ್ಲಿರವ ಶಕ್ತಿಗೆ ವಶರಾದವರಂತೆ ನಟಿಸುತ್ತಾ ಮಲಗಿದರು. ಅನಂತರದಲ್ಲಿ ಅರ್ಜುನನೂ ಹೋಗಿ ನೀರನ್ನು ಕುಡಿದು ಮಲಗಿದನು. ಅನಂತರದಲ್ಲಿ ನಕುಲನೂ ಸಹದೇವನೂ ಬಲಾತ್ಕಾರದಿಂದ ನೀರನ್ನು ಕುಡಿದರು. ಯಮದೇವರಿಗಿಂತ ಅವರಿಬ್ಬರೂ ಅಧಮರಾದುದರಿಂದ ನೀರನ್ನು ಕುಡಿದವರು ಯಮನಿಂದ ಮಲಗಿಸಲ್ಪಟ್ಟರು.

ಭೀಮಸೇನದೇವರನ್ನೂ ಅರ್ಜುನನನ್ನೂ ಒಂದು ಮುಹೂರ್ತಕಾಲದ ವರೆಗೆ ಯಮದೇವರ ಶಕ್ತಿಯು ಮಲಗಿಸಿತು. ಮಹೂರ್ತಕಾಲವು ಮುಗಿದ ಕೂಡಲೇ ಅವರಿಬ್ಬರೂ ಎದ್ದರು. ಕೊನೆಗೆ ಧರ್ಮರಾಜನು ಅಲ್ಲಿಗೆ ಬಂದನು. ನೀರನ್ನು ಕುಡಿಯುವುದಕ್ಕೆ ಹೋದನು. ಅಲ್ಲಿ ಮಲಗಿರುವ ಸಹೋದರರವನ್ನು ನೋಡಿದನು. ತುಂಬಾ ದುಃಖಿತನಾದನು.

ಯಮನು ಅವನನ್ನೂ ನೋಡಿ ಭೀಮಾದಿಗಳಿಗೆ ಹೇಳಿದಂತೆ ಹೇಳಿದನು. ನಾನು ಕೇಳುವ ಪ್ರಶ್ನೆಗಳಿಗೆ ಉತ್ತರವನ್ನು ಕೊಟ್ಟು ನೀರನ್ನು ಕುಡಿ. ಹಾಗೆ ಮಾಡಿದರೆ ಈ ನಾಲ್ವರಲ್ಲಿ ಒಬ್ಬನು ಬದುಕುವನು ಎಂದನು. ಧರ್ಮರಾಜನು ಯಮನ ಪ್ರಶ್ನೆಗಳಿಗೆ ಉತ್ತರವನ್ನು ಕೊಟ್ಟು ಬದುಕಿಸುವುದು ವಿದ್ಯೋಪಜೀವನವೆಂದೂ ಇದನ್ನು ಕ್ಷತ್ರಿಯನಾದವನು ಮಾಡಕೂಡದೆಂದೂ ತಿಳಿದಿದ್ದರೂ ಸಹೋದರರಿಗಾಗಿ ಪ್ರಶ್ನೆಗಳಿಗೆ ಉತ್ತರವನ್ನು ಕೊಡುವುದಾಗಿ ಅಂಗೀಕರಿಸಿದನು. ಆ ಮೇಲೆ ಯಮನು ಯಕ್ಷನ ರೂಪವನ್ನು ಧರಿಸಿ ಪ್ರಶ್ನೆಗಳನ್ನು ಕೇಳಿದನು. ಅದಕ್ಕೆ ಧರ್ಮರಾಜನು ಉತ್ತರವನ್ನು ಕೊಟ್ಟನು. ಯಮನು ಸಂತುಷ್ಟನಾದನು.

ಈ ನಾಲ್ವರಲ್ಲಿ ಯಾರಾದರೂ ಒಬ್ಬನನ್ನು ಬದುಕುವಂತೆ ಕೇಳು. ಅವನನ್ನು ಬದುಕಿಸುವೆನು ಎಂದನು. ಹಾಗಾದರೆ ನಕುಲನು ಬದುಕಲಿ ಎಂದು ಧರ್ಮರಾಜನು ಕೇಳಿದನು. ಅದನ್ನು ಕೇಳಿದ ಯಮನು ಆಶ್ಚರ್ಯ

ಯುಕ್ತನಾದನು. ಓ ಧರ್ಮರಾಜ, ಭೀಮಸೇನನಲ್ಲಿ ನಿನಗೆ ತುಂಬಾ ಪ್ರೀತಿಯಿದೆ. ನಿನ್ನ ರಾಜ್ಯವೂ ಅವನ ಬಲದಿಂದಲೇ ಸ್ವಾಧೀನವಾಗುತ್ತದೆ. ಹೀಗಿರುವಾಗ " ನಕುಲನು ಬದುಕಲಿ" ಎಂದು ಕೇಳಿರುವುದು ಹೇಗೆ ಯುಕ್ತವಾಗುತ್ತದೆ? ಎಂದು ಪ್ರಶ್ನಿಸಿದನು. ಅದಕ್ಕೆ " ಮಾದ್ರಿಯ ಮಗನನ್ನು ಬದುಕಿಸದೆ ಕುಂತಿಯ ಮಗನನ್ನು ಬದುಕಿಸುವುದು ಹೇಗೆ ಯುಕ್ತವಾದೀತು? ಎಂದು ಉತ್ತರವನ್ನು ಕೊಟ್ಟನು. ಈ ಮಾತನ್ನು ಕೇಳಿದ ಯಮನು ತುಂಬಾ ಸಂತುಷ್ಟನಾದನು ನಕುಲಸಹದೇವರನ್ನು ಬದುಕಿಸಿದನು. ಭೀಮಸೇನದೇವರನ್ನೂ ಅರ್ಜುನನನ್ನೂ ಬದುಕಿಸಿದಂತೆ ನಟಿಸಿದನು.

ಈ ಸಂದರ್ಭದಲ್ಲಿ ವಿದ್ಯೋಪಜೀವನವು ಕ್ಷತ್ರಿಯರಿಗೆ ಅತ್ಯಂತ ನಿಂದ್ಯವಾದುದು ಎಂಬ ಅಂಶವನ್ನು ಭೀಮಸೇನದೇವರು ಮುಂತಾದವರು ಸ್ಪಷ್ಟವಾಗಿ ತಿಳಿಸಿರುವರು. ಭೀಮಸೇನದೇವರು ಈ ವಿದ್ಯೋಪಜೀವನವನ್ನು ಯಾವಾಗಲೂ ಮಾಡಿದವರಲ್ಲ.

## ಭೀಮಸೇನದೇವರು ಅಸ್ತ್ರಯುದ್ಧವನ್ನು ಮಾಡಿದ್ದು ಹೇಗೆ?

ಅಶ್ವತ್ಥಾಮಾಚಾರ್ಯರು ಪ್ರಯೋಗಿಸಿದ ಅಸ್ತ್ರಗಳಿಗೆ ಪ್ರತಿಯಾದ ಅಸ್ತ್ರಗಳನ್ನು ಬಿಡು ಎಂದು ಶ್ರೀಕೃಷ್ಣದೇವನು ಭೀಮಸೇನದೇವರಿಗೆ ಆಜ್ಞಾಪಿಸಿದನು. ಅಸ್ತ್ರಯುದ್ಧದಲ್ಲಿ ಅರ್ಜುನನನ್ನು ಬಿಟ್ಟು ಬೇರೆ ಯಾವನೂ ಅಶ್ವತ್ಥಾಮಾಚಾರ್ಯರಿಗೆ ಸಮಾನನಾದವನಿಲ್ಲ. ಅಶ್ವತ್ಥಾಮಾಚಾರ್ಯರನ್ನು ಅಸ್ತ್ರಯುದ್ಧದಲ್ಲಿ ಜಯಿಸಿರುವ ಭೀಮಸೇನದೇವರು ಸರ್ವಜ್ಞರೆಂಬ ವಿಷಯದಲ್ಲಿ ಯಾವ ಸಂಶಯವು ಇಲ್ಲ ಎಂಬ ವಿಷಯವನ್ನು ಸ್ಪಷ್ಟಪಡಿಸುವುದಕ್ಕಾಗಿ ಶ್ರೀಕೃಷ್ಣದೇವನು ಈ ಆಜ್ಞೆಯನ್ನು ಮಾಡಿರುವನು.

ಅಲಂಬುಸ ಎಂಬ ದೈತ್ಯನು ಅದೃಶ್ಯನಾಗಿ ಯುದ್ಧವನ್ನು ಮಾಡುತ್ತಿದ್ದನು. ಅವನನ್ನೂ ಅಸ್ತ್ರಯುದ್ಧದಿಂದ ಸೋಲಿಸು ಎಂದು ಶ್ರೀಕೃಷ್ಣದೇವನು ಆಜ್ಞಾಪಿಸಿದನು. ಈ ಎರಡು ಸಂದರ್ಭಗಳಲ್ಲಿ ಮಾತ್ರ ಶ್ರೀಕೃಷ್ಣದೇವನು ಭೀಮಸೇನದೇವರ ಸರ್ವಜ್ಞತ್ವವನ್ನು ತಿಳಿಸುವುದುಕ್ಕಾಗಿ ಅಸ್ತ್ರಯುದ್ಧವನ್ನು ಮಾಡುವಂತೆ ಭೀಮಸೇನದೇವರಿಗೆ ಆಜ್ಞಾಪಿಸಿದ್ದುಂಟು. ಅಸ್ತ್ರಯುದ್ಧವು ಶುದ್ಧವಾದ ಭಾಗವತಧರ್ಮವಲ್ಲವೆಂದು ತಿಳಿದಿದ್ದರೂ ಶ್ರೀಕೃಷ್ಣದೇವನ ಆಜ್ಞೆಯನ್ನು ಮೀರಕೂಡದು ಎಂಬ ಉದ್ದೇಶದಿಂದಲೇ ಭೀಮಸೇನದೇವರು ಅಸ್ತ್ರಯುದ್ಧವನ್ನು ಮಾಡಿರುವರು. ಇಂದ್ರಾದಿದೇವತೆಗಳು ಪ್ರತ್ಯಕ್ಷವಾಗಿ ಬಂದಿರುವಾಗಲೂ ಧರ್ಮರಾಜ ಮುಂತಾದ ವಯಸ್ಸಿನಿಂದ ಹಿರಿಯರಾದ ಬಂಧುಗಳು ಬಂದಿರುವಾಗಲೂ ಅವರೆಲ್ಲರೂ ಭೀಮಸೇನದೇವರಿಗಿಂತ ಯೋಗ್ಯತೆಯಲ್ಲಿ ಚಿಕ್ಕವರಾಗಿದ್ದರೂ ಅವರೆಲ್ಲರಿಗೂ ನಮಸ್ಕಾರಗಳನ್ನು ಮಾಡಬೇಕು ಎಂಬುದುಶ್ರೀಕೃಷ್ಣದೇವನ ಆಜ್ಞೆ. ಈ ಆಜ್ಞೆಯೂ ಲೋಕದಲ್ಲಿರುವ ಧರ್ಮಮರ್ಯಾದೆಯನ್ನು ರಕ್ಷಿಸುವುದಕ್ಕಾಗಿ, ಇಂದ್ರಾದಿ ದೇವತೆಗಳಲ್ಲಿಯೂ ಧರ್ಮರಾಜಾದಿಗಳಲ್ಲಿಯೂ ಶ್ರೀಹರಿಯನ್ನೇ ಭೀಮಸೇನದೇವರು ನಮಸ್ಕರಿಸುತ್ತಿದ್ದರು. ಇಂದ್ರ, ಯಮ ಮುಂತಾದವರನ್ನು ನಮಸ್ಕರಿಸುತ್ತಿದ್ದಿಲ್ಲ. ಅಸ್ತ್ರಯುದ್ಧವನ್ನು ಮಾಡಿದಾಗಲೂ ಅಸ್ತ್ರಾಭಿಮಾನಿದೇವತೆಗಳೆಲ್ಲರೂ ಅವರಿಗಿಂತ ಅಧಮರಾಗಿರುವುದರಿಂದ ಶತ್ರುಗಳನ್ನು ನಿಗ್ರಹಿಸುವಂತೆ ಅವರನ್ನು ಪ್ರಾರ್ಥಿಸುತ್ತಿರಲಿಲ್ಲ. ಈ ಶತ್ರುವನ್ನು ನಿಗ್ರಹಿಸು ಎಂದು ಆಜ್ಞಾಪಿಸುತ್ತಿದ್ದರು.

# ದ್ರೌಪದೀದೇವಿಯರ ಸ್ಥಾನ

ಭೀಮಸೇನದೇವರನ್ನು ಭಾಗವತಧರ್ಮದಲ್ಲಿ ಎಲ್ಲಾ ವಿಧದಿಂದಲೂ ಅನುಸರಿಸಿಕೊಂಡಿರುವವರು ದ್ರೌಪದೀದೇವಿಯರು. ದುಃಶಾಸನನು ದ್ರೌಪದೀದೇವಿಯ ಮಾನಭಂಗವನ್ನು ಮಾಡುತ್ತಿದ್ದಾಗ ಮಾವನಾಗಿರುವ ಧೃತರಾಷ್ಟ್ರನಿಂದ ಆತ್ಮಮಾನ ಸಂರಕ್ಷಣಾರ್ಥವಾಗಿ ವರವನ್ನು ಬೇಡಬಹುದಾಗಿತ್ತು. ಅವನಿಂದಲೂ ವರವನ್ನು ಬೇಡಲಿಲ್ಲ. ಅಂತಹ ಮಹಾ ಆಪತ್ತಿನಕಾಲದಲ್ಲಿ ಧೃತರಾಷ್ಟ್ರನ ಮಕ್ಕಳೆಲ್ಲರನ್ನೂ ಶಾಪವನ್ನು ಕೊಟ್ಟು ಧ್ವಂಸಮಾಡಬಹುದಾಗಿತ್ತು, ಅದನ್ನೂ ಮಾಡಲಿಲ್ಲ. ಮನಸ್ಸಿನಿಂದಲಾಗಲೀ ಮಾತುಗಳಿಂದಲಾಗಲೀ ಶ್ರೀಹರಿಗೆ ವಿರುದ್ಧವಾದ ಯಾವ ವ್ಯಾಪಾರವನ್ನೂ ಮಾಡಲಿಲ್ಲ.

# ಬಲರಾಮಾದಿಗಳು ಸರ್ವರೂ ಆಗಾಗ್ಗೆ ಭಾಗವತ ಧರ್ಮವನ್ನು ಬಿಟ್ಟವರು

ಮೇಲ್ಕಂಡ ಭೀಮಸೇನದೇವರನ್ನೂ ದ್ರೌಪದೀದೇವಿಯರನ್ನೂ ಬಿಟ್ಟು ಉಳಿದವರು ಸರ್ವರೂ ಭಗವದ್ಭಕ್ತರಾಗಿದ್ದರೂ ಆಗಾಗ್ಗೆ ಭಾಗವತಧರ್ಮವನ್ನು ಬಿಟ್ಟಿರುವವರು.

(೧) ಬಲರಾಮ - ಇವನು ಸ್ಯಮಂತಕಮಣಿಯಲ್ಲಿ ವಿಶೇಷವಾದ ಆಸೆಯನ್ನು ಇಟ್ಟುಕೊಂಡಿದ್ದನು. ಶ್ರೀಕೃಷ್ಣದೇವನು ಊರಿನಲ್ಲಿಲ್ಲದಿರುವ ಸಮಯದಲ್ಲಿ ಸತ್ಯಭಾಮಾದೇವಿಯ ತಂದೆಯಾಗಿರುವ ಸತ್ರಾಜಿದ್ರಾಜನನ್ನು ಶತಧನ್ವನು ಸಂಹರಿಸಿ ಸತ್ರಾಜಿದ್ರಾಜನಲ್ಲಿದ್ದ ಸ್ಯಮಂತಕಮಣಿಯನ್ನು ಅಪಹರಿಸಿದನು. ಶ್ರೀಕೃಷ್ಣದೇವನು ಊರಿಗೆ ಹಿಂದಿರುಗಿ ಬಂದಮೇಲೆ ಶತಧನ್ವನನ್ನು ಸಂಹರಿಸುವುದಕ್ಕಾಗಿ ಬಲರಾಮನೊಡನೆ ರಥದಲ್ಲಿ ಕುಳಿತು ಶತಧನ್ವನನ್ನು ಓಡಿಸಿಕೊಂಡು ಹೋದನು. ಶತಧನ್ವನು ಒಂದೇ ಸಲ ನೂರು ಯೋಜನದ ವರೆಗೆ ಓಡುವ ಶಕ್ತಿಯುಳ್ಳ ಕುದುರೆಯಲ್ಲಿ ಕುಳಿತು ಓಡಿದನು. ಆ ಕುದುರೆಯು ಮಿಥಿಲಾಪಟ್ಟಣದ ಉಪವನಕ್ಕೆ ಬಂದಾಗ ನೂರು ಯೋಜನಗಳು ಮುಗಿದವು. ಅಲ್ಲಿ ಬಿದ್ದು ಸತ್ತಿತು. ಆಮೇಲೆ ಶತಧನ್ವನು ಕಾಲು ನಡೆಯಿಂದ ಓಡಲು ಆರಂಭಿಸಿದನು. ಈ ಶತಧನ್ವನು ಅಕ್ರೂರ ಮತ್ತು ಕೃತವರ್ಮರ ಪ್ರೇರಣೆಯಿಂದ ಸತ್ರಾಜಿದ್ರಾಜನನ್ನು ಸಂಹರಿಸಿ ಸ್ಯಮಂತಕಮಣಿಯನ್ನು ಅಪಹರಿಸಿದ್ದನು. ಶ್ರೀಕೃಷ್ಣದೇವನು ತನ್ನನ್ನು ನಿಗ್ರಹಿಸುವುದಕ್ಕಾಗಿ ಹೊರಡುವ ಸಮಾಚಾರವನ್ನು ತಿಳಿದ ಕೂಡಲೇ ತನಗೆ ಸಹಾಯವನ್ನು ಮಾಡಬೇಕೆಂದು ಅವರಿಬ್ಬರನ್ನೂ ಪ್ರಾರ್ಥಿಸಿದನು. ಅವರು ಸಹಾಯವನ್ನು ಮಾಡಲಾರೆವು ಎಂದು ಹೇಳಿದರು. ಶತಧನ್ವನು ತಾನು ಬದುಕಿ ಹಿಂದಿರುಗಿ ಬಂದರೆ ತನ್ನಲ್ಲಿ ಕೊಡುವಂತೆ ಹೇಳಿ ಸ್ಯಮಂಂತಕಮಣಿಯನ್ನು ಅಕ್ರೂರನ ಕೈಯಲ್ಲಿ ಕೊಟ್ಟು ಓಡಿ ಬಂದಿದ್ದನು.

ಶತಧನ್ವನು ಸತ್ತು ಹೋದ ಕುದುರೆಯನ್ನು ಬಿಟ್ಟು ಓಡುತ್ತಿರುವದನ್ನು ಶ್ರೀಕೃಷ್ಣದೇವನು ನೋಡಿದನು. ಅಣ್ಣನ ಕಡೆಗೆ ತಿರುಗಿದನು. " ಅಣ್ಣಾ, ಇಲ್ಲಿಯೇ ಇರು. ಶತಧನ್ವನನ್ನು ಸಂಹರಿಸುವೆನು. ಅವನ ದೇಹದಲ್ಲಿ ಬಚ್ಚಿಟ್ಟಿರುವ ಸ್ಯಮಂತಕಮಣಿಯನ್ನು ತೆಗೆದುಕೊಂಡು ಬರುವೆನು'' ಎಂದು ಹೇಳಿದನು. ಶತಧನ್ವನನ್ನು ಓಡಿಸಿಕೊಂಡು ಹೋಗಿ. ಅವನ ತಲೆಯನ್ನು ಕತ್ತರಿಸಿದನು. ಮಣಿಯನ್ನು ಹುಡುಕಿದನು. ಮಣಿಯು ಸಿಗಲಿಲ್ಲ. ಹಿಂದರುಗಿ ಬಂದನು. " ಅಣ್ಣಾ, ಶತಧನ್ವನನ್ನು ಕೊಂದೆನು. ಮಣಿಯು ಅವನಲ್ಲಿಲ್ಲ.'' ಎಂದನು.

ಬಲರಾಮನಿಗೆ ಶ್ರೀಕೃಷ್ಣದೇವನಲ್ಲಿಯೇ ಸಂಶಯವು ಬಂತು. "ಮಣಿಯು ಶತಧನ್ವನ ದೇಹದಲ್ಲಿ ಇದ್ದೇ ಇರಬೇಕು. ಆ ಮಣಿಯನ್ನು ಶ್ರೀಕೃಷ್ಣನೇ ತೆಗೆದುಕೊಂಡಿರಬೇಕು. ಅಣ್ಣನಾದ ನನಗೆ ಸೇರಬೇಕಾದ ಮಣಿಯನ್ನು ಇಲ್ಲವೆಂದು ಸುಳ್ಳು ಹೇಳುತ್ತಿರುವನು" ಎಂದು ತೀರ್ಮಾನಿಸಿದನು. "ಆ ಮಣಿಯು ಯಾರಲ್ಲಿಯೋ ಇರಬೇಕು. ಈ ವಿಷಯವು ತಿಳಿಯುವ ವರೆಗೆ ನಾನು ಊರಿಗೆ ಬರಲಾರೆನು" ಎಂದನು. ಮಿಥಿಲಾಪಟ್ಟಣಕ್ಕೆ ಹೋಗಿ. ಮೂರು ವರ್ಷಗಳ ವರೆಗೆ ಅಲ್ಲಿಯೇ ಇದ್ದನು.

ಸರ್ವಜ್ಞನಾದ ಶ್ರೀಕೃಷ್ಣದೇವನು ಅಕ್ರೂರನಲ್ಲಿ ಸ್ಯಮಂತಕಮಣಿಯು ಇರುವ ವಿಷಯವನ್ನು ತಿಳಿದನು. ಬಲರಾಮನನ್ನೂ ಅಕ್ರೂರನನ್ನೂ ಯಾವುದೋ ಒಂದು ನಿಮಿತ್ತದಿಂದ ಕರೆಯಿಸಿದನು. ಬಲರಾಮನ ಮುಂದೆ ಅಕ್ರೂರನನ್ನು ನಿಲ್ಲಿಸಿದನು. "ಆಕ್ರೂರಾ, ನಿನ್ನಲ್ಲಿ ಸ್ಯಮಂತಕಮಣಿಯು ಇರುವ ವಿಷಯವು ನನಗೆ ತಿಳಿದಿದೆ. ಆದರೆ ನನ್ನಲ್ಲಿ ನನ್ನ ಅಣ್ಣನು ಅಪನಂಬಿಕೆಯಿಂದ ಯುಕ್ತನಾಗಿರುವನು. ಆದ್ದರಿಂದ ಮಣಿಯನ್ನು ತೋರಿಸು." ಎಂದನು. ಕೂಡಲೇ ಅಕ್ರೂರನು ಮಣಿಯನ್ನು ತೋರಿಸಿದನು. ಇದರಿಂದ ಶ್ರೀಕೃಷ್ಣದೇವನಲ್ಲಿದ್ದ ಸಂಶಯವು ಹೋಯಿತು.

ಅದರೂ ತಾನು ಅಣ್ಣನೆಂಬ ಭಾವನೆಯಿಂದ ಆ ಮಣಿಯಲ್ಲಿ ಅವನಿಗೆ ಆಸೆಯು ಏರ್ಪಟ್ಟಿತು. ಆಗ ಶ್ರೀಕೃಷ್ಣದೇವನು ಹೇಳಿದನು. "ಅಕ್ರೂರಾ ಈ ಮಣಿಯು ದೇವಭಕ್ತನಾದ ನಿನ್ನಲ್ಲಿಯೇ ಇರಲಿ. ನಿನ್ನಲ್ಲೇ ಇದ್ದರೂ ಇದರಿಂದ ಬರುವ ಫಲವು ಎಲ್ಲರಿಗೂ ಬರುತ್ತದೆ. ಈ ಮಣಿಯು ಪೂಜಿಸಲ್ಪಡುವ ಸ್ಥಳದಲ್ಲಿ ದುರ್ಭಿಕ್ಷಾದಿದೋಷಗಳಿಲ್ಲ ಎಂದನು.

ಹೀಗೆ ಶೇಷದೇವನ ಅವತಾರವಾಗಿರುವ ಬಲರಾಮನು ಸ್ಯಮಂತಕಮಣಿಗಾಗಿ ಶ್ರೀಕೃಷ್ಣದೇವನ ಮೇಲೆ ವೈಮನಸ್ಯವನ್ನು ಪಡೆದನು. ಆದ್ದರಿಂದ ಶೇಷನೂ ಬಲರಾಮನೂ ಭಗವದ್ಭಕ್ತರಾಗಿದ್ದರೂ ಒಮ್ಮೊಮ್ಮೆ ಭಾಗವತಧರ್ಮವನ್ನು ಬಿಟ್ಟು ಶ್ರೀಹರಿಯನ್ನು ವಿರೋಧಿಸುವುದುಂಟು.

(೨) ಅರ್ಜುನ - ಒಮ್ಮೆ ಹನ್ನೆರಡು ವರ್ಷಗಳಲ್ಲಿ ಮಾಡಬೇಕಾದ ಒಂದು ಯಜ್ಞವನ್ನು ಒಂದೇ ದಿನದಲ್ಲಿ ಮಾಡುವುದಾಗಿ ಸಂಕಲ್ಪಿಸಿದ ಶ್ರೀಕೃಷ್ಣದೇವನು ಯಜ್ಞಕ್ಕಾಗಿ ದೀಕ್ಷೆಯನ್ನು ಸ್ವೀಕರಿಸಿದನು. ಆ ಯಜ್ಞಕ್ಕೆ ಧರ್ಮರಾಜ ಮುಂತಾದ ಸರ್ವರೂ ಬಂದಿದ್ದರು. ಒಬ್ಬ ಬ್ರಾಹ್ಮಣನ ಪತ್ನಿಯು ಪ್ರಸವಿಸಿದ ಮಕ್ಕಳೆಲ್ಲರೂ ಅದೃಶ್ಯರಾಗುತ್ತಿದ್ದರು. ಆ ಬ್ರಾಹ್ಮಣನು ಈ ವಿಷಯವನ್ನು ಗಟ್ಟಿಯಾಗಿ ಕೂಗಿ ಹೇಳಿದನು. "ರಾಜನ ದೋಷದಿಂದ ರಾಜ್ಯದಲ್ಲಿರುವ ಮಕ್ಕಳು ಸಾಯುವರು." ಎಂದು ಮೂರು ಸಲ ಹೇಳಿದನು. ಆಗ ಆ ಸಭೆಯಲ್ಲಿದ್ದ ಅರ್ಜುನನು ಎದ್ದನು.

"ಓ ಬ್ರಾಹ್ಮಣರೇ ನೀವಿರುವ ರಾಜ್ಯದಲ್ಲಿ ಧನುರ್ಧಾರಿಗಳೇ ಇಲ್ಲವೇ? ಯಾವನ ರಾಜ್ಯದಲ್ಲಿ ಬ್ರಾಹ್ಮಣರಿಗೆ ಕಷ್ಟವು ಏರ್ಪಡುತ್ತದೆಯೋ ಆ ರಾಜರು ಬರೇ ನಟರು. ನಿಮ್ಮ ಸಂತತಿಯನ್ನು ನಾನು ರಕ್ಷಿಸುವೆನು. ನನ್ನ ಪ್ರತಿಜ್ಞೆಯಂತೆ ನಡೆಯಲು ಅಸಮರ್ಥನಾದರೆ ಅಗ್ನಿಪ್ರವೇಶವನ್ನು ಮಾಡುವೆನು" ಎಂದನು.

ಈ ಮಾತುಗಳನ್ನು ಕೇಳಿದ ಬ್ರಾಹ್ಮಣನು "ನನ್ನ ಮಕ್ಕಳನ್ನು ರಕ್ಷಿಸಲು ಬಲರಾಮ, ಶ್ರೀಕೃಷ್ಣ, ಪ್ರದ್ಯುಮ್ನ ಅನಿರುದ್ಧ ಮುಂತಾದವರಿಂದ ಸಾಧ್ಯವಿಲ್ಲ. ಹೀಗಿರುವಾಗ ಅವರಿಗಿಂತ ಅಧಮನಾದ ನಿನ್ನಿಂದ ಸಾಧ್ಯವೇ?" ಎಂದನು. ಆ ಮಾತುಗಳನ್ನು ಕೇಳಿದ ಅರ್ಜುನನು "ನಾನು ಸಂಕರ್ಷಣ, ಶ್ರೀಕೃಷ್ಣ ಮುಂತಾದವರಂತೆ ಅಲ್ಲ. ರುದ್ರನನ್ನು

ಬಾಹುಯುದ್ಧದಿಂದ ತೃಪ್ತಿಪಡಿಸಿದವನು. ನಿನ್ನ ಮಕ್ಕಳನ್ನು ಮೃತ್ಯುವೇ ಕರೆದುಕೊಂಡು ಹೋಗಿದ್ದರೂ ಅವನನ್ನೂ ಜಯಿಸಿ ಹಿಂದಿರುಗಿಸಿಕೊಂಡು ಬರುವೆನು'' ಎಂದನು.

ಆ ಬ್ರಾಹ್ಮಣನು ತನ್ನ ಮನೆಗೆ ಅರ್ಜುನನ್ನು ಕರೆದುಕೊಂಡು ಹೋದನು. ಬ್ರಾಹ್ಮಣನ ಪತ್ನಿಯು ಪ್ರಸವಿಸುವ ಕಾಲದಲ್ಲಿ ಅರ್ಜುನನು ಪ್ರಸವಗೃಹದೊಳಗೆ ನುಸಿಯೂ ಪ್ರವೇಶಿಸದಂತೆ ಬಾಣಗಳ ಕೋಟೆಯನ್ನು ಕಟ್ಟಿದನು. ಬ್ರಾಹ್ಮಣನ ಪತ್ನಿಯು ಪ್ರಸವಿಸಿದಳು. ಮಗುವು ಅದೃಶ್ಯವಾಯಿತು. ಬ್ರಾಹ್ಮಣನು ಅರ್ಜುನನ ಸಾಮರ್ಥ್ಯವನ್ನು ಹೀಯಾಳಿಸಿದನು. ಅರ್ಜುನನು ಯಮಲೋಕಕ್ಕೂ ಇತರ ಎಲ್ಲಾ ಲೋಕಗಳಿಗೂ ಹೋಗಿ ಬ್ರಾಹ್ಮಣಪುತ್ರನನ್ನು ಕಂಡು ಹಿಡಿಯಲು ಸಾಧ್ಯವಾಗದೆ ಅಗ್ನಿಪ್ರವೇಶವನ್ನು ಮಾಡಲು ಸಿದ್ಧನಾದನು.

ಆಗ ಶ್ರೀಕೃಷ್ಣದೇವನು ಅರ್ಜುನನನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು. ಏಳು ದ್ವೀಪಗಳನ್ನೂ ಏಳು ಸಮುದ್ರಗಳನ್ನೂ ಲೋಕಾಲೋಕಪರ್ವತವನ್ನೂ ದಾಟಿ ಅಂಧಂತಮಸ್ಸಿನ ಕೊನೆಯಲ್ಲಿ ೨೫ ಕೋಟಿ ಯೋಜನದೂರದಲ್ಲಿರುವ ಅನಂತಾಸನಲೋಕಕ್ಕೆ ಹೋದನು. ಅಲ್ಲಿ ಮಲಗಿರುವ ತನ್ನ ಅನಂತಾಸನ ಎಂಬ ರೂಪವನ್ನು ಈ ಬ್ರಾಹ್ಮಣನ ಬಾಲಕರನ್ನೂ ತೋರಿಸಿದನು. ಅನಂತರೂಪಿಯಾದ ಶ್ರೀಹರಿಯು ನರನ ಅವತಾರವಾಗಿರುವ ಅರ್ಜುನನಿಗೂ ನಾರಾಯಣನ ಅವತಾರವಾಗಿರುವ ಶ್ರೀಕೃಷ್ಣದೇವನಿಗೂ ಅವತಾರಕಾರ್ಯವು ಮುಗಿಯಿತೆಂದೂ ಕೂಡಲೇ ಸ್ವಸ್ಥಾನಗಳಿಗೆ ಹಿಂದಿರುಗಬೇಕೆಂದೂ ಇದನ್ನು ಜ್ಞಾಪಕಪಡಿಸುವುದಕ್ಕಾಗಿಯೇ ಬ್ರಾಹ್ಮಣಕುಮಾರರೆಲ್ಲರನ್ನೂ ತಾನೇ ಕರೆದುಕೊಂಡು ಬಂದಿರುವುದಾಗಿಯೂ ಹೇಳಿದನು. ಶ್ರೀಕೃಷ್ಣದೇವನ ಈ ಪ್ರಭಾವವನ್ನು ತಿಳಿದ ಅರ್ಜುನನು ತನ್ನಿಂದ ಹಿಂದೆ ನಡೆದ ಎಲ್ಲಾ ವ್ಯಾಪಾರಗಳೂ ಶ್ರೀಕೃಷ್ಣದೇವನ ಅನುಗ್ರಹದಿಂದಲೇ ಏರ್ಪಟ್ಟಿರುವುದಾಗಿ ನಂಬಿದನು. ಈ ಸಂದರ್ಭದಲ್ಲಿ ಅರ್ಜುನನು "ನಾನು ಶ್ರೀಕೃಷ್ಣನಲ್ಲ, ರುದ್ರನ ಜೊತೆಯಲ್ಲಿ ಬಾಹುಯುದ್ಧಮಾಡಿದವನು'' ಎಂದು ಹೇಳಿ ಶ್ರೀಕೃಷ್ಣದೇವನನ್ನು ಹೀಯಾಳಿಸಿರುವನು.

(೩) ಪ್ರದ್ಯುಮ್ನ, ಉದ್ಧವ, ಸಾಂಬ, ಅನಿರುದ್ಧ ಮುಂತಾದವರು - ಸುಭದ್ರೆಯನ್ನು ಅರ್ಜುನನಿಗೆ ಕೊಟ್ಟು ವಿವಾಹ ಮಾಡುವುದು ಶ್ರೀಕೃಷ್ಣದೇವನಿಗೆ ಇಷ್ಟವೆಂಬ ವಿಷಯವು ಇವರೆಲ್ಲರಿಗೂ ತಿಳಿದಿತ್ತು. ಆದರೂ ಇವರೆಲ್ಲರೂ ಬಲವತ್ತರವಾದ ವಿರೋಧವನ್ನು ಮಾಡಿರುವರು.

(೪) ಸಾತ್ಯಕಿ - ಕೆಲವು ಸಂದರ್ಭಗಳಲ್ಲಿ ಅರ್ಜುನನೂ ಸರ್ವೋತ್ತಮನಾದ ಶ್ರೀಕೃಷ್ಣದೇವನೂ ಸಮರೆಂದು ಸಾತ್ಯಕಿಯು ತಿಳಿದುಕೊಂಡಿರುವನು.

(೫) ಧರ್ಮರಾಜ - ಜರಾಸಂಧನನ್ನು ಸಂಹರಿಸುವುದಕ್ಕೆ ಅಜೇಯನಾದ ಶ್ರೀಕೃಷ್ಣದೇವನನ್ನು ಕಳುಹಿಸುವ ವಿಷಯದಲಿ ಧರ್ಮರಾಜನು ಹೆದರಿದನು. ಆದ್ದರಿಂದ ಶ್ರೀಕೃಷ್ಣದೇವನು ಒಬ್ಬ ಮನುಷ್ಯನೆಂಬ ಅಭಿಪ್ರಾಯವು ಧರ್ಮರಾಜನಲ್ಲಿ ಯಾವಾಗಲೂ ಏರ್ಪಡುತ್ತಿತ್ತು ಎಂದು ಸ್ಪಷ್ಟವಾಗುತ್ತಿದೆ.

(೬) ವಿದುರ - ಜರಾಸಂಧನು ದುರ್ಯೋಧನನ ಸಭೆಗೆ ಬಂದರೆ ಅವನನ್ನು ದುರ್ಯೋಧನಾದಿಗಳು ಕಟ್ಟಿಬಿಡಬಹುದು. ಆದ್ದರಿಂದ ಅವನು ದುರ್ಯೋಧನಾದಿಗಳ ಸಭೆಗೆ ಬರಕೂಡದು ಎಂದು ಹೆದರಿದನು.

(೭) ನಕುಲ - ಪ್ರಪಂಚದಲ್ಲಿರುವ ದೇವತೆಗಳು, ದೈತ್ಯರು, ಮನುಷ್ಯರು ಮುಂತಾದ ಸರ್ವರೂ ರಾಜಸೂಯ ಯಾಗವನ್ನು ಮಾಡುವವನಿಗಾಗಿ ಕಾಣಿಕೆಯನ್ನು ಸಮರ್ಪಿಸಲೇಬೇಕು. ಇದಕ್ಕಾಗಿ ನಕುಲನು ಶ್ರೀಕೃಷ್ಣದೇವನೂ ಸಹಕಾಣಿಕೆಯನ್ನು ಸಮರ್ಪಿಸಲೇ ಬೇಕು. ಇದಕ್ಕಾಗಿ ನಕುಲನು, ಶ್ರೀಕೃಷ್ಣದೇವನೂ ಸಹ ಕಾಣಿಕೆಯನ್ನು ಕೊಡುಬೇಕೆಂದು ಹೇಳಿ ಕಳುಹಿಸಿರುವನು.

(೮) ಸಹದೇವ - ಕೌರವ ಕುಲನಾಶವು ಶ್ರೀಕೃಷ್ಣದೇವನು ಹೇಳಿದ ಮಾತುಗಳನ್ನು ಕೇಳಿದ್ದರಿಂದ ಏರ್ಪಟ್ಟಿತು ಎಂದು ಅವನ ಬುದ್ಧಿಯನ್ನು ತಿರಸ್ಕರಿಸಿರುವನು.

(೯) ದೇವಕೀ, ವಸುದೇವ ಮುಂತಾದ ಶ್ರೀಕೃಷ್ಣನ ಬಂಧುಗಳು - ಇವರೆಲ್ಲರೂ ಶ್ರೀಕೃಷ್ಣದೇವನನ್ನು ಮನುಷ್ಯನೆಂದು ತಿಳಿದರು.

(೧೦) ಭೀಷ್ಮರು - ಅಂಬಾ ಎಂಬುವಳು ಪರಶುರಾಮದೇವರನ್ನು ಶರಣುಹೊಂದಿದಳು . ಪರಶುರಾಮ ದೇವರು ತನ್ನ ಶಿಷ್ಯನಾದ ಭೀಷ್ಮರನ್ನು ಕರೆದು ಅವಳನ್ನು ವಿವಾಹಮಾಡಿಕೋ ಎಂದು ಆಜ್ಞಾಪಿಸಿದರು. ಭೀಷ್ಮರು ಅವರ ಮಾತುಗಳಿಗೆ ಮರ್ಯಾದೆಯನ್ನು ಕೊಡಲಿಲ್ಲ. ಅವರನ್ನು ಅಪಮಾನ ಮಾಡಿದರು. ಅಷ್ಟೇ ಅಲ್ಲ, ಅವರೊಡನೆ ಯುದ್ಧವನ್ನೂ ಮಾಡಿದರು.

(೧೧) ದ್ರೋಣ, ಕೃಪಾ ಅಶ್ವತ್ಥಾಮಾಚಾರ್ಯರು - ಮಹಾಭಾರತಯುದ್ಧವು ನಡಿಯುತ್ತಿರುವಾಗ ಅರ್ಜುನನ ಸಾರಥಿಯಾಗಿರುವ ಶ್ರೀಕೃಷ್ಣದೇವನ ಮೇಲೆ ಬಾಣಗಳನ್ನು ಬಿಡಬೇಕಾದ ಅವಶ್ಯಕತೆಯಿರಲಿಲ್ಲ. ಆದರೆ ಅಖಂಡವಾಗಿ ಬಾಣಗಳ ಮಳೆಗಳನ್ನು ಸುರಿಸಿದರು. ಇದರಿಂದ ಸಾರಥಿಯಾದ ಶ್ರೀಕೃಷ್ಣನನ್ನು ಕೂಂದುಬಿಟ್ಟರೆ ಅರ್ಜುನನ್ನು ಸುಲಭವಾಗಿ ಕೊಂದುಬಿಡಬಹುದು ಎಂದು ನಿಶ್ಚೈಸಿದರು.

(೧೨) ದೇವತೆಗಳು - ಭೂಮಿಯಲ್ಲಿ ಅವತರಿಸಿರುವಾಗ ಭಾಗವತಧರ್ಮವನ್ನು ಬಿಟ್ಟಿದ್ದಕ್ಕೆ ಉದಾಹರಣೆಯನ್ನು ಕೊಟ್ಟಿರುವೆವು. ಮೂಲರೂಪದಲ್ಲಿರುವಾಗಲೂ ಸಹ ಗೋವರ್ಧನಪರ್ವತೋದ್ಧಾರ ಮುಂತಾದ ಸಂದರ್ಭಗಳಲ್ಲಿ ಶ್ರೀಕೃಷ್ಣದೇವನ ಜೊತೆಯಲ್ಲಿ ಇಂದ್ರ ಮುಂತಾದ ದೇವತೆಗಳು ವಿರೋಧವನ್ನು ಮಾಡಿರುವುದುಂಟು. ಉತ್ತಮರಾದ ದೇವತೆಗಳೇ ಶ್ರೀಕೃಷ್ಣದೇವನಲ್ಲಿ ವಿರೋಧವನ್ನು ಮಾಡಿರುವಾಗ ಋಷಿಗಳು, ಮನುಷ್ಯರು, ಗಂಧರ್ವರು ಮುಂತಾದ ಸಾಮಾನ್ಯಜೀವರು ವಿರೋಧವನ್ನು ಮಾಡಿರುವ ವಿಷಯದಲ್ಲಿ ಆಶ್ಚರ್ಯವೇನಿದೆ?

ಒಂದೊಂದು ಜನ್ಮಗಳಲ್ಲಿಯೂ ವಾಯುದೇವರನ್ನೂ ಭಾರತೀದೇವಿಯರನ್ನೂ ಬಿಟ್ಟು ಉಳಿದ ಜೀವರಲ್ಲಿ ಅಜ್ಞಾನವು ಇದ್ದೇ ಇದೆ. ಈ ಅಜ್ಞಾನದಿಂದ ಶ್ರೀಕೃಷ್ಣದೇವನನ್ನು ಯಾವಾಗಲೂ ಅಪಮಾನ ಮಾಡುತ್ತಿರುವರು. ಆದ್ದರಿಂದ ಪುರುಷರಲ್ಲಿ ವಾಯುದೇವರೊಬ್ಬರೇ ಶುದ್ಧವಾದ ಭಾಗವತಧರ್ಮದಲ್ಲಿ ಯಾವಾಗಲೂ ಆಸಕ್ತರಾಗಿರುವವರು. ಸ್ತ್ರೀಯರಲ್ಲಿ ಅವರ ತಾಯಿಯೂ ಶ್ರೀಹರಿಯ ಪತ್ನಿಯೂ ಆಗಿರುವ ಮಹಾಲಕ್ಷ್ಮೀದೇವಿಯೂ ಪತ್ನಿಯಾಗಿರುವ ಭಾರತೀದೇವಿಯೂ ಇಬ್ಬರೇ ಅವರಂತೆ ಶುದ್ಧವಾದ ಭಾಗವತಧರ್ಮದಲ್ಲಿ ನಿಷ್ಠೆಯುಳ್ಳವರಾಗಿರುವವರು. ಆದ್ದರಿಂದಲೇ ಲಕ್ಷ್ಮೀದೇವಿಯರೂ ವಾಯುದೇವರೂ ಭಾರತೀದೇವಿಯರೂ

ಪರಶುಕ್ಲತ್ರಯ ಅಂದರೆ ಅತ್ಯಂತ ಪರಿಶುದ್ಧರಾಗಿರುವವರು ಮೂವರು ಎಂದೆನಿಸುವರು.

ಮೇಲ್ಕಂಡ ವಿವರಣದಿಂದ ಭೀಮಸೇನದೇವರು ಕಾಮ್ಯವಾದ ಅಸ್ತ್ರವಿದ್ಯೆಯಲ್ಲಿ ಅಕ್ಕರೆಯನ್ನು ತೋರಿಸಲಿಲ್ಲವೆಂದು ಸ್ಪಷ್ಟವಾಯಿತು.

## ಅಸ್ತ್ರವಿದ್ಯೆಯ ಪರೀಕ್ಷೆ

ದ್ರೋಣಾಚಾರ್ಯರ ಶಿಷ್ಯರಾಗಿರುವ ಎಲ್ಲಾ ರಾಜಕುಮಾರರೂ ಅಸ್ತ್ರವಿದ್ಯೆಯಲ್ಲಿ ನಿಪುಣರಾದರು. ಅವರೆಲ್ಲರ ಪಾಂಡಿತ್ಯವನ್ನು ಪರೀಕ್ಷಿಸುವುದಕ್ಕಾಗಿ ರಂಗಸ್ಥಳದಲ್ಲಿ ಎಲ್ಲರನ್ನೂ ಒಟ್ಟುಗೂಡಿಸಿದರು. ಆರಂಭದಲ್ಲಿ ತಮ್ಮ ಗುರುಗಳಾಗಿರುವ ಶ್ರೀಪರಶುರಾಮದೇವರನ್ನು ರಕ್ತಚಂದನ, ಒಳ್ಳೆಯ ಪುಷ್ಪಗಳು, ಆಯುಧಗಳು, ಬೆಲ್ಲದ ಭಕ್ಷ್ಯಗಳು ಮುಂತಾದವುಗಳಿಂದ ತೃಪ್ತಿಪಡಿಸಿದರು. ರಾಜಕುಮಾರರನ್ನು ನೋಡಿ ತಮ್ಮ ತಮ್ಮ ವಿದ್ಯೆಗಳಲ್ಲಿರುವ ಚಾತುರ್ಯವನ್ನು ತೋರಿಸುವಂತೆ ಆಜ್ಞಾಪಿಸಿದರು.

ಆ ಬಾಲಕರೆಲ್ಲರೂ ಭೀಷ್ಮ ದ್ರೋಣ, ವಿದುರ, ಗಾಂಧಾರೀ, ಧೃತರಾಷ್ಟ್ರ ಕುಂತೀ ಮುಂತಾದ ಹಿರಿಯರನ್ನೂ ರಾಜ ಸಮೂಹವನ್ನೂ ನಮಸ್ಕರಿಸಿದರು. ಅವರವರು ಅಭ್ಯಾಸಮಾಡಿರುವ ವಿದ್ಯೆಗಳನ್ನು ತೋರಿಸಿದರು. ಸರ್ವರೂ ತೋರಿಸಿ ಮುಗಿದ ಕೂಡಲೇ ಅಶ್ವತ್ಥಾಮಾಚಾರ್ಯರು ದ್ರೋಣಾಚಾರ್ಯರಿಂದ ತಿಳಿದಿರುವ ಮಹಾಸ್ತ್ರಗಳನ್ನು ತೋರಿಸಿದರು. ಮನಸ್ಸಿನಿಂದ ಯೋಚಿಸಲೂ ಅಶಕ್ಯವಾದ ಅಸ್ತ್ರಗಳನ್ನು ಎಲ್ಲರಿಗಿಂತಲೂ ಅಧಿಕವಾಗಿ ತೋರಿಸಿದರು.

ಅನಂತರದಲ್ಲಿ ಅರ್ಜುನನು ಅಶ್ವತ್ಥಾಮಾಚಾರ್ಯರಿಗಿಂತಲೂ ಅಧಿಕವಾಗಿ ಮಹಾಸ್ತ್ರಗಳನ್ನು ತೋರಿಸಿದನು. ಹಾರುತ್ತಿರುವ ನುಸಿಯ ಕಾಲನು ಗುರಿಯಿಟ್ಟು ಹೊಡೆದನು. ಹಾರುತ್ತಿರುವ ಪಕ್ಷಿಯ ರೆಪ್ಪೆಯಲ್ಲಿರುವ ನಿರ್ದಿಷ್ಟವಾದ ರೋಮವನ್ನು ಗುರುತಿಸಿ ಹೊಡೆದನು. ಈ ರೀತಿಯಾದ ಅಸಂಖ್ಯವಾದ ಅಸ್ತ್ರಗಳನ್ನು ತೋರಿಸಿದನು.

ಅದೇ ಸಮಯದಲ್ಲಿ ಕರ್ಣನು ಅಲ್ಲಿಗೆ ಬಂದನು. ಪರಶುರಾಮದೇವನಿಂದ ಅಭ್ಯಾಸಮಾಡಿರುವ ಅಸ್ತ್ರಸಂಪತ್ತನ್ನು ತೋರಿಸಿದನು. ಅರ್ಜುನನಿಗಿಂತಲೂ ಅಸ್ತ್ರವಿದ್ಯೆಯಲ್ಲಿ ಅಧಿಕಪಾಂಡಿತ್ಯವನ್ನು ತೋರಿಸಿ ಎಲ್ಲಾ ರಾಜರುಗಳಿಂದಲೂ ಗೌರವಿಸಲ್ಪಟ್ಟನು. ಕುಂತೀದೇವಿಯು ಕರ್ಣನನ್ನು ನೋಡಿದಳು. ತನ್ನ ಮಗನೆಂದು ತಿಳಿದಳು. ಆದರೆ ನಾಚಿಕೆಯಿಂದ ಅವನೊಡನೆ ಮಾತಾಡಲಿಲ್ಲ. ಅರ್ಜುನನು ಕರ್ಣನ ಪಾಂಡಿತ್ಯವನ್ನು ನೋಡಿ ಸಹಿಸಲಿಲ್ಲ. ಅವನನ್ನು ಯುದ್ಧಕ್ಕಾಗಿ ಕರೆದನು.

ಕ್ಷತ್ರಿಯನಾದವನ್ನು ಕ್ಷತ್ರಿಯನಲ್ಲದವನನ್ನು ಯುದ್ಧಕ್ಕೆ ಕರೆಯುವುದು ಧರ್ಮಕ್ಕೆ ವಿರುದ್ಧವಾದುದು. ಇದನ್ನು ತಿಳಿದ ಶ್ರೀಭೀಮಸೇನದೇವರು ಅರ್ಜುನನನ್ನು ತಡೆದು ನಿಲ್ಲಿಸಿ ಕುದುರೆಯನ್ನು ಓಡಿಸುವ ಚಾಟಿಯನ್ನು ಕರ್ಣನ ಕೈಯಲ್ಲಿ ಕೊಟ್ಟರು.

ಇದರಿಂದ " ಎಲೋ ಕರ್ಣಾ, ಬ್ರಾಹ್ಮಣಜಾತಿಗೆ ಹೇಳಿರುವ ಉಪನಯನ ಮುಂತಾದ ಸಂಸ್ಕಾರಗಳು ಯಾರಿಗೆ ಏರ್ಪಡಲಿಲ್ಲವೂ ಅವನು ಬ್ರಾಹ್ಮಣೋತ್ತಮನೆನಿಸುವುದಿಲ್ಲ. ವ್ರಾತ್ಯನೆನಿಸುವನು. ಅವನಂತೆ ಕ್ಷತ್ರಿಯ

ಜಾತಿಯಲ್ಲಿ ಹುಟ್ಟಿದವನೂ ಸಹ ಕ್ಷತ್ರಿಯಜಾತಿಗೆ ಹೇಳಿರುವ ಸಂಸ್ಕಾರಗಳಿಲ್ಲದವನಾದರೆ ಕ್ಷತ್ರಿಯನೆನಿಸುವುದಿಲ್ಲ.. ನೀನು ಸೂತಜಾತಿಯಲ್ಲಿ ಹುಟ್ಟಿದವನು ಯುದ್ಧವನ್ನು ಮಾಡುವುದು ಕ್ಷತ್ರಿಯರ ಧರ್ಮವೆನಿಸುತ್ತದೆ. ರಥವನ್ನು ಓಡಿಸುವುದು ನಿನ್ನ ಧರ್ಮವಾಗಿದೆ. ಆದ್ದರಿಂದ ಈ ಚಾಟಿಯನ್ನು ತೆಗೆದುಕೊಂಡು ಯಾರಾದರೂ ಒಬ್ಬ ರಾಜನ ರಥವನ್ನು ಓಡಿಸು'' ಎಂದು ಶ್ರೀಭೀಮಸೇನದೇವರು ತಿಳಿಸಿದರು. ಕರ್ಣನು ಯಾವ ವಿಧವಾದ ಉತ್ತರವನ್ನೂ ಕೊಡಲು ಶಕ್ತನಾಗಲಿಲ್ಲ.

ಭೀಮಸೇನದೇವರ ಈ ವ್ಯಾಪಾರವನ್ನು ನೋಡಿದ ದುರ್ಯೋಧನನು ತಂದೆಯಾದ ಧೃತರಾಷ್ಟ್ರನನ್ನು ನಮಸ್ಕರಿಸಿದನು. " ತಂದೆಯೇ ಈ ಕರ್ಣನು ರಾಜನಲ್ಲವಂತೆ. ಆದ್ದರಿಂದಲೇ ಅರ್ಜುನನೊಡನೆ ಯುದ್ಧವನ್ನು ಮಾಡಲು ಅನರ್ಹನಂತೆ, ಕರ್ಣನಿಗೆ ನಮ್ಮ ವಶದಲ್ಲಿರುವ ಅಂಗದೇಶದ ರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡುವೆನು. ಆಗ ಕರ್ಣನೂ ಒಬ್ಬ ರಾಜನಾಗಿ ಬಿಡುವನು. ಆ ಮೇಲೆ ಅರ್ಜುನನ ಜೊತೆಯಲ್ಲಿ ಯುದ್ಧವನ್ನು ಮಾಡಲು ಅರ್ಹನಾಗುವನು ನೀವು ಅನುಮತಿಯನ್ನು ಕೊಡಬೇಕು'' ಎಂದು ಪ್ರಾರ್ಥಿಸಿದನು.

ಈ ಮಾತುಗಳನ್ನು ಕೇಳಿದ ಧೃತರಾಷ್ಟ್ರನು ಸಂಮತಿಸಿದನು. ಅನಂತರದಲ್ಲಿ ದುರ್ಯೋಧನನು ಕರ್ಣನನ್ನು ಅಂಗ ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದನು. ಧೃತರಾಷ್ಟ್ರನೂ ಸಹ ಪಕ್ಷಪಾತದಿಂದ ಮಗನ ಅಧೀನನಾದನು. ಕರ್ಣನಿಗೆ ಪಟ್ಟಾಭಿಷೇಕವು ಏರ್ಪಟ್ಟ ಸಮಾಚಾರವನ್ನು ತಿಳಿದು ಅವನ ತಂದೆಯಾಗಿರುವ ಅಧಿರಥನು ಅಲ್ಲಿಗೆ ಬಂದನು. ಸಕಲ ರಾಜರುಗಳ ಸಭೆಯ ಮಧ್ಯದಲ್ಲಿ ಕರ್ಣನು ಅಧಿರಥನನ್ನು ನಮಸ್ಕರಿಸಿದನು. ಇದನ್ನು ನೋಡಿದ ಸಕಲ ಸಜ್ಜನರೂ ಸಂತುಷ್ಟರಾದರು.

ಅನಂತರದಲ್ಲಿ ಭೀಮಸೇನದೇವರೂ ದುರ್ಯೋಧನನೂ ಗದಾಯುದ್ಧದಲ್ಲಿ ತಮಗಿರುವ ಪಾಂಡಿತ್ಯವನ್ನು ತಿಳಿಸುವುದಕ್ಕೋಸ್ಕರ ಹೊರಟರು. ಕೋಪದಿಂದ ಗದಾಯುದ್ಧಕ್ಕೆ ಸಿದ್ಧರಾಗಿ ನಿಂತಿರುವ ಇವರಿಬ್ಬರನ್ನು ನೋಡಿದ ಅಲ್ಲಿರುವ ದೇವತೆಗಳೂ ಅಸುರರೂ ಮನುಷ್ಯರೇ ಮೊದಲಾದವರೂ ಎರಡು ವಿಭಾಗದಿಂದ ಯುಕ್ತರಾದರು.

ದೇವತೆಗಳೂ ದೇವತೆಗಳಿಗೆ ಅನುಕೂಲರಾಗಿರುವವರೂ " ಜಯ ಭೀಮ ಮಹಾಬಾಹೋ'' ಎಂದು ಹೇಳುತ್ತಾ ಭೀಮಸೇನದೇವರಿಗೆ ಜಯವನ್ನು ಬಯಸಿದರು. ದೈತ್ಯರೂ ದೈತ್ಯರಿಗೆ ಅನುಕೂಲರಾಗಿರುವವರೂ " ಜಯ ದುರ್ಯೋಧನ'' ಎಂದು ಹೇಳುತ್ತಾ ದುರ್ಯೋಧನನಿಗೆ ಜಯವನ್ನು ಬಯಸಿದರು. ಅಲ್ಲಿದ್ದ ಮನುಷ್ಯರಲ್ಲಿಯೂ ಯೋಗ್ಯರು ಭೀಮಸೇನದೇವರಿಗೂ ಅಯೋಗ್ಯರು ದುರ್ಯೋಧನನಿಗೂ ಜಯವನ್ನು ಬಯಸಿದರು. ಪ್ರಪಂಚವೇ ಎರಡು ವಿಧವಾಗಿ ವಿಂಗಡಿಸಲ್ಪಟ್ಟು ಹುಂಕಾರವನ್ನೂ ಘಟ್ಕಾರವನ್ನೂ ಮಾಡುತ್ತಾ ಯುದ್ಧಕ್ಕೆ ಸಿದ್ಧವಾಯಿತು.

ಇದನ್ನು ನೋಡಿದ ದ್ರೋಣಾಚಾರ್ಯರು ಭೀಮಸೇನದೇವರಲ್ಲಿಯೂ ದುರ್ಯೋಧನನಲ್ಲಿಯೂ ಇರುವ ಅಭಿಮಾನದಿಂದ, ಕುಪಿತರಾದ ದೇವತೆಗಳೇ ಮೊದಲಾದವರಿಂದ ಲೋಕನಾಶವಾದೀತೆಂದು ತಿಳಿದರು. ಪಕ್ಕದಲ್ಲಿರುವ ಅಶ್ವತ್ಥಾಮನನ್ನು ಕರೆದರು. ಭೀಮ ದುರ್ಯೋಧನರ ಗದಾಯುದ್ಧವನ್ನು ನಿಲ್ಲಿಸೆಂದರು. ಅಶ್ವತ್ಥಾಮಾಚಾರ್ಯರು ಬೀಮಸೇನದೇವರು ಮತ್ತು ದುರ್ಯೋಧನನ ಮಧ್ಯದಲ್ಲಿ ಬಂತು ನಿಂತರು. ನಿಮ್ಮ ನಿಮ್ಮ

ಯೋಗ್ಯತೆಳಲ್ಲಿ ನಿಮ ನಿಮಗೆ ಸಮಾನರು ಯಾರೂ ಇಲ್ಲ ಎಂದರು. ಅವರಿಬ್ಬರೂ ಯುದ್ಧವನ್ನು ನಿಲ್ಲಿಸಿದರು. ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿದರು. ದೇವತೆಗಳೂ ದೈತ್ಯರೂ ಯುದ್ಧಕ್ಕೆ ಸಿದ್ಧರಾದುದನ್ನು ಬ್ರಹ್ಮದೇವರು ನೋಡಿದರು. ನೀವು ಕಾಲಾಂತರದಲ್ಲಿ ನಿಜಾಂಶವನ್ನು ತಿಳಿಯುವಿರಿ. ಈಗ ನಿಮ್ಮ ನಿಮ್ಮ ಮನೆಗಳಿಗೆ ಹೋಗಿರಿ ಎಂದರು. ಎಲ್ಲರೂ ಹಿಂದಿರುಗಿದರು. ಬ್ರಹ್ಮದೇವರೂ ರುದ್ರದೇವರಿಂದ ಸಹಿತರಾಗಿ ತಮ್ಮ ತಮ್ಮ ಲೋಕಗಳಿಗೆ ಹಿಂದಿರುಗಿದರು.

ದುರ್ಯೋಧನನು ಹೋಗುವಾಗ ಕರ್ಣನ ಕೈಯನ್ನು ಹಿಡಿದುಕೊಂಡು ಹೋದನು. ಶ್ರೀಭೀಮಸೇನ ದೇವರು ಹಿಂದಿರುಗುವಾಗ ಅರ್ಜುನನ ಕೈಯನ್ನು ಹಿಡಿದುಕೊಂಡು ಹೋದರು. ಅರ್ಜುನನಿಂದ ಕರ್ಣನನ್ನು ಕೊಲ್ಲಿಸಬೇಕೆಂದು ಭೀಮಸೇನದವರು ನಿಶ್ಚಯಿಸಿದರು. ಕರ್ಣನಿಂದ ಅರ್ಜುನನನ್ನು ಕೊಲ್ಲಿಸಬೇಕೆಂದು ದುರ್ಯೋಧನನು ತೀರ್ಮಾನಿಸಿದನು. ತಮ್ಮ ತಮ್ಮ ತೀರ್ಮಾನಗಳನ್ನು ನೆರವೇರಿಸುವುದಕ್ಕಾಗಿ ಅವರಿಬ್ಬರೂ ಎಲ್ಲಾ ವಿಧವಾದ ನೀತಿಗಳನ್ನೂ ಮಾಡಿದರು. ಅರ್ಜುನನು ಉತ್ಕರ್ಷ, ಕೀರ್ತಿ, ಜಯ ಮುಂತಾದವುದಗಳಿಗಾಗಿ ಭೀಮಸೇನದೇವರು ಉದ್ಯೋಗವನ್ನೂ ಇದಕ್ಕೆ ವಿಪರೀತವಾದ ಉದ್ಯೋಗವನ್ನು ದುರ್ಯೋಧನನೂ ಮಾಡಿದರು.

ಭೀಮಸೇನದೇವರಿಗಾಗಿ ಶ್ರೀಕೃಷ್ಣದೇವನೂ ಸಕಲ ದೇವತೆಗಳೂ ಅರ್ಜುನನ ಪಕ್ಷದಲ್ಲಿ ಸೇರಿದರು. ರಾಮಾವತಾರ ಕಾಲದಲ್ಲಿ ಸೂರ್ಯನ ಅವತಾರವಾಗಿ ಹುಟ್ಟಿದ್ದ ಸುಗ್ರೀವನು ಶ್ರೀಹನುಮಂತದೇವರನ್ನು ಆಶ್ರಯಿಸಿದನು. ಅದಕ್ಕಾಗಿ ಎಲ್ಲಾ ದೇವತೆಗಳೂ ಸುಗ್ರೀವನ ಪಕ್ಷದಲ್ಲಿ ಸೇರಿದರು. ದೇವೇಂದ್ರನ ಅವತಾರವಾಗಿರುವ ವಾಲಿಯು ಹನುಮಂತ ದೇವರನ್ನು ಆಶ್ರಯಿಸಲಿಲ್ಲ. ಅದಕ್ಕಾಗಿ ಯಾವ ದೇವತೆಯೂ ವಾಲಿಯ ಪಕ್ಷದಲ್ಲಿ ಸೇರಲಿಲ್ಲ. ಇದನ್ನು ತಿಳಿದ ದೇವೇಂದ್ರನು ಪಶ್ಚಾತ್ತಾಪದಿಂದ ಯುಕ್ತನಾಗಿ ಶ್ರೀಕೃಷ್ಣಾವತಾರಕಾಲದಲ್ಲಿ ವಾಯುದೇವರ ಅವತಾರವಾಗಿರುವ ಭೀಮಸೇನದೇವರ ತಮ್ಮನಾಗಿ ಅರ್ಜುನ ಎಂಬ ಹೆಸರಿನಿಂದ ಹುಟ್ಟಿದನು. ಅದಕ್ಕಾಗಿ ಭೀಮಸೇನದೇವರೂ ಅರ್ಜುನನಿಗೆ ಎಲ್ಲಾ ವಿಧವಾದ ಶ್ರೇಯಸ್ಸು ಏರ್ಪಡುವಂತೆ ಮಾಡಿದರು. ದುರ್ಯೋಧನನಿಗಾಗಿ ಎಲ್ಲಾ ದೈತ್ಯರೂ ದಾನವರೂ ಕರ್ಣನ ಪಕ್ಷದಲ್ಲಿ ಸೇರಿದರು.

## ರಾಜಕುಮಾರರಿಂದ ಗುರುದಕ್ಷಿಣೆ

ಎಲ್ಲಾ ರಾಜಕುಮಾರರ ವಿದ್ಯಾಭ್ಯಾಸವು ಮುಗಿಯಿತು. ಗುರುದಕ್ಷಿಣೆಯ ಪ್ರಶ್ನೆಯು ಬಂತು. " ಪಾಂಚಾಲದೇಶದ ರಾಜನಾಗಿರುವ ದ್ರುಪದನನ್ನು ಕಟ್ಟಿತಂದುಕೊಡಿರಿ" ಎಂದು ದ್ರೋಣರು ಹೇಳಿದರು. ಎಲ್ಲಾ ಬಾಲಕರೂ "ಸರಿ" ಎಂದರು. ದುರ್ಯೋಧನನ ಮುಂತಾದ ಧೃತರಾಷ್ಟ್ರನ ಮಕ್ಕಳೂ ಕರ್ಣನೂ ಪಾಂಡವರೂ ದ್ರೋಣಾಚಾರ್ಯರಿಂದ ಸಹಿತರಾಗಿ ಪಾಂಚಾಲನಗರಕ್ಕೆ ಹೋದರು.

## ದುರ್ಯೋಧನಾದಿಗಳಿಗೆ ದ್ರುಪದರಾಜನಿಂದ ಪರಾಜಯ

ಆಗ ಭೀಮಸೇನದೇವರು ದುರ್ಯೋಧನಾದಿಗಳ ಅಸಾಮರ್ಥ್ಯವನ್ನು ಚೆನ್ನಾಗಿ ತಿಳಿಸುವುದಕ್ಕಾಗಿ ದ್ರೋಣಾಚಾರ್ಯರನ್ನು ಕುರಿತು ಹೇಳಿದರು. " ಈ ದುರ್ಯೋಧನಾದಿಗಳಿಗೆ ಅಪರಿಹಾರ್ಯವಾದ

ಅಹಂಕಾರವಿದೆ. ಈ ಅಹಂಕಾರವನ್ನು ಮುರಿಯಬೇಕು. ಆದ್ದರಿಂದ ಇವರೇ ಮುಂದೆ ಹೋಗಲಿ. ಇವರಿಗೆ ದ್ರುಪದಮಹಾರಾಜನು ವಶನಾಗುವುದಿಲ್ಲ. ಇವರೆಲ್ಲರೂ ದ್ರುಪದರಾಜನನ್ನು ವಶಪಡಿಸಿಕೊಳ್ಳಲು ಅಸಮರ್ಥರಾಗಿ ಹಿಂದಿರುಗಲಿ. ಆಮೇಲೆ ನಾವು ನಿಮ್ಮ ಶತ್ರುವಾಗಿರುವ ದ್ರುಪದರಾಜನನ್ನು ಕಟ್ಟಿತರುವೆವು. ಈ ವಿಷಯದಲ್ಲಿ ಸಂಶಯವು ಬೇಡ'' ಎಂದರು. ದ್ರೋಣಾಚಾರ್ಯರೂ ಆ ಮಾತುಗಳನ್ನು ಅನುಮೋದಿಸಿದರು. ಪಾಂಡವರೂ ದ್ರೋಣಾಚಾರ್ಯರೂ ನಿಂತರು.

ದುರ್ಯೋಧನಾದಿಗಳು ಕರ್ಣನಿಂದ ಸಹಿತರಾಗಿ ದ್ರುಪದರಾಜನ ಅಂತಃಪುರವನ್ನು ಕುರಿತು ಅತಿವೇಗದಿಂದ ಹೋದರು. ತನ್ನನ್ನು ಸೆರೆಹಿಡಿಯಬೇಕೆಂದು ಬರುತ್ತಿರುವ ಈ ದುರ್ಯೋಧನಾದಿಗಳನ್ನು ದ್ರುಪದನು ನೋಡಿದನು. ಮೂರು ಅಕ್ಷೌಹಿಣೀಸೈನ್ಯದಿಂದ ಸಹಿತರಾಗಿ ತನ್ನ ಅಂತಃಪುರದಿಂದ ಹೊರಟನು. ದ್ರುಪದರಾಜನು ಸೂರ್ಯದೇವನ ಭಕ್ತನು. ಅವನ ಭಕ್ತಿಯಿಂದ ಸಂತುಷ್ಟನಾದ ಸೂರ್ಯದೇವನು "ನಿನ್ನ ಪಟ್ಟಣದ ಸುತ್ತ ಮುತ್ತಲೂ ಒಂದು ಯೋಜನದ ವರೆಗಿನ ಪ್ರದೇಶದಲ್ಲಿ ನಿನ್ನನ್ನು ಜಯಿಸಲು ಯಾರು ಶಕ್ತರಾಗಲಾರರು.'' ಎಂದು ವರವನ್ನು ಕೊಟ್ಟಿರುವನು.

ಆ ವರಬಲದಿಂದ ದ್ರುಪದರಾಜನ ಮೂರು ಅಕ್ಷೌಹಿಣೀಸೈನ್ಯದಲ್ಲಿರುವ ಸೈನಿಕರು ಈ ಬಾಲಕರನ್ನು ಸುತ್ತಿಕೊಂಡವರಾಗಿ ಬಾಣಗಳ ಮಳೆಯನ್ನು ಸುರಿಸಿದನು. ಅದು ಮಾತ್ರವಲ್ಲ. ಆ ಪಟ್ಟಣದಲ್ಲಿ ಹೆಂಗಸರೂ ಬಾಲಕರುಗಳೂ ಮುದುಕರೂ ಮನೆಗಳ ಮಹಡಿಗಳಲ್ಲಿ ನಿಂತವರಾಗಿ ಕಲ್ಲುಗಳನ್ನೂ ಒನಕೆಗಳನ್ನು ಬಿಸಾಡಿದರು. ಸುಖವಾಗಿ ಬೆಳೆದಿರುವ ಈ ಬಾಲಕರೆಲ್ಲರೂ ಪೆಟ್ಟುಗಳನ್ನು ತಾಳಲಾರದೆ ಪಾಂಡವರಿದ್ದ ಸ್ಥಳಕ್ಕೆ ಓಡಿದರು. ಹೆಂಗಸರೂ ಮುದುಕರೂ ಬಾಲಕರೂ ಓಡಿಸಿಕೊಂಡು ಬಂದರು. ದುರ್ಯೋಧನಾದಿಗಳು "ಭೀಮ, ಅರ್ಜುನ, ನಮ್ಮನ್ನು ಕಾಪಾಡಿರಿ'' ಎಂದು ಹೇಳುತ್ತಾ ಬಂದರು.

## ಅರ್ಜುನನು ದ್ರುಪದರಾಜನನ್ನು ಸೆರೆ ಹಿಡಿದನು

ಈ ಮಾತಗಳನ್ನು ಕೇಳಿದ ಭೀಮಸೇನದೇವರು ರಥದಲ್ಲಿ ಧನ್ನುಸನ್ನೂ ಬಾಣಗಳನ್ನು ಧರಿಸಿ ಕುಳಿತರು. ಅರ್ಜುನನು ಭೀಮಸೇನದೇವರ ಹಿಂದೆ ಹೊರಟನು. ನಕುಲ ಮತ್ತು ಸಹದೇವರು ಅರ್ಜುನನ ರಥದ ಚಕ್ರಗಳ ಸಮೀಪದಲ್ಲಿ ಚಕ್ರರಕ್ಷಕರಾಗಿ ಹೊರಟರು. ಧರ್ಮರಾಜನೂ ದ್ರೋಣಾಚಾರ್ಯರೂ ಮುಂದೆ ನಡೆಯಲಿರುವ ಯುದ್ಧವನ್ನು ನೋಡುತ್ತಾ ನಿಂತರು. ರಥದಲ್ಲಿ ಕುಳಿತು ಮುಂದೆ ಬರುತ್ತಿರುವ ಭೀಮಸೇನದೇವರನ್ನು ನೋಡಿದ ಪಾಂಚಾಲದೇಶದ ಸ್ತ್ರೀಯರೂ ಮುದುಕರೂ ಹುಡುಗರೂ ಹೆದರಿದರು. ಓಡಿಹೋಗಿ ಪಟ್ಟಣದೊಳಗೆ ಪ್ರವೇಶಿಸಿದರು.

ದ್ರುಪದರಾಜನು ಸೈನ್ಯಸಹಿತನಾಗಿ ಭೀಮಸೇನದೇವರನ್ನು ಎದುರಿಸಿ ಬಂದನು. "ವಿಶ್ವಾವಸು" "ಪರಾವಸು" ಎಂಬ ಇಬ್ಬರು ಗಂಧರ್ವರು ದ್ರುಪದರಾಜನಿಗೆ ಮಕ್ಕಳಾಗಿ "ಯುಧಾಮನ್ಯು" "ಉತ್ತಮೌಜಾ" ಎಂಬ ಹೆಸರಿನಿಂದ ಹುಟ್ಟಿದ್ದರು. ಯುಧಾಮನ್ಯುವಿನಲ್ಲಿ "ಧಾತಾ" ಎಂಬ ಸೂರ್ಯನೂ ಉತ್ತಮೌಜಾ ಎಂಬವನಲ್ಲಿ

"ಅರ್ಯಮಾ" ಎಂಬ ಸೂರ್ಯನೂ ಆವಿಷ್ಟರಾಗಿದ್ದರು. ಅವರಿಬ್ಬರೂ ದ್ರುಪದರಾಜನ ಎರಡು ಚಕ್ರಗಳನ್ನು ರಕ್ಷಿಸುತ್ತಿದ್ದರು. ದ್ರುಪದರಾಜನಿಗೆ "ಸತ್ಯಜಿತ್" ಎಂಬ ಇನ್ನೊಬ್ಬ ಮಗನಿದ್ದನು. ಅವನು "ಚಿತ್ರಸೇನ" ಎಂಬ ಗಂಧರ್ವನ ಅವತಾರನಾಗಿರುವನು. ಅವನಲ್ಲಿ "ಮಿತ್ರ" ಎಂಬ ಸೂರ್ಯನ ಆವೇಶವಿತ್ತು. ಈ "ಸತ್ಯಜಿತ್" ಎಂಬವನು ದ್ರುಪದರಾಜನ ಹಿಂಭಾಗದಲ್ಲಿದ್ದು ಅವನನ್ನು ಕಾಪಾಡುತ್ತಿದ್ದನು. ಮುಂಭಾಗದಲ್ಲಿ ಶ್ರೇಷ್ಠವಾದ ರಥದಲ್ಲಿ ಕುಳಿತವನಾಗಿ "ಶಿಖಂಡಿ" ಎಂಬ ಮಗನು ಬಾಣಗಳ ಮಳೆಯನ್ನು ಸುರಿಸುತ್ತಾ ಹೋದನು. ಈ ಶಿಖಂಡಿ ಹಿಂದೆ "ಜನಮೇಜಯ" ಎಂಬ ದ್ರುಪದರಾಜನ ಮಗನು ರಥಾರೂಢನಾಗಿ ಹೋದನು. ಈ ಜನಮೇಜಯನು "ಚಿತ್ರರಥ" ಎಂಬ ಗಂಧರ್ವನ ಅವತಾರವಾಗಿರುವನು. ಅವನಲ್ಲಿ "ತ್ವಷ್ಟಾ" ಎಂಬ ಸೂರ್ಯನ ಆವೇಶವಿದೆ. ಅವನೂ ಬಾಣಗಳ ಮಳೆಯನ್ನು ಸುರಿಸಿದನು.

ಶಿಖಂಡಿಯನ್ನು ಜನಮೇಜಯನನ್ನೂ ಎದುರಿಸಿ ಶ್ರೀಭೀಮಸೇನದೇವರು ಯುದ್ಧವನ್ನು ಮಾಡಿದರು. ಅವರಿಬ್ಬರ ರಥಗಳನ್ನೂ ಧನುಸ್ಸುಗಳನ್ನೂ ಕವಚಗಳನ್ನೂ ಭೀಮಸೇನದೇವರು ನಾಶಮಾಡಿದರು. ಆನೆ, ಕುದುರೆ, ರಥಗಳಿಂದ ಯುಕ್ತವಾದ ದ್ರುಪದರಾಜನ ಸೈನ್ಯವನ್ನು ನಾಶಮಾಡಿದರು. ಯುಧಾಮನ್ಯು, ಉತ್ತಮೌಜಸ್ಸು ಎಂಬವರು ಯುದ್ಧಕ್ಕಾಗಿ ಮುಂದೆ ಬಂದರು. ಅವರಿಬ್ಬರ ರಥಗಳನ್ನೂ ಆಯುಧಗಳನ್ನೂ ಭೀಮಸೇನದೇವರು ನಾಶಮಾಡಿದರು. ದ್ರುಪದರಾಜನು ಭೀಮಸೇನದೇವರ ಕೈಗೆ ಸಿಕ್ಕಿದನು. ಆದರೆ ಭೀಮಸೇನದೇವರು ಅವನನ್ನು ಬಿಟ್ಟುಬಿಟ್ಟರು.

" ಗುರುಗಳಾದ ದ್ರೋಣಾಚಾರ್ಯರಿಗಾಗಿ ಮಾಡಿದ ಪ್ರತಿಜ್ಞೆಯನ್ನು ಅರ್ಜುನನೇ ಪೂರ್ತಿಮಾಡಲಿ. ಗುರುಗಳ ವಿಶೇಷಾನುಗ್ರಹವನ್ನು ಪಡೆಯಲಿ. ಕರ್ಣನು ಯಾವ ದ್ರುಪದರಾಜನನ್ನು ಜಯಿಸಲು ಅಶಕ್ತನಾಗಿ ಓಡಿದನೋ ಆ ದ್ರುಪದರಾಜನನ್ನು ಅರ್ಜುನನು ಕಟ್ಟಿಹಾಕಲಿ. ಇದರಿಂದ ಅರ್ಜುನನೊಡನೆ ಸ್ಪರ್ಧೆಮಾಡುತ್ತಿರುವ ಕರ್ಣನ ಮಾನಭಂಗವಾಗಲಿ" ಎಂಬ ಉದ್ದೇಶದಿಂದಲೇ ದ್ರುಪದರಾಜನು ತನ್ನ ಕೈಗೆ ಸಿಕ್ಕಿದರೂ ಭೀಮಸೇನದೇವರು ಅವನನ್ನು ಹಿಡಿಯಲಿಲ್ಲ.

ಅರ್ಜುನನು ತನ್ನ ಮೇಲೆ ಬಾಣಗಳ ಮಳೆಯನ್ನು ಸುರಿಸುತ್ತಿರುವ ದ್ರುಪದರಾಜನ ರಥದಲ್ಲಿ ಹಾರಿದನು. ಅವನ ಧನುಸ್ಸನ್ನು ಮುರಿದನು. ಸಿಂಹವು ಜಿಂಕೆಯನ್ನು ಹಿಡಿದಂತೆ ಅವನನ್ನು ಹಿಡಿದು ತನ್ನ ರಥಕ್ಕೆ ಹಾರಿದನು. ಆಗ ಅತ್ಯಂತ ಕೋಪದಿಂದ ಯುಕ್ತವಾದ ದ್ರುಪದರಾಜನ ಸೈನ್ಯವು ಅರ್ಜುನನನ್ನು ಸುತ್ತಿಕೊಂಡಿತು. ಭೀಮಸೇನದೇವರು ತನ್ನ ಧನುಸ್ಸಿನಿಂದ ಬಾಣಗಳ ಮಳೆಯನ್ನು ಸುರಿಸಿ ಆ ಸೈನ್ಯವನ್ನು ವೇಗದಿಂದ ಓಡಿಸಿದರು.

ಸತ್ಯಜಿತ್ ಎಂಬ ದ್ರುಪದನ ಮಗನು ಅಸಂಖ್ಯವಾದ ಬಾಣಗಳಿಂದ ಅರ್ಜುನನನ್ನು ಹೊಡೆದನು. ಅರ್ಜುನನು ಸತ್ಯಜಿತ್ ಎಂಬವನ ರಥವನ್ನೂ ಧನುಸ್ಸನ್ನೂ ನಾಶಮಾಡಿದನು. ಪುನಃ ಸೈನ್ಯವನ್ನು ನಾಶಮಾಡುತ್ತಿರುವ ಭೀಮಸೇನದೇವರನ್ನು ಅರ್ಜುನನು ನೋಡಿದನು.

" ಅಣ್ಣಾ, ಈ ದ್ರುಪದಮಹಾರಾಜನು ನಮ್ಮ ತಂದೆಯ ಸ್ನೇಹಿತನು. ಅತ್ಯಂತ ಧಾರ್ಮಿಕನು. ವಿವಾಹ ಮುಂತಾದ ಸಂಬಂಧಕ್ಕೆ ಯೋಗ್ಯನಾದವನು. ಇವನ ಸೈನ್ಯವನ್ನೆಲ್ಲವನ್ನೂ ನೀನು ನಾಶಮಾಡಕೂಡದು. ಗುರುಗಳು

ಹೇಳಿದ ಮಾತುಗಳಿಗೆ ಗೌರವವನ್ನು ಕೊಡುವುದುಕ್ಕೋಸ್ಕರ ಇವನನ್ನೇ ಕರೆದುಕೊಂಡು ಹೋಗೋಣ'' ಎಂದನು. ಈ ಮಾತುಗಳನ್ನು ಕೇಳಿದ ಭೀಮಸೇನದೇವರು ದ್ರುಪದನ ಸೈನ್ಯಗಳನ್ನು ಕೊಲ್ಲುವುದನ್ನು ನಿಲ್ಲಿಸಿದರು. ಅರ್ಜುನನು ಅವನನ್ನೇ ಗುರುಗಳ ಸಮೀಪಕ್ಕೆ ಕರೆದುಕೊಂಡು ಹೊರಟನು.

ಅರ್ಜುನನು ಈ ರೀತಿಯಲ್ಲಿ ಮಾಡಿದ್ದನ್ನು ದ್ರುಪದನು ನೋಡಿ ಅರ್ಜುನನಲ್ಲಿ ವಿಶೇಷವಾದ ಪ್ರೀತಿಯನ್ನು ಮಾಡಿದನು. ಭೀಮಸೇನದೇವರು ಅರ್ಜುನನು ಹಿಂದೆ ಹೊರಟರು. ಹೀಗೆ ಪ್ರಬಲವಾದ ಆಪತ್ತಿನಿಂದ ಹೇಗೋ ಬಿಡುಗಡೆಯನ್ನು ಪಡೆದ ಸೈನ್ಯವು ತುಂಬಾ ಭಯದಿಂದ ಓಡಿತು. ಅರ್ಜುನನು ದ್ರುಪದನನ್ನು ದ್ರೋಣಾಚಾರ್ಯರ ಸನ್ನಿಧಿಯಲ್ಲಿ ನಿಲ್ಲಿಸಿದನು.

ಆಗ ದ್ರೋಣಾಚಾರ್ಯರು ದ್ರುಪದರಾಜನಲ್ಲಿ "ಸ್ನೇಹವು ಇದೆಯೇ ಇಲ್ಲವೇ?'' ಎಂದು ಪ್ರಶ್ನಿಸಿದರು. ಆಗ ಅವನು "ಈಗ ಇದೆ'' ಎಂದನು. ಅದಕ್ಕೆ ದ್ರೋಣಾಚಾರ್ಯರು " ನಿನ್ನ ಸ್ನೇಹವನ್ನು ಯಾವಾಗಲೂ ಬಯಸುವೆನು. ಆದರೆ ರಾಜನಲ್ಲದವನು ನಿನ್ನ ಸ್ನೇಹಿತನಾಗಲಾರನು. ಅದಕ್ಕಾಗಿ ನಾನು ಮಹಾ ಪ್ರಯತ್ನದಿಂದ ನಿನ್ನನ್ನು ತರಿಸಿದೆನು. ಯುದ್ಧವನ್ನು ಮಾಡುವುದು ಬ್ರಾಹ್ಮಣನ ಧರ್ಮವಲ್ಲ. ಆದ್ದರಿಂದ ನಾನು ನಿನ್ನ ಜೊತೆಯಲ್ಲಿ ಯುದ್ಧವನ್ನು ಮಾಡಿ ನನ್ನ ವಶನಾಗುವಂತೆ ಮಾಡಿಕೊಳ್ಳಲಿಲ್ಲ. ನನ್ನ ಶಿಷ್ಯರ ಮೂಲಕವಾಗಿ ನಿನ್ನನ್ನು ತರಿಸಿದೆನು. ಅದೂ ಸಹ ನಿನ್ನ ಸ್ನೇಹಾರ್ಥವಾಗಿಯೇ ಮಾಡಿದೆನು. ನಿನ್ನ ಸ್ನೇಹಕ್ಕಾಗಿಯೇ ನಿನ್ನ ರಾಜ್ಯದಲ್ಲಿ ಅರ್ಧವನ್ನು ಅಪಹರಿಸಿದೆನು. ಗಂಗಾನದಿಯ ದಕ್ಷಿಣತೀರದಲ್ಲಿ ನೀನು ರಾಜನಾಗಿರು. ಉತ್ತರ ತೀರದಲ್ಲಿ ನಾನು ರಾಜನಾಗಿರುವೆನು. ಇಬ್ಬರಲ್ಲಿ ಒಬ್ಬನು ರಾಜನಾಗದಿದ್ದರೆ ನಮ್ಮಿಬ್ಬರಿಗೂ ಸ್ನೇಹವಿರಲಾರದೆಂದು ನೀನು ಹೇಳಿದ ಮಾತುಗಳನ್ನು ಸ್ಮರಿಸು'' ಎಂದು ಹೇಳಿದರು. ಶಿಷ್ಯರಿಂದ ಸಹಿತರಾಗಿ ಹಸ್ತಿನಾವತಿಗೆ ಹೋದರು. ಅಲ್ಲಿ ಸುಖವಾಗಿ ವಾಸಿಸಿದರು.

## ಮಗನೊಡನೆ ದ್ರೋಣಾಚಾರ್ಯರ ಶಸ್ತ್ರಸ್ವೀಕಾರ

ಆಗಲೂ ಯುದ್ಧವು ಬ್ರಾಹ್ಮಣಧರ್ಮವಲ್ಲವೆಂದು ಧನುಸ್ಸನ್ನು ಹಿಡಿಯಲಿಲ್ಲ. ಆಗ ದುರ್ಯೋಧನ ಮುಂತಾದವರು ಭೀಮಸೇನದೇವರಿಂದ ತುಂಬಾ ಹೆದರಿವರಾಗಿ ದ್ರೋಣಾಚಾರ್ಯರ ಕಾಲುಗಳನ್ನು ಹಿಡಿದು ತಮ್ಮನ್ನು ರಕ್ಷಿಸುವುದಕ್ಕಾಗಿ ಧನುಸ್ಸನ್ನು ಕೈಯಲ್ಲಿ ಧರಿಸಬೇಕೆಂದು ಪ್ರಾರ್ಥಿಸಿದರು. ದ್ರೋಣಾಚಾರ್ಯರು ತಮಗೆ ಇಷ್ಟವಿಲ್ಲದಿದ್ದರೂ ಧನುಸ್ಸನ್ನು ಕೈಯಲ್ಲಿ ಹಿಡಿದರು. ಅವರೂ ಅವರ ಮಗನಾದ ಅಶ್ವತ್ಥಾಮಾಚಾರ್ಯರೂ ಪಾಂಡವರ ಜೊತೆಯಲ್ಲಿ ಯುದ್ಧವನ್ನು ಮಾಡಿದರು. ಹೀಗೆ ಶ್ರೀಹರಿಯ ಇಚ್ಛೆಯಿಂದಲೇ ಬ್ರಾಹ್ಮಣರಾದ ದ್ರೋಣಾಚಾರ್ಯರೂ ಅಶ್ವತ್ಥಾಮಾಚಾರ್ಯರೂ ಬ್ರಾಹ್ಮಣ ಧರ್ಮವನ್ನು ಬಿಟ್ಟು ಕ್ಷತ್ರಿಯ ಧರ್ಮವನ್ನು ಪಡೆದರು.

## ದ್ರುಪದನ ಸಂಕಲ್ಪ

ಅರ್ಜುನನಿಂದ ತಾನು ಸೋತದ್ದನ್ನೂ ದ್ರುಪದರಾಜನ ಮುಂದೆ ತನಗೆ ಇಷ್ಟವಿಲ್ಲದಿದ್ದರೂ

ಅರ್ಧರಾಜ್ಯವನ್ನೂ ಬಲಾತ್ಕಾರದಿಂದ ಅವರಿಗೆ ಕೊಡಬೇಕಾದ ಸಂದರ್ಭವು ಏರ್ಪಟ್ಟಿದ್ದನ್ನೂ ಹಗಲಿರುಳೂ ಸ್ಮರಿಸುತ್ತಿರುವ ದ್ರುಪದರಾಜನು ತುಂಬಾ ಸಂಕಟದಿಂದ ಯುಕ್ತನಾದನು. ಭೀಮಸೇನದೇವರ ಮತ್ತು ಅರ್ಜುನನ ಬಲವನ್ನು ಪ್ರತ್ಯಕ್ಷವಾಗಿ ತಿಳಿದನು. ಪಾಂಡವರನ್ನು ಆಶ್ರಯಿಸಿದರೆ ಕ್ಷೇಮವಾಗಿರಬಹುದೆಂದು ತೀರ್ಮಾನಿಸಿದನು. ವಿವಾಹ ಮುಂತಾದ ಸಂಬಂಧಗಳನ್ನು ಬೆಳೆಯಿಸುವುದಕ್ಕೆ ಅರ್ಹನು ಎಂದು ತನ್ನ ವಿಷಯವಾಗಿ ಅರ್ಜುನನು ಹೇಳಿದ ಮಾತುಗಳನ್ನು ಸ್ಮರಿಸಿದನು. ತನ್ನ ಸೈನ್ಯವನ್ನು ಸಂಹರಿಸಕೂಡದು ಎಂದು ಭೀಮಸೇನದೇವರಲ್ಲಿ ಮಾಡಿದ ಪ್ರಾರ್ಥನೆಯಲ್ಲಿರುವ ಮೃದುಸ್ವಭಾವವನ್ನೂ ತಿಳಿದನು. ಅವನ ಮಾತುಗಳಂತೆ ಅರ್ಜುನನನ್ನೇ ಅಳಿಯನಾಗಿ ಮಾಡಿಕೊಳ್ಳಬೇಕೆಂದು ತೀರ್ಮಾನಿಸಿದನು.

ಅರ್ಜುನನಿಗೆ ಪತ್ನಿಯಾಗಲು ಅರ್ಹಳಾಗಿರುವ ಮಗಳೂ ದ್ರೋಣಾಚಾರ್ಯರನ್ನು ಸಂಹರಿಸಲು ಶಕ್ತನಾಗಿರುವ ಮಗನೂ ಹುಟ್ಟಬೇಕೆಂದು ಸಂಕಲ್ಪಿಸಿದನು. ಯಾಜ, ಉಪಯಾಜ, ಎಂಬ ಇಬ್ಬರು ಬ್ರಾಹ್ಮಣರಿಗೆ ಹತ್ತು ಕೋಟಿ ಗೋವುಗಳನ್ನು ಕೊಟ್ಟು ಅವರಿಬ್ಬರನ್ನು ಸಂತೋಷಪಡಿಸಿದನು. ಅವರಿಬ್ಬರೂ ಸಂತುಷ್ಟರಾದರು. ದ್ರುಪರಾಜನಿಂದ ಒಂದು ಯಜ್ಞವನ್ನು ಮಾಡಿಸಿದರು. ಆ ಯಜ್ಞದಲ್ಲಿ ಹೋಮ ಮಾಡಿರುವ ಹವಿಸ್ಸಿನ ಶೇಷವನ್ನು ಕೊಡುವುದಕ್ಕಾಗಿ ರಾಜನ ಪತ್ನಿಯನ್ನು ಕರೆದರು. ಆ ಶೇಷವನ್ನು ಅವಳು ತಿಂದರೆ ಗರ್ಭಿಣಿಯಾಗಿ ಗಂಡುಮಗುವನ್ನು ಹಡೆಯುತ್ತಿದ್ದಳು. ಆದರೆ ಅವಳು ಅಹಂಕಾರದಿಂದ ಮೆಲ್ಲನೆ ಬಂದಳು. ಇದನ್ನು ತಿಳಿದ ಯಾಜ ಮತ್ತು ಉಪಯಾಜ ಇವಳಿಲ್ಲದಿದ್ದರೆ ಮಗನು ಹುಟ್ಟಲಾರನೇ? ಇವಳು ಬಾರದಿದ್ದರೆ ಬೇಡ ಎಂದು ತೀರ್ಮಾನಿಸಿದರು. ಆ ಹವಿಶ್ಶೇಷವನ್ನು ವೈಷ್ಣವಮಂತ್ರಗಳಿಂದ ಅಗ್ನಿಯಲ್ಲಿ ಹೋಮಮಾಡಿದರು.

## ಧೃಷ್ಟದ್ಯುಮ್ನನ ಜನನ

ಅವನ ಅನಂತರದಲ್ಲಿ ಅಗ್ನಿಕುಂಡದಿಂದ ಭಾರತೀದೇವಿಯರು ಮೇಲೆ ಬಂದರು. ಸರ್ವರ ಸ್ವರೂಪದೇಹಗಳಲ್ಲಿಯೂ ಹೊರಗಣ ದೇಹಗಳಲ್ಲಿಯೂ ವಾಸಿಸುತ್ತಾ ಸರ್ವರನ್ನೂ ಯಾವಾಗಲೂ ರಕ್ಷಿಸುತ್ತಿರುವ ಮುಖ್ಯಪ್ರಾಣದೇವರು ಭರತ ಎಂದು ಪ್ರಸಿದ್ಧರಾಗಿರುವರು. ಆ ಭರತ ಎಂಬ ಹೆಸರುಳ್ಳ ಮುಖ್ಯಪ್ರಾಣದೇವರ ಪತ್ನಿಯು ಭಾರತೀ ಎಂದೆನಿಸುವರು. ಈ ಭಾರತೀದೇವಿಯರೇ ಸಕಲ ವೇದಗಳಿಗೂ ಅಭಿಮಾನಿನಿಯರಾಗಿರುವರು. ಇದೇ ಮುಖ್ಯಪ್ರಾಣದೇವರು ಮುಂದಿನ ಕಲ್ಪದಲ್ಲಿ ಬ್ರಹ್ಮದೇವರಾಗಿ ಹುಟ್ಟುವರು. ಆಗ ಈ ಭಾರತೀದೇವಿಯರೇ ಸರಸ್ವತೀ ಎಂಬ ಹೆಸರಿನಿಂದ ಬ್ರಹ್ಮದೇವರ ಪತ್ನಿಯರಾಗಿ ಹುಟ್ಟುವರು. ಮುಖ್ಯಪ್ರಾಣದೇವರಿಗೆ ಯಾವಾಗಲೂ ದುಃಖವಿಲ್ಲ. ಸುಖವೇ ಪೂರ್ಣವಾಗಿರುತ್ತದೆ. ಆದ್ದರಿಂದ ಅವರಿಗೆ "ಶ" ಅಂದರೆ ಸುಖರೂಪಿಯಾದವರು ಎಂಬ ಹೆಸರು ಬಂದಿರುತ್ತದೆ. ಶ ಎಂಬ ಹೆಸರಿನಿಂದ ಪ್ರಸಿದ್ಧರಾಗಿರುವ ಮುಖ್ಯಪ್ರಾಣದೇವರನ್ನು ಯಾವಾಗಲೂ ಆಶ್ರಯಿಸಿರುವುದರಿಂದಲೂ ಅಂತಹ ಮುಖ್ಯಪ್ರಾಣದೇವರಿಂದ ಯಾವಾಗಲೂ ಸುಖಿಸುತ್ತಿರುವುದರಿಂದಲೂ ಈ ಭಾರತೀದೇವಿಯರು "ಶ್ರೀ" ಎಂಬ ಹೆಸರಿನಿಂದ ಪ್ರಸಿದ್ಧರಾಗಿರುವರು.

ಸುಖವು ವೃತ್ತಿರೂಪಸುಖ ಸುಖಸ್ವರೂಪ ಎಂಬ ಎರಡು ವಿಧವಾಗಿದೆ. ಸ್ವರೂಪಸುಖವು ಮುಕ್ತಿಯೋಗ್ಯರಾದ ಸರ್ವಜೀವರಲ್ಲಿಯೂ ಯಾವಾಗಲೂ ಇದೆ. ವೃತ್ತಿರೂಪ ಸುಖವು ವಾಯುದೇವರಲ್ಲಿ ಮಾತ್ರ

ಯಾವಾಗಲೂ ಇದೆ. ಗೌತಮರ ಶಾಪದಿಂದ ದೇವೇಂದ್ರನು ಜ್ಞಾನದಲ್ಲಿ ಮಾಲಿನ್ಯವನ್ನು ಪಡೆದನು. ಬಲಿಚಕ್ರವರ್ತಿಯಿಂದ ಸ್ವರ್ಗದಿಂದ ಓಡಿಸಲ್ಪಟ್ಟನು. ವೃತ್ರಸಂಹಾರದಿಂದ ಬಂದಿರುವ ಬ್ರಹ್ಮಹತ್ಯೆಯಿಂದ ಭೀತನಾಗಿ ಮಾನಸಸರೋವರದ ಮಧ್ಯದಲ್ಲಿ ಕಮಲನಾಳದ ಒಳಗೆ ಒಂದು ಸಾವಿರ ವರ್ಷಗಳ ವರೆಗೆ ವಾಸಿಸಿದನು. ಇವೆಲ್ಲವೂ ದೇವತೆಗಳಗೂ ವೃತ್ತಿರೂಪದದುಃಖಗಳಿವೆ ಎಂಬ ವಿಷಯದಲ್ಲಿ ಉದಾಹರಣಗಳು. ದೇವೇಂದ್ರನ ಸ್ಥಿತಿಯೇ ಹೀಗಾದ.ಮೇಲೆ ಅವನಿಗಿಂತ ಅಧಮರಾಗಿರುವ ಯಮ, ಅಶ್ವಿನೀದೇವತೆಗಳು ಮುಂತಾದವರು ವೃತ್ತಿರೂಪದುಃಖಗಳುಳ್ಳವರು ಎಂದು ಹೇಳಬೇಕಾಗಿಲ್ಲ. ಆದ್ದರಿಂದ ವೃತ್ತಿ ರೂಪದುಃಖದಿಂದ ಯುಕ್ತರಾಗಿರುವ ಇಂದ್ರಾದಿದೇವತೆಗಳ ಅವತಾರವಾಗಿರುವ ಅರ್ಜುನ ಮುಂತಾದವರನ್ನು ಆಶ್ರಯಿಸಿರುವ ಶಚೀ, ಶ್ಯಾಮಲಾ, ಉಷಾ ಮುಂತಾದವರು ಯಾವಾಗಲೂ ಸುಖಸ್ವರೂಪಿಯಾಗಿರುವವರನ್ನು ಆಶ್ರಯಿಸದಿರುವುದರಿಂದ "ಶ್ರೀ" ಎಂದು ಹೇಳಲ್ಪಡಲು ಅರ್ಹರಲ್ಲ ಎಂದು ಹೇಳಬೇಕಾಗಿಲ್ಲ.

(೧) ಭಾರತೀದೇವಿಯರು ಶ್ರೀ ಎಂದು ಹೇಳಲ್ಪಡಲು ಅರ್ಹರು ಎಂದು ಹೇಳಿದೆವು. ಆ ಭಾರತೀದೇವಿಯರು ಪಾರ್ವತೀ, ಶಚೀ, ಶ್ಯಾಮಲಾ, ಉಷಾ, ಎಂಬ ನಾಲ್ಕು ಸ್ತ್ರೀಯರ ಆವೇಶದಿಂದ ಯುಕ್ತರಾಗಿರುವವರು. ಆ ಪಾರ್ವತೀ, ಶಚೀ ಮುಂತಾದ ಸ್ತ್ರೀಯರು ಯಾವಾಗಲೂ ಸುಖಿಯಾಗಿರುವ ವಾಯುದೇವರನ್ನು ಆಶ್ರಯಿಸದಿರುವುದರಿಂದ "ಶ್ರೀ" ಎಂಬ ಹೆಸರಿನಿಂದ ಹೇಳಲ್ಪಡುವುದಕ್ಕೆ ಪೂರ್ಣವಾಗಿ ಅರ್ಹತೆಯಿಲ್ಲದವರೇನೋ ನಿಜ. ಆದರೂ ಶಚಿಯು ಅರ್ಜುನರೂಪಿಯಾದ ಇಂದ್ರನನ್ನೂ ಶ್ಯಾಮಲೆಯು ಧರ್ಮರಾಜರೂಪಿಯಾದ ಯಮನನ್ನೂ ಉಷಾದೇವಿಯು ಅಶ್ವಿನೀದೇವತೆಗಳ ಅವತಾರವಾಗಿರುವ ನಕುಲ, ಸಹದೇವರನ್ನೂ ಆಶ್ರಯಿಸಿರುವುದರಿಂದ "ಶ್ರೀ" ಎಂದು ಹೇಳಲ್ಪಡುವರು. ಪಾರ್ವತಿದೇವಿಯು ಆ ಜನ್ಮದಲ್ಲಿ ತನ್ನ ಪತಿಯಾದ ರುದ್ರದೇವರನ್ನು ಆಶ್ರಯಿಸಲೇ ಇಲ್ಲ. ಆದ್ದರಿಂದ "ಶ್ರೀ" ಎಂಬ ಹೆಸರಿನಿಂದ ಯಾವ ಕಾರಣದಿಂದಲೂ ಯುಕ್ತಳಾಗಲಿಲ್ಲ.

ಭಾರತೀದೇವಿಯರು ಸರ್ವಸ್ತ್ರೀಯರ ಮಧ್ಯದಲ್ಲಿಯೂ ಉತ್ಕೃಷ್ಟರಾದುದರಿಂದ "ಉತ್ಕೃಷ್ಟಾ" ಎಂದು ಪ್ರಸಿದ್ಧರಾದರು. "ಉತ್ಕೃಷ್ಟಾ" ಎಂಬ ಪದದಲ್ಲಿರುವ "ಉತ್" ಎಂಬ ಮೊದಲನೆಯ ಭಾಗವು ಲುಪ್ತವಾಗಿ "ಕೃಷ್ಟಾ" ಎಂಬ ಭಾಗವು ಉಳಿಯಿತು. "ಕೃಷ್ಟಾ" ಎಂಬ ಪದದಲ್ಲಿರುವ ಟಕಾರವೂ ಣಕಾರವೂ ಒಂದೇ ಟವರ್ಗಕ್ಕೆ ಸೇರಿರುವುದರಿಂದಲೂ ಉತ್ಕೃಷ್ಟಳೇ "ಕೃಷ್ಣಾ" ಎಂದೆನಿಸುವಳೆಂದು ಹಿರಿಯರು ನಿರ್ವಚನವನ್ನು ಮಾಡಿರುವುದರಿಂದಲೂ "ಉತ್ಕೃಷ್ಟಾ"=ಕೃಷ್ಟಾ="ಕೃಷ್ಣಾ" ಎಂದು ಪ್ರಸಿದ್ಧಳಾದಳು. (೨) ಈ ಭಾರತೀದೇವಿಯರ ದೇಹವು ಕಪ್ಪಾಗಿತ್ತು. ಆದ್ದರಿಂದಲೂ ಅವರಿಗೆ " ಕೃಷ್ಣಾ ಎಂಬ ಹೆಸರು ಬಂತು. (೩) ಉತ್ಕೃಷ್ಟವಾದ "ಣ" ಅಂದರೆ ಆನಂದವುಳ್ಳವಳಾಗಿರುವುದರಿಂದಲೂ "ಕೃಷ್ಣಾ" ಎಂದು ಪ್ರಸಿದ್ಧಳಾದರು. ಹೀಗೆ ದ್ರೌಪದೀ ದೇಹದೊಳಗಿದ್ದ ಭಾರತೀದೇವಿಯರು ಮೂರುವಿಧದಿಂದಲೂ "ಕೃಷ್ಣಾ" ಎಂದು ಪ್ರಸಿದ್ಧರಾದರು. ಆ ಭಾರತೀದೇವಿಯರೊಡನೆ ವಾಸಿಸುತ್ತಿದ್ದ ಪಾರ್ವತೀದೇವಿ, ಶಚೀದೇವಿ, ಶ್ಯಾಮಲಾದೇವಿ, ಉಷಾದೇವಿಯರು ಕಪ್ಪುಬಣ್ಣವುಳ್ಳ ದೇಹದಲ್ಲಿ ವಾಸಿಸುತ್ತಿರುವುದರಿಂದ ಮಾತ್ರ "ಕೃಷ್ಣಾ" ಎಂದು ಪ್ರಸಿದ್ಧರಾದರು. ಉಳಿದ ಎರಡು ಕಾರಣಗಳಿಂದ ಆ ಹೆಸರಿನಿಂದ ಯುಕ್ತರಾಗಲಿಲ್ಲ."

# ಪಾರ್ವತೀ ಮುಂತಾದವರಿಗೆ ಶಾಪ

ಈ ಭಾರತೀದೇವಿಯರು ಹುಟ್ಟುವಾಗಲೇ ಸರ್ವಜ್ಞರಾಗಿದ್ದರು. ಯಾವಾಗಲೂ ಎಲ್ಲಾ ಆಭರಣಗಳಿಂದ ಅಲಂಕೃತರಾಗಿದ್ದರು. ಹುಟ್ಟುವಾಗಲೇ ಯೌವನದಿಂದ ಯುಕ್ತರಾಗಿದ್ದರು. ವಾರ್ಧಕ್ಯ ಮುಂತಾದ ಅವಸ್ಥೆಗಳಿಂದ ರಹಿತರಾಗಿದ್ದರು. ಲೋಕದಲ್ಲಿರುವ ಎಲ್ಲಾ ಸ್ತ್ರೀಯರ ಮಧ್ಯದಲ್ಲಿ ಪರಮಸುಂದರಿಯಾಗಿದ್ದರು.

ಒಮ್ಮೆ ಪಾರ್ವತಿದೇವಿಯೂ ಶಚೀದೇವಿಯೂ ಶ್ಯಾಮಲಾದೇವಿಯೂ ಉಷಾದೇವಿಯೂ ತಮ್ಮ ತಮ್ಮ ಪತಿಗಳಿಂದ ಸಹಿತರಾಗಿ ಬ್ರಹ್ಮದೇವರ ಮುಂದೆ ಅಧಿಕವಾದ ವಿಲಾಸವನ್ನು ತೋರಿಸಿದರು. ವ್ಯಭಿಚಾರಿಣಿಯರಾದ ಸ್ತ್ರೀಯರಂತೆ ನಡೆದುಕೊಂಡ ಇವರನ್ನು ನೋಡಿದ ಬ್ರಹ್ಮದೇವರು ಕುಪಿತರಾದರು. ಇವರನ್ನು ನೋಡಿ ಶಪಿಸಿದರು. "ನೀವೆಲ್ಲರೂ ಮನುಷ್ಯರ ಮಧ್ಯದಲ್ಲಿ ಹುಟ್ಟಿರಿ. ಆಗ ನಿಮ್ಮ ನಿಮ್ಮ ಪತಿಗಳಿಗಿಂತ ಇತರ ಪುರುಷನ ಸ್ಪರ್ಶವು ನಿಮಗೆ ಏರ್ಪಡಲಿ" ಎಂದರು.

ಪಾರ್ವತೀ ಮುಂತಾದವರು ಈ ಶಾಪವನ್ನು ಕೇಳಿದರು. ಧೀರ್ಘವಾಗಿ ಆಲೋಚಿಸಿದರು. ಹಿಂದೊಮ್ಮೆ ಪಾರ್ವತೀದೇವಿ, ಶಚೀದೇವಿ, ಶ್ಯಾಮಲಾದೇವಿ, ಉಷಾದೇವಿ ಎಂಬ ಇದೇ ನಾಲ್ವರು ಒಂದೇ ದೇಹದಲ್ಲಿ ಪ್ರವೇಶಿಸಿದರು. ತಾವು ಯಾರು ಎಂಬ ವಿಷಯವನ್ನು ಬ್ರಹ್ಮದೇವನು ತಿಳಿಯುವನೋ ಇಲ್ಲವೋ ಎಂದು ಪರೀಕ್ಷಿಸುವುದಕ್ಕಾಗಿ ಬ್ರಹ್ಮದೇವರ ಸಮೀಪಕ್ಕೆ ಬಂದರು. ಇದನ್ನು ತಿಳಿದ ಬ್ರಹ್ಮದೇವರು ತಿಳಯದಂತೆ ನಟಿಸುತ್ತಾ ಸುಮ್ಮನೆ ಇದ್ದರು. ಆಗ ಈ ಸ್ತ್ರೀಯರೆಲ್ಲರೂ ಬ್ರಹ್ಮದೇವರು ತಮ್ಮನ್ನು ಗುರುತು ಹಿಡಿಯಲಿಲ್ಲವೆಂದು ತೀರ್ಮಾನಿಸಿದರು. ಎರಡನೇ ಸಲ ಅವರೆಲ್ಲರೂ ಪುನಃ ಒಂದೇ ದೇಹದಲ್ಲಿ ಪ್ರವೇಶಿಸಿ ಬಂದರು. ಆಗಲೂ ಬ್ರಹ್ಮದೇವರು ಹಿಂದಿನಂತೆಯೇ ಸುಮ್ಮನೆ ಇದ್ದರು. ಪುನಃ ಮೂರನೆಯ ಸಲ ಒಂದೇ ದೇಹದಲ್ಲಿ ಪ್ರವೇಶಿಸಿದವರಾಗಿ ಬಂದರು ಆಗ ಬ್ರಹ್ಮದೇವರು ತನ್ನನ್ನು ಪರೀಕ್ಷಿಸುವುದಕ್ಕಾಗಿ ಬಂದಿರುವ ಇವರುಗಳಲ್ಲಿ ಕುಪಿತರಾದರು. "ನನ್ನನ್ನು ಪರೀಕ್ಷಿಸುವುದಕ್ಕಾಗಿ ಮೂರು ಸಲ ನನ್ನಲ್ಲಿಗೆ ನೀವೆಲ್ಲರೂ ಒಂದೇ ದೇಹದಲ್ಲಿ ಪ್ರವೇಶಿಸಿಬಂದಿರುವಿರಿ. ಆದ್ದರಿಂದ ನೀವು ನಾಲ್ವರೂ ಒಂದೇ ದೇಹದಲ್ಲಿ ಮನುಷ್ಯರಾಗಿ ಮೂರು ಸಲ ಹುಟ್ಟಿರಿ" ಎಂದು ಶಪಿಸಿದರು.

" ಆ ಶಾಪದಿಂದ ಒಂದೇ ದೇಹದಲ್ಲಿ ಮೂರು ಸಲ ಮನುಷ್ಯರಾಗಿ ಹುಟ್ಟಬೇಕು. ಆದರೆ ಆ ಶಾಪದಲ್ಲಿ ಪರಪುರುಷನ ಸ್ಪರ್ಶವು ಏರ್ಪಡುವಂತಿಲ್ಲ. ಆದರೂ ದೇವತಾಸ್ತ್ರೀಯರಾದ್ದರಿಂದ ನಾವು ನಾಲ್ವರು ಪ್ರವೇಶಿಸಿದ ಆ ಮನುಷ್ಯ ದೇಹವು ಪರಮಸುಂದರವಾಗಿರುತ್ತದೆ. ಆ ದೇಹದಲ್ಲಿ ಪ್ರವೇಶಿಸಿದ ನಾವಾಗಲೀ ಇತರ ಗಂಡಸರಾಗಲೀ ಆ ಶಪಾದ ಬಲದಿಂದ ಅನ್ಯೋನ್ಯ ಸ್ಪರ್ಶವನ್ನು ಮಾಡುವ ಸಂಭವವಿಲ್ಲ. ಆದರೂ ರಾವಣ ಮುಂತಾದವರಂತೆ ಪರಮಕಾಮಿಗಳಾಗಿರುವ ಕೆಲವು ಪುರುಷರು ಬಲಾತ್ಕಾರದಿಂದ ನಮ್ಮನ್ನು ಮುಟ್ಟುವ ಸಂಭವವಿದೆ. ಆದ್ದರಿಂದ ಹಿಂದಿನ ಶಾಪದಿಂದ ಬರುವ ಮೂರು ಜನ್ಮಗಳಲ್ಲಿಯೂ ಇತರ ಪುರುಷರ ಸ್ಪರ್ಶವು ನಮಗೆ ಏರ್ಪಡದಂತೆ ಮಾಡಿಕೊಳ್ಳಬೇಕು."

" ಈಗ ಬ್ರಹ್ಮದೇವರು ಕೊಟ್ಟಿರುವ ಎರಡನೆಯ ಶಾಪದಲ್ಲಿ ನಾವು ನಾಲ್ವರೂ ಮನುಷ್ಯರಾಗಿ ಹುಟ್ಟಬೇಕೆಂದೂ ಆ ಮನುಷ್ಯಜನ್ಮದಲ್ಲಿ ಪರಪುರುಷರ ಸ್ಪರ್ಶವು ನಮಗೆ ಏರ್ಪಡಬೇಕೆಂದೂ ಇದೆ. ಆದರೆ ಒಂದೇ

ದೇಹದಲ್ಲಿ ನಾಲ್ವರೂ ಹುಟ್ಟಬೇಕೆಂದು ಇಲ್ಲ. ಈ ನಾಲ್ಕನೆಯ ಜನ್ಮದಲ್ಲಿ ಪರಪುರುಷಸ್ಪರ್ಶವು ಏರ್ಪಡಲೇಬೇಕು. ಹಾಗೆ ಏರ್ಪಟ್ಟರೆ ಸ್ತ್ರೀಯರಿಗೆ ಪಾತಿವ್ರತ್ಯಭಂಗವು ಏರ್ಪಡುತ್ತದೆ. ಆದರಲ್ಲಿಯೂ ದೇವತಾಸ್ತ್ರೀಯರು ಭೂಮಿಯಲ್ಲಿ ಅವತರಿಸಿರುವಾಗ ಇತರರು ತಿಳಿಯುವಂತೆ ಇತರರ ಕಣ್ಣಿಗೆ ಕಾಣಿಸುವುದೂ ಇತರ ಪುರುಷರನ್ನು ಮುಟ್ಟುವುದೂ ಇತರರೊಡನೆ ಮಾತಾಡುವುದೂ ಮಹಾದೋಷವೆನಿಸುತ್ತದೆ. ಆದ್ದರಿಂದ ಬ್ರಹ್ಮದೇವರ ಶಾಪದಿಂದ ಪರಪುರುಷರ ಸ್ಪರ್ಶವು ಏರ್ಪಡಬೇಕು. ನಮಗೆ ದೋಷವೂ ಬರಕೂಡದು. ಅದಕ್ಕೆ ತಕ್ಕ ಯೋಚನೆಯನ್ನು ಮಾಡೋಣ" ಎಂದು ಯೋಚಿಸಿದರು.

ಕೊನೆಗೆ ಕೆಳಗಂಡಂತೆ ತೀರ್ಮಾನಿಸಿದರು. " ಭಾರತೀದೇವಿಯರನ್ನು ಒಂದು ಸಾವಿರ ವರ್ಷಗಳ ವರೆಗೆ ಆರಾಧಿಸಬೇಕು. ಮೊದಲನೆಯ ಶಾಪದಿಂದ ಬರಬಾರದ ಮೂರು ಜನ್ಮಗಳಲ್ಲಿ ಒಂದೇ ದೇಹದಲ್ಲಿಯೇ ಮನುಷ್ಯರಾಗಿ ನಾವು ಹುಟ್ಟುವೆವು. ಆಗ ನಮ್ಮೊಡನೆ ಭಾರತೀದೇವಿಯರೂ ಅವತರಿಸುವಂತೆ ಅವರನ್ನು ಪ್ರಾರ್ಥಿಸಬೇಕು. ಭಾರತೀದೇವಿಯರನ್ನು ವಾಯುದೇವರು ಹೊರತು ಬೇರೆ ಯಾವನೂ ಮುಟ್ಟುವುದಿಲ್ಲ. ಇದು ಅನಾದಿಕಾಲದಿಂದಲೂ ಬಂದಿರುವ ಶ್ರೀಹರಿಯ ನಿಯಮ. ಆದ್ದರಿಂದ ಆ ಮೂರುಜನ್ಮಗಳಲ್ಲಿ ನಮ್ಮೊಡನೆ ಇರುವ ಭಾರತೀದೇವಿಯರ ಪ್ರಭಾವದಿಂದ ನಮ್ಮ ದೇಹವನ್ನು ಯಾವನೂ ಬಲಾತ್ಕಾರದಿಂದ ಮುಟ್ಟದಂತಾಗುತ್ತದೆ. ನಮ್ಮ ಪಾತಿವ್ರತ್ಯಕ್ಕೆ ಭಂಗವು ಬರುವುದಿಲ್ಲ.

ಎರಡನೆಯ ಶಾಪದಿಂದ ನಮಗೆ ಬರಲಿರುವ ನಾಲ್ಕನೆಯ ಮನುಷ್ಯಜನ್ಮದಲ್ಲಿಯೂ ಭಾರತೀದೇವಿಯರು ನಮ್ಮ ಜೊತೆಯಲ್ಲಿ ಅವತರಿಸುವಂತೆ ಪ್ರಾರ್ಥಿಸಬೇಕು. ಆಗ ನಾವೆಲ್ಲರೂ ಒಂದೆ ದೇಹದಲ್ಲಿ ಹುಟ್ಟಬೇಕೆಂಬ ಶಾಪವಿಲ್ಲ. ಬೇರೆ ಬೇರೆಯಾಗಿಯೇ ಹುಟ್ಟಬಹುದು. ಆದರೆ ನಾವು ಬೇರೆ ಬೇರೆಯಾಗಿ ಹುಟ್ಟಿದರೆ ನಮಗಾಗಿ ಭಾರತೀದೇವಿಯರು ನಾಲ್ಕು ರೂಪಗಳಿಂದ ಮನುಷ್ಯರಾಗಿ ಅವತರಿಸಬೇಕು. ನಮಗಾಗಿ ಅವರಿಗೆ ಅಷ್ಟು ಶ್ರಮವನ್ನು ಕೊಡುವುದು ಉಚಿತವಲ್ಲ. ಆದ್ದರಿಂದ ನಾವೆಲ್ಲರೂ ನಾಲ್ಕನೆಯ ಜನ್ಮದಲ್ಲಿಯೂ ಒಂದೇ ದೇಹದಲ್ಲಿ ಅವತರಿಸೋಣ. ನಮ್ಮೆಲ್ಲರ ಜೊತೆಯಲ್ಲಿ ಭಾರತೀದೇವಿಯರು ಆ ಒಂದು ದೇಹದಲ್ಲಿ ಒಂದು ರೂಪದಿಂದ ಅವತರಿಸಲಿ. ವಾಯುದೇವರು ಭಾರತೀದೇವಿಯರೊಡನೆ ಕ್ರೀಡಾದಿಗಳನ್ನು ಮಾಡುತ್ತಿರುವಾಗ ಆ ವಾಯುದೇವರ ಸ್ಪರ್ಶವು ನಮಗೂ ಏರ್ಪಡುತ್ತದೆ. ಬ್ರಹ್ಮದೇವರು ಕೊಟ್ಟಿರುವ ಶಾಪದಂತೆ ವಾಯುದೇವರ ಸ್ಪರ್ಶವು ನಮಗೆ ಏರ್ಪಡಲಿ. ವಾಯುದೇವರು ಸರ್ವಸ್ತ್ರೀಯರಿಗೂ ತಂದೆಯಂತೆಯೂ ಮಾವನಂತೆಯೂ ಮಾನ್ಯರಾದವರು. ಅವರಿಗೆ ನಮ್ಮ ಸ್ಪರ್ಶದಿಂದ ವ್ಯಭಿಚಾರದೋಷವಾಗಲೀ ನಮಗೆ ಅವರ ಸ್ಪರ್ಶದಿಂದ ಕಾಮವಿಕಾರವಾಗಲೀ ಏರ್ಪಡುವುದಿಲ್ಲ. ಆದ್ದರಿಂದ ನಮಗೆ ಮುಂದೆ ಬರಲಿರುವ ನಾಲ್ಕು ಜನ್ಮಗಳಲ್ಲಿಯೂ ಒಂದೇ ದೇಹದಲ್ಲಿ ಭಾರತೀದೇವಿಯರು ನಮ್ಮೊಡನೆ ಅವತರಿಸುವಂತೆ ಪ್ರಾರ್ಥಿಸೋಣ" ಎಂದು ತೀರ್ಮಾನಿಸಿದರು. ಅದರಂತೆಯೇ ಎಲ್ಲಾ ಕಾರ್ಯಗಳನ್ನೂ ಮಾಡಿದರು.

ಒಂದು ಸಾವಿರವರ್ಷಗಳ ವರೆಗೆ ಪಾರ್ವತೀ ಮುಂತಾದವರು ಮಾಡಿರುವ ಆರಾಧನೆಯಿಂದ ಸಂತುಷ್ಟರಾದ ಭಾರತೀದೇವಿಯು ಪಾರ್ವತೀದೇವಿ ಮುಂತಾದ ನಾಲ್ವರಿಂದ ಸಹಿತರಾಗಿ ಒಬ್ಬ ಬ್ರಾಹ್ಮಣನ ಮಗಳಾಗಿ ಅವತರಿಸಿದರು. ಆಗ ಆ ದೇಹದಲ್ಲಿದ್ದ ಪಾರ್ವತೀ ಮುಂತಾದ ನಾಲ್ವರು ರುದ್ರದೇವರ

ಅಂತರ್ಯಾಮಿಯಾಗಿರುವ ನಾರಾಯಣವನ್ನು ಆರಾಧಿಸಿದರು. ತಾವು ಮನುಷ್ಯರಾಗಿ ಹುಟ್ಟಿದಾಗ ಪರಪುರುಷರ ಸಂಪರ್ಕವು ಏರ್ಪಡುವುದಾಗಿ ಬ್ರಹ್ಮದೇವರ ಶಾಪವು ತಮಗೆ ಬಂದಿರುವದಾಗಿಯೂ ಹಾಗೆ ನಡೆಯದೆ ತಮ್ಮ ತಮ್ಮ ಪತಿಗಳ ಸ್ಪರ್ಶವೇ ಏರ್ಪಡಬೇಕೆಂದೂ ವರವನ್ನು ಬೇಡಿದರು. ಆ ವರವನ್ನು ರುದ್ರದೇವರು ಆ ನಾಲ್ವರಿಗೆ ಕೊಟ್ಟರು. ಆ ದೇಹದಲ್ಲಿದ್ದ ಭಾರತೀದೇವಿಯರು ರುದ್ರದೇವರಲ್ಲಿರುವ ನಾರಾರಯಣನನ್ನು ಆರಾಧಿಸಿದರು. ಅದೇ ದೇಹದಲ್ಲಿರುವ ನಾಲ್ವರು ರುದ್ರದೇವರ ಅಂತರ್ಗತನಾದ ನಾರಾಯಣನನ್ನು ಆರಾಧಿಸುತ್ತಿರುವಾಗ ಭಾರತೀದೇವಿಯರೂ ಅದೇ ಕೆಲಸವನ್ನು ಮಾಡಿದರೆ ಎಲ್ಲರೂ ಒಂದೇ ಕಾರ್ಯವನ್ನು ಮಾಡಿದಂತಾಗಲಿಲ್ಲವೇ? ಅದಕ್ಕಾಗಿಯೇ ಭಾರತೀದೇವಿಯರು ರುದ್ರಾಂತರ್ಗತನಾದ ನಾರಾಯಣನನ್ನು ಆರಾಧಿಸಿ ಅವರೆಲ್ಲರೂ ಕೇಳಿದ ವರವನ್ನೇ ಕೇಳಿದರು. ಭಾರತೀದೇವಿಯರಿಗೆ ರುದ್ರಾಂತರ್ಗತನಾದ ನಾರಾರಯಣನು ಒಂದೊಂದು ಜನ್ಮಗಳಲ್ಲಿಯೂ ಪತಿಸಂಪರ್ಕವು ಏರ್ಪಡುವಂತೆಯೂ ನಾರಾಯಣನನ್ನು ಅನಂತ ವಿಧಗಳಿಂದ ತೃಪ್ತಿಪಡಿಸುವಂತೆಯೂ ವರಗಳನ್ನು ಕೊಟ್ಟನು.

ಬ್ರಾಹ್ಮಣಕನ್ಯೆಯಾಗಿ ಹುಟ್ಟಿದ್ದ ಭಾರತೀದೇವಿಯರು ಎರಡನೆಯ ಜನ್ಮದಲ್ಲಿ ನಳನ ಕುಮಾರಿಯಾಗಿ ಅವತರಿಸಿದರು. ಆಗಲೂ ಭಾರತೀದೇವಿಯರೊಡನೆ ಪಾರ್ವತೀ ಮುಂತಾದ ನಾಲ್ವರು ಸ್ತ್ರೀಯರು ಹುಟ್ಟಿದರು. ಆ ದೇಹದಲ್ಲಿಯೂ ಭಾರತೀದೇವಿಯರೂ ಉಳಿದ ನಾಲ್ವರೂ ಸ್ತ್ರೀಯರೂ ತಪಸ್ಸಿನಿಂದ ಶ್ರೀಹರಿಯನ್ನು ತೃಪ್ತಿಪಡಿಸಿದರು. ಕೊನೆಗೆ ತಮ್ಮ ಇಚ್ಛೆಯಿಂದಲೇ ಆ ದೇಹವನ್ನು ಬಿಟ್ಟರು. ಮೂರನೆಯದಾಗಿ "ಇಂದ್ರಸೇನಾ" ಎಂಬ ಹೆಸರಿನಿಂದ ಹುಟ್ಟಿದರು.

ಅದೇ ಸಮಯದಲ್ಲಿ ಮುದ್ಗಲ ಎಂಬ ಮುನಿಯು ಘೋರವಾದ ತಪಸ್ಸನ್ನು ಮಾಡಿದರು. ಅವರು ಒಮ್ಮೆ ಜ್ಞಾನಿಗಳಿಂದ ಪುರಾಣಶ್ರವಣವನ್ನು ಮಾಡುತ್ತಿದ್ದರು. ದೇವತೆಗಳು ದೈತ್ಯರನ್ನು ಮೋಹಿಸುವುದಕ್ಕಾಗಿ ಎಷ್ಟೋ ವ್ಯಾಪಾರಗಳನ್ನು ಮಾಡುವುದುಂಟು. ಬ್ರಹ್ಮದೇವರು ತನ್ನ ಮಗಳನ್ನು ನೋಡಿ ಮೋಹಿಸಿದರು ಎಂಬ ಅಂಶವು ದೈತ್ಯಮೋಹನಾರ್ಥವಾಗಿ ಪುರಾಣಗಳಲ್ಲಿ ಹೇಳಲ್ಪಟ್ಟಿದೆ. ಈ ಭಾಗವನ್ನು ಮುದ್ಗಲರು ಕೇಳಿದರು. ತನ್ನ ಮಗಳನ್ನು ಕಾಮಿಸಿದ ಬ್ರಹ್ಮನು ಲೋಕಮಾನ್ಯನಾಗುವನೇ? ಎಂಬ ವಿಪರೀತಜ್ಞಾನವು ಮುದ್ಗಲರಿಗೆ ಏರ್ಪಟ್ಟಿತು. ಕೂಡಲೇ ನಕ್ಕರು. ಇದನ್ನು ತಿಳಿದ ಬ್ರಹ್ಮದೇವರು ಕುಪಿತರಾದರು. ಮುದ್ಗಲರನ್ನು ಕರೆದರು. " ಎಲೋ ಮುದ್ಗಲಾ, ದೈತ್ಯಮೋಹನಾರ್ಥವಾಗಿ ನಾನು ಮಾಡಿರುವ ವ್ಯಾಪಾರದಿಂದ ನೀನೂ ಮೋಹಿತನಾದೆಯಾ? ಸರಿ, ನೀನೂ ಲೋಕಮಾನ್ಯರಾದ ಭಾರತೀ ಮುಂತಾದ ಐವರು ಸ್ತ್ರೀಯರ ಸಂಗವನ್ನು ಮಾಡು" ಎಂದು ಶಪಿಸಿದರು.

ಮುದ್ಗಲರು ಈ ಶಾಪವನ್ನು ಕೇಳಿದರು. ತಮಗಿಂತ ಉತ್ತಮರ ಪತ್ನಿಯರ ಸಂಗವು ನಿತ್ಯನರಕಕ್ಕೆ ಸಾಧನವಾದುದು, ಅಂತಹ ಶಾಪವು ತನಗೆ ಬಂದುದಕ್ಕಾಗಿ ಹೆದರಿದರು. ತಪಸ್ಸನ್ನು ಮಾಡಿ ಬ್ರಹ್ಮದೇವರನ್ನು ಸಂತೋಷಪಡಿಸಿದರು. ಸಂತುಷ್ಟರಾದ ಬ್ರಹ್ಮದೇವರು " ನೀನು ಆ ಸ್ತ್ರೀಯರ ಸಂಗವನ್ನು ಮಾಡುವುದಿಲ್ಲ. ನಿನ್ನ ದೇಹದಲ್ಲಿರುವ ವಾಯುದೇವನು ಭಾರತೀದೇವಿಯೊಡನೆ ಸಂಗವನ್ನು ಮಾಡುವನು. ಆ ಕಾಲದಲ್ಲಿ ಭಾರತೀದೇವಿಯೊಡನೆ ಅದೇ ದೇಹದಲ್ಲಿರುವ ಶಚೀ ಮುಂತಾದ ನಾಲ್ವರು ಸ್ತ್ರೀಯರಿಗೆ ವಾಯುದೇವರ ಸ್ಪರ್ಶವು ಏರ್ಪಡುತ್ತದೆ. ಈ ಸ್ಪರ್ಶವೂ ಸಹ ತಂದೆ ಮತ್ತು ಮಾವ ಮುಂತಾದವರ ಸ್ಪರ್ಶದಂತೆ ಕಾಮದಿಂದ ಏರ್ಪಡುವುದಿಲ್ಲ.

ಆದ್ದರಿಂದ ಈ ಸ್ಪರ್ಶವು ವಾಯುದೇವನಿಗೂ ಪಾರ್ವತೀ ಮುಂತಾದ ಸ್ತ್ರೀಯರಿಗೂ ದೋಷಕರವಲ್ಲ. ನನ್ನ ಶರೀರದಲ್ಲಿರುವ ವಾಯುದೇವನು ಭಾರತೀದೇವಿಯೊಡನೆ ಕ್ರೀಡಿಸುತ್ತಿರುವಾಗ ನೀನು ಮೂರ್ಛಿತನಾಗಿರುತ್ತೀ, ಆದ್ದರಿಂದ ಈ ಸಂಗದಿಂದ ಏರ್ಪಡುವ ಸುಖವು ನಿನಗೆ ತಿಳಿಯುವುದಿಲ್ಲ. ಆದ್ದರಿಂದ ನೀನೂ ದೋಷಿಯಾಗುವುದಿಲ್ಲ" ಎಂದು ಅನುಗ್ರಹಿಸಿದರು.

ಮುದ್ಗಲರು ಇಂದ್ರಸೇನೆಯನ್ನು ವಿವಾಹ ಮಾಡಿಕೊಂಡರು. ಮುದ್ಗಲರಲ್ಲಿರುವ ವಾಯುದೇವರು, ಇಂದ್ರಸೇನೆಯ ದೇಹದಲ್ಲಿರುವ ಭಾರತೀದೇವಿಯರೊಡನೆ ಬಹುಕಾಲದ ವರೆಗೆ ಕ್ರೀಡಿಸಿದರು. ಕ್ರೀಡಾಕಾಲದಲ್ಲಿ ಮುದ್ಗಲರು ಮೂರ್ಛಿತರಾದರು. ಕೊನೆಗೆ ವಾಯುದೇವರು ಮುದ್ಗಲರ ದೇಹವನ್ನು ಬಿಟ್ಟು ಹೋದರು. ಅನಂತರದಲ್ಲಿ ಮುದ್ಗಲರು ತಪಸ್ಸಿಗೆ ಹೋದರು.

ಇಂದ್ರಸೇನೆಯು ಮುದ್ಗಲರು ತಪಸ್ಸಿಗೆ ಹೋದ ಮೇಲೆ ಹಿಂದೆ ಮೊದಲನೆಯ ಜನ್ಮದಲ್ಲಿ ಮಾಡಿದಂತೆ ಮೂರನೆಯ ಇಂದ್ರಸೇನೆ ಎಂಬ ಜನ್ಮದಲ್ಲಿಯೂ ಇಂದ್ರಸೇನಾದೇಹದಲ್ಲಿದ್ದ ಪಾರ್ವತೀ ಮುಂತಾದ ನಾಲ್ವರು ಸ್ತ್ರೀಯರೂ ಭಾರತೀದೇವಿಯರೂ ರುದ್ರಾಂತರ್ಗತನಾದ ನಾರಾಯಣನನ್ನು ಸಂತೋಷಪಡಿಸುವುದಕ್ಕಾಗಿ ಘೋರವಾದ ತಪಸ್ಸನ್ನು ಮಾಡಿದರು. ಪಾರ್ವತೀ ಮುಂತಾದ ನಾಲ್ವರಿಗೆ ರುದ್ರದೇವನೂ ಭಾರತೀದೇವಿಯರಿಗೆ ರುದ್ರಾಂತರ್ಗತನಾದ ನಾರಾಯಣನೂ ಪ್ರತ್ಯಕ್ಷನಾದನು. ಆಗ ಈ ಐವರು ಸ್ತ್ರೀಯರು "ಪತಿಂ ದೇಹಿ" ಎಂದು ಬೇಡಿದರು.

ರುದ್ರಾಂತರ್ಗತನಾದ ನಾರಾಯಣನು ಭಾರತೀದೇವಿಯರಿಗೂ ರುದ್ರನು ಪಾರ್ವತೀ ಮುಂತಾದ ನಾಲ್ವರಿಗೂ ಮನುಷ್ಯದೇಹದಲ್ಲಿಯೇ ಅವರವರ ಪತಿಯ ಸಂಗವು ಏರ್ಪಡುವಂತೆ ವರವನ್ನು ಕೊಟ್ಟನು. ಒಂದೇ ದೇಹದಲ್ಲಿದ್ದ ಪಾರ್ವತೀ ಮುಂತಾದ ನಾಲ್ವರು ಸ್ತ್ರೀಯರು ತಾವು ಬೇರೆ ಬೇರೆಯಾಗಿರುವುದಾಗಿ ತಿಳಿಯಲಿಲ್ಲ. ತಾನು ಮಾತ್ರವೇ ಇರುವುದಾಗಿ ತಿಳಿದರು. ಭಾರತೀದೇವಿಯರು ಮಾತ್ರ ತಾನೂ ಇತರ ಸ್ತ್ರೀಯರೂ ಆ ದೇಹದಲ್ಲಿ ಪ್ರತ್ಯೇಕವಾಗಿ ಇರುವುದಾಗಿಯೂ ಪ್ರತ್ಯೇಕವಾಗಿ ವರಗಳನ್ನು ಬೇಡಿರುವುದಾಗಿಯೂ ಅದಕ್ಕೆ ರುದ್ರದೇವರ ಅಂತರ್ಗತನಾದ ನಾರಾಯಣನು ತನಗೂ ರುದ್ರದೇವರು ಉಳಿದ ನಾಲ್ವರಿಗೂ ಪ್ರತ್ಯೇಕವಾಗಿ ವರಗಳನ್ನು ಕೊಟ್ಟಿರುವುದಾಗಿಯೂ ತಿಳಿದರು. ಪಾರ್ವತೀ ಮುಂತಾದ ನಾಲ್ವರು ಸ್ತ್ರೀಯರು ಮಾತ್ರ ತಾನು ಒಬ್ಬಳೇ ಆ ದೇಹದಲ್ಲಿರುವುದಾಗಿ ಭ್ರಮಿಸಿದ್ದರಿಂದ ತಾನು ಕೇಳಿದ ಒಂದು ಪತಿಯ ಸಂಪರ್ಕ ವರಕ್ಕೆ ರುದ್ರದೇವನು ಐದು ಸಲ "ಪತಿರ್ದತ್ತಃ" ಅಂದರೆ "ನಿನ್ನ ಪತಿಯನ್ನು ಬೇಗನೆ ಪಡೆಯುವಿ" ಎಂದು ಹೇಳಿದಂತೆ ಭ್ರಮಿಸಿದರು. ಇದರಿಂದ ಒಂದು ಸಲ ಪತಿಯನ್ನು ಕೊಡಬೇಕೆಂದು ಕೇಳಿದ್ದಕ್ಕೆ ಐದು ಸಲ "ಪತಿಯನ್ನು ಬೇಗನೆ ಪಡೆಯುವಿ" ಎಂದು ರುದ್ರದೇವರು ಹೇಳಿದ್ದರಿಂದ ಒಬ್ಬೊಬ್ಬಳಿಗೂ ಐದೈದು ಪತಿಗಳು ಏರ್ಪಡುವುದಾಗಿ ತೀರ್ಮಾನಿಸಿದರು. ಒಬ್ಬೊಬ್ಬರನ್ನೂ ನನಗೆ ಐದು ಗಂಡಂದಿರು ಏರ್ಪಡುವಂತೆ ರುದ್ರದೇವನು ವರವನ್ನು ಕೊಟ್ಟಿರುವನು ಎಂದು ತಿಳಿದು ಅಳಲು ಆರಂಭಿಸಿದರು.

ಆ ಸಮಯದಲ್ಲಿ ದೇವೇಂದ್ರನು ಆ ಮಾರ್ಗವಾಗಿ ಬಂದನು. ಅವನು ಅಳುತ್ತಿರುವ ಆ ಸ್ತ್ರೀಯನ್ನು ನೋಡಿದನು. ಕಾರಣವನ್ನು ಕೇಳಿದನು. ಆ ದೇಹದಲ್ಲಿರುವ ಪಾರ್ವತೀ ಮುಂತಾದ ನಾಲ್ವರು ಸ್ತ್ರೀಯರು ತಮ್ಮ

ಮುಂದೆ ನಿಂತಿರುವ ಬ್ರಹ್ಮಚಾರಿಯ ರೂಪದಿಂದ ಯುಕ್ತನಾಗಿರುವ ರುದ್ರದೇವನನ್ನು ತೋರಿಸಿದರು. ತಾನು ಒಬ್ಬಳೇ ಆ ದೇಹದಲ್ಲಿರುವುದು ಎಂದು ಭ್ರಮಿಸಿದ ನಾಲ್ವರೂ " ನಾನು ನನ್ನ ಪತಿಯ ಸಂಬಂಧವನ್ನು ನನಗೆ ಕೊಡು ಎಂದು ಕೇಳಿದೆನು. ಇವನು ನನಗೆ ಐದು ಗಂಡಂದಿರು ಏರ್ಪಡುವಂತೆ ವರವನ್ನು ಕೊಟ್ಟನು" ಎಂದರು. ದೇವೇಂದ್ರನು ಆ ಬ್ರಹ್ಮಚಾರಿಯ ಮುಖವನ್ನು ನೋಡಿದನು. ರುದ್ರದೇವನೇ ಆ ರೂಪದಿಂದ ಬಂದಿರುವುದಾಗಿ ತಿಳಿಯಲಿಲ್ಲ. ಸಾಮಾನ್ಯ ಬ್ರಹ್ಮಚಾರಿ ಎಂದು ಭ್ರಮಿಸಿದನು. ಗಟ್ಟಿಯಾಗಿ ಹೇಳಿದನು. ಎಲೋ ದುರ್ಬುದ್ಧಿಯುಳ್ಳ ಬ್ರಹ್ಮಚಾರಿಯೇ ಮೂರು ಲೋಕಗಳನ್ನು ನಾನು ರಕ್ಷಿಸುತ್ತಿರುವೆನು. ನನ್ನ ಅಧೀನವಾದ ಈ ಪ್ರಪಂಚದಲ್ಲಿ ಒಬ್ಬ ಸ್ತ್ರೀಯು ಕೇಳಿರುವ ವರವನ್ನು ಕೊಡದೆ ಅವಳಿಗೆ ಐದು ಗಂಡಂದಿರು ಏರ್ಪಡುವಂತೆ ಶಾಪವನ್ನು ಕೊಡಬಹುದೇ? ಎಂದನು.

ಈ ಮಾತುಗಳನ್ನು ಕೇಳಿದ ರುದ್ರನು " ಇಂದ್ರಾ, ನೀನು ದೇವಲೋಕದಿಂದ ಕೆಳಗೆ ಬೀಳು. ಮನುಷ್ಯ ಜನ್ಮವನ್ನು ಹೊಂದು. ಆಗ ಇವಳು ನಿನ್ನನ್ನೇ ಪತಿಯಾಗಿ ವರಿಸುವಳು. ನೀನೂ ಇವರ ಗಂಡನಾಗುವಿ. ನನ್ನನ್ನು ನಿನ್ನಂತೆ ಅಪಮಾನ ಮಾಡಿ ಪತಿತರಾಗಿರುವ ನಾಲ್ವರು ಈ ಪರ್ವತದ ಕೆಳಗಿರುವರು. ಅವರು ನಾಲ್ವರೂ ನೀನೂ ಒಟ್ಟಿಗೆ ಐವರು ಇವಳಿಗೆ ಪತಿಗಳಾಗುವಿರಿ" ಎಂದನು. ಆ ಮಾತುಗಳನ್ನು ಕೇಳಿದ ದೇವೇಂದ್ರನು ಆ ಪರ್ವತವನ್ನು ಎತ್ತಿದನು. ಅಲ್ಲಿ ಹಿಂದಿನ ಮನ್ವಂತರಗಳಲ್ಲಿ ಇಂದ್ರಪದವಿಯನ್ನು ರಕ್ಷಿಸಿರುವ ವಾಯುದೇವ, ಯಮದೇವ, ನಾಸತ್ಯ ದಸ್ರ ಎಂಬ ಅಶ್ವಿನೀದೇವತೆಗಳು ಹೀಗೆ ನಾಲ್ವರನ್ನು ನೋಡಿದನು. ಅವರೆಲ್ಲರೂ ಭೂಮಿಯಲ್ಲಿ ಅವತರಿಸುವುದಕ್ಕಾಗಿ ಏಕಾಂತದಲ್ಲಿ ಆಲೋಚನೆಯನ್ನು ಮಾಡುತ್ತಿದ್ದರು. ದೇವೇಂದ್ರನು ಸರ್ವರಿಗೂ ವರಗಳನ್ನೂ ಕೊಡುವವನಾದ ಶ್ರೀನಾರಾಯಣನನ್ನು ಆರಾಧಿಸಿದನು. ಅವನ ಅನುಗ್ರಹದಿಂದ ನರನ ಆವೇಶದಿಂದ ಯುಕ್ತನಾಗಿ ಅರ್ಜುನ ಎಂಬ ಹೆಸರಿನಿಂದ ಭೂಮಿಯಲ್ಲಿ ಅವತರಿಸಿದನು. ಅವನು ದ್ರೌಪದೀ ದೇಹದಲ್ಲಿದ್ದ ಶಚೀದೇವಿಯನ್ನು ತೃಪ್ತಿಪಡಿಸಿದನು. ವಾಯುದೇವರು ಭೀಮಸೇನ ಎಂಬ ಹೆಸರಿನಿಂದ ಅವತರಿಸಿದರು. ಅವರು ದ್ರೌಪದೀದೇಹದಲ್ಲಿದ್ದ ಭಾರತೀದೇವಿಯರನ್ನು ತೃಪ್ತಿಪಡಿಸಿದರು. ಯಮನು ಧರ್ಮರಾಜ ಎಂಬ ಹೆಸರಿನಿಂದ ಅವತರಿಸಿದನು. ಅವನು ದ್ರೌಪದೀದೇವಿಯ ದೇಹದಲ್ಲಿರುವ ಶ್ಯಾಮಲಾ ಎಂಬ ತನ್ನ ಪತ್ನಿಯನ್ನು ತೃಪ್ತಿಪಡಿಸಿದನು. ನಾಸತ್ಯ ದಸ್ರ, ಎಂಬ ಅಶ್ವಿನೀದೇವತೆಗಳು ನಕುಲ, ಸಹದೇವ ಎಂಬ ಎರಡು ಹೆಸರುಗಳಿಂದ ಅವತರಿಸಿದರು. ಅವರು ದ್ರೌಪದೀದೇಹದಲ್ಲಿದ್ದ ಉಷಾದೇವಿಯನ್ನು ತೃಪ್ತಿಪಡಿಸಿದರು. ದ್ರೌಪದೀದೇಹದಲ್ಲಿದ್ದ ಪಾರ್ವತೀದೇವಿಯರಿಗೆ ಮಾತ್ರ ಪತಿಯ ಸಮಾಗಮವು ಆ ಜನ್ಮದಲ್ಲಿ ಏರ್ಪಡಲೇ ಇಲ್ಲ. ಅದಕ್ಕೆ ಕಾರಣವನ್ನು ಈಗ ವಿವರಿಸುವೆವು.

ರುದ್ರನು ಎರಡು ಅಪರಾಧಗಳನ್ನು ಮಾಡಿರುವನು. (೧) " ನನ್ನನ್ನು ಅಪಮಾನ ಮಾಡಿರುವುದರಿಂದ ಈ ಪರ್ವತದ ಕೆಳಗೆ ನಾಲ್ವರು ತಳ್ಳಲ್ಪಟ್ಟಿರುವರು. ಅವರೆಲ್ಲರೂ ಭೂಮಿಯಲ್ಲಿ ಹುಟ್ಟುವುದಕ್ಕಾಗಿ ಆಲೋಚನೆ ಮಾಡುತ್ತಿರುವರು" ಎಂದು ಹೇಳಿದನು. ಆ ನಾಲ್ವರಲ್ಲಿ ವಾಯುದೇವರೂ ಸೇರಿರುವರು. ಆ ವಾಯುದೇವರು ರುದ್ರದೇವರಿಗಿಂತ ಉತ್ತಮರು. ರುದ್ರದೇವರಲ್ಲಿ ತಪ್ಪಿದ್ದರೆ ಅವರನ್ನು ಶಿಕ್ಷಿಸುವ ಅಧಿಕಾರವೂ ವಾಯುದೇವರಲ್ಲಿದೆ. ಅಪರಾಧವಿಲ್ಲದಿದ್ದರೆ ಶಿಕ್ಷಿಸುವುದೂ ಇಲ್ಲ. ಶಿಕ್ಷಿಸಿದರೆ ಆ ಶಿಕ್ಷೆಯು ಅಪರಾಧವೆನಿಸುವುದೂ ಇಲ್ಲ. ಯಮದೇವರೂ ಅಶ್ವಿನೀದೇವತೆಗಳೂ ರುದ್ರದೇವರಿಗೆ ಯಾವ ವಿಧವಾದ ಅಪರಾಧವನ್ನೂ ಮಾಡಲಿಲ್ಲ. ಆದ್ದರಿಂದ ರುದ್ರದೇವನು

" ನನ್ನಲ್ಲಿ ಅಪರಾಧವನ್ನು ಮಾಡಿ ಇವರೆಲ್ಲರೂ ಕೆಳಗೆ ಬಿದ್ದಿರುವರು'' ಎಂದು ಸುಳ್ಳು ಹೇಳಿದ್ದು ಮೊದಲನೆಯ ಅಪರಾಧವೆನಿಸುತ್ತದೆ. (೨) ಪಾರ್ವತೀ ಮುಂತಾದ ನಾಲ್ವರು ಸ್ತ್ರೀಯರಿಗೆ ಮನುಷ್ಯರಾಗಿ ಹುಟ್ಟಬೇಕೆಂದೂ ಆಗ ಅವರವರ ಪತಿಗಳ ಸಂಪರ್ಕವು ಏರ್ಪಡಕೂಡದೆಂದೂ ಪರಪುರುಷರ ಸ್ಪರ್ಶವು ಏರ್ಪಡಬೇಕೆಂದೂ ಶಪಿಸಿರುವನು. ಹೀಗೆ ಶಪಿಸಿರುವ ಬ್ರಹ್ಮದೇವನ ಜೊತೆಯಲ್ಲಿ ಆಲೋಚಿಸದೆ ತಾನೇ ಸ್ವತಂತ್ರನಾಗಿ ಅವರವರಿಗೆ ಅವರವರ ಪತಿಗಳ ಸಂಪರ್ಕವು ಮನುಷ್ಯಜನ್ಮದಲ್ಲಿಯೇ ಏರ್ಪಡುವಂತೆ ವರವನ್ನು ಕೊಟ್ಟಿರುವನು. ಇದು ಎರಡನೆಯ ಅಪರಾಧವೆನಿಸುತ್ತದೆ. ಬ್ರಹ್ಮದೇವರು ರುದ್ರನನ್ನು ಕುರಿತು ಹೇಳಿದನು.

" ಓ ರುದ್ರಾ, ನೀನು ಮಾಡಿರುವ ಎರಡು ಅಪರಾಧಗಳಲ್ಲಿ ಮೊದಲನೆಯ ಅಪರಾಧಕ್ಕೆ ನಿನಗೆ ಶಿಕ್ಷೆಯನ್ನು ಕೊಡುವೆನು. ನೀನು ಕೂಡಲೇ ಭೂಮಿಯಲ್ಲಿ ಹುಟ್ಟಬೇಕು. ದೇವೇಂದ್ರನು ನರನ ಆವೇಶದಿಂದ ಯುಕ್ತನಾಗಿ ಅರ್ಜುನ ಎಂಬ ಹೆಸರಿನಿಂದ ಹುಟ್ಟುವನು. ಈಗ ಅವನ ಮುಂದೆ ನೀನು ಸುಳ್ಳನ್ನು ಹೇಳಿರುವುದರಿಂದ ನಿನಗಿಂತ ಅಧಮನಾದ ಅವನಿಂದ ಸೋಲುತ್ತೀ, ಎರಡನೆಯ ಅಪರಾಧಕ್ಕೆ ಶಿಕ್ಷೆಯನ್ನು ಕೊಡುವೆನು. ನೀನು ಪಾರ್ವತೀ ಮುಂತಾದ ನಾಲ್ವರಿಗೆ ಮನುಷ್ಯದೇಹದಲ್ಲಿಯೇ ಅವರವರ ಪತಿಗಳ ಸಂಪರ್ಕವು ಏರ್ಪಡುವಂತೆ ವರವನ್ನು ಕೊಟ್ಟಿರುವಿ. ಈ ವರವು ನಿನ್ನವಿಷಯದಲ್ಲಿಯೇ ಸುಳ್ಳಾಗಲಿ, ನೀನು ಅಶ್ವತ್ಥಾಮ ಎಂಬ ಹೆಸರಿನಿಂದ ಹುಟ್ಟಿರುವಿ. ನಿನಗೆ ಈ ಜನ್ಮದಲ್ಲಿ ವಿವಾಹವಿಲ್ಲ. ಬಹುಕಾಲದ ವರೆಗೆ ಬ್ರಹ್ಮಚಾರಿಯಾಗಿಯೇ ವಾಸಿಸುವಿ. ನಿನ್ನ ಪತ್ನಿಯಾದ ಪಾರ್ವತೀದೇವಿಯೂ ದ್ರೌಪದೀ ದೇಹದಲ್ಲಿ ನಿನ್ನ ಸಂಪರ್ಕವಿಲ್ಲದೆ ಕೊನೆಯವರೆಗೂ ವಾಸಿಸುತ್ತಿರುವಳು. ದ್ರೌಪದೀದೇಹದಿಂದ ಅವಳಿಗೂ ಅಶ್ವತ್ಥಾಮ ದೇಹದಿಂದ ನಿನಗೂ ವಿಯೋಗವೂ ಏರ್ಪಟ್ಟಮೇಲೆ ಸ್ವಲೋಕಕ್ಕೆ ಹೋದ ಮೇಲೆ ಪಾರ್ವತೀದೇವಿಗೂ ನಿನನಗೂ ಸಮಾಗಮವು ಏರ್ಪಡುತ್ತದೆ.

ಹಿಂದೆ ಹೇಳಿರುವ ಐದು ಸ್ತ್ರೀಯರಿಂದ ಯುಕ್ತಳಾಗಿ ದ್ರೌಪದಿಯು ಹುಟ್ಟುವಳು. ಯಾರ ವಿಷಯದಲ್ಲಿ ರುದ್ರನು ಸುಳ್ಳನ್ನು ಹೇಳಿರುವನೋ ವಾಯುದೇವರು ಮುಂತಾದ ಐವರು ದ್ರೌಪದಿಯ ಪತಿಗಳಾಗುವರು. ಭಾರತೀದೇವಿಯ ಜೊತೆಯಲ್ಲಿಯೇ ಪಾರ್ವತಿಯು ಭೋಜನ, ಅಭ್ಯಂಜನ ಮುಂತಾದ ಎಲ್ಲಾ ಕಾರ್ಯಗಳನ್ನು ಮಾಡುವಳು. ಪಾತಿವ್ರತ್ಯಭಂಗಕರವಾದ ಯಾವ ಕಾರ್ಯಗಳನ್ನೂ ಮಾಡುತ್ತಿರುವುದಿಲ್ಲ. ಪಾರ್ವತೀ ಮುಂತಾದ ಸ್ತ್ರೀಯರು ಮೊದಲನೆಯ ಜನ್ಮದಲ್ಲಿ ತಪಸ್ಸನ್ನು ಮಾಡಿದರು. ತಮ್ಮತಮ್ಮ ಪತಿಗಳ ಸಂಪರ್ಕವು ಏರ್ಪಡಬೇಕೆಂದು ವರವನ್ನು ಬೇಡಿದರು. ಆ ವರವನ್ನೂ ರುದ್ರಾಂತರ್ಗತನಾದ ನಾರಾಯಣನೂ ರುದ್ರದೇವರೂ ಕೊಟ್ಟರು. ಮೂರನೆಯ ಇಂದ್ರಸೇನಾ ಎಂಬ ಜನ್ಮದಲ್ಲಿ ಮುಂದಿನ ಜನ್ಮದಲ್ಲಿಯೇ ತಮ್ಮ ತಮ್ಮ ಪತಿಗಳ ಸಂಪರ್ಕವನ್ನು ಕೊಡಬೇಕೆಂದು ವರವನ್ನು ಬೇಡುವುದಕ್ಕಾಗಿ ಪುನಃ ತಪಸ್ಸನ್ನು ಮಾಡಿದರು. ಆ ರೀತಿಯಾದ ವರವನ್ನೂ ಪಡೆದರು. ನಾಲ್ಕನೆಯ ಜನ್ಮದಲ್ಲಿ ದ್ರೌಪದೀ ಎಂಬ ಶರೀರದಲ್ಲಿ ಪಾರ್ವತೀದೇವಿಯರನ್ನು ಬಿಟ್ಟು ಉಳಿದಿರುವ ಸರ್ವರಿಗೂ ಅವರವರ ಪತಿಯ ಸಂಪರ್ಕವು ಏರ್ಪಟ್ಟಿತು. ಪಾರ್ವತೀದೇವಿಗೆ ಮಾತ್ರ ನಾಲ್ಕನೆಯ ದ್ರೌಪದೀಶರೀರವು ಹೋದಮೇಲೆ ಮೂಲರೂಪದಲ್ಲಿ ರುದ್ರದೇವರ ಪ್ರಾಪ್ತಿಯು ಏರ್ಪಡುತ್ತದೆ.

ಧೃಷ್ಟದ್ಯುಮ್ನ ಮತ್ತು ದ್ರೌಪದಿಯರು ಅಗ್ನಿಕುಂಡದಿಂದ ಮೇಲೆ ಬಂದವರು. ಆದ್ದರಿಂದ ಇವರಿಬ್ಬರಿಗೂ ಗರ್ಭವಾಸವಿಲ್ಲ. ಅಯೋನಿಜರೆನಿಸಿದರು. ಇವರಿಬ್ಬರಿಗೂ ತಾಯಿಯಲ್ಲಿ ಅಭಿಮಾನವು ಹುಟ್ಟುವುದಕ್ಕಾಗಿ

ದ್ರುಪದನ ಪತ್ನಿಯು ಇವರಿಬ್ಬರನ್ನೂ ತನಗೆ ಕೊಡಬೇಕೆಂದು ಯಾಜ, ಉಪಯಾಜ ಎಂಬ ಪುರೋಹಿತರನ್ನು ಬೇಡಿದಳು. ಅವರು ಕೊಟ್ಟರು. ಅವರಿಬ್ಬರು ದ್ರುಪದರಾಜನ ಮನೆಯಲ್ಲಿ ಆ ರಾಜನ ಪತ್ನಿಯಿಂದ ಲಾಲಿಸಲ್ಪಟ್ಟವರಾಗಿ ಬೆಳೆದರು. ದ್ರೋಣಾಚಾರ್ಯರು ಧೃಷ್ಟದ್ಯುಮ್ನನು ತನ್ನನ್ನು ಕೊಲ್ಲುವವನು ಎಂದು ತಿಳಿದರು. ತನ್ನ ಶಿಷ್ಯನೇ ತನ್ನನ್ನು ಕೊಂದನು ಎಂಬ ಕೀರ್ತಿಯನ್ನು ಉದ್ದೇಶಿಸಿ ಅವನಿಗೆ ಎಲ್ಲಾ ಅಸ್ತ್ರಗಳನ್ನೂ ಉಪದೇಶಿಸಿದರು. ಪರಶುರಾಮದೇವರಲ್ಲಿರುವ ಅಸ್ತ್ರವಿದ್ಯೆಯು ದೇವತೆಗಳಲ್ಲಿಯೂ ದುರ್ಲಭ, ಆದ್ದರಿಂದ ಧೃಷ್ಟದ್ಯುಮ್ನನು ಅಸ್ತ್ರಲೋಭದಿಂದ ದ್ರೋಣಾಚಾರ್ಯರಿಂದ ಅಸ್ತ್ರವಿದ್ಯೆಯನ್ನು ಅಭ್ಯಾಸ ಮಾಡಿದನು. ದ್ರುಪದಮಹಾರಾಜನನ್ನು ಭೀಮಸೇನದೇವರೂ ಅರ್ಜುನನೂ ಕಟ್ಟಿಹಾಕಿದ ವಿಷಯವನ್ನು ಶ್ರೀಕೃಷ್ಣದೇವನು ಕೇಳಿ ತಿಳಿದನು. ಪಾಂಡವರು ಶೂರನ ಮಗಳಾದ ಕುಂತಿಯ ಮಕ್ಕಳು. ಕೃತವರ್ಮನು ಶೂರರಾಜನ ತಮ್ಮನ ಮಗಳ ಮಗನು. ಆದ್ದರಿಂದ ಪಾಂಡವರಿಗೆ ಕೃತವರ್ಮನು ತಮ್ಮನಾಗುವನು. ಪಾಂಡವರ ಯೋಗಕ್ಷೇಮವನ್ನು ತಿಳಿಯುವುದಕ್ಕಾಗಿ ಕೃತವರ್ಮನನ್ನು ಹಸ್ತಿನಾವತಿಗೆ ಶ್ರೀಕೃಷ್ಣದೇವನು ಕಳುಹಿಸಿದನು. ಪಾಂಡವರಿಗಾಗಿ ಆಗಾಗ್ಗೆ ತನ್ನ ಪ್ರತಿನಿಧಿಗಳನ್ನು ಕಳುಹಿಸಿ ಅವರ ಯೋಗಕ್ಷೇಮವನ್ನು ವಿಚಾರಿಸುತ್ತಿರುವುದರಿಂದ ಪಾಂಡವರಲ್ಲಿ ತನಗಿರುವ ಅಸದೃಶವಾದ ಪ್ರೀತಿಯನ್ನು ವ್ಯಕ್ತಪಡಿಸಿದಂತಾಗುವುದಿಲ್ಲವೇ?

ಕೃತವರ್ಮನು ಹಸ್ತಿನಾವತಿಗೆ ಬಂದನು. ಪಾಂಡವರಿಗೆ ವಿಶೇಷವಾದ ಮರ್ಯಾದೆಯನ್ನು ಮಾಡಿದನು. ಅವರೂ ಅವನಿಗೆ ವಿಶೇಷ ಮರ್ಯಾದೆಯನ್ನು ಮಾಡಿದರು. ಅಲ್ಲಿಂದ ಹೊರಟನು. ಶ್ರೀಕೃಷ್ಣದೇವನಲ್ಲಿರುವ ಭಕ್ತಿಯಿಂದ ದ್ವಾರಕೆಗೆ ಹಿಂದಿರುಗಿದನು. ॥೧೪॥

**ವೈರೂಪ್ಯಂ ರುಕ್ಮಿಣೋ ಯೋಽಕೃತ ಮಣಿಸಹಿತಾಂ ಜಾಂಬವದ್ದೇಹಜಾತಾಂ**
**ಸತ್ಯಾಂ ತೇನೈವ ಯುಕ್ತಾಮಪಿ ಪರಿಜಗೃಹೇ ಹಸ್ತಿನಂ ಕುಲ್ಯಹೇತೋಃ ।**
**ಯಾತೋ ವ್ಯಸ್ಯಾಥ ಸತ್ಯಾಶುಚಮಥ ಸಮಗಾದ್ದ್ವಾರಕಾಂ ಸತ್ಯಯೇತೋ**
**ದ್ರಷ್ಟುಂ ಪಾರ್ಥಾನ್ ಸಕೃಷ್ಣಾನ್ ದ್ರುಪದಪುರಮಗಾದ್ವಿದ್ಧಲಕ್ಷ್ಯಾನ್ ಸ ಪಾಯಾತ್ ॥೧೫॥**

**ಪದಚ್ಛೇದ :-** ವೈರೂಪ್ಯಂ ರುಕ್ಮಿಣಃ ಯಃ ಅಕೃತ ಮಣಿಸಹಿತಾಂ ಜಾಂಬವದ್ದೇಹಜಾತಾಂ ಸತ್ಯಾಂ ತೇನ ಏವ ಯುಕ್ತಾಂ ಅಪಿ ಪರಿಜಗೃಹೇ ಹಸ್ತಿನಂ ಕುಲ್ಯಹೇತೋಃ ಯಾತಃ ವ್ಯಸ್ಯ ಅಥ ಸತ್ಯಾಶುಚಂ ಅಥ ಸಮಗಾತ್ ದ್ವಾರಕಾಂ ಸತ್ಯಯಾ ಇತಃ ದ್ರಷ್ಟುಂ ಪಾರ್ಥಾನ್ ಸಕೃಷ್ಣಾನ್ ದ್ರುಪದಪುರಂ ಅಗಾತ್ ವಿದ್ಧಲಕ್ಷ್ಯಾನ್ ಸಃ ಪಾಯಾತ್.

ಅನ್ವಯ - ಯಃ ರುಕ್ಮಿಣಃ ವೈರೂಪ್ಯಂ ಅಕೃತ ಮಣಿಸಹಿತಾಂ ಜಾಂಬವದ್ದೇಹಜಾತಾಂ ತೇನ ಏವ ಯುಕ್ತಾಂ ಸತ್ಯಾಂ ಅಪಿ ಪರಿಜಗೃಹೇ ಹಸ್ತಿನಂ ಕುಲ್ಯಹೇತೋಃ ಯಾತಃ ಅತ್ರ ಸತ್ಯಾಶುಚಂ ವ್ಯಸ್ಯ ಅಥ ಸತ್ಯಯಾ ಇತಃ ದ್ವಾರಕಾಂ ಸಮಗಾತ್ ವಿದ್ಧಲಕ್ಷ್ಯಾನ್ ಸಕೃಷ್ಣಾನ್ ಪಾರ್ಥಾನ್ ದ್ರಷ್ಟುಂ ದ್ರುಪದಪುರಂ ಅಗಾತ್ ಸಃ (ಮಾಂ) ಪಾಯಾತ್.

ಅನ್ವಯಾರ್ಥ - ಯಃ ಯಾವ ಶ್ರೀಕೃಷ್ಣದೇವನು ರುಕ್ಮಿಣಃ ರುಕ್ಮಿಣಿಯ ಅಣ್ಣನಾದ ರುಕ್ಮಿಗೆ **ವೈರೂಪ್ಯಂ** ವಿಕಾರವಾದ ರೂಪವನ್ನು ಅಕೃತ ಮಾಡಿದನೋ, **ಮಣಿಸಹಿತಾಂ** ಸ್ಯಮಂತಕ ಮಣಿಯಿಂದ ಸಹಿತಳಾದ **ಜಾಂಬವದ್ದೇಹಜಾತಾಂ** ಜಾಂಬವಂತನ ದೇಹದಿಂದ ಹುಟ್ಟಿದವಳಾದ ಜಾಂಬವತಿಯನ್ನೂ **ತೇನ ಏವ** ಅದೇ ಸ್ಯಮಂತಕ ಮಣಿಯಿಂದಲೇ **ಯುಕ್ತಾಂ** ಸಹಿತಳಾಗಿರುವ **ಸತ್ಯಾಂ ಅಪಿ** ಸತ್ಯಭಾಮಾದೇವಿಯನ್ನೂ **ಪರಿಜಗೃಹೇ**

ವಿವಾಹಮಾಡಿಕೊಂಡನೋ **ಹಸ್ತಿನಂ** ಹಸ್ತಿನಾವತಿಯನ್ನು ಕುರಿತು **ಕುಲ್ಯಹೇತೋಃ** ಪಾಂಡವರು ಅರಗಿನ ಮನೆಯಲ್ಲಿ ಬೂದಿಯಾದರು ಎಂದು ತಿಳಿದು ಅವರ ಉತ್ತರಕ್ರಿಯೆಗಾಗಿ **ಯಾತಃ** ಹೋದವನಾಗಿ **ಸತ್ಯಾಶುಚಂ** ಸತ್ಯಭಾಮೆಯ ದುಃಖವನ್ನು **ಅತ್ರ** ಈ ಹಸ್ತಿನಾವತಿಯಲ್ಲಿ **ವ್ಯಸ್ಯ** ಪರಿಹರಿಸಿ **ಸತ್ಯಯಾ** ಸತ್ಯಭಾಮೆಯಿಂದ **ಇತಃ** ಸಹಿತನಾಗಿ **ದ್ವಾರಕಾಂ** ದ್ವಾರಕೆಯನ್ನು ಕುರಿತು **ಸಮಗಾತ್** ಬಂದನೋ **ವಿದ್ಧಲಕ್ಷ್ಯಾನ್** ಗುರಿಯನ್ನು ಸರಿಯಾಗಿ ಹೊಡೆದಿರುವ **ಸಕೃಷ್ಣಾನ್** ದ್ರೌಪದಿಯಿಂದ ಸಹಿತರಾಗಿರುವ **ಪಾರ್ಥಾನ್** ಪಾಂಡವರನ್ನು **ದ್ರಷ್ಟುಂ** ನೋಡುವುದಕ್ಕೋಸ್ಕರ **ದ್ರುಪದಪುರಂ** ದ್ರುಪದರಾಜನ ಪಟ್ಟಣವನ್ನು ಕುರಿತು **ಅಗಾತ್** ಹೋದನೋ **ಸಃ** ಆ ಶ್ರೀಕೃಷ್ಣದೇವನು (ಮಾಂ) ನನ್ನನ್ನು **ಪಾಯಾತ್** ರಕ್ಷಿಸಲಿ.

ವಿಗ್ರಹ - ವಿಗತಂ ರೂಪಂ ಯಸ್ಯ ಸಃ ವಿರೂಪಃ ವಿರೂಪಸ್ಯ ಭಾವಃ ವೈರೂಪ್ಯಂ, ತತ್ ವೈರೂಪ್ಯಂ, ಮಣಿನಾ ಸಹಿತಾ ಮಣಿಸಹಿತಾ, ತಾಂ ಮಣಿಸಹಿತಾಂ; ಜಾಂಬವತಃ ದೇಹಃ ಜಾಂಬವದ್ದೇಹಃ, ಜಾಂಬವದ್ದೇಹಾತ್ ಜಾತಾ ಜಾಂಬವದ್ದೇಹಜಾತಾ, ತಾಂ ಜಾಂಬವದ್ದೇಹಜಾತಾಂ; ಕುಲ್ಯಸ್ಯ ಹೇತುಃ ಕುಲ್ಯಹೇತುಃ ತಸ್ಮಾತ್ ಕುಲ್ಯಹೇತೋಃ; ಸತ್ಯಾಯಾಃ ಶುಕ್ ಸತ್ಯಾಶುಕ್, ತಾಂ ಸತ್ಯಾಶುಚಂ; ಪೃಥಾಯಾಃ ಅಪತ್ಯಾನಿ ಪುಮಾಂಸಃ ಪಾರ್ಥಾಃ, ತಾನ್ ಪಾರ್ಥಾನ್; ಕೃಷ್ಣಯಾ ಸಹ ವರ್ತಂತೇ ಇತಿ ಸಕೃಷ್ಣಾಃ, ತಾನ್ ಸಕೃಷ್ಣಾನ್; ದ್ರುಪದಸ್ಯ ಪುರಂ ದ್ರುಪದಪುರಂ, ತತ್ ದ್ರುಪದಪುರಂ; ವಿದ್ಧಂ ಲಕ್ಷ್ಯಂ ಯೈಃ ತೇ ವಿದ್ಧಲಕ್ಷ್ಯಾಃ, ತಾನ್ ವಿದ್ಧಲಕ್ಷ್ಯಾನ್;.

ವಿಶೇಷಾರ್ಥ - (೭೧) ಕೃಷ್ಣಃ ರುಕ್ಮಿಣಃ ವೈರೂಪ್ಯಂ ಅಕೃತ - ಕೃಷ್ಣಃ ಸ್ವಕೃತರಾಕ್ಷಸವಿವಾಹಮಸಹಮಾನಂ ಸ್ವದ್ವೇಷಿಣಂ ರುಕ್ಮಿಣ್ಯಗ್ರಜಂ ಯುದ್ಧಾರ್ಥಮಾಗತಂ ರುಕ್ಮಿಣಂ ತದೀಯವಾಸಸಾ ನಿಬಧ್ಯ, ಪಂಚಚೂಡಿನಂ ವಿಧಾಯ ತಂ ವಿಸೃಜ್ಯ, ದ್ವಾರಕಾಂ ಪ್ರಾಪ್ಯ, ಸರ್ವಾನ್ ಸ್ವಕೀಯಾನ್ ಭೂಪಾಲಾನಾಹೂಯ, ವೇದೋಕ್ತಮಾರ್ಗೇಣ ರುಕ್ಮಿಣೀಮುದ್ವಾಹ್ಯ, ಸರ್ವಾನ್ ಸಂತೋಷ್ಯ, ಸುಖೇನ ನಿವಸನ್, ಈ ವಿಶೇಷಾರ್ಥವು ಹಿಂದೆ ವಿವರಿಸಲ್ಪಟ್ಟಿದೆ.

ವಿಶೇಷಾರ್ಥ - (೭೨) ಮಣಿಸಹಿತಾಂ ಜಾಂಬವದ್ದೇಹಜಾತಾಂ ಪರಿಜಗೃಹೇ.

ಕದಾಚಿತ್ ಸೂರ್ಯಮಂಡಲಾಂತರ್ಗತಂ ಹರಿಂ ಸಂತೋಷ್ಯ ತಸ್ಮಾದ್ಧರೇಃ ಸ್ಯಮಂತಕಾಖ್ಯಂ ಸೂರ್ಯಮಂಡಲಸದೃಶಪ್ರಕಾಶಂ ಮಣಿಂ ಪ್ರಾಪ್ಯ, ಕಂಠೇ ಧೃತ್ವಾ ಸ್ವಸೇವಾರ್ಥಂ ದ್ವಾರಕಾಮಾಗತಂ ಸತ್ರಾಜಿತಂ ತನ್ಮನೋಗತಲೋಭಪ್ರಕಾಶನಾಯ ಮಣಿಂ ದೇಹಿ ಇತಿ ಪ್ರಾರ್ಥ್ಯ, ತೇನ ಲುಬ್ಧೇನ ನಿರಾಕೃತಃ ಕದಾಚಿತ್ತದನುಜೇನ ಮೃಗಯಾರ್ಥಂ ವನಂ ಗಚ್ಛತಾ ಪ್ರಸೇನೇನ ಕಂಠೇ ಧೃತಂ, ಪ್ರಸೇನಂ ಹತ್ವಾ ಸಿಂಹೇನಾಪಹೃತಂ, ಸಿಂಹಂ ಹತ್ವಾ ಋಕ್ಷರಾಜೇನ ಜಾಂಬವತಾ ನೀತಂ, ಮಣಿಮಜಾನತಾ ಮದನುಜಂ ಹತ್ವಾ ಕೃಷ್ಣೇನಾಪಹೃತೋ ಮಣಿಃ ಇತ್ಯುಪಾಂಶೂದಿತಂ ಕ್ರಮೇಣ ಪೌರಜನೈಃ ಶ್ರುತ್ವಾ, ಸ್ವಗತನಿಂದಾದೋಷ ಪರಿಹಾರಾಯ ಸಕಲಯಾದವೈಃ ಸಹ ಪ್ರಸೇನ ಮಾರ್ಗೇಣ ವನಂ ಗತ್ವಾ, ತತ್ರ ಪೂರ್ವೋಕ್ತಂ ಸರ್ವಂ ಯಾದವಾನಾಂ ಪ್ರದರ್ಶ್ಯ, ಸರ್ವಾನ್ ಬಹಿರವಸ್ಥಾಪ್ಯ ಏಕ ಏವ ಜಾಂಬವದ್ಬಿಲಂ ಪ್ರವಿಶ್ಯ, ಸ್ವಸ್ವರೂಪಮಜಾನತಾ ತೇನ ಸಾಕಂ ಮಹದ್ಯುದ್ಧಂ ಕೃತ್ವಾ, ಶ್ರಾಂತೇನ ತೇನ ಸ್ವೋಪಾಸ್ಯಂ ರಾಮಂ ಸ್ಮರತಾ ರಾಮಾಭಿನ್ನತಯಾ ಜ್ಞಾತಃ ಯಸ್ಯೈವ ಋಉತ್ಕಲಿತರೋಷಕಟಾಕ್ಷಮೋಕ್ಷೈ ರ್ವರ್ತ್ಮಾದಿಶತ್ಕುಭಿತನಕ್ರತಿಮಿಂಗಿಲೋಬ್ಧಿಃ। ಸೇತುಃ ಕೃತಃ ಸ್ವಯಶ ಉಜ್ಜ್ವಲಿತಾ ಚ ಲಂಕಾರಕ್ಷಃಶಿರಾಂಸಿ ಭುವಿ ಪೇತು ರಿಷುಕ್ಷತಾನಿ ಇತ್ಯಾದಿರೂಪೇಣ ರಾಮಾಭಿನ್ನತಯಾ ಸ್ತುತಶ್ಚ ತಮನುಗೃಹ್ಯ ಯುವಾನಂ ಕೃತ್ವಾ, ತೇನ ದತ್ತಾಂ

ಜಾಂಬವತೀಂ ಸ್ಯಮಂತಕಮಣಿನಾ ಸಹ ಉಪಾದಾಯ, ಜಾಂಬವದಭೀಷ್ಟಂ ಕೃತ್ವಾ, ಗುಹಾಮುಖಾನ್ನಿಷ್ಕ್ರಮ್ಯ ದ್ವಾರಕಾಂ ಪ್ರಾಪ್ಯ, ಪಿತ್ರಾದೀನ್ ಸಂತೋಷ್ಯ, ಸಭಾಯಾಂ ಸಮಸ್ತವೃಷ್ಣಿಸನ್ನಿಧೌ ಸತ್ರಾಜಿತಮಾಹೂಯ ತಸ್ಮೈ ಸ್ಯಮಂತಕಮಣಿಂ ದತ್ವಾ.

ವಿಶೇಷಾರ್ಥ ವಿವರಣ - ಸತ್ರಾಜಿತ್ ಎಂಬ ಯಾದವನು ಸೂರ್ಯಮಂಡಲದಲ್ಲಿರುವ ನಾರಾಯಣನನ್ನು ಅತ್ಯಂತ ಭಕ್ತಿಯಿಂದ ಆರಾಧಿಸಿದನು. ನಾರಾಯಣನು ಪ್ರಸನ್ನನಾದನು.; ಸೂರ್ಯಮಂಡಲದಂತೆ ಹೊಳೆಯುತ್ತಿರುವ ಸ್ಯಮಂತಕ ಎಂಬ ಮಣಿಯನ್ನು ಸತ್ರಾಜಿನ್ಮಹಾರಾಜನಿಗೆ ಕೊಟ್ಟನು. ಆ ಮಣಿಯನ್ನು ಕಂಠದಲ್ಲಿ ಧರಿಸಿದವನಾಗಿ ಆ ರಾಜನು ಶ್ರೀಕೃಷ್ಣದೇವನನ್ನು ಸೇವಿಸುವುದಕ್ಕಾಗಿ ದ್ವಾರಕಾನಗರಕ್ಕೆ ಹಿಂದಿರುಗಿ ಬರುತ್ತಿದ್ದನು. ಅವನು ಶ್ರೀಕೃಷ್ಣಭಕ್ತನಾಗಿದ್ದರೂ ಮಹಾಲೋಭಿಯಾಗಿದ್ದನು. ಅವನ ಲೋಭವನ್ನು ಬಹಿರಂಗವಾಗಿ ತಿಳಿಸಬೇಕೆಂದು ಶ್ರೀಕೃಷ್ಣದೇವನು ಸಂಕಲ್ಪಿಸಿದನು. ಈ ಮಣಿಯು ಯಾವ ದೇಶದಲ್ಲಿರುತ್ತದೆಯೋ ಆ ದೇಶದಲ್ಲಿ ಯಾವ ವಿಧವಾದ ಹಾನಿಯೂ ಇರುವುದಿಲ್ಲ. ಆದ್ದರಿಂದ ಅದನ್ನು ನಮ್ಮ ಮಹಾರಾಜನಾಗಿರುವ ಉಗ್ರಸೇನನಿಗೆ ಕೊಡು" ಎಂದನು ಆ ಮಣಿಯು ಇರುವ ಸ್ಥಳದಲ್ಲಿ ಪ್ರತಿದಿನದಲ್ಲಿಯೂ ಎಂಟು ಭಾರದಷ್ಟು ಭಂಗಾರವು ಹುಟ್ಟುತ್ತದೆ. ಆ ಭಂಗಾರದ ಆಸೆಯಿಂದ ಸತ್ರಾಜಿತನು ಆ ಮಣಿಯನ್ನು ಉಗ್ರಸೇನರಾಜನಿಗೆ ಕೊಡಲಿಲ್ಲ. ಶ್ರೀಕೃಷ್ಣದೇವನ ಆಜ್ಞೆಯನ್ನು ನಿರಾಕರಿಸಿದ್ದರಿಂದ ಶ್ರೀಕೃಷ್ಣದೇವನ ಭಯವು ಅವನ ಮನಸ್ಸಿನಲ್ಲಿ ಯಾವಾಗಲೂ ಇದ್ದೇ ಇತ್ತು.

ಒಮ್ಮೆ ಸತ್ರಾಜಿತನ ತಮ್ಮನಾದ ಪ್ರಸೇನನು ಆ ಮಣಿಯನ್ನು ತನ್ನ ಕಂಠದಲ್ಲಿ ಧರಿಸಿದವನಾಗಿ ಬೇಟೆಗಾಗಿ ಕಾಡಿಗೆ ಹೋದನು. ಆಗ ಅಲ್ಲಿ ಒಂದು ಸಿಂಹವು ಪ್ರಸೇನನ ಕಂಠದಲ್ಲಿರುವ ಮಣಿಯನ್ನು ನೋಡಿತು. ಆ ಮಣಿಯು ಯಾವುದೋ ತಿನ್ನುವ ವಸ್ತುವೆಂದು ಅದಕ್ಕೆ ತೋರಿತು. ಪ್ರಸೇನನನ್ನು ಸಂಹರಿಸಿ ಮಣಿಯನ್ನು ಕಚ್ಚಿಕೊಂಡು ಹೋಯಿತು. ಈ ಸಿಂಹವನ್ನು ಕರಡಿಗಳ ರಾಜನಾದ ಜಾಂಬವಂತನು ನೋಡಿದನು. ಮಣಿಯ ಮೇಲಿರುವ ಆಸೆಯಿಂದ ಸಿಂಹವನ್ನು ಸಂಹರಿಸಿ ಮಣಿಯನ್ನು ಕಚ್ಚಿಕೊಂಡು ತನ್ನ ಗುಹೆಯೊಳಗೆ ಪ್ರವೇಶಿಸಿದನು.

ಸತ್ರಾಜಿದ್ರಾಜನು, ಬೇಟೆಗಾಗಿ ಕಾಡಿಗೆ ಹೋದ ಪ್ರಸೇನನು ಹಿಂದಿರುಗಿ ಬಾರದೆ ಇರುವುದನ್ನು ತಿಳಿದನು. ಮಣಿಯ ಮೇಲಿನ ಆಸೆಯಿಂದ ಶ್ರೀಕೃಷ್ಣದೇವನೇ ಪ್ರಸೇನನನ್ನು ಸಂಹರಿಸಿ ಮಣಿಯನ್ನು ಅಪಹರಿಸಿರುವುದಾಗಿ ಭ್ರಮಿಸಿದನು. ತನಗೆ ತಿಳಿದವರಲ್ಲೆಲ್ಲಾ ಗುಟ್ಟನಲ್ಲಿ ಇದೇ ವಿಷಯವನ್ನು ಕುರಿತು ಹೇಳುತ್ತಾ ಬಂದನು. ಕ್ರಮವಾಗಿ ಎಲ್ಲರಿಗೂ ಈ ವಿಷಯವು ತಿಳಿಯಿತು. ಈ ಅಪವಾದವನ್ನು ಶ್ರೀಕೃಷ್ಣದೇವನು ತಿಳಿದನು. ಈ ಅಪವಾದವು ಸುಳ್ಳೆಂದು ಸ್ಪಷ್ಟಪಡಿಸುವುದಕ್ಕಾಗಿ ಎಲ್ಲಾ ಯಾದವರನ್ನು ತನ್ನ ಜೊತೆಯಲ್ಲಿ ಬರುವಂತೆ ಹೇಳಿದನು. ಪ್ರಸೇನನು ಹೋದ ಹಾದಿಯಲ್ಲಿ ಕಾಡಿಗೆ ಹೋದನು. ಪ್ರಸೇನನ ಹೆಣವು ಬಿದ್ದಿರುವುದನ್ನು ತೋರಿಸಿದನು. ಆ ದೇಹದಲ್ಲಿ ಸಿಂಹದ ಉಗುರುಗಳ ಮತ್ತು ಕೋರೆ ಹಲ್ಲುಗಳ ಗುರುತುಗಳನ್ನು ತೋರಿಸಿದನು. ಇದರಿಂದ ಪ್ರಸೇನನನ್ನು ಶ್ರೀಕೃಷ್ಣದೇವನು ಕೊಲ್ಲಲಿಲ್ಲವೆಂದೂ ಸಿಂಹವು ಸಂಹರಿಸಿದೆಯೆಂದೂ ತಿಳಿಸಿದಂತಾಯಿತು. ಅಲ್ಲಿಂದಲೇ ಹಿಂದಿರುಗಬಹುದಾಗಿತ್ತು.

ಆದರೆ ಅಲ್ಲಿಂದ ಮುಂದೆ ಹೊರಟು ಮಣಿಯನ್ನು ಹುಡುಕುವಂತೆ ನಟಿಸುತ್ತಾ ರಾಮಾವತಾರಕಾಲದಲ್ಲಿ ಅತ್ಯಂತ ಭಕ್ತಿಯಿಂದ ತನ್ನನ್ನು ಸೇವಿಸಿದ ಜಾಂಬವಂತನಿಗೆ ಅನುಗ್ರಹವನ್ನು ಮಾಡಬೇಕೆಂದು ಸಂಕಲ್ಪಿಸಿದನು. ಸ್ವಲ್ಪದೂರದಲ್ಲಿ ಸಿಂಹವೂ ಸತ್ತು ಬಿದ್ದಿತ್ತು. ಆ ಸಿಂಹದ ಶರೀರದಲ್ಲಿ ಕರಡಿಯ ಉಗುರುಗಳ ಗುರುತುಗಳನ್ನು

ತೋರಿಸಿದನು. ಇದರಿಂದ ಸಿಂಹವೂ ಕರಡಿಯಿಂದ ಕೊಲ್ಲಲ್ಪಟ್ಟಿತು ಎಂದು ತಿಳಿಸಿದನು. ಅಲ್ಲಿಂದ ಸ್ವಲ್ಪ ದೂರದ ವರೆಗೆ ಕರಡಿಯ ಹೆಜ್ಜೆಯ ಗುರುತುಗಳನ್ನು ಅನುಸರಿಸಿ ಹೋದನು. ಒಂದು ಗುಹೆಯೊಳಗೆ ಹೋದ ಹೆಜ್ಜೆಯ ಗುರುತನ್ನು ತೋರಿಸಿದನು. ಕರಡಿಯು ಈ ಗುಹೆಯೊಳಗೆ ಎಲ್ಲೋ ಇರಬೇಕೆಂದು ನಾನೊಬ್ಬನೇ ಗುಹೆಯೊಳಗೆ ಹೋಗುತ್ತೇನೆಂದೂ ನೀವೆಲ್ಲರೂ ನಾನು ಮಣಿಯನ್ನು ಕಂಡುಹಿಡಿದು ಹಿಂದಿರುಗಿ ಬರುವ ವರೆಗೂ ಇಲ್ಲಿಯೇ ಇರಬೇಕೆಂದೂ ಹೇಳಿದನು. ಅವರೆಲ್ಲರೂ ಅಲ್ಲಿಯೇ ನಿಂತರು.

ಶ್ರೀಕೃಷ್ಣದೇವನು ಅಂಧಕಾರಮಯವಾದ ಗುಹೆಯಲ್ಲಿ ಬಹುದೂರದವರೆಗೆ ಹೋದನು. ಕೊನೆಗೆ ಗುಹೆಯ ಒಂದು ಪ್ರದೇಶದಲ್ಲಿ ಬೆಳಕು ಕಾಣಿಸಿತು. ಅಲ್ಲಿ ಜಾಂಬವಂತನ ಮಗಳಾಗಿರುವ ಜಾಂಬವತಿಯು ತನ್ನ ತಮ್ಮನಾದ ಚಿಕ್ಕ ಮಗುವನ್ನು ತೊಟ್ಟಿಲಿನಲ್ಲಿ ತೂಗುತ್ತಿದ್ದಳು. "ಸಿಂಹಃ ಪ್ರಸೇನಮವಧೀತ್ ಸಿಂಹೋ ಜಾಂಬವತಾ ಹತಃ। ಸುಕುಮಾರಕ ಮಾ ರೋದೀಸ್ತವ ಹ್ಯೇಷಃ ಸ್ಯಮಂತಕಃ" ಅಂದರೆ 'ಎಲೈ ಮಗುವೇ, ಈ ಸ್ಯಮಂತಕಮಣಿಯು ಪ್ರಸೇನನ ಕಂಠದಲ್ಲಿತ್ತು. ಅವನನ್ನು ಸಿಂಹವು ಕೊಂದಿತು. ಸಿಂಹವನ್ನು ನಮ್ಮ ತಂದೆಯಾದ ಜಾಂಬವಂತನು ಕೊಂದು ಈ ಮಣಿಯನ್ನು ವಶಪಡಿಸಿಕೊಂಡನು. ಈಗ ನಮ್ಮ ತಂದೆಯ ಸೊತ್ತಾಗಿರುವ ಈ ಮಣಿಯು ಇನ್ನು ಮುಂದೆ ನಿನ್ನ ಸೊತ್ತಾಗುತ್ತದೆ. ಆದ್ದರಿಂದ ಮಗುವೇ, ಅಳಬೇಡ" ಎಂದು ಹೇಳುತ್ತಾ ತೊಟ್ಟಿಲಿನ ಮೇಲ್ಭಾಗದಲ್ಲಿ ಜೋಲಾಡುತ್ತಿರುವ ಮಣಿಯನ್ನು ತೋರಿಸುತ್ತಾ ಹೇಳುತ್ತಿದ್ದಳು. ಈ ಮಾತುಗಳನ್ನು ಶ್ರೀಕೃಷ್ಣದೇವನು ಆಲಿಸಿ ಕೇಳಿದನು. ಜಾಂಬವತಿಯ ಮುಂದೆ ಬಂದು ನಿಂತನು. ಮಣಿಯ ಕಡೆಗೆ ಕೈಚಾಚಿದನು. ಜಾಂಬವತಿಯು ಅಪೂರ್ವಪುರುಷನನ್ನು ನೋಡಿದಳು. ಬೆದರಿದಳು, ತಂದೆಯನ್ನು ಕರೆದಳು. ಗುಹೆಯ ಒಳಗಿನಿಂದ ಜಾಂಬವಂತನು ಓಡಿಬಂದನು. ಶ್ರೀಕೃಷ್ಣದೇವನನ್ನು ನೋಡಿದನು. ಅಪೂರ್ವಪುರುಷನೆಂದು ಭ್ರಮಿಸಿದನು. ಶ್ರೀಕೃಷ್ಣದೇವನೊಡನೆ ೨೮ ದಿನಗಳ ವರೆಗೆ ಹೋರಾಡಿದನು. ಕೊನೆಗೆ ಅವನ ಶಕ್ತಿಯು ಕುಗ್ಗಿತು. ತನ್ನಿಂದ ಉಪಾಸ್ಯನಾದ ಶ್ರೀರಾಮದೇವನನ್ನು ಸ್ಮರಿಸಿದನು ಆಗ ಶ್ರೀಕೃಷ್ಣದೇವನ ದೇಹದಲ್ಲಿ ಶ್ರೀರಾಮದೇವನಲ್ಲಿರುವ ಎಲ್ಲಾ ಲಕ್ಷಣಗಳನ್ನೂ ಕಂಡನು. ಶ್ರೀರಾಮದೇವನೇ ತನ್ನನ್ನು ಅನುಗ್ರಹಿಸುವುದಕ್ಕಾಗಿ ಈ ರೂಪದಿಂದ ಬಂದಿರುವುದಾಗಿ ತೀರ್ಮಾನಿಸಿದನು.

" ಓ ರಾಮದೇವ, ನೀನು ಕೋಪಾದಿದೋಷಗಳಿಲ್ಲದವನು. ಸಮುದ್ರರಾಜನು ನಿನಗೆ ಮಾರ್ಗವನ್ನು ಬಿಟ್ಟುಕೊಡಲಿಲ್ಲ. ಆಗ ನೀನು ಕುಪಿತನಾದವನಂತೆ ನಟಿಸಿದಿ. ಕಡೆಗಣ್ಣನ್ನು ಕೆಂಡದಂತೆ ಕೆಂಪಾಗುವಂತೆ ಮಾಡಿದವನಾಗಿ ಸಮುದ್ರರಾಜನನ್ನು ನೋಡಿದಿ. ಅಷ್ಟರಲ್ಲಿ ಸಮುದ್ರದಲ್ಲಿರುವ ಮೊಸಳೆಗಳು ತಿಮಿಂಗಿಲಗಳು ಮುಂತಾದ ಎಲ್ಲಾ ಪ್ರಾಣಿಗಳೂ ಬಂದು ಹೋದವು. ಸಮುದ್ರರಾಜನು ಶರಣಾಗತನಾದನು. ಸಮುದ್ರದಲ್ಲಿ ಸೇತುವನ್ನು ಕಟ್ಟಿದಿ. ಇದರಿಂದ ನಿನ್ನ ಕೀರ್ತಿಯು ಪ್ರಪಂಚದಲ್ಲಿ ವ್ಯಾಪ್ತವಾಯಿತು. ಲಂಕಾಪಟ್ಟಣವನ್ನು ಸುಟ್ಟು ಬೂದಿ ಮಾಡಿದಿ. ನಿನ್ನ ಬಾಣಗಳಿಂದ ಕತ್ತರಿಸಲ್ಪಟ್ಟ ರಾಕ್ಷಸರ ತಲೆಗಳು ಉರುಳಿಬಿದ್ದವು. ಅಂತಹ ನಿನ್ನನ್ನು ಈಗ ನೋಡಿದೆ. ಧನ್ಯನಾದೆ" ಎಂದನು.

ಶ್ರೀಕೃಷ್ಣದೇವನು ಜಾಂಬವಂತನ ಭಕ್ತಿಗೆ ಮೆಚ್ಚಿದನು. ರಾಮಾವತಾರಕಾಲದಲ್ಲಿಯೇ ಮುದುಕನಾಗಿದ್ದ ಮತ್ತು ಶ್ರೀಕೃಷ್ಣದೇವನಿಗೆ ತನ್ನ ಕನ್ಯೆಯನ್ನು ಕೊಟ್ಟು ವಿವಾಹಮಾಡುವುದಕ್ಕಾಗಿಯೇ ಇಷ್ಟರವರೆಗೂ ಬದುಕಿದ್ದ ಈ

ಹಣ್ಣುಮುದುಕನನ್ನು ನೋಡಿದನು. ಸುದರ್ಶನಚಕ್ರದಿಂದ ಶೀಳಿದನು. ಅವನ ಜೀರ್ಣವಾದ ದೇಹವು ವೇದನೆಯಿಲ್ಲದೆ ಹೋಯಿತು. ತಾರುಣ್ಯಯುಕ್ತವಾದ ದೇಹವು ಬಂತು. ತನ್ನ ಮಗಳಾದ ರೋಹಿಣೀ ಎಂದು ಪ್ರಸಿದ್ಧಳಾದ ಜಾಂಬವತಿಯನ್ನು ಕೊಟ್ಟು ವಿವಾಹವನ್ನು ಮಾಡಿದನು. ಸ್ಯಮಂತಕ ಮಣಿಯನ್ನು ವರದಕ್ಷಿಣೆಯಾಗಿ ಕೊಟ್ಟನು. ಶ್ರೀಕೃಷ್ಣದೇವನು ಜಾಂಬವಂತನಿಗೆ ಬೇಕಾದ ಎಲ್ಲಾ ವಿಧವಾದ ವರಗಳನ್ನೂ ಕೊಟ್ಟನು. ಅಲ್ಲಿಂದ ಜಾಂಬವತೀಸಹಿತನಾಗಿ ಹೊರಟನು. ಗುಹಾದ್ವಾರದಿಂದ ಹೊರಗೆ ಬಂದನು.

ಗುಹಾದ್ವಾರದಲ್ಲಿ ಶ್ರೀಕೃಷ್ಣದೇವನ ಆಜ್ಞೆಯಂತೆ ಕಾದಿದ್ದ ಎಲ್ಲಾ ಯಾದವರೂ ಹನ್ನೆರಡು ದಿನಗಳ ವರೆಗೂ ಶ್ರೀಕೃಷ್ಣದೇವನು ಹಿಂದಿರುಗದಿದ್ದುದನ್ನು ತಿಳಿದು ತುಂಬಾ ದುಃಖಿತರಾದರು. ಅಲ್ಲಿಂದ ದ್ವಾರಕೆಗೆ ಬಂದರು. ವಸುದೇವ ಮುಂತಾದ ಎಲ್ಲಾ ಯಾದವರಿಗೂ ಸಮಾಚಾರವನ್ನು ತಿಳಿಸಿದರು. ಎಲ್ಲರೂ ದ್ವಾರಕಾಪಟ್ಟಣದ ಮಹಾದ್ವಾರದಲ್ಲಿರುವ ದುರ್ಗಾದೇವಿಯನ್ನು ಅತ್ಯಂತ ಭಕ್ತಿಯಿಂದ ಆರಾಧಿಸಿದರು. ಉದ್ಯಾಪನದಿನದಲ್ಲಿ ಶ್ರೀಕೃಷ್ಣದೇವನು ಜಾಂಬವತೀಸಮೇತನಾಗಿ ಬಂದನು. ಅವನನ್ನು ನೋಡಿದ ಸರ್ವರಿಗೂ ಅಪಾರವಾದ ಸಂತೋಷವು ಏರ್ಪಟ್ಟಿತು. ಶ್ರೀಕೃಷ್ಣದೇವನು ತನ್ನ ಸಭೆಗೆ ಸತ್ರಾಜಿದ್ರಾಜನನ್ನು ಕರೆಯಿಸಿದನು. ಎಲ್ಲರ ಮಧ್ಯದಲ್ಲಿಯೂ ನಡೆದ ವಿಷಯವನ್ನು ಸಾಕ್ಷಿಪೂರ್ವಕವಾಗಿ ಸಮರ್ಥಿಸಿದನು. ಸತ್ರಾಜಿದ್ರಾಜನಿಗೆ ಮಣಿಯನ್ನು ಕೊಟ್ಟನು.

# ಸತ್ಯಭಾಮಾ ವಿವಾಹ

**ವಿಶೇಷಾರ್ಥ - (೭೩) ಕೃಷ್ಣಃ ಸತ್ಯಾಂ ತೇನೈವ ಯುಕ್ತಾಮಪಿ ಪರಿಜಗೃಹೇ**

**ತೇನ ಸತ್ರಾಜಿತಾ ಮಿಥ್ಯಾಭಿಶಂಸನರೂಪಸ್ವರೂಪಕೃತಾಪರಾಧಶಾಂತ್ಯೈ ದತ್ತಾಂ ತತ್ಪುತ್ರೀಂ ಸಾಕ್ಷಾಲ್ಲಕ್ಷ್ಮೀಂ ಸತ್ಯಭಾಮಾಂ ಸರತ್ನಕಾಂ ಪರಿಗೃಹ್ಯ, ಮಣಿಂ ತಸ್ಮಿನ್ನೇವ ನಿಧಾಯ ತಯಾ ಸಹ ರಮಮಾಣಃ**

ವಿಶೇಷಾರ್ಥ ವಿವರಣ - ಸತ್ರಾಜಿದ್ರಾಜನು ಶ್ರೀಕೃಷ್ಣದೇವನ ಮೇಲೆ ಇಲ್ಲದ ಸುಳ್ಳು ಅಪವಾದವನ್ನು ಹೊರಿಸಿದನು. ಇದಕ್ಕಾಗಿ ತುಂಬಾ ಖಿನ್ನನಾದನು. ಕಾಂತಿಹೀನನಾದನು. ತಾನು ಮಾಡಿರುವ ಅಪಾರವಾದ ಪಾಪಗಳನ್ನು ಕಳೆದುಕೊಳ್ಳುವುದಕ್ಕೋಸ್ಕರ ತನ್ನ ಮಗಳಾದ ಸತ್ಯಭಾಮಾದೇವಿಯನ್ನು ಶ್ರೀಕೃಷ್ಣದೇವನಿಗೆ ಕೊಟ್ಟು ವಿವಾಹಮಾಡುವುದಾಗಿ ತೀರ್ಮಾನಿಸಿದನು. ಈ ಅಪವಾದವನ್ನು ಹೊರಿಸಲು ಮುಖ್ಯಕಾರಣವಾಗಿರುವ ಸ್ಯಮಂತಕಮಣಿಯನ್ನೂ ಶ್ರೀಕೃಷ್ಣದೇವನಿಗೆ ವರದಕ್ಷಿಣೆಯಾಗಿ ಕೊಡುವುದಾಗಿ ತೀರ್ಮಾನಿಸಿದನು. ಅದರಂತೆಯೇ ಮಾಡಿದನು. ಶ್ರೀಕೃಷ್ಣದೇವನನ್ನು ನಮಸ್ಕರಿಸಿದನು. ತನ್ನ ಅಪರಾಧಗಳನ್ನು ಮನ್ನಿಸಬೇಕೆಂದು ಪ್ರಾರ್ಥಿಸಿದನು. ಶ್ರೀಕೃಷ್ಣದೇವನು ಸತ್ಯಭಾಮಾದೇವಿಯನ್ನು ಸ್ವೀಕರಿಸಿದನು. ಲಕ್ಷ್ಮೀದೇವಿಯರು "ಶ್ರೀ" "ಭೂ" ಎಂಬ ಎರಡು ರೂಪಗಳನ್ನು ಸ್ವೀಕರಿಸಿದರು. "ಭೂ" ಎಂಬ ಅವರ ರೂಪವೇ "ಸತ್ಯಭಾಮಾ" ಎಂಬ ರೂಪದಿಂದ ಅವತರಿಸಿತು. "ಶ್ರೀ" ಎಂಬ ರೂಪವೇ "ರುಕ್ಮಿಣೀ" ಎಂಬ ರೂಪದಿಂದ ಅವತರಿಸಿತು. ಈ ಎರಡು ರೂಪಗಳಿಗೂ ಯಾವ ವಿಧವಾದ ವ್ಯತ್ಯಾಸವೂ ಇಲ್ಲ. ಶ್ರೀಕೃಷ್ಣದೇವನು ಮಣಿಯನ್ನು ಹಿಂದಿರುಗಿಸಿ ಅವನಿಗೆಯೇ ಕೊಟ್ಟನು. ಸತ್ಯಭಾಮಾದೇವಿಯಿಂದ ಸಹಿತನಾಗಿ ಸುಖವಾಗಿ ವಾಸಿಸಿದನು.

# ಧರ್ಮೋದಕಕ್ಕಾಗಿ ಶ್ರೀಕೃಷ್ಣದೇವನ ಹಸ್ತಿನಾವತೀಯಾತ್ರೆ

(೭೪) ಹಸ್ತಿನಂ ಕುಲ್ಯಹೇತೋಃ ಯಾತಃ - ಪಾಂಡವರು ಅರಗಿನ ಮನೆಯಲ್ಲಿ ಬೆಂದು ಸತ್ತರು ಎಂಬ ಸಮಾಚಾರವನ್ನು ಕೇಳಿದನು. ಸತ್ತ ಬಂಧುಗಳಿಗಾಗಿ ಧರ್ಮೋದಕವನ್ನು ಕೊಡಬೇಕು. ದುಃಖವನ್ನು ವಿಚಾರಿಸಬೇಕೆಂಬ ಸಂಪ್ರದಾಯವನ್ನು ಅನುಸರಿಸಿ ಹಸ್ತಿನಾವತಿಗೆ ಹೋದನು.

ವಿಶೇಷಾರ್ಥ - ಕದಾಚಿಲ್ಲಾಕ್ಷಾಗೃಹೇ ದಗ್ಧಾಃ ಪಾಂಡವಾ ಇತ್ಯಾಕರ್ಣ್ಯ, ಬಂಧುದುಃಖವಿಚಾರಾರ್ಥಂ ಹಸ್ತಿನಾಪುರಂ ಪ್ರಾಪ್ಯ ಧೃತರಾಷ್ಟ್ರಾದೀನ್ ಸಾಂತ್ವಯಿತ್ವಾ.

ವಿಶೇಷಾರ್ಥ ವಿವರಣ - ಎಲ್ಲಾ ಸಜ್ಜನರಾದ ರಾಜರುಗಳು ಇಷ್ಟರವರೆಗೆ ಜರಾಸಂಧನೇ ಬಲಿಷ್ಠನೆಂದು ನಂಬಿದ್ದರು. ಶ್ರೀಕೃಷ್ಣದೇವನು ಅವನನ್ನು ಒಂದೊಂದು ಯುದ್ಧದಲ್ಲಿಯೂ ಸೋಲಿಸಿದನು. ಇದರಿಂದ ಜರಾಸಂಧನೇ ಬಲಿಷ್ಠನೆಂಬ ಭ್ರಮವು ಎಲ್ಲಾ ರಾಜರುಗಳಿಗೂ ಹೋಯಿತು. ಈಗ ಭೀಮಸೇನದೇವರ ಮತ್ತು ಅರ್ಜುನನ ಬಲವನ್ನು ತಿಳಿದರು. ಅವರಿಬ್ಬರ ಬಲದ ಮುಂದೆ ಜರಾಸಂಧನ ಬಲವು ತೃಣಪ್ರಾಯವಾಗಿ ಕಾಣಿಸಿತು. ಎಲ್ಲಾ ಪಾಂಡವರಲ್ಲಿಯೂ ಶ್ರೀಕೃಷ್ಣದೇವನು ಇಟ್ಟಿರುವ ಅಪಾರ ಸ್ನೇಹವನ್ನು ತಿಳಿದರು. ಜರಾಸಂಧನಲ್ಲಿರುವ ಭಯವು ಸಂಪೂರ್ಣವಾಗಿ ಹೋಯಿತು. ಪಾಂಡವರ ಪಕ್ಷದಲ್ಲಿ ಸರ್ವಸಜ್ಜನರೂ ಸೇರಿದರು. ಹಿಂದೆ ಈ ರಾಜರುಗಳು ಜರಾಸಂಧನ ಭಯದಿಂದಲೇ ಅವನ ಪಕ್ಷದಲ್ಲಿ ಸೇರಿದ್ದರು. ಅವನಲ್ಲಿ ಸ್ನೇಹದಿಂದಲ್ಲ. ಹಿಂದಿನ ಜನ್ಮಗಳ ಅಭ್ಯಾಸಬಲದಿಂದಲೇ ಶ್ರೀಕೃಷ್ಣದೇವನಲ್ಲಿಯೂ ಪಾಂಡವರಲ್ಲಿಯೂ ಸ್ನೇಹವುಳ್ಳವರು ಈ ಜನ್ಮದಲ್ಲಿಯೂ ಶ್ರೀಕೃಷ್ಣದೇವನಲ್ಲಿಯೂ ಪಾಂಡವರಲ್ಲಿಯೂ ಸ್ನೇಹವನ್ನು ಇಟ್ಟುಕೊಂಡಿರುವುದು ಅತ್ಯಂತ ಯುಕ್ತವಾಗಿದೆ.

ಶ್ರೀಕೃಷ್ಣದೇವನಿಂದ ಅನೇಕ ಸಂದರ್ಭಗಳಲ್ಲಿ ಪರಾಜಿತನಾದ ಜರಾಸಂಧನಲ್ಲಿ ಅಯೋಗ್ಯರಾಜರುಗಳು ಈಗಲೂ ಸ್ನೇಹವನ್ನು ಇಟ್ಟುಕೊಂಡಿದ್ದರು. ಜನ್ಮಾಂತರಸಂಸ್ಕಾರವು ಬಲಿಷ್ಠವಲ್ಲವೇ? ದೇವತೆಗಳು ದೈತ್ಯರನ್ನು ಯಾವುದೋ ಒಂದು ಕಾರಣದಿಂದ ಆಶ್ರಯಿಸುವುದುಂಟು. ಆದರೆ ಶ್ರೀಹರಿಯಲ್ಲಿಯೂ ಶ್ರೀಹರಿಭಕ್ತರಲ್ಲಿಯೂ ಸ್ನೇಹವನ್ನು ಮನಸ್ಸಿನಿಂದಲೇ ಮಾಡುತ್ತಿರುವರು. ಇದರಂತೆ ದೈತ್ಯರೂ ಯಾವುದೋ ಒಂದು ಕಾರಣದಿಂದ ಶ್ರೀಹರಿಯ ಮತ್ತು ಶ್ರೀಹರಿಭಕ್ತರ ಪಕ್ಷದಲ್ಲಿ ಸೇರಿದ್ದರೂ ಮನಸ್ಸಿನಲ್ಲಿ ಶ್ರೀಹರಿಯಲ್ಲಿಯೂ ಶ್ರೀಹರಿ ಭಕ್ತರಲ್ಲಿಯೂ ದ್ವೇಷಿಸುತ್ತಲೇ ಇರುವರು.

# ಧರ್ಮರಾಜನಿಗೆ ಯೌವರಾಜ್ಯದಲ್ಲಿ ಪಟ್ಟಾಭಿಷೇಕ

ಧೃತರಾಷ್ಟ್ರನು ಸ್ವಭಾವದಿಂದ ಯೋಗ್ಯಜೀವನು. ಭೀಮಸೇನದೇವರ ಮತ್ತು ಅರ್ಜುನನ ಬಲವನ್ನು ತಿಳಿದವನು. ಪಾಂಡವರಲ್ಲಿ ವಿಶೇಷವಾದ ಪ್ರೀತಿಯು ಅವನಿಗೆ ಸ್ವಭಾವದಿಂದಲೇ ಇತ್ತು. ಧರ್ಮರಾಜನು ಧೃತರಾಷ್ಟ್ರನ ಮಕ್ಕಳಿಗಿಂತ ವಯಸ್ಸಿನಲ್ಲಿ ದೊಡ್ಡವನು. ಆದ್ದರಿಂದ ತುಂಬಾ ಸಂತೋಷದಿಂದ ಅವನನ್ನು ಯುವರಾಜಪದವಿಯಲ್ಲಿ ಪಟ್ಟಾಭಿಷೇಕ ಮಾಡಿದನು. ಭೀಮಸೇನದೇವರೂ ಅರ್ಜುನನೂ ನಾಲ್ಕು ದಿಕ್ಕುಗಳಲ್ಲಿರುವ ಎಲ್ಲಾ ರಾಜರುಗಳನ್ನೂ ಜಯಿಸಿದರು. ಅವರೆಲ್ಲರೂ ಧೃತರಾಷ್ಟ್ರನಿಗೆ ಕಾಣಿಕೆಗಳನ್ನು ಕೊಡುವಂತೆ ಮಾಡಿದರು. ಯಾರಿಂದಲೂ ಜಯಿಸುವುದಕ್ಕೆ ಸಾಧ್ಯವಿಲ್ಲದಿರುವ ಇವರಿಬ್ಬರು ಮಾಡಿರುವ ದಿಗ್ವಿಜಯವು ಇತರ ಮನುಷ್ಯರಿಂದ ಯಾರಿಂದಲೂ

ಮಾಡಲು ಸಾಧ್ಯವಿಲ್ಲದುದು. ಇದರಿಂದ ಧೃತರಾಷ್ಟ್ರನೂ ಪುರವಾಸಿಗಳೂ ದೇಶದಲ್ಲಿರುವವರೂ ಭೀಷ್ಮದ್ರೋಣ ಮುಂತಾದ ಹಿರಿಯರೂ ಪಾಂಡವರಲ್ಲಿ ಅತ್ಯಂತ ಪ್ರೀತಿಯನ್ನು ಮಾಡಿದರು. ಹೀಗೆ ಶ್ರೇಷ್ಠವಾದ ಪರಮಮಂಗಲಕರವಾದ ಗುಣಗಳಿಂದ ಯುಕ್ತರಾದ ಎಲ್ಲಾ ಪಾಂಡವರೂ ಶ್ರೀಕೃಷ್ಣದೇವನಿಂದ ಸಹಿತರಾಗಿ ಅತ್ಯಧಿಕವಾದ ಪುಣ್ಯಕಾರ್ಯಗಳನ್ನು ಮಾಡುತ್ತಿದ್ದರು.

## ಧೃತರಾಷ್ಟ್ರನಿಗೆ ನಾಸ್ತಿಕ್ಯನೀತಿಯ ಉಪದೇಶ

ಗುರುಗಳು ದೇವತೆಗಳು ಮುಂತಾದ ಸಜ್ಜನರಿಲ್ಲ ಮುಂತಾದ ದುರ್ಬೋಧನೆಯು ನಾಸ್ತಿಕ್ಯನೀತಿಯೆನಿಸುತ್ತದೆ. ನಾಸ್ತಿಕ್ಯನೀತಿಯಲ್ಲಿ ಕಪಟವೇ ಶ್ರೇಷ್ಠವೆನಿಸುತ್ತದೆ. ಸ್ವಪ್ರಯೋಜನಕ್ಕಾಗಿಯೂ ದೇವತೆಗಳನ್ನು ಪೂಜಿಸಕೂಡದು. ಹೀಗಿರುವಾಗ ಬೇರೆ ಉದ್ದೇಶಗಳಿಂದ ದೇವತೆಗಳನ್ನು ಪೂಜಿಸಕೂಡದೆಂದು ಹೇಳಬೇಕಾಗಿಲ್ಲ. ಪ್ರಪಂಚದಲ್ಲಿರುವ ಇತರರನ್ನು ವಂಚಿಸುವುದಕ್ಕಾಗಿಯೇ ಸಂಧ್ಯಾವಂದನ, ಯಜ್ಞ, ದಾನ, ದೇವಪೂಜಾ ಮುಂತಾದ ಸಕಲ ಸತ್ಕಾರ್ಯಗಳನ್ನೂ ಮಾಡುತ್ತಿರಬೇಕು. ಯಾರು ಸರ್ವರಿಗಿಂತಲೂ ಅಧಿಕವಾಗಿ ಕಪಟಿಯೋ ಅವನೇ ಶ್ರೇಷ್ಠನು. ಇದು ನಾಸ್ತಿಕ್ಯನೀತಿಯ ತಿರುಳು.

ಶುಕ್ರಾಚಾರ್ಯರು ಎಲ್ಲಾ ದೈತ್ಯರುಗಳಿಗೂ ಗುರುಗಳು. ಕಲಿಂಗ ಎಂಬ ದೈತ್ಯಬ್ರಾಹ್ಮಣನು ನಾಸ್ತಿಕ್ಯ ನೀತಿಯಲ್ಲಿ ಶುಕ್ರಾಚಾರ್ಯರ ಶಿಷ್ಯನು, ಶಕುನಿಯು ಈ ಕಲಿಂಗನ ಶಿಷ್ಯನು, ಶಕುನಿಯು ದುರ್ಯೋಧನನ ಸೋದರಮಾವನು. ಅವನು ಯಾರಿಗೂ ತಿಳಿಯದಂತೆ ದುರ್ಯೋಧನ ಮುಂತಾದವರಿಗೆ ನಾಸ್ತಿಕ್ಯನೀತಿಯನ್ನು ಉಪದೇಶಿಸುತ್ತಾ ಬಂದನು. ಅತಿ ನಿಂದಿತವಾದ ಈ ನಾಸ್ತಿಕ್ಯ ನೀತಿಯನ್ನು ಧೃತರಾಷ್ಟ್ರನೇ ಮೊದಲಾದವರು ತಿಳಿಯದಂತೆ ದುರ್ಯೋಧನಾದಿಗಳು ತಿಳಿದರು. ಅವರಿಗೆ ಆ ನೀತಿಯು ರುಚಿಸಿತು. ತಮ್ಮ ಬುದ್ಧಿಬಲದಿಂದ ತಾವು ತಿಳಿದಿರುವ ನೀತಿಯನ್ನು ಹೆಚ್ಚಿಸಿಕೊಂಡರು.

ಧೃತರಾಷ್ಟ್ರನ ಮಗನಾಗಿರುವ ದುರ್ಯೋಧನನು ನಾಸ್ತಿಕ್ಯನೀತಿಯಲ್ಲಿ ಸಂಪೂರ್ಣಜ್ಞಾನವನ್ನು ಪಡೆದನು. ಧರ್ಮರಾಜನಿಗೆ ಯುವರಾಜ ಪದವಿಯಲ್ಲಿ ಪಟ್ಟಾಭಿಷೇಕವನ್ನು ತನ್ನ ತಂದೆಯೇ ಮಾಡಿದ ದಿನದಿಂದ ಒಂದೊಂದು ದಿನದಲ್ಲಿಯೂ ಹಗಲಿನಲ್ಲಿಯೂ ರಾತ್ರಿಯಲ್ಲಿಯೂ ಅವನ ಮನಸ್ಸಿನಲ್ಲಿ ಏರ್ಪಟ್ಟ ದುಃಖಕ್ಕೆ ಎಣೆಯೇ ಇಲ್ಲ. ಧರ್ಮರಾಜನಲ್ಲಿರುವ ಅಪಾರ ಸಂಪತ್ತನ್ನೂ ಯುವರಾಜಪದವಿಯನ್ನೂ ಭೀಮಾದಿಗಳ ದಿಗ್ವಿಜಯವನ್ನೂ ಸಹಿಸಲಾರದೆ ತಂದೆಯ ಸಮೀಪಕ್ಕೆ ಬಂದನು. ಅವನಿಗೆ ಸಾಹಯಕನಾಗಿ ಅವನೊಡನೆ ಶಕುನಿಯೂ ಬಂದನು.

ಓ ತಂದೆಯೇ, ನೀವು ಪಾಂಡುರಾಜನಿಗಿಂತ ದೊಡ್ಡವರು. ಆದ್ದರಿಂದ ನೀವೂ ಪಾಲಿಸುವುಕ್ಕೆ ಅರ್ಹರಾದವರು. ಪಾಂಡುರಾಜನು ನಿಮ್ಮ ತಮ್ಮನಾದುದರಿಂದ ಅವನು ಈ ರಾಜ್ಯಕ್ಕೆ ನಿಮ್ಮ ಅನಂತರದಲ್ಲಿ ನಿಮ್ಮ ಜ್ಯೇಷ್ಠ ಪುತ್ರನಾದ ನಾನೂ ನನ್ನ ಅನಂತರದಲ್ಲಿ ನನ್ನ ಸಂತತಿಯೂ ಈ ರಾಜ್ಯವನ್ನು ಪಾಲಿಸುವದಕ್ಕೆ ಅರ್ಹರಾದವರು, ಪಾಂಡುರಾಜನು ನಿಮ್ಮ ತಮ್ಮ ನಾದುವರಿಂದ ಅವನು ಈ ರಾಜ್ಯಕ್ಕೆ ರಾಜನಾಗುವುದಕ್ಕೆ ಯಾವ ವಿಧದಿಂದಲೂ ಅರ್ಹನಲ್ಲ. ಹೀಗಿರುವಾಗ ಅವನ ಮಗನಾದ ಧರ್ಮರಾಜನಾಗಲೀ ಅವನ ಸಂತತಿಯಾಗಲೀ ಅರ್ಹವಲ್ಲವೆಂದು ಹೇಳಬೇಕಾಗಿಲ್ಲ.

ನೀವು ಯುವರಾಜಪದವಿಯಲ್ಲಿ ಧರ್ಮರಾಜನಿಗೆ ಪಟ್ಟಾಭಿಷೇಕವನ್ನು ಮಾಡಿರುವಿರಿ. ನಿಮ್ಮ ಅನಂತರದಲ್ಲಿ ಅವನೂ ಅವನ ಅನಂತರದಲ್ಲಿ ಅವನ ಮಕ್ಕಳೂ ಈ ರಾಜ್ಯಕ್ಕೆ ಅಧಿಕಾರಿಗಳೆಂದು ನೀವೇ ಮಾಡಿದಿರಿ. ಧರ್ಮರಾಜನೂ ಸಹ ಪಾಂಡುರಾಜನಿಂದ ಕುಂತೀದೇವಿಯಲ್ಲಿ ಹುಟ್ಟಿದವನಲ್ಲ. ಬೇರೆ ಪುರುಷನಿಂದ ಹುಟ್ಟಿದವನು. ನಾನು ಹಾಗಲ್ಲ. ನಿಮ್ಮಿಂದ ಗಾಂಧಾರಿದೇವಿಯಲ್ಲಿ ಹುಟ್ಟಿದವನು. ಜ್ಯೇಷ್ಠರಾದ ನಿಮ್ಮಿಂದ ಹುಟ್ಟಿರುವ ನಾನು ನಿಮ್ಮ ಅನಂತರದಲ್ಲಿ ರಾಜ್ಯಕ್ಕೆ ಅನರ್ಹನೆಂದೂ ಚಿಕ್ಕವನಾದ ಪಾಂಡುರಾಜನ ಪತ್ನಿಯಲ್ಲಿ ಪರಪುರುಷನಿಂದ ಹುಟ್ಟಿರುವ ಧರ್ಮರಾಜನು ಅರ್ಹನೆಂದೂ ನೀವೇ ತೀರ್ಮಾನಿಸಿ ಅದರಂತೆ ಮುಂದಿನ ಕಾರ್ಯಗಳನ್ನು ಮಾಡಿಬಿಟ್ಟಿರಿ.

ನನಗೆ ರಾಜ್ಯ ಸಿಗಲಿಲ್ಲ ಎಂದು ನಾನು ದುಃಖಿಸುವುದಿಲ್ಲ. ನೀವು ಲೋಕಪ್ರಸಿದ್ಧವಾದ ಅತಿಶುದ್ಧವಾದ ಕೀರ್ತಿಯಿಂದ ಯುಕ್ತರಾಗಿರುವವರು. ಈ ಅಕಾರ್ಯದಿಂದ ನಿಮ್ಮ ಕೀರ್ತಿಯೆಲ್ಲವೂ ಕೆಟ್ಟುಹೋಯಿತು. ನಾನು ಬದುಕಿರುವಾಗ ನಿಮ್ಮ ಕೀರ್ತಿಯ ನಾಶವನ್ನು ಸಹಿಸಲಾರೆನು. ಆದ್ದರಿಂದ ನಾನೂ ನನ್ನ ತಮ್ಮಂದಿರೆಲ್ಲರೂ ನಮ್ಮಲ್ಲಿ ಅಭಿಮಾನವುಳ್ಳ ಶಕುನಿ ಮುಂತಾದವರೂ ಸಾಯುವೆವು. ನಾವೆಲ್ಲರೂ ಸಾಯುವುದಕ್ಕೆ ಅನುಮತಿಯನ್ನು ಕೊಡಿರಿ" ಎಂದನು.

ಧೃತರಾಷ್ಟ್ರನು ಈ ಮಾತುಗಳನ್ನು ಕೇಳಿದನು. " ಓ ಮಗನೇ, ನಿನ್ನ ಮನಸ್ಸು ಸರಿಯಾಗಿಲ್ಲ. ಪಾಂಡುವಿನ ಮಕ್ಕಳು ಉತ್ತಮವಾದ ಗುಣಗಳಿಂದ ಮಾನ್ಯತೆಯನ್ನು ಪಡೆದವರು. ಸ್ವಸಾಮರ್ಥ್ಯದಿಂದಲೇ ಅಭಿವೃದ್ಧಿಯನ್ನು ಪಡೆದವರು. ಅವರಲ್ಲಿ ಯಾರು ತಾನೇ ಪ್ರೀತಿಯನ್ನು ಮಾಡಲಾರರು? ಅವರೆಲ್ಲರೂ ತಮ್ಮ ಭುಜಬಲದಿಂದ ಸಕಲ ರಾಜರುಗಳ ಸಂಪತ್ತುಗಳನ್ನೂ ನನ್ನಲ್ಲಿ ತಂದು ಸೇರಿಸುತ್ತಿರುವರು. ಸ್ವಾರ್ಥಿಗಳಲ್ಲ. ನೀವೆಲ್ಲರೂ ಅವರು ತಂದು ನನಗೆ ಕೊಟ್ಟಿರುವ ಸಂಪತ್ತುಗಳನ್ನು ಅನುಭವಿಸುತ್ತಿರುವುದನ್ನು ತಡೆಯುವವರಲ್ಲ. ಇಡೀಕುಲದ ಕ್ಷೇಮಕ್ಕಾಗಿ ಶಾಂತನಾಗು ನಿನಗಿಂತ ಬಲಿಷ್ಠರಾದ ಪಾಂಡವರೊಡನೆ ವಿರೋಧವು ನಿಮಗೂ ನನಗೂ ಕ್ಷೇಮಕರವಲ್ಲ" ಎಂದನು.

ಈ ಮಾತುಗಳನ್ನು ಕೇಳಿದ ದುರ್ಯೋಧನನು ಶಕುನಿಯ ಮುಖವನ್ನು ನೋಡಿದನು. ಹಿಂದೆಯೇ ಅವನೊಡನೆ ಮಾತಾಡಿ ತೀರ್ಮಾನಿಸಿರುವಂತೆ ಮಾತಾಡಲು ಆರಂಭಿಸಿದನು. " ತಂದೆಯೇ ಪಾಂಡುರಾಜನ ಮಕ್ಕಳನ್ನು ಈಗಲೇ ಹಸ್ತಿನಾವತಿಯಿಂದ ಹೊರಗೆ ಕಳುಹಿಸಬೇಕು. ಹಾಗೆ ಮಾಡಲು ಇಷ್ಟವಿಲ್ಲದಿದ್ದರೆ ಅವರೊಡನೆಯೇ ಸಂತೋಷವಾಗಿರಿ. ನಿಮ್ಮ ಮಕ್ಕಳೆಲ್ಲರೂ ಕೆಲವು ನಿಮಿಷಗಳಲ್ಲಿ ಸಾಯುವೆವು" ಎಂದನು.

ಈ ಮಾತುಗಳನ್ನು ಕೇಳಿದ ಧೃತರಾಷ್ಟ್ರನಿಗೆ ಮಕ್ಕಳಲ್ಲಿರುವ ಪ್ರೇಮಪಾಶವು ಬಿಗಿಯಿತು. ಶ್ರೀಹರಿಯ ಇಚ್ಛೆಯಿಂದ ಬುದ್ಧಿಯು ಪರಾಧೀನವಾಯಿತು. "ಮಗನೇ, ಪಾಂಡವರು ಮಹಾಬಲಿಷ್ಠರು, ಅವರನ್ನು ಪಟ್ಟಣದಿಂದ ಹೊರಗೆ ಕಳುಹಿಸುವುದು ಅಷ್ಟುಸುಲಭವಲ್ಲ" ಎಂದನು.

ಈ ಮಾತುಗಳನ್ನು ಕೇಳಿದ ದುರ್ಯೋಧನನು ಶಕುನಿಯ ಮುಖವನ್ನು ನೋಡಿದನು. ತಂದೆಯನ್ನು ನೋಡಿ ಮಾತಾಡಲು ಆರಂಭಿಸಿದನು. " ತಂದೆಯೇ, ಪಾಂಡವರನ್ನು ಇಲ್ಲಿಂದ ಕಳುಹಿಸಲು ಉಪಾಯವನ್ನು ಕಂಡುಹಿಡಿದಿರುವೆನು. ಪಾಂಡವರು ಕಾಡನ್ನು ಬಿಟ್ಟು ಹಸ್ತಿನಾವತಿಗೆ ಬಂದು ಹದಿಮೂರು ವರ್ಷಗಳಾದವು. ಅವರು

ಇಲ್ಲಿಗೆ ಬಂದ ದಿನದಿಂದಲೇ ಅವರನ್ನು ಇಲ್ಲಿಂದ ಹೊರಡಿಸುವುದಕ್ಕೆ ಪ್ರಯತ್ನಿಸುತ್ತಿರುವೆನು.''

"ದ್ರೋಣಾಚಾರ್ಯರ ಮಗನಾಗಿರುವ ಅಶ್ವತ್ಥಾಮನು ಮಹಾಬಲಿಷ್ಠನು ಮತ್ತು ಮಹಾಪ್ರತಾಪಶಾಲಿ ಎಂಬ ವಿಷಯದಲ್ಲಿ ಯಾರಿಗೂ ಸಂಶಯವಿಲ್ಲ. ನಾನಾ ವಿಧವಾದ ಉಪಾಯಗಳಿಂದ ಅವನನ್ನೂ ಅವನ ಸೋದರಮಾವನಾಗಿರುವ ಕೃಪಾಚಾರ್ಯರನ್ನೂ ವಶಪಡಿಸಿಕೊಂಡಿರುವೆನು. ಅವರಿಬ್ಬರು ನಮ್ಮ ವಶರಾದ ಮೇಲೆ ದ್ರೋಣಾಚಾರ್ಯರು ನಮ್ಮ ವಶರಾಗುವುದರಲ್ಲಿ ಸಂಶಯವಿಲ್ಲ. ಈ ಮೂವರು ಯಾರ ಪಕ್ಷದಲ್ಲಿ ಸೇರುವರೋ ಆ ಪಕ್ಷದಲ್ಲಿ ಭೀಷ್ಮರು ಸೇರುವರು. ಎಲ್ಲಾ ಸೈನಿಕರನ್ನೂ ಅವರವರಿಗೆ ಬೇಕಾದ ವಸ್ತುಗಳನ್ನು ಕೊಟ್ಟು ಮರ್ಯಾದೆಗಳನ್ನು ಮಾಡಿ ವಶಪಡಿಸಿಕೊಂಡಿರುವೆನು. ಪ್ರಾಯಶಃ ಹಸ್ತಿನಾವತಿಯಲ್ಲಿರುವ ಸರ್ವರೂ ನನ್ನ ವಶರಾಗಿರುವರು.''

" ಕರ್ಣನ ಪ್ರತಾಪದ ವಿಷಯವಾಗಿ ಒಂದೆರಡು ಮಾತುಗಳನ್ನು ಹೇಳುವೆನು. ದ್ರೋಣಾಚಾರ್ಯರ ಗುರುವಾದ ಶ್ರೀಪರಶುರಾಮದೇವರಿಂದ ಅಸ್ತ್ರವಿದ್ಯಾಭ್ಯಾಸವನ್ನು ಮಾಡಿರುವ ಕರ್ಣನು ದ್ರೋಣಾಚಾರ್ಯರ ಶಿಷ್ಯನಾಗಿರುವ ಅರ್ಜುನನಿಗಿಂತ ಅಸ್ತ್ರವಿದ್ಯೆಯಲ್ಲಿ ಉತ್ತಮನೆಂಬ ವಿಷಯದಲ್ಲಿ ಸಂಶಯವಿಲ್ಲ. ಬಲದಲ್ಲಿಯೂ ಅರ್ಜುನನಿಗಿಂತ ಕರ್ಣನು ಉತ್ತಮನು. ಆದ್ದರಿಂದ ಕರ್ಣನು ಅರ್ಜುನನ್ನು ಸಂಹರಿಸುವುದರಲ್ಲಿ ಸಂಶಯವಿಲ್ಲ.''

" ಭೀಮಸೇನನನ್ನು ಮಂತ್ರಬಲದಿಂದ ನಾನು ಜಯಿಸುವೆನು. ದುರ್ವಾಸರು ತಮ್ಮ ಮನೆಗೆ ಬಂದಿರುವಾಗ ಅವರಿಂದ ಮೂರುಸಾವಿರ ಮಂತ್ರಗಳನ್ನು ತಿಳಿದಿರುವೆನು. ಈ ಮಂತ್ರಗಳೆಲ್ಲವೂ ಅತ್ಯುತ್ತಮವಾದವುಗಳು. ಇತರರಿಗೆ ದುರ್ಲಭವಾದವುಗಳು. ಈ ಮಂತ್ರಗಳನ್ನು ಬೇರೆ ಕಡೆಯಲ್ಲಿ ಉಪಯೋಗಿಸಿದರೆ ಈ ಮಂತ್ರಗಳ ಶಕ್ತಿಯು ಕಡಿಮೆಯಾಗುತ್ತದೆ. ಅದಕ್ಕಾಗಿ ಈ ಮಂತ್ರಗಳನ್ನು ಎಲ್ಲಿಯೂ ಉಪಯೋಗಿಸುವುದಿಲ್ಲ. ಈ ಮಂತ್ರಗಳು ಜಯಪ್ರದವಾಗುತ್ತವೆ. ವೀರ್ಯವನ್ನು ಹೆಚ್ಚಿಸುತ್ತವೆ. ಜಲಸ್ತಂಭನ ಅಂದರೆ ನೀರನ್ನು ಕಲ್ಲಿನಂತೆ ಮಾಡುವುದು. ಅಗ್ನಿಸ್ತಂಭನ ಅಂದರೆ ಬೆಂಕಿಯನ್ನು ತಣ್ಣಗಾಗುವಂತೆ ಮಾಡುವುದು ಮುಂತಾದ ಆಯಾ ವಸ್ತುಗಳ ಸ್ವಾಭಾವಿಕ ಶಕ್ತಿಗಳನ್ನು ನಿಲ್ಲಿಸಿ ವಿಪರೀತ ಶಕ್ತಿಯು ಏರ್ಪಡುವಂತೆ ಮಾಡಬಹುದು. ಸಕಲ ದೇವತೆಗಳ ಸಮೂಹಗಳನ್ನು ತಡೆದು ನಿಲ್ಲಿಸಬಹುದು. ಮಳೆ ಮುಂತಾದ ಅಭೀಷ್ಟವಾದ ಎಲ್ಲಾ ಕಾರ್ಯಗಳನ್ನೂ ಮಾಡಬಹುದು. ಈ ಮಂತ್ರಗಳು ಪೂರ್ಣಶಕ್ತಿಯಿಂದ ನನ್ನಲ್ಲಿವೆ. ಇವುಗಳಿಂದ ಭೀಮನನ್ನು ನಾನು ಜಯಿಸುವೆನು.''

" ಓ ತಂದೆಯೇ, ನಿಮಗೆ ಪಾಂಡವರಲ್ಲಿ ವಿಶೇಷ ಪಕ್ಷಪಾತವು ಇರುವುದು ನಿಜವಾಗಿದ್ದರೆ ಅವರೆಲ್ಲರೂ ವಾರಣಾವತ ಎಂಬ ಊರಿಗೆ ಹೋಗಲಿ. ಅಲ್ಲಿಯೇ ವಾಸಿಸಲಿ. ವಾರಣಾವತವೂ ಅದಕ್ಕೆ ಸುತ್ತಲಿರುವ ಪ್ರದೇಶವೂ ಅವರಿಗೆ ಸಂಬಂಧಿಸಿದ ರಾಜ್ಯವಾಗಲಿ. ನಿಮ್ಮಿಂದ ಕೊಡಲ್ಪಟ್ಟ ಯುವರಾಜಪದವಿಯನ್ನು ಧರ್ಮರಾಜನೂ ಅವನ ಪರಂಪರೆಯೂ ಆಳಲಿ. ಈ ಹಸ್ತಿನಾವತಿಯನ್ನು ಧರ್ಮರಾಜನಿಗೂ ಅವನ ಸಂತತಿಯವರಿಗೂ ಬಿಟ್ಟುಕೊಟ್ಟು ನೀವೂ ನಿಮ್ಮ ಮಗನಾದ ನಾನೂ ನನ್ನ ಪರಂಪರೆಯವರೂ ಹಸ್ತಿನಾವತಿಯನ್ನು ಬಿಟ್ಟು ಬೇರೆ ಊರಿಗೆ ಹೋಗಕೂಡದು. ಅದಕ್ಕೆ ಕಾರಣವನ್ನು ಹೇಳುವೆನು.''

'' ನೀವು ಪಾಂಡುರಾಜನಿಗಿಂತ ದೊಡ್ಡವರು. ಆದ್ದರಿಂದ ನೀವು ಪರಂಪರೆಯಿಂದ ಇದ್ದಿರುವ ಸ್ಥಳದಲ್ಲಿಯೇ

ಇರಬೇಕು. ನಾವೆಲ್ಲರೂ ನಿಮ್ಮ ಹಿಂದೆಯೇ ಇರಬೇಕು. ಪಾಂಡುರಾಜನ ಹೆಂಡತಿಯಲ್ಲಿ ಪರಪುರಷರಿಂದ ಹುಟ್ಟಿರುವ ಧರ್ಮರಾಜ ಮುಂತಾದವರಿಗೆ ಹೆದರಿ ಬೇರೆ ಊರಿಗೆ ಹೋಗಕೂಡದು. ಇದರಿಂದ ನಿಮಗೆ ನಿಮ್ಮ ಮಕ್ಕಳನ್ನು ಕಾಪಾಡಿದ್ದರಿಂದ ಅಪಾರವಾದ ಕೀರ್ತಿಯು ಏರ್ಪಡುತ್ತದೆ. ಹೀಗೆ ಮಾಡದಿದ್ದರೆ ವ್ಯಭಿಚಾರದಿಂದ ಹುಟ್ಟಿರುವ ಪಾಂಡವರನ್ನು ಅತ್ಯಧಿಕವಾದ ಪ್ರೀತಿಯಿಂದ ಪೋಷಿಸಿದ್ದರಿಂದ ನಿಮ್ಮ ಕೀರ್ತಿಯು ಹಾಳಾಗುತ್ತದೆ. ನೀವು ನಾನು ಹೇಳಿದಂತೆ ಮಾಡುವುದಾಗಿದ್ದರೆ ನನಗೆ ಯಾವ ವಿರೋಧವೂ ಇಲ್ಲ.''

'' ನೀವು ಪಾಂಡವರನ್ನು ತುಂಬಾ ಹೊಗಳುತ್ತಿದ್ದೀರಿ. ಅವರೆಲ್ಲರೂ ನಿಮ್ಮನ್ನು ತುಂಬಾ ಅನುಸರಿಸಿಕೊಂಡಿರುವುದೇ ಇದಕ್ಕೆ ಕಾರಣ. ನಿಮ್ಮಿಂದ ಯುವರಾಜಪದವಿಯನ್ನೂ ಧರ್ಮರಾಜನ ವಂಶಪರಂಪರೆಗೆ ರಾಜ್ಯವನ್ನೂ ಸಂಪಾದಿಸುವ ಉದ್ದೇಶದಿಂದಲೇ ಇಷ್ಟು ಅನುಸರಿಸಿಕೊಂಡಿರುವರು. ಅವರೆಲ್ಲರೂ ಸ್ವಾರ್ಥಿಗಳಲ್ಲವೆಂದು ನೀವು ಹೇಳಿದಿರಿ. ಅದು ಸುಳ್ಳು. ಅವರಷ್ಟು ಸ್ವಾರ್ಥಿಗಳು ಯಾರೂ ಇಲ್ಲ. ಅವರು ಹಸ್ತಿನಾವತಿಯನ್ನು ಆಕ್ರಮಿಸಿಕೊಂಡ ಮರುದಿನದಲ್ಲಿಯೇ ಅತ್ಯಂತ ಬಲಿಷ್ಠರಾಗುವರು. ಆ ಬಲವು ಬಂದ ಕೂಡಲೇ ನಿಮಗೆ ವಿರೋಧವನ್ನು ಖಂಡಿತವಾಗಿಯೂ ಮಾಡುವರು. ನೀವು ಈಗ ಅವರು ನಮಗೆ ವಿರೋಧಿಗಳಲ್ಲ ಎಂದು ಹೇಳಿರುವಿರಿ. ನಿಮ್ಮ ಮಾತನ್ನು ಸುಳ್ಳೆಂದು ಸ್ಪಷ್ಟಪಡಿಸುವರು.

" ನಿಮ್ಮ ತಮ್ಮನಾದ ವಿದುರನು ಒಬ್ಬನು ಮಾತ್ರ ಯಾವಾಗಲೂ ವ್ಯಭಿಚಾರದಿಂದ ಹುಟ್ಟಿರುವ ಪಾಂಡವರಿಗೆ ಎಲ್ಲಾ ವಿಧದಿಂದಲೂ ಪೋಷಕನು. ನನ್ನನ್ನು ದ್ವೇಷಿಸುತ್ತಿರುವನು. ಈ ವಿದುರನ ಅಪಪ್ರಚಾರದಿಂದ ಪಟ್ಟಣಿಗರೂ ದೇಶದಲ್ಲಿರುವವರೂ ಸರ್ವರೂ ಪಾಂಡವರಲ್ಲಿ ದೃಢವಾದ ಸ್ನೇಹವನ್ನೂ ನನ್ನಲ್ಲಿ ಅತ್ಯಂತ ದ್ವೇಷವನ್ನೂ ಮಾಡುತ್ತಿರುವರು. ಪಾಂಡವರು ಇಲ್ಲಿಂದ ಬಹುದೂರದಲ್ಲಿರುವ ವಾರಣಾವತಕ್ಕೆ ಹೋಗಿಬಿಟ್ಟರೆ ವಿದುರನ ಅಪಪ್ರಚಾರವು ವ್ಯರ್ಥವಾಗುತ್ತದೆ. ಪಾಂಡವರು ಇಲ್ಲಿ ಇಲ್ಲದ್ದರಿಂದ ಅವರಿಗೆ ಪಾಂಡವರಿಂದ ಯಾವ ವಿಧವಾದ ಪ್ರಯೋಜನವೂ ಇಲ್ಲದಂತಾಗುತ್ತದೆ. ನನ್ನ ಅನುಗ್ರಹವಿಲ್ಲದೆ ಯಾರೂ ಯಾವ ವಿಧವಾದ ಪ್ರಯೋಜನವನ್ನೂ ಪಡೆಯಲು ಸಾಧ್ಯವಿಲ್ಲ. ಆದ್ದರಿಂದ ಪಾಂಡವರಲ್ಲಿ ಪ್ರೀತಿಯು ಕಡಿಮೆಯಾಗುತ್ತಲೂ ನನ್ನಲ್ಲಿ ಪ್ರೀತಿಯು ಹೆಚ್ಚುತ್ತಲೂ ಬರುತ್ತದೆ. ವಿದುರನ ಅಪಪ್ರಚಾರವು ನಿಷ್ಫಲವಾಗುತ್ತದೆ.''

" ಭೀಷ್ಮ ಮುಂತಾದವರು ಪಾಂಡವರು ಸಮೀಪದಲ್ಲಿರುವಾಗ ಅವರಿಗೆ ವಿರೋಧವನ್ನು ಮಾಡಲಾರನು. ಪಾಂಡವರೆಲ್ಲರೂ ಇಲ್ಲಿಂದ ವಾರಣಾವತಕ್ಕೆ ಹೋಗಿ ಬಿಟ್ಟರೆ ಪಾಂಡವರಿಗೂ ಭೀಷ್ಮಾದಿಗಳಿಗೂ ಸಂಬಂಧವೇ ಬಿಟ್ಟು ಹೋಗುತ್ತದೆ. ಇದರಿಂದ ಪಾಂಡವರಲ್ಲಿ ಈಗಿದ್ದ ಸ್ನೇಹವು ಕ್ರಮವಾಗಿ ಕಡಿಮೆಯಾಗುತ್ತ ಕೊನೆಗೆ ಬಿಟ್ಟು ಹೋಗುತ್ತದೆ.''

"ಪಾಂಡವರೂ ನಾವೂ ಒಂದೇ ಊರಿನಲ್ಲಿದ್ದರೆ, ಅನ್ಯೋನ್ಯ ವಿರೋಧವು ಬೆಳೆಯುತ್ತದೆ. ಆ ವಿರೋಧವು ನಿಮ್ಮ ಮಕ್ಕಳ ಮತ್ತು ಪಾಂಡವರ ಕುಲದ ನಾಶಕ್ಕೆ ಕಾರಣವಾಗುತ್ತದೆ. ಆದ್ದರಿಂದ ಎರಡು ಕುಲಗಳ ಕ್ಷೇಮಾರ್ಥವಾಗಿ ಅತಿಪ್ರಬಲವಾದ ಉಪಾಯದಿಂದ ಪಾಂಡವರನ್ನು ಇಲ್ಲಿಂದ ವಾರಣಾವತಕ್ಕೆ ಸಾಗಿಸಬೇಕು. ಅದಕ್ಕೆ ಉಪಾಯವನ್ನೂ ಮಾಡಿರುವೆನು. ಆ ಉಪಾಯವನ್ನು ಹೇಳುವೆನು.''

" ವಾರಣಾವತದಲ್ಲಿ ಜಯಂತನ ಮಂದಿರವಿದೆ. ಈ ಜಯಂತನು ವಿಷ್ಣುವೇ ಆಗಿರುವನು. ಇಂದ್ರನ ಮಗನಾದ ಜಯಂತನಲ್ಲ. ಈ ಮಂದಿರದಂತೆ ರುದ್ರದೇವನ ಮಂದಿರವೂ ಇದೆ. ಜಯಂತಮಂದಿರದಲ್ಲಿ ಕೆಲವು ದಿನಗಳಲ್ಲಿ ದೊಡ್ಡ ಉತ್ಸವವು ನಡಿಯುತ್ತದೆ. ಪಾಂಡವರು ಶ್ರೀಹರಿಯಲ್ಲಿ ಅತ್ಯಂತ ಭಕ್ತಿಯುಳ್ಳವರು. ಅವರಾಗಿ ಇನ್ನು ಕೆಲವು ದಿನಗಳಲ್ಲಿ ನಿಮ್ಮ ಸನ್ನಿಧಾನಕ್ಕೆ ಬರುವರು. ಈ ಉತ್ಸವವನ್ನು ನೋಡುವುದಕ್ಕಾಗಿ ವಾರಣಾವತಕ್ಕೆ ಹೋಗುವುದಕ್ಕೆ ಅನುಮತಿಯನ್ನು ಕೇಳುವರು. ಅವರು ಕೇಳಿದ ಕೂಡಲೇ ನೀವು ಅನುಮತಿಯನ್ನು ಕೊಡಬೇಕು. ನಿಮ್ಮ ಅನುಮತಿಯನ್ನು ಪಡೆದು ಅವರೆಲ್ಲರೂ ವಾರಣಾವತಕ್ಕೆ ತಾವಾಗಿಯೇ ಹೋಗುವರು."

" ನನ್ನಲ್ಲಿ ತುಂಬಾ ನಂಬಿಕೆಗೆ ಅರ್ಹರಾದ ಕೆಲವು ಸೇವಕರಿರುವರು. ಅವರಲ್ಲಿ ಕೆಲವರು ಪಾಂಡವರ ಮನೆಗೆ ಹೋಗಿ ಅಲ್ಲಿಯೇ ವಾಸಿಸುತ್ತಿರುವರು. ಅವರೆಲ್ಲರೂ ನನ್ನ ವಿಶ್ವಾಸಕ್ಕೆ ಪಾತ್ರರೆಂಬ ರಹಸ್ಯವನ್ನು ಪಾಂಡವರಿಗೆ ತಿಳಿಸಲಿಲ್ಲ. ಪಾಂಡವರಲ್ಲಿಯೂ ಅಪಾರವಾದ ವಿಶ್ವಾಸವಿದ್ದಂತೆ ನಟಿಸುತ್ತಿಲ್ಲ. ಹಾಗೆ ನಟಿಸಿದರೆ ಪಾಂಡವರಿಗೆ ನನ್ನ ಸೇವಕರಲ್ಲಿ ಸಂಶಯವು ಬರಬಹುದು. ಎಂದೆಂದಿಂಗೂ ಪರಿಚಯವಿಲ್ಲದ ನನ್ನ ಸೇವಕರು ಅಧಿಕ ವಿಶ್ವಾಸವನ್ನು ಪಾಂಡವರಲ್ಲಿ ತೋರಿಸಿದರೆ ಮಹಾ ಕಪಟಗಳೆಂಬ ಸಂಶಯವು ಬಂದು ಬಿಟ್ಟರೆ ಮುಂದೆ ನನ್ನ ಸೇವಕರಿಂದ ಪಾಂಡವರಿಗೆ ಯಾವ ವಿಧವಾದ ದ್ರೋಹವನ್ನೂ ಮಾಡಲು ಸಾಧ್ಯವಾಗಲಾರದು. ಆದ್ದರಿಂದ ನನ್ನ ಸೇವಕರು ಯಾರಲ್ಲಿಯೂ ಅಧಿಕ ವಿಶ್ವಾಸವಿಲ್ಲದವರಂತೆಯೂ ನಟಿಸುತ್ತಾ ಬಂದರು. ವಾರಣಾವತದಲ್ಲಿ ನಡೆಯಲಿರುವ ಉತ್ಸವದ ವಿವರವನ್ನೂ ಆ ಪಟ್ಟಣದ ವೈಭವಗಳನ್ನೂ ಅಧಿಕವಾಗಿ ಹೇಳುತ್ತಾ ಬಂದರು."

" ಅವರ ಮಾತುಗಳನ್ನು ಕೇಳಿದ ಪಾಂಡವರಿಗೆ ಅಸಂಖ್ಯವಾದ ಗುಣಗಳಿಂದ ಯುಕ್ತವಾಗಿರುವ ವಾರಣಾವತ ಪಟ್ಟಣಕ್ಕೆ ಹೋಗಬೇಕೆಂಬ ವಿಷಯದಲ್ಲಿ ಆಸೆಯು ಅಧಿಕವಾಯಿತು. ಆದ್ದರಿಂದಲೇ ಪಾಂಡವರು ವಾರಣಾವತಪಟ್ಟಣಕ್ಕೆ ಹೋಗುವುದಕ್ಕಾಗಿ ನಿಮ್ಮಿಂದ ಅನುಮತಿಯನ್ನು ಪಡೆಯಲು ಬರುವರು ಎಂದು ನಾನು ಹೇಳಿದೆನು." ಈ ಮಾತುಗಳನ್ನು ದುರ್ಯೋಧನನು ಹೇಳಿದನು. ಈ ಮಾತುಗಳನ್ನು ಕೇಳಿದ ಧೃತರಾಷ್ಟ್ರನು ಪಾಂಡವರಿಗೆ ವಾರಣಾವತಕ್ಕೆ ಹೋಗುವುದಕ್ಕಾಗಿ ಅನುಮತಿಯನ್ನು ನೀಡುವುದಾಗಿ ಹೇಳಿದನು.

## ಪಾಂಡವರ ವಾರಣಾವತಗಮನ

ಅದೇ ರೀತಿಯಿಂದ ಪಾಂಡವರೆಲ್ಲರೂ ಧೃತರಾಷ್ಟ್ರನ ಸಮೀಪಕ್ಕೆ ಬಂದರು. ವಾರಣಾವತಕ್ಕೆ ಹೋಗುವುದಕ್ಕೆ ಅನುಮತಿಯನ್ನು ಕೇಳಿದರು. ಅವನು ಅನುಮತಿಯನ್ನೂ ಕೊಟ್ಟನು. ಪಾಂಡವರಿಗೆ ಹಿಂದೆಯೇ ದುರ್ಯೋಧನನೂ ಧೃತರಾಷ್ಟ್ರನೂ ರಹಸ್ಯವಾಗಿ ಮಾತಾಡಿಕೊಂಡ ಸಮಾಚಾರವು ತಿಳಿದಿತ್ತು. ತಿಳಿದಿದ್ದರೂ ಧೃತರಾಷ್ಟ್ರನಲ್ಲಿ ಅನುಮತಿಯನ್ನು ಕೇಳಿದರು. ಕೇಳಿದ ಕೂಡಲೇ ಯಾವ ವಿಷಯವನ್ನೂ ಆಲೋಚಿಸದೆ ಅನುಮತಿಯನ್ನು ಕೊಟ್ಟನು. ಇದರಿಂದ ಹಿರಿಯನಾದ ಧೃತರಾಷ್ಟ್ರನ ಅನುಮತಿಯನ್ನು ಪಡೆದ ಮೇಲೆಯೇ ಕಿರಿಯರು ಎಲ್ಲಾ ಕೆಲಸಗಳನ್ನೂ ಮಾಡಬೇಕೆಂಬ ನೀತಿಯನ್ನು ತಿಳಿಸಿದರು. ಧೃತರಾಷ್ಟ್ರನ ಹೃದಯವನ್ನೂ ಚೆನ್ನಾಗಿ ತಿಳಿದರು. ಪಾಂಡವರೊಡನೆ ಅವರ ತಾಯಿಯಾದ ಕುಂತಿಯೂ ಹೋದಳು.

ವಾರಣಾವತದಲ್ಲಿ ಭಿಕ್ಷೆಯನ್ನು ಬೇಡಿ ತಾವೆಲ್ಲರೂ ಜೀವಿಸಬೇಕೆಂದು ಭೀಮಸೇನದೇವರು ತಿಳಿದರು.

ಭಿಕ್ಷೆಯನ್ನು ಬೇಡಿ ಜೀವಿಸುವುದು ಕ್ಷತ್ರಿಯರ ಧರ್ಮವಲ್ಲವೆಂದೂ ಭಿಕ್ಷಾರ್ಥಿಗಳಿಗೆ ಭಿಕ್ಷೆಯನ್ನು ನೀಡುವುದೇ ಕ್ಷತ್ರಿಯರ ಧರ್ಮವೆಂದೂ ತಮ್ಮ ಕರ್ತವ್ಯವನ್ನು ಯಾವ ಕಾರಣದಿಂದಲೂ ಬಿಡಕೂಡದೆಂದೂ ಧರ್ಮರಾಜನಿಗೆ ಹೇಳಿದರು. ನಮ್ಮ ತಂದೆಯು ಸಂಪಾದಿಸಿದ ಮನೆಯಲ್ಲಿ ನಾವು ವಾಸಿಸುತ್ತಿರುವುದು ನಮ್ಮ ಧರ್ಮವೆಂದೂ ಆ ಮನೆಯಿಂದ ಹೊರಟು ಹೋಗುವುದು ನಮಗೆ ಧರ್ಮವಲ್ಲವೆಂದೂ ವಾದಾಡಿದರು. ನಾವೆಲ್ಲರೂ ನಮ್ಮ ಧರ್ಮವನ್ನು ಕಾಪಾಡುತ್ತಿರುವೆವು. ಹೀಗಿರುವಾಗ ನಮ್ಮನ್ನು ನಮ್ಮ ಮನೆಯಿಂದ ಹೊರಗೆ ಹೊರಡಿಸುವುದಕ್ಕಾಗಿ ದುರ್ಯೋಧನ ಮುಂತಾದವರು ಪ್ರಯತ್ನಿಸಿದರೆ ಅವರೊಡನೆ ಯುದ್ಧವನ್ನು ಮಾಡಿ ಅವರನ್ನು ಸಂಹರಿಸೋಣ. " ಅವರೆಲ್ಲರೂ ನಮ್ಮ ಮನೆಗಳನ್ನೂ ಸರ್ವಸ್ವವನ್ನೂ ಅಪಹರಿಸುತ್ತಿರುವರು. ಆದ್ದರಿಂದ ಕಳ್ಳರು ಅವರನ್ನು ಸಂಹರಿಸುವುದು ಅಧರ್ಮವಲ್ಲ " ಎಂದರು.

ಈ ಮಾತುಗಳನ್ನು ಧರ್ಮರಾಜನು ಕೇಳಿ ಭೀಮಸೇನದೇವರನ್ನು ನೋಡಿದನು. " ಧೃತರಾಷ್ಟ್ರನು ನಮ್ಮ ದೊಡ್ಡ ತಂದೆಯಾಗಿರುವನು. ಅವನು ನಾವೆಲ್ಲರೂ ನಮ್ಮ ತಂದೆಯು ಸಂಪಾದಿಸಿದ ಮನೆಯಲ್ಲಿ ವಾಸಿಸಕೂಡದೆಂದು ಹೇಳಿಬಿಟ್ಟನು. ಧೃತರಾಷ್ಟ್ರನ ಅಭಿಪ್ರಾಯವನ್ನು ಭೀಷ್ಮಾದಿಗಳು ಮೀರಲಾರರು. ನಾವು ಈಗ ನಮ್ಮ ಮನೆಯನ್ನು ಬಿಟ್ಟು ಹೋಗಲಾರೆವೆಂದು ಹಟ ಹಿಡಿದರೆ ಹಿರಿಯರಾದ ಧೃತರಾಷ್ಟ್ರ ಭೀಷ್ಮ ಮುಂತಾದವರೊಡನೆ ವಿರೋಧವನ್ನು ಸಂಪಾದಿಸಿದಂತಾಗುವುದು. ನಮ್ಮಲ್ಲಿ ಇಷ್ಟರ ವರೆಗೆ " ಹಿರಿಯರನ್ನು ಅನುಸರಿಸುತ್ತಿರುವವರು" ಎಂಬ ಕೀರ್ತಿ ಇದೆ. ನಮ್ಮ ತಂದೆಯು ಸಂಪಾದಿಸಿದ ಮನೆಗಾಗಿ ಹಿರಿಯರೊಡನೆ ಜಗಳವನ್ನು ಮಾಡಿದರೆ ಈ ಕೀರ್ತಿಯು ನಷ್ಟವಾಗುತ್ತದೆ" ಎಂದು ಹೇಳಿದನು.

ತನಗೆ ತಿಳಿದ ಧರ್ಮವನ್ನು ಹೇಳಲೇಬೇಕು. ಹಾಗೆ ಹೇಳದಿದ್ದರೆ ದೋಷವು ಬರುತ್ತದೆ. ಹಿರಿಯರು ಹೇಳಿದ ಮಾತುಗಳನ್ನು ಮೀರಬಾರದು. ಹಾಗೆ ಮೀರಿದರೂ ದೋಷವು ಬರುತ್ತದೆ. ಭೀಮಸೇನದೇವರು ತನಗೆ ತಿಳಿದ ಧರ್ಮವನ್ನು ಹೇಳಿದರು. ಧರ್ಮರಾಜನು ಅವರು ಹೇಳಿದ ಮಾತುಗಳನ್ನು ಅಂಗೀಕರಿಸಲಿಲ್ಲ. ಆಗ ಧರ್ಮರಾಜನೊಡನೆ ಜಗಳವಾಡಲಿಲ್ಲ. ಅವನು ಹೇಳಿದಂತೆ ನಡೆದುಕೊಂಡರು. ಇದರಿಂದ ಎರಡು ವಿಧದಿಂದಲೂ ಧರ್ಮವನ್ನು ರಕ್ಷಿಸಿದರು.

ಭೀಮಸೇನದೇವರು ದೊಡ್ಡವರಾಗಿ ಹುಟ್ಟಿದರೆ ತನ್ನ ಧರ್ಮವನ್ನು ಅನುಷ್ಠಾನ ಮಾಡಲೇ ಬೇಕಾಗಿತ್ತು. ಧರ್ಮರಾಜನ ತಮ್ಮನಾಗಿ ಹುಟ್ಟಿರುವುದರಿಂದ ಧರ್ಮರಾಜನು ಸ್ವಧರ್ಮವನ್ನು ಬಿಡುವ ಸಂದರ್ಭವು ಬಂದಾಗ ಧರ್ಮರಾಜನಿಗೆ ಸ್ವಧರ್ಮವನ್ನು ಹೇಳುವರು. ಇದರಿಂದ ಅವರಿಗೆ ಸ್ವಧರ್ಮವನ್ನು ಅನುಷ್ಠಿಸಿದಂತಾಗುವದು. ಭೀಮಸೇನದೇವರು ಹೇಳಿದ ಸ್ವಧರ್ಮವನ್ನು ಧರ್ಮರಾಜನು ಬಿಟ್ಟಾಗ ತಾವೂ ಅನುಷ್ಠಿಸುವುದಿಲ್ಲ. ಆಗ ವಯಸ್ಸಿಯಿಂದ ಹಿರಿಯವನಾದ ಧರ್ಮರಾಜನನ್ನು ಅನುಸರಿಸಿದ್ದರಿಂದ ಹಿರಿಯರ ಅನುಸರಣ ಎಂಬ ಸ್ವಧರ್ಮವನ್ನು ಅನುಷ್ಠಿಸಿದಂತಾಗುತ್ತದೆ. ಸ್ವಧರ್ಮವನ್ನು ಬಿಟ್ಟದ್ದರಿಂದ ಭೀಮಸೇನದೇವರಿಗೆ ದೋಷವು ಬರುವುದಿಲ್ಲ. ಎಲ್ಲಾ ವಿಧದಿಂದಲೂ ಸ್ವಧರ್ಮಾನುಷ್ಠಾನವನ್ನು ಮಾಡಿ ಶ್ರೀಹರಿಯ ವಿಶೇಷಾನುಗ್ರಹಕ್ಕೆ ಪಾತ್ರರಾಗಬೇಕೆಂಬ ಉದ್ದೇಶದಿಂದಲೇ ಶ್ರೀಹರಿಯು ಶ್ರೀಭೀಮಸೇನದೇವರನ್ನು ಧರ್ಮರಾಜನ ತಮ್ಮನಾಗುವಂತೆ ಸೃಷ್ಟಿಸಿರುವನು. ಇದರಿಂದ ಶ್ರೀಭೀಮಸೇನದೇವರಿಗೆ ಧರ್ಮರಾಜನನ್ನು ಅನುಸರಿಸಿದ್ದರಿಂದ ಕೀರ್ತಿಯನ್ನು ಕೊಟ್ಟಂತಾಯಿತು.

ದುರ್ಯೋಧನ ಮುಂತಾದವರು ಶ್ರೀಹರಿಯ ಮತ್ತು ಶ್ರೀಹರಿಭಕ್ತರಾದ ಪಾಂಡವರ ಪರಮದ್ವೇಷಿಗಳು. ಅವರನ್ನು ಕೊಲ್ಲಲೇಬೇಕು. ಇದೇ ಕ್ಷತ್ರಿಯರ ಪರಮಧರ್ಮವೆನಿಸುತ್ತದೆ. ಈ ಪರಮಸ್ವಧರ್ಮವನ್ನು ಕೂಡಲೇ ಅನುಷ್ಠಿಸಬಹುದಾಗಿತ್ತು. ಹಾಗೆ ಮಾಡಿದ್ದರೆ ಅವರಲ್ಲಿರುವ ಎಲ್ಲಾ ದೋಷಗಳೂ ಸ್ಪಷ್ಟವಾಗಿ ಯಾರಿಗೂ ತಿಳಿಯುತ್ತಿದ್ದಿಲ್ಲ. ಆದ್ದರಿಂದ ಶ್ರೀಭೀಮಸೇನದೇವರು ದುರ್ಯೋಧನಾದಿಗಳನ್ನು ಮೊದಲೇ ಸಂಹರಿಸಲಿಲ್ಲ.

ಹಸ್ತಿನಾವತಿಯಿಂದ ಹೊರಡುವಾಗ ಪಾಂಡವರೆಲ್ಲರೂ ವಿದುರನನ್ನು ನೋಡಿದರು. ಆಗ ಅಲ್ಲಿ ಯಾರೂ ಇರಲಿಲ್ಲ. ಆದರೂ ಎಲ್ಲರಿಗೂ ತಿಳಿಯದಿರುವ ಭಾಷೆಯಿಂದ ರಹಸ್ಯವಾದ ವಿಷಯಗಳನ್ನು ಹೇಳುವುದು ಉತ್ತಮವೆಂದು ತೀರ್ಮಾನಿಸಿ ಧರ್ಮರಾಜನನ್ನು ಕರೆದು, " ಅರಗಿನ ಮನೆಯು ನಿಮಗೆ ಸಿದ್ಧವಾಗಿದೆ. ಆ ಮನೆಯಲ್ಲಿ ವಿಷ ಮತ್ತು ಬೆಂಕಿಯ ಭಯವು ಇದೆ. ಹುಷಾರಾಗಿರಿ'' ಎಂದು ತುರುಕರ ಭಾಷೆಯಿಂದ ಹೇಳಿದನು. ಧರ್ಮರಾಜನೂ ಅದೇ ಭಾಷೆಯಿಂದ "ಆಗಲಿ" ಎಂದನು. ಕುಂತೀದೇವಿಯನ್ನೂ ತಮ್ಮಂದಿರನ್ನೂ ಕರೆದುಕೊಂಡು ವಾರಣಾವತಕ್ಕೆ ಹೋದನು.

ಪಾಂಡವರನ್ನು ಸಂಹರಿಸುವುದಕ್ಕಾಗಿಯೇ ದುರ್ಯೋಧನನು ವಾರಣಾವತದಲ್ಲಿ ಅರಗಿನ ಮನೆಯನ್ನು ತಯಾರಿಸಿದ್ದನು. ಅರಗಿನ ಮನೆಯೆ ಎಂದು ತಿಳಿಯದಿರುವುದಕ್ಕಾಗಿಯೇ ಅರಗಿನ ಮೇಲೆ ರತ್ನಗಳನ್ನೂ ಭಂಗಾರವನ್ನೂ ಮುಚ್ಚಿಸಿರುವನು.

ರಾಮಾವತಾರಕಾಲದಲ್ಲಿ ರಾವಣನ ಮಂತ್ರಿಯಾಗಿದ್ದ ಪ್ರಹಸ್ತ ಎಂಬ ಪರಮಪಾಪಿಯಾದ ರಾಕ್ಷಸನು ಪುರೋಚನ ಎಂಬ ಹೆಸರಿನಿಂದ ದುರ್ಯೋಧನನ ಮಂತ್ರಿಯಾಗಿ ಹುಟ್ಟಿದ್ದನು. ದುರ್ಯೋಧನನು ಹಡಗಿನಲ್ಲಿ ಪಾಂಡವರಿಗೆ ಬೇಕಾಗಿರುವ ಎಲ್ಲಾ ವಸ್ತುಗಳನ್ನೂ ತುಂಬಿಸಿ ಪುರೋಚನನನ ಮೂಲಕವಾಗಿ ಗಂಗಾನದಿಯ ಮಾರ್ಗವಾಗಿ ವಾರಣಾವತಕ್ಕೆ ಕಳುಹಿಸಿದನು.

ಈ ಪುರೋಚನನು "ದುರ್ಯೋಧನನನ್ನು ಬಿಟ್ಟು ಬಿಟ್ಟೆನು. ನಿಮ್ಮಲ್ಲಿಗೆ ಬಂದಿರುವೆ. ನಿಮ್ಮ ಮಂತ್ರಿಯಾಗಿರುವೆನು. ನಿಮ್ಮಲ್ಲಿರುವ ಸ್ವಾಭಾವಿಕವಾದ ಪ್ರೀತಿಯಿಂದಲೂ ಧರ್ಮನಿಷ್ಠೆಯಿಂದಲೂ ಸಂತುಷ್ಟನಾಗಿರುವೆನು.; ನಾನು ಬದುಕಿರುವ ವರೆಗೂ ನಿಮ್ಮಲ್ಲಿಯೇ ಇರುವೆನು. ಪಾಪಿಷ್ಠನಾದ ದುರ್ಯೋಧನನ್ನು ಅನುಸರಿಸಿಕೊಂಡು ಹೋಗಲು ನಾನು ಶಕ್ತನಲ್ಲ'' ಎಂದನು. ಇದನ್ನು ಕೇಳಿದ ಪಾಂಡವರು " ಒಳ್ಳೆಯ ಕೆಲಸವನ್ನು ಮಾಡಿದಿ, ತುಂಬಾ ಸಂತೋಷವಾಯಿತು'' , ಎಂದು ಹೇಳಿದರು.

ಧರ್ಮರಾಜನು ಅರಗಿನ ಮನೆಯನ್ನು ನೋಡಿದನು. ಮೀನಿನ ಹೊಟ್ಟೆಯಲ್ಲಿರುವ ವಸಾ ಎಂಬ ತುಪ್ಪ ಮತ್ತು ಅರಗಿನ ವಾಸನೆಯು ಬಂದಿತು. ಅರಗು ಮತ್ತು ಮೀನಿನ ಹೊಟ್ಟೆಯಲ್ಲಿರುವ ತುಪ್ಪಗಳ ಮಿಶ್ರಣದಿಂದ ನಿರ್ಮಿತವಾದ ಈ ಮನೆಗೆ ಬೆಂಕಿಯನ್ನು ಹಚ್ಚಿ ಆ ಬೆಂಕಿಯಿಂದ ತಮ್ಮನ್ನೆಲ್ಲರನ್ನೂ ಸುಟ್ಟು ಭಸ್ಮವನ್ನು ಮಾಡುವುದಕ್ಕಾಗಿ ಈ ಪುರೋಚನನು ಬಂದಿರುವುದಾಗಿ ತೀರ್ಮಾನಿಸಿದನು. ಭೀಮಸೇನದೇವರನ್ನು ಕರೆದು, " ಈ ಮಹಾಪಾಪಿಯು ನಮ್ಮನ್ನೆಲ್ಲರನ್ನೂ ಕೊಲ್ಲಬೇಕೆಂದು ಅಪೇಕ್ಷಿಸುತ್ತಿರುವನು. ನೀನು ಯಾವಾಗಲೂ ಜಾಗ್ರತೆಯಾಗಿರು'' ಎಂದನು.

# ಸುರಂಗ ನಿರ್ಮಾಣ

ವಿದುರನು ನೀತಿಯಲ್ಲಿ ಅತ್ಯಂತ ನಿಪುಣನು. ಗೂಢಚಾರರ ಮೂಲಕವಾಗಿ ಅರಗಿನ ಮನೆಯಲ್ಲಿ ಪಾಂಡವರು ವಾಸಿಸುತ್ತಿರುವುದನ್ನು ತಿಳಿದನು. ಆ ಅರಗಿನ ಮನೆಯಿಂದ ಪಾಂಡವರು ತಪ್ಪಿಸಿಕೊಂಡು ಹೋಗುವುದಕ್ಕಾಗಿ ಸುರಂಗಮಾರ್ಗವು ಸುಲಭವಾದ ಮಾರ್ಗವೆಂದು ತೀರ್ಮಾನಿಸಿದನು. ತನಗೆ ತುಂಬಾ ವಿಶ್ವಾಸಕ್ಕೆ ಪಾತ್ರನಾದ ಒಬ್ಬ ಶಿಲ್ಪಿಯನ್ನು ವಾರಣಾವತಕ್ಕೆ ಕಳುಹಿಸಿದನು.

ಧರ್ಮರಾಜನಿಗೆ ಅವನು ವಿದುರನಿಂದ ಕಳುಹಿಸಲ್ಪಟ್ಟವನು ಎಂದು ನಂಬಿಕೆಯು ಹುಟ್ಟುವುದಕ್ಕಾಗಿ ಧರ್ಮರಾಜನು ಹಸ್ತಿನಾವತಿಯಿಂದ ಹೊರಟು ವಾರಣಾವತಕ್ಕೆ ಬರುವಾಗ ವಿದುರನು ತುರುಕರ ಭಾಷೆಯಿಂದ ಹೇಳಿದ ವಿಷಯಗಳನ್ನು ಸ್ಮರಿಸುವಂತೆ ಮಾಡು. ಇದರಿಂದ ಅವನಿಗೆ ನಿನ್ನಲ್ಲಿ ನಂಬಿಕೆಯು ಬರುತ್ತದೆ. ಈ ಅರಗಿನ ಮನೆಯಿಂದ ತಪ್ಪಿಸಿಕೊಂಡು ಹೋಗುವುದಕ್ಕಾಗಿ ಸುರಂಗವನ್ನು ತಯಾರಿಸುವುದಕ್ಕೆ ಬಂದಿರುವುದಾಗಿಯೂ ಆ ಮಾರ್ಗದಿಂದ ತಪ್ಪಿಸಿಕೊಂಡು ಹೋಗಬೇಕೆಂದೂ ತಿಳಿಸು. ಆ ಮೇಲೆ ಪುರೋಚನ ಮುಂತಾದವರಿಗೆ ತಿಳಿಯುವಂತೆ ಈ ವಾರಣಾವತನಗರದಲ್ಲಿರುವ ಜನರು ಈ ನಗರದಿಂದ ಹೊರಗೂ ಹೊರಗಿನಲ್ಲಿರುವವರು ಒಳಗೂ ಬಾರದಂತೆ ನಗರದ ಬಂದೋಬಸ್ತಿಗಾಗಿ ಕೋಟೆಯನ್ನು ಕಟ್ಟುವುದಾಗಿ ಹೇಳು. ಇದರಿಂದ ನಿನ್ನಲ್ಲಿ ಯಾರಿಗೂ ಸಂಶಯವು ಬರುವುದಿಲ್ಲ. ಅರಗಿನ ಮನೆಯ ಒಳಗಿನಿಂದ ಆರಂಭಿಸಿ ಬಹುದೂರದ ವರೆಗೆ ಸುರಂಗವನ್ನು ತಯಾರಿಸು. ಕಾಡಿನ ಮಧ್ಯದಲ್ಲಿ ಸುರಂಗದಿಂದ ಹೊರಗೆ ಬರುವಂತೆ ಮಾಡು'' ಎಂದು ಹೇಳಿದನು.

ಶಿಲ್ಪಿಯು ವಿದುರನು ಹೇಳಿದಂತೆ ಎಲ್ಲಾ ಕಾರ್ಯಗಳನ್ನೂ ಮಾಡಿದನು. ಕಾಡಿನ ಮಧ್ಯದಲ್ಲಿರುವ ಸುರಂಗದ ದ್ವಾರವನ್ನು ಮುಚ್ಚಿಬಿಟ್ಟನು. ಹಸ್ತಿನಾವತಿಗೆ ಬಂದು ವಿದುರನಲ್ಲಿ ಎಲ್ಲಾ ವಿಷಯಗಳನ್ನೂ ತಿಳಿಸಿದನು. ಭೀಮಸೇನದೇವರು ಪುರೋಚನನನ್ನೂ ಪುರೋಚನನು ಪಾಂಡವರನ್ನೂ ಸಂಹರಿಸುವುದಕ್ಕಾಗಿ ಸಮಯವನ್ನು ನಿರೀಕ್ಷಿಸುತ್ತಿದ್ದರು. ಸರಿಯಾದ ಸಮಯವು ಸಿಗಲಿಲ್ಲ. ಹೀಗೆಯೇ ಆರು ತಿಂಗಳುಗಳು ಕಳೆದವು.

# ವಿಷಪ್ರಯೋಗ

ಒಂದು ದಿನ ಪುರೋಚನನ ಅಕ್ಕ ಪುರೋಚನನಿಂದ ಪ್ರೇರಿತಳಾಗಿ ಪಾಂಡವರಿಗೆ ವಿಷವನ್ನು ಕೊಟ್ಟು ಕೊಲ್ಲುವುದಕ್ಕಾಗಿ ವಾರಣಾವತಕ್ಕೆ ಬಂದಳು. ಅವಳ ಜೊತೆಯಲ್ಲಿ ಅವಳ ಐದು ಮಕ್ಕಳೂ ಬಂದಿದ್ದರು. ಭೀಮಸೇನದೇವರೇ ಮೊದಲಾದವರಿಗೆ ಅತಿಭಯಂಕರವಾದ ವಿಷವನ್ನು ಆಹಾರದಲ್ಲಿ ಸೇರಿಸಿ ಕೊಟ್ಟಳು. ಅಲ್ಲಿಗೆ ಬರುವಾಗಲೆ ಯಾರು ಯಾವ ವಸ್ತುವನ್ನು ಕೊಟ್ಟರೂ ಆ ವಸ್ತುವನ್ನು ಭೀಮಸೇನದೇವರೇ ತಿನ್ನಬೇಕೆಂದು ಉಳಿದವರೆಲ್ಲರೂ ಭಿಕ್ಷಾನ್ನವನ್ನು ಹೊರತು ಇತರರು ಕೊಟ್ಟಿರುವ ಆಹಾರವನ್ನು ಯಾವ ಕಾರಣದಿಂದಲು ತಿನ್ನಲೇ ಕೂಡದೆಂದು ಸಂಕೇತವನ್ನು ಮಾಡಿಕೊಂಡಿದ್ದರು. ಅವಳು ಕೊಟ್ಟಿರುವ ವಿಷಮಿಶ್ರಿತವಾದ ಅನ್ನವನ್ನೆಲ್ಲವನ್ನೂ ಭೀಮಸೇನದೇವರೇ ತಿಂದರು. ಆ ವಿಷವು ಭೀಮಸೇನದೇವರ ಹೊಟ್ಟೆಯಲ್ಲಿ ಜೀರ್ಣವಾಯಿತು. ಧರ್ಮರಾಜ ಮುಂತಾದವರಿಗೆ ವಿಷಭಕ್ಷಣವೇ ಏರ್ಪಡಲಿಲ್ಲ.

ಪುರೋಚನನ ಅಕ್ಕನು ಎಲ್ಲಾ ಪಾಂಡವರಿಗೂ ವಿಷವನ್ನು ಪ್ರಯೋಗಿಸಿದಳು. ಎಲ್ಲರೂ ಇನ್ನು ಕೆಲವು ನಿಮಿಷಗಳಲ್ಲಿ ಸಾಯುವುದಾಗಿ ತೀರ್ಮಾನಿಸಿದಳು. ನಿಶ್ಚಿಂತೆಯಿಂದ ತನ್ನ ಮಕ್ಕಳೊಡನೆ ಮಲಗಿದಳು. ಅವಳಿಗೂ ಅವಳ ಮಕ್ಕಳಿಗೂ ಒಳ್ಳೇ ನಿದ್ರೆಯು ಬಂತು. ಪಾಂಡವರಿಗೆ ಕೊಟ್ಟಿರುವ ವಿಷವು ನಿಷ್ಫಲವಾಯಿತೆಂದು ಹಿಂದೆಯೇ ಹೇಳಿರುವೆವು. ಭೀಮಸೇನದೇವರನ್ನು ಬಿಟ್ಟು ಉಳಿದಿರುವ ಐದು ಜನರೂ ಮಲಗಿದರು. ಎಲ್ಲರಿಗೂ ಒಳ್ಳೆ ನಿದ್ರೆಯು ಬಂತು. ಆಗ ಭೀಮಸೇನದೇವರು ಪುರೋಚನನಿಗೆ ತಕ್ಕ ಪ್ರತೀಕಾರವನ್ನು ಮಾಡುವುದಕ್ಕೆ ಸರಿಯಾದ ಕಾಲವು ಬಂತೆಂದು ತೀರ್ಮಾನಿಸಿದರು. ಧರ್ಮರಾಜ, ಅರ್ಜುನ, ನಕುಲ, ಸಹದೇವ ಎಂಬ ನಾಲ್ಕು ಸಹೋದರರನ್ನೂ ಕುಂತಿಯನ್ನೂ ಎತ್ತಿಕೊಂಡು ಸುರಂಗದಲ್ಲಿ ಸ್ವಲ್ಪ ದೂರದ ವರೆಗೆ ಹೋದರು. ಅಲ್ಲಿ ಮಲಗಿಸಿದರು. ಅವರೆಲ್ಲರು ಮೈಮರೆತು ನಿದ್ದೆಯನ್ನು ಮಾಡುತ್ತಿದ್ದರು.

## ಅರಗಿನ ಮನೆಗೆ ಅಗ್ನಿದಾನ

ಹಿಂದಿರುಗಿ ಅದೇ ಸುರಂಗಮಾರ್ಗದಿಂದ ಅರಗಿನ ಮನೆಗೆ ಬಂದರು. ಪುರೋಚನನನ ಅಕ್ಕನೂ ಅವಳ ಮಕ್ಕಳೂ ನಿಶ್ಚಿಂತೆಯಿಂದ ನಿದ್ರೆಯನ್ನು ಮಾಡುತ್ತಿರುವುದನ್ನು ನೋಡಿದರು. ಅರಗಿನ ಮನೆಗೆ ಬೆಂಕಿಯನ್ನು ಹಚ್ಚಿದರು. ತಾನು ಸುರಂಗಮಾರ್ಗದಿಂದ ಧರ್ಮರಾಜ ಮುಂತಾದವರು ಮಲಗಿರುವ ಸ್ಥಳಕ್ಕೆ ಬಂದರು.

ಪುರೋಚನನ ಅಕ್ಕನೂ ಅವಳ ಮಕ್ಕಳೂ ಒಂದು ವರ್ಷದ ವರೆಗೆ ರುದ್ರದೇವನನ್ನು ಕುರಿತು ಘೋರವಾದ ತಪಸ್ಸನ್ನು ಮಾಡಿದ್ದರು. ಈ ತಪಸ್ಸಿನಿಂದ ರುದ್ರದೇವನು ಪ್ರತ್ಯಕ್ಷನಾದನು. ತಾನು ಅದಿತಿಯಾಗಿ ಹುಟ್ಟಬೇಕೆಂದೂ ಆಗ ತನ್ನ ಐದು ಮಕ್ಕಳೂ ದೇವತೆಗಳಾಗಿ ಹುಟ್ಟಬೇಕೆಂದೂ ವರವನ್ನು ಬೇಡಿದಳು. ರುದ್ರದೇವನು ಆ ವರವನ್ನು ಕೊಟ್ಟನು. ಆದರೆ " ನೀನು ಎಲ್ಲಿಗೂ ನಿನ್ನ ಮಕ್ಕಳ ಜೊತೆಯಲ್ಲಿ ಹೋಗಕೂಡದು. ಹಾಗೆ ಹೋದರೆ ನೀನೂ ನಿನ್ನ ಮಕ್ಕಳೂ ಸಾಯುವಿರಿ" ಎಂದು ಹೇಳಿದನು. ರುದ್ರದೇವನ ಈ ಮಾತುಗಳನ್ನು ಸತ್ಯವಾಗುವಂತೆ ಮಾಡುವುದಕ್ಕಾಗಿ ಭೀಮಸೇನದೇವರು ಮಕ್ಕಳಿಂದ ಸಹಿತಳಾಗಿ ಬಂದಿರುವ ಪುರೋಚನನ ಅಕ್ಕನನ್ನು ಅರಗಿನ ಮನೆಯಲ್ಲಿ ಭಸ್ಮ ಮಾಡಿದರು.

ಭೀಮಸೇನದೇವರು ಅರಗಿನ ಮನೆಯಲ್ಲಿದ್ದ ಪುರೋಚನನ ಅಕ್ಕನನ್ನೂ ಅವಳ ಮಕ್ಕಳನ್ನೂ ಪುರೋಚನನ್ನೂ ಅರಗಿನ ಮನೆಗೆ ಬೆಂಕಿ ಹಚ್ಚಿ ಭಸ್ಮ ಮಾಡಿದ ಸಮಾಚಾರವನ್ನು ತಾಯಿಯಾದ ಕುಂತೀದೇವಿಗೂ ಧರ್ಮರಾಜ ಮುಂತಾದ ಸಹೋದರರಿಗೂ ತಿಳಿಸಿದರು. ಈ ವಿಷಯವನ್ನು ತಿಳಿದ ದುರ್ಯೋಧನ ಮುಂತಾದವರು ಪುರೋಚನನನ್ನು ಕೊಂದದ್ದಕ್ಕಾಗಿ ಕುಪಿತರಾಗಿ ಯುದ್ಧಕ್ಕೆ ಬರಬಹುದೆಂದೂ ಈ ಸಂದರ್ಭದಲ್ಲಿ ಭೀಷ್ಮ ದ್ರೋಣ, ಮುಂತಾದ ಹಿರಿಯರು ಅವರ ಜೊತೆಯಲ್ಲಿ ಸೇರಿದವರಾಗಿ ತಮ್ಮ ಜೊತೆಯಲ್ಲಿ ಯುದ್ಧಕ್ಕೆ ಬರಬಹುದೆಂದೂ ತುಂಬಾ ಹೆದರಿದರು. ಭೀಮಸೇನದೇವರು ಮಾತ್ರ ಹೆದರಲಿಲ್ಲ. ಆದರೆ ತಾನೇ ಮುಂದೆ ನಿಂತು ಭೀಷ್ಮ ಮುಂತಾದ ಹಿರಿಯರೊಡನೆ ಯುದ್ಧವನ್ನು ಮಾಡುವುದಕ್ಕೆ ಇಷ್ಟಪಡಲಿಲ್ಲ. ಅದು ಮಾತ್ರವಲ್ಲ. ಧರ್ಮರಾಜನು ಭೀಮಸೇನದೇವರನ್ನು ಕುರಿತು ಹೇಳಿದನು. " ಅರಗಿನ ಮನೆಯಲ್ಲಿ ಸತ್ತವರ ದೇಹವು ಬೂದಿಯಾಗಿರುವುದರಿಂದ ಯಾರೆಂದು ಗುರುತು ಹಿಡಿಯುವುದಕ್ಕೆ ಸಾಧ್ಯವಿಲ್ಲ. ಆದ್ದರಿಂದ ನಾವೇ ಸತ್ತಿರುವುದಾಗಿ ನಂಬಿ ಜಗಳಕ್ಕೆ ಯಾರೂ ಬರುವ ಸಂಭವವಿಲ್ಲ. ಆದ್ದರಿಂದ ನಮ್ಮನ್ನೆಲ್ಲರನ್ನೂ ಈ ಸ್ಥಳದಿಂದ ಸುರಂಗಮಾರ್ಗದಿಂದ ಬೇರೆ ಕಡೆಗೆ ಸಾಗಿಸು.

ನಾವು ಬದುಕಿರುವ ವಿಷಯವು ಯಾರಿಗೂ ತಿಳಯಕೂಡದು" ಎಂದನು. ಈ ಮಾತುಗಳನ್ನು ಭೀಮಸೇನದೇವರು ಕೇಳಿದರು. ಅಣ್ಣನ ಮಾತುಗಳಿಗೆ ಮರ್ಯಾದೆಯನ್ನು ಕೊಡುವುದುಕ್ಕಾಗಿ ಇವರನ್ನೆಲ್ಲರನ್ನೂ ಬೆನ್ನಿನಲ್ಲಿ ಎತ್ತಿಕೊಂಡವರಾಗಿ ಸುರಂಗದ್ವಾರದಿಂದ ಹೊರಗೆ ಬಂದರು.

ಸ್ವಲ್ಪ ದೂರದ ವರೆಗೆ ಹೋಗುವುದರೊಳಗೆ ಗಂಗೆಯು ಬಂತು. ಗಂಗೆಯನ್ನು ದಾಟಿಸುವುದಕ್ಕಾಗಿ ಕೆಲವು ಬೆಸ್ತರು ಬಂದರು. ಹಸ್ತಿನಾವತಿಯಿಂದ ಹೊರಡುವಾಗ ಧರ್ಮರಾಜನನ್ನು ನೋಡಿ ವಿದುರನು ತುರುಕಭಾಷೆಯಿಂದ ಹೇಳಿದ ಮಾತುಗಳನ್ನು ಆ ಬೆಸ್ತರು ಹೇಳಿದರು. ಇದರಿಂದ ಗಂಗೆಯನ್ನು ದಾಟಿಸುವುದಕ್ಕಾಗಿ ವಿದುರನಿಂದ ಕಳುಹಿಸಲ್ಪಟ್ಟ ಬೆಸ್ತರು ಎಂದು ಧರ್ಮರಾಜನು ನಂಬಿದನು. ಆ ಹಡಗಿನಲ್ಲಿ ಏರಿ ಕುಳಿತರು. ಗಂಗೆಯನ್ನು ದಾಟಿದರು. ಅನಂತರದಲ್ಲಿ ಪುನಃ ಭೀಮಸೇನದೇವರ ಹೆಗಲಿನ ಮೇಲೆ ಐವರೂ ಏರಿದರು. ಕಾಡಿನ ಮಾರ್ಗವಾಗಿ ಮುಂದೆ ಹೋದರು.

## ಪಾಂಡವರು ಸತ್ತರೆಂಬ ವಾರ್ತೆ

ಮರುದಿನ ಬೆಳಗಾಯಿತು. ವಾರಣಾವತದಲ್ಲಿದ್ದ ಒಬ್ಬೊಬ್ಬರೂ ಬೂದಿಯಾಗಿ ಬಿದ್ದಿರುವ ಅರಗಿನ ಮನೆಯ ಸಮೀಪಕ್ಕೆ ಬಂದರು. ಎಲ್ಲರೂ ಅಲ್ಲಿ ಏಳು ದೇಹಗಳು ಬೂದಿಯಾಗಿ ಬಿದ್ದಿರುವುದನ್ನು ನೋಡಿದರು. ಪುರೋಚನನೂ ಐವರು ಪಾಂಡವರೂ ಕುಂತಿಯೂ ಬೂದಿಯಾಗಿರುವುದಾಗಿ ಭ್ರಮಿಸಿದರು. ಎಲ್ಲರೂ ತುಂಬಾ ಅತ್ತರು. ದುರ್ಬುದ್ಧಿಯುಳ್ಳ ದುರ್ಯೋಧನನು ತನ್ನ ಮಂತ್ರಿಯಾದ ಪುರೋಚನನ ಮೂಲಕವಾಗಿ ಧರ್ಮಿಷ್ಠರಾದ ಪಾಂಡವರನ್ನು ಅರಗಿನ ಮನೆಯಲ್ಲಿಟ್ಟು ಸುಡಿಸಿದನು. ಪರಮಪಾಪಿಯಾದ ಆ ಪುರೋಚನನೂ ಸಹ ದೈವವಶದಿಂದ ಸುಟ್ಟುಹೋದನು. ಸಜ್ಜನರಲ್ಲಿ ವಿಷಮಸ್ವಭಾವವುಳ್ಳವನು ಯಾವನು ತಾನೇ ಸುಖವನ್ನು ಪಡೆಯುವನು? ಎಂದು ಸರ್ವರೂ ಶೋಕಿಸಿದರು.

ಭೀಷ್ಮರು, ಧೃತರಾಷ್ಟ್ರ ಮುಂತಾದವರೆಲ್ಲರೂ ವಾರಣಾವತದಲ್ಲಿದ್ದ ಜನರನ್ನು ಕರೆಸಿದರು. ಎಲ್ಲಾ ವಿಷಯಗಳನ್ನೂ ತಿಳಿದರು. ಅಯ್ಯೋ, ಎಂದು ಹೇಳುತ್ತಾ ತುಂಬಾ ದುಃಖಿಸಿದರು. ದುರ್ಯೋಧನ ಮುಂತಾದವರಿಗೆ ಸಂತೋಷವು ಏರ್ಪಟ್ಟಿತು. ಆದರೂ ತುಂಬಾ ದುಃಖಿತರಾದವರಂತೆ ನಟಿಸಿದರು. ವಿದುರನು ಪ್ರತಿಕ್ಷಣದಲ್ಲಿಯೂ ಪಾಂಡವರನ್ನು ರಕ್ಷಿಸುತ್ತಾ ಅವರು ಸುಖವಾಗಿರುವುದನ್ನು ತಿಳಿದು ಸಂತೋಷಿಸಿದನು. ಆದರೂ ಎಲ್ಲರ ಜೊತೆಯಲ್ಲಿ ದುಃಖಿಸುತ್ತಿರುವವನಂತೆ ನಟಿಸಿದನು. ಎಲ್ಲರೂ ಸತ್ತವರಿಗೆ ಮಾಡಬೇಕಾದ ಉತ್ತರಕ್ರಿಯೆಗಳನ್ನು ಮಾಡಲಿಕ್ಕೆ ಆರಂಭಿಸಿದರು.

## ಶ್ರೀಕೃಷ್ಣದೇವನ ಹಸ್ತಿನಾವತೀಗಮನ

ಎಲ್ಲಾ ಇಷ್ಟ ಬಂಧುಗಳಿಗೂ ಪಾಂಡವರು ಅರಗಿನ ಮನೆಯಲ್ಲಿ ಆಕಸ್ಮಿಕವಾಗಿ ಸ್ವರ್ಗಸ್ಥರಾದ ಸಮಾಚಾರವನ್ನು ಹೇಳಿ ಕಳುಹಿಸಿದರು. ಈ ವಿಷಯವನ್ನು ತಿಳಿದ ಸರ್ವಜ್ಞನಾದ ಶ್ರೀಕೃಷ್ಣದೇವನು ತಾನೂ ಈ ಸಮಾಚಾರವನ್ನು ನಂಬಿದವನಂತೆ ನಟಿಸಿದನು. ಬಂಧುಗಳನ್ನು ಸ್ವರ್ಗಸ್ಥರಾದ ಸಮಯದಲ್ಲಿ ಸತ್ತವರ ಬಂಧುಗಳನ್ನು

ನೋಡಿ ಸಮಾಧಾನವನ್ನು ಹೇಳುವುದಕ್ಕೂ ಹತ್ತನೆಯ ದಿನದಲ್ಲಿ ಧರ್ಮೋದಕವನ್ನು ಕೊಡುವುದಕ್ಕೂ ಎಲ್ಲಾ ಇಷ್ಟಮಿತ್ರರು ಉತ್ತರಕ್ರಿಯೆಯು ನಡಿಯುವ ಸ್ಥಳಕ್ಕೆ ಬರುವುದು ಪರಂಪರಾಪ್ರಾಪ್ತವಾದ ಸಂಪ್ರದಾಯ. ಈ ಸಂಪ್ರದಾಯವನ್ನು ಅನುಸರಿಸಿ ಶ್ರೀಕೃಷ್ಣದೇವನೂ ಸಹ ಹಸ್ತಿನಾವತಿಗೆ ಬಂದನು. ಭೀಷ್ಮರು, ಧೃತರಾಷ್ಟ್ರ, ವಿದುರ, ದುರ್ಯೋಧನ ಮುಂತಾದವರನ್ನು ನೋಡಿ ಶೋಕವನ್ನು ವ್ಯಕ್ತಪಡಿಸಿದನು.

# ಸತ್ರಾಜಿದ್ರಾಜನ ಕೊಲೆ

(೭೫) ಅತ್ರ ಸತ್ರಾಶುಚಂ ವ್ಯಸ್ಯ ಅಥ ಸತ್ಯಯಾ ಇತಃ ದ್ವಾರಕಾಂ ಸಮಗಾತ್ ಹಸ್ತಿನಾವತಿಯಲ್ಲಿ ಸತ್ಯಭಾಮಾದೇವಿಯ ದುಃಖವನ್ನು ಪರಿಹರಿಸಿದನು. ಅಲ್ಲಿಂದ ಹೊರಟು ಸತ್ಯಭಾಮಾಸಹಿತನಾಗಿ ದ್ವಾರಕೆಗೆ ಬಂದನು.

ವಿಶೇಷಾರ್ಥ - ಅಕ್ರೂರಕೃತವರ್ಮಬೋಧಿತಶತಧನ್ವನಾ ಸ್ಯಮಂತಕಾರ್ಥಂ ಹತಂ ಸತ್ರಾಜಿತಂ ಸತ್ಯಭಾಮಯಾ ಹಸ್ತಿನಪುರಂ ಪ್ರಾಪ್ತಯಾ ಶ್ರುತ್ವಾ ತಾಮಪಿ ಸಾಂತ್ವಯಿತ್ವಾ ತಯಾ ಸಹ ದ್ವಾರಕಾಂ ಪ್ರಾಪ್ಯ.

ವಿಶೇಷಾರ್ಥ ವಿವರಣ - ಶ್ರೀಕೃಷ್ಣದೇವನು ಬಲರಾಮನೊಡನೆ ಪಾಂಡವರು ಅರಗಿನ ಮನೆಯಲ್ಲಿ ಸುಟ್ಟು ಬೂದಿಯಾದರೆಂದು ತಿಳಿದು ದುಃಖವನ್ನು ವಿಚಾರಿಸುವುದಕ್ಕಾಗಿ ಹಸ್ತಿನಾವತಿಗೆ ಹೋಗಿದ್ದ ಸಮಯದಲ್ಲಿ ಅಕ್ರೂರನೂ ಕೃತವರ್ಮನೂ ಶತಧನ್ವನ ಮನೆಗೆ ಬಂದರು - 'ಎಲೋ ಶತಧನ್ವ, ಈ ಸತ್ರಾಜಿದ್ರಾಜನು ತನ್ನ ಮಗಳಾದ ಸತ್ಯಭಾಮೆಯನ್ನು ಕೊಟ್ಟು ವಿವಾಹವನ್ನು ಮಾಡುವುದಾಗಿ ನಮ್ಮಲ್ಲಿ ಒಬ್ಬೊಬ್ಬರಲ್ಲಿಯೂ ಹೇಳಿದನು. ಕೊನೆಗೆ ಎಲ್ಲರನ್ನೂ ವಂಚಿಸಿ ಶ್ರೀಕೃಷ್ಣನಿಗೆ ವಿವಾಹವನ್ನು ಮಾಡಿರುವನು. ಅವನಲ್ಲಿ ಸ್ಯಮಂತಕಮಣಿಯಿದೆ. ಆ ಮಣಿಯನ್ನು ಅವನ ತಮ್ಮನು ಧರಿಸಿ ಸತ್ತನು. ಈಗ ಇವನು ಧರಿಸಿರುವನು. ಇವನೂ ತಮ್ಮನ ಹಾದಿಯನ್ನೇ ಹಿಡಿಯಲಿ. ನೀನು ಸತ್ರಾಜಿದ್ರಾಜನನ್ನು ಸಂಹರಿಸು. ಆ ಮಣಿಯನ್ನು ಅಪಹರಿಸು ಎಂದು ಉಪದೇಶಿಸಿದರು. ಶತಧನ್ವನು ಮಣಿಯ ಮೇಲಿರುವ ಲೋಭದಿಂದ ಸತ್ರಾಜಿದ್ರಾಜನ ಮನೆಗೆ ಬಂದನು. ಸ್ತ್ರೀಯರೆಲ್ಲರೂ ಅನಾಥೆಯರಂತೆ ಕಿರಿಚಿಕೊಳ್ಳುತ್ತಿರುವಾಗ ಅದನ್ನು ಲಕ್ಷಿಸದೆ ಕಟುಕನು ಪಶುಗಳನ್ನು ಕೊಂದಂತೆ ನಿದ್ರಿಸುತ್ತಿದ್ದ ಸತ್ರಾಜಿದ್ರಾಜನನ್ನು ಕೊಂದು ಮಣಿಯನ್ನು ಕಿತ್ತು ಕೊಂಡು ಹೋದನು.

ಸತ್ಯಭಾಮಾದೇವಿಯು ಸತ್ತತಂದೆಯ ಹೆಣವನ್ನು ನೋಡಿದಳು. ಅಯ್ಯೋ ಅಪ್ಪಾ, ಅಪ್ಪಾ, ನಾನು ಸತ್ತೆನೆಂದು ತುಂಬಾ ಅತ್ತಳು. ಹೆಣವನ್ನು ಎಣ್ಣೆಯ ಪಾತ್ರೆಯಲ್ಲಿ ಕೆಡದಂತೆ ಇಟ್ಟಳು. ಈ ಸಮಾಚಾರವನ್ನು ತಿಳಿಸುವುದಕ್ಕಾಗಿ ಹಸ್ತಿನಾವತಿಗೆ ಬಂದಳು.

ಸರ್ವಜ್ಞನಾದ ಶ್ರೀಕೃಷ್ಣದೇವನಿಗೆ ತಿಳಿಯದ ವಿಷಯವಿಲ್ಲ. ಸರ್ವಜ್ಞಳಾದ ಸತ್ಯಭಾಮಾ ದೇವಿಗೂ ತಿಳಿಯದ ವಿಷಯವಿಲ್ಲ. ಆದರೂ ತಂದೆಯ ಮರಣವೃತ್ತಾಂತವನ್ನು ಶ್ರೀಕೃಷ್ಣದೇವನಿಗೆ ತಿಳಿಸಿದಂತೆ ನಟಿಸಿದಳು. ಇಬ್ಬರೂ ಕಣ್ಣುಗಳಿಂದ ನೀರನ್ನು ಸುರಿಸಿದರು. ಈ ಮನುಷ್ಯಜನ್ಮವು ಅತಿಕಷ್ಟಮಯವಾದುದು. ಅದೂ ನಮ್ಮಿಬ್ಬರಿಗೆ ಅಪಾರವಾದ ಕಷ್ಟವು ಬಂತು. ಒಂದು ಕಡೆಯಿಂದ ನನ್ನ ಸೋದರತ್ತೆ ಮತ್ತು ಅವಳ ಮಕ್ಕಳ ದುರ್ಮರಣ. ಅದನ್ನು ವಿಚಾರಿಸುವುದಕ್ಕಾಗಿ ಬಂದಿರುವಾಗ ನನ್ನ ಮಾವನ ದುರ್ಮರಣ ಎಂದು ಶ್ರೀಕೃಷ್ಣನು ಶೋಕಿಸಿದನು. ಅವನೊಡನೆ

ಸತ್ಯಭಾಮಾದೇವಿಯೂ ಅತ್ತಳೂ ಕೂಡಲೇ ಶ್ರೀಕೃಷ್ಣದೇವನೂ ಸತ್ಯಭಾಮಾದೇವಿಯೂ ಅಲ್ಲಿಂದ ಹೊರಟರು. ದ್ವಾರಕೆಗೆ ಬಂದರು.

## ಶತಧನ್ವನ ಸಂಹಾರ

ಶ್ರೀಕೃಷ್ಣದೇವನು ತನ್ನ ಮಾವನನ್ನು ಸಂಹರಿಸಿರುವ ಶತಧನ್ವನನ್ನು ಸಂಹರಿಸಬೇಕೆಂದೂ ಅವನು ಅಪಹರಿಸಿರುವ ಸ್ಯಮಂತಕಮಣಿಯನ್ನು ತನ್ನ ವಶಪಡಿಸಿಕೊಳ್ಳಬೇಕೆಂದೂ ನಿಶ್ಚಯಿಸಿದನು. ಈ ವಿಷಯವನ್ನು ತಿಳಿದ ಶತಧನ್ವನು ಹೆದರಿದನು. ಕೃತವರ್ಮನಲ್ಲಿ ತನ್ನ ಪ್ರಾಣವನ್ನು ರಕ್ಷಿಸಬೇಕೆಂದು ಬೇಡಿದನು. ಅವನ ಮಾತುಗಳನ್ನು ಕೇಳಿದ ಕೃತವರ್ಮನು '' ಕಂಸನೂ ಅವನ ಪರಿವಾರವೂ ಯಾರ ಮೇಲಿನ ದ್ವೇಷದಿಂದ ಸಂಪತ್ತನ್ನು ಕಳೆದುಕೊಂಡಿತೋ ಯಾರಿಂದಾಗಿ ಜರಾಸಂಧನು ಹದಿನೇಳು ಸಲ ಯುದ್ಧದಲ್ಲಿ ಪರಾಜಿತನಾಗಿ ರಥವನ್ನು ಕಳೆದುಕೊಂಡು ಕಾಲುನಡೆಯಿಂದ ಓಡಿದನೋ ಅಂತಹ ಪರಮೈಶ್ವರ್ಯಯುಕ್ತರಾದ ಬಲರಾಮನಿಗೂ ಶ್ರೀಕೃಷ್ಣನಿಗೂ ವಿರೋಧವನ್ನು ಮಾಡಲಾರೆನು.'' ಎಂದನು.

ಕೃತವರ್ಮನ ಮಾತುಗಳನ್ನು ಕೇಳಿದ ಶತಧನ್ವನು ಅಕ್ರೂರನ ಬಳಿಗೆ ಬಂದನು. ತನ್ನನ್ನು ರಕ್ಷಿಸಬೇಕೆಂದು ಬೇಡಿದನು. ಅದನ್ನು ಕೇಳಿದ ಅಕ್ರೂರನು "ಬಲರಾಮ ಮತ್ತು ಶ್ರೀಕೃಷ್ಣದೇವನ ಬಲವನ್ನು ತಿಳಿದ ಯಾವನು ತಾನೇ ಅವರಿಬ್ಬರಲ್ಲಿ ವಿರೋಧವನ್ನು ಮಾಡುವನು? ಕಂಸನು ಶ್ರೀಕೃಷ್ಣದೇವನಲ್ಲಿ ದ್ವೇಷವನ್ನು ಮಾಡಿದನು. ಅವನು ಪರಿವಾರ ಸಹಿತನಾಗಿ ಸಕಲಸಂಪತ್ತುಗಳಿಂದ ಭ್ರಷ್ಟನಾದನು. ತನ್ನ ಇಚ್ಛಾಮಾತ್ರದಿಂದ ಸಕಲ ಪ್ರಪಂಚವನ್ನೂ ಸೃಷ್ಟಿಸುವವನೂ ಪಾಲಿಸುವವನೂ ಸಂಹರಿಸುವವನೂ ಆಗಿರುವ ಶ್ರೀಕೃಷ್ಣದೇವನ ವ್ಯಾಪಾರವನ್ನು ಅವನ ಮಾಯೆಯಿಂದ ಮೋಹಿತರಾಗಿರುವ ಸರ್ವರೂ ತಿಳಿಯಲು ಶಕ್ತರಲ್ಲ. ಬರೇ ಏಳು ವರ್ಷದ ಬಾಲಕನಾಗಿದ್ದ ಶ್ರೀಕೃಷ್ಣದೇವನು ಒಂದು ಕೈಯಿಂದ ಗೋವರ್ಧನ ಪರ್ವತವನ್ನು ಕಿತ್ತು ಚಿಕ್ಕ ಮಗುವು ನಾಯಿಕೊಡೆಯನ್ನು ಎತ್ತಿದಂತೆ ಲೀಲೆಯಿಂದ ಎತ್ತಿದನು. ಅದ್ಭುತವಾದ ಇಂತಹ ಅನಂತಕರ್ಮಗಳನ್ನು ಮಾಡಿರುವ ಶ್ರೀಕೃಷ್ಣದೇವನಿಗೆ ಅನಂತನಮಸ್ಕಾರಗಳು'' ಎಂದನು.

ಯಾರ ಸಹಾಯವನ್ನು ನಂಬಿ ಸತ್ರಾಜಿದ್ರಾಜನನ್ನು ಕೊಂದನೋ ಕೊನೆಗೆ ಅವರಿಬ್ಬರೂ ಶತಧನ್ವನನ್ನು ಕೈಬಿಟ್ಟರು. ಆಗ ಶತಧನ್ವನು ತನ್ನ ಕೈಯಲ್ಲಿದ್ದ ಸ್ಯಮಂತಕ ಮಣಿಯನ್ನು ಅಕ್ರೂರನ ಕೈಯಲ್ಲಿ ಕೊಟ್ಟನು. ನಾನು ಬದುಕಿ ಹಿಂದೆ ಬಂದರೆ ನನಗೆ ಕೊಡು. ಇಲ್ಲದಿದ್ದರೆ ನೀನೇ ಇಟ್ಟುಕೊಂಡಿರು ಎಂದು ಹೇಳಿದನು. ಒಂದು ಸಲ ಹೊರಟರೆ ನೂರು ಯೋಜನಗಳವರೆಗೆ ಓಡುವ ಕುದುರೆಯ ಮೇಲೆ ಕುಳಿತು ಓಡಿದನು. ಅವನನ್ನು ಹಿಂಬಾಲಿಸಿಕೊಂಡು ಶ್ರೀಕೃಷ್ಣದೇವನು ಬಲರಾಮನಿಂದ ಸಹಿತನಾಗಿ ಹೋದನು. ಮಿಥಿಲಾಪಟ್ಟಣದ ಉದ್ಯಾನವನಕ್ಕೆ ಹೋಗುವಾಗ ನೂರು ಯೋಜನಗಳು ಪೂರ್ಣವಾದವು. ಕುದುರೆಯು ಅಲ್ಲಿಯೇ ಬಿದ್ದು ಸತ್ತಿತು. ಅನಂತರದಲ್ಲಿ ನಡೆದ ವಿಷಯವನ್ನು ಹಿಂದೆಯೇ ಹೇಳಿರುವೆವು. ಶತಧನ್ವನ ಸಂಹಾರ, ಬಲರಾಮನಿಗೆ ಶ್ರೀಕೃಷ್ಣದೇವನಲ್ಲಿ ಅವಿಶ್ವಾಸವು ಏರ್ಪಟ್ಟದ್ದು. ಬಲರಾಮನ ಮಿಥಿಲಾಪುರವಾಸ, ಆ ಸಮಯದಲ್ಲಿ ದುರ್ಯೋಧನನು ಬಲರಾಮನಿಂದ ಗದಾಯುದ್ಧವನ್ನು ಅಭ್ಯಾಸ ಮಾಡಿದ್ದು. ಮುಂತಾದ ವ್ಯಾಪಾರಗಳು ಮಧ್ಯದಲ್ಲಿ ನಡೆದವು.

ಶ್ರೀಕೃಷ್ಣದೇವನೊಬ್ಬನೇ ರಥದಲ್ಲಿ ಕುಳಿತವನಾಗಿ ದ್ವಾರಕೆಗೆ ಹಿಂದಿರುಗಿದನು. ಶತಧನ್ವನ ಸಂಹಾರ ವೃತ್ತಾಂತವನ್ನೂ ಮಣಿಯು ಸಿಗಲಿಲ್ಲ ಎಂಬ ವೃತ್ತಾಂತವನ್ನೂ ಸತ್ಯಭಾಮಾದೇವಿಗೆ ತಿಳಿಸಿದನು. ಸತ್ರಾಜಿದ್ರಾಜನ ಉತ್ತರಕ್ರಿಯೆಯನ್ನೂ ಮಾಡಿಸಿದನು. ಶತಧನ್ವನ ಸಂಹಾರವನ್ನು ತಿಳಿದ ಮತ್ತು ಸತ್ರಾಜಿದ್ರಾಜನ ಸಂಹಾರಕ್ಕೆ ಪ್ರೇರಕರಾದ ಅಕ್ರೂರ ಮತ್ತು ಕೃತವರ್ಮರು ಊರನ್ನೇ ಬಿಟ್ಟು ಓಡಿದರು. ಅಕ್ರೂರನು ಓಡಿ ಹೋದನು ಕೂಡಲೇ ದ್ವಾರಕಾ ಪಟ್ಟಣದಲ್ಲಿ ದುರ್ಭಿಕ್ಷ ಮುಂತಾದ ಅರಿಷ್ಟಗಳು ಏರ್ಪಟ್ಟವು. ಸರ್ವಜ್ಞನಾದ ಶ್ರೀಕೃಷ್ಣದೇವನು ಇದಕ್ಕೆ ಕಾರಣವನ್ನು ಹಿರಿಯರಲ್ಲಿ ಕೇಳಿದನು. " ಕಾಶೀದೇಶದಲ್ಲಿ ದುರ್ಭಿಕ್ಷವು ಏರ್ಪಟ್ಟಿತು. ಆಗ ಕಾಶಿರಾಜನು ಕಾಶಿಯಾತ್ರೆಗೆ ಬಂದಿದ್ದ ಶ್ವಫಲ್ಕನಿಗೆ ತನ್ನ ಮಗಳಾದ ಗಾಂಧಿನಿಯನ್ನು ಕೊಟ್ಟು ವಿವಾಹ ಮಾಡಿದನ್ನು ಕೂಡಲೇ ಮಳೆಯು ಬಂತು ಶ್ವಫಲ್ಕನಿಗೆ ಗಾಂದಿನಿಯಲ್ಲಿ ಹುಟ್ಟಿರುವ ಅಕ್ರೂರನು ಯಾವ ದೇಶದಲ್ಲಿರುವನೋ ಆ ದೇಶದಲ್ಲಿ ದುರ್ಭಿಕ್ಷ ಮುಂತಾದ ಅರಿಷ್ಟಗಳು ಏರ್ಪಡುವುದಿಲ್ಲ. ಅವನು ಈಗ ಊರಿನಲ್ಲಿಲ್ಲ, ಆದ್ದರಿಂದ ದುರ್ಭಿಕ್ಷ ಮುಂತಾದ ಅರಿಷ್ಟಗಳು ಏರ್ಪಟ್ಟಿವೆ" ಎಂದು ಹಿರಿಯರು ಹೇಳಿದರು.

ಶ್ರೀಕೃಷ್ಣದೇವನು ಇಷ್ಟೇ ಕಾರಣವಲ್ಲ ಎಂದು ಹೇಳಿದನು. ಅಕ್ರೂರನನ್ನೂ ಬಲರಾಮನನ್ನೂ ಕರೆಯಿಸಿದನು. ಅಕ್ರೂರನನ್ನು ನೋಡಿ ನಿನ್ನಲ್ಲಿ ಸ್ಯಮಂತಕಮಣಿಯು ಇರುವುದು ನನಗೆ ಗೊತ್ತಿದೆ. ದೇವಭಕ್ತನಾದ ನಿನ್ನಲ್ಲಿಯೇ ಇರಲಿ ಎಂದು ಸಂಕಲ್ಪಿಸಿ ಬಿಟ್ಟು ಬಿಟ್ಟೆನು. ಆದರೆ ನನ್ನ ಅಣ್ಣನಾದ ಬಲರಾಮನು ನಾನೇ ಮಣಿಯನ್ನು ಅಪಹರಿಸಿರುವುದಾಗಿ ಅಪನಂಬಿಕೆಯಿಂದ ಯುಕ್ತನಾಗಿರುವನು. ಆದ್ದರಿಂದ ಆ ಮಣಿಯನ್ನು ತೋರಿಸು ಎಂದನು. ಅಕ್ರೂರನು ಮಣಿಯನ್ನು ತೋರಿಸಿದನು. ಬಲರಾಮನಿಗೆ ಆ ಮಣಿಯನ್ನು ನೋಡಿದ ಕೂಡಲೇ ಆ ಮಣಿಯು ಶ್ರೀಕೃಷ್ಣದೇವನ ಅಣ್ಣನಾಗಿರುವ ತನಗೆ ಸೇರಿದ್ದೆಂಬ ಆಸೆಯು ಏರ್ಪಟ್ಟಿತು. ಶ್ರೀಕೃಷ್ಣದೇವನು ಹೇಳಿದನು.

" ಈ ಮಣಿಯು ಗಂಡುಮಕ್ಕಳಿಲ್ಲದ ಸತ್ರಾಜಿದ್ರಾಜನ ಅನಂತರದಲ್ಲಿ ಅವನ ಹೆಣ್ಣು ಮಗಳಾದ ಸತ್ಯಭಾಮೆಯ ಮಕ್ಕಳಿಗೆ ಸೇರಿದ್ದು. ಅವರು ತಮ್ಮ ಮಾತಾಮಹನಿಗೆ ತರ್ಪಣ ಪಿಂಡದಾನ ಮುಂತಾದ ಮಾತಾಮಹಋಣಗಳನ್ನು ಕಳೆದುಕೊಂಡ ಮೇಲೆ ಅಧಿಕಾರಿಗಳಾಗುವರು. ಆದರೆ ವಿಷ್ಣುಭಕ್ತಿ ಮುಂತಾದ ಗುಣಗಳಿಲ್ಲದವರು ಈ ಮಣಿಯನ್ನು ಧರಿಸಕೂಡದು. ಪ್ರಸೇನ, ಸತ್ರಾಜಿತ್, ಶತಧನ್ವ ಮುಂತಾದವರು ಈ ಮಣಿಯನ್ನು ಧರಿಸಿದರು. ಅವರ ಗತಿ ಏನಾಯಿತು? ನೀನು ದೇವಭಕ್ತನಾಗಿರುವಿ, ಆದ್ದರಿಂದ ನಿನ್ನಲ್ಲಿದ್ದರೆ ನಿನಗೆ ಯಾವ ಅನರ್ಥವೂ ಏರ್ಪಡಲಾರದು. ಈ ಮಣಿಯ ಧಾರಣದಿಂದ ಏರ್ಪಟ್ಟಿರುವ ಭಂಗಾರದಿಂದ ಸುವರ್ಣಮಯವಾದ ವೇದಿಕೆಗಳಲ್ಲಿ ಯಜ್ಞಗಳನ್ನು ಯಾವಾಗಲೂ ಮಾಡುತ್ತಿರು. ಆ ಯಜ್ಞಗಳಿಂದ ಏರ್ಪಡುವ ಫಲಗಳನ್ನು ಸರ್ವರೂ ಅನುಭವಿಸಲಿ" ಎಂದನು. ಅನಂತರದಲ್ಲಿ ಅಕ್ರೂರನು ಶ್ರೀಕೃಷ್ಣದೇವನ ಆಜ್ಞೆಯಿಂದ ಸ್ಯಮಂತಕಮಣಿಯನ್ನು ಧರಿಸಿದನು. ಅಖಂಡವಾಗಿ ಯಜ್ಞಾದಿಕಾರ್ಯಗಳನ್ನು ಮಾಡುತ್ತಾ ಶ್ರೀಹರಿಯ ವಿಶೇಷಾನುಗ್ರಹಕ್ಕೆ ಪಾತ್ರನಾದನು.

## ಹಿಡಿಂಬಕ

(೭೬) ವಿದ್ಧಲಕ್ಷ್ಯಾನ್ ಸಕೃಷ್ಣಾನ್ ಪಾರ್ಥಾನ್ ದ್ರಷ್ಟುಂ ದ್ರುಪದಪುರಂ ಅಗಾತ್ ಗುರಿಯನ್ನು ಹೊಡೆದು ದ್ರೌಪದಿಯನ್ನು ಪಡೆದಿರುವ ಪಾಂಡವರನ್ನು ನೋಡುವುದಕ್ಕೋಸ್ಕರ ದ್ರುಪದನಗರಕ್ಕೆ ಹೋದನು.

ವಿಶೇಷಾರ್ಥ - ತಸ್ಮಿನ್ ಸಮಯೇ ದ್ರೌಪದೀಸ್ವಯಂವರಂ ಕುರ್ವತಾ ದ್ರುಪದೇನಾಹೂತಃ, ಪಾಂಚಾಲನಗರಂ ಪ್ರಾಪ್ಯ ಕೃತಲಕ್ಷ್ಯ ವೇಧಾನ್ ದ್ರೌಪದೀಂ ಪ್ರಾಪ್ತಾನ್ ಪಾಂಡವಾನ್ ಬ್ರಾಹ್ಮಣರೂಪಧರಾನ್ ಕುಂಭಕಾರಸ್ಯ ಶಾಲಾಯಾಂ ದೃಷ್ಟ್ವಾ, ತೈಃ ಪೂಜಿತಃ ಸರ್ವಾನ್ ಅತೋಷಯತ್.

ವಿಶೇಷಾರ್ಥ ವಿವರಣ - ಅರಗಿನ ಮನೆಯನ್ನು ಸುಟ್ಟು ಭಸ್ಮಮಾಡುವುದಕ್ಕೆ ಮುಂಚಿತವಾಗಿ ಸುರಂಗದಲ್ಲಿ ಮಲಗಿಸಿದ್ದ ಧರ್ಮರಾಜ ಮುಂತಾದ ಐವರನ್ನು ಭೀಮಸೇನದೇವರು ಪುನಃ ಎತ್ತಿಕೊಂಡರು. ಸುರಂಗಮಾರ್ಗವಾಗಿಯೇ ಮುಂದುವರಿದರು. ಸುರಂಗಮಾರ್ಗವು ಮುಗಿಯುವಾಗ ಭಯಂಕರವಾದ ಕಾಡಿಗೆ ಬಂದರು. ಹಿಡಿಂಬಕ ಎಂಬ ರಾಕ್ಷಸನು ಆ ಕಾಡಿನಲ್ಲಿ ವಾಸಿಸುತ್ತಿದ್ದನು. ಅಲ್ಲಿಂದ ಹೋದಾಗ ಧರ್ಮರಾಜ ಮುಂತಾದವರಿಗೆ ತುಂಬಾ ನೀರಡಿಕೆಯಾಯಿತು. ಅವರೆಲ್ಲರೂ ನೀರನ್ನು ಕೇಳಿದರು. ಆಗ ಭೀಮಸೇನದೇರು ಅವರನ್ನೆಲ್ಲರನ್ನೂ ಅಲ್ಲಿಯೇ ಮಲಗಿಸಿದರು. ಹೊದ್ದುಕೊಳ್ಳುವ ವಸ್ತ್ರವನ್ನು ಒದ್ದೆ ಮಾಡಿಯೂ ಕಮಲದ ಎಲೆಯ ದೊನ್ನೆಯಿಂದಲೂ ನೀರನ್ನು ತಂದರು. ಆ ನೀರನ್ನು ಅವರಿಗೆ ಕುಡಿಸಿದರು. ನಿಶ್ಚಿಂತೆಯಿಂದ ಮೈಮರೆತು ಮಲಗಿರುವ ಅವರುಗಳನ್ನು ನೋಡಿದರು. ಬಹುದೂರದವರೆಗೆ ಅವರನ್ನು ಹೊತ್ತುಕೊಂಡು ಬಂದಿದ್ದರೂ ಸ್ವಲ್ಪವೂ ಆಯಾಸವಿಲ್ಲದೆ ಅವರನ್ನು ರಕ್ಷಿಸುವುದಕ್ಕಾಗಿ ಸುತ್ತಲೂ ನೋಡುತ್ತಾ ಕುಳಿತರು.

ಆಗ ಹಿಡಿಂಬಕನು ತನ್ನ ತಂಗಿಯಾದ ಹಿಡಿಂಬಿಯನ್ನು ಕರೆದನು. ಎಲೈ ತಂಗಿಯೇ, ಇಲ್ಲಿ ಸಮೀಪದಲ್ಲಿ ಮನುಷ್ಯ ಮಾಂಸದ ವಾಸನೆಯು ಬರುತ್ತಿದೆ. ಅವರು ಎಲ್ಲಿದ್ದರೂ ಹಿಡಿದುಕೊಂಡು ಬಾ ಎಂದನು.

ಅಣ್ಣನಾದ ಹಿಡಿಂಬಕನ ಆಜ್ಞೆಯಂತೆ ಮನುಷ್ಯರನ್ನು ಹುಡುಕುತ್ತಾ ಹಿಡಿಂಬಿಯು ಹೊರಟಳು. ಒಂದು ಪ್ರದೇಶದಲ್ಲಿ ಮಲಗಿರುವ ಧರ್ಮರಾಜ ಮುಂತಾದ ನಾಲ್ವರು ಗಂಡಸರನ್ನೂ ಅವರ ಪಕ್ಕದಲ್ಲಿ ಕುಂತೀದೇವಿಯನ್ನೂ ನೋಡಿದಳು. ಇವರನ್ನು ಜಾಗ್ರತೆಯಿಂದ ರಕ್ಷಿಸುತ್ತಾ ಎಚ್ಚತ್ತಿರುವ ಭೀಮಸೇನದೇವರನ್ನೂ ನೋಡಿದಳು. ಅವರ ಸುಂದರವಾದ ರೂಪವನ್ನು ನೋಡಿದ ಕೂಡಲೇ ಅವಳಿಗೆ ಕಾಮವಿಕಾರವು ಏರ್ಪಟ್ಟಿತು. ಅತಿ ಸುಂದರವಾದ ರೂಪವನ್ನು ಸ್ವೀಕರಿಸಿ ಅವರನ್ನು ಸಮೀಪಿಸಿದಳು.

## ಹಿಡಿಂಬಿಯ ಪೂರ್ವಕಥೆ

ಅವಳು ದೇವೇಂದ್ರನ ಪಟ್ಟಣವಾಗಿರುವ ಅಮರಾವತಿಯ ಸಂಪತ್ತಿಗೆ ಅಭಿಮಾನಿನಿಯಾಗಿರುವ ದೇವತೆಯು. ಅವಳಿಗೆ "ಶ್ರೀ" ಎಂದು ಹೆಸರು. ಆದರೆ ಶ್ರೀಹರಿಯ ಪತ್ನಿಯಾದ ಶ್ರೀದೇವಿಯಲ್ಲ. ದೇವೇಂದ್ರನ ಪತ್ನಿಯು. ಶಚೀ ಎಂಬ ದೇವೇಂದ್ರನ ಪತ್ನಿಗೂ ಇವಳಿಗೂ ಬಹುಕಾಲದಿಂದ ಮಾತ್ಸರ್ಯವಿತ್ತು. ಈ ಮಾತ್ಸರ್ಯದಿಂದ ಶಚೀದೇವಿಯು "ರಾಕ್ಷಸಿಯಾಗಿ ಭೂಮಿಯಲ್ಲಿ ಹುಟ್ಟು" ಎಂದು ಶಪಿಸಿದಳು. ಆ ಶಾಪದಿಂದ ಹಿಡಿಂಬನ ತಂಗಿಯಾಗಿ ಹುಟ್ಟಿದ ಹಿಡಿಂಬಿಯು ತನ್ನ ಪತಿಯಾದ ದೇವೇಂದ್ರನಿಗಿಂತ ಉತ್ತಮರಾಗಿರುವ ಭೀಮಸೇನದೇವರ ಅಂಗಸಂಗದಿಂದ ಶಾಪದಿಂದ ಬಿಡುಗಡೆಯನ್ನು ಪಡೆದು ಮೂಲರೂಪದಲ್ಲಿ ಸೇರಬೇಕೆಂದು ತೀರ್ಮಾನಿಸಿದಳು.

ಭೀಮಸೇನದೇವರನ್ನು ಅತಿಭಕ್ತಿಯಿಂದ ನಮಸ್ಕರಿಸಿದಳು. ಕಾಮಪೀಡಿತಳಾಗಿ ತಾನು ಕನ್ಯೆಯೆಂದೂ

ತನ್ನನ್ನು ವಿವಾಹಮಾಡಿಕೊಂಡು ಅನುಗ್ರಹಿಸಬೇಕೆಂದೂ ಅತಿವಿನಯದಿಂದ ಪ್ರಾರ್ಥಿಸಿದಳು. ಭೀಮಸೇನದೇವರು "ನನ್ನ ಅಣ್ಣನಿಗೆ ಮದುವೆಯಾಗುವುದುಕ್ಕಿಂತ ಪೂರ್ವದಲ್ಲಿ ನಾನು ವಿವಾಹ ಮಾಡಿಕೊಳ್ಳಲಾರೆನು. ಅದು ಧರ್ಮವೂ ಅಲ್ಲ" ಎಂದರು.

ಹಿಂದೆ ಶಚೀದೇವಿಯು ಶಪಿಸಿದ ಕೂಡಲೇ ಭಾರತೀದೇವಿಯರನ್ನು ಅತ್ಯಂತ ಭಕ್ತಿಯಿಂದ ಆರಾಧಿಸಿದಳು. ತಾನು ರಕ್ಷಸಿಯಾಗಿ ಭೂಮಿಯಲ್ಲಿ ಹುಟ್ಟಿದಾಗ ಭೂರತೀದೇವಿಯರು ತನ್ನಲ್ಲಿ ವಿಶೇಷ ಸನ್ನಿಧಾನದಿಂದ ಯುಕ್ತರಾಗಿಬೇಕೆಂದೂ ಮುಖ್ಯಪ್ರಾಣದೇವರ ಅಂಗಸಂಗವು ಭಾರತೀದೇವಿಯರ ವಿಶೇಷ ಸನ್ನಿಧಾನದಿಂದ ತನಗೆ ಏರ್ಪಡಬೇಕೆಂದೂ ಆ ಸಂಗದಿಂದ ಶಚೀದೇವಿಯ ಶಾಪದಿಂದ ಬಿಡುಗಡೆಯು ಏರ್ಪಡಬೇಕೆಂದೂ ವರವನ್ನು ಬೇಡಿದ್ದಳು. ಆ ವರದಿಂದ ಹಿಡಿಂಬಿಯು ಭಾರತೀದೇವಿಯರ ವಿಶೇಷ ಸನ್ನಿಧಾನದಿಂದ ಯುಕ್ತಳಾದಳು. ಪುನಃ ಕಾಮಪೀಡಿತಳಾಗದೆ ಶಾಪವಿಮೋಚನಕ್ಕಾಗಿ ಪ್ರಾರ್ಥಿಸಿದಳು. ತನ್ನಲ್ಲಿ ಭಾರತೀದೇವಿಯರ ವಿಶೇಷ ಸನ್ನಿಧಾನವಿದೆ ಎಂದು ಹೇಳಿದಳು. ಭಾರತೀದೇವಿಯರ ವಿಶೇಷ ಸನ್ನಿಧಾನವಿದೆ ಎಂಬ ವಿಷಯವು ಸತ್ಯ ಎಂದು ತಿಳುಸುವುದಕ್ಕಾಗಿ ತನ್ನಲ್ಲಿ ಆಗ ಏರ್ಪಟ್ಟಿರುವ ದಿವ್ಯಜ್ಞಾನವನ್ನು ತಿಳಿಸಿದಳು.

"ಸಕಲ ಜಗತ್ತಿಗೂ ಗುರುವಾಗಿರುವ ಮತ್ತು ಲಕ್ಷ್ಮೀಪತಿಯಾಗಿರುವ ಶ್ರೀವೇದವ್ಯಾಸರು ನಾಳಿದ್ದು ಇಲ್ಲಿಗೆ ಬರುತ್ತಾರೆ. ಅವರು ನನ್ನನ್ನು ನಿಮಗೆ ಕೊಟ್ಟು ವಿವಾಹವನ್ನು ಮಾಡಿಕೊಡುವರು. ಆಗ ನೀವು ನನ್ನ ಪ್ರಾರ್ಥನೆಯನ್ನು ಅಂಗೀಕರಿಸುವಿರಿ" ಎಂದಳು.

# ಹಿಡಿಂಬಕ ವಧ

ಅದೇ ಸಮಯದಲ್ಲಿ ಹಿಡಿಂಬಕನು ಕುಪಿತನಾಗಿ ಭೀಮಸೇನದೇವರನ್ನೂ ತನ್ನ ತಂಗಿಯಾದ ಹಿಡಿಂಬಿಯನ್ನೂ ಸಂಹರಿಸುವುದಕ್ಕಾಗಿ ಅಲ್ಲಿಗೆ ಬಂದನು. ಹಿಡಿಂಬಿಯು ಭೀಮೇಸೇನದೇವರನ್ನೇ ಶರಣು ಹೊಂದಿದಳು. ಭೀಮಸೇನದೇವರು ಅವಳನ್ನೂ ತನ್ನ ತಾಯಿಯನ್ನೂ ಸಹೋದರರನ್ನೂ ರಕ್ಷಿಸುವುದಕ್ಕಾಗಿ ಹಿಡಿಂಬಕನ ಜೊತೆಯಲ್ಲಿ ಯುದ್ಧವನ್ನು ಮಾಡಿದರು. ಭೀಮಸೇನದೇವರು ತನ್ನ ತಾಯಿ ಮತ್ತು ಸಹೋದರರ ನಿದ್ರೆಗೆ ಭಂಗವು ಬರಬಾರದೆಂಬ ಅಭಿಪ್ರಾಯದಿಂದ ಹಿಡಿಂಬಕನನ್ನು ಬಹುದೂರದವರೆಗೆ ಹೋಗುವಂತೆ ಮಾಡಿ ಅಲ್ಲಿ ಅವನ ಜೊತೆಯಲ್ಲಿ ಯುದ್ಧವನ್ನು ಮಾಡಿದರು. ಮುಷ್ಟಿಗಳಿಂದಲೂ ಮರಗಳಿಂದಲೂ ಕಲ್ಲುಗಳಿಂದಲೂ ಪರ್ವತಗಳಿಂದಲೂ ಯುದ್ಧವನ್ನು ಮಾಡಿದರು. ಅಷ್ಟರಲ್ಲಿ ಈ ಗಲಾಟೆಯಿಂದ ಸಹೋದರರೂ ತಾಯಿಯೂ ಎದ್ದರು. ಈ ಯುದ್ಧವನ್ನು ನೋಡಿ ಹೆದರಿದರು. ಅವರ ಹೆದರಿಕೆಯನ್ನು ತಿಳಿದ ಭೀಮಸೇನದೇವರು ಹಿಡಿಂಬಕನ ಎದೆಯನ್ನು ಒಮ್ಮೆಗುದ್ದಿದರು. ಈ ಹಿಡಿಂಬಕನು ರುದ್ರದೇವನನ್ನು ತಪಸ್ಸಿನಿಂದ ಸಂತೋಷಪಡಿಸಿ "ಯಾರಿಂದಲೂ ತನಗೆ ಮರಣವಿಲ್ಲ" ಎಂದು ವರವನ್ನು ಪಡೆದಿದ್ದನು. ಅವನು ಈಗ ಭೀಮಸೇನದೇವರ ಹೊಡೆತದಿಂದ ರಕ್ತವಾಂತಿಯನ್ನು ಮಾಡುತ್ತಾ ಸತ್ತು ಹೋದನು. ಕ್ರಮವಾಗಿ ನಿತ್ಯನರಕವನ್ನು ಹೊಂದಿದನು.

# ಹಿಡಿಂಬೀ ವಿವಾಹ

ಭೀಮಸೇನದೇವರು ತಾಯಿಯನ್ನೂ ಅಣ್ಣತಮ್ಮಂದಿರನ್ನೂ ಎತ್ತಿಕೊಂಡವರಾಗಿ ಹೊರಟರು.

ಹಿಡಿಂಬಿಯೂ ಅವರ ಹಿಂದೆ ಹೊರಟಳು. ಧರ್ಮರಾಜನನ್ನೂ ಕುಂತಿಯನ್ನೂ ಹಿಡಿಂಬಿಯು ವಿನಯದಿಂದ ನಮಸ್ಕರಿಸಿದಳು. ತನ್ನನ್ನು ವಿವಾಹ ಮಾಡಕೊಳ್ಳಬೇಕೆಂದು ಭೀಮಸೇನದೇವರಿಗೆ ಆಜ್ಞಾಪಿಸಬೇಕೆಂದೂ ಪ್ರಾರ್ಥಿಸಿದಳು. ಅವರಿಬ್ಬರೂ ಹೇಳಿದರು. ಭೀಮಸೇನದೇವರು ಒಪ್ಪಲಿಲ್ಲ. ಆಗ ಹಿಡಿಂಬಿಯು ವೇದವ್ಯಾಸರನ್ನು ಸ್ಮರಿಸಿದಳು. ಸಕಲಗುಣಪರಿಪೂರ್ಣನೂ ಅನಂತ ಸುಖ ಸಮುದ್ರನೂ ವಿದ್ಯಾನಿಧಿಯೂ ಸರ್ವೋತ್ತಮನೂ ಆಗಿರುವ ಶ್ರೀವೇದವ್ಯಾಸರು ಪ್ರತ್ಯಕ್ಷರಾದರು. ಅವರನ್ನು ನೋಡಿದ ಎಲ್ಲಾ ಪಾಂಡವರೂ ತಾಯಿಯಿಂದ ಸಹಿತರಾಗಿ ಅತ್ಯಂತ ಸಂತೋದಿಂದ ಎದ್ದು ನಿಂತರು. ಅತ್ಯಂತ ಭಕ್ತಿಯಿಂದ ಪೂಜಿಸಿದರು. ಶ್ರೀವೇದವ್ಯಾಸರ ಕೃಪಾದೃಷ್ಟಿಯಿಂದ ನೋಡಲ್ಪಟ್ಟವರಾಗಿ ಕುಳಿತರು.

ಭಕ್ತಿಯಿಂದ ತಲೆಯನ್ನು ತಗ್ಗಿಸಿಕೊಂಡಿರುವ ಪಾಂಡವರ ಮುಂದೆ ಹಿಡಿಂಬಿಯು ಅತ್ಯಂತ ಭಕ್ತಿಯಿಂದ ನಮಸ್ಕರಿಸಿದಳು. ಶ್ರೀವೇದವ್ಯಾಸರು ಭೀಮಸೇನದೇವರನ್ನು ಕರೆದರು. " ಭೀಮಸೇನ, ಇವಳು ದೇವೇಂದ್ರನ ಪಟ್ಟಣದ ಅಭಿಮಾನಿನಿಯಾಗಿರುವ ಶ್ರೀದೇವಿಯು. ಇವಳನ್ನು ನೀನು ವಿವಾಹ ಮಾಡಿಕೊ. ಇವಳಲ್ಲಿ ಒಬ್ಬ ಗಂಡು ಮಗನು ಹುಟ್ಟುವನು. ಮಗನು ಹುಟ್ಟಿದ ಕೂಡಲೇ ಮಗನನ್ನು ಕರೆದುಕೊಂಡು ಇವಳೂ ಹೋಗಲಿ" ಎಂದರು.

ಶ್ರೀವೇದವ್ಯಾಸರ ಮಾತನ್ನು "ಓಂ" ಎಂದು ಹೇಳಿ ಅಂಗೀಕರಿಸಿದರು. ಹಿಡಿಂಬಿಯು ಪ್ರತಿದಿನದಲ್ಲಿಯೂ ಪ್ರಾತಃಕಾಲದಲ್ಲಿ ಭೀಮಸೇನದೇವರನ್ನು ಹೆಗಲಿನಲ್ಲಿ ಎತ್ತಿಕೊಂಡು ದೇವತೆಗಳು ಸಂಚರಿಸುವ ಪ್ರದೇಶಗಳಿಗೆ ಹೋಗುತ್ತಿದ್ದಳು. ನಂದನವನ ಮುಂತಾದ ವನಗಳಲ್ಲಿ ಅವರೊಡನೆ ವಿಹರಿಸಿ ಸೂರ್ಯಾಸ್ತಮನ ಸಮಯಕ್ಕೆ ಸರಿಯಾಗಿ ಕುಂತೀ ಮತ್ತು ಪಾಂಡವರ ಸಮೀಪಕ್ಕೆ ಹಿಂದಿರುಗಿ ಬರುತ್ತಿದ್ದಳು.

## ಘಟೋತ್ಕಚನ ಜನ್ಮ

ಹೀಗೆ ಆರು ತಿಂಗಳು ಕಳೆದವು. ಆ ಮೇಲೆ ಅವಳಲ್ಲಿ ಒಬ್ಬ ಮಗನು ಹುಟ್ಟಿದನು. ಅವನು ಅತ್ಯಂತ ವೀರ್ಯದಿಂದಲೂ ಬಲದಿಂದಲೂ ಯುಕ್ತನಾಗಿದ್ದನು. ಅವನ ತಲೆಬುರುಡೆಯು ಗಡಿಗೆಯಂತಿತ್ತು. ಆದ್ದರಿಂದ ಅವನಿಗೆ 'ಘಟ' ಎಂಬ ಹೆಸರು ಬಂತು. ಅವನ ತಲೆಯ ಕೂದಲುಗಳು ಮೇಲ್ಮುಖವಾಗಿದ್ದವು. ಆ ಕೂದಲುಗಳೂ ಹುಟ್ಟಿದ ಮರುಕ್ಷಣದಲ್ಲಿಯೇ ಹುಟ್ಟಿದವು. ಆದ್ದರಿಂದ 'ಉತ್ಕಚ' ಎಂಬ ಹೆಸರು ಬಂತು. ಹೀಗೆ ಘಟ+ಉತ್ಕಚ= ಘಟೋತ್ಕಚ ಎಂದು ಪ್ರಸಿದ್ಧನಾದನು.

ಅವನು ಹಿಂದೆ 'ನಿರ್ಋತಿ' ಎಂಬ ದೇವತೆಯಾಗಿದ್ದನು. ಆದರೂ ಆಗಲೂ ರಾಕ್ಷಸರೂಪದಿಂದ ಯುಕ್ತನಾಗಿದ್ದನು. ಈಗಲೂ ರಾಕ್ಷಸರ ರೂಪದಿಂದ ಯುಕ್ತನಾಗಿರುವನು. ಅವನಲ್ಲಿ ರುದ್ರದೇವರ ವಿಶೇಷ ಸನ್ನಿಧಾನವಿತ್ತು.

ಮಗನು ಹುಟ್ಟಿದ ಕೂಡಲೇ ಶ್ರೀವೇದವ್ಯಾಸರ ಆಜ್ಞೆಯಂತೆ ಹಿಡಿಂಬಿಯು ತನ್ನ ಮಗನನ್ನು ಕರೆದುಕೊಂಡು ಭೀಮಸೇನದೇವರನ್ನೂ ಕುಂತಿಯನ್ನೂ ಧರ್ಮರಾಜನನ್ನೂ ನಮಸ್ಕರಿಸಿ ಹೊರಟಳು. ಅವಳನ್ನೂ ಅವಳ ಮಗನನ್ನೂ ಸ್ಮರಿಸಿದ ಕೂಡಲೇ ಬರಬೇಕೆಂದು ಭೀಮಸೇನದೇವರು ಆಜ್ಞಾಪಿಸಿದರು. " ಹಾಗೆಯೇ ಆಗಲಿ" ಎಂದು ಹೇಳಿ

ದೇವಲೋಕಕ್ಕೆ ಹೊರಟು ಹೋದಳು.

## ಪಾಂಡವರ ಏಕಚಕ್ರಾನಗರವಾಸ

ಏಕಚಕ್ರಾನಗರದಲ್ಲಿ "ಬಕ" ಎಂಬ ರಾಕ್ಷಸನು ವಾಸಿಸುತ್ತಿದ್ದನು. ರುದ್ರದೇವನು ಅವನಿಗೆ "ಯಾರಿಂದಲೂ ಯಾವಾಗಲೂ ಮರಣವೂ ಪರಾಜಯವೂ ಇಲ್ಲ" ಎಂಬ ವರವನ್ನು ಕೊಟ್ಟಿದ್ದನು. ಅವನನ್ನು ಭೀಮಸೇನದೇವರಿಂದ ಕೊಲ್ಲಿಸಬೇಕೆಂಬ ಉದ್ದೇಶದಿಂದ ಶ್ರೀವೇದವ್ಯಾಸದೇವನು ಪಾಂಡವರಿಂದ ಸಹಿತನಾಗಿ ಏಕಚಕ್ರಾನಗರಕ್ಕೆ ಹೋದನು. ಐವರು ಪಾಂಡವರನ್ನೂ ಬ್ರಾಹ್ಮಣವೇಷವನ್ನು ಧರಿಸುವಂತೆ ಹೇಳಿದನು.

ಆ ಊರಿನಲ್ಲಿರುವ ಬ್ರಾಹ್ಮಣರನ್ನೆಲ್ಲಾ ಕರೆಯಿಸಿದನು. ಈ ಐವರೂ ತಾಯಿಯೂ ಕೆಲವು ಕಾಲದ ವರೆಗೆ ನಿಮ್ಮ ಊರಿನಲ್ಲಿರುವರು. ಇವರೆಲ್ಲರೂ ನನ್ನ ಶಿಷ್ಯರು. ನಾನು ಕಾರ್ಯಾಂತರನಿಮಿತ್ತದಿಂದ ಬೇರೆ ಊರಿಗೆ ಹೋಗಿ ಕೆಲವು ದಿನಗಳಲ್ಲಿ ಹಿಂದಿರುಗಿ ಬರುವೆನು. ಅಷ್ಟರವರೆಗೆ ನಿಮ್ಮ ಊರಿನಲ್ಲಿಯೇ ವೇದಾಧ್ಯಯನ ಮುಂತಾದ ಸ್ವಧರ್ಮಗಳನ್ನು ಅನುಷ್ಠಿಸುತ್ತಾ ಇರಲಿ" ಎಂದನು.

ಪಾಂಡವರನ್ನು ಕರೆದನು. ನೀವೆಲ್ಲರೂ ನಾನು ಹಿಂದಿರುಗಿ ಬರುವ ವರೆಗೆ ಭಿಕ್ಷೆಯನ್ನು ಬೇಡುತ್ತಾ ಜೀವನವನ್ನು ನಿರ್ವಹಿಸುತ್ತಾ ಇರಬೇಕು. ನಾನು ಬಂದು ನಿಮ್ಮನ್ನೆಲ್ಲರನ್ನೂ ಕರೆದುಕೊಂಡು ಹೋಗುವೆನು" ಎಂದು ಆಜ್ಞಾಪಿಸಿದನು. ಭಿಕ್ಷೆಯನ್ನು ಬೇಡುವುದು ಕ್ಷತ್ರಿಯಧರ್ಮಕ್ಕೆ ವಿರುದ್ಧವಾಗಿದ್ದರೂ ಶ್ರೀವೇದವ್ಯಾಸರ ಆಜ್ಞೆಯಿಂದ ಆ ಕಾರ್ಯವನ್ನು ಮಾಡಲು ಸಿದ್ಧರಾದರು. ಅವರೆಲ್ಲರೂ ವೇದಾಧ್ಯಯನವನ್ನು ಮಾಡುತ್ತಾ ಆ ಊರಿನಲ್ಲಿ ಶ್ರೋತ್ರಿಯ ಬ್ರಾಹ್ಮಣರಂತೆ ವಾಸಿಸಿದರು.

## ಪಾಂಡವರ ಭಿಕ್ಷಾಚರಣ

ಧರ್ಮರಾಜ, ಅರ್ಜುನ, ನಕುಲ ಸಹದೇವ ಎಂಬ ನಾಲ್ವರು ಭಿಕ್ಷಾಪಾತ್ರೆಯನ್ನು ಕೈಯಲ್ಲಿ ಸ್ವೀಕರಿಸಿ ಕ್ಲಪ್ತವಾದ ಕೆಲವು ಮನೆಗಳ ಮುಂದೆ ಹೋಗಿ ಕ್ಲಪ್ತವಾದ ಕೆಲವು ನಿಮಿಷಗಳ ವರೆಗೆ ಆ ಮನೆಗಳ ಮುಂದೆ ನಿಲ್ಲುತ್ತಿದ್ದರು. ಆ ಕ್ಲಪ್ತ ನಿಮಿಷಗಳಲ್ಲಿ ಮನೆಯ ಯಜಮಾನಿಯು ತಂದು ಹಾಕಿದ ವಸ್ತುವನ್ನು ಸ್ವೀಕರಿಸಿ ಮುಂದಿನ ಮನೆಗೆ ಹೋಗುತ್ತಿದ್ದರು. "ಕ್ಷತ್ರಿಯನು ಭಿಕ್ಷೆಯನ್ನು ಬೇಡಕೂಡದು" ಎಂಬ ಧರ್ಮವನ್ನು ಪಾಲಿಸುವುದಕ್ಕಾಗಿ "ಭವತಿ ಭಿಕ್ಷಾಂ ದೇಹಿ" ಮುಂತಾದ ಮಾತುಗಳಿಂದ ಭಿಕ್ಷೆಗಳನ್ನು ಕೇಳುತ್ತಿದ್ದಿಲ್ಲ. ಮನೆಯ ಯಜಮಾನಿಯು ಕಾರ್ಯಾಂತರದಲ್ಲಿ ಆಸಕ್ತಳಾಗಿದ್ದು ಇವರನ್ನು ಗಮನಿಸದಿದ್ದರೆ ಅದಕ್ಕಾಗಿ ಕ್ಲುಪ್ತವಾದ ಕಾಲಕ್ಕಿಂತ ಅಧಿಕವಾದ ನಿಮಿಷಗಳ ವರೆಗೆ ಆ ಮನೆಯ ಮುಂದೆ ನಿಲ್ಲುತ್ತಲೂ ಇರಲಿಲ್ಲ. ಹೀಗೆ ಭಿಕ್ಷೆ ಬೇಡಿರುವ ವಸ್ತುಗಳನ್ನು ತಾಯಿಯ ಮುಂದೆ ತಂದಿಡುತ್ತಿದ್ದರು. ಅವಳು ಅವುಗಳನ್ನೆಲ್ಲಾ ಹಂಚಿಕೊಟ್ಟಂತೆ ಎಲ್ಲರೂ ತಿಂದು ಜೀವಿಸುತ್ತಿದ್ದರು.

## ಭೀಮಸೇನದೇವರ ಭಿಕ್ಷಾಚರಣ

ಒಬ್ಬ ಕುಂಬಾರನು ಆ ಊರಿನಲ್ಲಿ ವಾಸಿಸುತ್ತಿದ್ದನು. ಅವನೂ ದೊಡ್ಡ ಮನೆಯನ್ನು ಕಟ್ಟಿಸಿದ್ದನು. ಆ ಮನೆಯ

ಸುತ್ತಲೂ ಬೆಂಕಿಯು ಸುತ್ತಿಕೊಂಡು ಬಂತು. ಆ ಬೆಂಕಿಯ ಮಧ್ಯದಲ್ಲಿ ತನ್ನ ಮನೆಯೂ ಮನೆಯ ಸುತ್ತಲಿರುವ ತೋಟವೂ ಭಸ್ಮವಾಗುತ್ತದೆಯೆಂದು ಕುಂಬಾರನು ದುಃಖಿಸುತ್ತಿದ್ದನು. ಆ ಮಾರ್ಗವಾಗಿ ಹೋಗುತ್ತಿದ್ದ ಭೀಮಸೇನದೇವರು ಕುಂಬಾರನ ಕಷ್ಟವನ್ನು ತಿಳಿದರು. ಬೆಂಕಿಯ ಮಧ್ಯದಲ್ಲಿ ಪ್ರವೇಶಿಸಿದರು. ಆ ಮನೆಯನ್ನು ಮನೆಯ ಸುತ್ತಲಿರುವ ತೋಟವನ್ನೂ ಮಣ್ಣಿನೊಡನೆ ಅವುಗಳ ಕೆಳಗಿರುವ ಭೂಮಿಯನ್ನೂ ಎತ್ತಿಕೊಂಡು ಬೆಂಕಿಯ ಮಧ್ಯದಿಂದ ಹೊರಗೆ ತಂದರು. ಸುರಕ್ಷಿತವಾದ ಬೇರೆ ಕಡೆಯಲ್ಲಿ ಇಟ್ಟರು. ಈ ವ್ಯಾಪಾರದಿಂದ ಸಂತುಷ್ಟನಾದ ಕುಂಬಾರನು ತನ್ನಿಂದ ಯಾವುದಾದರೂ ಒಂದು ಸೇವೆಯನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸಿದನು.

" ಪರೋಪಕಾರವನ್ನು ಮಾಡುವುದು ನನ್ನ ಸ್ವಭಾವ. ಅದಕ್ಕಾಗಿ ಯಾವ ಪ್ರತಿಫಲವನ್ನೂ ಅಪೇಕ್ಷಿಸಲಾರೆ. ಆದರೂ ನಿನ್ನ ಆಸೆಯನ್ನು ಪೂರ್ತಿಮಾಡುವದಕ್ಕೋಸ್ಕರ ಒಂದು ದೊಡ್ಡ ಮನೆಯಷ್ಟು ಎತ್ತರವಾಗಿರುವ ಗಡಿಗೆಯನ್ನು ಮಾಡಿಕೊಡು'' ಎಂದು ಆಜ್ಞಾಪಿಸಿದರು. ಅದರಂತೆಯೇ ದೊಡ್ಡದಾಗಿರುವ ಗಡಿಗೆಯನ್ನು ಮಾಡಿಕೊಟ್ಟನು. ಕ್ಷತ್ರಿಯರಿಗಿಂತ ಬ್ರಾಹ್ಮಣರು ಉತ್ತಮರು. ಅವರಿಗೆ ಕ್ಷತ್ರಿಯರು ಭಿಕ್ಷೆಯನ್ನು ಕೊಡಬೇಕೇ ಹೊರತು ಅವರಿಂದ ಭಿಕ್ಷೆಯನ್ನು ಸ್ವೀಕರಿಸುವುದು ಉಚಿತವಲ್ಲ. ಕ್ಷತ್ರಿಯರು ಸಮಾನರು. ಅವರಿಂದಲೂ ಭಿಕ್ಷೆಯನ್ನು ಸರ್ವಥಾ ಸ್ವೀಕರಿಸಕೂಡದು. ವೈಶ್ಯರು ಕ್ಷತ್ರಿಯರಿಗಿಂತ ಅಧಮರು. ಅವರಿಂದ ರಾಜರು ಕಂದಾಯವನ್ನು ವಸೂಲಿಸಿದಂತೆ ಅಧಿಕಾರಪೂರ್ವಕವಾಗಿ ವಸೂಲಿಸಬೇಕು ಎಂದು ತೀರ್ಮಾನಿಸಿದರು.

ತನ್ನಿಂದ ಉಪಕೃತನಾಗಿರುವ ಕುಂಬಾರನಿಂದ ತಯಾರಿಸಿಕೊಡಲ್ಪಟ್ಟ ಮನೆಯಷ್ಟು ದೊಡ್ಡದಾಗಿರುವ ಗಡಿಗೆಯನ್ನು ಒಂದು ಕೈಯಿಂದ ಎತ್ತಿಕೊಂಡು ವೈಶ್ಯರ ಮನೆಗೆ ಹೋಗುತ್ತಿದ್ದರು. ಒಂದೊಂದು ಮನೆಯ ಮುಂದೆಯೂ ನಿಂತುಕೊಂಡು "ಹುಂ' ಎಂದು ಗರ್ಜನೆಯನ್ನು ಮಾಡುತ್ತಿದ್ದರು. " ಆ ಧ್ವನಿಯನ್ನು ಕೇಳಿದ ಕೂಡಲೇ ಮನೆಯಲ್ಲಿರುವವರೆಲ್ಲರೂ ಓಡಿ ಬರುತ್ತಿದ್ದರು. ಇವರನ್ನೂ ಇವರ ಕೈಯಲ್ಲಿರುವ ದೊಡ್ಡ ಗಡಿಗೆಯನ್ನು ನೋಡುವರು. ಕೂಡಲೇ ಹೆದರಿ ಆ ಗಡಿಗೆಯ ಭರ್ತಿಯಾಗುವುದಕ್ಕೆ ಅರ್ಹವಾಗಿರುವ ವಸ್ತುಗಳನ್ನು ಸಮರ್ಪಿಸುತ್ತಿದ್ದರು. ಇದು ಭೀಮಸೇನದೇವರ ಭಿಕ್ಷಾಟನಕ್ರಮ. ಇದರಿಂದ ಬ್ರಾಹ್ಮಣರಂತೆ ಭಿಕ್ಷೆಯನ್ನು ಬೇಡಲಿಲ್ಲ. ಆದ್ದರಿಂದ ಭೀಮಸೇನದೇವರಿಗೆ ಕ್ಷತ್ರಿಯಧರ್ಮಲೋಪವು ಏರ್ಪಡಲಿಲ್ಲ. ಕ್ಷತ್ರಿಯರಂತೆ ಅಧಿಕಾರಪೂರ್ವಕವಾಗಿಯೇ ಭಿಕ್ಷೆಯನ್ನು ಸ್ವೀಕರಿಸಿದರು. ಇದರಿಂದ ಕ್ಷತ್ರಿಯ ಧರ್ಮವನ್ನು ಅನುಸರಿಸಿದಂತೆಯೂ ಆಯಿತು.

## ಭೀಮಸೇನದೇವರ ಭಿಕ್ಷಾಪರಿತ್ಯಾಗ

ಧರ್ಮರಾಜನು ಆಲೋಚಿಸಿದನು. " ಈ ಭೀಮಸೇನನು ಒಂದೊಂದು ವೈಶ್ಯರ ಮನೆಯ ಮುಂದೆಯೂ ನಿಂತು "ಹುಂ" ಕಾರದಿಂದ ಜನರನ್ನು ಹೆದರಿಸಿ ಕಂದಾಯವನ್ನು ವಸೂಲಿಸಿದಂತೆ ಭಿಕ್ಷೆಯನ್ನು ಸ್ವೀಕರಿಸುತ್ತಿರುವನು. ಇಷ್ಟು ಸ್ವಧರ್ಮದಲ್ಲಿ ದೀಕ್ಷೆಯು ಭೀಮಸೇನನಿಗೆ ಹೊರತು ಬೇರೆ ಯಾರಿಗೂ ಇರಲು ಸಾಧ್ಯವಿಲ್ಲ. ಮನೆಯಷ್ಟು ಎತ್ತರವಾಗಿರುವ ಗಡಿಗೆಯನ್ನು ಒಂದು ಕೈಯಿಂದ ಎತ್ತಿಕೊಂಡು ಆ ಪಾತ್ರೆ ತುಂಬಾ ಭಿಕ್ಷೆಯನ್ನು ತರುತ್ತಿರುವನು. ಇಷ್ಟು ಬಲವು ಭೀಮಸೇನನನ್ನು ಬಿಟ್ಟು ಬೇರೆ ಯಾರಿಗೂ ಇಲ್ಲ. ದುರ್ಯೋಧನನ ದೂತರು ಎಲ್ಲಾ ಕಡೆಯಲ್ಲಿಯೂ ಸಂಚರಿಸುತ್ತಿರುವರು. ಅವರು ಈ ವಿಷಯವನ್ನು ಕೂಡಲೇ ದುರ್ಯೋಧನನಿಗೆ ತಿಳಿಸದಿರಲಾರರು. ಅವನು ತಿಳಿದರೆ ನಮ್ಮೆಲ್ಲರನ್ನೂ ಸಂಹರಿಸುವುದಕ್ಕೆ ಪುನಃ ಪ್ರಯತ್ನಿಸದೆ ಇರಲಾರನು. ಆದ್ದರಿಂದ ಭೀಮಸೇನನನ್ನು ನಾಳೆಯಿಂದ

ಭಿಕ್ಷೆಗೆ ಹೋಗುವುದನ್ನು ನಿಲ್ಲಿಸಬೇಕೆಂದು ತೀರ್ಮಾನಿಸಿದನು.

ಧರ್ಮರಾಜನು ತನ್ನ ಭಯಕ್ಕೆ ಕಾರಣವನ್ನು ತಿಳಿಸಿದನು. ನೀನು ತಾಯಿಯವರೊಡನೆ ಮನೆಯಲ್ಲಿಯೇ ಇರು. ಭಿಕ್ಷೆಗಾಗಿ ಹೋಗಬೇಡ. ಅರ್ಜುನ ಮುಂತಾದವರು ತಂದದ್ದನ್ನು ನೀನು ಭಕ್ಷಿಸು ಎಂದು ಹೇಳಿದನು. ಭೀಮಸೇನದೇವರೂ ಹಾಗೆಯೇ ಮಾಡಿದರು.

## ಬಕಾಸುರನಿಂದ ಏರ್ಪಡುತ್ತಿದ್ದ ಆಪತ್ತು

ಒಮ್ಮೆ ಧರ್ಮರಾಜ ಮುಂತಾದ ನಾಲ್ವರು ಭಿಕ್ಷೆ ಬೇಡುವುದಕ್ಕಾಗಿ ಹೊರಗೆ ಹೋಗಿದ್ದರು. ಭೀಮಸೇನದೇವರು ಮಾತ್ರ ತಾಯಿಯೊಡನೆ ಮನೆಯಲ್ಲಿದ್ದರು. ಆಗ ಅವರು ವಾಸಿಸುತ್ತಿದ್ದ ಮನೆಯ ಯಜಮಾನನು ಅವನ ಪತ್ನಿಯೂ ಗಟ್ಟಿಯಾಗಿ ಅಳುತ್ತಿರುವ ಧ್ವನಿಯನ್ನು ಕೇಳಿದರು. ಕೂಡಲೇ ಈ ರೋದನಕ್ಕೆ ಕಾರಣವನ್ನು ತಿಳಿಯಬೇಕೆಂದೂ ಸಾಧ್ಯವಾದರೆ ಅವರ ಕಷ್ಟವನ್ನು ಪರಿಹರಿಸಬೇಕೆಂದೂ ತೀರ್ಮಾನಿಸಿದರು. ಆದರೆ ಮಕ್ಕಳಿರುವ ಮನೆಯಲ್ಲಿ ಮಕ್ಕಳನ್ನು ಲಾಲಿಸುವುದೂ ಮೊಲೆಯನ್ನು ಕುಡಿಸುವುದು ಸಹಜ. ಅಂತಹ ಸಂದರ್ಭದಲ್ಲಿ ತಾನು ಪ್ರವೇಶಿಸಿದರೆ ಬ್ರಾಹ್ಮಣನ ಪತ್ನಿಯು ಲಜ್ಜೆಯಿಂದ ಯುಕ್ತಳಾಗಬಹುದು. ಆದ್ದರಿಂದ ತಾನು ಪ್ರವೇಶಿಸಕೂಡದೆಂದು ತನ್ನ ತಾಯಿ ಮೂಲಕವಾಗಿ ತಿಳಿಯಬೇಕೆಂದೂ ತೀರ್ಮಾನಿಸಿದರು. ಅದರಂತೆಯೇ ತನ್ನ ತಾಯಿಯನ್ನು ಕಳುಹಿಸಿದರು. ಕುಂತಿಯು ಹೊರಗೆ ನಿಂತವಳಾಗಿ ಒಳಗೆ ಸಂಭಾಷಿಸುತ್ತಿರುವವರಿಗೆ ತಿಳಿಯದಂತೆ ಅವರ ಸಂಭಾಷಣೆಗಳನ್ನು ಕೇಳಿದಳು.

ಮನೆಯ ಯಜಮಾನನು ಮೊದಲು ಹೇಳಿದನು. "ಬಕ" ಎಂಬ ದೈತ್ಯನಿಗೆ ಕೊಡಬೇಕಾದ ಕಂದಾಯಗಳನ್ನು ವಿವರಿಸುವೆನು. ೧) ಗಿರಿಯಷ್ಟು ಎತ್ತರವಾದ ಭಕ್ಷ್ಯಗಳು ಮತ್ತು ಅನ್ನದ ರಾಶಿಗಳು, ೨) ಈ ಭಕ್ಷ್ಯ ಗಳನ್ನೂ ಅನ್ನಗಳನ್ನೂ ತುಂಬುವುದಕ್ಕೆ ಯೋಗ್ಯವಾಗಿರುವ ದೊಡ್ಡ ಬಂಡಿ ೩) ಆ ಬಂಡಿಯನ್ನು ಸೆಳೆಯುವುದಕ್ಕೆ ಸಮರ್ಥವಾಗಿರುವ ಬಲಿಷ್ಠವೂ ಪುಷ್ಟವೂ ಆಗಿರುವ ಎರಡು ಎತ್ತುಗಳು, ೪) ಆ ಬಂಡಿಯನ್ನು ಓಡಿಸುವುದಕ್ಕೆ ಸಮರ್ಥನಾದ ಒಬ್ಬ ಮನುಷ್ಯನು. ಈ ನಾಲ್ಕು ವಸ್ತುಗಳನ್ನು ಕೊಟ್ಟೇ ತೀರಬೇಕು. ಒಂದು ವಸ್ತುವು ಕಡಿಮೆಯಾದರೂ ಬಕಾಸುರನು ಅವರ ಕುಲವನ್ನೇ ನಾಶಮಾಡುವನು. ಬಂಡಿಯನ್ನೂ ಎತ್ತುಗಳನ್ನೂ ಭಕ್ಷ್ಯಗಳನ್ನೂ ಅನ್ನದ ರಾಶಿಗಳನ್ನೂ ಹೇಗಾದರೂ ಸಂಪಾದಿಸಬಹುದು. ಬಂಡಿಯನ್ನು ಓಡಿಸುವವನು ಯಾರು ಸಿಗುವನು? ನಾನು ಹಿಂದೆಯೇ ಈ ಊರಿನಲ್ಲಿದ್ದರೆ ಎಂದಾದರೂ ಒಂದು ದಿನದಲ್ಲಿ ಈ ಅಪಾಯವು ತಪ್ಪಲಾರದೆಂದೂ ಅದಕ್ಕಾಗಿ ಈ ಊರನ್ನೇ ಬಿಟ್ಟು ಹೋಗೋಣವೆಂದೂ ನಿನ್ನಲ್ಲಿ ಎಷ್ಟೋ ಸಲ ಹೇಳಿದೆನು. ನೀನು ಕೇಳಲಿಲ್ಲ. ಈಗ ನಿರೀಕ್ಷಿಸಿದ ಅಪಾಯವು ಬಂತು. ಬಂಡಿಯನ್ನು ಓಡಿಸುಕೊಂಡು ನಾನೇ ಹೋಗುವೆನು. ನಾನು ಅವನಿಗೆ ತುತ್ತಾದುದರಿಂದ ಉಳಿದವರಾದರೂ ಬದುಕಲಿ" ಎಂದನು.

ಯಜಮಾನಿಯು ಹೇಳಿದಳು. " ನೀವು ಹೋಗಕೂಡದು. ನಾನೇ ಹೋಗುವೆನು. ನಿಮ್ಮ ಪ್ರಾಣವನ್ನು ರಕ್ಷಿಸುವುದಕ್ಕಾಗಿ ನಾನು ದೇಹವನ್ನು ತ್ಯಜಿಸಿದರೆ ಪತಿವ್ರತಾಧರ್ಮವನ್ನು ಪಾಲಿಸಿದಂತಾಗುವುದು. ಇಲ್ಲದಿದ್ದರೆ ಅಧೋಗತಿಯು ಏರ್ಪಡುವುದು. ಆದ್ದರಿಂದ ನನಗೆ ಅನುಮತಿಯನ್ನು ಕೊಡಿ" ಎಂದಳು.

ಮಗಳು ಹೇಳಿದಳು. ಅಪ್ಪಾ, ಅಮ್ಮ ನೀವಿಬ್ಬರೂ ಹೋಗಕೂಡದು. ನಾನು ಹೋಗುತ್ತೇನೆ, ಕನ್ಯೆಯಿಂದ ತಂದೆಗೂ ತಾಯಿಗೂ ಬಂಧುಗಳಿಗೂ ಕಷ್ಟವೇ ಹೊರತು ಯಾರಿಗೂ ಪ್ರಯೋಜನವಿಲ್ಲವೆಂದು ಶಾಸ್ತ್ರವು ಹೇಳುತ್ತದೆ. ಆದ್ದರಿಂದ ಸರ್ವರಿಗೂ ಕಷ್ಟವನ್ನು ಕೊಡುವವಳಾದ ನಾನು ಹೋದರೆ ಸರ್ವರಿಗೂ ಸುಖವು ಏರ್ಪಡುತ್ತದಲ್ಲವೇ? ಎಂದಳು.

## ಪತ್ನ್ಯಾದಿಯರನ್ನು ರಕ್ಷಿಸಲೇಬೇಕು.

ಪತ್ನಿಯ ಮತ್ತು ಮಗಳ ಈ ಮಾತುಗಳನ್ನು ಬ್ರಾಹ್ಮಣನು ಕೇಳಿದನು. ಪತ್ನೀ ಮತ್ತು ಪುತ್ರಿಯರ ಇಂತಹ ಮಾತುಗಳನ್ನು ಕೇಳುವ ದುರವಸ್ಥೆಯು ತನಗೆ ಏರ್ಪಟ್ಟದ್ದಕ್ಕಾಗಿ ಧಿಕ್ಕಾರವನ್ನು ಮಾಡಿದನು. (೧) "ಸಖಾ ಹ ಜಾಯಾ" ಎಂಬ ಶ್ರುತಿಯು ಎಲ್ಲಾ ಕಷ್ಟಗಳಲ್ಲಿಯೂ ಮಿತ್ರನಂತೆ ಸಹಕರಿಸುವವಳು ಪತ್ನಿಯೇ ಹೊರತು ಬೇರೆ ಯಾರೂ ಇಲ್ಲ ಎಂದು ಹೇಳುತ್ತದೆ. (೨) "ಕೃಪಣಂ ಹಿ ದುಹಿತಾ" ಎಂಬ ಶ್ರುತಿಯು ಕನ್ಯೆಯು ತಾನು ಹುಟ್ಟಿದ ಕುಲವನ್ನೂ ಗಂಡನ ಕುಲವನ್ನೂ ಉದ್ಧರಿಸುವವಳು. ಆದ್ದರಿಂದ ಕೃಪೆಗೆ ಪಾತ್ರಳು ಎಂದು ಹೇಳುತ್ತದೆ (೩) "ಜ್ಯೋತಿರ್ಹಿ ಪುತ್ರಃ" "ಆತ್ಮಾ ವೈ ಪುತ್ರನಾಮಾಸಿ" ಮುಂತಾದ ಶ್ರುತಿಗಳು ಮಗನು ತಂದೆಯ ರೂಪಾಂತರ ಎಂದು ಹೇಳುತ್ತದೆ. ಆದ್ದರಿಂದ ಪತ್ನೀ, ಕನ್ಯಾ, ಮಗ ಈ ಮೂವರನ್ನೂ ರಾಕ್ಷಸನಿಗೆ ಕೊಡಲಾರೆನು. ಆ ರಾಕ್ಷಸನು ನಿಮ್ಮ ದೇಹವನ್ನು ಕಚ್ಚಿ ತಿಂದು ಸುಖಿಸುವವನಲ್ಲವೇ? ಇದನ್ನು ತಿಳಿದು ನಿಮ್ಮನ್ನು ಅವನಿಗೆ ಕೊಡುವುದು ಯುಕ್ತವಾದೀತೇ? ಅದೂ ಸಹ ನನ್ನ ಪ್ರಾಣವನ್ನು ಉಳಿಸಿಕೊಳ್ಳುವುದಕ್ಕಾಗಿ ಇಂತಹ ನೀಚ ಕೆಲಸವನ್ನು ನಾನು ಮಾಡಬಹುದೇ? ಆದ್ದರಿಂದ ನಾನೇ ಹೋಗುವೆನು ಎಂದು ಹೇಳಿದನು.

ಹೀಗೆ ಎಲ್ಲರೂ ಅಳುತ್ತಿರುವ ಸಮಯದಲ್ಲಿ ಒಳಗೆ ಹೋಗುವುದು ಅಷ್ಟು ಯುಕ್ತವಲ್ಲ ಎಂದು ಕುಂತಿಯು ಕಾದಿದ್ದಳು. ಆಗ ಆ ಬ್ರಾಹ್ಮಣನ ಚಿಕ್ಕ ಮಗನು ತನ್ನ ಕೈಯಲ್ಲಿ ಒಂದು ಹುಲ್ಲು ಕಡ್ಡಿಯನ್ನು ಎತ್ತಿದನು. ಆ ಕಡ್ಡಿಯನ್ನು ಅವರಿಗೆ ತೋರಿಸಿದನು. ಈ ಹುಲ್ಲಿನ ಕಡ್ಡಿಯಿಂದ ಹೊಡೆದು ಆ ರಾಕ್ಷಸನನ್ನು ಸಂಹರಿಸುವೆನು ಎಂದು ಹೇಳಿದನು. ಈ ಮಾತುಗಳನ್ನು ಕುಂತಿಯು ಕೇಳಿದಳು. ಹುಲ್ಲುಕಡ್ಡಿಯಿಂದ ರಾಕ್ಷಸನನ್ನು ಕೊಲ್ಲುವೆನು ಎಂದು ಬಾಲಕನು ಹೇಳುತ್ತಿರುವನು. ಇದು ಮಂಗಲಕರವಾದ ವಾಕ್ಯವಾಗಿದೆ. ಈ ಸಮಯದಲ್ಲಿ ಪ್ರವೇಶಿಸುವುದಕ್ಕೆ ಶಕುನವು ಸರಿಯಾಗಿದೆ. ಈಗ ಪ್ರವೇಶಿಸಿ ಮಾತನ್ನು ಆರಂಭಿಸಿದರೆ ಭೀಮಸೇನನೂ ಸಹ ಆ ರಾಕ್ಷಸನನ್ನು ತೃಣೀಕರಿಸಿ ಸಂಹರಿಸುವನು ಎಂದು ತೀರ್ಮಾನಿಸಿದಳು. ಒಳಗೆ ಪ್ರವೇಶಿಸಿದಳು.

## ಬಕಾಸುರನ ಕಥೆ

ಆ ಬ್ರಾಹ್ಮಣನನ್ನು ಕುರಿತು " ನಿಮ್ಮ ಮಾತುಗಳನ್ನು ಕೇಳಿದೆನು. "ಬಕ" ಎಂಬ ರಾಕ್ಷಸನು ಯಾರು? ಅವನ ಬಲ ಮತ್ತು ವೀರ್ಯವು ಎಂತಹುದು? ನಿಮಗೆ ಅವನಿಂದ ಬಂದಿರುವ ಆಪತ್ತು ಎಂತಹುದು?" ಮುಂತಾದ ಪ್ರಶ್ನೆಗಳನ್ನು ಮಾಡಿದಳು.

ಅದಕ್ಕೆ ಆ ಬ್ರಾಹ್ಮಣನು ಉತ್ತರವನ್ನು ಕೊಟ್ಟನು. " ಅಮ್ಮಾ ಬಕರಾಕ್ಷಸನ ವೀರ್ಯ ಬಲವು ದೇವತೆಗಳಿಂದಲೂ ಸಹಿಸುವುದಕ್ಕೆ ಅಶಕ್ಯವಾದುದು. ಆ ಬಕಾಸುರನು ಶ್ರೀರಾಮದೇವನು ಭೂಮಿಯಿಂದ

ಅದೃಶ್ಯನಾಗುವ ವರೆಗೆ ಶ್ರೀರಾಮದೇವನ ಭಯದಿಂದ ಗುಹೆಯನ್ನು ಪ್ರವೇಶಿಸಿದ್ದನು. ಹೊರಗೆ ಬರಲೇ ಇಲ್ಲ. ಶ್ರೀರಾಮದೇವನು ಅದೃಶ್ಯನಾದ ಮೇಲೆ ಗುಹೆಯಿಂದ ಹೊರಗೆ ಬಂದನು. ಎಲ್ಲಾ ರಾಜರುಗಳನ್ನೂ ವಶಪಡಿಸಿಕೊಂಡನು. ಎಲ್ಲಾ ರಾಜರುಗಳೂ ಇವನ ಭಯದಿಂದಲೇ ಇವನಿಗೆ ಕಪ್ಪವನ್ನು ಕೊಡಲು ಆರಂಭಿಸಿದರು. ಈ ಊರಿನಲ್ಲಿರುವ ನಾವೆಲ್ಲರೂ ಹದಿಮೂರು ವರ್ಷಗಳಿಗೊಮ್ಮೆ ಅವನಿಗೆ ಕಪ್ಪವನ್ನು ಕೊಡಲೇಬೇಕು. ಆ ಕಪ್ಪವನ್ನು ನೀನು ತಿಳಿದಿರುವಿ. ಈ ದಿನದಲ್ಲಿ ನಾವು ಕಪ್ಪಗಳನ್ನು ಕೊಡಬೇಕಾದ ದಿನವಾಗಿದೆ ಎಂದು ಹೇಳಿದನು.

ಕುಂತಿಯು ಬ್ರಾಹ್ಮಣನ ಮಾತುಗಳನ್ನು ಕೇಳಿ ಆಲೋಚಿಸಿದಳು. ಇಷ್ಟು ಬಲಿಷ್ಠನಾದ ಬಕಾಸುರನನ್ನು ಸಂಹರಿಸಿ ನಮ್ಮ ಭೀಮನು ಅಪಾರವಾದ ಕೀರ್ತಿಯನ್ನೂ ಅತ್ಯಧಿಕವಾದ ಧರ್ಮವನ್ನೂ ಪಡೆಯುವನು. ಅವನು ಮಾಡುವ ಈ ಧರ್ಮಕಾರ್ಯವನ್ನು ಪ್ರೋತ್ಸಾಹಿಸಿ ಅವನಿಂದ ಮಾಡಿಸಿದ್ದರಿಂದ ನಾವೆಲ್ಲರೂ ಮಹಾಧರ್ಮವನ್ನು ಪಡೆಯುವೆವು ಎಂದು ಸಂತೋಷಿಸಿದಳು. ಆ ಬ್ರಾಹ್ಮಣನನ್ನು ನೋಡಿ ಹೇಳಿದಳು.

## ಬ್ರಾಹ್ಮಣರಿಗೆ ಕುಂತಿಯ ಸಮಾಧಾನವಚನ

ಎಲೈ ಬ್ರಾಹ್ಮಣಶ್ರೇಷ್ಠರೇ ನನಗೆ ಐವರು ಮಕ್ಕಳಿರುವರು. ಅವರಲ್ಲಿ ಒಬ್ಬನು ಬಕಾಸುರನ ಮುಂದೆ ಹೋಗಲಿ ಎಂದಳು. ಇದನ್ನು ಕೇಳಿದ ಆ ಬ್ರಾಹ್ಮಣನು "ನಿನ್ನ ಮಗನನ್ನು ರಾಕ್ಷಸನಿಂದ ಕೊಲ್ಲಿಸಿ ಪಾಪವನ್ನು ಸಂಪಾದಿಸಲಾರೆನು. ಮಗನ್ನು ರಾಕ್ಷಸನಿಗೆ ಬಲಿಯಾಗಿ ಕೊಡಲು ಸಿದ್ಧಳಾಗಿರುವ ನಿನ್ನ ಧೈರ್ಯವು ಅತ್ಯಾಶ್ಚರ್ಯಕರವಾದುದು" ಎಂದನು.

ನನ್ನ ಮಗನಲ್ಲಿ ಒಂದು ವಿದ್ಯೆಯಿದೆ. ಆ ವಿದ್ಯೆಯನ್ನು ಅವನು ಮಹಾಸಂಕಟವು ಬಂದಾಗಲೂ ಅವನ ಗುರುಗಳೇ ಹೇಳಿದರೂ ತನ್ನ ಜೀವನಕ್ಕಾಗಿ ಉಪಯೋಗಿಸುವುದಿಲ್ಲ. ವಿದ್ಯೆಯನ್ನು ಜೀವನಕ್ಕಾಗಿ ಉಪಯೋಗಿಸುವದು ಅಧರ್ಮವೆನಿಸುತ್ತದೆ. ಅವನಲ್ಲಿರುವ ವಿದ್ಯೆಯ ಬಲದಿಂದ ದಿಕ್ಪಾಲಕರಿಂದಲೂ ಅವನನ್ನು ಎದುರಿಸಲು ಸಾಧ್ಯವಿಲ್ಲ. ಆ ವಿದ್ಯೆಯನ್ನು ತನ್ನ ಜೀವನಕ್ಕಾಗಿ ಉಪಯೋಗಿಸದಿದ್ದರೂ ಅವನ ದೇಹವು ವಜ್ರದಂತೆ ಗಟ್ಟಿಯಾಗಿರುವುದರಿಂದ ದೇವಾಧಿಪತಿಗಳಿಂದಲೂ ದೈತ್ಯಾಧಿಪತಿಗಳಿಂದಲೂ ಅವನನ್ನು ಕೊಲ್ಲಲು ಯಾರಿಂದಲೂ ಸಾಧ್ಯವಿಲ್ಲ" ಎಂದಳು.

ಮನೆಗೆ ಹಿಂದಿರುಗಿ ಭೀಮಸೇನದೇವರಿಗೆ ಎಲ್ಲಾ ವಿವರವನ್ನೂ ತಿಳಿಸಿದಳು. ಭೀಮಸೇನದೇವರಿಗೆ ಮಹಾ ವಿಷ್ಣುದ್ವೇಷಿಯನ್ನು ಕೊಲ್ಲುವ ಅವಕಾಶವು ಏರ್ಪಟ್ಟದ್ದಕ್ಕಾಗಿ ಮಹಾಸ್ವಧರ್ಮವನ್ನು ಸಂಪಾದಿಸುವ ಸುಯೋಗವು ಏರ್ಪಟ್ಟಿತೆಂದು ಸಂತೋಷವು ಉಕ್ಕಿ ಬಂತು. ಧರ್ಮರಾಜ ಮುಂತಾದವರು ಭಿಕ್ಷೆಗೆ ಹೋಗಿದ್ದವರು ಹಿಂದಿರುಗಿ ಮನೆಗೆ ಬಂದರು. ಭೀಮಸೇನದೇವರ ಕಣ್ಣುಗಳು ಆನಂದೋದ್ರೇಕದಿಂದ ಸುತ್ತುತ್ತಿರುವುದನ್ನು ಕಂಡರು. ಧರ್ಮರಾಜನು " ಅಮ್ಮಾ ಭೀಮಸೇನನು ಇಂದು ತುಂಬಾ ಸಂತುಷ್ಟನಾದಂತೆ ಕಾಣುತ್ತಿದೆ. ಅವನ ಸಂತೋಷಕ್ಕೆ ಕಾರಣವೇನು? ಎಂದು ಪ್ರಶ್ನಿಸಿದನು. ಅವಳು ಎಲ್ಲಾ ವಿಷಯಗಳನ್ನೂ ವಿವರವಾಗಿ ಹೇಳಿದಳು.

ಅಮ್ಮಾ ಭೀಮಸೇನನ ಬಲವನ್ನು ಆಶ್ರಯಿಸಿ ರಾಜ್ಯವನ್ನು ಪಡೆಯಬೇಕೆಂದಿರುವೆನು. ಎಲ್ಲಾ ವಿಷ್ಣುದ್ವೇಷಿಗಳನ್ನೂ ಸಂಹರಿಸಿ ಮಹಾಸ್ವಧರ್ಮವನ್ನು ಸಂಪಾದಿಸಬೇಕೆಂದಿರುವೆವು. ಯಾವನ ಬಲವನ್ನು

ನಾವೆಲ್ಲರೂ ಆಶ್ರಯಿಸಿರುವೆವೋ ಅವನನ್ನು ಕೊಲ್ಲುವ ಬುದ್ಧಿಯು ನಿನಗೆ ಹೇಗೆ ಬಂತು. ಅವನನ್ನು ಪ್ರಸಿದ್ಧ ರಾಕ್ಷಸನ ಆಹಾರಕ್ಕಾಗಿ ಕಳುಹಿಸಬಹುದೇ? ಎಂದನು.

ಕುಂತಿಯು ತುಂಬಾ ಧೈರ್ಯದಿಂದ ಉತ್ತರವನ್ನು ಕೊಟ್ಟಳು. " ಈ ಭೀಮಸೇನನು ಹುಟ್ಟಿದ ದಿನದಲ್ಲಿ ಇವನನ್ನು ನನ್ನ ತೊಡೆಯಲ್ಲಿ ಮಲಗಿಸಿಕೊಂಡಿದ್ದೆನು. ಆಗ ನನ್ನ ತೊಡೆಯಿಂದ ಕೆಳಗೆ ಉರುಳಿಬಿದ್ದನು. ಆಗ ವಜ್ರದಂತೆ ಗಟ್ಟಿಯಾಗಿರುವ ಅವನ ದೇಹದ ಸ್ಪರ್ಶದಿಂದ ಶತಶೃಂಗ ಎಂಬ ಪರ್ವತವು ಹಿಟ್ಟಿನಂತೆ ಚೂರ್ಣವಾಯಿತು. ಇಂತಹ ವಜ್ರದೇಹದಿಂದ ಯುಕ್ತನಾಗಿರುವ ಇವನನ್ನು ಸಕಲದೇವತೆಗಳೂ ದೈತ್ಯರೂ ಒಟ್ಟುಗೂಡಿದರೂ ಸಂಹರಿಸಲು ಸಾಧ್ಯವಿಲ್ಲ. ಸಾಕ್ಷಾದ್ವಾಯುದೇವನು ಮನುಷ್ಯರೂಪವನ್ನು ಧರಿಸಿರುವನು. ಇವನನ್ನು ಸಂಹರಿಸಲು ಬೇಕಾದ ಬಲವು ಯಾರಲ್ಲಿದೇ?" ಎಂದಳು.

## ಬಕಾಸುರನ ಸಂಹಾರ

" ನೀನು ಹೇಳಿದ ಹಾಗೆಯೇ ನಡೆಯಲಿ" ಎಂದು ಧರ್ಮರಾಜನು ಹೇಳಿದನು. ಮರುದಿನ ಬೆಳಿಗ್ಗೆ ದೊಡ್ಡ ಆಕಾರವನ್ನು ಧರಿಸಿದ ಭೀಮಸೇನದೇವರು ಭಕ್ಷ್ಯ ಮತ್ತು ಅನ್ನದ ರಾಶಿಗಳಿಂದ ಯುಕ್ತವಾದ ದೊಡ್ಡ ಬಂಡಿಯನ್ನು ಅತ್ಯಂತ ಉತ್ಸಾಹದಿಂದ ಓಡಿಸುತ್ತಾ ಬಕಾಸುರನು ಇರುವ ವನದ ಸಮೀಪಕ್ಕೆ ಬಂದರು. ಬಕಾಸುರನು ಬಂಡಿಯನ್ನು ಮುಟ್ಟುವುದರೊಳಗೆಯೇ ಉತ್ತಮವಾದ ಪಾಯಸ ಮತ್ತು ಹಾಲಿನ ಗಡಿಗೆಗಳನ್ನೂ ಉತ್ತಮವಾದ ಭಕ್ಷ್ಯಗಳ ಮತ್ತು ಅನ್ನಗಳ ರಾಶಿಗಳನ್ನು ಕುಡಿಯಲು ತಿನ್ನಲೂ ಆರಂಭಿಸಿದರು.

ಇದನ್ನು ಬಕಾಸುರನು ನೋಡಿದನು. ಒಂದು ಮರವನ್ನು ಕಿತ್ತಿ, ಆ ಮರದಿಂದ ಭೀಮಸೇನದೇವರನ್ನು ಹೊಡೆದನು. ಅವನು ಪ್ರಯೋಗಿಸಿದ ಮರಗಳು ಮುಂತಾದ ಆಯುಧಗಳನ್ನು ಎಡಗೈಯಿಂದ ಹಿಡಿದು ಕೆಳಗೆ ಬಿಸಾಡುತ್ತಾ ಬಲಗೈಯಿಂದ ಎಲ್ಲಾ ಭಕ್ಷ್ಯ ಮತ್ತು ಅನ್ನ ಮುಂತಾದವುಗಳನ್ನು ತಿಂದರು. ಹಾಲಿನ ಮತ್ತು ಪಾಯಸದ ಕೊಡಗಳನ್ನು ಕುಡಿದರು. ಆಚಮನವನ್ನು ಮಾಡಿ ಅತಿವೇಗದಿಂದ ಕೆಳಗೆ ಇಳಿದರು.

ದೊಡ್ಡ ದೊಡ್ಡ ಮರಗಳಿಂದಲೂ ಬಂಡೆಕಲ್ಲುಗಳಿಂದಲೂ ಪರ್ವತಗಳಿಂದಲೂ ಬಲವಾಗಿ ಹೊಡೆದರು. ಅವನನ್ನು ಕೆಳಗೆ ತಳ್ಳಿದರು. ಒಂದು ಕಾಲಿನಿಂದ ಅವನ ಎಡಗಾಲನ್ನು ಒತ್ತಿಹಿಡಿದು ಎರಡು ಕೈಗಳಿಂದ ಇನ್ನೊಂದು ಕಾಲನ್ನು ಶೆಳೆದು ಕುತ್ತಿಗೆಯ ವರೆಗೆ ಸೀಳಿದರು. ಹೀಗೆ ಶೀಳಲ್ಪಟ್ಟ ಬಕಾಸುರನ್ನು ಸತ್ತನು. ವಿಷ್ಣುವೈಷ್ಣವದ್ವೇಷಿಯಾದ ಆ ದೈತ್ಯನು ಕ್ರಮವಾಗಿ ನಿತ್ಯನರಕವನ್ನು ಪ್ರವೇಶಿಸಿದನು.

ಈ ಬಕಾಸುರನು ಅತಿಬಲಿಷ್ಠನೆಂದು ಆ ಕಾಲದಲ್ಲಿ ಅತಿ ಪ್ರಸಿದ್ಧನಾಗಿದ್ದ ಜರಾಸಂಧನ ಮತ್ತು ನರಕಾಸುರನ ವಶನಾಗಲಿಲ್ಲ. ಹಿಂದಿನ ಕಾಲದಲ್ಲಿಯೂ ಭರತ ಎಂಬ ಚಕ್ರವರ್ತಿಗೂ ವಶನಾಗಲಿಲ್ಲ. ಸೀಳಿದ ಕುತ್ತಿಗೆಯಿಂದ ಕೆಳಗಿನ ಎರಡು ಭಾಗಗಳನ್ನು ಒಟ್ಟುಗೂಡಿಸಿದರು. ಏಕಚಕ್ರಾನಗರದ ಮಹಾದ್ವಾರದಲ್ಲಿ ನಿಲ್ಲಿಸಿದರು. ಪುನಃ ಸ್ನಾನ ಮಾಡಿದವರಾಗಿ ತಮ್ಮ ಸಹೋದರರ ಸಮೀಪಕ್ಕೆ ಹೋದರು. ನಡೆದ ವೃತ್ತಾಂತಗಳನ್ನೆಲ್ಲಾ ಹೇಳಿದರು. ಈ ವಿಷಯಗಳನ್ನು ತಿಳಿದ ಸಹೋದರರೂ ಕುಂತಿಯೂ ತುಂಬಾ ಸಂತುಷ್ಟರಾದರು.

ಮರುದಿನ ಅರುಣೋದಯಕಾಲದಲ್ಲಿ ಪಟ್ಟಣದ ಮಹಾದ್ವಾರದಲ್ಲಿ ನಿಂತಿರುವ ಬಕಾಸುರನ ಶರೀರವನ್ನು ಪಟ್ಟಣವಾಸಿಗಳು ನೋಡಿ ತುಂಬಾ ಹೆದರಿದರು. ಕೊನೆಗೆ ಅಂಗಚಲನ ಮುಂತಾದ ಬದುಕಿರುವವನ ಲಕ್ಷಣಗಳು ಇಲ್ಲದ್ದರಿಂದ ಸತ್ತಿರುವನು ಎಂದು ನಿಶ್ಚೈಸಿದರು. ಆ ದಿನ ಬಕಾಸುರನಿಗೆ ಬಂಡಿಯನ್ನು ಕಳುಹಿಸಿದ ಬ್ರಾಹ್ಮಣನಲ್ಲಿ ವಿಚಾರಿಸಿದರು. ಆ ಬ್ರಾಹ್ಮಣನು ಭೀಮಸೇನದೇವರನ್ನು ಕಳುಹಿಸಿದೆನೆಂದೂ ಅವರೇ ಅವನನ್ನು ಕೊಂದಿರುವರೆಂದೂ ಹೇಳಿದನು. ಅವರೆಲ್ಲರೂ ಸಂತುಷ್ಟರಾಗಿ ಭೀಮಸೇನದೇವರನ್ನು ಹೊಗಳಿದರು. ಅಂದಿನಿಂದ ಭೀಮಸೇನದೇವರಿಗೆ ಅನ್ನರಾಶಿಯನ್ನು ಕಾಣಿಕೆಯಾಗಿ ಪ್ರತಿದಿನದಲ್ಲಿಯೂ ಸಮರ್ಪಿಸುವುದಾಗಿ ಪ್ರಾರ್ಥಿಸಿದರು. ಭೀಮಸೇನದೇವರು ಆ ಕಾಣಿಕೆಯನ್ನು ತಾನು ಸ್ವೀಕರಿಸಲಿಲ್ಲ. ಆ ಪಟ್ಟಣದ ಮುಖ್ಯದೇವತೆಯಾಗಿರುವ ನರಸಿಂಹದೇವರಿಗೆ ಸಮರ್ಪಿಸುವಂತೆ ಕಟ್ಟಳೆಯನ್ನು ಮಾಡಿದರು.

ದ್ರುಪದರಾಜನು ಅರಗಿನ ಮನೆಯಲ್ಲಿ ಪಾಂಡವರೂ ಕುಂತಿಯೂ ಸುಟ್ಟು ಬೂದಿಯಾದರು ಎಂದು ತಿಳಿದು, ಅತ್ಯಂತ ದುಃಖಿತನಾದನು. ಪಾಂಡವರಲ್ಲಿ ಮಧ್ಯಮಪಾಂಡವನಾದ ಅರ್ಜುನನಿಗೆ ತನ್ನ ಮಗಳನ್ನು ಕೊಟ್ಟು ವಿವಾಹವನ್ನು ಮಾಡಬೇಕೆಂದು ತೀರ್ಮಾನಿಸಿದ್ದನಷ್ಟೇ? ಪುನಃ ಯೋಚಿಸಿದನು. "ನಾನು ಯಾಜ ಉಪಯಾಜ ಎಂಬ ಬ್ರಾಹ್ಮಣಶ್ರೇಷ್ಠರ ಮನೆಗೆ ಹೋದೆನು. ಅರ್ಜುನನಿಗೆ ಕೊಟ್ಟು ವಿವಾಹವನ್ನು ಮಾಡುವುದಕ್ಕೆ ಯೋಗ್ಯಳಾದ ಕನ್ಯೆಯು ಹುಟ್ಟುವಂತೆ ಅನುಗ್ರಹಿಸಬೇಕೆಂದು ಪ್ರಾರ್ಥಿಸಿದೆನು. ಅದಕ್ಕೆ ಅವರು ಸಂತೋಷದಿಂದ ನನ್ನಿಂದ ಯಜ್ಞವನ್ನು ಮಾಡಿಸಿದರು. ಆ ಯಜ್ಞದಲ್ಲಿ ಮಂತ್ರಗಳನ್ನು ಉಚ್ಚರಿಸುತ್ತಾ ಅರ್ಜುನನಿಗೆ ಕೊಡುವುದಕ್ಕೆ ಯೋಗ್ಯಳಾದ ಕನ್ಯೆಯು ಹುಟ್ಟಬೇಕೆಂದು ಪ್ರಾರ್ಥಿಸಿದರು. ಆಗ ದ್ರೌಪದಿಯು ಹುಟ್ಟಿದಳು.

" ಯಾಜ ಉಪಯಾಜ ಎಂಬ ಬ್ರಾಹ್ಮಣಶ್ರೇಷ್ಠರ ಮುಖದಿಂದ ಹೊರಟಿರುವ ಮಂತ್ರಗಳೂ ಪ್ರಾರ್ಥನೆಯು ಎಂದೆಂದಿಗೂ ವ್ಯರ್ಥವಾಗುವುದಿಲ್ಲ. ಆದ್ದರಿಂದ ಪಾಂಡವರು ಸತ್ತಿಲ್ಲ. ಎಲ್ಲಿಯೋ ಒಂದು ಸ್ಥಳದಲ್ಲಿ ರೂಪಾಂತರದಿಂದಿರುವರು. ಆದ್ದರಿಂದ ಅವರನ್ನು ಕಂಡು ಹಿಡಿಯಬೇಕು. ಅರ್ಜುನನಿಗೆ ದ್ರೌಪದಿಯನ್ನು ಕೊಟ್ಟು ವಿವಾಹವನ್ನು ಮಾಡಬೇಕು ಎಂದು ತೀರ್ಮಾನಿಸಿದನು.

ದ್ರೌಪದೀದೇವಿಗೆ ಸ್ವಯಂವರವನ್ನು ಮಾಡುವುದಾಗಿ ತೀರ್ಮಾನಿಸಿದನು. ರುದ್ರದೇವನನ್ನು ಕುರಿತು ತಪಸ್ಸನ್ನು ಮಾಡಿದನು. ರಾಜರ ಮಧ್ಯದಲ್ಲಿ ಅರ್ಜುನನನ್ನು ಬಿಟ್ಟು ಇತರರಿಂದ ಯಾರಿಂದಲೂ ಎತ್ತಲೂ ಸಾಧ್ಯವಿಲ್ಲದ ಧನುಸ್ಸನ್ನು ಬೇಡಿದನು. ಆ ಧನುಸ್ಸನ್ನು ಎತ್ತಿ ಮೇಲೆ ಎತ್ತರದಲಿಲ ಕಟ್ಟಿರುವ ಮತ್ಸ್ಯವನ್ನು ಕೆಳಗಿರುವ ಆ ಮತ್ಸ್ಯದ ಪ್ರತಿಬಿಂಬವನ್ನು ನೋಡುತ್ತಾ ಕತ್ತರಿಸುವವನಿಗೆ ತನ್ನ ಮಗಳಾದ ದ್ರೌಪದಿಯನ್ನು ಕೊಟ್ಟು ವಿವಾಹವನ್ನು ಮಾಡಿಕೊಡುವುದಾಗಿ ಡಂಗುರವನ್ನು ಸಾರಿಸಿದನು.

ಶ್ರೀವೇದವ್ಯಾಸರು ಪಾಂಡವರನ್ನು ಕುಂತೀದೇವಿಯನ್ನೂ ಏಕಚಕ್ರಾನಗರಕ್ಕೆ ಕರೆದುಕೊಂಡು ಹೋಗಿ ಬಿಟ್ಟು ಹೋದರೆಂದೂ ತಾನು ಹಿಂದಿರುಗಿ ಬರುವವರೆಗೂ ಇವರೆಲ್ಲರೂ ತನ್ನ ಶಿಷ್ಯರೆಂದೂ ಇಲ್ಲಿಯೇ ಇರಬೇಕೆಂದೂ ಹೇಳಿ ಹೊರಟುಹೋದರೆಂದು ಹಿಂದೆ ತಿಳಿಸಿರುವೆವು. ಬಕಾಸುರನನ್ನು ಸಂಹರಿಸಿದ ಮೇಲೆ ಶ್ರೀವೇದವ್ಯಾಸರು ಹಿಂದುರುಗಿ ಬಂದರು. ದ್ರೌಪದೀಸ್ವಯಂವರಸಮಾಚಾರವನ್ನು ತಿಳಿಸಿದರು. ಅವರೆಲ್ಲರನ್ನೂ ಹೋಗುವಂತೆ

ಹೇಳಿದರು. ದ್ರೌಪದೀದೇವಿಯ ಉತ್ಪತ್ತಿ ಮುಂತಾದ ಕಥೆಗಳನ್ನು ಹೇಳಿದರು.

ವೇದವ್ಯಾಸರ ಆಜ್ಞೆಯಿಂದಲೇ ಹೊರಡುತ್ತಿದ್ದ ಈ ಪಾಂಡವರನ್ನು ಬ್ರಾಹ್ಮಣರೆಂದು ತಿಳಿದಿರುವ ಎಲ್ಲಾ ಬ್ರಾಹ್ಮಣರೂ ದೊಡ್ಡ ಬ್ರಾಹ್ಮಣಸಂತರ್ಪಣೆಯು ದ್ರುಪದರಾಜನ ಮನೆಯಲ್ಲಿ ಏರ್ಪಡುವುದಾಗಿ ಹೇಳಿ ಪ್ರೋತ್ಸಾಹಿಸಿದರು. ಪಾಂಡವರು ಹೊರಟರು. ಮಾರ್ಗದಲ್ಲಿ ಎಲ್ಲಾ ದಿಕ್ಕುಗಳಿಂದಲೂ ಬಂದಿರುವ ಬ್ರಾಹ್ಮಣರು ವಿವಾಹಮಂಗಲೋತ್ಸವ ಕಾಲದಲ್ಲಿ ದೊಡ್ಡ ಊಟವು ನಡೆಯುತ್ತದೆ ಎಂದು ಹೇಳುತ್ತಾ ಇವರೊಡನೆ ಸೇರಿದರು.

ಈ ಆರು ಜನರ ಮಧ್ಯದಲ್ಲಿರುವ ಶ್ರೀಭೀಮಸೇನದೇವರನ್ನು ನೋಡಿದರು. " ಇವನ ಕೈಗಳು ನೀಳವಾಗಿವೆ, ಎದೆಯು ವಿಶಾಲವಾಗಿದೆ. ಅಪಾರವಾದ ಪೌರುಷದಿಂದ ಯುಕ್ತನಾಗಿರುವನು. ಆದ್ದರಿಂದ ದ್ರೌಪದಿಯನ್ನು ಇವನು ಪಡೆಯುವ ವಿಷಯದಲ್ಲಿ ಸಂಶಯವಿಲ್ಲ" ಎಂದು ಬ್ರಾಹ್ಮಣರುಗಳೆಲ್ಲರು ಹೇಳಿದರು. ಹಗಲಿನಲ್ಲಿಯೂ ರಾತ್ರಿಯಲ್ಲಿಯೂ ಕಾಲು ನಡೆಯಿಂದ ಕೆಲವು ದಿನಗಳ ವರೆಗೆ ನಡೆದರು. ಮಾರ್ಗದ ಮಧ್ಯದಲ್ಲಿ ಗಂಗಾತೀರವನ್ನು ಹೊಂದಿದರು. ರಾತ್ರಿಕಾಲದಲ್ಲಿ ಎಲ್ಲಾ ಬ್ರಾಹ್ಮಣರ ಹಿಂದೆ ಭೀಮಸೇನದೇವರೂ ಮುಂದೆ ಅರ್ಜುನನೂ ಅವರನ್ನೆಲ್ಲರನ್ನೂ ರಕ್ಷಿಸುತ್ತಾ ಹೋದರು. ಅವರಿಬ್ಬರ ಮಧ್ಯದಲ್ಲಿ ಎಲ್ಲರೂ ಹೋದರು. ಅರ್ಧರಾತ್ರಿಕಾಲವು ಸನ್ನಿಹಿತವಾಯಿತು. ಆಗ ಗಂಗಾತೀರದಲ್ಲಿ ಕೆಲವರು ಮಲಗಿದರು. ಕೆಲವರು ನಿಂತುಕೊಂಡಿದ್ದರು.

## ಚಿತ್ರರಥಪರಾಜಯ

ಆಗ ಗಂಧರ್ವರಾಜನಾದ ಚಿತ್ರರಥನು ಗಂಗಾಜಲದಲ್ಲಿ ಜಲವಿಹಾರಮಾಡುತ್ತಿದ್ದನು. ನೀರಿನಲ್ಲಿ ಕುತ್ತಿಗೆ ವರೆಗೆ ಮುಳುಗಿದ್ದು ಇವರೆಲ್ಲರನ್ನೂ ನೋಡಿದನು. ಆದರೆ ಕೆಲವರು ಮಲಗಿ ನಿದ್ರೆ ಮಾಡುತ್ತಿದ್ದುದರಿಂದಲೂ ಉಳಿದವರು ನಿಂತಿದ್ದರೂ ಸ್ವಲ್ಪದೂರದಲ್ಲಿದ್ದುದರಿಂದಲೂ ಕತ್ತಲೆಯಲ್ಲಿ ಕಾಣಿಸಲಿಲ್ಲ. ಅರ್ಜುನನು ಮಾತ್ರ ಎಲ್ಲರ ಮುಂದೆ ಹಾದಿಯನ್ನು ತೋರಿಸುವುದಕ್ಕೋಸ್ಕರ ಕೊಳ್ಳಿಯನ್ನು ಧರಿಸಿ ನಿಂತಿದ್ದನು. ಅವನನ್ನು ನೋಡಿ ಚಿತ್ರರಥನು ಯಾರೋ ಕ್ಷತ್ರಿಯರು ಎಂದು ತಿಳಿದವನಾಗಿ ಅವನನ್ನೂ ಭೀಮಸೇನದೇವರನ್ನೂ ಬಲಾತ್ಕಾರದಿಂದ ಆ ಸ್ಥಳದಿಂದ ಹೊರಡಿಸಬೇಕೆಂದು ಹೊರಟನು.

" ಮನುಷ್ಯರು ಸಂಚರಿಸುವುದಕ್ಕೆ ನಿಷಿದ್ಧವಾದ ಈ ಅರ್ಧರಾತ್ರಿಕಾಲದಲ್ಲಿ ಈ ಗಂಗಾನದಿಯ ಸಮೀಪಕ್ಕೆ ಬಂದಿರುವಿರಿ. ನೀವು ಈ ಗಂಗೆಯ ಜಲವನ್ನು ಮುಟ್ಟಿದರೆ ನಿಮ್ಮನ್ನೆಲ್ಲರನ್ನೂ ಸಂಹರಿಸುವೆನು" ಎಂದನು. ಆ ಮಾತುಗಳನ್ನು ಅರ್ಜುನನು ಕೇಳಿದನು." ಎಲೋ ಗಂಧರ್ವನೇ, ನಿನ್ನ ಬಲವು ಎಷ್ಟೇ ಇರಲಿ, ಅಸ್ತ್ರವನ್ನು ತಿಳಿದವನಲ್ಲಿ ಆ ಬಲವು ವ್ಯರ್ಥವಾಗುತ್ತದೆ" ಎಂದನು.. ಈ ಮಾತುಗಳನ್ನು ಕೇಳಿದ ಚಿತ್ರರಥನು ಉತ್ತಮವಾದ ರಥದಲ್ಲಿ ಕುಳಿತನು. ಬಾಣಗಳ ಮಳೆಯನ್ನು ಸುರಿಸುತ್ತಾ ಅರ್ಜುನನೊಡನೆ ಯುದ್ಧಕ್ಕೆ ಬಂದನು.

ಅರ್ಜುನನು ತನ್ನ ಕೈಯಲ್ಲಿರುವ ಕೊಳ್ಳಿಯನ್ನು ನೋಡಿದನು. ಆಗ್ನೇಯಾಸ್ತ್ರಮಂತ್ರದಿಂದ ಅಭಿಮಂತ್ರಿಸಿದನು. ಚಿತ್ರರಥನ ರಥಕ್ಕೆ ಅಭಿಮುಖವಾಗಿ ಬಿಸಾಡಿದನು. ಆ ಕೊಳ್ಳಿಯು ರಥದ ಮೇಲೆ ಬಿತ್ತು. ರಥವು ಭಸ್ಮವಾಗಿ ಹೋಯಿತು. ಆ ಮೇಲೆ ಆ ಕೊಳ್ಳಿಯ ಬೆಂಕಿಯು ಚಿತ್ರರಥನನ್ನು ಸುತ್ತಿಕೊಂಡಿತು. ಆಗ ಅರ್ಜುನನು ಚಿತ್ರರಥನ ತಲೆಕೂದಲುಗಳನ್ನು ಹಿಡಿದು ಸೆಳೆದನು. ಅರ್ಜುನನಿಂದ ಪರಾಜಿತನಾದ ಚಿತ್ರರಥನು

ಧರ್ಮರಾಜನನ್ನು ಶರಣು ಹೊಂದಿದನು. ಆಗ ಅರ್ಜುನನು ತನ್ನ ಅಣ್ಣನ ಮೇಲಿರುವ ಪ್ರೇಮದಿಂದ ಆಗ್ನೇಯಾಸ್ತ್ರವನ್ನು ಉಪಸಂಹಾರ ಮಾಡಿಕೊಂಡನು. ಆ ಚಿತ್ರರಥನ ದೇಹವು ಹಿಂದೆ ಭಂಗಾರದಂತೆ ಶುಭ್ರವಾಗಿತ್ತು. ಈಗ ಆಗ್ನೇಯಾಸ್ತ್ರದ ಪ್ರಭಾವದಿಂದ ತುಂಬಾ ಕೆಂಪಾದ ದೇಹದಿಂದ ಯುಕ್ತನಾದನು. ಬಣ್ಣವೇ ಬದಲಾಯಿಸಿತು. ಈ ಕಾರಣದಿಂದ ಅಂಗಾರವರ್ಣ ಅಂದರೆ ಬೆಂಕಿಯ ಕೆಂಡದಂತೆ ಬಣ್ಣದಿಂದ ಯುಕ್ತನಾದವನು ಎಂದು ಪ್ರಸಿದ್ಧನಾದನು. ಆ ಅಂಗಾರವರ್ಣನು ಅರ್ಜುನನ ಸ್ನೇಹವನ್ನು ಮಾಡಿಕೊಂಡನು.

# ಆಗ್ನೇಯಾಸ್ತ್ರ ಮತ್ತು ಅದೃಶ್ಯತ್ವ ವಿದ್ಯೆಗಳ ಪರಸ್ಪರದಾನ

ಚಿತ್ರರಥನು ಅಗ್ನೇಯಾಸ್ತ್ರವನ್ನು ಹಿಂದೆಯೇ ತಿಳಿದಿದ್ದನು. ಆದರೂ ಅರ್ಜುನನಲ್ಲಿರುವ ಆಗ್ನೇಯಾಸ್ತ್ರದಂತಿರುವ ಆಗ್ನೇಯಾಸ್ತ್ರವು ಅವನಿಗೆ ತಿಳಿದಿರಲಿಲ್ಲ. ಅದಕ್ಕಾಗಿ ಆ ಆಗ್ನೇಯಾಸ್ತ್ರವನ್ನು ಉಪದೇಶಿಸುವಂತೆ ಕೇಳಿದನು. ಅದಕ್ಕೆ ಅರ್ಜುನನು ಉಪದೇಶಿಸುವುದಾಗಿ ಹೇಳಿದನು. ಅದರಂತೆಯೇ ಮಾಡಿದನು. ಆಗ ಅರ್ಜುನನು ಅದೃಶ್ಯತ್ವ ವಿದ್ಯೆಯನ್ನು ಉಪದೇಶಿಸುವಂತೆ ಚಿತ್ರರಥನಲ್ಲಿ ಸುಮ್ಮನೆ ಕೇಳಿದನು. ಅವನೂ ಕೆಲವು ಕಾಲವಾದ ಮೇಲೆ ಆ ವಿದ್ಯೆಯನ್ನು ಉಪದೇಶಿಸಿದನು.

ಇಲ್ಲಿ ಒಂದು ಸಂಶಯವು ಬರುತ್ತದೆ. ಅರ್ಜುನನು ಆಗ್ನೇಯಾಸ್ತ್ರವನ್ನು ಚಿತ್ರರಥನಿಗೆ ಉಪದೇಶಿಸಿದನು. ಅದಕ್ಕೆ ಪ್ರತಿಫಲವಾಗಿ ಅವನಿಂದ ಅದೃಶ್ಯತ್ವವಿದ್ಯೆಯನ್ನು ಸ್ವೀಕರಿಸಿದನು. ಇದು ವ್ಯಾಪಾರವಲ್ಲವೇ? ಈ ವ್ಯಾಪಾರವನ್ನು ಚಿತ್ರರಥನಿಗಿಂತ ಉತ್ತಮವಾದ ಅರ್ಜುನನು ಮಾಡಬಹುದೇ? ಈ ಸಂಶಯವನ್ನು ನಿರಾಕರಿಸುವೆವು.

ಚಿತ್ರರಥನಿಗಿಂತ ಅರ್ಜುನನು ಎಲ್ಲಾ ವಿಧದಿಂದಲೂ ಉತ್ತಮನು. ಚಿತ್ರರಥನಿಗೆ ಆಗ್ನೇಯಾಸ್ತ್ರವನ್ನು ಉಪದೇಶಿಸಿದನು. ಇದರಿಂದ ಯಾವ ವಿಧವಾದ ಪ್ರತಿಫಲವನ್ನೂ ಅಪೇಕ್ಷಿಸಲಿಲ್ಲ. ಅದರಿಂದ ಅರ್ಜುನನಿಗೆ ಪುಣ್ಯವು ಅಧಿಕವಾಯಿತು. ತನಗಿಂತ ಅಧಿಕವಾದ ಅರ್ಜುನನಿಗೆ ಚಿತ್ರರಥನು ತನ್ನಲ್ಲಿದ್ದ ಅದೃಶ್ಯತ್ವವಿದ್ಯೆಯನ್ನು ಕಾಣಿಕೆಯಾಗಿ ಕೊಟ್ಟನು. ಅದೂ ಅರ್ಜುನನು ಅಪೇಕ್ಷಿಸಲಿಲ್ಲ. ಈ ವಿಷಯವನ್ನು ತಿಳಿಸುವುದಕ್ಕಾಗಿ ಕಾಲಾಂತರದಲ್ಲಿ ಸ್ವೀಕರಿಸಿದನು. ಸನ್ಯಾಸಿಗಳಿಗೆ ಭಿಕ್ಷೆಯನ್ನು ಸಮರ್ಪಿಸಿದವರಿಗೆ ಪುಣ್ಯವು ವೃದ್ಧಿಯಾಗುವುದಿಲ್ಲವೇ? ಈ ಕಾಣಿಕೆಯಿಂದ ಚಿತ್ರರಥನಿಗೆ ಪುಣ್ಯವು ವೃದ್ಧಿಯಾಯಿತು. ಚಿತ್ರರಥನಿಗೆ ಪುಣ್ಯವನ್ನು ಕೊಡುವುದಕ್ಕಾಗಿಯೇ ಅರ್ಜುನನು ಅವನಿಂದ ಅದೃಶ್ಯತ್ವ ವಿದ್ಯೆಯನ್ನು ಸ್ವಿಕರಿಸಿದನು. ಇಬ್ಬರೂ ಸಮರಾಗಿದ್ದರೆ ಇಬ್ಬರೂ ಅನ್ಯೋನ್ಯವಾಗಿ ತಮ್ಮಲ್ಲಿದ್ದ ವಸ್ತುಗಳನ್ನು ಬದಲಾಯಿಸಿಕೊಂಡು ಸುಖವಾಗಿರಬಹುದು. ಇಲ್ಲಿ ಹಾಗಲ್ಲ. ಅರ್ಜುನನು ಉತ್ತಮನು. ಚಿತ್ರರಥನು ಅಧಮನು. ಅರ್ಜುನನು ಮಾಡಿದ ಉಪಕಾರಗಳೆಲ್ಲಾ ಪ್ರತಿಫಲವನ್ನು ಅಪೇಕ್ಷಿಸದೆ ಮಾಡಿರುವುದರಿಂದ ಅರ್ಜುನನಿಗೆ ಅಧಿಕವಾದ ಪುಣ್ಯಗಳನ್ನು ಕೊಡತಕ್ಕವುಗಳು. ಚಿತ್ರರಥನು ಮಾಡಿದ ಉಪಕಾರಗಳೆಲ್ಲಾ ಚಿತ್ರರಥನಿಗೆ ಸ್ವಲ್ಪ ಪುಣ್ಯಗಳನ್ನು ಕೊಡತಕ್ಕವುಗಳು. ಇದು ವ್ಯಾಪಾರವಲ್ಲವೆಂದು ತಿಳಿಯಬೇಕು.

ನಾನಾ ವಿಧವಾದ ಕಥೆಗಳನ್ನು ಹೇಳಿದನು. ಧೌಮ್ಯರನ್ನು ಪುರೋಹಿತರಾಗಿ ಸ್ವೀಕರಿಸಬೇಕೆಂದು ಹೇಳಿದನು. ಆಕಾಶಮಾರ್ಗದಲ್ಲಿ ಸಂಚರಿಸಲು ಶಕ್ತಿಯುಳ್ಳ ಕುದುರೆಗಳನ್ನು ಕೊಡುವುದಾಗಿಯೂ ಹೇಳಿದನು. ಸ್ವರ್ಗಲೋಕಕ್ಕೆ ಹೋದನು.

ಪಾಂಡವರೆಲ್ಲರೂ ಧೌಮ್ಯರ ಆಶ್ರಮಕ್ಕೆ ಬಂದರು. ತಮಗೆ ಪುರೋಹಿತರಾಗಿರಬೇಕೆಂದು ಪ್ರಾರ್ಥಿಸಿದರು. ಅಲ್ಲಿಂದ ಪುರೋಹಿತರಿಂದ ಸಹಿತರಾಗಿ ಹೊರಟರು. ಬ್ರಾಹ್ಮಣವೇಷದಿಂದಲೇ ದ್ರುಪದರಾಜನ ಪಟ್ಟಣವನ್ನು ಪ್ರವೇಶಿಸಿದರು. ಅಲ್ಲಿ ಅಲಂಕೃತವಾದ ರಾಜಸಭೆಯನ್ನು ನೋಡಿದರು.

## ದ್ರೌಪದೀ ಸ್ವಯಂವರ

ಆ ಸಭೆಯಲ್ಲಿ ಎಲ್ಲಾ ರಾಜರುಗಳೂ ಬಂದು ಕುಳಿತರು. ಆಗ ದ್ರೌಪದೀದೇವಿಯ ಸಹೋದರನೂ ಅಗ್ನಿದೇವನ ಅವತಾರವೂ ಆಗಿರುವ ಧೃಷ್ಟದ್ಯುಮ್ನನು ತನ್ನ ಸಹೋದರಿಯಾಗಿರುವ ದ್ರೌಪದಿದೇವಿಯನ್ನು ಕರೆದುಕೊಂಡು ಬಂದನು. ದ್ರೌಪದೀದೇವಿಯು ರುದ್ರದೇವನಿಂದ ಕೊಡಲ್ಪಟ್ಟ ಅರಳಿದ ಕಮಲದ ಮಾಲೆಯನ್ನು ಕೈಯಲ್ಲಿ ಧರಿಸಿದ್ದಳು. ಅವಳಿಗೆ ಆ ಸಭೆಯಲ್ಲಿ ಕುಳಿತಿರುವ ಒಬ್ಬೊಬ್ಬರನ್ನು ಪರಿಚಯ ಮಾಡಿಸಿದನು. ಅವರವರ ಕುಲ, ವೀರ್ಯ, ಸಂಪತ್ತು, ವೈಭವ ಮುಂತಾದವುಗಳನ್ನು ಹೇಳಿದನು. ರುದ್ರದೇವನಿಂದ ದ್ರುಪದರಾಜನಿಗೆ ಕೊಟ್ಟಿರುವ ಧನುಸ್ಸನ್ನು ಎಲ್ಲಾ ರಾಜರುಗಳ ಮಧ್ಯದಲ್ಲಿ ತಂದಿಟ್ಟನು. ಐದು ಬಾಣಗಳನ್ನು ತಂದಿಟ್ಟನು. ಮಹಾತೇಜಸ್ವಿಯಾದ ಧೃಷ್ಟದ್ಯುಮ್ನನು ಮೇಘದಂತೆ ಗಂಭೀರವಾದ ಧ್ವನಿಯಿಂದ ಎಲ್ಲರೂ ತನ್ನ ಮಾತುಗಳನ್ನು ಕೇಳುವಂತೆ ಮಾತಾಡಿದನು.

" ಎಲೈ ರಾಜರುಗಳಿರಾ, ಈ ಮರದ ಮೇಲೆ ಒಂದು ಮೀನು ಕಟ್ಟಲ್ಪಟ್ಟಿದೆ. ಮೀನಿನ ಕೆಳಗೆ ಒಂದು ಹಲಿಗೆಯು ಮೀನಿಗೆ ಅಡ್ಡವಾಗಿದೆ. ಆ ಹಲಿಗೆಯಲ್ಲಿ ಒಂದು ಚಿಕ್ಕ ರಂಧ್ರವಿದೆ. ಈ ಮರದ ಕೆಳಗೆ ನೀರನ್ನು ಇಟ್ಟಿರುವೆವು. ಆ ನೀರಿನಲ್ಲಿ ಹಲಿಗೆಯ ಪ್ರತಿಬಿಂಬವು ಬಿದ್ದಿರುತ್ತದೆ. ಆ ಪ್ರತಿಬಿಂಬವನ್ನು ನೋಡುತ್ತಾ ಮೇಲ್ಮುಖವಾಗಿ ಈ ಶ್ರೇಷ್ಠವಾದ ಧನುಸ್ಸಿನಲ್ಲಿ ಈ ಐದು ಬಾಣಗಳಲ್ಲಿ ಒಂದೊಂದು ಬಾಣಗಳನ್ನು ಜೋಡಿಸಿ ಮೀನಿನ ಕೆಳಗಿರುವ ರಂಧ್ರದ ಮೂಲಕವಾಗಿ ಮೀನನ್ನು ಆರು ಹೋಳುಗಳಾಗಿ ಯಾರು ಛೇದಿಸುವನೋ ಅವನನ್ನು ಈ ನನ್ನ ತಂಗಿಯು ಪತಿಯನ್ನಾಗಿ ವರಿಸಿ, ಅವನ ಹಿಂದೆ ಹೊರಡುವಳು'' ಎಂದನು.

ಈ ಮಾತುಗಳನ್ನು ಕೇಳಿದ ಎಲ್ಲಾ ರಾಜಕುಮಾರರೂ ನಾನು ಮುಂದೆ ತಾನು ಮುಂದೆ ಎಂದು ಸ್ಪರ್ಧೆಯಿಂದ ಎದ್ದು ನಿಂತರು. ಅಲಂಕಾರಗಳನ್ನು ಸರಿಮಾಡಿಕೊಂಡರು. ಅವರ ಕರ್ಣಕುಂಡಲಗಳು ಚಲಿಸಿದವು. ತಮ್ಮ ತಮ್ಮ ಅಸ್ತ್ರವಿದ್ಯೆಯನ್ನೂ ಬಲವನ್ನೂ ತೋರಿಸಬೇಕೆಂದು ಆಸೆಯಿಂದ ಯುಕ್ತರಾದರು. ಕೆಲವರು ಧನುಸ್ಸನ್ನು ನೋಡಿಯೇ ಹೆದರಿದರು. ಮತ್ತೆ ಕೆಲವರು ಧನುಸ್ಸಿನ ಸಮೀಪಕ್ಕೆ ಬಂದು. ದೃಷ್ಟಿಸಿ ನೋಡಿದರು. ನನ್ನಿಂದ ಸಾಧ್ಯವಿಲ್ಲ ಎಂದು ಹೇಳುತ್ತಾ ಹಿಂದಿರುಗಿದರು. ಉಳಿದವರು ಧನುಸ್ಸನ್ನು ಅಲ್ಲಾಡಿಸಿ ನೋಡಿ ಹಿಂದಿರುಗಿದರು.

ಆ ರಾಜರುಗಳ ಮಧ್ಯದಲ್ಲಿ ಶಿಶುಪಾಲನು ಮುಂದೆ ಬಂದನು. ತಾನು ಮಹಾಪ್ರತಾಪಶಾಲಿ ಎಂದು ತಿಳಿದವನಾಗಿ ಆ ಧನುಸ್ಸನ್ನು ಎತ್ತಿ ಹಗ್ಗವನ್ನು ಕಟ್ಟಿ ಸೆಳೆದನು. ಮಹಾಪ್ರಯತ್ನದಿಂದ ಸೆಳೆಯುತ್ತಿರುವಾಗ ಉದ್ದಿನ ಕಾಳಿನಷ್ಟು ಕಡಿಮೆಯಾಗಿರುವಾಗ ಮುಂದೆ ಸೆಳೆಯಲು ಸಾಧ್ಯವಾಗಲಿಲ್ಲ. ಆಗ ಆ ಧನುಸ್ಸು ಅವನನ್ನೇ ತಿರುಗಿ ಹೊಡೆಯಿತು. ಈ ಧನುಸ್ಸಿನಲ್ಲಿ ಬಾಣವನ್ನು ಬಿಡಲು ಅರ್ಜುನನೊಬ್ಬನೇ ಶಕ್ತನು ಎಂದು ಹೇಳುತ್ತಾ ರುದ್ರದೇವನ ವರದಿಂದ ಪರಾಜಿತನಾಗಿ ಹಿಂದಿರುಗಿದನು.

ಮದ್ರದೇಶದ ಅಧಿಪತಿಯಾದ ಶಲ್ಯನು ತುಂಬಾ ಮುದುಕನಾಗಿದ್ದನು. ಆದರೂ ಆ ಧನುಸ್ಸನ್ನು ಎತ್ತಿದನು. ಹಗ್ಗವನ್ನು ಕಟ್ಟಿ ಶೆಳೆದನು. ಶಿಶುಪಾಲನಿಗಿಂತ ಅಧಿಕವಾಗಿಯೇ ಶೆಳೆದನು. ಹೆಸರು ಕಾಳಿನಷ್ಟು ಕಡಿಮೆಯಾಗಿರುವಾಗ ಆ ಧನುಸ್ಸು ಅವನಿಗೆ ಹಿಂತಿರುಗಿ ಬಡಿಯಿತು. ಈ ಕೆಲಸವು ತನ್ನಿಂದ ಸಾಧ್ಯವಾಗಲಾರದು ಎಂದು ಹೇಳುತ್ತಾ ಹಿಂದಿರುಗಿದನು. ಅದನ್ನು ನೋಡಿದ ಎಲ್ಲಾ ರಾಜರುಗಳೂ ಖಿನ್ನರಾಗಿ ಮುಂದೆ ಯಾರು ಬರಲಿಲ್ಲ.

ಜರಾಸಂಧನು ಇದನ್ನು ನೋಡಿ ಬಲ ಮತ್ತು ವೀರ್ಯಗಳಲ್ಲಿ ತನಗೆ ಸಮಾನರು ಯಾರೂ ಇಲ್ಲವೆಂದು ದುರಹಂಕಾರದಿಂದ ಮುಂದೆ ಬಂದು, ಧನುಸ್ಸನ್ನು ಎತ್ತಿ ಹಗ್ಗವನ್ನು ಕಟ್ಟಿ ಸೆಳೆದನು. ಸಾಸಿವೆ ಕಾಳಿನಷ್ಟು ಕಡಿಮೆಯಾಗಿರುವಾಗ ಕಾಲು ನಡುಗಲು ಆರಂಭವಾಯಿತು. ತಾನು ನಿಲ್ಲುವುದಕ್ಕೇ ಸಾಧ್ಯವಾಗಲಿಲ್ಲ. ಮೊಣಕಾಲುಗಳನ್ನು ಊರಿಕೊಂಡು ಆತ್ಮರಕ್ಷಣೆಯನ್ನು ಮಾಡಿಕೊಂಡನು. ರುದ್ರದೇವರು ಕೊಟ್ಟಿರುವ ವರದಿಂದ ಪರಾಜಿತನಾದನು. ಆ ರಾಜಸಭೆಯಲ್ಲಿರುವ ರಾಜರುಗಳ ಮುಖಗಳನ್ನು ನೋಡುವುದಕ್ಕೆ ನಾಚಿದವನಾಗಿ ಅವರನ್ನು ಯಾರನ್ನೂ ನೋಡದೆ ತನ್ನ ಊರಿಗೆ ಹೋಗಿ ಸೇರಿದನು. ಅವನು ಹೋದ ಕೂಡಲೇ ಪ್ರಾಯಃ ಸರ್ವರೂ ಹಿಂದಿರುಗಿದರು.

ಕರ್ಣನು ಎದ್ದು ನಾನು ದುರ್ಯೋಧನನಿಗಾಗಿ ಈ ಧನುಸ್ಸನ್ನು ಎತ್ತಿ ಮತ್ಸ್ಯವನ್ನು ಕತ್ತರಿಸುವೆನು. ದ್ರೌಪದಿಯನ್ನು ದುರ್ಯೋಧನನಿಗೆ ಮಾಲೆಯನ್ನು ಹಾಕಲಿ ಎಂದು ಧನುಸ್ಸನ್ನು ಎತ್ತಿದನು. ಹಗ್ಗವನ್ನು ಕಟ್ಟಿ ಸೆಳೆದನು. ಶ್ರೀಪರಶುರಾಮದೇವನಿಂದ ಶ್ರೇಷ್ಠವಾದ ರೀತಿಯಿಂದ ಅಭ್ಯಾಸವನ್ನು ಮಾಡಿದವನಲ್ಲವೇ. ರೋಮದಷ್ಟು ಉಳಿಯುವ ವರೆಗೆ ಶೆಳೆದನು. ಆ ಧನುಸ್ಸು ಅವನನ್ನು ತಿರುಗಿ ಹೊಡೆಯಿತು. ಅವನೂ ಪರಾಜಿತನಾಗಿ ಹಿಂದಿರುಗಿದನು.

ಆಗ ಬ್ರಾಹ್ಮಣಸಭೆಯ ಮಧ್ಯದಲ್ಲಿ ಕುಳಿತಿರುವ ಶ್ರೀಭೀಮಸೇನದೇವರೂ ಅರ್ಜುನನೂ ಎದ್ದುನಿಂತರು. ಸೂರ್ಯನಂತೆಯು ಚಂದ್ರನಂತೆಯೂ ಶೋಭಿಸುತ್ತಿರುವ ಇವರಿಬ್ಬರನ್ನು ಎಲ್ಲಾ ಬ್ರಾಹ್ಮಣರೂ ನೋಡಿದರು. "ಊಟಕ್ಕಾಗಿ ಬಂದಿರುವ ಬ್ರಾಹ್ಮಣರಿಗೆ ಈ ಧನುಸ್ಸಿನ ವಿಚಾರ ಏಕೆ? ಎಂದು ಹೆದರಿದರು. ತಡೆದು ನಿಲ್ಲಿಸಲು ಬಂದರು.

ಆಗ ಕೆಲವು ಬ್ರಾಹ್ಮಣಶ್ರೇಷ್ಠರು " ಇವರಿಬ್ಬರೂ ದೇವತೆಗಳಿಗೆ ಸಮಾನವಾದ ಎಲ್ಲಾ ಲಕ್ಷಣಗಿಂತಲೂ ಯುಕ್ತರಾಗಿರುವರು. ಆದ್ದರಿಂದ ಈ ಸ್ವಯಂವರಮಹೋತ್ಸವದಲ್ಲಿ ಭಾಗವನ್ನು ವಹಿಸುವುದು ಅತ್ಯಂತ ಯುಕ್ತವಾಗಿದೆ" ಎಂದರು.

ಶ್ರೀಕೃಷ್ಣದೇವನು ಶತಧನ್ವನನ್ನು ಸಂಹರಿಸಿ ದ್ವಾರಕೆಯಲ್ಲಿ ಸುಖವಾಗಿ ವಾಸಿಸುತ್ತಿದ್ದನು. ಆಗ ದ್ರುಪದರಾಜನ ದೂತನು ದ್ರೌಪದೀ ಸ್ವಯಂವರ ವೃತ್ತಾಂತವನ್ನು ತಿಳಿಸಿದನು. ದ್ರುಪದರಾಜನು ಪಟ್ಟಣಕ್ಕೆ ಬರುವಂತೆ ಪ್ರಾರ್ಥಿಸಿದನು. ಅದರಂತೆ ಅವನೂ ಅಲ್ಲಿಗೆ ಬಂದಿದ್ದನು.

ಭೀಮಸೇನದೇವರೂ ಅರ್ಜುನನೂ ಶ್ರೀಕೃಷ್ಣದೇವನ ಮುಖವನ್ನು ನೋಡಿದರು. ಅವರು ಧನುಸ್ಸನ್ನು ಸಮೀಪಿಸುವಂತೆ ಶ್ರೀಕೃಷ್ಣದೇವನು ಕಣ್ಣುಸಂಜ್ಞೆಯನ್ನು ಮಾಡಿದನು. ಅವರಿಬ್ಬರೂ ಧನುಸ್ಸನ್ನು ಸಮೀಪಿಸಿದರು.

ಅರ್ಜುನನು ತನಗೆ ಪರಮಪ್ರಿಯರಾದ ಶ್ರೀಭೀಮಸೇನದೇವರಿಂದ ಅನುಮತಿಯನ್ನು ಪಡೆದನು. ಧನುಸ್ಸನ್ನು ಎತ್ತಿ ಅದರಲ್ಲಿ ಹಗ್ಗವನ್ನು ಕಟ್ಟಿ, ಆಯಾಸವಿಲ್ಲದಂತೆ ಹಗ್ಗವನ್ನು ಸೆಳೆದನು. ಧೃಷ್ಟದ್ಯುಮ್ನನು ತಂದಿಟ್ಟಿರುವ ಐದು ಬಾಣಗಳನ್ನು ಒಂದಕ್ಕೆ ಹಿಂದೆ ಒಂದಾಗಿ ಬಿಟ್ಟನು. ಆ ಬಾಣಗಳು ಕ್ರಮವಾಗಿ ಮತ್ಸ್ಯಕ್ಕೆ ಎದುರಿನಲ್ಲಿಟ್ಟಿರುವ ಹಲಿಗೆಯಲ್ಲಿರುವ ರಂಧ್ರವನ್ನು ಪ್ರವೇಶಿಸಿದವು. ಮತ್ಸ್ಯವನ್ನು ಆರು ತುಂಡಾಗಿ ಮಾಡಿದವು.

ದ್ರೌಪದಿದೇವಿಯು ಇದನ್ನು ನೋಡಿ ತನ್ನ ಕೈಯಲ್ಲಿರುವ ಕಮಲದ ಮಾಲೆಯನ್ನು ಅರ್ಜುನನ ಕಂಠದಲ್ಲಿ ಹಾಕಿದಳು. ಅವಳನ್ನು ಮಧ್ಯದಲ್ಲಿ ಇಟ್ಟುಕೊಂಡವರಾಗಿ ಭೀಮಸೇನದೇವರೂ ಅರ್ಜುನನೂ ಶ್ರೀಕೃಷ್ಣದೇವನನ್ನು ಮನಸ್ಸಿನಿಂದಲೇ ನಮಸ್ಕರಿಸಿ ಅಲ್ಲಿಂದ ಹೊರಟರು. ಆಗ ಅಲ್ಲಿದ್ದ ಎಲ್ಲಾ ರಾಜರುಗಳಿಗೂ ಮಿತಿಮೀರಿದ ಕೋಪವು ಬಂತು.

ಶ್ರೀಕೃಷ್ಣದೇವನು ಇಲ್ಲಿಗೆ ಬರುವಾಗಲೇ ಎಲ್ಲಾ ಯಾದವರಿಗೂ " ನಾವೆಲ್ಲರೂ ಸ್ವಯಂವರ ಮಹೋತ್ಸವವನ್ನು ನೋಡುವುದಕ್ಕೋಸ್ಕರ ಹೋಗುತ್ತೇವೆ. ಕನ್ಯೆಯನ್ನು ಪಡೆಯುವ ಉದ್ದೇಶ್ಯದಿಂದ ಹೋಗುತ್ತಿಲ್ಲ. ಆದ್ದರಿಂದ ನಮ್ಮಲ್ಲಿ ಯಾವ ಯಾದವನೂ ಧನುಸ್ಸನ್ನು ಮುಟ್ಟಕೂಡದು" ಎಂದು ಆಜ್ಞಾ ಮಾಡಿದ್ದನು. ಆದ್ದರಿಂದ ಯಾವ ಯಾದವನೂ ದ್ರೌಪದಿಯನ್ನು ಪಡೆಯಬೇಕೆಂಬ ಆಸೆಯನ್ನು ಮಾಡಲಿಲ್ಲ.

ಭೀಮಸೇನದೇವರು ಈ ರಾಜರುಗಳು ಯುದ್ಧಕ್ಕೆ ಸಿದ್ಧರಾದುದನ್ನು ನೋಡಿದರು. ಎದುರಿನಲ್ಲಿದ್ದ ಒಂದು ಮರವನ್ನು ನೋಡಿದರು. ಒಂದು ನೂರು ಯೋಜನದಷ್ಟು ಎತ್ತರವಾಗಿದ್ದ ಆ ಮರವನ್ನು ಕೈಯಲ್ಲಿ ಎತ್ತಿದರು. ಸರ್ವ ರಾಜರುಗಳನ್ನೂ ಎದುರಿಸಿ ನಿಂತರು. ಅದನ್ನು ನೋಡಿದ ಎಲ್ಲಾ ರಾಜರುಗಳೂ ಓಡಿದರು.

ಆಗ ಬಲರಾಮನನ್ನು ನೋಡಿ ಶ್ರೀಕೃಷ್ಣದೇವನು ಮರವನ್ನು ಎತ್ತಿಕೊಂಡಿರುವವನು ಭೀಮನೆಂದೂ ಮತ್ಸ್ಯವನ್ನು ತುಂಡು ಮಾಡಿದವನು ಅರ್ಜುನನೆಂದೂ ಅವರಿಬ್ಬರ ಪಾರ್ಶ್ವದಲ್ಲಿರುವವರು ಉಳಿದ ಮೂವರು ಪಾಂಡವರೆಂದೂ ತಿಳಿಸಿದನು. ಈ ಮಾತುಗಳನ್ನು ಕೇಳಿದ ಬಲರಾಮನು ತುಂಬಾ ಸಂತೋಷಿಸಿದನು. ಸಾತ್ಯಕಿಯು ಸಂತೋಷದಿಂದ ಖಡ್ಗವನ್ನು ಧರಿಸಿದವನಾಗಿ ಕುಣಿದನು. ಎಲ್ಲಾ ಯಾದವರೂ ಸಂತುಷ್ಟರಾದರು.

ಭೀಮಸೇನದೇವರನ್ನು ನೋಡಿದ ದುರ್ಯೋಧನ ಮುಂತಾದವರು ಓಡಿದರು. ಕರ್ಣನು ಅರ್ಜುನನನ್ನು ಎದುರಿಸಿ ಯುದ್ಧಕೆ ಹೊರಟನು. ಶಲ್ಯನು ಭೀಮಸೇನದೇವರನ್ನು ಎದುರಿಸಿ ಯುದ್ಧಕ್ಕಾಗಿ ಹೊರಟನು. ಬ್ರಹ್ಮಚಾರಿಗಳು ಮುಂತಾದ ಬ್ರಾಹ್ಮಣರೆಲ್ಲರೂ ತಮ್ಮ ಕೈಯಲ್ಲಿದ್ದ ದಂಡಕಾಷ್ಠಗಳು, ಬಟ್ಟೆಗಳು, ದರ್ಭೆಗಳು ಕೃಷ್ಣಾಜಿನಗಳು ಮುಂತಾದವುಗಳನ್ನು ಕೋಪದಿಂದ ಕರ್ಣನ ಮೇಲೆಯೂ ಶಲ್ಯನ ಮೇಲೆಯೂ ಬಿಸಾಡಿದರು.

## ಶಲ್ಯಕರ್ಣಪರಾಜಯ

ದ್ರುಪದರಾಜನು ಈ ಕ್ಷತ್ರಿಯರ ಪರಸ್ಪರ ವಿರೋಧದಿಂದ ಲೋಕನಾಶವು ಏರ್ಪಡದಿರಲಿ ಎಂದು ಶ್ರೀಕೃಷ್ಣದೇವನನ್ನೂ ಬ್ರಾಹ್ಮಣರನ್ನೂ ಪ್ರಾರ್ಥಿಸಿದನು. ಆಗ ಭೀಮಸೇನದೇವರು ಶಲ್ಯನ ಸಮೀಪಕ್ಕೆ ಬಂದರು. ತಮ್ಮ ಕೈಯಲ್ಲಿದ್ದ ಮರವನ್ನು ಕೆಳಗೆ ಇಟ್ಟರು. ಶಲ್ಯನನ್ನು ಎರಡು ಕೈಗಳಿಂದ ಮೇಲೆ ಎತ್ತಿದರು. ಅತಿವೇಗದಿಂದ

ಆಕಾಶದಲ್ಲಿ ಬಿಸಾಡಿದರು. ತಮ್ಮ ಸೋದರಮಾವನೆಂಬ ಬಂಧುತ್ವನಿಮಿತ್ತಕವಾದ ಪ್ರೇಮದಿಂದ ಅವನನ್ನು ಕೈಯಲ್ಲಿ ಹಿಡಿದು ಕೆಳಗೆ ಮೆಲ್ಲನೆ ಇಟ್ಟರು. ಶಲ್ಯನು ಭೀಮಸೇನದೇವರ ಬಲವನ್ನು ತಿಳಿದನು. ತನ್ನ ಊರಿಗೆ ಹೋದನು.

ಅರ್ಜುನನು ಅದೇ ಧನುಸ್ಸನ್ನು ಸ್ವೀಕರಿಸಿದನು. ಕರ್ಣನ ಜೊತೆಯಲ್ಲಿ ಯುದ್ಧವನ್ನು ಮಾಡಿದನು. ಕರ್ಣನೂ ಸಹ ಅಸ್ತ್ರ ಮತ್ತು ಬಾಹುಗಳ ಬಲಗಳನ್ನು ಅರ್ಜುನನಲ್ಲಿ ತೋರಿಸಿದನು. ಅವರಿಬ್ಬರೂ ಧನುರ್ಧಾರಿಗಳಲ್ಲಿ ಅಸದೃಶ್ಯರು. ಬಹುಕಾಲದ ವರೆಗೆ ಒಂದೇ ರೀತಿಯಾಗಿ ಯುದ್ಧವನ್ನು ಮಾಡಿದರು. ಕೊನೆಗ ಕರ್ಣನು ಅರ್ಜುನನ ಬಾಣಗಳಿಂದ ತುಂಬಾ ಪೀಡಿತನಾದನು. " ನೀನು ಅರ್ಜುನನೋ, ದೇವೇಂದ್ರನೋ, ಬ್ರಾಹ್ಮಣರ ಮೂರ್ತಿಮತ್ತಾದ ತಪಸ್ಸೋ ಆಗಿರಬೇಕು. ಇಲ್ಲದಿದ್ದರೆ ನನ್ನ ಮುಂದೆ ನಿಲ್ಲಲು ಶಕ್ತನಲ್ಲ" ಎಂದನು.

ಅದಕ್ಕೆ ಅರ್ಜುನನು " ನೀನು ಹೇಳಿದ ಮೂವರಲ್ಲಿ ಯಾರು ಬೇಕಾದರೂ ಆಗಿರಬಹುದು. ಅದರಿಂದ ನಿನಗೇನು? ಈಗ ಯಾವುದನ್ನು ಮಾಡುವುದಕ್ಕೆ ಯೋಗ್ಯವೋ ಅದನ್ನು ಮಾಡು. ಬಾಣಗಳನ್ನು ಬಿಟ್ಟರೆ ಬಿಡು. ಇಲ್ಲದಿದ್ದರೆ ಯುದ್ಧದಿಂದ ಫಲಾಯನವನ್ನು ಮಾಡು'' ಎಂದನು. "ಬ್ರಾಹ್ಮಣಶ್ರೇಷ್ಠರೊಡನೆ ಯುದ್ಧವನ್ನು ಮಾಡಿದ್ದರಿಂದ ನನಗೆ ಲಾಭವೇನು?'' ಎಂದು ಹೇಳುತ್ತಾ ಕರ್ಣನು ಯುದ್ಧವನ್ನು ನಿಲ್ಲಿಸಿದನು. ದುರ್ಯೋಧನಾದಿಗಳಿಂದ ಸಹಿತನಾಗಿ ಹಸ್ತಿನಾವತಿನಗರಕ್ಕೆ ಹೋದನು. ಬೀಮಸೇನನು ಅರ್ಜುನನಿಂದಲೂ ದ್ರೌಪದೀದೇವಿಯಿಂದಲೂ ಸಹಿತರಾಗಿ ಹೊರಟರು.

ಎಲ್ಲರಿಗಿಂತಲೂ ಮುಂದೆ ನಕುಲ ಮತ್ತು ಸಹದೇವರು. ಮಧ್ಯದಲ್ಲಿ ಧರ್ಮರಾಜ, ಅವನ ಹಿಂದೆ ಭೀಮಾರ್ಜುನರು ಎಲ್ಲರ ಹಿಂದೆ ದ್ರೌಪದೀದೇವಿ ಹೀಗೆ ಕುಂಬಾರನ ಮನೆಯೊಳಗೆ ಪ್ರವೇಶಿಸಿದರು. ಮನೆಗೆ ಹೋಗುವಾಗ "ಭಿಕ್ಷಾ'' ಎಂಬ ಶಬ್ದವನ್ನು ಅವರೆಲ್ಲರೂ ಉಚ್ಚರಿಸಿದರು. ಆ ಮಾತನ್ನು ಕೇಳಿದ ಕುಂತೀದೇವಿಯೂ " ಎಲ್ಲರೂ ಪಾಲ ಮಾಡಿಕೊಂಡು ಅನುಭವಿಸಿರಿ'' ಎಂದು ಹೇಳುತ್ತಾ ಮನೆಯೊಳಗಿನಿಂದ ಹೊರಗೆ ಬಂದಳು. ಆಗ ದ್ರೌಪದಿಯನ್ನು ನೋಡಿದಳು. ಕುಂತಿಯು ಪ್ರಮಾದದಿಂದಲೂ ಸುಳ್ಳು ಹೇಳಿದವಳಲ್ಲ. ಹೀಗಿರುವಾಗ ದ್ರೌಪದೀ ಎಂಬ ಕನ್ಯೆಯನ್ನು ಎಲ್ಲರೂ ಪಾಲು ಮಾಡಿಕೊಂಡು ಅನುಭವಿಸುವುದು ಹೇಗೆ? ಎಂಬ ಸಂಶಯವು ಎಲ್ಲರಿಗೂ ಬಂತು. ಆಗ ವಸುದೇವನ ಮಗನಾಗಿ ಅವತರಿಸಿರುವ ಶ್ರೀಕೃಷ್ಣದೇವನು ಪರಮ ಪ್ರೇಮದಿಂದ ಅಲ್ಲಿ ಪ್ರತ್ಯಕ್ಷನಾದನು. ಅಪರಿಮಿತ ಶಕ್ತಿಯಿಂದ ಸಹಿತನಾದ ಶ್ರೀಕೃಷ್ಣದೇವನು ಅವರೊಡನೆ ಮಾತಾಡಿದನು. ಸ್ವಕೀಯರಾದ ಯಾದವರಿಂದ ಸಹಿತನಾಗಿ ದ್ವಾರಕೆಗೆ ಹೋದನು. ॥೧೫॥

**ಕೃಷ್ಣಃ ಪ್ರಾಪ್ಯಾಥ ಸತ್ರಾಜಿದಹಿತವಧಕೃತ್ ಯಃ ಶ್ವಫಲ್ಕಸ್ಯ ಸೂನೌ**
**ರತ್ನಂ ಸಂದರ್ಶ್ಯ ರಾಮಂ ವ್ಯಥಿತ ಗತರುಷಂ ದ್ರಷ್ಟುಕಾಮಃ ಪ್ರತಸ್ಥೇ।**
**ಇಂದ್ರಪ್ರಸ್ಥಸ್ಥಪಾರ್ಥಾನಥ ಸಹವಿಜಯೋ ಯಾಮುನಂ ತೀರಮಾಯನ್**
**ಕಾಲಿಂದೀಂ ತತ್ರ ಲಬ್ಧ್ವಾ ಯಮಸುತಪುರಕೃತ್ಪಾತು ಮಾಂ ದ್ವಾರಕಾಸ್ಥಃ ॥೧೬॥**

**ಪದಚ್ಛೇದ :-** ಕೃಷ್ಣಃ ಪ್ರಾಪ್ಯ, ಅಥ, ಸತ್ರಾಜಿದಹಿತವಧಕೃತ್ ಯಃ, ಶ್ವಫಲ್ಕಸ್ಯ, ಸೂನೌ, ರತ್ನಂ, ಸಂದರ್ಶ್ಯ, ರಾಮಂ, ವ್ಯಥಿತ ಗತರುಷಂ ದ್ರಷ್ಟುಕಾಮಃ ಪ್ರತಸ್ಥೇ ಇಂದ್ರಪ್ರಸ್ಥಸ್ಥಪಾರ್ಥಾನ್, ಅಥ ಸಹವಿಜಯಃ, ಯಾಮುನಂ, ತೀರಂ, ಆಯನ್, ಕಾಲಿಂದೀಂ, ತತ್ರ, ಲಬ್ಧ್ವಾ, ಯಮಸುತಪುರಕೃತ್, ಪಾತು, ಮಾಂ, ದ್ವಾರಕಾಸ್ಥಃ।

ಅನ್ವಯ - ಯಃಕೃಷ್ಣಃ ಅಥ (ದ್ವಾರಕಾಂ) ಪ್ರಾಪ್ಯ, ಸತ್ರಾಜಿದಹಿತವಧಕೃತ್ ಶ್ವಫಲ್ಕಸ್ಯ ಸೂನೌ (ವಿದ್ಯಮಾನಂ) ರತ್ನಂ ಸಂದರ್ಶ್ಯ ರಾಮಂ ಗತರುಷಂ ವ್ಯಧಿತ. ಇಂದ್ರಪ್ರಸ್ಥಸ್ಥಪಾರ್ಥಾನ್ ದ್ರಷ್ಟುಕಾಮಃಪ್ರತಸ್ಥೇ, ಅಥ ಸಹವಿಜಯಃ ಯಾಮುನಂ ತೀರಂ ಆಯನ್ ತತ್ರ ಕಾಲಿಂದೀಂ ಲಬ್ಧ್ವಾ ಯಮಸುತಪುರಕೃತ್ ದ್ವಾರಕಾಸ್ಥಃ (ಸಃ) ಮಾಂ ಪಾತು.

ಅನ್ವಯಾರ್ಥ - ಯಃ ಕೃಷ್ಣಃ ಯಾವ ಶ್ರೀಕೃಷ್ಣದೇವನು, ಅಥ ಅನಂತರದಲ್ಲಿ (ದ್ವಾರಕಾಂ) ದ್ವಾರಕೆಯನ್ನು ಪ್ರಾಪ್ಯ ಹೊಂದಿದವನಾಗಿ ಸತ್ರಾಜಿದಹಿತವಧಕೃತ್ ಸತ್ರಾಜಿದ್ರಾಜನ ಶತ್ರುವಾಗಿರುವ ಶತಧನ್ವನನ್ನು ಸಂಹರಿಸಿದವನಾಗಿ ಶ್ವಫಲ್ಕಸ್ಯ ಶ್ವಫಲ್ಕ ಎಂಬ ಯಾದವನ ಸೂನೌ ಮಗನಾದ ಅಕ್ರೂರನಲ್ಲಿ (ವಿದ್ಯಮಾನಂ) ಇರತಕ್ಕ ರತ್ನಂ ಸ್ಯಮಂತಕಮಣಿಯನ್ನು ಸಂದರ್ಶ್ಯ ತೋರಿಸಿ ರಾಮಂ ಬಲರಾಮನನ್ನು ಗತರುಷಂ ಕೋಪವಿಲ್ಲದವನನ್ನಾಗಿ ವ್ಯಧಿತ ಮಾಡಿದನೊ, ಇಂದ್ರಪ್ರಸ್ಥಸ್ಥಪಾರ್ಥಾನ್ ಇಂದ್ರಪ್ರಸ್ಥ ನಗರದಲ್ಲಿದ್ದ ಪಾಂಡವರನ್ನು ದ್ರಷ್ಟುಕಾಮಃ ನೋಡಬೇಕೆಂಬ ಆಸೆಯುಳ್ಳವನಾಗಿ ಪ್ರತಸ್ಥೇ ಹೊರಟನೋ, ಅಥ ಅನಂತರದಲ್ಲಿ ಸಹವಿಜಯಃ ಅರ್ಜುನನಿಂದ ಸಹಿತನಾಗಿ ಯಾಮುನಂ ತೀರಂ ಯಮುನಾನದಿಯ ತೀರವನ್ನು ಆಯನ್ ಹೊಂದಿದವನಾಗಿ ತತ್ರ ಅಲ್ಲಿ ಕಾಲಿಂದೀಂ ಕಾಲಿಂದೀ ಎಂಬ ಕನ್ಯೆಯನ್ನು ಲಬ್ಧ್ವಾ ಪಡೆದು ಯಮಸುತಪುರಕೃತ್ ಧರ್ಮರಾಜನಿಗೆ ಇಂದ್ರಪ್ರಸ್ಥ ಎಂಬ ನಗರವನ್ನು ಮಾಡಿಸಿದವನಾಗಿ ದ್ವಾರಕಾಸ್ಥಃ ದ್ವಾರಕೆಯನ್ನು ಹೊಂದಿದವನಾದ ಸಃ ಕೃಷ್ಣಃ ಆ ಶ್ರೀಕೃಷ್ಣದೇವನು ಮಾಂ ನನ್ನನ್ನು ಪಾತು ರಕ್ಷಿಸಲಿ.

ವಿಗ್ರಹ -ನ ಹಿತಃ ಅಹಿತಃ ಸತ್ರಾಜಿತಃ ಅಹಿತಃ ಸತ್ರಾಜಿದಹಿತಃ, ಸತ್ರಾಜಿದಹಿತಸ್ಯ ವಧಃ ಸತ್ರಾಜಿದಹಿತವಧಃ ಸತ್ರಾಜಿದಹಿತವಧಂ ಕರೋತಿ ಇತಿ ಸತ್ರಾಜಿದಹಿತವಧಕೃತ್; ಗತಾ ರುಟ್ ಯಸ್ಯ ಸಃ ಗತರುಟ್, ತಂ ಗತುರಷಂ; ದ್ರಷ್ಟುಂ ಕಾಮಃ ಯಸ್ಯ ಸಃ ದ್ರಷ್ಟುಕಾಮಃ ; ಪೃಥಾಯಾಃ ಅಪತ್ಯಾನಿ ಪುಮಾಂಸಃ ಪಾರ್ಥಾಃ, ಇಂದ್ರಪ್ರಸ್ಥೇ ತಿಷ್ಠಂತಿ ಇತಿ ಇಂದ್ರಪ್ರಸ್ಥಸ್ಥಾಃ ಇಂದ್ರಪ್ರಸ್ಥಸ್ಥಾಶ್ಚ ತೇ ಪಾರ್ಥಾಶ್ಚ ಇಂದ್ರಪ್ರಸ್ಥಸ್ಥಪಾರ್ಥಾಃ, ತಾನ್ ಇಂದ್ರಪ್ರಸ್ಥಸ್ಥಪಾರ್ಥಾನ್; ವಿಜಯೇನ ಸಹ ವರ್ತತೇ ಇತಿ ಸಹವಿಜಯಃ; ಯಮುನಾಯಾಃ ಇದಂ ಯಾಮುನಂ, ತತ್ ಯಾಮುನಂ; ಐತಿ ಇತಿ ಆಯನ್; ಕಲಿಂದಸ್ಯ ಅಪತ್ಯಂ ಸ್ತ್ರೀ ಕಾಲಿಂದೀ, ತಾಂ ಕಾಲಿಂದೀಂ; ಯಮಸ್ಯ ಸುತಃ ಯಮಸುತಃ ಯಮಸುತಸ್ಯ ಪುರಂ ಯಮಸುತಪುರಂ ಯಮಸುತಪುರಂ ಕರೋತಿ ಇತಿ ಯಮಸುತಪುರಕೃತ್; ದ್ವಾರಕಾಯಾಂ ತಿಷ್ಠತಿ ಇತಿ ದ್ವಾರಕಾಸ್ಥಃ

ವಿಶೇಷಾರ್ಥ - (೭೫) (ದ್ವಾರಕಾಂ) ಪ್ರಾಪ್ಯ, ಸತ್ರಾಜಿದಹಿತವಧಕೃತ್, ಶ್ವಫಲ್ಕಸ್ಯ ಸೂನೌ (ವಿದ್ಯಮಾನಂ) ಮಣಿಂ ಸಂದರ್ಶ್ಯ, ರಾಮಂ ಗತರುಷಂ ವ್ಯಧಿತ, ಈ ವಿಶೇಷಾರ್ಥವೂ ಇದರ ವಿವರಣವೂ ಹಿಂದೆ ಮಾಡಲ್ಪಟ್ಟಿದೆ.

ಇಂದ್ರಪ್ರಸ್ಥಸ್ಥಪಾರ್ಥಾನ್ ದ್ರಷ್ಟುಕಾಮಃ ಪ್ರತಸ್ಥೇ.

ಇಂದ್ರಪ್ರಸ್ಥ ನಗರದಲ್ಲಿದ್ದ ಪಾಂಡವರನ್ನು ನೋಡಬೇಕೆಂಬ ಆಸೆಯುಳ್ಳವನಾಗಿ ಹೊರಟನು.

ವಿಶೇಷಾರ್ಥ - (೭೬) ಕದಾಚಿತ್ ಪಾಂಡವಾನ್ ದ್ರಷ್ಟುಂ ಬಲರಾಮಾದಿಭಿಃ ಸಹ ಇಂದ್ರಪ್ರಸ್ಥಾಖ್ಯ ನಗರಂ ಪ್ರಾಪ್ಯ, ಪಾಂಡವೈಃ ಸಂಪೂಜಿತಃ

# ದ್ರೌಪದಿಯ ಗಂಡನು ಯಾರು?

ವಿಶೇಷಾರ್ಥ ವಿವರಣ - ದ್ರುಪದಮಹಾರಾಜನು ಅರ್ಜುನನು ಯಾರು? ಎಂದು ತಿಳಿಯುವುದಕ್ಕಾಗಿ ಸ್ವಯಂವರಮಹೋತ್ಸವದಿನದಲ್ಲಿ ರಾತ್ರಿಯಲ್ಲಿ ತನ್ನ ಮಗನಾಗಿರುವ ಧೃಷ್ಟದ್ಯುಮ್ನನನ್ನು ಅರ್ಜುನನ ಹಿಂದೆಯೇ ಕಳುಹಿಸಿದನು. ಅವನು ಅವರ ಮಾತುಕಥೆಗಳನ್ನೆಲ್ಲಾ ಗಮನಿಸಿದನು. ಅವರೆಲ್ಲರೂ ಭಿಕ್ಷೆಯನ್ನು ಬೇಡಿ ತಂದಿರುವ ಅನ್ನವನ್ನು ತಿಂದು ಸೇವಿಸುತ್ತಿರುವವರೆಂದು ತಿಳಿದನು. ಆದರೂ ಅವರ ಮಧ್ಯದಲ್ಲಿ ತನ್ನ ತಂಗಿಯು ತೃಪ್ತಳಾಗಿರುವುದನ್ನು ತಿಳಿದನು. ಅವರ ಸಂಭಾಷಣೆಗಳ ಮಧ್ಯದಲ್ಲಿ ಯುದ್ಧದ ಸಮಾಚಾರವನ್ನು ಅವರ ಗಂಭೀರವಾದ ಧ್ವನಿಯನ್ನೂ ಕೇಳಿದನು. ಇದರಿಂದ ಕ್ಷತ್ರಿಯರಲ್ಲಿ ಉತ್ತಮರೆಂದು ತಿಳಿದನು. ಮರುದಿನ ಬೆಳಿಗ್ಗೆ ದ್ರುಪದಮಹಾರಾಜನು ತನ್ನ ಪುರೋಹಿತರನ್ನು ಕುಂಬಾರನ ಮನೆಗೆ ಕಳುಹಿಸಿದನು. ಅವರನ್ನು ಮಹಾಜ್ಞಾನಿಗಳಾದ ಶ್ರೀಭೀಮಸೇನದೇವರು ಪೂಜಿಸಿದರು. ಪುರೋಹಿತರು ಅವರನ್ನು ಕುಂತಿಯೊಡನೆ ಕರೆದುಕೊಂಡು ದ್ರುಪದರಾಜನ ಮನೆಗೆ ಬಂದರು. ರಾಜನು ಅವರನ್ನೂ ದ್ರೌಪದಿಯನ್ನೂ ಮರ್ಯಾದೆಯಿಂದ ಸ್ವಾಗತಿಸಿದನು. ಅವರ ಜಾತಿಯನ್ನು ಪರೀಕ್ಷಿಸುವುದಕ್ಕಾಗಿ ಬ್ರಾಹ್ಮಣರಿಗೆ ಯೋಗ್ಯವಾದ ಅನ್ನ, ಭಕ್ಷ್ಯ ಮುಂತಾದ ವಸ್ತುಗಳಿಂದಲೂ ಕ್ಷತ್ರಿಯರಿಗೆ ಯೋಗ್ಯವಾದ ಆಯುಧ ಮುಂತಾದವುಗಳಿಂದಲೂ ವೈಶ್ಯರಿಗೆ ಯೋಗ್ಯವಾದ ವಸ್ತುಗಳಿಂದಲೂ, ಶೂದ್ರರಿಗೆ ಯೋಗ್ಯವಾದ ದೊಣ್ಣೆ ನೇಗಿಲು ಮುಂತಾದವುಗಳಿಂದಲೂ ಯುಕ್ತವಾದ ನಾಲ್ಕು ಮನೆಗಳನ್ನು ಹಿಂದೆಯೇ ಸಿದ್ಧಪಡಿಸಿ ಇಟ್ಟಿದ್ದನು. ಅವುಗಳಲ್ಲಿ ಆಯುಧಗಳಿಂದ ತುಂಬಿರುವ ಮನೆಯಲ್ಲಿ ಪಾಂಡವರು ಪ್ರವೇಶಿಸಿದರು.

# ದ್ರುಪದನು ಇವರೆಲ್ಲರೂ ಪಾಂಡವರೆಂದು ತಿಳಿದನು

ಅಂಗಚೇಷ್ಟೆಗಳು, ಸ್ವರ, ಆಕಾರ ಮಾತುಗಳು, ಮತ್ತು ವೀರ್ಯ ಶೌರ್ಯ, ಪ್ರಾಗಲ್ಭ್ಯ ಮೊದಲಾದ ಅವರ ಗುಣಗಳಿಂದ ಮಹಾರಾಜನ ಮಕ್ಕಳೆಂದು ತಿಳಿದನು. ದ್ರುಪದಮಹಾರಾಜನು ಧರ್ಮರಾಜನ ಸಮೀಪದಲ್ಲಿ ಬಂದನು. ನೀನು ಯಾರು? ಎಂಬ ವಿಷಯವನ್ನು ಸತ್ಯವಾಗಿ ಹೇಳು'' ಎಂದನು.

ಎಲೋ ರಾಜನೇ, ನಿನ್ನ ಮಗನು ತನ್ನ ತಂಗಿಯ ವಿಷಯವಾಗಿ ಹೇಳುವಾಗ ರಾಜರ ಸಭೆಯಲ್ಲಿ ಮತ್ಸ್ಯವನ್ನು ಕತ್ತರಿಸಬೇಕೆಂದು ಮಾತ್ರ ಹೇಳಿದನು. ಕತ್ತರಿಸುವವನು ಯಾವ ಜಾತಿಯಾವನಾಗಿರಬೇಕೆಂದು ಹೇಳಲಿಲ್ಲ. ಅವನು ಹೇಳದಂತೆ ನನ್ನ ತಮ್ಮನು ಮಾಡಿದನು. ಈಗ ಪುನಃ ನೀನು ಯಾರು? ಎಂದು ಕೇಳುತ್ತಿರುವಿ. ಹೀಗೆ ಕೇಳಲು ಕಾರಣವೇನು? ಎಂದು ಮೆಲ್ಲನೇ ನಗುತ್ತಾ ಹೇಳಿದನು. ಕುಂತಿಯೂ ಇದೇ ಮಾತನ್ನೇ ಅನುಮೋದಿಸಿದಳು. ಆದರೂ ದ್ರುಪದರಾಜನು ಅದೇ ವಿಷಯವನ್ನು ಕುರಿತು ಪುನಃ ಕೇಳಿದನು. ಆಗ ಕುಂತಿಯೂ ಧರ್ಮರಾಜನೂ ಎಲ್ಲಾ ವಿಷಯಗಳನ್ನೂ ಹೇಳಿದರು.

# ದ್ರೌಪದಿಗೆ ಅನೇಕ ಗಂಡಂದಿರು

ರಾಜನು ತುಂಬಾ ಸಂತುಷ್ಟನಾದನು. '' ನಾನು ಕೃತಕೃತ್ಯನಾದೆನು. ಅರ್ಜುನನಿಗೋಸ್ಕರ ಈ ಸ್ವಯಂವರ ಮಹೋತ್ಸವದ ಪ್ರಯತ್ನವನ್ನು ಮಾಡಿದೆನು. ನೀನಾಗಲೀ ಅರ್ಜುನನಾಗಲೀ ಬೇರೆ ಯಾರಾಗಲೀ ನನ್ನ ಮಗಳ

ಪಾಣಿಗ್ರಹಣವನ್ನು ಮಾಡಿರಿ'' ಎಂದನು. ಧರ್ಮರಾಜನು ಈ ಮಾತುಗಳನ್ನು ಕೇಳಿದನು. " ನಾವೆಲ್ಲರೂ ನಿನ್ನ ಮಗಳ ಪಾಣಿಗ್ರಹಣವನ್ನು ಮಾಡಿಕೊಳ್ಳಬೇಕೆಂದು ನನ್ನ ಮನಸ್ಸು ಹೇಳುತ್ತಿದೆ. ನನ್ನ ಮನಸ್ಸು ಯಾವಾಗಲೂ ಧರ್ಮವಿಷಯದಲ್ಲಿ ನಿಶ್ಚಲವಾದದ್ದು. ಆದ್ದರಿಂದ ಒಬ್ಬಳನ್ನು ಅನೇಕ ಪುರುಷರು ವಿವಾಹ ಮಾಡಿಕೊಳ್ಳುವುದು ಶಾಸ್ತ್ರಸಂಮತವಲ್ಲದಿದ್ದರೂ ನನ್ನ ಮನಸ್ಸೇ ಈ ವಿಷಯದಲ್ಲಿ ಪ್ರಮಾಣವಾಗಿದೆ'' ಎಂದನು. ಆದ್ದರಿಂದಲೇ ಧರ್ಮರಾಜ ಎಂಬ ಹೆಸರಿನಿಂದ ನಾನು ಪ್ರಸಿದ್ಧನಾಗಿರುವೆನು'' ಎಂದನು.

ಈ ಮಾತುಗಳನ್ನು ರಾಜನೂ ಧೃಷ್ಟದ್ಯುಮ್ನನೂ ಕೇಳಿದರು. ಇಬ್ಬರೂ ಸಂಮತಿಸಲಿಲ್ಲ. ಆಗ ಶ್ರೀವೇದವ್ಯಾಸರು ಅಲ್ಲಿಗೆ ಬಂದರು. ಅನಂತ ಗುಣಪರಿಪೂರ್ಣರಾಗಿರುವ ಶ್ರೀವೇದವ್ಯಾಸರಿಗೆ ಎಲ್ಲರೂ ನಮಸ್ಕರಿಸಿದರು. ಅವರ ಸನ್ನಿಧಾನದಲ್ಲಿ ಕುಳಿತರು. ಶ್ರೀವೇದವ್ಯಾಸರು ದ್ರುಪದಮಹಾರಾಜನನ್ನು ಕುರಿತು ಹೇಳಿದರು.

ಎಲೋ ದ್ರುಪದಮಹಾರಾಜಾ, ಬ್ರಹ್ಮನ ಈ ದಿನದಲ್ಲಿ ಆರು ಮನ್ವಂತರಗಳು ಕಳೆದುಹೋದವು. ಈಗ ಏಳನೆಯ ಮನ್ವಂತರವು ನಡೆಯುತ್ತಿದೆ. ಮೊದಲನೆಯ ಮನ್ವಂತರದಲ್ಲಿ"ಯಜ್ಞ" ಎಂಬ ಹರಿಯು ಇಂದ್ರನಾದನು. ಎರಡನೆಯ ಮನ್ವಂತರದಿಂದ ಆರನೆಯ ಮನ್ವಂತರದ ವರೆಗೆ ಕ್ರಮವಾಗಿ (೧)ನಾಸತ್ಯ (೨) ದಸ್ರ (೩) ಯಮ (೪) ವಾಯು (೫) ಪುರಂದರ ಎಂಬ ಐವರು ದೇವತೆಗಳು ಇಂದ್ರಪದವಿಯನ್ನು ಆಳಿದರು. ಆರನೆಯ ಮನ್ವಂತರದಲ್ಲಿ ಇಂದ್ರನಾಗಿದ್ದ ಪುರಂದರನೇ ಈಗ ೭ನೇ ಮನ್ವಂತರದಲ್ಲಿಯೂ ಇಂದ್ರನಾಗಿರುವನು.

ಈ ಐವರು ಇಂದ್ರರುಗಳಲ್ಲಿ ನಾಸತ್ಯ ಎಂಬವನು ನಕುಲನಾಗಿಯೂ ದಸ್ರ ಎಂಬುವನು ಸಹದೇವನಾಗಿಯೂ ಯಮನು ಧರ್ಮರಾಜನಾಗಿಯೂ ವಾಯುವು ಭೀಮಸೇನನಾಗಿಯೂ ಪುರಂದರನು ಅರ್ಜುನನಾಗಿಯೂ ಅವತರಿಸಿರುವರು. ಈ ಐವರು ಇಂದ್ರರುಗಳಲ್ಲಿ ನಾಸತ್ಯ ದಸ್ರ ಎಂಬ ಎರಡು ಅಶ್ವಿನೀದೇವತೆಗಳ ಒಂದೇ ಪತ್ನಿಯಾಗಿರುವ ಉಷಾದೇವಿಯೂ ಯಮನ ಪತ್ನಿಯಾಗಿರುವ ಶ್ಯಾಮಲಾದೇವಿಯೂ ವಾಯುವಿನ ಪತ್ನಿಯಾಗಿರುವ ಭಾರತೀದೇವಿಯೂ ಪುರಂದರನ ಪತ್ನಿಯಾಗಿರುವ ಶಚೀದೇವಿಯೂ ನಿನ್ನ ಮಗಳಾಗಿರುವ ದ್ರೌಪದೀದೇವಿಯ ಒಂದೇ ದೇಹದಲ್ಲಿ ವಾಸಿಸುತ್ತಿರುವರು. ಧರ್ಮರಾಜ ಮುಂತಾದ ಐವರ ಪತ್ನಿಯರು ನಿನ್ನ ಮಗಳ ಒಂದೇ ದೇಹದಲ್ಲಿರುವುದರಿಂದ ಒಬ್ಬಳಾದ ದ್ರೌಪದಿಗೆ ಧರ್ಮರಾಜ ಮುಂತಾದ ಐವರು ಪತಿಗಳಾಗುವ ವಿಷಯದಲ್ಲಿ ಯಾವ ಶಾಸ್ತ್ರ ವಿರೋಧವೂ ಇಲ್ಲ ಎಂದು ಶ್ರೀವೇದವ್ಯಾಸರು ಹೇಳಿದರು.

ಈ ಮಾತುಗಳನ್ನು ಕೇಳಿದ ಮೇಲೆಯೂ ಒಬ್ಬಳು ದ್ರೌಪದಿಗೆ ಐವರು ಪತಿಗಳಾಗುವುದನ್ನು ದ್ರುಪದರಾಜನು ತೃಪ್ತಿಯಿಂದ ಅಂಗೀಕರಿಸಲಿಲ್ಲ. ಆಗ ಶ್ರೀವೇದವ್ಯಾಸದೇವರು " ಎಲೋ ದ್ರುಪದಮಹಾರಾಜನೇ, ನಿನಗೆ ಈಗ ದಿವ್ಯದೃಷ್ಟಿಯನ್ನು ಕೊಟ್ಟಿರುವೆನು. ಪಾಂಡವರೇ ಮೂಲರೂಪಗಳನ್ನೂ ದ್ರೌಪದಿದೇವಿಯ ದೇಹದಲ್ಲಿ ಪಾಂಡವರ ಮೂಲರೂಪಗಳ ಪತ್ನಿಯರ ರೂಪಗಳನ್ನೂ ನೋಡು. ನೋಡಿದ ಮೇಲೆ ನಿನಗೆ ತೋರಿದಂತೆ ಮಾಡು'' ಎಂದರು.

ದ್ರುಪದರಾಜನು ನೋಡಿದನು. ಐವರು ಪಾಂಡವರೂ ಆಕಾಶದಲ್ಲಿ ನಿಂತಿರುವರು. ಅವರ ಪಕ್ಕದಲ್ಲಿ ಅವರವರ ಪತ್ನಿಯರ ಲಕ್ಷಣಗಳಿಂದ ಯುಕ್ತಳಾಗಿರುವ ದ್ರೌಪದದೀದೇವಿಯು ನಿಂತಿರುವಳು. ಶ್ರೀವೇದವ್ಯಾಸರ

ಅನುಗ್ರಹಬಲದಿಂದ ಪಾಂಡವರನ್ನೂ ದ್ರೌಪದಿಯನ್ನೂ ನೋಡಿದನು. ಶ್ರೀವೇದವ್ಯಾಸರು ಹೇಳಿದ ಮಾತುಗಳನ್ನು ನಂಬದಿರುವುದಕ್ಕಾಗಿ ತುಂಬಾ ಭೀತನಾದನು. ಅವರ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡನು. ತನಗೆ ಅಭಯವನ್ನು ಕೊಡಬೇಕೆಂದು ಬೇಡಿಕೊಂಡನು.

ಶ್ರೀವೇದವ್ಯಾಸರು ಅಭಯವನ್ನು ಕೊಟ್ಟರು. ಅವನೂ ಸಹ ದ್ರೌಪದಿದೇವಿಯನ್ನು ಐವರಿಗೆ ಕೊಟ್ಟು ವಿವಾಹವನ್ನು ಮಾಡುವುದಾಗಿ ಅಂಗೀಕರಿಸಿದನು. ಶ್ರೀವೇದವ್ಯಾಸರು ಧೌಮ್ಯರಿಂದ ಸಹಿತರಾಗಿ ತಾನೇ ಎಲ್ಲಾ ವಿವಾಹಕಾರ್ಯಗಳನ್ನೂ ಮಾಡಿಸಿದರು. ಧರ್ಮರಾಜನಿಂದ ಆರಂಭಿಸಿ ಸಹದೇವರ ವರೆಗೆ ಕ್ರಮದಿಂದ ಎಲ್ಲರೂ ದ್ರೌಪದಿದೇವಿಯ ಪಾಣಿಗ್ರಹಣವನ್ನು ಮಾಡಿದರು.

ಪಾಂಚಾಲದೇಶದಲ್ಲಿ ದೊಡ್ಡ ಉತ್ಸವವು ನಡೆಯಿತು. ದ್ರುಪದರಾಜನೂ ಮಕ್ಕಳು, ಸ್ವಜನರು, ಪಟ್ಟಣಿಗರು, ದೇಶದ ಜನರು ಮುಂತಾದವರಿಂದ ಸಹಿತನಾಗಿ ಸಂತೋಷಿಸಿದನು. ಪಾಂಡವರು ವಿವಾಹಿತರಾಗಿ ಸುಖದಿಂದ ವಾಸಿಸುತ್ತಿರುವಾಗ ಶ್ರೀಕೃಷ್ಣದೇವನು ಬಲರಾಮನಿಂದಲೂ ಸಕಲ ಯಾದವರಿಂದಲೂ ಸಹಿತನಾಗಿ ಅಸಂಖ್ಯವಾದ ಉಡುಗೊರೆಗಳನ್ನು ತೆಗೆದುಕೊಂಡು ಬಂದನು. ಕುಂತೀಸಮೇತರಾದ ಪಾಂಡವರಿಗೆ ಕೊಟ್ಟನು.

ಶ್ರೀಕೃಷ್ಣದೇವನನ್ನು ನೋಡಿದ ಪಾಂಡವರು ಆಲಿಂಗಿಸಿದರು. ಮತ್ತು ನಮಸ್ಕರಿಸಿದರು. ಶ್ರೀಕೃಷ್ಣದೇವನು ದ್ರೌಪದಿದೇವಿಗೆ ಮನೆಯ ಉಪಯೋಗಕ್ಕೆ ಬೇಕಾಗಿರುವ ಸುವರ್ಣಮಯವಾದ ಎಲ್ಲಾ ಪಾತ್ರೆಗಳನ್ನೂ ಆಭರಣಗಳನ್ನೂ ಕೊಟ್ಟನು. ಕುಂತೀದೇವಿಗೂ ಪಂಚಪಾಂಡವರಿಗೂ ಯೋಗ್ಯವಾದ ಆಭರಣಗಳನ್ನೂ ಕೊಟ್ಟನು. ಶ್ರೀವೇದವ್ಯಾಸರು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸಕಲಾಭಿಷ್ಟಗಳನ್ನೂ ಕೊಟ್ಟರು. ದ್ರುಪದಮಹಾರಾಜನು ಒಬ್ಬೊಬ್ಬ ಅಳಿಯನಿಗೂ ಸಾವಿರಗಟ್ಟಲೆ ದಾಸರನ್ನೂ ದಾಸಿಯರನ್ನೂ ಕೊಟ್ಟನು. ಶ್ರೀಕೃಷ್ಣದೇವನು ದ್ರುಪದರಾಜನ ಪಟ್ಟಣದಲ್ಲಿ ಪಾಂಡವರೊಡನೆ ಅನೇಕ ತಿಂಗಳುಗಳ ವರೆಗೆ ವಿಹರಿಸಿದನು. ಅನಂತರದಲ್ಲಿ ದ್ವಾರಕೆಗೆ ಹೋದನು. ಶ್ರೀವೇದವ್ಯಾಸರು ಅಂತರ್ಹಿತರಾದರು. ಅನಂತರದಲ್ಲಿ ಒಂದು ವರ್ಷದ ವರೆಗೆ ಪಾಂಡವರು ಸುಖವಾಗಿ ವಾಸಿಸಿದರು.

# ದುರ್ಯೋಧನಾದಿಗಳು ದ್ರುಪದರಾಜನ ಪಟ್ಟಣವನ್ನು ಕುರಿತು ಯುದ್ಧಕ್ಕಾಗಿ ಹೊರಟುದು

ದುರ್ಯೋಧನಾದಿಗಳು ದ್ರುಪದನಗರದಿಂದ ಹೊರಟವರು ಹಸ್ತಿನಾವತಿಗೆ ಬಂದರು. ಪುನಃ ಮಂತ್ರಾಲೋಚನೆಯನ್ನು ಮಾಡಿದರು. ದ್ರುಪದರಾಜನನ್ನು ಸಂಹರಿಸಬೇಕೆಂದು ತೀರ್ಮಾನಿಸಿದರು. ಶಕುನಿ, ಕರ್ಣ, ಜಯದ್ರಥ, ಭೂರಿಶ್ರವಸ್ಸು, ರಥಗಳ ಮತ್ತು ಆನೆಗಳ ಸೈನ್ಯ ಮುಂತಾದವುಗಳಿಂದ ಸಹಿತರಾಗಿ ದ್ರುಪದರಾಜನ ಪಟ್ಟಣಕ್ಕೆ ಪುನಃ ಬಂದರು. ಪಟ್ಟಣದ ಮೇಲೆ ಬಾಣಗಳ ಮಳೆಯನ್ನು ಸುರಿಸುತ್ತಾ ಪಟ್ಟಣವನ್ನು ಲೂಟಿ ಮಾಡುತ್ತಾ ಬಂದರು. ಇದನ್ನು ತಿಳಿದ ದ್ರುಪದರಾಜನು ತನ್ನ ಮಕ್ಕಳುಗಳಿಂದಲೂ ಸೈನಿಕರುಗಳಿಂದಲೂ ಸಹಿತನಾಗಿ ಯುದ್ಧಕ್ಕೆ ಬಂದನು. ಅವನಿಗೂ ದುರ್ಯೋಧನಾದಿಗಳಿಗೂ ಘೋರವಾದ ಯುದ್ಧವು ನಡೆಯಿತು. ದ್ರುಪದರಾಜನ ಚಿತ್ರ ಚಿತ್ರಕೇತು ಎಂಬ ಎರಡು ಮಕ್ಕಳುಗಳು ಈ ಯುದ್ಧದಲ್ಲಿ ಕೊಲ್ಲಲ್ಪಟ್ಟರು. ಸೈನ್ಯಗಳೆಲ್ಲವೂ

ಓಡಿಸಲ್ಪಟ್ಟವು.

ಪಾಂಡವರು ಇದನ್ನೆಲ್ಲವನ್ನೂ ನೋಡಿದರು. ತಮ್ಮ ತಮ್ಮ ರಥಗಳಲ್ಲಿ ಕುಳಿತರು. ತಮ್ಮ ತಮ್ಮ ಧನುಸ್ಸುಗಳನ್ನು ಧರಿಸಿದರು. ಬಾಣಗಳಿಂದ ದುರ್ಯೋಧನಾದಿಗಳನ್ನು ಎದುರಿಸಿದರು. ಐವರು ಪಾಂಡವರು ಒಟ್ಟುಗೂಡಿ ಯುದ್ಧವನ್ನು ಮಾಡುತ್ತಿದ್ದರು. ಆಗ ಭೂರಿಶ್ರವಸ್ಸು ಎಂಬವನು ಕರ್ಣನಿಂದ ಸಹಿತನಾಗಿ ಅರ್ಜುನನ ರಥವನ್ನು ನಾಶಮಾಡಿದನು. ಅದನ್ನು ನೋಡಿದ ಶ್ರೀಭೀಮಸೇನದೇವರು ದೊಡ್ಡ ಮರವೊಂದನ್ನು ಕಿತ್ತರು. ಆ ಮರವನ್ನು ಎತ್ತಿಕೊಂಡು ಅತಿವೇಗದಿಂದ ಬರುತ್ತಿರುವ ಶ್ರೀಭೀಮಸೇನದೇವರನ್ನು ನೋಡಿದ ಕರ್ಣ, ದುರ್ಯೋಧನ ಮುಂತಾದವರು ಓಡಿಹೋಗಿ ಹಸ್ತಿನಾವತಿಯನ್ನು ಪ್ರವೇಶಿಸಿದರು.

ವಿದುರನು ಈ ವಿಷಯಗಳನ್ನೆಲ್ಲವನ್ನೂ ತಿಳಿದನು. ಧೃತರಾಷ್ಟ್ರನನ್ನು ನೋಡಿದನು. " ನಿನ್ನ ಮಕ್ಕಳೆಲ್ಲರೂ ದಿನೇ ದಿನೇ ವೃದ್ಧಿಯನ್ನು ಪಡೆಯುತ್ತಿದ್ದಾರೆ" ಎಂದನು. ನಿನ್ನ ತಮ್ಮನ ಮಕ್ಕಳಾದ ಪಾಂಡವರು ನಿನ್ನ ಮಕ್ಕಳಲ್ಲವೇ? ಅವರೆಲ್ಲರೂ ಪ್ರತಿದಿನದಲ್ಲಿಯೂ ವೃದ್ಧಿಯನ್ನು ಪಡೆಯುತ್ತಿದ್ದಾರೆ ಎಂಬ ಅಭಿಪ್ರಾಯದಿಂದ ವಿದುರನು ಹೀಗೆ ಹೇಳಿದನು.

ತನ್ನ ಮಕ್ಕಳಾದ ದುರ್ಯೋಧನಾದಿಗಳು ಪ್ರತಿದಿನದಲ್ಲಿಯೂ ವೃದ್ಧಿಯನ್ನು ಪಡೆಯುತ್ತಿರುವುದಾಗಿ ಧೃತರಾಷ್ಟ್ರನು ಈ ಮಾತುಗಳಿಗೆ ಅರ್ಥವನ್ನು ತಿಳಿದುಕೊಂಡು ಸಂತೋಷಿಸಿದನು. ದುರ್ಯೋಧನಾದಿಗಳು ದ್ರೌಪದಿಯನ್ನು ಪಡೆದರು ಎಂದು ಅರ್ಥವನ್ನು ಮಾಡಿಕೊಂಡು ಉತ್ತಮವಾದ ಆಭರಣಗಳನ್ನೂ ವಸ್ತ್ರಗಳನ್ನೂ ವಿದುರನಿಗೆ ದಾನ ಮಾಡಿದನು. ಅಷ್ಟರಲ್ಲಿ ವಿದುರನು "ಪಾರ್ಥಾಃ" ಅಂದರೆ " ನಿನ್ನ ಮಕ್ಕಳು ಪಾಂಡವರು" ಎಂದು ವಾಕ್ಯವನ್ನು ಪೂರ್ತಿ ಮಾಡಿದನು. ಅದನ್ನು ಕೇಳಿದ ಧೃತರಾಷ್ಟ್ರನಿಗೆ ವ್ಯಥೆಯು ಏರ್ಪಟ್ಟಿತು.

ಮುಖವು ಬದಲಾವಣೆಯಾಯಿತು. ಆದರೂ ಅದನ್ನು ಇನ್ನೊಬ್ಬರು ತಿಳಿದುಕೊಳ್ಳದಂತೆ ಮಾಡಬೇಕೆಂದು "ಹಾಗಾದರೆ ತುಂಬಾ ಸಂತೋಷ ಅವರೂ ಕುಂತಿಯೂ ಸಾಯಲಿಲ್ಲವೇ? ಅವರ ಎಲ್ಲಾ ವಿಚಾರಗಳನ್ನೂ ಹೇಳು" ಎಂದನು.

ವಿದುರನು ಧೃತರಾಷ್ಟ್ರನಿಗೆ ಹಿಡಿಂಬವಧ ಮುಂತಾದ ಎಲ್ಲಾ ವಿಷಯಗಳನ್ನೂ ತಿಳಿಸಿದನು. ಕೊನೆಗೆ ದ್ರುಪದನಗರದಲ್ಲಿ ದ್ರೌಪದೀ ಸ್ವಯಂವರ ಮುಂತಾದ ಎಲ್ಲಾ ವಿಷಯಗಳನ್ನೂ ತಿಳಿಸಿದನು. ಈ ಮಾತುಗಳನ್ನು ಕೇಳಿದ ಭೀಷ್ಮಾಚಾರ್ಯರು ಮುಂತಾದ ಸರ್ವರೂ ತುಂಬಾ ಸಂತುಷ್ಟರಾದರು.ಹೀಗೆಯೆ ಒಂದು ವರ್ಷವು ಕಳೆಯಿತು.

## ಪಾಂಡವರಿಗೆ ಸ್ವಾಗತ

ಪುನಃ ದುರ್ಯೋಧನಾದಿಗಳು ಮಂತ್ರಾಲೋಚನೆಯನ್ನು ಮಾಡಿದರು. ಯುದ್ಧಕ್ಕಾಗಿ ದ್ರುಪದನಗರಕ್ಕೆ ಹೊರಟರು. ಆಗ ವಿದುರನು ಧೃತರಾಷ್ಟ್ರ ಭೀಷ್ಮ ಮುಂತಾದವರನ್ನು ನೋಡಿದನು. " ಈ ಮಹಾಪಾಪಿಷ್ಠರಾದ ದುರ್ಯೋಧನಾದಿಗಳು ಪಾಂಡವರ ಜೊತೆಯಲ್ಲಿ ಯುದ್ಧಕ್ಕಾಗಿ ಹೋಗುತ್ತಿರುವರು. ಖಂಡಿತವಾಗಿ ಎಲ್ಲರೂ ಸಾಯುವರು. ಈ ವಿಷಯದಲ್ಲಿ ಸಂಶಯವು ಬೇಡ. ಭೀಮ ಮತ್ತು ಅರ್ಜುನನ್ನು ಸಹಿಸುವ ಶಕ್ತಿಯುಳ್ಳವನು

ಶ್ರೇಷ್ಠರಾದ ದೇವತೆಗಳಲ್ಲಿಯೂ ಇಲ್ಲ.

" ಅವರು ಬದುಕಿರುವ ವಿಷಯವನ್ನು ತಿಳಿದು ಒಂದು ವರ್ಷಕ್ಕಿಂತ ಅಧಿಕವಾಯಿತು. ಆದರೂ ಅವರ ವಿಷಯದಲ್ಲಿ ಔದಾಸೀನ್ಯವನ್ನು ವಹಿಸಿರುವಿ. ಇದು ತುಂಬಾ ಅಧರ್ಮ, ಅವರನ್ನು ಕರೆದುಕೊಂಡು ಬರುವುದಕ್ಕಾಗಿ ದೂತರನ್ನು ಕಳುಹಿಸು. ಸಮಾಧಾನ ಮಾತುಗಳನ್ನು ಹೇಳು. ಅವರಿಗೆ ಅರ್ಧರಾಜ್ಯವನ್ನು ಕೊಡು. ಹೀಗೆ ಮಾಡಿದರೆ ಕುಲವೃದ್ಧಿಯೂ ಧರ್ಮಾದಿಸರ್ವಪುರುಷಾರ್ಥಗಳೂ ಏರ್ಪಡುತ್ತವೆ. ಇಲ್ಲದಿದ್ದರೆ ಕುಲವನ್ನೂ ಧರ್ಮಾದಿಪುರುಷಾರ್ಥಗಳ ನಾಶವನ್ನೂ ಮಾಡಿದ ಅಪಕೀರ್ತಿಯು ನಿನಗೆ ಬರುತ್ತದೆ'' ಎಂದನು.

ಈ ಮಾತುಗಳನ್ನು ಭೀಷ್ಮರೂ, ದ್ರೋಣರೂ, ಕೃಪಾಚಾರ್ಯರೂ ಅನುಮೋದಿಸಿದರು. ಈ ಮಾತುಗಳನ್ನು ಕೇಳಿದ ಧೃತರಾಷ್ಟ್ರನು "ನೀನು ಬೇಗನೆ ಹೋಗು, ಅವರನ್ನು ಕರೆದುಕೊಂಡು ಬಾ'' ಎಂದನು.

ಕೂಡಲೇ ವಿದುರನು ವೇಗವಾಗಿ ಓಡುವ ರಥದಲ್ಲಿ ಕುಳಿತವನಾಗಿ ದ್ರುಪದರಾಜನ ಪಟ್ಟಣಕ್ಕೆ ಹೋದನು. ಅದೇ ಸಮಯದಲ್ಲಿ ಶ್ರೀಕೃಷ್ಣದೇವನೂ ಶ್ರೀವೇದವ್ಯಾಸದೇವರೂ, ಪಾಂಡವರನ್ನೂ ಕುಂತೀದೇವಿಯನ್ನೂ ದ್ರೌಪದಿಯನ್ನೂ ವಿದುರನನ್ನೂ ಕರೆದುಕೊಂಡವರಾಗಿ ಹಸ್ತಿನಾವತಿಗೆ ಬಂದರು. ಅವರೆಲ್ಲರೂ ಬಂದಕೂಡಲೇ ಹಸ್ತಿನಾವತಿಯಲ್ಲಿಯೂ ಕುರುರಾಜ್ಯದಲ್ಲಿಯೂ ಇರುವವರಿಗೆ ಸರ್ವರಿಗೂ ಬಹಳ ಸಂತೋಷವಾಯಿತು. ಭೀಷ್ಮಾದಿಗಳೆಲ್ಲರೂ ತುಂಬಾ ಸಂತುಷ್ಟರಾಗಿ ಸ್ವಾಗತಿಸಿದರು. ದೊಡ್ಡ ಉತ್ಸವವನ್ನು ನಡೆಯಿಸಿದರು. ಧೃತರಾಷ್ಟ್ರನ ಮನೆಯಲ್ಲಿ ಇಳಿಸಿದರು. ಧೃತರಾಷ್ಟ್ರನ ಪತ್ನಿಯಾಗಿರುವ ಗಾಂಧಾರಿಯು ದ್ರೌಪದಿಯನ್ನು ವಿಶೇಷವಾಗಿ ಗೌರವಿಸಿದಳು. ದುರ್ಯೋಧನನ ಪತ್ನಿಯಾದ ಭಾನುಮತಿಯೂ ವಿಶೇಷವಾಗಿ ಗೌರವಿಸಿದಳು. ಅವರೆಲ್ಲರೂ ಅಲ್ಲಿಯೇ ವಾಸಿಸಿದರು.

ಆಗ ಧೃತರಾಷ್ಟ್ರನು ತನ್ನ ಮಕ್ಕಳುಗಳ ದುರ್ಬುದ್ಧಿಯನ್ನು ತಿಳಿದನು. ದ್ರೌಪದೀದೇವಿಯಲ್ಲಿ ಅವರೆಲ್ಲರೂ ಮೋಹವನ್ನಿಟ್ಟಿದ್ದರು. ಇದರಿಂದ ಮುಂದೆ ಭೀಮಸೇವದೇವರಿಂದ ಬರಲಿರುವ ಆಪತ್ತುಗಳನ್ನು ತಿಳಿದನು. ತುಂಬಾ ಹೆದರಿದನು. ಕುಂತಿಯನ್ನು ನೋಡಿದನು. " ಎಲೈ ಕುಂತಿಯೇ, ನನ್ನ ಮಕ್ಕಳು ದುರ್ಬುದ್ಧಿಯುಳ್ಳವರು. ದ್ರೌಪದಿಯು ಮೂರು ಲೋಕಗಳಲ್ಲಿಯೂ ಸರ್ವರಿಂದಲೂ ಶ್ಲಾಘ್ಯವಾದ ಸೌಂದರ್ಯವುಳ್ಳವಳು. ನನ್ನ ಮನೆಯಲ್ಲಿ ನೀನು ಇದ್ದರೆ ಮುಂದೆ ಬರಲಿರುವ ಆಪತ್ತುಗಳಿಂದ ನಾನು ಹೆದರುತ್ತಿರುವೆನು. ಆದ್ದರಿಂದ ನೀನು ನಿನ್ನ ಸೊಸೆಯಿಂದಲೂ ಮಕ್ಕಳಿಂದಲೂ ಯುಕ್ತಳಾಗಿ ನಿನ್ನ ಮನೆಗೆ ಹೋಗು'' ಎಂದನು. ಅದರಂತೆಯೇ ಅವಳೂ ತನ್ನ ಸೊಸೆ ಮತ್ತು ಮಕ್ಕಳುಗಳೊಡನೆ ಪಾಂಡುರಾಜನು ವಾಸಿಸಿದನು ತನ್ನ ಮನೆಗೆ ಹೋದಳು. ಪಾಂಡುರಾಜನ ಮನೆಯಲ್ಲಿ ಅವರೆಲ್ಲರೂ ಐದು ವರ್ಷಗಳ ವರೆಗೆ ಎಲ್ಲಾ ಸುಖಸಾಧನಗಳನ್ನು ಅನುಭವಿಸುತ್ತಾ ಅತ್ಯಂತ ಸುಖದಿಂದ ವಾಸಿಸಿದರು.

## ದ್ರೌಪದೀದೇವಿಯು ಪ್ರತಿದಿನದಲ್ಲಿಯೂ ಕನ್ಯೆಯಾಗುತ್ತಿದ್ದಳು

ದ್ರೌಪದೀದೇವಿಯ ದೇಹದಲ್ಲಿ ಐವರು ಸ್ತ್ರೀಯರು ಇರುವರೆಂದು ಪೂರ್ವದಲ್ಲಿ ಹೇಳಿರುವೆವು. ಆ ಐವರಲ್ಲಿ ಪಾರ್ವತೀದೇವಿಗೆ ಆ ಜನ್ಮದಲ್ಲಿ ತನ್ನ ಪತಿಯಾದ ರುದ್ರದೇವನ ಸಂಗವಿಲ್ಲವೆಂದೂ ರುದ್ರದೇವನಿಗೂ

ದ್ರೌಪದೀದೇವಿಯ ಸಂಗವಿಲ್ಲವೆಂದೂ ಬ್ರಹ್ಮದೇವರು ಶಾಪವನ್ನು ಕೊಟ್ಟಿರುವುದಾಗಿ ಹೇಳಿರುವೆವು. ಉಳಿದ ನಾಲ್ವರಿಗೆ ಧರ್ಮರಾಜ ಮುಂತಾದ ಐವರ ಸಂಬಂಧವು ಏರ್ಪಡುವುದಾಗಿ ತಿಳಿಯುತ್ತದೆ. ಇದರಿಂದ ತಮ್ಮ ತಮ್ಮ ಪತಿಗಳ ಸಂಬಂಧವೂ ಇತರ ಪತಿಗಳ ಸಂಬಂಧವೂ ಇತರ ನಾಲ್ವರ ಸಂಬಂಧವೂ ಏರ್ಪಟ್ಟದ್ದರಿಂದ ಆ ಸ್ತ್ರೀಯರಿಗೆ ವ್ಯಭೀಚಾರದೋಷವೂ ಅವರವರ ಪತಿಗಳಿಗೆ ತಮ್ಮ ತಮ್ಮ ಪತ್ನಿಯರ ಸಂಬಂಧವೂ ಉಳಿದ ನಾಲ್ವರ ಪತ್ನಿಯರ ಸಂಬಂಧವು ಏರ್ಪಟ್ಟದ್ದರಿಂದ ಪರಪತ್ನಿಯರ ಸಂಗದಿಂದ ದೋಷವೂ ಬರುವುದಿಲ್ಲವೇ? ಎಂಬ ಶಂಕೆಯು ಬರುತ್ತದೆ. ಆ ಶಂಕೆಯನ್ನು ಈಗ ಪರಿಹರಿಸುವೆವು.

ದೇಹದಲ್ಲಿ ಪಿಶಾಚವು ಪ್ರವೇಶಿಸಿದ ಕೂಡಲೇ ಆ ದೇಹದಲ್ಲಿದ್ದ ಜೀವನಿಗೆ ಯಾವುದೂ ತಿಳಿಯುವುದಿಲ್ಲ. ಪಿಶಾಚದ ಸ್ವಭಾವ ಮತ್ತು ಗುಣಗಳು ಬರುತ್ತವೆ. ಆ ಜೀವನಿಗೆ ತನ್ನ ದೇಹದಲ್ಲಿ ಅಭಿಮಾನವು ಇರುವುದಿಲ್ಲ. ಪಿಶಾಚಕ್ಕೆ ಆ ದೇಹದಲ್ಲಿ ಅಭಿಮಾನವು ಏರ್ಪಡುತ್ತದೆ. ಪಿಶಾಚವು ಆ ದೇಹವನ್ನು ಬಿಟ್ಟು ಹೋದ ಕೂಡಲೇ ಆ ದೇಹದಲ್ಲಿರುವ ಜೀವನಿಗೆ ದೇಹಾಭಿಮಾನವು ಏರ್ಪಡುತ್ತದೆ. ಆ ಜೀವನ ಸ್ವಭಾವಕ್ಕೆ ಯೋಗ್ಯವಾದ ಸ್ವಭಾವ ಮತ್ತು ಗುಣಗಳು ಬರುತ್ತವೆ. ಪಿಶಾಚಕ್ಕೆ ಯೋಗ್ಯವಾದ ಸ್ವಭಾವ ಮತ್ತು ಗುಣಗಳು ಹೋಗುತ್ತವೆ.

ಇದರಿಂದ ಅನೇಕ ಜೀವರು ಒಂದೇ ದೇಹದಲ್ಲಿ ಇರಬಹುದು. ಅವರಲ್ಲಿ ಯಾವ ಜೀವನ ಅಭಿಮಾನವು ಆ ದೇಹದಲ್ಲಿ ಯಾವಾಗ ಏರ್ಪಡುತ್ತದೆಯೋ ಆಗ ಅವನಿಗೆ ಆ ದೇಹದಲ್ಲಿ ಏರ್ಪಡುತ್ತಿರುವ ಎಲ್ಲಾ ವ್ಯಾಪಾರಗಳೂ ತಿಳಿಯುತ್ತಿರುವುದರಿಂದ ಆಗ ಆ ಜೀವನಿಗೆ ಜನ್ಮವೆಂದೂ ಉಳಿದ ಜೀವರಿಗೆ ಯಾವ ವ್ಯಾಪಾರವೂ ತಿಳಿಯದಿರುವುದರಿಂದ ನಾಶವೆಂದೂ ಹೇಳಬಹುದು.

ದ್ರೌಪದೀದೇವಿಯ ದೇಹದಲ್ಲಿರುವ ಐವರು ಸ್ತ್ರೀಯರ ಮಧ್ಯದಲ್ಲಿರುವ ಪಾರ್ವತೀದೇವಿಯು ಬ್ರಹ್ಮದೇವರ ಶಾಪದಿಂದ ಆ ದೇಹದಲ್ಲಿ ಯಾವಾಗಲೂ ಅಭಿಮಾನದಿಂದ ಯುಕ್ತಳಾಗುವುದಿಲ್ಲ. ಆದ್ದರಿಂದ ಅವಳಿಗೆ ಧರ್ಮರಾಜ ಮುಂತಾದ ಐವರ ಸಂಗದಿಂದ ವ್ಯಭೀಚಾರದೋಷವಿಲ್ಲ. ಆ ಐವರಿಗೂ ಪಾರ್ವತೀಸಂಗದಿಂದ ಪರಪತ್ನಿ ಸಂಗ ಎಂಬ ದೋಷವಿಲ್ಲ.

ದ್ರೌಪದಿದೇವಿಯ ದೇಹದಲ್ಲಿರುವ ಶ್ಯಾಮಲಾದೇವಿಗೆ ಧರ್ಮರಾಜನೊಡನೆ ಸಂಗವು ಏರ್ಪಡುವಾಗ ದೇಹಾಭಿಮಾನವು ಹುಟ್ಟುತ್ತದೆ. ಆದ್ದರಿಂದ ಆಗ ಜನ್ಮವೆಂದು ತಿಳಿಯಬೇಕು. ಅರ್ಜುನ ಮುಂತಾದವರ ಸಂಗಕಾಲದಲ್ಲಿ ಧರ್ಮರಾಜನ ವಿಷಯದಲ್ಲಿ ದೇಹಾಭಿಮಾನವು ಹೋಗುತ್ತದೆ. ಶ್ಯಾಮಲಾದೇವಿಗೆ ಆಗ ನಾಶವೆಂದು ತಿಳಿಯಬೇಕು. ಹೀಗೆ ಧರ್ಮರಾಜನೊಡನೆ ಸಂಗವನ್ನು ಆರಂಭಿಸುವಾಗ ಶ್ಯಾಮಲಾದೇವಿಗೆ ಜನ್ಮವೆಂದೂ ಧರ್ಮರಾಜನೊಡನೆ ಸಂಗವನ್ನು ಮುಗಿಸಿ ಇನ್ನೊಬ್ಬನೊಡನೆ ಸಂಗವನ್ನು ಆರಂಭಿಸುವಾಗ ಅದೇ ಶ್ಯಾಮಲಾದೇವಿಗೆ ನಾಶವೆಂದು ತಿಳಿಯಬೇಕು.

ಹೀಗೆ ಶ್ಯಾಮಲಾ, ಶಚೀ, ಉಷಾ ಎಂಬ ಮೂವರಿಗೆ ತಮ್ಮ ತಮ್ಮ ಪತಿಗಳ ಸಂಗಕಾಲದಲ್ಲಿ ಜನ್ಮವೆಂದೂ ಇತರ ಪುರುಷರ ಸಂಗಕಾಲದಲ್ಲಿ ನಾಶವೆಂದೂ ತಿಳಿಯಬೇಕು. ಆದ್ದರಿಂದ ಪ್ರತಿದಿನದಲ್ಲಿಯೂ ಹುಟ್ಟುತ್ತಲೂ ನಶಿಸುತ್ತಲೂ ಇರುವ ದ್ರೌಪದೀದೇವಿಯು ಯಾವಾಗಲೂ ಕನ್ಯೆಯೆಂದೆನಿಸುವಳು.

ದ್ರೌಪದಿದೇವಿಯ ದೇಹದಲ್ಲಿರುವ ಭಾರತೀದೇವಿಯರು ವಾಯುದೇವರ ವಿಷಯದಲ್ಲಿ ಯಾವಾಗಲೂ ಆ ದೇಹದಲ್ಲಿ ಅಭಿಮಾನವನ್ನು ಇಟ್ಟುಕೊಂಡಿರುತ್ತಾರೆ. ಅವರಿಗೆ ಹುಟ್ಟಿದ ಕಾಲದಲ್ಲಿ ಏರ್ಪಟ್ಟ ದೇಹಾಭಿಮಾನವು ಕೊನೆಯ ವರೆಗೂ ಹಾಗೆಯೇ ಇದ್ದೇ ಇರುತ್ತದೆ. ಪ್ರತಿದಿನದಲ್ಲಿ ಆ ಅಭಿಮಾನವು ಹುಟ್ಟುವುದೂ ಇಲ್ಲ ನಶಿಸುವುದೂ ಇಲ್ಲ.

ಧರ್ಮರಾಜ, ಅರ್ಜುನ, ನಕುಲ, ಸಹದೇವ ಎಂಬ ನಾಲ್ವರಲ್ಲಿ ಅಂತರ್ಗತರಾಗಿಯೂ ಭೀಮಸೇನ ಎಂಬ ಪ್ರತ್ಯೇಕ ರೂಪದಿಂದಲೂ ಯುಕ್ತರಾಗಿರುವ ವಾಯುದೇವರೊಡನೆ ಯಾವಾಗಲೂ ಭಾರತೀದೇವಿಯು ವಿಹರಿಸುತ್ತಿರುವಳು. ಅವಳಿಗೆ ಯಾವಾಗಲೂ ಪತಿಯ ಸಂಬಂಧವೇ ಏರ್ಪಟ್ಟಿದ್ದರಿಂದಲೂ ಇರತ ಪರಪುರುಷರ ಸಂಬಂಧವೇ ಏರ್ಪಡದಿರುವುದರಿಂದಲೂ ವ್ಯಭಿಚಾರ ದೋಷವಿಲ್ಲ. ಭೀಮಸೇನದೇವರಿಗೂ ತಮ್ಮ ಪತ್ನಿಯ ಸಂಗವೇ ಏರ್ಪಟ್ಟದ್ದರಿಂದಲೂ ಇತರರ ಪತ್ನಿಯರ ಸಂಗವು ಏರ್ಪಡದಿರುವುದರಿಂದಲೂ ಪರಪತ್ನಿ ಸಂಗದೋಷವು ಏರ್ಪಡಲಿಲ್ಲ.

# ಧರ್ಮರಾಜ ಮುಂತಾದವರೊಡನೆ ರಮಿಸುವಾಗ ದ್ರೌಪದಿಯು ಪೂರ್ವದೇಹವನ್ನು ಬಿಟ್ಟು ಬೇರೆ ದೇಹವನ್ನೇ ಸ್ವೀಕರಿಸುವಳು

ಧರ್ಮರಾಜನೊಡನೆ ರಮಿಸುತ್ತಿದ್ದ ದ್ರೌಪದಿಯು ಮರುದಿನದಲ್ಲಿ ಅರ್ಜುನನೊಡನೆ ರಮಿಸುವ ಸಂದರ್ಭದಲ್ಲಿ ಅವಳಿಗೆ ಬೇರೆ ದೇಹವು ಬರುವುದಾಗಿಯೂ ಪ್ರತಿದಿನದಲ್ಲಿಯೂ ಕನ್ಯೆಯೆಂದೂ ಹೇಳಿದಿರಿ. ಅವಳಿಗೆ ಧರ್ಮರಾಜನೊಡನೆ ರಮಿಸಿದ ದೇಹವೇ ಅರ್ಜುನನೊಡನೆ ರಮಿಸುವಾಗಲೂ ಇರುವುದರಿಂದ ವ್ಯಭಿಚಾರದೋಷವೂ ಧರ್ಮರಾಜಾದಿಗಳಿಗೆ ಪರಸ್ತ್ರೀಸಂಗ ದೋಷವೂ ಬರುವುದಿಲ್ಲವೇ? ಎಂದು ಪ್ರಶ್ನಿಸಿದೆವು. ಅದೇ ದೇಹವೇ ಇಬ್ಬರು ರಮಿಸುವಾಗಲೂ ಇದ್ದರೂ ಧರ್ಮರಾಜನು ರಮಿಸುವಾಗ ಇದ್ದ ದೇಹಾಭಿಮಾನವು ಸಂಪೂರ್ಣವಾಗಿ ಹೋಗುತ್ತದೆ. ಅರ್ಜುನನು ರಮಿಸುವಾಗ ಹೊಸದಾಗಿ ದೇಹಾಭಿಮಾನವು ಹುಟ್ಟುತ್ತದೆ. ದೇಹಭಿಮಾನವು ಹೋದಾಗ ಅವಳಿಗೆ ಮರಣವೆಂದೂ, ದೇಹಾಭಿಮಾನವು ಹುಟ್ಟುವಾಗ ಜನ್ಮವೆಂದೂ, ಇದು ಒಂದೇ ದೇಹದಲ್ಲಿದ್ದರೂ ಸಂಭವಿಸಬಹುದೆಂದೂ, ಆದ್ದರಿಂದಲೇ ದ್ರೌಪದಿಯು ಪ್ರತಿದಿನದಲ್ಲಿಯೂ ಹುಟ್ಟುತ್ತಲೂ ಸಾಯುತ್ತಲೂ ಇರುವಳೆಂದೂ ಆದ್ದರಿಂದಲೂ ಅವಳು ಯಾವಾಗಲೂ ಕನ್ಯೆಯೆಂದೂ ಉತ್ತರಿಸಿದಿರಿ ಇದು ತುಂಬಾ ಆಶ್ಚರ್ಯಕರವಾಗಿದೆ.

ದೇಹವು ಒಂದೇ ಇದ್ದು ದೇಹಾಭಿಮಾನದ ಉತ್ಪತ್ತಿ ಮತ್ತು ನಾಶಗಳಿಂದ ಜನನ ಮತ್ತು ಮರಣಗಳು ಏರ್ಪಡುವುದು ಎಲ್ಲಿಯೂ ಕಂಡಿಲ್ಲ. ಹಾಗೆ ಒಪ್ಪಿದರೆ ಒಬ್ಬೊಬ್ಬ ಸ್ತ್ರೀಯರಿಗೂ ಅನೇಕ ಗಂಡಂದಿರು ಏರ್ಪಡಬಹುದಲ್ಲವೇ? ಒಬ್ಬ ಗಂಡನ ಹೆಂಡತಿಯು ತಾನೆಂದು ತಿಳಿದಾಗ ಅವನ ಪತ್ನಿಯಾಗಿ ಹುಟ್ಟುವುದೂ ಇನ್ನೊಬ್ಬ ಗಂಡನ ಪತ್ನಿಯು ತಾನೆಂದು ತಿಳಿದಾಗ ಹಿಂದಿನ ಪತಿಯ ಪತ್ನಿಯ ದೇಹದ ವಿಯೋಗವೂ ಹೊಸಗಂಡನ ಪತ್ನಿಯ ದೇಹದ ಲಾಭವೂ ಆದ್ದರಿಂದಲೇ ಪ್ರತಿದಿನದಲ್ಲಿಯೂ ಅವಳಿಗೆ ಜನನ ಮರಣಗಳು ಏರ್ಪಡುತ್ತದೆಯೆಂದೂ ಆದ್ದರಿಂದಲೇ ಅವಳು ನಿತ್ಯಕನ್ಯೆಯೆಂದೂ ಹೇಳಬಹುದಲ್ಲವೇ? ಎಂದರೆ.

ಈ ಪ್ರಶ್ನೆಗೆ ಉತ್ತರವನ್ನು ಕೊಡುವೆವು. ದೇವರಿಗೂ ಬ್ರಾಹ್ಮಣರಿಗೂ ನೈವೇದ್ಯ ಸಮರ್ಪಣೆಯನ್ನು ನಾವು ಮಾಡುವೆವು. ದೇವರು ನಮ್ಮಂತೆ ಊಟವನ್ನು ಮಾಡುವುದಿಲ್ಲ. ಕಣ್ಣುಗಳಿಂದ ನೋಡುವನು. ಸಮರ್ಪಿಸುವವನು ಭಕ್ತಿ ಮುಂತಾದ ಗುಣಗಳಿಂದ ಯುಕ್ತನಾಗಿದ್ದರೆ ಕಣ್ಣುಗಳ ನೋಟದಿಂದಲೇ ಸ್ವೀಕರಿಸುವನು. ಇಲ್ಲದಿದ್ದರೆ ಇಲ್ಲ. ಅವನು ಸ್ವೀಕರಿಸಿದರೂ ಸ್ವೀಕರಿಸದಿದ್ದರೂ ನಮಗೆ ತಿಳಿಯುವುದಿಲ್ಲ. ಸಮರ್ಪಿಸಿದ ವಸ್ತುಗಳಲ್ಲಿ ಒಂದು ವಸ್ತುವೂ ಕಡಿಮೆಯಾಗುವುದಿಲ್ಲ. ಬ್ರಾಹ್ಮಣರ ಭೋಜನವು ಹಾಗಲ್ಲ. ಬೇಕಾದ ವಸ್ತುಗಳನ್ನು ಸ್ವೀಕರಿಸುತ್ತಾರೆ. ಬೇಡದ ವಸ್ತುಗಳನ್ನು ಬಿಡುತ್ತಾರೆ. ಅವರು ತಿಂದುಳಿದ ವಸ್ತುಗಳಲ್ಲಿ ಹೆಚ್ಚುಕಡಿಮೆಯಾಗುತ್ತಿರುವುದು ನಮಗೆ ಪ್ರತ್ಯಕ್ಷಸಿದ್ಧವಾಗುತ್ತದೆ. ಆದ್ದರಿಂದ ದೇವತೆಗಳ ಮತ್ತು ಮನುಷ್ಯರ ಭೋಜನವು ಬೇರೆ ವಿಧವೆಂದು ನಾವು ತಿಳಿದಿರುತ್ತೇವೆ.

ಇದರಂತೆ ದ್ರೌಪದೀದೇವಿಯು ದೇವತಾಸ್ತ್ರೀಯು, ಪಂಚಪಾಂಡವರೂ ದೇವತೆಗಳು, ಮನುಷ್ಯರಲ್ಲ. ಮನುಷ್ಯರಲ್ಲಿ ಒಂದು ದೇಹವನ್ನು ಬಿಡುವುದು ಮರಣವೆಂದೂ ಇನ್ನೊಂದು ದೇಹವನ್ನು ಸ್ವೀಕರಿಸುವುದು ಜನ್ಮವೆಂದು ಹೇಳಲ್ಪಡುತ್ತದೆ. ದೇವತೆಗಳಲ್ಲಿ ಹಾಗಲ್ಲ. ಒಂದೇ ದೇಹದಲ್ಲಿದ್ದರೂ ಆ ದೇಹದಲ್ಲಿ ನಾನು ಶ್ಯಾಮಲಾದೇವಿ ಎಂಬ ಅಭಿಮಾನವು ಏರ್ಪಟ್ಟಾಗ ಶ್ಯಾಮಲಾದೇವಿಯ ಜನನವೆಂದೂ ಆ ಅಭಿಮಾನವು ಸಂಪೂರ್ಣವಾಗಿ ಬಿಟ್ಟು ಹೋಗುವಾಗ ಶ್ಯಾಮಲಾದೇವಿಯ ಮರಣವೆಂದೂ ತಿಳಿಯಬೇಕು. ಹೀಗೆಯೇ ಶಚೀ ಮತ್ತು ಉಷಾದೇವಿಯರ ಜನನ ಮತ್ತು ಮರಣಗಳೆಂದೂ ತಿಳಯಬೇಕು. ಆದ್ದರಿಂದ ಹಿಂದೆ ಹೇಳಿದಂತೆ ದ್ರೌಪದೀದೇವಿಯು ನಿತ್ಯದಲ್ಲಿಯೂ ಕನ್ಯೆಯಾಗಿರುವ ವಿಷಯದಲ್ಲಿ ಯಾವ ಬಾಧಕವೂ ಇಲ್ಲ.

ಧರ್ಮರಾಜನೊಡನೆ ವಿಹರಿಸುತ್ತಿದ್ದ ಶ್ಯಾಮಲಾದೇವಿಗೆ ದೇಹಾಭಿಮಾನನಾಶವೇ ಮರಣವೆಂದೂ ಅರ್ಜುನನೊಡನೆ ವಿಹರಿಸುವುದಕ್ಕೆ ಆರಂಭಿಸುವಾಗ ಶಚೀದೇವಿಗೆ ದೇಹಾಭಿಮಾನದ ಉತ್ಪತ್ತಿಯೇ ಜನನವೆಂದೂ ಹೇಳಿದಿರಿ. ದೇಹಾಭಿಮಾನನಾಶವೆಂದರೇನು? ಗಾಢನಿದ್ರೆಯ ಕಾಲದಲ್ಲಿಯೂ ಮೂರ್ಛಾವಸ್ಥೆಯಲ್ಲಿಯೂ ಪಿಶಾಚಾದಿಗಳ ಆವೇಶ ಕಾಲದಲ್ಲಿಯೂ ಜೀವನಿಗೆ ದೇಹಾಭಿಮಾನವಿರುವುದಿಲ್ಲ. ಅದರಂತೆಯೋ ಎಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಉತ್ತರವನ್ನು ಕೊಡುವೆವು.

ಈ ವಿಷಯವು ಮಹಾಭಾರತದಲ್ಲಿ "ಇದಂ ಚ ತತ್ರಾದ್ಭುತಮುತ್ತಮಂ ತದ್ ದಧಾತಿ ಕೃಷ್ಣಾ ವಪುಷಾಽತಿಮಾನುಷಂ । ಮಹಾನುಭಾವಾ ಕಿಲ ಸಾಧುಮಧ್ಯಮಾ ಬಭೂವ ಕನ್ಯೈವ ಗತೇ ಗತೇಽಹನಿ" ಈ ಶ್ಲೋಕದಲ್ಲಿ " ಮಹಾನುಭಾವಾ ಕೃಷ್ಣಾ" ಮಹಾನುಭಾವವುಳ್ಳ ದ್ರೌಪದಿಯು " ಅತಿಮಾನುಷಂ" ಮನುಷ್ಯರಿಗೆ ಯೋಗ್ಯವಲ್ಲದಿರುವ "ಉತ್ತಮಂ" ಅತ್ಯುತ್ತಮವಾಗಿರುವ "ಅದ್ಭುತಂ" ಅತ್ಯಾಶ್ಚರ್ಯಕರವಾಗಿರುವ "ಕರ್ಮ" ವ್ಯಾಪಾರವನ್ನು "ದಧಾತಿ" ಒಂದೇ ದೇಹದಲ್ಲಿ ಮಾಡುತ್ತಿರುವಳು. ಅದನ್ನು ಈಗ ಹೇಳುವೆವು.

"ಅಹನಿ" ಧರ್ಮರಾಜಾದಿಗಳಲ್ಲಿ ಒಬ್ಬೊಬ್ಬ ಪತಿಯು ಕ್ರೀಡಿಸಿದ ದಿನವು "ಗತೇ ಗತೇ ಸತಿ" ಕಳೆದು ಹೋದಕೂಡಲೇ "ಮಧ್ಯಮಾ" ಮಧ್ಯದಲ್ಲಿರುವ ದ್ರೌಪದಿಯು ಶ್ಯಾಮಲಾ ಮುಂತಾದ ಮೂವರು ಸ್ತ್ರೀಯರ ಪಾತಿವ್ರತ್ಯವನ್ನು ರಕ್ಷಿಸುವುದಕ್ಕಾಗಿ " ಕನ್ಯೈವ ಬಭೂವ" ದೇಹಾಭಿಮಾನ ಎಂಬ ಜನ್ಮದಿಂದ ಸಹಿತಳಾಗಿ ಕನ್ಯೆಯೇ ಆಗಿ ಹುಟ್ಟುವಳು ಎಂದು ಹೇಳಿರುತ್ತದೆ.

ದ್ರೌಪದಿಯಲ್ಲಿ ಮನುಷ್ಯರಲ್ಲಿ ಇಲ್ಲದಿರುವ ಉತ್ತಮಶಕ್ತಿಯಿದೆ. ಒಬ್ಬಳಿಗೆ ಐದು ಪುರುಷರ ಸಂಗದಿಂದ ಏರ್ಪಟ್ಟಿರುವ ದೋಷವನ್ನು ಪರಿಹರಿಸುವ ಅದ್ಭುತ ಶಕ್ತಿಯಿದೆ. ಒಬ್ಬಳಿಗೆ ಪಂಚಸ್ತ್ರೀರೂಪತ್ವವಿದೆ. ಅಲ್ಲಿಯೂ ತಮ್ಮ ತಮ್ಮ ಪತಿಯೊಡನೆ ಸಂಗಕಾಲದಲ್ಲಿ ಹೊಸ ಜನ್ಮವು ಏರ್ಪಡುವುದರಿಂದ ಹೊಸ ಹೊಸ ಕನ್ಯಾತ್ವವಿದೆ. ಪ್ರತಿದಿನದಲ್ಲಿಯೂ ಕನ್ಯಾತ್ವವಿರುವುದರಿಂದ ತಮ್ಮ ತಮ್ಮ ಪತಿಗಳೊಡನೆ ಗಾಂಧರ್ವವಿವಾಹವಿದೆ. ಗಾಂಧರ್ವವಿವಾಹದಿಂದ ತಮ್ಮ ತಮ್ಮ ಪತಿಯೊಡನೆಯೇ ಕ್ರೀಡೆಯು ಏರ್ಪಡುತ್ತಿರುತ್ತದೆ. ಮರುದಿನದಲ್ಲಿ ಅನ್ಯಪುರುಷರೊಡನೆ ಕ್ರೀಡೆಯು ಏರ್ಪಡುತ್ತಿರುವ ಕಾಲದಲ್ಲಿ ದೇಹಾಭಿಮಾನವು ನಷ್ಟವಾದುದರಿಂದ ಪರಪುರುಷನೊಡನೆ ಕ್ರೀಡಿಸುತ್ತಿದ್ದರೂ ಆ ಕ್ರೀಡೆಯ ಅನುಭವವು ಮೊದಲಿನವಳಿಗೆ ಆಗದಿರುವಿಕೆ ಮುಂತಾದ ಪರಮ ರಹಸ್ಯಾರ್ಥಗಳು ಈ ಶ್ಲೋಕದಿಂದ ತಿಳಿಯುತ್ತಿವೆ.

ಪಾಂಡವರು ನಿತ್ಯ ಕನ್ಯೆಯಾಗಿರುವ ದ್ರೌಪದೀ ದೇವಿಯರೊಡನೆ ಮೇಲ್ಕಂಡ ವ್ಯವಸ್ಥೆಯಿಂದ ಕ್ರೀಡಿಸುತ್ತಾ ಸುಖವಾಗಿ ವಾಸಿಸಿದರು. ಆಗ ಶ್ರೀವೇದವ್ಯಾಸರು ಮತ್ತು ಶ್ರೀಕೃಷ್ಣದೇವನು ಪಾಂಡವರಲ್ಲಿ ಪರಮ ಪ್ರೇಮದಿಂದ ಹಸ್ತಿನಾವತಿಯಲ್ಲಿಯೇ ವಾಸಿಸಿದರು. ವೇದಪುರಾಣಗಳಿಗೆ ಸಂಬಂಧಿಸಿದ ಸತ್ಕಥೆಗಳನ್ನು ಹೇಳುತ್ತಾ ಪಾಂಡವರನ್ನು ಸಂತೋಷಪಡಿಸಿದರು.

## ಕಾಶೀರಾಜಸುತಾಸ್ವಯಂವರ

ಹಿಂದೆ ಪಾಂಡವರು ಅರಗಿನ ಮನೆಯಿಂದ ತಪ್ಪಿಸಿಕೊಂಡು ಕಾಡಿನಲ್ಲಿ ಸಂಚರಿಸುತ್ತಿರುವಾಗ ಕಾಶೀರಾಜನ ಮಗಳಿಗೆ ಸ್ವಯಂವರವು ನಡೆಯಿತು. ಆಗ ಜರಾಸಂಧನು ಆ ಸಭೆಯಲ್ಲಿರುವ ರಾಜರುಗಳ ಮಧ್ಯದಲ್ಲಿ ಮೊದಲಾಗಿ ಪರಿಗಣಿಸಲ್ಪಟ್ಟನು. ಇದನ್ನು ಕೇಳಿದ ದುರ್ಯೋಧನನಿಗೆ ತುಂಬಾ ಕೋಪವು ಬಂತು. ತಾನು ಮಹಾಬಲಿಷ್ಠನೆಂಬ ಕೊಬ್ಬಿನಿಂದ ಬಲಾತ್ಕಾರದಿಂದ ಆ ಕನ್ಯೆಯನ್ನು ಅಪಹರಿಸಿದನು. ಆಗ ಎಲ್ಲಾ ರಾಜರುಗಳೂ ಯುದ್ಧಕ್ಕಾಗಿ ಬಂದರು. ಕರ್ಣನಿಂದಲೂ ತನ್ನ ತಮ್ಮಂದಿರಿಂದಲೂ ಸಹಿತನಾದ ದುರ್ಯೋಧನನಿಂದ ಪರಾಜಿತರಾದರು. ಪುನಃ ಎಲ್ಲಾ ರಾಜರುಗಳೂ ಧನುಸ್ಸುಗಳನ್ನು ಕೈಯಲ್ಲಿ ಧರಿಸಿದವರಾಗಿ ಯುದ್ಧಕ್ಕಾಗಿ ಬಂದರು. ಆಗ ದುರ್ಯೋಧನನನ್ನು ನೋಡಿ ಕರ್ಣನು ಹೇಳಿದನು.

"ಎಲೋ ದುರ್ಯೋಧನ, ನೀನು ನಿನ್ನ ತಮ್ಮಂದಿರಿಂದ ಸಹಿತನಾಗಿ ಹಸ್ತಿನಾವತಿಗೆ ಹೋಗು. ಅಲ್ಲಿ ದ್ರೋಣರು, ಭೀಷ್ಮರು ಮುಂತಾದವರು ಇರುವರು. ಅವರೆಲ್ಲರಿಂದ ಸಹಿತನಾದ ನಿನ್ನನ್ನು ಎದುರಿಸಲು ಈ ರಾಜರುಗಳು ಶಕ್ತರಾಗಲಾರರು. ನೀನು ಪಟ್ಟಣಕ್ಕೆ ಹೋದರೆ ಪಟ್ಟಣದ ಸುತ್ತಲೂ ಕಂದುಕಗಳೂ ಕೋಟೆಗಳೂ ಇರುವುದರಿಂದ ಅವುಗಳ ಮಧ್ಯದಲ್ಲಿ ಸುರಕ್ಷಿತನಾಗಿರುವ ನಿನ್ನನ್ನು ಜಯಿಸುವುದು ನಂಬಿಕೆಯಿಲ್ಲ. ಸೊತರೂ ಸೋಲಬಹುದು. ಆದ್ದರಿಂದ ಜರಾಸಂಧನು ಅಲ್ಲಿಗೆ ಯುದ್ಧಕ್ಕೆ ಬರಲಾರನು. ಅಲ್ಲಿಗೆ ಬಂದರೂ ಅಶ್ವತ್ಥಾಮರು ಅಲ್ಲಿರುವರು. ಅವರು ನಿನ್ನ ಸಹಾಯಕ್ಕಾಗಿ ಯುದ್ಧಕ್ಕೆ ಬರುವರು. ಅವರು ರುದ್ರದೇವನ ಅವತಾರ ಎಂಬ ಸಮಾಚಾರವನ್ನು ಜರಾಸಂಧನು ತಿಳಿದಿರುವನು. ರುದ್ರದೇವನ ಅತ್ಯಂತ ಭಕ್ತನಾದ ಜರಾಸಂಧನು ಅಶ್ವತ್ಥಾಮಾಚಾರ್ಯರೊಡನೆ ಯುದ್ಧವನ್ನು ಮಾಡಬೇಕಾದ ಸಂದರ್ಭವು ಬಂದೀತೆಂದು ತಿಳಿದು ಖಂಡಿತವಾಗಿಯೂ ಅಲ್ಲಿಗೆ ಬರುವುದಿಲ್ಲ."

"ನಾನೊಬ್ಬನೇ ಇವರೊಡನೆ ಯುದ್ಧವನ್ನು ಮಾಡುವೆನು. ಇವರೆಲ್ಲರೂ ಒಟ್ಟುಗೂಡಿ ನನ್ನನ್ನು ಸೋಲಿಸಿದರೂ ನಿನಗೆ ಅಪಕೀರ್ತಿಯು ಬರಲಾರದು. ನಿನ್ನ ತಮ್ಮಂದಿರಲ್ಲಿ ಒಬ್ಬನನ್ನು ತಮ್ಮ ಪೌರುಷದಿಂದ ಇವರೆಲ್ಲರೂ ಒಟ್ಟುಗೂಡಿ ಹಿಡಿದರೋ ನಿನ್ನ ಕೀರ್ತಿಯು ನಶಿಸುತ್ತದೆ. ಆದ್ದರಿಂದ ಬೇಗನೆ ಹೊರಡು."

" ಈಗ ಇಲ್ಲಿ ಯುದ್ಧವನ್ನು ಮಾಡುತ್ತಿರುವ ಜರಾಸಂಧನ ಪ್ರತಾಪವನ್ನು ಹೇಳುವೆನು. ಭೀಷ್ಮ ದ್ರೋಣ ಮುಂತಾದ ಮಹಾವೀರರು ಇವನ ಜೊತೆಯಲ್ಲಿ ಯುದ್ಧವನ್ನು ಮಾಡಲು ಶಕ್ತರಲ್ಲ. ಆದ್ದರಿಂದಲೇ ಮಹಾವೀರನಾಗಿರುವ ಬಾಹ್ಲೀಕಮಹಾರಾಜನು ಇವನ ಸೇವಕನಾದನು. ಭೀಷ್ಮರು ರಾಜನಲ್ಲ ಎಂದು ತಿಳಿದವನಾಗಿ ಅವರ ಜೊತೆಯಲ್ಲಿ ಇಷ್ಟರ ವರೆಗೆ ಈ ಜರಾಸಂಧನು ಯುದ್ಧವನ್ನು ಮಾಡಲಿಲ್ಲ. ಆದ್ದರಿಂದ ಅವರಿಗೂ ಅವನಿಗೂ ವಿರೋಧವು ಏರ್ಪಡಲಿಲ್ಲ. ವಿರೋಧವು ಏರ್ಪಟ್ಟಿದರೆ ಖಂಡಿತವಾಗಿ ಭೀಷ್ಮರು ಸೋಲುತ್ತಿದ್ದರು.

ಕರ್ಣನು ಹೇಳಿದ ಈ ಮಾತುಗಳನ್ನು ದುರ್ಯೋಧನನು ಕೇಳಿ ದೀರ್ಘವಾಗಿ ಆಲೋಚಿಸಿದನು. ಕರ್ಣನ ಮಾತಿನಲ್ಲಿ ಸತ್ಯಾಂಶವನ್ನು ತಿಳಿದು ಹಸ್ತಿನಾವತಿಗೆ ಹೋದನು. ಕರ್ಣನು ಎಲ್ಲಾ ರಾಜರೊಡನೆ ಯುದ್ಧವನ್ನು ಮಾಡಿದನು. ಜರಾಸಂಧನು ಕರ್ಣನ ವೀರ್ಯವನ್ನು ಲಕ್ಷಿಸಲಿಲ್ಲ. ಆದ್ದರಿಂದ ಕರ್ಣನ ಜೊತೆಯಲ್ಲಿ ಯುದ್ಧವನ್ನು ಮಾಡುವುದಕ್ಕಾಗಿ ಒಬ್ಬೊಬ್ಬ ರಾಜನನ್ನೇ ಕಳುಹಿಸಿದನು. ಅವರನ್ನೆಲ್ಲರನ್ನೂ ಕರ್ಣನು ಜಯಿಸಿದನು. ಕೊನೆಗೆ ಜರಾಸಂಧನು ಯುದ್ಧಕ್ಕಾಗಿ ಬಂದನು. ಶ್ರೀಪರಶುರಾಮದೇವರ ವರಬಲದಿಂದ ಜರಾಸಂಧನ ರಥವನ್ನೂ ಆಯುಧಗಳನ್ನು ನಾಶಮಾಡಿದನು. ಕೊನೆಗೆ ಜರಾಸಂಧನೂ ಬಾಹುಯುದ್ಧವನ್ನು ಮಾಡಿದರು.

## ಕರ್ಣನಿಂದ ಜರಾಸಂಧನ ಪರಾಜಯ

ಜರಾ ಎಂಬ ರಾಕ್ಷಸಿಯು ಜರಾಸಂಧನ ದೇಹದ ಎರಡು ಹೋಳುಗಳನ್ನು ಒಟ್ಟುಗೂಡಿಸಿ ಅವನನ್ನು ಬದುಕಿಸಿದಳು ಎಂದು ಹಿಂದೆ ಹೇಳಿರುವೆವು. ಅವಳು ಒಟ್ಟುಗೂಡಿಸಿದ ಪ್ರದೇಶದಲ್ಲಿಯೇ ಕರ್ಣನು ಗುದ್ದುತ್ತಾ ಬಂದನು. ಆ ಸ್ಥಳವನ್ನು ಬಿಟ್ಟು ಬೇರೆ ಯಾವ ಸ್ಥಳದಲ್ಲಿಯೂ ಗುದ್ದಲಿಲ್ಲ. ಇದನ್ನು ತಿಳಿದ ಜರಾಸಂಧನು ತುಂಬಾ ಸಂತುಷ್ಟನಾದನು. " ಬಲರಾಮನಿಗೂ ತಿಳಿಯದಿರುವ ನನ್ನ ಮರ್ಮಪ್ರದೇಶವನ್ನು ನೀನು ತಿಳಿದಿರುವಿ. ಆದ್ದರಿಂದಲೇ ಬೇರೆ ಸ್ಥಳದಲ್ಲಿ ಗುದ್ದದೆ ಜರಾರಾಕ್ಷಸಿಯು ಜೋಡಿಸಿದ ಸ್ಥಳದಲ್ಲಿಯೇ ನನ್ನನ್ನು ಸಂಹರಿಸುವ ಉದ್ದೇಶದಿಂದ ಗುದ್ದುತ್ತಿರುವಿ. ಇದರಿಂದ ನಾನು ಸಂತುಷ್ಟನಾಗಿರುವೆನು" ಎಂದನು.

ಕರ್ಣನ ತಂದೆಯಾಗಿರುವ ಅಧಿರಥನು ಸಂಪೂರ್ಣವಾಗಿ ಅಂಗದೇಶದ ಧೊರೆಯಾಗಿದ್ದನು. ಕರ್ಣನು ಅಧಿರಥನ ಮಗನಾಗುವುದಕ್ಕಿಂತ ಪೂರ್ವದಲ್ಲಿ ಜರಾಸಂಧನು ಅಧಿರಥನೊಡನೆ ಯುದ್ಧಕ್ಕೆ ಬಂದಿದ್ದನು. ಅಂಗರಾಜ್ಯವನ್ನು ಅಪಹರಿಸಿದ್ದನು. ಭೀಮಸೇನದೇವರು ತಮ್ಮೆಲ್ಲರ ಶಸ್ತ್ರ ಮತ್ತು ಅಸ್ತ್ರ ವಿದ್ಯೆಗಳ ಪರೀಕ್ಷಾಕಾಲಕಿಂತ ಪೂರ್ವದಲ್ಲಿಯೇ ಜರಾಸಂಧನೊಡನೆ ಯುದ್ಧವನ್ನು ಮಾಡಿದ್ದರು. ಆ ಯುದ್ಧದಲ್ಲಿ ಜರಾಸಂಧನನ್ನು ಜಯಿಸಿದ್ದರು. ಅವನ ಅಧೀನವಾಗಿದ್ದ ಅಂಗದೇಶದಲ್ಲಿ ಒಂದು ಭಾಗವನ್ನು ಅಪಹರಿಸಿದ್ದರು. ಆ ಭಾಗವನ್ನು ತಮ್ಮ ದೊಡ್ಡ ತಂದೆಯಾಗಿರುವ ಧೃತರಾಷ್ಟ್ರನಿಗೆ ಸಮರ್ಪಿಸಿದರು. ಆ ಭಾಗವನ್ನು ಧೃತರಾಷ್ಟ್ರನಿಂದ ಅನುಮತಿಯನ್ನು ಪಡೆದು ದುರ್ಯೋಧನನು ಶಸ್ತ್ರಪರೀಕ್ಷಾಕಾಲದಲ್ಲಿ ಕರ್ಣನಿಗೆ ಕೊಟ್ಟು ಅಭಿಷೇಕವನ್ನು ಮಾಡಿದ್ದನು.

ಉಳಿದ ಎರಡನೆಯ ಭಾಗವು ಜರಾಸಂಧನ ವಶದಲ್ಲಿಯೇ ಇತ್ತು. ಜರಾಸಂಧನು ಕರ್ಣನ ಮೇಲೆ ತುಂಬಾ ಸಂತೋಷದಿಂದ ಹೇಳಿದನು. " ಅಂಗರಾಜ್ಯದಲ್ಲಿ ಒಂದು ಭಾಗವನ್ನು ದುರ್ಯೋಧನನು ಹಿಂದೆಯೇ ನಿನಗೆ ಕೊಟ್ಟಿರುವನು. ಇನ್ನೊಂದು ಭಾಗವು ನನ್ನ ವಶದಲ್ಲಿದೆ. ನನ್ನ ಭುಜಬಲದಿಂದ ಅಪಹರಿಸಿದ ನಿನ್ನ ತಂದೆಯ ರಾಜ್ಯವನ್ನು ಕೊಟ್ಟು ನಿನಗೆ ಈಗ ಪಟ್ಟಾಭಿಷೇಕವನ್ನು ಮಾಡುವೆನು. ಯುದ್ಧದಲ್ಲಿ ನಿಪುಣನಾಗಿಯೂ ನಾನಾ ವಿಧವಾದ ಯುದ್ಧಗಳಲ್ಲಿ ಸಮರ್ಥನಾಗಿಯೂ ಇರುವ ನಿನ್ನನ್ನು ಕೊಲ್ಲಲಾರೆನು. ನೀನು ಮಾತ್ರ ಯುದ್ಧಕಾಲದಲ್ಲಿ ನನಗೆ ಸಹಾಯವನ್ನು ಮಾಡು" ಎಂದನು.

ಕರ್ಣನು ಜರಾಸಂಧನಿಂದ ಕೊಡಲ್ಪಟ್ಟ ಅಂಗದೇಶದ ಉಳಿದ ಭಾಗಕ್ಕೂ ಅಧಿಪತಿಯಾದನು. ಜರಾಸಂಧನೊಡನೆ ಸ್ನೇಹವನ್ನೂ ಗಳಿಸಿದನು. ಹಸ್ತಿನಾವತಿಗೆ ಹೋದನು. ಅವನನ್ನು ನೋಡಿದ ದುರ್ಯೋಧನ ಮುಂತಾದವರು ತುಂಬಾ ಸಂತುಷ್ಟರಾದರು. ಜರಾಸಂಧನನ್ನು ಜಯಿಸಿ ಬಂದಿರುವ ಕರ್ಣನಿಗೆ ಸಮಾನನಾದವನು ಪ್ರಪಂಚದಲ್ಲಿ ಯಾರೂ ಇಲ್ಲವೆಂದೂ ಶ್ರೀಕೃಷ್ಣನೂ ಸಹ ಅವನಿಗಿಂತ ದುರ್ಬಲನೆಂದೂ ತಿಳಿದರು.

## ಕಾಶೀರಾಜನ ಮಗಳು

ದುರ್ಯೋಧನನು ಕಾಶೀರಾಜನ ಮಗಳನ್ನು ಸ್ವಯಂವರಮಂಟಪದಲ್ಲಿ ಬಲಾತ್ಕಾರದಿಂದ ಅಪಹರಿಸಿದನು ಎಂದು ಹಿಂದೆ ಹೇಳಿರುವೆವು. ಅವಳ ವಿಷಯವನ್ನು ಈಗ ಹೇಳುವೆವು. ಪೂರ್ವದಲ್ಲಿ ದೇವತೆಗಳೂ ದೈತ್ಯರೂ ಒಟ್ಟುಗೂಡಿ ಸಮುದ್ರಮಥನವನ್ನು ಮಾಡಿದರು. ಆಗ ಸಮುದ್ರದಿಂದ ಮಹಾಲಕ್ಷ್ಮೀದೇವಿಯರು ಆವಿರ್ಭವಿಸಿದರು.ಅವರು ಆವಿರ್ಭವಿಸುವುದಕ್ಕಿಂತ ಪೂರ್ವದಲ್ಲಿ ದಾರಿದ್ರ್ಯಕ್ಕೆ ಅಭಿಮಾನಿನಿಯಾಗಿರುವ ಒಬ್ಬ ಸ್ತ್ರೀಯು ಹುಟ್ಟಿದಳು. ಅವಳು "ಅಲಕ್ಷ್ಮೀ" ಎಂದು ಪ್ರಸಿದ್ಧಳಾದಳು. ಸಮುದ್ರರಾಜನ ಮಕ್ಕಳಲ್ಲಿ ಮೊದನೆಯವಳಾಗಿರುವುದರಿಂದ "ಜ್ಯೇಷ್ಠಾ" ಅಂದರೆ "ಪ್ರಥಮಕುಮಾರಿ" ಎಂದು ಪ್ರಸಿದ್ಧಳಾದಳು. ಅವಳೇ ಕಾಶೀರಜಾನ ಮಗಳಾಗಿ ಹುಟ್ಟಿದಳು. ಅವಳಲ್ಲಿ ಪಾರ್ವತೀದೇವಿಯ ವಿಶೇಷ ಸನ್ನಿಧಾನವಿತ್ತು. ಆದ್ದರಿಂದ ಅವಳು ಅಯೋಗ್ಯಸ್ತ್ರೀಯರಲ್ಲಿ ಮೊದಲನೆಯವಳಾಗಿದ್ದರೂ ದ್ರೌಪದೀ ವಸ್ತ್ರಾಪಹರಣಕಾಲದಲ್ಲಿ ದುಃಖದಿಂದ ಅತ್ತಳು.

ರಾಮಾವತಾರಕಾಲದಲ್ಲಿ ರಾವಣನ ಮಗನಾಗಿ "ಅಕ್ಷ" ಎಂಬ ರಾಕ್ಷಸನು ಹುಟ್ಟಿದನು. ಅವನೇ ದುರ್ಯೋಧನನಿಗೆ ಕಾಶೀರಾಜನ ಮಗಳಲ್ಲಿ ಮಗನಾಗಿ "ಲಕ್ಷಣ" ಎಂಬ ಹೆಸರಿನಿಂದ ಹುಟ್ಟಿದನು. ಷಣ್ಮುಖನ ಪತ್ನಿಯು "ಲಕ್ಷಣಾ" ಎಂಬ ಹೆಸರಿನಿಂದ ಮಗಳಾಗಿ ಹುಟ್ಟಿದಳು. ಅವಳು ಪರಮಸುಂದರಿಯಾಗಿದ್ದಳು. ದುರ್ಯೋಧನನ ತಮ್ಮಂದಿರಾದ ದುಃಶಾಸನ ಮುಂತಾದವರು ತಮ್ಮ ಗುಣಗಳಿಗೆ ಸಮಾನವಾದ ಗುಣಗಳಿಂದ ಯುಕ್ತರಾಗಿರುವ ಪತ್ನಿಯರನ್ನು ಪಡೆದರು.

ರಾಮಾವತಾರಕಾಲದಲ್ಲಿ "ದೇವಾಂತಕ" ಎಂದು ಪ್ರಸಿದ್ಧನಾದ ರಾಕ್ಷಸನು ಹುಟ್ಟಿದನು. ಅವನೇ ದುಃಶಾಸನನಿಗೆ ಮಗನಾಗಿ ಹುಟ್ಟಿದನು. ಪಾಂಡವರ ಬಲ, ವೀರ್ಯ ಮತ್ತು ಗುಣಗಳನ್ನೂ ಅಭಿವೃದ್ಧಿಯನ್ನೂ ಅವರ ಪತ್ನಿಯಾಗಿರುವ ದ್ರೌಪದಿಯ ಸೌಂದರ್ಯವನ್ನೂ ನೋಡಿದ ಕೂಡಲೇ ಪ್ರತಿದಿನದಲ್ಲಿಯೂ ದುರ್ಯೋಧನಾದಿಗಳು ತುಂಬಾ ಸಂಕಟದಿಂದ ಯುಕ್ತರಾದರು.

# ಕಳಿಂಗದೇಶದಲ್ಲಿ ದುರ್ಯೋಧನನ ಮಾನಭಂಗ

ಆಗ ಕಲಿಂಗದೇಶದಲ್ಲಿ "ಸುವಜ್ರ" ಎಂಬ ರಾಜನಿದ್ದನು. ರುದ್ರದೇವನು ಅವನಿಗೆ ಯಾರಿಂದಲೂ ಪರಾಜಯವಿಲ್ಲ ಎಂಬ ವರವನ್ನು ಕೊಟ್ಟಿದ್ದನು. ಅವನ ಮಗಳಿಗೆ ಸ್ವಯಂವರವು ನಡೆಯಿತು. ಆ ಸ್ವಯಂವರಕ್ಕೆ ಹೋಗಿದ್ದ ದುರ್ಯೋಧನನು ಬಲಿಷ್ಠನೆಂಬ ದುರಹಂಕಾರದಿಂದ ಕನ್ಯೆಯನ್ನು ಬಲಾತ್ಕಾರದಿಂದ ಕರೆದುಕೊಂಡು ಬಂದನು.

ಆಗ ಸುವಜ್ರನೂ ಜರಾಸಂಧನೂ ದುರ್ಯೋದನನ ಜೊತೆಯಲ್ಲಿ ಯುದ್ಧವನ್ನು ಮಾಡಿದರು. ರುದ್ರದೇನ ವರದ ಬಲದಿಂದ ಅವನನ್ನು ಸೋಲಿಸಿದರು. ಕಟ್ಟಿಹಾಕಿದರು. ಇದನ್ನು ಕರ್ಣನು ನೋಡಿದನು. ಅರ್ಜುನನು ಎಲ್ಲಾ ರಾಜರುಗಳನ್ನೂ ಗೆದ್ದು ದ್ರೌಪದಿಯನ್ನು ಕರೆದುಕೊಂಡು ಹೋಗಲಿಲ್ಲವೇ? ಅವನಂತೆ ನಾನೂ ಜರಾಸಂಧ ಮುಂತಾದವರನ್ನು ಗೆದ್ದು ದುರ್ಯೋಧನನನ್ನು ಬಿಡಿಸುವೆನು ಎಂದು ಅರ್ಜುನನ ಮೇಲಿನ ಜಿದ್ದಿನಿಂದ ಯುದ್ಧಕ್ಕೆ ಹೊರಟನು. ಜಿದ್ದಿನಿಂದ ಯುದ್ಧವನ್ನು ಮಾಡಿರುವುದರಿಂದ ಪರಶುರಾಮದೇವರ ಶಾಪದಿಂದ ಪರಾಜಿತನಾದನು. ದುರ್ಯೋಧನನನ್ನೂ ಅವನ ಸಹೋದರರನ್ನೂ ಜರಾಸಂಧನೂ ಸುವಜ್ರನೂ ಜೈಲಿನಲ್ಲಿಟ್ಟರು.

# ದುರ್ಯೋಧನಾದಿಗಳ ಬಿಡುಗಡೆ

ಆಗ ಭೀಷ್ಮರೂ, ಧೃತರಾಷ್ಟ್ರನೂ, ವಿದುರನೂ, ಧರ್ಮರಾಜನೂ ಭೀಮಸೇನದೇವರನ್ನು ಕರೆದರು. ದುರ್ಯೋಧನನನ್ನೂ ಅವನ ತಮ್ಮಂದಿರನ್ನೂ ಬಿಡಿಸಿ ಕರೆದುಕೊಂಡು ಬರಬೇಕೆಂದು ಹೇಳಿದರು. ಭೀಮಸೇನದೇವರು ಹಿರಿಯರ ಮಾತಿಗೆ ಮರ್ಯಾದೆಯನ್ನು ಕೊಡುವುದಕ್ಕೋಸ್ಕರ ಕಲಿಂಗದೇಶಕ್ಕೆ ಹೋದರು. ಜರಾಸಂಧ ಮುಂತಾದ ಎಲ್ಲಾ ರಾಜರುಗಳನ್ನು ಜಯಿಸಿದರು. ಸುವಜ್ರನನ್ನು ಸಂಹರಿಸಿದರು. ದುರ್ಯೋಧನನನ್ನೂ ಅವನ ತಮ್ಮಂದಿರನ್ನೂ ಜೈಲಿನಿಂದ ಬಿಡಿಸಿದರು. ಕರ್ಣನೂ ಅವರೆಲ್ಲರೂ ಬದುಕಿರುವ ಹೆಣಗಳಂತೆ ಬಾಡಿದ ಮುಖಗಳಿಂದ ಹಸ್ತಿನಾವತಿಗೆ ಹಿಂದಿರುಗಿದರು.

ಆದರೂ ಅವರಿಗೆ ಪಾಂಡವರಲ್ಲಿರುವ ದ್ವೇಷಾತಿರೇಕವನ್ನು ಧೃತರಾಷ್ಟ್ರನು ತಿಳಿದನು. ಒಂದೇ ಊರಿನಲ್ಲಿದ್ದರೆ ಪ್ರಜೆಗಳಿಗೆಲ್ಲರಿಗೂ ಗುಣಭರಿತರಾಗಿರುವ ಪಾಂಡವರಲ್ಲಿ ಪ್ರೀತಿಯು ಹೆಚ್ಚುತ್ತಲೂ ಪರಮ ನೀಚರಾಗಿರುವ ತನ್ನ ಮಕ್ಕಳಲ್ಲಿ ದ್ವೇಷವು ಅಧಿಕವಾಗುತ್ತಲೂ ಬರುವುದೆಂದೂ ಇದರಿಂದಲೇ ಪಾಂಡವರಿಗೂ ತನ್ನ ಮಕ್ಕಳಿಗೂ ವಿರೋಧವು ಅಧಿಕವಾಗುವುದೆಂದೂ ತೀರ್ಮಾನಿಸಿದನು. ಅದಕ್ಕಾಗಿ ಬಹುದೂರದಲ್ಲಿರುವ ಇಂದ್ರಪ್ರಸ್ಥನಗರಕ್ಕೆ ಪಾಂಡವರನ್ನು ಕಳುಹಿಸುವುದಾಗಿ ತೀರ್ಮಾನಿಸಿ ಧರ್ಮರಾಜನನ್ನು ಕರೆದನು.

# ಧರ್ಮರಾಜಾದಿಗಳ ಪಟ್ಟಾಭಿಷೇಕ ಮತ್ತು ಇಂದ್ರಪ್ರಸ್ಥನಗರ ಪ್ರವೇಶ

" ಓ ಧರ್ಮರಾಜನೇ, ಪೂರ್ವದಲ್ಲಿ ಬ್ರಹ್ಮ ಮುಂತಾದ ಸಕಲ ದೇವತೆಗಳು ಇಂದ್ರಪ್ರಸ್ಥನಗರದಲ್ಲಿ ದೇವೇಂದ್ರನಿಗೆ ಪಟ್ಟಾಭಿಷೇಕವನ್ನು ಮಾಡಿದರು. ಆ ದೇವೇಂದ್ರನು ಅಲ್ಲಿಯೇ ಬಹುಕಾಲದ ವರೆಗೆ ರಾಜ್ಯವನ್ನು ಆಳಿದನು. ಆದ್ದರಿಂದಲೇ ಆ ಪಟ್ಟಣವು "ಇಂದ್ರಪ್ರಸ್ಥ" ಎಂದು ಪ್ರಸಿದ್ಧವಾಯಿತು. ನೀನು ದೇವೇಂದ್ರನಿಗೆ ಎಲ್ಲಾ

ವಿಧದಿಂದಲೂ ಸಮನಾಗಿರುವಿ. ಆದ್ದರಿಂದ ನಿನಗೆ ಮಾತ್ರ ಇಂದ್ರಪ್ರಸ್ಥವು ಯೋಗ್ಯವಾಗಿರುತ್ತದೆ. ಬೇರೆ ಯಾರಿಗೂ ಯೋಗ್ಯವಲ್ಲ."

" ನೀನು ಇಂದ್ರಪ್ರಸ್ಥನಗರಕ್ಕೆ ಕೂಡಲೇ ಹೊರಡು. ಅಲ್ಲಿ ತಮ್ಮಂದಿರಿಂದ ಸಹಿತನಾಗಿ ಅರ್ಧರಾಜ್ಯವನ್ನು ಅನುಭವಿಸು. ನನ್ನ ಖಜಾನೆಯಲ್ಲಿರುವ ಹಣದಲ್ಲಿ ಅರ್ಧಭಾಗವನ್ನು ತೆಗೆದುಕೊಂಡು ಹೋಗು. ಆ ರಾಜ್ಯದಲ್ಲಿ ಅಧಿಪತಿ ಎಂದು ಹೇಳುತ್ತಾ ಇಲ್ಲಿಯೇ ನಿನಗೆ ಅಭಿಷೇಕವನ್ನು ಮಾಡುವೆನು" ಎಂದನು. ಧರ್ಮರಾಜನು ಧೃತರಾಷ್ಟ್ರನ ಮಾತುಗಳನ್ನು ಅಂಗೀಕರಿಸಿದನು. ಧೃತರಾಷ್ಟ್ರನು ಅಲ್ಲಿಯೇ ಅಭಿಷೇಕವನ್ನು ಮಾಡಿಸಿದನು.

ಮೊದಲು ಶ್ರೀವೇದವ್ಯಾಸರು ಅಭಿಷೇಕವನ್ನು ಮಾಡಿದರು. ಎಲೋ ಧರ್ಮರಾಜನೇ, ನೀನು ಸುಪ್ರಸಿದ್ಧನಾದ ಚಕ್ರವರ್ತಿಯಾಗು. ಎಲ್ಲಾ ರಾಜರುಗಳನ್ನೂ ಜಯಿಸಿ ಕಾಣಿಕೆಗಳನ್ನು ತೆಗೆದುಕೊಂಡು ರಾಜಸೂಯ ಎಂದು ಪ್ರಸಿದ್ಧವಾದ ಅಶ್ವಮೇಧಯಾಗವನ್ನು ಮಾಡು. ಯಾವಾಗಲೂ ಇಂತಹ ಅಸಂಖ್ಯವಾದ ಯಾಗಗಳನ್ನು ಮಾಡು. ಯಾವಾಗಲೂ ಧರ್ಮಕಾರ್ಯಗಳನ್ನು ಮಾಡುತ್ತಾ ಧರ್ಮಶೀಲನೆಂದು ಹೊಗಳಲ್ಪಡುವವನಾಗು." ಎಂದು ಆಶೀರ್ವದಿಸಿದರು.

ದ್ರೌಪದೀದೇವಿಯಿಂದ ಸಹಿತನಾದ ಧರ್ಮರಾಜನಿಗೆ ಶ್ರೀವೇದವ್ಯಾಸರು ಅಭಿಷೇಕವನ್ನು ಮಾಡಿದ ಕೂಡಲೇ ಶ್ರೀಕೃಷ್ಣದೇವನು ಅಭಿಷೇಕವನ್ನು ಮಾಡಿದನು. ಅನಂತರದಲ್ಲಿ ದ್ರೌಪದೀದೇವಿಯು ಭೀಮಸೇನದೇವರ ಪಾರ್ಶ್ವದಲ್ಲಿ ಬಂದು ಕುಳಿತಳು. ದ್ರೌಪದೀಸಹಿತರಾದ ಭೀಮಸೇನದೇವರ ತಲೆಯಲ್ಲಿ ಶ್ರೀವೇದವ್ಯಾಸರೂ ಶ್ರೀಕೃಷ್ಣದೇವನೂ " ಭೀಮಸೇನ, ನೀನು ಯುವರಾಜನಾಗಿ ಧರ್ಮರಾಜನಿಗೆ ಧರ್ಮಕಾರ್ಯಗಳಲ್ಲಿ ಸಹಾಯಕನಾಗಿರು" ಎಂದು ಹೇಳುತ್ತಾ ಯುವರಾಜಪದವಿಯಲ್ಲಿ ಪಟ್ಟಾಭಿಷೇಕವನ್ನು ಮಾಡಿದರು. ಇವರಿಬ್ಬರು ಅಭಿಷೇಕವನ್ನು ಮಾಡಿದ ಮೇಲೆ ಅಲ್ಲಿದ್ದ ಬ್ರಾಹ್ಮಣಶ್ರೇಷ್ಠರೆಲ್ಲರೂ ಕ್ರಮದಿಂದ ಪಟ್ಟಾಭಿಷೇಕವನ್ನು ಮಾಡಿದರು. ಹೀಗೆ ಧರ್ಮರಾಜನಿಗೂ ಭೀಮಸೇನದೇವರಿಗೂ ಅಭಿಷೇಕವು ಮುಗಿದ ಮೇಲೆ ಸಕಲ ಸಜ್ಜನರಿಗೂ ಸಂತೋಷವು ಏರ್ಪಟ್ಟಿತು.

ಈ ಪಟ್ಟಾಭಿಷೇಕಮಹೋತ್ಸವವು ಏಳುದಿನಗಳ ವರೆಗೆ ಸಂಭ್ರಮದಿಂದ ನಡೆಯಿತು. ಅನಂತರದಲ್ಲಿ ಶ್ರೀವೇದವ್ಯಾಸರೂ ಶ್ರೀಕೃಷ್ಣದೇವನೂ ಪಾಂಡವರನ್ನೂ, ಕುಂತಿಯನ್ನೂ, ದ್ರೌಪದಿಯನ್ನೂ ಕರೆದುಕೊಂಡು ಹಸ್ತಿನಾವತಿಯಿಂದ ಹೊರಟು ಇಂದ್ರಪ್ರಸ್ಥನಗರಕ್ಕೆ ಬಂದರು.

ಅವರೆಲ್ಲರೂ ಹಸ್ತಿನಾವತಿಯಿಂದ ಹೊರಡುವಾಗ ಪಟ್ಟಣದಲ್ಲಿರುವ ಸರ್ವರೂ ಪಾಂಡವರ ಹಿಂದೆಯೇ ಹೊರಟರು. " ಅಯ್ಯೋ, ಈ ಮಹಾಪಾಪಿಷ್ಠನಾದ ದುರ್ಯೋಧನನು ಗುಣವಂತರಾದ ಪಾಂಡವರನ್ನು ಬಹುದೂರಕ್ಕೆ ಕಳುಹಿಸಿದನು. ಇವನು ಕಲಿಂಗರಾಜನ ಜೈಲಿನಲ್ಲಿದ್ದನು. ಭೀಮಸೇನದೇವರ ಪ್ರತಾಪದಿಂದ ಜೈಲಿನಿಂದ ಬಿಡುಗಡೆಯನ್ನು ಪಡೆದನು. ಅದೇ ಭೀಮಸೇನದೇವರ ಕೃಪೆಯಿಂದಲೇ ಕಲಿಂಗರಾಜನ ಕುಮಾರಿಯನ್ನೂ ಹಸ್ತಿನಾವತಿಗೆ ಕರೆದುಕೊಂಡು ಬಂದನು. ಆದರೂ ಅತಿ ಬಲಿಷ್ಠರಾದ ಮತ್ತು ತನ್ನನ್ನು ರಕ್ಷಿಸಿದ ಪಾಂಡವರನ್ನು ಯಾವಾಗಲೂ ದ್ವೇಷಿಸುತ್ತಿರುವನು. ಆದ್ದರಿಂದ ಈ ಊರಿನಲ್ಲಿ ನಾವು ಯಾರೂ ಇರಬಾರದು. ಗುಣವಂತರಾದ ಪಾಂಡವರ ಜೊತೆಯಲ್ಲಿ ಇಂದ್ರಪ್ರಸ್ಥನಗರಕ್ಕೇ ಹೋಗೋಣ" ಎಂದರು.

ದುರ್ಯೋಧನನು ಈ ವಿಷಯವನ್ನು ತಿಳಿದನು. ಒಬ್ಬ ದೂತನನ್ನು ಕರೆದನು. " ನಗಾರಿಯನ್ನು ಬಾರಿಸುತ್ತಾ ನನ್ನ ಆಜ್ಞೆಯನ್ನು ಎಲ್ಲರಿಗೂ ತಿಳಿಸು. ಪಾಂಡವರ ಹಿಂದೆ ಯಾರೂ ಹೋಗಕೂಡದು. ಯಾರಾದರೂ ಹೋದರೆ ಅವರ ಸರ್ವಸ್ವವನ್ನೂ ಅಪಹರಿಸುವೆನು. ಇದು ನನ್ನ ಕಟ್ಟಾಜ್ಞೆ" ಎಂದನು. ಹಾಗೆಯೇ ದೂತನು ನಗಾರಿಯನ್ನು ಬಾರಿಸುತ್ತಾ ದುರ್ಯೋಧನನ ಆಜ್ಞೆಯನ್ನು ತಿಳಿಸಿದನು.

ಈ ಮಾತುಗಳನ್ನು ಕೇಳಿದ ಸಜ್ಜನರು ಪಾಪಿಷ್ಠನಾದ ದುರ್ಯೋಧನನು ನಮ್ಮ ಸರ್ವಸ್ವವನ್ನೂ ಅಪಹರಿಸಲಿ. ಪಾಂಡವರನ್ನು ಬಿಡಲಾರೆವು. ಸಜ್ಜನರ ಸಹವಾಸವು ಈ ಲೋಕದಲ್ಲಿಯೇ ಸುಖಕ್ಕೆ ಕಾರಣವಾದುದು. ಪರಲೋಕದಲ್ಲಿ ಮೋಕ್ಷಕ್ಕೆ ಮುಖ್ಯಸಾಧನವಾದುದು. ದುರ್ಜನರ ಸಹವಾಸವು ಈ ಲೋಕದಲ್ಲಿ ದುಃಖಕ್ಕೂ ಪರಲೋಕದಲ್ಲಿ ನರಕಕ್ಕೂ ಸಾಧನವಾದುದು. ಆದ್ದರಿಂದ ಸಜ್ಜನರಾದ ಪಾಂಡವರೊಡನೆ ಇಂದ್ರಪ್ರಸ್ಥನಗರಕ್ಕೆ ಹೋಗುವೆವು" ಎಂದು ತೀರ್ಮಾನಿಸಿದರು.

ಈ ಮಾತುಗಳನ್ನು ಧರ್ಮರಾಜನು ಕೇಳಿದನು. " ಎಲೈ ಪ್ರಜೆಗಳಿರಾ, ನಿಮ್ಮೆಲ್ಲರಿಗೂ ನನ್ನಲಿಯೂ ನನ್ನ ತಮ್ಮಂದಿರಲ್ಲಿಯೂ ನಿಜವಾದ ಪ್ರೀತಿಯಿದ್ದರೆ ನಾನು ಹೇಳುವ ಮಾತುಗಳನ್ನು ಕೇಳಬೇಕು. ಧೃತರಾಷ್ಟ್ರಮಹಾರಾಜರು ನನ್ನ ದೊಡ್ಡ ತಂದೆಯವರು. ಅವರು ನಮ್ಮನ್ನು ಮಾತ್ರ ಇಂದ್ರಪ್ರಸ್ಥನಗರಕ್ಕೆ ಹೋಗುವಂತೆ ಆಜ್ಞಾಪಿಸಿರುವರು. ನೀವೆಲ್ಲರೂ ಇಲ್ಲಿಯೇ ಇರಬೇಕೆಂದು ಆಜ್ಞಾಪಿಸಿರುವರು. ಅವರ ಆಜ್ಞೆಯಂತೆ ನಡೆದುಕೊಂಡರೆ ನಿಮಗೂ ನಮಗೂ ಕೀರ್ತಿಯು ವೃದ್ಧಿಯಾಗುತ್ತದೆ. ಇಲ್ಲದಿದ್ದರೆ ಅಪಕೀರ್ತಿಯು ಬರುತ್ತದೆ. ಆದ್ದರಿಂದ ನೀವು ಯಾರೂ ನಮ್ಮೊಡನೆ ಬರಕೂಡದು. ಧೃತರಾಷ್ಟ್ರ ಮಹಾರಾಜರನ್ನೇ ಅನುಸರಿಸಿಕೊಂಡಿರಬೇಕು" ಎಂದನು.

ಅವನು ಹೇಳಿದ ಮಾತುಗಳನ್ನೇ ಅವನ ತಮ್ಮಂದಿರೆಲ್ಲರೂ ಅನುಮೋದಿಸಿದರು. ಅವರೆಲ್ಲರೂ ಬರಕೂಡದು ಎಂದು ಹೇಳಿದ್ದನ್ನು ಕೇಳಿದ ಪಟ್ಟಣಿಗರು ನಿಂತರು. ಆದರೂ ಮನಸ್ಸಿನಿಂದ ಪಾಂಡವರನ್ನೇ ಯಾವಾಗಲೂ ಸ್ಮರಿಸುತ್ತಿದ್ದರು. ಇಂದ್ರಪ್ರಸ್ಥನಗರದಲ್ಲಿ ಶ್ರೀವೇದವ್ಯಾಸರೂ ಶ್ರೀಕೃಷ್ಣದೇವನೂ ವಾಸಿಸುತ್ತಾ ಪಾಂಡವರನ್ನು ಸಂತೋಷಪಡಿಸಿದರು.

## ಕಾಲಿಂದೀ ವಿವಾಹ

(೭೭) ಅಥ ಸಹವಿಜಯಃ ಯಾಮುನಂ ತೀರಂ ಆಯನ್ ಕಾಲಿಂದೀಂ ತತ್ರ ಲಬ್ಧ್ವಾ.

ಅನಂತರದಲ್ಲಿ ಅರ್ಜುನನಿಂದ ಸಹಿತನಾದ ಶ್ರೀಕೃಷ್ಣದೇವನು ಯಮುನಾನದಿಯ ತೀರಕ್ಕೆ ಬಂದನು. ಅಲ್ಲಿ ಸೂರ್ಯದೇವನ ಮಗಳಾಗಿರುವ ಕಾಲಿಂದಿಯನ್ನು ಪಡೆದನು.

ವಿಶೇಷಾರ್ಥ - ತತ್ಪ್ರೀತ್ಯರ್ಥಂ ತತ್ರೈವ ಇಂದ್ರಪ್ರಸ್ಥೇ ವರ್ಷಾಕಾಲೇ ನಿವಸನ್ ಕದಾಚಿತ್ ಅರ್ಜುನೇನ ಸಹ ಮೃಗಯಾರ್ಥಂ ವನೇ ಸಂಚರನ್, ಯಮುನಾತೀರಂ ಪ್ರಾಪ್ಯ, ಸವಿತುಃ ಪುತ್ರೀಂ ಕಾಲಿಂದಿಂ ಪ್ರಾಪ್ಯ, ಪಾಂಡವೈರನುಜ್ಞಾತಃ ಸ್ವಜನೈಃ ಸಹ ದ್ವಾರಕಾಮೇತ್ಯ, ಕಾಲಿಂದೀವಿವಾಹಂ ಕೃತ್ವಾ, ತಯಾ ಸಹ ರಮಮಾಣಃ ಸರ್ವಾನತೋಷಯತ್.

ವಿಶೇಷಾರ್ಥ ವಿವರಣ - ಶ್ರೀಕೃಷ್ಣದೇವನು ಇಂದ್ರಪ್ರಸ್ಥನಗರದಲ್ಲಿ ಅನೇಕ ತಿಂಗಳುಗಳ ವರೆಗೆ ವಾಸಿಸಿದನು. ಒಮ್ಮೆ ಮಳೆಗಾಲದಲ್ಲಿ ಅರ್ಜುನನಿಂದ ಸಹಿತನಾಗಿ ಬೇಟೆಯಾಡುವುದಕ್ಕೆ ಹೋದನು. ಯಮುನಾನದಿಯ ತೀರದಲ್ಲಿರುವ ಕಾಳಿಂದಿಯನ್ನು ನೋಡಿದನು. ಈ ಕಾಳಿಂದಿಯು ನದೀರೂಪದಿಂದ ಹರಿಯುತ್ತಿದ್ದ ಯಮುನೆಯ ಸಹೋದರಿಯು. ಸೂರ್ಯದೇವನ ಕುಮಾರಿಯು, ಶ್ರೀಕೃಷ್ಣದೇವನ ಪತ್ನಿಯಾಗಬೇಕೆಂಬ ಆಸೆಯಿಂದ ತಪಸ್ಸನ್ನು ಮಾಡುತ್ತಿದ್ದಳು. ಅವಳನ್ನು ನೋಡಿದ ಶ್ರೀಕೃಷ್ಣದೇವನು ಅವಳ ಅಭಿಪ್ರಾಯವನ್ನು ಅರ್ಜುನನ ಮೂಲಕವಾಗಿ ತಿಳಿದನು. ಅವಳನ್ನು ಪತ್ನಿಯಾಗಿ ಸ್ವೀಕರಿಸುವಂತೆ ವಾಗ್ದಾನವನ್ನು ಮಾಡಿದನು. ಇಂದ್ರಪ್ರಸ್ಥನಗರದಿಂದ ದ್ವಾರಕೆಗೆ ಕಾಳಿಂದಿಯನ್ನು ಕರೆದುಕೊಂಡು ಹೋದನು. ಅಲ್ಲಿ ಶಾಸ್ತ್ರೋಕ್ತಕ್ರಮದಿಂದ ವಿವಾಹವನ್ನು ಮಾಡಿಕೊಂಡನು.

# ಇಂದ್ರಪ್ರಸ್ಥನಗರ ಪುನರುದ್ಧಾರ

(೭೮) ಯಮಸುತಪುರಕೃತ್

ಯಮನ ಮಗನಾಗಿರುವ ಧರ್ಮರಾಜನ ಇಂದ್ರಪ್ರಸ್ಥನಗರವನ್ನು ಅತಿ ವಿಸ್ತೀರ್ಣವಾಗುವಂತೆ ಮಾಡಿದನು.

ವಿಶೇಷಾರ್ಥ - ವಿಶ್ವಕರ್ಮಾಣಮಾಹೂಯ ಇಂದ್ರಪ್ರಸ್ಥಂ ಅತಿವಿಸ್ತೀರ್ಣತಯಾ ಪುರಂದರಪುರ ಪ್ರಖ್ಯಂ ಕಾರಯಿತ್ವಾ.

ವಿಶೇಷಾರ್ಥವಿವರಣ - ಶ್ರೀವೇದವ್ಯಾಸರೂ ಶ್ರೀಕೃಷ್ಣದೇವನೂ ಇಂದ್ರಪ್ರಸ್ಥನಗರವನ್ನು ವಿಶಾಲವಾಗುವಂತೆ ಮಾಡಬೇಕೆಂದು ಸಂಕಲ್ಪಿಸಿದರು. ದೇವಲೋಕದ ಶಿಲ್ಪಿಯಾದ ವಿಶ್ವಕರ್ಮನು ಬರಬೇಕೆಂದು ಸಂಕಲ್ಪಿಸಿದರು. ಕೂಡಲೇ ಅವನು ಬಂದನು. ಈ ಇಂದ್ರಪ್ರಸ್ಥನಗರವನ್ನು ವಿಸ್ತೀರ್ಣವೂ ಅಸಂಖ್ಯ ಜನರಿಂದ ಯುಕ್ತವಾಗಿಯೂ ರತ್ನಗಳಿಂದ ಭರಿತವಾಗಿಯೂ, ದೇವೇಂದ್ರನ ಪಟ್ಟಣಕ್ಕೆ ಸಮಾನವಾಗಿಯೂ ಆಗುವಂತೆ ಮಾಡಬೇಕೆಂದು ಆಜ್ಞಾಪಿಸಿದನು. ಅವರಿಬ್ಬರ ಆಜ್ಞೆಯಂತೆ ಮಾಡಿದನು. ಪಾಂಡವರ ಗುಣಗಳಿಂದಲೂ ಶ್ರೀಹರಿಭಕ್ತಿಯಿಂದಲೂ ಪರವಶರಾದ ಅಸಂಖ್ಯರಾದ ಸಜ್ಜನರ ಜನಸಂಖ್ಯೆಯು ಕಡಿಮೆಯಾಗಿದ್ದ ಇಂದ್ರಪ್ರಸ್ಥನಗರದಲ್ಲಿ ತುಂಬಿದರು.

# ದುರ್ಯೋಧನನ ಪಟ್ಟಾಭಿಷೇಕ

ಧೃತರಾಷ್ಟ್ರನು ತನ್ನ ತಮ್ಮನಾದ ಪಾಂಡುರಾಜನ ಮಕ್ಕಳನ್ನು ಹಸ್ತಿನಾವತಿಗಿಂತ ಬಹುದೂರದಲ್ಲಿರುವ ಇಂದ್ರಪ್ರಸ್ಥನಗರಕ್ಕೆ ಕಳುಹಿಸಿದನು. ತನ್ನ ಮಗನಾದ ದುರ್ಯೋಧನನನ್ನು ರಾಜಪದವಿಯಲ್ಲಿಯೂ ದುಃಶಾಸನನನ್ನು ಯುವರಾಜಪದವಿಯಲ್ಲಿಯೂ ಪಟ್ಟಾಭಿಷೇಕವನ್ನು ಮಾಡಿದನು. ತಾನು ಕೃತಕೃತ್ಯನೆಂದು ತಿಳಿದನು.

# ಪಾಂಡವರ ಇಂದ್ರಪ್ರಸ್ಥವಾಸ

ಪಾಂಡವರು ಇಂದ್ರಪ್ರಸ್ಥನಗರದಲ್ಲಿ ಶ್ರೀವೇದವ್ಯಾಸರ ಮತ್ತು ಶ್ರೀಕೃಷ್ಣದೇವನ ಉಪದೇಶಗಳನ್ನು ಕೇಳುತ್ತಾ ಅವರಿಬ್ಬರ ಪಾದಕಮಲಗಳನ್ನು ಸೇವಿಸುತ್ತಾ ಧರ್ಮದಿಂದ ಪೃಥಿವಿಯನ್ನು ಪಾಲಿಸುತ್ತಾ ವಾಸಿಸಿದರು.

ಈಗ ಪಾಂಡವರಲ್ಲಿ ಒಬ್ಬೊಬ್ಬರು ಮಾಡುತ್ತಿದ್ದ ವಿಶೇಷಕಾರ್ಯಗಳನ್ನು ಹೇಳುವೆವು. ಯಜ್ಞವನ್ನು ಮಾಡುವುದು, ತುಲಾಪುರುಷದಾನ ಮುಂತಾದ ಮಹಾದಾನಗಳನ್ನು ಮಾಡುವುದು. ಮಹಾರಾಜರುಗಳಿಂದ ಪೂಜೆಯನ್ನು ಸ್ವೀಕರಿಸುವುದು, ಋಷಿಗಳಲ್ಲಿ ತತ್ವವಿಷಯಕವಾದ ಪ್ರಶ್ನೆಗಳನ್ನು ಮಾಡುವುದು, ಋಷಿಗಳನ್ನು ಪೂಜಿಸುವುದು ಮುಂತಾದ ಕಾರ್ಯಗಳನ್ನು ಧರ್ಮರಾಜನು ಮಾಡುತ್ತಿದ್ದನು. ಬ್ರಾಹ್ಮಣಾದಿಜಾತಿಗಳ ಮತ್ತು ಬ್ರಹ್ಮಚರ್ಯಾದಿ ಆಶ್ರಮಗಳ ಧರ್ಮಗಳನ್ನು ಮಾಡಿಸುವುದು, ವಿಷ್ಣುಸರ್ವೋತ್ತಮತ್ವಸಿದ್ಧಾಂತವನ್ನು ಉಪದೇಶಿಸುವುದು. ಸ್ವರಾಜ್ಯವನ್ನು ರಕ್ಷಿಸುವುದು, ಪ್ರಜೆಗಳನ್ನೂ ಸೇವಕರನ್ನೂ ರಕ್ಷಿಸುವುದು ಮುಂತಾದ ಕಾರ್ಯಗಳನ್ನು ಶ್ರೀಭೀಮಸೇನದೇವರು ಮಾಡುತ್ತಿದ್ದರು. ಸ್ತ್ರೀಯರಿಗೆ ಸ್ತ್ರೀಧರ್ಮೋಪದೇಶ, ಮನೆಯಲ್ಲಿ ಕೆಲಸವನ್ನು ಮಾಡುವವರಿಗೆ ಯೋಗ್ಯವಾದ ಕೂಲಿಯನ್ನು ಕೊಡುವುದು, ಖಜಾನೆಯಲ್ಲಿರುವ ಹಣವನ್ನು ರಕ್ಷಿಸುವುದು, ಹಣವನ್ನು ಸಮಯೋಚಿತವಾಗಿ ಖರ್ಚುಮಾಡುವುದು, ಮನೆಯನ್ನು ರಕ್ಷಿಸುವುದು, ಅಂತಃಪುರದಲ್ಲಿರುವ ಜನರಲ್ಲಿ ಇವನು ಅಪರಾಧಿ, ಇವನು ನಿರಪರಾಧಿ, ಮುಂತಾದ ಗುಣ ಮತ್ತು ದೋಷಗಳನ್ನು ವಿಮರ್ಶಿಸುವುದು ಮುಂತಾದ ಕಾರ್ಯಗಳನ್ನು ದ್ರೌಪದೀದೇವಿಯರು ಮಾಡುತ್ತಿದ್ದರು. ಶತ್ರುಗಳ ರಾಜ್ಯಗಳನ್ನು ಮರ್ದನ ಮಾಡುವ ಕೆಲಸವನ್ನು ಅರ್ಜುನನು ಮಾಡುತ್ತಿದ್ದನು. ಅರ್ಜುನನಿಗೆ ವಶರಾಗದಿರುವ ಜರಾಸಂಧ, ಕೀಚಕ ಮುಂತಾದವರನ್ನು ಭೀಮಸೇನದೇವರು ನಿಗ್ರಹಿಸುತ್ತಿದ್ದರು. ಭೀಮಸೇನದೇವರ ಬಲದಿಂದ ಜರಾಸಂಧ ಮುಂತಾದವರು ಯಾವಾಗಲೂ ಹೆದರುತ್ತಿದ್ದರು. ಎಲ್ಲಾ ಶತ್ರುರಾಷ್ಟ್ರಗಳು ಭೀಮಸೇನದೇವರಿಂದ ಮರ್ದನ ಮಾಡಲ್ಪಟ್ಟುದರಿಂದ ಎಲ್ಲಾ ಶತ್ರುರಾಜರುಗಳೂ ಯುದ್ಧಕ್ಕಾಗಿ ಯಾವ ಪ್ರಯತ್ನವನ್ನೂ ಮಾಡಲಿಲ್ಲ. ಭೀಮಸೇನದೇವರ ಆಜ್ಞೆಗೆ ಹೆದರಿದವರಾಗಿ ಹರಿಯೇ ಸರ್ವೋತ್ತಮನೆಂದು ಹೇಳುತ್ತಾ ಶ್ರೀಹರಿಗೆ ಪ್ರಿಯವಾದ ಭಾಗವತಧರ್ಮಗಳನ್ನು ಅನುಷ್ಠಿಸುತ್ತಿದ್ದರು. ಆದರೆ ಪರಮ ಅಯೋಗ್ಯರಾದವರು ವಿಷ್ಣುದ್ರೋಹವನ್ನು ಮಾಡುತ್ತಲೇ ಇದ್ದರು. ಅವರು ಅಯೋಗ್ಯಸಾಧನವನ್ನು ಮಾಡುವುದು ಶ್ರೀಹರಿಗೆ ಸಂಮತವಾಗಿರುವುದರಿಂದ ಶ್ರೀಭೀಮಸೇನದೇವರು ಅವರು ಮಾಡುತ್ತಿರುವ ವಿಷ್ಣುವೈಷ್ಣವ ದ್ವೇಷವನ್ನು ಉದಾಸಿನ ಮಾಡುತ್ತಿದ್ದರು. ಸೇವಕರಿಗೆ ಸಂಬಳವನ್ನು ಕೊಡುವುದನ್ನು ನಕುಲನು ಮಾಡುತ್ತಿದ್ದನು. ಶತ್ರುಗಳೊಡನೆ ಸಂಧಾನವನ್ನು ಮಾಡಿಕೊಳ್ಳುವುದು. ಅವರೊಳಗೆಯೇ ಕಲಹವನ್ನು ಹುಟ್ಟಿಸುವುದು. ಶತ್ರುಗಳೊಡನೆ ಜಗಳವನ್ನು ಮಾಡುವ ಸಮಯವನ್ನು ಸೂಚಿಸುವುದು ಮುಂತಾದ ಕಾರ್ಯಗಳನ್ನು ಸಹದೇವನು ಮಾಡುತ್ತಿದ್ದನು. ಧರ್ಮರಾಜನ ಹಿಂದೆ ಶಸ್ತ್ರಧಾರಿಯಾಗಿ ಅವನನ್ನು ಯಾವಾಗಲೂ ರಕ್ಷಿಸುವ ಕಾರ್ಯವನ್ನೂ ಅವನೇ ಮಾಡುತ್ತಿದ್ದನು. ಧೃಷ್ಟದ್ಯುಮ್ನನು ಪಾಂಡವರ ಮೇಲಿನ ಸ್ನೇಹದಿಂದ ಇಂದ್ರಪ್ರಸ್ಥನಗರದಲ್ಲಿಯೇ ಯಾವಾಗಲೂ ವಾಸಿಸುತ್ತಾ ಸೇನಾಪತಿಯಾಗಿದ್ದನು. ಹೀಗೆ ಪಾಂಡವರ ರಾಜ್ಯವು ಎಲ್ಲಾ ವಿಷಯಗಳಿಂದಲೂ ಪರಿಪೂರ್ಣವಾಗಿತ್ತು. ಅವರ ರಾಜ್ಯದಲ್ಲಿ ವಿಷ್ಣುವನ್ನು ಪ್ರತ್ಯಕ್ಷದಿಂದ ದ್ವೇಷಿಸುವವನೂ ಬಡವನೂ ಇರಲಿಲ್ಲ. ಯಾವನೂ ಧರ್ಮವನ್ನು ಬಿಡಲಿಲ್ಲ. ಭೀಮಸೇನದೇವರು ಶಾಸಕರಾಗಿರುವ ರಾಜ್ಯದಲ್ಲಿ ಯಾವ ಕೊರತೆಯು ಇರಲು ಸಾಧ್ಯ? ರೋಗಿಷ್ಟನು ಯಾವನೂ ಇರಲಿಲ್ಲ. ತಂದೆಯು ಬದುಕಿರುವಾಗ ಮಗು ಸಾಯುವುದು. ಗಂಡನು ಬದುಕಿರುವಾಗ ಹೆಂಡತಿಯು ಸಾಯುವುದು, ನೂರುವರ್ಷಪೂರ್ತಿಯಾಗುವುದಕ್ಕಿಂತ ಪೂರ್ವದಲ್ಲಿ ಸಾಯುವುದು ಮುಂತಾದ ವಿಪರ್ಯಯಮರಣಗಳಿರಲಿಲ್ಲ.

ಯಾವ ದಾನವನ್ನು ತೆಗೆದುಕೊಳ್ಳುವುದಕ್ಕೂ ಯಜ್ಞಾದಿಕಾರ್ಯಗಳನ್ನು ಮಾಡುವದಕ್ಕೂ

ಭೀಮಸೇನದೇವರಲ್ಲಿಯೇ ಹೋಗುತ್ತಿದ್ದರು. ಅವರಿಂದಲೇ ತಮ್ಮ ಕಾರ್ಯಗಳು ಪೂರ್ತಿಯಾದುದರಿಂದ ಅವುಗಳಿಗಾಗಿ ಧರ್ಮರಾಜನಲ್ಲಿ ಯಾರೂ ಹೋಗುತ್ತಿದ್ದಿಲ. ಗಂಧರ್ವರು, ವಿದ್ಯಾಧರರು, ಚಾರಣರು ಮುಂತಾದವರು ಸರ್ವರೂ ದೇವೇಂದ್ರನನ್ನು ಸೇವಿಸಿದಂತೆ ಪಾಂಡವರನ್ನು ಸರ್ವರನ್ನೂ ಸೇವಿಸುತ್ತಿದ್ದರು. ಪಾಂಡವರು ಇಂದ್ರಪ್ರಸ್ಥನಗರದಲ್ಲಿರುವಾಗ ಶ್ರೀಕೃಷ್ಣದೇವನು ಪ್ರಾಯಶಃ ಅಲ್ಲಿಯೇ ಇದ್ದನು. ಅವನನ್ನು ಸೇವಿಸುವುದಕ್ಕೋಸ್ಕರ ಸಕಲ ದೇವತೆಗಳೂ ಸಕಲ ಮುನಿಗಳೂ ಅಲ್ಲಿಗೆ ಬರುತ್ತಿದ್ದರು. ಆ ಸಮಯದಲ್ಲಿ ದ್ವಾಪರಯುಗವಾಗಿದ್ದರೂ ಕೃತಯುಗದ ಧರ್ಮಗಳೇ ನಡೆಯುತ್ತಿದ್ದವು. ಕೃತಯುಗಕ್ಕಿಂತ ಅಧಿಕವಾದ ಧರ್ಮಗಳೂ, ಸುವರ್ಣ, ರತ್ನಗಳು, ವಸ್ತ್ರಗಳು, ಸಸ್ಯಸಂಪತ್ತುಗಳು ಮುಂತಾದವುಗಳ ಅಭಿವೃದ್ಧಿಯೂ ಏರ್ಪಟ್ಟಿತು.

## ದೇವಕೀ ಧರ್ಮರಾಜ ವಿವಾಹ

ಯಮನಿಗೆ ದೇವಕೀ ಎಂಬ ಒಬ್ಬಪತ್ನಿಯಿದ್ದಳು. ಆ ಯಮನು ಧರ್ಮರಾಜ ಎಂಬ ಹೆಸರಿನಿಂದ ಹುಟ್ಟಿದಾಗ ದೇವಕಿಯು ಅದೇ ಹೆಸರಿನಿಂದಲೇ ಶಿಶುಪಾಲನಿಗೆ ಮಗಳಾಗಿ ಹುಟ್ಟಿದ್ದಳು. ಅವಳನ್ನು ಧರ್ಮರಾಜನು ವಿವಾಹಮಾಡಿಕೊಂಡನು. ಪ್ರಹ್ಲಾದನ ತಮ್ಮನಾಗಿ "ಅನುಹ್ಲಾದ" ಎಂಬುವನು ಹುಟ್ಟಿದ್ದನು. ಆ ಅನುಹ್ಲಾದನು ದೇವಕಿಗೆ ಸಹೋದರನಾಗಿ ಧೃಷ್ಟಕೇತು ಎಂಬ ಹೆಸರಿನಿಂದ ಹುಟ್ಟಿದನು. ಆ ಧೃಷ್ಟಕೇತುವಿನಲ್ಲಿ "ಸವಿತಾ" ಎಂಬ ಸೂರ್ಯನ ಆವೇಶವಿತ್ತು. ದೇವತೆಗಳ ಮಧ್ಯದಲ್ಲಿ ಲೇಖಕರಲ್ಲಿ ಅತಿ ಪ್ರಸಿದ್ಧನಾದ ಚಿತ್ರಗುಪ್ತ ಎಂಬುವನಿದ್ದನು. ಆ ಚಿತ್ರಗುಪ್ತನು ದೇವಕಿಯಲ್ಲಿ ಧರ್ಮರಾಜನಿಗೆ "ಸುಹೋತ್ರ" ಎಂಬ ಮಗನಾಗಿ ಹುಟ್ಟಿದನು.

## ಕಾಲೀ ಸ್ವಯಂವರ

ಭಾರತೀದೇವಿಯರು ಶ್ಯಾಮಲಾ ಮುಂತಾದ ನಾಲ್ಕು ಸ್ತ್ರೀಯರಿಂದ ಸಹಿತರಾಗಿ ದ್ರೌಪದೀ ಎಂಬ ರೂಪದಿಂದ ಹುಟ್ಟಿರುವುದಾಗಿ ಹಿಂದೆ ಹೇಳಿರುವೆವು. ಅದೇ ಭಾರತೀದೇವಿಯರು "ಕಾಲೀ" ಎಂಬ ಹೆಸರಿನಿಂದ ಕಾಶೀರಾಜನ ಕುಮಾರಿಯಾಗಿ ಹುಟ್ಟಿದರು. ಈ ಕಾಲೀದೇವಿಯಲ್ಲಿ ಇತರ ಸ್ತ್ರೀಯರ ಸಂಬಂಧವಿರಲಿಲ್ಲ. ಒಬ್ಬರೇ ಹುಟ್ಟಿದರು. ಈ ಕಾಲೀದೇವಿಗೆ ಕಾಶೀರಾಜನು ಸ್ವಯಂವರವನ್ನು ಏರ್ಪಡಿಸಿದನು. ಈ ಸ್ವಯಂವರಕ್ಕಾಗಿ ಎಲ್ಲಾ ರಾಜರುಗಳನ್ನೂ ಕರೆಯಿಸಿದ್ದನು. ಸರ್ವ ರಾಜರುಗಳೂ ತುಂಬಾ ಸಂತೋಷದಿಂದ ಬಂದಿದ್ದರು. ಈ ಸ್ವಯಂವರಮಹೋತ್ಸವದಲ್ಲಿ ಶ್ರೀಭೀಮಸೇನದೇವರ ಕಂಠದಲ್ಲಿ ಕಾಲೀದೇವಿಯು ಮಾಲೆಯನ್ನು ಹಾಕಿದಳು.

## ವಿಷ್ಣುಸರ್ವೋತ್ತಮತ್ವ ಸಮರ್ಥನೆ

ವಿಷ್ಣುಭಕ್ತರಲ್ಲಿ ಪ್ರಧಾನರಾಗಿರುವ ಶ್ರೀಭೀಮಸೇನದೇವರ ಕಂಠದಲ್ಲಿ ಕಾಶೀರಾಜನ ಕುಮಾರಿಯಾದ ಕಾಲಿಯು ಮಾಲೆಯನ್ನು ಹಾಕಿದ್ದನು ವಿಷ್ಣುದ್ವೇಷಿಗಳಲ್ಲಿ ಪ್ರಧಾನರೂ, ಶಿವಸರ್ವೋತ್ತಮತ್ವವಾದಿಗಳೂ ಆಗಿರುವ ಜರಾಸಂಧನೂ ಅವನ ಶಿಷ್ಯರಾಗಿರುವ ರಾಜರುಗಳೂ ನೋಡಿದರು. ತುಂಬಾ ಕೋಪದಿಂದ ಯುಕ್ತರಾದರು. ವಿಷ್ಣುಭಕ್ತರನ್ನು ನಿಂದಿಸುತ್ತಲೂ ಶಿವಭಕ್ತರನ್ನು ಸ್ತುತಿಸುತ್ತಲೂ ಯುದ್ಧಕ್ಕೆ ಬಂದರು.

ಆ ರಾಜರು ವಿಷ್ಣುಭಕ್ತರನ್ನು ನಿಂದಿಸುತ್ತಲೂ ಶಿವಭಕ್ತರನ್ನು ಸ್ತುತಿಸುತ್ತಲೂ ಜಗಳಕ್ಕೆ ಬಂದುದರಿಂದ

ಶ್ರೀಭೀಮಸೇನದೇವರು ಆರಂಭದಲ್ಲಿ ವಿಷ್ಣುಭಕ್ತರ ಸ್ತುತಿಯನ್ನೂ ಶಿವನ ಮತ್ತು ಶಿವಭಕ್ತರ ಅಶಕ್ತಿಯನ್ನೂ ಪ್ರಕಟಿಸುತ್ತಾ ವಾಗ್ಯುದ್ಧವನ್ನು ಮಾಡಲು ಆರಂಭಿಸಿದರು.

ಮೊದಲು ವೇದಗಳು ಅಪೌರುಷೇಯಗಳೆಂದು ಸಾಧಿಸಿದರು. ಅಪೌರುಷೇಯವಾದುದರಿಂದಲೇ ಪುರುಷನ ಮೂಲಕವಾದ ಮತ್ತು ಅಪ್ರಾಮಾಣ್ಯಕ್ಕೆ ಕಾರಣವಾಗಿರುವ ಯಾವ ದೋಷಗಳೂ ವೇದಗಳಲ್ಲಿಲ್ಲವೆಂದೂ ಸಾಧಿಸಿದರು. ಆದ್ದರಿಂದ ಪರಮಪ್ರಮಾಣವಾಗಿರುವ ವೇದಗಳಿಂದ "ಅಗ್ನಿರ್ದೇವಾನಾಮವಮಃ ವಿಷ್ಣುಃ ಪರಮಃ ತದಂತರೇ ಅನ್ಯಾಃ ಸರ್ವಾ ದೇವತಾಃ" ಅಂದರೆ ಎಲ್ಲಾ ದೇವತೆಗಳ ಮಧ್ಯದಲ್ಲಿ ಅಗ್ನಿಯು ಅಧಮನು. ವಿಷ್ಣುವು ಸರ್ವೋತ್ತಮನು. ಉಳಿದ ಗಂಡು ದೇವತೆಗಳು ಹೆಣ್ಣುದೇವತೆಗಳು ಮುಂತಾದ ಸರ್ವದೇವತೆಗಳೂ ಅಗ್ನಿಗಿಂತ ಉತ್ತಮರು ಮತ್ತು ವಿಷ್ಣುಗಿಂತ ಅಧಮರು" ಮುಂತಾದ ಸಿದ್ಧಾಂತಗಳನ್ನು ಸಮರ್ಥಿಸಿದರು. ಅನಂತರದಲ್ಲಿ ವೇದಾನುಸಾರಿಯಾದ ತರ್ಕಗಳಿಂದಲೂ ಅನುಮಾನಪ್ರಮಾಣದಿಂದಲೂ ಅದೇ ವಿಷಯವನ್ನು ದೃಢಪಡಿಸಿದರು. ಪಾಂಚರಾತ್ರಾಗಮವನ್ನೂ ಮಹಾಭಾರತ ಮುಂತಾದ ಇತಿಹಾಸಗಳನ್ನೂ ವೇದಾನುಸಾರಿಗಳಾದವುಗಳಾಗಿರುವುದರಿಂದ ಪ್ರಮಾಣಗಳೆಂದು ಸಮರ್ಥಿಸಿದರು. ಅವುಗಳಿಂದಲೂ ವಿಷ್ಣುಸರ್ವೋತ್ತಮತ್ವವನ್ನು ಸಮರ್ಥಿಸಿದರು.

## ವೈದಿಕಪಾಷಂಡ ಮತಗಳು

ಶಿವನೇ ಸರ್ವೋತ್ತಮನೆಂದು ಸಮರ್ಥಿಸುತ್ತಿರುವ ಶೈವಶಾಸ್ತ್ರ, ಸ್ಕಂದನೇ ಸರ್ವೋತ್ತಮನೆಂದು ಸಮರ್ಥಿಸುತ್ತಿರುವ ಸ್ಕಾಂದಮತ, ಶಕ್ತಿಯೇ ಉತ್ತಮಳೆಂದು ಸಮರ್ಥಿಸುತ್ತಿರುವ ಶಾಕ್ತಮತ, ಸೂರ್ಯನೇ ಸರ್ವೋತ್ತಮನೆಂದು ಸಮರ್ಥಿಸುತ್ತಿರುವ ಸೌರಮತ, ಗಣಪತಿಯೇ ಸರ್ವೋತ್ತಮನೆಂದು ಸಮರ್ಥಿಸುತ್ತಿರುವ ಗಾಣಪತಮತ ಮುಂತಾದ ಎಲ್ಲಾ ಮತಗಳೂ ವೇದವನ್ನು ಅನುಸರಿಸಿಕೊಂಡು ಹೊರಟಿವೆ. ಆದರೆ ವೇದದ ಹೃದಯವನ್ನು ಬಿಟ್ಟು ವೇದಕ್ಕೆ ವಿರುದ್ಧವಾದ ವಿಷಯಗಳನ್ನು ಸಮರ್ಥಿಸುತ್ತಿರುತ್ತವೆ. ಆದ್ದರಿಂದ ವೈದಿಕಪಾಷಂಡಮತಗಳೆನಿಸುತ್ತವೆ. ಅಂತಹ ಮತಗಳೂ ಸಹ ವೇದಗಳು ಸರ್ವೋತ್ತಮ ಪ್ರಮಾಣಗಳೆಂದು ಹೇಳುತ್ತಿರುತ್ತವೆ. ವೇದವನ್ನು ಪ್ರಮಾಣವೆಂದು ಹೇಳದಿದ್ದರೆ ವೇದಾನುಸಾರಿಗಳೆಂದು ತಮ್ಮಿಂದ ನಂಬಿರುವ ತಮ್ಮ ತಮ್ಮ ಶಾಸ್ತ್ರಗಳಿಗೆ ಪ್ರಾಮಾಣ್ಯವು ಸಿದ್ಧಿಸಲಾರದು.

## ವೈದಿಕಪಾಷಂಡಿಗಳೂ ವಿಷ್ಣುಸರ್ವೋತ್ತಮತ್ವವನ್ನು ಅಂಗೀಕರಿಸಿರುವರು

ಮೇಲ್ಕಂಡ ರೀತಿಯಿಂದ ಸರ್ವರಿಂದಲೂ ಪ್ರಮಾಣಗಳೆಂದು ನಂಬಲ್ಪಟ್ಟ ವೇದಗಳು ಹಿಂದೆ ಹೇಳಲ್ಪಟ್ಟ "ಅಗ್ನಿರ್ದೇವಾನಾಮವಮಃ" ಮುಂತಾದ ವಾಕ್ಯಗಳಿಂದ ವಿಷ್ಣುಸರ್ವೋತ್ತಮತ್ವವನ್ನು ಹೇಳುತ್ತವೆ ಎಂದು ಸರ್ವವಾದಿಗಳೂ ಅಂಗೀಕರಿಸಲೇಬೇಕು. ಇದು ವೇದಗಳೆಲ್ಲವೂ ವಿಷ್ಣುಸರ್ವೋತ್ತಮತ್ವವನ್ನು ಸಮರ್ಥಿಸುತ್ತವೆ ಎಂಬ ವಿಷಯದಲ್ಲಿ ಆಧಾರವಾಗಿದೆ.

# ಸರ್ವವಾದಿಗಳು ವಿಷ್ಣುಸರ್ವೋತ್ತ ಮತ್ವವನ್ನು ಅಂಗೀಕರಿಸಿರುವರು

ಶಿವಸರ್ವೋತ್ತಮತ್ವವನ್ನು ಸಮರ್ಥಿಸುವದಕ್ಕೆ ಹೊರಟಿರುವ ಸ್ಕಾಂದಪುರಾಣದಲ್ಲಿ ಎಲ್ಲೋ ಒಂದು ಮೂಲೆಯಲ್ಲಿ "ನಾಹಂ ನ ಚ ಶಿವೋಽನ್ಯೇ ಚ ತಚ್ಛಕ್ತ್ಯೇಕಾಂಶಭಾಗಿನಃ । ಬಾಲಃ ಕ್ರೀಡನಕೈರ್ಯದ್ವತ್ಕ್ರೀಡತೇಽಸ್ಮಾಭಿರಚ್ಯುತಃ ಮುಂತಾದ ವಾಕ್ಯಗಳಿವೆ. ಆ ವಾಕ್ಯಗಳು " ನಾನು ಅಂದರೆ ಷಣ್ಮುಖನು, ಶಿವನೂ, ಉಳಿದ ಬ್ರಹ್ಮ ಮುಂತಾದ ದೇವತೆಗಳೂ ಶ್ರೀಹರಿಯ ಶಕ್ತಿಯಲ್ಲಿ ಒಂದು ಅಂಶವನ್ನೂ ಪಡೆದವರಲ್ಲ. ಬಾಲಕನು ಆಟದ ಸಾಮಾನುಗಳನ್ನು ಇಟ್ಟುಕೊಂಡು ಆಟವನ್ನು ಆಡಿದಂತೆ ನಮ್ಮೆಲ್ಲರನ್ನೂ ಇಟ್ಟುಕೊಂಡು ಶ್ರೀಹರಿಯೂ ಆಟವನ್ನು ಆಡುತ್ತಿರುವನು" ಎಂದು ಅತಿಸ್ಪಷ್ಟವಾಗಿ ಶ್ರೀಹರಿಯು ಸರ್ವರಿಗಿಂತಲೂ ಉತ್ತಮನೆಂದು ಹೇಳುತ್ತಿವೆ. ಇದರಂತೆಯೇ ಬೇರೆ ಬೇರೆ ದೇವತೆಗಳನ್ನು ಸರ್ವೋತ್ತಮರೆಂದು ಸಮರ್ಥಿಸುವುದಕ್ಕಾಗಿ ಹೊರಟಿರುವ ಎಲ್ಲಾ ಮತಗಳಿಗೆ ಸಂಬಂಧಿಸಿದ ಗ್ರಂಥಗಳಲ್ಲಿಯೂ ಶ್ರೀಹರಿಯೇ ಸರ್ವೋತ್ತಮನೆಂದು ಸಮರ್ಥಿಸುವ ವಾಕ್ಯಗಳು ಎಲ್ಲೋ ಒಂದು ಮೂಲೆಯಲ್ಲಿ ಸಿಗುತ್ತವೆ. ಆ ವಾಕ್ಯಗಳೆಲ್ಲವೂ ಆಯಾ ಮತಗಳ ಪರಮ ಧ್ಯೇಯವಾಗಿರುವ ಬೇರೆ ಬೇರೆ ದೇವತೆಗಳ ಸರ್ವೋತ್ತಮತ್ವಕ್ಕೆ ವಿರುದ್ಧವಾಗಿರುವುದರಿಂದ ಅತಿಪ್ರಬಲವೆನಿಸುತ್ತವೆ. ಆ ಒಂದೊಂದು ವಾಕ್ಯಗಳೂ ಸಹಸ್ರಸಂಖ್ಯಾಕವಾದ ವಾಕ್ಯಗಳಿಂದ ಸಮರ್ಥಿಸಲ್ಪಟ್ಟ ಬೇರೆ ಬೇರೆ ದೇವತೆಗಳ ಉತ್ತಮತ್ವವನ್ನು ಧಿಕ್ಕರಿಸಿ ಶ್ರೀವಿಷ್ಣುಸರ್ವೋತ್ತಮತ್ವವನ್ನು ಸಮರ್ಥಿಸುತ್ತವೆ. ಇದು ವೈದಿಕ ಪಾಷಂಡಿಗಳ ಮತಗಳು ವಿಷ್ಣುಸರ್ವೋತ್ತಮತ್ವವನ್ನು ಸಮರ್ಥಿಸುತ್ತವೆ ಎಂಬ ವಿಷಯದಲ್ಲಿ ಆಧಾರವಾಗಿವೆ.

# ಅವೈದಿಕರೂ ವಿಷ್ಣುಸರ್ವೋತ್ತಮತ್ವವನ್ನು ಅಂಗೀಕರಿಸಿರುವರು

ವೇದವನ್ನು ಅಪ್ರಮಾಣವೆಂದು ಹೇಳುತ್ತಿರುವ ಬೌದ್ಧ ಮುಂತಾದ ವಾದಿಗಳೂ ಸಹ ರಾಮಾವತಾರ, ಕೃಷ್ಣಾವತಾರ ಮುಂತಾದವ ಅವತಾರಗಳನ್ನು ಸ್ವೀಕರಿಸಿದ ಕಾಲದಲ್ಲಿ ಶ್ರೀಹರಿಯು ಮಾಡಿರುವ ಸೇತುಬಂಧನ ಮುಂತಾದ ಕಾರ್ಯಗಳನ್ನು ಅಪಲಾಪ ಮಾಡಲು ಶಕ್ತರಲ್ಲ. ಆದುದರಿಂದ ಇತರರಿಂದ ಮಾಡಲು ಅಶಕ್ಯವಾದ ಈ ಕಾರ್ಯಗಳನ್ನು ಮಾಡಿರುವ ಶ್ರೀಹರಿಯು ಸರ್ವೋತ್ತಮನೆಂದು ಅಂಗೀಕರಿಸಲೇಬೇಕು.

# ಚಾರ್ವಾಕರು ವಿಷ್ಣುಸರ್ವೋತ್ತಮತ್ವವನ್ನು ಅಂಗೀಕರಿಸಿರುವರು

ಕಣ್ಣು ಮುಂತಾದ ಪ್ರತ್ಯಕ್ಷಪ್ರಮಾಣಗಳಿಂದ ತಿಳಿಯಲ್ಪಟ್ಟ ವಿಷಯಗಳನ್ನೇ ನಂಬಬಹುದೆಂದೂ ಇತರ ಪ್ರಮಾಣಗಳಿಂದ ಸಿದ್ಧವಾದ ಯಾವ ವಸ್ತುಗಳನ್ನೂ ನಂಬಕೂಡದೆಂದೂ ಹೇಳುತ್ತಿರುವ ಚಾರ್ವಾಕನೂ ಅವನ ಭಕ್ತರೂ ಸಹ ವಿಷ್ಣುಸರ್ವೋತ್ತಮತ್ವವನ್ನು ಅಂಗೀಕರಿಸಲೇಬೇಕು. ಅದನ್ನು ಈಗ ವಿವರಿಸುವೆನು. ಅವನ ಶಾಸ್ತ್ರವನ್ನು ಬೃಹಸ್ಪತ್ಯಾಚಾರ್ಯನು ಬರೆದನೆಂದು ಹೇಳುತ್ತಿರುವನು. ಬೃಹಸ್ಪತ್ಯಾಚಾರ್ಯನ ಮಾತುಗಳು ಪ್ರಮಾಣವಲ್ಲ ಎಂದು

ನಾವು ಆಕ್ಷೇಪಿಸಿದಾಗ ಬೃಹಸ್ಪತ್ಯಾಚಾರ್ಯನ ಗುರುವು ಹಾಗು ಎಲ್ಲರಿಗೂ ಗುರುವಾಗಿರುವ ಮಹಾವಿಷ್ಣುವೆಂದೂ ಅವನು ಸರ್ವಜ್ಞನೆಂದೂ ವಿಷ್ಣುವಿನಿಂದ ಉಪದಿಷ್ಟನಾಗಿರುವ ಬೃಹಸ್ಪತಿಯಿಂದ ಪ್ರಚಾರ ಮಾಡಲ್ಪಟ್ಟ ಚಾರ್ವಾಕ ಶಾಸ್ತ್ರದಲ್ಲಿ ಅಪ್ರಾಮಾಣ್ಯವನ್ನು ಶಂಕಿಸಲು ಸಾಧ್ಯವಿಲ್ಲವೆಂದೂ ಹೇಳುವರು. ಆದ್ದರಿಂದ ಚಾರ್ವಾಕರೂ ವಿಷ್ಣುಸರ್ವೋತ್ತಮತ್ವವನ್ನು ಅಂಗೀಕರಿಸಲೇಬೇಕು.

# ಸರ್ವಶಾಸ್ತ್ರಗಳಲ್ಲಿಯೂ ವಿಷ್ಣುಸರ್ವೋತ್ತಮತ್ವವು ಅಂಗೀಕೃತವಾಗಿದೆ

ಬ್ರಹ್ಮಸೂತ್ರಗಳಲ್ಲಿ "ಶ್ರೀಹರಿಗೆ ಎಲ್ಲಾ ಹೆಸರುಗಳೂ ಇವೆ. ಶ್ರೀಹರಿಯ ಹೆಸರನ್ನೇ ದೇವತೆಗಳೆಲ್ಲರೂ ಇಟ್ಟುಕೊಂಡಿರುವರು" ಎಂದು ಹೇಳಿರುತ್ತದೆ. ಆದ್ದರಿಂದ ಶೈವಶಾಸ್ತ್ರ ಮುಂತಾದವುಗಳು ಶಿವ ಮುಂತಾದ ಹೆಸರುಗಳಿಂದ ಹೊಗಳಲ್ಪಡುವ' ನಾರಾಯಣನೇ ಸರ್ವೋತ್ತಮನು" ಎಂದು ಹೇಳುತ್ತಿವೆ.

"ಹಯಗ್ರೀವಾಸುರ ಮುಂತಾದವರನ್ನು ಸಂಹರಿಸಿ ವೇದಗಳನ್ನು ಮತ್ಸ್ಯರೂಪದಿಂದ ತಂದನು. ವಿಷ್ಣುರೂಪದಿಂದ ಸಮುದ್ರಮಥನವನ್ನು ಮಾಡಿದನು. ಕೂರ್ಮರೂಪದಿಂದ ಮಂದರಪರ್ವತವನ್ನು ಎತ್ತಿದನು. ವರಾಹರೂಪದಿಂದ ಹಿರಣ್ಯಾಕ್ಷನನ್ನು ಸಂಹರಿಸಿದನು. ನರಸಿಂಹರೂಪದಿಂದ ಹಿರಣ್ಯಕಶಿಪುವನ್ನು ಕೊಂದನು. ರಾಮಾವತಾರವನ್ನು ಸ್ವೀಕರಿಸಿ ರಾವಣನನ್ನು ಸಂಹರಿಸಿದನು. ಕೃಷ್ಣನಾಗಿ ಅವತರಿಸಿ ಕಂಸನನ್ನು ಸಂಹರಿಸಿದನು. ಜರಾಸಂಧ ಮುಂತಾದ ಅತಿಬಲಿಷ್ಠರನ್ನು ಅನೇಕ ಸಲ ಸೋಲಿಸಿದನು. ವಾಮನರೂಪಧಾರಿಯಾಗಿ ಬಲಿಯನ್ನು ನಿಗ್ರಹಿಸಿದನು. ಹೆಜ್ಜೆಯಿಂದ ಮೂರು ಲೋಕಗಳನ್ನು ಅಳೆದನು. ಎಡಗಾಲಿನ ಅಂಗುಷ್ಠದ ಉಗುರಿನಿಂದ ಬ್ರಹ್ಮಾಂಡದ ಕಟಾಹವನ್ನು ಭೇದಿಸಿದನು. ಈ ವ್ಯಾಪಾರಗಳೆಲ್ಲವನ್ನೂ ಇತರರಿಂದ ಮಾಡಲು ಸಾಧ್ಯವೇ? ಇವುಗಳೆಲ್ಲವನ್ನೂ ಮಾಡಿದವನು ಶ್ರೀಹರಿಯೆಂದು ಈ ಲೋಕದಲ್ಲಿಯೇ ಸರ್ವರೂ ಅಂಗೀಕರಿಸಲಿಲ್ಲವೇ? ಶ್ರೀಹರಿಯು ಮಾಡಲಿಲ್ಲವೆಂದೂ ಇತರರು ಮಾಡಿರುವರೆಂದೂ ಅಪಲಾಪವನ್ನು ಮಾಡಲು ಸಾಧ್ಯವಾಗುತ್ತದೆಯೇ? ಇಂತಹ ವ್ಯಾಪಾರಗಳಿಂದ ಶ್ರೀಹರಿಯ ಸರ್ವೋತ್ತಮತ್ವವೂ ಶಿವಾದಿಗಳು ಸರ್ವೋತ್ತಮರಲ್ಲವೆಂದೂ ಸಿದ್ಧವಾಗುತ್ತದೆ.

ಶಿವನು ಮುಂತಾದ ದೇವತೆಗಳು ಸರ್ವೋತ್ತಮರು ಎಂಬ ಸಿದ್ಧಾಂತದಲ್ಲಿ ಅತ್ಯಂತ ವಿರೋಧವು ಶೈವಸಿದ್ಧಾಂತ ಮುಂತಾದವುಗಳಲ್ಲಿಯೇ ಸ್ಪಷ್ಟವಾಗಿದೆ. ಆ ವಿಷಯವನ್ನು ಈಗ ವಿವರಿಸುವೆನು (೧)ಶಿವನು ಸರ್ವೋತ್ತಮನು ಎಂದು ಹೇಳುತ್ತಿರುವುದು. ಭಸ್ಮಾಸುರನ ಭಯದಿಂದ ಓಡಿದನು ಎಂದು ಹೇಳುವುದು. (೨) ವಿಷವನ್ನು ಕುಡಿದನು ಎಂದು ಹೇಳುತ್ತಿರುವುದು. ಆದರೆ ವಿಷವು ಜೀರ್ಣಸಲಿಲ್ಲ. ಕುತ್ತಿಗೆಯಲ್ಲಿಯೇ ಉಳಿಯಿತು. ಆ ವಿಷದಿಂದ ಕುತ್ತಿಗೆಯು ಕಪ್ಪಾಯಿತು. ಆದ್ದರಿಂದಲೇ ನೀಲಕಂಠ ಎಂಬ ಹೆಸರು ಬಂತು ಎಂದು ಹೇಳುತ್ತಿರುವುದು (೩) ವಿಷ್ಣುವು ಸರ್ವೋತ್ತಮನಲ್ಲ. ಶಿವನೇ ಸರ್ವೋತ್ತಮನು ಎಂದು ಹೇಳುತ್ತಿರುವುದು. ವಿಷ್ಣುಪಾದೋದಕ ವಾಗಿರುವ ಗಂಗೆಯನ್ನು ಯಾವಾಗಲೂ ತಲೆಯಲ್ಲಿ ಧರಿಸುತ್ತಿರುವವನೆಂದು ಹೇಳುತ್ತಿರುವುದು. (೪) ವೇದವು ಅಪ್ರಮಾಣವೆಂದು ಹೇಳುತ್ತಿರುವುದು "ಬ್ರಾಹ್ಮಣೋ ನ ಹಂತವ್ಯಃ" ಅಂದರೆ ಬ್ರಾಹ್ಮಣನನ್ನು ಕೊಲ್ಲಕೂಡದು "ಅಹಿಂಸಾ ಪರಮೋ ಧರ್ಮಃ" ಅಂದರೆ ಯಾರನ್ನೂ ಹಿಂಸಿಸದಿರುವುದು ಅತ್ಯುತ್ತಮವಾದ ಧರ್ಮವೆಂಬ ವೇದವಾಕ್ಯಗಳು ಪರಮಪ್ರಮಾಣವೆಂದು ಹೇಳುತ್ತಿರುವುದು ಈ ರೀತಿಯಿಂದ ಪರಸ್ಪರ ವಿರೋಧವು

ವಿಷ್ಣುಸರ್ವೋತ್ತಮಸಿದ್ಧಾಂತವನ್ನು ಬಿಟ್ಟು ಇತರ ಸರ್ವಸಿದ್ಧಾಂತಗಳಲ್ಲಿಯೂ ಬರುತ್ತದೆ.

## ಬಲಿಷ್ಠನಾದ ಕ್ಷತ್ರಿಯನು ಶ್ರೇಷ್ಠನು

ಶಾಸ್ತ್ರಗಳಲ್ಲಿ ಬಲಿಷ್ಠನಾದ ಕ್ಷತ್ರಿಯನೂ ಅಧಿಕ ಜ್ಞಾನವುಳ್ಳ ಬ್ರಾಹ್ಮಣನೂ ಶ್ರೇಷ್ಠರೆಂದು ಹೇಳಿರುತ್ತದೆ. ಎಲೈ ಜರಾಸಂಧ ಮುಂತದ ರಾಜರುಗಳಿರಾ, ನಾನು ಕ್ಷತ್ರಿಯ ಜಾತಿಯಲ್ಲಿ ಹುಟ್ಟಿದವನು. ನನ್ನ ಬಲ ಮತ್ತು ನಿಮ್ಮಿಂದ ಸರ್ವೋತ್ತಮನೆಂದು ಅಂಗೀಕರಿಸಲ್ಪಟ್ಟಿರುವ ಶಿವನ ಬಲ ಇವೆರಡರಲ್ಲಿ ಯಾರ ಬಲವು ಅಧಿಕವಾದುದು? ಎಂಬ ವಿಷಯವನ್ನು ಈಗ ಸ್ಪಷ್ಟಪಡಿಸುವೆನು.

ಹಿಂದೊಮ್ಮೆ ಕುರುಕ್ಷೇತ್ರದಲ್ಲಿ ನಾನು ವಿಷ್ಣುಪೂಜೆಯನ್ನು ಮಾಡುತ್ತಿದ್ದೆನು. ಆಗ ಗಂಗೆಯು ನಾನು ಮಾಡುತ್ತಿರುವ ವಿಷ್ಣುಪೂಜೆಗೆ ವಿಘ್ನವನ್ನು ಮಾಡಬೇಕೆಂದು ಬಂದಳು. ಆ ಸಮಯದಲ್ಲಿ ಬಲಗೈಯಿಂದ ಪೂಜೆಯನ್ನು ಮಾಡುತ್ತಿದ್ದ ನಾನು ಪೂಜೆಯನ್ನು ಮಾಡುತ್ತಲೇ ಎಡಗೈಯಿಂದ ಅವಳನ್ನು ತಳ್ಳಿದನು. ಆ ಸ್ಥಳದಿಂದ ಬಹುಯೋಜನ ದೂರದಲ್ಲಿ ಬಿದ್ದಳು. ಆಗ ನೀವು ಸರ್ವೋತ್ತಮನೆಂದು ಹೇಳುತ್ತಿರುವ ಶಿವನು ಹುಲಿಯ ರೂಪದಿಂದ ಯುಕ್ತನಾಗಿ ಕಪಿಲ ಗೋವಿನ ರೂಪವನ್ನು ಧರಿಸಿರುವ ಉಮಾದೇವಿಯನ್ನು ತಿನ್ನುವುದಕ್ಕಾಗಿ ಬಂದವನಂತೆ ನಟಿಸುತ್ತಾ ಓಡಿಸಿಕೊಂಡು ನನ್ನ ಬಲವನ್ನು ಪರೀಕ್ಷಿಸುವುದಕ್ಕಾಗಿ ಬಂದು ನನ್ನನ್ನು ಕೆಣಕುವುದಕ್ಕಾಗಿ ಬಂದಿರುವ ಅವನ ಜೊತೆಯಲ್ಲಿ ಯುದ್ಧವನ್ನು ಮಾಡಿ ಸೋಲಿಸಿದೆನು. ನನ್ನ ಗದೆಯ ಪೆಟ್ಟಿನಿಂದ ಮೂರ್ಛಿತನಾದನು. ಅದೃಶ್ಯನಾದನು. ಅದೇ ಸ್ಥಳದಲ್ಲಿ ಒಂದು ಲಿಂಗದೊಳಗೆ ಪ್ರವೇಶಿಸಿದನು. ಆ ಲಿಂಗವು ಈಗಲೂ ವ್ಯಾಘ್ರೇಶ್ವರಲಿಂಗವೆಂದು ಪ್ರಸಿದ್ಧವಾಗಿದೆ.

ಇನ್ನೊಮ್ಮೆ ಹಿಮವತ್ಪರ್ವತದಲ್ಲಿ ಹುಟ್ಟಿರುವ ನೈಮಿಷಾರಣ್ಯಮಾರ್ಗವಾಗಿ ಹರಿಯುತ್ತಿರುವ ಗೋಮತೀನದಿಯ ತೀರದಲ್ಲಿ ಹುಲಿಯ ರೂಪದಿಂದ ನನ್ನನ್ನು ಸಂಹರಿಸಬೇಕೆಂದು ಶಿವನು ಬಂದನು. ಅಲ್ಲಿಯೂ ನನಗೂ ಅವನಿಗೂ ಯುದ್ಧವು ನಡೆಯಿತು. ಅಲ್ಲಿಯೂ ನನ್ನಿಂದ ಸೋತು ಅದೃಶ್ಯನಾದನು. ಆ ಸ್ಥಳದಲ್ಲಿ ಶಾರ್ದೂಲಲಿಂಗ ಎಂಬ ಲಿಂಗದಲ್ಲಿ ಪ್ರವೇಶಿಸಿದನು. ಈಗಲೂ ಆ ಹೆಸರಿನಿಂದ ಪ್ರಸಿದ್ಧನಾಗಿರುವನು.

ಇನ್ನೊಮ್ಮೆ ನಾನು ಕೇದಾರಕ್ಷೇತ್ರಕ್ಕೆ ಹೋಗಿದ್ದೆನು. ಎರಡು ಸಲ ಬಲದಿಂದ ನನ್ನನ್ನು ಸೋಲಿಸಬೇಕೆಂದು ಪ್ರಯತ್ನಿಸಿ ಸೋತು ಹೋದ ಶಿವನು ಕೇದಾರಕ್ಷೇತ್ರದಲ್ಲಿ ಬ್ರಾಹ್ಮಣ ರೂಪದಿಂದ ನನ್ನೊಡನೆ ವಾದವನ್ನು ಮಾಡಿ ಜಯಿಸಬೇಕೆಂದು ಬಂದು ನನ್ನಿಂದ ಸೋತನು. ಅಲ್ಲಿಂದ ಅದೃಶ್ಯನಾದನು. ಆ ಕ್ಷೇತ್ರದಲ್ಲಿರುವ ಕೇದಾರಲಿಂಗದಲ್ಲಿ ಈಗಲೂ ವಾಸಿಸುತ್ತಿರುವನು. ಆ ಕ್ಷೇತ್ರದಲ್ಲಿ ತನಗೆ ಪರಾಜಯವು ಏರ್ಪಟ್ಟಿರುವುದರಿಂದ ಅವನಿಗೆ ತುಂಬಾ ಅಪಮಾನವು ಏರ್ಪಟ್ಟಿತು. ಅದಕ್ಕಾಗಿ " ಇನ್ನು ಮುಂದೆ ವೇದವನ್ನು ತಿಳಿದಿರುವವನು ಯಾವನೂ ಇಲ್ಲಿಗೆ ಬರಕೂಡದು" ಎಂದು ಶಾಪವನ್ನು ಕೊಟ್ಟನು.

ಹೀಗೆ ಬಲದಲ್ಲಿಯೂ ಜ್ಞಾನದಲ್ಲಿಯೂ ಶಿವನಿಗಿಂತ ನಾನು ಉತ್ತಮನೆಂದು ತಿಳಿಸಿದೆನು. ವಿಷ್ಣುಭಕ್ತನಾದ ನನ್ನ ಜ್ಞಾನ ಮತ್ತು ಬಲಗಳಿಗಿಂತ ಅಲ್ಪವಾದ ಜ್ಞಾನ ಮತ್ತು ಬಲಗಳಿಂದ ಯುಕ್ತನಾಗಿರುವ ಶಿವನು ಶ್ರೀಹರಿಗಿಂತ ಉತ್ತಮನಾಗಲು ಸಾಧ್ಯವೇ? ಆದ್ದರಿಂದ ವಿಷ್ಣುವೇ ಸರ್ವೋತ್ತಮನೆಂದು ಸಮರ್ಥಿಸಿದರು.

# ಜರಾಸಂಧ ಮುಂತಾದವರ ಪರಾಜಯ

ಈ ವಿಷಯದಲ್ಲಿ ನನ್ನ ಮಾತುಗಳಿಗೆ ಉತ್ತರವು ತಿಳಿದಿದ್ದರೆ ಯಾವನಿಗೆ ಉತ್ತರವು ತಿಳಿದಿದೆಯೋ ಅವನು ಉತ್ತರವನ್ನು ಕೊಡಲಿ. ಉತ್ತರವನ್ನು ಕೊಡಲಿಕ್ಕೆ ತಿಳಿಯದಿದ್ದವನಿಗೆ ಮಿತಿಮೀರಿದ ಕೋಪವು ಬರುವುದು ಸಹಜ. ಹಾಗೆ ನಿಮ್ಮಲ್ಲಿ ಯಾರು ಯಾರಿಗೆ ಕೋಪವು ಬಂದಿದೆಯೋ ಅವನು ಯುದ್ಧಕ್ಕೆ ಬರಲಿ ಎಂದರು.

ಈ ಮಾತುಗಳನ್ನು ಕೇಳಿದ ಜರಾಸಂಧ ಮುಂತಾದ ಶಿವಭಕ್ತರೆಲ್ಲರೂ ಆಯುಧಗಳನ್ನೂ ಅಸ್ತ್ರಗಳನ್ನೂ ಭೀಮಸೇನದೇವರ ಮೇಲೆ ಪ್ರಯೋಗಿಸಿದರು. ಭೀಮಸೇನದೇವರು ಅವರೆಲ್ಲರನ್ನೂ ಬಾಣಗಳಿಂದ ಓಡಿಸಿದರು. ಜರಾಸಂಧನನ್ನು ಗದೆಯಿಂದ ಬಲವಾಗಿ ಹೊಡೆದರು. ಅವನನ್ನು ಎರಡು ಕೈಗಳಿಂದ ಎತ್ತಿದರು. "ಶಿವಭಕ್ತರ ಗುರುವೇ, ವಿಷ್ಣುಪಾದೋದಕದಲ್ಲಿ ಮುಳುಗು" ಎಂದು ಹೇಳುತ್ತಾ ಗಂಗೆಯಲ್ಲಿ ಹಾಕಿದರು.

# ಕಾಳೀದೇವಿಗೆ ಪುತ್ರೋತ್ಸವ

ಅವನು ತುಂಬಾ ನಾಚಿದನು. ಎಲ್ಲಾ ರಾಜರುಗಳಿಂದ ಸಹಿತನಾಗಿ ತನ್ನ ಊರಿಗೆ ಹೋದನು. ಅನಂತರದಲ್ಲಿ ಕಾಶೀರಾಜನು ಭೀಮಸೇನದೇವರನ್ನು ವಿಶೇಷವಾಗಿ ಪೂಜಿಸಿದನು. ಭೀಮಸೇನದೇವರು ಅವನ ಮಗಳಾಗಿರುವ ಕಾಲೀದೇವಿಯಿಂದ ಸಹಿತರಾಗಿ ಇಂದ್ರಪ್ರಸ್ಥನಗರಕ್ಕೆ ಬಂದರು. ಮೂರು ಲೋಕಗಳಲ್ಲಿರುವ ಎಲ್ಲಾ ಸ್ತ್ರೀಯರ ರೂಪ ಮತ್ತು ಗುಣಗಳಿಗಿಂತ ಅಧಿಕವಾದ ರೂಪ ಮತ್ತು ಗುಣಗಳಿಂದ ಯುಕ್ತಳಾದ ಕಾಲೀದೇವಿಯೊಡನೆ ವಿಹರಿಸಿದರು. ಆ ದೇವಿಯಲ್ಲಿ "ಶರ್ವತ್ರಾತ" ಎಂಬ ಮಗನನ್ನು ಪಡೆದರು. ಅವನು ಹಿಂದಿನ ಜನ್ಮದಲ್ಲಿ ಸಮಾನ ಎಂಬ ವಾಯುದೇವನಾಗಿದ್ದನು. ಬಲ ಮತ್ತು ವೀರ್ಯಗಳಿಂದ ಯುಕ್ತನಾಗಿದ್ದನು. ॥೧೬॥

**ಯೋ ಜಹ್ರೇ ಮಿತ್ರವಿಂದಾಮಥ ದೃಢವೃಷಭಾನ್ ಸಪ್ತ ಬದ್ಧ್ವಾಥ ನೀಲಾಂ**
**ಭದ್ರಾಂ ಮದ್ರೇಶಕನ್ಯಾಮಪಿ ಪರಿಜಗೃಹೇ ಶಕ್ರವಿಜ್ಞಾಪಿತಾರ್ಥಃ ।**
**ತಾರ್ಕ್ಷ್ಯಾರೂಢಃ ಸಭಾರ್ಯೋ ಹಿಮಗಿರಿಶಿಖರೇ ಭೌಮದುರ್ಗಂ ಸಮೇತ್ಯ**
**ಛಿತ್ವಾ ದುರ್ಗಾಣಿ ಕೃಂತ್ವಾ ಮುರಗಲಮರಿಣಾ ದೇವತೇಡ್ಯಃ ಸ ಮಾऽವ್ಯಾತ್ ॥೧೭॥**

**ಪದಚ್ಛೇದ :-** ಯಃ ಜಹ್ರೇ, ಮಿತ್ರವಿಂದಾಂ, ಅಥ ದೃಢವೃಷಭಾನ್, ಸಪ್ತ, ಬದ್ಧ್ವಾ, ಅಥ, ನೀಲಾಂ, ಭದ್ರಾಂ ಮದ್ರೇಶಕನ್ಯಾಂ ಅಪಿ, ಪರಿಜಗೃಹೇ, ಶಕ್ರವಿಜ್ಞಾಪಿತಾರ್ಥಃ, ತಾರ್ಕ್ಷ್ಯಾರೂಢಃ ಸಭಾರ್ಯಃ, ಹಿಮಗಿರಿಶಿಖರೇ, ಭೌಮದುರ್ಗಂ, ಸಮೇತ್ಯ ಛಿತ್ವಾ ದುರ್ಗಾಣಿ, ಕೃಂತ್ವಾ, ಮುರಗಲಂ, ಅರಿಣಾ, ದೇವತೇಡ್ಯಃ, ಸಃ, ಮಾ, ಅವ್ಯಾತ್.

ಅನ್ವಯ - ಯಃ ಮಿತ್ರವಿಂದಾಂ ಜಹ್ರೇ, ಅಥ ಸಪ್ತ ದೃಢವೃಷಭಾನ್ ಬದ್ಧ್ವಾ ನೀಲಾಂ (ಜಹ್ರೇ), ಭದ್ರಾಂ (ಜಹ್ರೇ) ಮದ್ರೇಶಕನ್ಯಾಂ ಅಪಿ ಪರಿಜಗೃಹೇ, ಶಕ್ರವಿಜ್ಞಾಪಿತಾರ್ಥಃ ತಾರ್ಕ್ಷ್ಯಾರೂಢಃ ಸಭಾರ್ಯಃ ಹಿಮಗಿರಿಶಿಖರೇ ಭೌಮದುರ್ಗಂ ಪ್ರಾಪ್ಯ, ದುರ್ಗಾಣಿ ಛಿತ್ವಾ, ಮುರಗಲಂ ಅರಿಣಾ ಕೃಂತ್ವಾ ದೇವತೇಡ್ಯಃ ಸಃ ಮಾ ಅವ್ಯಾತ್.

ಅನ್ವಯಾರ್ಥ - ಯಃ ಯಾವ ಶ್ರೀಕೃಷ್ಣದೇವನು ಮಿತ್ರವಿಂದಾಂ ಮಿತ್ರವಿಂದಾ ಎಂಬ ಕನ್ಯೆಯನ್ನು ಜಹ್ರೇ ಅಪಹರಿಸಿದನೋ ಅಥ ಅನಂತರದಲ್ಲಿ ಸಪ್ತ ಏಳು ಸಂಖ್ಯೆಯುಳ್ಳ ದೃಢವೃಷಭಾನ್ ಬಲಿಷ್ಠವಾದ ಎತ್ತುಗಳನ್ನು ಬದ್ಧ್ವಾ

ಕಟ್ಟಿಹಾಕಿ ನೀಲಾಂ ಅಪಿ ನೀಲಾ ಎಂಬ ಕನ್ಯೆಯನ್ನೂ ಸಹ (ಜಹ್ರೇ) ಪಡೆದನೋ ಭದ್ರಾಂ ಭದ್ರಾ ಎಂಬ ಕನ್ಯೆಯನ್ನು (ಜಹ್ರೇ) ಪಡೆದನೋ ಮದ್ರೇಶಕನ್ಯಾಂ ಅಪಿ ಮದ್ರದೇಶದ ರಾಜನ ಕನ್ಯೆಯಾಗಿರುವ ಲಕ್ಷಣಾ ಎಂಬ ಕನ್ಯೆಯನ್ನು ಪರಿಜಗೃಹೇ ವಿವಾಹವನ್ನು ಮಾಡಿಕೊಂಡನೋ ಶಕ್ರವಿಜ್ಞಾಪಿತಾರ್ಥಃ ದೇವೇಂದ್ರನಿಂದ ವಿಜ್ಞಾಪಿಸಲ್ಪಟ್ಟ ಪ್ರಯೋಜನವುಳ್ಳವನಾಗಿ ತಾರ್ಕ್ಷ್ಯಾರೂಢಃ ಕಶ್ಯಪರ ಮಗನಾಗಿರುವ ಗರುಡನ ಮೇಲೆ ಏರಿದವನಾಗಿ ಸಭಾರ್ಯಃ ಪತ್ನಿಯಾದ ಸತ್ಯಭಾಮಾದೇವಿಯಿಂದ ಸಹಿತನಾಗಿ ಹಿಮಗಿರಿಶಿಖರೇ ಹಿಮವತ್ಪರ್ವತದ ಶಿಖರದಲ್ಲಿದ್ದ ಭೌಮದುರ್ಗಂ ಭೂದೇವಿಯ ಮಗನಾಗಿರುವ ನರಕಾಸುರನ ಕೋಟೆಯನ್ನು ಪ್ರಾಪ್ಯ ಹೊಂದಿ ದುರ್ಗಾಣಿ ಎಲ್ಲಾ ಕೋಟೆಗಳನ್ನೂ ಛಿತ್ವಾ ಕತ್ತರಿಸಿದವನಾಗಿ ಮುರಗಲಂ ಮುರ ಎಂಬ ಅಸುರನ ಕಂಠವನ್ನು ಅರಿಣಾ ಚಕ್ರದಿಂದ ಕೃಂತ್ವಾ ಕತ್ತರಿಸಿದವನಾಗಿ ದೇವತೇಡ್ಯಃ ದೇವತೆಗಳಿಂದ ಸ್ತುತಿಸಲ್ಪಟ್ಟನೋ ಸಃ ಅವನು ಮಾ ನನ್ನನ್ನು ಅವ್ಯಾತ್ ರಕ್ಷಿಸಲಿ.

ವಿಗ್ರಹ - ದೃಢಾಶ್ಚ ತೇ ವೃಷಭಾಶ್ಚ ದೃಢವೃಷಭಾಃ ತಾನ್ ದೃಢವೃಷಭಾನ್; ಮದ್ರಾಣಾಂ ಈಶಃ, ಮದ್ರೇಶಃ, ಮದ್ರೇಶಸ್ಯ ಕನ್ಯಾ ಮದ್ರೇಶಕನ್ಯಾ, ತಾಂ ಮದ್ರೇಶಕನ್ಯಾಂ; ಶಕ್ರೇಣ ವಿಜ್ಞಾಪಿತಃ ಶಕ್ರವಿಜ್ಞಾಪಿತಃ, ಶಕ್ರವಿಜ್ಞಾಪಿತಃ ಅರ್ಥಃ ಯಸ್ಯ ಸಃ ಶಕ್ರವಿಜ್ಞಾಪಿತಾರ್ಥಃ, ತಾರ್ಕ್ಷ್ಯಸ್ಯ ಅಪತ್ಯಂ ಪುಮಾನ್ ತಾರ್ಕ್ಷ್ಯಃ, ತಾರ್ಕ್ಷ್ಯಂ ಆರೂಢಃ ತಾರ್ಕ್ಷ್ಯಾರೂಢಃ, ಭಾರ್ಯಯಾ ಸಹ ವರ್ತತೇ ಇತಿ ಸಭಾರ್ಯ; ಹಿಮಸ್ಯ ಗಿರಿಃ, ಹಿಮಗಿರೇಃ ಶಿಖರಂ ಹಿಮಗಿರಿಶಿಖರಂ, ತಸ್ಮಿನ್ ಹಿಮಗಿರಿಶಿಖರೇ; ಭೂಮ್ಯಾಃ ಅಪತ್ಯಂ ಪುಮಾನ್ ಭೌಮಃ ಭೌಮಸ್ಯ ದುರ್ಗಂ ಭೌಮದುರ್ಗಂ, ತತ್ ಭೌಮದುರ್ಗಂ; ಮುರಸ್ಯ ಗಲಃ ಮುರಗಲಃ, ತಂ ಮುರಗಲಂ; ದೇವತಾಭಿಃ ಈಡ್ಯಃ ದೇವತೇಡ್ಯಃ.

# ಮಿತ್ರವಿಂದಾವಿವಾಹ

**(೭೯) ಅಥ ಮಿತ್ರವಿಂದಾಂ ಜಹ್ರೇ.**

ಕಾಲಿಂದೀ ವಿವಾಹನಂತರದಲ್ಲಿ ಯುದ್ಧವನ್ನು ಮಾಡಿ ಮಿತ್ರವಿಂದೆಯನ್ನು ವಿವಾಹ ಮಾಡಿಕೊಂಡನು.

**ವಿಶೇಷಾರ್ಥ - ಕೃಷ್ಣಃ ಕಾಲಿಂದೀವಿವಾಹಾನಂತರಂ ಪಿತೃಷ್ವಸುಃ ಸುತಾಂ ಮಿತ್ರವಿಂದಾಂ ಸ್ವಯಂವರೇ ಬಲಾದಾಹೃತ್ಯ ಸಕಲ ಭೂಪಾಲಾನ್ ತಿರಸ್ಕೃತ್ಯ**

**ವಿಶೇಷಾರ್ಥ ವಿವರಣ** - ವಸುದೇವನ ಸಹೋದರಿಯಾದ ರಾಜಾಧಿದೇವಿಯಲ್ಲಿ ಅವಂತೀದೇಶದ ರಾಜನಿಗೆ ವಿಂದ, ಅನುವಿಂದ ಎಂಬ ಎರಡು ಗಂಡುಮಕ್ಕಳು ಹುಟ್ಟಿದರು. ಅವರಿಬ್ಬರೂ ದುರ್ಯೋಧನನಲ್ಲಿ ವಿಶೇಷಭಕ್ತಿಯುಳ್ಳವರು. ದುರ್ಯೋಧನನಿಗಾಗಿ ಎಂತಹ ಅಕಾರ್ಯವನ್ನು ಮಾಡುವುದಕ್ಕೂ ಹಿಂಜರಿಯದ ಮಹಾಪಾಪಿಗಳು. ಅವರಿಬ್ಬರ ಸಹೋದರಿಯಾದ ಮಿತ್ರವಿಂದಾದೇವಿಗೆ ಅವಳ ತಂದೆಯು ಸ್ವಯಂವರ ಮಹೋತ್ಸವವನ್ನು ನಡೆಯಿಸಿದನು. ಆ ಸ್ವಯಂವರ ಮಹೋತ್ಸದಲ್ಲಿ ಬಂದಿದ್ದ ಎಲ್ಲಾ ರಾಜರುಗಳ ಮಧ್ಯದಲ್ಲಿ ಶ್ರೀಕೃಷ್ಣದೇವನ ಕಂಠದಲ್ಲಿ ಮಾಲೆಯನ್ನು ಹಾಕಿದಳು. ಆಗ ವಿಂದಾ ಮತ್ತು ಅನುವಿಂದನೂ ಅಡ್ಡಗಟ್ಟಿದರು. ದುರ್ಯೋಧನನನ ಕಂಠದಲ್ಲಿ ಮಾಲೆಯನ್ನು ಹಾಕಬೇಕೆಂದು ನಿರ್ಬಂಧಿಸಿದರು. ಆಗ ಅವರಿಬ್ಬರನ್ನೂ ಅವರಿಬ್ಬರ ಜೊತೆಯಲ್ಲಿ ಸೇರಿರುವ ಜರಾಸಂಧ, ದುರ್ಯೋಧನ ಮುಂತಾದವರನ್ನೂ ಜಯಿಸಿ ಮಿತ್ರವಿಂದಾದೇವಿಯನ್ನು ಕರೆದುಕೊಂಡು ದ್ವಾರಕೆಗೆ ಹೋದನು.

# ನೀಲಾ ವಿವಾಹ

**(೮೦) ಅಥ ದೃಢವೃಷಭಾನ್ ಸಪ್ತಬದ್ಧ್ವಾ ನೀಲಾಂ ಜಹ್ರೇ.**

ಮಿತ್ರವಿಂದಾವಿವಾಹಾನಂತರದಲ್ಲಿ ಅತಿ ಬಲಿಷ್ಠವಾದ ಏಳು ಎತ್ತುಗಳನ್ನು ಕಟ್ಟಿಹಾಕಿ ನೀಲಾ ಎಂಬ ಕನ್ಯೆಯನ್ನು ವಿವಾಹ ಮಾಡಿಕೊಂಡನು.

**ವಿಶೇಷಾರ್ಥ - ನಗ್ನಜಿನ್ನಾಮಕಸ್ಯ ರಾಜ್ಞಃ ಪುರಂ ಪ್ರಾಪ್ಯ, ತೇನ ಪೂಜಿತಃ, ಸ್ವಪುತ್ರೀವರೇಚ್ಛಯಾ ಪುಂಸಾಂ ಬಲಪರೀಕ್ಷಣಾರ್ಥಂ ನಗ್ನಜಿತಾ ಸಂಪಾದಿತಾನ್ ತೀಕ್ಷ್ಣಶೃಂಗಾನತಿಬಲಿಷ್ಠಾನ್ ಸಪ್ತ ವೃಷಭಾನ್ ಸ್ವಯಂ ಚ ಸಪ್ತರೂಪೇಣ ಲೀಲಯಾ ಪಾಶೈರ್ಬದ್ಧ್ವಾ, ರಾಜಾನಂ ಸಂತೋಷ್ಯ, ತೇನ ದತ್ತಾಂ ತತ್ಪುತ್ರೀಂ ನೀಲಾಂ ಪ್ರಾಪ್ಯ.**

**ವಿಶೇಷಾರ್ಥವಿವರಣ** - ಕೋಸಲದೇಶದ ಅಧಿಪತಿಯಾಗಿರುವ ನಗ್ನಜಿತ್ ಎಂಬ ರಾಜನ ಮನೆಗೆ ಶ್ರೀಕೃಷ್ಣದೇವನು ಹೋದನು. ಅವನು ಅತ್ಯಂತ ಭಕ್ತಿಯಿಂದ ಶ್ರೀಕೃಷ್ಣದೇವನನ್ನು ಪೂಜಿಸಿದನು. "ಮಹಾಸ್ವಾಮಿ, ಪೂರ್ಣಾನಂದನಾದ ನಿನಗೆ ಅತ್ಯಲ್ಪವಾದ ನಾನು ಮಾಡತಕ್ಕದ್ದೇನಿದೆ? ಆದರೂ ನನ್ನ ಜನ್ಮವು ಸಫಲವಾಗುವುದಕ್ಕಾಗಿ ನನ್ನಿಂದ ಏನಾದರೂ ಸೇವೆಯನ್ನು ಸ್ವೀಕರಿಸು" ಎಂದನು.

"ಮಹಾರಾಜನೇ, ಕ್ಷತ್ರಿಯನಾಗಿರುವವನು ಯಾವಾಗಲೂ ಭಿಕ್ಷೆಯನ್ನು ಬೇಡಕೂಡದು. ಆದರೂ ನಿನ್ನಲ್ಲಿರುವ ಪ್ರೇಮದಿಂದ ನಿನ್ನ ಕನ್ಯೆಯನ್ನು ಬೇಡುವೆನು. ಕನ್ಯಾಪಿತೃಗಳಿಗೆ ತೃಪ್ತಿಕರವಾದ ಕಾಣಿಕೆಯನ್ನು ಕೊಟ್ಟು ಕನ್ಯೆಯನ್ನು ಸ್ವೀಕರಿಸುವುದು ಶಾಸ್ತ್ರ ಮತ್ತು ಲೋಕಗಳಲ್ಲಿ ರೂಢಿಯು ಬಂದಿದೆ. ಆ ರೀತಿಯಾದ ಯಾವ ಕಾಣಿಕೆಯನ್ನೂ ನಾನು ಕೊಡಲಾರೆನು. ನೀನು ಯಾವ ವಿಧವಾದ ಕಾಣಿಕೆಯನ್ನೂ ಆಶಿಸದೆ ನಿನ್ನ ಕನ್ಯೆಯನ್ನು ನನಗೆ ಕೊಟ್ಟು ವಿವಾಹವನ್ನು ಮಾಡಬೇಕು" ಎಂದನು.

" ಓ ಕೃಷ್ಣದೇವ, ಅನಂತ ಗುಣಪರಿಪೂರ್ಣನಾದ ನಿನಗಿಂತ ಉತ್ತಮನಾದ ವರನು ಎಲ್ಲಿಯೂ ಸಿಗಲಾರನು. ಆದ್ದರಿಂದಲೇ ಅತ್ಯುತ್ತಮಳಾದ ಲಕ್ಷ್ಮೀದೇವಿಯು ನಿನ್ನ ಗುಣಗಳಿಂದ ಪರವಶಳಾಗಿ ನಿನ್ನ ವಕ್ಷಃಸ್ಥಳದಲಿ ಯಾವಾಗಲೂ ವಾಸಿಸುತ್ತಿರುವಳು. ನಿನಗೆ ನನ್ನ ಕನ್ಯೆಯನ್ನು ತುಂಬಾ ಸಂತೋಷದಿಂದ ಕೊಡುವೆನು. ಆದರೆ ನನ್ನ ಕನ್ಯೆಗಾಗಿ ನಾನು ಒಂದು ಪ್ರತಿಜ್ಞೆಯನ್ನು ಮಾಡಿರುವೆನು. ಆ ಪ್ರತಿಜ್ಞೆಯನ್ನು ಸತ್ಯವಾಗುವಂತೆ ಮಾಡಿ ನನ್ನ ಕನ್ಯೆಯನ್ನು ವಿವಾಹ ಮಾಡಿಕೊಂಡು ನನ್ನನ್ನು ಸಂತೋಷಪಡಿಸಬೇಕು. ನನ್ನ ಪ್ರತಿಜ್ಞೆಯನ್ನು ಈಗ ವಿವರಿಸುವೆನು."

" ರುದ್ರದೇವನ ವರದಿಂದ ಅವಧ್ಯರಾದ ಏಳು ಅಸುರರು ಏಳು ಎತ್ತುಗಳಾಗಿ ಹುಟ್ಟಿರುವರು. ಆ ಏಳು ಎತ್ತುಗಳನ್ನು ಯಾರಿಂದಲೂ ಕಟ್ಟಿಹಾಕಲು ಸಾಧ್ಯವಿಲ್ಲ. ಆ ಏಳು ಎತ್ತುಗಳನ್ನು ಒಮ್ಮೆಯೇ ಬಿಡುವೆವು. ಒಬ್ಬನೇ ಆ ಏಳು ಎತ್ತುಗಳನ್ನು ಯಾವನು ಕಟ್ಟಿಹಾಕುವನೋ ಅವನು ನನ್ನ ಮಗಳನ್ನು ವಿವಾಹ ಮಾಡಿಕೊಳ್ಳಬಹುದು. ಇದು ರಾಜಕುಮಾರರ ಬಲಪರೀಕ್ಷಾರ್ಥವಾಗಿ ಮಾಡಿರುವ ಪ್ರತಿಜ್ಞೆ. ಈ ಪ್ರತಿಜ್ಞೆಯನ್ನು ತಿಳಿದ ಅಸಂಖ್ಯರಾಜಕುಮಾರರು ಅಲ್ಲಿಗೆ ಬಂದರು. ತೀಕ್ಷ್ಣವಾದ ಕೊಂಬುಗಳಿಂದ ತಿವಿಯಲ್ಪಟ್ಟವರಾಗಿ ಕೈಗಳು ಮುಂತಾದ ಅಂಗಗಳಿಂದ ಹೀನರಾಗಿ ತುಂಬಾ ದುರವಸ್ಥೆಯಿಂದ ಯುಕ್ತರಾಗಿ ಹಿಂದಿರುಗಿ ಹೋದರು. ನೀನು ನನ್ನ ಪ್ರತಿಜ್ಞೆಯನ್ನು ಸತ್ಯವಾಗುವಂತೆ

ಮಾಡಬೇಕು. ಆ ಎತ್ತುಗಳನ್ನು ನಿಗ್ರಹಿಸಿ ನನ್ನ ಮಗಳನ್ನು ವಿವಾಹ ಮಾಡಿಕೊಳ್ಳಬೇಕು. ಇದು ನನ್ನ ಸವಿನಯ ಪ್ರಾರ್ಥನೆ" ಎಂದನು.

ಶ್ರೀಕೃಷ್ಣದೇವನು ಈ ಪ್ರಾರ್ಥನೆಯನ್ನು ಅಂಗೀಕರಿಸಿದನು. ಏಳು ರೂಪಗಳನ್ನು ಸ್ವೀಕರಿಸಿದನು. ಒಂದೇ ಕಾಲದಲ್ಲಿ ಬಿಡಲ್ಪಟ್ಟ ಏಳು ಎತ್ತುಗಳನ್ನು ಒಂದೊಂದು ರೂಪದಿಂದ ಒಂದೊಂದು ಎತ್ತುಗಳಂತೆ ಕಟ್ಟಿಹಾಕಿದನು. ಚಿಕ್ಕಬಾಲಕರು ಮರದ ಬೊಂಬೆಗಳನ್ನು ಎಳೆದುಕೊಂಡು ಹೋದಂತೆ ಕೊಬ್ಬು ಅಡಗಿದ ಎತ್ತುಗಳನ್ನು ಹಗ್ಗದಿಂದ ಶೆಳೆದನು.

ಇದನ್ನು ನೋಡಿದ ನಗ್ನಜಿತ್ ಎಂಬ ರಾಜನು ತುಂಬಾ ಸಂತೋಷದಿಂದ ನೀಲಾದೇವಿಯನ್ನು ಕೊಟ್ಟು ವಿವಾಹವನ್ನು ಮಾಡಿದನು. ಅವಳನ್ನು ಕರೆದುಕೊಂಡು ಶ್ರೀಕೃಷ್ಣದೇವನು ದ್ವಾರಕೆಗೆ ಹಿಂದಿರುಗಿದನು. ಇದೇ ನೀಲಾದೇವಿಯು ಯಶೋದೆಯ ಸಹೋದರನಾದ "ಕುಂಭಕ" ಎಂಬ ಗೊಲ್ಲನಿಗೆ ಮಗಳಾಗಿ ಹುಟ್ಟಿದಳು. ಆಗಲೂ ಇದೇ ದೈತ್ಯರು ಎತ್ತುಗಳಾಗಿ ಹುಟ್ಟಿದ್ದು ಕುಂಭಕನ ಮನೆಯಲ್ಲಿ ವಾಸಿಸುತ್ತಿದ್ದರು. ಅವರನ್ನು ಆಗಲೂ ಏಳು ರೂಪಗಳಿಂದ ಶ್ರೀಕೃಷ್ಣದೇವನು ನಿಗ್ರಹಿಸಿ ನೀಲಾದೇವಿಯನ್ನು ವಿವಾಹ ಮಾಡಿಕೊಂಡಿದ್ದನು. ಅದೇ ನೀಲಾದೇವಿಯು ನಗ್ನಜಿತ್ ಎಂಬ ರಾಜನ ಕುಮಾರಿಯಾದ ನೀಲಾದೇವಿಯಲ್ಲಿ ಐಕ್ಯವನ್ನು ಹೊಂದಿದಳು. ಆ ದೈತ್ಯರೇ ನಗ್ನಜಿತ್ ಎಂಬ ರಾಜನ ಮನೆಯಲ್ಲಿದ್ದು ಶ್ರೀಕೃಷ್ಣದೇವನಿಂದ ಪುನಃ ನಿಗ್ರಹಿಸಲ್ಪಟ್ಟರು.

**(೮೧) ಭದ್ರಾಂ ಜಹ್ರೇ.**

ಭದ್ರೆಯನ್ನು ವಿವಾಹ ಮಾಡಿಕೊಂಡನು.

**ವಿಶೇಷಾರ್ಥ - ಕೇಕಯದೇಶಾಧಿಪತೇಃ ಪತ್ನ್ಯಾಃ ಶ್ರುತಕೀರ್ತಿನಾಮ್ನ್ಯಾಃ ಪಿತೃಷ್ವಸುಃ ಪುತ್ರೀಂ ಭದ್ರಾಂ ಚ ಪ್ರಾಪ್ಯ.**

**ವಿಶೇಷಾರ್ಥವಿವರಣ -** ಋಭು ಎಂಬ ದೇವತೆಯು ಕೇಕಯದೇಶದ ಅಧಿಪತಿಯಾಗಿ ಶೈಬ್ಯ ಎಂಬ ಹೆಸರಿನಿಂದ ಹುಟ್ಟಿದನು. ಅವನು ವಸುದೇವನ ಸಹೋದರಿಯಾದ ಶ್ರುತಕೀರ್ತಿ ಎಂಬುವಳನ್ನು ವಿವಾಹ ಮಾಡಿಕೊಂಡನು. ಅವಳಲ್ಲಿ ಶೈಬ್ಯನಿಗೆ ಐದು ಮಕ್ಕಳು ಹುಟ್ಟಿದರು. ಅವರು ಐವರೂ ವಿಶ್ವೇದೇವರುಗಳಲ್ಲಿ ಐವರ ಅವತಾರವಾಗಿದ್ದರು. ಅವರೂ ಅವರ ತಂದೆಯೂ ಶ್ರೀಕೃಷ್ಣದೇವನಲ್ಲಿ ಮತ್ತು ಪಾಂಡವರಲ್ಲಿ ಅತ್ಯಂತ ಭಕ್ತಿಯುಳ್ಳವರಾಗಿದ್ದರು. ಅವರು ಅವರ ತಂದೆಯಿಂದ ಸಹಿತರಾಗಿ ಅವರ ತಂಗಿಯಾದ ಭದ್ರಾದೇವಿಯನ್ನು ಶ್ರೀಕೃಷ್ಣದೇವನಿಗೆ ವಿವಾಹ ಮಾಡಿಕೊಟ್ಟರು. ಅವಳನ್ನು ಕರೆದುಕೊಂಡು ಶ್ರೀಕೃಷ್ಣದೇವನು ದ್ವಾರಕೆಗೆ ಬಂದನು.

## ಲಕ್ಷಣಾವಿವಾಹ

**(೮೨) ಮದ್ರೇಶಕನ್ಯಾಂ ಅಪಿ ಪರಿಜಗೃಹೇ.**

ಮದ್ರದೇಶದ ಅಧಿಪತಿಯ ಕನ್ಯೆಯಾದ ಲಕ್ಷಣಾ ಎಂಬ ಕನ್ಯೆಯನ್ನೂ ವಿವಾಹ ಮಾಡಿಕೊಂಡನು.

**ವಿಶೇಷಾರ್ಥ - ಸುತಾಂ ಚ ಮದ್ರಾಧಿಪತೇಃ ಲಕ್ಷ ಣಾಂ ಲಕ್ಷಣೈರ್ಯುತಾಂ ಸ್ವಯಂವರೇ ಲಕ್ಷ್ಯವೇಧಂ ಕೃತ್ವಾಪ್ರಾಪ್ಯ.**

ವಿಶೇಷಾರ್ಥವಿವರಣ - ಮದ್ರದೇಶದ ರಾಜನಿಗೆ ಲಕ್ಷಣಾ ಎಂಬ ಕುಮಾರಿಯಿದ್ದಳು. ಅವಳಿಗೆ ಮದ್ರರಾಜನು ಸ್ವಯಂವರ ಮಹೋತ್ಸವವನ್ನು ನಡೆಯಿಸಿದನು. ದ್ರೌಪದೀದೇವಿಯ ಸ್ವಯಂವರ ಮಹೋತ್ಸವದಂತೆ ಈ ಸ್ವಯಂವರ ಮಹೋತ್ಸವದಲ್ಲಿಯೂ ಮರದ ಮೇಲೆ ಮೀನನ್ನು ಕಟ್ಟಿದರು. ಮದ್ರರಾಜನು ರುದ್ರನನ್ನು ಕುರಿತು ತಪಸ್ಸನ್ನು ಮಾಡಿದನು. ಅವನ ಕೈಯಲ್ಲಿರುವ ಪಿನಾಕ ಎಂಬ ಧನುಸ್ಸನ್ನು ಬೇಡಿದರೆ ಅದನ್ನು ಕೊಟ್ಟನು. ಆ ಪಿನಾಕ ಧನುಸ್ಸನ್ನು ಎತ್ತಿ ಬಾಣವನ್ನು ಬಿಡಬೇಕು. ದ್ರೌಪದೀ ಸ್ವಯಂವರ ಕಾಲದಲ್ಲಿ ಮೀನು ಎಲ್ಲಾ ಕಡೆಯಲ್ಲಿ ಮುಚ್ಚಲ್ಪಟ್ಟಿರಲಿಲ್ಲ. ಆ ಮೀನಿನ ಕೆಳಗಿರುವ ಹಲಿಗೆಯಲ್ಲಿರುವ ರಂಧ್ರದಿಂದ ಭೂಮಿಯಲ್ಲಿರುವ ನೀರಿನಲ್ಲಿ ಮೀನನ್ನು ನೋಡಿ ಬಾಣವನ್ನು ಬಿಟ್ಟು ಮೀನನ್ನು ಕತ್ತರಿಸಬೇಕಾಗಿತ್ತು. ಆ ಬಾಣವೂ ಪೂರ್ಣವಾಗಿರಬೇಕಾಗಿತ್ತು. ಈ ಸ್ವಯಂವರಕಾಲದಲ್ಲಿ ಹಾಗಿಲ್ಲ. ಮೀನು ಎಲ್ಲಾ ಕಡೆಯಲ್ಲಿಯೂ ಮುಚ್ಚಲ್ಪಟ್ಟಿತ್ತು. ಹಲಿಗೆಯು ಮೀನಿನ ಮೇಲೆ ಇತ್ತು. ಅದರಲ್ಲಿರುವ ರಂಧ್ರದಿಂದ ಭೂಮಿಯಲ್ಲಿರುವ ನೀರಿನಲ್ಲಿ ಎಲ್ಲಾ ಕಡೆಯಲ್ಲಿಯೂ ಮುಚ್ಚಲ್ಪಟ್ಟ ಮೀನನ್ನು ತಿಳಿದು ಕತ್ತರಿಸಬೇಕಾಗಿತ್ತು. ಬಾಣವೂ ಪೂರ್ಣವಾಗಿರಕೂಡದು. ತುಂಡಾಗಿದ್ದಿರಬೇಕು. ಇಷ್ಟು ದ್ರೌಪದೀಸ್ವಯಂವರ ಮತ್ತು ಲಕ್ಷಣಾ ಸ್ವಯಂವರಗಳಲ್ಲಿರುವ ವೈಲಕ್ಷಣ್ಯ. ಆದ್ದರಿಂದ ಅತ್ಯಂತ ಅಸಾಧ್ಯವಾಗಿತ್ತು.

ಈ ಸ್ವಯಂವರಮಹೋತ್ಸವದಲ್ಲಿ ಜರಾಸಂಧ, ಕರ್ಣ, ದುರ್ಯೋಧನ ಮುಂತಾದವರೆಲ್ಲರೂ ಭಾಗವನ್ನು ವಹಿಸುವುದಕ್ಕಾಗಿ ಬಂದಿದ್ದರು. ಪಾಂಡವರು ಈ ಸ್ವಯಂವರಮಹೋತ್ಸವವನ್ನು ನೋಡುವುದಕ್ಕಾಗಿಯೇ ಬಂದಿದ್ದರು. ಭಾಗವನ್ನು ವಹಿಸುವುದಕ್ಕಾಗಿ ಬರಲಿಲ್ಲ. ದುರ್ಯೋಧನ ಮುಂತಾದದವರು ಧನುಸ್ಸನ್ನು ಎತ್ತುವುದಕ್ಕೂ ಹಗ್ಗವನ್ನು ಕಟ್ಟಿ ಶೆಳೆಯುವುದಕ್ಕೂ ಉತ್ಸಾಹದಿಂದ ಹೊರಟರು. ಕೆಲವರು ಧನುಸ್ಸನ್ನು ಅಲ್ಲಾಡಿಸುವುದಕ್ಕೆ ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಕೆಲವರು ಧನುಸ್ಸನ್ನು ಸ್ವಲ್ಪ ದೂರದ ವರೆಗೆ ಶೆಳೆದರು. ಅದೇ ಧನುಸ್ಸಿನಿಂದ ಹೊಡೆಯಲ್ಪಟ್ಟವರಾಗಿ ಕೆಳಗೆ ಬಿದ್ದು ಹಿಂದಿರುಗಿದರು.

ದುರ್ಯೋಧನ, ಕರ್ಣ, ಜರಾಸಂಧ ಈ ಮೂವರು ಧನುಸ್ಸನ್ನು ಎತ್ತಿ ಹಗ್ಗವನ್ನು ಕಟ್ಟಿ ಪೂರ್ಣವಾಗಿ ಶೆಳೆದರು. ಆದರೆ ಮೀನು ಎಲ್ಲಿದೆ ಎಂಬುದನ್ನು ತಿಳಿಯದೇ ಹಿಂದಿರುಗಿದರು.

ಅರ್ಜುನನು ಯೋಚಿಸಿದನು. " ಈ ಲಕ್ಷಣಾದೇವಿಯು ಶ್ರೀಕೃಷ್ಣನನ್ನೇ ವರಿಸಬೇಕು. ಆದ್ದರಿಂದ ಮೀನನ್ನು ಕತ್ತರಿಸಬಾರದು'' ಎಂದು ತೀರ್ಮಾನಿಸಿ ಧನುಸ್ಸನ್ನು ಎತ್ತಿದನು. ತುಂಡಾದ ಬಾಣವನ್ನು ಬಿಟ್ಟನು. ಆ ಬಾಣವು ಮೀನಿನ ಮೇಲಿರುವ ಹಲಿಗೆಯಲ್ಲಿರುವ ರಂಧ್ರದ ಮೂಲಕವಾಗಿ ಒಳಗೆ ಹೋಗಿ ಮೀನನ್ನು ಮುಟ್ಟಿತು. ಆದರೆ ಕತ್ತರಿಸಲಿಲ್ಲ. ಹಿಂದಿರುಗಿದನು.

ಭೀಮಸೇನದೇವರು ಆಲೋಚಿಸಿದರು. " ಈ ಲಕ್ಷಣಾದೇವಿಯನ್ನು ಶ್ರೀಕೃಷ್ಣನು ವಿವಾಹ ಮಾಡಿಕೊಳ್ಳಬೇಕು. ಶ್ರೀಕೃಷ್ಣದೇವನಿಗೆ ಯೋಗ್ಯವಾದ ಕಾರ್ಯಗಳನ್ನು ಮಾಡಬೇಕೆಂದು ಇಚ್ಛಿಸುವವನೂ ಅಪರಾಧಿಯೆನಿಸುವನು. ಆದ್ದರಿಂದ ಈ ಧನುಸ್ಸನ್ನು ಎತ್ತುವುದೂ, ಬಾಣವನ್ನು ಬಿಡುವುದೂ, ಮೀನನ್ನು ಕತ್ತರಿಸುವುದೂ ಮಹತ್ತರವಾದ ಅಪರಾಧವೆನಿಸುತ್ತದೆ. ಆದ್ದರಿಂದ ನಾನು ಯಾವುದನ್ನೂ ಮಾಡಲಾರೆನು'' ಎಂದು ತೀರ್ಮಾನಿಸಿದರು. ಅವರು ಕುಳಿತ ಸ್ಥಳದಿಂದ ಏಳಲೇ ಇಲ್ಲ.

ಅನಂತರದಲ್ಲಿ ಶ್ರೀಕೃಷ್ಣದೇವನು ಎದ್ದು ಲೀಲಾಮಾತ್ರದಿಂದ ಧನುಸ್ಸನ್ನು ಎತ್ತಿ ಬೇಗನೆ ಹಗ್ಗವನ್ನು ಕಟ್ಟಿ ಪೂರ್ಣವಾಗಿ ಶೆಳೆದು ತುಂಡಾದ ಬಾಣವನ್ನು ಬಿಟ್ಟನು. ಆ ಬಾಣವು ಮೀನಿನ ಮೇಲಿರುವ ಹಲಿಗೆಯಲ್ಲಿರುವ ರಂಧ್ರವನ್ನು ಪ್ರವೇಶಿಸಿ ಮೀನನ್ನು ಕತ್ತರಿಸಿತು. ಆಗ ದೇವತೆಗಳು ದುಂದುಭಿ ಮುಂತಾದ ವಾದ್ಯಗಳನ್ನು ಬಾರಿಸಿದರು. ಶ್ರೀಕೃಷ್ಣದೇವನ ಮೇಲೆ ಹೂವಿನ ಮಳೆಯನ್ನು ಸುರಿಸಿದರು. ಬ್ರಹ್ಮಮುಂತಾದ ದೇವತೆಗಳು ಶ್ರೀಕೃಷ್ಣದೇವನನ್ನು ಸ್ತುತಿಸಿದರು.

ಆಗ ಮದ್ರರಾಜನ ಕನ್ಯೆಯಾಗಿರುವ ಲಕ್ಷ್ಣಾದೇವಿಯು ಶ್ರೀಕೃಷ್ಣದೇವನ ಕಂಠದಲ್ಲಿ ಮಾಲೆಯನ್ನು ಹಾಕಿ ಅವನ ಪಕ್ಕದಲ್ಲಿ ನಿಂತಳು. ಆ ಸಮಯದಲ್ಲಿ ಜರಾಸಂಧ ಮುಂತಾದ ಎಲ್ಲಾ ರಾಜರುಗಳೂ ಯುದ್ಧಕ್ಕಾಗಿ ಬಂದರು. ಶ್ರೀಕೃಷ್ಣದೇವನು ಅವರೆಲ್ಲರನ್ನೂ ಓಡಿಸಿದನು. ಭೀಮಸೇನದೇವರಿಂದಲೂ ಅರ್ಜುನನಿಂದಲೂ ಸಹಿತನಾಗಿ ದ್ವಾರಕೆಗೆ ಹೋದನು.

## ಶ್ರೀಕೃಷ್ಣದೇವನ ಅಷ್ಟಮಹಿಷಿಯರಲ್ಲಿ ತಾರತಮ್ಯ

ರುಕ್ಮಿಣೀ, ಸತ್ಯಭಾಮಾ, ಜಾಂಬವತೀ,ಕಾಲಿಂದೀ, ಮಿತ್ರವಿಂದಾ, ನೀಲಾ, ಭದ್ರಾ, ಲಕ್ಷ್ಣಾ ಎಂಬ ಎಂಟು ಕನ್ಯೆಯರ ವಿವಾಹವನ್ನು ಈಗ ಹೇಳಿದೆವು. ಇವರೇ ಶ್ರೀಕೃಷ್ಣದೇವನ ಪತ್ನಿಯರಲ್ಲಿ ಶ್ರೇಷ್ಠರು. ಇವರು ಅಷ್ಟಮಹಿಷಿಯರೆನಿಸುವರು. ಈ ಎಂಟು ಪತ್ನಿಯರೂ ಶ್ರೀಕೃಷ್ಣದೇವನಿಗೆ ಅತ್ಯಂತವಾಗಿ ಇಷ್ಟರಾಗಿರುವರು. ಹದಿನಾಲ್ಕು ಲೋಕಗಳಲ್ಲಿಯೂ ಪರಮಸುಂದರಿಯರಾಗಿರುವರು. ಇವರಲ್ಲಿ ಮಹಾಲಕ್ಷ್ಮೀದೇವಿಯರು ರುಕ್ಮಿಣೀ, ಸತ್ಯಭಾಮಾ, ಎಂಬ ಎರಡು ರೂಪಗಳನ್ನು ಸ್ವೀಕರಿಸಿರುವರು. ಆದ್ದರಿಂದ ಇವರಿಬ್ಬರೂ ಸರ್ವಸ್ತ್ರೀಯರ ಮಧ್ಯದಲ್ಲಿಯೂ ಉತ್ತಮರು ಮತ್ತು ಅನ್ಯೋನ್ಯವಾಗಿ ಸಮಾನರು.

ಉಳಿದ ಆರು ಪತ್ನಿಯರಲ್ಲಿ ಲಕ್ಷ್ಮೀದೇವಿಯರ ವಿಶೇಷಸನ್ನಿಧಾನವಿದೆ. ಆದ್ದರಿಂದ ಆ ಆರೂ ಪತ್ನಿಯರೂ ಸ್ವರೂಪ ಯೋಗ್ಯತೆಯಲ್ಲಿ ಪ್ರದ್ಯುಮ್ನ ಎಂಬ ಶ್ರೀಕೃಷ್ಣದೇವನ ಮಗನಿಗಿಂತ ಇಪ್ಪತ್ತರಷ್ಟು ಉತ್ತಮರು. ಆದ್ದರಿಂದಲೇ "ಸ್ತ್ರಿಯಃ ಪಡ್ಷ ವಿಷ್ಣೋಃ" ಎಂದು ತಾರತಮ್ಯ ಸ್ತೋತ್ರದಲ್ಲಿ ಹೇಳಿದೆ. ಈ ಆರು ಸ್ತ್ರೀಯರೂ ಸ್ವರೂಪ ಯೋಗ್ಯತೆಯಲ್ಲಿ ಸಮರಾಗಿದ್ದರೂ. ಜಾಂಬವತೀದೇವಿಯಲ್ಲಿ ಐವರು ಶ್ರೀಕೃಷ್ಣಪತ್ನಿಯರಲ್ಲಿರುವ ಮಹಾಲಕ್ಷ್ಮಿ ದೇವಿಯರ ಸನ್ನಿಧಾನಕ್ಕಿಂತ ಅಧಿಕವಾದ ಸನ್ನಿಧಾನವಿದೆ. ಆದ್ದರಿಂದ ಈ ಆರು ಪತ್ನಿಯರ ಮಧ್ಯದಲ್ಲಿ ಜಾಂಬವತಿಯು ಪ್ರಧಾನಳೆನಿಸುವಳು.

ಶ್ರೀಕೃಷ್ಣದೇವನು ಬಲರಾಮನಲ್ಲಿ ಎಷ್ಟು ಪ್ರೀತಿಯನ್ನು ಇಟ್ಟುಕೊಂಡಿರುವನೋ ಜಾಂಬವತೀಯಲ್ಲಿಯೂ ಅಷ್ಟೇ ಪ್ರೀತಿಯನ್ನು ಇಟ್ಟುಕೊಂಡಿರುವನು. ಉಳಿದ ನೀಲಾ ಮುಂತಾದ ಐವರು ಪತ್ನಿಯರಲ್ಲಿಟ್ಟಿರುವ ಪ್ರೀತಿಯು ಜಾಂಬವತಿಯಲ್ಲಿಟ್ಟಿರುವ ಪ್ರೀತಿಗಿಂತ ಸ್ವಲ್ಪ ಕಡಿಮೆಯಾಗಿರುತ್ತದೆ. ಈ ಎಂಟು ಸ್ತ್ರೀಯರು ಅನಾದಿಕಾಲದಿಂದ ಇಂದಿನವರೆಗೂ ಇಂದಿನಿಂದ ಮುಂದೆಯೂ ಶ್ರೀಹರಿಯನ್ನು ಬಿಟ್ಟು ಇತರರನ್ನು ವಿವಾಹವನ್ನು ಮಾಡಿಕೊಂಡವರೂ ಮಾಡಿಕೊಳ್ಳುವವರು ಅಲ್ಲ.

ಜಾಂಬವತಿಯಲ್ಲಿ ಲಕ್ಷ್ಮೀದೇವಿಯರು ವಿಶೇಷ ಸನ್ನಿಧಾನವು ಯಾವಾಗಲೂ ಇರುವುದರಿಂದ ಈ ಆರು

ಪತ್ನಿಯರಲ್ಲಿ ಜಾಂಬವತಿಯು ಪ್ರಧಾನಳೆಂದು ಹೇಳಿದೆವು. ಇದರಂತೆಯೇ ಇತರ ಐವರು ಪತ್ನಿಯರಲ್ಲಿ ಯಾವಾಗ ಮಹಾಲಕ್ಷ್ಮೀದೇವಿಯರ ವಿಶೇಷ ಸನ್ನಿಧಾನವು ಏರ್ಪಡುತ್ತದೆಯೋ ಆಗ ಅವರಲ್ಲಿ ಅಧಿಕ ಪ್ರೀತಿಯೂ ಏರ್ಪಡುತ್ತದೆ. ಯಾವಾಗ ಕಡಿಮೆಯಾಗುತ್ತದೆಯೋ ಆಗ ಪ್ರೀತಿಯು ಕಡಿಮೆಯಾಗುತ್ತದೆ. ಪ್ರೀತಿಯು ಕಡಿಮೆಯಾದಾಗ ಶ್ರೀಕೃಷ್ಣದೇವನ ಪುತ್ರನಾಗಿರುವ ಪ್ರದ್ಯುಮ್ನನಿಗಿಂತ ಇಪ್ಪತ್ತರಷ್ಟು ಉತ್ತಮರೆಂದು ತಿಳಿಯಬೇಕು.

## ಪ್ರಕಾರಾಂತರದಿಂದ ಶ್ರೀವಿಷ್ಣುಸರ್ವೋತ್ತಮತ್ವ ಸಮರ್ಥನೆ

ಶ್ರೀಕೃಷ್ಣದೇವನು ಹಿಂದೆ ಹೇಳಿರುವ ಅಷ್ಟಮಹಿಷಿಯರೊಡನೆ ದ್ವಾರಕೆಯಲ್ಲಿ ಸುಖವಾಗಿ ವಾಸಿಸುತ್ತಿದ್ದನು. ಆಗ ದುರ್ಯೋಧನ ಮುಂತಾದ ವಿಷ್ಣುದ್ವೇಷಿಗಳೂ ಪಾಂಡವರು ಮುಂತಾದ ವಿಷ್ಣುಭಕ್ತರೂ ನಾನಾ ದೇಶಗಳ ಅಸಂಖ್ಯ ರಾಜರುಗಳೂ ರೈವತಕ ಎಂಬ ಪರ್ವತದಲ್ಲಿ ವಿಹಾರ ಮಾಡುತ್ತಿರುವ ಶ್ರೀಕೃಷ್ಣದೇವನ್ನು ನೋಡಬೇಕೆಂದು ಬಂದರು. ಅವರೆಲ್ಲರಿಗೂ ಶ್ರೀಕೃಷ್ಣದೇವನು ದರ್ಶನವನ್ನು ಕೊಟ್ಟನು. ಶ್ರೀಕೃಷ್ಣದೇವನು ರುಕ್ಮಿಣೀದೇವಿಯಿಂದ ಸಹಿತನಾಗಿ ದಿವ್ಯವಾದ ಆಸನದಲ್ಲಿ ಕುಳಿತಿದ್ದನು. ಎಲ್ಲಾ ರಾಜಶ್ರೇಷ್ಠರುಗಳು ಅವನನ್ನು ನಮಸ್ಕರಿಸಿದರು.

ಆಗ ಆಕಾಶಮಾರ್ಗದಿಂದ ನಾರದರು ಅಲ್ಲಿಗೆ ಬಂದರು. ಶ್ರೀಕೃಷ್ಣದೇವನನ್ನು ನಮಸ್ಕರಿಸಿದರು. " ನೀನೇ ಆಶ್ಚರ್ಯನಾಗಿರುವಿ ಮತ್ತು ಧನ್ಯನಾಗಿರುವಿ" ಎಂದು ಹೇಳಿದರು. ಈ ಮಾತುಗಳನ್ನು ಶ್ರೀಕೃಷ್ಣದೇವನು ಕೇಳಿದನು. " ನಾನು ಮಾತ್ರ ಆಶ್ಚರ್ಯನಲ್ಲ ಮತ್ತು ಧನ್ಯನಲ್ಲ. ದಕ್ಷಿಣೆಗಳೂ ನನ್ನಂತೆಯೇ ಆಶ್ಚರ್ಯಗಳೂ ಮತ್ತು ಧನ್ಯಗಳೂ ಆಗಿವೆ" ಎಂದನು.

ಈ ಮಾತುಗಳನ್ನು ಕೇಳಿದ ಮೇಲೆ ನಾರದರು ತೃಪ್ತರಾದರು. "ನೀನು ಹೇಳಿದ್ದು ಸರಿ" ಎಂದರು. ಈ ಮಾತುಗಳನ್ನು ಕೇಳಿದ ರಾಜರಿಗೆ ಅರ್ಥವು ತಿಳಿಯಲಿಲ್ಲ. ಶ್ರೀಕೃಷ್ಣದೇವನನ್ನು ನೋಡಿದರು. " ನಾರದರ ಮಾತುಗಳ ಅರ್ಥವೇನು? ನಿನ್ನ ಪ್ರತ್ಯುತ್ತರದ ಅರ್ಥವೇನು? ವಿಶದವಾಗಿ ಹೇಳು" ಎಂದು ಪ್ರಾರ್ಥಿಸಿದರು. ಈ ಮಾತುಗಳನ್ನು ಕೇಳಿದ ಶ್ರೀಕೃಷ್ಣದೇವನು ನಾರದರ ಮುಖವನ್ನು ನೋಡಿದನು. " ಇವರ ಪ್ರಶ್ನೆಗೆ ನೀನೇ ಉತ್ತರವನ್ನು ಹೇಳು" ಎಂದನು. ಅವರು ಉತ್ತರವನ್ನು ಹೇಳಲು ಆರಂಭಿಸಿದರು.

ನಾನು ನನ್ನ ಮಾತುಗಳಲ್ಲಿ ಆಶ್ಚರ್ಯ, ಧನ್ಯ ಎಂಬ ಎರಡು ಶಬ್ದಗಳನ್ನು ಉಚ್ಚರಿಸಿದೆನು. ಇವುಗಳಲ್ಲಿ "ಆಶ್ಚರ್ಯ" ಎಂಬ ಶಬ್ದದ ಅರ್ಥವನ್ನು ಈಗ ವಿವರಿಸುವೆನು. ಅದಕ್ಕಾಗಿ ಆಶ್ಚರ್ಯ ಎಂಬ ಪದಕ್ಕೆ ವಿಗ್ರಹವನ್ನು ಮಾಡುವೆನು". "ಆ+ಶ್ಚರ್ಯಾ+ಯಸ್ಮಾತ್ ಸಃ" ಅಂದರೆ "ಆ" ಚೆನ್ನಾಗಿ "ಶ್ಚರ್ಯಾಃ" ಸುಖವನ್ನು ಪಡೆಯುವುದಕ್ಕೆ ಅರ್ಹರಾದ ಜೀವರು" "ಯಸ್ಮಾತ್ ಸಃ" ಯಾವನಿಂದ ಏರ್ಪಡುವರೋ ಅವನು ಅಂದರೆ ಮುಕ್ತಿಯೋಗ್ಯರಾದ ಜೀವರಿಗೆ ಮುಕ್ತಿಯನ್ನು ಕೊಡುವ ಅಧಿಕಾರವುಳ್ಳವನು. ಆದ್ದರಿಂದಲೇ ಸರ್ವೋತ್ತಮನು ಎಂದು ಆಶ್ಚರ್ಯ ಎಂಬ ಪದದ ಅರ್ಥ.

ಈಗ "ಧನ್ಯ" ಎಂಬ ಪದದ ಅರ್ಥವನ್ನು ವಿವರಿಸುವೆನು. ಅದಕ್ಕಾಗಿ "ಧನ್ಯ" ಎಂಬ ಪದಕ್ಕೆ ವಿಗ್ರಹವನ್ನು ಮಾಡುವೆನು. "ಧಂ+ನಿ+ಯಾಪಯತಿ ಇತಿ ಧನ್ಯಃ" ಅಂದರೆ "ಧಂ" ಈ ತಮ್ಮ ಅಧೀನವೆಂದೂ ಅದನ್ನು ತಾವೇ

ಧರಿಸುತ್ತಿರುವವೆಂದೂ ಮುರ್ಖರಿಂದ ಹೇಳಲ್ಪಡುತ್ತಿರುವ ಪ್ರಪಂಚವನ್ನು "ನಿ" ಚೆನ್ನಾಗಿ ಅಂದರೆ ಎಂಟನೆಯ ರಸವು ಹೇಗೆ ಇಲ್ಲವೇ ಇಲ್ಲವೋ ಅದರಂತೆ "ಯಾಪಯತಿ" ಮಾಡುವವನು ಅಂದರೆ ಈ ಪ್ರಪಂಚವು ನನ್ನ ಅಧೀನವಲ್ಲ. ಪರಮಾತ್ಮನ ಅಧೀನ ಆದ್ದರಿಂದ ನಿನಗೆ ಅಂದರೆ ಪರಮಾತ್ಮನಿಗೆ ಸಮಾನನಾದವನು ಯಾವನೂ ಇಲ್ಲ ಎಂಬ ಅರ್ಥವು "ಧನ್ಯ" ಎಂಬ ಪದದಿಂದ ತಿಳಿಯುತ್ತದೆ.

ಆದ್ದರಿಂದ "ತ್ವಂ ಆಶ್ಚರ್ಯಃ" ಎಂಬ ಅಂಶದಿಂದ ನೀನು ಸರ್ವೋತ್ತಮನೆಂದೂ "ತ್ವಂ ಧನ್ಯಃ" ಎಂಬ ಅಂಶದಿಂದ ನಿನಗೆ ಸಮಾನನು ಯಾವನೂ ಇಲ್ಲವೆಂದೂ ನಾನು ಹೇಳಿದೆನು. ಅದಕ್ಕೆ ಶ್ರೀಕೃಷ್ಣದೇವನು "ದಕ್ಷಿಣಾಭಿಃ ಸಹ" ಎಂದು ಪ್ರತ್ಯುತ್ತರವನ್ನು ಕೊಟ್ಟನು. ದಕ್ಷಿಣಾ ಎಂಬ ಪದದ ಅರ್ಥವನ್ನೂ ಆ ಪದದಲ್ಲಿರುವ ಬಹುವಚನದ ಅಭಿಪ್ರಾಯವನ್ನೂ ಈಗ ವಿವರಿಸುವೆನು.

(೧) ಶ್ರೀಹರಿಯು ಅರ್ಧನಾರೀಶ್ವರರೂಪದಿಂದ ಯಾವಾಗಲೂ ವಾಸಿಸುತ್ತಿರುವನು. ಒಂದೇ ದೇಹದ ಬಲಭಾಗದಲ್ಲಿ ಶ್ರೀಹರಿಯೂ ಎಡಭಾಗದಲ್ಲಿ ಅವನ ಪತ್ನಿಯಾದ ರುಕ್ಮಿಣಿಯೂ ಇರುವಳು. "ದಕ್ಷೇ ಇನಃ ಯಸ್ಯಾಃ ಸಾ " ಅಂದರೆ ಯಾವ ರುಕ್ಮಿಣೀದೇವಿಯ ಬಲಭಾಗದಲ್ಲಿ ಯಾವಾಗಲೂ ಶ್ರೀಹರಿಯು ಇರುವನೋ ಆ ರುಕ್ಮಿಣಿಯು ದಕ್ಷಿಣಾ ಎಂದೆನಿಸುವಳು. (೨) ದಕ್ಷಿಣೆಗೆ ಅಭಿಮಾನಿನಿಯಾಗಿರುವುದರಿಂದಲೂ ರುಕ್ಮಿಣಿಯು ದಕ್ಷಿಣಾ ಎಂದೆನಿಸುವಳು.

ನಾನಾ ವಿಧವಾದ ಯಜ್ಞಗಳಲ್ಲಿ ಕೊಡಲ್ಪಡುವ ದಕ್ಷಿಣಾಗಳು ಅನೇಕವಿಧವಾಗಿರುವುದರಿಂದ ಆ ದಕ್ಷಿಣೆಗಳಿಗೆ ಅಭಿಮಾನಿನಿಯಾಗಿರುವ ರುಕ್ಮಿಣೀದೇವಿಯ ರೂಪಗಳೂ ಅಸಂಖ್ಯವಾಗಿವೆ. ಆದ್ದರಿಂದಲೇ "ದಕ್ಷಿಣಾಭಿಃ ಸಾಕಂ" ಅಂದರೆ "ದಕ್ಷಿಣೆಗಳೊಡನೆ" ಎಂದು ಬಹುವಚನವನ್ನು ಪ್ರಯೋಗಿಸಿರುವನು.

"ಆಶ್ಚರ್ಯ" ಎಂಬ ಪದದಿಂದ ಹೇಳಲ್ಪಟ್ಟ ಬ್ರಹ್ಮದೇವನ ವರೆಗಿರುವ ಸರ್ಜೀವರಿಗಿಂತ ಉತ್ತಮತ್ವವು ರುಕ್ಮಿಣೀದೇವಿಯರಿಗೂ ಶ್ರೀಕೃಷ್ಣದೇವನಿಗೂ ಸಮವೆಂದು ಶ್ರೀಕೃಷ್ಣದೇವನು ಹೇಳಿರುವನು. ಆದರೆ ಜೀವರ ವಿಷಯದಲ್ಲಿ ಶ್ರೀಕೃಷ್ಣದೇವನಲ್ಲಿರುವ ಸರ್ವೋತ್ತಮತ್ವವು ನಿರವಧಿಕ ಅಂದರೆ ಎಲ್ಲೆಯಿಲ್ಲದುದು. ರುಕ್ಮಿಣೀದೇವಿಯಲ್ಲಿರತಕ್ಕ ಸರ್ವೋತ್ತಮತ್ವವು ಸಾವಧಿಕ ಅಂದರೆ ಎಲ್ಲೆಯುಳ್ಳದ್ದು.

ರುಕ್ಮಿಣೀದೇವಿಯರಿಗೆ ವೇದಾಭಿಮಾನಿನಿಯಾದ ರೂಪವೆಂದು ಯಜ್ಞಾಭಿಮಾನಿನಿಯಾದ ರೂಪವೆಂದೂ ಎರಡು ರೂಪಗಳಿವೆ. ಆ ಎರಡು ರೂಪಗಳಿಗಿಂತಲೂ ಶ್ರೀಕೃಷ್ಣದೇವನಿಗೆ ನಿರವಧಿಕವಾದ ಉತ್ತಮತ್ವವಿದೆ.

ವೇದಗಳು, ಯಜ್ಞಗಳು, ದಕ್ಷಿಣೆಗಳು ಎಂಬ ಮೂರು ವಸ್ತುಗಳಲ್ಲಿ ರುಕ್ಮಿಣೀದೇವಿಯರು ಅಭಿಮಾನಿನಿಯಾಗಿರುವರು. ಈ ಮೂರು ವಸ್ತುಗಳ ಮಧ್ಯದಲ್ಲಿ ಬರೇ ವೇದಕ್ಕಿಂತ ವೇದಾರ್ಥವಾಗಿರುವ ವಿಷ್ಣುಪೂಜಾತ್ಮಕವಾದ ಯಜ್ಞಗಳು ಶ್ರೇಷ್ಠವಾದವುಗಳು. ದಕ್ಷಿಣೆಗಳು ಋತ್ವಿಕ್ಕುಗಳಿಂದ ಮಾಡಲ್ಪಟ್ಟ ಶ್ರಮಗಳನ್ನು ಪರಿಹರಿಸುತ್ತವೆ. ಆದ್ದರಿಂದ ಯಜ್ಞಕ್ಕಿಂತಲೂ ಶ್ರೇಷ್ಠವಾದವುಗಳು. ಆದ್ದರಿಂದಲೇ ವೇದಗಳು. ಯಜ್ಞಗಳು, ದಕ್ಷಿಣೆಗಳು ಈ ಮೂರುರಲ್ಲಿ ದಕ್ಷಿಣೆಗಳೇ ಶ್ರೇಷ್ಠವಾದವುಗಳು.

ವೇದ ಮುಂತಾದವುಗಳಲ್ಲಿ ಸನ್ನಿಹಿತರಾಗಿರುವ ರುಕ್ಮಿಣೀದೇವಿಯರಲ್ಲಿ ಯಾವ ವಿಧವಾದ ತಾರತಮ್ಯವೂ

ಇಲ್ಲ. ಆದರೂ ಅವುಗಳಲ್ಲಿ ರುಕ್ಮಿಣೀದೇವಿಯರ ಸನ್ನಿಧಾನವು ಹೆಚ್ಚುತ್ತಾ ಬರುತ್ತವೆ. ಆದ್ದರಿಂದ ಅತಿಶ್ರೇಷ್ಠವಾದ ದಕ್ಷಿಣೆಯಲ್ಲಿ ಸನ್ನಿಹಿತರಾಗಿರುವ ರುಕ್ಮಿಣೀದೇವಿಯರು ಅತಿಶ್ರೇಷ್ಠರೆನಿಸುವರು. ಆದ್ದರಿಂದಲೇ ಶ್ರೀಕೃಷ್ಣದೇವನು ವೇದಾಭಿಮಾನಿನಿಯಾಗಿರುವ ರುಕ್ಮಿಣಿಯ ರೂಪವನ್ನೂ ಯಜ್ಞಾಭಿಮಾನಿನಿಯಾಗಿರುವ ರುಕ್ಮಿಣಿಯ ರೂಪವನ್ನೂ ಬಿಟ್ಟು "ದಕ್ಷಿಣಾಭಿಃ ಸಾಕಂ" ಎಂದು ಹೇಳುತ್ತಾ "ದಕ್ಷಿಣಾ" ಎಂಬ ರುಕ್ಮಿಣಿಯ ರೂಪಗಳೇ ಸರ್ವೋತ್ತಮಗಳೆಂದು ಹೇಳಿರುವನು. ಎಂದು ಹೇಳುತ್ತಾ "ದಕ್ಷಿಣಾ" ಎಂಬ ರುಕ್ಮಿಣಿಯ ರೂಪಗಳೇ ಸರ್ವೋತ್ತಮಗಳೆಂದು ಹೇಳಿರುವನು.

ನಾರದರು ಶ್ರೀಹರಿಯ ಸರ್ವೋತ್ತಮತ್ವವನ್ನು ನಿರ್ಣಯಿಸುವುದಕ್ಕಾಗಿ ಹೊರಟರು. ಗಂಗಾತೀರಕ್ಕೆ ಬಂದರು. ಗಂಗಾಜಲದಲ್ಲಿ ಕರ್ಮಾಭಿಮಾನಿಯಾಗಿರುವ ಪುಷ್ಕರ ಎಂಬ ದೇವತೆಯು ದೊಡ್ಡ ಆಮೆಯ ರೂಪದಿಂದ ವಿಹರಿಸುತ್ತಿದ್ದನು. ಅವನನ್ನು ನೋಡಿದರು. ನೀನು ಆಶ್ಚರ್ಯನು ಮತ್ತು ಧನ್ಯನು ಅಂದರೆ " ನೀನು ಸರ್ವೋತ್ತಮನು ಮತ್ತು ನಿನಗೆ ಸಮಾನ ಯಾರೂ ಇಲ್ಲ" ಎಂದರು.

ಅದಕ್ಕೆ ಆ ಆಮೆಯು ನಾನು ಆಶ್ಚರ್ಯನೂ ಅಲ್ಲ ಧನ್ಯನೂ ಅಲ್ಲ. ಈ ಗಂಗೆಯು ನನ್ನಂತಹ ಅಸಂಖ್ಯ ಪ್ರಾಣಿಗಳನ್ನು ರಕ್ಷಿಸುತ್ತಿರುವಳು. ಆದ್ದರಿಂದ ಅವಳೇ ಆಶ್ಚರ್ಯಳು ಮತ್ತು ಧನ್ಯಳು ಎಂದು ಹೇಳಿತು.

ಗಂಗೆಯನ್ನು ನೋಡಿದರು. ಅದೇ ಪ್ರಶ್ನೆಯನ್ನು ಮಾಡಿದರು. ಆಗ ಗಂಗೆಯು ಹೇಳಿದಳು. ನಾನು ಆಶ್ಚರ್ಯಳೂ ಮತ್ತು ಧನ್ಯಳೂ ಅಲ್ಲ ನನ್ನಂತಹ ಅಸಂಖ್ಯ ನದಿಗಳಿಗೆ ಪತಿಯಾಗಿರುವ ವರುಣನು ಆಶ್ಚರ್ಯನೂ ಮತ್ತು ಧನ್ಯನೂ ಆಗಿರುವನು ಎಂದಳು.

ಅಲ್ಲಿಂದ ವರುಣನಲ್ಲಿಗೆ ಬಂದರು. ನೀನು ಆಶ್ಚರ್ಯನು ಮತ್ತು ಧನ್ಯನು ಎಂದರು. ವರುಣನು ನಾನು ಆಶ್ಚರ್ಯನೂ ಅಲ್ಲ ಧನ್ಯನೂ ಅಲ್ಲ. ನನಂತಹ ಅನೇಕ ದೇವತೆಗಳು ಉಮಾದೇವಿಯಿಂದ ಧರಿಸಲ್ಪಟ್ಟಿರುವರು. ಆ ಉಮಾದೇವಿಯು ಎಲ್ಲಾ ಲೋಕಗಳಲ್ಲಿಯೂ ಪ್ರಸಿದ್ಧಳಾಗಿರುವಳು. ಆದ್ದರಿಂದ ಪೃಥಿವೀ ಎಂದು ಪ್ರಸಿದ್ಧಳಾಗಿರುವಳು. ಆದ್ದರಿಂದ ಉಮಾದೇವಿಯು ಆಶ್ಚರ್ಯಳು ಮತ್ತು ಧನ್ಯಳು ಎಂದು ವರುಣನು ಹೇಳಿದನು.

ಉಮಾದೇವಿಯಲ್ಲಿಗೆ ಬಂದರು. ನೀನು ಆಶ್ಚರ್ಯಳು ಮತ್ತು ಧನ್ಯಳು ಎಂದು ಎಂದರು. ನಾನು ಆಶ್ಚರ್ಯಳೂ ಅಲ್ಲ ಧನ್ಯಳೂ ಅಲ್ಲ. ನನ್ನ ಪತಿಯಾದ ಶಿವನೂ ನನ್ನ ಪತಿಗೆ ಎಲ್ಲಾ ವಿಧದಿಂದಲೂ ಸಮರಾಗಿರುವ ಶೇಷನೂ ಗರುಡನೂ ನನ್ನನ್ನೂ ನನ್ನಂತಿರುವ ಸೌಪರ್ಣೀ, ವಾರುಣೀ ಎಂಬ ಸ್ತ್ರೀಯರನ್ನೂ ತಮ್ಮ ಅಧೀನರಾಗಿರುವ ಇಂದ್ರಾದಿದೇವತೆಗಳನ್ನೂ ರಕ್ಷಿಸುತ್ತಿರುವರು. ಆದ್ದರಿಂದ ಅವರು ಮೂವರು ಆಶ್ಚರ್ಯರು ಮತ್ತು ಧನ್ಯರು.

ಅವರು ಪರಾವನ ಅಂದರೆ ಇತರರ ರಕ್ಷಣೆ ಎಂಬ ಕಾರ್ಯವನ್ನು ಮಾಡುತ್ತಿರುವುದರಿಂದ ಪರಾವನ ಎಂಬ ಹೆಸರಿನಿಂದ ಹೇಳಲ್ಪಡುವರು. "ಪರ" ಎಂಬ ಶಬ್ದದ ಕೊನೆಯಲ್ಲಿರವ "ಅ" ಕಾರವೂ "ಅವ" ಎಂಬ ಧಾತುವಿನ ಮೊದಲನೆಯ "ಅ" ಕಾರವೂ ನಷ್ಟವಾದ ಮೇಲೆ ಧಾತುವಿನಲ್ಲಿರುವ ನಕಾರಕ್ಕೆ ತಕಾರವು ಏರ್ಪಟ್ಟು "ಪರ + ಅವನ" "ಪರ್ + ವನ್" = "ಪರ್ವತ" ಎಂಬ ಹೆಸರಿನಿಂದ ಹೊಗಳಲ್ಪಡುತ್ತಿರುವರು.

ನಾರದರು ಗರುಡ, ಶೇಷ, ರುದ್ರ ಎಂಬ ದೇವತೆಗಳಲ್ಲಿಗೆ ಬಂದರು. ನೀವು ಮೂವರು ಆಶ್ಚರ್ಯರು ಮತ್ತು ಧನ್ಯರು ಎಂದರು. ಆಗ ಅವರು ನಾವು ಆಶ್ಚರ್ಯವೂ ಅಲ್ಲ ಧನ್ಯರೂ ಅಲ್ಲ. ನಮ್ಮ ಮೂವರಿಗೂ ತಂದೆ

ಯಾಗಿರುವ ಬ್ರಹ್ಮನು ಬ್ರಾಹ್ಮಣಜಾತಿಗೆ ಪ್ರವರ್ತಕನಾಗಿರುವುದರಿಂದ ಬ್ರಾಹ್ಮಣ ಎಂದು ಪ್ರಸಿದ್ಧನಾಗಿರುವನು. ಆದ್ದರಿಂದ ಅವನೇ ಆಶ್ಚರ್ಯನೂ ಧನ್ಯನೂ ಆಗಿರುವನು ಎಂದರು.

ಅಲ್ಲಿಂದ ಹೊರಟ ಬ್ರಹ್ಮನಲ್ಲಿಗೆ ಬಂದರು. ನೀನು ಆಶ್ಚರ್ಯರು ಮತ್ತು ಧನ್ಯನು ಎಂದರು. ಆಗ ಬ್ರಹ್ಮನು ನಾನು ಆಶ್ಚರ್ಯನೂ ಅಲ್ಲ ಧನ್ಯನೂ ಅಲ್ಲ. ನನಗೆ ತಾಯಿಯೂ ವೇದಾಭಿಮಾನಿನಿಯೂ ಆಗಿರುವ ಲಕ್ಷ್ಮೀದೇವಿಯೇ ಆಶ್ಚರ್ಯಳು ಮತ್ತು ಧನ್ಯಳು ಎಂದರು.

ಅಲ್ಲಿಂದ ಹೊರಟೆನು. ವೇದಾಭಿಮಾನಿನಿಯಾಗಿರುವ ಲಕ್ಷ್ಮೀದೇವಿಯ ಸಮೀಪಕ್ಕೆ ಬಂದೆನು. ನೀನು ಆಶ್ಚರ್ಯಳು ಮತ್ತು ಧನ್ಯಳು ಎಂದೆನು. ಅವಳು ಹೇಳಿದಳು. ನಾನು ವೇದಗಳಿಗೂ ಯಜ್ಞಗಳಿಗೂ ಅಭಿಮಾನಿನಿಯಾಗಿರುವೆನು. ವೇದಕ್ಕಿಂತ ಯಜ್ಞಗಳು ಉತ್ತಮವಾಗಿವೆ. ಆದ್ದರಿಂದ ವೇದಾಭಿಮಾನಿನಿಯಾಗಿರುವ ನಾನು ಆಶ್ಚರ್ಯಳೂ ಅಲ್ಲ. ಧನ್ಯಳೂ ಅಲ್ಲ. ಯಜ್ಞಾಭಿಮಾನಿನಿಯಾದ ಮಹಾಲಕ್ಷ್ಮೀದೇವಿಯ ಸಮೀಪಕ್ಕೆ ಹೋದೆನು. ನೀನು ಆಶ್ಚರ್ಯಳು ಮತ್ತು ಧನ್ಯಳು ಎಂದೆನು. ಅವಳು ನಾನು ಆಶ್ಚರ್ಯಳೂ ಧನ್ಯಳು ಅಲ್ಲ. ಶ್ರೀಕೃಷ್ಣದೇವನು ನನಗೆ ಪತಿಯಾಗಿರುವನು. ನನ್ನ ಅಧೀನವಾದ ಯಜ್ಞಗಳಲ್ಲಿ ಪೂಜ್ಯನಾಗಿರುವನು. ಎಲ್ಲೆಯಿಲ್ಲದ ಗುಣಗಳಿಂದ ಪೂರ್ಣನಾಗಿರುವನು. ಆದ್ದರಿಂದ ಅವನೇ ಆಶ್ಚರ್ಯನು ಮತ್ತು ಧನ್ಯನು ಎಂದಳು.

ಅಲ್ಲಿಂದ ಹೊರಟೆನು. ವೇದಾಭಿಮಾನಿನಿಯಾಗಿರುವ ಲಕ್ಷ್ಮೀದೇವಿಯ ಸಮೀಪಕ್ಕೆ ಬಂದೆನು. ನೀನು ಆಶ್ಚರ್ಯಳು ಮತ್ತು ಧನ್ಯಳು ಎಂದೆನು. ಅವಳು ಹೇಳಿದಳು. ನಾನು ವೇದಗಳಿಗೂ ಯಜ್ಞಗಳಿಗೂ ಅಭಿಮಾನಿನಿಯಾಗಿರುವೆನು. ವೇದಕ್ಕಿಂತ ಯಜ್ಞಗಳು ಉತ್ತಮವಾಗಿವೆ. ಆದ್ದರಿಂದ ವೇದಾಭಿಮಾನಿನಿಯಾಗಿರುವ ನಾನು ಆಶ್ಚರ್ಯಳೂ ಅಲ್ಲ. ಧನ್ಯಳೂ ಅಲ್ಲ. ಯಜ್ಞಾಭಿಮಾನಿನಿ ಯಾಗಿರುವ ನಾನು ಆಶ್ಚರ್ಯಳೂ ಧನ್ಯಳು ಆಗಿರುವೆನು ಎಂದಳು. ಅಲ್ಲಿಂದ ಯಜ್ಞಾಭಿಮಾನಿನಿಯಾದ ಮಹಾಲಕ್ಷ್ಮೀದೇವಿಯ ಸಮೀಪಕ್ಕೆ ಹೋದೆನು. ನೀನು ಆಶ್ಚರ್ಯಳು ಮತ್ತು ಧನ್ಯಳು ಎಂದೆನು. ಅವಳು ನಾನು ಆಶ್ಚರ್ಯಳೂ ಧನ್ಯಳೂ ಅಲ್ಲ. ಶ್ರೀಕೃಷ್ಣದೇವನು ನನಗೆ ಪತಿಯಾಗಿರುವನು. ನನ್ನ ಅಧೀನವಾದ ಯಜ್ಞಗಳಲ್ಲಿ ಪೂಜ್ಯನಾಗಿರುವನು. ಎಲ್ಲೆಯಿಲ್ಲದ ಗುಣಗಳಿಂದ ಪೂರ್ಣನಾಗಿರುವನು. ಆದ್ದರಿಂದ ಅವನೇ ಆಶ್ಚರ್ಯನು ಮತ್ತು ಧನ್ಯನು ಎಂದಳು.

ಅಲ್ಲಿಂದ ಹೊರಟು ಇಲ್ಲಿಗೆ ಬಂದೆನು. ಓ ಶ್ರೀಕೃಷ್ಣದೇವ! ನೀನು ಆಶ್ಚರ್ಯನು ಮತ್ತು ಧನ್ಯನು ಎಂದೆನು. ಈ ಮಾತುಗಳನ್ನು ಶ್ರೀಕೃಷ್ಣದೇವನು ಕೇಳಿದನು. ನಾನು ಆಶ್ಚರ್ಯನೂ ಧನ್ಯನೂ ಎಂಬ ವಿಷಯದಲ್ಲಿ ಸಂಶಯವಿಲ್ಲ. ಅದರಂತೆಯೇ ನನ್ನ ತೊಡೆಯಲ್ಲಿ ಕುಳಿತಿರುವವಳೂ ವೇದಗಳಿಗಿಂತಲೂ ಯಜ್ಞಗಳಿಗಿಂತಲೂ ಉತ್ತಮಳಾಗಿರುವ ದಕ್ಷಿಣೆಗಳಿಗೆ ಅಭಿಮಾನಿನಿಯೂ ಆಗಿರುವ ರುಕ್ಮಿಣಿಯೂ ಆಶ್ಚರ್ಯಳು ಮತ್ತು ಧನ್ಯಳು. ನಮ್ಮಿಬ್ಬರಿಗಿಂತ ಯಾರೂ ಆಶ್ಚರ್ಯರೂ ಅಲ್ಲ ಧನ್ಯರೂ ಅಲ್ಲ ಎಂದು ಶ್ರೀಕೃಷ್ಣದೇವನು ಹೇಳಿದನು. ಇದು ಶ್ರೀಕೃಷ್ಣದೇವನ ಆಜ್ಞೆಯಿಂದ ದೇವತಾತಾರತಮ್ಯವನ್ನು ನಾರದರು ಸ್ಪಷ್ಟಪಡಿಸಿದ್ದು.

ಆಮೆ, ಗಂಗೆ, ವರುಣ, ಉಮಾ ಸೌಪರ್ಣೀ, ವಾರುಣೀ ಎಂಬ ಮೂವರು ಸ್ತ್ರೀಯರು, ಗರುಡ, ಶೇಷ ರುದ್ರರು, ಬ್ರಹ್ಮಾ ವೇದ ಯಜ್ಞ ದಕ್ಷಿಣಾ ಎಂಬ ಲಕ್ಷ್ಮೀದೇವಿಯರು, ಶ್ರೀಕೃಷ್ಣದೇವ ಎಂಬ ಸರ್ವರಲ್ಲಿಯೂ

ಆಶ್ಚರ್ಯ ಎಂಬ ಪದದಿಂದ ಸರ್ವೋತ್ತಮತ್ವವನ್ನೂ ಧನ್ಯ ಎಂಬ ಪದದಿಂದ ಅವರಿಗೆ ಸಮಾನರು ಯಾರೂ ಇಲ್ಲವೆಂದು ನಾರದರು ತಿಳಿದಂತೆಯೂ ಪ್ರಶ್ನಿಸಿದಂತೆಯೂ ತಿಳಿಯುತ್ತದೆ. ಗಂಗಾದಿಗಳಿಗಿಂತ ಅಧಮರಾಗಿರುವ ಆಮೆ ಮುಂತಾದವುಗಳಿಗೆ ಸರ್ವೋತ್ತಮತ್ವವು ಕೊಡುವುದಿಲ್ಲ. ಮತ್ತು ನಾರದರು ಶ್ರೀಹರಿಯನ್ನು ಸಾಕ್ಷಾತ್ಕರಿಸಿದರು. ನಾರದರು ಗಂಗಾದಿಗಳಿಗಿಂತ ಅಧಮವಾದ ಆಮೆ ಮುಂತಾದವುಗಳಿಗೆ ಸರ್ವೋತ್ತಮತ್ವವನ್ನು ತಿಳಿದಿದ್ದರೆ ಭ್ರಾಂತರಾಗಬೇಕಾದೀತು. ಆದ್ದರಿಂದ ಎಲ್ಲಾ ಕಡೆಯಲ್ಲಿ ತಮ್ಮ ಅಧೀನರಾಗಿರುವ ದೇವತೆಗಳಿಗಿಂತ ಉತ್ತಮರು ಎಂಬ ಅರ್ಥವನ್ನು "ಆಶ್ಚರ್ಯ" ಎಂಬ ಪದಕ್ಕೂ ಹೇಳಲೇ ಬೇಕು.

ಶ್ರೀಕೃಷ್ಣದೇವನೂ 'ದಕ್ಷಿಣಾ'ನಾಮಕಳಾದ ರುಕ್ಮಿಣೀದೇವಿಯೂ ಇಬ್ಬರೂ "ಆಶ್ಚರ್ಯ" "ಧನ್ಯ" ಎಂಬ ಪದಗಳಿಂದ ಹೇಳಲ್ಪಟ್ಟರೂ ಇಬ್ಬರೂ ಸಮರಲ್ಲ. ರುಕ್ಮಿಣಿಯು ಶ್ರೀಕೃಷ್ಣದೇವನ ಪತ್ನಿಯಾಗಿರುವುದರಿಂದ ಅವನಿಗಿಂತ ಅಧಮಳು, ಶ್ರೀಕೃಷ್ಣದೇವನು ಅವಳ ಪತಿಯಾಗಿರುವುದರಿಂದ ಉತ್ತಮನು. ಆದ್ದರಿಂದ ನಿರವಧಿಕವಾದ ಆಶ್ಚರ್ಯತ್ವವೂ ಧನ್ಯತ್ವವೂ ಶ್ರೀಕೃಷ್ಣದೇವನಲ್ಲಿ ಒಬ್ಬನಲ್ಲಿಯೇ ಇರುತ್ತದೆ. ದಕ್ಷಿಣಾನಾಮಕಳಾದ ರುಕ್ಮಿಣೀದೇವಿಯಲ್ಲಿ ನಿರವಧಿಕವಾದ ಆಶ್ಚರ್ಯತ್ವವೂ ಧನ್ಯತ್ವವೂ ಇಲ್ಲ. ಸಾವಧಿಕವಾದ ಆಶ್ಚರ್ಯತ್ವವೂ ಧನ್ಯತ್ವವೂ ಇದೆ ಎಂದೇ ತಿಳಿಯಬೇಕು. ಇದು ನಾರದರು ತನ್ನ ಮಾತಿನ ಮತ್ತು ಶ್ರೀಕೃಷ್ಣದೇವನ ಉತ್ತರದ ಅಭಿಪ್ರಾಯವನ್ನು ಸ್ಪಷ್ಟಪಡಿಸಿದ್ದು.

ನಾರದರು ತಮ್ಮ ಗುರುಗಳಾದ ಮೂಲರೂಪಿಯಾದ ವಾಯುದೇವರನ್ನು ಸಂದರ್ಶಿಸುವುದಕ್ಕಾಗಿ ಬ್ರಹ್ಮಲೋಕಕ್ಕೆ ಹೋಗಿದ್ದರು. ವಾಯುದೇವರು ನಾರದರನ್ನು ನೋಡಿದರು. "ಎಲೋ ನಾರದ, ಈಗಲೇ ಇಲ್ಲಿಂದ ಹೊರಡು. ರೈವತಪರ್ವತಕ್ಕೆ ಹೋಗು. ಅಲ್ಲಿ ಈಗ ಶ್ರೀಕೃಷ್ಣದ್ವೇಷಿಗಳಾಗಿರುವ ರಾಜರುಗಳೂ ಕೃಷ್ಣಭಕ್ತರಾಗಿರುವ ರಾಜರುಗಳೂ ಒಂದೇ ಸ್ಥಳದಲ್ಲಿ ಸೇರಿರುವರು. ಇಂತಹ ಸುಸಂದರ್ಭವು ಯಾವಾಗಲೂ ಸಿಗಲಾರದು. ಅವರೆಲ್ಲರ ಮಧ್ಯದಲ್ಲಿ ಶ್ರೀಕೃಷ್ಣದೇವನೇ ಸರ್ವೋತ್ತಮನು ಎಂದು ಸಮರ್ಥಿಸಿ ಬಾ' ಎಂದು ಆಜ್ಞಾಪಿಸಿದರು.

ಆ ಮಾತುಗಳನ್ನು ನಾರದರು ಕೇಳಿದರು. ವಾಯುದೇವರನ್ನು ನಮಸ್ಕರಿಸಿದರು. ಗಂಗೆಯಲ್ಲಿರುವ ಆಮೆಯನ್ನು ನೋಡಿದರು. ನೀನೇ ಸರ್ವೋತ್ತಮನೆಂದೂ ನಿನಗೆ ಸಮಾನನು ಯಾರೂ ಇಲ್ಲವೆಂದೂ ಹೇಳಿದರು. ಆ ಆಮೆಯು ನಾನು ಸರ್ವೋತ್ತಮನಲ್ಲವೆಂದೂ ನನಗೆ ಸಮಾನನು ಯಾರೂ ಇಲ್ಲವೆಂಬುದು ಸುಳ್ಳೆಂದೂ ಹೇಳಿತು.

ಹೀಗೆಯೇ ಕ್ರಮವಾಗಿ ಗಂಗೆ, ವರುಣ, ಉಮಾ, ಗರುಡ ಶೇಷ ರುದ್ರರು, ಬ್ರಹ್ಮದೇವ, ವೇದಾಭಿಮಾನಿನಿಯಾದ ಮಹಾಲಕ್ಷ್ಮೀದೇವಿ, ಯಜ್ಞಾಭಿಮಾನಿನಿಯಾದ ಮಹಾಲಕ್ಷ್ಮೀದೇವಿಯರಲ್ಲಿ "ನೀವು ಸರ್ವೋತ್ತಮರೆಂದೂ ನಿಮಗೆ ಸಮಾನರು ಯಾರೂ ಇಲ್ಲವೆಂದೂ" ಹೇಳುತ್ತಾ ಬಂದರು. ಅವರೆಲ್ಲರೂ ನಾವು ಸರ್ವೋತ್ತಮರಲ್ಲವೆಂದೂ ನಮಗೆ ಸಮಾನರು ಯಾರೂ ಇಲ್ಲವೆಂದು ಹೇಳುವುದು ಸುಳ್ಳೆಂದೂ ಹೇಳಿದರು.

ಕೊನೆಗೆ ಯಜ್ಞಾಭಿಮಾನಿನಿಯಾದ ಮಹಾಲಕ್ಷ್ಮೀದೇವಿಯರು ನಾನು ಸರ್ವೋತ್ತಮಳಲ್ಲವೆಂದೂ ನನಗೆ ಸಮಾನಳು ಯಾರೂ ಇಲ್ಲವೆಂದೂ ಹೇಳುವುದು ಸುಳ್ಳೆಂದೂ ಶ್ರೀಕೃಷ್ಣದೇವನೇ ಸರ್ವೋತ್ತಮನೆಂದೂ ಅವನಿಗೆ ಸಮಾನರಾದವರು ಯಾರೂ ಇಲ್ಲವೆಂದೂ ಹೇಳಿದರು. ನಾರದರು ಕೊನೆಗೆ ರೈವತ ಪರ್ವತಕ್ಕೆ ಬಂದರು. ಸಕಲ ವಿಷ್ಣುದ್ವೇಷಿರಾಜರುಗಳಿಂದಲೂ ವಿಷ್ಣುಭಕ್ತ ರಾಜರುಗಳಿಂದಲೂ ಯುಕ್ತವಾದ ಸಭೆಯ ಮಧ್ಯದಲ್ಲಿ

ಆಕಾಶಮಾರ್ಗವಾಗಿ ಬಂದಿಳಿದರು. ರುಕ್ಮಿಣೀಸಹಿತನಾಗಿ ದಿವ್ಯಸಿಂಹಾಸನದಲ್ಲಿ ಕುಳಿತಿರುವ ಶ್ರೀಕೃಷ್ಣದೇವನನ್ನು ಭಕ್ತಿಯಿಂದ ನಮಸ್ಕರಿಸಿದರು. ನೀನೇ ಸರ್ವೋತ್ತಮನು. ನಿನಗೆ ಸಮಾನನು ಯಾರೂ ಇಲ್ಲವೆಂದರು. ಶ್ರೀಕೃಷ್ಣದೇವನು ನಾರದರ ಮಾತುಗಳನ್ನು ಕೇಳಿದನು.

"ನಾರದ, ನೀನು ಹೇಳಿದ್ದು ಸತ್ಯ. ನಾನೇ ಸರ್ವೋತ್ತಮನು. ನನಗೆ ಸಮಾನರು ಯಾರೂ ಇಲ್ಲ. ಈ ರುಕ್ಮಿಣೀದೇವಿಯು ದಕ್ಷಿಣೆಗಳಿಗೆ ಅಭಿಮಾನಿನಿಯಾಗಿರುವಳು. ವೇದಗಳಿಗಿಂತಲೂ ಯಜ್ಞಗಳಿಗಿಂತಲೂ ದಕ್ಷಿಣೆಯು ಉತ್ತಮವಾದುದು. ಆದ್ದರಿಂದ ದಕ್ಷಿಣಾಭಿಮಾನಿನಿಯಾದ ಈ ರುಕ್ಮಿಣೀದೇವಿಯೂ ಸಹ ನನ್ನಂತೆಯೇ ಸರ್ವೋತ್ತಮಳು ಮತ್ತು ಅವಳಿಗೆ ಸಮಾನರು ಯಾರೂ ಇಲ್ಲವೆಂದು ತಿಳಿ" ಎಂದನು.

ಈ ಮಾತುಗಳನ್ನು ನಾರದರು ಕೇಳಿದರು. "ನೀನು ಹೇಳಿರುವುದು ಸತ್ಯ" ಎಂದು ಹೇಳಿದರು. ಎಲ್ಲಾ ರಾಜರುಗಳಿಗೂ ತನ್ನ ಮಾತುಗಳ ಮತ್ತು ಶ್ರೀಕೃಷ್ಣದೇವನ ಮಾತುಗಳ ಭಾವಗಳನ್ನು ವ್ಯಕ್ತಪಡಿಸಿದರು. ವಿಷ್ಣುಭಕ್ತರಾದ ರಾಜರುಗಳ ಮನಸ್ಸಿನಲ್ಲಿ ವಿಷ್ಣುಭಕ್ತಿಯನ್ನು ಹೆಚ್ಚಿಸಿದರು. ವಿಷ್ಣುದ್ವೇಷಿಗಳ ಮನಸ್ಸಿನಲ್ಲಿ ದ್ವೇಷವನ್ನು ಇಮ್ಮಡಿಮಾಡಿದರು. ಹೊಟ್ಟೆಕಿಚ್ಚಿನಿಂದ ಯುಕ್ತರಾದ ರಾಜರುಗಳನ್ನೆಲ್ಲಾ ಕಲಹವನ್ನು ಮಾಡುವಂತೆ ಮಾಡಿದರು. ಆ ಕಲಹದಲ್ಲಿ ಎಲ್ಲಾ ರಾಜರುಗಳೂ ಶ್ರೀಕೃಷ್ಣದೇವನಿಂದ ಸೋತು ಹೋದರು. ಇದರಿಂದ ವಿಷ್ಣುಸರ್ವೋತ್ತಮತ್ವವನ್ನು ದೃಢಪಡಿಸಿದರು. ಶ್ರೀಕೃಷ್ಣದೇವನನ್ನು ಸ್ತುತಿಸಿದಂತೆ ರುಕ್ಮಿಣೀದೇವಿಯರನ್ನೂ ಸ್ತುತಿಸಿದರು. ದೇವಲೋಕದಿಂದ ಹೊರಡುವಾಗ ಕೈಯಲ್ಲಿ ತಂದಿದ್ದ ಪಾರಿಜಾತಪುಷ್ಪವನ್ನು ಶ್ರೀಕೃಷ್ಣದೇವನಿಗೆ ಸಮರ್ಪಿಸಿದರು. ಶ್ರೀಕೃಷ್ಣದೇವನು ಆ ಪುಷ್ಪವನ್ನು ರುಕ್ಮಿಣೀದೇವಿಯರ ಕೈಯಲ್ಲಿ ಕೊಟ್ಟನು. ಶ್ರೀಕೃಷ್ಣದೇವನನ್ನೂ ಶ್ರೀರುಕ್ಮಿಣೀದೇವಿಯರನ್ನೂ ನಮಸ್ಕರಿಸಿದರು. ಅವರಿಬ್ಬರ ಅನುಮತಿಯನ್ನು ಪಡೆದರು. ಬ್ರಹ್ಮಲೋಕಕ್ಕೆ ಹಿಂದಿರುಗಿದರು.

# ಸತ್ಯಭಾಮಾದೇವಿಯರ ಕಲಹನಟನ

ರುಕ್ಮಿಣೀದೇವಿಯರೂ ಸತ್ಯಭಾಮಾದೇವಿಯರೂ ಬೇರೆಯಲ್ಲ. ಮಹಾಲಕ್ಷ್ಮೀದೇವಿಯರ ಅವತಾರವಾಗಿರತಕ್ಕವರು. ಆದ್ದರಿಂದ ರುಕ್ಮಿಣೀದೇವಿಯರು ಶ್ರೀಕೃಷ್ಣದೇವನಂತೆ ಸರ್ವೋತ್ತಮರೆಂದೂ ಅವರಿಗೆ ಸಮಾನರು ಯಾರೂ ಇಲ್ಲವೆಂದೂ ಹೇಳಿಬಿಟ್ಟರೆ ರುಕ್ಮಿಣೀದೇವಿಯರಿಂದ ಅಭಿನ್ನರಾಗಿರುವ ಸತ್ಯಭಾಮಾದೇವಿಯರೂ ಸರ್ವೋತ್ತಮರೆಂದೂ ಸತ್ಯಭಾಮಾದೇವಿಯರಿಗೆ ಸಮಾನರು ಯಾರೂ ಇಲ್ಲವೆಂದೂ ಹೇಳಿದಂತಾಗಲಿಲ್ಲವೇ?

ಆದರೆ ಸತ್ಯಭಾಮಾದೇವಿಯರು ಈ ಸಂದರ್ಭದಲ್ಲಿ ಒಂದು ಕಲಹವನ್ನು ಮಾಡಿದಂತೆ ನಟಿಸಬೇಕೆಂದು ತೀರ್ಮಾನಿಸಿದರು. ಒಬ್ಬ ಯಜಮಾನನಿಗೆ ಅನೇಕ ಪತ್ನಿಯರು ಇದ್ದಿದ್ದರೆ ಅವರಲ್ಲಿ ಕೆಲವರು ಯೋಗ್ಯತೆಯಿಂದ ಉತ್ತಮರಾಗಿರುವುದೂ ಇತರರು ಆ ವಾಕ್ಯಗಳನ್ನು ಅನುಮೋದಿಸುವುದೂ ಇತರ ಪತ್ನಿಯರಿಗೆ ಸರ್ವರ ಮುಂದೆ ಅಪಮಾನ ಮಾಡಿದಂತಾಗುವುದಿಲ್ಲವೇ? ಅದರಂತೆ ಶ್ರೀಕೃಷ್ಣದೇವನು ತನ್ನ ಮುಂದೆಯೇ ರುಕ್ಮಿಣಿಯನ್ನು ರಾಜರುಗಳ ಸಭೆಯಲ್ಲಿ ಹೊಗಳಿದುದು ನಾರದರು ಆ ಮಾತುಗಳನ್ನು ಅನುಮೋದಿಸಿದುದೂ ತನ್ನನ್ನು ಅಪಮಾನ

ಮಾಡುವುದಕ್ಕಾಗಿಯೇ ಎಂದು ತೀರ್ಮಾನಿಸಿದಂತೆ ನಟಿಸಿದರು.

ಸತ್ಯಭಾಮಾದೇವಿಯರು ಕೋಪಿಸಿದಂತೆ ನಟಿಸುವುದಕ್ಕೆ ಅನೇಕ ಕಾರಣಗಳಿವೆ. ರಾಜರುಗಳ ಸಭೆಯಲ್ಲಿ ತನ್ನನ್ನು ಬಿಟ್ಟು ರುಕ್ಮಿಣೀದೇವಿಯರೊಡನೆ ಪ್ರವೇಶಿಸಿದುದು ಮೊದಲನೆಯ ಕಾರಣ. ಶ್ರೀಕೃಷ್ಣದೇವನೂ ನಾರದರೂ ತನ್ನನ್ನು ಸ್ತುತಿಸದೆ ರುಕ್ಮಿಣಿಯನ್ನು ಸ್ತುತಿಸಿದುದು ಎರಡನೆಯ ಕಾರಣ. ಶ್ರೀಕೃಷ್ಣದೇವನು ಪಾರಿಜಾತಪುಷ್ಪವನ್ನು ತನ್ನ ಕೈಯಲ್ಲಿ ಕೊಡದೆ ರುಕ್ಮಿಣೀದೇವಿಯರ ಕೈಯಲ್ಲಿ ಕೊಟ್ಟದ್ದು ಮೂರನೆಯ ಕಾರಣ. ಈ ಕಾರಣಗಳಿಂದ ಶ್ರೀಸತ್ಯಭಾಮಾದೇವಿಯರ ಕೋಪನಟನವು ಪೂರ್ಣವಾಯಿತು.

ಸತ್ಯಭಾಮಾದೇವಿಯರು ತಮಗೆ ಬಂದಿರುವ ಕೋಪವನ್ನು ತಮ್ಮ ಮುಖದಿಂದಲೇ ತಿಳಿಸಿದರು. ಶ್ರೀಕೃಷ್ಣದೇವನು ಅವರ ಮುಖವನ್ನು ನೋಡಿದನು. ಅವರ ಕೋಪವನ್ನು ಅಡಗಿಸಬೇಕೆಂದು ತೀರ್ಮಾನಿಸಿದನು. "ಸತ್ಯಭಾಮೆಯೇ, ನೀನೇ ನನ್ನ ಪತ್ನಿಯರಲ್ಲಿ ಉತ್ತಮಳು. ರುಕ್ಮಿಣಿಗೆ ನಾರದನು ಒಂದು ಪಾರಿಜಾತಪುಷ್ಪವನ್ನು ಕೊಟ್ಟನು. ಇಂತಹ ಅಸಂಖ್ಯವಾದ ಪಾರಿಜಾತಪುಷ್ಪಗಳಿಂದ ಯುಕ್ತವಾಗಿರುವ ಪಾರಿಜಾತವೃಕ್ಷವನ್ನೇ ನಿನಗೆ ತಂದುಕೊಡುವೆನು ಕೋಪಿಸಬೇಡ" ಎಂದನು. ಈ ಮಾತುಗಳನ್ನು ಕೇಳಿದ ಸತ್ಯಭಾಮಾದೇವಿಯರು ಕೋಪವು ಅಡಗಿದಂತೆಯೂ ಶಾಂತರಾದಂತೆಯೂ ನಟಿಸಿದರು.

## ದೇವೇಂದ್ರನಿಂದ ಶ್ರೀಕೃಷ್ಣದೇವನು ಪ್ರಾರ್ಥಿಸಲ್ಪಟ್ಟನು

**(೮೨) ಶಕ್ರವಿಜ್ಞಾಪಿತಾರ್ಥಃ ತಾರ್ಕ್ಷ್ಯಾರೂಢಃ ಸಭಾರ್ಯಃ ಹಿಮಗಿರಿಶಿಖರೇ ಭೌಮದುರ್ಗಂ ಸಮೇತ್ಯ.**

ದೇವೇಂದ್ರನಿಂದ ತನ್ನ ಪ್ರಯೋಜನಕ್ಕಾಗಿ ಪ್ರಾರ್ಥಿಸಲ್ಪಟ್ಟನು. ಗರುಡನ ಮೇಲೆ ಹತ್ತಿದನು. ಪತ್ನಿಯಾದ ಸತ್ಯಭಾಮಾದೇವಿಯಿಂದ ಸಹಿತನಾಗಿ ಹಿಮವತ್ಪರ್ವತದ ಶಿಖರದಲ್ಲಿರುವ ನರಕಾಸುರನ ಕೋಟೆಗೆ ಹೋದನು.

**ವಿಶೇಷಾರ್ಥ - ನರಕಾಸುರಪೀಡಿತೇನ ಇಂದ್ರೇಣ ನರಕಾಸುರವಧಾರ್ಥಂ ಪ್ರಾರ್ಥಿತಃ ಇಂದ್ರಮನುಜ್ಞಾಪ್ಯ ಸಭಾಯಾಂ ರುಕ್ಮಿಣ್ಯಾಃ ನಾರದಾನೀತಪುಷ್ಪದಾನೇನ ಕುಪಿತಾಯಾಃ ಸತ್ಯಭಾಮಾಯಾಃ ಪಾರಿಜಾತವೃಕ್ಷದಾನೇನ ಕೋಪಶಾಂತ್ಯರ್ಥಂ ಸ್ವಭಾರ್ಯಯಾ ಸತ್ಯಭಾಮಯಾ ಸಹ ಗರುಡಮಾರುಹ್ಯ ಹಿಮಗಿರಿಶಿಖರಸ್ಥಂ ಪ್ರಾಗ್ಜ್ಯೋತಿಷಾಖ್ಯಂ ಗಿರಿಜಲಾಗ್ನಿಮುರಪಾಶಾದಿ ದುರ್ಗೈರಾವೃತಂ ಭೌಮಪುರಂ ಪ್ರಾಪ್ಯ.**

**ವಿಶೇಷಾರ್ಥ ವಿವರಣ** - ಅದೇ ಸಮಯದಲ್ಲಿ ರೈವತಪರ್ವತಕ್ಕೆ ಎಲ್ಲಾ ದೇವತೆಗಳಿಂದ ಸಹಿತನಾಗಿ ದೇವೇಂದ್ರನು ಬಂದನು. ಶ್ರೀಕೃಷ್ಣದೇವನನ್ನು ನಮಸ್ಕರಿಸಿದನು. "ಮಹಾಸ್ವಾಮಿ, ನರಕಾಸುರನು ನನ್ನಿಂದ ಯುಕ್ತರಾಗಿರುವ ಸಕಲ ದೇವತೆಗಳನ್ನೂ ಸೋಲಿಸಿರುವನು. ಆಗಾಗ್ಗೆ ದೇವಲೋಕಕ್ಕೆ ಬಂದು ನಮ್ಮೆಲ್ಲರನ್ನೂ ಪೀಡಿಸುತ್ತಿರುವನು. ಅವನ ಅಕ್ರಮವನ್ನು ಏನೆಂದು ಹೇಳಲಿ? ನಿನ್ನ ಮತ್ತು ನಮ್ಮೆಲ್ಲರಿಗೂ ತಾಯಿಯಾಗಿರುವ ಅದಿತಿದೇವಿಯ ಕಿವಿಗಳಲ್ಲಿದ್ದ ಸುಮಂಗಲಿಯರಿಗೆ ಅತಿಮುಖ್ಯ ಲಕ್ಷಣವಾಗಿರುವ ಕುಂಡಲಗಳನ್ನು ಅಪಹರಿಸಿರುವನು. ನೀನು ಅವನನ್ನು ಸಂಹರಿಸಬೇಕು. ನಮ್ಮೆಲ್ಲರನ್ನೂ ರಕ್ಷಿಸಬೇಕು. ಕರ್ಣಕುಂಡಲಗಳನ್ನು ಅವನಿಂದ ಅಪಹರಿಸಿ ಅದಿತಿದೇವಿಗೆ ಸಮರ್ಪಿಸಬೇಕು. ಅವನು ನಮ್ಮಿಂದ ಅಪಹರಿಸಿರುವ ಮಣಿಪರ್ವತ

ಮುಂತಾದ ವಸ್ತುಗಳನ್ನು ಪಡೆಯುವಂತೆ ಮಾಡಬೇಕು" ಎಂದು ಪ್ರಾರ್ಥಿಸಿದನು.

ಶ್ರೀಕೃಷ್ಣದೇವನು ದೇವೇಂದ್ರನ ಪ್ರಾರ್ಥನೆಯನ್ನು ಅಂಗೀಕರಿಸಿದನು. ಅದೇ ಸಮಯದಲ್ಲಿ ಬದರೀಕಾಶ್ರಮದಲ್ಲಿದ್ದ ಎಲ್ಲಾ ಮುನಿಗಳೂ ದೇವೇಂದ್ರನಿಂದ ಪ್ರೇರಿತರಾಗಿ ಅಲ್ಲಿಗೆ ಬಂದರು. ಶ್ರೀಕೃಷ್ಣದೇವನನ್ನು ನಮಸ್ಕರಿಸಿದರು. ವೇದಗಳಿಂದಲೂ ಪಾಂಚರಾತ್ರಾಗಮ ಮುಂತಾದ ಆಗಮಗಳಿಂದಲೂ ಸ್ತುತಿಸಿದರು. ಅವರೆಲ್ಲರೂ ನರಕಾಸುರನಿಂದ ತಮ್ಮೆಲ್ಲರಿಗೂ ಏರ್ಪಡುತ್ತಿರುವ ತೊಂದರೆಗಳನ್ನು ತಿಳಿಸಿ ಅವನನ್ನು ಸಂಹರಿಸಬೇಕೆಂದು ಪ್ರಾರ್ಥಿಸಿದರು.

ಹೀಗೆ ದೇವೇಂದ್ರನಿಂದಲೂ ದೇವತೆಗಳಿಂದಲೂ ಬ್ರಾಹ್ಮಣರಿಂದಲೂ ಪ್ರಾರ್ಥಿಸಲ್ಪಟ್ಟ ಶ್ರೀಕೃಷ್ಣದೇವನು ಪಕ್ಷಿರಾಜನಾದ ಗರುಡನನ್ನು ಸ್ಮರಿಸಿದನು. ಮರುಕ್ಷಣದಲ್ಲಿ ಗರುಡನು ಮುಂದೆ ಬಂದು ನಿಂತನು. ಭಕ್ತಿಯಿಂದ ನಮಸ್ಕರಿಸಿದನು. ಶ್ರೀಕೃಷ್ಣದೇವನು ಸತ್ಯಭಾಮಾದೇವಿಯಿಂದ ಸಹಿತನಾಗಿ ಗರುಡನನ್ನು ಹತ್ತಿ ಕುಳಿತು ದ್ವಾರಕಾಪಟ್ಟಣದಿಂದ ಹೊರಟನು.

## ಸತ್ಯಭಾಮಾದೇವಿಯರು ಮಾಡಿದ ಭೀಮದ್ವಾದಶೀವ್ರತ

ಮತ್ಸ್ಯಪುರಾಣದಲ್ಲಿ ಭೀಮದ್ವಾದಶೀವ್ರತವು ಹೇಳಲ್ಪಟ್ಟಿದೆ. ಅದರಲ್ಲಿ ಸುಮಂಗಲಿಯು ಶ್ರೀಹರಿಯನ್ನು ಮಾಘಶುದ್ಧ ದಶಮೀದಿನದಲ್ಲಿ "ಓ ಪುಂಡರೀಕಾಕ್ಷ, ನಾನು ದ್ವಾದಶೀದಿನದಲ್ಲಿ ಹಾಲನ್ನು ಮಾತ್ರ ಸ್ವೀಕರಿಸುವೆನು ಎಂದು ಪ್ರಾರ್ಥಿಸಬೇಕು. ಏಕಾದಶೀದಿನದಲ್ಲಿ ದಂಪತಿಯರೂ ಉಪೋಷಣ ಮಾಡಬೇಕು. ಒಂದು ಕಲಶದಲ್ಲಿ ಕೆಳಗೆ ಚಿಕ್ಕ ರಂಧ್ರವನ್ನು ಮಾಡಿ ಕಲಶದಲ್ಲಿ ನೀರನ್ನು ತುಂಬಬೇಕು. ಕೃಷ್ಣಾಜಿನವನ್ನು ಹಾಕಿಕೊಂಡು ದಂಪತಿಗಳು ಕುಳಿತುಕೊಳ್ಳಬೇಕು. ಸೂರ್ಯಾಸ್ತಮನವಾದ ಮೇಲೆ ಬೆಳಗಿನ ವರೆಗೆ ಆ ರಂಧ್ರದಲ್ಲಿ ಬರುವ ನೀರಿನಿಂದ ಸ್ನಾನವನ್ನು ಮಾಡುತ್ತಿರಬೇಕು. ಬೆಳಿಗ್ಗೆ ಎದ್ದು ಆಹ್ನಿಕಗಳನ್ನೆಲ್ಲಾ ಮುಗಿಸಿದ ಮೇಲೆ ದಂಪತಿಗಳು ಹಾಲನ್ನು ಕುಡಿಯಬೇಕು. ಕಲಶದಲ್ಲಿ ರಂಧ್ರಗಳ ಸಂಖ್ಯೆಯು ಅಧಿಕವಾದಂತೆ ಅಧಿಕಫಲವು ಏರ್ಪಡುತ್ತದೆ. ಎಂದು ಹೇಳಿದ ವಿಷ್ಣುಪ್ರೀತ್ಯರ್ಥವಾಗಿ ಎಲ್ಲಾ ದಂಪತಿಗಳೂ ಈ ವ್ರತವನ್ನು ಮಾಡಬೇಕು. ಇದು ಭೀಮದ್ವಾದಶೀವ್ರತವೆನಿಸುತ್ತದೆ ಎಂದು ಹೇಳಿದೆ.

ಅದರಂತೆ ಶ್ರೀಸತ್ಯಭಾಮಾದೇವಿಯರು ಈ ವ್ರತವನ್ನು ಮಾಡಿದರು. ಅವರು ಸಾಕ್ಷಾಲ್ಲಕ್ಷ್ಮೀದೇವಿಯರ ಅವತಾರ, ಅವರಿಗೆ ಈ ವ್ರತದಿಂದ ಆಗಬೇಕಾದ ಲಾಭವೇನೂ ಇಲ್ಲ. ಆದರೂ ಪ್ರಪಂಚದಲ್ಲಿರುವ ದಂಪತಿಗಳಿಗೆಲ್ಲಾ "ಈ ಧರ್ಮಕಾರ್ಯವನ್ನು ಮಾಡಲೇಬೇಕು" ಎಂದು ತಿಳಿಸುವುದಕ್ಕೋಸ್ಕರ ಮತ್ತು ಶ್ರೀಹರಿಪ್ರೀತ್ಯರ್ಥವಾಗಿ ಈ ವ್ರತವನ್ನು ಮಾಡಿದರು. ಅವರು ಮಾಡಿದ ಭೀಮದ್ವಾದಶೀವ್ರತವು ಇತರರು ಮಾಡಿದ ವ್ರತದಂತಲ್ಲ. ಕಲಶದಲ್ಲಿ ಕೋಟಿರಂಧ್ರಗಳನ್ನು ಮಾಡಿಸಿ ಆ ಜಲದಿಂದ ತಾನೂ ಶ್ರೀಕೃಷ್ಣದೇವನೂ ಕೃಷ್ಣಾಜಿನದ ಮೇಲೆ ಕುಳಿತು ಬೆಳಗಿನ ವರೆಗೆ ಸ್ನಾನ ಮಾಡಿದರು. ದ್ವಾದಶೀದಿನದಲ್ಲಿ ಹಾಲನ್ನು ಕುಡಿದು ಪಾರಣವನ್ನು ಮಾಡಿ ನರಕಾಸುರನನ್ನು ಸಂಹರಿಸುವುದಕ್ಕಾಗಿ ಹೊರಟರು.

ಅವರಿಬ್ಬರೂ ಬಹುದೂರದ ವರೆಗೆ ಹೋಗುವವರೆಗೆ ದೇವೇಂದ್ರನು ಗರುಡನ ಹಿಂದೆಯೇ ಹೋದನು.

ಅವನನ್ನು ನಿಲ್ಲುವಂತೆ ಶ್ರೀಕೃಷ್ಣದೇವನು ಆಜ್ಞಾಪಿಸಿದನು. ಅವನು ಅಲ್ಲಿಂದ ದೇವಲೋಕಕ್ಕೆ ಹೋದನು. ಶ್ರೀಕೃಷ್ಣದೇವನು ನರಕಾಸುರನನ್ನು ಸಂಹರಿಸುವ ಉದ್ದೇಶದಿಂದ ವಾಯುವ್ಯದಿಕ್ಕಿಗೆ ಅಭಿಮುಖವಾಗಿ ಹೋದನು.

# ನರಕಾಸುರ

ಶ್ರೀಹರಿಯು ಹಿರಣ್ಯಾಕ್ಷನನ್ನು ಸಂಹರಿಸುವುದಕ್ಕಾಗಿ ವರಾಹರೂಪವನ್ನು ಸ್ವೀಕರಿಸಿದನು. ಹಿರಣ್ಯಾಕ್ಷನಿಂದ ಪಾತಾಳದಲ್ಲಿ ಮುಳುಗಿಸಲ್ಪಟ್ಟ ಭೂದೇವಿಯನ್ನು ತನ್ನ ಕೋರೆ ಹಲ್ಲಿನಲ್ಲಿ ಸಿಕ್ಕಿಸಿಕೊಂಡು ಎತ್ತಿಕೊಂಡು ಬಂದನು. ಆಗ ಭೂದೇವಿಗೆ ತನ್ನ ಪತಿಯಾದ ಶ್ರೀಹರಿಯ ಅಂಗಸ್ಪರ್ಶವು ಏರ್ಪಟ್ಟದ್ದರಿಂದ ಭೂದೇವಿಗೆ ಆನಂದೋದ್ರೇಕವು ಏರ್ಪಟ್ಟಿತು. ಆ ಸಂತೋಷದ ಕಾಲದಲ್ಲಿ ಭೂದೇವಿಯಿಂದ ಒಬ್ಬನು ಮಗನು ಹುಟ್ಟಿದನು. ಅವನು ಭೂಮಿಯಿಂದ ಹುಟ್ಟಿದವನಾದ್ದರಿಂದ "ಭೌಮ" ಅಂದರೆ ಭೂಮಿಯ ಮಗನೆಂದು ಪ್ರಸಿದ್ಧನಾದನು. ಅವನೇ ಕಾಲಾಂತರದಲ್ಲಿ "ನರಕಾಸುರ" ಎಂದು ಪ್ರಸಿದ್ಧನಾದನು.

ಈ ನರಕಾಸುರನೂ ಅವನ ಮಂತ್ರಿಗಳಾದ ಮುರ, ಪೀಠ, ನಿಶುಂಭ, ಹಯಗ್ರೀವ, ಪಂಚಜನ ಎಂಬ ದೈತ್ಯರೂ ಬ್ರಹ್ಮದೇವನನ್ನು ಕುರಿತು ತಪಸ್ಸನ್ನು ಮಾಡಿದರು. ತಾವೆಲ್ಲರೂ ಯಾರಿಂದಲೂ ಸಾಯಕೂಡದೆಂದು ವರವನ್ನು ಕೇಳಿದರು. ಆ ವರವನ್ನು ಬ್ರಹ್ಮದೇವನು ಕೊಟ್ಟನು. ಪುನಃ ಎಲ್ಲರೂ ಯೋಚಿಸಿದರು. ಕಾಗೆಯಂತೆ ಬಹುಕಾಲದ ವರೆಗೆ ಜೀವಿಸಿದ್ದರಿಂದ ಫಲವೇನು? ಸರ್ವರನ್ನೂ ಜಯಿಸಿ ಎಲ್ಲಾ ಪ್ರಪಂಚದಲ್ಲಿಯೂ ಮೆರೆಯಬೇಕು ಎಂದು ತೀರ್ಮಾನಿಸಿ ಪುನಃ ತಪಸ್ಸನ್ನು ಮಾಡಿದರು. ಯಾರಿಂದಲೂ ನಮ್ಮೆಲ್ಲರಿಗೂ ಪರಾಜಯವು ಏರ್ಪಡಕೂಡದು ಎಂಬ ವರವನ್ನು ಬೇಡಿದರು.

ಬ್ರಹ್ಮದೇವನು ನರಕಾಸುರನನ್ನು ಕುರಿತು ಹೇಳಿದನು. ನೀನು ಶಸ್ತ್ರಗಳನ್ನು ಧರಿಸಿ ಯುದ್ಧಕ್ಕೆ ಹೋದರೆ ನಿನಗೆ ಯಾರಿಂದಲೂ ಪರಾಜಯವು ಏರ್ಪಡಲಾರದು ಎಂದು ಅವನಿಗೆ ವರವನ್ನು ಕೊಟ್ಟನು. ನರಕಾಸುರನ ಮಂತ್ರಿಗಳನ್ನು ನೋಡಿದನು. "ನೀವೆಲ್ಲರೂ ನಿಮ್ಮ ಯಜಮಾನನ ಜೊತೆಯಲ್ಲಿ ಯುದ್ಧವನ್ನು ಮಾಡಿದರೆ ಸೋಲುವಿರಿ. ಅವನನ್ನು ಬಿಟ್ಟು ಉಳಿದ ಎಲ್ಲರಿಂದಲೂ ನಿಮಗೆ ಪರಾಜಯವು ಏರ್ಪಡುವುದಿಲ್ಲ." ಎಂದು ಹೇಳಿದನು. ಬ್ರಹ್ಮದೇವನು ಎಲ್ಲಾ ಭಾಗ್ಯಗಳಿಂದಲೂ ಪೂರ್ಣವಾಗಿರುವ "ಪ್ರಾಗ್ಜ್ಯೋತಿಷ" ಎಂಬ ನಗರವನ್ನು ಮಂತ್ರಿಗಳಿಂದ ಸಹಿತನಾದ ನರಕಾಸುರನಿಗೆ ಕೊಟ್ಟನು.

# ನರಕಾಸುರನ ಪಟ್ಟಣದ ಕೋಟೆಗಳು

ಆ ನಗರದ ಸುತ್ತಲೂ ಇರುವ ಕೋಟೆಗಳ ಹೆಸರುಗಳನ್ನು ಹೇಳುವೆವು. ಎಲ್ಲಾ ಕೋಟೆಗಳಲ್ಲಿ ಮೊದಲು "ಗಿರಿದುರ್ಗ" ಅಂದರೆ ಪರ್ವತಗಳ ಕೋಟೆಯು ಇರುತ್ತದೆ. ಆ ಕೋಟೆ ಯಾರಿಂದಲೂ ದಾಟಲು ಸಾಧ್ಯವಿಲ್ಲ. ಅದರೊಳಗೆ "ಶಸ್ತ್ರದುರ್ಗ" ಅಂದರೆ ಆಯುಧಗಳ ಕೋಟೆಯು ಇರುತ್ತದೆ. ಆ ಆಯುಧಗಳನ್ನು ಯಾರಿಂದಲೂ ಕತ್ತರಿಸಲು ಸಾಧ್ಯವಿಲ್ಲ. ಅದರೊಳಗೆ "ಜಲದುರ್ಗ" ಅಂದರೆ ಭಯಂಕರವಾದ ಮೊಸಳೆ ಮುಂತಾದ ಪ್ರಾಣಿಗಳಿಂದ ಯುಕ್ತವಾದ ನೀರಿನ ಕಂದುಕಗಳಿವೆ. ಅವುಗಳನ್ನು ದಾಟಲೂ ಒಣಗಿಸಲೂ ಯಾರಿಂದಲೂ ಸಾಧ್ಯವಿಲ್ಲ. ಆ

ಜಲದುರ್ಗದೊಳಗೆ ಅಗ್ನಿಯ ಮತ್ತು ವಾಯುವಿನ ಕೋಟೆಗಳಿವೆ. ಅದರೊಳಗೆ "ಪಾಶದುರ್ಗ" ಅಂದರೆ ಮುರ ಎಂಬ ದೈತ್ಯನಿಂದ ನಿರ್ಮಿತವಾದ ಹಗ್ಗಗಳ ಕೋಟೆಯು ಇರುತ್ತದೆ. ಆ ಹಗ್ಗಗಳು ಕತ್ತಿಯ ತುದಿಯಂತೆ ಅತ್ಯಂತ ಹರಿತವಾಗಿರುವವು. ಒಂದು ಹಗ್ಗದ ಕೋಟೆಯೊಳಗೆ ಇನ್ನೊಂದು ಹರಿತ ಹಗ್ಗದ ಕೋಟೆಯ ಕ್ರಮದಿಂದ ೬೦೦೦ ಕೋಟೆಗಳಿವೆ. ಈ ಹಗ್ಗಗಳನ್ನೂ ಯಾವ ಶಸ್ತ್ರಾಸ್ತ್ರಗಳಿಂದಲೂ ಕತ್ತರಿಸಲು ಸಾಧ್ಯವಿಲ್ಲ.

# ನರಕಾಸುರನ ಸಂಕಲ್ಪ

ನರಕಾಸುರನು ಬ್ರಹ್ಮದೇವನನ್ನು ಭಕ್ತಿಯಿಂದ ಆರಾಧಿಸಿದನು. ಅವನಿಂದ ಗಿರಿದುರ್ಗವನ್ನೂ ಪಾಶದುರ್ಗವನ್ನೂ ಯಾವ ಶಸ್ತ್ರಾಸ್ತ್ರಗಳಿಂದಲೂ ಭೇದಿಸಲು ಸಾಧ್ಯವಿಲ್ಲವೆಂದೂ, ಜಲದುರ್ಗವನ್ನು ಯಾರಿಂದಲೂ ದಾಟಲೂ ಒಣಗಿಸಲೂ ಸಾಧ್ಯವಿಲ್ಲವೆಂದೂ ವರವನ್ನು ಪಡೆದನು. ಈ ನರಕಾಸುರನು ಪೀಠ, ಮುರ, ನಿಶುಂಭ, ಹಯಗ್ರೀವ, ಪಂಚಜನ ಎಂದು ಐದು ಮಂತ್ರಿಗಳನ್ನು ಲೋಕಪಾಲಕರೆಂದು ಸಂಕಲ್ಪಿಸಿದನು. ತಾನು ಈ ಲೋಕಪಾಲಕರೆಲ್ಲರಿಗೂ ಯಜಮಾನನಾದ ಬ್ರಹ್ಮದೇವನೆಂದು ಸಂಕಲ್ಪಸಿದನು. ತಾನು ಸಂಕಲ್ಪಿಸಿದ ವಿಷಯವನ್ನು ಎಲ್ಲರಲ್ಲಿಯೂ ಹೇಳುತ್ತಾ ಬಂದನು. ಶ್ರೀಕೃಷ್ಣದೇವನು ನರಕಾಸುರನನ್ನು ಸಂಹರಿಸುವುದಕ್ಕಾಗಿ ಪ್ರಾಗ್ಜ್ಯೋತಿಷಪುರದ ಕೋಟೆಯ ಸಮೀಪಕ್ಕೆ ಬಂದನು.

**(೮೩) ದುರ್ಗಾಣಿ ಛಿತ್ವಾ, ಅರಿಣಾ ಮುರಗಲಂ ಕೃಂತ್ವಾ, ದೇವತೇಭ್ಯಃ, ಸಃ ಮಾ ಅವ್ಯಾತ್.**

ಕೋಟೆಗಳನ್ನೂ ಭೇದಿಸಿದನು. ಚಕ್ರದಿಂದ ಮುರಾಸುರನ ಕಂಠವನ್ನು ಕತ್ತರಿಸಿದನು. ದೇವತೆಗಳೆಲ್ಲರಿಂದಲೂ ಸ್ತುತಿಸಲ್ಪಟ್ಟ ಆ ಶ್ರೀಕೃಷ್ಣದೇವನು ನನ್ನನ್ನು ರಕ್ಷಿಸಲಿ.

# ನರಕಾಸುರನ ಪಟ್ಟಣದ ಕೋಟೆಗಳ ನಾಶ

**ವಿಶೇಷಾರ್ಥ - ಗಿರಿದುರ್ಗಂ ಗದಯಾ ಛಿತ್ವಾ, ಜಲದುರ್ಗಂ ವಾಯುನಾ ಶೋಷಯಿತ್ವಾ, ವಾರುಣಾಸ್ತ್ರೇಣ ಅಗ್ನಿದುರ್ಗಂ ನಾಶಯಿತ್ವಾ, ಮುರಪಾಶದುರ್ಗಂ ಸ್ವಖಡ್ಗೇನ ಛಿತ್ವಾ, ಅಂತಃಪ್ರವಿಶ್ಯ, ಯುದ್ಧಾರ್ಥಮಾಗತಂ ಭೌಮಮಂತ್ರಿಣಂ ಪಂಚಜನಂ ಮುರಾಖ್ಯಂ ನಿರಾಯುಧಂ ಕೃತ್ವಾ, ತಸ್ಯ ಶಿರಾಂಸಿ ಚಕ್ರೇಣ ಛಿತ್ವಾ, ದೇವೈಃ ಪ್ರಸೂನೈಃ ಅಭಿಷಿಚ್ಯಮಾನಃ ಸರ್ವಾನತೋಷಯತ್.**

**ವಿಶೇಷಾರ್ಥ ವಿವರಣ -** ಶ್ರೀಕೃಷ್ಣದೇವನು ತನ್ನ ಗದೆಯಿಂದ ಪರ್ವತದುರ್ಗವನ್ನು ಪುಡಿಪುಡಿಯಾಗುವಂತೆ ಮಾಡಿದನು. ಶಸ್ತ್ರದುರ್ಗವನ್ನು ತನ್ನ ಬಾಣಗಳಿಂದ ಕತ್ತರಿಸಿದನು. ಜಲದುರ್ಗವನ್ನು ವಾಯವ್ಯಾಸ್ತ್ರದಿಂದ ಒಣಗಿಸಿದನು. ಅಗ್ನಿದುರ್ಗವನ್ನು ವಾರುಣಾಸ್ತ್ರದಿಂದ ತಣ್ಣಗಾಗುವಂತೆ ಮಾಡಿದನು. ವಾಯುದುರ್ಗವನ್ನು ಸುದರ್ಶನಚಕ್ರದಿಂದ ಅಡಗಿಸಿದನು. ಪಾಶದುರ್ಗವನ್ನು ನಂದಕ ಎಂಬ ತನ್ನ ಖಡ್ಗದಿಂದ ತುಂಡುತುಂಡಾಗುವಂತೆ ಮಾಡಿದನು. ಶಂಖಧ್ವನಿಯಿಂದ ನಾನಾವಿಧವಾದ ಯಂತ್ರಗಳನ್ನು ನಾಶಮಾಡಿದನು. ಅದೇ ಧ್ವನಿಯಿಂದ ಮಹಾಶೂರರ ಹೃದಯಗಳನ್ನು ನಡುಗಿಸಿದನು.

ಕೌಮೋದಕೀ ಎಂಬ ತನ್ನ ಗದೆಯಿಂದ ಹಿಂದೆ ಹೇಳಿರುವ ಗಿರಿದುರ್ಗ ಮುಂತಾದ ಎಲ್ಲಾ ಕೋಟೆಗಳ ಒಳಗಿರುವ ಸುವರ್ಣ ಪ್ರಾಕಾರವನ್ನು ನಾಶಮಾಡಿದನು.

# ಮಂತ್ರಿಗಳ ವಧೆ

ಶ್ರೀಕೃಷ್ಣದೇವನ ಪಾಂಚಜನ್ಯ ಶಂಖದ ಧ್ವನಿಯು ಪ್ರಳಯಕಾಲದ ಸಿಡಿಲಿನ ಧ್ವನಿಯಂತೆ ಭಯಂಕರವಾಗಿ ಕೇಳಿಸಿತು. ಆ ಧ್ವನಿಯಿಂದ ಮಲಗಿದ್ದ ಮುರ ಎಂಬ ದೈತ್ಯನು ಎದ್ದನು. ಅವನು ತನ್ನ ಐದು ಮುಖಗಳಿಂದ ಗರ್ಜಿಸಿದನು. ಗರುಡದೇವನ ಮೇಲೆ ತ್ರಿಶೂಲವನ್ನು ಪ್ರಯೋಗಿಸಿದನು. ಆ ತ್ರಿಶೂಲವನ್ನು ಶ್ರೀಕೃಷ್ಣದೇವನು ಎರಡು ಬಾಣಗಳಿಂದ ಕತ್ತರಿಸಿದನು. ಮುರದೈತ್ಯನು ಪ್ರಯೋಗಿಸಿದ ಗದೆಯನ್ನು ಶ್ರೀಕೃಷ್ಣದೇವನು ತನ್ನ ಗದೆಯಿಂದ ನಾಶಮಾಡಿದನು. ಬಾಹುಯುದ್ಧವನ್ನು ಮಾಡುವುದಕ್ಕೆ ಸಿದ್ಧನಾದ ಮುರದೈತ್ಯನ ಕುತ್ತಿಗೆಯನ್ನು ಸುದರ್ಶನ ಚಕ್ರದಿಂದ ಕತ್ತರಿಸಿದನು. ॥ ೧೭ ॥

त्रिंशत्पञ्चावधीद्यो सचिववरसुतान् भूमिजेनातिघोरं
युद्धं कृत्वा गजाद्यैररिहृतशिरसं तं व्यधाद्भूस्तुतोऽथ ।
कृत्वा राज्येऽस्य सूनुं वरयुवतिजनान् भूरिशश्चारुवेषान्
प्रापय्य द्वारकां सोऽकृत मुदमदितेः कुण्डलाभ्यामवेन्माम् ॥ १८॥

ತ್ರಿಂಶತ್ಪಂಚಾವಧೀದ್ಯೋ ಸಚಿವವರಸುತಾನ್ ಭೂಮಿಜೇನಾತಿಘೋರಂ
ಯುದ್ಧಂ ಕೃತ್ವಾ ಗಜಾದ್ಯೈರರಿಹೃತಶಿರಸಂ ತಂ ವ್ಯಧಾದ್ಭೂಸ್ತುತೋಽಥ।
ಕೃತ್ವಾ ರಾಜ್ಯೇಽಸ್ಯ ಸೂನುಂ ವರಯುವತಿಜನಾನ್ ಭೂರಿಶಶ್ಚಾರುವೇಷಾನ್
ಪ್ರಾಪಯ್ಯ ದ್ವಾರಕಾಂ ಸೋಽಕೃತ ಮುದಮದಿತೇಃ ಕುಂಡಲಾಭ್ಯಾಮವೇನ್ಮಾಮ್ ॥ ೧೮ ॥

**ಪದಚ್ಛೇದ** - ತ್ರಿಂಶತ್, ಪಂಚ, ಅವಧೀತ್, ಯಃ, ಸಚಿವವರಸುತಾನ್, ಭೂಮಿಜೇನ, ಅತಿಘೋರಂ, ಯುದ್ಧಂ, ಕೃತ್ವಾ, ಗಜಾದ್ಯೈಃ ಅರಿಹೃತಶಿರಸಂ, ತಂ, ವ್ಯಧಾತ್, ಭೂಸ್ತುತಃ ಅಥ, ಕೃತ್ವಾ, ರಾಜ್ಯೇ, ಅಸ್ಯ, ಸೂನುಂ, ವರಯುವತಿಜನಾನ್, ಭೂರಿಶಃ ಚಾರುವೇಷಾನ್, ಪ್ರಾಪಯ್ಯ, ದ್ವಾರಕಾಂ, ಸಃ, ಅಕೃತ, ಮುದಂ, ಅದಿತೇಃ, ಕುಂಡಲಾಭ್ಯಾಂ, ಅವೇತ್, ಮಾಂ.

**ಅನ್ವಯ** - ಯಃ ತ್ರಿಂಶತ್ಪಂಚ ಸಚಿವವರಸುತಾನ್ ಅವಧೀತ್, ಗಜಾದ್ಯೈಃ (ಸಹಿತೇನ) ಭೂಮಿಜೇನ (ಸಹ) ಅತಿಘೋರಂ ಯುದ್ಧಂ ಕೃತ್ವಾ, ತಂ ಅರಿಹೃತಶಿರಸಂ ವ್ಯಧಾತ್, ಅಥ ಭೂಸ್ತುತಃ ತಸ್ಯ ಸೂನುಂ ರಾಜ್ಯೇ ಕೃತ್ವಾ, ಚಾರುವೇಷಾನ್ ಭೂರಿಶಃ ವರಯುವತಿಜನಾನ್ ದ್ವಾರಕಾಂ ಪ್ರಾಪಯ್ಯ, ಅದಿತೇಃ ಕುಂಡಲಾಭ್ಯಾಂ ಮುದಂ ಅಕೃತ, ಸಃ ಮಾಂ ಅವೇತ್.

**ಅನ್ವಯಾರ್ಥ** - ಯಃ ಯಾವ ಶ್ರೀಕೃಷ್ಣದೇವನು ತ್ರಿಂಶತ್ಪಂಚ ಮೂವತ್ತೈದು ಸಂಖ್ಯಾಕರಾದ ಸಚಿವ

**ವರಸುತಾನ್** ಮಂತ್ರಿಶ್ರೇಷ್ಠರ ಮಕ್ಕಳನ್ನು **ಅವಧೀತ್** ಕೊಂದನೋ **ಗಜಾದ್ಯೈಃ (ಸಹಿತೇನ)** ಆನೆ ಮುಂತಾದವುಗಳಿಂದ ಸಹಿತನಾದ **ಭೂಮಿಜೇನ (ಸಹ)** ಭೂದೇವಿಯ ಮಗನಾದ ನರಕಾಸುರನೊಡನೆ **ಅತಿಘೋರಂ** ಅತ್ಯಂತ ಘೋರವಾದ **ಯುದ್ಧಂ** ಯುದ್ಧವನ್ನು **ಕೃತ್ವಾ** ಮಾಡಿ **ತಂ** ಆ ನರಕಾಸುರನನ್ನು **ಅರಿಹೃತಶಿರಸಂ** ಸುದರ್ಶನಚಕ್ರದಿಂದ ಕತ್ತರಿಸಲ್ಪಟ್ಟ ಶಿರಸ್ಸುಳ್ಳವನನ್ನಾಗಿ **ವ್ಯಧಾತ್** ಮಾಡಿದನೋ **ಅಥ** ಅನಂತರದಲ್ಲಿ **ಭೂಸ್ತುತಃ** ಭೂದೇವಿಯಿಂದ ಸ್ತುತಿಸಲ್ಪಟ್ಟವನಾಗಿ **ತಸ್ಯ** ಆ ನರಕಾಸುರನ **ಸೂನುಂ** ಮಗನಾದ ಭಗದತ್ತನನ್ನು **ರಾಜ್ಯೇ** ನರಕಾಸುರನ ರಾಜ್ಯದಲ್ಲಿ **ಕೃತ್ವಾ** ಅಧಿಪತಿಯಾಗುವಂತೆ ಮಾಡಿದವನಾಗಿ **ಚಾರುವೇಷಾನ್** ಸುಂದರವಾದ ಅಲಂಕಾರಗಳಿಂದ ಯುಕ್ತರಾಗಿರುವ **ಭೂರಿಶಃ** ಅಸಂಖ್ಯಾಕರಾದ ಅಂದರೆ ಹದಿನಾರುಸಾವಿರದ ನೂರು ಸಂಖ್ಯೆಯುಳ್ಳವರಾದ **ವರಯುವತಿಜನಾನ್** ಶ್ರೇಷ್ಠರಾದ ಸ್ತ್ರೀಯರನ್ನು **ದ್ವಾರಕಾಂ** ದ್ವಾರಕಾಪಟ್ಟಣವನ್ನು ಕುರಿತು **ಪ್ರಾಪಯ್ಯ** ಹೊಂದಿ, **ಅದಿತೇಃ** ಅದಿತಿದೇವಿಗೆ **ಕುಂಡಲಾಭ್ಯಾಂ** ಎರಡು ಕರ್ಣಕುಂಡಲಗಳಿಂದ **ಮುದಂ** ಸಂತೋಷವನ್ನು **ಅಕೃತ್** ಮಾಡಿದನೋ **ಸಃ** ಆ ಶ್ರೀಕೃಷ್ಣದೇವನು **ಮಾಂ** ನನ್ನನ್ನು **ಅವೇತ್** ರಕ್ಷಿಸಲಿ.

ವಿಗ್ರಹ - ತ್ರಿಂಶಚ್ಚ ತೇ ಪಂಚ ಚ ತ್ರಿಂಶತ್ಪಂಚ, ತಾನ್ ತ್ರಿಂಶತ್ಪಂಚ; ಸಚಿವಾನಾಂ ವರಾಃ ಸಚಿವವರಾಃ, ಸಚಿವವರಾಣಾಂ ಸುತಾಃ ಸಚಿವವರಸುತಾಃ, ತಾನ್ ಸಚಿವವರಸುತಾನ್; ಭೂಮೇಃ ಜಾಯತೇ ಇತಿ ಭೂಮಿಜಃ, ತೇನ ಭೂಮಿಜೇನ; ಅತ್ಯಂತಂ ಘೋರಂ ಅತಿಘೋರಂ, ತತ್ ಅತಿಘೋರಂ; ಗಜಃ ಆದ್ಯಃ ಯೇಷಾಂ ತೇ ಗಜಾದ್ಯಾಃ, ತೈಃ ಗಜಾದ್ಯೈಃ, ಅರಿಣಾ ಹೃತಂ ಅರಿಹೃತಂ, ಅರಿಹೃತಂ ಶಿರಃ ಯಸ್ಯ ಸಃ ಅರಿಹೃತಶಿರಾಃ, ತಂ. ಅರಿಹೃತ ಶಿರಸಂ ಭುವಾಸ್ತುತಃ ಭೂಸ್ತುತಃ ಯುವತಯಃ ಇತಿಜನಾಃ ಯುವತಿಜನಾಃ ವರಾಶ್ಚ ತೇ ಯುವತಿಜನಾಶ್ಚ ವರಯುವತಿಜನಾಃ, ತಾನ್ ವರಯುವತಿಜನಾನ್; ಚಾರುಃ ವೇಷಃ ಯೇಷಾಂ ತೇ ಚಾರುವೇಷಾಃ, ತಾನ್ ಚಾರುವೇಷಾನ್.

# ಮಂತ್ರಿಕುಮಾರ ವಧೆ

**(೮೪) ತ್ರಿಂಶತ್ಪಂಚ ಸಚಿವವರಸುತಾನ್ ಅವಧೀತ್.**

ಮೂವತ್ತೈದು ಸಂಖ್ಯೆಯುಳ್ಳವರಾದ ಮಂತ್ರಿಶ್ರೇಷ್ಠರ ಕುಮಾರರನ್ನು ಕೊಂದನು.

**ವಿಶೇಷಾರ್ಥ - ಕೃಷ್ಣಃ ಮುರವಧಾನಂತರಂ ಅನ್ಯಾನ್ ಪೀಠ, ನಿಶುಂಭ, ಹಯಗ್ರೀವ, ಪಂಚಜನಾಖ್ಯಾನ್ ಭೌಮ ಮಂತ್ರಿಣೋ ಹತ್ವಾ, ಮುರಾದಿಪಂಚಮಂತ್ರಿಣಾಂ ಪುತ್ರಾನ್ ಪ್ರತ್ಯೇಕಶಃ ಸಪ್ತಸಂಖ್ಯಾಕಾನ್, ಮಿಲಿತ್ವಾ ಪಂಚತ್ರಿಂಶತ್ಸಂಖ್ಯಾಕಾನ್, ರುದ್ರವರಾದವಧ್ಯಾನ್ ಹತ್ವಾ.**

ವಿಶೇಷಾರ್ಥ ವಿವರಣ - ಬ್ರಹ್ಮದೇವನ ವರದಿಂದ ಅವಧ್ಯರಾಗಿರುವ ಮುರ ಮುಂತಾದ ನರಕಾಸುರನ ಮಂತ್ರಿಗಳನ್ನು ಶ್ರೀಕೃಷ್ಣದೇವನು ಸಂಹರಿಸಿದ ವಿಷಯವನ್ನು ವಿವರಸಿದೆವು. ಈಗ ಅವರ ಮಕ್ಕಳ ಮರಣವನ್ನು ವಿವರಿಸುವೆನು. ಮುರ ಮುಂತಾದ ಐದು ಮಂತ್ರಿಗಳಿಗೂ ಒಬ್ಬೊಬ್ಬರಿಗೆ ಏಳು ಏಳು ಮಕ್ಕಳುಗಳಂತೆ ಐವರಿಗೆ ಮೂವತ್ತೈದು ಮಕ್ಕಳುಗಳಿದ್ದರು. ಅವರೆಲ್ಲರೂ ರುದ್ರದೇವನನ್ನು ಕುರಿತು ತಪಸ್ಸನ್ನು ಮಾಡಿ ನಾವು ಯಾರಿಂದಲೂ ಸಾಯಬಾರದು ಎಂದು ವರವನ್ನು ಬೇಡಿದರು. ರುದ್ರನು ಅವರಿಗೆ ಆ ವರವನ್ನು ಕೊಟ್ಟನು. ಶ್ರೀಕೃಷ್ಣದೇವನು

ತಮ್ಮ ತಮ್ಮ ತಂದೆಯವರನ್ನು ಕೊಂದ ಕೂಡಲೇ ಅವರೆಲ್ಲರೂ ಬ್ರಹ್ಮಾಸ್ತ್ರ ಮುಂತಾದ ಅಸ್ತ್ರಗಳನ್ನೂ ಆಯುಧಗಳನ್ನೂ ಮಳೆಯಂತೆ ಸುರಿಸುತ್ತಾ ಯುದ್ಧಕ್ಕೆ ಬಂದರು. ಆ ಎಲ್ಲಾ ಅಸ್ತ್ರಗಳನ್ನೂ ಆಯುಧಗಳನ್ನೂ ಉತ್ತಮವಾದ ಬಾಣಗಳಿಂದ ಶ್ರೀಕೃಷ್ಣದೇವನು ನಾಶಮಾಡಿ ಕೊನೆಗೆ ಅವರನ್ನೂ ಸಂಹರಿಸಿದನು.

# ನರಕಾಸುರನ ವಧೆ

**(೮೫) ಗಜಾದ್ಯೈಃ (ಸಹಿತೇನ) ಭೂಮಿಜೇನ (ಸಹ) ಅತಿಘೋರಂ ಯುದ್ಧಂ ಕೃತ್ವಾ ತಂ ಅರಿಹೃತಶಿರಸಂ ವ್ಯಧಾತ್.**

ಆನೆ, ಕುದುರೆ, ರಥ, ಪದಾತಿ ಎಂಬ ಚತುರಂಗಸೈನ್ಯದಿಂದ ಸಹಿತನಾದ ನರಕಾಸುರನೊಡನೆ ಅತ್ಯಂತ ಭಯಂಕರವಾದ ಯುದ್ಧವನ್ನು ಮಾಡಿದನು. ಕೊನೆಗೆ ಸುದರ್ಶನಚಕ್ರದಿಂದ ನರಕಾಸುರನ ಕುತ್ತಿಗೆಯನ್ನು ಕತ್ತರಿಸಿದನು.

**ಗಜಾದಿ ಮಹತ್ಯಾ ಸೇನಯಾ ಯುಕ್ತಂ ಯುದ್ಧಾರ್ಥ ಮಾಗತಂ ಪೃಥಿವ್ಯಭಿಮಾನಿನ್ಯಾಂ ವರಾಹರೂಪಿಣಾ ವಿಷ್ಣುನಾ ಜಾತಂ ಬ್ರಹ್ಮವರಾದವಧ್ಯಂ ನರಕಾಸುರಂ ಚಕ್ರೇಣ ಹತ್ವಾ, ದೇವೈಃ ಪುಷ್ಪೈರಭಿಷಿಚ್ಯಮಾನಃ.**

ವಿಶೇಷಾರ್ಥವಿವರಣೆ - ಪೂರ್ವದಲ್ಲಿ ದೇವತೆಗಳೂ ದೈತ್ಯರೂ ಸಮುದ್ರಮಥನವನ್ನು ಮಾಡಿದಾಗ ಸಮುದ್ರದಿಂದ ಆರು ಸಾವಿರ ಶ್ರೇಷ್ಠವಾದ ಆನೆಗಳು ಹುಟ್ಟಿದವು. ಮದಜಲವನ್ನು ಸುರಿಸುತ್ತಿರುವ ಆ ಆನೆಗಳಿಂದಲೂ ಕುದುರೆಗಳು. ರಥಗಳು, ಕಾಲಾಳುಗಳು ಮುಂತಾದ ಮೂವತ್ತು ಅಕ್ಷೌಹಿಣೀ ಸೈನ್ಯಗಳಿಂದಲೂ ಸಹಿತನಾಗಿ ನರಕಾಸುರನು ಯುದ್ಧಕ್ಕೆ ಹೊರಟನು. ಅವುಗಳಲ್ಲಿ ಗರುಡನು ರೆಕ್ಕೆಗಳ ಹೊಡೆತದಿಂದ ಕಾಲು ಭಾಗವನ್ನು ಕೊಂದನು. ನರಕಾಸುರನು ಶ್ರೀಕೃಷ್ಣದೇವನ ಮೇಲೆ ಶತಘ್ನೀ ಎಂಬ ಆಯುಧವನ್ನು ಪ್ರಯೋಗಿಸಿದನು.

ಈ ಶತಘ್ನಿಯು ಬ್ರಹ್ಮದೇವನಿಂದ ನರಕಾಸುರನಿಗೆ ಕೊಡಲ್ಪಟ್ಟನು. ಈ ಶತಘ್ನಿಯನ್ನು ಯಾರ ಮೇಲೆ ಪ್ರಯೋಗಿಸುತ್ತೀಯೋ ಅವನು ಸಾಯುವನು ಎಂದು ವರವನ್ನು ಕೊಟ್ಟಿದ್ದನು. ಆ ಶತಘ್ನಿಯನ್ನು ಶ್ರೀಕೃಷ್ಣದೇವನು ನುಂಗಿದನು. ಅಚ್ಛೇದ್ಯನೂ ಅಭೇದ್ಯನೂ ನಿತ್ಯಜ್ಞಾನವುಳ್ಳವನೂ ಸುಖಸ್ವರೂಪಿಯೂ ಯಾವಾಗಲೂ ನಾಶವಿಲ್ಲದವನೂ ಪೂರ್ಣಶಕ್ತಿ ಸಂಪನ್ನನೂ ಆಗಿರುವನು. ಅವನು ಶಸ್ತ್ರಾಯುಧವನ್ನು ನುಂಗಿದ್ದರಲ್ಲಿ ಆಶ್ಚರ್ಯವಿಲ್ಲ.

ಆದರೂ ಬ್ರಹ್ಮದೇವನು ನರಕಾಸುರನಿಗೂ ಅವನ ಕೋಟೆಗಳಿಗೂ ಮಂತ್ರಿಗಳಿಗೂ ಕೊಟ್ಟಿರುವ ಅನೇಕ ವರಗಳನ್ನು ಸುಳ್ಳು ಮಾಡಿದ್ದಕ್ಕಾಗಿ ಒಮ್ಮೆಯಾದರೂ ಅವನಿಗೆ ಮರ್ಯಾದೆಯನ್ನು ಕೊಟ್ಟು ಗೌರವಿಸಬೇಕೆಂದು ಸಂಕಲ್ಪಿಸಿದನು. ಶತಘ್ನಿಯನ್ನು ನುಂಗಿದ್ದರಿಂದ ತುಂಬಾ ಆಯಾಸವು ಏರ್ಪಟ್ಟಂತೆ ನಟಿಸಿದನು. ಇದನ್ನು ನೋಡಿದ ನರಕಾಸುರನು ತುಂಬಾ ಹೆಮ್ಮೆಯಿಂದ ಯುಕ್ತನಾದನು.

ಆಗ ಸತ್ಯಭಾಮಾದೇವಿಯರು ಇದನ್ನು ನೋಡಿ ಶಾರ್ಙ್ಗಧನುಸ್ಸನ್ನು ತಾವೇ ಕೈಯಲ್ಲಿ ತೆಗೆದುಕೊಂಡು. ನರಕಾಸುರನ ಮೇಲೆ ಬಾಣಗಳ ಮಳೆಯನ್ನು ಸುರಿಸಿದರು. ನರಕಾಸುರನು ಆ ಬಾಣಗಳನ್ನು ಕತ್ತರಿಸುವುದಕ್ಕೆ

ಮಹಾಪ್ರಯತ್ನವನ್ನು ಮಾಡಿದನು. ಅವನಿಂದ ಸಾಧ್ಯವಾಗಲಿಲ್ಲ. ಅವನ ಆಯುಧಗಳೆಲ್ಲವೂ ಮುಗಿದವು. ರಥವೂ ಪುಡಿಪುಡಿಯಾಯಿತು. ಶ್ರೀಕೃಷ್ಣದೇವನು ಶ್ರಮವು ಹೋದಂತೆ ನಟಿಸಿ ಎದ್ದು ಕುಳಿತನು. ಸತ್ಯಭಾಮಾದೇವಿಯರ ಪ್ರಭಾವಕ್ಕೆ ಮೆಚ್ಚಿ ಆಲಿಂಗಿಸಿದನು. ನರಕಾಸುರನು ಅಷ್ಟರೊಳಗೆ ಇನ್ನೊಂದು ರಥದಲ್ಲಿ ಕುಳಿತುಕೊಂಡು ಯುದ್ಧಕ್ಕೆ ಬಂದನು.

ಶ್ರೀಕೃಷ್ಣದೇವನು ನರಕಾಸುರನ ಸೈನ್ಯದ ಮೇಲೆ ಅಸಂಖ್ಯವಾದ ಬಾಣಗಳನ್ನು ಪ್ರಯೋಗಿಸಿದನು. ಆ ಬಾಣಗಳಿಂದ ಸೈನಿಕರೆಲ್ಲರೂ ಮೃತರಾದರು. ಗರುಡದೇವನು ನರಕಾಸುರನ ಆನೆಗಳನ್ನು ಕೊಕ್ಕುಗಳಿಂದಲೂ ಉಗುರುಗಳಿಂದಲೂ ರೆಕ್ಕೆಗಳಿಂದಲೂ ಪೀಡಿಸಿದನು. ಈ ಪೀಡೆಯನ್ನು ಸಹಿಸಲಾರದ ಆನೆಗಳು ಯುದ್ಧವನ್ನು ಬಿಟ್ಟು ಊರೊಳಗೆ ಓಡಿದವು. ಸತ್ತು ಉಳಿದ ಸೈನಿಕರೆಲ್ಲರೂ ಓಡಿದರು. ನರಕಾಸುರನು ಒಬ್ಬಂಟಿಗನಾದನು. ಶಕ್ತ್ಯಾಯುಧದಿಂದ ಶ್ರೀಕೃಷ್ಣದೇವನನ್ನು ಹೊಡೆದನು. ಅದು ಮಾಲೆಯಿಂದ ಆನೆಯನ್ನು ಹೊಡೆದಂತಾಯಿತು. ಶೂಲವನ್ನು ಪ್ರಯೋಗಿಸುವುದಕ್ಕಾಗಿ ಕೈಯಲ್ಲಿ ಎತ್ತಿದನು. ಆ ಶೂಲವನ್ನು ಪ್ರಯೋಗಿಸುವುದರೊಳಗೆ ಸುದರ್ಶನಚಕ್ರದಿಂದ ಅವನ ತಲೆಯನ್ನು ಕತ್ತರಿಸಿದನು. ಅವನ ತಲೆಯು ಭೂಮಿಯಲ್ಲಿ ಉರುಳಿತು. ಆಗ ಎಲ್ಲಾ ದೇವತೆಗಳೂ ಪುಷ್ಪಗಳ ಮಳೆಯನ್ನು ಶ್ರೀಕೃಷ್ಣದೇವನ ಮೇಲೆ ಸುರಿಸಿ ಸ್ತುತಿಸಿದರು. ಈ ನರಕಾಸುರನು ಮಂತ್ರಿಗಳಿಂದಲೂ ಮಂತ್ರಿಕುಮಾರರಿಂದಲೂ ಸಹಿತನಾಗಿ ನಿತ್ಯನರಕವನ್ನು ಪ್ರವೇಶಿಸಿದನು. ಅವನಲ್ಲಿ ಆವಿಷ್ಟರಾಗಿರುವ ವಾಯುದೇವರು ಮೂಲರೂಪವನ್ನು ಹೊಂದಿದರು.

## ಭೂದೇವಿಯು ಮಾಡಿದ ಸ್ತುತಿ ಮತ್ತು ಭಗದತ್ತನ ಪಟ್ಟಾಭಿಷೇಕ

**(೮೬) ಅಥ ಭೂಸ್ತುತಃ, ಅಸ್ಯ ಸೂನುಂ ರಾಜ್ಯೇ ಕೃತ್ವಾ,**

ಭೂದೇವಿಯಿಂದ ಸ್ತುತಿಸಲ್ಪಟ್ಟ ಶ್ರೀಕೃಷ್ಣದೇವನು ನರಕಾಸುರನ ಮಗನಿಗೆ ಅವನ ರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಿದನು.

**ವಿಶೇಷಾರ್ಥ - ನರಕಾಸುರಸ್ಯ ಮಾತ್ರಾ ಧರಾದೇವ್ಯಾ ಸ್ತುತಃ ಭೌಮಪುತ್ರಂ ಭಗದತ್ತನಾಮಾನಂ ಪೂರ್ವಂ ಕುಬೇರಂ ನರಕಾಸುರಾಪಹೃತಸ್ವಕೀಯ ಸುಪ್ರತೀಕಾಖ್ಯಗಜಪ್ರಾಪ್ತ್ಯರ್ಥಂ ನರಕಪುತ್ರತ್ವೇನ ಜಾತಂ ಪ್ರಾಗ್ಜ್ಯೋತಿಷಪುರಾಧಿಪತಿಂ ಕೃತ್ವಾ.**

**ವಿಶೇಷಾರ್ಥವಿವರಣ** - ಸತ್ಯಭಾಮಾದೇವಿಯರಿಂದ ಸಹಿತನಾಗಿ ಶ್ರೀಕೃಷ್ಣದೇವನು ನರಕಾಸುರನ ಅಂತಃಪುರವನ್ನು ಪ್ರವೇಶಿಸಿದನು. ಪಂಚಭೂತಗಳ ಮಧ್ಯದಲ್ಲಿ ಕೊನೆ ದರ್ಜೆಗೆ ಸೇರಿರುವ ಭೂಮಿ ಎಂಬ ಭೂತಕ್ಕೆ ಅಭಿಮಾನಿನಿಯಾಗಿರುವ ಧರಾದೇವಿಯಲ್ಲಿ ವರಾಹರೂಪಿಯಾದ ಶ್ರೀಹರಿಯಿಂದ ನರಕಾಸುರನು ಹುಟ್ಟಿರುವುದಾಗಿ ಹಿಂದೆ ಹೇಳಿರುವೆವು. ಮೂಲಪ್ರಕೃತಿ ಅಂದರೆ ಮಹಾಲಕ್ಷ್ಮೀದೇವಿಯರ "ಭೂಮಿ" ಎಂಬ ರೂಪವು ಈ "ಧರಾ" ದೇವಿಯಲ್ಲಿ ವಿಶೇಷವಾಗಿ ಸನ್ನಿಹಿತವಾಗಿದೆ ಎಂದೂ ಹೇಳಿರುವೆವು. ಶ್ರೀಧರಾದೇವಿಯು ಅಂತಃಪುರಕ್ಕೆ ಬಂದಿರುವ ಶ್ರೀಕೃಷ್ಣದೇವನನ್ನು ನೋಡಿದಳು. ತನ್ನ ಮೊಮ್ಮಗನೂ ನರಕಾಸುರನ ಮಗನೂ ಆಗಿರುವ

ಭಗದತ್ತನನ್ನೂ ಅದಿತಿದೇವಿಯ ಕರ್ಣಕುಂಡಲಗಳನ್ನೂ ಶ್ರೀಕೃಷ್ಣದೇವನ ಪಾದಗಳಲ್ಲಿ ಸಮರ್ಪಿಸಿದಳು. ಶ್ರೀಕೃಷ್ಣದೇವನ ಎರಡು ಕಾಲುಗಳನ್ನೂ ಗಟ್ಟಿಯಾಗಿ ಹಿಡಿದುಕೊಂಡು ತನ್ನನ್ನೂ ತನ್ನ ಮೊಮ್ಮಗನನ್ನೂ ರಕ್ಷಿಸಬೇಕೆಂದು ಪ್ರಾರ್ಥಿಸಿದಳು.

ಕುಬೇರನು ಅತ್ಯಂತ ಭಕ್ತಿಯಿಂದ ರುದ್ರದೇವನನ್ನು ಆರಾಧಿಸಿದನು. ಅವನ ತಪಸ್ಸಿನಿಂದ ಸಂತುಷ್ಟನಾದ ರುದ್ರದೇವನು ಕುಬೇರನಿಗೆ "ಸುಪ್ರತೀಕ" ಎಂಬ ಆನೆಯನ್ನು ಕೊಟ್ಟನು. ಆ ಆನೆಯು ಸಮುದ್ರಮಥನಕಾಲದಲ್ಲಿ ಸಮುದ್ರದಿಂದ ಹೊರಗೆ ಬಂದಿರುವ ಆರು ಸಹಸ್ರ, ಆನೆಗಳ ಮಧ್ಯದಲ್ಲಿ ಅತ್ಯಂತ ಶಕ್ತಿ ಯುಕ್ತವಾದ ಒಂದು ಆನೆ. ಆ ಆನೆಯನ್ನು ನರಕಾಸುರನು ಬಲಾತ್ಕಾರದಿಂದ ಅಪಹರಿಸಿದ್ದನು. ಕುಬೇರನು ಆ ಆನೆಗಾಗಿ "ಭಗದತ್ತ" ಎಂಬ ಹೆಸರಿನಿಂದ ನರಕಾಸುರನ ಮಗನಾಗಿ ಹುಟ್ಟಿದ್ದನು. ಆ ಆನೆಯನ್ನು ಭಗದತ್ತನಿಗೆ ಕೊಟ್ಟನು. ಭಗದತ್ತನಿಗೆ ಅವನ ತಂದೆಯ ರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಿದನು. ಅವನಲ್ಲಿಯೂ ಧರಾದೇವಿಯಲ್ಲಿಯೂ ವಿಶೇಷಾನುಗ್ರಹವನ್ನು ಮಾಡಿದನು.

## ನರಕಾಸುರನ ಕೋಶದಲ್ಲಿದ್ದ ಅಮೂಲ್ಯವಸ್ತುಗಳನ್ನು ದ್ವಾರಕೆಗೆ ಸಾಗಿಸಿದನು.

ನರಕಾಸುರನ ಮನೆಯಲ್ಲಿದ್ದ "ಸುಪ್ರತೀಕ" ಎಂಬ ಆನೆಯನ್ನು ಬಿಟ್ಟು ಉಳಿದ ನಾಲ್ಕು ದಂತಗಳಿಂದ ಯುಕ್ತವಾಗಿರುವ ಐದುಸಾವಿರದ ಒಂಬೈನೂರ ತೊಂಭತ್ತು ಆನೆಗಳನ್ನು ದ್ವಾರಕೆಗೆ ಕಳುಹಿಸಿದನು. ರಾಜರುಗಳನ್ನೂ ದೇವತೆಗಳನ್ನೂ, ಗಂಧರ್ವರನ್ನೂ ಜಯಿಸಿ ಭಂಗಾರದ ಮತ್ತು ರತ್ನಗಳ ರಾಶಿಯನ್ನು ಇನ್ನೂರು ಯೋಜನಗಳ ವರೆಗೆ ಸುತ್ತಲೂ ಬೇರೆ ಬೇರೆಯಾಗಿ ಇಟ್ಟಿದ್ದನು. ಆ ಭಂಗಾರವನ್ನೂ ರತ್ನಗಳನ್ನೂ ದ್ವಾರಕೆಗೆ ಕಳುಹಿಸಿದನು.

"ನಿಋತಿ" ಎಂಬ ದಿಕ್ಪಾಲಕನನ್ನು ಜಯಿಸಿ ಮಹಾಶಕ್ತಿಯುಳ್ಳ ರಾಕ್ಷಸರನ್ನು ನರಕಾಸುರನು ಕರೆದುಕೊಂಡು ಬಂದಿದ್ದನು. ಅವರಿಂದ ಈ ರತ್ನ ಮತ್ತು ಭಂಗಾರದ ರಾಶಿಗಳನ್ನು ಹೊರಸಿ ಕಳುಹಿಸಿದನು. ಅನಂತರದಲ್ಲಿ ಅಂತಃಪುರದ ಇನ್ನೊಂದು ಪ್ರದೇಶಕ್ಕೆ ಹೋದನು. ಅಲ್ಲಿ ಹದಿನಾರು ಸಾವಿರದ ನೂರು ಕನ್ಯೆಯರನ್ನು ಕಂಡನು.

## ನರಕಾಸುರನ ಅಂತಃಪುರದಲ್ಲಿದ್ದ ಕನ್ಯೆಯರು

ನರಕಾಸುರನು ರಾಜರನ್ನು ದಿಗ್ವಿಜಯ ಮಾಡಿದಾಗ ಬಲಾತ್ಕಾರದಿಂದ ಈ ಕನ್ಯೆಯರೆಲ್ಲರನ್ನೂ ಕರೆದುಕೊಂಡು ಬಂದಿದ್ದನು. ಅವರನ್ನು ಯಾರನ್ನೂ ಕೆಡಿಸಿ ಸುಖಪಡಬೇಕೆಂದು ಕರೆದುಕೊಂಡು ಬಂದವನಲ್ಲ. ಪ್ರಪಂಚದಲ್ಲಿ ಶ್ರೇಷ್ಠವಾದ ಎಲ್ಲಾ ವಸ್ತುಗಳೂ ತನ್ನಲ್ಲಿಯೇ ಇರಬೇಕೆಂದು ನರಕಾಸುರನ ಆಸೆ. ಆ ಆಸೆಯಿಂದ ಈ ಕನ್ಯೆಯರನ್ನು ಕರೆದುಕೊಂಡು ಬಂದು ತನ್ನ ಮನೆಯಲ್ಲಿ ಸಂಗ್ರಹಿಸಿದ್ದನು. ಈ ಕನ್ಯೆಯರೆಲ್ಲರೂ ರೂಪ, ಶೀಲ ಮುಂತಾದ ಗುಣಗಳಿಂದ ಅತ್ಯಂತ ಶ್ರೇಷ್ಠರಾಗಿದ್ದರು. ಶ್ರೀಕೃಷ್ಣನೇ ತಮಗೆ ಪತಿಯಾಗಬೇಕೆಂದು ಶ್ರೇಷ್ಠವಾದ ನಾನಾವ್ರತಗಳನ್ನು ಮಾಡುತ್ತಿದ್ದರು. ಆ ಕನ್ಯೆಯರ ಮಧ್ಯದಲ್ಲಿ ಕೆಲವರು ದೇವಕನ್ಯೆಯರೂ, ಕೆಲವರು ಗಂಧರ್ವಕನ್ಯೆಯರೂ ಆಗಿದ್ದರು. ಅವರ ಮಧ್ಯದಲ್ಲಿ ತ್ವಷ್ಟೃ ಎಂಬ ಸೂರ್ಯನ ಮಗಳಾಗಿರುವ ಕಶೇರು ಎಂಬುವವಳು ಪ್ರಧಾನಳಾಗಿದ್ದಳು.

# ಈ ಕನ್ಯೆಯರು ಯಾರು ?

ಈ ಕನ್ಯೆಯರೆಲ್ಲರೂ ಹಿಂದಿನ ಜನ್ಮದಲ್ಲಿ ಅಗ್ನಿದೇವನ ಮಕ್ಕಳು ಮತ್ತು ಪುರುಷರು. ಅವರೆಲ್ಲರೂ ಶ್ರೀಹರಿಯು ಶ್ರೀಕೃಷ್ಣಾವತಾರವನ್ನು ಸ್ವೀಕರಿಸಿದಾಗ ಶ್ರೀಕೃಷ್ಣದೇವನ ಪತ್ನಿಯರಾಗಬೇಕೆಂದು ಸಂಕಲ್ಪಿಸಿದರು. ಸ್ತ್ರೀಯರಾಗದಿದ್ದರೆ ಶ್ರೀಕೃಷ್ಣದೇವನ ಪತ್ನಿಯರಾಗುವಂತಿಲ್ಲ. ಅದಕ್ಕಾಗಿ ಮೊದಲು ಸ್ತ್ರೀಯರಾಗಬೇಕೆಂದು ಸಂಕಲ್ಪಿಸಿದರು. ಅದಕ್ಕಾಗಿ ವಾಯುದೇವನನ್ನು ಕುರಿತು ಘೋರವಾದ ತಪಸ್ಸನ್ನು ಮಾಡಿದರು. ವಾಯುದೇವನು ಇವರ ಸಂಕಲ್ಪವನ್ನು ತಿಳಿದು ಆ ಸಂಕಲ್ಪವನ್ನು ಪೂರ್ತಿಮಾಡುವುದಕ್ಕೋಸ್ಕರ ಅವರೆಲ್ಲರೂ ಸ್ತ್ರೀಯರಾಗುವಂತೆ ಅನುಗ್ರಹಿಸಿದರು.

ಸ್ತ್ರೀಯರಾದ ಇವರೆಲ್ಲರೂ ಬದರೀಕ್ಷೇತ್ರಕ್ಕೆ ಹೋದರು. ನಾರಾಯಣರೂಪಿಯಾದ ಶ್ರೀಹರಿಯನ್ನು ಅತ್ಯಂತ ಭಕ್ತಿಯಿಂದ ಆರಾಧಿಸಿದರು. ಶ್ರೀಕೃಷ್ಣದೇವನು ಅವರ ಸಂಕಲ್ಪವನ್ನು ತಿಳಿದನು. ಶ್ರೀಕೃಷ್ಣದೇವನ ಪತ್ನಿಯರಾಗುವ ಅರ್ಹತೆಯು ಸಾಮಾನ್ಯಸ್ತ್ರೀಯರಿಗಿಲ್ಲ. ಆದ್ದರಿಂದ ಅಪ್ಸರಃ ಸ್ತ್ರೀಯರಾಗುವಂತೆ ಅನುಗ್ರಹಿಸಿದನು. ಅಪ್ಸರಃ ಸ್ತ್ರೀಯರಾದ ಈ ಅಗ್ನಿಕುಮಾರರಲ್ಲಿ ಕೆಲವರು ರಾಜವಂಶಗಳಲ್ಲಿ ಅವತರಿಸಿದರು. ದೇವಲೋಕದಲ್ಲಿಯೇ ದೇವತೆಗಳಿಗೂ ಗಂಧರ್ವರಿಗೂ ಮಕ್ಕಳಾಗಿ ಹುಟ್ಟಿದರು. ಅವರೆಲ್ಲರನ್ನೂ ನರಕಾಸುರನು ತನ್ನ ಜೈಲಿನಲ್ಲಿ ಇಟ್ಟಿದ್ದನು.

ಆ ಜೈಲಿಗೆ ಶ್ರೀಕೃಷ್ಣದೇವನು ಹೋದನು. ಈ ಹದಿನಾರುಸಾವಿರದ ನೂರು ಕನ್ಯೆಯರನ್ನು ನೋಡಿದನು. ಅವರೆಲ್ಲರೂ ಸಕಲಗುಣಪರಿಪೂರ್ಣನಾಗಿರುವ ಶ್ರೀಕೃಷ್ಣದೇವನನ್ನು ನೋಡಿ ತಮಗೆ ಪತಿಯಾಗಬೇಕೆಂದು ಪ್ರಾರ್ಥಿಸಿದರು. ಆ ಕನ್ಯೆಯರು ಸ್ವಭಾವದಿಂದ "ಜಯಂತ" ಮುಂತಾದ ಆಜಾನಜದೇವತೆಗಳು ಅಂದರೆ ದೇವಜಾತಿಯಲ್ಲಿ ಹುಟ್ಟಿದವರಿಗೆ ಸಮಾನರು.

ಆದರೆ ಶ್ರೀಕೃಷ್ಣದೇವನ ಪತ್ನಿಯರಾಗಬೇಕಾದರೆ ಅವರಲ್ಲಿ ಒಬ್ಬೊಬ್ಬಳಲ್ಲಿಯೂ ಲಕ್ಷ್ಮೀದೇವಿಯರ ವಿಶೇಷ ಸನ್ನಿಧಾನವು ಏರ್ಪಡಬೇಕು. ಅದಕ್ಕಾಗಿ ಲಕ್ಷ್ಮೀದೇವಿಯರನ್ನು ಆರಾಧಿಸಿದರು. ಲಕ್ಷ್ಮೀದೇವಿಯರ ವಿಶೇಷ ಸನ್ನಿಧಾನವು ಏರ್ಪಟ್ಟಿತು. ಈ ಕಾರಣದಿಂದ ಆಜಾನಜದೇವತೆಗಳಿಗಿಂತ ಅವರೆಲ್ಲರೂ ಶ್ರೇಷ್ಠರೆನಿಸಿದರು. ಅವರೆಲ್ಲರನ್ನೂ ಶ್ರೀಕೃಷ್ಣದೇವನು ಪತ್ನಿಯರಾಗಿ ಮಾಡಿಕೊಳ್ಳುವುದಾಗಿ ಅಂಗೀಕರಿಸಿದನು. ಅವರೆಲ್ಲರನ್ನೂ ಪಲ್ಲಕ್ಕಿಗಳಲ್ಲಿ ಕೂಡಿಸಿ ದ್ವಾರಕೆಗೆ ಕಳುಹಿಸಿದನು.

# ಸ್ವರ್ಗಲೋಕಕ್ಕೆ ಹೋದನು.

ನಂತರ ಶ್ರೀಕೃಷ್ಣನು ಸ್ವರ್ಗಲೋಕಕ್ಕೆ ಹೋದನು. ಅಲ್ಲಿ ದೇವೇಂದ್ರನ ರತ್ನಪರ್ವತವು ಎರಡು ನೂರು ಯೋಜನ ಪರಿಮಿತವಾದ ಉದ್ದ ಎತ್ತರ ಮತ್ತು ಅಗಲವುಳ್ಳದ್ದಾಗಿತ್ತು. ವರುಣನ ಶ್ವೇತ ಛತ್ರವು ಯಾವಾಗಲೂ ಅಮೃತಮಯವಾದ ಬಿಂದುಗಳನ್ನು ಸುರಿಸುತ್ತಿತ್ತು. ಅದೂ ಅಷ್ಟೇ ಉದ್ದ ಅಗಲ ಮತ್ತು ಎತ್ತರವಾಗಿತ್ತು. ಶ್ರೀಕೃಷ್ಣನು ಒಂದು ಕೈಯಿಂದ ರತ್ನಪರ್ವತವನ್ನೂ ಇನ್ನೊಂದು ಕೈಯಿಂದ ಶ್ವೇತಛತ್ರವನ್ನೂ ಎತ್ತಿ ಗರುಡದೇವನ ಮೇಲೆ ಇಟ್ಟನು.

ತಾನೂ ಸತ್ಯಭಾಮಾದೇವಿಯಿಂದ ಸಹಿತನಾಗಿ ಗರುಡನ ಮೇಲೆ ಏರಿ ಕುಳಿತನು. ಆಯಾಸವಿಲ್ಲದೆ ಸ್ವರ್ಗಲೋಕಕ್ಕೆ ಹೋದನು. ದೇವೇಂದ್ರನೂ ಅವನ ಪತ್ನಿಯಾದ ಶಚೀದೇವಿಯೂ ಸತ್ಯಭಾಮಾಸಹಿತನಾದ ಶ್ರೀಕೃಷ್ಣದೇವನನ್ನು ಅತ್ಯಂತ ಭಕ್ತಿಯಿಂದ ಸ್ವಾಗತಿಸಿ ಪೂಜಿಸಿದರು.

## ಅದಿತಿದೇವಿಯ ದರ್ಶನ

ಅಲ್ಲಿಂದ ಶ್ರೀಕೃಷ್ಣನು ಅದಿತಿದೇವಿಯು ಇರುವ ಪ್ರದೇಶಕ್ಕೆ ಹೋಗಿ ಅದಿತಿದೇವಿಯನ್ನು ನಮಸ್ಕರಿಸಿದನು. ಅವಳ ಕರ್ಣಕುಂಡಲಗಳನ್ನು ಸಮರ್ಪಿಸಿದನು. ಅದಿತಿಯು ಸತ್ಯಭಾಮಾದೇವಿಯನ್ನು ಆಲಿಂಗಿಸಿದಳು. "ನಿನಗೆ ವಾರ್ಧಕ್ಯಾವಸ್ಥೆ ಯಾಗಲೀ ಆ ಅವಸ್ಥೆಯಿಂದ ಏರ್ಪಡುವ ವಿಕಾರಗಳಾಗಲೀ ಏರ್ಪಡದಿರಲಿ. ಯಾವಾಗಲೂ ಪತಿಯ ವಿಶೇಷ ಪ್ರೀತಿಗೆ ಪಾತ್ರಳಾಗು" ಎಂದು ಆಶೀರ್ವದಿಸಿದಳು. ಅವಳ ಅನುಮತಿಯನ್ನು ಪಡೆದರು. ಅಲ್ಲಿಂದ ಹೊರಟರು. ದ್ವಾರಕಾಪಟ್ಟಣಕ್ಕೆ ಹೊರಟು ಬರುವಾಗ ಇಂದ್ರನ ಪಟ್ಟಣದಲ್ಲಿರುವ ನಂದನವನವನ್ನು ಶ್ರೀಸತ್ಯಬಾಮಾದೇವಿಯರು ನೋಡಿದರು.

## ಪಾರಿಜಾತಮರದ ದರ್ಶನ

ಇಂದ್ರನ ಪಟ್ಟಣದಲ್ಲಿ ವನವನ್ನು ನೋಡಿದ ಸತ್ಯಭಾಮಾದೇವಿಯರು "ಇದು ಪ್ರಪಂಚದಲ್ಲಿ ಪರಮಸುಂದರವಾದ ವನವೆಂದು ಕೇಳಿರುವೆನು. ಈ ವನದೊಳಗೆ ಪ್ರವೇಶಿಸಿ ಸ್ವಲ್ಪಕಾಲದ ವರೆಗೆ ವಿಹರಿಸಬೇಕೆಂದು ಆಶಿಸುವೆನು. ನನ್ನ ಆಸೆಯನ್ನು ಪೂರ್ತಿ ಮಾಡಬೇಕು." ಎಂದು ಪತಿಯನ್ನು ಪ್ರಾರ್ಥಿಸಿದರು. ಶ್ರೀಕೃಷ್ಣದೇವನು ಸತ್ಯಭಾಮಾದೇವಿಯರ ಆಸೆಯನ್ನು ಪೂರ್ತಿ ಮಾಡಬೇಕೆಂದು ತೀರ್ಮಾನಿಸಿದನು. ಗರುಡನಿಂದ ಕೆಳಗೆ ಇಳಿದನು. ಆ ವನದಲ್ಲಿರುವ ಮರಗಳನ್ನೆಲ್ಲವನ್ನೂ ಶ್ರೀಸತ್ಯಭಾಮಾದೇವಿಯರಿಗೆ ತೋರಿಸಿದನು. ಆಗ ಅಲ್ಲಿರುವ ಪಾರಿಜಾತವೃಕ್ಷವನ್ನು ನೋಡಿದರು. ಅಸೂಯಾದಿದೋಷಗಳಿಂದ ರಹಿತರಾದ ಆ ದೇವಿಯರು ಸ್ತ್ರೀಯರ ಸ್ವಭಾವವನ್ನು ತಿಳಿಸುವುದಕ್ಕೋಸ್ಕರ ಶಚೀದೇವಿಯ ಮೇಲೆ ಆಸೂಯೆಯಿಂದ ಯುಕ್ತರಾದಂತೆ ಕೆಲವು ಮಾತುಗಳನ್ನು ಹೇಳಿದರು.

"ಓ ಪ್ರಭೋ, ಈ ಮರವು ಯಾವುದು? ಇದು ಮೂರು ಲೋಕಗಳಲ್ಲಿ ವಿಚಿತ್ರವಾಗಿದೆ. ಒಂದೇ ಮರದಲ್ಲಿ ಎಲ್ಲಾ ವಿಧವಾದ ಫಲಗಳೂ ಕಾಣಿಸುತ್ತಿವೆ. ಈ ಮರದ ಜಗಲಿಯು ನಾನಾ ವಿಧವಾದ ರತ್ನಗಳಿಂದ ವಿಚಿತ್ರವಾಗಿದೆ. ಹವಳದ ಬೇರು. ಭಂಗಾರದ ದೇಹ, ಇಂದ್ರನೀಲಮಣಿಯ ಎಲೆಗಳು, ಮಾಣಿಕ್ಯದ ಪುಷ್ಪ, ಮುತ್ತುಗಳ ಫಲಗಳು, ವಜ್ರಗಳ ಕೇಸರಗಳು, ಮರುಕತಮಣಿಗಳ ಸ್ಥೂಲವಾದ ಕೊಂಬೆಗಳು ಇವುಗಳಿಂದ ಶೋಭಿಸುತ್ತಿರುವ ಈ ಮರವು ನನ್ನ ಮನಸ್ಸನ್ನು ಸೂರೆಗೊಂಡಿದೆ. ನಿನಗೆ ನನ್ನಲ್ಲಿ ಪ್ರೀತಿ ಇರುವುದು ನಿಜವಾಗಿದ್ದರೆ ಈ ಮರವನ್ನು ನಮ್ಮ ಊರಿಗೆ ತೆಗೆದುಕೊಂಡು ಹೋಗಲೇಬೇಕು. ಈ ಮರವನ್ನು ನನ್ನ ಮನೆಯ ಮುಂದೆ ಇಡಬೇಕು. ಈ ಮರದ ಕೆಳಗೆ ವಿಶ್ರಮಿಸಿಕೊಂಡಿರುವ ನನ್ನನ್ನು ನೋಡಿದ ನಿನ್ನ ಇತರ ಪತ್ನಿಯರೆಲ್ಲರೂ ನಾನೊಬ್ಬಳೇ ಎಲ್ಲಾ ಸ್ತ್ರೀಯರ ಮಧ್ಯದಲ್ಲಿ ನಿನ್ನ ವಿಶೇಷ ಪ್ರೀತಿಗೆ ಪಾತ್ರಳೆಂದು ತಿಳಿಯಬೇಕು" ಹೀಗೆ ಪ್ರಾರ್ಥಿಸಿದರು.

ಈ ಮಾತುಗಳನ್ನು ಶ್ರೀಕೃಷ್ಣದೇವನು ಕೇಳಿದನು. "ಹಿಂದೆ ಸಮುದ್ರಮಥನಕಾಲದಲ್ಲಿ ಈ ಮರವು ಹುಟ್ಟಿತು. ಎಲ್ಲಾ ದೇವತೆಗಳೂ ಈ ಮರವನ್ನು ದೇವೇಂದ್ರನಿಗೆ ಕೊಟ್ಟಿರುವರು. ಈ ಮರವು ದೇವೇಂದ್ರನಲ್ಲಿದ್ದರೂ ಅದರ ಫಲವು ಎಲ್ಲಾ ದೇವತೆಗಳಿಗೆ ಸಿಗುತ್ತದೆ. ಈ ಮರವನ್ನು ದೇವೇಂದ್ರನಿಗೆ ಕೊಟ್ಟಿರುವ ದೇವತೆಗಳಲ್ಲಿ ನಾನೂ ಒಬ್ಬನು. ಆದ್ದರಿಂದ ನಾನು ಕೊಟ್ಟಿರುವ ಮರವನ್ನು ನಾನೇ ಅಪಹರಿಸುವುದು ಧರ್ಮವಿರುದ್ಧವಾದುದು. ಅದು ಯುಕ್ತವಲ್ಲ." ಎಂದನು.

"ಅದು ಮಾತ್ರವಲ್ಲ. ಈ ಮರವನ್ನು ತೆಗೆದುಕೊಂಡು ಹೋದರೆ ಎಲ್ಲಾ ದೇವತೆಗಳಿಗೂ ನನಗೂ ಘೋರವಾದ ಯುದ್ಧವು ಏರ್ಪಡುವ ಸಂಭವವಿದೆ" ಎಂದನು. ಈ ಮಾತುಗಳನ್ನು ಸತ್ಯಭಾಮಾದೇವಿಯರು ಕೇಳಿದರು. "ನೀನು ನನ್ನನ್ನು ಹೆದರಿಸುತ್ತೀಯಾ? ನಾನು ದೇವೇಂದ್ರನ ಮನೆಗೆ ಹೋಗಿರುವಾಗ ದೇವೇಂದ್ರನ ಪತ್ನಿಯಾದ ಶಚೀದೇವಿಯು ಸಂತೋಷದಿಂದ ನನ್ನನ್ನು ಸ್ವಾಗತಿಸಲಿಲ್ಲ. ಅದಕ್ಕೆ ಮುಖ್ಯಕಾರಣವಾದುದು ಈ ವೃಕ್ಷವು ಅವಳ ಸ್ವಾಧೀನದಲ್ಲಿದ್ದುದೇ ಆಗಿರುತ್ತದೆ. ಗಂಡನ ಪೌರುಷವೂ ಎರಡನೆಯ ಕಾರಣವಾಗಿದೆ. ಆದ್ದರಿಂದ ನಿನಗೆ ನನ್ನಲ್ಲಿ ಪ್ರೀತಿಯು ಇರುವುದು ನಿಜವಾಗಿದ್ದರೆ ಈ ಮರವನ್ನು ನಮ್ಮ ಊರಿಗೆ ತೆಗೆದುಕೊಂಡು ಹೋಗಲೇಬೇಕು. ಮುಂದಿನ ಮಾತುಗಳು ಯಾವುದೂ ಬೇಡ" ಎಂದರು.

ಈ ಮಾತುಗಳನ್ನು ಶ್ರೀಕೃಷ್ಣದೇವನು ಕೇಳಿದನು. ಕಾವಲುಗಾರರನ್ನು ಲಕ್ಷ್ಯಮಾಡಲಿಲ್ಲ. ಪಾರಿಜಾತವೃಕ್ಷವನ್ನು ಕಿತ್ತಿ. ಗರುಡನ ಮೇಲೆ ಇಟ್ಟನು. ಕೆಲವು ವನರಕ್ಷಕರು ಶ್ರೀಕೃಷ್ಣದೇವನನ್ನು ನೋಡಿದರು. ಕೃಷ್ಣ, ಕೃಷ್ಣ, ಈ ಮರವನ್ನು ತೆಗೆದುಕೊಂಡು ಹೋಗಕೂಡದು. ನಮ್ಮ ಮಾತುಗಳನ್ನು ಕೇಳದಿದ್ದರೆ ಈಗಲೇ ವಜ್ರಾಯುಧದಿಂದ ಯುಕ್ತನಾಗಿರುವ ದೇವೇಂದ್ರನು ಬರುವನು. ದೇವತೆಗಳಿಂದ ಪೂಜಿಸಲ್ಪಡುತ್ತಿರುವ ಈ ಮರದೊಡನೆ ಊರಿಗೆ ಹೋಗಲಾರೆ" ಎಂದನು.

ಕೆಲವರು ದೇವೇಂದ್ರನಿಗೆ ಈ ಸಮಾಚಾರವನ್ನು ತಿಳಿಸುವುದಕ್ಕಾಗಿ ಹೋದರು. ಶಚೀದೇವಿಯೊಡನೆ ದಿವ್ಯ ಸಿಂಹಾಸನದಲ್ಲಿ ಕುಳಿತಿರುವ ದೇವೇಂದ್ರನನ್ನು ನೋಡಿದರು. "ಓ ಮಹಾಪ್ರಭೋ, ಶ್ರೀಕೃಷ್ಣನ ಪ್ರಿಯಪತ್ನಿಯಾಗಿರುವ ಸತ್ಯಭಾಮೆಯು ಎಲ್ಲಾ ದೇವತೆಗಳನ್ನೂ ಅಲಕ್ಷ್ಯ ಮಾಡಿ ಪಾರಿಜಾತವೃಕ್ಷವನ್ನು ಅಪಹರಿಸಿದಳು. ತನ್ನ ಗಂಡನು ಮಹಾ ಪೌರುಷದಿಂದ ಯುಕ್ತನಾಗಿರುವವನು ಎಂಬ ಗರ್ವವೇ ಇದಕ್ಕೆ ಕಾರಣ. ನಾವು ಎಷ್ಟೋ ಹೇಳಿ ನೋಡಿದೆವು. ನಮ್ಮ ಮಾತುಗಳಿಗೆ ಮರ್ಯಾದೆಯನ್ನು ಕೊಡಲಿಲ್ಲ." ಎಂದರು.

## ದೇವತೆಗಳು ಯುದ್ಧಕ್ಕೆ ಬಂದರು

ತನ್ನ ಪತ್ನಿಯಾದ ಶಚೀದೇವಿಯ ಮುಂದೆ ದೂತರು ಹೇಳಿದ ಮಾತುಗಳನ್ನು ದೇವೇಂದ್ರನು ಕೇಳಿದನು. ಪಕ್ಕದಲ್ಲಿರುವ ಶಚೀದೇವಿಯನ್ನು ನೋಡಿದನು. ಅವಳಿಗೆ ಏರ್ಪಟ್ಟ ಅಪಮಾನವನ್ನು ಸಹಿಸಲಿಲ್ಲ. ಮಲಗಿದ ಹಾವನ್ನು ಕೋಲಿನಿಂದ ಹೊಡೆದರೆ ಚೀರಿ ಎದ್ದುಕೊಳ್ಳುವಂತೆ ಎದ್ದನು. ಕೂಡಲೇ ಯುದ್ಧಕ್ಕಾಗಿ ಹೊರಡುವಂತೆ ಎಲ್ಲಾ ದೇವತೆಗಳಿಗೂ ಭೇರೀ ಧ್ವನಿಯಿಂದ ತಿಳಿಸಿದನು. ಐರಾವತ ಆನೆಯ ಮೇಲೆ ಕುಳಿತವನಾಗಿ ವಜ್ರಧಾರಿಯಾಗಿ

ಹೊರಟನು. ಅವನ ಹಿಂದೆ ಯಮ ಮುಂತಾದ ಎಲ್ಲಾ ದಿಕ್ಪಾಲಕರೂ ತಮ್ಮ ತಮ್ಮ ವಾಹನಗಳಲ್ಲಿ ಕುಳಿತವರಾಗಿ ತಮ್ಮ ತಮ್ಮ ಆಯುಧಗಳನ್ನು ಸ್ವೀಕರಿಸಿದವರಾಗಿ ಯುದ್ಧಕ್ಕೆ ಹೊರಟರು.

## ಸತ್ಯಭಾಮಾದೇವಿಯಿಂದ ಕುಬೇರನ ಪರಾಜಯ

ಶ್ರೀಕೃಷ್ಣದೇವನು ಇವರೆಲ್ಲರನ್ನು ನೋಡಿದನು. "ಸತ್ಯಭಾಮಾದೇವಿಯೇ, ಪಾರಿಜಾತವೃಕ್ಷವನ್ನು ತೆಗೆದುಕೊಂಡು ಹೋಗಕೂಡದು ಎಂದು ಹೇಳಿದೆನು. ನೀನು ಕೇಳಲಿಲ್ಲ. ಈಗ ನಿನ್ನಿಂದ ಸತ್ಕಾರವನ್ನು ಪಡೆಯುವುದಕ್ಕಾಗಿ ಬೀಗರು ಬಂದಿರುವರು. ಅವರಿಗೆಲ್ಲಾ ಸತ್ಕಾರವನ್ನು ನೀನೇ ಮಾಡು" ಎಂದು ನಗುತ್ತಾ ಹೇಳಿದನು.

ಸತ್ಯಭಾಮಾದೇವಿಯು ಈ ಮಾತುಗಳನ್ನು ಕೇಳಿದಳು. ಶಾರ್ಙ್ಗಧನುಸ್ಸನ್ನು ಸ್ವೀಕರಿಸಿದಳು. ತಾನೇ ಯುದ್ಧವನ್ನು ಮಾಡಿದಳು. ಮೊದಲು ಕುಬೇರನನ್ನು ಸೋಲಿಸಿದಳು. ಕುಬೇರನು ಕೊನೆಗೆ ಮುದ್ಗರ ಎಂಬ ಆಯುಧವನ್ನು ಪ್ರಯೋಗಿಸಿದನು. ಶ್ರೀಕೃಷ್ಣದೇವನು ಆ ಮುದ್ಗರವನ್ನು ಎಡಗೈಯಿಂದ ಹಿಡಿದನು. ಗಟ್ಟಿಯಾಗಿ ನಕ್ಕನು. ಕುಬೇರನು ಸೋತು ಓಡಿದನು. ಶ್ರೀಕೃಷ್ಣದೇವನು ಸತ್ಯಭಾಮಾದೇವಿಯನ್ನು ಆಲಿಂಗಿಸಿದನು. ಅವಳ ಕೈಯಿಂದ ಶಾರ್ಙ್ಗಧನುಸ್ಸನ್ನು ತೆಗೆದುಕೊಂಡು ತಾನೇ ಯುದ್ಧವನ್ನು ಮಾಡಲು ಆರಂಭಿಸಿದನು.

## ಗರುಡನಿಂದ ವರುಣನ ಪರಾಜಯ

ವರುಣನು ಮೊಸಳೆಯ ಮೇಲೆ ಕುಳಿತವನಾಗಿ ತನ್ನ ಆಯುಧವಾದ ಪಾಶವನ್ನು ಗರುಡನ ಕುತ್ತಿಗೆಗೆ ಹಾಕಿ ಸೆಳೆದನು. ಗರುಡನು ತನ್ನ ರೆಕ್ಕೆಯ ಕೊನೆಯಿಂದ ಮೊಸಳೆಯನ್ನು ಎತ್ತಿ ಸಮುದ್ರದಲ್ಲಿ ಬಿಸಾಡಿದನು. ಮೊಸಳೆಯು ಹೋದ ಮೇಲೆ ವರುಣನು ತುಂಬಾ ಕಷ್ಟದಿಂದ ಪಾಶವನ್ನು ಬಿಡಿಸಿಕೊಂಡು ಓಡಿ ಹೋದನು.

## ಶ್ರೀಕೃಷ್ಣದೇವನಿಂದ ಅಗ್ನಿ ವಾಯುಗಳ ಪರಾಜಯ

ಅಗ್ನಿಯೂ ವಾಯವ್ಯದಿಕ್ಪಾಲಕನಾದ ವಾಯುವೂ ಒಟ್ಟಿಗೆ ಯುದ್ಧಕ್ಕೆ ಬಂದರು. ಶ್ರೀಕೃಷ್ಣದೇವನು ಒಂದು ಬಾಣದಿಂದ ಅಗ್ನಿಯನ್ನು ಹೊಡೆದನು. ಆ ಪೆಟ್ಟನ್ನು ಸಹಿಸಲಾರದೆ ಅಗ್ನಿಯು ಓಡಿ ಹೋದನು. ವಾಯುವು ಬಾಣಗಳಿಂದ ಹೊಡೆಯಲ್ಪಟ್ಟ ತನ್ನ ದೇಹವನ್ನು ನೋಡಿದನು. ಶ್ರೀಕೃಷ್ಣದೇವನೇ ಯುದ್ಧಕ್ಕೆ ಬಂದಿರುವುದಾಗಿ ತಿಳಿದನು. ಯುದ್ಧವನ್ನು ಬಿಟ್ಟು ಹಿಂದಿರುಗಿದನು.

## ಯಮನ ಪರಾಜಯ

ಯಮನು ಕೋಣದ ಮೇಲೆ ಕುಳಿತವನಾಗಿ ಕಾಲದಂಡವನ್ನು ಧರಿಸಿ ಬಂದನು. ಶ್ರೀಕೃಷ್ಣದೇವನು ತನ್ನ ಗದೆಯಿಂದ ಕಾಲದಂಡವನ್ನು ಉರುಳಿಸಿದನು. ಭೀತನಾದ ಯಮನು ಕೋಣದ ಮೇಲೆ ಕುಳಿತವನಾಗಿಯೇ

ಓಡಿದನು. ಯಮನು ಓಡುತ್ತಿರುವುದನ್ನು ನಿರ್ಋತಿಯು ನೋಡಿ ತುಂಬಾ ಭೀತನಾಗಿ ಯುದ್ಧವನ್ನು ಮಾಡದೇ ಓಡಿಹೋದನು.

## ಗರುಡನಿಂದ ರುದ್ರನ ಪರಾಜಯ

ರುದ್ರನು ಹತ್ತು ಬಾಣಗಳಿಂದ ಶ್ರೀಕೃಷ್ಣದೇವನನ್ನೂ ಐದು ಬಾಣಗಳಿಂದ ಗರುಡನನ್ನೂ ಹೊಡೆದನು. ಶ್ರೀಕೃಷ್ಣದೇವನು ಮೂವತ್ತು ಬಾಣಗಳಿಂದ ರುದ್ರನನ್ನು ಹೊಡೆದನು. ಗರುಡನು ರುದ್ರನ ವಾಹನವಾದ ನಂದಿಯನ್ನು ರಕ್ಕೆಗಳಿಂದಲೂ ಕೊಕ್ಕಿನ ತುದಿಯಿಂದಲೂ ಎರಡು ಕಾಲುಗಳಿಂದಲೂ ಪೀಡಿಸಿದನು. ಪುನಃ ಶ್ರೀಕೃಷ್ಣದೇವನು ಐವತ್ತು ಬಾಣಗಳಿಂದ ರುದ್ರನನ್ನು ಹೊಡೆದನು. ರುದ್ರನು ತ್ರಿಶೂಲವನ್ನು ಶ್ರೀಕೃಷ್ಣದೇವನ ಮೇಲೆ ಪ್ರಯೋಗಿಸಿದನು. ಶ್ರೀಕೃಷ್ಣದೇವನು ತನ್ನ ಕೌಮೋದಕೀ ಎಂಬ ಗದೆಯನ್ನು ತ್ರಿಶೂಲಕ್ಕೆ ಅಭಿಮುಖವಾಗಿ ಬಿಟ್ಟನು. ಬಹುಕಾಲದ ವರೆಗೆ ಗದೆಯೂ ತ್ರಿಶೂಲವೂ ಯುದ್ಧವನ್ನು ಮಾಡಿ ಕೆಳಗೆ ಬಿದ್ದವು. ಕೊನೆಗೆ ಗದೆಯು ಶ್ರೀಕೃಷ್ಣದೇವನ ಪಾರ್ಶ್ವದಲ್ಲಿಯೂ ತ್ರಿಶೂಲವು ರುದ್ರನ ಪಾರ್ಶ್ವದಲ್ಲಿಯೂ ಬಂದು ಸೇರಿದವು. ಕೊನೆಗೆ ರುದ್ರನು ಖಡ್ಗವನ್ನು ಸ್ವೀಕರಿಸಿ ಶ್ರೀಕೃಷ್ಣದೇವನಿಗೆ ಅಭಿಮುಖವಾಗಿ ಬಂದನು. ಗರುಡನು ರುದ್ರನಿಂದ ಯುಕ್ತನಾದ ನಂದಿಯನ್ನು ಬಹುದೂರದ ವರೆಗೆ ಬಿಸಾಡಿದನು. ರುದ್ರನು ಯುದ್ಧವನ್ನು ನಿಲ್ಲಿಸಿ ಪ್ರಮಥಗಣಗಳಿಂದ ಸಹಿತನಾಗಿ ಓಡಿದನು.

## ಶ್ರೀಕೃಷ್ಣದೇವನಿಂದ ದೇವೇಂದ್ರನ ಪರಾಜಯ

ರುದ್ರ ಮುಂತಾದ ಸಕಲ ದೇವತೆಗಳೂ ಶ್ರೀಕೃಷ್ಣನಿಂದ ಪರಾಜಿತರಾಗಿ ಓಡಿ ಹೋದರು. ದೇವೇಂದ್ರನು ಮಾತ್ರ ತಾನು ಸಕಲ ದೇವತೆಗಳಿಗೂ ಅಧಿಪತಿ ಎಂಬ ಹೆಮ್ಮೆಯಿಂದ ಯುದ್ಧಕ್ಕೆ ಸಿದ್ಧನಾದನು. ಶ್ರೀಕೃಷ್ಣದೇವನಿಗೂ ದೇವೇಂದ್ರನಿಗೂ ಘೋರವಾದ ಯುದ್ಧವು ನಡೆಯಿತು. ಐರಾವತ ಆನೆಯು ತನ್ನ ನಾಲ್ಕು ದಂತಗಳ ಮಧ್ಯದಲ್ಲಿ ಗರುಡನನ್ನು ಸಿಕ್ಕಿಸಿತು. ಗರುಡನು ರೆಕ್ಕೆಗಳಿಂದಲೂ ಕೊಕ್ಕುಗಳಿಂದಲೂ ಐರಾವತ ಆನೆಯನ್ನು ಪೀಡಿಸಿದನು. ಆನೆಯು ಬಿಟ್ಟು ಬಿಟ್ಟಿತು. ದೇವೇಂದ್ರನು ಶ್ರೀಕೃಷ್ಣದೇವನ ಮೇಲೆ ವಜ್ರಾಯುಧವನ್ನು ಪ್ರಯೋಗಿಸಿದನು. ಶ್ರೀಕೃಷ್ಣದೇವನು ಆ ವಜ್ರಾಯುಧವನ್ನು ಲೀಲಾಮಾತ್ರದಿಂದ ಎಡಗೈಯಿಂದ ಹಿಡಿದನು. ಗಟ್ಟಿಯಾಗಿ ನಕ್ಕನು. ಹೀಗೆ ದೇವೇಂದ್ರನ ವಜ್ರಾಯುಧವು ಶ್ರೀಕೃಷ್ಣದೇವನ ವಶವಾಯಿತು. ವಾಹನವಾದ ಐರಾವತವು ಗರುಡನಿಂದ ಪೀಡಿಸಲ್ಪಟ್ಟಿತು. ಇಂದ್ರನು ನಾಚಿಕೆಯಿಂದ ತಲೆಯನ್ನು ತಗ್ಗಿಸಿದನು. ಅವನು ಮಾಡಿದ ಸಂಕಲ್ಪವೆಲ್ಲವೂ ಭ್ರಷ್ಟವಾಯಿತು. ಓಡುವುದಕ್ಕೆ ಆರಂಭಿಸಿದನು.

ಸತ್ಯಭಾಮಾದೇವಿಯು ಅವನ ದುರವಸ್ಥೆಯನ್ನು ನೋಡಿ ನಗುತ್ತಾ ಮಾತನಾಡಿದಳು. "ಎಲೋ ದೇವೇಂದ್ರಾ, ನಿನ್ನ ಪತ್ನಿಯಾದ ಶಚೀದೇವಿಯು ತನ್ನ ಗಂಡನಷ್ಟು ಪೌರುಷವುಳ್ಳವನು ಯಾವನೂ ಇಲ್ಲವೆಂಬ ಗರ್ವದಿಂದ ಯುಕ್ತಳಾಗಿರುವವಳು. ಈಗ ಯುದ್ಧದಲ್ಲಿ ಸೋತು ಓಡಿ ಬಂದಿರುವ ನಿನ್ನನ್ನು ಅಪಮಾನ ಮಾಡುವಳು." ಎಂದಳು.

ಈ ಮಾತುಗಳನ್ನು ಕೇಳಿದ ದೇವೇಂದ್ರನು ಸತ್ಯಭಾಮಾದೇವಿಯನ್ನು ನೋಡಿದನು. ಅಮ್ಮಾ, ದೇವತೆಗಳನ್ನೂ

ದೈತ್ಯರೇ ಮೊದಲಾದ ಸರ್ವಜೀವರನ್ನೂ ಶ್ರೀಕೃಷ್ಣದೇವನು ಸೃಷ್ಟಿಸಿದನು. ಅವನಿಂದ ಪರಾಜಿತನಾಗದಿರುವವನು ಯಾವನು ತಾನೇ ಇರುವನು? ಅತ್ಯಲ್ಪಶಕ್ತಿಯುಳ್ಳ ಕರುವು ತಾಯಿಯ ಕೆಚ್ಚಲಿನಿಂದ ಹಾಲನ್ನು ಕುಡಿಯುತ್ತಿರುವಾಗ ಕೆಚ್ಚಲಿನಿಂದ ಹಾಲು ಬೇಗನೆ ಬಾರದಿದ್ದರೆ ಗುದ್ದುವುದಿಲ್ಲವೇ? ಅದರಂತೆ ನಮ್ಮಲ್ಲಿರುವ ಪಾರಿಜಾತವೃಕ್ಷ ಮುಂತಾದ ವಸ್ತುಗಳನ್ನು ಶ್ರೀಕೃಷ್ಣದೇವನೇ ಅಪಹರಿಸಿಕೊಂಡು ಹೋಗುತ್ತಿರುವಾಗ ನಾವೆಲ್ಲರೂ ವಿರೋಧಿಸಿದ್ದರಲ್ಲಿ ತಪ್ಪೇನಿದೆ?'' ಎಂದನು.

ಶ್ರೀಕೃಷ್ಣದೇವನನ್ನು ನಮಸ್ಕರಿಸಿ ಎರಡು ಕೈಗಳನ್ನು ಜೋಡಿಸಿದನು. ''ಓ ಪುಂಡರೀಕಾಕ್ಷ, ನಾನು ಮಾಡಿರುವ ಎಲ್ಲಾ ಅಪರಾಧಗಳನ್ನೂ ಮನ್ನಿಸು. ನಿನ್ನನ್ನು ಬಿಟ್ಟರೆ ನನಗೆ ಯಾರೂ ಗತಿಯಿಲ್ಲ. ಮೂರ್ಖನೂ ಕ್ಷಮಾಗುಣವಿಲ್ಲದವನೂ ಆಗಿರುವೆನು. ಅದಕ್ಕಾಗಿ ನನ್ನನ್ನು ಬಿಡಬೇಡ. ನನ್ನಲ್ಲಿರುವ ಐರಾವತ ಆನೆಯೂ, ವಜ್ರಾಯುಧವೂ, ಪಾರಿಜಾತವೃಕ್ಷವೂ, ದೇವರಾಜ್ಯವೂ, ಈ ಅಮರಾವತೀನಗರಿಯೂ ನಿನ್ನ ಅಧೀನವಾದವುಗಳು, ನಿನ್ನ ಆಜ್ಞೆಯಂತೆ ಇವುಗಳನ್ನು ರಕ್ಷಿಸುತ್ತಿರುವೆನು. ಇವುಗಳಲ್ಲಿ ಯಾವುದನ್ನು ಅಪೇಕ್ಷಿಸುತ್ತೀಯೋ ಅದನ್ನು ನಿನ್ನ ಇಷ್ಟದಂತೆ ತೆಗೆದುಕೊಂಡು ಹೋಗು.''

''ನಿನ್ನ ವಸ್ತುಗಳನ್ನು ನೀನು ತೆಗೆದುಕೂಂಡು ಹೋಗುತ್ತಿರುವಾಗ ನಾನು ವಿರೋಧವನ್ನು ತೋರಿಸಿದೆನು. ಅದಕ್ಕೆ ಕಾರಣವನ್ನು ಹೇಳುವೆನು. ನೀನು ಭೂಲೋಕದಲ್ಲಿ ಈಗ ವಾಸಿಸುತ್ತಿರುವಿ. ನೀನು ವಾಸಿಸುತ್ತಿರುವ ಕಾಲದಲ್ಲಿ ಭೂಲೋಕವೇ ಶ್ರೇಷ್ಠವಾಗಿರಬೇಕೆಂದು ನೀನು ತಿಳಿದಿರುವುದರಲ್ಲಿ ತಪ್ಪಿಲ್ಲ. ಆದ್ದರಿಂದ ಪಾರಿಜಾತವೃಕ್ಷವೂ ಭೂಮಿಯಲ್ಲೇ ಇರಬೇಕೆಂದು ನೀನು ತಿಳಿದಿರುವುದರಲ್ಲಿಯೂ ತಪ್ಪಿಲ್ಲ. ಆದರೆ ಪಾರಿಜಾತವೃಕ್ಷವನ್ನು ನೀನು ಇಲ್ಲಿಂದ ಭೂಲೋಕಕ್ಕೆ ತೆಗೆದುಕೊಂಡು ಹೋದರೆ ಈ ಸ್ವರ್ಗಲೋಕಕ್ಕಿಂತ ಭೂಲೋಕವೇ ಶ್ರೇಷ್ಠವೆನಿಸುತ್ತದೆ. ಅದಕ್ಕಾಗಿ ನಾನು ನಿನ್ನೊಡನೆ ವಿರೋಧವನ್ನು ಮಾಡಿದೆನು. ಯಾವ ಕಾಲದಲ್ಲಿ ಯಾವ ಕಾರ್ಯವನ್ನು ಮಾಡಬೇಕು. ಯಾವ ಕಾರ್ಯವನ್ನು ಮಾಡಕೂಡದು ಎಂಬ ವಿಷಯವನ್ನು ತಿಳಿದಿರುವ ನೀನು ನನ್ನ ಅಪರಾಧಗಳನ್ನು ಮನ್ನಿಸಬೇಕು''ಎಂದನು.

ಈ ಮಾತುಗಳನ್ನು ಶ್ರೀಕೃಷ್ಣದೇವನು ಕೇಳಿ ನಗುತ್ತಾ ''ದೇವೇಂದ್ರನನ್ನು ನೋಡಿ ''ದೇವೇಂದ್ರಾ, ನೀನು ಯಾವ ಅಪರಾಧವನ್ನೂ ಮಾಡಲಿಲ್ಲ. ನಿನ್ನಲ್ಲಿದ್ದು ನಿನ್ನಿಂದ ನಾನೇ ಅಪರಾಧಗಳನ್ನು ಮಾಡಿಸಿದೆನು. ಆದ್ದರಿಂದ ನಾನೇ ಅಪರಾಧಿಯೆನಿಸುವೆನು. ಈ ಪಾರಿಜಾತವೃಕ್ಷವು ನಾನು ಭೂಮಿಯಲ್ಲಿ ವಾಸಿಸುತ್ತಿರುವ ವರೆಗೆ ಭೂಮಿಯಲ್ಲಿಯೇ ಇರಲಿ. ಭೂಮಿಯನ್ನು ಬಿಟ್ಟು ನಾನು ನನ್ನ ಲೋಕಗಳಿಗೆ ಹಿಂದಿರುಗುವಾಗ ಈ ವೃಕ್ಷವೂ ಭೂಮಿಯನ್ನು ಬಿಟ್ಟು ಸ್ವರ್ಗಲೋಕಕ್ಕೆ ಹಿಂದಿರುಗಲಿ. ಇದು ನನ್ನ ಆಜ್ಞೆ. ನಾನು ಭೂಮಿಯಲ್ಲಿರುವಾಗ ಸ್ವರ್ಗಲೋಕಕ್ಕಿಂತ ಭೂಲೋಕವೇ ಶ್ರೇಷ್ಠವೆನಿಸಬೇಕು. ಇದಕ್ಕಾಗಿ ಈ ರೀತಿಯಾದ ಆಜ್ಞೆಯನ್ನು ಮಾಡಿರುವೆನು. ಎಂದನು.

ಮೇಲ್ಕಂಡ ಮಾತುಗಳಿಂದ ಶ್ರೀಕೃಷ್ಣದೇವನನ್ನೂ ಸತ್ಯಭಾಮಾದೇವಿಯನ್ನೂ ಗರುಡನನ್ನೂ ಸಂತೋಷಪಡಿಸಿದನು. ''ಓ ಶ್ರೀಕೃಷ್ಣದೇವಾ, ಅರ್ಜುನನು ನನ್ನ ಮಗನು, ನಿನ್ನ ತಂಗಿಯ ಗಂಡನು, ಅವನನ್ನು ಯಾವಾಗಲೂ ರಕ್ಷಿಸಬೇಕು'' ಎಂದು ಪುನಃ ಪುನಃ ಪ್ರಾರ್ಥಿಸಿದನು. ಶ್ರೀಕೃಷ್ಣದೇವನಿಂದ ಅನುಮತಿಯನ್ನು

ಪಡೆದನು. ದೇವೇಂದ್ರನು ಎಲ್ಲಾ ಲೋಕಪಾಲಕರನ್ನೂ ಕರೆದುಕೊಂಡು ಸ್ವರ್ಗಲೋಕವನ್ನು ಪ್ರವೇಶಿಸಿದನು.

ಶ್ರೀಕೃಷ್ಣದೇವನು "ಗರುಡಾ, ದ್ವಾರಕೆಗೆ ಅಭಿಮುಖವಾಗಿ ಹೋಗು" ಎಂದನು. ಶ್ರೀಕೃಷ್ಣದೇವನನ್ನೂ ಸತ್ಯಭಾಮಾದೇವಿಯನ್ನೂ ಪಾರಿಜಾತವೃಕ್ಷವನ್ನೂ ಲೀಲಾಮಾತ್ರದಿಂದ ಎತ್ತಿಕೊಂಡವನಾಗಿ ದ್ವಾರಕೆಗೆ ಅಭಿಮುಖವಾಗಿ ಬಂದನು. ವೇದಘೋಷಗಳಿಂದಲೂ ಮಂಗಳವಾದ್ಯಗಳಿಂದಲೂ ಯಾದವರೆಲ್ಲರೂ ಸ್ವಾಗತಿಸಿದರು. ಸಭಾಗೃಹಕ್ಕೆ ಬಂದನು. ಉಗ್ರಸೇನ ಮಹಾರಾಜ, ವಸುದೇವ, ಬಲರಾಮ ಮುಂತಾದವರನ್ನು ನಮಸ್ಕರಿಸಿದನು. ಸತ್ಯಭಾಮಾದೇವಿಯ ಮನೆಯ ಅಂಗಳದಲ್ಲಿ ಪಾರಿಜಾತವೃಕ್ಷವನ್ನು ನೆಟ್ಟನು. ದೇವಕೀ ಮುಂತಾದ ಹಿರಿಯ ಸ್ತ್ರೀಯರು ಅವನನ್ನು ಆಶೀರ್ವದಿಸಿದರು. ರುಕ್ಮಿಣೀ ಮುಂತಾದ ಪತ್ನಿಯರು ನಮಸ್ಕರಿಸಿದರು. ॥ ೧೮ ॥

इन्द्राराध्योऽमरेन्द्र प्रियतम मगमाहृ देवान्विजित्य
प्राप्याथ द्वारकां यः सुतमतिरुचिरं रुक्मिणीतः प्रपेदे ।
भ्रातृव्यं पौण्ड्रकाख्यं पुररुधमत्कृत्तशीर्षं तदीया -
पत्योत्पन्नां च कृत्यां रथचरणरुचा कालयन् कामधुक् स्यात् ॥ १९ ॥

ಇಂದ್ರಾರಾಧ್ಯೋಽಮರೇಂದ್ರಪ್ರಿಯತಮಮಗಮಾಹೃತ್ಯ ದೇವಾನ್ವಿಜಿತ್ಯ
ಪ್ರಾಪ್ಯಾಥ ದ್ವಾರಕಾಂ ಯಃ ಸುತಮತಿರುಚಿರಂ ರುಕ್ಮಿಣೀತಃ ಪ್ರಪೇದೇ ।
ಭ್ರಾತೃವ್ಯಂ ಪೌಂಡ್ರಕಾಖ್ಯಂ ಪುರರುಧಮತನೋತ್ಕೃತ್ತಶೀರ್ಷಂ ತದೀಯಾ -
ಪತ್ಯೋತ್ಪನ್ನಾಂ ಚ ಕೃತ್ಯಾಂ ರಥಚರಣರುಚಾ ಕಾಲಯನ್ ಕಾಮಧುಕ್ ಸ್ಯಾತ್ ॥೧೯॥

**ಪದಚ್ಛೇದ** - ಇಂದ್ರಾರಾಧ್ಯಃ, ಅಮರೇಂದ್ರಪ್ರಿಯತಮ, ಅಗಂ ಆಹೃತ್ಯ, ದೇವಾನ್ ವಿಜಿತ್ಯ, ಪ್ರಾಪ್ಯ, ಅಥ ದ್ವಾರಕಾಂ ಯಃ, ಸುತಂ ಅತಿರುಚಿರಂ, ರುಕ್ಮಿಣೀತಃ ಪ್ರಪೇದೇ, ಭ್ರಾತೃವ್ಯಂ, ಪೌಂಡ್ರಕಾಖ್ಯಂ, ಪುರರುಧಂ, ಅತನೋತ್, ಕೃತ್ತಶೀರ್ಷಂ, ತದೀಯಾಪತ್ಯೋತ್ಪನ್ನಾಂ, ಚ, ಕೃತ್ಯಾಂ, ರಥಚರಣರುಚಾ, ಕಾಲಯನ್, ಕಾಮಧುಕ್, ಸ್ಯಾತ್.

**ಅನ್ವಯ** - ಯಃ ಇಂದ್ರಾರಾಧ್ಯಃ ಅಮರೇಂದ್ರಪ್ರಿಯತಮ ಅಗಂ ಆಹೃತ್ಯ, ದೇವಾನ್ ವಿಜಿತ್ಯ, ಅಥ ದ್ವಾರಕಾಂ ಪ್ರಾಪ್ಯ, ಅತಿರುಚಿರಂ ಪುತ್ರಂ ರುಕ್ಮಿಣೀತಃ ಪ್ರಪೇದೇ, ಭ್ರಾತೃವ್ಯಂ ಪೌಂಡ್ರಕಾಖ್ಯಂ ಪುರರುಧಂ ಕೃತ್ತಶೀರ್ಷಂ ಅತನೋತ್, ತದೀಯಾಪತ್ಯೋತ್ಪನ್ನಾಂ ಕೃತ್ಯಾಂ ಚ ರಥಚರಣರುಚಾ ಕಾಲಯನ್, ಸಃ ಕಾಮಧುಕ್ ಸ್ಯಾತ್.

**ಅನ್ವಯಾರ್ಥ** - ಯಃ ಯಾವ ಶ್ರೀಕೃಷ್ಣದೇವನು ಇಂದ್ರಾರಾಧ್ಯಃ ಇಂದ್ರನಿಂದ ಪೂಜಿಸಲ್ಪಟ್ಟವನಾಗಿ ಅಮರೇಂದ್ರಪ್ರಿಯತಮಂ ದೇವೇಂದ್ರನಿಗೆ ಅತ್ಯಂತ ಪ್ರಿಯವಾದ ಅಗಂ ಪಾರಿಜಾತವೃಕ್ಷವನ್ನು ಆಹೃತ್ಯ ತಂದವನಾಗಿ ದೇವಾನ್ ಎಲ್ಲಾ ದೇವತೆಗಳನ್ನೂ ವಿಜಿತ್ಯ ಜಯಿಸಿದವನಾಗಿ ಅಥ ಅನಂತರದಲ್ಲಿ ದ್ವಾರಕಾಂ ದ್ವಾರಕೆಯನ್ನು ಪ್ರಾಪ್ಯ ಹೊಂದಿದವನಾಗಿ ಅತಿರುಚಿರಂ ಅತ್ಯಂತ ಸುಂದರನಾಗಿರುವ, ಪುತ್ರಂ ಪ್ರದ್ಯುಮ್ನ ಎಂಬ ಮಗನನ್ನು ರುಕ್ಮಿಣೀತಃ ರುಕ್ಮಿಣೀದೇವಿಯಿಂದ ಪ್ರಪೇದೇ ಹೊಂದಿದನೋ ಭ್ರಾತೃವ್ಯಂ ಶತ್ರುವಾಗಿರುವ, ಪುರರುಧಂ ದ್ವಾರಕಾಪಟ್ಟಣಕ್ಕೆ ಮುತ್ತಿಗೆ ಹಾಕಿರುವ, ಪೌಂಡ್ರಕಾಖ್ಯಂ ಪೌಂಡ್ರಕ ಎಂಬ ಹೆಸರಿನಿಂದ ಯುಕ್ತನಾಗಿರುವವನನ್ನು ಕೃತ್ತಶೀರ್ಷಂ

ಕತ್ತರಿಸಲ್ಪಟ್ಟ ತಲೆಯುಳ್ಳವನನ್ನಾಗಿ ಅತನೋತ್ ಮಾಡಿದನೋ ತದೀಯಾಪತ್ಯೋತ್ಪನ್ನಾಂ ಅವನ ಮಗನಿಂದ ಸೃಷ್ಟಿಸಲ್ಪಟ್ಟ ಕೃತ್ಯಾಂ ಅಭಿಚಾರದೇವತೆಯನ್ನು ರಥಚರಣರುಚಾ ಸುದರ್ಶನ ಚಕ್ರದ ತೇಜಸ್ಸಿನಿಂದ ಕಾಲಯನ್ ಓಡುವ ಹಾಗೆ ಮಾಡಿದನೋ ಸಃ ಆ ಶ್ರೀಕೃಷ್ಣದೇವನು (ಮಮ) ನನಗೆ ಕಾಮಧುಕ್ ಅಭೀಷ್ಟಗಳನ್ನು ಕೊಡುವವನಾಗಿ ಸ್ಯಾತ್ ಆಗಲಿ.

ವಿಗ್ರಹ - ಇಂದ್ರೇಣ ಆರಾಧ್ಯಃ ಇಂದ್ರಾರಾಧ್ಯಃ ; ಅಮರಾಣಾಂ ಇಂದ್ರಃ ಅಮರೇಂದ್ರಃ, ಅಮರೇಂದ್ರಸ್ಯ ಪ್ರಿಯಃ ಅಮರೇಂದ್ರಪ್ರಿಯಃ, ತಂ ಅಮರೇಂದ್ರಪ್ರಿಯಂ; ನ ಗಚ್ಛತಿ ಇತಿ ಅಗಃ ತಂ ಅಗಂ; ಅತ್ಯಂತಂ ರುಚಿರಃ ಅತಿರುಚಿರಃ ತಂ ಅತಿರುಚಿರಂ; ರುಕ್ಮಿಣ್ಯಾಃ ರುಕ್ಮಿಣೀತಃ ; ಪೌಂಡ್ರಕಃ ಇತಿ ಆಖ್ಯಾ ಯಸ್ಯ ಸಃ ಪೌಂಡ್ರಕಾಖ್ಯಃ, ತಂ ಪೌಂಡ್ರಕಾಖ್ಯಂ ; ಪುರಂ ರುಣದ್ಧಿ ಇತಿ ಪುರರುತ್, ತಂ ಪುರರುಧಂ ; ಕೃತ್ತಂ ಶೀರ್ಷಂ ಯಸ್ಯ ಸಃ ಕೃತ್ತಶೀರ್ಷಃ, ತಂ ಕೃತ್ತಶೀರ್ಷಂ ; ತಸ್ಯ ಇದಂ ತದೀಯಂ, ತದೀಯಂ ಚ ತತ್ ಅಪತ್ಯಂ ಚ ತದೀಯಾಪತ್ಯಂ, ತದೀಯಾಪತ್ಯೇನ ಉತ್ಪನ್ನಾ ತದೀಯಾಪತ್ಯೋತ್ಪನ್ನಾ, ತಾಂ ತದೀಯಾಪತ್ಯೋತ್ಪನ್ನಾಂ ; ರಥಸ್ಯ ಚರಣಃ, ರಥಚರಣಃ ರಥಚರಣಸ್ಯ ರುಕ್ ರಥಚರಣರುಕ್, ತಯಾ ರಥಚರಣರುಚಾ ; ಕಾಲಯತಿ ಇತಿ ಕಾಲಯನ್; ಕಾಮಂ ದೋಗ್ಧಿ ಇತಿ ಕಾಮಧುಕ್.

(೪೯) ಇಂದ್ರಾರಾಧ್ಯಃ ಅಮರೇಂದ್ರಪ್ರಿಯಂ ಅಗಂ ಆಹೃತ್ಯ, ದೇವಾನ್ ವಿಜಿತ್ಯ, ಅಥ ದ್ವಾರಕಾಂ ಪ್ರಾಪ್ಯ.

ದೇವಲೋಕದಲ್ಲಿ ಶ್ರೀಕೃಷ್ಣದೇವನು ದೇವೇಂದ್ರನಿಂದ ಪೂಜಿಸಲ್ಪಟ್ಟನು. ದೇವೇಂದ್ರನಿಗೆ ಪ್ರಿಯವಾದ ಪಾರಿಜಾತವೃಕ್ಷವನ್ನು ಕಿತ್ತು ಗರುಡನ ಮೇಲೆ ಇಟ್ಟನು. ದೇವತೆಗಳನ್ನು ಜಯಿಸಿ ದ್ವಾರಕೆಗೆ ಬಂದನು.

ವಿಶೇಷಾರ್ಥ - ಕೃಷ್ಣಃ ಅದಿತೇಃ ಕುಂಡಲದಾನಾನಂತರಂ ಇಂದ್ರಾದಿಭಿಃ ಸ್ತುತಃ ತಾನನುಜ್ಞಾಪ್ಯ ಮಾರ್ಗೇ ವಿದ್ಯಮಾನಂ ಇಂದ್ರಸ್ಯಾತಿಪ್ರೀತಿವಿಷಯಂ ನಂದನವನಂ ಕ್ರೀಡಾರ್ಥಂ ಪ್ರವಿಶ್ಯ, ತಸ್ಮಿನ್ವನೇ ವಿದ್ಯಮಾನಂ ಮಣಿಕಾಂಚನಾತ್ಮಕಂ ಸಮಸ್ತಕಾಮಪ್ರದಂ ಆರ್ತಿಹಾರಿಣಂ ಪಾರಿಜಾತವೃಕ್ಷಂ ದೃಷ್ಟ್ವಾ, ಸತ್ಯಭಾಮಯಾ ಸ್ವಗೃಹಾಂಗಣೇ ಸ್ಥಾಪಯಿತುಂ ಪ್ರಾರ್ಥಿತಃ ತಮುತ್ಪಾಟ್ಯ ಗರುಡಾಂಸೇ ನ್ಯಸ್ಯ, ಸತ್ಯಭಾಮಯಾ ಸಹ ಸ್ವಯಂ ಚ ಗರುಡಮಾರುಹ್ಯ ದ್ವಾರಕಾಂ ಪ್ರತಿ ಗಚ್ಛನ್, ವನಪಾಲಕೈಃ ಏತದ್ವೃತ್ತಾಂತಂ ಶ್ರುತ್ವಾ ಕೋಪೇನ ಶಚೀವಚನೇನ ದಿಕ್ಪಾಲಕೈಃ ಸಹ ಅಸುರಾವೇಶಾದ್ಯುದ್ಧಾರ್ಥಮಾಗತಂ ಇಂದ್ರಂ ಪರಾಜಿತಂ ಕೃತ್ವಾ, ಸರ್ವಾನ್ವಿಜಿತ್ಯ, ತೈಃ ಸ್ತುತಃ, ಸ್ವಕೃತಾಪರಾಧಶಾಂತಯೇ ಇಂದ್ರೇಣ ದತ್ತಂ ಮಣಿಪರ್ವತಸ್ಯ ಶೃಂಗಂ ಚೋಪಾದಾಯ ತಾನನುಜ್ಞಾಪ್ಯ, ದ್ವಾರಕಾಂ ಪ್ರಾಪ್ಯ, ಪಾರಿಜಾತವೃಕ್ಷಂ ಸಶೃಂಗಂ ಸತ್ಯಭಾಮಾಯಾ ಗೃಹಾಂಗಣೇ ನ್ಯಸ್ಯ, ಸ್ವಕೀಯಾನಾಂ ಯಥೇಷ್ಟರತ್ನಾನಿ ಚ ದತ್ವಾ.

ವಿಶೇಷಾರ್ಥ ವಿವರಣ - ಶ್ರೀಕೃಷ್ಣದೇವನು ಅದಿತಿಗೆ ಕರ್ಣಕುಂಡಲಗಳನ್ನು ಕೊಟ್ಟನು. ಇಂದ್ರಾದಿಗಳಿಂದ ಸ್ತುತಿಸಲ್ಪಟ್ಟನು. ಆ ದೇವತೆಗಳೆಲ್ಲರೂ ಶ್ರೀಕೃಷ್ಣದೇವನಿಂದ ಅನುಮತಿಯನ್ನು ಪಡೆದು ಹಿಂದಿರುಗಿದರು. ಶ್ರೀಕೃಷ್ಣದೇವನು ದ್ವಾರಕೆಗೆ ಹಿಂದಿರುಗಿ ಬರುವಾಗ ಮಾರ್ಗದಲ್ಲಿದ್ದ ಮತ್ತು ದೇವೇಂದ್ರನಿಗೆ ಅತಿ ಪ್ರಿಯವಾದ

ನಂದನವನವನ್ನು ಕ್ರೀಡಿಸುವುದಕ್ಕಾಗಿ ಪ್ರವೇಶಿಸಿದನು. ಆ ವನದಲ್ಲಿದ್ದ, ಮಣಿ ಮತ್ತು ಭಂಗಾರಸ್ವರೂಪವಾಗಿರುವ, ಸರ್ವರಿಗೂ ಬೇಕಾದ ಇಷ್ಟಾರ್ಥಗಳನ್ನು ಕೊಡುವ ಶಕ್ತಿಯುಳ್ಳ, ಎಲ್ಲರ ದುಃಖಗಳನ್ನೂ ಪರಹರಿಸುವ ಪಾರಿಜಾತವೃಕ್ಷವನ್ನು ನೋಡಿದನು. ಸತ್ಯಭಾಮಾದೇವಿಯು ಆ ವೃಕ್ಷವನ್ನು ತನ್ನ ಅಂಗಳದಲ್ಲಿ ನೆಡಬೇಕೆಂದು ಪ್ರಾರ್ಥಿಸಿದಳು. ಆ ವೃಕ್ಷವನ್ನು ಕಿತ್ತಿನು. ಗರುಡನ ಹೆಗಲಿನ ಮೇಲೆ ಇಟ್ಟನು. ಸತ್ಯಭಾಮೆಯಿಂದ ಸಹಿತನಾಗಿ ತಾನೂ ಕುಳಿತು ದ್ವಾರಕೆಗೆ ಅಭಿಮುಖವಾಗಿ ಹೋಗುತ್ತಿದ್ದನು.

ವನಪಾಲಕರಿಂದ ದೇವೇಂದ್ರನು ಈ ವಿಷಯವನ್ನು ತಿಳಿದನು. ಶಚೀದೇವಿಯ ಮಾತುಗಳಿಂದ ಕುಪಿತನಾದ ದೇವೇಂದ್ರನು ಸಕಲ ದಿಕ್ಪಾಲಕರಿಂದ ಸಹಿತನಾಗಿ ದೈತ್ಯಾವೇಶದಿಂದ ಯುದ್ಧಕ್ಕೆ ಬಂದು ಸೋತನು. ಸರ್ವದಿಕ್ಪಾಲಕರೂ ಸೋತರು. ದಿಕ್ಪಾಲಕರಿಂದ ಸಹಿತನಾಗಿ ಶ್ರೀಕೃಷ್ಣದೇವನನ್ನು ಸ್ತುತಿಸಿದನು. ತಾನು ಮಾಡಿರುವ ಅಪರಾಧದ ಪರಿಹಾರಕ್ಕಾಗಿ ಮಣಿಪರ್ವತದ ಶಿಖರವನ್ನು ಕೊಟ್ಟನು. ಅದನ್ನು ಶ್ರೀಕೃಷ್ಣದೇವನು ಸ್ವೀಕರಿಸಿದನು. ಹಿಂದಿರುಗುವಂತೆ ಆಜ್ಞಾಪಿಸಿ ದ್ವಾರಕೆಗೆ ಬಂದನು. ಪಾರಿಜಾತವೃಕ್ಷವನ್ನೂ ಮಣಿಪರ್ವತದ ಶಿಖರವನ್ನೂ ಸತ್ಯಭಾಮಾದೇವಿಯ ಮನೆಯ ಅಂಗಳದಲ್ಲಿಟ್ಟನು. ದ್ವಾರಕೆಯಲ್ಲಿರುವ ಸ್ವಕೀಯರೆಲ್ಲರಿಗೂ ಯಥೇಷ್ಟವಾಗಿ ರತ್ನಗಳನ್ನು ಕೊಟ್ಟನು. ಹೆಚ್ಚಿನ ವಿಷಯಗಳನ್ನು ಹಿಂದಿನ ಶ್ಲೋಕದ ವ್ಯಾಖ್ಯಾನದಲ್ಲಿ ವಿವರಿಸಿರುವೆವು.

## ರುಕ್ಮಿಣೀದೇವಿಗೆ ಪುತ್ರೋತ್ಸವ

**(೯೦) ಅತಿರುಚಿರಂ ಸುತಂ ರುಕ್ಮಿಣೀತಃ ಪ್ರಪೇದೇ.**

ಪರಮ ಸುಂದರನಾಗಿರುವ ಪ್ರದ್ಯುಮ್ನ ಎಂಬ ಮಗನನ್ನು ರುಕ್ಮಿಣಿಯಿಂದ ಪಡೆದನು.

ವಿಶೇಷಾರ್ಥ - ಅಸುರಮೋಹನಾರ್ಥಂ ರುದ್ರಂ ಪ್ರತಿ ತಪಃ ಕೃತ್ವಾ ರುಕ್ಮಿಣ್ಯಾಂ ಪುತ್ರಂ ಪೂರ್ವಂ ಹರೇಣ ದಗ್ಧಂ ಮನ್ಮಥಂ ವಿಷ್ಣೋರಾವೇಶಾತ್ಪ್ರದ್ಯುಮ್ನನಾಮಕಂ ಜನಯಿತ್ವಾ, ತದಾ ನಾರದಬೋಧಿತೇನ ಶಂಬರೇಣ ಶತ್ರುಬುದ್ಧ್ಯಾ ಸಮುದ್ರೇ ಕ್ಷಿಪ್ತಂ ಮತ್ಸ್ಯೇನೋಪಭುಕ್ತಂ ಮತ್ಸ್ಯಜೀವಿಭಿಃ ಪುರುಷೈಃ ಮಹತಾ ಜಾಲೇನ ಗೃಹೀತಂ ತನ್ಮತ್ಸ್ಯೇನ ಸಹ ಶಂಬರಗೃಹಂ ಪ್ರಾಪ್ತಂ ಸೂದೈಃ ಮತ್ಸ್ಯವಿಪಾಟನಸಮಯೇ ಶಂಬರೇಣ ದೃಷ್ಟಂ ಪಂಚಭರ್ತೃಪೇತದ್ರೌಪದೀದೂಷಣಾಪರಾಧನಿಮಿತ್ತೇನ ಚತುರ್ಮುಖೇನ ಅಸುರದೂಷಿತಾ ಭವೇತಿ ಶಪ್ತಯಾ ರೂಪಾಂತರೇಣ ಶಂಬರಗೃಹಂ ಪ್ರಾಪ್ತಯಾ ರತ್ಯಾ ರಕ್ಷಿತಂ ವರ್ಷಚತುಷ್ಟಯೇನ ಪ್ರಾಪ್ತಯೌವನಂ ಸ್ವಸ್ತ್ರಿಯಾ ರತ್ಯಾ ಬೋಧಿತೋಪಾಯೇನ ಶಂಬರಾಸುರಂ ಹತ್ವಾ, ತಯಾ ಸಹ ದ್ವಾರಕಾಂ ಪ್ರಾಪ್ತಂ ಸ್ವಪುತ್ರಂ ದೃಷ್ಟ್ವಾ, ರುಕ್ಮಿಣ್ಯಾ ಬಂಧುಭಿಶ್ಚ ಸಹ ಸಂತೋಷಂ ಪ್ರಾಪ್ಯ.

ವಿಶೇಷಾರ್ಥವಿವರಣ - ಮಹಾವಿಷ್ಣುಭಕ್ತನಾದ ರುದ್ರದೇವನು ವಿಷ್ಣುಪ್ರೀತ್ಯರ್ಥವಾಗಿ ತಪಸ್ಸನ್ನು ಅನೇಕ ಸಹಸ್ರವರ್ಷಗಳ ವರೆಗೆ ಮಾಡುತ್ತಲಿದ್ದನು. ಆಗ ಅವನ ತಪಸ್ಸನ್ನು ಕೆಡಿಸಬೇಕೆಂಬ ಉದ್ದೇಶದಿಂದ ಮನ್ಮಥನು ಪುಷ್ಪಬಾಣಗಳನ್ನು ಪ್ರಯೋಗಿಸಿದನು. ಇದರಿಂದ ಕುಪಿತನಾದ ರುದ್ರದೇವನು ಅಗ್ನಿರೂಪವಾಗಿರುವ ತನ್ನ

ಮೂರನೆಯ ಕಣ್ಣನ್ನು ತೆರೆದನು. ಆ ಕಣ್ಣಿನಿಂದ ಹೊರಟ ಅಗ್ನಿಯಿಂದ ಮನ್ಮಥನು ಬೂದಿಯಾದನು. ತನ್ನ ನಿಜಶರೀರವು ಪುನಃ ಸಿಗಬೇಕೆಂಬ ಆಸೆಯಿಂದ ರುದ್ರದೇವನನ್ನು ಆರಾಧಿಸಿದನು. ಶ್ರೀಹರಿಯು ಕೃಷ್ಣನಾಗಿ ಹುಟ್ಟುವಾಗ ಅವನ ಮಗನಾಗಿ ಹುಟ್ಟುವಿ ಎಂದು ರುದ್ರದೇವನು ವರವನ್ನು ಕೊಟ್ಟನು.

ರುಕ್ಮಿಣೀದೇವಿಯನ್ನು ವಿವಾಹಮಾಡಿಕೊಂಡ ಶ್ರೀಕೃಷ್ಣದೇವನು ತನ್ನ ಭಕ್ತಾಗ್ರೇಸರನಾದ ರುದ್ರದೇವನ ವರವನ್ನು ಸತ್ಯವಾಗುವಂತೆ ಮಾಡಬೇಕೆಂದು ಸಂಕಲ್ಪಿಸಿದನು. ರುಕ್ಮಿಣೀಸಹಿತನಾಗಿ ಕೈಲಾಸಯಾತ್ರೆಯನ್ನು ಮಾಡಬೇಕೆಂದೂ ರುದ್ರದೇವನ ಪ್ರೀತ್ಯರ್ಥವಾಗಿ ಹನ್ನೆರಡು ವರ್ಷಗಳ ವರೆಗೆ ತಪಸ್ಸನ್ನು ಮಾಡಬೇಕೆಂದೂ ಆ ತಪಸ್ಸಿನಿಂದ ಸಂತುಷ್ಟನಾದ ರುದ್ರದೇವನಿಂದ ಮಕ್ಕಳು ಹುಟ್ಟಬೇಕೆಂದು ವರವನ್ನು ಬೇಡಬೇಕೆಂದೂ ಆ ವರದಿಂದ ತನಗೆ ಮಗನು ಹುಟ್ಟಿದಂತೆ ನಟಿಸಬೇಕೆಂದೂ ತೀರ್ಮಾನಿಸಿದನು. ಇದು ನಟನವೇ ಹೊರತು ನಿಜವಲ್ಲ. ಈ ಅಂಶವನ್ನು ವಿವರಿಸುವೆವು.

## ವಿಷ್ಣುಸರ್ವೋತ್ತಮತ್ವ

(೧) ಶ್ರೀಕೃಷ್ಣಾವತಾರಕ್ಕಿಂತ ಪೂರ್ವದಲ್ಲಿ ಭೂಮಿಯ ಭಾರವನ್ನು ಪರಿಹರಿಸುವುದಕ್ಕೆ ಅಸಮರ್ಥರಾದ ಬ್ರಹ್ಮ ರುದ್ರ, ಮುಂತಾದ ಎಲ್ಲಾ ದೇವತೆಗಳೂ ಕ್ಷೀರಸಮುದ್ರದ ಉತ್ತರತೀರಕ್ಕೆ ಹೋಗಿ ಪುರುಷಸೂಕ್ತದಿಂದಶ್ರೀಹರಿಯನ್ನು ಸ್ತುತಿಸಿದರು.

(೨) ಶ್ರೀಕೃಷ್ಣದೇವನು ದೇವಕೀದೇವಿಯ ಗರ್ಭದಲ್ಲಿ ವಾಸಿಸುತ್ತಿರುವಾಗ ಬ್ರಹ್ಮದೇವನೂ ಮತ್ತು ಶಿವನೂ ನಾರದ ಮುಂತಾದ ಮುನಿಗಳಿಂದ ಮತ್ತು ಅನುಚರರಿಂದ ಸಹಿತರಾದ ದೇವತೆಗಳಿಂದಲೂ ಸಹಿತರಾಗಿ ದೇವಕಿಯ ಗರ್ಭದಲ್ಲಿಯೇ ಇರುವ ಕೃಷ್ಣನನ್ನು ಸ್ತುತಿಸಿದರು.

(೩) ಕಾಳಿಯನ ಹೆಡೆಯ ಮೇಲೆ ನರ್ತನವನ್ನು ಮಾಡುತ್ತಿದ್ದಾಗ ಶ್ರೀಕೃಷ್ಣಭಕ್ತರಾದ ಬ್ರಹ್ಮರುದ್ರ ಮುಂತಾದ ದೇವತೆಗಳೂ ಗಂಧರ್ವರೂ ಸಿದ್ಧರೂ ಮುನಿಗಳೂ ಚಾರಣರೂ ಅಪ್ಸರಃ ಸ್ತ್ರೀಯರೂ ದೇವಪತ್ನಿಯರೂ ಮೃದಂಗ, ತಮಟೆ, ಪಣವ, ಆನಕ, ಮಧುರವಾದ ವಾದ್ಯಗಳು, ಪುಷ್ಪವೃಷ್ಟಿ, ಕಾಣಿಕೆ ಸಮರ್ಪಣೆ ಮುಂತಾದವುಗಳಿಂದ ಸೇವಿಸಿದರು.

(೪) ವೇಣುಗಾನವನ್ನು ಮಾಡುತ್ತಿದ್ದಾಗ ಭಕ್ತಿಪಾರವಶ್ಯದಿಂದ ಬಗ್ಗಿದ ದೇಹವುಳ್ಳವರಾಗಿ ಬ್ರಹ್ಮಮುಂತಾದವರು ಆಸೆಯಿಂದ ನೋಡಿದರು.

(೫) ಶ್ರೀಕೃಷ್ಣದೇವನು ಹಾಡಿದ ರಾಗಗಳು, ತಾಳಗಳು, ಮುಂತಾದವುಗಳನ್ನು ನಿರ್ಣಯಿಸಲು ಸಾಧ್ಯವಿಲ್ಲದೆ ಅವರೆಲ್ಲರ ಮನಸ್ಸುಗಳೂ ಕಳವಳದಿಂದ ಯುಕ್ತವಾದವು.

(೬) ಯಮುನಾನದಿಯಲ್ಲಿರುವ ಬ್ರಹ್ಮಹ್ರದ ಎಂಬ ಮಡುವಿನಲ್ಲಿ ಅಕ್ರೂರನು ಶ್ರೀಕೃಷ್ಣದೇವನನ್ನು ನೋಡಿದನು. ಆಗ ಬ್ರಹ್ಮ ರುದ್ರ ಮುಂತಾದ ಸಮಸ್ತದೇವತೆಗಳು, ಶ್ರೀಕೃಷ್ಣದೇವನನ್ನು ಸೇವಿಸುತ್ತಿದ್ದರು. ಆ

ದೃಶ್ಯವನ್ನು ಪ್ರತ್ಯಕ್ಷದಿಂದ ಕಂಡಿರುವ ಅಕ್ರೂರನು ಬ್ರಹ್ಮರುದ್ರ ಮುಂತಾದ ಸಕಲ ದೇವತೆಗಳೂ ಸತ್ವಗುಣ, ರಜೋಗುಣ ಮತ್ತು ತಮೋಗುಣಗಳಿಂದ ಬದ್ಧರೆಂದೂ, ಶ್ರೀಕೃಷ್ಣದೇವನೊಬ್ಬನೇ ಆ ಗುಣಗಳಿಂದ ಬದ್ಧನಲ್ಲವೆಂದೂ, ಶ್ರೀಕೃಷ್ಣದೇವನನ್ನು ತಿಳಿಯಲು ಬ್ರಹ್ಮಾದಿಗಳು ಶಕ್ತರಲ್ಲವೆಂದೂ, ಅತ್ಯಂತ ಸ್ಪಷ್ಟವಾಗಿ ಸ್ತುತಿಸಿದನು.

(೭) ಮುಚುಕುಂದನು ಮಾಡಿದ ಸೇವೆಯಿಂದ ದೇವತೆಗಳೆಲ್ಲರೂ ಸಂತುಷ್ಟರಾದರು. ಮುಕ್ತಿಯನ್ನು ಕೊಡಲು ವಿಷ್ಣು ಒಬ್ಬನೇ ಶಕ್ತನೆಂದೂ, ಮುಕ್ತಿಯನ್ನು ಬಿಟ್ಟು ಇತರ ವರಗಳನ್ನು ಕೇಳು ಎಂದು ಹೇಳಿದರು. ನಿದ್ರೆಯನ್ನು ಬೇಡಿದನು. ನಿದ್ರೆಯನ್ನು ಮಾಡುತ್ತಿದ್ದ ಮುಚುಕುಂದನಿಗೆ ಮುಂದಿನ ಜನ್ಮದಲ್ಲಿ ಶ್ರೀಕೃಷ್ಣದೇವನು ಮುಕ್ತಿಯನ್ನು ಕೊಟ್ಟನು.

(೮) ಶ್ರೀಕೃಷ್ಣದೇವನು ಸರ್ವರಿಗೂ ಎಲ್ಲಾ ವರಗಳನ್ನೂ ಕೊಡುತ್ತಿರುವ ಪಾರಿಜಾತವೃಕ್ಷವನ್ನು ಅಪಹರಿಸಿದನು. ಆಗ ದೇವೇಂದ್ರನಿಗಾಗಿ ಜಗಳಕ್ಕೆ ಬಂದಿರುವ ರುದ್ರ ಮುಂತಾದ ದೇವತೆಗಳನ್ನು ಜಯಿಸಿದನು. ಶ್ರೀಕೃಷ್ಣದೇವನ ವಾಹನನಾಗಿರುವ ಗರುಡನು ರುದ್ರನ ವಾಹನವಾಗಿರುವ ನಂದಿಯ ಕೊಂಬುಗಳನ್ನು ಹಿಡಿದೆತ್ತಿ ರುದ್ರದೇವನಿಂದ ಸಹಿತನಾಗಿರುವಾಗ ನೂರು ಧನುಸ್ಸುಗಳ ದೂರದ ವರೆಗೆ ಬಿಸಾಡಿದನು. ಪರಾಜಿತನಾದ ರುದ್ರನು ಹಿಂದಿರುಗಿ ಬರಲೇ ಇಲ್ಲ.

(೯) ಅದೇ ಸಮಯದಲ್ಲಿ ಶ್ರೀಕೃಷ್ಣದೇವನು ಇಂದ್ರನನ್ನೂ ಸೋಲಿಸಿದನು.

(೧೦) ವೃಕಾಸುರ ಎಂಬ ದೈತ್ಯನು ರುದ್ರದೇವನನ್ನು ಆರಾಧಿಸಿ ಆ ರುದ್ರದೇವನಿಂದ "ಯಾರ ತಲೆಯಲ್ಲಿ ಕೈಯನ್ನು ಇಡುವನೋ ಅವನು ಬೂದಿಯಾಗಬೇಕು" ಎಂದು ವರವನ್ನು ಪಡೆದನು. ರುದ್ರನ ಪಕ್ಕದಲ್ಲಿರುವ ಪಾರ್ವತೀದೇವಿಯನ್ನು ನೋಡಿ ಅವಳನ್ನು ಮೋಹಿಸಿದನು. ರುದ್ರನನ್ನು ಸುಟ್ಟು ಪಾರ್ವತಿಯನ್ನು ವಶಪಡಿಸಿಕೊಳ್ಳಬೇಕೆಂದು ಸಂಕಲ್ಪಿಸಿದನು. ರುದ್ರನ ತಲೆಯ ಮೇಲೆ ಕೈಯನ್ನು ಇಡಬೇಕೆಂದೂ ಅವನ ವರಬಲದಿಂದಲೇ ಅವನನ್ನು ಸುಡಬೇಕೆಂದೂ ತೀರ್ಮಾನಿಸಿದನು. ರುದ್ರನು ಹೆದರಿ ವೈಕುಂಠಲೋಕಕ್ಕೆ ಹೋಗಿ ಮಹಾವಿಷ್ಣುವನ್ನು ಶರಣು ಹೊಂದಿದನು. ಮಹಾವಿಷ್ಣುವು, ವೃಕಾಸುರನು ತನ್ನ ತಲೆಯ ಮೇಲೆಯೇ ತನ್ನ ಕೈಯನ್ನು ಇಡುವಂತೆ ಮಾಡಿದನು. ಅವನು ಬೂದಿಯಾದನು. ರುದ್ರನು ಶಾಂತಚಿತ್ತದಿಂದ ಹಿಂದಿರುಗಿದನು. ಹೀಗೆ ಉಪಾಯದಿಂದ ವೃಕಾಸುರನನ್ನು ಸಂಹರಿಸಿ ರುದ್ರನನ್ನು ರಕ್ಷಿಸಿದನು.

(೧೧) ಸರಸ್ವತೀನದೀತೀರದಲ್ಲಿ ಎಲ್ಲಾ ಯೋಗೀಶ್ವರರೂ ಸತ್ರಯಾಗವನ್ನು ಮಾಡಿದರು. ಆಗ ಬ್ರಹ್ಮ ವಿಷ್ಣು ಮಹೇಶ್ವರರಲ್ಲಿ ಯಾರು ಉತ್ತಮರು ಎಂಬ ಸಂಶಯವು ಬಂತು. ಎಲ್ಲಾ ಯೋಗಿಶ್ವರರೂ ಈ ವಿಷಯವನ್ನು ತೀರ್ಮಾನಿಸುವುದಕ್ಕಾಗಿ ಭೃಗುಋಷಿಗಳನ್ನು ಕಳುಹಿಸಿದರು. ಅವರು ಬ್ರಹ್ಮಲೋಕಕ್ಕೆ ಹೋದರು.

ಬ್ರಹ್ಮದೇವರು ಯಾವ ವಿಧವಾದ ಮಾತನ್ನೂ ಆಡಲಿಲ್ಲ. ಮನೆಗೆ ಬಂದವನು ಚಿಕ್ಕವನೇ ಆಗಿದ್ದರೂ ಅವನನ್ನು ಉಪಚರಿಸಬೇಕಾದ್ದು ಯಜಮಾನನ ಕರ್ತವ್ಯ. ಅದನ್ನು ಮಾಡಲಿಲ್ಲ. ಆದ್ದರಿಂದ ಬ್ರಹ್ಮದೇವನು ಉತ್ತಮನಲ್ಲ ಎಂದು ತೀರ್ಮಾನಿಸಿದರು.

ಅಲ್ಲಿಂದ ಹೊರಟು. ಕೈಲಾಸಕ್ಕೆ ಬಂದರು. ರುದ್ರನು ಚಿತಾಭಸ್ಮಾದಿಗಳನ್ನು ಧರಿಸಿದ್ದನು. ತಬ್ಬಿಕೊಳ್ಳಬೇಕೆಂದು ಬಂದರು. ಅವರು ಹಿಂದೆ ಸರಿದು ಕೂಡಲೇ ಕುಪಿತನಾಗಿ ಅವರನ್ನು ಸಂಹರಿಸುವುದಕ್ಕೆ ತ್ರಿಶೂಲವನ್ನು ಎತ್ತಿದನು. ಪಾರ್ವತೀದೇವಿಯು ತಡೆದು ನಿಲ್ಲಿಸಿದಳು. ಬ್ರಹ್ಮನು ತನ್ನನ್ನು ಉಪಚರಿಸಲಿಲ್ಲ. ಅಷ್ಟೇ ಹೊರತು ಬೇರೇನೂ ಮಾಡಲಿಲ್ಲ. ರುದ್ರನು ಮಹಾಕೋಪಿಷ್ಠನು. ಆದ್ದರಿಂದ ಬ್ರಹ್ಮನಿಗಿಂತಲೂ ಅಧಮನು ಎಂದು ತೀರ್ಮಾನಿಸಿದರು.

ಅಲ್ಲಿಂದ ಹೊರಟು. ವೈಕುಂಠಕ್ಕೆ ಹೋದರು. ಆಗ ಶ್ರೀಮಹಾವಿಷ್ಣುವು ನಿದ್ರೆ ಮಾಡುತ್ತಿದ್ದಂತೆ ನಟಿಸುತ್ತಿದ್ದನು. ಭೃಗುಋಷಿಗಳು ಕಾಲಿನಿಂದ ಶ್ರೀಮಹಾವಿಷ್ಣುವಿನ ಎದೆಯನ್ನು ಒದ್ದರು. ಶ್ರೀಮಹಾವಿಷ್ಣುವು ಅವರನ್ನು ಉಪಚರಿಸಿ ಸ್ತುತಿಸಿ ಕಳುಹಿಸಿದನು. ಅಪರಾಧವನ್ನು ಮಾಡಿದವನಿಗೂ ಅಭಯವನ್ನು ಕೊಟ್ಟಿರುವ ಮಹಾಶಾಂತಮೂರ್ತಿಯಾದ ಶ್ರೀಮಹಾವಿಷ್ಣುವೇ ಉತ್ತಮನೆಂದು ತೀರ್ಮಾನಿಸಿ ಪ್ರತ್ಯೇಕ ದ್ವಾರಾಬೇಡ ಹಿಂದಿರುಗಿದರು. ಸರಸ್ವತೀನದೀತೀರಕ್ಕೆ ಬಂದು ಎಲ್ಲಾ ಮುನಿಗಳಿಗೂ ನಡೆದ ವಿಷಯಗಳನ್ನು ಹೇಳಿದರು. ಎಲ್ಲರೂ ಪರಮ ಶಾಂತನೂ ಅಭಯದಾನಸಮರ್ಥನೂ ಆಗಿರುವ ಶ್ರೀವಿಷ್ಣುವೇ ಸರ್ವೋತ್ತಮನೆಂದು ತೀರ್ಮಾನಿಸಿದರು. ಮಹಾಯೋಗಿಗಳಿಂದ ಮಾನ್ಯರಾದ ಭೃಗುಮುನಿಯು ಶ್ರೀವಿಷ್ಣುಸರ್ವೋತ್ತಮತ್ವವನ್ನು ಸ್ಪಷ್ಟಪಡಿಸಿದರು.

ಹೀಗೆ ಭಾಗವತಗ್ರಂಥದಲ್ಲಿ ಶ್ರೀಕೃಷ್ಣಾವತಾರಕ್ಕಿಂತ ಹಿಂದಿನ ಕಾಲದಿಂದ ಭೃಗುಋಷಿಯು ಮಾಡಿರುವ ನಿರ್ಣಯದ ವರೆಗೆ ಒಂದೊಂದು ಸಂದರ್ಭದಲ್ಲಿಯೂ ಶ್ರೀಕೃಷ್ಣದೇವನೇ ಸರ್ವೋತ್ತಮನೆಂದೂ ರುದ್ರನು ಶ್ರೀಕೃಷ್ಣದೇವನಿಗಿಂದ ಅಧಮನೆಂದೂ ಸ್ಪಷ್ಟವಾಗಿ ಹೇಳಿರುವಾಗ "ಶ್ರೀಕೃಷ್ಣನು ಕೈಲಾಸಯಾತ್ರೆಯನ್ನು ಮಾಡಿದನು. ರುದ್ರನನ್ನು ಕುರಿತು ತಪಸ್ಸನ್ನು ಮಾಡಿದನು. ರುದ್ರನ ವರದಿಂದ ಮಗನನ್ನು ಪಡೆದನು" ಎಂಬ ಮಾತುಗಳನ್ನು ಕೇಳಿ ಭ್ರಮಿಸಬೇಡಿರಿ. ಮೋಕ್ಷವನ್ನು ಅಪೇಕ್ಷಿಸುವವರು ಮೋಕ್ಷಪ್ರದನಾದ ಶ್ರೀಕೃಷ್ಣದೇವನನ್ನು ಭಕ್ತಿಯಿಂದ ಆರಾಧಿಸಿರಿ.

## ಶ್ರೀಕೃಷ್ಣದೇವನು ಶಿವಭಕ್ತನಲ್ಲ

ಶ್ರೀಕೃಷ್ಣದೇವನು ಶಿವಭಕ್ತನೆಂದೂ ಆದ್ದರಿಂದಲೇ ಕೈಲಾಸಯಾತ್ರೆಯನ್ನು ಮಾಡಿದನೆಂದೂ ರುದ್ರನನ್ನು ಕುರಿತು ತಪಸ್ಸನ್ನು ಮಾಡಿದನೆಂದೂ ರುದ್ರದೇವನನ್ನು ಸ್ತುತಿಸಿದನೆಂದೂ ಹೇಳುವರು. ಅದನ್ನು ಈಗ ವಿಮರ್ಶಿಸುವೆವು.

ಒಬ್ಬನ ಮನೆಗೆ ಇನ್ನೊಬ್ಬನು ಹೋಗುವುದಕ್ಕೆ ಅನೇಕ ಕಾರಣಗಳಿವೆ. ಆ ಮನೆಯ ಯಜಮಾನನು ಹೋಗುವವನಿಗಿಂತ ಉತ್ತಮನಾಗಿರಬಹುದು. ಪ್ರಕೃತದಲ್ಲಿ ಹಾಗಿಲ್ಲ. ಶಿವನೇ ಸರ್ವೋತ್ತಮನೆಂದೂ ಶ್ರೀಕೃಷ್ಣದೇವನು ಶಿವಭಕ್ತನೆಂದೂ ಹೇಳುವವರು "ಶಿವಾಯ ವಿಷ್ಣುರೂಪಾಯ ಶಿವರೂಪಾಯ ವಿಷ್ಣವೇ" ಎಂಬ ವಾಕ್ಯವನ್ನು ಪರಮಪ್ರಮಾಣವೆಂದೂ ನಂಬಿದವರು. ಅವರು ಶಿವನಿಗೂ ವಿಷ್ಣುವಿಗೂ ಐಕ್ಯವನ್ನು ಹೇಳುವವರು. ಶಿವನು ಪೂಜ್ಯನೆಂದೂ ಶ್ರೀಕೃಷ್ಣದೇವನು ಕೈಲಾಸಯಾತ್ರಾದಿಗಳಿಂದ ಶಿವಪೂಜಕನೆಂದೂ ಹೇಳುವಂತಿಲ್ಲ.

# ಕೈಲಾಸಯಾತ್ರೆಯು ಲೀಲೆಯಲ್ಲ

ಬೇಕಾದರೆ ಅವರು ಬೇರೆ ವಿಧದಿಂದ ಸಮಾಧಾನವನ್ನು ಹೇಳಬಹುದು. ಶಿವನೂ ವಿಷ್ಣುವೂ ಒಬ್ಬನೇ ಆಗಿದ್ದರೂ "ಶಿವ" ಎಂಬ ಹೆಸರಿನಿಂದ ಪೂಜ್ಯನಾಗಿರುವನು. "ಶ್ರೀಕೃಷ್ಣ" ಎಂಬ ಹೆಸರಿನಿಂದ ಕೈಲಾಸಯಾತ್ರೆ ಮುಂತಾದ ಸೇವೆಯನ್ನು ಮಾಡುತ್ತಿರುವನು ಎಂದು ಹೇಳಬಹುದು. ಒಬ್ಬನೇ ಒಂದು ರೂಪದಿಂದ ಪೂಜೆಯನ್ನು ಮಾಡುತ್ತಿರುವುದೂ ಇನ್ನೊಂದು ರೂಪದಿಂದ ಪೂಜೆಯನ್ನು ಸ್ವೀಕರಿಸುತ್ತಿರುವುದೂ ಒಂದು ಲೀಲೆ ಎಂದು ಹೇಳಬೇಕು.

ಮೇಲ್ಕಂಡ ಬ್ರಹ್ಮದೇವರು ಮಾಡಿದ ಸ್ತೋತ್ರ ಮುಂತಾದ ಎಲ್ಲಾ ಪ್ರಮಾಣಗಳಿಗೂ ಶಿವನಿಗೂ ವಿಷ್ಣುವಿಗೂ ಐಕ್ಯವು ಅತ್ಯಂತ ವಿರುದ್ಧವಾಗಿದೆ. ಆದ್ದರಿಂದ ಒಬ್ಬನೇ ಆಗಿರುವ ಶಿವನೂ ಶ್ರೀಕೃಷ್ಣದೇವನೂ ಮಾಡಿರುವ ಲೀಲೆ ಎಂದು ಹೇಳುವಂತಿಲ್ಲ.

ಶ್ರೀಕೃಷ್ಣದೇವನೇ ಸರ್ವೋತ್ತಮನೆಂದೂ ಶಿವನು ಶ್ರೀವಿಷ್ಣುವಿನ ದಾಸನೆಂದೂ ಹಿಂದೆ ಅನೇಕ ಪ್ರಮಾಣಗಳಿಂದ ಸಮರ್ಥಿಸಿದೆವು. ಬ್ರಹ್ಮನು ಶ್ರೀವಿಷ್ಣುವಿನ ಮಗನೆಂದು ದ್ವಿತೀಯ ಸ್ಕಂಧಭಾಗವತದಲ್ಲಿ ವರ್ಣಿಸಲ್ಪಟ್ಟಿದೆ. ಶಿವನು ಬ್ರಹ್ಮದೇವನ ಮಗನೆಂದು ತೃತೀಯ ಸ್ಕಂಧಭಾಗವತದಲ್ಲಿ ವರ್ಣಿಸಲ್ಪಟ್ಟಿದೆ. ಆದ್ದರಿಂದ ಶಿವನು ನಾರಾಯಣನ ಮೊಮ್ಮಗನೆಂದು ಸ್ಪಷ್ಟವಾಗುತ್ತದೆ. ಶಿವನ ವಾಸಸ್ಥಳವಾದ ಕೈಲಾಸವು ಶ್ರೀಕೃಷ್ಣದೇವನಿಗೆ ಮೊಮ್ಮಗನ ಮನೆಯಾಗಿರುತ್ತದೆ. ಮೊಮ್ಮಗನ ಮನೆಗೆ ತಾತನು ಬಂದರೆ ಮೊಮ್ಮಗನನ್ನು ಸೇವಿಸುವುದಕ್ಕಾಗಿ ಬಂದನೆಂದು ಯಾರೂ ಹೇಳಲಾರರು. ಹಾಗೆ ಹೇಳಿದರೆ ಅವರಷ್ಟು ಮೂರ್ಖರು ಯಾರೂ ಇಲ್ಲ. ಆದ್ದರಿಂದ "ತನ್ನ ಮೊಮ್ಮಗನಾದ ಶಿವನ ಮೇಲಿರುವ ಪ್ರೀತಿಯಿಂದ ಶ್ರೀಕೃಷ್ಣದೇವನು ಕೈಲಾಸಕ್ಕೆ ಹೋದನು" ಎಂದು ಹೇಳುವುದು ಅತ್ಯಂತ ಸಮಂಜಸವಾಗಿದೆ.

ಧರ್ಮರಾಜನ ಮನೆಗೆ ಶ್ರೀಕೃಷ್ಣದೇವನು ಆಗಾಗ್ಗೆ ಬರುತ್ತಿದ್ದನು. ಇದರಿಂದ ಧರ್ಮರಾಜನು ಪೂಜ್ಯನೆಂದೂ ಶ್ರೀಕೃಷ್ಣದೇವನು ಧರ್ಮರಾಜನ ದಾಸನೆಂದೂ ಯಾರಾದರೂ ಹೇಳುವರೇ? ಅದರಂತೆ ಶ್ರೀಕೃಷ್ಣದೇವನು ತನ್ನ ಮೊಮ್ಮಗನಾಗಿರುವ ಶಿವನ ಮನೆಯಾದ ಕೈಲಾಸಕ್ಕೆ ಹೋದದ್ದರಿಂದ ಶಿವನ ದಾಸನೆನಿಸುವುದಿಲ್ಲ.

# ಶಿವಪೂಜೆಯನ್ನು ಮಾಡಿರುವುದು ತಪ್ಪಲ್ಲ

ಕೈಲಾಸಯಾತ್ರೆಯನ್ನು ಮಾಡಿರಬಹುದು. ಧರ್ಮರಾಜನ ಮನೆಗೆ ಹೋದಂತೆ ಅದು ತಪ್ಪಾಗಲಾರದು. ಆದರೆ ಶ್ರೀಕೃಷ್ಣದೇವನು ಧರ್ಮರಾಜನನ್ನು ಪೂಜಿಸಲಿಲ್ಲ. ಆದರೆ ಶ್ರೀಕೃಷ್ಣದೇವನು ರುದ್ರನನ್ನು ಪೂಜಿಸಿರುವನು. ಇದು ಶ್ರೀಕೃಷ್ಣನು ರುದ್ರನ ದಾಸನೆಂದು ಹೇಳುವುದಕ್ಕೆ ಆಧಾರವಾಗಲಾರದೇ? ಎಂದು ಕೇಳಬಹುದು. ಅದಕ್ಕೆ ಉತ್ತರವನ್ನು ಕೊಡುವೆವು.

ನಾರದ ಮುಂತಾದ ಮುನಿಗಳು ಮನೆಗೆ ಬಂದಾಗ ಅವರನ್ನು ಶ್ರೀಕೃಷ್ಣದೇವನು ಪೂಜಿಸಿರುವನು. ಇದರಿಂದ ನಾರದ ಮುಂತಾದ ಮುನಿಗಳು ಉತ್ತಮರೆಂದೂ ಶ್ರೀಕೃಷ್ಣದೇವನು ಅವರಿಗಿಂತ ಅಧಮನೆಂದು

ಹೇಳಿದಂತಃಗುತ್ತದೆಯ? ಮನುಷ್ಯರ ಮಧ್ಯದಲ್ಲಿ ಅವತಾರಿಸದಾಗ ಮನುಷ್ಯರಂತೆ ನಡೆಯಬೇಕು. ಮನುಷ್ಯರು ತಮಗಿಂತ ದೊಡ್ಡವರು ಬಂದಿರುವಾಗ ಅವರನ್ನು ಪೂಜಿಸಬೇಕೆಂದೂ ತಿಳಿಸುವುದಕ್ಕಾಗಿಯೇ ಶ್ರೀಕೃಷ್ಣದೇವನೂ ಅವರನ್ನು ಪೂಜಿಸಿದನು. ಕೈಲಾಸದಲ್ಲಿ ಶಿವನನ್ನು ಪೂಜಿಸಿರುವುದೂ ಕಾಮ್ಯಫಲವನ್ನು ಅಪೇಕ್ಷಿಸುವವರು ಸರ್ವರೂ ತನ್ನ ಮೊಮ್ಮಗನಾದ ಶಿವನನ್ನು ಪೂಜಿಸಬೇಕು ಎಂದು ತಿಳಿಸುವುದಕ್ಕಾಗಿಯೇ, ಮುಖ್ಯವಾಗಿ ಲೋಕದಲ್ಲಿರುವ ಸಜ್ಜನರಿಗೆ ಧರ್ಮವನ್ನು ತಿಳಿಸುವುದಕ್ಕಾಗಿಯೂ ದುರ್ಜನರಿಗೆ ವಿಪರೀತಜ್ಞಾನವನ್ನು ಹುಟ್ಟಿಸುವುದಕ್ಕಾಗಿಯೂ ಶ್ರೀಕೃಷ್ಣಾದಿರೂಪಗಳಲ್ಲಿ ಮಾಡುವ ಎಲ್ಲಾ ವ್ಯಾಪಾರಗಳು ಎಂದು ತಿಳಿಯಬೇಕು. ಶ್ರೀಕೃಷ್ಣದೇವನು ಕೈಲಾಸಯಾತ್ರೆಯನ್ನು ಮಾಡಿದ್ದರಿಂದ ಮೊಮ್ಮಗನಾಗಿರುವ ಶಿವನ ಮನೆಗೆ ಹೋಗಿರುವುದು ತಪ್ಪಲ್ಲವೆಂದು ಸಜ್ಜನರಿಗೆ ತಿಳಿಯಲಿಲ್ಲವೇ? ಶಿವನು ಸರ್ವೋತ್ತಮನಾಗಿರುವುದರಿಂದ ಶ್ರೀಕೃಷ್ಣನು ಕೈಲಾಸಕ್ಕೆ ಹೋದನು ಎಂದು ಅಯೋಗ್ಯರಿಗೆ ವಿಪರೀತ ಜ್ಞಾನವು ಏರ್ಪಡಲಿಲ್ಲವೇ?

ಬ್ರಹ್ಮಾದಿಗಳಿಂದ ಮಾಡಲ್ಪಟ್ಟ ಸ್ತುತಿಗಳು ವಿಪರೀತಜ್ಞಾನಗಳನ್ನು ಕೊಡಲಾರವೇ?

ಶ್ರೀಕೃಷ್ಣದೇವನು ಮಾಡಿರುವ ಕೈಲಾಸಯಾತ್ರೆ ಮುಂತಾದವುಗಳು ಅಯೋಗ್ಯರಿಗೆ ವಿಪರೀತಜ್ಞಾನವನ್ನು ಕೊಡುವುದಕ್ಕಾಗಿ ಎಂದು ಹೇಳಿದಿರಿ. ಅದರಂತೆ ಬ್ರಹ್ಮ ಮುಂತಾದ ದೇವತೆಗಳು ಕ್ಷೀರಸಮುದ್ರದ ತೀರಕ್ಕೆ ಹೋಗಿ ವಿಷ್ಣುವನ್ನು ಸ್ತುತಿಸಿರುವುದು ಮುಂತಾದ ಹಿಂದೆ ಹೇಳಿರುವ ವಿಷ್ಣುಸರ್ವೋತ್ತಮತ್ವಸಾಧಕವಾದ ಯುಕ್ತಿಗಳೂ ಅಯೋಗ್ಯರಿಗೆ ವಿಪರೀತ ಜ್ಞಾನವನ್ನು ಹುಟ್ಟಿಸುವುದಕ್ಕೆ ಎಂದು ಹೇಳಿವರೆ ಬಾಧತವೇನು? ಅವುಗಳೆಲ್ಲವೂ ವಿಪರೀತ ಜ್ಞಾನವನ್ನು ಹುಟ್ಟಿಸುವದಾಗಿದ್ದರೆ ಅವುಗಳಿಂದ ವಿಷ್ಣುಸರ್ವೋತ್ತಮತ್ವವು ಸಿದ್ಧಿಸುತ್ತದೆಯೇ? ಎಂದು ಕೇಳಬಹುದು. ಅದಕ್ಕೆ ಉತ್ತರವನ್ನು ಈಗ ಕೊಡುವೆವು.

ಬ್ರಹ್ಮದೇವನು ವಾಸಿಸುತ್ತಿರುವ ಸತ್ಯಲೋಕದಲ್ಲಿಯೂ ಶಿವನು ವಾಸಿಸುತ್ತಿರುವ ಕೈಲಾಸದಲ್ಲಿಯೂ ಆ ಎರಡು ಪಟ್ಟಣಗಳಿಂದ ಕ್ಷೀರಸಮುದ್ರದ ವರೆಗೆ ಹೋಗುವ ಮಾರ್ಗದಲ್ಲಿಯೂ ಕ್ಷೀರಸಮುದ್ರದ ಉತ್ತರತೀರದಲ್ಲಿಯೂ ತತ್ವಜ್ಞಾನಕ್ಕೆ ಅಯೋಗ್ಯರಾದವರು ಯಾರೂ ಇಲ್ಲ. ಆದ್ದರಿಂದ ಅಯೋಗ್ಯರಿಗೆ ವಿಪರೀತ ಜ್ಞಾನವನ್ನು ಹುಟ್ಟಿಸುವ ಸಂದರ್ಭವೇ ಇಲ್ಲ. ಆದ್ದರಿಂದ ಆ ಸ್ಥಳದಲ್ಲಿ ಮಾಡಲ್ಪಟ್ಟ ಸ್ತುತಿಗಳು ವಿಪರೀತ ಜ್ಞಾನವನ್ನು ಹುಟ್ಟಿಸುವುದಿಲ್ಲ. ಯಥಾರ್ಥಜ್ಞಾನವನ್ನೇ ಹುಟ್ಟಿಸುತ್ತವೆ.

ಮನುಷ್ಯರು ವಾಸಿಸುತ್ತಿರುವ ಭೂಲೋಕದಲ್ಲಿ ಯೋಗ್ಯರಂತೆ ಅಯೋಗ್ಯರೂ ವಾಸಿಸುತ್ತಿರುವರು. ಅಯೋಗ್ಯರಿಗೆ ವಿಪರೀತಜ್ಞಾನವನ್ನೂ ಯೋಗ್ಯರಿಗೆ ತತ್ವಜ್ಞಾನವನ್ನೂ ಹುಟ್ಟಿಸುವುದಕ್ಕಾಗಿ ಇಲ್ಲಿ ಶ್ರೀಕೃಷ್ಣದೇವನ ಮತ್ತು ದೇವತೆಗಳ ವ್ಯಾಪಾರವು ಅವರವರಿಗೆ ಯೋಗ್ಯವಾದ ನರಕ ಅಥವಾ ಸ್ವರ್ಗ ಮುಂತಾದ ಅಧಮ ಮತ್ತು ಉತ್ತಮ ಲೋಕಗಳನ್ನು ಕೊಡುವುದಕ್ಕೆ ಉಪಯುಕ್ತವಾಗುತ್ತವೆ.

## ಗರ್ಭಸ್ತುತಿ ಮುಂತಾದವುಗಳು ಯಥಾರ್ಥಜ್ಞಾನವನ್ನೇ ಕೊಡುತ್ತವೆ

ಶ್ರೀಕೃಷ್ಣದೇವನು ದೇವಕೀದೇವಿಯ ಗರ್ಭದಲ್ಲಿರುವಾಗ ಬ್ರಹ್ಮ ರುದ್ರ ಮುಂತಾದ ದೇವತೆಗಳು ಸ್ತುತಿಸಿದರು. ಗರ್ಭದಲ್ಲಿರುವ ಅವರ ಶರೀರಗಳು ಮನುಷ್ಯರಿಂದ ನೋಡಲು ಸಾಧ್ಯವಿಲ್ಲ. ಹೆಚ್ಚೇಕೆ? ಮುನಿಶ್ರೇಷ್ಠರ

ಜ್ಞಾನದೃಷ್ಟಿಯಿಂದಲೂ ಅವರ ಶರೀರಗಳನ್ನು ನೋಡಲು ಸಾಧ್ಯವಾಗಲಿಲ್ಲ. ಹೀಗಿರುವಾಗ ಅಲ್ಪರಾದ ಅಯೋಗ್ಯ ಮನುಷ್ಯರಿಂದ ನೋಡಲು ಸಾಧ್ಯವೇ? ಆದ್ದರಿಂದ ಶ್ರೀಕೃಷ್ಣದೇವನು ದೇವಕೀದೇವಿಯ ಗರ್ಭದಲ್ಲಿರುವಾಗ ಬ್ರಹ್ಮ ಮುಂತಾದ ದೇವತೆಗಳು ಶ್ರೀಕೃಷ್ಣದೇವನನ್ನು ಸ್ತುತಿಸಿದ ವಿಷಯವನ್ನು ತಿಳಿಯಲು ಮನುಷ್ಯರಿಂದ ಸಾಧ್ಯವಿಲ್ಲ. ಆದ್ದರಿಂದ ಆ ಸ್ತುತಿಯನ್ನು ಕೇಳುವುದೂ ಆ ಸ್ತುತಿಯಿಂದ ವಿಪರೀತ ಜ್ಞಾನವನ್ನು ಪಡೆಯುವುದೂ ಅಸಂಭಾವಿತವೆನಿಸುತ್ತದೆ. ಆದ್ದರಿಂದಲೇ ಗರ್ಭಸ್ತುತಿಯು ಯಥಾರ್ಥಜ್ಞಾನವನ್ನೇ ಹುಟ್ಟಿಸುತ್ತದೆ ಎಂದು ಅಂಗೀಕರಿಸಲೇಬೇಕು.

ಬ್ರಹ್ಮಮುಂತಾದವರು ಮಾಡಿದ ಶ್ರೀಹರಿಯ ಸ್ತುತಿಗಳು ಎರಡು ವಿಧವಾಗಿವೆ. (೧) ಭೂಲೋಕದಲ್ಲಿಯೇ ದೇವಕೀದೇವಿಯ ಗರ್ಭ ಮುಂತಾದವುಗಳಲ್ಲಿ ಪ್ರವೇಶಿಸಿ ಮಾಡಿದ ಸ್ತುತಿಗಳು ಮೊದಲನೆಯದಾಗಿವೆ. ಅವುಗಳಲ್ಲಿ ಮನುಷ್ಯರಿಗೆ ವಿಪರೀತಜ್ಞಾನವನ್ನು ಹುಟ್ಟಿಸುವ ಸಂಭವವೇ ಇಲ್ಲವೆಂದು ಹಿಂದೆ ನಾನು ಸಮರ್ಥಿಸಿದೆನು.

ಕಾಳಿಯ ಮರ್ದನಕಾಲದಲ್ಲಿ ಆಕಾಶದಲ್ಲಿಯೂ, ಕ್ಷೀರಸಮುದ್ರದಲ್ಲಿ ಶ್ರೀಹರಿಯು ವಾಸಿಸುತ್ತಿರುವಾಗ ಕ್ಷೀರಸಮುದ್ರತೀರದಲ್ಲಿಯೂ, ಬ್ರಹ್ಮಲೋಕ ಮುಂತಾದ ಸ್ವಸ್ಥಾನಗಳಲ್ಲಿ ಬ್ರಹ್ಮಾದಿಗಳು ವಾಸಿಸುತ್ತಿರುವಾಗ ಅವರವರ ಸ್ವಸ್ಥಾನಗಳಲ್ಲಿಯೂ, ಶ್ರೀಹರಿಯನ್ನು ಸ್ತುತಿಸಿರುವರು. ಹಿಂದೆ ಹೇಳಿರುವ ಎಲ್ಲಾ ಸ್ಥಳಗಳಲ್ಲಿಯೂ ಮನುಷ್ಯರು ವಾಸಿಸುತ್ತಿಲ್ಲ. ವಿಪರೀತಜ್ಞಾನವನ್ನು ಪಡೆಯುವುದಕ್ಕೆ ಅರ್ಹರಾದ ದೈತ್ಯರೂ ಇಲ್ಲ. ಆದ್ದರಿಂದ ಆ ಸ್ಥಳಗಳಲ್ಲಿ ಮಾಡಿರುವ ಎಲ್ಲಾ ಸ್ತುತಿಗಳೂ ವಿಪರೀತ ಜ್ಞಾನವನ್ನು ಹುಟ್ಟಿಸುವುದಕ್ಕೆ ಮಾಡಿದ ಸ್ತುತಿಗಳಲ್ಲ. ನಿಜಾಂಶಗಳನ್ನು ತಿಳಿಸುವುದಕ್ಕೆ ಮಾಡಿರುವ ಸ್ತುತಿಗಳೇ ಆಗಿರುತ್ತವೆ. ಆದ್ದರಿಂದ ಆ ಸ್ತುತಿಗಳಿಂದ ವಿಷ್ಣುಸರ್ವೋತ್ತಮತ್ವವು ಸಿದ್ಧವಾಗುತ್ತದೆ ಎಂದು ಹೇಳಲೇಬೇಕು.

## ಭಸ್ಮಾಸುರನನ್ನು ಸಂಹರಿಸುವಾಗ ವಿಪರೀತ ಜ್ಞಾನವನ್ನು ಹುಟ್ಟಿಸುವ ಸಂಭವವೇ ಇಲ್ಲ

ಹಿಂದೆ ವಿಷ್ಣುಸರ್ವೋತ್ತಮತ್ವವನ್ನು ಸಮರ್ಥಿಸುವುದಕ್ಕಾಗಿ ವೃಕಾಸುರನ ಕಥೆಯನ್ನು ಹೇಳಿದೆವು. ವೃಕಾಸುರನು ರುದ್ರನನ್ನು ಕುರಿತು ತಪಸ್ಸನ್ನು ಮಾಡಿದ್ದು ಸುಳ್ಳೇ? "ಯಾರ ತಲೆಯ ಮೇಲೆ ಕೈಯನ್ನು ಇಡುತ್ತೇನೆಯೋ ಅವನು ಬೂದಿಯಾಗಬೇಕು" ಎಂದು ವೃಕಾಸುರನು ವರವನ್ನು ಕೇಳಿದ್ದು ಸುಳ್ಳೇ? ತನಗೆ ವರವನ್ನು ಕೊಟ್ಟಿರುವ ರುದ್ರನನ್ನು ಸಂಹರಿಸಬೇಕೆಂಬ ದುರ್ಬುದ್ಧಿಯು ವೃಕಾಸುರನಿಗೆ ಬಂದದ್ದು ಸುಳ್ಳೇ? ತಾನು ಕೊಟ್ಟಿರುವ ವರವೆ ತನಗೆ ಮೃತ್ಯುವಾಯಿತು ಎಂದು ರುದ್ರನು ಹೆದರಿದ್ದು ಸುಳ್ಳೆ ಹೆದರಿಕೆಯಿಂದ ಕೈಲಾಸದಿಂದ ವೈಕುಂಠದ ವರೆಗೆ ರುದ್ರನು ಆತ್ಮರಕ್ಷಣಾರ್ಥವಾಗಿ ಓಡಿದ್ದು ಸುಳ್ಳೇ? ರುದ್ರನು ವಿಷ್ಣುವಿಗೆ ಶರಣಾಗತನಾದದ್ದು ಸುಳ್ಳೇ? ವಿಷ್ಣುವು ಬ್ರಹ್ಮಚಾರಿರೂಪದಿಂದ ವೃಕಾಸುರನ ಮುಂದೆ ಬಂದು ನಿಂತದ್ದು ಸುಳ್ಳೇ? "ನಿನ್ನ ತಲೆಯ ಮೇಲೆ ನಿನ್ನ ಕೈಯನ್ನಿಡು, ಶಿವನ ಮಾತುಗಳು ಸುಳ್ಳಾಗಿದ್ದರೆ ಶಿವನನ್ನು ಶಿಕ್ಷಿಸು" ಎಂದು ವಿಷ್ಣುವು ಹೇಳಿದ್ದು ಸುಳ್ಳೇ? ವೃಕಾಸುರನು ಚಮತ್ಕಾರವಾಗಿ ವಿಷ್ಣುವು ಹೇಳಿದ ಮಾತುಗಳನ್ನು ನಂಬಿದ್ದು ಸುಳ್ಳೇ? ತನ್ನ ತಲೆಯ ಮೇಲೆ ತನ್ನ ಕೈಯನ್ನಿಟ್ಟು ವೃಕಾಸುರನು ಬೂದಿಯಾದದ್ದು ಸುಳ್ಳೇ?

ಕೈಲಾಸದಲ್ಲಿಯೂ ವೈಕುಂಠದಲ್ಲಿಯೂ ಕೈಲಾಸದಿಂದ ವೈಕುಂಠದ ವರೆಗೆ ಹೋಗುವ ಮಾರ್ಗ ದಲ್ಲಿಯೂ ಭೂಲೋಕವಾಸಿಗಳಾದ ಮನುಷ್ಯರಿದ್ದರೇ? ಬೆದರಿ ಓಡುತ್ತಿರುವ ಶಿವನು ಸಮರ್ಥನಾಗಿದ್ದರೆ ವೃಕಾಸುರನನ್ನು ಎದುರಿಸಲಾರನೇ? ವಿಷ್ಣುವನ್ನು ಶರಣು ಹೊಂದುವನೇ? ಮುಂತಾದ ಪ್ರಶ್ನೆಗಳಿಗೆ ಉತ್ತರವಿಲ್ಲ. ಆದ್ದರಿಂದ ರುದ್ರನು ವರವನ್ನು ಕೊಟ್ಟದ್ದುಂಟು. ಆ ವರದಿಂದ ವೃಕಾಸುರನು ಶಿವನನ್ನು ಸಂಹರಿಸುವುದಕ್ಕಾಗಿ ತನ್ನ ಕೈಯನ್ನು ಶಿವನ ತಲೆಯಲ್ಲಿ ಇಡುವುದಕ್ಕಾಗಿ ಶಿವನನ್ನು ಓಡಿಸಿಕೊಂಡು ವೈಕುಂಠದ ವರೆಗೆ ಓಡಿದ್ದುಂಟು. ಶಿವನು ವಿಷ್ಣುವನ್ನು ಶರಣು ಹೊಂದಿದ್ದುಂಟು ವಿಷ್ಣುವು ಉಪಾಯದಿಂದ ಶಿವನು ಕೊಟ್ಟ ವರದಿಂದಲೇ ವೃಕಾಸುರನನ್ನು ಸಂಹರಿಸಿದ್ದುಂಟು. ವಿಷ್ಣುವು ಶಿವನ ಮಾತನ್ನು ಸತ್ಯವಾಗುವಂತೆ ಮಾಡಿದ್ದುಂಟು. ವೃಕಾಸುರನನ್ನು ಸಂಹರಿಸಿ ರುದ್ರನನ್ನು ರಕ್ಷಿಸಿದ್ದುಂಟು ಎಂದು ಹೇಳಲೇಬೇಕು. ಈ ಕಥೆಯು "ಅಯೋಗ್ಯರಿಗೆ ವಿಪರೀತಜ್ಞಾನವು ಹುಟ್ಟಲಿ" ಎಂಬ ಉದ್ದೇಶದಿಂದ ಹೇಳಲ್ಪಟ್ಟ ಕಥೆಯಲ್ಲ ಎಂದು ಹೇಳಲೇಬೇಕು.

## ಭೃಗುಋಷಿಯ ನಿರ್ಣಯದಲ್ಲಿ ವಿಪರೀತಜ್ಞಾನಕ್ಕೆ ಅವಕಾಶವೇ ಇಲ್ಲ

ಸರಸ್ವತೀನದೀತೀರದಲ್ಲಿ ಸತ್ರಯಾಗವನ್ನು ಮಾಡುತ್ತಿದ್ದ ಋಷಿಗಳ ಮಧ್ಯದಲ್ಲಿ ಒಂದು ಚರ್ಚೆಯು ಬಂತು. ಬ್ರಹ್ಮದೇವನ ವಿಷ್ಣುವಿನ ಮತ್ತು ಶಿವನ ಅಧೀನರಾಗಿ ಸಹಸ್ರಾರು ಸಂಖ್ಯಾಕ ಜನರಿದ್ದಾರೆ. ಈ ಮೂವರ ಅಧೀನರಾದ ಅಸಂಖ್ಯಾಕರಾದ ಜನರೂ ಸಮರೆಂದು ಹೇಳುವಂತಿಲ್ಲ. ಆದ್ದರಿಂದ ಇತರ ಜನರನ್ನು ಬಿಟ್ಟು ಈ ಮೂವರಲ್ಲಿ ಯಾವನು ಶ್ರೇಷ್ಠನು? ಎಂದು ತಿಳಿದು ಅವನಿಗೆ ಯಜ್ಞವನ್ನು ಸಮರ್ಪಿಸೋಣ ಎಂದು ತೀರ್ಮಾನಿಸಿದರು. ಭೃಗುಋಷಿಯನ್ನು ಕರೆದರು. "ತ್ರಿಷ್ವಧೀಶೇಷು ಕೋವಾ ಮಹಾನ್" ಅಂದರೆ "ಮೂವರು ಅಧೀಶರ ಮಧ್ಯದಲ್ಲಿ ಉತ್ತಮನು ಯಾರು? ಎಂದು ತಿಳಿದುಕೊಂಡು ಬಾ" ಎಂದು ಆಜ್ಞಾಪಿಸಿದರು. ಭೃಗುಋಷಿಗಳು ಬ್ರಹ್ಮನ ಲೋಕವಾಗಿರುವ ಸತ್ಯಲೋಕಕ್ಕೂ ಶಿವನ ಲೋಕವಾಗಿರುವ ಕೈಲಾಸಕ್ಕೂ ವಿಷ್ಣುವಿನ ಲೋಕವಾಗಿರುವ ವೈಕುಂಠಲೋಕಕ್ಕೂ ಹೋದರು. ವಿಷ್ಣುವೇ ಸರ್ವೋತ್ತಮನೆಂದು ತೀರ್ಮಾನಿಸಿದರು. ಹಿಂದಿರುಗಿ ಬಂದರು. ಅಲ್ಲಲ್ಲಿ ನಡೆದ ವಿಷಯಗಳನ್ನು ಹೇಳಿದರು. ತನ್ನ ಯಾರು ಎಂದು ನಿರ್ಣಯಿಸುದು ವನಕಾಂಶಿ ಹೋಶಿರುವ ಭೃಗುಋಷಿಯ ಸಾಮಾನ್ಯ ಮನುಷ್ಯರಂತೆ ತೀರ್ಮಾನವನ್ನು ತಿಳಿಸಿದರು. ಋಷಿಗಳೆಲ್ಲರೂ ಅವರ ತೀರ್ಮಾನವನ್ನು ಅಂಗೀಕರಿಸಿದರು. ಸರ್ವೋತ್ತಮನು ಸುಳ್ಳು ಹೇಳುವನೆ? ಅವರು ಹೇಳಿದ್ದು ಸುಳ್ಳಾಗಿದ್ದರೆ ತಾವು ಹೇಳಿದ ವಿಷಯದಲ್ಲಿ ಅಲ್ಲಲ್ಲಿ ನಡೆದ ವಿಷಯಗಳನ್ನು ಆಧಾರವಾಗಿ ಹೇಳುವರೇ? ಅವರ ನಿರ್ಣಯವನ್ನು ಎಲ್ಲಾ ಋಷಿಗಳೂ ಅಂಗೀಕರಿಸುವರೇ? ಆದ್ದರಿಂದ ಜನರೆಲ್ಲರೂ ಸುಳ್ಳನ್ನು ಹೇಳುವುದುಂಟು ಎಂದು ತಿಳಿಸುವುದಕ್ಕಾಗಿ ಭೃಗುಋಷಿಯೂ ಸುಳ್ಳು ಹೇಳಿದರು ಎಂದು ಹೇಳುವುದು ಯುಕ್ತವಲ್ಲ.

ಶ್ರೀಕೃಷ್ಣದೇವನು ಮನುಷ್ಯರ ಮಧ್ಯದಲ್ಲಿರುವಾಗ ಮನುಷ್ಯರಂತೆ ನಟಿಸುತ್ತಿರುವನು ಎಂಬ ವಿಷಯದಲ್ಲಿ ಉದಾಹರಣೆಯನ್ನು ಹೇಳುವೆವು. ಒಮ್ಮೆ ಶ್ರೀಕೃಷ್ಣನು ದ್ವಾರಕಾಪಟ್ಟಣದಲ್ಲಿರುವ ಸರ್ವರನ್ನೂ ಕರೆಯಿಸಿದನು. ಅವರೆಲ್ಲರ ಮುಂದೆ "ನನಗೆ ರುಕ್ಮಿಣಿಯಲ್ಲಿ ಮಗನು ಹುಟ್ಟಲಿಲ್ಲ. ಆದಕ್ಕಾಗಿ ಕೈಲಾಸಕ್ಕೆ ಹೋಗುತ್ತಿರುವೆನು. ನಾನು ಹಿಂದಿರುಗಿ ಬರುವ ವರೆಗೆ ಈ ಪಟ್ಟಣವನ್ನು ನೀವೆಲ್ಲರೂ ರಕ್ಷಿಸಬೇಕು" ಎಂದು ಹೇಳಿದನು. ಆ ಮನುಷ್ಯರ

ಮಧ್ಯದಲ್ಲಿ ಎಲ್ಲರೂ ಇದ್ದರು. ಅವರಲ್ಲಿ ಸಾಮಾನ್ಯ ಜನರು ಅಂದರೆ ಅಯೋಗ್ಯರು ಶಿವಭಕ್ತನಾದ ಶ್ರೀಕೃಷ್ಣನು ಮಗನನ್ನು ವರವಾಗಿ ಬೇಡುವುದಕ್ಕಾಗಿ ಕೈಲಾಸಕ್ಕೆ ಹೋದನೆಂದು ತಿಳಿದರು. ಯೋಗ್ಯರು ಹಾಗೆ ತಿಳಿಯಲಿಲ್ಲ. ರುದ್ರನ ತಂದೆಯಾದ ಬ್ರಹ್ಮನನ್ನು ಶ್ರೀಕೃಷ್ಣದೇವನು ತನ್ನ ನಾಭಿಕಮಲದಿಂದ ಸೃಷ್ಟಿಸಿದನು. ಆಗ ಶಿವನಿದ್ದನೇ? ಇಚ್ಛಾಮಾತ್ರದಿಂದ ಬ್ರಹ್ಮದೇವನನ್ನು ಸೃಷ್ಟಿಸಿದ ಶ್ರೀಕೃಷ್ಣದೇವನಿಗೆ ಮಗನು ಹುಟ್ಟುವುದಕ್ಕಾಗಿ ಕೈಲಾಸಯಾತ್ರೆಯ ಆವಶ್ಯಕತೆಯಿದೆಯೇ? ಇದೆಲ್ಲವೂ ಅಯೋಗ್ಯರಿಗೆ ವಿಪರೀತಜ್ಞಾನವನ್ನು ಹುಟ್ಟಿಸುವುದಕ್ಕಾಗಿ ಹೇಳಿದ ಮಾತು'' ಎಂದು ತಿಳಿದರು.

ಶ್ರೀಕೃಷ್ಣದೇವನು ಜರಾಸಂಧನೊಡನೆ ಯುದ್ಧವನ್ನು ಮಾಡುತ್ತಿದ್ದಾಗ ''ಏಕಲವ್ಯ'' ಎಂಬುವನು ಜರಾಸಂಧನ ಸಹಾಯಕ್ಕಾಗಿ ಬಂದನೆಂದೂ ಆಗ ಏಕಲವ್ಯನನ್ನು ಸೋಲಿಸುವುದಕ್ಕಾಗಿ ''ಪ್ರದ್ಯುಮ್ನ'' ಎಂಬ ಮಗನನ್ನು ತನ್ನ ಸಂಕಲ್ಪದಿಂದಲೇ ಶ್ರೀಕೃಷ್ಣದೇವನು ಸೃಷ್ಟಿಸಿದನೆಂದೂ ಆ ಪ್ರದ್ಯುಮ್ನನು ಏಕಲವ್ಯನನ್ನು ಸೋಲಿಸಿದನೆಂದೂ, ಕೊನೆಗೆ ಪ್ರದ್ಯುಮ್ನನು ಶ್ರೀಕೃಷ್ಣದೇವನ ದೇಹದಲ್ಲಿ ಪ್ರವೇಶಿಸಿದನೆಂದೂ ಹಿಂದೆ ಹೇಳಿರುವೆವು. ಆಗ ಸಂಕಲ್ಪಮಾತ್ರದಿಂದ ಪ್ರದ್ಯುಮ್ನನನ್ನು ಸೃಷ್ಟಿಸಿದ ಶ್ರೀಕೃಷ್ಣದೇವನಿಗೆ ಈಗ ರುಕ್ಮಿಣೀದೇವಿಯಲ್ಲಿ ಮಗನು ಹುಟ್ಟುವುದಕ್ಕಾಗಿ ಕೈಲಾಸಯಾತ್ರೆಯೂ ಶಿವಾರ್ಚನೆಯೂ ಬೇಕಾಯಿತೇ?

## ಶ್ರೀಕೃಷ್ಣದೇವನು ರುದ್ರನನ್ನು ಸ್ತುತಿಸಲಿಲ್ಲ

ಶ್ರೀಕೃಷ್ಣದೇವನು ಮಗನು ಹುಟ್ಟುವುದಕ್ಕಾಗಿ ರುದ್ರನನ್ನು ಸ್ತುತಿಸಿದನೆಂಬುದೂ ಸುಳ್ಳು. ಹರಿವಂಶಪುರಾಣದಲ್ಲಿ ಹಾಗೆ ಹೇಳಿಲ್ಲ. ಅಲ್ಲಿ ಹೇಳಿರುವುದನ್ನು ಈಗ ಹೇಳುವೆವು. ಶ್ರೀಕೃಷ್ಣದೇವನು ಕೈಲಾಸಕ್ಕೆ ಹೋದನಂತೆ. ತಪಸ್ಸನ್ನು ಮಾಡಿದನಂತೆ. ರುದ್ರನು ಪ್ರತ್ಯಕ್ಷನಾದಂತೆ. ಶ್ರೀಕೃಷ್ಣದೇವನಿಗೆ ಸಾಷ್ಟಾಂಗವಾಗಿ ನಮಸ್ಕರಿಸಿದನಂತೆ. ''ಕೇಶವ'' ಮುಂತಾದ ಇಪ್ಪತ್ನಾಲ್ಕು ಹೆಸರುಗಳಿಗೆ ವ್ಯಾಖ್ಯಾನವನ್ನು ಮಾಡಿ ಸ್ತುತಿಸಿದನಂತೆ. ಇಪ್ಪತ್ತನಾಲ್ಕು ಹೆಸರುಗಳಲ್ಲಿ ''ಕೇಶವ'' ಎಂಬ ಮೊದಲನೆಯ ಹೆಸರಿನ ವ್ಯಾಖ್ಯಾನವನ್ನು ಈಗ ತಿಳಿಸುದವು. ''ಹಿರಣ್ಯಗರ್ಭಃ ಕಃ ಪ್ರೊಕ್ತ ಈಶಃ ಶಂಕರ ಏವ ಚ ಸೃಷ್ಟ್ಯಾದಿನಾ ವರ್ತಯತಿ ತೌ ಯತಃ ಕೇಶವೋ ಭವಾನ್॥'' ಅಂದರೆ ''ಕೇಶವ'' ಎಂಬ ಪದದಲ್ಲಿ ಕ ಈಶ, ವ ಎಂಬ ಮೂರು ಅಂಶಗಳಿವೆ. ಅವುಗಳಲ್ಲಿ ''ಕ'' ಎಂಬ ಪದದ ಅರ್ಥವನ್ನು ''ಹಿರಣ್ಯಗರ್ಭಃ ಕಃ ಪ್ರೋಕ್ತಃ'' ಎಂದು ಮೊದಲನೆಯ ಪಾದವೂ.

''ಈಶ'' ಎಂಬ ಪದದ ಅರ್ಥವನ್ನು ''ಈಶಃ ಶಂಕರ ಏವ ಚ'' ಎಂಬ ಎರಡನೆಯ ಪಾದವೂ, ''ವ'' ಎಂಬ ಪದದ ಅರ್ಥವನ್ನು ''ಸೃಷ್ಟ್ಯಾದಿನಾ ವರ್ತಯತಿ ತೌ ಯತಃ ಕೇಶವೋ ಭವಾನ್'' ಎಂಬ ಮೂರು ನಾಲ್ಕು ಪಾದಗಳಿಂದಲೂ ವಿವರಿಸಿರುವನು.

ಈ ''ಕೇಶವ'' ಎಂಬ ಪದದ ಅರ್ಥವನ್ನು ವಿವರಿಸುತ್ತೇವೆ. ಕಶ್ಚ ಈಶಶ್ಚ ಕೇಶೌ, ಅಂದರೆ ''ಕ'' ಎಂಬ ಹೆಸರುಳ್ಳ ಬ್ರಹ್ಮನೂ ''ಈಶ'' ಎಂಬ ಹೆಸರುಳ್ಳ ನಾನೂ ''ಕೇಶೌ'' ಎಂದು ಹೇಳಲ್ಪಡುವೆವು. ''ಕೇಶೌ ವರ್ತಯತಿ ಇತಿ ಕೇಶವಃ'' ''ನಮ್ಮಿಬ್ಬರನ್ನು ಸೃಷ್ಟಿ, ಪಾಲನೆ, ಸಂಹಾರ ಮುಂತಾದವುಗಳನ್ನು ಮಾಡಿ ಎಲ್ಲಾ ಕಾರ್ಯಗಳನ್ನೂ

ಮಾಡಿಸುತ್ತಿರುವವನು ಕೇಶವ ಎಂದೆನಿಸುವನು'' ಎಂದು ಹೇಳುತ್ತಾ ಶಿವನು ಶ್ರೀಕೃಷ್ಣದೇವನನ್ನು ಸ್ತುತಿಸಿರುವನು. ಶಿವನನ್ನು ಒಂದು ಮಾತಿನಿಂದಲೂ ಶ್ರೀಕೃಷ್ಣದೇವನು ಸ್ತುತಿಸಲಿಲ್ಲ. ಆದ್ದರಿಂದ ಕೈಲಾಸಕ್ಕೆ ಹೋಗಿ ''ಶ್ರೀಕೃಷ್ಣದೇವನು ಶಿವನನ್ನು ಸ್ತುತಿಸಿದನು'' ಎಂದು ಹೇಳುವುದು ಹರಿವಂಶ ಪುರಾಣಕ್ಕೆ ಅತ್ಯಂತ ವಿರುದ್ಧವಾದುದು.

## ರುದ್ರನ ಅನುಗ್ರಹದಿಂದ ಮಗನನ್ನು ಪಡೆಯಲಿಲ್ಲ

''ಕೈಲಾಸಕ್ಕೆ ಹೋಗಿ ಶಿವನ ಅನುಗ್ರಹದಿಂದ ಶ್ರೀಕೃಷ್ಣದೇವನು ಪ್ರದ್ಯುಮ್ನ ಎಂಬ ಮಗನನ್ನು ಪಡೆದನು.'' ಎಂದು ಹೇಳುವುದೂ ಹರಿವಂಶಪುರಾಣಕ್ಕೆ ಅತ್ಯಂತ ವಿರುದ್ಧವಾದುದು ಎಂಬ ಅಂಶವನ್ನು ವಿವರಿಸುವೆವು.

ಶ್ರೀಕೃಷ್ಣದೇವನು ಕೈಲಾಸಕ್ಕೆ ಹೋಗುತ್ತಿರುವಾಗ ಮಾರ್ಗದಲ್ಲಿ ಎರಡು ಪಿಶಾಚಿಗಳನ್ನು ನೋಡಿದನು. ಅವರಿಬ್ಬರಿಗೂ ಘಂಟಾಕರ್ಣ ಎಂದು ಹೆಸರು. ಅವರಿಬ್ಬರೂ ಮಹಾವಿಷ್ಣುಭಕ್ತರು, ವಿಷ್ಣುವಿನ ಹೆಸರನ್ನು ಬಿಟ್ಟು ಇತರರ ಹೆಸರುಗಳನ್ನು ಕೇಳುವುದಿಲ್ಲ ಎಂದು ತೀರ್ಮಾನಿಸಿದವರು. ಯಾರಾದರೂ ಕುಚೇಷ್ಟೆಗಾಗಿ ಅವರ ಮುಂದೆ ''ಶಿವ'' ಮುಂತಾದ ಹೆಸರುಗಳನ್ನು ಹೇಳಿದರೆ ಆ ಹೆಸರುಗಳನ್ನು ಕೇಳಕೂಡದು ಎಂದು ಎರಡು ಕಿವಿಗಳಿಗೂ ಗಂಟೆಗಳನ್ನು ಕಟ್ಟಿಕೊಂಡು ತಲೆಯನ್ನು ಆಡಿಸುತ್ತಿದ್ದರು. ಆಗ ಹೆಸರುಗಳು ಅವರ ಕಿವಿಗಳಿಗೆ ಬೀಳುತ್ತಿದ್ದಿಲ್ಲ. ಈ ಕಾರಣದಿಂದಲೇ ಅವರಿಬ್ಬರೂ ''ಘಂಟಾಕರ್ಣ'' ಎಂದು ಪ್ರಸಿದ್ಧರಾದರು. ಶ್ರೀಕೃಷ್ಣದೇವನು ಕೈಲಾಸಕ್ಕೆ ಹೋಗುತ್ತಿರುವಾಗ ''ಘಂಟಾಕರ್ಣ'' ಎಂದು ಪ್ರಸಿದ್ಧರಾದ ಆ ಪಿಶಾಚಿಗಳ ಭಕ್ತಿಗೆ ಮೆಚ್ಚಿ ಅವರಿಬ್ಬರಿಗೂ ಮುಕ್ತಿಯನ್ನು ಕೊಟ್ಟನು.

ಶಿವಾದಿದೇವತೆಗಳು ಮುಕ್ತಿಯನ್ನು ಕೊಡಲು ಶಕ್ತರಲ್ಲ. ಐಹಿಕವಾದ ಮಕ್ಕಳು ಮುಂತಾದ ಫಲಗಳನ್ನೇ ಕೊಡಲು ಶಕ್ತರು. ಶಿವಾದಿದೇವತೆಗಳಿಂದ ಕೊಡಲು ಶಕ್ಯವಿಲ್ಲದ ಮುಕ್ತಿಯನ್ನು ಘಂಟಾಕರ್ಣ ಎಂಬ ಪಿಶಾಚಿಗಳಿಗೆ ಕೊಟ್ಟಿರುವ ಶ್ರೀಕೃಷ್ಣದೇವನು ತಾನೇ ಸರ್ವೋತ್ತಮನೆಂದೂ ರುದ್ರಾದಿಗಳು ತನಗಿಂತ ಅಧಮರೆಂದೂ ಸ್ಪಷ್ಟಪಡಿಸಿದನು. ತನ್ನನ್ನು ಬಿಟ್ಟು ಇತರರೆಲ್ಲರೂ ಐಹಿಕ ಫಲವನ್ನು ಮಾತ್ರ ಕೊಡಲು ಶಕ್ತರೆಂದು ತಿಳಿಸುವುದಕ್ಕಾಗಿ ಕೈಲಾಸದ ವರೆಗೆ ಹೋದನು. ರುದ್ರನನ್ನು ಆರಾಧಿಸಿದಂತೆ ನಟಿಸಿ ಪ್ರದ್ಯುಮ್ನ ಎಂಬ ಮಗನನ್ನು ಪಡೆದನು.

## ಪ್ರದ್ಯುಮ್ನನ ಜನನ

ಶ್ರೀಕೃಷ್ಣದೇವನು ಕೈಲಾಸಯಾತ್ರೆಯಿಂದ ಹಿಂದಿರುಗಿದಂತೆ ನಟಿಸಿದನು. ಸಕಲ ಲೋಕಗಳಲ್ಲಿ ಪರಮಸುಂದರನಾದ ಶ್ರೀಕೃಷ್ಣದೇವನು ಪರಮಸುಂದರಿಯಾದ ರುಕ್ಮಿಣೀದೇವಿಯೊಡನೆ ವಿಹರಿಸಿದನು. ತನ್ನಿಂದ ಯಾವಾಗಲೂ ಅವಿಯುಕ್ತಳಾದ ಅವಳಲ್ಲಿ ಅತಿಸುಂದರನಾದ ಮಗನನ್ನು ಪಡೆದನು. ಶ್ರೀಹರಿಯು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ನಾಲ್ಕು ರೂಪಗಳಿಂದ ಯುಕ್ತನಾಗಿರುವುದು ಅತ್ಯಂತ ಪ್ರಸಿದ್ಧವಾಗಿದೆ. ಆ ನಾಲ್ಕು ರೂಪಗಳ ಮಧ್ಯದಲ್ಲಿ ಪ್ರದ್ಯುಮ್ನ ಎಂಬ ಮೂರನೆಯ ರೂಪದಿಂದ ತನ್ನ ಮಗನಲ್ಲಿ ಪ್ರವಿಷ್ಟನಾದನು. ಆದ್ದರಿಂದಲೇ ಆ ಮಗನಿಗೆ ಪ್ರದ್ಯುಮ್ನ ಎಂಬ ಹೆಸರು ಪ್ರಸಿದ್ಧವಾಯಿತು. ಈ ಪ್ರದ್ಯುಮ್ನನು ಮೂಲರೂಪದಲ್ಲಿಯೂ ಶ್ರೀಕೃಷ್ಣದೇವನ ಮಗನು.

ಈ ಪ್ರದ್ಯುಮ್ನನು ಹುಟ್ಟುವುದಕ್ಕಿಂತ ಮುಂಚಿತವಾಗಿಯೇ ನಾರದರು ಶಂಬರಾಸುರನ ಮನೆಗೆ ಬಂದು "ಎಲೋ ಶಂಬರಾಸುರನೇ, ನೀನು ಪ್ರತಾಪಶಾಲಿ ಎಂಬ ವಿಷಯದಲ್ಲಿ ಸಂಶಯವಿಲ್ಲ. ನಿನಗೂ ಮರಣವಿದೆ. ನಿನ್ನನ್ನು ಕೊಲ್ಲುವವನು ಇನ್ನು ಕೆಲದಿನಗಳಲ್ಲಿ ಹುಟ್ಟಲಿರುವನು. ಶ್ರೀಕೃಷ್ಣನ ಮಗನಾಗಿ ನೀನು ಅವನು ಹುಟ್ಟಿದ ಕೂಡಲೇ ಕೊಲ್ಲುವುದಕ್ಕೆ ಪ್ರಯತ್ನಿಸು" ಎಂದು ಹೇಳಿದರು. ಹೀಗೆ ಶಂಬರಾಸುರನಿಂದ ಪ್ರಬಲವಾದ ಅಪರಾಧವನ್ನು ಮಾಡಿಸಿ ಅವನನ್ನು ಸಂಹರಿಸುವುದಕ್ಕಾಗಿ ಹಾದಿಯನ್ನು ಮಾಡಿ ಹೋದರು.

ಶಂಬರಾಸುರನು ಮಾಯಾವಿದ್ಯೆಯಲ್ಲಿ ಅತ್ಯಂತ ನಿಪುಣನು. ರುಕ್ಮಿಣೀದೇವಿಯು ಪ್ರಸವಿಸುವ ವರೆಗೆ ಯಾರಿಗೂ ತಿಳಿಯದಂತೆ ತನ್ನ ಮಾಯೆಯಿಂದ ಮರೆಯಾಗಿದ್ದನು. ರುಕ್ಮಿಣೀದೇವಿಯು ಅತಿ ಸುಂದರನಾದ ಮಗನನ್ನು ಪ್ರಸವಿಸಿದಳು. ಆ ಕ್ಷಣದಲ್ಲಿಯೇ ಪ್ರಸವಗೃಹದಿಂದ ಶಂಬರಾಸುರನು ಯಾರಿಗೂ ತಿಳಿಯದಂತೆ ಅದೃಶ್ಯನಾಗಿ ಆ ಮಗುವನ್ನು ಎತ್ತಿಕೊಂಡು ಹೋದನು. ಈ ವಿಷಯವನ್ನು ಸರ್ವಜ್ಞನಾದ ಶ್ರೀಕೃಷ್ಣದೇವನು ತಿಳಿದಿದ್ದರೂ ನಾರದರು ಮಾಡಿರುವ ಸೇವೆಯು ಸಾರ್ಥಕವಾಗಲಿ ಎಂದು ತೀರ್ಮಾನಿಸಿದನು. ಒಂದೂ ತಿಳಿಯದಂತೆ ನಟಿಸಿದನು. ಮಗವು ಅದೃಶ್ಯವಾದ ಕೂಡಲೇ ಅಂತಃಪುರದಲ್ಲಿ ಸರ್ವರೂ ರೋದನವನ್ನು ಮಾಡಿದರು. ಸರ್ವಜ್ಞರಾದ ರುಕ್ಮಿಣೀದೇವಿಯರೂ ಶ್ರೀಕೃಷ್ಣದೇವನ ಅಭಿಪ್ರಾಯವನ್ನು ತಿಳಿದರು. ತಾನೂ ರೋದಿಸಿದಂತೆ ನಟಿಸಿದರು.

ಶಂಬರಾಸುರನು ದ್ವಾರಕಾಪಟ್ಟಣದಿಂದ ಪ್ರದ್ಯುಮ್ನನನ್ನು ಮಾಯಾಬಲದಿಂದ ಅಪಹರಿಸಿಕೊಂಡು ಆಕಾಶಮಾರ್ಗವಾಗಿ ಸಮುದ್ರದ ಮೇಲೆ ಹಾರುತ್ತಾ ತನ್ನ ಊರಿಗೆ ಹೋಗುತ್ತಿದ್ದನು. ಆಗ ಅವನು "ಈ ಹಸುಗೂಸನ್ನು ಸಮುದ್ರದಲ್ಲಿ ಹಾಕಿಬಿಟ್ಟರೆ ಸಮುದ್ರದಲ್ಲಿರುವ ಅಗಾಧವಾದ ನೀರಿನಲ್ಲಿ ಮುಳುಗಿ ಸಾಯುತ್ತದೆ. ಅದು ಸತ್ತರೆ ನನಗೆ ಮೃತ್ಯುವೇ ಇಲ್ಲ" ಎಂದು ತೀರ್ಮಾನಿಸಿದನು.

ಸಮುದ್ರದಲ್ಲಿ ಬಿಸಾಡಿದನು. ಆಗ ಶ್ರೀಹರಿಯ ಸಂಕಲ್ಪದಿಂದ ಒಂದು ದೊಡ್ಡ ಮೀನು ಬಾಯಿಯನ್ನು ತೆರೆದುಕೊಂಡು ಸಮುದ್ರದ ಮೇಲೆ ಈಸುತ್ತಿತ್ತು. ದೈವಾಧೀನವಾಗಿ ಆ ಮೀನಿನ ಬಾಯಿಯೊಳಗೆ ಪ್ರದ್ಯುಮ್ನನು ಬಿದ್ದನು. ಅದು ತುಂಬಾ ದೊಡ್ಡ ಮೀನು. ಆ ಮೀನಿನ ಹೊಟ್ಟೆಯೊಳಗೆ ಈ ಮಗುವಿಗೆ ಆಟವಾಡುವುದಕ್ಕೆ ತುಂಬಾ ಸ್ಥಳವಿತ್ತು. ಮೀನನ್ನು ಹಿಡಿದು ಮಾರಿ ಜೀವಿಸುತ್ತಿರುವ ಕೆಲವು ಬೆಸ್ತರು ಮೀನುಗಳನ್ನು ಹಿಡಿಯುವುದಕ್ಕಾಗಿ ದೊಡ್ಡ ಬಲೆಯನ್ನು ಬೀಸಿದರು. ಆ ಬಲೆಯಲ್ಲಿ ಆ ಮೀನು ಸಿಕ್ಕಿತು. ಆ ಮೀನನ್ನು ಸಮುದ್ರದಿಂದ ಹೊರಗೆ ಎಳೆದು, ನೆಲದಲ್ಲಿ ಹಾಕಿದರು. ನೆಲದಲ್ಲಿ ಬಿದ್ದಕೂಡಲೇ ನೀರಿನಲ್ಲಿ ವಾಸಿಸುತ್ತಿರುವ ಮೀನು ಸತ್ತುಹೋಯಿತು. ಸಾಯುವ ಕಾಲದಲ್ಲಿ ಬಾಯಿಯನ್ನು ತೆರೆಯಿತು. ಆ ಬಾಯಿಯ ಮಾರ್ಗದಿಂದ ಹೊಟ್ಟೆಯೊಳಗೆ ಆಡುತ್ತಿರುವ ಸುಂದರವಾದ ಕೂಸನ್ನು ನೋಡಿದರು. ಆ ಮೀನು ಸತ್ತ ಸ್ಥಳವು ಶಂಬರಾಸುರನಿಗೆ ಅಧೀನವಾಗಿತ್ತು. ತನ್ನ ಅಧೀನವಾದ ಸ್ಥಳದಲ್ಲಿ ಏರ್ಪಟ್ಟಿರುವ ಯಾವ ಆಶ್ಚರ್ಯ ಸಮಾಚಾರವನ್ನೂ ತನಗೆ ಎಲ್ಲರೂ ತಿಳಿಸಬೇಕು ಎಂದು ಶಂಬರಾಸುರನು ಕಟ್ಟಾಜ್ಞೆಯನ್ನು ಮಾಡಿದ್ದನು. ಆ ಆಜ್ಞೆಯಂತೆ ಆ ಅತಿಶಯವಾದ ಮೀನನ್ನು ಶಂಬರಾಸುರನಿಗೆ ಕೊಟ್ಟರು. ಶಂಬರಾಸುರನು ಆ ಮೀನಿನ ಹೊಟ್ಟೆಯನ್ನು ಅಡಿಗೆಯವರಿಂದ ಸೀಳಿಸಿದನು. ಆ ಮಗುವನ್ನು ನೋಡಿದನು.

# ರತಿಗೆ ಶಾಪ

ಹಿಂದೊಮ್ಮೆ "ದ್ರೌಪದೀದೇವಿಯು ಐದು ಪತಿಗಳಿಂದ ಯುಕ್ತಳಾಗಿದ್ದಳು" ಎಂದು ಬ್ರಹ್ಮದೇವನು ಹೇಳಿದ್ದನ್ನು ರತಿಯು ಕೇಳಿದಳು. "ಒಬ್ಬಳು ಒಬ್ಬನೇ ಪತಿಯನ್ನು ಆಶ್ರಯಿಸಬೇಕು. ದ್ರೌಪದಿಯು ಹಾಗಿಲ್ಲ. ಅವಳಿಗೆ ಐದು ಗಂಡಂದಿರು" ಎಂದು ದ್ರೌಪದೀದೇವಿಯನ್ನು ಅಪಹಾಸ ಮಾಡಿದಳು. ಈ ಅಪಹಾಸದ ಮಾತುಗಳನ್ನು ಕೇಳಿದ ಬ್ರಹ್ಮದೇವನು "ನೀನು ದ್ರೌಪದೀದೇವಿಯ ದೇಹದಲ್ಲಿದ್ದ ನಿನಗಿಂತ ಉತ್ತಮರಾದ ಭಾರತೀದೇವಿಯನ್ನೂ ಪಾರ್ವತೀದೇವಿಯನ್ನೂ ಅಪಹಾಸ ಮಾಡಿರುವಿ. ಆದ್ದರಿಂದ ಒಬ್ಬ ಅಸುರನ ಪತ್ನಿಯ ಸ್ಥಾನದಲ್ಲಿ ಕೆಲವು ಕಾಲದ ವರೆಗೆ ಇರು" ಎಂದು ಶಪಿಸಿದನು. ಆ ಶಾಪದಿಂದ ಶಂಬರಾಸುರನ ಪತ್ನಿಯ ಸ್ಥಾನದಲ್ಲಿದ್ದಳು.

# ರತಿಯ ಪಾತಿವ್ರತ್ಯರಕ್ಷಣೆ

ರತಿಯ ಪತಿಯಾದ ಮನ್ಮಥನು ರುದ್ರನ ಕಣ್ಣಿನಿಂದ ಹೊರಟಿರುವ ಬೆಂಕಿಯಿಂದ ಬೂದಿಯಾದ ಕೂಡಲೇ ರತಿಯು ರುದ್ರನನ್ನು ಅತ್ಯಂತ ಭಕ್ತಿಯಿಂದ ಆರಾಧಿಸಿದಳು. ರುದ್ರನು ಅವಳ ತಪಸ್ಸಿನಿಂದ ಸಂತುಷ್ಟನಾದನು. ಶ್ರೀಹರಿಯು ಕೃಷ್ಣಾವತಾರವನ್ನು ಸ್ವೀಕರಿಸಿದಾಗ ನಿನ್ನ ಪತಿಯು ಪ್ರದ್ಯುಮ್ನ ಎಂಬ ಹೆಸರಿನಿಂದ ಹುಟ್ಟುವನೆಂದೂ ಅಷ್ಟರ ವರೆಗೆ ಕಾಲವನ್ನು ನಿರೀಕ್ಷಿಸುತ್ತಿರಬೇಕೆಂದೂ ಆಜ್ಞಾಪಿಸಿದನು. ಅದೇ ಸಂದರ್ಭದಲ್ಲಿ ಬ್ರಹ್ಮದೇವನ ಶಾಪವೂ ಏರ್ಪಟ್ಟಿತು. ನಾರದರ ಮೂಲಕವಾಗಿ ಪ್ರದ್ಯುಮ್ನನು ಶಂಬರಾಸುರನ ಮನೆಗೆ ಬರುವುದನ್ನು ತಿಳಿದಳು.

ಶಂಬರಾಸುರನ ಮನೆಗೆ ಹೋಗಿ ಬ್ರಹ್ಮದೇವನ ಶಾಪವು ಸಾರ್ಥಕವಾಗುವಂತೆ ಮಾಡುವುದಕ್ಕಾಗಿ ಶಂಬರಾಸುರನ ಪತ್ನಿಯಂತೆ ನಟಿಸುತ್ತಾ ಅವನ ಮನೆಯಲ್ಲಿ ಇದ್ದಳು. ಅತ್ಯಂತ ಮಾಯೆಯಿಂದ ತನ್ನ ರೂಪವನ್ನು ಯಾರಿಗೂ ತೋರಿಸದೆ ತನ್ನಂತಿರುವ ಇನ್ನೊಬ್ಬ ಸ್ತ್ರೀಯ ರೂಪವನ್ನು ತೋರಿಸುತ್ತಾ ಅವಳಿಗೂ ಶಂಬರಾಸುರನಿಗೂ ಸಂಬಂಧವನ್ನು ಏರ್ಪಡಿಸುತ್ತಾ ತನ್ನ ಪಾತಿವ್ರತ್ಯವನ್ನು ರಕ್ಷಿಸಿಕೊಂಡಿದ್ದಳು. ಶಂಬರಾಸುರನ ಮನೆಯಲ್ಲಿಯೇ ಇದ್ದು ತನ್ನ ನಿಜಶರೀರದಿಂದ ಶಂಬರಾಸುರನನ್ನು ಮುಟ್ಟದೆ ಮಾಯೆಯಿಂದ ನಿರ್ಮಿಸಲ್ಪಟ್ಟ ಸ್ತ್ರೀಗೂ ಶಂಬರಾಸುರನಿಗೂ ಸಂಬಂಧವು ಏರ್ಪಡುವಂತೆ ಮಾಡಿದಳು. "ರತಿಯು ಕೆಲವು ಕಾಲದ ವರೆಗೆ ಶಂಬರಾಸುರನ ಪತ್ನಿಯಾಗಿದ್ದಳು" ಎಂಬ ಅಪವಾದವು ಮಾತ್ರ ಬಂತು. ಬ್ರಹ್ಮದೇವನ ಶಾಪವು ಈ ಅಪವಾದಕ್ಕೆ ಮಾತ್ರ ಕಾರಣವಾಯಿತು.

# ಪ್ರದ್ಯುಮ್ನನು ಬೆಳೆದದ್ದು

ನಾರದರು ಶಂಬರಾಸುರನ ಮನೆಗೆ ಬಂದರು. ಪ್ರದ್ಯುಮ್ನನನ್ನು ರತಿಗೆ ತೋರಿಸಿದರು. "ಇವನೇ ರುದ್ರದೇವನ ನೇತ್ರಾಗ್ನಿಯಿಂದ ಬೂದಿಯಾದ ನಿನ್ನ ಪತಿಯು. ಇವನನ್ನು ಬಹಳ ಜಾಗ್ರತೆಯಿಂದ ರಕ್ಷಿಸು" ಎಂದು ಹೇಳಿ ಹೋದರು. ಪ್ರದ್ಯುಮ್ನನನ್ನು ನೋಡಿ ತುಂಬಾ ಸಂತುಷ್ಟಳಾದಳು. ನಾನಾ ವಿಧವಾದ ರಸಾಯನದ್ರವ್ಯಗಳನ್ನು ಕೊಟ್ಟು ಬೆಳೆಯಿಸುತ್ತಾ ಬಂದಳು. ನಾಲ್ಕೇ ವರ್ಷಗಳಲ್ಲಿ ಸಂಪೂರ್ಣಯೌವನವನ್ನು ಹೊಂದಿದನು.

ಯೌವನವು ಪೂರ್ಣವಾಗಿ ಬಂದ ಕೂಡಲೇ ಅವಳಿಗೆ ಅವನನ್ನು ನೋಡಿದ ಕೂಡಲೇ ನಾಚಿಕೆಯು

ಆರಂಭವಾಯಿತು. ಅದನ್ನು ಪ್ರದ್ಯುಮ್ನನು ತಿಳಿದನು. ಅಷ್ಟರವರೆಗೆ "ತನ್ನ ತಾಯಿ" ಎಂದು ತಿಳಿದಿದ್ದ ಪ್ರದ್ಯುಮ್ನನು "ಅಮ್ಮಾ ನೀನು ನನ್ನ ಅಮ್ಮನಲ್ಲವೇ? ನೀನು ನನ್ನನ್ನು ನೋಡಿ ಇಂದು ಗಂಡನನ್ನು ನೋಡಿದ ಹೆಂಡತಿಯಂತೆ ನಾಚಿಕೆಯಿಂದ ಯುಕ್ತಳಾಗಿರುವಿ. ಇದಕ್ಕೆ ಕಾರಣವೇನು? ಅಮ್ಮನು ಹೆಂಡತಿಯಂತೆ ನಡೆಯಬಹುದೇ?" ಎಂದು ಪ್ರಶ್ನಿಸಿದನು.

ಇದನ್ನು ಕೇಳಿದ ರತಿಯು ಅವನ ಜನ್ಮವೃತ್ತಾಂತವನ್ನೂ ಇಲ್ಲಿಗೆ ಬಂದು ಸೇರಿದ ವೃತ್ತಾಂತವನ್ನೂ "ತಾನು ತಾಯಿಯಲ್ಲ. ಅವನ ಪತ್ನಿಯಾದ ರತಿ" ಎಂಬ ವೃತ್ತಾಂತವನ್ನೂ ಹೇಳಿದಳು. ಪ್ರದ್ಯುಮ್ನನು ತನ್ನ ಅನಾದಿ ಪತ್ನಿಯಾಗಿರುವ ರತಿಯ ಪಾಣಿಗ್ರಹಣವನ್ನು ಮಾಡಿಕೊಂಡನು.

ರತಿಯು ಪರಮ ಮಾಯಾನಿಪುಣನಾದ ಶಂಬರಾಸುರನನ್ನು ಸಂಹರಿಸುವುದಕ್ಕಾಗಿ ಸಕಲ ಮಾಯಾವಿಗಳನ್ನು ಸಂಹರಿಸುವ ಶಕ್ತಿಯುಳ್ಳ ಒಂದು ಮಂತ್ರವನ್ನು ಉಪದೇಶಿಸಿದಳು. ಆ ಮಂತ್ರಕ್ಕೆ ಪರಶುರಾಮದೇವನೇ ದೇವತೆಯು.

## ಪ್ರದ್ಯುಮ್ನನಿಗೂ ಶಂಬರಾಸುರನಿಗೂ ಯುದ್ಧ

ತನ್ನ ಪತ್ನಿಯಾದ ರತಿಯ ಪತಿಯ ಸ್ಥಾನದಲ್ಲಿದ್ದು ರತಿಯಿಂದ ವಂಚಿಸಲ್ಪಟ್ಟ ಶಂಬರಾಸುರನನ್ನು ಪ್ರದ್ಯುಮ್ನನು ಯುದ್ಧಕ್ಕೆ ಕರೆದನು. ಖಡ್ಗವನ್ನೂ ಗುರಾಣಿಯನ್ನೂ ಧರಿಸಿ ಯುದ್ಧವನ್ನು ಪ್ರದ್ಯುಮ್ನನು ಮಾಡಿದನು. ಶಂಬರಾಸುರನು ಉತ್ತಮವಾದ ಅಸ್ತ್ರಗಳಿಂದಲೂ ಆಯುಧಗಳಿಂದಲೂ ಯುದ್ಧವನ್ನು ಮಾಡಿದನು. ಕೊನೆಗೆ ಪ್ರದ್ಯುಮ್ನನನ್ನು ಸೋಲಿಸಲು ಅವನಿಂದ ಸಾಧ್ಯವಾಗಲಿಲ್ಲ. ಅದೃಶ್ಯನಾದನು. ಆಕಾಶದಿಂದ ಅಸಂಖ್ಯವಾದ ಮಾಯೆಗಳನ್ನು ಸೃಷ್ಟಿಸಿದನು. ಪರ್ವತಗಳ ಮಳೆಯನ್ನು ಸೃಷ್ಟಿಸಿದನು. ಪ್ರದ್ಯುಮ್ನನು ತನ್ನ ಪತ್ನಿಯಿಂದ ಉಪದಿಷ್ಟನಾದ ಮಂತ್ರದ ಬಲದಿಂದ ಎಲ್ಲಾ ಮಾಯೆಗಳನ್ನೂ ನಾಶ ಮಾಡಿದನು. ಖಡ್ಗದಿಂದ ಶಂಬರಾಸುರನ ಶಿರಸ್ಸನ್ನು ಛೇದಿಸಿದನು. ಅವನ ತಲೆಯು ಮರು ಕ್ಷಣದಲ್ಲಿಯೇ ಕೆಳಗೆ ಉರುಳಿ ಬಿತ್ತು.

ಶಂಬರಾಸುರನನ್ನು ಸಂಹರಿಸಿದ ಪ್ರದ್ಯುಮ್ನನು ಮರುಕ್ಷಣದಲ್ಲಿ ತನ್ನ ಪತ್ನಿಯಾದ ರತೀದೇವಿಯನ್ನು ಕರೆದುಕೊಂಡು ಆಕಾಶಮಾರ್ಗವಾಗಿ ಅದೇ ಮಂತ್ರದ ಬಲದಿಂದ ಅಲ್ಲಿಂದ ದ್ವಾರಕೆಗೆ ಹೊರಟನು. ರುಕ್ಮಿಣೀದೇವಿಯರೂ ಶ್ರೀಕೃಷ್ಣದೇವನೂ ಸರ್ವಜ್ಞರು, ಅವರಿಬ್ಬರೂ ಆಕಾಶ ಮಾರ್ಗದಿಂದ ಬರುತ್ತಿರುವ ಪ್ರದ್ಯುಮ್ನನನ್ನು ನೋಡಿದರು. ಅನೇಕ ವರ್ಷಗಳಿಗಿಂತ ಹಿಂದೆ ಪ್ರಸವ ಗೃಹದಿಂದ ಅದೃಶ್ಯನಾದ ಪ್ರದ್ಯುಮ್ನನನ್ನು ಸ್ಮರಿಸಿದರು. ಪ್ರದ್ಯುಮ್ನನಲ್ಲಿ ಶ್ರೀಕೃಷ್ಣದೇವನ ಆಕಾರದ ಸಾದೃಶ್ಯವನ್ನು ನೋಡಿ ಅವನೇ ತಮ್ಮ ಮಗನಾಗಿರಬಹುದೆಂದು ಯೋಚಿಸುತ್ತಿರುವಂತೆ ನಟಿಸಿದರು. ಆಗ ನಾರದರು ಅಲ್ಲಿಗೆ ಬಂದರು. ಅವನೇ ಶ್ರೀಕೃಷ್ಣದೇವನ ಮಗನಾದ ಪ್ರದ್ಯುಮ್ನನೆಂದೂ, ಶಂಬರಾಸುರನನ್ನು ಸಂಹರಿಸಿ ತನ್ನ ಪತ್ನಿಯಾದ ರತೀದೇವಿಯೊಡನೆ ಬರುತ್ತಿರುವನೆಂದೂ ತಿಳಿಸಿದರು.

ಶ್ರೀರುಕ್ಮಿಣೀದೇವಿಯೂ ಶ್ರೀಕೃಷ್ಣದೇವನೂ ಬಲರಾಮ ಮುಂತಾದ ಸಕಲ ಯಾದವರೂ ತಾತನಾದ ವಸುದೇವನೂ ಮಹಾವೈಭವದಿಂದ ಅವನನ್ನು ಸ್ವಾಗತಿಸಿದರು. ಸರ್ವರಿಂದಲೂ ಲಾಲಿಸಲ್ಪಟ್ಟವನಾಗಿ ಸುಖವಾಗಿ ವಾಸಿಸಿದನು.

# ಪೌಂಡ್ರಕ ವಧ

**(೯೧) ಭ್ರಾತೃವ್ಯಂ ಪೌಂಡ್ರಕಾಖ್ಯಂ ಪುರರುಧಂ ಕೃತ್ತಶೀರ್ಷಂ ಅತನೋತ್.**

ಪೌಂಡ್ರಕವಾಸುದೇವ ಎಂಬ ದಾಯಾದಿ ಮಾತ್ಸರ್ಯದಿಂದ ಯುಕ್ತನಾದ ಶತ್ರುವಿನ ಶಿರಸ್ಸನ್ನು ಛೇದಿಸಿದನು.

ವಿಶೇಷಾರ್ಥ - ಕದಾಚಿತ್ಸಸ್ಯ ಬದರಿಕಾವಸ್ಥಾನಸಮಯೇ ದ್ವಾರಕೋಪದ್ರವಾರ್ಥಂ ರಾತ್ರೌ ಸಮಾಗತಂ ಪೂರ್ವಂ ವಸುದೇವಾತ್ ದಿತಿಸ್ವರೂಪಭೂತಾಯಾಂ ಕಾಶಿರಾಜಸ್ಯ ಪುತ್ರ್ಯಾಂ ಪುತ್ರಿಕಾಪುತ್ರನ್ಯಾಯೇನ ಜಾತಂ ಪೌಂಡ್ರಕವಾಸುದೇವಾಖ್ಯಂ ವೇನಸ್ವರೂಪಂ ಸುವರ್ಣಗರುಡಾದ್ಯುಪೇತಂ ಸ್ವಶತ್ರುಂ ಬಲರಾಮಾದಿಭಿಃ ಪರಾಜಿತಂ ಪುನಃ ಕಾಶೀಂ ಪ್ರತಿ ಗತಂ ಬದರಿಕಾಶ್ರಮಾದಾಗತ್ಯ ಶ್ರುತ್ವಾ ಪೌಂಡ್ರಕವಾಸುದೇವೇನ ಯುದ್ಧಾರ್ಥಮಾಹೂತಃ ಕಾಶೀಂ ಪ್ರತಿ ಗತ್ವಾ ತಸ್ಯ ಶಿರಶ್ಛಿತ್ವಾ ದ್ವಾರಕಾಂ ಪ್ರಾಪ್ಯ.

# ಪೌಂಡ್ರಕವಾಸುದೇವ

ವಿಶೇಷಾರ್ಥ ವಿವರಣ - ವಸುದೇವನು ದೇವಕೀ ಮುಂತಾದ ಸ್ತ್ರೀಯರನ್ನು ವಿವಾಹ ಮಾಡಿಕೊಳ್ಳುವುದಕ್ಕಿಂತ ಪೂರ್ವದಲ್ಲಿ ಕಾಶೀಯಾತ್ರೆಗೆ ಹೋಗಿದ್ದನು. ಕಾಶೀರಾಜನಿಗೆ ಗಂಡು ಮಕ್ಕಳಿರಲಿಲ್ಲ. ತನ್ನ ಮಗಳಲ್ಲಿ ಹುಟ್ಟಿದ ಗಂಡುಮಗನನ್ನು ತನಗೆ ದತ್ತು ಕೊಡಬೇಕೆಂದು ಮೊದಲೇ ವಾಗ್ದಾನವನ್ನು ತೆಗೆದುಕೊಂಡು ತನ್ನ ಮಗಳನ್ನು ವಸುದೇವನಿಗೆ ವಿವಾಹಮಾಡಿಕೊಟ್ಟನು. ಈ ರೀತಿ ಕನ್ಯಾದಾನವನ್ನು ಮಾಡುವುದು ಪುತ್ರಿಕಾಪುತ್ರಧರ್ಮವೆನಿಸುತ್ತದೆ. ಆ ಸ್ತ್ರೀಯರಲ್ಲಿ ಒಬ್ಬ ಗಂಡುಮಗನು ಹುಟ್ಟಿದನು. ಅವನು "ಪೌಂಡ್ರಕ" ಎಂದು ಕರೆಯಲ್ಪಟ್ಟು ಪ್ರಸಿದ್ಧನಾದನು. ವಸುದೇವನ ಮಗನಾದ್ದರಿಂದ "ಪೌಂಡ್ರಕ ವಾಸುದೇವ" ಎಂದು ಪ್ರಸಿದ್ಧನಾದನು. ಪೌಂಡ್ರಕವಾಸುದೇವನು ಹುಟ್ಟಿದ ಕೂಡಲೇ ವಿವಾಹಕಾಲದಲ್ಲಿ ಮಾಡಿಕೊಂಡ ಕರಾರಿನಂತೆ ವಸುದೇವನು ಅವನನ್ನು ಕಾಶಿರಾಜನಿಗೆ ಸಮರ್ಪಿಸಿದನು.

ಕಾಶಿಯಿಂದ ಮಥುರಾಪಟ್ಟಣಕ್ಕೆ ಹಿಂದಿರುಗಿ ಬಂದನು. ಅನಂತರದಲ್ಲಿ ದೇವಕೀ ಮುಂತಾದ ದೇವಕರಾಜನ ಕುಮಾರಿಯನ್ನು ವಿವಾಹಮಾಡಿಕೊಂಡನು. ದೇವಕೀದೇವಿಯ ವಿವಾಹದಿಂದ ಹಿಂದಿರುಗಿ ತನ್ನ ಮನೆಗೆ ಹೋಗುತ್ತಿರುವಾಗಲೇ "ಎಲೋ ಕಂಸಾ, ಈ ದೇವಕೀದೇವಿಯ ಎಂಟನೆಯ ಮಗನೇ ನಿನಗೆ ಮೃತ್ಯು" ಎಂದು ಅಶರೀರವಾಣಿಯಾಯಿತು. ಆ ಮಾತುಗಳನ್ನು ಕೇಳಿದ ಕಂಸನು ವಸುದೇವನನ್ನೂ ದೇವಕೀದೇವಿಯನ್ನೂ ಜೈಲಿನಲ್ಲಿಟ್ಟನು. ಆಮೇಲೆ ಕಾಶಿಗೆ ಹೋಗಲೇ ಇಲ್ಲ. ಪೌಂಡ್ರಕವಾಸುದೇವನು ತನ್ನ ತಾಯಿಯನ್ನು ವಸುದೇವನು ಬಿಟ್ಟು ಬಿಟ್ಟನೆಂದು ತೀರ್ಮಾನಿಸಿದನು. ತನಗೆ ತಮ್ಮನು ಹುಟ್ಟದಿರುವ ಕೋಪದಿಂದಲೂ ತನ್ನ ತಾಯಿಯನ್ನು ತಿರಸ್ಕರಿಸಿದ ಕೋಪದಿಂದಲೂ ಅಂದಿನಿಂದಲೂ ವಸುದೇವನ ಬಂಧುಗಳಾದ ಸಕಲ ಯಾದವರಲ್ಲಿಯೂ ದ್ವೇಷವನ್ನಿಟ್ಟಿದ್ದನು. ಅವನ ತಾಯಿಯು ಹಿಂದಿನ ಜನ್ಮದಲ್ಲಿ ಕಶ್ಯಪರ ಪತ್ನಿಯಾದ ದಿತಿ ಎಂಬ ದೈತ್ಯರ ತಾಯಿಯು. ಕಾಶೀರಾಜನ ಪತ್ನಿಯಾಗಿ ಹುಟ್ಟಿದ್ದಳು. ಪೌಂಡ್ರಕವಾಸುದೇವನು ಹಿಂದಿನ ಜನ್ಮದಲ್ಲಿ ಅಂಗರಾಜನ ಮಗನಾದ

"ವೇನ" ಎಂಬ ನೀಚನಾಗಿದ್ದನು. "ನಾನೇ ಪರಬ್ರಹ್ಮನು" ಎಂಬ ದುರ್ಬುದ್ಧಿಯು ಈ ಜನ್ಮದಲ್ಲಿಯೂ ಅವನಲ್ಲಿ ಪೂರ್ಣವಾಗಿತ್ತು.

ಶ್ರೀಕೃಷ್ಣದೇವನ ಮೇಲೆ ಅವನಿಗೆ ಪೂರ್ಣವಾದ ಕೋಪವಿತ್ತು. ಆದರೆ ಶ್ರೀಕೃಷ್ಣದೇವನು ಊರಿನಲ್ಲಿರುವಾಗ ಅವನಿಂದ ಯಾವ ವಿಧವಾದ ವಿರೋಧವನ್ನೂ ಮಾಡಲು ಸಾಧ್ಯವಾಗಲಿಲ್ಲ. ಶ್ರೀಕೃಷ್ಣದೇವನು ಸಂತತಿಪ್ರಾಪ್ತಿಗಾಗಿ ಕೈಲಾಸಯಾತ್ರೆಗೆ ಹೊದದ್ದನ್ನು ತಿಳಿದನು. ಕೈಲಾಸಯಾತ್ರೆಗೆ ಹೋದವನು ಕೂಡಲೇ ಹಿಂದಿರುಗಲಾರನೆಂದೂ, ಅವನಿಲ್ಲದಿರುವ ಸಮಯದಲ್ಲಿ ಸಕಲ ಯಾದವರನ್ನೂ ಸಂಹರಿಸಬೇಕೆಂದೂ ತೀರ್ಮಾನಿಸಿದನು. ರಾತ್ರಿಕಾಲದಲ್ಲಿ ಯುದ್ಧಕ್ಕಾಗಿ ದ್ವಾರಕೆಗೆ ಬಂದನು. ಈ ವಿಷಯವನ್ನು ತಿಳಿದ ಬಲರಾಮ ಮುಂತಾದವರು ಯುದ್ಧಕ್ಕಾಗಿ ಹೊರಟರು. ಅವರಿಂದ ಪೌಂಡ್ರಕ ವಾಸುದೇವನ ಪರಾಜಿತನಾಗಿ ಕಾಶೀಪುರಿಗೆ ಹಿಂದಿರುಗಿದನು.

ಶ್ರೀಕೃಷ್ಣದೇವನು ಬದರೀಕ್ಷೇತ್ರದಿಂದ ಹಿಂದಿರುಗಿದನು. ದ್ವಾರಕಾಪಟ್ಟಣದವನ್ನು ನೋಡಿದನು. ನಾನಾವಿಧವಾದ ಆಯುಧಗಳ ಮಳೆಯಿಂದ ದ್ವಾರಕಾಪಟ್ಟಣದಲ್ಲಿ ಏರ್ಪಟ್ಟ ದುರವಸ್ಥೆಯನ್ನು ನೋಡಿದನು. ಯಾದವರಲ್ಲಿ ಕಾರಣವನ್ನು ಕೇಳಿ ಅವರಿಂದ ಎಲ್ಲಾ ವಿಷಯಗಳನ್ನೂ ತಿಳಿದನು. ಪೌಂಡ್ರಕವಾಸುದೇವನನ್ನು ಸಂಹರಿಸಬೇಕೆಂದು ತೀರ್ಮಾನಿಸಿದನು.

ಅದೇ ಸಮಯದಲ್ಲಿ ಪೌಂಡ್ರಕವಾಸುದೇವನಿಂದ ಕಳುಹಿಸಲ್ಪಟ್ಟ ದೂತನು ಬಂದನು. ಸುಧರ್ಮಾ ಎಂಬ ಸಭೆಯಲ್ಲಿ ಕುಳಿತಿರುವ ಶ್ರೀಕೃಷ್ಣದೇವನನ್ನು ನಮಸ್ಕರಿಸಿದನು. "ಓ ಶ್ರೀಕೃಷ್ಣದೇವ, ನಮ್ಮ ಮಹಾರಾಜನು ಹೇಳಿಕಳುಹಿಸಿರುವ ಮಾತುಗಳನ್ನು ಹೇಳುವೆನು. ನನ್ನನ್ನು ಮನ್ನಿಸು" ಎಂದು ಹೇಳಿದನು. ಅನಂತರದಲ್ಲಿ ಪೌಂಡ್ರಕವಾಸುದೇವನು ಹೇಳಿಕಳುಹಿಸಿರುವ ಮಾತುಗಳನ್ನು ತಿಳಿಸಿದನು. "ನಾರಾಯಣನು ವಸುದೇವನ ಮಗನಾಗಿ ಅವತರಿಸಿರುವುದಾಗಿ ಜ್ಞಾನಿಗಳು ಹೇಳುತ್ತಿದ್ದಾರೆ. ಜ್ಞಾನಿಗಳು ಹೇಳುವ ಮಾತುಗಳು ಸುಳ್ಳಾಗಲಾರವು. ಆದ್ದರಿಂದ ನಾರಾಯಣನು ವಸುದೇವನ ಮಗನಾಗಿ ಹುಟ್ಟಿರುವುದು ನಿಜ. ವಸುದೇವನಿಗೆ ಅನೇಕ ಮಕ್ಕಳು ಇದ್ದಾರೆ. ನೀನು ಹೇಗೆ ವಸುದೇವನ ಮಗನೋ ನಿನ್ನಂತೆ ನಾನೂ ವಸುದೇವನ ಮಗನು. ನಾರಾಯಣನ ಅವತಾರವಾಗಿರುವ ವಸುದೇವನ ಮಗನು ನೀನಲ್ಲ. ನಾನು ಲೋಕಗಳಲ್ಲಿರುವ ಜನರಲ್ಲಿರುವ ಕರುಣೆಯಿಂದ ವಾಸುದೇವ ಎಂಬ ಹೆಸರಿನಿಂದ ಅವತರಿಸಿರುವೆನು. ಆದರೆ ನೀನು ತಾನೇ ನಾರಾಯಣನ ಅವತಾರವೆಂದು ಹೇಳುತ್ತಾ ನಾರಾಯಣನ ಸೊತ್ತುಗಳಾಗಿರುವ ಸುದರ್ಶನ ಚಕ್ರ, ಪಾಂಚಜನ್ಯ ಶಂಖ, ಕೌಮೋದಕೀ ಗದೆ, ನಂದಕಖಡ್ಗ ಮುಂತಾದವುಗಳನ್ನು ಸ್ವಾಧೀನಪಡಿಸಿಕೊಂಡಿರುವಿ. ನಾರಾಯಣನ ಅವತಾರವಾಗಿರುವ ನನಗೆ ದ್ರೋಹವನ್ನು ಮಾಡುತ್ತಿರುವಿ. ನಿನಗೆ ನನ್ನಂತೆ ವಾಸುದೇವ ಎಂಬ ಹೆಸರಿರುವುದರಿಂದ ಇಂತಹ ಮೋಸವನ್ನು ಮಾಡುತ್ತಿರುವಿ. ಆದ್ದರಿಂದ ಇಂದಿನಿಂದ "ವಾಸುದೇವ" ಎಂಬ ಹೆಸರನ್ನು ಹೇಳಿಕೊಳ್ಳ ಕೂಡದು. ನನ್ನ ಆಯುಧಗಳಾಗಿರುವ ಸುದರ್ಶನಚಕ್ರ ಮುಂತಾದ ಆಯುಧಗಳನ್ನು ಧರಿಸಕೂಡದು. ಅವುಗಳನ್ನೆಲ್ಲಾ ನನಗೆ ಸಮರ್ಪಿಸಿ ನನ್ನಲ್ಲಿ ಶರಣಾಗತನಾಗಬೇಕು. ಇದು ನನ್ನ ಆಜ್ಞೆ. ಈ ಆಜ್ಞೆಯನ್ನು ಮೀರಿದರೆ ನನ್ನ ಜೊತೆಯಲ್ಲಿ ಯುದ್ಧಕ್ಕೆ ಬಾ" ಎಂದು ಪೌಂಡ್ರಕವಾಸುದೇವನು ಹೇಳಿಕಳುಹಿಸಿದ ಮಾತುಗಳನ್ನು ಹೇಳಿದನು.

ಮೂರ್ಖನಾದ ಪೌಂಡ್ರಕವಾಸುದೇವನು ತನ್ನ ದೂತನ ಮೂಲಕವಾಗಿ ಬೊಗಳಿದ್ದನ್ನು ಕೇಳಿದ ಉಗ್ರಸೇನ

ಮುಂತಾದ ಸಭಿಕರು ಗಟ್ಟಿಯಾಗಿ ನಕ್ಕರು. ಎಲ್ಲರೂ ಅಪಹಾಸವನ್ನು ಮಾಡಿದರು. ಶ್ರೀಕೃಷ್ಣದೇವನು ಆ ದೂತನನ್ನು ಕರೆದನು. "ಎಲೋ ದೂತನೇ, ನಿನ್ನ ಯಜಮಾನನು ಹೇಳಿದಂತೆ ಯುದ್ಧಕ್ಕಾಗಿ ಬರುವೆವು. ಸುದರ್ಶನಚಕ್ರ ಮುಂತಾದ ಆಯುಧಗಳನ್ನು ಅವನ ಮೇಲೆ ಎಸೆಯುವೆವು. ಅವನು ಶಕ್ತನಾಗಿದ್ದರೆ ಅವನ ಆಯುಧಗಳನ್ನು ಸ್ವೀಕರಿಸಲಿ" ಎಂದು ಹೇಳಿದನು. ಕಾಶಿಗೆ ದಿಗ್ವಿಜಯಕ್ಕಾಗಿ ಶ್ರೀಕೃಷ್ಣದೇವನು ಹೊರಟನು.

ಪೌಂಡ್ರಕವಾಸುದೇವನು ತಾನೇ ನಾರಾಯಣನ ಅವತಾರನೆಂದು ಹೇಳಿದನಲ್ಲವೇ? ನಾರಾಯಣನ ಅವತಾರನಾಗಿದ್ದರೆ ನಾರಾಯಣನಂತೆ ನಾಲ್ಕು ಕೈಗಳೂ ಸುದರ್ಶನಚಕ್ರ ಮುಂತಾದ ಆಯುಧಗಳೂ ಶ್ರೀವತ್ಸಚಿಹ್ನೆ ಮುಂತಾದ ಮಚ್ಚೆಗಳೂ ಇರಬೇಡವೇ? ರಥದ ಮೇಲೆ ತಾನು ಕುಳಿತನು. ಎರಡು ಕೈಗಳ ಮೇಲೆ ಭಂಗಾರದ ಎರಡು ಕೈಗಳನ್ನು ಕಟ್ಟಿಕೊಂಡನು. ಭಂಗಾರದ ಕೆಲಸದವರಿಂದ ಭಂಗಾರದ ಚಕ್ರ, ಭಂಗಾರದ ಕಟ್ಟು ಹಾಕಿರುವ ಶಂಖ, ಗದಾ, ಖಡ್ಗ ಮುಂತಾದವುಗಳನ್ನು ತಯಾರು ಮಾಡಿಸಿಕೊಂಡು ನಾಲ್ಕು ಕೈಗಳಲ್ಲಿ ಧರಿಸಿದನು. ಇದನ್ನೆಲ್ಲವನ್ನೂ ಸಿದ್ಧಪಡಿಸುವುದಕ್ಕೆ ಶ್ರಮವಾಗಲಿಲ್ಲ. ಎದೆಯಲ್ಲಿ ಶ್ರೀವತ್ಸ ಎಂಬ ಚಿಹ್ನವನ್ನು ಸಂಪಾದಿಸಬೇಕಾಗಿತ್ತು. ಅದಕ್ಕಾಗಿ ಎದೆಯ ಎಡಭಾಗದಲ್ಲಿ ಕಬ್ಬಿಣದ ಸೌಟನ್ನು ಕಾಸಿ ಬರೆಯನ್ನು ಇಟ್ಟುಕೊಂಡನು. ಆ ಬರೆಯು ಕಪ್ಪಾಗಿ ಮಚ್ಚೆಯಂತೆ ಕಾಣಿಸಿತು. ಇವನ ಈ ವೇಷವನ್ನು ನೋಡಿದ ಬ್ರಾಹ್ಮಣರು ಇವನನ್ನು ನಿಂದಿಸಿದರು.

ಶ್ರೀಕೃಷ್ಣದೇವನು ಇವನನ್ನು ನೋಡಿದನು. "ಎಲೋ ಪೌಂಡ್ರಕವಾಸುದೇವಾ, ನೀನು ನಾರಾಯಣನ ಅವತಾರನಲ್ಲವೇ? ಇದೋ, ನಿನ್ನ ಸುದರ್ಶನ ಚಕ್ರವನ್ನು ಬಿಸಾಡುವೆನು. ಶಕ್ತನಾಗಿದ್ದರೆ ಸ್ವೀಕರಿಸು" ಎಂದು ಹೇಳಿ ಬಿಸಾಡಿದನು. ಆ ಚಕ್ರವು ಅವನ ಶಿರಸ್ಸನ್ನು ಕತ್ತರಿಸಿತು. ಶ್ರೀಕೃಷ್ಣದೇವನು ಪೌಂಡ್ರಕವಾಸುದೇವನನ್ನು ಸಂಹರಿಸಿ ದ್ವಾರಕೆಗೆ ಹಿಂದಿರುಗಿದನು.

(೯೨) ತದೀಯಾಪತ್ಯೋತ್ಪನ್ನಾಂ ಕೃತ್ಯಾಂ ಚ ರಥಚರಣರುಚಾ ಕಾಲಯನ್ ಕಾಮಧುತ್ ಸ್ಯಾತ್.

ಪೌಂಡ್ರಕವಾಸುದೇವನ ಮಗನಾದ ಸುದಕ್ಷಿಣನಿಂದ ಸೃಷ್ಟಿಸಲ್ಪಟ್ಟ ಅಭಿಚಾರದೇವತೆಯನ್ನು ಸುದರ್ಶನಚಕ್ರದ ತೇಜಸ್ಸಿನಿಂದ ನಾಶಮಾಡಿದ ಶ್ರೀಕೃಷ್ಣದೇವನು ನಮ್ಮೆಲ್ಲರ ಇಷ್ಟಾರ್ಥಗಳನ್ನು ಪೂರೈಸಲಿ.

ವಿಶೇಷಾರ್ಥ - ಪೌಂಡ್ರಕವಾಸುದೇವಸುತೇನ ಸುದಕ್ಷಿಣಾಖ್ಯೇನ ಸ್ವಪಿತೃಹನನಕೋಪೇನ ದ್ವಾರಕಾನಾಶಾರ್ಥಂ ರುದ್ರಂ ಪ್ರತಿ ತಪಃ ಕೃತ್ವಾ ಅಭಿಚಾರವಿಧಾನೇನ ದಕ್ಷಿಣಾಗ್ನಾವುತ್ಪಾದಿತಾಮಗ್ನಿರೂಪಾಂ ಭಯಂಕರಕರಚರಣಾದ್ಯುಪೇತಾಮಸುರಾವೇಶಾದ್ದ್ವಾರಕಾಂ ಪ್ರತಿ ಪ್ರಾಪ್ತಾಂ ಕೃತ್ಯಾಂ ಜಾಜ್ವಲ್ಯಮಾನೇನಾತಿ-ಭಯಂಕರೇಣ ಸ್ವಚಕ್ರೇಣ ಪಲಾಯಿತಾಂ ಕೃತ್ವಾ ತಯಾ ಕೃತ್ಯಯಾ ವಾರಾಣಸೀಸ್ಥ ಸುದಕ್ಷಿಣಮಭಿಚಾರಕರ್ಮ-ಕರ್ತಾರಂ ನಾಶಯಿತ್ವಾ ತದೀಯಾನ್ ಸರ್ವಾನ್ ಸ್ವಚಕ್ರೇಣ ನಾಶಯಿತ್ವಾ ಪುನಃ ಸುದರ್ಶನಂ ಪ್ರಾಪ್ಯ ಸರ್ವಾನತೋಷಯತ್.

## ಸುದಕ್ಷಿಣ ಸಂಹಾರ

ವಿಶೇಷಾರ್ಥ ವಿವರಣ - ಪೌಂಡ್ರಕವಾಸುದೇವನ ತಲೆಯು ಕತ್ತರಿಸಲ್ಪಟ್ಟಿತು ಎಂದು ಹೇಳಿದೆವು. ಆ

ತಲೆಯು ರಣರಂಗದಿಂದ ಹಾರುತ್ತಾ ಬಂದು ಕಾಶೀಕ್ಷೇತ್ರದ ಮಹಾದ್ವಾರದಲ್ಲಿ ಬಿತ್ತು. ಅದನ್ನು ನೋಡಿದ ಕಾಶೀವಾಸಿಗಳು ಇದು ಯಾರ ತಲೆ? ಎಲ್ಲಿಂದ ಬಂತು? ಎಂದು ಸಂಶಯದಿಂದ ಯುಕ್ತರಾದರು. ದೃಷ್ಟಿಸಿ ನೋಡಿದಾಗ ತಮ್ಮ ಮಹಾರಾಜನ ತಲೆ ಎಂದು ತಿಳಿಯಿತು. ಅಯ್ಯೋ, ಎಂದು ಕೂಗಿದರು.

ಪೌಂಡ್ರಕವಾಸುದೇವನ ಮಗನಾದ ಸುದಕ್ಷಿಣನು ತನ್ನ ತಂದೆಯ ಮರಣಾನಂತರದಲ್ಲಿ ಮಾಡಬೇಕಾದ ಎಲ್ಲಾ ಕಾರ್ಯಗಳನ್ನೂ ಮಾಡಿ ಮುಗಿಸಿದನು. ತನ್ನ ತಂದೆಯನ್ನು ಕೊಂದಿರುವವನನ್ನು ಸಂಹರಿಸಬೇಕೆಂದು ತೀರ್ಮಾನಿಸಿದನು. ತನ್ನ ತಂದೆಯನ್ನು ಕೊಂದವನನ್ನು ಸಂಹರಿಸಿಬಿಟ್ಟರೆ ತನ್ನ ತಂದೆಯ ಋಣವು ತೀರುತ್ತದೆ ಎಂದು ಸಂಕಲ್ಪಿಸಿ ತನ್ನ ಪುರೋಹಿತರನ್ನು ಕರೆಯಿಸಿದನು. ಪುರೋಹಿತರಿಂದ ಸಹಿತನಾಗಿ ಕಾಶೀವಾಸಿಯಾದ ರುದ್ರದೇವನನ್ನು ಕುರಿತು ತಪಸ್ಸನ್ನು ಮಾಡಿದನು. ರುದ್ರದೇವನು ಪ್ರಸನ್ನನಾದನು.

"ದಕ್ಷಿಣಾಗ್ನಿಯಲ್ಲಿ ಅಭಿಚಾರವಿಧಿಯಿಂದ ಹೋಮವನ್ನು ಮಾಡು. ಅಗ್ನಿಕುಂಡದಿಂದ ಭಯಂಕರವಾದ ಅಗ್ನಿಯು ಬರುತ್ತದೆ. ಕೈಗಳು, ಕಾಲುಗಳು ಮುಂತಾದ ಅವಯವಗಳಿಂದ ಯುಕ್ತವಾದ ಭಯಂಕರವಾದ ಆ ಅಗ್ನಿಯು ನನ್ನ ಪ್ರಮಥಗಣಗಳಿಂದ ಸಹಿತವಾಗಿ ಇಲ್ಲಿಂದ ಹೊರಡುತ್ತದೆ. ನಿನ್ನ ತಂದೆಯನ್ನು ಕೊಂದವನು ಎಲ್ಲಿದ್ದರೂ ಅವನನ್ನೂ ವಾಸಿಸುತ್ತಿರುವ ಪಟ್ಟಣವನ್ನೂ ಬೂದಿಯಾಗುವಂತೆ ಮಾಡಿ ಹಿಂದಿರುಗುತ್ತದೆ. ಆದರೆ ಅವನು ಬ್ರಾಹ್ಮಣರಲ್ಲಿ ವಿಶೇಷ ಪ್ರೀತಿಯುಳ್ಳವನಾಗಿದ್ದರೆ ಮಾತ್ರ ಅವನನ್ನೂ ಅವನ ಪಟ್ಟಣವನ್ನೂ ಸುಡಲಾರದು" ಎಂದು ವರವನ್ನು ಕೊಟ್ಟನು.

ಸುದಕ್ಷಿಣನು ದಕ್ಷಿಣಾಗ್ನಿಯಲ್ಲಿ ಅಭಿಚಾರವಿಧಿಯಿಂದ ಹೋಮವನ್ನು ಮಾಡಿದನು. ಅಗ್ನಿರೂಪವಾದ ಅಭಿಚಾರದೇವತೆಯು ಬಂತು. ಅತಿಭಯಂಕರವಾದ ಕರಚರಣಾದ್ಯವಯವಗಳಿಂದ ಯುಕ್ತವಾಗಿ ದ್ವಾರಕೆಗೆ ಅಭಿಮುಖವಾಗಿ ಓಡಿತು. ಆ ಅಗ್ನಿಯು ಕಾದಿರುವ ತಾಮ್ರದಂತೆ ಕೆಂಪಾದ ಜಡೆ ಮತ್ತು ಮೀಸೆಗಳಿಂದಲೂ ಕೆಂಡಗಳನ್ನು ಕಕ್ಕುತ್ತಿರುವ ಕಣ್ಣುಗಳಿಂದಲೂ ಅತಿ ಭಯಂಕರವಾಗಿತ್ತು. ಕೋರೆ ಹಲ್ಲುಗಳಿಂದಲೂ ಉಗ್ರವಾದ ಹುಬ್ಬುಗಳಿಂದಲೂ ಕಠೋರವಾಗಿತ್ತು. ತನ್ನ ನಾಲಿಗೆಯಿಂದ ತುಟಿಗಳನ್ನು ನೆಕ್ಕುತ್ತಾ ಬತ್ತಲೆಯಾಗಿ ತನ್ನ ಕೈಗಳಿಂದ ತ್ರಿಶೂಲವನ್ನು ತಿರುಗಿಸುತ್ತಾ ಬಂತು. ತಾಳವೃಕ್ಷದಷ್ಟು ಎತ್ತರವಾದ ಎರಡು ಕಾಲುಗಳಿಂದ ಭೂಮಿಯನ್ನು ನಡುಗಿಸುತ್ತಾ ಬಂತು. ಹತ್ತು ದಿಕ್ಕುಗಳನ್ನು ಸುಡುತ್ತಾ ದ್ವಾರಕೆಗೆ ಬಂತು. ಅಭಿಚಾರವಿಧಿಯಿಂದ ಉತ್ಪನ್ನವಾದ ಅಗ್ನಿಯನ್ನು ದ್ವಾರಕಾವಾಸಿಗಳು ನೋಡಿದರು. ತಮ್ಮ ಸುತ್ತಲೂ ಬರುತ್ತಿರುವ ಕಾಡ್ಗಿಚ್ಚನ್ನು ನೋಡುತ್ತಿರುವ ಮೃಗಗಳಂತೆ ತುಂಬಾ ಹೆದರಿದರು. ಆಗ ಶ್ರೀಕೃಷ್ಣದೇವನು ಸಭೆಯಲ್ಲಿ ಉದ್ಧವ ಮುಂತಾದ ಮಿತ್ರರೊಡನೆ ಚದುರಂಗ ಆಟವನ್ನು ಆಡುತ್ತಿದ್ದನು. ಪಟ್ಟಣವಾಸಿಗಳೆಲ್ಲರೂ ಹೆದರಿದವರಾಗಿ ಅಲ್ಲಿಗೆ ಓಡಿಬಂದರು. "ಮೂರು ಲೋಕಗಳ ಅಧಿಪತಿಯಾದ ಶ್ರೀಕೃಷ್ಣದೇವನೇ, ಭಯಂಕರವಾದ ಅಗ್ನಿಯು ನಮ್ಮ ಪಟ್ಟಣವನ್ನು ಸುಡುತ್ತಿದೆ. ನೀನು ಪಟ್ಟಣವನ್ನೂ ನಮ್ಮನ್ನೂ ರಕ್ಷಿಸು" ಎಂದು ಕೂಗಿದರು.

ಶ್ರೀಕೃಷ್ಣದೇವನು ತನ್ನ ಭಕ್ತರಾದ ದ್ವಾರಕಾವಾಸಿಗಳಿಗೆ ಏರ್ಪಟ್ಟ ಭಯವನ್ನೂ ಕಷ್ಟವನ್ನೂ ನೋಡಿದನು. ಶರಣಾಗತರಕ್ಷಕನಾದ ಆ ಮಹಾಸ್ವಾಮಿಯು ನಗುತ್ತಾ "ಹೆದರಬೇಡಿರಿ. ರಕ್ಷಕನಾಗಿರುವ ನಾನಿರುವಾಗ ನಿಮಗೆ ಭಯವೇಕೆ?" ಎಂದನು. ಸರ್ವಜೀವರ ಒಳಗೂ ಹೊರಗೂ ಸಾಕ್ಷಿಯಾಗಿರುವ ಶ್ರೀಕೃಷ್ಣದೇವನು" ಇದು

ರುದ್ರನಿಂದ ಸೃಷ್ಟಿಸಲ್ಪಟ್ಟ ಅಭಿಚಾರದೇವತೆ" ಎಂದು ತಿಳಿದನು. ತನ್ನ ಪಕ್ಕದಲ್ಲಿ ಪರಮಶಾಂತಮೂರ್ತಿಯಿಂದ ಮಲಗಿರುವ ಸುದರ್ಶನ ಚಕ್ರವನ್ನು ನೋಡಿದನು. ಅಭಿಚಾರಾಗ್ನಿಯನ್ನು ಓಡಿಸುವಂತೆ ಆಜ್ಞಾಪಿಸಿದನು.

ಮರುಕ್ಷಣದಲ್ಲಿ ಸುದರ್ಶನಚಕ್ರವು ಹೊರಟಿತು. ಆ ಕ್ಷಣದಲ್ಲಿ ಕೋಟಿಸೂರ್ಯರಂತೆ ಪ್ರಕಾಶದಿಂದ ಯುಕ್ತವಾಯಿತು. ಪ್ರಳಯಕಾಲದ ಅಗ್ನಿಯ ಜ್ವಾಲೆಯಿಂತೆ ಜ್ವಾಲೆಯಿಂದ ಯುಕ್ತವಾಯಿತು. ಅದರ ತೇಜಸ್ಸಿನಿಂದ ಹತ್ತು ದಿಕ್ಕುಗಳಲ್ಲಿಯೂ ಬೆಳಕು ಏರ್ಪಟ್ಟಿತು. ಈ ಸುದರ್ಶನಚಕ್ರವು ಅಭಿಚಾರಾಗ್ನಿಯನ್ನು ಪೀಡಿಸಿತು. ಆ ಅಭಿಚಾರಾಗ್ನಿಯು ಪರಾಜಿತವಾಗಿ ಹಿಂದಿರುಗಿತು. ಕಾಶಿಯನ್ನೂ ಸುದಕ್ಷಿಣನನ್ನೂ ಅವನ ಪುರೋಹಿತರನ್ನೂ ಸುಟ್ಟು ಬೂದಿ ಮಾಡಿತು. ಶ್ರೀಕೃಷ್ಣದೇವನನ್ನೂ ಅವನ ಪಟ್ಟಣವನ್ನೂ ಸುಡುವುದಕ್ಕಾಗಿ ಸೃಷ್ಟಿ ಮಾಡಿದ ಅಭಿಚಾರಾಗ್ನಿಯು ಸುದಕ್ಷಿಣನನ್ನೂ ಅವನ ಪಟ್ಟಣವನ್ನೂ ಅವನ ಪುರೋಹಿತರನ್ನೂ ಸುಟ್ಟು ಬೂದಿ ಮಾಡಿತು. ಅನಂತರದಲ್ಲಿ ಸುದರ್ಶನಚಕ್ರವು ಸುದಕ್ಷಿಣನ ಬಂಧುಗಳನ್ನೆಲ್ಲರನ್ನೂ ಸುಟ್ಟು ಬೂದಿ ಮಾಡಿತು. ದ್ವಾರಕಾಪಟ್ಟಣಕ್ಕೆ ಹಿಂದಿರುಗಿತು. ಶ್ರೀಕೃಷ್ಣದೇವನ ಪಕ್ಕದಲ್ಲಿ ಶಾಂತಮೂರ್ತಿಯಿಂದ ಮಲಗಿತು. ಹೀಗೆ ಸುದಕ್ಷಿಣನ ಅಭಿಚಾರಾಗ್ನಿಯಿಂದ ಸುದಕ್ಷಿಣನನ್ನೂ ಅವನ ಕಾಶೀಪಟ್ಟಣವನ್ನೂ ಅವನ ಪುರೋಹಿತರನ್ನೂ ಭಸ್ಮ ಮಾಡಿಸಿ ಸುದಕ್ಷಿಣನ ಬಂಧುಗಳನ್ನೆಲ್ಲರನ್ನೂ ಸುದರ್ಶನಚಕ್ರದಿಂದ ಸಂಹರಿಸಿ ದ್ವಾರಕಾವಾಸಿಗಳೆಲ್ಲರ ಅಭೀಷ್ಟಗಳನ್ನು ಪೂರೈಸಿದ ಶ್ರೀಕೃಷ್ಣದೇವನು ನಮ್ಮೆಲ್ಲರಿಗೂ ಅಪೇಕ್ಷಿತವಾದ ಎಲ್ಲಾ ಇಷ್ಟಗಳನ್ನೂ ಕೊಡಲಿ ॥ ೧೯ ॥

> कृष्णः सूर्योपरागे निजयुवतिगणैर्भार्गवं क्षेत्रमास -
> स्तत्रासातान् स्वबन्धून् मुनिगणमपि सन्तोष्य यज्ञं स्वपित्रा ।
> योऽनुष्णाप्य नैजं पुरमथ वदिताऽनेकतत्वानि पित्रे
> मातुः पुत्रान् प्रदर्श्याकृत हितमहितं मेऽपरुद्यात्य ईशः ॥२०॥

> ಕೃಷ್ಣಃ ಸೂರ್ಯೋಪರಾಗೇ ನಿಜಯುವತಿಗಣೈರ್ಭಾರ್ಗವಂ ಕ್ಷೇತ್ರಮಾಪ್ತ
> ಸ್ತತ್ರಾಯಾತಾನ್ ಸ್ವಬಂಧೂನ್ ಮುನಿಗಣಮಪಿ ಸಂತೋಷ್ಯ ಯಜ್ಞಂ ಸ್ವಪಿತ್ರಾ ।
> ಯೋಽನುಷ್ಠಾಪ್ಯ ನೈಜಂ ಪುರಮಥ ವದಿತಾನೇಕತತ್ತ್ವಾನಿ ಪಿತ್ರೇ
> ಮಾತುಃ ಪುತ್ರಾನ್ ಪ್ರದರ್ಶ್ಯಾಕೃತ ಹಿತಮಹಿತಂ ಮೇಽಪನುದ್ಯಾತ್ಸ ಈಶಃ ॥೨೦॥

**ಪದಚ್ಛೇದ :-** ಕೃಷ್ಣಃ, ಸೂರ್ಯೋಪರಾಗೇ, ನಿಜಯುವತಿಗಣೈಃ ಭಾರ್ಗವಂ, ಕ್ಷೇತ್ರಂ, ಆಪ್ತಃ, ತತ್ರ, ಆಯಾತಾನ್, ಸ್ವಬಂಧೂನ್, ಮುನಿಗಣಂ ಅಪಿ, ಸಂತೋಷ್ಯ, ಯಜ್ಞಂ, ಸ್ವಪಿತ್ರಾ, ಯಃ, ಅನುಷ್ಠಾಪ್ಯ ಆಪ್ಯ ನೈಜಂ, ಪುರಂ, ಅಥ, ವದಿತಾ, ಅನೇಕತತ್ತ್ವಾನಿ ಸ್ವಪಿತ್ರೇ, ಮಾತುಃ ಪುತ್ರಾನ್, ಪ್ರದರ್ಶ್ಯ ಅಕೃತ, ಹಿತಂ ಅಹಿತಂ ಮೇ, ಅಪನುದ್ಯಾತ್, ಸಃ, ಈಶಃ.

ಅನ್ವಯ - ಯಃ ಕೃಷ್ಣಃ ಸೂರ್ಯೋಪರಾಗೇ ನಿಜಯುವತಿಗಣೈಃ (ಸಹ) ಭಾರ್ಗವಂ ಕ್ಷೇತ್ರಂ ಆಪ್ತಃ ತತ್ರ ಆಯಾತಾನ್ ಸ್ವಬಂಧೂನ್ ಮುನಿಗಣಂ ಅಪಿ ಸಂತೋಷ್ಯ, ಸ್ವಪಿತ್ರಾ ಯಜ್ಞಂ ಅನುಷ್ಠಾಪ್ಯ, ನೈಜಂ ಪುರಂ ಆಪ್ಯ ಅಥ ಪಿತ್ರೇ ಅನೇಕತತ್ತ್ವಾನಿ ವದಿತಾ, ಮಾತುಃ ಪುತ್ರಾನ್ ಪ್ರದರ್ಶ್ಯ ಹಿತಂ ಅಕೃತ, ಈಶಃ ಸಃ ಮೇ ಅಹಿತಂ ಅಪನುದ್ಯಾತ್.

ಅನ್ವಯಾರ್ಥ - ಯಃ ಕೃಷ್ಣಃ ಯಾವ ಶ್ರೀಕೃಷ್ಣದೇವನು ಸೂರ್ಯೋಪರಾಗೇ ಸೂರ್ಯಗ್ರಹಣ ಕಾಲದಲ್ಲಿ ನಿಜಯುವತಿಗಣೈಃ (ಸಹ) ತನ್ನ ಪತ್ನಿಯರ ಸಮೂಹದೊಡನೆ ಭಾರ್ಗವಂ ಕ್ಷೇತ್ರಂ ಪರಶುರಾಮದೇವನಿಂದ ನಿರ್ಮಿತವಾದ ಸ್ಯಮಂತಪಂಚಕ ಎಂಬ ಕ್ಷೇತ್ರವನ್ನು ಆಪ್ತಃ ಹೊಂದಿದವನಾಗಿ ತತ್ರ ಆ ಕ್ಷೇತ್ರದಲ್ಲಿ ಆಯಾತಾನ್ ಬಂದಿರುವ ಸ್ವಬಂಧೂನ್ ತನ್ನ ಬಂಧುಗಳನ್ನೂ ಮುನಿಗಣಂ ಅಪಿ ಮುನಿಗಳ ಸಮೂಹವನ್ನೂ ಸಂತೋಷ್ಯ ಸಂತೋಷಪಡಿಸಿ ಸ್ವಪಿತ್ರಾ ತನ್ನ ತಂದೆಯಾದ ವಸುದೇವನಿಂದ ಯಜ್ಞಂ ಯಜ್ಞವನ್ನು ಅನುಷ್ಠಾಪ್ಯ ಮಾಡಿಸಿ ನೈಜಂ ಸ್ವಕೀಯವಾದ ಪುರಂ ದ್ವಾರಕಾಪಟ್ಟಣವನ್ನು ಆಪ್ಯ ಹೊಂದಿದವನಾಗಿ ಅಥ ಅನಂತರದಲ್ಲಿ ಪಿತ್ರೇ ತಂದೆಯಾದ ವಸುದೇವನಿಗೆ ಅನೇಕತತ್ವಾನಿ ಅನೇಕ ವಿಧವಾದ ತತ್ವಗಳನ್ನು ವದಿತಾ ಉಪದೇಶಿಸಿದನೋ ಮಾತುಃ ತಾಯಿಯಾದ ದೇವಕೀದೇವಿಗೆ ಪುತ್ರಾನ್ ಮಕ್ಕಳುಗಳನ್ನು ಪ್ರದರ್ಶ್ಯ ತೋರಿಸಿ ಹಿತಂ ಸಂತೋಷವನ್ನು ಅಕೃತ ಮಾಡಿದನೋ ಈಶಃ ಪರಮಸಮರ್ಥನಾದ ಸಃ ಆ ಶ್ರೀಕೃಷ್ಣದೇವನು ಮೇ ನನ್ನ ಅಹಿತಂ ಅನಿಷ್ಟವನ್ನು ಅಪನುದ್ಯಾತ್ ಪರಿಹರಿಸಲಿ.

(೯೩) ಕೃಷ್ಣಃ ಸೂರ್ಯೋಪರಾಗೇ ನಿಜಯುವತಿಗಣೈಃ ಸಹ ಭಾರ್ಗವಂ ಕ್ಷೇತ್ರಂ ಆಪ್ತಃ

ಶ್ರೀಕೃಷ್ಣದೇವನು ಸೂರ್ಯಗ್ರಹಣಕಾಲದಲ್ಲಿ ತನ್ನ ಪತ್ನಿಯರ ಸಮೂಹದಿಂದ ಸಹಿತನಾಗಿ ಪರಶುರಾಮದೇವನಿಂದ ನಿರ್ಮಿತವಾದ ಸ್ಯಮಂತಪಂಚಕ ಎಂಬ ಕ್ಷೇತ್ರಕ್ಕೆ ಹೋದನು.

ವಿಶೇಷಾರ್ಥ : ಕೃಷ್ಣಃ ಕದಾಚಿತ್ಸೂರ್ಯಗ್ರಹಣಸಮಯೇ ಸ್ವಸ್ತ್ರೀಜನೈಃ ಪುತ್ರಪೌತ್ರಾದಿಭಿಶ್ಚ ಸಹ ಪರಶುರಾಮೇಣ ದುಷ್ಟಕ್ಷತ್ರಿಯಾನ್ ಹತ್ವಾ ತೇಷಾಂ ರುಧಿರೌಘೇನ ನಿರ್ಮಿತಂ ಮಹಾಹ್ರದೋಪೇತಂ ಸ್ಯಮಂತಪಂಚಕಾಖ್ಯಪುಣ್ಯಕ್ಷೇತ್ರಂ ಪ್ರಾಪ್ಯ.

## ಸ್ಯಮಂತಪಂಚಕ ಕ್ಷೇತ್ರ

ವಿಶೇಷಾರ್ಥ ವಿವರಣ - ಕಾರ್ತವೀರ್ಯಾರ್ಜುನನು ಜಮದಗ್ನಿಋಷಿಗಳ ಆಶ್ರಮಕ್ಕೆ ಬಂದನು. ಅವನಿಗೆ ತನ್ನಲ್ಲಿದ್ದ ಕಾಮಧೇನುವಿನ ಸಹಾಯದಿಂದ ವಿಶೇಷ ಪುರಸ್ಕಾರವನ್ನು ಜಮದಗ್ನಿಋಷಿಯು ಮಾಡಿದನು. ಆ ಕಾಮಧೇನುವಿನ ಶಕ್ತಿಯನ್ನು ತಿಳಿದ ಕಾರ್ತವೀರ್ಯಾರ್ಜುನನು ಅದನ್ನು ತನಗೆ ಕೊಡುವಂತೆ ಕೇಳಿದನು. ಅವರು ಕೊಡಲಿಲ್ಲ. ಬಲಾತ್ಕಾರದಿಂದ ಅಪಹರಿಸಿಕೊಂಡು ಹೋದನು. ಪರಶುರಾಮದೇವನು ಮಾಹಿಷ್ಮತೀನಗರಕ್ಕೆ ಹೋದನು. ಕಾರ್ತವೀರ್ಯಾರ್ಜುನನನ್ನು ಸಂಹರಿಸಿದನು. ಅವನ ಹತ್ತು ಸಾವಿರ ಮಕ್ಕಳು ಭಯದಿಂದ ಓಡಿದರು. ಪರಶುರಾಮದೇವನು ಆಶ್ರಮದಲ್ಲಿ ಇಲ್ಲದಿರುವ ಸಮಯದಲ್ಲಿ ಜಮದಗ್ನಿಋಷಿಗಳ ಆಶ್ರಮಕ್ಕೆ ಹೋದರು. ಅವರು ಆಗ ಶ್ರೀಹರಿಯನ್ನು ಧ್ಯಾನಿಸುತ್ತಿದ್ದರು. ಆ ಸಮಯದಲ್ಲಿ ಅವರ ಶಿರಸ್ಸನ್ನು ಛೇದಿಸಿದರು.

ಪರಶುರಾಮದೇವನು ಕಾಡಿನಿಂದ ಹಿಂದಿರುಗಿ ಬಂದನು. ವಿಷಯವನ್ನು ತಾಯಿಯಿಂದ ತಿಳಿದನು. ಕೊಡಲಿಯನ್ನು ಧರಿಸಿದವನಾಗಿ ಮಾಹಿಷ್ಮತೀನಗರಕ್ಕೆ ಬಂದನು. ಕಾರ್ತವೀರ್ಯಾರ್ಜುನನ ಮಕ್ಕಳುಗಳ ತಲೆಗಳನ್ನು ಕತ್ತರಿಸಿದನು. ದುಷ್ಟರಾದ ಎಲ್ಲಾ ಕ್ಷತ್ರಿಯರನ್ನೂ ಸಂಹರಿಸುವುದಾಗಿ ಸಂಕಲ್ಪಿಸಿದನು. ಇಪ್ಪತ್ತೊಂದು ಸಲ ಭೂಪ್ರದಕ್ಷಿಣೆಯನ್ನು ಮಾಡಿದನು. ಒಂದು ಸಲ ತಪ್ಪಿಸಿಕೊಂಡವರು ಇನ್ನೊಂದು ಸಲ ಸಿಕ್ಕಿದರು. ಹೀಗೆ ಇಪ್ಪತ್ತೊಂದು ಸಲ ಭೂಪ್ರದಕ್ಷಿಣೆಯಲ್ಲಿ ಎಲ್ಲಾ ದುಷ್ಟ ಕ್ಷತ್ರಿಯರೂ ಸತ್ತರು. ಅವರುಗಳ ರಕ್ತಗಳಿಂದ ಐದು ದೊಡ್ಡ

ದೊಡ್ಡ ಮಡುಗಳು ಏರ್ಪಟ್ಟವು. ಆ ಐದು ಮಡುವುಗಳಿಂದ ಯುಕ್ತವಾದ ಕ್ಷೇತ್ರವು "ಸ್ಯಮಂತಪಂಚಕಕ್ಷೇತ್ರ" ಎಂದು ಪ್ರಸಿದ್ಧವಾಯಿತು.

ಪರಶುರಾಮದೇವನು ಇಪ್ಪತ್ತೊಂದು ಸಲ ಭೂಪ್ರದಕ್ಷಿಣೆಯನ್ನು ಮಾಡಿ ಕ್ಷತ್ರಿಯರನ್ನೆಲ್ಲಾ ಸಂಹರಿಸಿದ್ದರಿಂದ ಪಾಪವು ಬಂದಂತೆ ನಟಿಸಿದನು. ಅವನಿಗೆ ಪಾಪವುಂಟೇ? ಶುಭಕರ್ಮಗಳಿಂದ ಶುಭವೂ ಇಲ್ಲ. ಅಶುಭಕರ್ಮಗಳಿಂದ ಅಶುಭವೂ ಇಲ್ಲ. ಕರ್ಮಗಳ ಲೇಪವೇ ಇಲ್ಲದವನು ಅವನ ಪಾಪಪರಿಹಾರಕ್ಕಾಗಿ ಯಾವ ಪ್ರಾಯಶ್ಚಿತ್ತವನ್ನೂ ಮಾಡಬೇಕಾಗಿಲ್ಲ. ಆದರೂ ಪ್ರಾಣಿಹಿಂಸೆಯನ್ನು ಮಾಡಿದವನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕೆಂದು ತಿಳಿಸುವುದಕ್ಕಾಗಿ ಪರಶುರಾಮದೇವನು ಸ್ಯಮಂತಪಂಚಕಕ್ಷೇತ್ರದಲ್ಲಿ ಯಜ್ಞವನ್ನು ಮಾಡಿದನು.

ರಕ್ತಗಳಿಂದ ತುಂಬಲ್ಪಟ್ಟ ಕೆರೆಗಳು ಅಪರಿಶುದ್ಧವಾಗಿರುತ್ತವೆ. ಆದರೂ ಆ ಕೆರೆಗಳು ಪರಿಶುದ್ಧವಾಗಿರುವ ಕ್ಷೇತ್ರಗಳೆಂದು ಪ್ರಸಿದ್ಧವಾಗಲಿ ಎಂದು ಶ್ರೀಪರಶುರಾಮದೇವನು ವರವನ್ನು ಕೊಟ್ಟನು. ಪ್ರಳಯಕಾಲದಲ್ಲಿ ಭಯಂಕರವಾದ ಸೂರ್ಯಗ್ರಹಣಗಳು ಏರ್ಪಡುವುದುಂಟು. ಅಂತಹ ಸೂರ್ಯಗ್ರಹಣವು ಶ್ರೀಕೃಷ್ಣದೇವನ ಕಾಲದಲ್ಲಿ ಏರ್ಪಟ್ಟಿತು. ಸೂರ್ಯಗ್ರಹಣಕಾಲದಲ್ಲಿ ಮಾಡುವ ಎಲ್ಲಾ ಸತ್ಕಾರ್ಯಗಳೂ ವಿಶೇಷಫಲಗಳನ್ನು ಕೊಡುತ್ತವೆ. ಆದ್ದರಿಂದ ಪ್ರಪಂಚದಲ್ಲಿರುವ ಸರ್ವರೂ ಪುಣ್ಯಕಾರ್ಯಗಳನ್ನು ಮಾಡುವುದಕ್ಕಾಗಿ ಈ ಸ್ಯಮಂತಪಂಚಕಕ್ಷೇತ್ರಕ್ಕೆ ಬಂದರು.

ಶ್ರೀಕೃಷ್ಣದೇವನೂ ಸಹ ತನ್ನ ಹದಿನಾರುಸಾವಿರದ ನೂರ ಎಂಟು ಪತ್ನಿಯರಿಂದಲೂ ಅಕ್ರೂರ, ವಸುದೇವ, ಆಹುಕ ಮುಂತಾದವರಿಂದಲೂ ಗದ, ಪ್ರದ್ಯುಮ್ನ, ಸಾಂಬ ಮುಂತಾದ ಮಕ್ಕಳುಗಳಿಂದಲೂ ಸಹಿತನಾಗಿ ಅಲ್ಲಿಗೆ ಬಂದನು. ನಂದ, ಯಶೋದೆ ಮುಂತಾದ ಗೋಪಾಲಕರೂ ಎಲ್ಲಾ ರಾಜರುಗಳೂ ಬಂದರು.

(೯೪) ತತ್ರಾಯಾತಾನ್ ಸ್ವಬಂಧೂನ್ ಸಂತೋಷ್ಯ.

ಅಲ್ಲಿಗೆ ಬಂದಿರುವ ತನ್ನ ಬಂಧುಗಳನ್ನು ಸಂತೋಷಪಡಿಸಿದನು.

ವಿಶೇಷಾರ್ಥ - ತತ್ರಾಗತಾನ್ನಂದಾದೀನ್ ಅನ್ಯಾಂಶ್ಚ ಭೂಪಾಲಾನ್ ಸಂತೋಷ್ಯ.

## ಬಂಧು ಸಮಾಗಮ

ವಿಶೇಷಾರ್ಥ ವಿವರಣ - ಸೂರ್ಯಗ್ರಹಣಕಾಲದಲ್ಲಿ ಸ್ನಾನವನ್ನು ಮಾಡುವುದಕ್ಕಾಗಿಯೂ ತಮ್ಮ ಪಾಪಗಳನ್ನು ಕಳೆದುಕೊಳ್ಳುವುದಕ್ಕಾಗಿಯೂ ಅಲ್ಲಿಗೆ ಬಂದಿರುವ ಸರ್ವರೂ ಪರಶುರಾಮದೇವನಿಂದ ನಿರ್ಮಿತವಾಗಿರುವ ಮಡುವುಗಳಲ್ಲಿ ವಿಧಿಪೂರ್ವಕವಾಗಿ ಸ್ನಾನಗಳನ್ನು ಮಾಡಿದರು. ಬ್ರಾಹ್ಮಣಶ್ರೇಷ್ಠರಿಗೆ ಉತ್ತಮರೀತಿಯಿಂದ ಭೋಜನವನ್ನು ಮಾಡಿಸಿದರು. ಶ್ರೀಕೃಷ್ಣದೇವನಲ್ಲಿ ನಮ್ಮೆಲ್ಲರಿಗೂ ಭಕ್ತಿಯು ಹೆಚ್ಚಾಗಲಿ ಎಂದು ಪ್ರಾರ್ಥಿಸಿದರು. ಬ್ರಾಹ್ಮಣರ ಅನುಮತಿಯನ್ನು ಪಡೆದು ಶ್ರೀಕೃಷ್ಣನೇ ಪರಬ್ರಹ್ಮನೆಂದು ತಿಳಿದಿರುವ ಸಕಲ ಯಾದವರೂ ಭೋಜನವನ್ನು ಮಾಡಿದರು. ದಟ್ಟವಾಗಿ ಬೆಳೆದಿರುವ ಮರಗಳ ಕೆಳಭಾಗ ಮುಂತಾದ ಸ್ಥಳಗಳಲ್ಲಿ ಕುಳಿತರು.

ಆಗ ಅಲ್ಲಿಗೆ ಬಂದಿರುವ ಸ್ನೇಹಿತರು, ಸಂಬಂಧಿಗಳು, ಬಂಧುಗಳು ಮುಂತಾದ ರಾಜರುಗಳನ್ನು ನೋಡಿದರು. ಸ್ವಜನರನ್ನೂ ತಮ್ಮ ವಿರೋಧಿಗಳನ್ನೂ ನೋಡಿದರು. ನಂದ ಮುಂತಾದ ಮಿತ್ರರನ್ನೂ ಬಹುಕಾಲದಿಂದ ಶ್ರೀಕೃಷ್ಣದೇವನನ್ನು ನೋಡಬೇಕೆಂಬ ಉತ್ಕಟವಾದ ಆಸೆಯಿಂದ ಯುಕ್ತರಾಗಿರುವ ಗೋಪಿಕಾಸ್ತ್ರೀಯರನ್ನೂ ನೋಡಿದರು.

ಅನ್ಯೋನ್ಯವಾಗಿ ನೋಡಿದ್ದರಿಂದ ಆನಂದವು ಉಕ್ಕಿ ಬಂತು. ಆ ಆನಂದದಿಂದ ಮನಸ್ಸು ಕರಗಿತು. ಮುಖಗಳು ಅರಳಿದ್ದವು. ಗಟ್ಟಿಯಾಗಿ ಆಲಿಂಗಿಸಿದರು. ಕಣ್ಣುಗಳಿಂದ ಆನಂದಬಾಷ್ಪವು ಸುರಿಯಿತು. ಮೈಗಳಲ್ಲಿ ರೋಮಗಳು ಎದ್ದು ನಿಂತವು. ಬಾಯಿಗಳಿಂದ ಮಾತುಗಳು ಸರಿಯಾಗಿ ಹೊರಡಲಿಲ್ಲ. ಅಪರಿಮಿತವಾದ ಆನಂದದಿಂದ ಯುಕ್ತರಾದರು.

ಗೋಪಿಕಾಸ್ತ್ರೀಯರು ಸರ್ವರೂ ಶ್ರೀಕೃಷ್ಣದೇವನನ್ನು ಅತ್ಯಂತ ಪ್ರೇಮದಿಂದ ಮುಗುಳುನಗೆಯಿಂದ ನಗುತ್ತಾ ಕಡೆಗಣ್ಣುಗಳಿಂದ ನೋಡುತ್ತಾ ತಮ್ಮ ಸ್ತನಗಳಿಂದ ಶ್ರೀಕೃಷ್ಣದೇವನ ಸ್ತನಗಳನ್ನು ಗಟ್ಟಿಯಾಗಿ ಒತ್ತುತ್ತಾ ಕಣ್ಣುಗಳಿಂದ ನೀರುಗಳನ್ನು ಸುರಿಸುತ್ತಾ ಎರಡು ಕೈಗಳಿಂದ ಆಲಿಂಗಿಸುತ್ತಾ ಸಂತೋಷಿಸಿದರು. ವಯಸ್ಸಿನಿಂದಲೂ ಜ್ಞಾನದಿಂದಲೂ ಶ್ರೇಷ್ಠರಾದವರನ್ನು ನಮಸ್ಕರಿಸಿದರು. ಚಿಕ್ಕವರಿಂದ ನಮಸ್ಕರಿಸಲ್ಪಟ್ಟರು. ಅನ್ಯೋನ್ಯವಾಗಿ ಕುಶಲಪ್ರಶ್ನೆಯನ್ನು ಮಾಡಿದರು. ಅನ್ಯೋನ್ಯವಾಗಿ ಸರ್ವರೂ ಶ್ರೀಕೃಷ್ಣದೇವನ ಕಥೆಯನ್ನೇ ಹೇಳಿದರು.

ಅಲ್ಲಿ ಬಂದಿರುವ ಅಣ್ಣತಮ್ಮಂದಿರು, ಅಕ್ಕತಂಗಿಯರು, ಅವರ ಮಕ್ಕಳುಗಳು, ತಂದೆತಾಯಿಯವರು, ಸಹೋದರರ ಪತ್ನಿಯರು ಇವರನ್ನೂ ಶ್ರೀಕೃಷ್ಣದೇವನನ್ನೂ, ಅವನ ಭಕ್ತರನ್ನೂ ನೋಡಿ ಸತ್ಕಥೆಗಳನ್ನು ಹೇಳುತ್ತಾ ಕೇಳುತ್ತಾ ಕಾಲವನ್ನು ಕಳೆದರು. ಕುಂತೀದೇವಿಯು ವಸುದೇವನನ್ನು ನೋಡಿದಳು.

## ಕುಂತೀವಸುದೇವ ಸಂವಾದ

"ಎಲೋ ತಮ್ಮನೇ! ಯಾವನ ವಿಷಯದಲ್ಲಿ ಸರ್ವೇಶ್ವರನಾದ ಶ್ರೀಹರಿಯು ಪ್ರತಿಕೂಲನಾಗಿರುವನೋ ಅವನನ್ನು ಮಿತ್ರರೂ, ಜ್ಞಾತಿಗಳೂ, ಮಕ್ಕಳುಗಳೂ, ಅಣ್ಣತಮ್ಮಂದಿರೂ ತಂದೆತಾಯಿಗಳೂ ಮರೆತು ಬಿಡುವರು" ಎಂಬ ವಿಷಯದಲ್ಲಿ ನಾನೇ ಉದಾಹರಣಳಾಗಿರುವೆನು. ನೀವೆಲ್ಲರೂ ಉತ್ತಮರು. ಆದರೆ ನನ್ನ ಆಪತ್ಕಾಲದಲ್ಲಿ ಯಾರೂ ನನ್ನನ್ನು ನೆನೆಸಲಿಲ್ಲ.

ಈ ಮಾತುಗಳನ್ನು ಕೇಳಿದ ವಸುದೇವನು "ಅಮ್ಮಾ, ನಮ್ಮ ಮೇಲೆ ದೋಷವನ್ನು ಹೇಳಬೇಡ, ನಾವೆಲ್ಲರೂ ಸರ್ವೇಶ್ವರನಾದ ಶ್ರೀಹರಿಯ ಆಟದ ಬೊಂಬೆಗಳು. ಅವನ ಸಂಕಲ್ಪದಂತೆ ಮಾಡುತ್ತಿರುವೆವು. ಅವನು ನಮ್ಮಿಂದ ಮಾಡಿಸಿದಂತೆ ಮಾಡುತ್ತಿರುವೆವು. ಹಿಂದೆ ಕಂಸನಿಂದ ಹಿಂಸಿಸಲ್ಪಟ್ಟ ನಾವೆಲ್ಲರೂ ದಿಕ್ಕು ದಿಕ್ಕುಗಳಿಗೆ ಓಡಿದೆವು. ಈಗಲೇ ನಮ್ಮನಮ್ಮ ಮನೆಗಳಿಗೆ ಹಿಂದಿರುಗಿ ಬಂದಿರುವೆವು. ಎಲ್ಲವೂ ಶ್ರೀಹರಿಯ ವ್ಯಾಪಾರ, ಇದರಲ್ಲಿ ಯಾರನ್ನೂ ಯಾರೂ ದೂರುವಂತಿಲ್ಲ" ಎಂದನು.

# ರಾಜರುಗಳು ಮಾಡಿದ ಶ್ರೀಕೃಷ್ಣಸ್ತುತಿ

ಭೀಷ್ಮರು, ದ್ರೋಣರು, ಧೃತರಾಷ್ಟ್ರ, ಗಾಂಧಾರೀ, ದುರ್ಯೋಧನ ಮುಂತಾದ ಧೃತರಾಷ್ಟ್ರನ ಮಕ್ಕಳು, ಪತ್ನೀ ಸಹಿತರಾದ ಪಾಂಡವರು, ಕುಂತೀ, ಸಂಜಯ, ವಿದುರ, ಕೃಪಾಚಾರ್ಯರು, ಕುಂತೀಭೋಜ ವಿರಾಟ, ನಗ್ನಜಿತ್, ದ್ರುಪದ, ಶಲ್ಯ, ಧೃಷ್ಟಕೇತು ಮುಂತಾದವರು ಶ್ರೀಕೃಷ್ಣದೇವನನ್ನು ನೋಡಿದರು. ಲಕ್ಷ್ಮೀದೇವಿಯರು ಯಾವಾಗಲೂ ವಾಸಿಸುತ್ತಿರುವ ಶ್ರೀಕೃಷ್ಣದೇವನ ದೇಹವನ್ನು ನೋಡಿ ಆಶ್ಚರ್ಯ ಪರವಶರಾದರು. ಅವರೆಲ್ಲರೂ ಬಲರಾಮನಿಂದಲೂ ಶ್ರೀಕೃಷ್ಣದೇವನಿಂದಲೂ ಸತ್ಕರಿಸಲ್ಪಟ್ಟರು. ಶ್ರೀಕೃಷ್ಣದೇವನ ವಿಶೇಷಾನುಗ್ರಹಕ್ಕೆ ಪಾತ್ರರಾದ ಯಾದವರನ್ನೆಲ್ಲರನ್ನೂ ಭೀಷ್ಮಾದಿಗಳು ಸ್ತುತಿಸಿದರು.

"ಎಲೈ ಉಗ್ರಸೇನ ಮಹಾರಾಜನೇ, ನೀವೆಲ್ಲರೂ ಸಾರ್ಥಕವಾದ ಜನ್ಮವನ್ನು ಪಡೆದವರು, ಆದ್ದರಿಂದಲೇ ಯೋಗಿಗಳಿಂದಲೂ ನೋಡಲು ಸಾಧ್ಯವಿಲ್ಲದ ಶ್ರೀಕೃಷ್ಣದೇವನನ್ನು ಯಾವಾಗಲೂ ನೋಡುತ್ತಿರುವಿರಿ. ಶ್ರೀಕೃಷ್ಣದೇವನ ಮುಖದಿಂದ ಹೊರಟಿರುವ ಬ್ರಹ್ಮಸೂತ್ರ ಮುಂತಾದವುಗಳೂ ಕಾಲಿನಿಂದ ಹೊರಟಿರುವ ಗಂಗಾದಿತೀರ್ಥಗಳೂ ಎಲ್ಲಾ ಲೋಕಗಳನ್ನೂ ಪರಿಶುದ್ಧವಾಗುವಂತೆ ಮಾಡುತ್ತಿವೆ. ಶ್ರೀಕೃಷ್ಣದೇವನ ಪಾದಪದ್ಮಗಳ ಸ್ಪರ್ಶದಿಂದ ಕಲಿಕಾಲದಿಂದ ದೂಷಿತವಾಗಿರುವ ಭೂಮಿಯು ಸರ್ವರಿಗೂ ಬೇಕಾಗಿರುವ ಇಷ್ಟಾರ್ಥಗಳನ್ನು ಸುರಿಸುತ್ತಿದೆ. ಆ ಶ್ರೀಕೃಷ್ಣದೇವನನ್ನು ಎಲ್ಲಾ ವಿಧಗಳಿಂದಲೂ ಸೇವಿಸುತ್ತಿರುವಿರಿ" ಎಂದರು.

ಆಗ ವಸುದೇವ ಮುಂತಾದ ಯಾದವರು ಬಂದಿರುವ ಸಮಾಚಾರವನ್ನು ತಿಳಿದ ನಂದನು ಗೋಪಾಲಕರಿಂದ ಸಹಿತನಾಗಿ ವಸುದೇವನನ್ನು ನೋಡುವುದಕ್ಕಾಗಿ ಬಂದನು. ನಂದನನ್ನು ವಸುದೇವನು ಆಲಿಂಗಿಸಿದನು. ಕಂಸನಿಂದ ಏರ್ಪಟ್ಟ ಕ್ಲೇಶಗಳನ್ನೂ ತನ್ನ ಮಕ್ಕಳನ್ನು ಗೋಕುಲದಲ್ಲಿ ಬಿಟ್ಟಿದ್ದ ವಿಷಯಗಳನ್ನೂ ಸ್ಮರಿಸಿದನು. ಬಲರಾಮನೂ ಶ್ರೀಕೃಷ್ಣದೇವನೂ ನಂದನನ್ನೂ ಯಶೋದೆಯನ್ನೂ ಆಲಿಂಗಿಸಿದರು. ಅವರಿಬ್ಬರ ಕಣ್ಣುಗಳಿಂದಲೂ ನೀರು ಸುರಿಯಿತು. ಏನೂ ಮಾತಾಡಲಿಲ್ಲ. ಯಶೋದೆಯು ಅವರಿಬ್ಬರನ್ನೂ ತೊಡೆಯ ಮೇಲೆ ಮಲಗಿಸಿಕೊಂಡಳು. ಎರಡು ಕೈಗಳಿಂದ ಕಟ್ಟಿಕೊಂಡಳು. ಅವರಿಬ್ಬರ ವಿರಹದಿಂದ ಏರ್ಪಟ್ಟ ದುಃಖಗಳನ್ನು ನಂದನೂ ಯಶೋದೆಯೂ ಮರೆತರು.

# ವಸುದೇವನು ಯಶೋದೆಯಲ್ಲಿ ಕೃತಜ್ಞತೆಯನ್ನು ಸಮರ್ಪಿಸಿದ್ದು

"ಎಲೈ ಯಶೋದೆಯೇ, ಈ ಎರಡು ಮಕ್ಕಳು ಹುಟ್ಟಿದ ದಿನದಿಂದ ತಂದೆಯನ್ನು ನೋಡಿದವರಲ್ಲ. ಕಣ್ಣಿನ ರೆಪ್ಪೆಗಳು ಕಣ್ಣನ್ನು ಕಾಪಾಡಿದಂತೆ ನೀವಿಬ್ಬರೂ ಅವರನ್ನು ಕಾಪಾಡಿದಿರಿ. ಜಾತಕರ್ಮ, ನಾಮಕರಣ ಮುಂತಾದ ಸಂಸ್ಕಾರಗಳನ್ನು ಮಾಡಿದಿರಿ. ಅವರನ್ನು ಸಂತೋಷಪಡಿಸಿದಿರಿ. ರಸಾಯನಾದಿಗಳನ್ನು ಕೊಟ್ಟು ಬೆಳೆಯಿಸಿದಿರಿ. ನಿಮ್ಮ ಉಪಕಾರಕ್ಕೆ ನಾನು ಯಾವಾಗಲೂ ಕೃತಜ್ಞನಾಗಿರುವೆನು" ಎಂದು ಹೇಳಿದನು.

ಗೋಪಿಕಾಸ್ತ್ರೀಯರು ಬಹುಕಾಲದಿಂದ ಶ್ರೀಕೃಷ್ಣದೇವನನ್ನು ನೋಡಬೇಕೆಂದು ಆಶಿಸುತ್ತಿದ್ದರು. ಅವನನ್ನು ನೋಡುತ್ತಿರುವಾಗಲೂ ಆಗಾಗ್ಗೆ ಅವನನ್ನು ನೋಡುವುದಕ್ಕೆ ಅಡ್ಡಿಯನ್ನು ಕೊಡುತ್ತಿರುವ ಕಣ್ಣಿನ ರೆಪ್ಪೆಗಳನ್ನು ಸೃಷ್ಟಿಸಿದ

ಬ್ರಹ್ಮದೇವನನ್ನು ಶಪಿಸುತ್ತಿರುವರು. ಈಗ ಬಹುಕಾಲದ ಮೇಲೆ ಶ್ರೀಕೃಷ್ಣದೇವನನ್ನು ಕಣ್ಣುಗಳಿಂದ ನೋಡಿದರು. ಹಾಗೆಯೇ ಶ್ರೀಕೃಷ್ಣದೇವನ ಮೂರ್ತಿಯನ್ನು ಹೃದಯದಲ್ಲಿ ನಿಲ್ಲಿಸಿದರು. ಅಲ್ಲಿಯೇ ಶ್ರೀಕೃಷ್ಣದೇವನನ್ನು ಧ್ಯಾನಿಸುತ್ತಾ ಮೈಮರೆತರು. ಶ್ರೀಕೃಷ್ಣದೇವನು ಭಕ್ತಿಪರವಶರಾದ ಆ ಗೋಪಿಕಾಸ್ತ್ರೀಯರನ್ನು ಏಕಾಂತದಲ್ಲಿ ನೋಡಿ ಆಲಿಂಗಿಸಿ ಕುಶಲಪ್ರಶ್ನೆಯನ್ನು ಮಾಡಿದನು.

## ಗೋಪಿಕಾಸ್ತ್ರೀಯರ ಭಕ್ತಿ

ಎಲೈ ಸ್ತ್ರೀಯರೆ, ನಿಮಗೆ ನೆನಪಿರಬಹುದು. ನಮ್ಮ ಸ್ವಂತ ಜನರ ಇಷ್ಟಾರ್ಥವನ್ನು ಪೂರೈಸುವುದಕ್ಕಾಗಿ ವೃಂದಾವನದಿಂದ ಮಥುರಾಪಟ್ಟಣಕ್ಕೆ ಹೋದೆವು. ಅಲ್ಲಿ ಬೇರೆ ಬೇರೆ ಕಾರ್ಯಗಳು ಏರ್ಪಟ್ಟವು. ಅವುಗಳಿಂದ ಬಹಳ ಕಾಲವಾದ ಮೇಲೆ ಇಂದು ನಿಮ್ಮನ್ನು ನೋಡುವಂತಾಯಿತು. ಆದರೂ ಕೃಪೆಗೆ ಪಾತ್ರರಾಗಿರುವ ನಿಮ್ಮನ್ನೇ ಯಾವಾಗಲೂ ನೆನೆಸುತ್ತಿರುವೆನು. ಒಬ್ಬರ ಸಮಾಗಮವೂ ವಿಯೋಗವೂ ಭಗವಂತನ ಸಂಕಲ್ಪದಿಂದಲೇ ಏರ್ಪಡುತ್ತದೆ. ಗಾಳಿಯಲ್ಲಿ ಸಿಕ್ಕಿದ ಮೇಘಗಳ ಪಂಕ್ತಿಯೂ ಹುಲ್ಲೂಯೂ ಧೂಳಿಗಳು ಹೇಗೆಯೋ ಅದರಂತೆ ಒಂದು ಸ್ಥಳದಿಂದ ಹೊರಟವನು ಹೊರಟ ಸ್ಥಳಕ್ಕೆ ಕೂಡಲೇ ಹಿಂದಿರುಗಿ ಬರುವನೆಂದು ನಂಬುವಂತಿಲ್ಲ. ಆದ್ದರಿಂದ ನಾನು ನಿಮ್ಮ ಬೃಂದಾವನಕ್ಕೆ ಬಾರದಿರುವುದಕ್ಕಾಗಿ ಮನ್ನಿಸಬೇಕು.

ಶ್ರೀಹರಿಯು ಜನರನ್ನು ಒಟ್ಟುಗೂಡಿಸಿ ಬಿಡಿಸುವನು. ನಿಮಗೆ ನನ್ನ ಸಂಬಂಧವು ಏರ್ಪಟ್ಟಿತು. ವಿಯೋಗವೂ ಏರ್ಪಟ್ಟಿತು. ಇದರಿಂದ ನಿಮ್ಮೆಲ್ಲರಿಗೂ ನನ್ನಲ್ಲಿ ಭಕ್ತಿಯು ಏರ್ಪಟ್ಟಿತು. ಈ ಭಕ್ತಿಯು ಅಪಾರ ಸಂತೋಷಕ್ಕೂ ಕೊನೆಗೆ ಮುಕ್ತಿಗೂ ಸಾಧನವಾಗುತ್ತದೆ.

"ನಾನು ಎಲ್ಲಾ ಪ್ರಾಣಿಗಳು ಹುಟ್ಟುವುದಕ್ಕಿಂತ ಪೂರ್ವದಲ್ಲಿ ಇದ್ದವನು. ಎಲ್ಲಾ ಪ್ರಾಣಿಗಳು ಹೋದ ಮೇಲೆಯೂ ಇರುವವನು. ಎಲ್ಲಾ ವಸ್ತುಗಳ ಒಳಗೆಯೂ ಹೊರಗೆಯೂ ಆಕಾಶದಂತೆಯೂ ನೀರಿನಂತೆಯೂ ವಾಯುವಿನಂತೆಯೂ ತೇಜಸ್ಸಿನಂತೆಯೂ ಇರುವವನು. ಎಲ್ಲಾ ತತ್ವಗಳೂ ತತ್ವಾಭಿಮಾನಿಗಳಾದ ಜೀವರೂ ಸರ್ವೋತ್ತಮನಾದ ನನ್ನನ್ನು ಆಶ್ರಯಿಸಿಕೊಂಡಿರುವರು ಎಂದು ತಿಳಿಯಿರಿ" ಎಂದು ಉಪದೇಶಿಸಿದನು.

ಈ ಉಪದೇಶದಿಂದ ಎಲ್ಲಾ ಸ್ತ್ರೀಯರೂ ಶ್ರೀಕೃಷ್ಣದೇವನಲ್ಲಿ ಅಪಾರಭಕ್ತಿಯನ್ನು ಮಾಡಿದರು. ನಿರಂತರದಲ್ಲಿಯೂ ಶ್ರೀಹರಿಯನ್ನು ಭಕ್ತಿಯಿಂದ ಧ್ಯಾನಿಸಿದರು. ಆ ಧ್ಯಾನದಿಂದ ಅವರ ಲಿಂಗದೇಹವು ಅವರನ್ನು ಬಿಟ್ಟು ಹೋಯಿತು. ಕೊನೆಗೆ ಅವರೆಲ್ಲರೂ ಮುಕ್ತಿಯನ್ನು ಪಡೆದರು. ಶ್ರೀಕೃಷ್ಣದೇವನು ಎಲ್ಲಾ ಗೋಪಿಕಾಸ್ತ್ರೀಯರನ್ನೂ ಅನುಗ್ರಹಿಸಿದನು.

## ಮಿತ್ರರು ಮಾಡಿದ ಸ್ತುತಿ

ಅನಂತರದಲ್ಲಿ ಧರ್ಮರಾಜನನ್ನು ನೋಡಿದನು. ಎಲ್ಲಾ ಮಿತ್ರರ ಕ್ಷೇಮವನ್ನು ಕುರಿತು ಪ್ರಶ್ನಿಸಿದನು. ಶ್ರೀಕೃಷ್ಣದೇವನ ಮಿತ್ರರೆಲ್ಲರೂ ಅವನ ಪಾದಗಳನ್ನು ನೋಡಿದ್ದರಿಂದಲೇ ಎಲ್ಲಾ ಪಾಪಗಳನ್ನೂ ಕಳೆದುಕೊಂಡರು. ಶ್ರೀಕೃಷ್ಣದೇವನು ಅವರ ಕ್ಷೇಮವನ್ನು ಕುರಿತು ಪ್ರಶ್ನಿಸಿದ್ದರಿಂದ ತುಂಬಾ ಸಂತುಷ್ಟರಾದರು.

"ಓ ಶ್ರೀಕೃಷ್ಣದೇವ, ನಿನ್ನ ಪಾದಕಮಲಗಳ ಮಹಿಮೆಗಳು ಎಂಬ ಅಮೃತವು ಮಹಾಜ್ಞಾನಿಗಳಾದ ಶ್ರೀವ್ಯಾಸರೇ ಮುಂತಾದವರ ಮುಖಕಮಲಗಳಿಂದ ಹೊರಗೆ ಹೊರಡುತ್ತಿರುತ್ತದೆ. ಯಾವಾಗಲಾದರೂ ಒಮ್ಮೆ ಆ ಅಮೃತವು ಹೊರಗೆ ಬರುತ್ತದೆ. ಆ ಅಮೃತವನ್ನು ಕಿವಿಗಳೆಂಬ ದೊನ್ನೆಗಳಿಂದ ಯಾರು ಪಾನ ಮಾಡುವರೋ ಒಮ್ಮೆ ಆ ಅಮೃತವನ್ನು ಇನ್ನೊಬ್ಬರಿಗೆ ಉಪದೇಶಿಸುತ್ತಾ ಎಲ್ಲಾ ಜನರನ್ನೂ ಉದ್ಧರಿಸುತ್ತಿರುವ ಅವರಿಗೆ ಅಶುಭವು ಎಲ್ಲಿ ಬರುತ್ತದೆ? ಓ ದೇವ, ನಿನಗೆ ನೀನೇ ಆಶ್ರಯನು. ಎಲ್ಲಾ ದೇವತೆಗಳಿಗೂ ನೀನೇ ಆಶ್ರಯನು. ದೇವತೆಗಳಿಗೆ ಯಾವಾಗಲೂ "ಜಾಗ್ರದವಸ್ಥಾ" ಎಂಬ ಅವಸ್ಥೆಯನ್ನೂ ದೈತ್ಯರಿಗೆ ಸುಪ್ತಿರೂಪವಾದ ಅಜ್ಞಾನಾವಸ್ಥೆಯನ್ನೂ ಮನುಷ್ಯರಿಗೆ ಸ್ವಪ್ನಲಕ್ಷಣವಾದ ಮಿಶ್ರಜ್ಞಾನಾವಸ್ಥೆಯನ್ನೂ ಕೊಡುತ್ತಿರುವಿ. ನೀನು ಆನಂದಸಮುದ್ರನಾಗಿರುವಿ. ವೇದಾದಿಶಾಸ್ತ್ರಗಳಲ್ಲಿ ಹೇಳಿರುವ ನಾನಾವಿಧವಾದ ರೂಪಗಳನ್ನು ಸ್ವೀಕರಿಸುತ್ತಿರುವಿ. ಇಂತಹ ನಿನ್ನನ್ನು ಅತ್ಯಂತ ಭಕ್ತಿಯಿಂದ ಸ್ತುತಿಸುವೆವು ಎಂದು ಹೇಳಿದರು.

ಇದೇ ಸಮಯದಲ್ಲಿ ದ್ರೌಪದೀದೇವಿಯರ ಅಧ್ಯಕ್ಷತೆಯಲ್ಲಿ ಶ್ರೀಕೃಷ್ಣದೇವನ ಪತ್ನಿಯರ ಸಭೆಯೊಂದು ನಡೆಯಿತು. ಆ ಸಭೆಯಲ್ಲಿ "ಎಲೈ ಹದಿನಾರು ಸಾವಿರದ ನೂರ ಎಂಟು ಶ್ರೀಕೃಷ್ಣ ಪತ್ನಿಯರೇ, ಶ್ರೀಕೃಷ್ಣದೇವನು ಮನುಷ್ಯಲೋಕದಲ್ಲಿ ಅವತರಿಸಿದಾಗ ಮನುಷ್ಯರಂತೆ ನಟಿಸುವುದಕ್ಕಾಗಿ ನಿಮ್ಮೆಲ್ಲರನ್ನೂ ವಿವಾಹ ಮಾಡಿಕೊಂಡನು. ಅವನು ಯಾರನ್ನು ಯಾವ ಕ್ರಮದಿಂದ ವಿವಾಹ ಮಾಡಿಕೊಂಡನು ಎಂದು ಹೇಳಿರಿ" ಎಂದು ದ್ರೌಪದೀದೇವಿಯು ಪ್ರಶ್ನಿಸಿದಳು. ಅದಕ್ಕೆ ರುಕ್ಮಿಣೀದೇವಿಯು ಉತ್ತರವನ್ನು ಕೊಡಲು ಆರಂಭಿಸಿದಳು.

# ರುಕ್ಮಿಣೀದೇವಿಯ ವಿವಾಹ

ನನಗೆ ಸ್ವಯಂವರಮಹೋತ್ಸವವನ್ನು ಮಾಡುವುದಾಗಿ ನನ್ನ ತಂದೆಯು ತೀರ್ಮಾನಿಸಿದ್ದನು. ಈ ವಿಷಯವನ್ನು ತಿಳಿದ ನಮ್ಮ ಪತಿಯು ನಮ್ಮ ಊರಿಗೆ ಬಂದರು. ಸ್ವಯಂವರಮಹೋತ್ಸವವನ್ನು ನಿಲ್ಲಿಸಿದರು. ನನ್ನನ್ನು ತನಗೆ ಕೊಟ್ಟು ವಿವಾಹವನ್ನು ಮಾಡುವುದಾಗಿ ನನ್ನ ತಂದೆಯಿಂದ ವಾಗ್ದಾನವನ್ನು ಪಡೆದರು.

ಸ್ವಯಂವರಮಹೋತ್ಸವಕ್ಕಾಗಿ ಬಂದಿದ್ದ ಜರಾಸಂಧ ಮುಂತಾದ ಸಕಲ ರಾಜರುಗಳೂ ನನ್ನನ್ನು ಶಿಶುಪಾಲನಿಗೆ ಕೊಟ್ಟು ವಿವಾಹವನ್ನು ಮಾಡಬೇಕೆಂದು ತೀರ್ಮಾನಿಸಿದರು. ನನ್ನ ತಂದೆಯು ಅಂಗೀಕರಿಸದಿದ್ದರೂ ನನ್ನ ಅಣ್ಣನಾದ ರುಕ್ಮಿಯೇ ಕನ್ಯಾದಾನವನ್ನು ಮಾಡಲಿ ಎಂದು ತೀರ್ಮಾನಿಸಿದರು. ನನ್ನ ಅಣ್ಣನು ಈ ತೀರ್ಮಾನವನ್ನು ಅಂಗೀಕರಿಸಿದನು.

ನಾನು ವಿವಾಹಕ್ಕಿಂತ ಪೂರ್ವದಲ್ಲಿ ನನ್ನ ಪತಿಯವರಿಗೆ ಒಂದು ಪತ್ರವನ್ನು ಬರೆದು ಒಬ್ಬ ಬ್ರಾಹ್ಮಣನ ಮೂಲಕವಾಗಿ ದ್ವಾರಕೆಗೆ ಕಳುಹಿಸಿದೆನು. ಈ ವಿಷಯವನ್ನು ತಿಳಿದ ಕೂಡಲೇ ನನ್ನ ಪತಿಯು ನಮ್ಮ ತಂದೆಯ ಕುಂಡಿನಪುರಕ್ಕೆ ಬಂದರು. ಈ ವಿಷಯವನ್ನು ತಿಳಿದ ಜರಾಸಂಧ ಮುಂತಾದ ಸಕಲ ರಾಜರುಗಳೂ ತಮ್ಮ ತಮ್ಮ ಧನುಸ್ಸುಗಳನ್ನು ಎತ್ತಿ ಯುದ್ಧಕ್ಕೆ ಸಿದ್ಧರಾದರು.

ಸಿಂಹವು ಕುರಿಗಳ ಸಮೂಹದ ಮಧ್ಯದಿಂದ ತನಗೆ ಬೇಕಾದ ಕುರಿಯನ್ನು ಎತ್ತಿಕೊಂಡು ಹೋದಂತೆ

ಅವರೆಲ್ಲರ ಮಧ್ಯದಲ್ಲಿ ತನ್ನ ಅನಾದಿಪತ್ನಿಯಾಗಿರುವ ನನ್ನನ್ನು ಎತ್ತಿಕೊಂಡು ಬಂದರು. ಜರಾಸಂಧ ಮುಂತಾದ ಸಕಲ ರಾಜರುಗಳ ತಲೆಗಳಲ್ಲಿ ತನ್ನ ಕಾಲಿನ ಧೂಳಿಗಳು ಶೋಭಿಸುವಂತೆ ಮಾಡಿದರು. ನನ್ನಿಂದ ಅವರಿಗೆ ಆಗಬೇಕಾದ ಪ್ರಯೋಜನವು ಯಾವೂ ಇಲ್ಲ. ಲಕ್ಷ್ಮೀರೂಪಿಯಾದ ನಾನು ಅವರ ಪಾದಗಳನ್ನು ಯಾವಾಗಲೂ ಸೇವಿಸುತ್ತಿರುವೆನು. ರುಕ್ಮಿಣೀರೂಪದಿಂದಲೂ ಸೇವಿಸಲಿ. ಧನ್ಯಳಾಗಲಿ. ಎಂಬ ಉದ್ದೇಶದಿಂದ ನನ್ನನ್ನು ಕರೆದುಕೊಂಡು ಬಂದರು.

## ಸತ್ಯಭಾಮಾವಿವಾಹ

ನನ್ನ ತಂದೆಯ ಸ್ಯಮಂತಕಮಣಿಯನ್ನು ಧರಿಸಿಕೊಂಡು ಹೋದ ಪ್ರಸೇನನು ಕಾಡಿನಲ್ಲಿ ಸತ್ತನು. ನನ್ನ ಪತಿಯು ಅವನನ್ನು ಸಂಹರಿಸಿ ಮಣಿಯನ್ನು ಅಪಹರಿಸಿದರು ಎಂದು ಸುಳ್ಳು ಅಪವಾದವನ್ನು ನನ್ನ ತಂದೆಯು ಹೊರಿಸಿದನು. ಆ ಅಪವಾದವನ್ನು ಪರಿಹರಿಸಿಕೊಳ್ಳುವುದಕ್ಕಾಗಿ ನನ್ನ ಪತಿಯು ಕಾಡಿಗೆ ಹೋದರು. ಜಾಂಬವಂತನನ್ನು ಜಯಿಸಿ ಮಣಿಯನ್ನು ನನ್ನ ತಂದೆಗೆ ತಂದು ಕೊಟ್ಟರು. ನನ್ನ ತಂದೆಯು ಮೊದಲೇ ನನ್ನನ್ನು ಶತಧನ್ವ ಮುಂತಾದವರಿಗೆ ಕೊಟ್ಟು ವಿವಾಹವನ್ನು ಮಾಡುವುದಕ್ಕಾಗಿ ವಾಗ್ದಾನವನ್ನು ಮಾಡಿದ್ದನು. ನನ್ನ ಪತಿಯ ಮೇಲೆ ಸುಮ್ಮನೇ ಸುಳ್ಳು ಅಪವಾದವನ್ನು ಹೊರಿಸಿದೆನೆಂದು ಪಶ್ಚಾತ್ತಾಪದಿಂದ ಯುಕ್ತನಾದ ನನ್ನ ತಂದೆಯು ನನ್ನನ್ನು ನನ್ನ ಪತಿಗೆ ಕೊಟ್ಟು ವಿವಾಹವನ್ನು ಮಾಡಿದನು. ಅವರಿಗೆ ನನ್ನಿಂದ ಆಗಬೇಕಾದ ಲಾಭವು ಯಾವುದೂ ಇಲ್ಲ. ನಮ್ಮ ಪತಿಯು ತನಗೆ ಬೇಕಾದ ಕಾರ್ಯವನ್ನು ಮಾಡುವುದಕ್ಕೂ ಇಷ್ಟವಿಲ್ಲದಿರುವ ಕಾರ್ಯವನ್ನು ಮಾಡದಿರುವುದಕ್ಕೂ ಕೆಲವು ಕಾರ್ಯಗಳನ್ನು ವ್ಯತ್ಯಾಸವಾಗಿ ಮಾಡುವುದಕ್ಕೂ ಸಮರ್ಥರು. ಅವರಿಗೆ ನನ್ನಿಂದ ಆಗಬೇಕಾದ ಲಾಭವೇನಿದೆ?

## ಜಾಂಬವತೀ ವಿವಾಹ

ನನ್ನ ಪತಿಯನ್ನು ನನ್ನ ತಂದೆಯಾದ ಜಾಂಬವಂತನು ನೋಡಿದನು. ಅವನ ಪ್ರಭುವಾದ ಶ್ರೀರಾಮದೇವನ ಬಣ್ಣವೂ ಆಕಾರವೂ ವ್ಯತ್ಯಾಸವಾಗಿತ್ತು. ಆದ್ದರಿಂದ ನನ್ನ ಪತಿಯನ್ನು ಸರಿಯಾಗಿ ತಿಳಿಯಲಿಲ್ಲ. ಇಪ್ಪತ್ತೇಳು ದಿನಗಳ ವರೆಗೆ ನನ್ನ ಪತಿಯ ಜೊತೆಯಲ್ಲಿ ಯುದ್ಧವನ್ನು ಮಾಡಿದನು. ಕೊನೆಗೆ ತನ್ನ ಪ್ರಭುವಾದ ಶ್ರೀರಾಮಚಂದ್ರನೇ ನನ್ನ ಪತಿಯು ಎಂದು ತಿಳಿದನು. ತಾನು ಇಪ್ಪತ್ತೇಳು ದಿನಗಳ ವರೆಗೆ ಯುದ್ಧವನ್ನು ಮಾಡಿರುವುದು ಅಪರಾಧವೆಂದು ತಿಳಿದು ಕೊನೆಗೆ ನನ್ನ ಪತಿಯನ್ನು ಪೂಜಿಸಿ ನನ್ನನ್ನು ಸಮರ್ಪಿಸಿ ಶ್ಯಮಂತಕಮಣಿಯನ್ನೂ ಸಮರ್ಪಿಸಿದನು. ನಾನು ಈಗ ನನ್ನ ಪತಿಯ ದಾಸಿಯಾಗಿರುವೆನು.

## ಕಾಳಿಂದೀವಿವಾಹ

ನನ್ನ ಪತಿಯ ಪಾದಗಳ ಸ್ಪರ್ಶವು ಏರ್ಪಡಬೇಕೆಂದು ನಾನು ತಪಸ್ಸನ್ನು ಮಾಡಿದೆನು. ಈ ವಿಷಯವನ್ನು ತನ್ನ ಮಿತ್ರನಾದ ಅರ್ಜುನನಿಂದ ತಿಳಿದು ನನ್ನ ಸಮೀಪಕ್ಕೆ ಬಂದರು. ನನ್ನ ಪಾಣಿಗ್ರಹಣವನ್ನು ಮಾಡಿಕೊಂಡರು. ನಾನು ಈಗ ಅವರ ಮನೆಯನ್ನು ಗುಡಿಸುವ ಭಾಗ್ಯವನ್ನು ಪಡೆದಿರುವೆನು.

# ಮಿತ್ರವಿಂದಾವಿವಾಹ

ಅವಂತೀದೇಶದ ಅಧಿಪತಿಗಳಾದ ವಿಂದ ಅನುವಿಂದ ಎಂಬ ಇಬ್ಬರು ರಾಜರು ದುರ್ಯೋಧನನೇ ನನಗೆ ಪತಿಯೆಂದು ತೀರ್ಮಾನಿಸಿದರು. ನನಗೆ ಸ್ವಯಂವರವು ನಡೆಯಿತು. ನಾನು ನನ್ನ ಪತಿಯನ್ನು ವರಿಸಿದೆನು. ಆಗ ಸ್ವಯಂವರಮಂಟಪದಲ್ಲಿ ಸೇರಿದ್ದ ಎಲ್ಲಾ ರಾಜರುಗಳೂ ನನ್ನ ಸಹೋದರರೂ ಯುದ್ಧವನ್ನು ಮಾಡಿದರು. ಆಗ ನನ್ನ ಪತಿಯು ಅವರೆಲ್ಲರನ್ನೂ ಜಯಿಸಿದರು. ಸಿಂಹವು ಮಂಗಗಳನ್ನು ಜಯಿಸಿ ತನ್ನ ಅಂಶವನ್ನು ತೆಗೆದುಕೊಂಡಂತೆ ನನ್ನನ್ನು ಸ್ವೀಕರಿಸಿ ತಮ್ಮ ಪಟ್ಟಣಕ್ಕೆ ಕರೆದುಕೊಂಡು ಹೋದರು. ನನಗೆ ಒಂದೊಂದು ಜನ್ಮಗಳಲ್ಲಿಯೂ ನನ್ನ ಪತಿಯ ಪಾದಗಳನ್ನು ತೊಳೆದ ನೀರು ಸಿಗಲಿ.

# ನೀಲಾ ವಿವಾಹ

ನನ್ನ ತಂದೆಯ ವಶದಲ್ಲಿ ಏಳು ಎತ್ತುಗಳಿದ್ದವು. ಅವುಗಳು ಅತ್ಯಧಿಕ ಬಲದಿಂದಲೂ ಅತ್ಯಂತ ತೀಕ್ಷ್ಣವಾದ ಕೊಂಬುಗಳಿಂದಲೂ ಯುಕ್ತವಾಗಿದ್ದವು. ಮಹಾವೀರರುಗಳ ದುರ್ಮದಗಳನ್ನು ಪರಿಹರಿಸುವ ಶಕ್ತಿಯುಳ್ಳವುಗಳಾಗಿದ್ದವು. "ಆ ಏಳು ಎತ್ತುಗಳನ್ನು ಒಂದೇ ಸಲ ಬಿಡಬೇಕು. ಅವುಗಳನ್ನೆಲ್ಲವನ್ನೂ ಯಾವನು ಕಟ್ಟಿಹಾಕುವನೋ ಅವನು ನನ್ನ ಮಗಳನ್ನು ವಿವಾಹಮಾಡಿಕೊಳ್ಳಬಹುದು" ಎಂದು ನನ್ನ ತಂದೆಯು ರಾಜರುಗಳ ವೀರ್ಯವನ್ನೂ ಬಲವನ್ನೂ ಪರೀಕ್ಷಿಸುವುದಕ್ಕಾಗಿ ಪ್ರತಿಜ್ಞೆಯನ್ನು ಮಾಡಿದ್ದನು. ಬಲವನ್ನು ತೋರಿಸಿ ಕನ್ಯೆಯನ್ನು ವಿವಾಹ ಮಾಡಿಕೊಳ್ಳುವುದು ವೀರ್ಯ ಶುಲ್ಕವೆನಿಸುತ್ತದೆ. ಈ ವೀರ್ಯಶುಲ್ಕವನ್ನು ತಿಳಿದು ಎಲ್ಲಾ ರಾಜರುಗಳೂ ಬಂದರು. ಅವರಿಗೆ ಈ ಎತ್ತುಗಳು ವಶವಾಗಲಿಲ್ಲ. ಎಲ್ಲರ ದುರಹಂಕಾರಗಳನ್ನೂ ಮುರಿದವು. ನನ್ನ ಪತಿಯೂ ಬಂದರು. ಚಿಕ್ಕ ಮಕ್ಕಳುಗಳು ಆಡುಗಳ ಮರಿಗಳನ್ನು ಕಟ್ಟಿ ಹಾಕಿದಂತೆ ಈ ಏಳು ಎತ್ತುಗಳನ್ನು ಕಟ್ಟಿಹಾಕಿದರು. ದಾಸಿಯರಿಂದ ಸಹಿತಳಾದ ನನ್ನನ್ನು ಕರೆದುಕೊಂಡು ದ್ವಾರಕೆಗೆ ಹೊರಟರು. ಮಾರ್ಗದಲ್ಲಿ ರಾಜರುಗಳೆಲ್ಲಾ ಯುದ್ಧಕ್ಕಾಗಿ ಬಂದರು. ಅವರನ್ನೆಲ್ಲಾ ಜಯಿಸಿ ನನ್ನನ್ನು ಕರೆದುಕೊಂಡು ಹೋದರು. ಎಲ್ಲಾ ಜನ್ಮಗಳಲ್ಲಿಯೂ ಅವರ ದಾಸತ್ವವು ನನಗೆ ಸಿಗಲಿ.

# ಭದ್ರಾವಿವಾಹ

ನನ್ನ ತಂದೆಯು ನನ್ನ ಸೋದರಮಾವನ ಮಗನಾಗಿರುವ ನನ್ನ ಪತಿಯನ್ನೇ ಸ್ಮರಿಸುತ್ತಿರುವ ನನ್ನ ಮನಸ್ಸನ್ನು ತಿಳಿದನು. ಅವರನ್ನು ಕರೆದು ನನ್ನನ್ನು ಅವರಿಗೆ ಕೊಟ್ಟು ವಿವಾಹವನ್ನು ಮಾಡಿದನು. ಅಕ್ಷೌಹಿಣೀಸೈನ್ಯದಿಂದಲೂ ಸಖಿಯರಿಂದಲೂ ಸಹಿತಳಾದ ನನ್ನನ್ನು ನನ್ನ ಪತಿಯು ದ್ವಾರಕೆಗೆ ಕರೆದುಕೊಂಡು ಹೋದರು. ಸಂಸಾರದಲ್ಲಿ ಸರ್ವರೂ ನಾನಾ ವಿಧವಾದ ಕರ್ಮಗಳಿಂದ ಪುನಃ ಪುನಃ ಸುತ್ತುತ್ತಿರುವರು. ಅವರೆಲ್ಲರಿಗೂ ನನ್ನ ಪತಿಯ ಪಾದಸ್ಪರ್ಶವು ಶ್ರೇಯಸ್ಕರವಾಗುತ್ತದೆ. ನನಗೆ ಒಂದೊಂದು ಜನ್ಮಗಳಲ್ಲಿಯೂ ಆ ಪಾದಗಳ ಸ್ಪರ್ಶವು ಏರ್ಪಡಲಿ.

# ಲಕ್ಷಣಾ ವಿವಾಹ

ನಮ್ಮ ಮನೆಗೆ ನಾರದರು ಆಗಾಗ್ಗೆ ಬರುತ್ತಿದ್ದರು. ಆಗ ನನ್ನ ಪತಿಯ ಜನ್ಮವೃತ್ತಾಂತವನ್ನೂ ಅವರು ಮಾಡಿದ

ಕರ್ಮಗಳನ್ನೂ ಹೇಳುತ್ತಿದ್ದರು. ಅವುಗಳನ್ನು ಕೇಳಿದ ಮೇಲೆ ಅವರಲ್ಲಿಯೇ ನನ್ನ ಮನಸ್ಸು ನಿಂತಿತು. ಲಕ್ಷ್ಮೀದೇವಿಯು ಪದ್ಮಗಳ ಮಾಲೆಯನ್ನು ಕೈಯಲ್ಲಿ ಧರಿಸಿ ಎಲ್ಲಾ ಲೋಕಪಾಲಕರನ್ನೂ ಧಿಕ್ಕರಿಸಿ ನನ್ನ ಪತಿಯನ್ನೇ ವರಿಸಿದರಂತೆ. ಹೀಗಿರುವಾಗ ನನ್ನ ಪತಿಯನ್ನೇ ನಾನು ವರಿಸಿದ್ದರಲ್ಲಿ ಆಶ್ಚರ್ಯವೇನಿದೆ?

"ಬೃಹತ್ಸೇನ" ಎಂಬ ನನ್ನ ತಂದೆಗೆ ಹೆಣ್ಣು ಮಕ್ಕಳಲ್ಲಿ ಪ್ರೀತಿಯು ಅಧಿಕವಾಗಿರುತ್ತದೆ. ಅವನು ನನ್ನ ಸಂಕಲ್ಪವನ್ನು ತಿಳಿದನು. ಅದಕ್ಕಾಗಿ ಒಂದು ಉಪಾಯವನ್ನು ಮಾಡಿದನು. "ಎಲೈ ದ್ರೌಪದಿಯೇ, ನಿನ್ನ ತಂದೆಯಾದ ದ್ರುಪದನು ಅರ್ಜುನನೇ ತನ್ನ ಅಳಿಯನಾಗಬೇಕೆಂದು ಸ್ವಯಂವರಮಹೋತ್ಸವವನ್ನು ಏರ್ಪಡಿಸಿದನು. ಅದರಂತೆ ನನಗೂ ಸ್ವಯಂವರಮಹೋತ್ಸವವನ್ನು ನನ್ನ ತಂದೆಯು ಏರ್ಪಡಿಸಿದನು. ನಿನ್ನ ಸ್ವಯಂವರದಲ್ಲಿ ಮರದ ಮೇಲೆ ಕಟ್ಟಿದ ಮೀನು ಮೇಲೆ ಮುಚ್ಚಲ್ಪಡಲಿಲ್ಲ. ನನ್ನ ಸ್ವಯಂವರಕ್ಕಾಗಿ ಮರದ ಮೇಲೆ ಕಟ್ಟಿರುವ ಮೀನು ಮೇಲೆ ಮುಚ್ಚಲ್ಪಟ್ಟಿತ್ತು. ಮರದ ಕೆಳಗೆ ಇಟ್ಟಿರುವ ನೀರಿನಲ್ಲಿ ಬಿದಿರಿನ ರಂಧ್ರದ ದ್ವಾರದಿಂದ ಬಿದ್ದಿರುವ ನೆರಳಿನಿಂದ ಮೀನನ್ನು ತಿಳಿದು ಆ ಮೀನನ್ನು ತುಂಡಾದ ಬಾಣದಿಂದ ಕತ್ತರಿಸಬೇಕಾಗಿತ್ತು. ಆದ್ದರಿಂದ ನಿನ್ನ ಸ್ವಯಂವರಕ್ಕಿಂತಲೂ ನನ್ನ ಸ್ವಯಂವರವೂ ಕಷ್ಟಸಾಧ್ಯವಾಗಿತ್ತು.

ನನ್ನ ಸ್ವಯಂವರ ವಿವರವನ್ನು ತಿಳಿದ ಎಲ್ಲಾ ರಾಜರುಗಳೂ ನಮ್ಮ ಊರಿಗೆ ಬಂದರು. ಅವರೆಲ್ಲರ ವಯಸ್ಸು ಮತ್ತು ವೀರ್ಯಗಳನ್ನು ತಿಳಿದು ನನ್ನ ತಂದೆಯು ಪೂಜಿಸಿದನು. ದ್ರೌಪದಿಯೇ! ಅವರೆಲ್ಲರೂ ಧನುಸ್ಸನ್ನು ನೋಡಿದರು. ನನ್ನಲ್ಲಿ ಆಸೆಯಿಂದ ಧನುಸ್ಸನ್ನು ಎತ್ತಿ ಹಗ್ಗವನ್ನು ಕಟ್ಟಿ ಸೆಳೆಯುವುದಕ್ಕೆ ಎಷ್ಟು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಕೊನೆಗೆ ಆ ಧನುಸ್ಸಿನಿಂದಲೇ ಹೊಡೆಯಲ್ಪಟ್ಟು ಕೆಳಗೆ ಬಿದ್ದರು. ನರಕಾಸುರ, ಜರಾಸಂಧ, ದುರ್ಯೋಧನ, ಕರ್ಣ ಮುಂತಾದವರು ಧನುಸ್ಸನ್ನು ಕಟ್ಟಿ ಸೆಳೆದರು. ಮೀನು ಇರುವ ಸ್ಥಳವು ತಿಳಿಯಲಿಲ್ಲ. ಬಿಟ್ಟು ಬಿಟ್ಟರು. ಅರ್ಜುನನು ಮೀನನ್ನೂ ತಿಳಿದು ಬಾಣವನ್ನು ಬಿಟ್ಟನು. ಆ ಬಾಣವು ಮೀನನ್ನು ಕತ್ತರಿಸಲಿಲ್ಲ. ಮೀನನ್ನು ಮುಟ್ಟಿತು. ಅಲ್ಲಿಗೆ ಬಂದ ಎಲ್ಲರೂ ಹಿಂದಿರುಗಿದರು. ಕೊನೆಗೆ ಅಂದು ಮಧ್ಯಾಹ್ನಕಾಲದಲ್ಲಿ ನನ್ನ ಪತಿಯು ಮುಂದೆ ಬಂದು ಮೀನನ್ನು ಕತ್ತರಿಸಿದರು. ದೇವದುಂದುಭಿಗಳು ಧ್ವನಿಸಿದವು. ಜಯ ಜಯ ಧ್ವನಿಯು ಭೂಮಿಯಲ್ಲಿ ವ್ಯಾಪಿಸಿತು. ನಾನು ಸ್ವಯಂವರಪ್ರದೇಶಕ್ಕೆ ಹೋದೆನು. ನನ್ನ ಪತಿಯು ನನ್ನನ್ನು ರಥದಲ್ಲಿ ಕುಳ್ಳಿರಿಸಿದರು. ನಗುತ್ತಾ ನಾಲ್ಕು ಕೈಗಳಿಂದ ಯುದ್ಧಕ್ಕೆ ಸಿದ್ಧರಾದರು. ಅವರೆಲ್ಲರೂ ಶಾರ್ಙ್ಗಧನುಸ್ಸಿನಿಂದ ಬಿಡಲ್ಪಟ್ಟ ಬಾಣಗಳಿಂದ ಕೈಗಳೂ ಕಾಲುಗಳೂ ಕುತ್ತಿಗೆಗಳೂ ಕಡಿಯಲ್ಪಟ್ಟವರಾಗಿ ಕೆಲವರು ಸತ್ತರು. ಉಳಿದವರು ಓಡಿದರು ನನ್ನ ಪತಿಯು ನನ್ನನ್ನು ಕರೆದುಕೊಂಡು ದ್ವಾರಕಾಪಟ್ಟಣವನ್ನು ಪ್ರವೇಶಿಸಿದರು. ನನ್ನ ತಂದೆಯು ನನ್ನ ಪತಿಯ ಬಂಧುಗಳಿಗೆ ವಸ್ತ್ರಾದಿಗಳಿಂದ ಗೌರವಿಸಿದನು. ನನ್ನ ಪತಿಗೆ ಆಯುಧಗಳ ಆವಶ್ಯಕತೆಯೇ ಇಲ್ಲ. ಆದರೂ ಭಕ್ತಿಯಿಂದ ಅಮೂಲ್ಯವಾದ ಆಯುಧಗಳನ್ನು ಸಮರ್ಪಿಸಿದನು.

ಇಷ್ಟರ ವರೆಗೆ ರುಕ್ಮಿಣಿಯಿಂದ ಆರಂಭಿಸಿ ನನ್ನ ವರೆಗೆ ಇರುವ ಪತ್ನಿಯರ ವಿವಾಹಕ್ರಮವನ್ನು ಕ್ರಮವಾಗಿ ಹೇಳಿದೆವು. ಇದರಿಂದ ತಿಳಿಯುವ ಮುಖ್ಯ ಸಾರಾಂಶವನ್ನು ಹೇಳುವೆನು. ಅವರು ತನ್ನಿಂದ ತಾನೇ ಸುಖವನ್ನು ಅನುಭವಿಸುತ್ತಿರುವರು. ನಾವೆಲ್ಲರೂ ಸರ್ವಸಂಗವನ್ನು ಬಿಟ್ಟು ತಪಸ್ಸನ್ನು ಮಾಡಿದೆವು. ಅವರ ಮನೆಯ ದಾಸಿಯರಾದೆವು.

# ಹದಿನಾರು ಸಾವಿರದ ನೂರು ಪತ್ನಿಯರ ವಿವಾಹ

ನಮ್ಮ ಪತಿಯು ನರಕಾಸುರನನ್ನೂ ಅವನ ಪರಿವಾರದಲ್ಲಿ ಸೇರಿರುವ ಮುರ, ಪಂಚಜನ ಮುಂತಾದ ದೈತ್ಯರನ್ನೂ ಸಂಹರಿಸಿದರು. ದಿಗ್ವಿಜಯ ಕಾಲದಲ್ಲಿ ಅವನಿಂದ ಅಪಹರಿಸಲ್ಪಟ್ಟ ರಾಜಕನ್ಯೆಯರನ್ನು ಕಾರಾಗೃಹದಿಂದ ಬಿಡಿಸಿದರು. ನಾವೆಲ್ಲರೂ ಕಾರಾಗೃಹದಿಂದ ಬಿಡುಗಡೆಯನ್ನು ಮಾತ್ರ ಅಪೇಕ್ಷಿಸಿದವರಲ್ಲ. ಈ ಸಂಸಾರದಿಂದಲೂ ಬಿಡುಗಡೆಯನ್ನು ಅಪೇಕ್ಷಿಸಿದವರು. ಅವರಿಗೆ ನಮ್ಮಿಂದ ಆಗಬೇಕಾದ ಯಾವ ಪ್ರಯೋಜನವೂ ಇಲ್ಲ. ಆದರೂ ನಮ್ಮ ಆಸೆಯನ್ನು ಪೂರ್ತಿ ಮಾಡುವುದಕ್ಕಾಗಿ ಅವರ ಪಾದಕಮಲಗಳ ಸನ್ನಿಧಾನವನ್ನು ಕೊಟ್ಟರು.

ನಾವೆಲ್ಲರೂ ಸಾಮ್ರಾಜ್ಯ ಎಂಬ ಉತ್ತರದೇಶದ ಆಧಿಪತ್ಯ ಅಥವಾ ಚಕ್ರವರ್ತಿ ಪದವಿಯನ್ನು ಅಪೇಕ್ಷಿಸಿದವರಲ್ಲ. ಸ್ವರಾಜ್ಯ ಅಂದರೆ ಪೂರ್ವ ದೇಶದ ಆಧಿಪತ್ಯ ಅಥವಾ ಸ್ವರ್ಗ ರಾಜ್ಯವನ್ನು ಅಪೇಕ್ಷಿಸಿದವರಲ್ಲ. ಭೌಜ್ಯ ಅಂದರೆ ದಕ್ಷಿಣದೇಶದ ಆಧಿಪತ್ಯ ಅಥವಾ ಅಂತರಿಕ್ಷರಾಜ್ಯವನ್ನು ಅಪೇಕ್ಷಿಸಿದವರಲ್ಲ. ವೈರಾಜ್ಯ ಅಂದರೆ ಪಶ್ಚಿಮದೇಶದ ಆಧಿಪತ್ಯ ಅಥವಾ ಪಾತಾಲ ರಾಜ್ಯದ ಅಥವಾ ಅಣಿಮಾದಿಗಳ ಆಧಿಪತ್ಯಗಳನ್ನು ಅಪೇಕ್ಷಿಸಿದವರಲ್ಲ. ಅನಂತ್ಯ ಅಂದರೆ ಸರ್ವದೇಶಾಧಿಪತ್ಯ ಅಥವಾ ಮೋಕ್ಷವನ್ನು ಅಪೇಕ್ಷಿಸಿದವರಲ್ಲ. ಹರೇಃ ಪದ ಅಂದರೆ ಇಂದ್ರಪದವಿಯನ್ನು ಅಪೇಕ್ಷಿಸಿದವರಲ್ಲ. ಪಾರಮೇಷ್ಠ್ಯ ಅಂದರೆ ಬ್ರಹ್ಮಪದವಿಯನ್ನು ಅಪೇಕ್ಷಿಸಿದವರಲ್ಲ.

ಮಹಾಲಕ್ಷ್ಮೀದೇವಿಯ ಕುಚಗಳಲ್ಲಿರುವ ಕುಂಕುಮಗಳಿಂದ ಲಿಪ್ತವಾಗಿಯೂ ಗೋಪಾಲಸ್ತ್ರೀಯರಿಂದಲೂ ಬೇಡರ ಸ್ತ್ರೀಯರಿಂದಲೂ ಅಪೇಕ್ಷಿಸಲ್ಪಟ್ಟ, ಹುಲ್ಲುಗಳಿಂದಲೂ ಬಳ್ಳಿಗಳಿಂದಲೂ ಅಪೇಕ್ಷಿಸಲ್ಪಟ್ಟ, ಗೋವುಗಳನ್ನು ಕಾಪಾಡುತ್ತಿರುವ ಶ್ರೀಕೃಷ್ಣದೇವನ ಪಾದಧೂಳಿಗಳನ್ನು ಅಪೇಕ್ಷಿಸುತ್ತಿದ್ದೇವೆ. ಅವರ ಪಾದಸ್ಪರ್ಶವು ಒಂದೊಂದು ಜನ್ಮಗಳಲ್ಲಿಯೂ ನಮಗೆ ಸಿಗಲಿ.

ಹೀಗೆ ಶ್ರೀಕೃಷ್ಣದೇವನ ಹದಿನಾರು ಸಾವಿರದ ನೂರ ಎಂಟು ಪತ್ನಿಯರೂ ತಮ್ಮ ತಮ್ಮ ವಿವಾಹ ವಿಷಯಗಳನ್ನು ದ್ರೌಪದೀದೇವಿಯಲ್ಲಿ ವಿವರಿಸುತ್ತಾ ಶ್ರೀಕೃಷ್ಣದೇವನ ಪಾದಗಳಲ್ಲಿ ತಮಗಿರುವ ಅಪಾರ ಭಕ್ತಿಯನ್ನು ವಿವರಿಸಿದರು. ನಂದ, ಯಶೋದೆ ಮುಂತಾದ ಗೋಪಾಲಕರನ್ನೂ ಪಾಂಡವರು ಮುಂತಾದ ಸಕಲ ರಾಜರುಗಳನ್ನೂ ಸಂತೋಷಪಡಿಸಿದನು.

**(೯೫) ಮುನಿಗಣಮಪಿ ಸಂತೋಷ್ಯ.**

ಮುನಿಗಳ ಸಮೂಹವನ್ನೂ ಸಂತೋಷಪಡಿಸಿದನು.

**ವಿಶೇಷಾರ್ಥ - ವಸಿಷ್ಠಾದಿಮುನೀಂಶ್ಚ ಸಂತೋಷ್ಯ.**

**ವಿಶೇಷಾರ್ಥ ವಿವರಣ** - ಕುಂತೀದೇವೀ ಗಾಂಧಾರೀ ದ್ರೌಪದೀ ಶ್ರೀಕೃಷ್ಣದೇವ ಪತ್ನಿಯರು ಮುಂತಾದ ಸಕಲ ಸ್ತ್ರೀಯರು ಶ್ರೀಕೃಷ್ಣದೇವನ ಒಬ್ಬೊಬ್ಬ ಪತ್ನಿಯರು ಹೇಳಿದ ಮಾತುಗಳನ್ನು ಕೇಳಿದರು. ಸರ್ವೇಶ್ವರನಾದ ಶ್ರೀಕೃಷ್ಣದೇವನಲ್ಲಿ ಅವರಿಗಿರುವ ಅಪಾರ ಭಕ್ತಿಯನ್ನು ತಿಳಿದರು. ಕಣ್ಣುಗಳಿಂದ ನೀರುಗಳನ್ನು ಸುರಿಸುತ್ತಾ ತುಂಬಾ ಆಶ್ಚರ್ಯದಿಂದ ಯುಕ್ತರಾದರು. ಹೀಗೆ ಸ್ತ್ರೀಯರು ಸ್ತ್ರೀಯರನ್ನೂ ಗಂಡಸರು ಗಂಡಸರನ್ನೂ ಮಾತಾಡಿಸುತ್ತಿರುವಾಗ

ಬಲರಾಮನನ್ನೂ ಶ್ರೀಕೃಷ್ಣದೇವನನ್ನೂ ನೋಡುವುದಕ್ಕಾಗಿ ಎಲ್ಲಾ ಮುನಿಗಳು ಬಂದರು.

ಶ್ರೀವೇದವ್ಯಾಸರು, ನಾರದರು, ಚ್ಯವನರು, ದೇವಲರು, ಅಸಿತರು, ವಿಶ್ವಾಮಿತ್ರರು, ಶತಾನಂದರು, ಭಾರದ್ವಾಜರು, ಗೌತಮರು, ಶಿಷ್ಯಸಹಿತರಾದ ಪರಶುರಾಮರು, ವಸಿಷ್ಠರು, ಗಾಲವರು, ಭೃಗು, ಪುಲಸ್ತ್ಯರು, ಕಶ್ಯಪರು, ಅತ್ರಿ, ಮಾರ್ಕಂಡೇಯರು, ಬೃಹಸ್ಪತೀ, ದ್ವಿತರು, ತ್ರಿತರು, ಏಕತರು, ಬ್ರಹ್ಮಪುತ್ರರಾದ ಅಂಗಿರಸರು, ಅಗಸ್ತ್ಯರು, ಯಾಜ್ಞವಲ್ಕ್ಯರು, ವಾಮದೇವ ಮುಂತಾದ ಅಸಂಖ್ಯಾಕರಾದ ಮುನಿಗಳು ಬಂದರು. ಅವರೆಲ್ಲರನ್ನೂ ಶ್ರೀಕೃಷ್ಣದೇವನೂ ಬಲರಾಮನೂ ಪಾಂಡವರೇ ಮೊದಲಾದ ರಾಜರು ನೋಡಿ ಎದ್ದು ನಿಂತರು. ಲೋಕಗಳಲ್ಲಿರುವ ಸರ್ವರಿಂದಲೂ ನಮಸ್ಕರಿಸಲ್ಪಟ್ಟ ಅವರೆಲ್ಲರನ್ನೂ ನಮಸ್ಕರಿಸಿದರು. ಶ್ರೀಕೃಷ್ಣದೇವನು ಬಲರಾಮನಿಂದ ಸಹಿತನಾಗಿ ಅವರೆಲ್ಲರನ್ನೂ ನೋಡಿ ಉಪಚಾರದ ಮಾತುಗಳನ್ನು ಹೇಳಿದನು. ಕೈಗಳನ್ನೂ ಕಾಲುಗಳನ್ನೂ ತೊಳೆಯುವುದಕ್ಕಾಗಿ ನೀರನ್ನು ಕೊಟ್ಟು ಆಸನಗಳನ್ನು ಕೊಟ್ಟನು. ಮಾಲೆಗಳನ್ನು ಹಾಕಿ ಗಂಧಗಳನ್ನು ಹಚ್ಚಿ ಧೂಪ ಮುಂತಾದವುಗಳಿಂದ ಪೂಜಿಸಿದನು. ಧರ್ಮಗಳನ್ನು ರಕ್ಷಿಸುವುದಕ್ಕೆ ಅವತರಿಸಿದ ಶ್ರೀಕೃಷ್ಣದೇವನ ಮಾತುಗಳನ್ನು ಮೌನಧಾರಿಗಳಾಗಿ ಎಲ್ಲರೂ ಕೇಳುತ್ತಿದ್ದರು. ಸುಖವಾಗಿ ಕುಳಿತಿರುವ ಮುನಿಗಳನ್ನು ನೋಡಿ ಮಾತಾಡಲು ಆರಂಭಿಸಿದನು.

ಯೋಗೇಶ್ವರರಾದ ನಿಮ್ಮ ದರ್ಶನವು ದೇವತೆಗಳಿಗೂ ಸಿಗಲಾರದು. ಹೀಗಿರುವಾಗ ಪ್ರತಿಮೆಯನ್ನೇ ದೇವನೆಂದು ತಿಳಿದಿರುವ ಅತ್ಯಲ್ಪ ತಪಸ್ಸನ್ನು ಮಾಡಿರುವ ಮನುಷ್ಯರಿಗೆ ಸಿಗುತ್ತದೆಯೇ? ಇಂದು ಮನುಷ್ಯದೇಹವನ್ನು ಸ್ವೀಕರಿಸಿದ್ದಕ್ಕೆ ಪೂರ್ಣಫಲವು ಸಿಕ್ಕಿತು. ಆದ್ದರಿಂದ ನಾವೆಲ್ಲರೂ ಜನ್ಮವನ್ನು ಸ್ವೀಕರಿಸಿರುವುದು ಸಾರ್ಥಕವಾಯಿತು. ತಮ್ಮೆಲ್ಲರನ್ನೂ ನೋಡಿದೆವು. ತಮ್ಮಲ್ಲಿ ಪ್ರಶ್ನೆಗಳನ್ನು ಮಾಡುವುದೂ ಪಾದಗಳನ್ನು ಪೂಜಿಸುವುದೂ ವಿನಯದಿಂದ ದೇಹವನ್ನು ಬಗ್ಗಿಸುವುದೂ ತಮ್ಮ ಸ್ಪರ್ಶವನ್ನು ಮಾಡುವುದೂ ನಮಗೆ ಏರ್ಪಟ್ಟಿತು. ಸಾಧುಗಳ ದರ್ಶನಾದಿಗಳು ಏರ್ಪಟ್ಟವು. ಆದ್ದರಿಂದ ಮನುಷ್ಯಜನ್ಮವು ಸಾರ್ಥಕವಾಯಿತು ಎಂದು ಶ್ರೀಕೃಷ್ಣದೇವನು ಹೇಳಿದನು. ಆ ವಿಷಯವನ್ನು ಈಗ ಸ್ಪಷ್ಟಪಡಿಸುತ್ತಿದ್ದಾನೆ.

ಗಂಗಾ ಮುಂತಾದ ತೀರ್ಥಜಲಗಳನ್ನೂ, ಮಣ್ಣಿನಿಂದ ನಿರ್ಮಿತವಾದ ಗಣಪತಿ ಮುಂತಾದ ವಿಗ್ರಹಗಳನ್ನೂ ದೇವಾಲಯಗಳಲ್ಲಿರುವ ಕಲ್ಲಿನಿಂದ ನಿರ್ಮಿತವಾದ ವಿಗ್ರಹಗಳನ್ನೂ ನಾವು ನೋಡುವುದುಂಟು. ನಮ್ಮ ಕಣ್ಣಿಗೆ ಕಾಣಿಸುತ್ತಿರುವ ತೀರ್ಥಜಲಗಳು ತೀರ್ಥಗಳಲ್ಲ. ಹಾಗೆಯೇ ನಮ್ಮ ಕಣ್ಣಿಗೆ ಕಾಣಿಸುತ್ತಿರುವ ಮಣ್ಣಿನ ಮತ್ತು ಕಲ್ಲುಗಳ ವಿಗ್ರಹಗಳಲ್ಲಿಯೂ ಸನ್ನಿಹಿತರಾಗಿದ್ದು ನಮ್ಮನ್ನು ಅನುಗ್ರಹಿಸುತ್ತಿರುವ ತೀರ್ಥಾಭಿಮಾನಿದೇವತೆಗಳೂ ಮಣ್ಣಿನ ಮತ್ತು ಕಲ್ಲುಗಳ ವಿಗ್ರಹಗಳಲ್ಲಿಯೂ ಸನ್ನಿಹಿತರಾಗಿದ್ದು ನಮ್ಮನ್ನು ಅನುಗ್ರಹಿಸುತ್ತಿರುವ ತೀರ್ಥಾಭಿಮಾನಿದೇವತೆಗಳೂ ಮಣ್ಣಿನ ಮತ್ತು ಕಲ್ಲುಗಳ ವಿಗ್ರಹಗಳಲ್ಲಿರುವ ದೇವತೆಗಳು ಬೇರೆ ಬೇರೆಯಾಗಿ ಇದ್ದಾರೆ. ಆ ದೇವತೆಗಳ ಸ್ವರೂಪಗಳನ್ನೂ ಆಯಾ ದೇವತೆಗಳ ಮಂತ್ರಗಳನ್ನೂ ನಮ್ಮ ಗುರುಗಳ ಉಪದೇಶದಿಂದ ತಿಳಿದು ಬಹುಕಾಲದ ವರೆಗೆ ಅವರನ್ನು ಸೇವಿಸಬೇಕು. ಆಗ ಪ್ರಸನ್ನರಾದ ಆ ತೀರ್ಥಾಭಿಮಾನಿದೇವತೆಗಳೂ ವಿಗ್ರಹಾಭಿಮಾನಿ-ದೇವತೆಗಳೂ ನಾವು ಮಾಡಿರುವ ಪಾಪಗಳನ್ನು ಪರಿಹರಿಸುತ್ತಾರೆ.

ಆದರೆ ತೀರ್ಥಾಭಿಮಾನಿದೇವತೆಗಳೂ ವಿಗ್ರಹಾಭಿಮಾನಿದೇವತೆಗಳೂ ನಮ್ಮೊಡನೆ ಮಾತಾಡುವುದಿಲ್ಲ.

ನಿಮ್ಮಂತಹ ಜ್ಞಾನಿಗಳನ್ನು ತೋರಿಸಿ ನಿಮ್ಮಿಂದ ಉಪದೇಶವನ್ನು ಮಾಡಿಸಿ ನಮಗೆ ಜ್ಞಾನವನ್ನು ಹುಟ್ಟಿಸಿ ನಮ್ಮಿಂದ ಸಕಲ ಸತ್ಕಾರ್ಯಗಳನ್ನೂ ಕ್ರಮವಾಗಿ ಮಾಡಿಸಿ ನಮ್ಮ ಪಾಪಗಳನ್ನು ಪರಿಹರಿಸುವರು.

ಕಣ್ಣಿಗೆ ಕಾಣಿಸುವ ಗಂಗಾದಿನೀರುಗಳೇ ತೀರ್ಥಗಳು, ಮಣ್ಣಿನಿಂದ ಮತ್ತು ಕಲ್ಲುಗಳಿಂದ ನಿರ್ಮಿತವಾದ ವಿಗ್ರಹಗಳೇ ದೇವತೆಗಳು ಎಂಬ ತಿಳುವಳಿಕೆಯು ವಿಪರೀತಜ್ಞಾನವೆಂದು ತಿಳಿಸಿದಿ. ಈ ವಿಪರೀತಜ್ಞಾನವು ನಾವು ಮಾಡಿರುವ ಪಾಪಗಳಿಂದ ಹುಟ್ಟುತ್ತವೆ ಎಂದು ತಿಳಿಸಿದಿ. ಈ ಪಾಪವು ಅಗ್ನಿ ಮುಂತಾದ ದೇವತೆಗಳ ಸೇವೆಯಿಂದ ಹೋಗುವುದಿಲ್ಲವೇ? ಹಾಗಾದರೆ ಅಗ್ನಿ ಮುಂತಾದ ದೇವತೆಗಳನ್ನು ಆರಾಧಿಸಿ ಅವರ ಅನುಗ್ರಹ ಬಲದಿಂದ ಪಾಪಗಳು ನಮ್ಮನ್ನು ಬಿಟ್ಟು ಹೋದರೆ ವಿಪರೀತಜ್ಞಾನವು ನಮ್ಮನ್ನು ಬಿಟ್ಟು ಹೋಗುವುದಿಲ್ಲವೇ? ಎಂದು ಕೇಳಬಹುದು. ಅದಕ್ಕೆ ಉತ್ತರವನ್ನು ಕೊಡುವೆನು.

ಅಗ್ನಿದೇವನೂ, ಸೂರ್ಯದೇವನೂ, ಚಂದ್ರದೇವನೂ, ನಕ್ಷತ್ರಾಭಿಮಾನಿದೇವತೆಯೂ, ಮನಸ್ಸಿಗೆ ಅಭಿಮಾನಿಯಾದ ದೇವತೆಯೂ ಉಪಾಸಿಸಲ್ಪಟ್ಟರೆ ವಿಪರೀತ ಜ್ಞಾನಿಯ ವಿಪರೀತಜ್ಞಾನವನ್ನು ಕೆಲವು ಕಾಲದ ಅನಂತರದಲ್ಲಿ ಪರಿಹರಿಸುವರು. ಜ್ಞಾನಿಗಳು ಹಾಗಲ್ಲ. ಒಂದು ಮುಹೂರ್ತಕಾಲದಲ್ಲಿ ಜ್ಞಾನಿಗಳನ್ನು ಸೇವಿಸಿದರೆ ಎಲ್ಲಾ ಪಾಪಗಳೂ ಹೋಗುತ್ತವೆ.

ಇಲ್ಲಿ ಒಂದು ಪ್ರಶ್ನೆಯು ಬರುತ್ತದೆ. ಋಷಿಗಳು ಮುಂತಾದ ಜ್ಞಾನಿಗಳಿಗಿಂತ ದೇವತೆಗಳು ಉತ್ತಮರು, ಋಷಿಗಳು ದೇವತೆಗಳಿಗಿಂತ ಅಧಮರು, ಹೀಗಿರುವಾಗ ದೇವತೆಗಳಿಂದ ಬಹುಕಾಲದ ಮೇಲೆ ಪರಿಹರಿಸಲ್ಪಡುವ ಪಾಪಗಳು ಋಷಿಗಳನ್ನು ಮುಹೂರ್ತಕಾಲದ ವರೆಗೆ ಸೇವಿಸಿದರೆ ಹೋಗುತ್ತವೆ ಎಂದುಹೇಳಿದಿ. ಇದು ಹೇಗೆ ಯುಕ್ತವಾಗುತ್ತದೆ? ಎಂದು ಕೇಳಬಹುದು. ಈ ಪ್ರಶ್ನೆಗೆ ಉತ್ತರವನ್ನು ಕೊಡುವೆನು.

ದೇವತೆಗಳು ಋಷಿಗಳಿಂತ ಉತ್ತಮರು ಎಂಬ ವಿಷಯವು ಸತ್ಯ. ಆದರೂ ಋಷಿಗಳಲ್ಲಿ ಜನರಿಗೆ ಗೌರವ ಬುದ್ಧಿಯು ಹುಟ್ಟಬೇಕು ಎಂಬ ಕಾರಣದಿಂದ ಶ್ರೀಕೃಷ್ಣನೇ ಮೊದಲಾದ ರೂಪಗಳನ್ನು ಸ್ವೀಕರಿಸಿದ ನಾನೂ ಇತರ ದೇವತೆಗಳೂ ದೇವತೆಗಳಿಗಿಂತ ಋಷಿಗಳನ್ನು ತುಂಬಾ ಹೊಗಳುತ್ತೇವೆ. ಇನ್ನೂ ಒಂದು ಕಾರಣವನ್ನು ಹೇಳುವೆನು.

"ಈ ದೇಹದಲ್ಲಿ ಭೂ, ಜಲ, ತೇಜಸ್ಸು ಎಂಬ ಮೂರು ಭೂತಗಳೂ ವಾತ, ಪಿತ್ತ, ಕಫ ಎಂಬ ಮೂರು ಧಾತುಗಳೂ ಅಧಿಕವಾಗಿರುವುದರಿಂದ ಈ ದೇಹವನ್ನು ತ್ರಿಧಾತುಕ ಎಂದು ಹೇಳಬಹುದು. ಈ ದೇಹವು ಹೆಣದಂತೆ ಆತ್ಮನಿಂದ ರಹಿತವಾಗಿರುತ್ತದೆ. ಈ ಸ್ಥಿತಿಯನ್ನು ಹೆಣದಲ್ಲಿ ಪ್ರತ್ಯಕ್ಷವಾಗಿ ತಿಳಿಯ ಬಹುದು. ಆದ್ದರಿಂದ ಈ ದೇಹವನ್ನು ಕುಣಪ ಅಂದರೆ ಹೆಣ ಎಂದು ಹೇಳಬಹುದು. ಇಂತಹ ದೇಹವನ್ನು ಆತ್ಮ ಅಂದರೆ ನಾನು ಎಂದು ತಿಳಿಯುವವನು ಗೋಖರ ಅಂದರೆ ಭೂಮಿಯಲ್ಲಿ ಕತ್ತೆಯೆನಿಸುವನು. ಹೆಂಡತಿ, ಮಕ್ಕಳು ಮುಂತಾದವರು ಯಾವಾಗಲೂ ಮೋಹವನ್ನು ಕೊಟ್ಟು ಸಂಸಾರದಲ್ಲಿ ಸುತ್ತಿಸುವವರು. ಅವರಲ್ಲಿ "ಇವರೆಲ್ಲರೂ ನನ್ನವರು. ನಾನು ಇವರಿಗೆ ಸಂಬಂಧಿಸಿದವನು" ಎಂದು ತಿಳಿಯುವವನೂ ಭೂಮಿಯಲ್ಲಿ ಕತ್ತೆಯೆನಿಸುವನು. ಅವರಲ್ಲಿ ಭೋಗದ ಆಸೆಯಿಂದ ಜೀವರು ಕೆಡುತ್ತಿರುವರು. ಭೂಮಿಯು ದೇವಾಲಯದ ವಿಗ್ರಹ ಮುಂತಾದ ರೂಪವನ್ನು ಧರಿಸುತ್ತದೆ. "ಆ ವಿಗ್ರಹಾದಿಗಳೇ ಪೂಜ್ಯವಾದವುಗಳು. ಅದರಲ್ಲಿ ಸನ್ನಿಹಿತನಾದ ಶ್ರೀಹರಿಯು ಪೂಜ್ಯನಲ್ಲ" ಎಂದು ತಿಳಿಯುವವನು

ಭೂಮಿಯಲ್ಲಿ ಕತ್ತೆಯೆನಿಸುವನು. "ಗಂಗಾದಿಗಳಲ್ಲಿರುವ ನೀರುಗಳೇ ಪಾಪಪರಿಹಾರಕವಾದವುಗಳು. ಆ ನೀರುಗಳಲ್ಲಿರುವ ತೀರ್ಥಾಭಿಮಾನಿದೇವತೆಗಳು ಪಾಪಪರಿಹಾರಕವಲ್ಲ" ಎಂದು ತಿಳಿಯುವವನು ಭೂಮಿಯಲ್ಲಿ ಕತ್ತೆಯೆನಿಸುವನು. ನಿಮ್ಮಂತಹ ಮಹಾಜ್ಞಾನಿಗಳನ್ನು ನೋಡಿದೆನು. ನಿಮ್ಮ ಸೇವೆಯನ್ನು ಮಾಡಿ ನಾನು ಧನ್ಯನಾದೆನು." ಎಂದು ಶ್ರೀಕೃಷ್ಣದೇವನು ಹೇಳಿದನು.

ಶ್ರೀಕೃಷ್ಣದೇವನ ಮಾತುಗಳನ್ನು ಎಲ್ಲಾ ಮುನಿಗಳು ಕೇಳಿದರು. "ಶ್ರೀಕೃಷ್ಣದೇವನು ಸರ್ವೇಶ್ವರನಲ್ಲವೇ? ಅವನು ನಮ್ಮೆಲ್ಲರ ದಾಸನೆಂದು ಹೇಳುತ್ತಿರುವನು. ಇದು ಹೇಗೆ ಯುಕ್ತವಾಗುತ್ತದೆ?" ಎಂದು ಬಹುಕಾಲದ ವರೆಗೆ ವಿಮರ್ಶಿಸಿದರು. ಕೊನೆಗೆ "ಜನ ಸಂಗ್ರಹ" ಅಂದರೆ" ಎಲ್ಲಾ ಜನರೂ ಜ್ಞಾನಿಗಳಲ್ಲಿ ವಿಶೇಷ ಮರ್ಯಾದೆಯನ್ನು ತೋರಿಸಬೇಕು." ಎಂದು ತಾನೇ ಮಾಡಿ ತೋರಿಸುತ್ತಿರುವನು ಎಂದು ಮೆಲ್ಲನೆ ನಗುತ್ತಾ ಹೇಳಿದರು. ಆ ಮುನಿಗಳು ಶ್ರೀಕೃಷ್ಣದೇವನನ್ನು ನೋಡಿ ಹೇಳಲು ಆರಂಭಿಸಿದರು.

"ಓ ಶ್ರೀಹರಿಯೇ, ನಾವೆಲ್ಲರೂ ತತ್ವಜ್ಞಾನಿಗಳ ಮಧ್ಯದಲ್ಲಿ ಉತ್ತಮರು ಎಂದು ಹೇಳಲ್ಪಡುತ್ತೇವೆ. ಆದರೆ ನಿನ್ನ ಮಾಯೆಯಿಂದ ನಮಗೂ"ನಾವೂ ಉತ್ತಮರಾಗಿರಬಹುದು" ಎಂಬ ಬುದ್ಧಿಯು ಹುಟ್ಟುತ್ತದೆ. "ನೀನು ಲೋಕವಿಡಂಬನಕ್ಕಾಗಿ ನಿಜಸ್ವರೂಪವನ್ನು ಆಚ್ಛಾದನೆ ಮಾಡಿಕೊಂಡಿರುವಿ. ಸರ್ವಜೀವರ ಅಧಿಪತಿಯಾಗಿರುವ ನೀನು ನಮ್ಮೆಲ್ಲರ ದಾಸನಂತೆ ನಟಿಸುತ್ತಿರುವಿ. ನಿನ್ನ ವ್ಯಾಪಾರವು ವಿಚಿತ್ರವಾದುದು."

"ಓ ಶ್ರೀಹರಿಯೇ, ನೀನು ಮಾಡುವ ಯಾವ ಕೆಲಸವೂ ಇನ್ನೊಬ್ಬನ ಪ್ರೇರಣೆಯಿಂದ ಏರ್ಪಡುವುದಿಲ್ಲ. ನಿನ್ನ ಇಚ್ಛೆಯಿಂದಲೇ ಏರ್ಪಡುತ್ತದೆ. ಭೂಮಿಯು ನಾನಾ ವಿಧವಾದ ಕಾರ್ಯರೂಪವನ್ನು ಧರಿಸುತ್ತದೆ. ಆ ಕಾರ್ಯರೂಪಗಳಿಂದ ಬದ್ಧವಾಗಿಯೂ ಇರುತ್ತದೆ. ನೀನೂ ಸಹ ಈ ಜಗತ್ತನ್ನು ನಾನಾ ವಿಧವಾಗಿ ಸೃಷ್ಟಿಸುತ್ತಿ. ಪಾಲಿಸುತ್ತಿ. ಸಂಹರಿಸುತ್ತಿ. ಆದರೂ ನಾನಾ ವಿಧವಾದ ವ್ಯಾಪಾರಗಳನ್ನು ಮಾಡುತ್ತಿರುವ ನೀನು ಅವುಗಳಿಂದ ಬದ್ಧನಾಗುವುದಿಲ್ಲ. ಆಹಾ, ಪೂರ್ಣನಾದ ನಿನ್ನ ಚರಿತ್ರೆಯು ಆಶ್ಚರ್ಯಕರವಾಗಿದೆ."

"ಆದರೂ ಲೋಕವಿಡಂಬನಶಕ್ತಿಯಿಂದ ಯುಕ್ತನಾಗಿರುವ ನೀನು ದುಷ್ಟನಿಗ್ರಹಕ್ಕಾಗಿ ತಮೋಗುಣವನ್ನೂ ಸ್ವಜನರಾದ ಭಕ್ತರನ್ನು ಅನುಗ್ರಹಿಸುವುದಕ್ಕಾಗಿ ಸತ್ವಗುಣವನ್ನೂ ಸ್ವೀಕರಿಸುತ್ತೀ. ಸಜ್ಜನರಿಗೆ ಕಷ್ಟ ಬಂದ ಕಾಲದಲ್ಲಿ ವರ್ಣಾಶ್ರಮ ಸ್ಥಾಪನಾಚಾರ್ಯನೆನಿಸಿ ಸನಾತನವಾದ ವೇದಮಾರ್ಗವನ್ನು ರಕ್ಷಿಸುತ್ತಿ."

"ಓ ಶ್ರೀಕೃಷ್ಣದೇವ, ತಪಸ್ಸು, ವೇದಾಧ್ಯಯನ, ಇಂದ್ರಿಯನಿಗ್ರಹ ಮುಂತಾದ ಗುಣಗಳಿಂದ ಬ್ರಾಹ್ಮಣಕುಲವು ಅತ್ಯಂತ ಪರಿಶುದ್ಧವಾದುದು. ಈ ಬ್ರಾಹ್ಮಣರು ಶಾಸ್ತ್ರವನ್ನು ಓದಿ ನಿನ್ನನ್ನು ತಿಳಿದಿರುವರು. ಇತರ ಯಾವ ಉಪಾಯಗಳಿಂದಲೂ ನೋಡಲು ಸಾಧ್ಯವಿಲ್ಲದಿರುವ ನಿನ್ನನ್ನು ಸಾಕ್ಷಾತ್ಕರಿಸಿರುವರು. ವೇದಪ್ರತಿಪಾದ್ಯನಾದ ನಿನ್ನನ್ನು ತಿಳಿದಿರುವ ಬ್ರಾಹ್ಮಣರಲ್ಲಿ ನಿನಗೆ ಅತ್ಯಧಿಕ ಪ್ರೀತಿಯು ಇರುತ್ತದೆ. ಆದ್ದರಿಂದ ನಿನ್ನನ್ನು ನಾವು ನೋಡಿದೆವು. ಸಕಲ ಶ್ರೇಯಸ್ಸುಗಳಿಗಿಂತಲೂ ಅಧಿಕ ಶ್ರೇಯಃಪ್ರದನಾದ ನಿನ್ನನ್ನು ನೋಡಿದ ನಮ್ಮ ಕಣ್ಣುಗಳು ಸಫಲವಾದವು. ಓ ಶ್ರೀಕೃಷ್ಣದೇವ, ಪಾಪರಾಶಿಯನ್ನು ಪರಿಹರಿಸುವ ಶಕ್ತಿಯುಳ್ಳ ತೀರ್ಥಗಳಿಗೆ ಆಶ್ರಯವೂ, ಅತ್ಯಂತ ಪಕ್ವವಾದ ಯೋಗಾಭ್ಯಾಸವುಳ್ಳ ಜ್ಞಾನಿಗಳಿಂದ ಹೃದಯಕಮಲದಲ್ಲಿ ಧ್ಯಾನಿಸಲ್ಪಟ್ಟಿರುವುದೂ, ಆಗಿರುವ ನಿನ್ನ

ಪಾದಶಮಲಗಳನ್ನು ನೋಡಿದವು ಇದರಿಂದ ನಮ್ಮ ಲಿಂಗದೇಹವು ನಮ್ಮನ್ನು ಬಿಟ್ಟು ಹೋಗುವಂತಾಯಿತು. ನಿನ್ನಲ್ಲಿ ನಮ್ಮೆಲ್ಲರಿಗೂ ಭಕ್ತಿಯು ಬೆಳೆಯುವಂತೆ ಮಾಡು. ನಿನ್ನ ಭಕ್ತರಾದ ನಮ್ಮನ್ನು ಅನುಗ್ರಹಿಸು" ಎಂದು ಪ್ರಾರ್ಥಿಸಿದರು. ಹೀಗೆ ಸ್ಯಮಂತಪಂಚಕಕ್ಷೇತ್ರಕ್ಕೆ ಬಂದಿರುವ ಮುನಿಗಳ ಸಮೂಹವನ್ನು ಸಂತೋಷಪಡಿಸಿದನು.

**ಸ್ವಪಿತ್ರಾ ಯಜ್ಞಂ ಅನುಷ್ಠಾಪ್ಯ. ನೈಜಂ ಪುರಂ ಆಪ್ಯ,**

ಸ್ಯಮಂಕಪಂಚಕಕ್ಷೇತ್ರದಲ್ಲ ತನ್ನನ್ನು ನೋಡಲಿಕ್ಕಾಗಿ ಬಂದಿರುವ ಬ್ರಾಹ್ಮಣರಿಂದ ತನ್ನ ತಂದೆಯಾದ ವಸುದೇವನಿಂದ ಯಜ್ಞವನ್ನು ಮಾಡಿಸಿದನು. ದ್ವಾರಕೆಗೆ ಬಂದನು.

**(೯೪) ವಿಶೇಷಾರ್ಥ - ತಾನ್ ಮುನೀನ್ ಋತ್ವಿಜಃ ಕೃತ್ವಾ, ಸ್ವಪಿತ್ರಾ ವಸುದೇವೇನ ತ್ರಿವಾರಂ ಯಜ್ಞಂ ಕಾರಯಿತ್ವಾ, ಸರ್ವಾನ್ ತತ್ತದ್ದೇಶಂ ಪ್ರತ್ಯನುಜ್ಞಾಪ್ಯ, ಸ್ವಬಂಧುಭಿಃ ಸಹ ದ್ವಾರಕಾಂ ಪ್ರಾಪ್ಯ.**

**ವಿಶೇಷಾರ್ಥ ವಿವರಣ -** ಶ್ರೀಕೃಷ್ಣದೇವನನ್ನೂ, ಧೃತರಾಷ್ಟ್ರ, ಧರ್ಮರಾಜ ಮುಂತಾದ ರಾಜರ್ಷಿಗಳನ್ನೂ ನೋಡಿ ಮಾತಾಡಿ ಅವರಿಂದ ಅನುಮತಿಯನ್ನು ಪಡೆದರು. ಕೊನೆಗೆ ಎಲ್ಲಾ ಋಷಿಗಳೂ ತಮ್ಮ ತಮ್ಮ ಆಶ್ರಮಗಳಿಗೆ ಹಿಂದಿರುಗುವುದಾಗಿ ತೀರ್ಮಾನಿಸಿದರು. ಆಗ ವಸುದೇವನು ಎಲ್ಲಾ ಋಷಿಗಳನ್ನೂ ನಮಸ್ಕರಿಸಿದನು.

"ಎಲೈ ಋಷಿಗಳಿರಾ, ನಾವು ಪರರನ್ನು ಹಿಂಸಿಸಿ ಪಾಪಗಳನ್ನು ಸಂಪಾದಿಸುತ್ತೇವೆ. ಆ ಪಾಪವನ್ನು ಕಳೆದುಕೊಳ್ಳುವುದಕ್ಕಾಗಿ ಯಜ್ಞವನ್ನು ಮಾಡಲೇಬೇಕೆಂದು ಶಾಸ್ತ್ರದಲ್ಲಿ ಹೇಳಿರುತ್ತಾರೆ. ಯಜ್ಞಗಳಲ್ಲಿಯೂ ಪ್ರಾಣಿಹಿಂಸೆಯಿದೆ. ಹಿಂಸೆಯಿಂದ ಬಂದಿರುವ ಪಾಪವನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಪ್ರಾಣಿಹಿಂಸಾತ್ಮಕವಾಗಿರುವ ಯಜ್ಞವನ್ನು ಮಾಡುವುದೇ? ಅದರಿಂದ ಪಾಪಪರಿಹಾರ ವಾಗುತ್ತದೆಯೇ? ಅದು ಹೇಗೆ? ನನಗೆ ತಿಳಿಯುವಂತೆ ಹೇಳಬೇಕು" ಎಂದು ಪ್ರಶ್ನಿಸಿದನು.

ಈ ಮಾತುಗಳನ್ನು ಋಷಿಗಳು ಕೇಳಿದರು. ಸರ್ವೇಶ್ವರನಾದ ಶ್ರೀಕೃಷ್ಣದೇವನ ತಂದೆಯಾದ ವಸುದೇವನು ಅಲ್ಪಜ್ಞರಾದ ತಮ್ಮನ್ನು ಮಹಾಜ್ಞಾನಿಗಳೆಂದು ತಿಳಿದು ಪ್ರಶ್ನಿಸುತ್ತಿರುವುದನ್ನು ತಿಳಿದು ಆಶ್ಚರ್ಯಪಟ್ಟರು. ಅವರನ್ನು ನೋಡಿ ನಾರದರು ಹೇಳಿದರು.

"ಗಂಗಾನದೀತೀರದಲ್ಲಿರುವವನು ಮಹಾಪುಣ್ಯಕಾಲಗಳಲ್ಲಿ ಗಂಗೆಯನ್ನು ಬಿಟ್ಟು ಸಮೀಪದಲ್ಲಿರುವ ಸಾಧಾರಣ ತೀರ್ಥಗಳಲ್ಲಿ ಸ್ನಾನಕ್ಕಾಗಿ ಹೋಗುವನು. ಆದ್ದರಿಂದ ಗಂಗಾದಿ ತೀರ್ಥಗಳು ಸಮೀಪದಲ್ಲಿದ್ದಷ್ಟು ಅವುಗಳಲ್ಲಿ ಗೌರವ ಬುದ್ಧಿಯು ಕಡಿಮೆಯಾಗುತ್ತದೆ.

ಶ್ರೀಕೃಷ್ಣದೇವನ ಜ್ಞಾನವು ಕಾಲದೋಷದಿಂದಲೂ ಮರಣದಿಂದಲೂ ಜನನದಿಂದಲೂ ಇತರ ಯಾವ ಕಾರಣಗಳಿಂದಲೂ ತನ್ನ ನಿಮಿತ್ತದಿಂದಲೂ ಸತ್ತ್ವಾದಿಗುಣಗಳಿಂದಲೂ ಅಧರ್ಮದಿಂದಲೂ ನಷ್ಟವಾಗುವುದಿಲ್ಲ. ಪ್ರಾಣವಾಯುಸಂಚಾರ ಮುಂತಾದ ಪ್ರಾಕೃತವಸ್ತುಗಳಿಂದಲೂ ಜನನ ಮರಣಾದಿಗಳಿಂದಲೂ ಯುಕ್ತನಾದಂತೆ ಶ್ರೀಕೃಷ್ಣದೇವನು ಕಾಣಿಸುತ್ತಿರುವನು. ಅವಿದ್ಯಾ ಅಸ್ಮಿತಾ ರಾಗ, ದ್ವೇಷ, ಅಭಿನಿವೇಶ ಎಂಬ ಪಂಚಕ್ಲೇಶಗಳಿಂದಲೂ, ಆಧ್ಯಾತ್ಮಿಕ ಆಧಿದೈವಿಕ ಆಧಿಭೌತಿಕ ಮುಂತಾದ ವಿಕಾರಗಳಿಂದಲೂ ಯುಕ್ತನಾದಂತೆ ಕಾಣಿಸುತ್ತಿರುವನು. ಆದರೆ ಈ ನಿಮಿತ್ತಗಳಿಂದ ಅವನ ಜ್ಞಾನವು ಯಾವಾಗಲೂ ಕಡಿಮೆಯಾಗುವುದಿಲ್ಲ. ಅವನು

ಅಘಟಿತಘಟನಾಶಕ್ತಿಯುಳ್ಳವನು. ಅವನಿಗೆ ಸಮಾನನು ಇನ್ನೊಬ್ಬನಿಲ್ಲ. ಇಂತಹ ಮಹಾನುಭಾವನಾದ ಶ್ರೀಕೃಷ್ಣದೇವನನ್ನು ವಸುದೇವನು ಅಜ್ಞಾನಿಯೆಂದು ತಿಳಿದಿರುವನು. ಆದ್ದರಿಂದಲೇ ಶ್ರೀಕೃಷ್ಣದೇವನನ್ನು ಕೇಳದಂತೆ ನಮ್ಮಲ್ಲಿ ಕೇಳುತ್ತಿರುವನು. ಆದ್ದರಿಂದ ಆಶ್ಚರ್ಯಪಡಬೇಡಿರಿ. ಅವನ ಪ್ರಶ್ನೆಗೆ ಯೋಗ್ಯವಾದ ಉತ್ತರವನ್ನು ಕೊಡಿರಿ'' ಎಂದರು. ಋಷಿಗಳೆಲ್ಲರೂ ವಸುದೇವನ ಪ್ರಶ್ನೆಗೆ ಉತ್ತರವನ್ನು ಕೊಟ್ಟರು.

ಓ ವಸುದೇವಾ, ಪರರ ಹಿಂಸೆಯಿಂದ ಬಂದಿರುವ ಪಾಪಗಳ ಪರಿಹಾರವು ಹಿಂಸಾತ್ಮಕವಾದ ಯಜ್ಞದಿಂದ ಹೇಗೆ ಆಗುತ್ತದೆ? ಎಂದು ಕೇಳಿರುವಿ. ಅದಕ್ಕೆ ಉತ್ತರವನ್ನು ಕೊಡುವೆವು. ಎಲ್ಲಾ ಯಜ್ಞಗಳಲ್ಲಿಯೂ ಪೂಜ್ಯನಾದವನು ಶ್ರೀಹರಿಯೇ ಆಗಿರುವನು. ಬೇರೆ ಯಾವನೂ ಇಲ್ಲ. ಶ್ರೀಹರಿಯನ್ನು ಎಲ್ಲಾ ಯಜ್ಞಗಳಲ್ಲಿಯೂ ಶ್ರದ್ಧೆಯಿಂದ ಪೂಜಿಸಬೇಕು. ಕೆಸರಿನ ನೀರಿನಿಂದ ಕೆಸರಿನ ಕೈಯನ್ನು ತೊಳೆದಂತೆ ಹಿಂಸಾತ್ಮಕವಾದ ಯಜ್ಞಗಳಿಂದ ಹಿಂಸೆಯಿಂದ ಬಂದಿರುವ ಪಾಪಗಳ ಪರಿಹಾರವು ಆಗುವುದು ಅಶಕ್ಯವೆಂದು ನೀನು ಕೇಳುತ್ತಿರುವಿ. ಆ ಪ್ರಶ್ನೆಗೆ ಉತ್ತರವನ್ನು ಕೊಡುವೆವು.

ಪಾದರಸವು ಕೊಲ್ಲುವ ಶಕ್ತಿಯಿಂದ ಯುಕ್ತವಾದುದು. ಅದೇ ಪಾದರಸವನ್ನು ಭಸ್ಮ ಮಾಡಿದರೆ ಬದುಕಿಸುತ್ತದೆ. ಅದರಂತೆ ಹಿಂಸಾತ್ಮಕವಾದ ಯಜ್ಞವು ಪಾಪನಾಧನವಾಗಿದ್ದರೂ ಶ್ರೀಹರಿಯ ಪ್ರೀತ್ಯರ್ಥವಾಗಿ ಯಜ್ಞಗಳನ್ನು ಮಾಡಿ ಶ್ರೀಹರಿಗೆ ಸಮರ್ಪಿಸಿದರೆ ಪಾಪಪರಿಹಾರಕವೂ ಮೋಕ್ಷ ಮುಂತಾದ ಪರಮಪುರುಷಾರ್ಥಗಳನ್ನು ಕೊಡುವುದಕ್ಕೆ ಶಕ್ತವೂ ಆಗುತ್ತದೆ. ಇದರಿಂದ ಬೇಗನೆ ಪುಣ್ಯವು ಬರುತ್ತದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ಮೂರು ಜಾತಿಯಲ್ಲಿ ಹುಟ್ಟಿದವರು ತಮ್ಮಿಂದ ಸಂಪಾದಿಸಿದ ಶುದ್ಧವಾದ ಹಣದಿಂದ ಯಜ್ಞಗಳನ್ನು ಮಾಡಬೇಕು. ಆ ಯಜ್ಞಗಳಿಂದ ಶ್ರೀಹರಿಯನ್ನು ತೃಪ್ತಿಪಡಿಸಬೇಕು. ಶಾಸ್ತ್ರ ಎಂಬ ಕಣ್ಣಿನಿಂದ ನೋಡುವವರಿಗೆ ಶ್ರೀಹರಿಯಲ್ಲಿ ಮನಸ್ಸನ್ನು ಇಡುವುದೇ ದೊಡ್ಡ ಧರ್ಮವೆನಿಸುತ್ತದೆ.

ಸಂಸಾರವು ಅಸಾರವೆಂದು ತಿಳಿಯಬೇಕು. ಯಜ್ಞಗಳನ್ನೂ ದಾನಗಳನ್ನೂ ಮಾಡಿ ದುಡ್ಡಿನ ಆಸೆಯನ್ನು ಬಿಡಬೇಕು. ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಮನೆಯಲ್ಲಿಯೂ ಹೆಂಡತಿ ಮಕ್ಕಳುಗಳಲ್ಲಿಯೂ ಆಸೆಯನ್ನು ಬಿಡಬೇಕು. ಗ್ರಾಮ್ಯವಿಷಯಗಳಲ್ಲಿಯೂ ತನ್ನ ದೇಹದಲ್ಲಿಯೂ ಇಂದ್ರಾದಿ ಲೋಕಗಳಲ್ಲಿಯೂ ಆಸೆಯನ್ನು ಬಿಡಬೇಕು. ಬ್ರಹ್ಮಚಾರಿಗಳಾಗಿರುವಾಗಲೇ ವೈರಾಗ್ಯವು ಬಂದರೆ ಆಗಲೇ ತಪಸ್ಸಿಗಾಗಿ ಕಾಡಿಗೆ ಹೋಗಬೇಕು. ದೇವತೆಗಳ ಪಿತೃಗಳ ಮತ್ತು ಋಷಿಗಳ ತ್ರಿವಿಧವಾದ ಋಣಗಳಿಂದ ಯುಕ್ತನಾಗಿ ಜೀವನು ಹುಟ್ಟುವನು. ಯಜ್ಞವನ್ನು ಮಾಡಿ ದೇವತೆಗಳ ಋಣವನ್ನೂ ಅಧ್ಯಯನವನ್ನು ಮಾಡಿ ಋಷಿಗಳ ಋಣವನ್ನೂ ಮಗನನ್ನು ಪಡೆಯುವುದರಿಂದ ಪಿತೃಗಳ ಋಣವನ್ನೂ ಕಳೆದುಕೊಳ್ಳಬೇಕು. ಈ ಋಣವನ್ನು ಕಳೆದುಕೊಳ್ಳದೆ ಸಂನ್ಯಾಸವನ್ನು ಸ್ವೀಕರಿಸುವವನು ಪತಿತನಾಗುವನು. ಬ್ರಹ್ಮಚರ್ಯದಿಂದ ಋಷಿಋಣವನ್ನೂ ಮಗನಿಂದ ಪಿತೃ ಋಣವನ್ನೂ ಯಜ್ಞಗಳಿಂದ ದೇವ ಋಣವನ್ನೂ ಕಳೆದುಕೊಂಡು ಮನೆಯನ್ನು ಬಿಟ್ಟು ಸನ್ಯಾಸಿಯಾಗಬೇಕು. ಇದು ನಿನ್ನ ಪ್ರಶ್ನೆಕ್ಕೆ ಉತ್ತರ. ಇದು ನಿನಗೆ ತಿಳಿಯದೆ ಇಲ್ಲ. ಆದರೂ ಜನರಿಗೆ ತಿಳಿಸುವುದಕ್ಕಾಗಿ ನೀನು ಪ್ರಶ್ನೆಯನ್ನು ಮಾಡಿರುವಿ. ಜನ್ಮಾಂತರದಲ್ಲಿ ಮಾಡಿರುವ ಮಹಾಪುಣ್ಯದಿಂದ ನೀನೂ ನಿನ್ನ ಪತ್ನಿಯೂ ಅತ್ಯಂತ ಪರಿಶುದ್ಧರಾಗಿರುವಿರಿ. ಅತ್ಯಂತ ಭಕ್ತಿಯಿಂದ ಶ್ರೀಹರಿಯನ್ನು ಆರಾಧಿಸಿರುವಿರಿ. ಆದ್ದರಿಂದಲೇ ಶ್ರೀಹರಿಯು ನಿಮ್ಮಿಬ್ಬರಿಗೆ ಮಗನಾಗಿ ಹುಟ್ಟಿರುವನು'' ಎಂದು ಮುನಿಗಳು

ಹೇಳಿದರು. ಹೀಗೆ ಸ್ಯಮಂತಪಂಚಕಕ್ಷೇತ್ರಕ್ಕೆ ಬಂದಿರುವ ಎಲ್ಲಾ ಮುನಿಗಳ ಸಮೂಹವನ್ನು ಸಂತೋಷಪಡಿಸಿದನು.

ವಸುದೇವನು ಮುನಿಗಳು ಹೇಳಿದ ಮಾತುಗಳನ್ನು ಕೇಳಿ ದೇವತೆಗಳ ಋಣವನ್ನು ಕಳೆದುಕೊಳ್ಳುವುದಕ್ಕೆ ಯಜ್ಞಗಳನ್ನು ಮಾಡಬೇಕೆಂದು ತೀರ್ಮಾನಿಸಿದನು. ಆ ಮುನಿಗಳನ್ನು ಸಮೀಪಿಸಿ ತಲೆಯನ್ನು ಬಗ್ಗಿಸಿ ಅವರನ್ನು ನಮಸ್ಕರಿಸಿ ತನ್ನಿಂದ ಯಜ್ಞಗಳನ್ನು ಮಾಡಿಸಬೇಕೆಂದು ಪ್ರಾರ್ಥಿಸಿದನು. ಧರ್ಮ ಶ್ರದ್ಧೆಯಿಂದ ಪ್ರಾರ್ಥಿಸಲ್ಪಟ್ಟ ಆ ಋಷಿಗಳು ಧಾರ್ಮಿಕನಾದ ವಸುದೇವನಿಂದ ಸ್ಯಮಂತಪಂಚಕಕ್ಷೇತ್ರದಲ್ಲಿ ರಾಜಸೂಯಕ್ಕೆ ಸಮವಾಗಿರುವ ಯಜ್ಞಗಳನ್ನು ಮಾಡಿಸಿದರು. ವಸುದೇವನು ಯಜ್ಞದೀಕ್ಷೆಯನ್ನು ಸ್ವೀಕರಿಸಿದನು. ಆಗ ಯಾದವರೆಲ್ಲರೂ ಕಮಲದ ಬೀಜಗಳಿಂದ ನಿರ್ಮಿತವಾಗಿರುವ ಮಾಲೆಗಳನ್ನು ಕಂಠದಲ್ಲಿ ಧರಿಸಿದರು. ಎಲ್ಲಾ ರಾಜರುಗಳು ಸ್ನಾನ ಮಾಡಿದವರಾಗಿ ಮಡಿವಸ್ತ್ರಗಳನ್ನು ಧರಿಸಿ ಉತ್ತಮವಾದ ಆಭರಣಗಳನ್ನು ಧರಿಸಿದರು. ರಾಜರ ಪತ್ನಿಯರು ಸಂತುಷ್ಟರಾಗಿ ದೇಹದಲ್ಲಿ ಗಂಧವನ್ನು ಹಚ್ಚಿಕೊಂಡು, ಭಂಗಾರ, ಬೆಳ್ಳಿ ಅಥವಾ ಅಡಿಕೆಯನ್ನು ಕೈಯಲ್ಲಿ ಧರಿಸಿದವರಾಗಿ ಯಜ್ಞಶಾಲೆಯನ್ನು ಪ್ರವೇಶಿಸಿದರು.

ಆಗ ಮೃದಂಗ, ತಮಟೆ, ಶಂಖ, ನಗಾರಿ, ಮುಂತಾದ ಮಂಗಳವಾದ್ಯಗಳು ಬಾರಿಸಲ್ಪಟ್ಟವು. ನಟರೂ ನರ್ತಕರೂ ನರ್ತನವನ್ನು ಮಾಡಿದರು. ಸ್ತುತಿಪಾಠಕರು ಸ್ತುತಿಸಿದರು. ಗಂಧರ್ವಸ್ತ್ರೀಯರು ತಮ್ಮ ತಮ್ಮ ಪತಿಗಳೊಡನೆ ಹಾಡಿದರು. ಪರಮ ಭಕ್ತನೂ ಕರ್ತವ್ಯಕರ್ಮದಲ್ಲಿ ಜಾಗರೂಕನೂ ಆಗಿರುವ ವಸುದೇವನಿಗೆ ಋತ್ವಿಜರು ಅಭಿಷೇಕವನ್ನು ಮಾಡಿದರು. ಚಂದ್ರನು ಇಪ್ಪತ್ತೇಳು ನಕ್ಷತ್ರಗಳೊಡನೆ ಶೋಭಿಸಿದಂತೆ ಹದಿನೆಂಟು ಪತ್ನಿಯರಿಂದ ಸಹಿತನಾದ ವಸುದೇವನು ಶೊಭಿಸಿದನು. ಪೀತಾಂಬರಗಳು ಬಳೆಗಳು ಮುತ್ತಿನ ಮಾಲೆಗಳು, ಕಾಲುಗಡಗಗಳು, ಕರ್ಣಕುಂಡಲಗಳು, ಮುಂತಾದ ಸರ್ವ ವೈಭವಗಳಿಂದ ಶೋಭಿತರಾದ ಪತ್ನಿಯರಿಂದಲೂ ಸಕಲ ಯಾದವರಿಂದಲೂ ವಸುದೇವನು ಶೋಭಿಸಿದನು. ಹೋತಾ ಪೋತಾ, ನೇಷ್ಟಾ ಅಧ್ವರ್ಯು, ಆಗ್ನೀಧ್ರ, ಮೈತ್ರಾವರುಣ ಮುಂತಾದ ಹದಿನಾರು ಋತ್ವಿಕ್ಕುಗಳಿಂದ ಸಹಿತನಾದ ಹದಿನೇಳನೆಯ ಯಜಮಾನನಾದ ವಸುದೇವನು ಪ್ರಕಾಶಿಸಿದನು. ದೇವೇಂದ್ರನ ಯಜ್ಞದಂತೆ ಆ ಯಜ್ಞವು ಶೋಭಿಸಿತು. ಆಗ ಬಲರಾಮ, ಮತ್ತು ಶ್ರೀಕೃಷ್ಣದೇವರು ತಮ್ಮತಮ್ಮ ಬಂಧುಗಳಿಂದಲೂ ಮಕ್ಕಳುಗಳಿಂದಲೂ ಪತ್ನಿಯರಿಂದಲೂ ಯುಕ್ತರಾಗಿ ಸರ್ವರಿಗೂ ಯೋಗ್ಯವಾದ ಮರ್ಯಾದೆಗಳನ್ನು ಮಾಡಿದರು. ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ ಪ್ರಾಕಾಮ್ಯ ಈಶಿತ್ವ, ವಶಿತ್ವ ಎಂಬ ಅಷ್ಟವಿಭೂತಿಗಳನ್ನು ವ್ಯಕ್ತಪಡಿಸಿದನು. ಆ ಸಭೆಯಲ್ಲಿರುವ ಸರ್ವರನ್ನೂ ಅವರವರ ಯೋಗ್ಯತಾನುಸಾರವಾಗಿ ಗೌರವಿಸಬೇಡವೇ?

ವಸುದೇವನು ಎಲ್ಲಾ ಯಜ್ಞಗಳನ್ನೂ ಮಾಡಿದನು. ಋತ್ವಿಕ್ಕುಗಳಿಗೆ ಶಾಸ್ತ್ರೋಕ್ತವಾದ ದಕ್ಷಿಣೆಗಳನ್ನು ಕೊಟ್ಟನು. ಅವರನ್ನು ಅಲಂಕಾರಗಳಿಂದ ಅಲಂಕರಸಿದನು. ಗೋದಾನ, ಭೂದಾನ, ಕನ್ಯಾದಾನ, ಸುವರ್ಣದಾನ ಮುಂತಾದ ಮಹಾದಾನಗಳಿಂದ ಅವರನ್ನು ತೃಪ್ತಿಪಡಿಸಿದನು. ಋತ್ವಿಕ್ಕುಗಳು ಯಜಮಾನನ ಪತ್ನಿಯರಿಂದ "ಪತ್ನೀಸಂಯಾಜ" ಎಂಬ ಯಜ್ಞವನ್ನು, "ಅವಭೃಥ" ಎಂಬ ಇಷ್ಟಿಯನ್ನು ಮಾಡಿಸಿದರು. ಹೀಗೆ ಯಾಗವು ಮುಗಿಯುವಾಗ ಸ್ಯಮಂತಪಂಚಕದಲ್ಲಿರುವ ಐದು ಮಡುವುಗಳಲ್ಲಿ ಯಜಮಾನನಾದ ವಸುದೇವನನ್ನು ಮುಂದಿಟ್ಟುಕೊಂಡು ಬ್ರಾಹ್ಮಣರು ಸ್ನಾನ ಮಾಡಿದರು. ಸ್ನಾನವು ಮುಗಿದ ಕೂಡಲೇ ಸ್ತುತಿಪಾಠಕರಿಗೆ ವಸುದೇವನು ಅಲಂಕಾರಗಳನ್ನೂ ವಸ್ತ್ರಗಳನ್ನೂ ಸಮರ್ಪಿಸಿದನು. ಅವನ ಪತ್ನಿಯರು ಅವರ ಸ್ತ್ರೀಯರಿಗೆ ವಸ್ತ್ರಾದಿಗಳನ್ನು ಸಮರ್ಪಿಸಿದರು.

ಎಲ್ಲಾ ಜಾತಿಯವರಿಗೂ ಅಲಂಕಾರಗಳನ್ನು ಕೊಟ್ಟು ಚಂಡಾಲ ಮುಂತಾದವರಿಗೂ ನಾಯಿ ಮುಂತಾದ ಪ್ರಾಣಿಗಳಿಗೂ ಅವರವರಿಗೆ ಯೋಗ್ಯವಾದ ಅನ್ನವನ್ನು ಸಮರ್ಪಿಸಿದನು.

ಬಂಧುಗಳು, ಅವರ ಪತ್ನಿಯರು ಮಕ್ಕಳು ಮುಂತಾದವರಿಗೆ ಬಹುಮಾನವನ್ನು ಕೊಟ್ಟನು. ವಿದರ್ಭ, ಕೋಸಲ, ಕುರು, ಕಾಶಿ, ಕೈಕಯ, ಸೃಂಜಯ, ಮುಂತಾದ ರಾಜರುಗಳಿಗೆ ಮರ್ಯಾದೆಯನ್ನು ಮಾಡಿದನು. ಸದಸ್ಯರೂ, ಋತ್ವಿಕ್ಕುಗಳೂ ದೇವತೆಗಳೂ, ಮನುಷ್ಯರೂ, ಭೂತಗಳೂ, ಸೂತರೂ, ಚಾರಣರೂ, ಲಕ್ಷ್ಮೀದೇವಿಯರ ವಿಶೇಷ ಸನ್ನಿಧಾನದಿಂದ ಯುಕ್ತವಾಗಿರುವ ಯಜ್ಞವನ್ನು ಸ್ತುತಿಸುತ್ತಾ ಹಿಂದಿರುಗಿದರು. ಹೀಗೆ ಎಲ್ಲಾ ಯಜ್ಞಗಳನ್ನೂ ಮೂರುಮೂರು ಸಲ ಮಾಡಿದನು.

ಧೃತರಾಷ್ಟ್ರ, ವಿದುರ, ದ್ರೋಣರು, ಭೀಷ್ಮ ಅಶ್ವತ್ಥಾಮಾ, ಕೃಪಾಚಾರ್ಯರು, ನಾರದರು, ವ್ಯಾಸರು ಮತ್ತು ಸ್ನೇಹಿತರು, ಸಂಬಂಧಿಗಳು, ಬಂಧುಗಳು, ವಸುದೇವ ಮುಂತಾದವರನ್ನು ಆಲಿಂಗಿಸಿದರು. ಸ್ನೇಹಾತಿರೇಕದಿಂದ ಮನಸ್ಸು ಕರಗಿತು. ವಿರಹವನ್ನು ಸಹಿಸಲಾರದೆ ಕಷ್ಟದಿಂದ ತಮ್ಮ ತಮ್ಮ ಊರುಗಳಿಗೆ ಹಿಂದಿರುಗಿದರು.

ನಂದನು ಗೋಪಾಲಕರಿಂದ ಸಹಿತನಾಗಿ ಬಂಧುಗಳಲ್ಲಿ ಪ್ರೇಮದಿಂದ ಅಲ್ಲಿಯೇ ಇದ್ದನು. ಶ್ರೀಕೃಷ್ಣದೇವ, ಬಲರಾಮ, ಉಗ್ರಸೇನ ಮುಂತಾದವರು ಅವನನ್ನು ಅಧಿಕವಾಗಿ ಪೂಜಿಸಿದರು. ವಸುದೇವನು ಯಜ್ಞವನ್ನು ಮಾಡಬೇಕೆಂಬ ಮನೋರಥ ಮಹಾಸಮುದ್ರವನ್ನು ದಾಟಿದನು. ನಂದನ ಕೈಯನ್ನು ತನ್ನ ಕೈಯಿಂದ ಹಿಡಿದುಕೊಂಡು ಹೇಳಿದನು.

"ತಮ್ಮನೇ, ಶ್ರೀಹರಿಯು ಏರ್ಪಡಿಸಿರುವ ಸ್ನೇಹ ಎಂಬ ಹಗ್ಗದಿಂದ ಬಿಡಿಸಿಕೊಳ್ಳಲು ಯಾರಿಂದಲೂ ಸಾಧ್ಯವಿಲ್ಲ. ನಮ್ಮಲ್ಲಿ ಜ್ಞಾನಿಶ್ರೇಷ್ಠರಾದ ನೀವು ತೋರಿಸಿರುವ ಸ್ನೇಹಕ್ಕೆ ಸಮವಾದ ಸ್ನೇಹವು ಯಾರಲ್ಲಿಯೂ ಇರಲಾರದು. ಈ ಸ್ನೇಹವನ್ನು ಬಿಡಲು ದೇವತೆಗಳಿಂದಲೂ ಯೋಗಿಗಳಿಂದಲೂ ಸಾಧ್ಯವಿಲ್ಲ. ನಮ್ಮಲ್ಲಿ ತೋರಿಸಿರುವ ಸ್ನೇಹದಿಂದ ನಿಮಗೆ ಯಾವ ಪ್ರಯೋಜನವೂ ಇಲ್ಲ. ಹಿಂದೆ ನಮ್ಮಲ್ಲಿ ನಿಮಗೆ ಉಪಕಾರವನ್ನು ಮಾಡಬೇಕೆಂಬ ಆಸೆ ಇತ್ತು. ಆದರೆ ಶಕ್ತಿ ಇರಲಿಲ್ಲ. ಈಗ ಶಕ್ತಿ ಇದೆ. ಆದರೆ ಹಣದ ಮದದಿಂದ ನಮ್ಮ ಮುಂದಿರುವ ನಿಮ್ಮನ್ನು ನೋಡುವುದಿಲ್ಲ.

ಯಾವನಿಗೆ ಶ್ರೇಯಸ್ಸು ಆಗಬೇಕೆಂಬ ಆಸೆಯಿದೆಯೋ ಅವನಿಗೆ ರಾಜ್ಯಸಂಪತ್ತು ಬರಬಾರದು. ಆ ಸಂಪತ್ತು ಬಂದರೆ ಸ್ವಜನರನ್ನೂ ಭೃತ್ಯರನ್ನೂ ಬಂಧುಗಳನ್ನೂ ಕಣ್ಣುಗಳಿದ್ದರೂ ಕುರುಡನಂತೆ ನೋಡುವುದಿಲ್ಲ.

ನಂದನ ಪ್ರೇಮದಿಂದ ವಸುದೇವನ ಮನಸ್ಸು ಶಿಥಿಲವಾಯಿತು. ನಂದನ ಮಿತ್ರತ್ವವನ್ನು ಸ್ಮರಿಸುವಾಗ ಕಣ್ಣುಗಳಿಂದ ನೀರಿನ ಧಾರೆಯನ್ನು ಸುರಿಸುತ್ತಾ ಅತ್ತನು.

ನಂದನು ವಸುದೇವನ ಮೇಲಿರುವ ಪ್ರೀತಿಯಿಂದಲೂ ಬಲರಾಮ ಮತ್ತು ಶ್ರೀಕೃಷ್ಣದೇವನ ಮೇಲಿರುವ ಪ್ರೀತಿಯಿಂದಲೂ ಇವತ್ತು ನಾಳೆ ಎಂದು ಹೇಳುತ್ತಾ ಯಾದವರಿಂದ ಮರ್ಯಾದೆಯನ್ನು ಪಡೆಯುತ್ತಾ ಮೂರು ತಿಂಗಳುಗಳನ್ನು ಕಳೆದನು. ಅವನಿಗೂ ಅವನ ಬಂಧುಗಳಿಗೂ ವೃಂದಾವನ ವಾಸಿಗಳಿಗೂ ಅಮೂಲ್ಯವಾದ ಆಭರಣಗಳನ್ನೂ ರೇಷ್ಮೆ ಮಡಿಗಳನ್ನೂ ಉಡುಗರೆಯಾಗಿ ವಸುದೇವ, ಉಗ್ರಸೇನ, ಶ್ರೀಕೃಷ್ಣ, ಅರ್ಜುನ ಬಲರಾಮ ಮುಂತಾದವರು ಕೊಟ್ಟರು. ಅವುಗಳೆಲ್ಲವನ್ನೂ ಕೊಟ್ಟು ಕಳುಹಿಸಿದರು. ನಂದನು ಮನಸ್ಸಿಲ್ಲದೆ ವೃಂದಾವನಕ್ಕೆ ಹೋದನು.

ಗೋಪಿಕಾಸ್ತ್ರೀಯರೂ ಗೋಪಾಲಕರೂ ಶ್ರೀಕೃಷ್ಣದೇವನಲ್ಲಿಟ್ಟಿರುವ ಮನಸ್ಸನ್ನು ಹಿಂತಿರುಗಿಸಿಕೊಳ್ಳಲು ಶಕ್ತರಾಗಲಿಲ್ಲ. ಶ್ರೀಕೃಷ್ಣದೇವನೊಡನೆ ಮಥುರಾಪಟ್ಟಣಕ್ಕೆ ಹೋದರು.

ದ್ರೋಣರೂ, ಭೀಷ್ಮರು, ಕರ್ಣ, ಬಾಹ್ಲೀಕರಾಜ, ವಿದುರ, ಧೃತರಾಷ್ಟ್ರ ಅವನ ಮಕ್ಕಳು ಮುಂತಾದವರು ತಮ್ಮ ತಮ್ಮ ಮನೆಗಳಿಗೆ ಹೋದರು. ಇತರ ಸಕಲ ರಾಜರುಗಳೂ ಮೂರು ತಿಂಗಳುಗಳಾದ ಮೇಲೆ ತಮ್ಮ ತಮ್ಮ ದೇಶಗಳಿಗೆ ಹೋದರು. ಮಹಾತ್ಮರಾದ ಪಾಂಡವರೂ ಕುಂತೀದೇವಿಯು ಶ್ರೀಕೃಷ್ಣದೇವನಿಂದ ಅನುಜ್ಞೆಯನ್ನು ಪಡೆದವರಾಗಿ ಕಣ್ಣೀರನ್ನು ಸುರಿಸುತ್ತಾ ತೊದಲು ನುಡಿಯಿಂದ ಮಾತಾಡಲು ಅಶಕ್ತರಾಗಿ ಇಂದ್ರಪ್ರಸ್ಥನಗರಕ್ಕೆ ಹೋದರು. ಎಲ್ಲಾ ಬಂಧುಗಳು ಹೋದಮೇಲೆ ಶ್ರೀಕೃಷ್ಣದೇವನೇ ಪರದೇವತೆಯೆಂದು ನಂಬಿರುವ ಸಕಲ ಯಾದವರೂ ಶ್ರೀಕೃಷ್ಣದೇವನನ್ನು ಸುತ್ತಿಕೊಂಡವರಾಗಿ ದ್ವಾರಕಾಪಟ್ಟಣಕ್ಕೆ ಹೋದರು.

## ಸ್ವಪಿತ್ರೇ ಅನೇಕತತ್ತ್ವಾನಿ ವದಿತಾ

ತನ್ನ ತಂದೆಯಾದ ವಸುದೇವನಿಗೆ ಅನೇಕ ತತ್ವಗಳನ್ನು ಉಪದೇಶಿಸಿದನು.

**(೯೫) ವಿಶೇಷಾರ್ಥ - ಕದಾಚಿತ್ ಸ್ವಪಿತ್ರೇ ವಸುದೇವಾಯ ಭಗವದ್ವಿಷಯಕ ಜಗಜ್ಜನ್ಮಾದಿಕರ್ತೃತ್ವರೂಪತತ್ತ್ವಾನ್ಯುಪದಿಶ್ಯ.**

**ವಿಶೇಷಾರ್ಥ ವಿವರಣ -** ಒಮ್ಮೆ ಶ್ರೀಕೃಷ್ಣಬಲರಾಮರು ತನಗೆ ನಮಸ್ಕರಿಸುವುದಕ್ಕಾಗಿ ಬಂದರು. ಆಗ ಈ ಎರಡು ಮಕ್ಕಳುಗಳ ಮಹಾತ್ಮ್ಯವನ್ನು ತಿಳಿಸುವ ಋಷಿಗಳ ಮಾತುಗಳನ್ನು ಸ್ಮರಿಸಿದನು. ಋಷಿಗಳ ಮಾತುಗಳಿಂದ ಅವರ ಮಹಾತ್ಮ್ಯದ ವಿಷಯದಲ್ಲಿ ತುಂಬಾ ನಂಬಿಕೆಯು ಬಂತು. ಅವರಿಬ್ಬರನ್ನೂ ಆಲಿಂಗಿಸಿ ನೋಡಿ ಈ ರೀತಿ ಹೇಳಿದನು.

ಓ ಶ್ರೀಕೃಷ್ಣ ಮಹಾಯೋಗಿಯೇ, ನೀನು ಈ ಪ್ರಪಂಚದಲ್ಲಿರುವ ಎಲ್ಲಾ ಜೀವರುಗಳಿಗಿಂತಲೂ ಜಡವಸ್ತುಗಳಿಗಿಂತಲೂ ಉತ್ತಮನು ಎಂಬ ವಿಷಯವನ್ನು ತಿಳಿದಿರುವೆನು. ಅದನ್ನು ಈಗ ವಿವರಿಸುವೆನು. ಓ ಶ್ರೀಕೃಷ್ಣದೇವ, "ಯಸ್ಮಿನ್ನಿದಂ" ಎಂಬ ಶ್ರುತಿಯನ್ನು ತಿಳಿದಿರುವೆನು. ಆ ಶ್ರುತಿಯು ಸಕಲ ಜೀವಜಡಾತ್ಮಕವಾದ ಪ್ರಪಂಚವು ನಿನ್ನನ್ನೇ ಆಶ್ರಯಿಸಿಕೊಂಡಿದೆ ಎಂದು ತಿಳಿಸುತ್ತದೆ. "ಯೇನ ಜಾತಾನಿ ಜೀವಂತಿ" ಎಂಬ ಶ್ರುತಿಯನ್ನು ತಿಳಿದಿರುವೆನು. ಆ ಶ್ರುತಿಯು ಹುಟ್ಟಿರುವ ಎಲ್ಲರೂ ನಿನ್ನಿಂದಲೇ ಬದುಕುತ್ತಿರುವರು ಎಂದು ಹೇಳುತ್ತಿದೆ "ಯತೋ ವಾ ಇಮಾನಿ ಭೂತಾನಿ ಜಾಯಂತೇ" ಎಂಬ ಶ್ರುತಿಯನ್ನು ತಿಳಿದಿರುವೆನು. ಆ ಶ್ರುತಿಯು ಜೀವಜಡಾತ್ಮಕವಾದ ಸಕಲ ಪ್ರಪಂಚಕ್ಕೂ ನೀನೇ ಜನಕನು ಎಂದು ಹೇಳುತ್ತಿದೆ. "ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಃ। ಮೃತ್ಯುರ್ಯಸ್ಯೋಪಸೇಚನಂ" ಎಂಬ ಶ್ರುತಿಯನ್ನು ಕೇಳಿರುವೆನು. ಆ ಶ್ರುತಿಯು ನೀನೇ ಜಗತ್ತನ್ನು ಸಂಹರಿಸುವವನು ಎಂದು ಹೇಳುತ್ತಿದೆ. "ಸಚ್ಚತ್ಯಚ್ಚಾಭವತ್" ಎಂಬ ಶ್ರುತಿಯನ್ನು ಕೇಳಿರುವೆನು. ಆ ಶ್ರುತಿಯು ಪರಮಾತ್ಮನ ಪ್ರೀತಿಗಾಗಿಯೇ ನಾವು ಎಲ್ಲಾ ಕಾರ್ಯಗಳನ್ನೂ ಮಾಡುತ್ತಿರುವೆವು ಎಂದು ಹೇಳುತ್ತಿದೆ. "ಬ್ರಹ್ಮೈವೇದಂ ಸರ್ವಂ" ಎಂಬ ಶ್ರುತಿಯನ್ನು ಕೇಳಿರುವೆನು. ಆ ಶ್ರುತಿಯಿಂದ ಯಾವ ಕಾಲದಲ್ಲಿ ಈ ಪ್ರಪಂಚವು ಇರುತ್ತದೆಯೋ ಆ ಕಾಲದಲ್ಲಿ ಪ್ರಪಂಚದಲ್ಲಿ ನಡೆಯುವ ಎಲ್ಲಾ ವ್ಯಾಪಾರಗಳು ನಿನ್ನಿಂದಲೇ ಏರ್ಪಡುತ್ತವೆ ಎಂದು ತಿಳಿದೆನು. ಇದನ್ನು

ಈಗ ಸೃಷ್ಟಿಪಡಿಸುವೆನು. ಜೀವನ ದೇಹದಲ್ಲಿ ಎಲ್ಲಾ ಇಂದ್ರಿಯಗಳೂ ಇವೆ. ಜೀವನು ದೇಹದಲ್ಲಿ ಪ್ರವೇಶಿಸಿದರೆ ಎಲ್ಲಾ ಇಂದ್ರಿಯಗಳು ವ್ಯಾಪಾರವನ್ನು ಮಾಡಲು ಶಕ್ತವಾಗುತ್ತವೆ. ಇಲ್ಲದಿದ್ದರೆ ಇಲ್ಲ. ಆದ್ದರಿಂದ ನೀನು ಸರ್ವರನ್ನೂ ಸೃಷ್ಟಿಸಿ ಅವರಲ್ಲಿ ಪ್ರವೇಶಿಸಿದರೆ ಅವರೆಲ್ಲರೂ ಎಲ್ಲಾ ವ್ಯಾಪಾರಗಳನ್ನು ಮಾಡಲು ಶಕ್ತರಾಗುವರು. ಮುಖ್ಯಪ್ರಾಣದೇವರು ಮುಂತಾದವರು ಸೃಷ್ಟಿ ಮುಂತಾದ ವ್ಯಾಪಾರಗಳನ್ನು ಮಾಡುವರು. ಅವರಲ್ಲಿರುವ ಸೃಷ್ಟಿಕರ್ತೃತ್ವ ಮುಂತಾದ ಶಕ್ತಿಗಳು ನಿನ್ನಿಂದಲೇ ಬಂದಿರುತ್ತವೆ. ಅವರೆಲ್ಲರೂ ಪರತಂತ್ರರು. ಶ್ರೀಹರಿಗಿಂತ ವಿಲಕ್ಷಣವಾದ ಶಕ್ತಿಯುಳ್ಳವರು. ಬಿರುಗಾಳಿಯಿಂದ ಹುಲ್ಲು ಮತ್ತು ಎಲೆಗಳು ಹಾರುತ್ತಿರುವಂತೆ ಪುರುಷನ ಶಕ್ತಿಯಿಂದ ಬಾಣ ಮುಂತಾದವುಗಳು ಓಡುತ್ತಿರುವಂತೆ ನಿನ್ನ ಶಕ್ತಿಯಿಂದಲೇ ಸರ್ವರಲ್ಲಿಯೂ ಎಲ್ಲಾ ವ್ಯಾಪಾರಗಳೂ ನಡೆಯುತ್ತವೆ. ಚಂದ್ರನಲ್ಲಿರುವ ಕಾಂತಿಯೂ, ಸೂರ್ಯನಲ್ಲಿರುವ ತೇಜಸ್ಸೂ, ಮಿಂಚು ಮುಂತಾದವುಗಳ ಸ್ಥಿತಿಯೂ, ಪರ್ವತಗಳಲ್ಲಿರುವ ಸ್ಥೈರ್ಯವೂ, ಭೂಮಿಯ ಇರುವಿಕೆಯೂ ಸಸ್ಯಾದಿಗಳ ಜೀವನವೂ, ಭೂಮಿಯಲ್ಲಿರುವ ಗಂಧವೂ ನಿನ್ನ ಅಧೀನವಾಗಿವೆ.

ನೀರಿನಲ್ಲಿ ತೃಪ್ತಿಪಡಿಸುವುದು. ಬದುಕಿಸುವುದು, ಹರಿಯುವುದು, ಮಧುರರಸ, ಮುಂತಾದ ಗುಣಗಳಿವೆ. ಆ ನೀರುಗಳೂ ಅವುಗಳ ಗುಣಗಳೂ ನಿನ್ನ ಅಧೀನವಾಗಿವೆ. ವಾಯುವಿನಲ್ಲಿ ತಡೆದು ನಿಲ್ಲಿಸುವ ಶಕ್ತಿ, ಸಹನಶಕ್ತಿ ಬಲ, ಯಾವಾಗಲೂ ಸಂಚರಿಸುವ ಶಕ್ತಿ ಮುಂತಾದ ಶಕ್ತಿಗಳಿವೆ. ಆ ಶಕ್ತಿಗಳೂ ವಾಯುವೂ ನಿನ್ನ ಅಧೀನವಾಗಿವೆ. ಆಕಾಶದ ಅಂದರೆ ದಿಕ್ಕುಗಳಲ್ಲಿ ಅವಕಾಶಪ್ರದತ್ವ ಎಂಬ ಗುಣವಿದೆ. ನಿರ್ದೋಷವಾದ ಅನಂತ ವೇದಗಳಿವೆ. ಬಿದಿರು ಮುಂತಾದವುಗಳನ್ನು ಸೀಳುವಾಗ ಏರ್ಪಡುವ ಧ್ವನ್ಯಾತ್ಮಕ ಶಬ್ದಗಳಿವೆ. ಶಂಖಾದಿವಾದ್ಯಗಳ ಧ್ವನಿಗಳಿವೆ. ಆ ಧ್ವನಿ ಮುಂತಾದವುಗಳೂ ಅವುಗಳಿಗೆ ಆಶ್ರಯವಾಗಿರುವ ದಿಕ್ಕುಗಳೂ ನಿನ್ನ ಅಧೀನವಾಗಿವೆ. ಬೇರೆ ಬೇರೆ ಇಂದ್ರಿಯಗಳಿಂದ ಬೇರೆ ಬೇರೆ ವ್ಯಾಪಾರಗಳು ನಡೆಯುತ್ತಿರುತ್ತವೆ. ಆ ಇಂದ್ರಿಯಗಳೂ ಅವುಗಳಿಂದ ಏರ್ಪಡುವ ವ್ಯಾಪಾರಗಳೂ ನಿನ್ನ ಅಧೀನವಾಗಿವೆ. ಇಂದ್ರಿಯಗಳಿಗೂ ಇತರ ಸರ್ವವ್ಯಾಪಾರಗಳಿಗೂ ಪ್ರೇರಕವಾದ ದೇವತೆಗಳೂ ನಿನ್ನ ಅಧೀನರು. ಎಲ್ಲರಲ್ಲಿಯೂ "ಬುದ್ಧಿ" ಅಂದರೆ ಜ್ಞಾನವನ್ನು ಹುಟ್ಟಿಸುವ ಶಕ್ತಿ, "ಅನುಸ್ಮೃತಿಃ" ಅಂದರೆ ಜ್ಞಾಪಕಶಕ್ತಿಯು ಇರುತ್ತದೆ. ಆ ಬುದ್ಧಿ ಅನುಸ್ಮೃತಿಗಳು ನಿನ್ನ ಅಧೀನವಾಗಿವೆ. ಪಂಚಭೂತಗಳಿಗೆ ಕಾರಣವಾಗಿರುವ ತಾಮಸಾಹಂಕಾರವೂ ಸರ್ವೇಂದ್ರಿಯಗಳಿಗೆ ಕಾರಣವಾಗಿರುವ ತೈಜಸಾಹಂಕಾರವೂ ಸರ್ವೇಂದ್ರಿಯಾಭಿಮಾನಿದೇವತೆಗಳ ಶರೀರಗಳಿಗೆ ಕಾರಣವಾಗಿರುವ ವೈಕಾರಿಕಾಹಂಕಾರ ಇವುಗಳು ನಿನ್ನ ಅಧೀನವಾಗಿವೆ.

ಎಲ್ಲಾ ವಸ್ತುಗಳಿಗೆ ನಾಶವಿದೆ. ಆದರೆ ಪ್ರಕೃತಿಗೆ ನಾಶವಿಲ್ಲ. ಅದರಂತೆಯೇ ಬ್ರಹ್ಮದೇವನಿಂದ ಆರಂಭಿಸಿ ಸರ್ವರೂ ನಾಶವನ್ನು ಹೊಂದುವರು. ನೀನು ಮಾತ್ರ ನಾಶವಿಲ್ಲದವನು. ಸತ್ವಗುಣದಿಂದ ಪಾಲನವನ್ನೂ ರಜೋಗುಣದಿಂದ ಸೃಷ್ಟಿಯನ್ನೂ ತಮೋಗುಣದಿಂದ ಸಂಹಾರವನ್ನೂ ಮಾಡುತ್ತಿರುವಿ. ಆ ಗುಣಗಳೂ ಆ ಗುಣಗಳಿಗೆ ಆಶ್ರಯವಾದ ಪ್ರಕೃತಿಯೂ ನಿನ್ನ ಅಧೀನವಾಗಿರುತ್ತವೆ. ಸೃಷ್ಟಿ ಮುಂತಾದ ವ್ಯಾಪಾರಗಳನ್ನು ಮಾಡುವುದಕ್ಕೂ ನಿನಗೆ ಆ ಗುಣಗಳ ಆವಶ್ಯಕತೆ ಇಲ್ಲ. ನಿನ್ನ ಇಚ್ಛೆಯಿಂದಲೇ ನೀನು ಅವುಗಳನ್ನು ಸ್ವೀಕರಿಸಿರುವಿ. ನೀನು ಈ ಎಲ್ಲಾ ಪದಾರ್ಥಗಳಲ್ಲಿಯೂ ಸನ್ನಿಹಿತನಾಗಿರುವುದರಿಂದಲೇ ಈ ಎಲ್ಲಾ ವಸ್ತುಗಳೂ ಇವೆ. ನೀನು ಸನ್ನಿಹಿತನಾಗದೆ ಇದ್ದರೆ ಈ ವಸ್ತುಗಳೆಲ್ಲವೂ ಇಲ್ಲವೇ ಇಲ್ಲವೆಂದು ಹೇಳಬಹುದು. ನೀನು ಈ ಎಲ್ಲಾ ವಸ್ತುಗಳಲ್ಲಿಯೂ

ಇದ್ದು ಎಲ್ಲಾ ವ್ಯಾಪಾರಗಳನ್ನೂ ಮಾಡಿಸುತ್ತಿರುವುದರಿಂದ ನೀನೊಬ್ಬನೇ ಸರ್ವ ವ್ಯಾಪಾರಗಳನ್ನೂ ಮಾಡುತ್ತಿರುವವನು ಎಂದು ಸರ್ವರೂ ಹೇಳುತ್ತಿರುತ್ತಾರೆ. ನೀನೊಬ್ಬನೇ ಅಖಂಡ ಸ್ವಾಮಿಯಾಗಿರುವಿ. ನಿನ್ನ ವ್ಯಾಪಾರವು ಅತಿ ಸೂಕ್ಷ್ಮವಾದುದು. ಸರ್ವತ್ರವ್ಯಾಪ್ತಿಯುಳ್ಳ ನೀನೇ ಸರ್ವನಿಯಾಮಕನು. ಈ ರಹಸ್ಯವನ್ನು ತಿಳಿಯದೆ ಸರ್ವರೂ ತಮ್ಮ ಕರ್ಮಗಳಿಂದ ಈ ಸಂಸಾರದಲ್ಲಿ ಸುತ್ತುತ್ತಿರುವರು.

ಮನುಷ್ಯ ಶರೀರದಲ್ಲಿ ನಿನ್ನನ್ನು ತಿಳಿಯುವುದೂ, ನಿನ್ನ ಸೇವೆಯನ್ನು ಮಾಡುವುದೂ, ಅದರಿಂದ ಮೋಕ್ಷವನ್ನು ಪಡೆಯುವುದೂ ಸುಲಭವಾಗುತ್ತದೆ. ನಿನ್ನ ಅನುಗ್ರಹದಿಂದಲೇ ಮನುಷ್ಯಜನ್ಮವು ಸಿಗುತ್ತದೆ. ಮನುಷ್ಯಜನ್ಮವು ಸಿಕ್ಕಿದರೂ ನಿನ್ನ ಮಾಯೆಯಿಂದ ಸ್ವಾರ್ಥದಲ್ಲಿ ಆಸೆಯು ಏರ್ಪಡುತ್ತದೆ. ನನ್ನ ಆಯುಸ್ಸು ವ್ಯರ್ಥವಾಯಿತು. "ಈ ದೇಹವು ನನ್ನದು. ಈ ದೇಹಕ್ಕೆ ಸಂಬಂಧಿಸಿದ ಪತ್ನೀಪುತ್ರಾದಿಗಳು ನನ್ನವರು. ಈ ಇಂದ್ರಿಯಗಳೆಲ್ಲವೂ ನನ್ನವುಗಳು" ಎಂಬ ಸ್ನೇಹ ಎಂಬ ಅತ್ಯಂತ ದೃಢವಾದ ಹಗ್ಗದಿಂದ ಕಟ್ಟಲ್ಪಟ್ಟೆನು. ನನ್ನಂತೆ ಇಡೀ ಪ್ರಪಂಚವು ಕಟ್ಟಲ್ಪಟ್ಟಿದೆ. ಕಟ್ಟಿದವನು ನೀನೇ ಈಗ ನನಗೆ ಜ್ಞಾನೋದಯವಾಯಿತು. ನೀವಿಬ್ಬರೂ ನನ್ನ ಮಕ್ಕಳಲ್ಲ. ಪ್ರಕೃತಿಪುರುಷರಿಗೆ ಈಶ್ವರರು, ಭೂಭಾರಭೂತರಾದ ದೈತ್ಯರನ್ನು ಸಂಹರಿಸುವುದಕ್ಕಾಗಿ ಅವತರಿಸಿದವರು. ಓ ಶ್ರೀಕೃಷ್ಣಾ, ಆರ್ತಬಂಧೋ, ನಿನ್ನ ಪಾದಾರವಿಂದಗಳನ್ನು ಈಗ ಶರಣು ಹೊಂದಿದೆನು. ಆಪತ್ತಿನಿಂದ ಯುಕ್ತರಾದವರು ನಿನ್ನ ಪಾದಗಳನ್ನು ಶರಣು ಹೊಂದಿದರೆ, ಅವುಗಳು ಅವರ ಸಂಸಾರ ಭಯವನ್ನು ಪರಿಹರಿಸುತ್ತವೆ. ಇಷ್ಟು ದಿನಗಳ ವರೆಗೆ ನಶ್ವರವಾದ ಈ ದೇಹದಲ್ಲಿ ಅಭಿಮಾನವನ್ನು ಇಟ್ಟುಕೊಂಡೆನು. ಸರ್ವೇಶ್ವರನಾದ ನಿನ್ನನ್ನು ಮಗನೆಂದು ತಿಳಿದೆನು. ಇಂದ್ರಿಯಗಳಲ್ಲಿ ಲೋಲನಾದೆನು. ಸಾಕು ಇನ್ನು ಮುಂದೆ ಈ ದುರ್ಬುದ್ಧಿಯು ಬೇಡ.

ಓ ಶ್ರೀಕೃಷ್ಣಾ, ನೀನು ಅವತರಿಸಿದಾಗ ಪ್ರಸವಗೃಹದಲ್ಲಿ ಹೀಗೆ ಹೇಳಿದಿ, "ನನಗೆ ಜನ್ಮವಿಲ್ಲ. ಆಕಾಶವು ಒಂದೊಂದು ವಸ್ತುಗಳು ಹುಟ್ಟಿದಾಗ ಆ ವಸ್ತುಗಳ ಒಳಗೆ ಆಯಾ ವಸ್ತುಗಳ ರೂಪವನ್ನು ಸ್ವೀಕರಿಸುವುದಿಲ್ಲವೇ? ಆ ವಸ್ತುಗಳು ನಷ್ಟವಾದ ಕೂಡಲೇ ಸರ್ವತ್ರ ವ್ಯಾಪ್ತವಾಗಿರುವ ಆಕಾಶದಲ್ಲಿ ಐಕ್ಯವನ್ನು ಹೊಂದುವುದಿಲ್ಲವೇ? ಅದರಂತೆ ಒಂದೊಂದು ಯುಗದಲ್ಲಿಯೂ ನನ್ನ ಪೂಜಾರೂಪವಾದ ಧರ್ಮವನ್ನು ರಕ್ಷಿಸುವುದಕ್ಕಾಗಿ ಮನುಷ್ಯ, ಮೃಗ, ದೇವ ಮುಂತಾದ ರೂಪಗಳನ್ನು ಸ್ವೀಕರಿಸಿ ಅವತಾರ ಕಾರ್ಯವು ಮುಗಿದ ಕೂಡಲೇ ಮೂಲ ರೂಪದಲ್ಲಿ ಐಕ್ಯವನ್ನು ಹೊಂದುತ್ತೇನೆ" ಎಂದು ಹೇಳಲಿಲ್ಲವೇ? ಪೂರ್ಣಾನಂದನಾದ ನಿನ್ನ ಮಹಿಮೆಯನ್ನು ಯಾರು ತಾನೆ ತಿಳಿಯುವರು? ಜೀವೋತ್ತಮರಾಗಿರುವ ಬ್ರಹ್ಮದೇವರಾಗಲೀ ವಾಯುದೇವರಾಗಲಿ ತಿಳಿಯಲು ಶಕ್ತರು. ನಿನ್ನ ಪಾದಗಳನ್ನು ವಂದಿಸುವೆನು. ನನ್ನನ್ನು ಈ ಸಂಸಾರದಿಂದ ಉದ್ಧರಿಸು" ಎಂದು ಪ್ರಾರ್ಥಿಸಿದನು.

ವಸುದೇವನ ಪ್ರಾರ್ಥನೆಯನ್ನು ಶ್ರೀಕೃಷ್ಣದೇವನು ಕೇಳಿದನು. ಬ್ರಹ್ಮದೇವನೇ ಮೊದಲಾದವರನ್ನು ಬಿಟ್ಟು ಇತರರಿಗೆ ಯಾರಿಗೂ ಶ್ರೀಹರಿಯೊಡನೆ ಪ್ರತ್ಯಕ್ಷವಾಗಿ ಸಂಭಾಷಣೆಯು ಸುಲಭವಲ್ಲ. ಅಂಥಹಾ ಸಂಭಾಷಣೆಯು ವಸುದೇವನಿಗೆ ಸಿಕ್ಕಿತು. ಆದ್ದರಿಂದ ವಸುದೇವನು ಪರಮ ಧನ್ಯನು. ಶ್ರೀಕೃಷ್ಣದೇವನು ಅವನನ್ನು ನೋಡಿ ವಿನಯದಿಂದ ತಲೆಯನ್ನು ತಗ್ಗಿಸಿದನು.

"ತಂದೆಯೇ, ನಿಮ್ಮ ಭಾಷಣವನ್ನು ಕೇಳಿದೆನು. ಆ ಭಾಷಣವು ಶ್ರುತಿ ಮತ್ತು ಸ್ಮೃತಿಗಳಿಗೆ ಸಂಮತವಾದುದು. ನಿಮ್ಮ ಮಗನಾದ ನನಗೂ ಬಲರಾಮನಿಗೂ ತಂದೆಯಾದ ನೀವು, ನಿಮಗೆ ತಿಳಿದಿರುವ ತತ್ವಗಳನ್ನು

ಉಪದೇಶಿಸಬೇಡವೇ? ಹಾಗೆ ಉಪದೇಶಿಸಿದ್ದು ಅತ್ಯಂತ ಯುಕ್ತವಾಗಿದೆ. ನಾನು. ನೀವು, ನನ್ನ ಅಣ್ಣನಾದ ಈ ಬಲರಾಮನು, ದ್ವಾರಕೆಯಲ್ಲಿರುವ ಸರ್ವರೂ, ಹೆಚ್ಚೇಕೇ? ಚರಾಚರಾತ್ಮಕವಾದ ಪ್ರಪಂಚದಲ್ಲಿರುವ ಸರ್ವರೂ ನನ್ನ ಸನ್ನಿಧಾನಕ್ಕೆ ಪಾತ್ರರಾಗಿರುವವರು. ನನಗೆ ಸಮಾನನು ಇನ್ನೊಬ್ಬನಿಲ್ಲ. ನಾನು ತೇಜೋಮಯನಾಗಿರುವೆನು. ನನ್ನ ತೇಜಸ್ಸು ಇನ್ನೊಬ್ಬನಿಂದ ಬಂದದ್ದಲ್ಲ. ಸ್ವಭಾವ ಸಿದ್ಧವಾದದ್ದು. "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಶ್ರುತಿಯನ್ನು ಕೇಳಿರುವಿರಿ. ಆ ಶ್ರುತಿಯು, "ನಾನು ಎಲ್ಲರಿಗಿಂತಲೂ ವಿಲಕ್ಷಣನೆಂದೂ, ಸತ್ವಾದಿಗುಣಗಳಿಂದ ವೈಪರೀತ್ಯವಿಲ್ಲದವನೆಂದೂ, ಗುಣಗಳ ಪರಾಧೀನವಲ್ಲವೆಂದೂ" ಹೇಳುತ್ತಿದೆ. ನಾನು ಎಲ್ಲಾ ಪ್ರಾಣಿಗಳನ್ನೂ ಸೃಷ್ಟಿಸಿರುವೆನು. ಅವರ ದೇಹಗಳಲ್ಲಿರುವ ಬೇರೆ ಬೇರೆ ಇಂದ್ರಿಯಗಳಲ್ಲಿ ಬೇರೆ ಬೇರೆ ರೂಪಗಳಿಂದ ವಾಸಿಸುತ್ತಿದ್ದು. ಬೇರೆ ಬೇರೆ ಪುರುಷರಂತೆ ನಟಿಸುತ್ತಿದ್ದೇನೆ. ಚಿಕ್ಕ ದೇಹವುಳ್ಳವರಲ್ಲಿ ಚಿಕ್ಕದೇಹಗಳಿಂದಲೂ ಆನೆ ಮುಂತಾದ ದೊಡ್ಡ ದೇಹವುಳ್ಳವರಲ್ಲಿ ದೊಡ್ಡ ದೇಹಗಳಿಂದಲೂ ಯುಕ್ತನಾಗಿ ಎಲ್ಲಾ ದೇಹಗಳಲ್ಲಿಯೂ ಎಲ್ಲಾ ವ್ಯಾಪಾರಗಳನ್ನು ಮಾಡಿಸುತ್ತಿರುವೆನು" ಎಂದನು.

ಈ ಮಾತುಗಳನ್ನು ವಸುದೇವನು ಕೇಳಿದನು. ತಾನು ಹೇಳಿದ ಎಲ್ಲಾ ತತ್ವಗಳೂ ಶ್ರೀಕೃಷ್ಣದೇವನಿಗೆ ಸಂಮತವಾಗಿವೆ ಎಂದು ತಿಳಿದನು. ಪರೀಕ್ಷೆ ಕೊಟ್ಟ ವಿದ್ಯಾರ್ಥಿಯು ಪರೀಕ್ಷಕರಿಂದ ಸ್ತುತಿಸಲ್ಪಟ್ಟ ಮೇಲೆ ನಿಶ್ಚಿಂತನಾಗುವನು. ಅದರಂತೆ ತನ್ನ ಪ್ರಾರ್ಥನೆಯನ್ನು ಶ್ರೀಕೃಷ್ಣದೇವನು ಅಂಗೀಕರಿಸಿದ ಮೇಲೆ ನಿಶ್ಚಿಂತನಾದನು.

**ಮಾತುಃ ಪುತ್ರಾನ್ ಪ್ರದರ್ಶ್ಯ ಹಿತಂ ಅಕೃತ ಸ ಈಶಃ ಮೇ ಅಹಿತಂ ಅಪನುದ್ಯಾತ್**

ಯಾವನು ತನ್ನ ತಾಯಿಯಾದ ದೇವಕೀದೇವಿಗೆ ಅವಳ ಸತ್ತುಹೋದ ಮಕ್ಕಳನ್ನು ತೋರಿಸಿ ಸಂತೋಷಪಡಿಸಿದನೋ ಅಂಥಹಾ ಸರ್ವ ಸಮರ್ಥನಾದ ಆ ಶ್ರೀಕೃಷ್ಣದೇವನು ನನ್ನ ಅನಿಷ್ಟವನ್ನೂ ಪರಿಹರಿಸಲಿ.

**(೯೬) ವಿಶೇಷಾರ್ಥ -** ದೇವಕ್ಯಾ ಕಂಸೇನ ಹತಾನ್ ಪುತ್ರಾನ್ ದ್ರಷ್ಟುಂ ಪ್ರಾರ್ಥಿತಃ ಬಲರಾಮೇಣ ಸಹ ಸುತಲಲೋಕಂ ಪ್ರವಿಶ್ಯ ಬಲಿಚಕ್ರವರ್ತಿಕೃತಪೂಜಾಂ ಸ್ವೀಕೃತ್ಯ ತತ್ರ ವಿದ್ಯಮಾನಾನ್ ಕಾರ್ಶ್ಯಹೇತೋರುಪಹಾಸಾಪರಾಧೇನ ದೇವಲೇನ ಶಪ್ತಾನ್ ಕಾಲನೇಮಿಪ್ರಸೂತಾನ್ ಚತುರ್ಮುಖಂ ಪ್ರತಿ ತಪಃ ಕೃತ್ವಾ ಅವಧ್ಯತಾಂ ಪ್ರಾಪ್ತಾನ್ ಹಿರಣ್ಯಕಶಿಪುನಾ ಸ್ವಾತ್ಮಾನ್ಯಚತುರ್ಮುಖತೋ ವರಲಿಪ್ಸಾಪರಾಧೇನ ಭೂತಲೇ ಸಂಭವಧ್ವಂ ತತ್ರ ಸ್ವತಾತೋ ಭವತಾಂ ನಿಹಂತೇತಿ ಶಪ್ತಾನ್ ಕಾಲನೇಮಿಸುತದೇಹತಃ ಸ್ವಾಪಸಮಯೇ ಆಕೃಷ್ಯ ದುರ್ಗಯಾ ಕ್ರಮೇಣ ದೇವಕೀಗರ್ಭೇ ಸ್ಥಾಪಿತಾನ್ ಮರೀಚಿಪುತ್ರಾನ್ ಕಾಲನೇಮಿಸ್ವರೂಪೇಣ ಕಂಸೇನ ಹತಾನ್ ತಾನುಪಾದಾಯ ಮಾತುಃ ದರ್ಶಯಿತ್ವಾ, ಮಾತರಂ ಸಂತೋಷ್ಯ ಸ್ವಭುಕ್ತಸ್ತನ್ಯಪಾನೇನ ಶುದ್ಧಾನ್ ಪುತ್ರಾನ್ ಮೋಚಯಿತ್ವಾ ಸದ್ಗತಿಂ ಪ್ರಾಪಯ್ಯ ಸರ್ವಾನತೋಷಯತ್.

## ದೇವಕೀದೇವಿಯ ಆಸೆ

**ವಿಶೇಷಾರ್ಥ ವಿವರಣ -** ಅಶ್ವತ್ಥಾಮಾಚಾರ್ಯರು ಪ್ರಯೋಗಿಸಿದ ಬ್ರಹ್ಮಾಸ್ತ್ರದಿಂದ ಉತ್ತರಾದೇವಿಯ ಗರ್ಭದಲ್ಲಿ ಮೃತನಾದ ಅಭಿಮನ್ಯುವನ್ನು ಶ್ರೀಕೃಷ್ಣದೇವನು ಬದುಕಿಸಿದನು ಎಂದು ನಾರದಾದಿಗಳ ಉಪದೇಶದಿಂದ

ದೇವಕೀದೇವಿಯು ತಿಳಿದಿದ್ದಳು. ಸಮೀಪಕಾಲದಲ್ಲಿ ಸಾಂದೀಪಿನ್ಯಾಚಾರ್ಯರ ಮಗನನ್ನು ಯಮಲೋಕದಿಂದ ತಂದುಕೊಟ್ಟ ಸಮಚಾರವನ್ನೂ ಕೇಳಿ ತಿಳಿದಿದ್ದಳು. ಬಲರಾಮ ಮತ್ತು ಶ್ರೀಕೃಷ್ಣದೇವನನ್ನು ನೋಡಿ ಮೆಲ್ಲನೆ ನಗುತ್ತಾ ಮಾತಾಡಿ ಕಣ್ಣೀರು ಸುರಿಸಿದಳು.

"ರಾಮ, ರಾಮ, ನಿನ್ನ ಮಹಿಮೆಯನ್ನು ತಿಳಿಯಲು ಯಾರಿಂದಲೂ ಸಾಧ್ಯವಿಲ್ಲ. ಕೃಷ್ಣ, ಕೃಷ್ಣ, ನೀನು ಸರ್ವ ಯೋಗೇಶ್ವರರಿಗೂ ಈಶ್ವರನಾಗಿರುವಿ. ನೀವಿಬ್ಬರೂ ಸಕಲ ಲೋಕಗಳನ್ನು ಸೃಷ್ಟಿಸುವ ಶಕ್ತಿಯಿಂದ ಯುಕ್ತರಾಗಿರುವ ಮರೀಚಿ ಮುಂತಾದವರುಗಳಿಗಿಂತ ಆದಿಪುರುಷರಾಗಿರುವಿರಿ ಎಂಬ ವಿಷಯವನ್ನು ತಿಳಿದಿರುವೆನು. ಕಾಲದ ಪ್ರಭಾವದಿಂದ ಧರ್ಮ ಎಂಬ ಸೇತುವನ್ನು ಅನೇಕ ರಾಜರುಗಳು ಮರೆತಿರುವರು. ಶಾಸ್ತ್ರವನ್ನು ಮೀರಿ ನಡೆಯುತ್ತಿರುವರು. ಭೂಮಿಗೆ ಭಾರದಂತಿರುವರು. ಅವರುಗಳನ್ನೆಲ್ಲರನ್ನೂ ಸಂಹರಿಸುವುದಕ್ಕಾಗಿ ನನ್ನ ದೆಸೆಯಿಂದ ಅವತರಿಸಿರುವಿರಿ ಎಂದು ತಿಳಿದಿರುವೆನು. ಓ ಶ್ರೀಕೃಷ್ಣದೇವ, ನಿನ್ನಲ್ಲಿರುವ ಶಕ್ತಿಗಳಲ್ಲಿ ಅನಂತಾಂಶದಲ್ಲಿ ಒಂದು ಅಂಶದಿಂದ ಸಕಲ ಪ್ರಪಂಚಗಳ ಸೃಷ್ಟಿಯನ್ನೂ ಸಂಹಾರವನ್ನೂ ಮಾಡುತ್ತಿರುವಿ. ಸರ್ವಾಂತರ್ಯಾಮಿಯಾಗಿರುವ ನಿನ್ನನ್ನು ಶರಣು ಹೊಂದಿರುವೆನು. ನನ್ನ ಒಂದು ಆಸೆಯನ್ನು ಈಗ ನಿನ್ನಲ್ಲಿ ತಿಳಿಸುವೆನು. ಎಷ್ಟೋ ವರ್ಷಗಳಿಗಿಂತ ಹಿಂದೆ ಸಮುದ್ರದಲ್ಲಿ ಬಿದ್ದು ಸತ್ತು ಹೋಗಿರುವ ನಿಮ್ಮಿಬ್ಬರ ಗುರುಗಳಾದ ಸಾಂದೀಪಿನ್ಯಾಚಾರ್ಯರ ಮಗನನ್ನು ಯಮಲೋಕದಿಂದ ಕರೆದುಕೊಂಡು ಬಂದು ಗುರುದಕ್ಷಿಣೆಯನ್ನು ಕೊಟ್ಟಿರುವುದಾಗಿ ತಿಳಿದೆನು. ಅದರಂತೆಯೇ ಹಿಂದೆ ಕಂಸನು ನನ್ನ ಎಳೆಯ ಕೂಸುಗಳನ್ನು ಚಿತ್ರಹಿಂಸೆಯಿಂದ ಸಂಹರಿಸಿದನು. ಆ ಮಕ್ಕಳು ಈಗ ಎಲ್ಲಿರುವರೋ ತಿಳಿಯದು. ಅವರನ್ನು ನೋಡಬೇಕೆಂದು ನಾನು ಆಶಿಸುವೆನು. ಅವರನ್ನು ತಂದು ತೋರಿಸಿ ನನ್ನ ಆಸೆಯನ್ನು ಪೂರ್ತಿಮಾಡಬೇಕು" ಎಂದು ಪ್ರಾರ್ಥಿಸಿದಳು.

## ಶ್ರೀಕೃಷ್ಣದೇವನ ಸಹೋದರರು

ಮರೀಚಿಋಷಿಗಳಿಗೆ ಊರ್ಣಾ ಎಂಬ ಪತ್ನಿಯಲ್ಲಿ ಸ್ವಾಯಂಭುವಮನ್ವಂತರದಲ್ಲಿ ಆರು ಮಕ್ಕಳು ಹುಟ್ಟಿದರು. ಅವರು ದೇವಲ ಎಂಬ ಋಷಿ ಒಬ್ಬರನ್ನು ನೋಡಿದರು. ಆ ಋಷಿಯು ಕಾಮಜ್ವರದಿಂದ ಕೃಶವಾದ ಶರೀರದಿಂದ ಯುಕ್ತರಾಗಿದ್ದರು. ಅವರು ಕಾಮಜ್ವರದಿಂದ ಪೀಡಿತರಾದುದನ್ನು ತಿಳಿದು ಮರೀಚಿಋಷಿಗಳ ಮಕ್ಕಳು ಅವಹಾಸ ಮಾಡಿದರು. ಇದರಿಂದ ಕುಪಿತರಾದ ದೇವಲರು "ನೀವು ಭೂಮಿಯಲ್ಲಿ ಹುಟ್ಟಿರಿ" ಎಂದು ಮರೀಚಿಋಷಿಗಳ ಮಕ್ಕಳಿಗೆ ಶಾಪವನ್ನು ಕೊಟ್ಟರು.

"ಮರೀಚಿಋಷಿಗಳ ಮಕ್ಕಳು ಆ ಶಾಪದಿಂದ ಹಿರಣ್ಯಾಕ್ಷನ ಮಗನಾಗಿರುವ ಕಾಲನೇಮಿ" ಎಂಬ ದೈತ್ಯನಿಗೆ ಮಕ್ಕಳಾಗಿ ಹುಟ್ಟಿದರು. ಅವರೆಲ್ಲರೂ ಬ್ರಹ್ಮದೇವನನ್ನು ಕುರಿತು ತಪಸ್ಸನ್ನು ಮಾಡಿದರು. "ಯಾರಿಂದಲೂ ಸಾಯಬಾರದು" ಎಂಬ ವರವನ್ನು ಕೇಳಿದರು. ಬ್ರಹ್ಮದೇವನು ಕೊಟ್ಟ ವರವನ್ನು ಪಡೆದುಕೊಂಡು ಹಿಂದಿರುಗಿದರು. ಹಿರಣ್ಯಕಶಿಪುವು ಈ ವಿಷಯವನ್ನು ತಿಳಿದನು. ತಾನೇ ವರವನ್ನು ಕೊಡುವುದಕ್ಕೆ ಶಕ್ತನಾಗಿರುವಾಗ ಬ್ರಹ್ಮದೇವನಿಂದ ವರವನ್ನು ಪಡೆದಿರುವುದನ್ನು ಸಹಿಸಲಿಲ್ಲ. ಅವರೆಲ್ಲರನ್ನೂ ಕರೆದನು. "ನೀವೆಲ್ಲರೂ ನನ್ನನ್ನು ಅಲಕ್ಷ್ಯ ಮಾಡಿ ಬ್ರಹ್ಮನಿಂದ ವರವನ್ನು ಪಡೆದಿರುವಿರಿ. ಅದಕ್ಕಾಗಿ ನಿಮ್ಮೆಲ್ಲರಿಗೂ ಶಾಪವನ್ನು ಕೊಡುವೆನು. ನೀವೆಲ್ಲರೂ ಭೂಮಿಯಲ್ಲಿ

ಹುಟ್ಟಬೇಕು. ಆಗ ನಿಮ್ಮ ತಂದೆಯೇ ನಿಮ್ಮನ್ನು ಕೊಲ್ಲಬೇಕು. ಬ್ರಹ್ಮನ ವರವು ಸತ್ಯವಾಗಿದ್ದರೆ ನೀವು ಸಾಯುವುದೂ ಇಲ್ಲ ಸಾಯದಿದ್ದರೆ ಪುನಃ ಹುಟ್ಟುವುದೂ ಇಲ್ಲ. ಹುಟ್ಟದಿದ್ದರೆ ನಿಮ್ಮನ್ನು ಯಾವನೂ ಕೊಲ್ಲುವುದೂ ಇಲ್ಲ. ನನ್ನ ಶಾಪವು ಸತ್ಯವಾದರೆ ನಿಮ್ಮ ಈ ದೇಹಗಳು ನಶಿಸುತ್ತವೆ. ನೀವು ಮನುಷ್ಯರಾಗಿ ಹುಟ್ಟುವಿರಿ. ನಿಮ್ಮನ್ನು ನಿಮ್ಮ ತಂದೆಯೇ ಕೊಲ್ಲುವನು. ಬ್ರಹ್ಮನ ವರವೂ ನನ್ನ ಶಾಪವೂ ಅತ್ಯಂತ ವಿರುದ್ಧವಾದುದು. ಬ್ರಹ್ಮನ ಮತ್ತು ನನ್ನ ಯೋಗ್ಯತೆಗಳ ಪರೀಕ್ಷೆಯು ನಡೆಯುವ ಸಂದರ್ಭವು ಈಗ ಬಂದಿದೆ" ಎಂದನು.

ಶ್ರೀಹರಿಯು ತನ್ನಲ್ಲಿರುವ ಅಘಟಿತಘಟನಾಶಕ್ತಿಯಿಂದ "ಜೀವೋತ್ತಮರಾದ ಬ್ರಹ್ಮದೇವರ ವರವನ್ನು ಸತ್ಯವಾಗುವಂತೆ ಮಾಡಲೇಬೇಕು. ಹಿರಣ್ಯಕಶಿಪುವು ತನ್ನ ಭಕ್ತರಲ್ಲಿ ಶ್ರೇಷ್ಠನಾಗಿರುವ ಬ್ರಹ್ಮದೇವನನ್ನು ಆರಾಧಿಸಿ ಅವನನ್ನು ಸಂತೋಷಪಡಿಸಿ ಅವಧ್ಯತ್ವ ಮುಂತಾದ ಅನೇಕ ವರಗಳನ್ನು ಪಡೆದಿರುವನು. ಆದ್ದರಿಂದ ಅವನ ಶಾಪವನ್ನೂ ಸತ್ಯವಾಗುವಂತೆ ಮಾಡಲೇಬೇಕು" ಎಂದು ತೀರ್ಮಾನಿಸಿದನು.

## ದುರ್ಗಾದೇವಿಗೆ ಶ್ರೀಹರಿಯ ಆಜ್ಞೆ

ತನ್ನ ಪತ್ನಿಯಾಗಿರುವ ದುರ್ಗಾದೇವಿಯನ್ನು ಶ್ರೀಹರಿಯು ಕರೆದನು. ಸುತಲ ಲೋಕದಲ್ಲಿ ಬಲಿಚಕ್ರವರ್ತಿಯ ಮನೆಯಲ್ಲಿ ನನಗೆ ಶ್ರೀಕೃಷ್ಣಾವತಾರ ಕಾಲದಲ್ಲಿ ಅಣ್ಣಂದಿರಾಗಿ ಹುಟ್ಟಲಿರುವ ಆರು ದೈತ್ಯರಿರುವರು. ಅವರಲ್ಲಿ ಒಬ್ಬನನ್ನು ಕರೆದುಕೊಂಡು ಹೋಗಿ ಒಂದು ಗುಹೆಯಲ್ಲಿ ಮಲಗಿಸು. ಅವನಿಗೆ ಒಂದು ವರ್ಷಕಾಲದ ವರೆಗೆ ಘೋರವಾದ ನಿದ್ರೆಯು ಬರುವಂತೆ ಮಾಡು. ನಿದ್ರಾಕಾಲದಲ್ಲಿ ಆ ದೇಹದಲ್ಲಿರುವ ಜೀವನನ್ನು ಎರಡು ವಿಭಾಗವಾಗಿ ಮಾಡು. ಜೀವನು ಅಖಂಡನಾಗಿರುವುದರಿಂದ ಅವನ ವಿಭಾಗವನ್ನು ಮಾಡಲು ಯಾರಿಂದಲೂ ಸಾಧ್ಯವಿಲ್ಲ. ಸಾಂಶರಾದ ದೇವತೆಗಳು ಒಂದೇ ಕಾಲದಲ್ಲಿ ಇಂದ್ರಾದಿಪದವಿಗಳಲ್ಲಿ ಒಂದು ರೂಪದಿಂದಲೂ ಅರ್ಜುನಾದಿರೂಪಗಳಲ್ಲಿ ಒಂದು ರೂಪದಿಂದಲೂ ದೇವಲೋಕದಲ್ಲಿಯೂ ಭೂಲೋಕದಲ್ಲಿಯೂ ಇರುವಂತೆ ಸಾಂಶದೇವತೆಗಳಾಗಿರುವ ಈ ದೈತ್ಯರನ್ನು ವಿಂಗಡಿಸುವುದು ನಿನಗೆ ಅಶಕ್ಯವಲ್ಲ. ವಿಂಗಡಿಸಲ್ಪಟ್ಟ ಆ ಎರಡು ರೂಪಗಳಲ್ಲಿ ಒಂದು ರೂಪವು ಅದೇ ದೇಹದಲ್ಲೇ ಇರಲಿ. ಅದರಿಂದ ಬ್ರಹ್ಮನಿಂದ ಅವಧ್ಯತ್ವವರವನ್ನು ಪಡೆದಿರುವ ಆ ದೇಹವು ನಶಿಸುವುದಿಲ್ಲ. ಆದ್ದರಿಂದ ನನ್ನ ಪರಮ ಭಕ್ತನಾದ ಬ್ರಹ್ಮನ ವರವನ್ನು ಸತ್ಯವಾಗುವಂತೆ ಮಾಡಿದಂತಾಗುತ್ತದೆ.

"ವಿಂಗಡಿಸಲ್ಪಟ್ಟ ಇನ್ನೊಂದು ರೂಪವನ್ನು ಆ ದೇಹದಿಂದ ಹೊರಪಡಿಸು. ಮಥುರಾ ಪಟ್ಟಣದಲ್ಲಿ ಕಂಸನ ಮನೆಯಲ್ಲಿ ಜೈಲಿನಲ್ಲಿರುವ ದೇವಕೀದೇವಿಯ ದೇಹದಲ್ಲಿಡು. ಹತ್ತು ತಿಂಗಳುಗಳ ವರೆಗೆ ಅಲ್ಲಿಯೇ ಆ ಜೀವನ ಅಂಶವು ಇರಲಿ. ಹತ್ತು ತಿಂಗಳು ಪೂರ್ತಿಯಾದ ಕೂಡಲೇ ಆ ಅಂಶವನ್ನು ದೇವಕೀದೇವಿಯು ಪ್ರಸವಿಸಲಿ. ಆ ದೈತ್ಯನ ತಂದೆಯಾಗಿರುವ ಕಾಲನೇಮಿಯು ಕಂಸನಾಗಿ ಈಗ ಹುಟ್ಟಿರುವನು. ಕಾಲನೇಮಿಯ ಅವತಾರನಾಗಿರುವ ಕಂಸನು ಹಿಂದಿನ ಜನ್ಮದಲ್ಲಿ ತನ್ನ ಮೊದಲನೆಯ ಮಗನಾಗಿರುವ ಮತ್ತು ಈ ಜನ್ಮದಲ್ಲಿ ದೇವಕೀದೇವಿಯ ಮೊದಲನೆಯ ಮಗನಾಗಿ ಹುಟ್ಟಿರುವ ದೈತ್ಯಬಾಲಕನನ್ನು ಸಂಹರಿಸಲಿ. ಹೀಗೆಯೇ ಆರು ದೈತ್ಯರ ದೇಹದಲ್ಲಿರುವ ಆರು ದೈತ್ಯರನ್ನೂ ಮಾಡು. ಹೀಗೆ ಮಾಡಿದರೆ ನನ್ನ ಭಕ್ತನಾದ ಬ್ರಹ್ಮನಿಂದ ವಿಶೇಷ ವರಗಳನ್ನು ಪಡೆದಿರುವ ಹಿರಣ್ಯಕಶಿಪುವಿನ ಶಾಪವೂ ಸತ್ಯವಾಗುತ್ತದೆ."

"ಎಳೆಗೂಸಿನ ರೂಪವನ್ನು ಸ್ವೀಕರಿಸಿರುವ ತನ್ನ ಮಕ್ಕಳನ್ನು ಕಾಲನೇಮಿಯು ಗುರುತು ಹಿಡಿಯಲಾರನು. ಆದ್ದರಿಂದ ನಿರಾತಂಕವಾಗಿ ಕೊಲ್ಲುವನು. ದೇವಕೀದೇವಿಗೂ ದೈತ್ಯಾಕಾರದ ದರ್ಶನವಾಗದೆ ಎಳೆಗೂಸಿನ ರೂಪವನ್ನು ನೋಡಿದ್ದರಿಂದ ವಾತ್ಸಲ್ಯಾತಿರೇಕವು ಏರ್ಪಟ್ಟು ಅವನನ್ನು ಎತ್ತಿ ಮುದ್ದಾಡುತ್ತಾ ಮೊಲೆಯ ಹಾಲನ್ನು ಕುಡಿಸುವ ಭಾಗ್ಯವು ಏರ್ಪಡುತ್ತದೆ. ಆದ್ದರಿಂದ ಈ ಕಾರ್ಯವನ್ನು ನೀನು ಮಾಡಬೇಕು" ಎಂದು ಆಜ್ಞಾಪಿಸಿದನು. ದುರ್ಗಾದೇವಿಯು ಶ್ರೀಹರಿಯ ಆಜ್ಞೆಯಂತೆ ಮಾಡಿದಳು. ಇದನ್ನೆಲ್ಲವನ್ನೂ ತಿಳಿಯದ ದೇವಕೀದೇವಿಯು ತನ್ನ ಮೊದಲನೆಯ ಆರು ಮಕ್ಕಳನ್ನು ನೋಡಬೇಕೆಂದು ಆಶಿಸಿದಳು. ತಾಯಿಯ ಈ ಆಸೆಯನ್ನು ತಿಳಿದ ಬಲರಾಮನೂ ಶ್ರೀಕೃಷ್ಣದೇವನೂ ಅಲ್ಲಿಂದ ಹೊರಟರು. ಯೋಗಮಾಯಾಬಲದಿಂದ ಸುತಲಲೋಕಕ್ಕೆ ಹೋದರು.

## ಬಲಿಚಕ್ರವರ್ತಿಯಿಂದ ಪೂಜೆ ಮತ್ತು ಪ್ರಾರ್ಥನೆ

ಬಲಿಚಕ್ರವರ್ತಿಯು ಇಂದ್ರಾದಿ ಸಕಲ ದೇವತೆಗಳಿಗೆ ಇಷ್ಟದೇವತೆಗಳೂ ತನಗೆ ವಿಶೇಷವಾಗಿ ಇಷ್ಟದೇವತೆಗಳು ಆಗಿರುವ ಬಲರಾಮ ಮತ್ತು ಶ್ರೀಕೃಷ್ಣದೇವರು ತನ್ನ ಲೋಕಕ್ಕೆ ಬಂದದ್ದನ್ನು ತಿಳಿದನು. ಶ್ರೀಕೃಷ್ಣದೇವನ ದರ್ಶನದಿಂದ ಅತ್ಯಧಿಕವಾದ ಆನಂದವು ಏರ್ಪಟ್ಟಿತು. ಆ ಆನಂದದಿಂದ ಅವನ ಮನಸ್ಸು ಕರಗಿತು. ಮರುಕ್ಷಣದಲ್ಲಿ ಎದ್ದನು. ಅವನೂ ಅವನ ಪರಿವಾರದಲ್ಲಿ ಸೇರಿದವರೂ ಸಾಷ್ಟಾಂಗ ನಮಸ್ಕಾರವನ್ನು ಮಾಡಿದರು. ಅವರಿಬ್ಬರಿಗೂ ಆಸನಗಳನ್ನು ಕೊಟ್ಟನು. ಅವರಿಬ್ಬರೂ ಆಸನಗಳಲ್ಲಿ ಕುಳಿತರು. ಬಲಿಚಕ್ರವರ್ತಿಯು ಶ್ರೀಕೃಷ್ಣದೇವನ ಕಾಲುಗಳನ್ನು ತೊಳೆದನು. ಆ ನೀರು ಸಾಮಾನ್ಯವಲ್ಲ. ಬ್ರಹ್ಮಾದಿದೇವತೆಗಳು ಮುಂತಾದ ಸರ್ವರು ಆ ನೀರನ್ನು ತಲೆಯಲ್ಲಿ ಧರಿಸಿದುದರಿಂದ ಪರಿಶುದ್ಧರಾಗಿರುವರು. ಅಂತಹ ಪಾದೋದಕವನ್ನು ತಾನೂ ತನ್ನ ಪರಿವಾರದಲ್ಲಿ ಸೇರಿದವರೂ ತಲೆಯಲ್ಲಿ ಧರಿಸಿದರು. ಶ್ರೀಕೃಷ್ಣದೇವನಲ್ಲಿ ಮಹಾ ವೈಭವದಿಂದ ಅಮೂಲ್ಯವಾದ ವಸ್ತ್ರಗಳು, ಆಭರಣಗಳು, ಗಂಧಾದಿಲೇಪನಗಳು, ಮಾಲೆಗಳು, ಧೂಪಗಳು, ಆರತಿಗಳು, ಅಮೃತದಂತೆ ಅತ್ಯಂತ ರುಚಿಯಾಗಿರುವ ಭಕ್ಷ್ಯಭೋಜ್ಯಗಳು ಮುಂತಾದವುಗಳನ್ನು ಸಮರ್ಪಿಸಿ ಅವನನ್ನು ಪೂಜಿಸಿದನು. ತನ್ನ ಪತ್ನೀ ಪುತ್ರಾದಿಗಳು, ದ್ರವ್ಯಗಳು, ತನ್ನ ಶರೀರ ಮುಂತಾದವುಗಳನ್ನು ಸಮರ್ಪಿಸಿದನು. ಶ್ರೀಕೃಷ್ಣದೇವನ ಪಾದಗಳಿಗೆ ಪ್ರದಕ್ಷಿಣೆಯನ್ನು ಮಾಡಿದನು. ನನಗೆ ನೀನೇ ಗತಿ ಎಂದು ಹೇಳಿದನು. ಆಹೋ, ನನ್ನ ಭಾಗ್ಯ ಎಂದು ಹೇಳಿದನು. ತೊದಲು ನುಡಿಯಿಂದ ಮಾತಾಡಿದನು. ಮೈಯಲ್ಲಿ ರೋಮಗಳು ಎದ್ದು ನಿಂತವು. ಆನಂದದಿಂದ ಪ್ರೇಮಪರವಶನಾದನು. ಕಣ್ಣುಗಳಿಂದ ನೀರುಗಳು ಸುರಿದವು. ಶ್ರೀಕೃಷ್ಣದೇವನನ್ನು ಹೀಗೆ ಭಕ್ತಿಪರವಶನಾಗಿ ಸ್ತುತಿಸಿದನು.

ಓ ಮಹಾಸ್ವಾಮಿಯೇ, ನೀನು ಜ್ಞಾನಮಾರ್ಗವನ್ನೂ ಕರ್ಮಮಾರ್ಗವನ್ನೂ ವಿಸ್ತಾರವಾಗಿ ಉಪದೇಶಿಸಿದವನು. ಅನಂತ ಗುಣಗಳಿಂದ ಪೂರ್ಣನಾಗಿರುವವನು. ಅನಂತ ಎಂಬ ಹೆಸರಿನಿಂದ ಯುಕ್ತನಾಗಿರುವವನು. ಆತ್ಮ ಎಂಬ ಹೆಸರಿನಿಂದ ಕರೆಯಲ್ಪಡುವ ಸರ್ವಜೀವರುಗಳಿಗಿಂತಲೂ ಉತ್ತಮನು. ನೀನು ಪ್ರಯಾಸವಿಲ್ಲದಲೆ ಸರ್ವಕಾರ್ಯಗಳನ್ನೂ ಮಾಡುವವನು.

ಓ ಬಲರಾಮ, ಶ್ರೀಕೃಷ್ಣದೇವ, ನಿಮ್ಮಿಬ್ಬರ ದರ್ಶನವು ನಿಮ್ಮ ಅನುಗ್ರಹವಿಲ್ಲದಿದ್ದರೆ ಅತಿ

ದುರ್ಲಭವಾದುದು. ನಾವು ರಜೋಗುಣ ಮತ್ತು ತಮೋಗುಣ ಎಂಬ ದುರ್ಗುಣಗಳ ಸ್ವಭಾವಗಳಿಂದ ಯುಕ್ತರಾಗಿರುವೆವು. ನಮಗೆ ನಿಮ್ಮ ಇಚ್ಛೆಯಿಂದ ಈ ದಿನದಲ್ಲಿ ನಿಮ್ಮ ದರ್ಶನವು ಏರ್ಪಟ್ಟಿತು.

ಓ ಶ್ರೀಕೃಷ್ಣದೇವ, ಅತಿಪರಿಶುದ್ಧವಾದ ಜ್ಞಾನಕ್ಕೆ ನೀನು ಆಶ್ರಯನು. ಶಾಸ್ತ್ರವು ನಿನ್ನ ಮಹಿಮೆಗಳನ್ನು ತಿಳಿಸುತ್ತಾ ನಿನ್ನ ಶರೀರವೆನಿಸುತ್ತದೆ. ರಾಜಸರೂ ತಾಮಸರೂ ಆಗಿರುವ ದೈತ್ಯರೂ, ದಾನವರೂ, ಗಂಧರ್ವರೂ, ಸಿದ್ಧರೂ, ವಿದ್ಯಾಧರಾದಿಗಳೂ, ಯಕ್ಷರೂ, ರಾಕ್ಷಸರೂ, ಪಿಶಾಚಿಗಳೂ, ಭೂತಗಳು, ಪ್ರಮಥಗಣಗಳಲ್ಲಿ ನಾಯಕರೂ ನಿನ್ನಲ್ಲಿ ಯಾವಾಗಲೂ ವೈರವನ್ನು ಇಟ್ಟುಕೊಂಡಿರುವವರು. ನಾವೂ ನಮ್ಮಂತಿರುವವರೂ ಅದೇ ಗುಣಗಳುಳ್ಳವರಾಗಿರುವುದರಿಂದ ನಿನ್ನಲ್ಲಿ ದ್ವೇಷವನ್ನು ಇಟ್ಟುಕೊಂಡಿರುವವರು. ನಿನ್ನನ್ನು ಯಾವಾಗಲೂ ಧ್ಯಾನಿಸುತ್ತಿರುವವರಿಗೆ ನಿನ್ನಲ್ಲಿ ಭಕ್ತಿಯು ಬೆಳೆಯಬಹುದು ಎಂದು ಹೇಳಬಹುದು. ಅದೂ ಅಲ್ಲ. ದೇವತೆಗಳಿಗೂ ನಿರಂತರ ಸ್ಮರಣದಿಂದ ನಿನ್ನಲ್ಲಿ ಭಕ್ತಿಯು ಹುಟ್ಟುವುದಿಲ್ಲ. ಹೀಗಿರುವಾಗ ನಮ್ಮಂತಹವರಿಗೆ ಭಕ್ತಿಯು ಹುಟ್ಟುತ್ತದೆಯೇ? ಇಲ್ಲವೇ ಇಲ್ಲ. ದೇವತೆಗಳ ಅವತಾರವಾಗಿರುವ ಶಿಶುಪಾಲ ಮುಂತಾದವರು ನಿನ್ನಲ್ಲಿ ಅತ್ಯಧಿಕವಾದ ದ್ವೇಷವನ್ನು ಮಾಡುತ್ತಿದ್ದರು. ಅವರಿಗೆ ಸ್ವಾಭಾವಿಕವಾದ ಭಕ್ತಿಯು ಯಾವಾಗಲೋ ಒಮ್ಮೆ ಹೊರಪಟ್ಟಿತು. ದೇವತಾಸ್ತ್ರೀಯರ ಅವತಾರವಾಗಿರುವ ಗೋಪಿಕಾಸ್ತ್ರೀಯರು ಕಾಮಪೀಡಿತರಾಗಿ ನಿನ್ನನ್ನು ಸೇವಿಸಿದರು. ಅವರಿಗೂ ಯಾವುದೋ ಒಂದು ಸಮಯದಲ್ಲಿ ಭಕ್ತಿಯು ಅಭಿವ್ಯಕ್ತವಾಯಿತು. ನಿನ್ನ ಜೊತೆಯಲ್ಲಿ ಇರುವ ಬ್ರಹ್ಮ ಮುಂತಾದವರು ಉದ್ರಿಕ್ತ ಸತ್ವಗುಣವುಳ್ಳವರು. ಆದ್ದರಿಂದ ಪ್ರಾಣವು ಹೋದರೂ ನಿನ್ನಲ್ಲಿ ಭಕ್ತಿಯನ್ನು ಬಿಡಲಾರೆವು. ಎಂದು ನಿಶ್ಚಯವನ್ನು ಮಾಡಿದವರು.

ಓ ಶ್ರೀಕೃಷ್ಣದೇವ, ಜ್ಞಾನವನ್ನು ಸಂಪಾದಿಸುವುದರಲ್ಲಿ ಶ್ರೇಷ್ಠರೂ ಸಹ ನೀನು ಮಾಡುತ್ತಿರುವ ಜಗತ್ಸೃಷ್ಟಿ ಮುಂತಾದ ವ್ಯಾಪಾರಗಳನ್ನು "ಇದು ನಿನ್ನ ವ್ಯಾಪಾರ, ಇಂಥಾದ್ದು ನಿನ್ನ ವ್ಯಾಪಾರ" ಎಂದು ತಿಳಿಯಲು ಶಕ್ತರಲ್ಲ. ಹೀಗಿರುವಾಗ ಅಲ್ಪರಾದ ನಾವು ಶಕ್ತರಾಗುವೆವೇ? "ಓ ಶ್ರೀಕೃಷ್ಣದೇವ, ನನ್ನಲ್ಲಿ ಪ್ರಸನ್ನನಾಗು, ಪ್ರಪಂಚದಲ್ಲಿ ಯಾವ ಅಪೇಕ್ಷೆಯೂ ಇಲ್ಲದಿರುವ ಮುನಿಗಳೂ ಸಹ ನಿನ್ನ ಪಾದಾರವಿಂದಗಳನ್ನು ಹುಡುಕುತ್ತಿರುವರು. ಅಂತಹ ಪಾದಾರವಿಂದಗಳು ನನ್ನ ಬುದ್ಧಿಯಲ್ಲಿ ಸ್ಥಿರವಾಗಿ ನಿಲ್ಲಲಿ. ಅದರಿಂದ ಮನೆಯೆಂಬ ಕತ್ತಲೆಯ ಭಾವಿಯಿಂದ ನಾನು ಹೊರಡಬೇಕು. ಸರ್ವರಿಗೂ ರಕ್ಷಕನಾಗಿರುವ ನಿನ್ನ ಪಾದಾರವಿಂದಗಳನ್ನು ನಾನು ಹೊಂದಬೇಕು. ಆ ಪಾದಗಳನ್ನು ಸೇವಿಸಬೇಕು. ನಿನ್ನ ಭಕ್ತರುಗಳ ಜೊತೆಯಲ್ಲಿ ವಾಸಿಸುವ ಭಾಗ್ಯವು ನನಗೆ ಸಿಗಲಿ. ಬೇರೆ ಯಾವ ಸಂಪತ್ತೂ ನನಗೆ ಬೇಡ. ಮಹಾಸ್ವಾಮಿ, ನಾವೆಲ್ಲರೂ ನಿನ್ನ ಆಜ್ಞೆಯಂತೆ ನಡೆಯುವವರು. ನಮ್ಮೆಲ್ಲರಿಗೂ ನೀನು ಯಜಮಾನನು. ನಾನು ಯಾವ ಕಾರ್ಯವನ್ನು ಮಾಡಬೇಕೋ ಆ ಕಾರ್ಯವನ್ನು ಆಜ್ಞಾಪಿಸು. ನಮ್ಮ ಮನಸ್ಸಿನಲ್ಲಿ ಯಾವ ಆಸೆಯೂ ಹುಟ್ಟದಂತೆ ಮಾಡು. ಏಕೆಂದರೆ ನೀನು ಹೇಳಿರುವ ಕಾರ್ಯವನ್ನು ಶ್ರದ್ಧೆಯಿಂದ ಮಾಡುವವನು ವಿಧಿನಿಷೇಧಗಳನ್ನು ತಿಳಿಸುವ ವೇದಗಳಿಂದ ಬಿಡುಗಡೆಯನ್ನು ಪಡೆದು ಮುಕ್ತನಾಗುವನು ಎಂದು.

## ಶ್ರೀಕೃಷ್ಣದೇವನ ಪ್ರತ್ಯುತ್ತರ

ಬಲಿಚಕ್ರವರ್ತಿಯ ಈ ಪ್ರಾರ್ಥನೆಯನ್ನು ಶ್ರೀಕೃಷ್ಣದೇವನು ಕೇಳಿದನು. ಪ್ರತ್ಯುತ್ತರವನ್ನು ಕೊಡಲು

ಆರಂಭಿಸಿದನು. "ಸ್ವಾಯಂಭುವಮನ್ವಂತರದಲ್ಲಿ ಮರೀಚಿ ಎಂಬ ಋಷಿಗೆ ಊರ್ಣಾ ಎಂಬ ಪತ್ನಿಯಲ್ಲಿ ಆರು ಮಕ್ಕಳುಗಳು ಹುಟ್ಟಿದ್ದರು. ದೇವಲ ಎಂಬ ಋಷಿಯು ಕಾಮಜ್ವರದಿಂದ ಕೃಶನಾಗಿದ್ದನು. ಮರೀಚಿ ಋಷಿಯ ಮಕ್ಕಳು, ಮಕ್ಕಳನ್ನು ಶಿಕ್ಷಿಸುತ್ತಿರುವ ದೇವಲ ಋಷಿಯನ್ನು ಅಪಹಾಸ್ಯ ಮಾಡಿದರು. ಅದಕ್ಕಾಗಿ ದೇವಲರು ಮರೀಚಿಋಷಿಗಳ ಮಕ್ಕಳಿಗೆ ರಾಕ್ಷಸರಾಗಿ ಹುಟ್ಟುವಂತೆ ಶಾಪವನ್ನು ಕೊಟ್ಟರು. ಹಿಂದೆ ಹೇಳಿದಂತೆ ಹಿರಣ್ಯಕಶಿಪುವಿನ ಶಾಪದಿಂದ ಅವರೆಲ್ಲರೂ ದೇವಕೀದೇವಿಯ ಮಕ್ಕಳಾಗಿ ಹುಟ್ಟಿದರು. ದುರ್ಗಾದೇವಿಯು ಈ ಸಂದರ್ಭದಲ್ಲಿ ಹಿಂದೆ ಹೇಳಿದಂತೆ ವಿಶೇಷ ಕಾರ್ಯಗಳನ್ನು ಮಾಡಿರುವಳು. ದೇವಕೀದೇವಿಯ ಆ ಮಕ್ಕಳನ್ನು ಕಂಸನು ಕೊಂದನು. ದೇವಕೀದೇವಿಯು ಆ ಮಕ್ಕಳನ್ನು ಸ್ಮರಿಸಿ ಅಳುತ್ತಿರುವಳು. ಅವರೆಲ್ಲರೂ ಸ್ಮರ, ಉದ್ಗೀಥತೆ ಪರಿಷ್ವಂಗ, ಪತಂಗ, ಕ್ಷುದ್ರಭೃತ್, ಘೃಣೀ ಎಂಬ ಹೆಸರುಗಳಿಂದ ಯುಕ್ತರಾಗಿ ನಿನ್ನ ಸಮೀಪದಲ್ಲಿರುವರು. ಅವರೆಲ್ಲರನ್ನೂ ನನ್ನ ಜೊತೆಯಲ್ಲಿ ಕಳುಹಿಸು. ಅವರನ್ನು ಕರೆದುಕೊಂಡು ಹೋಗಿ ನನ್ನ ತಾಯಿಯ ದುಃಖವನ್ನು ಪರಿಹರಿಸುವೆನು. ಅನಂತರದಲ್ಲಿ ಆ ಆರು ಮಕ್ಕಳೂ ಶಾಪದಿಂದ ಬಿಡುಗಡೆಯನ್ನು ಪಡೆದು ನನ್ನ ಲೋಕವನ್ನು ಪ್ರವೇಶಿಸುವರು" ಎಂದು ಆಜ್ಞಾಪಿಸಿದನು.

ಬಲಿಚಕ್ರವರ್ತಿಯು ಆ ಬಾಲಕರನ್ನು ಕಳುಹಿಸಿಕೊಟ್ಟನು. ಬಲರಾಮನನ್ನೂ ಶ್ರೀಕೃಷ್ಣದೇವನನ್ನೂ ಪೂಜಿಸಿ ಕಳುಹಿಸಿದನು. ಆ ಬಾಲಕರನ್ನು ದೇವಕೀದೇವಿಗೆ ತಂದುಕೊಟ್ಟರು. ದೇವಕಿಯು ನೋಡುವಾಗ ಹಸುಗೂಸುಗಳಂತೆ ರೂಪವು ಅವುಗಳಿಗೆ ಬರುವಂತೆ ಮಾಡಿದನು. ಆ ಮಕ್ಕಳನ್ನು ನೋಡಿದ ಕೂಡಲೇ ದೇವಕೀದೇವಿಯ ಮೊಲೆಯಿಂದ ಹಾಲು ಸುರಿಯಿತು. ಆ ಹಾಲನ್ನು ಮಕ್ಕಳಿಗೆ ಕುಡಿಸಿದಳು. ಶ್ರೀಕೃಷ್ಣದೇವನು ಕುಡಿದ ಪರಿಶುದ್ಧವಾದ ಹಾಲನ್ನು ಕುಡಿದರು. ಶ್ರೀಕೃಷ್ಣದೇವನ ಅಂಗಸ್ಪರ್ಶವೂ ಏರ್ಪಟ್ಟಿತು. ಇವುಗಳಿಂದ ಅವರಿಗೆ ಯೋಗ್ಯವಾದ ಬ್ರಹ್ಮಜ್ಞಾನವು ಏರ್ಪಟ್ಟಿತು. ಆ ಜ್ಞಾನದಿಂದ ಶ್ರೀಕೃಷ್ಣದೇವನನ್ನೂ ಬಲರಾಮನನ್ನೂ ವಸುದೇವನನ್ನೂ ನಮಸ್ಕರಿಸಿದರು. ಆಕಾಶ ಮಾರ್ಗದಿಂದ ಎಲ್ಲರೂ ನೋಡುತ್ತಿರುವಂತೆ ದಿವ್ಯಶರೀರದಿಂದ ಯುಕ್ತರಾಗಿ ವೈಕುಂಠವನ್ನು ಹೊಂದಿದರು. ತಾಯಿಗೆ ತಾನು ಅವತರಿಸುವುದಕ್ಕಿಂತ ಪೂರ್ವದಲ್ಲಿ ಮೃತ ಪಟ್ಟ ಅವಳ ಮಕ್ಕಳನ್ನು ತೋರಿಸಿ ಸಂತೋಷಪಡಿಸಿದ ಶ್ರೀಕೃಷ್ಣದೇವನು ನಮ್ಮೆಲ್ಲರ ಅನಿಷ್ಟಗಳನ್ನು ಪರಿಹರಿಸಿ ಸಂತೋಷಪಡಿಸಲಿ. ॥೨೦॥

रुक्मिण्या नर्मवाक्यैररमत बहुभिः स्त्रीजनैर्योऽथ पुत्रा -
नेकैकस्यां प्रपेदे दश दश रुचिरान् पौत्रकानप्यनेकान् ।
पौत्रस्योद्वाहकाले भृशकुपितबलाद्रुक्मिणं घातयित्वा
नन्दन् योषिद्गणेन प्रतिगृहमबलाप्रीतिकारी गतिर्मे ॥२१॥

ರುಕ್ಮಿಣ್ಯಾ ನರ್ಮವಾಕ್ಯೈರರಮತ ಬಹುಭಿಃ ಸ್ತ್ರೀಜನೈರ್ಯೋಽಥ ಪುತ್ರಾ -
ನೇಕೈಕಸ್ಯಾಂ ಪ್ರಪೇದೇ ದಶ ದಶ ರುಚಿರಾನ್ ಪೌತ್ರಕಾನಪ್ಯನೇಕಾನ್ ।
ಪೌತ್ರಸ್ಯೋದ್ವಾಹಕಾಲೇ ಭೃಶಕುಪಿತಬಲಾದ್ರುಕ್ಮಿಣಂ ಘಾತಯಿತ್ವಾ
ನಂದನ್ ಯೋಷಿದ್ಗಣೇನ ಪ್ರತಿಗೃಹಮಬಲಾಪ್ರೀತಿಕಾರೀ ಗತಿರ್ಮೇ ॥ ೨೧ ॥

**ಪದಚ್ಛೇದ :-** ರುಕ್ಮಿಣ್ಯಾಃ, ನರ್ಮವಾಕ್ಯೈಃ, ಅರಮತ, ಬಹುಭಿಃ, ಸ್ತ್ರೀಜನ್ಯೈಃ, ಯಃ, ಅಥ, ಪುತ್ರಾನ್ ಏಕೈಕಸ್ಯಾಂ, ಪ್ರಪೇದೇ, ದಶ, ದಶ, ರುಚಿರಾನ್, ಪೌತ್ರಕಾನ್, ಅಪಿ, ಅನೇಕಾನ್, ಪೌತ್ರಸ್ಯ, ಉದ್ವಾಹಕಾಲೇ, ಭೃಶಕುಪಿತಬಲಾತ್, ರುಕ್ಮಿಣಂ, ಘಾತಯಿತ್ವಾ, ನಂದನ್, ಯೋಷಿದ್ಗಣೇನ, ಪ್ರತಿಗ್ರಹಂ, ಅಬಲಾಪ್ರೀತಿಕಾರೀ, ಗತಿಃ ಮೇ.

ಅನ್ವಯ - ಯಃ ರುಕ್ಮಿಣ್ಯಾಃ ನರ್ಮವಾಕ್ಯೈಃ ಅರಮತ ಬಹುಭಿಃ ಸ್ತ್ರೀಜನ್ಯೈಃ (ಅರಮತ), ಅಥ ಏಕೈಕಸ್ಯಾಂ ರುಚಿರಾನ್ ಪುತ್ರಾನ್ ದಶ ದಶ ಪ್ರಪೇದೇ ಅನೇಕಾನ್ ಪೌತ್ರಕಾನ್ ಅಪಿ (ಪ್ರಪೇದೇ), ಪೌತ್ರಸ್ಯ ಉದ್ವಾಹಕಾಲೇ ಭೃಶಕುಪಿತಬಲಾತ್ ರುಕ್ಮಿಣಂ ಘಾತಯಿತ್ವಾ ಯೋಷಿದ್ಗಣೇನ (ಸಹ), ನಂದನ್ ಪ್ರತಿಗ್ರಹಂ ಅಬಲಾಪ್ರೀತಿಕಾರೀ ಸಃ ಮೇ ಗತಿಃ ಸ್ಯಾತ್.

ಅನ್ವಯಾರ್ಥ - ಯಃ ಯಾವ ಶ್ರೀಕೃಷ್ಣದೇವನು ರುಕ್ಮಿಣ್ಯಾಃ ರುಕ್ಮಿಣೀದೇವಿಯ ನರ್ಮವಾಕ್ಯೈಃ ಉಪಹಾಸವಾಕ್ಯಗಳಿಂದ ಅರಮತ ವಿಹರಿಸಿದನೋ ಬಹುಭಿಃ ಅಸಂಖ್ಯಾಕರಾದ ಸ್ತ್ರೀಜನ್ಯೈಃ ಪತ್ನಿಯರಿಂದ ಅರಮತ ಕ್ರೀಡಿಸಿದನೋ, ಅಥ ಅನಂತರದಲ್ಲಿ ಏಕೈಕಸ್ಯಾಂ ಒಬ್ಬೊಬ್ಬ ಪತ್ನಿಯರಲ್ಲಿ ರುಚಿರಾನ್ ಪರಮಸುಂದರರಾಗಿರುವ ದಶ ದಶ ಪುತ್ರಾನ್ ಹತ್ತು ಹತ್ತು ಮಕ್ಕಳುಗಳನ್ನು ಪ್ರಪೇದೇ ಪಡೆದನೋ ಅನೇಕಾನ್ ಅಸಂಖ್ಯಾಕರಾದ ಪೌತ್ರಾನ್ ಅಪಿ ಮೊಮ್ಮಕ್ಕಳುಗಳನ್ನೂ ಪ್ರಪೇದೇ ಪಡೆದನೋ ಪೌತ್ರಸ್ಯ ಪ್ರದ್ಯುಮ್ನನ ಮಗನಾಗಿರುವ ಅನಿರುದ್ಧ ಎಂಬ ಮೊಮ್ಮಗನ ಉದ್ವಾಹಕಾಲೇ ವಿವಾಹ ಸಮಯದಲ್ಲಿ ಭೃಶಕುಪಿತಬಲಾತ್ ತುಂಬಾ ಕೋಪಿಸಿದ ಬಲರಾಮನ ದೆಸೆಯಿಂದ ರುಕ್ಮಿಣಂ ರುಕ್ಮಿಯನ್ನು ಘಾತಯಿತ್ವಾ ಕೊಲ್ಲಿಸಿ ಯೋಷಿದ್ಗಣೇನ ಸಹ ಸ್ತ್ರೀಯರ ಸಮೂಹದಿಂದ ಸಹಿತನಾಗಿ ನಂದನ್ ಸಂತೋಷಿಸುತ್ತಿರುವ ಪ್ರತಿಗ್ರಹಂ ಒಂದೊಂದು ಮನೆಯಲ್ಲಿಯೂ ಅಬಲಾಪ್ರೀತಿಕಾರೀ ಪತ್ನಿಯರಿಗೆ ಸಂತೋಷವನ್ನು ಕೊಟ್ಟನೋ ಸಃ ಆ ಶ್ರೀಕೃಷ್ಣದೇವನು ಮೇ ನನಗೆ ಗತಿಃ ಅಭೀಷ್ಟಗಳನ್ನು ಕೊಡುವವನು ಸ್ಯಾತ್ ಆಗಲಿ.

**ಕೃಷ್ಣಃ ರುಕ್ಮಿಣ್ಯಾಃ ನರ್ಮವಾಕ್ಯೈಃ ಅರಮತ**

ಶ್ರೀಕೃಷ್ಣದೇವನು ರುಕ್ಮಿಣೀದೇವಿಯ ಉಪಹಾಸಮಾತುಗಳಿಂದ ಸಂತೋಷಿಸಿದನು.

**(೯೬) ವಿಶೇಷಾರ್ಥ - ಕೃಷ್ಣಃ ಕದಾಚಿದ್ರುಕ್ಮಿಣ್ಯಾ ಅಂತರ್ಗೃಹೇ ನಾನಾವಿಧಪುಷ್ಪಾದಿಭಿಃ ಅಲಂಕೃತೇ ತತ್ರಸ್ಥ ಪರ್ಯಂಕೋತ್ತಮೇ ಸುಖೇನ ಸ್ಥಿತಃ ರತ್ನದಂಡೋಪೇತವಾಲವ್ಯಜನಹಸ್ತಯಾ ರುಕ್ಮಿಣ್ಯಾ ಸೇವ್ಯಮಾನಃ, ತಯಾ ಸಹ ನಾನಾವಿಧೋಪಹಾಸಪೂರ್ವಕಂ ಕ್ರೀಡಾಂ ಕುರ್ವನ್.**

**ವಿಶೇಷಾರ್ಥ ವಿವರಣ** - ಶ್ರೀಕೃಷ್ಣದೇವನ ಹದಿನಾರುಸಾವಿರದನೂರ ಎಂಟು ಪತ್ನಿಯರೂ ಅವನಲ್ಲಿ ವಿಶೇಷವಾದ ಆಸಕ್ತಿಯುಳ್ಳವರಾಗಿದ್ದರು. ಒಬ್ಬೊಬ್ಬ ಪತ್ನಿಯರೂ ಶ್ರೀಕೃಷ್ಣದೇವನು ನನ್ನಲ್ಲಿಯೇ ವಿಶೇಷವಾದ ಪ್ರೀತಿಯುಳ್ಳವನಾಗಿರುವನು ಎಂದು ನಿಶ್ಚಯಿಸಿದರು. ಅವರಲ್ಲಿ ಯಾರಲ್ಲಾದರೂ ಒಬ್ಬಳಲ್ಲಿ ಶ್ರೀಕೃಷ್ಣದೇವನು ಅಧಿಕವಾದ ಪ್ರೀತಿಯನ್ನು ಇಟ್ಟಿದ್ದನೇ? ಇಲ್ಲವೇ? ಎಂಬ ಪ್ರಶ್ನೆಯು ಬಂತು. ಅದಕ್ಕೆ ಈಗ ಪ್ರತ್ಯುತ್ತರವನ್ನು ಕೊಡುವೆವು. ಹದಿನಾರು ಸಾವಿರದ ನೂರ ಎಂಟು ಪತ್ನಿಯರ ಮಧ್ಯದಲ್ಲಿ ರುಕ್ಮಿಣೀದೇವಿಯನ್ನು ಶ್ರೀಕೃಷ್ಣದೇವನು

ಮೊದಲು ವಿವಾಹ ಮಾಡಿಕೊಂಡನು. ಅವಳಲ್ಲಿ ಶ್ರೀಕೃಷ್ಣದೇವನಿಗೆ ಅಧಿಕವಾದ ಪ್ರೀತಿ ಎಂದು ಪ್ರಖ್ಯಾತಿಯು ಇದೆ. ಈ ಪ್ರಖ್ಯಾತಿಯನ್ನು ಊರ್ಜಿತಪಡಿಸುವುದಕ್ಕೆ ಒಂದು ಸಂದರ್ಭವು ಬಂತು. ಆ ಸಂದರ್ಭವನ್ನು ವಿವರಿಸುವೆವು. ಒಮ್ಮೆ ರುಕ್ಮಿಣೀದೇವಿಗೂ ಶ್ರೀಕೃಷ್ಣದೇವನಿಗೂ ಪ್ರೇಮದಿಂದ ಕಲಹವು ಏರ್ಪಟ್ಟಿತು. ಅದನ್ನು ವಿವರವಾಗಿ ಹೇಳುವೆನು.

ಒಮ್ಮೆ ಜಗದ್ಗುರುವಾದ ಶ್ರೀಕೃಷ್ಣದೇವನು ರುಕ್ಮಿಣೀದೇವಿಯ ಅಂತಃಪುರದಲ್ಲಿ ಆನೆಯ ದಂತಗಳಿಂದ ನಿರ್ಮಿತವಾದ ಮಂಚದಲ್ಲಿ ತನ್ನ ಹಾಸಿಗೆಯಲ್ಲಿ ಸುಖವಾಗಿ ಕುಳಿತಿದ್ದನು. ಆಗ ಅಸಂಖ್ಯಾಕರಾದ ಸಖಿಯರಿದ್ದರೂ ಬೀಸಣಿಗೆಯನ್ನು ರುಕ್ಮಿಣಿಯು ತಾನೇ ತೆಗೆದುಕೊಂಡು ಬೀಸುತ್ತಿದ್ದಳು.ಮಣಿಮಯವಾದ ದೀಪಗಳ ಪ್ರಕಾಶವು ಶೋಭಿಸುತ್ತಿತ್ತು. ಮುತ್ತುಗಳಿಂದ ಮಾಡಿದ ಮಾಲೆಗಳು ಮೇಲ್ಕಟ್ಟಿನ ಸುತ್ತಲೂ ಜೋಲಾಡುತ್ತಿದ್ದವು. ಆ ಮಂಚದಲ್ಲಿ ಸುತ್ತಲೂ ಮಲ್ಲಿಗೆಗಳ ಮಾಲೆಗಳು ಶೋಭಿಸುತ್ತಿದ್ದವು. ಆ ಮಾಲೆಗಳಲ್ಲಿ ಭ್ರಮರಗಳು ಗುಂಪು ಗುಂಪಾಗಿ ಝೇಂಕಾರವನ್ನು ಮಾಡುತ್ತಿದ್ದವು. ಕಿಟಕಿಯ ರಂಧ್ರದಿಂದ ಒಳಗೆ ಪ್ರವೇಶಿಸಿದ ಎಳೆಯ ಚಂದ್ರನ ಕಿರಣಗಳು ಕೆಂಪಾಗಿದ್ದವು. ಪಾರಿಜಾತ ವೃಕ್ಷಗಳು ಉದ್ಯಾನವನದಲ್ಲಿದ್ದವು. ಆ ಪುಷ್ಪಗಳ ಸುಗಂಧವುಳ್ಳ ಗಾಳಿಗಳು ಬೀಸುತ್ತಿದ್ದವು.

ಮನೆಯೊಳಗೆ ಅಗುರು ಗಂಧದ ಹೊಗೆಯನ್ನು ಹಾಕಿದ್ದರು. ಆ ಹೊಗೆಗಳು ಕಿಟಕಿಯ ರಂಧ್ರಗಳಿಂದ ಹೊರಗೆ ಬರುತ್ತಿದ್ದವು. ಹಾಲಿನ ನೊರೆಯಂತೆ ಶುಭ್ರವಾದ ಹಾಸಿಗೆಯಲ್ಲಿ ಸುಖವಾಗಿ ಕುಳಿತಿರುವ, ಎಲ್ಲಾ ಲೋಕಗಳಿಗೂ ಪ್ರಭುವಾದ ತನ್ನ ಪತಿಯನ್ನು ರುಕ್ಮಿಣಿಯು ಸೇವಿಸುತ್ತಿದ್ದಳು. ಚಮರೀಮೃಗದ ಬಾಲದಿಂದ ನಿರ್ಮಿಸಲ್ಪಟ್ಟ ಮತ್ತು ರತ್ನಖಚಿತವಾದ ದಂಡದಿಂದ ಯುಕ್ತವಾಗಿರುವ ಬೀಸಣಿಗೆಯನ್ನು ಸಖಿಯ ಕೈಯಿಂದ ತೆಗೆದುಕೊಂಡು ಅದೇ ಬೀಸಣಿಗೆಯಿಂದ ಮಹಾಸ್ವಾಮಿಯನ್ನು ಬೀಸುತ್ತಿದ್ದಳು. ಶ್ರೀಕೃಷ್ಣದೇವನ ಪಕ್ಕದಲ್ಲಿ ಮಣಿಮಯವಾದ ಪಾದಾಭರಣಗಳ ಧ್ವನಿಯಾಯಿತು. ಬೀಸಣಿಗೆಯನ್ನು ಬೀಸುತ್ತಿರುವಾಗ ಕೈಯಲ್ಲಿರುವ ಉಂಗುರಗಳ ಕಾಂತಿಯು ಪ್ರಕಾಶಿಸಿತು. ಸೆರಗಿನಿಂದ ಮುಚ್ಚಲ್ಪಟ್ಟ ಕುಚಗಳ ಮೇಲೆ ಬಿದ್ದಿರುವ ಕುಂಕುಮದಿಂದ ಕೆಂಪಾದ ಮುತ್ತಿನ ಸರಗಳ ಕಾಂತಿಯಿಂದ ಯುಕ್ತಳಾದಳು. ನಿತಂಬ ಪ್ರದೇಶದಲ್ಲಿ ಅಮೂಲ್ಯವಾದ ಕಾಂಚಿಯನ್ನು ಧರಿಸಿದ್ದಳು.

ಶ್ರೀಕೃಷ್ಣದೇವನು ಆ ರುಕ್ಮಿಣಿಯನ್ನು ನೋಡಿದನು. ತಲೆಯ ಕೂದಲುಗಳು ದಟ್ಟವಾಗಿ ಬೆಳೆದಿದ್ದವು. ಕರ್ಣ ಕುಂಡಲಗಳು, ಕಾಸಿನ ಸರಗಳು ಇವುಗಳಿಂದ ಯುಕ್ತವಾದ ಮುಖದಲ್ಲಿ ಅಮೃತವನ್ನು ಸುರಿಸುವಂತೆ ನಗುತ್ತಿದ್ದಳು. ತನ್ನ ಪತಿಯೇ ತನಗೆ ಗತಿ ಎಂದು ನಂಬಿದವಳು. ಶ್ರೀಕೃಷ್ಣದೇವನು ಲೀಲೆಯಿಂದ ಯಾವ ರೂಪವನ್ನು ಸ್ವೀಕರಿಸಿದರೂ ಆ ರೂಪಕ್ಕೆ ಅನುರೂಪವಾದ ರೂಪವನ್ನು ಸ್ವೀಕರಿಸುವವಳು. ಅಂತಹ ರುಕ್ಮಿಣೀದೇವಿಯನ್ನು ನೋಡಿದನು.

### ಶ್ರೀಕೃಷ್ಣದೇವನು ರುಕ್ಮಿಣಿಯನ್ನು ನೋಡಿ ಹೇಳಿರುವ ಅಪಹಾಸ ವಚನಗಳು

"ಓ ರಾಜಪುತ್ರಿಯೇ, ನಿನ್ನನ್ನು ಶಿಶುಪಾಲ ಮುಂತಾದವರು ಅಪೇಕ್ಷಿಸಿದರು. ಅವರೆಲ್ಲರೂ ಇಂದ್ರ ಮುಂತಾದ ಲೋಕಪಾಲಕರಿಗೆ ಯೋಗ್ಯವಾದ ಸಂಪತ್ತುಗಳಿಂದ ಯುಕ್ತರಾದ ಮಹಾನುಭಾವರು.

ಮನ್ಮಥಪರವಶರಾಗಿ ಅಧಿಕವಾದ ಮದದಿಂದ ನಿನ್ನಲ್ಲಿ ಆಸೆಯಿಂದ ಯುಕ್ತರಾದವರು. ಅವರನ್ನೆಲ್ಲಾ ಬಿಟ್ಟೆ. ನಾವು ರಾಜರುಗಳಿಂದ ಹೆದರಿದವರು. ಸಮುದ್ರದ ಮಧ್ಯದಲ್ಲಿ ವಾಸಿಸುತ್ತಿರುವವರು. ಬಲಿಷ್ಠರೊಡನೆ ದ್ವೇಷವನ್ನು ಮಾಡಿದವರು. ಪ್ರಾಯಶಃ ರಾಜರ ಆಸನಗಳನ್ನು ಬಿಟ್ಟವರು. ಅಸ್ಪಷ್ಟವಾದ ಮಾರ್ಗದಲ್ಲಿ ನಡೆಯುವವರನ್ನೂ ಲೋಕದಲ್ಲಿ ಸರ್ವರೂ ಆಶ್ರಯಿಸಿದ ಹಾದಿಯನ್ನು ಬಿಟ್ಟವರನ್ನೂ ಆಶ್ರಯಿಸಿದ ಸ್ತ್ರೀಯರು ಪ್ರಾಯಶಃ ಕಷ್ಟಪಡುತ್ತಾರೆ. ನಾವು ಬಡವರು. ಬಡವರಿಗೆ ನಮ್ಮಲ್ಲಿ ವಿಶೇಷ ಪ್ರೀತಿಯು ಏರ್ಪಡುತ್ತದೆ. ಆದ್ದರಿಂದ ಪ್ರಾಯಶಃ ಶ್ರೀಮಂತರು ನಮ್ಮನ್ನು ಸೇವಿಸುವುದಿಲ್ಲ. ಯಾರಿಗೆ ಹಣ, ಐಶ್ವರ್ಯದಿಂದ ಯುಕ್ತವಾದ ಆಕಾರ, ಸೌಂದರ್ಯವು ಸಮವಾಗಿದೆಯೋ ಅವರಲ್ಲಿ ವಿವಾಹ ಮತ್ತು ಸ್ನೇಹವು ಶ್ರೇಯಸ್ಕರವಾಗುತ್ತದೆ. ಹಿಂದೆ ಹೇಳಿದ ಗುಣಗಳಲ್ಲಿ ಒಬ್ಬನು ಉತ್ತಮನು ಇನ್ನೊಬ್ಬನು ಅಧಮನಾಗಿದ್ದರೆ ಅವರಿಬ್ಬರಿಗೂ ವಿವಾದವಾಗಲೀ ಸ್ನೇಹವಾಗಲೀ ಬೆಳೆದರೆ ಶ್ರೇಯಸ್ಕರ ವಾಗಲಾರದು.

ವಿದರ್ಭರಾಜನ ಮಗಳೇ! ಈ ವಿಷಯವನ್ನು ತಿಳಿಯದೇ ದೀರ್ಘ ದೃಷ್ಟಿಯಿಲ್ಲದೆ ವ್ಯರ್ಥವಾಗಿ ಯಾರೋ ಭಿಕ್ಷುಕರು ಹೇಳಿದ ಮಾತುಗಳನ್ನು ನಂಬಿ ನನ್ನನ್ನು ವರಿಸಿರುವಿ. ಇನ್ನು ಮುಂದೆ ನಿನಗೆ ಯೋಗ್ಯನಾದ ಕ್ಷತ್ರಿಯ ಶ್ರೇಷ್ಠನನ್ನು ವಿವಾಹ ಮಾಡಿಕೊ ಅದರಿಂದ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಎಲ್ಲಾ ಶ್ರೇಯಸ್ಸುಗಳನ್ನೂ ಪಡೆಯುವಿ.

ಶಿಶುಪಾಲ, ಶಾಲ್ವ, ಜರಾಸಂಧ, ದಂತವಕ್ರ, ನಿನ್ನ ಅಣ್ಣನಾದ ರುಕ್ಮಿ ಮುಂತಾದ ರಾಜರುಗಳನ್ನು ದ್ವೇಷಿಸುತ್ತಿರುವರು. ವೀರ್ಯಮದದಿಂದ ಕುರುಡರಾಗಿರುವ ದುರಹಂಕಾರಿಗಳಾದ ಅವರೆಲ್ಲರ ಗರ್ವವನ್ನು ಪರಿಹರಿಸುವುದಕ್ಕಾಗಿ ಅವರೆಲ್ಲರ ತೇಜೋವಧಕ್ಕಾಗಿ ನಿನ್ನನ್ನು ಕರೆದುಕೊಂಡು ಬಂದೆನು. ನಾವು ಉದಾಸೀನರು. ಹೆಂಡತಿ, ಮಕ್ಕಳು, ಹಣ ಮುಂತಾದವುಗಳಲ್ಲಿ ಆಸೆಯುಳ್ಳವರಲ್ಲ. ನಮಗೆ ಸಿಕ್ಕಿದ್ದರಿಂದ ನಾವು ಪೂರ್ಣರು. ಇತರ ಜೀವರಂತೆ ತಮ್ಮ ಶಕ್ತಿಗೆ ಯೋಗ್ಯವಾದ ಕಾರ್ಯವನ್ನು ಮಾಡುವವರಲ್ಲ. ಬೇರೆ ಮನುಷ್ಯರಂತೆ ಇರುವವರು ನಾವಲ್ಲ" ಎಂದು ಹೇಳಿ ಸುಮ್ಮನಾದನು.

ರುಕ್ಮಿಣೀದೇವಿಯ ಮನೆಯನ್ನು ಶ್ರೀಕೃಷ್ಣದೇವನು ಒಂದು ಕ್ಷಣವೂ ಬಿಟ್ಟಿದಿಲ್ಲ. ಆದ್ದರಿಂದ ಹದಿನಾರು ಸಾವಿರದ ನೂರ ಎಂಟು ಪತ್ನಿಯರ ಮಧ್ಯದಲ್ಲಿ ತಾನೇ ಶ್ರೇಷ್ಠಳು ಎಂದು ತಿಳಿದಳು. ಇದು ನಿಜವೂ ಹೌದು. ಅಸತ್ಯವಲ್ಲ. ಆದರೆ ತಾನು ಗರ್ವಿಷ್ಠಳಂತೆ ನಟಿಸಿದಳು. ಈ ನಟನೆಯನ್ನು ತಿಳಿದು ಅವಳ ಗರ್ವವನ್ನು ಪರಿಹರಿಸುವವನಂತೆ ನಟಿಸುತ್ತಾ ಶ್ರೀಕೃಷ್ಣದೇವನು ಮೇಲ್ಕಂಡ ಮಾತುಗಳನ್ನು ಹೇಳಿದನು. ಮುಂದೆ ಯಾವ ಮಾತುಗಳನ್ನೂ ಹೇಳಲಿಲ್ಲ.

ಶ್ರೀಕೃಷ್ಣದೇವನು ತ್ರಿಲೋಕಾಧಿಪತಿಗಳಾದ ಬ್ರಹ್ಮಾದಿಗಳಿಗೆ ಪ್ರಭುವಾದವನು. ತನಗೂ ಪತಿಯಾದವನು. ಇಷ್ಟರ ವರೆಗೆ ಕೇಳದಿರುವ ಅಪೂರ್ವಮಾತುಗಳನ್ನು ಹೇಳುತ್ತಿರುವನು. ಈ ಮಾತುಗಳನ್ನು ರುಕ್ಮಿಣಿಯು ಕೇಳಿದಳು. ತುಂಬಾ ಹೆದರಿದಂತೆ ನಟಿಸಿದಳು. ಕಣ್ಣುಗಳಿಂದ ನೀರುಗಳನ್ನು ಸುರಿಸಿದಳು. ಎದೆಯು ನಡುಗಲು ಆರಂಭಿಸಿತು. ಕೊನೆಯೇ ಇಲ್ಲದಿರುವ ಚಿಂತೆಯನ್ನು ಹೊಂದಿದಳು. ಕೆಂಪಾದ ಉಂಗುರಗಳಿಂದ ಶೋಭಿಸುತ್ತಿರುವ ಉಗುರುಗಳಿಂದ ಭೂಮಿಯನ್ನು ಕೆರೆಯಲು ಆರಂಭಿಸಿದಳು. ಕಣ್ಣೀರುಗಳು ಕಾಡಿಗೆಯಿಂದ ಕಪ್ಪಾಗಿದ್ದವು.

ಕುಂಕುಮದಿಂದ ಕೆಂಪಾಗಿರುವ ಸ್ತನಗಳನ್ನು ಆ ಕಣ್ಣೀರುಗಳು ತೊಳೆದವು. ತಲೆಯನ್ನು ಬಗ್ಗಿಸಿದಳು, ಅತ್ಯಂತ ದುಃಖದಿಂದ ಮಾತುಗಳು ತಡೆಯಲ್ಪಟ್ಟವು. ವಿಪರೀತವಾದ ದುಃಖ, ಭಯ, ಶೋಕ, ಇವುಗಳಿಂದ ಬುದ್ಧಿಯೇ ಸ್ವಾಧೀನವಿಲ್ಲದಂತೆ ನಟಿಸಿದಳು. ದೇಹವು ಕೃಶವಾಯಿತು. ದೇಹದಿಂದ ಬಳೆಗಳು ಕಳಚಿ ಬಿದ್ದವು. ಕೈಯಲ್ಲಿದ್ದ ಬೀಸಣಿಗೆಯೂ ಕೆಳಗೆ ಬಿತ್ತು. ಅತಿ ದುಃಖದಿಂದ ಬಾಳೆಯ ಗಿಡಗಳು ನಡುಗುತ್ತಿರುವಂತೆ ದೇಹವು ನಡುಗಲು ಆರಂಭಿಸಿತು. ತಲೆಯ ಕೂದಲುಗಳನ್ನು ಕೆದರಿಕೊಂಡು ಕೆಳಗೆ ಬಿದ್ದಳು.

ಅವನ ನಟನಕ್ಕೆ ಸರಿಯಾದ ನಟನವನ್ನು ಶ್ರೀಕೃಷ್ಣದೇವನು ನೋಡಿ ಓಡಿಬಂದನು. ಹಾಸ್ಯದಲ್ಲಿ ವಿಶೇಷ ಪಾಂಡಿತ್ಯವನ್ನು ತಿಳಿಯದವನಂತೆ ನಟಿಸಿರುವಳು. ಈ ನಟನದಿಂದ ಶ್ರೀರುಕ್ಮಿಣೀದೇವಿಗೆ ಶ್ರೀಕೃಷ್ಣನಲ್ಲಿರುವ ಪ್ರೇಮಾತಿರೇಕವು ತಿಳಿಯಿತು. ಸರ್ವರಲ್ಲಿಯೂ ಪರಮ ಕರುಣಾಳುವಾದ ಶ್ರೀಕೃಷ್ಣದೇವನು ರುಕ್ಮಿಣೀದೇವಿಯಲ್ಲಿ ವಿಶೇಷವಾದ ಕರುಣೆಯು ಆಗ ಏರ್ಪಟ್ಟಂತೆ ನಟಿಸಿದನು.

## ಶ್ರೀಕೃಷ್ಣದೇವನ ಸಮಾಧಾನ ವಚನಗಳು

"ವಿದರ್ಭರಾಜನ ಕುಮಾರಿಯಾದ ರುಕ್ಮಿಣಿಯೇ! ನೀನು ನನ್ನಲ್ಲಿ ವಿಶೇಷ ಭಕ್ತಿ ಯುಳ್ಳವಳೆಂಬ ವಿಷಯವನ್ನು ನಾನು ತಿಳಿದಿರುವೆನು. ನಾನು ತಮಾಷೆಗಾಗಿ ಹೀಗೆ ಹೇಳಿದೆನು. ನಿನ್ನ ಪ್ರತ್ಯುತ್ತರಗಳನ್ನು ಕೇಳಬೇಕೆಂದು ಹಾಗೆ ಹೇಳಿದೆನು. ಇದಕ್ಕಾಗಿ ನನ್ನಲ್ಲಿ ದೋಷವನ್ನು ನೆನೆಸಬೇಡ." ಎಂದು ಹೇಳುತ್ತಾ ತನ್ನ ಹಾಸಿಗೆಯಿಂದ ಕೆಳಗೆ ಇಳಿದನು. ತನ್ನ ಕೈಗಳಿಂದ ಆಲಿಂಗಿಸಿದನು. ಸಮಾಧಾನವನ್ನು ಮಾಡುವ ಮಾರ್ಗವನ್ನು ತಿಳಿದವನು ಅವಳನ್ನು ಸಮಾಧಾನಪಡಿಸಿದನು. "ಗೃಹಸ್ಥಾಶ್ರಮಿಗಳಿಗೆ ದೊಡ್ಡ ಲಾಭವು ಯಾವುದು? ಎಂಬ ಅಂಶವನ್ನು ವಿವರಿಸುವೆನು. ಯಾವಾಗಲೂ ಗಂಡನೂ ಹೆಂಡತಿಯೂ ಜಗಳವನ್ನು ಆಡುತ್ತಿರಬೇಕು. ಆದರೆ ನೀನು ಯಾವಾಗಲೂ ನನ್ನೊಡನೆ ಜಗಳವಾಡಿದವಳಲ್ಲ. ನಿನಗೆ ಕೋಪವು ಬರುವಂತೆ ಮಾಡಬೇಕೆಂದು ಯೋಚಿಸಿದೆನು. ಹಿಂದೆ ಹೇಳಿದಂತೆ ಹೇಳಿದೆನು. ನಿನಗೆ ನನ್ನ ಮೇಲಿರುವ ಪ್ರೇಮದಿಂದ ಕೋಪ ಬಂದಿತು. ಆ ಕೋಪದ ವೇಗದಿಂದ ಕೆಂಪಾದ ಕಡೆಗಣ್ಣುಗಳಿಂದ ನನ್ನನ್ನು ನೋಡುತ್ತಾ ಹುಬ್ಬುಗಂಟುಗಳನ್ನು ಹಾಕಿದಿ. ನಡುಗುತ್ತಿರುವ ತುಟಿಗಳಿಂದ ಯುಕ್ತವಾದ ನಿನ್ನ ಸುಂದರವಾದ ಮುಖಗಳನ್ನು ನೋಡಿದೆನು. ನನ್ನ ಮನೆಯ ಯಜಮಾನಿನಿಯಾಗಿರುವ ನಿನ್ನ ಜೊತೆಯಲ್ಲಿ ಪ್ರೇಮದಿಂದ ಕಲಹವನ್ನು ಮಾಡಿದೆನು. ಅಪಾರವಾದ ಸಂತೋಷವನ್ನು ಪಡೆದೆನು." ಎಂದನು. ಈ ಮಾತುಗಳನ್ನು ಕೇಳಿದ ರುಕ್ಮಿಣೀ ದೇವಿಯು ಹಿಂದೆ ಹೇಳಿದ ಮಾತುಗಳೆಲ್ಲವೂ ಪರಿಹಾಸಕ್ಕಾಗಿ ಹೇಳಿದ ಮಾತುಗಳೆಂದು ತಿಳಿದವಳಂತೆ ನಟಿಸಿದಳು. ಗಂಡನು ತನ್ನನ್ನು ಬಿಟ್ಟು ಬಿಡುವ ಉದ್ದೇಶದಿಂದ ಆ ಮಾತುಗಳನ್ನು ಹೇಲಿಲ್ಲವೆಂದೂ ಆದ್ದರಿಂದ ತನಗೂ ತನ್ನ ಪತಿಯಾದ ಶ್ರೀಕೃಷ್ಣದೇವನಿಗೂ ವಿಯೋಗವು ಏರ್ಪಡುತ್ತದೆ ಎಂಬ ಭಯವು ಹೋದಂತೆಯೂ ನಟಿಸಿದಳು. ಸಕಲ ಪುರುಷರ ಮಧ್ಯದಲ್ಲಿಯೂ ಶ್ರೇಷ್ಠನಾದ ಶ್ರೀಕೃಷ್ಣದೇವನ ಮುಖವನ್ನು ನೋಡಿದಳು. ನಾಚಿಕೆಯಿಂದ ಯುಕ್ತಳಾದಳು. ನಗುತ್ತಾ ಸ್ನೇಹಯುಕ್ತವಾದ ಕಡೆಗಣ್ಣಿನಿಂದ ನೋಡುತ್ತಾ ಮಾತಾಡಿದಳು. ಮುಂದೆ ಹೇಳುವ ರುಕ್ಮಿಣೀ ದೇವಿಯರ ಮಾತುಗಳಲ್ಲಿ ಶ್ರೀಕೃಷ್ಣದೇವನು ಅಪಹಾಸಕ್ಕಾಗಿ ಹೇಳಿರುವ ಒಂದೊಂದು ಮಾತುಗಳೂ ಸತ್ಯವೇಂದೂ ಒಂದು ಮಾತೂ ಅಸತ್ಯವಲ್ಲವೆಂದೂ ಸಮರ್ಥಿಸಿರುವಳು. ಇದಲ್ಲವೇ ಪತಿವ್ರತಾಶಿರೋಮಣಿಯರ ಧರ್ಮ.

# ರುಕ್ಮಿಣೀದೇವಿಯ ವಿಶಿಷ್ಟ ಬುದ್ಧಿ

ಓ ಪತಿದೇವ! ನೀವು ಒಂದು ಮಾತನ್ನು ಹೇಳಿದಿರಿ. "ಈ ಜೀವರಾಶಿಯಲ್ಲಿ ನನ್ನಂಥವರು ಯಾರೂ ಇಲ್ಲ. ನನಗೆ ಮಾಡಬೇಕಾದ ಕೆಲಸವೂ ಇಲ್ಲ" ಇದು ನಿಮ್ಮ ಮಾತು. ಇದು ನಿಜ, ಜೀವರಾಶಿಯಲ್ಲಿ ನಿಮಗೆ ಸಮಾನರು ಯಾರೂ ಇಲ್ಲ. ನೀವು ಎಲ್ಲಾ ದೇಶಗಳಲ್ಲಿಯೂ ಇದ್ದೀರಿ. ನೀವು ಇಲ್ಲದಿರುವ ದೇಶವಿಲ್ಲ. ಎಲ್ಲಾ ಕಾಲಗಳಲ್ಲಿಯೂ ಇದ್ದೀರಿ. ನೀವಿಲ್ಲದಿರುವ ಕಾಲವಿಲ್ಲ. ನೀವು ಎಲ್ಲಾ ಗುಣಗಳಿಂದಲೂ ಪೂರ್ಣರಾಗಿದ್ದೀರಿ. ನಿಮ್ಮಲ್ಲಿ ಇಲ್ಲದಿರುವ ಗುಣಗಳಿಲ್ಲ. ನಿಮಗೆ ಸಮಾನರು ಯಾರೂ ಇಲ್ಲ ಎಂದು ಹೇಳಿದ್ದನ್ನು ನಾನು ಸಂಪೂರ್ಣವಾಗಿ ಅಂಗೀಕರಿಸುವೆನು. ಹೀಗಿರುವ ನಿಮಗೆ ಯಾವ ಕೆಲಸಗಳಿಂದಲೂ ಆಗಬೇಕಾದ್ದಿಲ್ಲ ಎಂದು ಹೇಳಿದ್ದನ್ನೂ ಅಂಗೀಕರಿಸುವೆನು. ನಿಮ್ಮಲ್ಲಿ ಐಶ್ವರ್ಯ, ವೀರ್ಯ, ಯಶಸ್ಸು, ಸಂಪತ್ತು, ಜ್ಞಾನ, ವೈರಾಗ್ಯ ಮುಂತಾದ ಗುಣಗಳು ಪೂರ್ಣವಾಗಿವೆ. ಇಂತಹ ಮಹಾನುಭಾವರಾದ ನಿಮಗೆ ತಮ್ಮ ಸ್ವಂತಕ್ಕಾಗಿ ಮಾಡಬೇಕಾದ ಕೆಲಸಗಳಿವೆಯೇ? ಈ ಮೂರು ಲೋಕಗಳಲ್ಲಿರುವ ಸರ್ವರೂ ಮೂರು ವೇದಗಳಲ್ಲಿ ಕರ್ಮಗಳನ್ನು ಮಾಡುತ್ತಿರುವವರು. ಆದ್ದರಿಂದ ಕರ್ಮಬದ್ಧರು. ನೀವು ಕರ್ಮಬದ್ಧರಲ್ಲ. ಎಲ್ಲರೂ ಸತ್ವಗುಣ, ರಜೋಗುಣ, ತಮೋಗುಣ ಎಂಬ ಮೂರು ಗುಣಗಳಿಂದ ಬದ್ಧರಾಗಿರುವವರು. ನೀವು ಈ ಗುಣಗಳಿಂದ ಬದ್ಧರಲ್ಲ.

ಶಿಶುಪಾಲ ಮುಂತಾದವರು ದೇವಶ್ರೇಷ್ಠರಿಗೆ ಸಮಾನರೆಂದೂ ಲೋಕಪಾಲಕರಾದ ಇಂದ್ರ ಮುಂತಾದವರ ವೈಭವಗಳಿಂದ ಯುಕ್ತರೆಂದೂ ಹೇಳಿದಿರಿ. ನಾನು ಸತ್ವಾದಿಗುಣಗಳಿಗೆ ನಿಯಾಮಕನು. ಸತ್ವಾದಿಗುಣಗಳಿಂದ ಬದ್ಧರಾಗಿರುವ ಬ್ರಹ್ಮ ಮುಂತಾದ ಸರ್ವಜೀವರೂ ನನ್ನ ಪಾದಗಳನ್ನು ಯಾವಾಗಲೂ ಸೇವಿಸುತ್ತಿರುವರು. ನನ್ನ ಪ್ರಭಾವವೇ ಹೀಗಿರುವಾಗ ನನ್ನ ಪ್ರಭುವಾಗಿರುವ ನಿಮ್ಮ ಪ್ರಭಾವವನ್ನು ಎಷ್ಟೆಂದು ಹೇಳಲಿ.

"ರಾಜರುಗಳಿಂದ ಹೆದರಿ ಸಮುದ್ರದ ಮಧ್ಯದಲ್ಲಿ ವಾಸಿಸುತ್ತಿರುವೆನು" ಎಂದು ಹೇಳಿದಿರಿ. ಈ ವಾಕ್ಯದ ಮಧ್ಯದಲ್ಲಿ "ಸಮುದ್ರದ ಮಧ್ಯದಲ್ಲಿ ವಾಸಿಸುತ್ತಿರುವೆನು" ಎಂಬ ಅಂಶವು ಸತ್ಯ. "ಅಂಭ್ರಣೀ" ಎಂದು ಪ್ರಸಿದ್ಧಳಾಗಿರುವ ನನ್ನ ವಾಕ್ಯಗಳು ಸತ್ಯವಲ್ಲವೇ? "ರಾಜರುಗಳಿಂದ ಹೆದರಿ" ಎಂಬ ಅಂಶವು ಸುಳ್ಳು. ಬಲಿಚಕ್ರವರ್ತಿ ಮುಂತಾದ ಮಹಾ ದುರಭಿಮಾನಿಗಳ ತಲೆಗಳ ಸಾಲುಗಳಿಂದ ಗೌರವಿಸಲ್ಪಟ್ಟ ಹೆಜ್ಜೆಗಳಿಂದ ಶೋಭಿಸುತ್ತಿರುವ ಮಹಾನುಭಾವ! ನಿಮಗೆ ಹೆದರಿಕೆಯೇ?

ಈ ಸತ್ವಾದಿಗುಣಗಳು ತಮ್ಮ ತಮ್ಮ ಕಾರ್ಯಗಳಲ್ಲಿ ಸ್ವಶಕ್ತಿಯನ್ನು ವ್ಯಕ್ತಪಡಿಸುತ್ತಾ ರಾಜರಂತೆ ಮೆರೆಯುತ್ತಿರುತ್ತವೆ. ಅವುಗಳ ಭಯವು ಎಲ್ಲರಿಗೂ ಇರುತ್ತದೆ. ಆ ಭಯದಿಂದ ಸರ್ವರೂ ಸಮುದ್ರ ಮುಂತಾದವುಗಳ ಮಧ್ಯದಲ್ಲಿಯೂ ಪಂಚಮುದ್ರೆಗಳಿಂದ ಶೋಭಿಸುತ್ತಿರುವ ದೇಹಗಳ ಮಧ್ಯದಲ್ಲಿಯೂ ತಪಸ್ಸನ್ನು ಮಾಡುತ್ತಿರುತ್ತಾರೆ. ಅವರಂತೆ ನೀವೂ ಸಹ ಸಮುದ್ರದ ಮಧ್ಯದಲ್ಲಿಯೂ ಪಂಚಮುದ್ರೆಗಳಿಂದ ಶೋಭಿಸುತ್ತಿರುವ ಸರ್ವಜೀವರ ದೇಹಗಳ ಮಧ್ಯದಲ್ಲಿಯೂ "ಅಂಗುಷ್ಠಮಾತ್ರಃ ಪುರುಷಃ" ಎಂಬ ಶ್ರುತಿಯಲ್ಲಿ ಹೇಳಿದಂತೆ ಅಂಗುಷ್ಠದಷ್ಟೇ ಆಕಾರದಿಂದ ಯುಕ್ತರಾಗಿ ಶೋಭಿಸುತ್ತಿರುವಿರಿ. ಇದು ಭಯದಿಂದಲ್ಲ. ಶರೀರದ ಮಧ್ಯದಲ್ಲಿ ವಾಸಿಸುತ್ತಿರುವ ನಿಮಗೆ "ಆತ್ಮಾ" ಎಂದು ಹೆಸರು. "ಆತ್ಮಾ" ಸುಖವನ್ನೇ ಅನುಭವಿಸುವವರು. ಅತ್ಯಲ್ಪವಾದ

ದುಃಖವನ್ನೂ ಅನುಭವಿಸುವವರಲ್ಲ. ಆದ್ದರಿಂದ ನಿಮಗೆ "ಆತ್ಮಾ" ಎಂಬ ಹೆಸರು ಬಂದಿರುತ್ತದೆ. ಸರ್ವರ ದೇಹಗಳಲ್ಲಿರುವ ನೀವು ಅನಂತ ರೂಪಿಯಾಗಿರುವಿರಿ. ಜೀವನು ಹಾಗಲ್ಲ. ಜೀವನು ಪ್ರಾಕೃತಶರೀರದಿಂದ ಯುಕ್ತನಾಗಿರುವನು. ಆದ್ದರಿಂದ ದೇಹದ ಧರ್ಮಗಳಾಗಿರುವ ವಾರ್ಧಕ್ಯಾವಸ್ಥೆ. ಮರಣ ಮುಂತಾದವುಗಳು ಜೀವನಿಗೆ ಇವೆ. ನಿಮಗೆ ಇಲ್ಲ.

ಓ ಪತಿದೇವ! ಬಲಿಷ್ಠರೊಡನೆ ದ್ವೇಷವನ್ನು ನೀವು ಮಾಡಿದಂತೆ ಹೇಳಿರುವಿರಿ. ಅದು ಸತ್ಯ. ಈ ವಿಷಯವನ್ನು ವಿವರಿಸುವೆನು. ಜೀವರಲ್ಲಿರುವ ಇಂದ್ರಿಯಗಳೆಲ್ಲವೂ ಅನಿತ್ಯವಾದವುಗಳು. ಒಬ್ಬೊಬ್ಬರಿಗೂ ಪುನಃ ಪುನಃ ಜನ್ಮಗಳನ್ನು ಕೊಡುತ್ತಿರುತ್ತವೆ. ಆದ್ದರಿಂದಲೇ ಇಂದ್ರಿಯಗಳ ಸಮೂಹವು ಅತ್ಯಂತ ಬಲಿಷ್ಠವೆಂದು ಹೇಳಲ್ಪಡುತ್ತದೆ. ನಿಮ್ಮ ಅನುಗ್ರಹಕ್ಕೆ ಪಾತ್ರರಾದವರು ಆ ಇಂದ್ರಿಯಗಳನ್ನು ಜಯಿಸಲಿಕ್ಕೆ ಶಕ್ತರಾಗುವರು. ನೀವು ನಿಮ್ಮ ಇಂದ್ರಿಯಗಳನ್ನು ಸ್ವಶಕ್ತಿಯಿಂದಲೇ ಜಯಿಸಿರುವಿರಿ. ಆದ್ದರಿಂದಲೇ ಅತ್ಯಂತ ಬಲಿಷ್ಠವಾದ ಇಂದ್ರಿಯಗಳನ್ನು ನಿಗ್ರಹಿಸಿರುವಿರಿ. ಆದ್ದರಿಂದ ನೀವು ಹೇಳಿರುವುದು ಅತ್ಯಂತ ಯುಕ್ತವಾಗುತ್ತದೆ.

ಓ ಪತಿದೇವ! "ಪ್ರಾಯಶಃ ನಾನು ರಾಜರುಗಳ ಆಸನಗಳನ್ನು ಬಿಟ್ಟವನು" ಎಂದು ಹೇಳಿರುವಿರಿ. ಅದೂ ಸತ್ಯವಾಗಿದೆ. "ನೃಪ" ಎಂಬ ಹೆಸರಿಗೆ ಮನುಷ್ಯರನ್ನು ರಕ್ಷಿಸುವವನು ಎಂದು ಅರ್ಥ. ಆದರೆ ಯಾವ ಮನುಷ್ಯನೂ ಪ್ರಜೆಗಳನ್ನು ರಕ್ಷಿಸುವುದಿಲ್ಲ. ಆದ್ದರಿಂದ ವ್ಯರ್ಥವಾದ ಆ ಹೆಸರು ಶಿಶುಪಾಲಾದಿಗಳಿಗೆ ಯೋಗ್ಯವಲ್ಲ. ಆದ್ದರಿಂದಲೇ ನೃಪಾಸನವನ್ನು ಅವರೆಲ್ಲರೂ ಪ್ರಾಯಶಃ ಬಿಟ್ಟವರು. ಹೆಚ್ಚೇಕೆ, ನಾನೂ ಯಾವಾಗಲೂ ನಿಮ್ಮ ಸೇವೆಯಲ್ಲಿಯೇ ಆಸಕ್ತಿ ಯುಳ್ಳವಳಾಗಿರುವುದರಿಂದ ನೃಪಾಸನವನ್ನು ಬಿಟ್ಟಿರುವೆನು. ನೀವೊಬ್ಬರೇ ನೃಪಾಸನಕ್ಕೆ ಅರ್ಹನೆಂದು ಇಂದ್ರಾದಿದೇವತೆಗಳು ನಿಮಗೆ ನೃಪಾಸನವನ್ನು ಸಮರ್ಪಿಸಿರುವರು. ಆದ್ದರಿಂದ ನೀವು ಹೇಳಿರುವ ಆ ಮಾತೂ ಸತ್ಯವಾಗಿದೆ.

ಓ ಪತಿದೇವ! ನಿಮ್ಮ ಮಾರ್ಗವು ಸ್ಪಷ್ಟವಾಗಿ ಯಾರಿಂದಲೂ ತಿಳಿಯಲು ಸಾಧ್ಯವಿಲ್ಲವೆಂದು ಹೇಳಿದಿರಿ. ಇದೂ ಸತ್ಯ. ನಿಮ್ಮ ಪಾದಕಮಲಗಳಲ್ಲಿರುವ ಮಹಿಮೆಯೆಂಬ ಜೇನಿನ ರಸದ ರುಚಿಯನ್ನು ತಿಳಿದಿರುವ ಜ್ಞಾನಿಗಳ ಮಾರ್ಗವೇ ಪಶುಗಳಂತಿರುವ ಇತರ ಮನುಷ್ಯರಿಂದ ತಿಳಿಯಲು ಸಾಧ್ಯವಿಲ್ಲ. ಹೀಗಿರುವಾಗ ನಿಮ್ಮ ಮಾರ್ಗವನ್ನು ತಿಳಿಯಲು ಇನ್ನೊಬ್ಬರಿಂದ ಸಾಧ್ಯವಿಲ್ಲವೆಂದು ಹೇಳಬೇಕಾದ್ದೇನಿದೆ?

ಓ ಗುಣಪರಿಪೂರ್ಣರಾದ ಪತಿದೇವ, ಲೋಕದಲ್ಲಿರುವ ಜನರಿಗೆ ಸಂಮತವಾಗಿರುವ ಮಾರ್ಗವನ್ನು ಬಿಟ್ಟು ವಿರುದ್ಧವಾದ ಮಾರ್ಗದಲ್ಲಿ ನೀವು ನಡೆಯುತ್ತಿರುವುದಾಗಿ ಹೇಳಿದಿರಿ. ಅದೂ ಸತ್ಯ. ನಾನು ನಿಮ್ಮ ಪತ್ನಿಯು, ನಿಮ್ಮ ನಡತೆಯಂತೆ ನಡೆಯುತ್ತಿರುವೆನು. ನನ್ನ ನಡತೆಯೇ ಲೋಕದಲ್ಲಿರುವ ಸರ್ವರಿಗೂ ಸಂಮತವಲ್ಲ. ಹೀಗಿರುವಾಗ ನಿಮ್ಮ ನಡತೆಯು ಲೋಕದಲ್ಲಿರುವ ಯಾರಿಗೂ ಸಂಮತವಲ್ಲ ಎಂಬ ವಿಷಯದಲ್ಲಿ ಸಂಶಯವೇನಿದೆ?

ಓ ಪತಿದೇವ! "ನಾನು ಒಂದೂ ಇಲ್ಲದ ಬಡವನು" ಎಂದು ಹೇಳಿದಿರಿ. ಅದರ ಅರ್ಥವನ್ನು ವಿವರಿಸುವೆನು. "ನನ್ನಲ್ಲಿರುವ ಸಂಪತ್ತುಗಳು ಸ್ವಲ್ಪವಲ್ಲ ಅನಂತವಾಗಿವೆ ಎಂಬ ಅರ್ಥವನ್ನು ಇಟ್ಟುಕೊಂಡು "ನಾನು ಒಂದು ಇಲ್ಲದವನು" ಎಂದು ಹೇಳಿದಿರಿ. "ಒಂದೂ ಇಲ್ಲದ ಬಡವನು" ಎಂಬ ಅರ್ಥದಿಂದ ಹಾಗೆ ಹೇಳಲಿಲ್ಲ.

ನಿಮ್ಮ ಭಕ್ತರಾದ ಬ್ರಹ್ಮಮುಂತಾದ ಸಕಲ ದೇವತೆಗಳು ಸರ್ವರಿಂದ ಕೊಡುವ ಕಾಣಿಕೆಗಳನ್ನು ಸ್ವೀಕರಿಸುತ್ತಿರುವರು. ಅಂತಹ ನೀವು ಬಡವರೇ? ಅಲ್ಲವೇ ಅಲ್ಲ. ಆದ್ದರಿಂದ ಆ ಅಭಿಪ್ರಾಯದಿಂದ ನೀವು ಮಾತುಗಳನ್ನು ಹೇಳಲಿಲ್ಲ.

"ಮೇಲ್ಕಂಡ ಕಾರಣಗಳನ್ನು ತಿಳಿದಿರುವ ಶ್ರೀಮಂತರು ನನ್ನನ್ನು ಪ್ರಾಯಶಃ ಸೇವಿಸುವುದಿಲ್ಲ" ಎಂದು ಹೇಳಿದಿರಿ. ಅದೂ ಸತ್ಯ. ಶ್ರೀಮಂತರೆಂಬ ಮದದಿಂದ ಕುರುಡರಾಗಿರುವ ಕೆಲವು ಮೂರ್ಖರು ನಿಮ್ಮನ್ನು ತಿಳಿಯುವುದೂ ಇಲ್ಲ. ತಮ್ಮ ಇಂದ್ರಿಯಗಳನ್ನು ತೃಪ್ತಿಪಡಿಸುವ ಆಸೆಯೇ ಇದಕ್ಕೆ ಕಾರಣ. ನೀವು ಇತರರಿಂದ ಪೂಜಿಸಲ್ಪಡುತ್ತಿರುವ ಬ್ರಹ್ಮಮುಂತಾದವರಿಗೂ ಸಹ ಅಂತರ್ಯಾಮಿಯಾಗಿರುವಿರಿ. ಹೀಗಿರುವಾಗ ಇತರರಿಗೆ ಅಂತರ್ಯಾಮಿಯಾಗಿರುವಿರೆಂದು ಹೇಳಬೇಕಾದ್ದೇ ಇಲ್ಲ. ಈ ವಿಷಯದಲ್ಲಿ ಅಸಂಖ್ಯವಾದ ಪ್ರಮಾಣಗಳಿವೆ. "ಪ್ರಿಯೋ ಹಿ ಜ್ಞಾನಿನೋತ್ಯರ್ಥಮಹಂ ಸ ಚ ಮಮ ಪ್ರಿಯಃ" ಅಂದರೆ ಸಜ್ಜನರಿಗೆ ನೀವೂ ನಿಮಗೆ ಸಜ್ಜನರೂ ಪ್ರಿಯರಾಗಿರುವರು ಎಂಬ ಭಾಗವತಚನವೂ ಇತರ ವಾಕ್ಯಗಳೂ ಪ್ರಮಾಣವಾಗಿವೆ. "ಕಸ್ಮೈ ದೇವಾಯ ಹವಿಷಾ ವಿಧೇಮ" ಅಂದರೆ "ಯಾವ ದೇವನನ್ನು ಹವಿಸ್ಸುಗಳಿಂದ ತೃಪ್ತಿಪಡಿಸಬೇಕು"? ಎಂಬುದನ್ನು ವಿಮರ್ಶಿಸಿ ಶ್ರುತಿಯು ನಿಮ್ಮನ್ನೇ ತೃಪ್ತಿಪಡಿಸಬೇಕೆಂದು ತೀರ್ಮಾನಿಸಿದೆ. ಆದ್ದರಿಂದ "ಸರ್ವಾಂತರ್ಯಾಮಿಯಾಗಿರುವ ನಿಮ್ಮನ್ನು ಆರಾಧಿಸದೆ ತಮ್ಮ ಇಂದ್ರಿಯಗಳನ್ನೇ ತೃಪ್ತಿಪಡಿಸುತ್ತಿರುವ ಮೂರ್ಖರು ನಿಮ್ಮನ್ನು ಪ್ರಾಯಶಃ ಆರಾಧಿಸುವುದಿಲ್ಲ" ಎಂಬ ನಿಮ್ಮ ಮಾತು ಸತ್ಯವಾದದ್ದು.

"ನಮ್ಮಿಬ್ಬರಿಗೂ ಸಂಪತ್ತು ಮುಂತಾದ ವಿಷಯಗಳಲ್ಲಿ ಸಾಮ್ಯವಿಲ್ಲ. ಆದ್ದರಿಂದ ನಮ್ಮಿಬ್ಬರ ವಿವಾಹವು ಶ್ರೇಯಸ್ಕರವಾಗಲಾರದು" ಎಂದು ಹೇಳಿದಿರಿ. ಆ ಮಾತುಗಳಿಗೆ ಉತ್ತರವನ್ನು ಕೊಡುವೆನು.

ನೀವು ಪರಮಾನಂದರೂಪಿಯಾಗಿರುವವರು, ಜೀವರ ಮಧ್ಯದಲ್ಲಿ ತಮೋಯೋಗ್ಯರಾದ ಜೀವರು ಆನಂದರೂಪಿಗಳೇ ಅಲ್ಲ. ನಿತ್ಯಸಂಸಾರಿಗಳು ಆನಂದ ಮತ್ತು ದುಃಖಗಳೇ ಸ್ವರೂಪಗಳಾಗಿರುವವರು. ಮುಕ್ತಿಯೋಗ್ಯರಾದ ಜೀವರು ಆನಂದಸ್ವರೂಪಿಗಳಾಗಿದ್ದರೂ ಲಿಂಗದೇಹವು ಇರುವ ವರೆಗೆ ಪ್ರಾರಬ್ಧಕರ್ಮಗಳಿಂದ ದುಃಖಿಗಳೂ ಆಗುವುದುಂಟು. ಲಿಂಗದೇಹವು ಹೋದ ಮೇಲೆ ಸುಖಿಗಳಾಗುವರು. ಆ ಮೇಲೆಯೂ ಅವರೆಲ್ಲರ ಆನಂದವು ಪರಿಮಿತವಾಗಿಯೇ ಇರುತ್ತದೆ.

ನಿಮಗೆ ಲಿಂಗದೇಹವಿಲ್ಲ. ಪ್ರಾರಬ್ಧಪಾಪಕರ್ಮಗಳೂ ಇಲ್ಲ. ನಿಮ್ಮ ಆನಂದವು ಪೂರ್ಣವಾದುದು. ಆದ್ದರಿಂದಲೇ ಜ್ಞಾನಿಗಳು ತಮ್ಮ ಮಕ್ಕಳು, ಪತ್ನೀ ಮುಂತಾದ ಸರ್ವಸ್ವವನ್ನೂ ನಿಮಗೆ ಅನಾದಿಕಾಲದಿಂದ ಇಂದಿನ ವರೆಗೆ ಸಮರ್ಪಿಸಿರುವರು. ಇಂದಿನಿಂದ ಮುಂದೆ ಅನಂತಕಾಲದ ವರೆಗೂ ಸಮರ್ಪಿಸುತ್ತಿರುವರು. ಆದ್ದರಿಂದ ಎಲ್ಲಾ ಫಲಗಳಿಗಿಂತಲೂ ಪರಮ ಸುಖಸ್ವರೂಪಿಯಾಗಿರುವ ನೀವೇ ಸರ್ವಸಜ್ಜನರಿಂದಲೂ ಅಪೇಕ್ಷಿಸಲ್ಪಡುತ್ತಿರುವ ಮಹಾಪುರುಷಾರ್ಥ ವೆನಿಸಿರುವಿರಿ, ಸರ್ವಸಜ್ಜನರೂ ವೇದಗಳಲ್ಲಿ ಹೇಳಿದಂತೆ ನಿಮ್ಮನ್ನು ಉಪಾಸಿಸುತ್ತಿರುವರು. ನೀವು ಸಕಲ ವೇದಪ್ರತಿಪಾದ್ಯರು. ಇದನ್ನೆಲ್ಲವನ್ನೂ ಚೆನ್ನಾಗಿ ವಿಮರ್ಶಿಸಿ ನಿಮ್ಮನ್ನು ವರಿಸಿದೆನು.

"ಭಿಕ್ಷುಕರು ನಿಮ್ಮನ್ನು ವ್ಯರ್ಥವಾಗಿ ಹೊಗಳಿದರು. ಅವರು ಹೇಳಿದ ಮಾತುಗಳನ್ನು ಕೇಳಿ ನಾನು ನಿಮ್ಮನ್ನು ವರಿಸಿದೆನು" ಎಂದು ಹೇಳಿದಿರಿ. ಆ ಮಾತುಗಳಿಗೆ ಉತ್ತರವನ್ನು ಕೊಡುವೆನು. ಓ ಪ್ರಿಯಪತಿಯೇ, ಭಿಕ್ಷುಕರು ವ್ಯರ್ಥವಾಗಿ ನಿಮ್ಮನ್ನು ಹೊಗಳಲಿಲ್ಲ. ನಿಮ್ಮನ್ನು ಹೊಗಳಿದವರು ಸನ್ಯಾಸಿಗಳು. ಅವರು ಸುಳ್ಳು ಮಾತುಗಳನ್ನು

ಹೇಳಿದವರಲ್ಲ. ಮನಸ್ಸಿನಿಂದ ಕೆಟ್ಟ ಯೋಚನೆಗಳನ್ನು ಮಾಡಿದವರಲ್ಲ. ದೇಹದಿಂದ ಕೆಟ್ಟ ಕೆಲಸಗಳನ್ನು ಮಾಡಿದವರಲ್ಲ. ಎಲ್ಲಾ ಇಂದ್ರಿಯಗಳನ್ನೂ ಜಯಿಸಿದವರು. ನಿಮ್ಮ ಪ್ರಭಾವವನ್ನು ನನ್ನ ಮನಸ್ಸಿಗೆ ನಾಟುವಂತೆ ಉಪದೇಶಿಸಿದವರು. ಅವರು ಹೇಳಿದ ಮಾತುಗಳನ್ನು ದೀರ್ಘದೃಷ್ಟಿಯಿಂದ ವಿಮರ್ಶಿಸಿದೆನು. ವಿಮರ್ಶಿಸಿ ನೀವೇ ಸರ್ವೋತ್ತಮರು ಎಂದು ತೀರ್ಮಾನಿಸಿದೆನು. ಎಲ್ಲರಿಗೂ ಮರಣಕಾಲವಿದೆ. ಆ ಮರಣಕಾಲಕ್ಕೂ ನೀವೇ ಪ್ರೇರಕರು. ನಿಮಗೆ ಮರಣವಿಲ್ಲ. ಬ್ರಹ್ಮ ರುದ್ರ, ಇಂದ್ರ ಮುಂತಾದ ದೇವತೆಗಳಿಗೂ ಮರಣಕಾಲವಿರುವುದರಿಂದ ಅವರೆಲ್ಲರನ್ನೂ ಬಿಟ್ಟುಬಿಟ್ಟೆನು. ಅಲ್ಪರಾದ ಶಿಶುಪಾಲ ಮುಂತಾದವರನ್ನು ನಾನು ಧಿಕ್ಕರಿಸಿದುದರಲ್ಲಿ ಆಶ್ಚರ್ಯವಿಲ್ಲ.

ಓ ಪತಿದೇವ, ಶಿಶುಪಾಲ ಮುಂತಾದವರ ಹೆದರಿಕೆಯಿಂದ ಸಮುದ್ರದ ಮಧ್ಯದಲ್ಲಿ ವಾಸಿಸುತ್ತಿರುವುದಾಗಿ ಹೇಳಿದಿರಿ. ಇದರಷ್ಟು ಸುಳ್ಳು ಯಾವುದೂ ಇಲ್ಲ. ನನ್ನನ್ನು ನೀವು ಕರೆದುಕೊಂಡು ಹೋಗುತ್ತಿರುವಾಗ ಇವರೆಲ್ಲರೂ ಅಡ್ಡಗಟ್ಟಿದರು. ಆಗ ನೀವು ಶಾರ್ಙ್ಗ ಎಂಬ ಧನುಸ್ಸಿನ ಧ್ವನಿಯಿಂದ ಈ ಎಲ್ಲಾ ರಾಜರುಗಳನ್ನೂ ದಿಕ್ಕು ದಿಕ್ಕುಗಳಿಗೆ ಓಡಿಸಿದಿರಿ. ಸಿಂಹವು ತನ್ನ ಭಾಗಕ್ಕೆ ಸೇರಿರುವ ಪಶುವನ್ನು ಮೃಗಗಳ ಮಧ್ಯದಿಂದ ಎತ್ತಿಕೊಂಡು ಹೋದಂತೆ ನನ್ನನ್ನು ಎತ್ತಿಕೊಂಡು ಹೋದಿರಿ. ಇದು ಎಷ್ಟು ನಿಜವೋ ಅಷ್ಟೇ ನಿಜವಾದುದು ನಿಮ್ಮ ಈ ಮಾತುಗಳೂ.

"ನನ್ನನ್ನು ನಂಬಿರುವ ಸ್ತ್ರೀಯರೆಲ್ಲರೂ ಪ್ರಾಯಶಃ ಕಷ್ಟಪಡುವರು" ಎಂದು ಹೇಳಿದಿರಿ. ಅದಕ್ಕೆ ಉತ್ತರವನ್ನು ಕೊಡುವೆನು. ಅಂಗರಾಜ, ಯಯಾತಿ, ಗಯ, ಚಕ್ರವರ್ತಿ, ಪೃಥುಚಕ್ರವರ್ತಿ ಭರತ ಮುಂತಾದವರು ರಾಜರುಗಳ ಮಧ್ಯದಲ್ಲಿ ಶಿಖಾಮಣಿಗಳಂತೆ ಇದ್ದವರು. ಇಡೀ ಭೂಮಂಡಲಕ್ಕೆ ಏಕಛತ್ರಾಧಿಪತಿಗಳು. ಅವರೆಲ್ಲರೂ ನಿಮ್ಮ ಪಾದಗಳನ್ನು ಸೇವಿಸುವುದಕ್ಕಾಗಿಯೇ ಇಡೀ ಭೂಮಂಡಲದ ಆಧಿಪತ್ಯವನ್ನೂ ಬಿಟ್ಟುಬಿಟ್ಟರು, ಕಾಡಿಗೆ ಹೋದರು. ಅವರೆಲ್ಲರೂ ಕಷ್ಟವನ್ನು ಅನುಭವಿಸಿದರೇ? ಅವರು ನಿಮ್ಮ ಸೇವೆಯಿಂದ ಸಂತುಷ್ಟರಾದರು. ಅವರಂತೆ ನಾನೂ ಸಂತೋಷವಾಗಿ ಇದ್ದೇನೆ.

ಓ ಪತಿದೇವ, ನೀವು ನನ್ನ ಮಾತುಗಳನ್ನು ಕೇಳುತ್ತಿರುವಾಗ ನಿಮ್ಮ ಅರಳಿದ ಕಮಲದಂತಿರುವ ಕಣ್ಣುಗಳು ನಿಮಗೆ ಏರ್ಪಟ್ಟಿರುವ ಸಂತೋಷಾತಿರೇಕವನ್ನು ಸೂಚಿಸುತ್ತಿವೆ. ಆದ್ದರಿಂದ ನೀವು ನನ್ನನ್ನು ತಮಾಷೆ ಮಾಡುವುದಕ್ಕಾಗಿ ಹೇಳಿದ ಮಾತುಗಳೇ ಹೊರತು ಕೋಪದಿಂದ ಹೇಳಿದ ಮಾತುಗಳಲ್ಲ ಎಂದು ಸ್ಪಷ್ಟವಾಗಿ ತಿಳಿಯುತ್ತಿದೆ.

ಗಂಡಸರ ಮನಸ್ಸುಗಳು ಕಲ್ಲಿನಂತೆ ಗಟ್ಟಿಯಾದವುಗಳು. ಆದ್ದರಿಂದ ಹಿಂದೆ ಹೇಳಿದ ಅಂಗರಾಜ ಮುಂತಾದವರು ಸ್ಥಿರವಾಗಿ ನಿಮ್ಮನ್ನು ಆರಾಧಿಸಬಹುದು. ಆದರೆ ನಾನು ಹಾಗಲ್ಲ. ನಾನು ಹೆಂಗಸು. ನನ್ನ ಮನಸ್ಸು ಪ್ರತಿಕ್ಷಣದಲ್ಲಿಯೂ ಬದಲಾಗುತ್ತಿರುತ್ತದೆ. ಆದ್ದರಿಂದ ನಾನು ನನಗಿಂತ ಉತ್ತಮನೆಂದು ನಂಬಿ ಶಿಶುಪಾಲಾದಿಗಳನ್ನು ಈಗ ವರಿಸಬಹುದು. ಅವರನ್ನು ಹಿಂದೆ ಅಪೇಕ್ಷಿಸದಿರುವುದಕ್ಕಾಗಿ ಪಶ್ಚಾತ್ತಾಪದಿಂದ ಯುಕ್ತಳಾಗಬಹುದು ಎಂದು ನೀವು ಯೋಚಿಸಿದಂತೆ ನಟಿಸಬಹುದು. ಅದಕ್ಕೆ ಈಗ ಉತ್ತರವನ್ನು ಕೊಡುವೆನು.

ನಿಮ್ಮ ಪಾದಕಮಲಗಳ ಗಂಧವನ್ನು ಅನುಭವಿಸಿದ ಯಾವ ಸ್ತ್ರೀಯೂ ನಶ್ವರವಾದ ಆಯುಸ್ಸುಗಳಿಂದ ಯುಕ್ತರಾಗಿರುವ ಇತರ ಪುರುಷರನ್ನೂ ಅವರ ಸಂಪತ್ತುಗಳನ್ನೂ ಅಪೇಕ್ಷಿಸಲಾರಳು. ನಿಮ್ಮ ಪಾದಕಮಲಗಳ ಪ್ರಭಾವವನ್ನು ಈಗ ವಿವರಿಸುವೆನು. ಸಜ್ಜನರು ನಿಮ್ಮ ಪಾದಕಮಲಗಳನ್ನು ಯಾವಾಗಲೂ ಹೊಗಳುತ್ತಿರುವರು. ಸಕಲ ಸಂಪತ್ತುಗಳನ್ನೂ ಕೊಡುವ ಶಕ್ತಿಯು ನಿಮ್ಮ ಪಾದಕಮಲಗಳಿಗೆ ಇದೆ. ಪಾದಕಮಲಗಳು ಶೌರ್ಯ ಮುಂತಾದ

ಎಲ್ಲಾ ಗುಣಗಳಿಗೂ ಆಶ್ರಯವಾಗಿವೆ ಮತ್ತು ಸ್ತ್ರೀಯರಿಂದಲೂ ಪುರುಷರಿಂದಲೂ ಅಪೇಕ್ಷಿಸಲ್ಪಡುವ ಸಕಲ ಗುಣಗಳಿಗೂ ಆಶ್ರಯವಾಗಿವೆ. ಸಕಲ ಸಜ್ಜನರಿಗೂ ಮೋಕ್ಷವನ್ನು ಕೊಡುವ ಶಕ್ತಿಯುಳ್ಳ ಅಂತಹ ಪಾದಕಮಲಗಳನ್ನು ಶಿಶುಪಾಲ ಮುಂತಾದವರನ್ನು ಬಿಟ್ಟು ನಾನು ಆಶ್ರಯಿಸಿರುವೆನು.

ನನಗೆ ನೀವೇ ಅನುರೂಪರಾದ ಪತಿಗಳು. ನೀವೇ ಸಕಲಲೋಕಗಳಿಗೂ ಅಧಿಪತಿಗಳಾಗಿರುವಿರಿ. ಸಕಲ ಲೋಕಾಧಿಪತಿಗಳಾಗಿರುವ ಬ್ರಹ್ಮ ಮುಂತಾದವರಿಗೂ ಸಂಪತ್ತುಗಳನ್ನು ಕೊಡುತ್ತಿರುವಿರಿ. ಸರ್ವರಿಗೂ ಸ್ವಾಮಿಯಾಗಿರುವಿರಿ. ಒಬ್ಬೊಬ್ಬರ ಸ್ವಭಾವ ಮುಂತಾದವುಗಳನ್ನು ತಿಳಿದು ಅವರವರ ಯೋಗ್ಯತಾಂಶಗಳನ್ನು ತೀರ್ಮಾನಿಸುವ ಶಕ್ತಿಯುಳ್ಳವರಾಗಿರುವಿರಿ. ನನಗೆ "ಭ್ರಮತಿ" ಅಂದರೆ ಭ್ರಮವಿಲ್ಲದವಳು ಮತ್ತು ಭ್ರಮವುಳ್ಳವರನ್ನು ನಾಶಮಾಡುವವಳು ಎಂದು ಶ್ರುತಿಪ್ರಸಿದ್ಧವಾದ ಹೆಸರಿದೆ. ಈ ಪದದ ಅರ್ಥವು "ಅಭ್ರಮಾ ಭ್ರಮತಾಮಸ್ತ್ರೀ ಯಾ ವೇದೈರಧಿಗಮ್ಯತೇ" ಅಂದರೆ "ಭ್ರಮವಿಲ್ಲದವಳು ಮತ್ತು ಭ್ರಮವುಳ್ಳವರನ್ನು ಸಂಹರಿಸುವವಳು ಎಂದು ವೇದಗಳು ನನ್ನನ್ನು ಹೊಗಳುತ್ತಿವೆ" ಎಂದು ಸ್ಮೃತಿಯಲ್ಲಿ ವಿವರಿಸಿದೆ. ಆದ್ದರಿಂದ ಪತಿದೇವ, ನಿಮ್ಮ ವಿಷಯದಲ್ಲಾಗಲೀ ಶಿಶುಪಾಲಾದಿಗಳ ವಿಷಯದಲ್ಲಾಗಲೀ ನನಗೆ ಭ್ರಮವಿಲ್ಲ. ನಾನು, ನನ್ನನ್ನು ನೋಡಿ "ತಮಗೆ ಯೋಗ್ಯಳಾದ ಪತ್ನಿ" ಎಂಬ ಭ್ರಮವುಳ್ಳ ಶಿಶುಪಾಲ ಮುಂತಾದವರನ್ನು ಸಂಹರಿಸುವ ಶಕ್ತಿಯುಳ್ಳವಳು. ಇದನ್ನು ತಿಳಿಯದೆ ನನ್ನಲ್ಲಿ ಆಸೆಯನ್ನು ಇಟ್ಟುಕೊಂಡಿರುವ ಶಿಶುಪಾಲ ಮುಂತಾದವರನ್ನು ವರಿಸುವೆನೇ? ಹೆಚ್ಚೇಕೆ ? ನಾನೇ ಅವರನ್ನು ಭಸ್ಮಮಾಡಲು ಶಕ್ತಿಯುಳ್ಳವಳಾಗಿರುವೆನು. ನಿಮ್ಮ ಅನುಮತಿಯಿಲ್ಲದಿರುವುದರಿಂದ ಸಂಹರಿಸದೆ ಬಿಟ್ಟಿರುವೆನು.

ಶಿಶುಪಾಲ ಮುಂತಾದವರ ಯೋಗ್ಯತೆಯನ್ನು ತಿಳಿಸುವೆನು. ನಿಮ್ಮ ಕಥೆಯು ವಿರಕ್ತ ಶಿಖಾಮಣಿಯಾದ ರುದ್ರ ಮತ್ತು ಬ್ರಹ್ಮನ ಸಭೆಯಲ್ಲಿ ನಾರದ ಮುಂತಾದವರಿಂದ ಗಾಯನ ಮಾಡಲ್ಪಟ್ಟಿದೆ. ಆ ಕಥೆಯನ್ನು ಶಿಶುಪಾಲ ಮುಂತಾದವರು ಕೇಳಿದವರಲ್ಲ. ಇನ್ನು ಮುಂದೆ ಕೇಳುವ ಯೋಗ್ಯತೆಯು ಅವರಿಗಿಲ್ಲ. ಅವರನ್ನು ವರಿಸಿದ ಸ್ತ್ರೀಯರೂ ನಿಮ್ಮ ಕಥೆಯನ್ನು ಕೇಳಿದವರಲ್ಲ. ಕೇಳಿದ್ದರೆ ವರಿಸುತ್ತಲೂ ಇರುತ್ತಿದ್ದಿಲ್ಲ.

ಆ ರಾಜರುಗಳ ಮತ್ತು ಅವರು ವರಿಸಿರುವ ಸ್ತ್ರೀಯರ ದೇಹಗಳ ಚರಿತ್ರೆಯನ್ನು ಸಂಕ್ಷೇಪವಾಗಿ ವಿವರಿಸುವೆನು. ದೇಹಗಳು ಚರ್ಮ, ಮೀಸೆಗಳು, ರೋಮಗಳು, ಉಗುರುಗಳು, ತಲೆಯ ಕೂದಲುಗಳು, ಇವುಗಳಿಂದ ಹೊರಗೆ ಮುಚ್ಚಲ್ಪಟ್ಟಿವೆ. ದೇಹಗಳ ಒಳಗೆ ಮಾಂಸಗಳು, ಎಲಬುಗಳು, ರಕ್ತಗಳು, ಕ್ರಿಮಿಗಳು, ಮಲಗಳು ಇವುಗಳಿಂದ ತುಂಬಲ್ಪಟ್ಟಿವೆ. ಒಳಗಿರುವ ಮತ್ತು ಹೊರಗಿರುವ ಮೇಲ್ಕಂಡ ವಸ್ತುಗಳ ಮಧ್ಯದಲ್ಲಿ ನರಗಳಿಂದ ಬಿಗಿಯಲ್ಪಟ್ಟಿವೆ. ಬದುಕಿರುವ ಹೆಣದಂತಿವೆ. ಇಂತಹ ಅಸಹ್ಯವಾದ ರಾಜರುಗಳ ದೇಹಗಳನ್ನು ಅವರ ಪತ್ನಿಯರೂ ಅವರ ಪತ್ನಿಯರ ದೇಹಗಳನ್ನು ಆ ರಾಜರುಗಳೂ ಕಾಮಪೀಡಿತರಾಗಿ ವರಿಸಿದರು. ಈ ದೇಹಕ್ಕೆ ಸಮವಾದ ದೇಹವೇ ಇಲ್ಲವೆಂಬ ವಿಪರೀತಜ್ಞಾನವೇ ಇದಕ್ಕೆ ಕಾರಣ.

ಈಗ ನಮ್ಮಿಬ್ಬರ ದೇಹಗಳ ಕಥೆಯನ್ನು ವಿವರಿಸುವೆನು. "ಹಿರಣ್ಯಶ್ಮಶ್ರುಃ ಹಿರಣ್ಯಕೇಶಃ ಆ ಪ್ರಣಖಾತ್ಸರ್ವ ಏವ ಸುವರ್ಣಃ" ಅಂದರೆ ಮೀಸೆ, ತಲೆಗೂದಲುಗಳು ಮುಂತಾದ ಕಾಲಿನ ಉಗುರಿನಿಂದ ಆರಂಭಿಸಿ ತಲೆಯಲ್ಲಿರುವ ಕೂದಲಿನ ವರೆಗೆ ದೇಹದ ಒಳಗೂ ಹೊರಗೂ ಮಧ್ಯದಲ್ಲಿಯೂ ಇರುವ ಸರ್ವಾವಯವಗಳೂ ಜ್ಞಾನಾನಂದಾದಿ ಸಕಲ ಗುಣಾತ್ಮಕಗಳಾಗಿವೆ. ಜಡವಾದ ಪ್ರಕೃತಿಯಿಂದ ನಿರ್ಮಿತವಾದ ಯಾವ ವಸ್ತುಗಳೂ ನಿಮ್ಮ ದೇಹಗಳಲ್ಲಿ"

ಎಂದು ಎಲ್ಲಾ ಅವತಾರಗಳಲ್ಲಿರುವ ಎಲ್ಲಾ ನಿಮ್ಮ ದೇಹಗಳನ್ನೂ ಶ್ರುತಿಗಳು ಹೊಗಳುತ್ತಿವೆ. ಎಲ್ಲಾ ಶ್ರುತಿಗಳಿಗೂ ಅಭಿಮಾನಿನಿಯಾಗಿರುವ ನಾನು ನಿಮ್ಮ ದೇಹಗಳ ಮಹಿಮೆಗಳನ್ನು ತಿಳಿದು ನಿಮ್ಮನ್ನೇ ವರಿಸಿದೆನು.

ಜಡಪ್ರಕೃತಿಗೆ ನಿಯಾಮಕಳಾಗಿರುವ ನನ್ನ ದೇಹವೂ ಜ್ಞಾನಾನಂದಾದಿಗುಣಾತ್ಮಕವಾಗಿದೆ. ನನ್ನ ದೇಹದ ಒಳಗೂ ಹೊರಗೂ ಮಧ್ಯದಲ್ಲಿಯೂ ಪ್ರಾಕೃತವಾದ ಚರ್ಮ ಮುಂತಾದ ಯಾವ ಅಸಹ್ಯವಸ್ತುಗಳೂ ಇಲ್ಲವೆಂದು ಸರ್ವಜ್ಞರಾದ ನೀವು ತಿಳಿದಿರಿ. ನಾನು ಅತ್ಯುತ್ತಮಾಧಿಕಾರಿಣಿ ಯಾಗಿರುವೆನು. ನನಗೆ ನಿಮ್ಮಲ್ಲಿರುವ ಭಕ್ತಿಯು ಅತ್ಯಧಿಕವಾದುದು. ಆ ಭಕ್ತಿಯು ಯಾವಾಗಲೂ ಒಂದೇ ವಿಧವಾಗಿರುತ್ತದೆ. ಹೆಚ್ಚುವುದೂ ಇಲ್ಲ. ಕಡಿಮೆಯಾಗುವುದೂ ಇಲ್ಲ. ನೀವು ನಿಮ್ಮಿಂದಲೇ ಸುಖವನ್ನು ಅನುಭವಿಸುತ್ತಿರುವವರು. ನಿಮ್ಮ ಸುಖಕ್ಕಾಗಿ ಇತರರ ಅಪೇಕ್ಷೆ ಇಲ್ಲ. ಆದರೆ ನನಗೆ ನಿಮ್ಮಿಂದ ಮಹಾಲಾಭವಿದೆ. ನನ್ನ ಅತ್ಯುತ್ತಮವಾದ ಭಕ್ತಿಗೆ ಅನುಕೂಲವಾದ ಅನುಗ್ರಹವನ್ನು ಮಾಡುತ್ತಿರುವಿರಿ. ನಿಮ್ಮಲ್ಲಿ ನನಗಿರುವ ಭಕ್ತಿಯಿಂದ ನಿಮ್ಮ ಅನುಗ್ರಹವೂ ನಿಮ್ಮ ಅನುಗ್ರಹದಿಂದ ನಿಮ್ಮಲ್ಲಿ ಭಕ್ತಿಯೂ ಏರ್ಪಡುತ್ತದೆ.

ನನ್ನಲ್ಲಿ ನೀವು ತೋರಿಸಿರುವ ಪರಮಾನುಗ್ರಹವನ್ನು ವಿವರಿಸುವೆನು. ನೀವು ಸತ್ವಗುಣ, ರಜೋಗುಣ, ತಮೋಗುಣ ಎಂಬ ಮೂರು ಗುಣಗಳಿಲ್ಲದವರು. ಆ ಗುಣಗಳಿಂದ ನಿಮಗೆ ಆಗಬೇಕಾದ ಲಾಭವೇನೂ ಇಲ್ಲ. ಆ ಗುಣಗಳೆಲ್ಲವೂ ನನ್ನ ಅಧೀನವಾಗಿರುವವು. ಪ್ರಳಯಕಾಲವು ಬಂದಾಗ ಆ ಗುಣಗಳನ್ನು ಒಟ್ಟುಗೂಡಿಸುವಿರಿ. ಸೃಷ್ಟಿಕಾಲವು ಬಂದಾಗ ಆ ಗುಣಗಳ ಮಧ್ಯದಿಂದ ರಜೋಗುಣಗಳನ್ನು ಪ್ರತ್ಯೇಕವಾಗಿ ತೆಗೆದು ಅವುಗಳಿಂದ ಸೃಷ್ಟಿಯನ್ನು ಮಾಡುತ್ತೀರಿ. ಪಾಲನ ಕಾಲವು ಬಂದಾಗ ಆ ಗುಣಗಳಿಂದ ಸತ್ವಗುಣಗಳನ್ನು ಪ್ರತ್ಯೇಕವಾಗಿ ತೆಗೆದು ಅವುಗಳಿಂದ ಲೋಕಗಳನ್ನೂ ಎಲ್ಲಾ ಲೋಕಗಳಲ್ಲಿರುವವರನ್ನೂ ಪಾಲಿಸುತ್ತೀರಿ. ಸಂಹಾರಕಾಲವು ಬಂದಾಗ ತಮೋಗುಣಗಳನ್ನು ಅವುಗಳಿಂದ ಪ್ರತ್ಯೇಕವಾಗಿ ತೆಗೆದು ಆ ತಮೋಗುಣಗಳಿಂದ ಎಲ್ಲಾ ಲೋಕಗಳಲ್ಲಿರುವವರನ್ನೂ ಸಂಹರಿಸುತ್ತೀರಿ. ನನ್ನ ಅಧೀನಗಳಾದ ಸತ್ವಗುಣ, ರಜೋಗುಣ, ತಮೋಗುಣಗಳಿಂದ ಪಾಲನ, ಸೃಷ್ಟಿ ಸಂಹಾರಗಳನ್ನು ನೀವೇ ಮಾಡುತ್ತಾ ಆ ಗುಣಗಳಿಗೆ ಅಭಿಮಾನಿನಿಯಾಗಿರುವ ನನಗೆ ಸೃಷ್ಟಿ ಮುಂತಾದ ಕಾರ್ಯಗಳನ್ನು ಮಾಡಿದ ಕೀರ್ತಿಯನ್ನು ಕೊಡುತ್ತಿರುವಿರಿ. ಸ್ವಪ್ರಯೋಜನವು ಯಾವುದೂ ಇಲ್ಲದೆ ನನ್ನಲ್ಲಿ ಮಾಡಿರುವ ಪರಮಾನುಗ್ರಹವು ಇದು.

"ಕನ್ಯೆಯನ್ನು ಪಡೆದ ತಾಯಿಯು ಯೋಗ್ಯವಾದ ವರನಿಗೆ ಆ ಕನ್ಯೆಯನ್ನು ಕೊಟ್ಟು ವಿವಾಹವನ್ನು ಮಾಡಲೇಬೇಕು. ಈ ವಿಷಯದಲ್ಲಿ ತಾಯಿಗೆ ಇರುವ ಆಸಕ್ತಿಯು ಬೇರೆ ಯಾರಿಗೂ ಇರುವುದಿಲ್ಲ. ಅವಳಿಗಿರುವ ಆಸಕ್ತಿಯೂ ಒಮ್ಮೆಮ್ಮೆ ಅವಳ ಇಷ್ಟದಂತೆ ನಡೆಯುವುದಿಲ್ಲ. ಆದರೂ ಹೆಚ್ಚಾಗಿ ನಡೆಯುತ್ತದೆ. ನೀವು ಹೇಳಿರುವ ಮಾತುಗಳು ಎಂದೆಂದಿಗೂ ಸುಳ್ಳಾಗುವುದಿಲ್ಲ. ತನ್ನ ಕನ್ಯೆಯ ವಿವಾಹ ವಿಷಯದಲ್ಲಿ ತಾಯಿಗಿರುವ ಆಸಕ್ತಿಗಿಂತಲೂ ಅಧಿಕವಾದುದು. ಅದಕ್ಕಾಗಿ ನೀವು ಹೇಳಿದ ಎಲ್ಲಾ ಮಾತುಗಳೂ ಸತ್ಯವೆಂದು ಸಮರ್ಥಿಸಿದೆನು.

"ನೀವು ಯಾವಾಗಲೂ ನನ್ನನ್ನು ಬಿಟ್ಟು ಇತರ ಸ್ತ್ರೀಯಲ್ಲಿ ಆಸೆಯನ್ನು ಇಟ್ಟವರಲ್ಲ. ನಿಮಗೆ ನಾನೊಬ್ಬಳೇ ಪತ್ನಿಯು. ನಿಮ್ಮನ್ನು ಬಿಟ್ಟು ಇತರ ಪುರುಷರನ್ನು ನಾನು ಆಶ್ರಯಿಸಿದವಳಲ್ಲ. ಆದ್ದರಿಂದ ನಾನು ನಿಮ್ಮನ್ನು ಒಬ್ಬನನ್ನೇ ಪತಿಯಾಗಿ ವರಿಸಿದವಳು. ಆದ್ದರಿಂದಲೇ ನಾನು ಮಹಾಪತಿವ್ರತೆ ಯೆನಿಸುವೆನು. ನೀವು ನನ್ನನ್ನು ನೋಡಿ "ನಿನಗೆ

ಎಲ್ಲಾ ಗುಣಗಳಿಗೂ ಆಶ್ರಯವಾಗಿವೆ ಮತ್ತು ಸ್ತ್ರೀಯರಿಂದಲೂ ಪುರುಷರಿಂದಲೂ ಅಪೇಕ್ಷಿಸಲ್ಪಡುವ ಸಕಲ ಗುಣಗಳಿಗೂ ಆಶ್ರಯವಾಗಿವೆ. ಸಕಲ ಸಜ್ಜನರಿಗೂ ಮೋಕ್ಷವನ್ನು ಕೊಡುವ ಶಕ್ತಿಯುಳ್ಳ ಅಂತಹ ಪಾದಕಮಲಗಳನ್ನು ಶಿಶುಪಾಲ ಮುಂತಾದವರನ್ನು ಬಿಟ್ಟು ನಾನು ಆಶ್ರಯಿಸಿರುವೆನು.

ನನಗೆ ನೀವೇ ಅನುರೂಪರಾದ ಪತಿಗಳು. ನೀವೇ ಸಕಲಲೋಕಗಳಿಗೂ ಅಧಿಪತಿಗಳಾಗಿರುವಿರಿ. ಸಕಲ ಲೋಕಾಧಿಪತಿಗಳಾಗಿರುವ ಬ್ರಹ್ಮ ಮುಂತಾದವರಿಗೂ ಸಂಪತ್ತುಗಳನ್ನು ಕೊಡುತ್ತಿರುವಿರಿ. ಸರ್ವರಿಗೂ ಸ್ವಾಮಿಯಾಗಿರುವಿರಿ. ಒಬ್ಬೊಬ್ಬರ ಸ್ವಭಾವ ಮುಂತಾದವುಗಳನ್ನು ತಿಳಿದು ಅವರವರ ಯೋಗ್ಯತಾಂಶಗಳನ್ನು ತೀರ್ಮಾನಿಸುವ ಶಕ್ತಿಯುಳ್ಳವರಾಗಿರುವಿರಿ. ನನಗೆ "ಭ್ರಮತಿ" ಅಂದರೆ ಭ್ರಮವಿಲ್ಲದವಳು ಮತ್ತು ಭ್ರಮವುಳ್ಳವರನ್ನು ನಾಶಮಾಡುವವಳು ಎಂದು ಶ್ರುತಿಪ್ರಸಿದ್ಧವಾದ ಹೆಸರಿದೆ. ಈ ಪದದ ಅರ್ಥವು "ಅಭ್ರಮಾ ಭ್ರಮತಾಮಸ್ತ್ರೀ ಯಾ ವೇದೈರಧಿಗಮ್ಯತೇ" ಅಂದರೆ "ಭ್ರಮವಿಲ್ಲದವಳು ಮತ್ತು ಭ್ರಮವುಳ್ಳವರನ್ನು ಸಂಹರಿಸುವವಳು ಎಂದು ವೇದಗಳು ನನ್ನನ್ನು ಹೊಗಳುತ್ತಿವೆ" ಎಂದು ಸ್ಮೃತಿಯಲ್ಲಿ ವಿವರಿಸಿದೆ. ಆದ್ದರಿಂದ ಪತಿದೇವ, ನಿಮ್ಮ ವಿಷಯದಲ್ಲಾಗಲೀ ಶಿಶುಪಾಲಾದಿಗಳ ವಿಷಯದಲ್ಲಾಗಲೀ ನನಗೆ ಭ್ರಮವಿಲ್ಲ. ನಾನು, ನನ್ನನ್ನು ನೋಡಿ "ತಮಗೆ ಯೋಗ್ಯಳಾದ ಪತ್ನಿ" ಎಂಬ ಭ್ರಮವುಳ್ಳ ಶಿಶುಪಾಲ ಮುಂತಾದವರನ್ನು ಸಂಹರಿಸುವ ಶಕ್ತಿಯುಳ್ಳವಳು. ಇದನ್ನು ತಿಳಿಯದೆ ನನ್ನಲ್ಲಿ ಆಸೆಯನ್ನು ಇಟ್ಟುಕೊಂಡಿರುವ ಶಿಶುಪಾಲ ಮುಂತಾದವರನ್ನು ವರಿಸುವೆನೇ? ಹೆಚ್ಚೇಕೆ ? ನಾನೇ ಅವರನ್ನು ಭಸ್ಮಮಾಡಲು ಶಕ್ತಿಯುಳ್ಳವಳಾಗಿರುವೆನು. ನಿಮ್ಮ ಅನುಮತಿಯಿಲ್ಲದಿರುವುದರಿಂದ ಸಂಹರಿಸದೆ ಬಿಟ್ಟಿರುವೆನು.

ಶಿಶುಪಾಲ ಮುಂತಾದವರ ಯೋಗ್ಯತೆಯನ್ನು ತಿಳಿಸುವೆನು. ನಿಮ್ಮ ಕಥೆಯು ವಿರಕ್ತ ಶಿಖಾಮಣಿಯಾದ ರುದ್ರ ಮತ್ತು ಬ್ರಹ್ಮನ ಸಭೆಯಲ್ಲಿ ನಾರದ ಮುಂತಾದವರಿಂದ ಗಾಯನ ಮಾಡಲ್ಪಟ್ಟಿದೆ. ಆ ಕಥೆಯನ್ನು ಶಿಶುಪಾಲ ಮುಂತಾದವರು ಕೇಳಿದವರಲ್ಲ. ಇನ್ನು ಮುಂದೆ ಕೇಳುವ ಯೋಗ್ಯತೆಯು ಅವರಿಗಿಲ್ಲ. ಅವರನ್ನು ವರಿಸಿದ ಸ್ತ್ರೀಯರೂ ನಿಮ್ಮ ಕಥೆಯನ್ನು ಕೇಳಿದವರಲ್ಲ. ಕೇಳಿದ್ದರೆ ವರಿಸುತ್ತಲೂ ಇರುತ್ತಿದ್ದಿಲ್ಲ.

ಆ ರಾಜರುಗಳ ಮತ್ತು ಅವರು ವರಿಸಿರುವ ಸ್ತ್ರೀಯರ ದೇಹಗಳ ಚರಿತ್ರೆಯನ್ನು ಸಂಕ್ಷೇಪವಾಗಿ ವಿವರಿಸುವೆನು. ದೇಹಗಳು ಚರ್ಮ, ಮೀಸೆಗಳು, ರೋಮಗಳು, ಉಗುರುಗಳು, ತಲೆಯ ಕೂದಲುಗಳು, ಇವುಗಳಿಂದ ಹೊರಗೆ ಮುಚ್ಚಲ್ಪಟ್ಟಿವೆ. ದೇಹಗಳ ಒಳಗೆ ಮಾಂಸಗಳು, ಎಲಬುಗಳು, ರಕ್ತಗಳು, ಕ್ರಿಮಿಗಳು, ಮಲಗಳು ಇವುಗಳಿಂದ ತುಂಬಲ್ಪಟ್ಟಿವೆ. ಒಳಗಿರುವ ಮತ್ತು ಹೊರಗಿರುವ ಮೇಲ್ಕಂಡ ವಸ್ತುಗಳ ಮಧ್ಯದಲ್ಲಿ ನರಗಳಿಂದ ಬಿಗಿಯಲ್ಪಟ್ಟಿವೆ. ಬದುಕಿರುವ ಹೆಣದಂತಿವೆ. ಇಂತಹ ಅಸಹ್ಯವಾದ ರಾಜರುಗಳ ದೇಹಗಳನ್ನು ಅವರ ಪತ್ನಿಯರೂ ಅವರ ಪತ್ನಿಯರ ದೇಹಗಳನ್ನು ಆ ರಾಜರುಗಳೂ ಕಾಮಪೀಡಿತರಾಗಿ ವರಿಸಿದರು. ಈ ದೇಹಕ್ಕೆ ಸಮವಾದ ದೇಹವೇ ಇಲ್ಲವೆಂಬ ವಿಪರೀತಜ್ಞಾನವೇ ಇದಕ್ಕೆ ಕಾರಣ.

ಈಗ ನಮ್ಮಿಬ್ಬರ ದೇಹಗಳ ಕಥೆಯನ್ನು ವಿವರಿಸುವೆನು. "ಹಿರಣ್ಯಶ್ಮಶ್ರುಃ ಹಿರಣ್ಯಕೇಶಃ ಆ ಪ್ರಣಖಾತ್ಸರ್ವ ಏವ ಸುವರ್ಣಃ" ಅಂದರೆ ಮೀಸೆ, ತಲೆಗೂದಲುಗಳು ಮುಂತಾದ ಕಾಲಿನ ಉಗುರಿನಿಂದ ಆರಂಭಿಸಿ ತಲೆಯಲ್ಲಿರುವ ಕೂದಲಿನ ವರೆಗೆ ದೇಹದ ಒಳಗೂ ಹೊರಗೂ ಮಧ್ಯದಲ್ಲಿಯೂ ಇರುವ ಸರ್ವಾವಯವಗಳೂ ಜ್ಞಾನಾನಂದಾದಿ ಸಕಲ ಗುಣಾತ್ಮಕಗಳಾಗಿವೆ. ಜಡವಾದ ಪ್ರಕೃತಿಯಿಂದ ನಿರ್ಮಿತವಾದ ಯಾವ ವಸ್ತುಗಳೂ ನಿಮ್ಮ ದೇಹಗಳಲ್ಲಿ"

ಎಂದು ಎಲ್ಲಾ ಅವತಾರಗಳಲ್ಲಿರುವ ಎಲ್ಲಾ ನಿಮ್ಮ ದೇಹಗಳನ್ನೂ ಶ್ರುತಿಗಳು ಹೊಗಳುತ್ತಿವೆ. ಎಲ್ಲಾ ಶ್ರುತಿಗಳಿಗೂ ಅಭಿಮಾನಿನಿಯಾಗಿರುವ ನಾನು ನಿಮ್ಮ ದೇಹಗಳ ಮಹಿಮೆಗಳನ್ನು ತಿಳಿದು ನಿಮ್ಮನ್ನೇ ವರಿಸಿದೆನು.

ಜಡಪ್ರಕೃತಿಗೆ ನಿಯಾಮಕಳಾಗಿರುವ ನನ್ನ ದೇಹವೂ ಜ್ಞಾನಾನಂದಾದಿಗುಣಾತ್ಮಕವಾಗಿದೆ. ನನ್ನ ದೇಹದ ಒಳಗೂ ಹೊರಗೂ ಮಧ್ಯದಲ್ಲಿಯೂ ಪ್ರಾಕೃತವಾದ ಚರ್ಮ ಮುಂತಾದ ಯಾವ ಅಸಹ್ಯವಸ್ತುಗಳೂ ಇಲ್ಲವೆಂದು ಸರ್ವಜ್ಞರಾದ ನೀವು ತಿಳಿದಿರಿ. ನಾನು ಅತ್ಯುತ್ತಮಾಧಿಕಾರಿಣಿ ಯಾಗಿರುವೆನು. ನನಗೆ ನಿಮ್ಮಲ್ಲಿರುವ ಭಕ್ತಿಯು ಅತ್ಯಧಿಕವಾದುದು. ಆ ಭಕ್ತಿಯು ಯಾವಾಗಲೂ ಒಂದೇ ವಿಧವಾಗಿರುತ್ತದೆ. ಹೆಚ್ಚುವುದೂ ಇಲ್ಲ. ಕಡಿಮೆಯಾಗುವುದೂ ಇಲ್ಲ. ನೀವು ನಿಮ್ಮಿಂದಲೇ ಸುಖವನ್ನು ಅನುಭವಿಸುತ್ತಿರುವವರು. ನಿಮ್ಮ ಸುಖಕ್ಕಾಗಿ ಇತರರ ಅಪೇಕ್ಷೆ ಇಲ್ಲ. ಆದರೆ ನನಗೆ ನಿಮ್ಮಿಂದ ಮಹಾಲಾಭವಿದೆ. ನನ್ನ ಅತ್ಯುತ್ತಮವಾದ ಭಕ್ತಿಗೆ ಅನುಕೂಲವಾದ ಅನುಗ್ರಹವನ್ನು ಮಾಡುತ್ತಿರುವಿರಿ. ನಿಮ್ಮಲ್ಲಿ ನನಗಿರುವ ಭಕ್ತಿಯಿಂದ ನಿಮ್ಮ ಅನುಗ್ರಹವೂ ನಿಮ್ಮ ಅನುಗ್ರಹದಿಂದ ನಿಮ್ಮಲ್ಲಿ ಭಕ್ತಿಯೂ ಏರ್ಪಡುತ್ತದೆ.

ನನ್ನಲ್ಲಿ ನೀವು ತೋರಿಸಿರುವ ಪರಮಾನುಗ್ರಹವನ್ನು ವಿವರಿಸುವೆನು. ನೀವು ಸತ್ವಗುಣ, ರಜೋಗುಣ, ತಮೋಗುಣ ಎಂಬ ಮೂರು ಗುಣಗಳಿಲ್ಲದವರು. ಆ ಗುಣಗಳಿಂದ ನಿಮಗೆ ಆಗಬೇಕಾದ ಲಾಭವೇನೂ ಇಲ್ಲ. ಆ ಗುಣಗಳೆಲ್ಲವೂ ನನ್ನ ಅಧೀನವಾಗಿರುವವು. ಪ್ರಳಯಕಾಲವು ಬಂದಾಗ ಆ ಗುಣಗಳನ್ನು ಒಟ್ಟುಗೂಡಿಸುವಿರಿ. ಸೃಷ್ಟಿಕಾಲವು ಬಂದಾಗ ಆ ಗುಣಗಳ ಮಧ್ಯದಿಂದ ರಜೋಗುಣಗಳನ್ನು ಪ್ರತ್ಯೇಕವಾಗಿ ತೆಗೆದು ಅವುಗಳಿಂದ ಸೃಷ್ಟಿಯನ್ನು ಮಾಡುತ್ತೀರಿ. ಪಾಲನ ಕಾಲವು ಬಂದಾಗ ಆ ಗುಣಗಳಿಂದ ಸತ್ವಗುಣಗಳನ್ನು ಪ್ರತ್ಯೇಕವಾಗಿ ತೆಗೆದು ಅವುಗಳಿಂದ ಲೋಕಗಳನ್ನೂ ಎಲ್ಲಾ ಲೋಕಗಳಲ್ಲಿರುವವರನ್ನೂ ಪಾಲಿಸುತ್ತೀರಿ. ಸಂಹಾರಕಾಲವು ಬಂದಾಗ ತಮೋಗುಣಗಳನ್ನು ಅವುಗಳಿಂದ ಪ್ರತ್ಯೇಕವಾಗಿ ತೆಗೆದು ಆ ತಮೋಗುಣಗಳಿಂದ ಎಲ್ಲಾ ಲೋಕಗಳಲ್ಲಿರುವವರನ್ನೂ ಸಂಹರಿಸುತ್ತೀರಿ. ನನ್ನ ಅಧೀನಗಳಾದ ಸತ್ವಗುಣ, ರಜೋಗುಣ, ತಮೋಗುಣಗಳಿಂದ ಪಾಲನ, ಸೃಷ್ಟಿ ಸಂಹಾರಗಳನ್ನು ನೀವೇ ಮಾಡುತ್ತಾ ಆ ಗುಣಗಳಿಗೆ ಅಭಿಮಾನಿನಿಯಾಗಿರುವ ನನಗೆ ಸೃಷ್ಟಿ ಮುಂತಾದ ಕಾರ್ಯಗಳನ್ನು ಮಾಡಿದ ಕೀರ್ತಿಯನ್ನು ಕೊಡುತ್ತಿರುವಿರಿ. ಸ್ವಪ್ರಯೋಜನವು ಯಾವುದೂ ಇಲ್ಲದೆ ನನ್ನಲ್ಲಿ ಮಾಡಿರುವ ಪರಮಾನುಗ್ರಹವು ಇದು.

"ಕನ್ಯೆಯನ್ನು ಪಡೆದ ತಾಯಿಯು ಯೋಗ್ಯವಾದ ವರನಿಗೆ ಆ ಕನ್ಯೆಯನ್ನು ಕೊಟ್ಟು ವಿವಾಹವನ್ನು ಮಾಡಲೇಬೇಕು. ಈ ವಿಷಯದಲ್ಲಿ ತಾಯಿಗೆ ಇರುವ ಆಸಕ್ತಿಯು ಬೇರೆ ಯಾರಿಗೂ ಇರುವುದಿಲ್ಲ. ಅವಳಿಗಿರುವ ಆಸಕ್ತಿಯೂ ಒಮ್ಮೊಮ್ಮೆ ಅವಳ ಇಷ್ಟದಂತೆ ನಡೆಯುವುದಿಲ್ಲ. ಆದರೂ ಹೆಚ್ಚಾಗಿ ನಡೆಯುತ್ತದೆ. ನೀವು ಹೇಳಿರುವ ಮಾತುಗಳು ಎಂದೆಂದಿಗೂ ಸುಳ್ಳಾಗುವುದಿಲ್ಲ. ತನ್ನ ಕನ್ಯೆಯ ವಿವಾಹ ವಿಷಯದಲ್ಲಿ ತಾಯಿಗಿರುವ ಆಸಕ್ತಿಗಿಂತಲೂ ಅಧಿಕವಾದುದು. ಅದಕ್ಕಾಗಿ ನೀವು ಹೇಳಿದ ಎಲ್ಲಾ ಮಾತುಗಳೂ ಸತ್ಯವೆಂದು ಸಮರ್ಥಿಸಿದೆನು.

"ನೀವು ಯಾವಾಗಲೂ ನನ್ನನ್ನು ಬಿಟ್ಟು ಇತರ ಸ್ತ್ರೀಯಲ್ಲಿ ಆಸೆಯನ್ನು ಇಟ್ಟವರಲ್ಲ. ನಿಮಗೆ ನಾನೊಬ್ಬಳೇ ಪತ್ನಿಯು. ನಿಮ್ಮನ್ನು ಬಿಟ್ಟು ಇತರ ಪುರುಷರನ್ನು ನಾನು ಆಶ್ರಯಿಸಿದವಳಲ್ಲ. ಆದ್ದರಿಂದ ನಾನು ನಿಮ್ಮನ್ನು ಒಬ್ಬನನ್ನೇ ಪತಿಯಾಗಿ ವರಿಸಿದವಳು. ಆದ್ದರಿಂದಲೇ ನಾನು ಮಹಾಪತಿವ್ರತೆ ಯೆನಿಸುವೆನು. ನೀವು ನನ್ನನ್ನು ನೋಡಿ "ನಿನಗೆ

ಬೇಕಾದವನನ್ನು ವಿವಾಹ ಮಾಡಿಕೊಳ್ಳಬಹುದು'' ಎಂದು ಹೇಳಿದಿರಿ. ಅದಕ್ಕೆ ಉತ್ತರವನ್ನು ಕೊಡುವೆನು.

ಕೆಲ ಪುರುಷರು ಕಂಡಕಂಡ ಸ್ತ್ರೀಯರನ್ನು ಬಯಸುತ್ತಿರುವರು. ಅವರಂತೆ ಕೆಲವು ಸ್ತ್ರೀಯರು ಹೊಸಹೊಸ ಪುರುಷನನ್ನು ಬಯಸುತ್ತಿರುವರು. ಆ ಸ್ತ್ರೀಯರು ವ್ಯಭಿಚಾರಿಣಿಯರೆನಿಸುವರು. ವ್ಯಭಿಚಾರಿಣಿಯರಾದ ಸ್ತ್ರೀಯರನ್ನು ಪೋಷಿಸುತ್ತಿರುವವನು ಐಹಿಕಫಲವನ್ನೂ ಪಾರತ್ರಿಕಫಲವನ್ನೂ ಕಳೆದುಕೊಳ್ಳುವನು. ನನ್ನಂತೆ ಎಲ್ಲಾ ಜನ್ಮಗಳಲ್ಲಿಯೂ ನಿಮ್ಮನ್ನೇ ಪತಿಯಾಗಿ ವರಿಸಬೇಕು.'' ಇದು ರುಕ್ಮಿಣೀದೇವಿಯರ ಪ್ರತ್ಯುತ್ತರ.

ಈ ಮಾತನ್ನು ಶ್ರೀಕೃಷ್ಣದೇವನು ಕೇಳಿದನು. ರುಕ್ಮಿಣೀದೇವಿಯನ್ನು ನೋಡಿ ಪ್ರತ್ಯುತ್ತರವನ್ನು ಕೊಡಲು ಆರಂಭಿಸಿದನು. "ಎಲೈ ಮಹಾಪತಿವ್ರತೆಯೇ, ನಿನ್ನ ಬಾಯಿಯಿಂದ ಈ ಮಾತುಗಳನ್ನು ಕೇಳುವುದಕ್ಕಾಗಿ ತಮಾಷೆ ಮಾಡಿದೆನು. ಎಲೈ ಕಲ್ಯಾಣಿಯೇ, ನನ್ನ ಅತ್ಯಂತ ಭಕ್ತಳೇ, ನಾನು ಹೇಳಿದ ಎಲ್ಲಾ ಮಾತುಗಳೂ ಅನ್ವರ್ಥಕವೆಂದೂ ಸತ್ಯವೆಂದೂ ಸಮರ್ಥಿಸಿದಿ. ತುಂಬಾ ಸಂತುಷ್ಟನಾದೆನು.

ನೀನು ನನ್ನಲ್ಲಿ ಏಕಾಂತ ಭಕ್ತಿಯುಳ್ಳವಳು. ನನ್ನಲ್ಲಿ ಏಕಾಂತ ಭಕ್ತಿಯುಳ್ಳವಳಾದ ನಿನಗೆ ಎಲ್ಲಾ ಇಷ್ಟಾರ್ಥಗಳೂ ಯಾವಾಗಲೂ ಸಿಗುತ್ತವೆ. ನೀನು ಯಾವ ಯಾವ ಇಷ್ಟಗಳನ್ನು ಅಪೇಕ್ಷಿಸುವಿಯೋ ಅವುಗಳನ್ನೆಲ್ಲಾ ಕೊಡುವೆನು. ಅವುಗಳನ್ನು ಕೇಳು, ದೋಷರಹಿತಳಾದ ದೇವಿಯೇ, ಪತಿಭಕ್ತಿಯನ್ನು ತಿಳಿಸಿದಿ. ಪಾತಿವ್ರತ್ಯವನ್ನೂ ತಿಳಿಸಿದಿ. ನಾನೇ ನಿನ್ನ ಬುದ್ಧಿಯನ್ನು ಬದಲಾಯಿಸಬೇಕೆಂದು ಪ್ರಯತ್ನಿಸಿದೆನು. ಆದರೆ ನನ್ನ ಮೇಲಿರುವ ನಿನ್ನ ಮನಸ್ಸು ಬದಲಾವಣೆಯಾಗಲಿಲ್ಲ. ತಪಸ್ಸಿನಿಂದಲೂ ನಾನಾವಿಧವ್ರತಗಳಿಂದಲೂ ನನ್ನನ್ನು ಪತಿಯಾಗಬೇಕೆಂದು ಅಪೇಕ್ಷಿಸುವರು. ಮೋಕ್ಷವನ್ನು ಕೊಡುವ ನನ್ನನ್ನು ಐಹಿಕ ಪಾರತ್ರಿಕ ಫಲಕ್ಕಾಗಿ ಸೇವಿಸುವರು. ಅವರೆಲ್ಲರೂ ನನ್ನ ಮಾಯೆಯಿಂದ ಮೋಹಿತರೆಂದು ತಿಳಿಯಬೇಕು.

ಮೋಕ್ಷವನ್ನು ಕೊಡುವ ಏಕ ಪ್ರಭುವು ನಾನು. ನನ್ನನ್ನು ಆರಾಧಿಸಿ ಅತ್ಯಲ್ಪವಾದ ವಿಷಯಗಳನ್ನು ಅಪೇಕ್ಷಿಸುವವರು ಮಂದಭಾಗ್ಯರು. ಈ ರೂಪ ಮುಂತಾದ ವಿಷಯಗಳು ನರಕದಲ್ಲಿಯೂ ಸುಲಭವಾಗಿ ಸಿಗುತ್ತವೆ. ಅವುಗಳಿಗಾಗಿ ಮೋಕ್ಷಪ್ರದನಾದ ನನ್ನನ್ನು ಆರಾಧಿಸಬೇಕೇ? ನಿನ್ನನ್ನು ಬಿಟ್ಟು ಇತರರು ಈ ಭಕ್ತಿಯನ್ನು ಮಾಡಿದರೆ ಅವರು ಸಂಸಾರದಿಂದ ಮುಕ್ತರಾಗುವರು. ಮಂಗಲಕರವಾದ ವೈಕುಂಠ ಮುಂತಾದ ಮನೆಗಳಿಂದಲೂ ಐಶ್ವರ್ಯದಿಂದಲೂ ಯುಕ್ತನಾದ ನನ್ನಲ್ಲಿ ನೀನು ಭಕ್ತಿಯನ್ನು ಮಾಡಿರುವಿ. ಈ ಭಕ್ತಿಯನ್ನು ತನ್ನ ಪ್ರಾಣವನ್ನು ಪೋಷಿಸುವ ಆಸೆಯಿಂದ ಯುಕ್ತಳೂ ಪರಪುರುಷರನ್ನು ಸೇವಿಸುತ್ತಿರುವವಳೂ ದುಷ್ಟವಾದ ಇಚ್ಛೆಯಿಂದ ಯುಕ್ತಳೂ ಪತಿಯೊಡನೆ ದುಷ್ಟವಾದ ಮಾತುಗಳನ್ನು ಆಡುತ್ತಿರುವವಳೂ ಆಗಿರುವ ಸ್ತ್ರೀಯು ಪಡೆಯಲಾರಳು.

ನಾನು ಇಷ್ಟರ ವರೆಗೆ ನಿನ್ನಂತಹ ಪತ್ನಿಯನ್ನು ನೋಡಲಿಲ್ಲ. (೧) ನೀನು ವಿವಾಹಕಾಲದಲ್ಲಿ ವಿವಾಹಕ್ಕಾಗಿ ಬಂದಿರುವ ಎಲ್ಲಾ ರಾಜರುಗಳನ್ನೂ ಲಕ್ಷ್ಯ ಮಾಡದೆ ಅತ್ಯಂತ ರಹಸ್ಯವಾಗಿ ನಿನ್ನ ವಿಷಯಗಳನ್ನು ತಿಳಿದಿರುವ ನಂಬಿಕೆಗೆ ಪಾತ್ರನಾಗಿರುವ ಬ್ರಾಹ್ಮಣನನ್ನು ನನ್ನ ಸಮೀಪಕ್ಕೆ ಕಳುಹಿಸಿದಿ. (೨) ನಿನ್ನ ಅಣ್ಣನಾದ ರುಕ್ಮಿಯು ನನ್ನೊಡನೆ ಯುದ್ಧದಲ್ಲಿ ಸೋತನು. (೩) ಅವನ ತಲೆಯನ್ನು ಬೋಳಿಸಿ ಅವನಿಗೆ ವಿಕಾರವು ಏರ್ಪಡುವಂತೆ ಮಾಡಿದೆನು. (೪) ಅನಿರುದ್ಧನ ವಿವಾಹಕಾಲದಲ್ಲಿ ಚದುರಂಗ ಆಟವು ನಡೆಯಿತು. ಆ ಆಟದ ಕಾಲದಲ್ಲಿ ಬಲರಾಮನಿಂದ ಅವನನ್ನು ಕೊಲ್ಲಿಸಿದೆನು. ಈ ಸಮಯದಲ್ಲಿ ನಿನಗೆ ಏರ್ಪಟ್ಟಿರುವ ದುಃಖವು ಇಷ್ಟೆಂದು ಹೇಳಲು ನಾನು ಶಕ್ತನಲ್ಲ. ಆ ದುಃಖವನ್ನು ಸಹಿಸಿದಿ.

ನನ್ನ ವಿಯೋಗವು ಏರ್ಪಡಬಹುದೆಂಬ ಭಯದಿಂದ ಯಾವ ಮಾತುಗಳನ್ನೂ ಆಡಲಿಲ್ಲ. ಈ ರೀತಿಯಿಂದ ನಡೆದುಕೊಂಡ ನಿನ್ನಿಂದ ನಾನು ಪರಾಜಿತನಾಗಿ ಹೋದೆನು. (೫) ನೀನು ನನ್ನಲ್ಲಿಗೆ ಕಳುಹಿಸಿದ ಬ್ರಾಹ್ಮಣನು ಹಿಂದಿರುಗಿ ಬರುವುದು ಸ್ವಲ್ಪ ತಡವಾಯಿತು. ಅದು ಅವನ ತಪ್ಪಲ್ಲ. ನಾನೇ ಮೆಲ್ಲಗೆ ಹೊರಟೆನು. ಈ ಕಾರಣದಿಂದ ತಡವಾಯಿತು. ಆಗ ನಾನು ಬಾರದಿರುವ ಪ್ರಪಂಚವೇ ಶೂನ್ಯ ಎಂದು ತಿಳಿದು ನನ್ನ ಸಂಗವನ್ನು ಬಿಟ್ಟು ಇತರರ ಸಂಗಕ್ಕೆ ಅಯೋಗ್ಯವಾದ ನಿನ್ನ ದೇಹವನ್ನು ಬಿಡಬೇಕೆಂದು ತೀರ್ಮಾನಿಸಿದಿ. ಇದರಿಂದ ನಾನು ಸಂತೋಷಿಸಿದಷ್ಟು ಯಾವ ಕಾರ್ಯದಿಂದಲೂ ಸಂತೋಷಿಸಲಿಲ್ಲ. ನಿನ್ನ ಗುಣಗಳನ್ನು ಬ್ರಹ್ಮನೂ ಸಹ ತನ್ನ ಆಯುಷ್ಯವು ಮುಗಿಯುವ ವರೆಗೂ ಹೇಳಿದರೂ ಮುಗಿಯಲಾರದು. ಆದ್ದರಿಂದ ಇಷ್ಟರಲ್ಲೇ ಮುಗಿಸುವೆನು'' ಎಂದನು.

ಹೀಗೆ ಸಕಲ ಗುಣಗಳಿಂದ ಪೂರ್ಣನಾದ ಶ್ರೀಕೃಷ್ಣದೇವನು ಮನುಷ್ಯರ ಮಧ್ಯದಲ್ಲಿ ಮನುಷ್ಯರಿಗೆ ಧರ್ಮರಹಸ್ಯವನ್ನು ತಿಳಿಸುವುದಕ್ಕಾಗಿ ಸುರತಕಾಲದಲ್ಲಿ ಮಾಡಬೇಕಾದ ತನ್ನ ಗುಣಗಳ ವರ್ಣನವನ್ನು ತನ್ನ ಪತ್ನಿಯಿಂದ ಮಾಡಿಸುತ್ತಾ ಕಾಲವನ್ನು ಕಳೆದನು. ತನ್ನಿಂದ ತಾನೇ ಸುಖಿಸುತ್ತಿರುವ ಶ್ರೀಕೃಷ್ಣದೇವನು ತನ್ನ ಪತ್ನಿಯಿಂದ ಸುಖಿಸಿದನೇ? ಇದೇ ರೀತಿಯಿಂದ ಇತರ ಪತ್ನಿಯರ ಮನೆಗಳಲ್ಲಿಯೂ ಗೃಹಸ್ಥರು ಮಾಡಬೇಕಾದ ಧರ್ಮಗಳನ್ನು ಅನುಷ್ಠಿಸುತ್ತಾ ವಾಸಿಸಿದನು. ಅವನು ಎಲ್ಲಾ ಲೋಕಗಳಿಗೂ ಗುರುವಲ್ಲವೇ? ತಾನು ಧರ್ಮಗಳನ್ನು ತಿಳಿದಿದ್ದರೆ ತಿಳಿಸುವವರು ಯಾರು?

**(೯೭) ಅಥ ಬಹುಭಿಃ ಸ್ತ್ರೀಜನೈಃ । ಅರಮತಃ ಏಕೈಕಸ್ಯಾಂ ದಶ ದಶ ರುಚಿರಾನ್ ಪುತ್ರಾನ್ ಪ್ರಪೇದೇ ಅನೇಕಾನ್ ಪೌತ್ರಕಾನ್ ಅಪಿ ಪ್ರಪೇದೇ.**

ಹದಿನಾರು ಸಾವಿರದ ನೂರು ಏಳು ಪತ್ನಿಯರೊಡನೆ ಕ್ರೀಡಿಸಿದನು. ಒಬ್ಬೊಬ್ಬ ಪತ್ನಿಯರಲ್ಲಿಯೂ ಸುಂದರವಾದ ಹತ್ತು ಹತ್ತು ಮಕ್ಕಳನ್ನೂ ಅನೇಕ ಮೊಮ್ಮಕ್ಕಳನ್ನೂ ಪಡೆದನು.

**ವಿಶೇಷಾರ್ಥ - ಗೃಹಾಂತರೇಷ್ವಬಲಾಭೀ ರಮಮಾಣಃ ತಾಸು ಸ್ತ್ರೀಷು ಪ್ರತ್ಯೇಕಂ ದಶ ದಶ ಪುತ್ರಾನೇಕೈಕಾಂ ಕನ್ಯಾಮಪಿ ಜನಯಿತ್ವಾ, ತೇಷಾಂ ವಿವಾಹಂ ಕೃತ್ವಾ ತೇಷಾಮಪಿ ಪುತ್ರಾನ್ ಜನಯಿತ್ವಾ.**

**ವಿಶೇಷಾರ್ಥ ವಿವರಣ -** ಶ್ರೀಕೃಷ್ಣದೇವನ ಹದಿನಾರು ಸಾವಿರದ ನೂರ ಎಂಟು ಪತ್ನಿಯರೂ ತಮ್ಮ ಸುಂದರವಾದ ದೇಹಗಳನ್ನು ಶೃಂಗರಿಸಿಕೊಂಡರು. ಕಡೆಗಣ್ಣುಗಳಿಂದ ನೋಡಿದರು. ಪ್ರೇಮದಿಂದಲೂ ಹಾಸ್ಯದಿಂದಲೂ ಯುಕ್ತವಾದ ಮಾತುಗಳನ್ನು ಆಡಿದರು. ಶ್ರೀಕೃಷ್ಣದೇವನನ್ನು ವಶಪಡಿಸಿಕೊಳ್ಳಬೇಕೆಂದು ಒಬ್ಬೊಬ್ಬ ಸ್ತ್ರೀಯರೂ ಪ್ರಯತ್ನಗಳನ್ನು ಮಾಡಿದರು. ಆದರೆ ಅವರು ಸೋತರೇ ಹೊರತು ಶ್ರೀಕೃಷ್ಣದೇವನನ್ನು ಸೋಲಿಸಲು ಈ ಸ್ತ್ರೀಯರಿಂದ ಸಾಧ್ಯವಾಗಲಿಲ್ಲ.

ಒಬ್ಬೊಬ್ಬ ಸ್ತ್ರೀಯರ ಮನೆಗಳಲ್ಲಿಯೂ ಒಂದೊಂದು ರೂಪದಿಂದ ಶ್ರೀಕೃಷ್ಣದೇವನು ವಾಸಿಸುತ್ತಿರುವನು. ಆ ಮನೆಯಲ್ಲಿಯೇ ವಾಸಿಸುತ್ತಿದ್ದಂತೆಯೂ ಆ ಮನೆಯನ್ನು ಬಿಟ್ಟು ಹೊರಗೆ ಹೊರಡದಂತೆಯೂ ನಟಿಸುತ್ತಿದ್ದನು. ಇದರಿಂದ ಒಬ್ಬೊಬ್ಬ ಸ್ತ್ರೀಯೂ "ಈ ಕೃಷ್ಣದೇವನು ನಮ್ಮ ಮನೆಯಲ್ಲಿಯೇ ಇದ್ದಾನೆ. ಆದ್ದರಿಂದ ನನ್ನಲ್ಲಿಯೇ ವಿಶೇಷವಾದ ಪ್ರೀತಿಯಿಂದ ಯುಕ್ತನಾಗಿದ್ದಾನೆ'' ಎಂದು ತಿಳಿದುಕೊಂಡರು.

ಆ ಸಕಲ ಸ್ತ್ರೀಯರಿಗೂ ಒಬ್ಬೊಬ್ಬಳಲ್ಲಿ ಹತ್ತು ಹತ್ತು ಗಂಡು ಮಕ್ಕಳುಗಳೂ ಒಬ್ಬೊಬ್ಬ ಕನ್ಯೆಯೂ ಹುಟ್ಟಿದರು. ಅವರೆಲ್ಲರೂ ತಮ್ಮ ತಂದೆ ತಾಯಿಗಳಂತೆಯೇ ಸುಂದರರಾಗಿದ್ದರು. ಗಂಡು ಮಕ್ಕಳಿಗೆಲ್ಲಾ ವಿವಾಹವನ್ನು ಮಾಡಿಸಿದನು. ಅವರೆಲ್ಲರಿಗೂ ತಮ್ಮ ಪತ್ನಿಯರಲ್ಲಿ ಸಕಲ ಗುಣಗಳಿಂದ ಭರಿತರಾದ ಮಕ್ಕಳು ಹುಟ್ಟಿದರು. ಕನ್ಯೆಯರಿಗೆಲ್ಲಾ ಯೋಗ್ಯರಾದ ವರರಿಗೆ ಕೊಟ್ಟು ವಿವಾಹವನ್ನು ಮಾಡಿಸಿದನು. ಆ ಕನ್ಯೆಯರಿಗೆ ಅವರವರ ಪತಿಗಳಿಂದ ಯೋಗ್ಯರಾದ ಮಕ್ಕಳು ಹುಟ್ಟಿದರು. ಹೀಗೆ ಗಂಡು ಮಕ್ಕಳಿಗೂ ಹೆಣ್ಣು ಮಕ್ಕಳಿಗೂ ಏರ್ಪಟ್ಟ ಸಂತತಿಯ ಸಂಖ್ಯೆಯನ್ನು ವರ್ಣಿಸಲು ನಮ್ಮಿಂದ ಸಾಧ್ಯವಿಲ್ಲ.

ಹದಿನಾರು ಸಾವಿರದ ನೂರ ಎಂಟು ಪತ್ನಿಯರ ಮಧ್ಯದಲ್ಲಿ ಎಂಟು ಪತ್ನಿಯರು ಪ್ರಧಾನರೆಂದು ಹಿಂದೆ ಹೇಳಿರುವೆವು. ಆ ಎಂಟು ಪತ್ನಿಯರಲ್ಲಿ ಹುಟ್ಟಿರುವ ಮಕ್ಕಳುಗಳನ್ನು ಮಾತ್ರ ಈಗ ಹೇಳುವೆವು. ಸರ್ವರಲ್ಲಿಯೂ ಶ್ರೇಷ್ಠಳಾದ ರುಕ್ಮಿಣೀದೇವಿಯು "ಪ್ರದ್ಯುಮ್ನ, ಚಾರುದೇಷ್ಣ, ಸುದೇಷ್ಣ, ಚಾರುದೇಹ, ಸುಚಾರು, ಚಾರುಗುಪ್ತ, ಭದ್ರಚಾರು, ಚಾರುಚಂದ್ರ, ಅತಿಚಾರು, ಚಾರುಮಾನ್ ಎಂಬ ಹತ್ತು ಗಂಡುಮಕ್ಕಳುಗಳನ್ನು ಪ್ರಸವಿಸಿದಳು. ಭಾನು, ಸುಭಾನು, ಸ್ವರ್ಭಾನು, ಪ್ರಭಾನು, ಭಾನುಮಾನ್, ಚಂದ್ರಭಾನು, ಬೃಹದ್ಭಾನು, ಅತಿಭಾನು, ಸ್ವರ್ಭಾನು, ಪ್ರತಿಭಾನು ಎಂಬ ಹತ್ತು ಮಕ್ಕಳುಗಳನ್ನು ಸತ್ಯಭಾಮಾದೇವಿಯು ಪ್ರಸವಿಸಿದಳು, ಸಾಂಬ, ಸುಮಿತ್ರ, ಪುರುಜಿತ್, ಶತಜಿತ್, ಸಹಸ್ರಜಿತ್, ವಿಜಯ, ಚಿತ್ರಕೇತು, ವಸುಮಾನ್, ದ್ರವಿಣ, ಕ್ರತು, ಈ ಹತ್ತು ಜನರು ಜಾಂಬವತಿಯ ಮಕ್ಕಳು, ಭಾನು, ಚಂದ್ರ, ಅಶ್ವಸೇನ, ಚಿತ್ರಗು, ವೇಗವಾನ್, ಆಮ, ಶಂಕು, ವಸು, ಕೃತಿ, ಶ್ರೀಮಾನ್ ಈ ಹತ್ತು ಜನರು ನೀಲಾದೇವಿಯ ಮಕ್ಕಳು, ಶ್ರುತ, ಕವಿ, ವೃಷ, ಸುಬಾಹು, ಭದ್ರ, ಏಕಲ, ಶಾಂತಿ, ದರ್ಶ, ಪೂರ್ಣಮಾಸ್ಯ, ಸೋಮಕ, ಈ ಹತ್ತು ಮಕ್ಕಳು ಕಾಲಿಂದಿಯಲ್ಲಿ ಹುಟ್ಟಿದರು. ಪ್ರಘೋಷ, ಗಾತ್ರವಾನ್, ಸಿದ್ಧ, ಬಲ, ಪ್ರಬಲ, ಊರ್ಧ್ವಗ, ಮಹಾಶಕ್ತಿ, ಸಹ, ಓಜ, ಅಪರಾಜಿತ ಎಂಬ ಹತ್ತು ಮಕ್ಕಳು ಲಕ್ಷಣಾದೇವಿಯಲ್ಲಿ ಹುಟ್ಟಿದರು. ವೃಕ, ಅರ್ಹಕ, ಅನಿಲ, ನೀಲ, ಬಹ್ವನ್ನ, ಅನ್ನಾದ, ಮಹಾತಾಪ, ಅವನ, ವಹ್ನಿ, ಕೃತಿ ಇವರು ಮಿತ್ರವಿಂದೆಯಲ್ಲಿ ಹುಟ್ಟಿದರು. ಸಂಗ್ರಾಮಜಿತ್, ಬೃಹತ್ಸೇನ, ಶೂರ, ಪ್ರಹರಣ, ಅರಿಜಿತ್, ಜಯ, ಸುಭದ್ರ, ಭದ್ರಾಶ್ವ, ವಾಮ, ಆಯು, ಸಪ್ತಕ, ದೀಪ್ತಿಮಾನ್ ತಾಮ್ರಪತ ಮುಂತಾದವರು ಭದ್ರಾದೇವಿಯ ಪುತ್ರರು, ರುಕ್ಮಿಯ ಮಗಳಾಗಿರುವ ರುಕ್ಮವತೀ ಎಂಬವಳನ್ನು ಪ್ರದ್ಯುಮ್ನನು ವಿವಾಹ ಮಾಡಿಕೊಂಡನು. ಅವಳಲ್ಲಿ ಮಹಾಬಲಿಷ್ಠನಾದ ಅನಿರುದ್ಧನು ಭೋಜಕಟ ಎಂಬ ನಗರದಲ್ಲಿ ಹುಟ್ಟಿದನು.

ಇವರೆಲ್ಲರ ಮಕ್ಕಳುಗಳೂ ಮೊಮ್ಮಕ್ಕಳುಗಳೂ ಕೋಟಿಗಟ್ಟಲೇ ಹುಟ್ಟಿದರು. ಇಷ್ಟು ದೊಡ್ಡ ಸಂಸಾರಕ್ಕೆ ಮೂಲ ಕಾರಣರಾಗಿರುವವರು ಶ್ರೀಕೃಷ್ಣದೇವನ ಹದಿನಾರು ಸಾವಿರದ ನೂರ ಎಂಟು ಪತ್ನಿಯರು.

**(೯೮) ಪೌತ್ರಸ್ಯೋದ್ವಾಹಕಾಲೇ ಭೃಶಕುಪಿತಬಲಾದ್ರುಕ್ಮಿಣಂ ಘಾತಯಿತ್ವಾ.**

ಪ್ರದ್ಯುಮ್ನನ ಮಗನಾಗಿರುವ ಅನಿರುದ್ಧನ ವಿವಾಹಕಾಲದಲ್ಲಿ ತುಂಬಾ ಕುಪಿತನಾದ ಬಲರಾಮನಿಂದ ರುಕ್ಮಿಯನ್ನು ಕೊಲ್ಲಿಸಿದನು.

**ವಿಶೇಷಾರ್ಥ** - ಸ್ವಪೌತ್ರಸ್ಯ ಪ್ರದ್ಯುಮ್ನಸುತಸ್ಯಾನಿರುದ್ಧಸ್ಯ ರುಕ್ಮಿಪೌತ್ರೀವಿವಾಹಾರ್ಥಂ ಬಲರಾಮಾದಿಭಿಃ

ರುಕ್ಮಿಣ್ಯಾ ಸಹ ರುಕ್ಮಿಪುರಂ ಭೋಜಕಟಾಖ್ಯಂ ಪ್ರಾಪ್ಯ, ವಿವಾಹಂ ಕಾರಯಿತ್ವಾ, ತಸ್ಮಿನ್ ಸಮಯೇ ಕಲಿಂಗಾದಿ ಪ್ರೇರಣೇನ ಬಲರಾಮಪರಾಜಯಾರ್ಥಂ ಬಲರಾಮೇಣ ಸಹ ಅಕ್ಷೈರ್ದೀವ್ಯಂತಂ ಬಲರಾಮೇಣ ಪರಾಜಿತಂ ಬಲರಾಮಮುಪಹಸಂತಂ ರುಕ್ಮಿಣಂ ಕುಪಿತೇನ ಬಲರಾಮೇಣ ಘಾತಯಿತ್ವಾ, ಸಭಾರ್ಯಂ ಪೌತ್ರಂ ರಥಮಾರೋಪ್ಯ ಸ್ವಕೀಯೈಃ ಸಹ ದ್ವಾರಕಾಂ ಪ್ರಾಪ್ಯ.

**ವಿಶೇಷಾರ್ಥ ವಿವರಣ** - ಶ್ರೀಕೃಷ್ಣದೇವನ ಮಗನಾಗಿರುವ ಪ್ರದ್ಯುಮ್ನನಿಗೆ ರುಕ್ಮಿಯ ಮಗಳಾಗಿರುವ ರುಕ್ಮವತೀ ಎಂಬುವಳು ಪತ್ನಿಯಾದಳು. ರುಕ್ಮಿಯು ಶ್ರೀಕೃಷ್ಣದೇವನ ಮೇಲೆ ಪೂರ್ಣವಾದ ದ್ವೇಷವನ್ನಿಟ್ಟಿದ್ದನು. ಶ್ರೀಕೃಷ್ಣದೇವನು ತನ್ನನ್ನು ಅಪಮಾನ ಮಾಡಿದ ಮೇಲೆ ಆ ದ್ವೇಷವು ತುಂಬಾ ಅಧಿಕವಾಗಿ, ಶ್ರೀಶೈಲಕ್ಕೆ ಹೋಗಿ, ತಪಸ್ಸಿನಿಂದ ಅಲ್ಲಿರುವ ರುದ್ರನನ್ನು ಸಂತೋಷಪಡಿಸಿದನು. ರುದ್ರನು ಅವನಿಂದ ಪ್ರಾರ್ಥಿಸಲ್ಪಟ್ಟು ಒಂದು ಧನುಸ್ಸನ್ನು ಕೊಟ್ಟನು. ಆ ಧನುಸ್ಸು ಯಾರಲ್ಲಿ ಇರುತ್ತದೆಯೋ ಅವನನ್ನು ಯಾರಿಂದಲೂ ಜಯಿಸಲು ಸಾಧ್ಯವಾಗುವುದಿಲ್ಲ. ದೇವತೆಗಳಿಂದಲೂ ಆ ಧನುಸ್ಸನ್ನು ಛೇದಿಸಲು ಶಕ್ಯವಿಲ್ಲ. ಆ ಧನುಸ್ಸನ್ನು ಕೊಡುವಾಗ ರುದ್ರನು ಹೇಳಿದನು. "ಈ ಧನುಸ್ಸಿನಿಂದ ಸರ್ವರನ್ನೂ ನೀನು ಜಯಿಸುತ್ತೀ. "ನೀನು ಕೃಷ್ಣನಲ್ಲಿ ಯಾವಾಗ ವಿರೋಧವನ್ನು ಮಾಡುವಿಯೋ ಆಗ ಈ ಧನುಸ್ಸು ನಿನ್ನನ್ನು ಬಿಟ್ಟು ನನ್ನಲ್ಲಿಗೆ ಬಂದುಬಿಡುತ್ತದೆ" ಎಂದನು. ಈ ರುಕ್ಮಿಯು ಶ್ರೀಕೃಷ್ಣನಲ್ಲಿ ವಿರೋಧವನ್ನು ಮಾಡುವುದಕ್ಕಾಗಿಯೇ ಈ ಧನುಸ್ಸನ್ನು ಬೇಡಿದನು. ಆದರೆ ಅದು ಫಲಕಾರಿಯಾಗಲಿಲ್ಲ. ಆ ಧನುಸ್ಸಿನಿಂದ ಪ್ರಪಂಚದಲ್ಲಿರುವ ಸರ್ವರನ್ನೂ ಜಯಿಸಿದನು. ರುದ್ರನ ಮಾತುಗಳನ್ನು ಸ್ಮರಿಸಿ ಧನುಸ್ಸಿನ ಮೇಲಿನ ಆಸೆಯಿಂದ ಶ್ರೀಕೃಷ್ಣದೇವನ ವಿಷಯದಲ್ಲಿ ಪ್ರತ್ಯಕ್ಷವಾಗಿ ವಿರೋಧವನ್ನು ಮಾಡಲಿಲ್ಲ.

ಮನೆಯನ್ನು ಬಿಟ್ಟು ಬರುವಾಗ "ಕೃಷ್ಣನನ್ನು ಕೊಲ್ಲುವೆನು. ರುಕ್ಮಿಣಿಯನ್ನು ಹಿಂದಿರುಗಿಸಿ ಕರೆದುಕೊಂಡು ಬರುವೆನು. ಹಾಗೆ ಮಾಡಲು ಸಾಧ್ಯವಾಗದಿದ್ದರೆ ಪುನಃ ಕುಂಡಿನಪುರವನ್ನು ಪ್ರವೇಶಿಸಲಾರೆನು" ಎಂದು ಪ್ರತಿಜ್ಞೆಯನ್ನು ಮಾಡಿದ್ದನು. ಆ ಪ್ರತಿಜ್ಞೆಯನ್ನು ನೆರವೇರಿಸಲು ಅವನಿಂದ ಸಾಧ್ಯವಾಗಲಿಲ್ಲ. ರುದ್ರನ ಮಾತುಗಳನ್ನು ಕೇಳಿದ ಮೇಲೆ ಮುಂದೆ ರುಕ್ಮಿಣಿಯನ್ನು ಬಲಾತ್ಕಾರದಿಂದ ಕರೆದುಕೊಂಡು ಬರುವ ಆಸೆಯೂ ಹೋಯಿತು. ತನ್ನ ಪ್ರತಿಜ್ಞೆಯಂತೆ ಕುಂಡಿನಪುರವನ್ನು ಪ್ರವೇಶಿಸಲೇ ಇಲ್ಲ. ಭೋಜಕಟ ಎಂಬ ಹೊಸನಗರವನ್ನು ಸೃಷ್ಟಿಸಿದನು. ಅಲ್ಲಿಯೇ ವಾಸಿಸಿದನು. ಶ್ರೀಕೃಷ್ಣದೇವನಲ್ಲಿ ನಿಷ್ಕಲ್ಮಷವಾದ ಪ್ರೇಮವನ್ನೂ ಮಾಡಲಿಲ್ಲ.

ತನ್ನ ಮಗಳಿಗೆ ಸ್ವಯಂವರವನ್ನು ಮಾಡಿಸಿದನು. ಅಂಗಗಳಿಂದ ಯುಕ್ತನಾಗಿರುವ ಮನ್ಮಥನಂತೆ ಪರಮಸುಂದರನಾಗಿರುವ ಪ್ರದ್ಯುಮ್ನನನ್ನು ತನ್ನ ಮಗಳು ವರಿಸಿದಳು. ಆಗ ಎಲ್ಲಾ ರಾಜರುಗಳೂ ಯುದ್ಧಕ್ಕೆ ಬಂದರು. ಆಗ ಮಹಾವೀರನಾದ ಪ್ರದ್ಯುಮ್ನನು ಒಂದು ರಥದಲ್ಲಿ ಕುಳಿತವನಾಗಿ ಇತರರ ಸಹಾಯವಿಲ್ಲದೆ ಅವರನ್ನೆಲ್ಲರನ್ನೂ ಜಯಿಸಿದನು. ರುಕ್ಮಿಣಿಯ ಮೇಲೆ ತನಗಿರುವ ಪ್ರೇಮದಿಂದ ರುಕ್ಮವತಿಯನ್ನು ಪ್ರದ್ಯುಮ್ನನಿಗೆ ಕೊಟ್ಟು ವಿವಾಹ ಮಾಡಿದನು. ಆ ರುಕ್ಮವತೀದೇವಿಯಲ್ಲಿ ಪ್ರದ್ಯುಮ್ನನಿಗೆ ಅನಿರುದ್ಧ ಎಂಬ ಮಗನು ಹುಟ್ಟಿದನು.

ರುಕ್ಮಿಣೀದೇವಿಯ ಮಗಳಾಗಿರುವ ಚಾರುವತೀ ಎಂಬ ಕನ್ಯೆಯನ್ನು ಕೃತವರ್ಮನ ಮಗನಾಗಿಯೂ ಬಲಿಷ್ಠನೂ ಆಗಿದ್ದ ವಿಶಾಲಾಕ್ಷ ಎಂಬುವನು ವಿವಾಹ ಮಾಡಿಕೊಂಡನು.

ಶ್ರೀಕೃಷ್ಣದೇವನ ಮೊಮ್ಮಗನಾದ ಅನಿರುದ್ಧನು ಪರಮಸುಂದರನಾಗಿದ್ದನು. ಬಾಣಾಸುರನ ಮಗಳಾಗಿರುವ ಉಷಾದೇವಿಯು ಇವನ ಸೌಂದರ್ಯದಿಂದ ಮೋಹಿಸಿದಳು. ತನ್ನ ಸಖಿಯಾದ ಚಿತ್ರಲೇಖೆಯು ಇವನನ್ನು ಮಲಗಿದಾಗ ಎತ್ತಿಕೊಂಡು ಹೋಗಿ ಉಷಾದೇವಿಯೊಡನೆ ಸೇರಿಸಿದಳು. ಅಂತಃಪುರದಲ್ಲಿಯೇ ಇದ್ದು ಅವಳೊಡನೆ ಕ್ರೀಡಿಸಿದನು. ಅವಳು ಗರ್ಭಿಣಿಯಾದಳು. ಈ ವಿಷಯವನ್ನು ತಿಳಿದ ಬಾಣಾಸುರನು ಅನಿರುದ್ಧನನ್ನು ಜೈಲಿನಲ್ಲಿಟ್ಟನು. ಈ ವಿಷಯವನ್ನು ತಿಳಿದ ಶ್ರೀಕೃಷ್ಣದೇವನು ಬಾಣಾಸುರನ ಜೊತೆಯಲ್ಲಿ ಯುದ್ಧಕ್ಕಾಗಿ ಹೋದನು. ಬಾಣಾಸುರನಿಗಾಗಿ ರುದ್ರನು ಯುದ್ಧಕ್ಕೆ ಬಂದು ಪರಾಜಿತನಾದನು. ಶ್ರೀಕೃಷ್ಣದೇವನು ಬಾಣಾಸುರನ ಸಾವಿರ ಕೈಗಳನ್ನು ಕತ್ತರಿಸಿ ಎರಡು ಕೈಗಳು ಏರ್ಪಡುವಂತೆ ಮಾಡಿದನು.

ರುಕ್ಮಿಯು ತನ್ನ ಮಗಳಾದ ರುಕ್ಮವತಿಯ ಮಗನೂ ಶ್ರೀಕೃಷ್ಣದೇವನ ಮಗನ ಮಗನೂ ಆಗಿರುವ ಅನಿರುದ್ಧನಿಗೆ ತನ್ನ ಮಗನ ಮಗಳಾದ "ರೋಚನಾ" ಎಂಬುವಳನ್ನು ಕೊಟ್ಟು ವಿವಾಹ ಮಾಡಿಸಿದನು. ಶ್ರೀಕೃಷ್ಣದೇವನ ಮೇಲೆ ದ್ವೇಷವು ತನಗೆ ಅಧಿಕವಾಗಿದ್ದರೂ ಇಂತಹ ವಿವಾಹವು ಶ್ರೇಯಸ್ಕರವಲ್ಲವೆಂದು ತಿಳಿದಿದ್ದರೂ ತನ್ನ ತಂಗಿಯ ಸಂತೋಷಕ್ಕಾಗಿ ಈ ವಿವಾಹವನ್ನೂ ಮಾಡಿಸಿದನು.

ಆ ವಿವಾಹದಲ್ಲಿ ಸಾಂಬ, ಪ್ರದ್ಯುಮ್ನ ಮುಂತಾದ ಎಲ್ಲಾ ಯಾದವರೂ ಭೋಜಕಟ ಎಂಬ ನಗರಕ್ಕೆ ಹೋಗಿದ್ದರು. ಆ ವಿವಾಹವು ನಡಿಯುತ್ತಿರುವಾಗ ಕಲಿಂಗ ಮುಂತಾದ ದುರಹಂಕಾರಿಗಳಾದ ರಾಜರುಗಳು ರುಕ್ಮಿಯನ್ನು ನೋಡಿ ಹೀಗೆ ಹೇಳಿದರು.

"ಈ ಬಲರಾಮನಿಗೆ ಚದುರಂಗ ಆಟವೇ ತಿಳಿಯದು. ಆದರೆ ಅವನಿಗೆ ಚದುರಂಗ ಆಟದ ವಿಷಯದಲ್ಲಿ ತುಂಬಾ ಆಸೆಯು ಇದೆ. ಯಾರು ಕರೆದರೂ ಬರಲಾರೆನೆಂದು ಹೇಳಲಾರ. ಆದ್ದರಿಂದ ಅವನು ಬಂದೇ ಬರುವನು. ಅವನನ್ನು ಚದುರಂಗ ಆಟಕ್ಕೆ ಕರಿ. ಅವನನ್ನು ಬೇರೆ ವಿಧದಿಂದ ಜಯಿಸಲು ಯಾರಿಂದಲೂ ಸಾಧ್ಯವಿಲ್ಲ. ಈ ಚದುರಂಗ ಆಟದಲ್ಲಿ ಸೋಲಿಸು" ಎಂದರು.

ಈ ಮಾತುಗಳನ್ನು ಕೇಳಿದ ರುಕ್ಮಿಯು ಬಲರಾಮನನ್ನು ಚದುರಂಗ ಆಟಕ್ಕೆ ಕರೆದನು. ಬಲರಾಮನೂ ಬಂದನು. ಆಟ ಆರಂಭವಾಯಿತು. ನೂರು ವರಾಹ ಸಾವಿರ ವರಾಹ ಹತ್ತುಸಾವಿರ ವರಹ ಪಣವಾಗಿ ಕಟ್ಟಿ ಆಟವಾಡಿದನು. ರುಕ್ಮಿಯು ಆ ಆಟಗಳಲ್ಲೆಲ್ಲಾ ಗೆದ್ದನು. ಆ ಸಮಯದಲ್ಲಿ ಕಲಿಂಗನು ಬಲರಾಮನನ್ನು ನೋಡಿ ಹಲ್ಲುಗಳನ್ನು ತುಂಬಾ ತೋರಿಸುತ್ತಾ ನಕ್ಕನು. ಇದನ್ನು ನೋಡಿದ ಬಲರಾಮನಿಗೆ ಸಹನೆಯಾಗಲಿಲ್ಲ. ಆಗ ರುಕ್ಮಿಯು ಒಂದು ಲಕ್ಷ ರೂಪಾಯಿಗಳನ್ನೂ ಪಣವಾಗಿ ಕಟ್ಟಿದನು. ಆ ಆಟದಲ್ಲಿ ಬಲರಾಮನೇ ಗೆದ್ದನು. ಆದರೆ ರುಕ್ಮಿಯು ತಾನೇ ಗೆದ್ದಿರುವುದಾಗಿ ಸುಳ್ಳನ್ನು ಹೇಳಿದನು. ಕಲಿಂಗನು ಆಗ ರುಕ್ಮಿಯೇ ಜಯಿಸಿದ್ದು ನಿಜ ಎಂದು ಸುಳ್ಳು ಸಾಕ್ಷಿಯನ್ನು ಹೇಳಿದನು. ಆ ಮಾತುಗಳನ್ನು ಕೇಳಿದ ಬಲರಾಮನಿಗೆ ಕೋಪವು ಮಿತಿಮೀರಿತು. ಕೋಪಾತಿರೇಕದಿಂದ ಕಣ್ಣುಗಳು ಕೆಂಡದಂತೆ ಕೆಂಪಾದವು. ಬಲರಾಮನು ಹತ್ತು ಲಕ್ಷರೂಪಾಯಿಗಳನ್ನೂ ಪಣವಾಗಿ ಕಟ್ಟಿದನು. ಪುನಃ ಆಟವು ನಡೆಯಿತು. ಆ ಆಟದಲ್ಲಿಯೂ ಬಲರಾಮನೇ ಗೆದ್ದನು.

ಆಗಲೂ ರುಕ್ಮಿಯು ತಾನೇ ಜಯಿಸಿದೆನೆಂದು ಸುಳ್ಳು ಹೇಳಿದನು. ಕಲಿಂಗನೇ ಮೊದಲಾದವರನ್ನು ತೋರಿಸಿದನು. "ಇವರೆಲ್ಲರೂ ಈ ಆಟದಲ್ಲಿ ನಾನು ಗೆದ್ದಿರುವುದು ನಿಜವೋ ಅಲ್ಲವೋ ಎಂದು ಹೇಳಲಿ" ಎಂದನು.

ಕಲಿಂಗನು ಆಗ "ರುಕ್ಮಿಯು ಗೆದ್ದದ್ದು ಸತ್ಯ" ಎಂದು ಹಲ್ಲುಗಳನ್ನು ತೋರಿಸುತ್ತಾ ನಕ್ಕನು. ಬಲರಾಮನಿಗೆ ಕೋಪವು ಅಧಿಕವಾಗಿ ಬಂದಿದ್ದರೂ ಸಹನೆಯನ್ನು ತಂದುಕೊಂಡನು.

"ಬಲರಾಮನೇ ಗೆದ್ದಿರುವುದು ನಿಜ. ರುಕ್ಮಿಯು ಸುಳ್ಳು ಹೇಳುತ್ತಿರುವನು. ಮಧ್ಯಸ್ಥನಾದ ಕಲಿಂಗನು ಹೇಳಿದ್ದೂ ಸುಳ್ಳು" ಎಂದು ಅಶರೀರವಾಣಿಯಾಯಿತು. ಆ ಅಶರೀರವಾಣಿಯನ್ನು ಕೇಳಿದ ಮೇಲೆಯೂ ದುಷ್ಟರಾದ ರಾಜರುಗಳಿಂದ ಪ್ರೇರಿಸಲ್ಪಟ್ಟ ರುಕ್ಮಿಯು ಬಲರಾಮನನ್ನು ನೋಡಿ ಹಿಂದಿನಂತೆಯೇ ಹೇಳಿದನು.

"ನೀವೆಲ್ಲರೂ ಕಾಡಿನಲ್ಲಿ ವಾಸಿಸುತ್ತಿರುವ ಗೊಲ್ಲರು. ನಿಮಗೆ ಈ ಚದುರಂಗ ಆಟದ ಮರ್ಮವು ತಿಳಿಯದು. ಚದುರಂಗ ಆಟವನ್ನು ರಾಜರುಗಳು ಆಡುತ್ತಾರೆ. ಬಾಣಗಳಿಂದ ಯುದ್ಧವನ್ನು ಮಾಡುವುದಕ್ಕೂ ಅವರೇ ಸಮರ್ಥರು ನಿನ್ನಂತಹ ಗೊಲ್ಲರಲ್ಲ" ಎಂದನು.

ಗರ್ವದಿಂದ ಕೂಡಿದ ರುಕ್ಮಿಯಿಂದ ನಿಂದಿಸಲ್ಪಟ್ಟ ಬಲರಾಮನನ್ನು ನೋಡಿ ಎಲ್ಲಾ ರಾಜರೂ ನಕ್ಕರು. ಇದನ್ನು ನೋಡಿದ ಬಲರಾಮನಿಗೆ ಮಿತಿಮೀರಿದ ಕೋಪವು ಬಂತು. ಚದುರಂಗ ಆಟದ ಹಲಿಗೆಯನ್ನು ಮೇಲೆ ಎತ್ತಿದನು. ಅದರಿಂದಲೇ ರುಕ್ಮಿಯನ್ನು ಹೊಡೆದು ಕೊಂದನು. ಕಲಿಂಗರಾಜನ ಕಡೆಗೆ ತಿರುಗಿದನು. "ಅವನಲ್ಲವೇ ಹಲ್ಲುಗಳನ್ನೆಲ್ಲಾ ತೋರಿಸಿ ನಗುತ್ತಾ ತನ್ನನ್ನು ಅಪಹಾಸ ಮಾಡಿದವನು"? ಎಂದು ಅವನ ಹಲ್ಲುಗಳನ್ನೆಲ್ಲಾ ಮುರಿದನು. ಅಲ್ಲೇ ಬಿದ್ದಿರುವ ಪರಿಘಾಯುಧವನ್ನು ನೋಡಿದನು. ಅದರಿಂದ ಉಳಿದ ರಾಜರುಗಳನ್ನೆಲ್ಲಾ ಹೊಡೆದನು. ಕೆಲವರ ಕೈಗಳೂ ತೊಡೆಗಳೂ ತಲೆಗಳೂ ಉರುಳಿ ಬಿದ್ದವು. ಓಡಿಹೋದರು. ಆಗ ಇದೆಲ್ಲವನ್ನು ತಿಳಿದ ಶ್ರೀಕೃಷ್ಣನು ರುಕ್ಮಿಯನ್ನು ಕೊಂದದ್ದು "ತಪ್ಪೆಂದರೆ" ಬಲರಾಮನಿಗೆ ತನ್ನಲ್ಲಿರುವ ಪ್ರೇಮವು ಕಡಿಮೆಯಾಗಬಹುದು. "ಸರಿ" ಎಂದರೆ ರುಕ್ಮಿಣೀದೇವಿಯ ಮನಸ್ಸಿಗೆ ಅಸಮಾಧಾನವಾಗಬಹುದು ಎಂದು ತಿಳಿದವನಂತೆ ನಟಿಸುತ್ತಾ ತನ್ನ ಅಭಿಪ್ರಾಯವನ್ನೇ ಹೇಳಿಲಿಲ್ಲ. ನಂತರ ಎಲ್ಲಾ ಯಾದವರೂ ತನ್ನ ಪತ್ನಿಯಿಂದ ಸಹಿತನಾದ ಅನಿರುದ್ಧನನ್ನು ಕರೆದುಕೊಂಡು ದ್ವಾರಕೆಗೆ ಬಂದರು.

**(೯೯) ಯೋಷಿದ್ಗಣೇನ ಪ್ರತಿಗೃಹಂ ನಂದನ್ ಅಬಲಾಪ್ರೀತಿಕಾರೀ ಮೇ ಗತಿಃ ಸ್ಯಾತ್.**

ಒಂದೊಂದು ಮನೆಯಲ್ಲಿಯೂ ಸ್ತ್ರೀಯರೊಡನೆ ವಿಹರಿಸುತ್ತಾ ಅವರನ್ನೆಲ್ಲರನ್ನೂ ಸಂತೋಷಪಡಿಸಿದ ಶ್ರೀಕೃಷ್ಣದೇವನು ನಮಗೆ ಗತಿಯಾಗಲಿ.

**ವಿಶೇಷಾರ್ಥ - ಪ್ರತಿಗೃಹಂ ಸ್ವಸ್ತ್ರೀಭಿಃ ಸಹ ಕ್ರೀಡಾಂ ಕುರ್ವನ್ ಸರ್ವಾನತೋಷಯತ್.**

**ವಿಶೇಷಾರ್ಥ ವಿವರಣ** - ನರಕಾಸುರನ ಮನೆಯಲ್ಲಿದ್ದ ಹದಿನಾರು ಸಾವಿರದ ನೂರು ಕನ್ಯೆಯರನ್ನು ವಿವಾಹವನ್ನು ಮಾಡಿಕೊಂಡ ವಿಷಯವನ್ನೂ, ನರಕಾಸುರನನ್ನು ಸಂಹರಿಸಿದ ವಿಷಯವನ್ನೂ ಶ್ರೀಕೃಷ್ಣದೇವನು ನಾರದರು ಕೇಳಿದರು. ಶ್ರೀಕೃಷ್ಣದೇವನು ಅಷ್ಟು ಸ್ತ್ರೀಯರನ್ನು ಹೇಗೆ ತೃಪ್ತಿಪಡಿಸಿದನು ಎಂಬ ವಿಷಯವನ್ನು ಪ್ರತ್ಯಕ್ಷವಾಗಿ ನೋಡಬೇಕೆಂದು ತುಂಬಾ ಆಸೆಯಿಂದ ಯುಕ್ತರಾದರು.

नानारत्नप्रदीप्तासमविभवयुतद्व्यष्टसाहस्रकान्ता-
गेहेष्वश्नन् शयानः क्व च जपमृगयादीनि कुर्वन् क्वचिच्च ।
दीव्यन्नक्षैर्ब्रुवाणः प्रवचनमपरैर्मन्त्रयन्नेवमादि-
व्यापारान्नारदस्य प्रतिसदनमहो दर्शयन्नः स पायात् ॥२२॥

ನಾನಾರತ್ನಪ್ರದೀಪ್ತಾಸಮವಿಭವಯುತದ್ವ್ಯಷ್ಟಸಾಹಸ್ರಕಾಂತಾ-
ಗೇಹೇಷ್ವಶ್ನನ್ ಶಯಾನಃ ಕ್ವ ಚ ಜಪಮೃಗಯಾದೀನಿ ಕುರ್ವನ್ ಕ್ವಚಿಚ್ಚ।
ದೀವ್ಯನ್ನಕ್ಷೈರ್ಬ್ರುವಾಣಃ ಪ್ರವಚನಮಪರೈರ್ಮಂತ್ರಯನ್ನೇವಮಾದಿ -
ವ್ಯಾಪಾರಾನ್ನಾರದಸ್ಯ ಪ್ರತಿಸದನಮಹೋ ದರ್ಶಯನ್ನಃ ಸ ಪಾಯಾತ್ ॥ ೨೨ ॥

ಪದಚ್ಛೇದ :- ನಾನಾರತ್ನಪ್ರದೀಪ್ತಾಸಮವಿಭವಯುತದ್ವ್ಯಷ್ಟಸಾಹಸ್ರಕಾಂತಾಗೇಹೇಷು, ಅಶ್ನನ್, ಶಯಾನಃ, ಕ್ವ, ಚ, ಜಪಮೃಗಯಾದೀನಿ ಕುರ್ವನ್, ಕ್ವಚಿತ್, ದೀವ್ಯನ್, ಅಕ್ಷೈಃ, ಬ್ರುವಾಣಃ, ಪ್ರವಚನಂ, ಅಪರೈಃ ಮಂತ್ರಯನ್, ಏವಮಾದಿವ್ಯಾಪಾರಾನ್, ನಾರದಸ್ಯ, ಪ್ರತಿಸದನಂ ಅಹೋ, ದರ್ಶಯನ್, ನಃ, ಸಃ, ಪಾಯಾತ್.

ಅನ್ವಯ - ನಾನಾರತ್ನದೀಪ್ತಾಸಮವಿಭವಯುತದ್ವ್ಯಷ್ಟಸಾಹಸ್ರಕಾಂತಾಗೇಹೇಷು ಕ್ವ ಚ ಅಶ್ನನ್, (ಕ್ವ ಚ) ಶಯಾನಃ (ಕ್ವ ಚ) ಜಪಮೃಗಯಾದೀನಿ ಕುರ್ವನ್, ಕ್ವಚಿತ್ ಚ ಅಕ್ಷೈಃ ದೀವ್ಯನ್, (ಕ್ವ ಚ) ಪ್ರವಚನಂ ಬ್ರುವಾಣಃ, (ಕ್ವ ಚ) ಅಪರೈಃ ಮಂತ್ರಯನ್, ಏವಮಾದಿವ್ಯಾಪಾರಾನ್ ನಾರದಸ್ಯ ಪ್ರತಿಸದನಂ ದರ್ಶಯನ್ ಅಹೋ ಸಃ ನಃ ಪಾಯಾತ್.

ಅನ್ವಯಾರ್ಥ - ನಾನಾರತ್ನಪ್ರದೀಪ್ತಾಸಮವಿಭವಯುತದ್ವ್ಯಷ್ಟಸಾಹಸ್ರಕಾಂತಾಗೇಹೇಷು ನಾನಾವಿಧವಾದ ರತ್ನಗಳಿಂದ ಪ್ರಕಾಶಿಸುತ್ತಿರುವ, ಮತ್ತು ಅಸದ್ರಶವಾದ ವೈಭವಗಳಿಂದ ಯುಕ್ತವಾಗಿರುವ, ಹದಿನಾರು ಸಾವಿರ ಪತ್ನಿಯರ ಮನೆಗಳಲ್ಲಿ ಕ್ವ ಚ ಕೆಲವು ಮನೆಗಳಲ್ಲಿ ಅಶ್ನನ್ ಭೋಜನ ಮಾಡುತ್ತಿರುವವನಾಗಿಯೂ (ಕ್ವ ಚ) ಮತ್ತೆ ಕೆಲವು ಮನೆಗಳಲ್ಲಿ ಶಯಾನಃ ಮಲಗಿಕೊಂಡವನಾಗಿಯೂ (ಕ್ವ ಚ) ಮತ್ತೆ ಕೆಲವು ಮನೆಗಳಲ್ಲಿ ಜಪಮೃಗಯಾದೀನಿ ಜಪವನ್ನೂ ಬೇಟೆ ಮುಂತಾದವುಗಳನ್ನೂ ಕುರ್ವನ್ ಮಾಡುತ್ತಿರುವವನಾಗಿಯೂ ಕ್ವಚಿತ್ ಚ ಮತ್ತೆ ಕೆಲವು ಮನೆಗಳಲ್ಲಿ ಅಕ್ಷೈಃ ಚದುರಂಗದ ದಾಳಗಳಿಂದ ದೀವ್ಯನ್ ಆಡುತ್ತಿರುವವನಾಗಿಯೂ, (ಕ್ವ ಚ) ಮತ್ತೆ ಕೆಲವು ಮನೆಗಳಲ್ಲಿ ಪ್ರವಚನಂ ಉಪನ್ಯಾಸವನ್ನು ಬ್ರುವಾಣಃ ಹೇಳುತ್ತಿರುವವನಾಗಿಯೂ (ಕ್ವ ಚ) ಮತ್ತೆ ಕೆಲವು ಮನೆಗಳಲ್ಲಿ ಅಪರೈಃ ಉದ್ಧವ ಮುಂತಾದ ಮಂತ್ರಿಗಳೊಡನೆ ಮಂತ್ರಯನ್ ಆಲೋಚನೆಯನ್ನು ಮಾಡುತ್ತಿರುವವನಾಗಿಯೂ ಏವಮಾದಿವ್ಯಾಪಾರಾನ್ ಇದೇ ಮೊದಲಾದ ವ್ಯಾಪಾರಗಳನ್ನು ಪ್ರತಿಸದನಂ ಒಂದೊಂದು ಮನೆಗಳಲ್ಲಿಯೂ ನಾರದಸ್ಯ ನಾರದರಿಗೆ ದರ್ಶಯನ್ ತೋರಿಸುತ್ತಿರುವ ಸಃ ಆ ಶ್ರೀಕೃಷ್ಣದೇವನು ನಃ ನಮ್ಮನ್ನು ಪಾಯಾತ್. ಕಾಪಾಡಲಿ. ಅಹೋ ಆಶ್ಚರ್ಯವಾದುದು ಶ್ರೀಕೃಷ್ಣದೇವನ ವ್ಯಾಪಾರ.

ಶ್ಲೋಕಾರ್ಥ - ಹದಿನಾರು ಸಾವಿರದ ನೂರ ಎಂಟು ಪತ್ನಿಯರ ಮನೆಗಳಲ್ಲಿಯೂ ಕೆಲವು ಮನೆಗಳಲ್ಲಿ ಊಟಗಳನ್ನು ಮಾಡುತ್ತಲು, ಕೆಲವು ಮನೆಗಳಲ್ಲಿ ಮಲಗುತ್ತಲೂ, ಕೆಲವು ಮನೆಗಳಲ್ಲಿ ಜಪವನ್ನು ಮಾಡುತ್ತಲೂ,

ಕೆಲವು ಮನೆಗಳಲ್ಲಿ ಚದುರಂಗ ಆಟವನ್ನು ಆಡುತ್ತಲೂ ಕೆಲವು ಮನೆಗಳಲ್ಲಿ ಪ್ರವಚನವನ್ನು ಮಾಡುತ್ತಲೂ, ಕೆಲವು ಮನೆಗಳಲ್ಲಿ ಉದ್ಧವ ಮುಂತಾದವರೊಡನೆ ಮಂತ್ರಾಲೋಚನೆಯನ್ನು ಮಾಡುತ್ತಲೂ ಇಂತಹ ಬೇರೆ ಬೇರೆ ವಿಧವಾದ ಕೆಲಸಗಳನ್ನು ಮಾಡುತ್ತಿರುವ ಶ್ರೀಕೃಷ್ಣದೇವನನ್ನು ನಾರದರು ನೋಡಿದರು. ಹೀಗೆ ನಾರದರನ್ನು ಆಶ್ಚರ್ಯಚಕಿತರಾಗುವಂತೆ ಮಾಡಿದ ಶ್ರೀಕೃಷ್ಣದೇವನು ನಮ್ಮನ್ನು ರಕ್ಷಿಸಲಿ.

ವಿಗ್ರಹ - ನಾನಾವಿಧಾನಿ ಚ ತಾನಿ ರತ್ನಾನಿ ನಾನಾರತ್ನಾನಿ ; ನಾನಾರತ್ನೈಃ ಪ್ರದೀಪ್ತಾನಿ ನಾನಾರತ್ನ ಪ್ರದೀಪ್ತಾನಿ; ನ ಸಮಾಃ ಅಸಮಾಃ; ಅಸಮಾಶ್ಚ ತೇ ವಿಭವಾಶ್ಚ ಅಸಮವಿಭವಾಃ; ಅಸಮವಿಭವೈಃ ಯುತಾನಿ ಅಸಮವಿಭವಯುತಾನಿ ; ದ್ವಿರಾವೃತ್ತಾ ಅಷ್ಟ ದ್ವ್ಯಷ್ಟ; ದ್ವ್ಯಷ್ಟ ಚ ತಾನಿ ಸಹಸ್ರಾಣಿ ಚ ದ್ವ್ಯಷ್ಟಸಾಹಸ್ರಾಣಿ ; ಕಾಂತಾನಾಂ ಗೇಹಾನಿ ಕಾಂತಾಗೇಹಾನಿ ; ದ್ವ್ಯಷ್ಟಸಾಹಸ್ರಾಣಿ ಚ ತಾನಿ ಕಾಂತಾಗೇಹಾನಿ ಚ ದ್ವ್ಯಷ್ಟ ಸಾಹಸ್ರಕಾಂತಾಗೇಹಾನಿ ; ಅಸಮವಿಭವಯುತಾನಿ ಚ ತಾನಿ ದ್ವ್ಯಷ್ಟಸಾಹಸ್ರಕಾಂತಾಗೇಹಾನಿ ಚ ಸಮವಿಭವಯುತ ದ್ವ್ಯಷ್ಟಸಾಹಸ್ರಕಾಂತಾಗೇಹಾನಿ ; ನಾನಾರತ್ನಪ್ರದೀಪ್ತಾನಿ ಚ ತಾನಿ ಅಸಮವಿಭವಯುತದ್ವ್ಯಷ್ಟ ಸಾಹಸ್ರಕಾಂತಾಗೇಹಾನಿಚನಾನಾರತ್ನಪ್ರದೀಪ್ತಾ ಸಮವಿಭವಯುತದ್ವ್ಯಷ್ಟಸಾಹಸ್ರಕಾಂತಾಗೇಹಾನಿ; ತೇಷು ನಾನಾರತ್ನಪ್ರದೀಪ್ತಾಸಮವಿಭವಯುತದ್ವ್ಯಷ್ಟ ಸಾಹಸ್ರಕಾಂತಾಗೇಹೇಷು; ಅಶ್ನಾತಿ ಇತಿ ಅಶ್ನನ್; ಶೇತೇ ಇತಿ ಶಯಾನಃ; ಜಪಶ್ಚ ಮೃಗಯಾ ಚ ಜಪಮೃಗಯೇ ; ಜಪಮೃಗಯೇ ಆದಿ ಯೇಷಾಂ ತಾನಿ ಜಪಮೃಗಯಾದೀನಿ ; ತಾನಿ ಜಪಮೃಗಯಾದೀನಿ; ಕರೋತಿ ಇತಿ ಕುರ್ವನ್ ; ದೀವ್ಯತಿ ಇತಿ ದೀವ್ಯನ್ ; ಬ್ರೂತೇ ಇತಿ ಬ್ರುವಾಣಃ; ನ ಪರಾಃ ಅಪರಾಃ ; ತೈಃ ಅಪರೈಃ ; ಮಂತ್ರಯತಿ ಇತಿ ಮಂತ್ರಯನ್ ; ಏವಂ ಆದಿಃ ಯೇಷಾಂ ತೇ ಏವಮಾದಯಃ ; ಏವಮಾದಯಶ್ಚ ತೇ ವ್ಯಾಪಾರಾಶ್ಚ ಏವಮಾದಿವ್ಯಾಪಾರಾಃ ; ತಾನ್ ಏವಮಾದಿವ್ಯಾಪಾರಾನ್ ; ಸದನೇ ಸದನೇ ಪ್ರತಿಸದನಂ ; ದರ್ಶಯತಿ ಇತಿ ದರ್ಶಯನ್.

(೧೦೦) ವಿಶೇಷಾರ್ಥ - ಶ್ರೀಕೃಷ್ಣಃ ಕದಾಚಿತ್ ಸ್ವಸ್ಯ ಬಹುಭಾರ್ಯಾಸು ವೃತ್ತಿಂ ಜ್ಞಾತುಮಾಗತಾಯ ನಾರದಾಯ ನಾನಾರತ್ನನಿರ್ಮಿತಾತಿಮನೋಹರದ್ವ್ಯಷ್ಟಸಹಸ್ರಕಾಂತಾಗೃಹೇಷು ಭೋಜನಶಯನಾದ್ಯನೇಕ ವ್ಯಾಪಾರಾನ್ ತಾವತ್ಸ್ವರೂಪೈರೇಕ ಏವ ದರ್ಶಯಿತ್ವಾ ವಿಸ್ಮಿತೇನ ನಾರದೇನ ಪ್ರಣತಃ ತಮನುಜ್ಞಾಪ್ಯ ಸರ್ವಾನತೋಷಯತ್।

## ನಾರದರು ಶ್ರೀಕೃಷ್ಣದೇವನ ಮನೆಗಳನ್ನು ನೋಡಿದರು

ಶ್ರೀಕೃಷ್ಣದೇವನು ಒಬ್ಬನೇ ಒಂದೇ ಮೂಹೂರ್ತದಲ್ಲಿ ಹದಿನಾರು ಸಾವಿರದ ನೂರು ಸ್ತ್ರೀಯರನ್ನು ಬೇರೆ ಬೇರೆ ಮನೆಗಳಲ್ಲಿ ವಿವಾಹವನ್ನು ಮಾಡಿಕೊಂಡನು. ಇದಕ್ಕಿಂತ ಆಶ್ಚರ್ಯ ಏನಿದೆ? ನಾರದರು ಈ ಅತ್ಯಾಶ್ಚರ್ಯಕರವಾದ ವಿಷಯಗಳನ್ನು ನೋಡಬೇಕೆಂದು ದ್ವಾರಕೆಗೆ ಬಂದರು. ಎಲ್ಲೆಲ್ಲಿಯೂ ಉಪವನಗಳೂ ಉದ್ಯಾನವನಗಳೂ ಅರಳಿದ ಪುಷ್ಪಗಳಿಂದ ಶೋಭಿಸುತ್ತಿವೆ. ಪಕ್ಷಿಗಳೆಲ್ಲವೂ ಗುಂಪು ಗುಂಪಾಗಿ ಕುಳಿತು ಚಿಲಿಪಿಲಿ ಧ್ವನಿಯನ್ನು ಮಾಡುತ್ತಿವೆ. ಎಲ್ಲಾ ಸರೋವರಗಳಲ್ಲಿಯೂ ಅರಳಿದ ಕನ್ನೈದಿಲೆಗಳೂ ಕಮಲಗಳೂ ಕಲ್ಹಾರಗಳೂ ಕುಮುದಗಳು ತುಂಬಿವೆ. ಹಂಸ, ಸಾರಸ ಮುಂತಾದ ಪಕ್ಷಿಗಳು ಕೂಗುತ್ತಿವೆ. ಅಲ್ಲಿ ಸ್ಫಟಿಕಮಣಿಮಯವಾಗಿಯೂ

ಬೆಳ್ಳಿಯಿಂದ ನಿರ್ಮಿಸಲ್ಪಟ್ಟವುಗಳಾಗಿಯೂ ಮರಕತಮಣಿಗಳಿಂದ ನಿರ್ಮಿಸಲ್ಪಟ್ಟವುಗಳಾಗಿಯೂ ಇರುವ ಹೊಸ ಹೊಸ ಅನೇಕ ಗೃಹಗಳಿಂದ ಯುಕ್ತವಾಗಿರುವ ಸ್ಥಳಕ್ಕೆ ಬಂದರು. ಆ ಸ್ಥಳದಲ್ಲಿ ರಥಗಳ ಮಾರ್ಗಗಳು ಪ್ರತ್ಯೇಕವಾಗಿ ಶೋಭಿಸುತ್ತಿವೆ. ನಾಲ್ಕು ರಸ್ತೆಗಳು ಒಟ್ಟುಗೂಡುವ ಚೌಕಗಳಿವೆ. ಅಂಗಡಿಗಳಿವೆ. ಅವುಗಳನ್ನು ದಾಟಿದರೆ ಶಾಲೆಗಳೂ ಸಭೆಗಳೂ ಶೋಭಿಸುತ್ತಿವೆ. ದೇವಾಲಯಗಳೂ ಕಾಣಿಸುತ್ತಿವೆ. ಒಂದೊಂದು ಮನೆಗಳ ಮುಂದೆಯೂ ಗಂಧೋದಕ ಮುಂತಾದವುಗಳಿಂದ ಚೆಲ್ಲಲ್ಪಟ್ಟು ಅತಿಸುಂದರವಾಗಿವೆ. ಒಂದೊಂದು ಮನೆಗಳ ಮುಂದೆಯೂ ಧ್ವಜಸ್ತಂಭಗಳು ಎತ್ತರವಾಗಿವೆ. ಆ ಧ್ವಜಸ್ತಂಭಗಳಲ್ಲಿ ಅಸಂಖ್ಯವಾದ ಪತಾಕೆಗಳು ಕಟ್ಟಲ್ಪಟ್ಟಿವೆ. ಆ ಪತಾಕೆಗಳ ಚಲನದಿಂದ ಬಿಸಿಲೇ ತಿಳಿಯದಂತಿದೆ. ಆ ದ್ವಾರಕೆಯಲ್ಲಿ ಒಂದು ಅಂತಃಪುರವನ್ನು ನೋಡಿದರು. ಆ ಅಂತಃಪುರವು ಬ್ರಹ್ಮಾದಿ ಸಕಲ ಲೋಕಪಾಲಕರಿಂದಲೂ ಪೂಜಿಸಲ್ಪಟ್ಟಿತ್ತು. ಆ ಅಂತಃಪುರವು ಶ್ರೀಹರಿಯು ವಾಸಿಸುವ ಪ್ರದೇಶ ಎಂದು ಸರ್ವರಿಗೂ ತಿಳಿಯುವಂತಿತ್ತು. ವಿಶ್ವಕರ್ಮನು ತನ್ನ ಎಲ್ಲಾ ಸಾಮರ್ಥ್ಯವನ್ನು ಉಪಯೋಗಿಸಿ ಆ ಅಂತಃಪುರವನ್ನು ಕಟ್ಟಿದ್ದನು. ಆ ಅಂತಃಪುರದಲ್ಲಿ ಹದಿನಾರು ಸಾವಿರದ ನೂರು ಎಂಟು ಮನೆಗಳಿದ್ದವು.

ಆ ಮನೆಗಳಲ್ಲಿ ಒಂದು ಮನೆಯನ್ನು ನಾರದರು ಪ್ರವೇಶಿಸಿದರು. ಆ ಮನೆಯು ಅತ್ಯಂತ ವಿಶಾಲವಾಗಿತ್ತು. ಹವಳದ ಕಂಬಗಳಿಂದಲೂ ವೈಡೂರ್ಯದ ಹಲಿಗೆಗಳಿಂದಲೂ ಇಂದ್ರನೀಲಮಣಿಮಯವಾದ ಗೋಡೆಗಳಿಂದಲೂ ಮರಕತ ಮಣಿಗಳಿಂದ ನಿರ್ಮಿತವಾದ ಶ್ರೇಷ್ಠವಾದ ಕಿಟಿಕಿಗಳಿಂದಲೂ ಶೋಭಿಸುತ್ತಿತ್ತು. ಮನೆಯ ಮೇಲ್ಭಾಗದಲ್ಲಿ ಮೇಲ್ಕಟ್ಟುಗಳು ಜೋಲಾಡುತ್ತಿದ್ದವು. ಆ ಮೇಲ್ಕಟ್ಟುಗಳಲ್ಲಿ ಮುತ್ತಿನ ಮಾಲೆಗಳು ಜೋತಾಡುತ್ತಿದ್ದವು. ದಂತಗಳಿಂದ ನಿರ್ಮಿತವಾದ ಆಸನಗಳಿಂದಲೂ ಮಂಚಗಳಿಂದಲೂ ಶೋಭಿತವಾಗಿತ್ತು. ಆ ಆಸನಗಳೂ ಮಂಚಗಳೂ ಶ್ರೇಷ್ಠವಾದ ಮಣಿಗಳಿಂದ ಅಲಂಕೃತವಾಗಿದ್ದವು. ಅಲ್ಲಿ ಸಾವಿರಾರು ದಾಸಿಯರು ಸುವರ್ಣಪದಕಗಳ ಮಾಲೆಗಳನ್ನು ಧರಿಸಿದವರಾಗಿ ಓಡಾಡುತ್ತಿದ್ದರು. ದಾಸರುಗಳು ಕಂಚುಕಗಳಿಂದಲೂ ಮುಂಡಾಸುಗಳಿಂದಲೂ ಶ್ರೇಷ್ಠವಾದ ವಸ್ತ್ರಗಳಿಂದಲೂ ಮಣಿಮಯವಾದ ಕರ್ಣಕುಂಡಲಗಳಿಂದಲೂ ಶೋಭಿಸುತ್ತಿದ್ದರು. ಮನೆಯಲ್ಲಿ ಎಲ್ಲಾ ಕಡೆಯಲ್ಲಿಯೂ ದೀಪಗಳ ಸ್ಥಾನದಲ್ಲಿ ನಾನಾ ವಿಧವಾದ ರತ್ನಗಳು ಇಡಲ್ಪಟ್ಟಿದ್ದವು. ರತ್ನಮಯವಾದ ಆ ದೀಪಗಳ ಪ್ರಕಾಶಗಳಿಂದ ಕತ್ತಲೆಯು ಆ ಮನೆಯಲ್ಲಿ ಎಲ್ಲೆಲ್ಲಿಯೂ ಇರಲಿಲ್ಲ. ಆ ಮನೆಯಲ್ಲಿ ಅಗರು ಗಂಧದ ಹೊಗೆಯು ಕಿಟಿಕಿಗಳ ಮೂಲಕವಾಗಿ ಹೊರಗೆ ಬರುತ್ತಿದ್ದು, ಮನೆಯ ಮಾಡುಗಳಲ್ಲಿ ಸಂಚರಿಸುತ್ತಿದ್ದ ನವಿಲುಗಳು ಮೇಘಗಳಂತೆ ಕಾಣಿಸುತ್ತಿರುವ ಹೊಗೆಗಳನ್ನು ನೋಡಿದವು. ಮಳೆಗಾಲವು ಬಂತೆಂದು ಭ್ರಮಿಸಿ, ಕುಣಿಯಲು ಆರಂಭಿಸಿದವು.

ಆ ಮನೆಯಲ್ಲಿ ಒಬ್ಬಳು ಶ್ರೀಕೃಷ್ಣದೇವನ ಪತ್ನಿಯು ಬಂಗಾರದ ಕೋಲಿನಿಂದ ಯುಕ್ತವಾದ ಚಾಮರದಿಂದ ತನ್ನ ಪತಿಗೆ ಗಾಳಿಯನ್ನು ಬೀಸುತ್ತಿದ್ದಳು. ಅವಳ ಸುತ್ತಲೂ ಇರುವ ಸಾವಿರಗಟ್ಟಲೆಯಾಗಿರುವ ಎಲ್ಲಾ ದಾಸಿಯರೂ ಅವಳ ಗುಣಗಳಿಗೆ ಸಮಾನವಾದ ಗುಣಗಳಿಂದಲೂ ರೂಪದಿಂದಲೂ ವೇಷದಿಂದಲೂ ಯುಕ್ತರಾಗಿರುವರು.

ಶ್ರೀಕೃಷ್ಣದೇವನು ನಾರದರನ್ನು ನೋಡಿದನು. ಅವಸರ ಅವಸರವಾಗಿ ತನ್ನ ಆಸನದಿಂದ ಎದ್ದನು. ಎಲ್ಲಾ ಧರ್ಮಗಳನ್ನೂ ಅನುಷ್ಠಿಸುವ ವಿಷಯದಲ್ಲಿ ಅವನು ಅತ್ಯಂತ ಶ್ರೇಷ್ಠನಲ್ಲವೇ? ಅವನ ಪಾದಗಳನ್ನು ತೊಳೆದ ಜಲವು ಎಲ್ಲಾ ದೇವತೆಗಳನ್ನೂ ಪರಿಶುದ್ಧರಾಗುವಂತೆ ಮಾಡುತ್ತದೆ. ಎಲ್ಲಾ ತೀರ್ಥಗಳೂ ಅವನ ಕಾಲುಗಳಲ್ಲಿ ವಾಸಿಸುತ್ತಿಲ್ಲವೇ? ಬ್ರಾಹ್ಮಣರಲ್ಲಿ ವಿಶೇಷವಾದ ಪ್ರೀತಿಯನ್ನು ಇಟ್ಟುಕೊಂಡಿರುವವನಾದ ಅವನಿಗೆ "ಬ್ರಹ್ಮಣ್ಯದೇವ"

ಎಂಬ ಹೆಸರು ಅವನ ಗುಣಗಳಿಗೆ ಯೋಗ್ಯವಾದ ಹೆಸರಲ್ಲವೇ?

ಅಂಥಹಾ ಶ್ರೀಕೃಷ್ಣನು ಕೆಳಗೆ ಇಳಿದು ಓಡಿಬಂದು ನಾರದರ ಕಾಲುಗಳನ್ನು ತೊಳೆದನು. ಆ ಪಾದೋದಕವನ್ನು ತನ್ನ ತಲೆಯ ಮೇಲೆ ಧರಿಸಿದನು. ಹದಿನಾಲ್ಕು ಲೋಕಗಳಲ್ಲಿ ಶ್ರೀಕೃಷ್ಣದೇವನಿಗಿಂತ ದೊಡ್ಡವನು ಯಾರೂ ಇಲ್ಲ. ಸಕಲ ಸಜ್ಜನರಿಗೂ ಪತಿಯಾದ ನಾರಾಯಣನು ನರನಿಂದ ಸಹಿತನಾಗಿ ಆದಿ ಋಷಿಯೆನಿಸಿರುವನು. ನಾರದರಿಂದ ಬದರಿಯಲ್ಲಿ ಸೇವಿಸಲ್ಪಡುತ್ತಿರುವ ನಾರಾಯಣನು ಶ್ರೀಕೃಷ್ಣ ಎಂಬ ರೂಪದಿಂದ ಶಾಸ್ತ್ರೋಕ್ತವಾದ ವಿಧಿಯಿಂದ ಪೂಜಿಸಿದನು. ಅಮೃತದಂತೆ ಮಿತವಾಗಿಯೂ ಹಿತವಾಗಿಯೂ ಇರುವ ಮಾತುಗಳನ್ನು ಆಡಿದನು. "ಮಹಾತ್ಮರೇ, ಸ್ವತಃ ಪೂರ್ಣರಾಗಿರುವ ನಿಮಗೆ ನಾನು ಮಾಡಬೇಕಾದ ಯಾವ ಕಾರ್ಯವೂ ಇಲ್ಲ. ನಿಮಗೆ ನನ್ನಿಂದ ಆಗಬೇಕಾದ ವಿಷಯವೇನು?" ಎಂದನು. ನಾರದರು ಈ ಮಾತುಗಳನ್ನು ಕೇಳಿದರು.

"ಓ ಮಹಾಪ್ರಭೋ, ನಿನ್ನ ಇಚ್ಛೆಯಿಂದ ಬೇರೆ ಬೇರೆ ಅವತಾರಗಳನ್ನು ಸ್ವೀಕರಿಸುತ್ತಿರುವಿ. ದುಷ್ಟರನ್ನು ನಿಗ್ರಹಿಸುತ್ತಿರುವಿ. ಸಜ್ಜನರಲ್ಲಿ ಅಪಾರವಾದ ಪ್ರೀತಿಯನ್ನು ತೋರಿಸುತ್ತಿರುವಿ. ಸಕಲ ಲೋಕನಾಥನಾದ ನೀನು ನನ್ನನ್ನು ಪೂಜಿಸಿರುವುದು ಆಶ್ಚರ್ಯವಲ್ಲ. ನಿನ್ನ ಮಹಿಮೆಯನ್ನು ಹೊಗಳಲು ಬ್ರಹ್ಮಾದಿದೇವತೆಗಳು ಸಮರ್ಥರು. ನಮ್ಮೆಲ್ಲರಿಗೂ ಇನ್ನೂ ಸರಿಯಾಗಿ ತಿಳಿಯಲಿಲ್ಲ. ಸರಿಯಾಗಿ ತಿಳಿಸು. ಎಲ್ಲಾ ಸಜ್ಜನಸಮೂಹಕ್ಕೂ ಮೋಕ್ಷವನ್ನು ಕೊಡುವ ನಿನ್ನ ಎರಡು ಪಾದಗಳನ್ನು ನೋಡಿದೆನು. ಮಹಾಜ್ಞಾನಿಗಳಾದ ಬ್ರಹ್ಮಮುಂತಾದವರು ನಿನ್ನ ಪಾದಗಳನ್ನು ಹೃದಯದಲ್ಲಿ ಧ್ಯಾನಿಸುತ್ತಿರುವರು. ಸಂಸಾರ ಎಂಬ ಭಾವಿಯಲ್ಲಿ ಬಿದ್ದಿರುವ ಸರ್ವರಿಗೂ ಆ ಭಾವಿಯಿಂದ ಮೇಲೆ ಬರುವುದಕ್ಕೆ ಒಂದೇ ಒಂದು ಆಧಾರವಾಗಿರುವ ನಿನ್ನ ಎರಡು ಪಾದಗಳನ್ನು ನೋಡಿದೆನು. ನಿನ್ನ ಪಾದಗಳನ್ನು ಯಾವಾಗಲೂ ಮರೆಯದಂತೆ ನಾನು ತಿರುಗಾಡಬೇಕು. ಹಾಗೆ ಅನುಗ್ರಹಿಸು" ಎಂದು ಹೇಳಿ ಅಲ್ಲಿಂದ ಹೊರಟರು. ಶ್ರೀಕೃಷ್ಣದೇವನು ಯೋಗೀಶ್ವರರೆನಿಸುವ ಜ್ಞಾನಿಗಳೆಲ್ಲರಿಗೂ ಈಶ್ವರನು. ಅವನ ಯೋಗಮಾಯೆಯನ್ನು ತಿಳಿಯಬೇಕೆಂಬ ಆಸೆಯು ನಾರದರಿಗೆ ಅಧಿಕವಾಯಿತು.

ನಾರದರು ಅಲ್ಲಿಂದ ಹೊರಟರು. ಶ್ರೀಕೃಷ್ಣದೇವನ ಇನ್ನೊಬ್ಬ ಪತ್ನಿಯ ಮನೆಗೆ ಹೋದರು. ಯೋಗೇಶ್ವರನಾದ ಶ್ರೀಕೃಷ್ಣದೇವನ ಯೋಗಮಾಯೆಯ ಪ್ರಭಾವವನ್ನು ತಿಳಿಯಬೇಕೆಂದು ಒಂದೊಂದು ಮನೆಗೂ ಹೋಗಬೇಕೆಂಬ ಆಸೆಯಿಂದ ಹೋದರು. ಆ ಮನೆಯಲ್ಲಿ ಮನೆಯ ಯಜಮಾನಿನಿಯಾದ ಪತ್ನಿಯೊಡನೆಯೂ ಉದ್ಧವನೊಡನೆಯೂ ಶ್ರೀಕೃಷ್ಣದೇವನು ಚದುರಂಗ ಆಟವನ್ನು ಆಡುತ್ತಿದ್ದನು. ನಾರದರನ್ನು ನೋಡಿದ ಮರುಕ್ಷಣದಲ್ಲಿಯೇ ಆಟವನ್ನು ನಿಲ್ಲಿಸಿದನು. ಎದ್ದು ಓಡಿಬಂದನು. ಆಸನದಲ್ಲಿ ಕುಳ್ಳಿರಿಸಿದನು. ಎಲ್ಲಾ ಉಪಚಾರಗಳನ್ನೂ ಮಾಡಿದನು. ನಾರದನನ್ನು ಆಗಲೇ ನೋಡಿದಂತೆ ನಟಿಸಿದನು. "ನಾರದರೇ, ಯಾವಾಗ ಬಂದಿರಿ? ನೀವು ಯಾವಾಗಲೂ ಪೂರ್ಣರಾಗಿರುವಿರಿ. ನಾವೆಲ್ಲರೂ ಅಪೂರ್ಣರು. ನಿಮಗೆ ಯಾವ ವಿಧವಾದ ಉಪಕಾರವನ್ನು ಮಾಡಲು ನಮ್ಮಿಂದ ಸಾಧ್ಯ? ಆದರೂ ನನ್ನ ಜನ್ಮವೂ ಸಫಲವಾಗಬೇಡವೇ? ನನ್ನಿಂದ ಆಗಬೇಕಾದ ಉಪಕಾರವನ್ನು ಮಾಡಿಸಿ ನನ್ನ ಜನ್ಮವು ಸಫಲವಾಗುವಂತೆ ಮಾಡಿರಿ" ಎಂದನು. ಈ ಮಾತುಗಳನ್ನು ಕೇಳಿದ ನಾರದರು ಆಶ್ಚರ್ಯದಿಂದ ಯುಕ್ತರಾದರು. ಅವಸರವಾಗಿ ಇನ್ನೊಂದು ಮನೆಯೊಳಗೆ ಪ್ರವೇಶಿಸಿದರು.

ಆ ಮನೆಯಲ್ಲಿ ಚಿಕ್ಕ ಮಗುಗಳನ್ನೂ ಹುಡುಗರನ್ನೂ ಲಾಲನೆ ಮಾಡುತ್ತಿರುವ ಶ್ರೀಕೃಷ್ಣದೇವನನ್ನು, ಅಲ್ಲಿಂದ

ಇನ್ನೊಂದು ಮನೆಯೊಳಗೆ ಸ್ನಾನಕ್ಕಾಗಿ ಸಿದ್ಧನಾಗಿರುವ ಶ್ರೀಕೃಷ್ಣದೇವನನ್ನು, ಇನ್ನೊಂದು ಮನೆಯಲ್ಲಿ ಯಜ್ಞವನ್ನು ಮಾಡುತ್ತಿರುವ ಶ್ರೀಕೃಷ್ಣದೇವನನ್ನು, ಮತ್ತೊಂದು ಮನೆಯಲ್ಲಿ ಬ್ರಹ್ಮಯಜ್ಞ, ವೈಶ್ವದೇವ ಮತ್ತು ಬಲಿಹರಣಗಳನ್ನು ಮಾಡುತ್ತಿರುವುದನ್ನು ಮಗದೊಂದು ಮನೆಯಲ್ಲಿ ಬ್ರಾಹ್ಮಣಭೋಜನವನ್ನು ಮಾಡಿಸುತ್ತಿರುವುದನ್ನು ಇನ್ನೊಂದೆಡೆ ಮನೆಯಲ್ಲಿ ಬ್ರಾಹ್ಮಣರು ಭೋಜನ ಮಾಡಿ ಹೋದ ಮೇಲೆ ಬ್ರಾಹ್ಮಣಶೇಷವನ್ನು (ಬ್ರಹ್ಮಣರಿಗೆ ಬಡಿಸೆ ಉಳಿದ ಅಡುಗೆಯನ್ನು) ಭಕ್ತಿಯಿಂದ ಪತ್ನೀಸಮೇತನಾಗಿ ಭೋಜನ ಮಾಡುತ್ತಿರುವದನ್ನು ನೋಡಿದರು. ಇಷ್ಟೇ ಅಲ್ಲ

ಇನ್ನೊಂದು ಪತ್ನಿಯ ಮನೆಯಲ್ಲಿ ಸಂಧ್ಯಾವಂದನೆಯ ಮಾಡುತ್ತಾ, ಮತ್ತೊಬ್ಬ ಪತ್ನಿಯ ಮನೆಯಲ್ಲಿ ಮೌನವ್ರತವನ್ನು ಧರಿಸಿ ಮಂತ್ರಗಳನ್ನು ಜಪಿಸುತ್ತಿದ್ದನು. ಮಗದೊಬ್ಬ ಪತ್ನಿಯ ಮನೆಯಲ್ಲಿ ಶಿಷ್ಯರ ಮಧ್ಯದಲ್ಲಿ ಖಡ್ಗ ಮತ್ತು ಗುರಾಣಿಗಳನ್ನು ಧರಿಸಿ ಅವರೆಲ್ಲರನ್ನೂ ಯುದ್ಧಕ್ಕೆ ತಯಾರಿಸುತ್ತಾ, ದೂರದಬಂದು ಪತ್ನಿಯ ಮನೆಯಲ್ಲಿ ಹಾಸಿಗೆಯಲ್ಲಿ ಮಲಗಿ, ಇನ್ನೊಬ್ಬಳ ಮನೆಯಲ್ಲಿ ಸ್ತುತಿ ಪಾಠಕರು ಮಾಡುತ್ತಿರುವ ಸ್ತುತಿಗಳನ್ನು ಕೇಳುತ್ತಾ, ಇನ್ನೊಬ್ಬಳ ಮನೆಯಲ್ಲಿ ಉದ್ಧವ ಮುಂತಾದ ಮಂತ್ರಿಗಳೊಡನೆ ಮಂತ್ರಾಲೋಚನೆಯನ್ನು ಮಾಡುತ್ತಿದ್ದನು. ಇನ್ನೊಂದೆಡೆ ಅನೇಕ ವೇಶ್ಯಾಸ್ತ್ರೀಯರೊಡನೆ ಜಲಕ್ರೀಡೆಯನ್ನು ಮಾಡುತ್ತಾ, ಇನ್ನೊಬ್ಬಳ ಮನೆಯಲ್ಲಿ ಗೋವುಗಳಿಗೆ ಅಲಂಕಾರವನ್ನು ಮಾಡಿ ದಾನವನ್ನು ಕೊಡುತ್ತಾ, ಇನ್ನೊಬ್ಬಳ ಮನೆಯಲ್ಲಿ ಇತಿಹಾಸಗಳನ್ನೂ ಪುರಾಣಗಳನ್ನೂ ಮಂಗಲ ಕಥೆಗಳನ್ನೂ ಕೇಳುತ್ತಾ, ಇನ್ನೊಬ್ಬ ಪತ್ನಿಯ ಮನೆಯಲ್ಲಿ ಹಾಸ್ಯಭರಿತವಾದ ಮಾತುಗಳನ್ನು ಆಡುತ್ತಾ, ತಾನೂ ನಗುತ್ತಾ ಅವಳನ್ನೂ ನಗಿಸುತ್ತಿದ್ದನು. ಕೆಲವು ಪತ್ನಿಯರ ಮನೆಗಳಲ್ಲಿ ಧರ್ಮಕಾರ್ಯಗಳನ್ನು ಮಾಡುತ್ತಿದ್ದನು. ಕೆಲವು ಪತ್ನಿಯರ ಮನೆಗಳಲ್ಲಿ ಅರ್ಥ ಮತ್ತು ಕಾಮಗಳನ್ನು ಸೇವಿಸುತ್ತಾ, ಕೆಲವು ಪತ್ನಿಯರ ಮನೆಗಳಲ್ಲಿ ಶತ್ರುಗಳೊಡನೆ ಜಗಳವನ್ನು ಮಾಡುವುದಕ್ಕೆ ಬೇಕಾದ ಯೋಚನೆಗಳನ್ನು ಸಿದ್ಧಮಾಡುತ್ತಾ, ಇನ್ನೊಬ್ಬಳ ಮನೆಯಲ್ಲಿ ಶತ್ರುಗಳೊಡನೆ ಸಂಧಾನವನ್ನು ಮಾಡುವುದಕ್ಕೆ ಸಂಬಂಧಿಸಿದ ವಿಷಯಗಳನ್ನು ಯೋಚಿಸುತ್ತಾ, ಕೆಲವು ಪತ್ನಿಯರ ಮನೆಯಲ್ಲಿ ಅವರುಗಳ ಗಂಡು ಮಕ್ಕಳಿಗೆ ಉಪನಯನವನ್ನು ಮಾಡಿಸುತ್ತಾ, ಹೆಣ್ಣು ಮಕ್ಕಳುಗಳನ್ನು ಗಂಡನ ಮನೆಗೆ ಕರೆದುಕೊಂಡು ಹೋಗಿ ಬಿಡುವುದಕ್ಕಾಗಿ ಹೊರಡುತ್ತಾ, ಗಂಡನ ಮನೆಯಿಂದ ಹೆಣ್ಣುಮಕ್ಕಳುಗಳನ್ನು ಕರೆದುಕೊಂಡು ಬರುತ್ತಾ, ಕೆಲವು ಪತ್ನಿಯರ ಮನೆಗಳಲ್ಲಿ ವಿವಾಹವಾಗದ ಗಂಡು ಮಕ್ಕಳಿಗೆ ಯೋಗ್ಯ ಕನ್ಯೆಯೊಡನೆಯೂ, ಹೆಣ್ಣುಮಕ್ಕಳಿಗೆ ಯೋಗ್ಯ ವರನೊಡನೆಯೂ ವಿವಾಹವನ್ನು ಮಾಡಿಸುತ್ತಾ ವಿವಿಧರೂಪಗಳಲ್ಲಿ ಕಂಡನು.

ಗಂಡನ ಮನೆಗೆ ಹೆಣ್ಣು ಮಕ್ಕಳನ್ನು ಕಳುಹಿಸುತ್ತಲೂ ತನ್ನ ಮನೆಗೆ ಹೆಣ್ಣು ಮಕ್ಕಳುಗಳನ್ನು ಕರೆದುಕೊಂಡು ಬರುತ್ತಲೂ ಇದ್ದನು. ಎಲ್ಲಾ ದೇವತೆಗಳನ್ನೂ ಸಂತೋಷಪಡಿಸುವುದಕ್ಕಾಗಿ ಸಕಲ ವಿಧವಾದ ಯಜ್ಞಗಳನ್ನೂ ಸಕಲ ವೈಭವಗಳಿಂದ ಒಬ್ಬೊಬ್ಬ ಪತ್ನಿಯರ ಮನೆಯಲ್ಲಿ ಮಾಡುತ್ತಿದ್ದನು. ಬಾವಿ, ಕೆರೆ, ಉದ್ಯಾನವನಗಳು, ದೇವಾಲಯಗಳು, ಮುಂತಾದೆಡೆ ಪೂರ್ತ ಎಂಬ ಧರ್ಮಗಳನ್ನು ಮಾಡಿಸುತ್ತಿದ್ದನು. ಸಿಂಧುದೇಶದಲ್ಲಿ ಹುಟ್ಟಿರುವ ಕುದುರೆಯ ಮೇಲೆ ಸವಾರಿ ಮಾಡುತ್ತಾ ಬೇಟೆಯಾಡುತ್ತಾ ಪುಣ್ಯಕ್ಷೇತ್ರಗಳಲ್ಲಿ ಸಜ್ಜನರಿಗೆ ಬಾಧೆಯನ್ನು ಕೊಡುತ್ತಿರುವ ಮೃಗಗಳನ್ನು ಬೆದರಿಸಿ ಅವುಗಳ ತೊಂದರೆಗಳನ್ನು ಪರಿಹರಿಸುತ್ತಾ, ಸಕಲ ಯಾದವರ ಮಧ್ಯದಲ್ಲಿಯೂ ಇದೇ ರೀತಿಯಿಂದ ವಿವಿಧನಾಗಿ ಶೋಭಿಸುತ್ತಿರುವ ಶ್ರೀಕೃಷ್ಣದೇವನನ್ನು ನೋಡಿದರು. ಅಂತಃಪುರದಲ್ಲಿರುವ ಸರ್ವರೂ ಯಾವಾಗಲೂ ಶ್ರೀಕೃಷ್ಣದೇವನನ್ನು ನೋಡುತ್ತಿದ್ದರೂ ಅವನ ಸ್ವಭಾವವನ್ನು ಯಾರಿಂದಲೂ ಕಂಡು ಹಿಡಿಯಲು ಸಾಧ್ಯವಿಲ್ಲ.

ಶ್ರೀಕೃಷ್ಣದೇವನು ಅವರೆಲ್ಲರ ಸ್ವಭಾವಗಳನ್ನೂ ಕಂಡು ಹಿಡಿಯುವುದಕ್ಕಾಗಿ ಸಂಚರಿಸುವಂತೆ ತೋರುತ್ತಿದ್ದನು.

ಮನುಷ್ಯರ ಮಧ್ಯದಲ್ಲಿ ಅವತರಿಸಿದ ಶ್ರೀಕೃಷ್ಣದೇವನು ಮನುಷ್ಯರಂತೆ ವಿಹರಿಸುತ್ತಿರುವುದನ್ನೂ ಸಂತೋಷಪಡುವಂತೆ ನಟಿಸುತ್ತಿರುವುದನ್ನೂ ನೋಡಿದ ನಾರದರು "ಮಹಾಪ್ರಭೋ, ನಿನ್ನ ಯೋಗಮಾಯೆಯನ್ನು ನೋಡಿದೆನು. ಈ ಯೋಗಮಾಯೆಯು ಯೋಗಿಗಳಿಂದಲೂ ತಿಳಿಯಲು ಸಾಧ್ಯವಿಲ್ಲ. ಯೋಗೀಶ್ವರರಿಗೆ ಪ್ರಭುವಾದ ಶ್ರೀಹರಿಯೇ, ನನ್ನ ಹೃದಯಕಮಲದಲ್ಲಿ ಯಾವಾಗಲೂ ಪ್ರಕಾಶಿಸುತ್ತಿರುವ ನಿನ್ನ ಪಾದಗಳನ್ನು ಸೇವಿಸುತ್ತಿರುವ ನಾನು ಹೋಗಿ ಬರುವೆನು. ಅನುಮತಿಯನ್ನು ಕೊಡು. ನಿನ್ನ ಯಶಸ್ಸಿನಿಂದ ತೊಳೆಯಲ್ಪಟ್ಟಿರುವ ನಿನ್ನ ಲೋಕಗಳಲ್ಲಿ ಸಂಚರಿಸುತ್ತಿರುವೆನು. ಲೋಕಗಳನ್ನು ಪಾವನವಾಗುವಂತೆ ಮಾಡುತ್ತಿರುವ ನಿನ್ನ ಲೀಲೆಗಳನ್ನು ಹಾಡುತ್ತಾ ಸಂಚರಿಸುತ್ತಿರುವೆನು."

ನಾರದರ ಈ ಮಾತುಗಳನ್ನು ಕೇಳಿದ ಶ್ರೀಕೃಷ್ಣದೇವನು "ನಾರದರೆ! ಧರ್ಮರಹಸ್ಯವನ್ನು ಹೇಳಿದವನೂ, ಮಾಡಿ ತೋರಿಸಿದವನೂ, ಅನುಷ್ಠಿಸುವವರನ್ನು ನೋಡಿ ಸಂತೋಷಪಡುವವನೂ, ಅವರನ್ನು ಪ್ರೋತ್ಸಾಹಿಸುವವನೂ ಆದ ನಾನು ಅದಕ್ಕಾಗಿ ಹದಿನಾರು ಸಾವಿರ ಪತ್ನಿಯರನ್ನು ವಿವಾಹ ಮಾಡಿಕೊಂಡು ಎಲ್ಲರಿಗೂ ಧರ್ಮರಹಸ್ಯವನ್ನು ಒಂದೊಂದು ಮನೆಯಲ್ಲಿದ್ದು ಬೇರೆ ಬೇರೆ ರೂಪಗಳಿಂದ ತಿಳಿಸುತ್ತಿರುವೆನು" ಎಂದನು.

ತನ್ನಿಂದ ಹಿಂದೆ ಸೃಷ್ಟಿಸಲ್ಪಟ್ಟ ಗೃಹಸ್ಥರ ಧರ್ಮಗಳನ್ನು ಅನುಷ್ಠಾನ ಮಾಡುತ್ತಾ ಒಬ್ಬನೇ ಎಲ್ಲಾ ಮನೆಗಳಲ್ಲಿಯೂ ವಾಸಿಸುತ್ತಿರುವ ಶ್ರೀಕೃಷ್ಣದೇವನನ್ನು ನಾರದರು. ಎಲ್ಲಾ ಮನೆಗಳಲ್ಲಿಯೂ ನೋಡಿದರು. ಶ್ರೀಕೃಷ್ಣದೇವನು ಹದಿನಾರು ಸಾವಿರದ ನೂರ ಎಂಟು ಮನೆಗಳಲ್ಲಿ ತೋರಿಸಿದ ಅಸಂಖ್ಯ ರೂಪಗಳಿಂದ "ಇದೇ ರೀತಿಯಿಂದ ಅನಂತ ರೂಪಗಳಿಂದ ಅನಂತ ವ್ಯಾಪಾರಗಳನ್ನು ಮಾಡುತ್ತಿರುವೆನು" ಎಂದು ತಿಳಿಸಿದನು. ಅವನ ಈ ಲೀಲೆಗಳನ್ನು ನೋಡಿದ ನಾರದರು ಆಶ್ಚರ್ಯಭರಿತರಾಗಿ ಹೊರಟರು. ಈ ಶ್ರೀಕೃಷ್ಣದೇವನ ಮಹಿಮೆಗಳನ್ನು ಹೇಳುವವನೂ ಕೇಳುವವನೂ ಮುಕ್ತನಾಗುವನು. ಅವನು ನಮ್ಮನ್ನು ಕಾಪಾಡಲಿ.

## ಸುಂದ ಉಪಸುಂದರು

ಶ್ರೀಕೃಷ್ಣದೇವನ ಹದಿನಾರು ಸಾವಿರದ ನೂರ ಎಂಟು ಪತ್ನಿಯರ ಮನೆಗಳಲ್ಲಿ ಶ್ರೀಕೃಷ್ಣದೇವನು ಮಾಡುತ್ತಿರುವ ವಿಚಿತ್ರ ಲೀಲೆಗಳನ್ನು ನಾರದರು ನೋಡಿದರು. ಅತ್ಯಂತ ಭಕ್ತಿಯಿಂದ ಪರವಶರಾದರು. ಪಾಂಡವರನ್ನು ನೋಡಬೇಕೆಂದು ಇಂದ್ರಪ್ರಸ್ಥನಗರಕ್ಕೆ ಬಂದರು. ಧರ್ಮರಾಜನನ್ನು ನೋಡಿದರು. ಅವನ ಪಕ್ಕದಲ್ಲಿದ್ದ ದ್ರೌಪದೀ ದೇವಿಯ ಸೌಂದರ್ಯವನ್ನು ನೋಡಿದರು. ಸುಂದರಿಯರಾದ ಪತ್ನಿಯರಿಂದ ಏರ್ಪಡುವ ಅನರ್ಥಗಳನ್ನು ಹೇಳಲು ಉದ್ಯುಕ್ತರಾದರು.

"ಎಲೋ ಧರ್ಮರಾಜನೇ, ನಾನು ಹೇಳುವ ಮಾತುಗಳನ್ನು ಲಾಲಿಸು. ಪೂರ್ವಕಾಲದಲ್ಲಿ ಸುಂದ ಉಪಸುಂದ ಎಂಬ ಇಬ್ಬರು ದೈತ್ಯರಿದ್ದರು. ಅವರಿಬ್ಬರೂ ಸಹೋದರರು ಅನ್ಯೋನ್ಯ ಪ್ರೇಮದಿಂದ ಯುಕ್ತರಾದವರು. ತಮಗಿಬ್ಬರಿಗೂ ಅನ್ಯೋನ್ಯ ಕಲಹವು ಏರ್ಪಡುವ ಸಂಭವವೇ ಇಲ್ಲ ಎಂದು ನಂಬಿದವರು. ಆದ್ದರಿಂದ ಇತರರಿಂದ

ಯಾರಿಂದಲೂ ತಮ್ಮಿಬ್ಬರಿಗೆ ಮರಣವು ಏರ್ಪಡಕೂಡದೆಂದು ಬ್ರಹ್ಮದೇವನಿಂದ ವರವನ್ನು ಪಡೆದವರು. ವರವನ್ನು ಕೊಟ್ಟ ಬ್ರಹ್ಮದೇವನು ಆಲೋಚಿಸಿದನು. ಸ್ತ್ರೀಯರಲ್ಲಿ ಮೋಹಕತ್ವಶಕ್ತಿಯು ಇದ್ದಂತೆ ಯಾರಲ್ಲಿಯೂ ಇರುವುದಿಲ್ಲ. ಒಬ್ಬಳಲ್ಲಿ ಆಸೆಯು ಇಬ್ಬರು ಪುರುಷರಿಗೆ ಏರ್ಪಟ್ಟರೆ ಅವಳಿಗಾಗಿ ಯಾರಾಗಿದ್ದರೂ ಅವರಿಗೆ ವಿರೋಧವು ಏರ್ಪಡುವುದರಲ್ಲಿ ಸಂಶಯವಿಲ್ಲ. ಈ ವಿಷಯವನ್ನು ಈಗ ಸ್ಪಷ್ಟಪಡಿಸುವೆನು ಎಂದು ತೀರ್ಮಾನಿಸಿದನು. "ತಿಲೋತ್ತಮಾ" ಎಂಬ ಅಪ್ಸರಃಸ್ತ್ರೀಯನ್ನು ಸೃಷ್ಟಿಸಿದನು. ಪ್ರಪಂಚದಲ್ಲಿರುವ ಸಕಲ ಸ್ತ್ರೀಯರ ಸೌಂದರ್ಯಕ್ಕಿಂತಲೂ ಎಳ್ಳಿನಷ್ಟು ಅಧಿಕವಾದ ಸೌಂದರ್ಯದಿಂದ ಯುಕ್ತಳಾಗಿರುವುದರಿಂದಲೇ ಅವಳಿಗೆ "ತಿಲೋತ್ತಮಾ" ಎಂಬ ಹೆಸರು ಬಂತು. ಅವಳನ್ನು ಸುಂದ, ಉಪಸುಂದ ಎಂಬ ದೈತ್ಯರಿದ್ದಲ್ಲಿಗೆ ಕಳುಹಿಸಿದನು. ಅವಳನ್ನು ನೋಡಿದ ಕೂಡಲೇ ಇಬ್ಬರೂ ಮೋಹಪರವಶರಾದರು. ಅವಳು ತನ್ನ ಹೆಂಡತಿಯೆಂದೂ ಇನ್ನೊಬ್ಬನ ಹೆಂಡತಿಯಲ್ಲವೆಂದೂ ಇಬ್ಬರೂ ಹೇಳಲು ಆರಂಭಿಸಿದರು. ಈ ಮಾತುಗಳು ಕಲಹರೂಪವನ್ನು ತಾಳಿದವು. ಕೊನೆಗೆ ಇಬ್ಬರೂ ಹೊಡೆದಾಡಿಕೊಂಡು ಸತ್ತರು.

## ಧರ್ಮರಾಜಾದಿಗಳಿಂದ ಪ್ರತಿಜ್ಞೆ

ಓ ಧರ್ಮರಾಜಾ, ದ್ರೌಪದೀದೇವಿಯು ಪರಮ ಸುಂದರಿಯಾಗಿರುವಳು. ಅವಳಿಗೆ ನೀವು ಐವರು ಪತಿಗಳಾಗಿರುವಿರಿ. ನೀವೆಲ್ಲರೂ ಅವಳಲ್ಲಿರುವ ಮೋಹಾತಿಕರೇಕದಿಂದ ಸುಂದ, ಉಪಸುಂದರಂತೆ ಹೊಡದಾಡಿಕೊಳ್ಳುವ ಸ್ಥಿತಿಯು ಏರ್ಪಡಕೂಡದು. ಧರ್ಮರಾಜ ಮುಂತಾದ ಐವರು ಪತಿಗಳ ಮಧ್ಯದಲ್ಲಿ ಯಾರಾದರೂ ಒಬ್ಬನೊಡನೆ ಏಕಾಂತಗೃಹದಲ್ಲಿರುವಾಗ ಇನ್ನೊಬ್ಬ ಪತಿಯು ಆ ಗೃಹದೊಳಗೆ ಪ್ರವೇಶಿಸಕೂಡದು. ಹಾಗೆ ಪ್ರವೇಶಿಸಿದರೆ ಅಂದಿನಿಂದ ಆರಂಭಿಸಿ ಒಂದು ವರ್ಷವು ಮುಗಿಯುವ ವರೆಗೆ ಬ್ರಹ್ಮಚರ್ಯದಿಂದ ತೀರ್ಥಯಾತ್ರೆಯನ್ನು ಮಾಡಬೇಕು ಎಂದು ಆಜ್ಞಾಪಿಸಿದರು. ಎಲ್ಲರೂ ನಾರದರ ಆಜ್ಞೆಯಂತೆ ನಡೆದುಕೊಳ್ಳುವುದಾಗಿ ಅಂಗೀಕರಿಸಿದರು.

## ಅರ್ಜುನನ ತೀರ್ಥಯಾತ್ರೆ

ಒಂದು ದಿನ ಒಬ್ಬ ಬ್ರಾಹ್ಮಣನ ಗೋವುಗಳನ್ನು ಕೆಲವು ಕಳ್ಳರುಗಳು ಕದ್ದುಕೊಂಡು ಹೋಗುತ್ತಿದ್ದರು. ಆಗ ಬ್ರಾಹ್ಮಣನು ಅರ್ಜುನನನ್ನು ನೋಡಿ ತನ್ನ ಗೋವುಗಳನ್ನು ರಕ್ಷಿಸಬೇಕೆಂದು ಹೇಳಿದನು. ಆಗ ಅರ್ಜುನನಲ್ಲಿ ಆಯುಧಗಳಿರಲಿಲ್ಲ. ಆಯುಧಗಳನ್ನು ತಂದು ಆ ಬ್ರಾಹ್ಮಣನ ಗೋವುಗಳನ್ನು ರಕ್ಷಿಸುವುದಾಗಿ ಹೇಳಿದನು. ಆಯುಧಗಳನ್ನು ಇಟ್ಟಿರುವ ಶಸ್ತ್ರಾಗಾರಕ್ಕೆ ಹೋದನು. ಆಗ ಅಲ್ಲಿ ಧರ್ಮರಾಜನಿಂದ ಯುಕ್ತಳಾದ ದ್ರೌಪದೀದೇವಿಯನ್ನು ನೋಡಿದನು. ಅವಸರ ಅವಸರವಾಗಿ ಆಯುಧಗಳನ್ನು ಸ್ವೀಕರಿಸಿದನು. ಕಳ್ಳರನ್ನು ನಿಗ್ರಹಿಸಿದನು. ಬ್ರಾಹ್ಮಣನ ಗೋವುಗಳನ್ನು ಹಿಂದಿರುಗಿಸಿದನು. ಹಿಂದೆ ತಾನು ಮಾಡಿದ ಪ್ರತಿಜ್ಞೆಯಂತೆ ಧರ್ಮರಾಜನಿಂದ ಯುಕ್ತಳಾದ ದ್ರೌಪದೀದೇವಿಯನ್ನು ನೋಡಿದುದಕ್ಕಾಗಿ ತೀರ್ಥಯಾತ್ರೆಗೆ ಹೋಗುವುದಕ್ಕಾಗಿ ಉದ್ಯುಕ್ತನಾದನು.

ಧರ್ಮರಾಜ ಮುಂತಾದವರು ಅರ್ಜುನನು ತೀರ್ಥಯಾತ್ರೆಗೆ ಹೊರಟಾಗ ಅವನಲ್ಲಿರುವ ಪ್ರೇಮದಿಂದ ಅಡ್ಡಗಟ್ಟಿದರು. "ಓ ಅರ್ಜುನ, ನೀನು ಉದ್ದೇಶಪೂರ್ವಕವಾಗಿ ಧರ್ಮರಾಜನಿಂದ ಯುಕ್ತಳಾದ

ದ್ರೌಪದೀದೇವಿಯನ್ನು ನೋಡಲಿಲ್ಲ. ಬ್ರಾಹ್ಮಣನ ಗೋವುಗಳನ್ನು ರಕ್ಷಿಸುವುದಕ್ಕಾಗಿ ಅವಸರ ಅವಸರವಾಗಿ ಬಂದಿ. ಅಕಸ್ಮಾತ್ತಾಗಿ ಈ ದೃಶ್ಯವನ್ನು ನೋಡಿದಿ. ಆದ್ದರಿಂದ ನಿನಗೆ ಈ ದರ್ಶನದಿಂದ ದೋಷವಿಲ್ಲ. ಬ್ರಾಹ್ಮಣರ ಗೋರಕ್ಷಣದಿಂದ ಮಹಾಪುಣ್ಯವೇ ಬಂತು. ಆದ್ದರಿಂದ ನೀನು ತೀರ್ಥಯಾತ್ರೆಗೆ ಹೋಗಬೇಕಾಗಿಲ್ಲ ಎಂದರು. ಆದರೂ ಅರ್ಜುನನು ತಾನು ಮಾಡಿರುವ ಪ್ರತಿಜ್ಞೆಯನ್ನು ರಕ್ಷಿಸುವುದಕ್ಕಾಗಿ ತೀರ್ಥಯಾತ್ರೆಗೆ ಹೋದನು.

## ಅರ್ಜುನನಿಗೆ ಪುತ್ರೋತ್ಸವ

ಹೀಗೆ ಅರ್ಜುನನು ತೀರ್ಥಯಾತ್ರೆಯನ್ನು ಮಾಡುತ್ತಾ ಗಂಗಾನದೀತೀರಕ್ಕೆ ಬಂದನು. ಗಂಗೆಯಲ್ಲಿ ಸ್ನಾನಕ್ಕಾಗಿ ಮುಳುಗಿದನು. ಆಗ ನಾಗಕನ್ಯೆಯಾಗಿರುವ ಇರಾವತೀ ಎಂಬುವಳು ತನ್ನ ಮಾಯೆಯ ಬಲದಿಂದ ಅರ್ಜುನನನ್ನು ನಾಗಲೋಕಕ್ಕೆ ಕರೆದುಕೊಂಡುಹೋದಳು. ಅವಳ ಗಂಡನನ್ನು ಗರುಡನು ಸಂಹರಿಸಿದ್ದನು. ಆದ್ದರಿಂದ ಅವಳಿಗೆ ಮಕ್ಕಳಿರಲಿಲ್ಲ. ಅವಳ ತಂದೆಯು ಅವಳಲ್ಲಿ ಮಗನನ್ನು ಕರುಣಿಸಲು ಅರ್ಜುನನನ್ನು ಪ್ರಾರ್ಥಿಸಿದನು. ಆದರೆ ಅರ್ಜುನನು ನಾರದರ ಮುಂದೆ ಮಾಡಿದ ಪ್ರತಿಜ್ಞೆಯಂತೆ ಒಂದು ವರ್ಷಕಾಲದ ವರೆಗೆ ಬ್ರಹ್ಮಚರ್ಯವನ್ನು ಧರಿಸಬೇಕೆಂದೂ ಆದ್ದರಿಂದ ಅವಳಲ್ಲಿ ಮಗನನ್ನು ಪಡೆಯುವುದು ಸಾಧ್ಯವಿಲ್ಲವೆಂದೂ ಹೇಳಿದನು. ಆದರೂ ಪುನಃ ಪುನಃ ಅದೇ ವಿಷಯವನ್ನು ಪ್ರಾರ್ಥಿಸಿದುದರಿಂದ ಕೊನೆಗೆ ಅವಳಲ್ಲಿ ಒಬ್ಬ ಮಗನನ್ನು ಕರುಣಿಸಿದನು. ಆ ಮಗನು ಕುಜನ ಅವತಾರವಾಗಿದ್ದನು. ಅವನಲ್ಲಿ ವರುಣನ ಆವೇಶವಿತ್ತು. ಅವನು "ಇರಾವಾನ್" ಎಂದು ಪ್ರಸಿದ್ಧನಾದನು. ಮಕ್ಕಳಲ್ಲಿ ತಂದೆಯ ಗುಣಗಳೂ ತಾಯಿಯ ಜಾತಿಯೂ ಪ್ರಾಯಶಃ ಇರುತ್ತದೆ. ಆದ್ದರಿಂದ ಅರ್ಜುನನ ಮಗನಾಗಿರುವ ಇರಾವಂತನಲ್ಲಿ ಅಸ್ತ್ರವಿದ್ಯೆಯ ವಿಶೇಷ ಪಾಂಡಿತ್ಯವಿತ್ತು. ಅರ್ಜುನನ ಮೊದಲನೆಯ ಮಗನಾದ್ದರಿಂದ ಅರ್ಜುನನಲ್ಲಿದ್ದ ಅತಿಧಾರ್ಮಿಕತ್ವವೂ ಇತ್ತು. ತಾಯಿಯಾಗಿರುವ ಇರಾವತಿಯಂತೆ ಅವನ ಮಗನೂ ಸರ್ಪಜಾತಿಗೆ ಸೇರಿದವನಾಗಿದ್ದನು. ಅವನಲ್ಲಿ ಮಾಯಾ ವಿದ್ಯೆಯೂ ಅಧಿಕವಾಗಿತ್ತು.

ಅರ್ಜುನನು ತೀರ್ಥಯಾತ್ರಾಕ್ರಮದಿಂದ ಪಾಂಡ್ಯದೇಶಕ್ಕೆ ಹೋದನು. ಇರಾವತಿಯನ್ನು ಅಲ್ಲಿಯೇ ಬಿಟ್ಟನು. "ಇರಾವಾನ್" ಎಂಬ ಅರ್ಜುನನ ಮಗನು ತಾಯಿಯ ಜೊತೆಯಲ್ಲಿ ಸರ್ಪಗಳ ಮಧ್ಯದಲ್ಲಿಯೇ ವಾಸಿಸಿದನು. ಅಲ್ಲಿರುವ ಸರ್ಪಗಳೂ ದೇವತೆಗಳೂ ಅವನನ್ನು ವಿಶೇಷವಾಗಿ ಪೂಜಿಸಿದರು.

ನಾರದರ ಮುಂದೆ ಮಾಡಿದ "ಬ್ರಹ್ಮಚರ್ಯವನ್ನು ಮಾಡುವೆನು" ಎಂಬ ಪ್ರತಿಜ್ಞೆಯನ್ನು ಅರ್ಜುನನು ಮೀರಿದನಲ್ಲವೇ? ಇದರಿಂದ ಅವನಿಗೆ ದೋಷವು ಬರಲಿಲ್ಲವೇ? ಎಂಬ ಪ್ರಶ್ನೆಯು ಇಲ್ಲಿ ಬರುತ್ತದೆ. ಅದಕ್ಕೆ ಈಗ ಉತ್ತರವನ್ನು ಕೊಡುವೆವು.

ಅರ್ಜುನನೇ ಮೊದಲಾದವರು ಮಹಾತೇಜಸ್ವಿಗಳು. ಅವರು ತಮಗಿಂತ ಉತ್ತಮರಾದವರಲ್ಲಿ ಯಾವ ವಿಧವಾದ ಅಪರಾಧಗಳನ್ನೂ ಮಾಡಕೂಡದು. ಪ್ರತಿಜ್ಞೋಲ್ಲಂಘನ ಮುಂತಾದ ದೋಷಗಳು ಅವರಿಗೆ ಬಾಧಕವಾಗಲಾರವು. ಇದು ಎಲ್ಲಾ ಶಾಸ್ತ್ರಗಳಲ್ಲಿಯೂ ಮಾಡಿರುವ ನಿರ್ಣಯವಾಗಿದೆ. ಆದ್ದರಿಂದ ಅರ್ಜುನನು ತಾನು ಮಾಡಿದ ಪ್ರತಿಜ್ಞೆಯನ್ನು ಮೀರಿದ್ದರಿಂದ ಅವನಿಗೆ ಯಾವ ಹಾನಿಯೂ ಇಲ್ಲ. ಅರ್ಜುನನು ಪ್ರತಿಜ್ಞೆಯಂತೆ ನಡೆಯದಿರುವುದನ್ನು ಧರ್ಮರಾಜನೂ ಭೀಮಸೇನದೇವರೂ ತಿಳಿದರು. ಆದರೂ ಅವನಿಗೆ ಅದು

ಹಾನಿಕರವಲ್ಲದಿರುವುದರಿಂದಲೂ ಅವನಲ್ಲಿರುವ ಅತ್ಯಂತ ಸ್ನೇಹದಿಂದಲೂ ಅವರಿಬ್ಬರೂ ಕ್ಷಮಿಸಿದರು.

## ಬಭ್ರುವಾಹನ ಜನ್ಮ

ಪಾಂಡ್ಯದೇಶದಲ್ಲಿ ಅರ್ಜುನನು ಒಂದು ವರ್ಷದ ವರೆಗೆ ಇದ್ದನು. ಆ ದೇಶದ ರಾಜನಾದ ವೀರಸೇನನು ತನ್ನ ಮಗಳಾಗಿರುವ "ಚಿತ್ರಾಂಗದಾ" ಎಂಬುವವಳನ್ನು ಸಂತೋಷದಿಂದ ಅರ್ಜುನನಿಗೆ ಕೊಟ್ಟು ವಿವಾಹವನ್ನು ಮಾಡಿದನು. ಆ ವೀರಸೇನಮಹಾರಾಜನು "ತ್ವಷ್ಟಾ" ಎಂಬ ಸೂರ್ಯನ ಅವತಾರವಾಗಿದ್ದನು. ಅವನಲ್ಲಿ ಯಮನ ಆವೇಶವಿತ್ತು; ಅವನ ಮಗಳಾದ ಚಿತ್ರಾಂಗದಾದೇವಿಯು ಶಚೀದೇವಿಯ ಅವತಾರವಾಗಿದ್ದಳು.

ರಾಮಾವತಾರಕಾಲದಲ್ಲಿ ತಾರಾದೇವಿಯ ರೂಪದಿಂದ ಯುಕ್ತಳಾಗಿದ್ದ ಶಚೀದೇವಿಯು ಸುಗ್ರೀವನ ಅಂಗಸಂಗವನ್ನು ಮಾಡಿದಳು. ಆ ಅಪರಾಧದಿಂದ ತಾರಾದೇವಿಯ ದೇಹವನ್ನು ಬಿಟ್ಟ ಆ ಶಚೀದೇವಿಯು ತನ್ನ ಪತಿಯಾದ ದೇವೇಂದ್ರನ ಲೋಕವಾಗಿರುವ ಸ್ವರ್ಗಲೋಕಕ್ಕೆ ಹೋಗಲಿಲ್ಲ. ಅಂತರಿಕ್ಷಲೋಕದಲ್ಲಿಯೇ ಇದ್ದಳು. ಶ್ರೀಕೃಷ್ಣಾವತಾರಕಾಲದಲ್ಲಿ ಅಂತರಿಕ್ಷ ಲೋಕದಿಂದ "ಚಿತ್ರಾಂಗದಾ" ಎಂಬ ಹೆಸರಿನಿಂದ ಭೂಲೋಕದಲ್ಲಿ ಹುಟ್ಟಿದಳು. ಹಿಂದಿನ ಜನ್ಮದಲ್ಲಿ ಸುಗ್ರೀವನ ಅಂಗಸಂಗವನ್ನು ಮಾಡಿರುವ ಕಾರಣದಿಂದಲೇ ಈ ಜನ್ಮದಲ್ಲಿ ದೇವೇಂದ್ರನ ಅವತಾರವಾಗಿರುವ ಅರ್ಜುನನೊಡನೆ ಬಹುಕಾಲದ ವರೆಗೆ ಇರಲಿಲ್ಲ.

ವೀರಸೇನಮಹಾರಾಜನಿಗೆ ಗಂಡು ಮಕ್ಕಳಿರಲಿಲ್ಲ. ಚಿತ್ರಾಂಗದಾದೇವಿಯನ್ನು ವಿವಾಹ ಮಾಡುವಾಗ ಅವಳಲ್ಲಿ ಹುಟ್ಟುವ ಗಂಡು ಮಗನನ್ನು ತನಗೆ ದತ್ತು ಕೊಡಬೇಕೆಂದು ಹೇಳಿ ಅದರಂತೆ ಸಂಕಲ್ಪಿಸಿ ಕನ್ಯಾದಾನವನ್ನು ಮಾಡಿದ್ದನು. ಅವಳಲ್ಲಿ ಅರ್ಜುನನಿಗೆ "ಬಭ್ರುವಾಹನ" ಎಂಬ ಮಗನು ಹುಟ್ಟಿದನು. ಆ ಬಭ್ರುವಾಹನನು ಇಂದ್ರನ ಮಗನಾದ ಜಯಂತನ ಅವತಾರವಾಗಿದ್ದನು. ಅವನಲ್ಲಿ ಮನ್ಮಥನ ವಿಶೇಷಾಂಶವಿತ್ತು. ಆದ್ದರಿಂದ ಮಹಾವೀರನಾದನು. ಈ ಬಭ್ರುವಾಹನನನ್ನು ವಿವಾಹಕಾಲದಲ್ಲಿ ಮಾಡಿಕೊಂಡ ಕರಾರಿನಂತೆ ಪಾಂಡ್ಯದೇಶದಲ್ಲಿಯೇ ಬಿಟ್ಟುಬಿಟ್ಟನು.

ಒಮ್ಮೆ ಐವರು ಕನ್ಯೆಯರು ಒಬ್ಬ ಬ್ರಾಹ್ಮಣನನ್ನು ನೋಡಿ ಅಪಹಾಸವನ್ನು ಮಾಡಿದರು. ಆಗ ಆ ಬ್ರಾಹ್ಮಣನು "ನೀವೆಲ್ಲರೂ ಮೊಸಳೆಯಾಗಿ ಹೋಗಿರಿ" ಎಂದು ಶಪಿಸಿದನು. ಕೂಡಲೇ ಮೊಸಳೆಯಾದರು. ತಮಗೆ ಶಾಪದ ಬಿಡುಗಡೆಯು ಏರ್ಪಡುವಂತೆ ಆ ಕನ್ಯೆಯರೆಲ್ಲರೂ ಪ್ರಾರ್ಥಿಸಿದರು. ಆಗ ಆ ಬ್ರಾಹ್ಮಣರು "ಒಬ್ಬ ಮಹಾಬಲಿಷ್ಠನನ್ನು ನೀವೆಲ್ಲರೂ ಹಿಡಿಯಿರಿ. ಆಗ ನಿಮ್ಮೆಲ್ಲರನ್ನೂ ಯಾವನು ಸೆಳೆದು ತೀರದಲ್ಲಿ ತಂದು ಹಾಕುವನೋ ಆಗ ನಿಮ್ಮೆಲ್ಲರಿಗೂ ಮೊಸಳೆಯ ದೇಹದಿಂದ ಬಿಡುಗಡೆಯಾಗುತ್ತದೆ ಎಂದು ಶಾಪಮೋಕ್ಷವನ್ನು ಅನುಗ್ರಹಿಸಿದರು.

ಇತ್ತ ಅರ್ಜುನನು ತೀರ್ಥಯಾತ್ರಾಕ್ರಮದಿಂದ "ಕನ್ಯಾತೀರ್ಥ" ಎಂಬ ತೀರ್ಥಕ್ಕೆ ಬಂದನು. ಆ ತೀರ್ಥದಲ್ಲಿಯೇ ಹಿಂದೆ ಹೇಳಿರುವ ಐವರು ಕನ್ಯೆಯರೂ ಮೊಸಳೆಯ ರೂಪದಿಂದ ವಾಸಿಸುತ್ತಿದ್ದರು. ಅವರೆಲ್ಲರೂ ಅರ್ಜುನನ ಕಾಲನ್ನು ಕಚ್ಚಿದರು. ಅರ್ಜುನನು ಅವರೆಲ್ಲರನ್ನೂ ಸೆಳೆದುಕೊಂಡು ತೀರಕ್ಕೆ ಬಂದನು. ಅವರೆಲ್ಲರೂ ಮೊಸಳೆಯ ಜನ್ಮದಿಂದ ಬಿಡುಗಡೆಯನ್ನು ಹೊಂದಿದರು. ಅಲ್ಲಿಂದ ಕ್ರಮವಾಗಿ ತೀರ್ಥಯಾತ್ರೆಯನ್ನು ಮಾಡುತ್ತಾ ಪ್ರಭಾಸಕ್ಷೇತ್ರಕ್ಕೆ ಬಂದನು.

ಶ್ರೀರಾಮಾವತಾರಕಾಲದಲ್ಲಿ ಮಾಯಾಸೀತಾದೇವಿಯು ಅಶೋಕವನದಲ್ಲಿರುವಾಗ "ತ್ರಿಜಟಾ" ಎಂಬ ರಾಕ್ಷಸಿಯು ಅತ್ಯಂತ ಭಕ್ತಿಯಿಂದ ಸೀತಾದೇವಿಯನ್ನು ಯಾವಾಗಲೂ ಸೇವಿಸಿದಳು. ಆ ಪುಣ್ಯಪ್ರಭಾವದಿಂದ "ಸುಭದ್ರಾ" ಎಂಬ ಹೆಸರಿನಿಂದ ಶ್ರೀಕೃಷ್ಣಾವತಾಗಕಾಲದಲ್ಲಿ ಶ್ರೀಕೃಷ್ಣದೇವನಿಗೆ ತಂಗಿಯಾಗಿ ಹುಟ್ಟಿದಳು. ಶ್ರೀಕೃಷ್ಣದೇವನಿಗೆ ಅವಳಲ್ಲಿ ತುಂಬಾ ಪ್ರೀತಿಯು ಇದ್ದಿತು. ಶ್ರೀಕೃಷ್ಣದೇವನು ತನಗೆ ಅತ್ಯಂತ ಪ್ರಿಯನಾದ ಅರ್ಜುನನಿಗೆ ಸುಭದ್ರೆಯನ್ನು ಕೊಟ್ಟು ವಿವಾಹವನ್ನು ಮಾಡಬಹುದೆಂದೂ ಪಾಂಡವರಲ್ಲಿ ಶ್ರೀಕೃಷ್ಣದೇವನಿಗೆ ಇರುವ ಪ್ರೀತಿಯನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲವೆಂದೂ ದುರ್ಯೋಧನನು ತಿಳಿದಿದ್ದನು.

ದುರ್ಯೋಧನನು ಸುಭದ್ರೆಯನ್ನು ತಾನೇ ಅಪೇಕ್ಷಿಸಿದನು. ತನ್ನ ಅಪೇಕ್ಷೆಯನ್ನು ಪೂರ್ತಿ ಮಾಡಿಕೊಳ್ಳುವುದಕ್ಕೆ ಬಲರಾಮನನ್ನು ಆಶ್ರಯಿಸುವುದೇ ಮಾರ್ಗವೆಂದು ತಿಳಿದನು. ಶ್ರೀಕೃಷ್ಣದೇವನ ಸನ್ನಿಧಾನವಿರುವಾಗ ಬಲರಾಮನಬಳಿ ಹೋದರೆ ತನ್ನ ಕೆಲಸವು ನಡೆಯಲಾರದೆಂದು ಸಮಯವನ್ನು ನಿರೀಕ್ಷಿಸುತ್ತಿದ್ದನು. ಶ್ಯಮಂತಕಮಣಿಯ ನಿಮಿತ್ತದಿಂದ ಬಲರಾಮನು ವಿದೇಹನಗರಕ್ಕೆ ಹೋಗಿ ಐದು ವರ್ಷಗಳ ವರೆಗೆ ಇದ್ದದ್ದನ್ನು ತಿಳಿದನು. ಆಗ ದುರ್ಯೋಧನನು ಅಲ್ಲಿಗೆ ಹೋದನು. ಬಲರಾಮನಿಂದ ಗದಾಯುದ್ಧವನ್ನು ಅಭ್ಯಾಸ ಮಾಡಿದನು. ಆಗ ಸುಭದ್ರಾದೇವಿಯನ್ನು ತನಗೆ ಕೊಟ್ಟು ವಿವಾಹವನ್ನು ಮಾಡಬೇಕೆಂದು ಬಲರಾಮನಿಂದ ವಾಗ್ದಾನವನ್ನು ಸ್ವೀಕರಿಸಿದನು. ಬಲರಾಮನು ವಾಗ್ದಾನವನ್ನು ಕೊಟ್ಟುಬಿಟ್ಟರೆ ಬಲರಾಮನಿಗೆ ವಿರುದ್ಧವಾಗಿ ಸುಭದ್ರಾದೇವಿಯನ್ನು ಅರ್ಜುನನಿಗೆ ಕೊಟ್ಟು ವಿವಾಹವನ್ನು ಶ್ರೀಕೃಷ್ಣದೇವನು ಮಾಡುವುದಿಲ್ಲ ಎಂದು ದುರ್ಯೋಧನನು ನಂಬಿದ್ದನು.

ಪ್ರಭಾಸಕ್ಷೇತ್ರಕ್ಕೆ ಬಂದ ಅರ್ಜುನನು ಬಲರಾಮನು ತನ್ನ ತಂಗಿಯಾದ ಸುಭದ್ರಾದೇವಿಯನ್ನು ದುರ್ಯೋಧನನಿಗೆ ಕೊಟ್ಟು ವಿವಹಾವನ್ನು ನಡೆಯಿಸುವುದಕ್ಕಾಗಿ ಏರ್ಪಾಡುಗಳನ್ನು ಮಾಡುತ್ತಿರುವುದಾಗಿ ತಿಳಿದನು.

## ಅರ್ಜುನ ಸನ್ಯಾಸ

ಅರ್ಜುನನು ಈ ವಿಷಯವನ್ನು ತಿಳಿದು, ಸನ್ಯಾಸಿಯ ವೇಷವನ್ನು ಧರಿಸಿ, ದ್ವಾರಕಾನಗರಿಗೆ ಬಂದನು. ಆಗ ಸರ್ವಜ್ಞನಾದ ಶ್ರೀಕೃಷ್ಣದೇವನು ಸತ್ಯಭಾಮಾದೇವಿಯರೊಡನೆ ಹಾಸಿಗೆಯಲ್ಲಿ ಮಲಗಿದ್ದನು. ಮಲಗಿದಲ್ಲಿಯೇ ಸುಭದ್ರಾದೇವಿಯಲ್ಲಿ ಮೋಹವುಳ್ಳ ಅರ್ಜುನನು ಸನ್ಯಾಸಿವೇಷವನ್ನು ದರಿಸಿದ್ದನ್ನು ಸ್ಮರಿಸಿ ನಕ್ಕನು. ಶ್ರೀಸತ್ಯಭಾಮಾದೇವಿಯರು ಕಾರಣವನ್ನು ಕೇಳಿದರು. ಶ್ರೀಕೃಷ್ಣದೇವನು ಕಾರಣವನ್ನು ಹೇಳಿದನು. ಸರ್ವಜ್ಞನಾದ ಶ್ರೀಕೃಷ್ಣದೇವನು ನಕ್ಕಿರುವುದೂ ಸರ್ವಜ್ಞಳಾದ ಸತ್ಯಭಾಮದೇವಿಯು ಶ್ರೀಕೃಷ್ಣದೇವನನ್ನು ಕೇಳಿ ಕಾರಣವನ್ನು ತಿಳಿದಿರುವುದೂ ಲೀಲೆಯಾಗಿದೆ. ಅವರಿಬ್ಬರೂ ರೈವತಕಪರ್ವತಕ್ಕೆ ಬಂದರು. ಈ ರೈವತಕ ಪರ್ವತವು ವೃಷ್ಣಿ, ಭೋಜ, ಅಂಧಕ ಮುಂತಾದ ಸಕಲ ಯಾದವರಿಗೂ ವಿಹಾರಸ್ಥಾನವಾಗಿದೆ. ಅಲ್ಲಿಗೆ ಬಂದಿರುವ ಶ್ರೀಕೃಷ್ಣದೇವನೂ ಶ್ರೀಸತ್ಯಭಾಮಾದೇವಿಯರೂ ಸನ್ಯಾಸಿರೂಪಿಯಾದ ಅರ್ಜುನನನ್ನು ನೋಡಿದರು. ಶ್ರೀಕೃಷ್ಣದೇವನು ಏಕಾಂತದಲ್ಲಿ ಅರ್ಜುನನೊಡನೆ ಮಾತಾಡಿದನು. ತನ್ನ ತಂಗಿಯಾದ ಸುಭದ್ರಾದೇವಿಯನ್ನು ಅರ್ಜುನನಿಗೆ ಕೊಟ್ಟು ವಿವಾಹವನ್ನು ಮಾಡುವುದಾಗಿ ಪ್ರತಿಜ್ಞೆಯನ್ನು ಮಾಡಿದನು. ಅನಂತರದಲ್ಲಿ ಸಕಲ ಯಾದವರನ್ನೂ ನೋಡಿದನು.

ಬಲರಾಮನು ತನ್ನ ಬಂಧುಗಳಿಂದ ಸಹಿತನಾಗಿ ರೈವತಕಪರ್ವತದಲ್ಲಿ ಸನ್ಯಾಸಿವೇಷವನ್ನು ಧರಿಸಿರುವ ಅರ್ಜುನನನ್ನು ನೋಡಿ, ಅತ್ಯಂತ ಭಕ್ತಿಯಿಂದ ನಮಸ್ಕರಿಸಿದನು. ಅರ್ಜುನನೂ ಸಹ ಬಲರಾಮನನ್ನು ನೋಡಿದನು. ಗುಣಗಳಿಂದ ನೀನು ಶ್ರೇಷ್ಠನಾಗಿರುವಿ. ಆದ್ದರಿಂದ ಆಶ್ರಮದಿಂದ ನಾನು ಶ್ರೇಷ್ಠನಾಗಿದ್ದರೂ ಗುಣಗಳಿಂದ ಶ್ರೇಷ್ಠನಾಗಿರುವ ನಿನ್ನನ್ನು ನಮಸ್ಕರಿಸುವುದರಲ್ಲಿ ತಪ್ಪಿಲ್ಲ ಎಂದು ಹೇಳುತ್ತಾ ಬಲರಾಮನನ್ನು ನಮಸ್ಕರಿಸಿದನು. ಬಲರಾಮನು ಅರ್ಜುನನನ್ನು ನೋಡಿದನು. ಇವನು ಚಿಕ್ಕವಯಸ್ಸಿನವನಾಗಿದ್ದರೂ ಸರ್ವಜ್ಞನೆಂದು ತಿಳಿಯುತ್ತದೆ. ಆದ್ದರಿಂದಲೇ ನನ್ನ ಯೋಗ್ಯತೆಯನ್ನು ತಿಳಿದು ವಯಸ್ಸಿನಲ್ಲಿ ದೊಡ್ಡವನಾದ ನನ್ನನ್ನು ನಮಸ್ಕರಿಸಿದನು. ಆಶ್ರಮದಲ್ಲಿ ಚಿಕ್ಕವನಾಗಿರುವ ನನ್ನನ್ನು ನಮಸ್ಕರಿಸಕೂಡದು. ಆದರೂ ನನ್ನನ್ನು ನಮಸ್ಕರಿಸಿದ್ದಕ್ಕೆ ಸರಿಯಾದ ಕಾರಣವನ್ನೂ ಹೇಳಿರುವನು. ಮಾತುಗಳಲ್ಲಿ ತುಂಬಾ ಸಮರ್ಥನೆಂದು ತೋರುತ್ತದೆ ಎಂದು ತೀರ್ಮಾನಿಸಿದನು.

ಮಳೆಗಾಲವು ಸಮೀಸಿತು. ಆದ್ದರಿಂದ ಈಗ ಚಾತುರ್ಮಾಸ್ಯಕಾಲವಾಗಿದೆ. ಈ ಚಾತುರ್ಮಾಸ್ಯ ಕಾಲದಲ್ಲಿ ಸನ್ಯಾಸಿಗಳು ಒಂದೇ ಸ್ಥಳದಲ್ಲಿ ವಾಸಿಸಬೇಕು. ಈ ಸನ್ಯಾಸಿಗಳು ನಮ್ಮ ಊರಿನಲ್ಲಿಯೇ ಇರಲಿ. ನಮ್ಮ ಊರಿನಲ್ಲಿಯೂ ಕನ್ಯೆಯರು ವಾಸಿಸುವ ಅಂತಃಪುರದಲ್ಲಿಯೇ ಇರಲಿ. ಕನ್ಯೆಯರೂ ಈ ಸನ್ಯಾಸಿಗಳ ಮನಸ್ಸು ಸೋಯದಂತೆ ತುಂಬಾ ಸತ್ಕಾರವನ್ನು ಮಾಡಿಕೊಂಡು ಇವರನ್ನು ಸೇವಿಸಲಿ. ಶ್ರೀಕೃಷ್ಣಾ, ನೀನು ಈ ಏರ್ಪಾಡುಗಳನ್ನೆಲ್ಲವನ್ನೂ ಮಾಡು ಎಂದು ಹೇಳಿದನು.

# ಬಲರಾಮಾದಿಗಳನ್ನು ವಂಚಿಸಿದ್ದು

ಈ ಮಾತುಗಳನ್ನು ಶ್ರೀಕೃಷ್ಣದೇವನು ಕೇಳಿ "ಅಣ್ಣಾ, ಈ ಸನ್ಯಾಸಿಯನ್ನು ನಂಬಲಾರೆನು. ಇವನು ತರುಣನಾಗಿರುವನು. ತುಂಬಾ ಬಲಿಷ್ಠನೂ ಸುಂದರನೂ ಮಾತುಗಳಲ್ಲಿ ನಿಪುಣನೂ ಆಗಿರುವನು. ಇಂತಹ ಸನ್ಯಾಸಿಯು ಕನ್ಯೆಯರು ವಾಸಿಸುವ ಪ್ರದೇಶದಲ್ಲಿರುವುದು ಯೋಗ್ಯವಲ್ಲವೆಂದು ನನಗೆ ತೋರುತ್ತದೆ" ಎಂದನು. ಅದನ್ನೊಪ್ಪದ ಬಲರಾಮನು ಈ ಮಾತುಗಳನ್ನು ಹೇಳಿದನು.

"ಇವರು ಮಹಾಜ್ಞಾನಿಗಳು. ಸಕಲ ವಿದ್ಯೆಗಳನ್ನೂ ತಿಳಿದವರು. ಇಂತಹ ಮಹಾಜ್ಞಾನಿಗಳು ಕನ್ಯೆಯರು ವಾಸಿಸುವ ಸ್ಥಳದಲ್ಲಿದ್ದರೂ ಯಾವ ವಿಧವಾದ ಶಂಕೆಯೂ ಇಲ್ಲ" ಎಂದನು. ಶ್ರೀಕೃಷ್ಣದೇವನು ಬಲರಾಮನ ಮಾತುಗಳಿಗೆ ಉತ್ತರವನ್ನು ಕೊಟ್ಟನು. "ನನಗೆ ಈ ಕಾರ್ಯವು ಯುಕ್ತವೆಂದು ತೋರುವುದಿಲ್ಲ. ಆದರೂ ನೀನು ದೊಡ್ಡವನು. ನಿನ್ನ ಅಭಿಪ್ರಾಯವನ್ನು ನಾವೆಲ್ಲರೂ ಗೌರವಿಸಬೇಕಾಗಿದೆ. ಆದ್ದರಿಂದ ನಿನ್ನ ಇಷ್ಟದಂತೆಯೇ ನಡೆಯಲಿ" ಎಂದನು.

ಸುಭದ್ರೆಯನ್ನು ಕರೆದನು. "ಯತಿವರರನ್ನು ಯಾವಾಗಲೂ ಸೇವಿಸು. ಯಾವ ಕೆಲಸವನ್ನು ಹೇಳಿದರೂ ಅಜಾಗ್ರತೆಯಿಂದ ಮಾಡದಿರಬೇಡ. ಅವರನ್ನು ಚೆನ್ನಾಗಿ ಸಂತೋಷಪಡಿಸು" ಎಂದನು. ಸುಭದ್ರೆಯೂ ಶ್ರೀಕೃಷ್ಣದೇವನ ಆಜ್ಞೆಯಂತೆ ನಡೆದುಕೊಂಡಳು.

ಶ್ರೀಕೃಷ್ಣದೇವನು 'ಸುಭದ್ರೆಯನ್ನು ನಿನಗೆ ಕೊಟ್ಟು ವಿವಾಹ ಮಾಡುವೆನು' ಎಂದು ಹೇಳಿದ ಮಾತುಗಳಲ್ಲಿ

ತುಂಬಾ ವಿಶ್ವಾಸದಿಂದ ಯುಕ್ತನಾಗಿ ಅರ್ಜುನನು ಚಾತುರ್ಮಾಸ್ಯದ ನಾಲ್ಕು ತಿಂಗಳುಗಳ ವರೆಗೆ ಅಲ್ಲಿಯೇ ವಾಸಿಸಿದನು. ಆ ಕಾಲದಲ್ಲಿ ಸುಭದ್ರಾ ಮುಂತಾದ ಕನ್ಯೆಯರಿಗೆ ಉತ್ತಮವಾದ ಕಥೆಗಳನ್ನು ಹೇಳುತ್ತಿದ್ದನು. ಅದೇ ಸಮಯದಲ್ಲಿ ಶ್ರೀಕೃಷ್ಣದೇವನು ಅರ್ಜುನನಿಗೆ ಸುಭದ್ರೆಯನ್ನು ಕೊಟ್ಟು ವಿವಾಹ ಮಾಡುವುದಾಗಿ ವಾಗ್ದಾನ ಮಾಡಿದ. ಈ ವಿಷಯವನ್ನು ಶ್ರೀಕೃಷ್ಣದೇವನ ತಂದೆಯಾದ ವಸುದೇವನೂ ತಾಯಿಯಾದ ದೇವಕೀದೇವಿಯೂ ವಿಪೃಥು ಎಂಬ ಯಾದವನೂ ಸಾತ್ಯಕಿಯೂ ತಿಳಿದಿದ್ದರು. ಇವರನ್ನು ಬಿಟ್ಟು ಬೇರೆ ಯಾರು ತಿಳಿದಿರಲಿಲ್ಲ. ಅಸ್ತ್ರವಿದ್ಯೆಯಲ್ಲಿಯೂ ಶಸ್ತ್ರವಿದ್ಯೆಯಲ್ಲಿಯೂ ತತ್ವ ವಿದ್ಯೆಗಳಲ್ಲಿಯೂ ಸಾತ್ಯಕಿಯು ಶ್ರೀಕೃಷ್ಣದೇವನಿಗೂ ಅರ್ಜುನನಿಗೂ ಶಿಷ್ಯನಾಗಿದ್ದನು. 'ವಿಪೃಥು' ಎಂಬ ಯಾದವನು ಶ್ರೀಕೃಷ್ಣದೇವನ ಶಿಷ್ಯನಾಗಿದ್ದನು. ಆದ್ದರಿಂದ ಶ್ರೀಕೃಷ್ಣದೇವನು ಅವರಿಬ್ಬರಿಗೂ ಹೇಳಿದನು. ಇವರಿಬ್ಬರನ್ನೂ ಬಿಟ್ಟು ಉಳಿದ ಸರ್ವ ಯಾದವರೂ, ಪಾಂಡವರು "ಸರ್ವರೂ ಶ್ರೀಕೃಷ್ಣದೇವನಿಗೆ ತುಂಬಾ ಪ್ರಿಯರು" ಎಂದು ತಿಳಿದಿದ್ದರು. ಆದರೂ ಬಲರಾಮನಿಂದ ಆಜ್ಞಪ್ತರಾದ ಉದ್ಧವ, ಉಗ್ರಸೇನ, ಕೃತವರ್ಮ ಮುಂತಾದವರೂ ಅರ್ಜುನನಿಗೆ ಸುಭದ್ರೆಯನ್ನು ಕೊಡುವುದನ್ನು ಸಮ್ಮತಿಸಲಿಲ್ಲ. ದುರ್ಯೋಧನನಿಗೆ ಕೊಡುವುದನ್ನೇ ಸಮ್ಮತಿಸಿದರು. ಆಗ ಸರ್ವಯಾದವರಲ್ಲಿಯೂ ರಾಕ್ಷಸಾವೇಶವು ಏರ್ಪಟ್ಟಿತ್ತು. ಆದ್ದರಿಂದಲೇ ಸುಭದ್ರೆಯನ್ನು ಅರ್ಜುನನಿಗೆ ಕೊಟ್ಟು ವಿವಾಹ ಮಾಡುವುದು ಶ್ರೀಕೃಷ್ಣದೇವನಿಗೆ ಸಂಮತವಾಗಿದ್ದರೂ ಬಲರಾಮನ ಪ್ರೀತಿಗಾಗಿ ಅವರು ಸಂಮತಿಸಲಿಲ್ಲ. ಅದಕ್ಕಾಗಿ ಅವರನ್ನೆಲ್ಲರನ್ನೂ ಶ್ರೀಕೃಷ್ಣದೇವನು ವಂಚಿಸಿದನು.

## ಪ್ರದ್ಯುಮ್ನ ಮುಂತಾದವರ ಪಿಂಡೋದ್ಧಾರಕ್ಷೇತ್ರಯಾತ್ರಾ

ಶ್ರೀಕೃಷ್ಣದೇವನಿಂದ ವಂಚಿಸಲ್ಪಟ್ಟ ಪ್ರದ್ಯುಮ್ನ, ಸಾಂಬ ಮುಂತಾದ ಸಕಲ ಯಾದವರೂ ಬಲರಾಮನಿಂದ ಸಹಿತರಾಗಿ "ಪಿಂಡೋದ್ಧಾರ" ಎಂಬ ತೀರ್ಥಕ್ಷೇತ್ರಕ್ಕೆ ಹೋದರು. ಅಲ್ಲಿ ದೊಡ್ಡ ಉತ್ಸವಗಳು ನಡೆಯುತ್ತಿದ್ದವು. ಆಗ ರೈವತಕ ಪರ್ವತದಲ್ಲಿ ಯಾರೂ ಇರಲಿಲ್ಲ. ಆ ಸಮಯವನ್ನು ನೋಡಿ ಸುಭದ್ರೆಯು ಅರ್ಜುನನನ್ನು ಸಮೀಪಿಸಿದಳು. "ಓ ಯತಿವರ್ಯರೇ, ನೀವು ತೀರ್ಥಯಾತ್ರೆಯನ್ನು ಮಾಡುತ್ತಾ ನಮಗೆ ಇಷ್ಟ ಬಂಧುಗಳಾಗಿರುವ ಪಾಂಡವರನ್ನು ನೋಡಿದಿರಾ?" ಎಂದು ಕೇಳಿದಳು. "ಓಂ" ಎಂದು ಅರ್ಜುನನು ಹೇಳಿದನು. ಅವರೆಲ್ಲರೂ ಕ್ಷೇಮವಾಗಿರುವರಾ? ಎಂದು ಕೇಳಿದಳು. "ಓಂ" ಎಂದನು. "ಸರ್ವರೂ ಆರೋಗ್ಯವಾಗಿರುವರಾ?" ಎಂದು ಕೇಳಿದಳು. ಓಂ ಎಂದನು. ಅರ್ಜುನನ ವಿಷಯವನ್ನೇ ನಾದರೂ ಈ ಮತಿಯು ಹೇಳುವನೇನೋ ಎಂದು ನಿರೀಕ್ಷಿಸಿದಳು. ಮಿತವಾದಿಯಾದ ಈ ಯತಿಯು ಕೇಳಿದ ಪ್ರಶ್ನೆಗಳಿಗೆ ಮಾತ್ರ ಉತ್ತರವನ್ನು ಕೊಟ್ಟನೇ ಹೊರತು ಅರ್ಜುನನ ಸುದ್ದಿಯನ್ನೇ ಎತ್ತಲಿಲ್ಲ. ಸ್ವಲ್ಪ ಹೊತ್ತಾದ ಮೇಲೆ ತಾನೇ ಅರ್ಜುನನ ವಿಷಯವನ್ನು ಪ್ರಸ್ತಾಪಿಸಿದಳು.

ದೇವೇಂದ್ರನ ಮಗನಾಗಿರುವ ಅರ್ಜುನನು ತೀರ್ಥಯಾತ್ರೆಗೆ ಹೋದುದಾಗಿ ನಮ್ಮ ಮನೆಗೆ ಬಂದಿರುವ ಬ್ರಾಹ್ಮಣರಿಂದ ತಿಳಿದೆನು. ತೀರ್ಥಯಾತ್ರೆಯನ್ನು ಮಾಡುತ್ತಿರುವ ನೀವು ಅವರನ್ನು ನೋಡಿದರಾ? ಎಂದು ಕೇಳಿದನು. ಅರ್ಜುನನು "ಓಂ" ಎಂದನು. ಆಗ ಸುಭದ್ರೆಯು "ಎಲ್ಲಿ ಎಂದು ಪ್ರಶ್ನಿಸಿದಳು. ಈ ಮಾತುಗಳನ್ನು ಕೇಳಿದ ಅರ್ಜುನನು "ಇಲ್ಲಿಯೇ" ಎಂದು ಹೇಳುತ್ತಾ ನಗಲು ಆರಂಭಿಸಿದನು. ಇದನ್ನು ನೋಡಿದ ಸುಭದ್ರೆಯು "ಎಲ್ಲಿ?" "ಎಲ್ಲಿ?" "ಎಲ್ಲಿ?" ಎಂದು ಪುನಃ ಪುನಃ ಕೇಳಿದಳು. ಆಗ ಅರ್ಜುನನು "ಹುಚ್ಚಿಯೇ, ನಾನೇ ಆ

ಅರ್ಜುನನು'' ಎಂದು ಹೇಳುತ್ತಾ ನಗಲು ಆರಂಭಿಸಿದನು. ಆಗ ಸುಭದ್ರೆಯ ಕಣ್ಣುಗಳು ಅರಳಿದವು. ಲಜ್ಜೆಯಿಂದ ಯಾವ ಪ್ರತ್ಯುತ್ತರವನ್ನೂ ಕೊಡಲಿಲ್ಲ.

ಆಗ ಅರ್ಜುನನು ಕಾಮಪೀಡಿತನಾಗಿ ಸುಭದ್ರೆಯನ್ನು ಕುರಿತು ಹೇಳಿದನು. ನಿನಗೂ ನನಗೂ ವಿವಾಹಕ್ಕೆ ಇದು ಮುಖ್ಯಕಾಲವಾಗಿದೆ ಎಂದನು. ಆಗ ಸುಭದ್ರೆಯು ಈ ರೀತಿ ಹೇಳಿದಳು. ''ಶ್ರೀಕೃಷ್ಣದೇವನಿಗೆ ತಿಳಿಯದೆ ಯಾವ ಕೆಲಸವನ್ನೂ ಮಾಡುವಂತಿಲ್ಲ. ಅದು ಯುಕ್ತವೂ ಅಲ್ಲ. ಆದ್ದರಿಂದ ಅವನೂ ನಮ್ಮಿಬ್ಬರ ತಂದೆ ತಾಯಿಗಳೂ ಬರಬೇಕು. ವಿವಾಹೋತ್ಸವವು ನಡೆಯಬೇಕು. ಆ ವಿವಾಹೋತ್ಸವದಲ್ಲಿ ನೀವು ನನ್ನನ್ನು ಸ್ವೀಕರಿಸಬೇಕು'' ಎಂದಳು. ಆಗ ಶ್ರೀಕೃಷ್ಣದೇವನನ್ನು ಅರ್ಜುನನು ಸ್ಮರಿಸಿದನು.

## ಸುಭದ್ರಾ ವಿವಾಹ

ವಸುದೇವ ಮತ್ತು ದೇವಕೀದೇವಿಯರಿಂದ ಸಹಿತನಾದ ಶ್ರೀಕೃಷ್ಣದೇವನು ಅಂದು ರಾತ್ರಿ ಅಲ್ಲಿಗೆ ಬಂದನು. ಅರ್ಜುನನಿಂದ ಸ್ಮರಿಸಲ್ಪಟ್ಟ ದೇವೇಂದ್ರನು ಶಚೀದೇವಿಯಿಂದಲೂ ಮುನಿಗಳಿಂದಲೂ ಸಹಿತನಾಗಿ ಅಲ್ಲಿಗೆ ಬಂದನು. ಶ್ರೀಕೃಷ್ಣದೇವನು ಸಾತ್ಯಕಿಯಿಂದ ಸಹಿತನಾಗಿ ರಾತ್ರಿಕಾಲದಲ್ಲಿ ಯಾರಿಗೂ ತಿಳಿಯದಂತೆ ದೇವೇಂದ್ರನ ಜೊತೆಯಲ್ಲಿ ಮಾತಾಡಿ ವಿವಾಹ ಮಹೋತ್ಸವವನ್ನು ಮುನೀಂದ್ರರಿಂದ ನಡೆಯಿಸಿದನು.

## ಸುಭದ್ರಾ ಪಹಾರ

ಅನಂತರದಲ್ಲಿ ಶ್ರೀಕೃಷ್ಣದೇವನು ವಿವಾಹವನ್ನು ನಡೆಯಿಸಿ ಅರ್ಜುನನಿಗಾಗಿ ತನ್ನ ರಥವನ್ನು ಅಲ್ಲಿಯೇ ಬಿಟ್ಟು ದ್ವಾರಕೆಗೆ ಹೋದನು. ದೇವೇಂದ್ರನೂ ದೇವಲೋಕಕ್ಕೆ ಹಿಂದಿರುಗಿದನು. ಮರುದಿನ ಬೆಳಗಾದ ಕೂಡಲೇ ಅರ್ಜುನನು ತನ್ನ ಪತ್ನಿಯಾದ ಸುಭದ್ರೆಯೊಡನೆ ರಥವನ್ನು ಏರಿ ಕುಳಿತನು. ಸರ್ವಾಯುಧಗಳಿಂದಲೂ ಯುಕ್ತವಾದ ರಥದಲ್ಲಿ ಕುಳಿತ ಅರ್ಜುನನು ಧನುಸ್ಸನ್ನು ಕೈಯಲ್ಲಿ ಧರಿಸಿದನು. ಆಗ ದ್ವಾರಕಾನಗರದಲ್ಲಿರುವ ಸರ್ವರೂ ಕೂಗಲು ಆರಂಭಿಸಿದರು. ''ತ್ರಿದಂಡಿ ಸನ್ಯಾಸಿಯು ಕೈಯಲ್ಲಿ ಧನುಸ್ಸನ್ನು ಧರಿಸಿದವನಾಗಿ ಕನ್ಯೆಯನ್ನು ಅಪಹರಿಸಿಕೊಂಡು ಹೋಗುತ್ತಿರುವನು. ಇದೇನು ಅನ್ಯಾಯ'' ಎಂದರು. ಆಗ ಅರ್ಜುನನು ಕವಚವನ್ನೂ ದೇವೇಂದ್ರನಿಂದ ಕೊಡಲ್ಪಟ್ಟ ದಿವ್ಯವಾದ ಕುಂಡಲಗಳನ್ನೂ, ವಸ್ತ್ರಗಳನ್ನೂ ದಿವ್ಯವಾದ ರತ್ನಗಳನ್ನೂ ಆಭರಣಗಳನ್ನೂ ಧರಿಸಿದ್ದನು.

ಅವನನ್ನು ಪುರರಕ್ಷಕರೆಲ್ಲರೂ ಅಡ್ಡಗಟ್ಟಿದರು. ಆಗ ಅರ್ಜುನನು ಅಂಗೈ ಬೆರಳುಗಳು ಮುಂತಾದವುಗಳನ್ನು ರಕ್ಷಿಸುವ ಕೈಚೀಲಗಳನ್ನು ಧರಿಸಿದ್ದನು. ತನ್ನಲ್ಲಿರುವ ವಿದ್ಯಾಬಲದಿಂದಲೂ ಅಭ್ಯಾಸಬಲದಿಂದಲೂ ಧನುಸ್ಸಿನಿಂದ ಬಾಣಗಳ ಮಳೆಯನ್ನು ಸುರಿಸಲು ಆರಂಭಿಸಿದನು. ಆ ಬಾಣಗಳಿಂದ ಪೂರ್ವ ಮುಂತಾದ ದಿಕ್ಕುಗಳನ್ನೂ ಆಗ್ನೇಯ ಮುಂತಾದ ವಿದಿಕ್ಕುಗಳನ್ನೂ ಮುಚ್ಚಿದನು. ಎಲ್ಲೆಲ್ಲಿಯೂ ಎಡೆಯೇ ಇಲ್ಲದಂತೆ ಮಾಡಿದನು. ಆಗ ಸುಭದ್ರಾದೇವಿಯೇ ಸಾರಥ್ಯವನ್ನು ವಹಿಸಿದಳು. ಇದಕ್ಕಾಗಿಯೇ ಶ್ರೀಕೃಷ್ಣದೇವನು ಅವಳನ್ನು ಸಾರಥ್ಯದಲ್ಲಿ ಚೆನ್ನಾಗಿ ತಯಾರಿಸಿದ್ದನು. ಸುಭದ್ರಾದೇವಿಯು ಅರ್ಜುನನನ್ನು ನೋಡಿ ತನ್ನ ಬಂಧುಗಳಿಗೆ ಯಾರಿಗೂ ದೇಹದಲ್ಲಿ ಗಾಯವು ಏರ್ಪಡದಂತೆ ಮಾಡಬೇಕೆಂದು ಪ್ರಾರ್ಥಿಸಿದಳು. ಅವಳಿಗಾಗಿ ಯಾರ ದೇಹದಲ್ಲಿಯೂ ಯಾವ ವಿಧವಾದ

ಗಾಯವೂ ಏರ್ಪಡದಂತೆ ಮಾಡಿದನು. ಆಟವನ್ನು ಆಡಿದಂತೆ ಯುದ್ಧವನ್ನು ಮಾಡಿದನು. ಅದ್ಭುತವಾದ ತನ್ನ ವಿದ್ಯೆಯ ಬಲದಿಂದ ಬಾಣಗಳ ಸಮೂಹಗಳಿಂದ ಸರ್ವರನ್ನೂ ಹೆದರಿಸಿ ಓಡಿಸಿದನು. ದ್ವಾರಕೆಯಿಂದ ಹೊರಗೆ ಬಂದನು. ಅಲ್ಲಿ ವಿಪೃಥುವು ನಿಂತಿದ್ದನು. ಅವನು ಬಲರಾಮನಿಂದ ದ್ವಾರಕೆಯನ್ನು ರಕ್ಷಿಸುವುದಕ್ಕಾಗಿ ಆಜ್ಞಪ್ತನಾಗಿ ನಿಂತಿದ್ದನು. ಆ ವಿಪೃಥುವು ಬಲರಾಮನ ಆಜ್ಞೆಯನ್ನು ರಕ್ಷಿಸುವವನಂತೆ ನಟಿಸುತ್ತಾ ಸೈನ್ಯಸಮೇತನಾಗಿ ಅರ್ಜುನನನ್ನು ತಡೆಯುವುದಕ್ಕಾಗಿ ಪ್ರಯತ್ನಿಸಿದಂತೆ ತೋರಿಸಿದನು. ಶ್ರೀಕೃಷ್ಣದೇವನು ಅರ್ಜುನನನ್ನು ಅಡ್ಡಗಟ್ಟಬೇಡ ಎಂದು ಆಜ್ಞಾಪಿಸಿದನು. ಅವನ ಆಜ್ಞೆಯಲ್ಲಿ ವಿಶೇಷವಾದ ಗೌರವವುಳ್ಳವನಾಗಿ ಬಲವತ್ತರವಾದ ವಿರೋಧವನ್ನು ಮಾಡಲಿಲ್ಲ. ಹೆಸರಿಗಾಗಿ ಯುದ್ಧವನ್ನು ಮಾಡಿದನು.

ನಾಲ್ವತ್ತೊಂಭತ್ತು ಮರುತ್ತುಗಳ ಮಧ್ಯದಲ್ಲಿ 'ಸೌಮ್ಯ' ಎಂಬವನು ಶ್ರೀಕೃಷ್ಣದೇವನನ್ನು ಸೇವಿಸುವುದಕ್ಕಾಗಿ 'ವಿಪೃಥು' ಎಂಬ ಹೆಸರಿನಿಂದ ಹುಟ್ಟಿದ್ದನು. ಆ ವಿಪೃಥುವಿನ ದೇಹದಲ್ಲಿ ಯಾವ ಗಾಯವೂ ಏರ್ಪಡದಂತೆ ಅರ್ಜುನನು ಬಾಣಗಳ ಮಳೆಯನ್ನು ಅವನ ಮೇಲೆ ಸುರಿಸಿದನು. ವಿಪೃಥುವಿನ ರಥವನ್ನು ನಾಶ ಮಾಡಿದನು. ಅವನ ವಾಹನಗಳನ್ನೆಲ್ಲವನ್ನೂ ನಾಶಮಾಡಿದನು. ಅವನ ಸೈನ್ಯವನ್ನು ನಾಳಲಿಲ್ಲ. ಅರ್ಜುನನ ಬಾಣಗಳು ಅತಿ ತೀಕ್ಷ್ಣವಾದವುಗಳು. ಆದರೂ ದೇಹದಲ್ಲಿರುವ ಚರ್ಮವನ್ನೂ ಗಾಯವಾಗುವಂತೆ ಮಾಡಲಿಲ್ಲ. ಇದನ್ನು ನೋಡಿದ ವಿಪೃಥು ಅರ್ಜುನನಲ್ಲಿ ತುಂಬಾ ಸಂತೋಷವನ್ನು ತೋರಿಸಿದನು. ಅರ್ಜುನನ ಶಿಕ್ಷಣವು ಅತ್ಯಂತ ಮಾನ್ಯವೆಂದು ಅವನನ್ನು ತುಂಬಾ ಗೌರವಿಸಿದನು. ಅರ್ಜುನನಿಂದ ಆರಂಭದಲ್ಲಿಯೇ ವಿಪೃಥುವಿನ ಆಯುಧವು ಕತ್ತರಿಸಲ್ಪಟ್ಟಿತ್ತು. ಶ್ರೀಕೃಷ್ಣದೇವನ ಆಜ್ಞೆಯಂತೆ ಅರ್ಜುನನೊಡನೆ ಯುದ್ಧವನ್ನು ಮಾಡುತ್ತಿರುವಂತೆ ನಟಿಸುತ್ತಾ ಕೊನೆಗೆ ಪರಾಜಿತನಂತೆ ನಟಿಸುತ್ತಾ ವೇಗವಾಗಿ ಓಡಿಬಂದು ತಾನು ಪರಾಜಿತನಾದೆನೆಂದು ಬಲರಾಮನಿಗೆ ಎಲ್ಲಾ ವಿಷಯಗಳನ್ನೂ ತಿಳಿಸಿದನು. ಇದನ್ನು ಕೇಳಿದ ಬಲರಾಮನು ಪ್ರದ್ಯುಮ್ನ ಸಾಂಬ ಮುಂತಾದವರನ್ನು ಕರೆದನು. ಅರ್ಜುನನನ್ನು ಕೊಲ್ಲುವಂತೆ ಆಜ್ಞಾಪಿಸಿದನು.

ಶ್ರೀಕೃಷ್ಣದೇವನೂ ಈ ವಿಷಯವನ್ನು ವಿಪೃಥುವಿನಿಂದ ತಿಳಿದಂತೆ ನಟಿಸಿದನು. "ಸುಧರ್ಮಾ" ಎಂಬ ಸಭೆಗೆ ಬಂದನು. ತುಂಬಾ ದುಃಖಿತನಾದವನಂತೆ ನಟಿಸುತ್ತಾ ತಲೆಯನ್ನು ತಗ್ಗಿಸಿದನು. ಆಗ ಪ್ರದ್ಯುಮ್ನ ಮುಂತಾದವರು "ಈ ಕಪಟ ಸನ್ಯಾಸಿಯನ್ನು ಕೊಂದು ಸುಭದ್ರಾದೇವಿಯನ್ನು ಹಿಂದಿರುಗಿಸಿಕೊಂಡು ಬರುತ್ತೇವೆ" ಎಂದು ಗರ್ಜಿಸಿದರು. ಅವರ ಮಾತುಗಳನ್ನು ಕೇಳಿದ ಬಲರಾಮನು "ಕೃಷ್ಣನಿಂದ ಅನುಮತಿಯನ್ನು ಪಡೆದುಕೊಂಡು ನೀವೆಲ್ಲರೂ ಹೋಗಿರಿ. ನಿಮ್ಮ ಸ್ವೇಚ್ಛೆಯಿಂದ ಹೋಗಬೇಡಿರಿ. ಸ್ವೇಚ್ಛೆಯಿಂದ ಹೋದರೆ ನಿಮಗೆ ಜಯವು ಏರ್ಪಡಲಾರದು" ಎಂದನು. ಆಗ ಶ್ರೀಕೃಷ್ಣದೇವನು, "ಮೊದಲೇ ನಾನು ಈ ಸನ್ಯಾಸಿಯು ನಂಬಿಕೆಗೆ ಅರ್ಹನಲ್ಲವೆಂದೂ ಕನ್ಯೆಯರು ವಾಸಿಸುವ ಅಂತಃಪುರದಲ್ಲಿ ಇರಲು ಅನರ್ಹನೆಂದೂ ಹೇಳಿದೆನು. ಅವನನ್ನು ಕನ್ಯೆಯರು ಇರುವ ಅಂತಃಪುರದಲ್ಲಿ ಇಟ್ಟುಕೊಂಡರೆ ಏರ್ಪಡಬಹುದಾದ ಅನೇಕ ದೋಷಗಳನ್ನು ಹೇಳಿ ತೋರಿಸಿದೆನು. ನನ್ನ ಮಾತುಗಳನ್ನು ನನ್ನ ಅಣ್ಣನಾದ ಬಲರಾಮನು ಅಂಗೀಕರಿಸಲಿಲ್ಲ. ಅಣ್ಣನ ಮಾತುಗಳಿಗೆ ಮರ್ಯಾದೆಯನ್ನು ಕೊಡಬೇಕು. ಅದಕ್ಕಾಗಿ ಅವನು ಹೇಳಿದಂತೆ ನಡೆದುಕೊಂಡೆನು.

"ಕನ್ಯಾಗೃಹದಲ್ಲಿ ವಾಸಕ್ಕೆ ಅವಕಾಶವನ್ನು ಕೊಟ್ಟಿದ್ದರಿಂದ ಪತಿಯಾದವನು ಮಾಡಬೇಕಾದ ಕೆಲಸವನ್ನು ಈ ಸನ್ಯಾಸಿಯು ಮಾಡಿದನು. ಈ ಸನ್ಯಾಸಿಯು ಕನ್ಯೆಯನ್ನು ಅಪಹಾರ ಮಾಡಿಬಿಟ್ಟನು. ಮೊದಲೇ ಇದನ್ನು ನಿಲ್ಲಿಸಲು

ನಮ್ಮಿಂದ ಸಾಧ್ಯವಾಗಲಿಲ್ಲ. ಆದರೂ ನಮ್ಮ ಮುಂದೆ ನಮಗೆ ತಿಳಿದು ಕನ್ಯೆಯನ್ನು ಅಪಹರಿಸಲಿಲ್ಲ. ಆದ್ದರಿಂದ ನಮಗೆ ಮಾನಹಾನಿಯಾಗುವ ಸಂಭವವೇ ಇಲ್ಲ. ಮಹಾಮಾನಿಯಾದ ಅರ್ಜುನನು ನಾವೆಲ್ಲರೂ ಇರುವಾಗ ಸುಭದ್ರೆಯನ್ನು ಅಪಹರಿಸಿದ್ದರೆ ಆಗ ಅವನಿಗೆ ಮಾನವು ಬರುತ್ತಿತ್ತು. ನಾವೆಲ್ಲರೂ ಇಲ್ಲದಿರುವಾಗ ಸುಭದ್ರೆಯನ್ನು ಅಪಹರಿಸಿರುವನು. ಇದರಿಂದ ಮಾನವು ಹೋಗಿದ್ದರೆ ಅವನಿಗೆ ಅಧಿಕವಾಗಿ ಹೋಗಿರಬೇಕು.

"ಸುಭದ್ರೆಯು ಒಬ್ಬ ಕನ್ಯೆ ಯಾಗಿರುವಳು. ಅವಳನ್ನು ಯಾರಿಗಾದರೂ ಒಬ್ಬ ವರನಿಗೆ ಕೊಟ್ಟು ವಿವಾಹವನ್ನು ಮಾಡಲೇಬೇಕು. ಅವಳನ್ನು ಅರ್ಜುನನು ಅಪಹರಿಸಿಕೊಂಡು ಹೋಗಿರುವನು. ಅರ್ಜುನನಿಗೆ ಬಲ ಮುಂತಾದ ಗುಣಗಳಿಂದ ಸಮಾನನು ಯಾರೂ ಇಲ್ಲ. ಅವನು ಕುರುರಾಜನ ವಂಶದಲ್ಲಿ ಹುಟ್ಟಿದವನು. ಪೂರ್ಣಶಕ್ತಿಯಿಂದ ಯುಕ್ತನಾಗಿರುವ ಶ್ರೀವೇದವ್ಯಾಸದೇವನ ಮಗನ ಮಗನು. ನಮ್ಮ ಸೋದರ ಅತ್ತೆಯ ಮಗನು. ಮಹಾವೀರನು, ಗುಣವಂತನು, ಇಂದ್ರನ ಮಗನು. ಇಂತಹ ವರನನ್ನು ನಾವೇ ಹುಡುಕಿ ಸುಭದ್ರೆಯನ್ನು ಅವನಿಗೆ ಕೊಟ್ಟು ವಿವಾಹವನ್ನು ನಾವೆಲ್ಲರೂ ಮಾಡಬೇಕು. ಹೀಗಿರುವಾಗ ಅವನೇ ಬಂದು ಅವಳನ್ನು ಕರೆದುಕೊಂಡು ಹೋದದ್ದು ನಾವೇ ಅಪೇಕ್ಷಿಸಬೇಕಾದ ವಿಷಯವಾಗಿದೆ. ಆದ್ದರಿಂದ ನಮಗೆ ಯಾವ ಹಾನಿಯೂ ಏರ್ಪಡಲಿಲ್ಲ.

"ಒಂದು ಪಕ್ಷದಲ್ಲಿ ಅವನನ್ನು ಬೆನ್ನಟ್ಟಿಕೊಂಡು ಹೋದ ನಿಮಗೆ ಪರಾಜಯವು ಏರ್ಪಟ್ಟರೆ ನಿಮ್ಮೆಲ್ಲರ ಕೀರ್ತಿಗೂ ಕಳಂಕವು ಏರ್ಪಡುವುದರಲ್ಲಿ ಸಂಶಯವಿಲ್ಲ. ನೀವು ಜಯಿಸಿ ಸುಭದ್ರೆಯನ್ನು ಬಿಡಿಸಿಕೊಂಡು ಬಂದರೆ ನಿಮ್ಮ ಕೀರ್ತಿಗೆ ಕಳಂಕವು ಬರಲಾರದು. ಆದರೆ ಅರ್ಜುನನಿಂದ ಬಲಾತ್ಕಾರದಿಂದ ಸೆಳೆದುಕೊಂಡು ಹೋಗಲ್ಪಟ್ಟ ಸುಭದ್ರೆಯನ್ನು ಇನ್ನೊಬ್ಬನು ಮದುವೆ ಮಾಡಿಕೊಳ್ಳಲಾರನು. ಆದ್ದರಿಂದ ನೀವು ಅರ್ಜುನನನ್ನು ಬೆನ್ನಟ್ಟಿಕೊಂಡು ಹೋಗುವುದು ನನಗೆ ಯೋಗ್ಯವಾಗಿ ತೋರುವುದಿಲ್ಲ." ಎಂದನು.

## ಬಲರಾಮನ ಉಪದೇಶ

ಬಲರಾಮನು ಶ್ರೀಕೃಷ್ಣದೇವನ ಈ ಮಾತುಗಳನ್ನು ಕೇಳಿದನು. ಪ್ರದ್ಯುಮ್ನ ಮುಂತಾದವರನ್ನು ನೋಡಿ ಹೇಳಿದನು. "ಎಲೈ ಯಾದವರಿರಾ, ನೀವು ಯಾರೂ ಅರ್ಜುನನನ್ನು ಬೆನ್ನಟ್ಟಿಕೊಂಡು ಹೋಗಬೇಡಿರಿ. ಶ್ರೀಕೃಷ್ಣದೇವನ ಅಭಿಪ್ರಾಯವು ತಿಳಿಯಿತು. ಇವನ ಅಭಿಪ್ರಾಯವನ್ನು ತಿಳಿದು ಸರ್ವರೂ ಅದರಂತೆ ನಡೆಯಬೇಕು. ಅವನ ಅಭಿಪ್ರಾಯಕ್ಕೆ ವಿರುದ್ಧವಾಗಿ ನಡೆದುಕೊಂಡರೆ ಜಯವು ಖಂಡಿತವಾಗಿ ನಿಮಗೆ ಸಿಗಲಾರದು. ಅವನ ಅಭಿಪ್ರಾಯದಂತೆ ನಡೆದರೆ ನಿಮಗೆಲ್ಲರಿಗೂ ಜಯವೂ ಶುಭವೂ ಶಾಂತಿಯೂ ಪರಲೋಕದಲ್ಲಿ ಮುಕ್ತಿಯೂ ಏರ್ಪಡುತ್ತದೆ. ಶ್ರೀಕೃಷ್ಣದೇವನು ಈಗ ಅರ್ಜುನನಲ್ಲಿ ವಿಶೇಷಾನುಗ್ರಹವನ್ನು ಮಾಡಿರುವನು. ಆದ್ದರಿಂದ ಈಗ ಅರ್ಜುನನು ಯಾರಿಂದಲೂ ಪರಾಜಯವನ್ನು ಹೊಂದುವುದಿಲ್ಲ. ನೀವು ಹೋಗಬೇಡಿರಿ"ಎಂದನು. ಅವರೆಲ್ಲರೂ ನಿಂತರು.

ಅರ್ಜುನನು ಶ್ರೀಕೃಷ್ಣದೇವನ ರಥದಲ್ಲಿಯೇ ಕುಳಿತವನಾಗಿ ತನ್ನ ಸಹೋದರರಿಂದ ರಕ್ಷಿಸಲ್ಪಟ್ಟ ಇಂದ್ರಪ್ರಸ್ಥ ನಗರವನ್ನು ಪ್ರವೇಶಿಸಿದನು. ಅತ್ಯಂತ ಸಂತುಷ್ಟರಾದ ಸಹೋದರರೆಲ್ಲರೂ ಅವನನ್ನು ತುಂಬಾ ಗೌರವಿಸಿದರು.

# ಅರ್ಜುನನ ಸತ್ಕಾರ

ಬಲರಾಮನ ಉಪದೇಶದಿಂದ ಸಕಲ ಯಾದವರೂ ಶಾಂತರಾದರು. ಶ್ರೀಕೃಷ್ಣದೇವನು ಬಲರಾಮನಿಂದಲೂ ಸಕಲ ಯಾದವರಿಂದಲೂ ಸಹಿತನಾಗಿ ರತ್ನಗಳಿಂದ ತುಂಬಲ್ಪಟ್ಟ ಅಸಂಖ್ಯ ಬಂಡಿಗಳಿಂದ ಯುಕ್ತನಾಗಿ ಇಂದ್ರಪ್ರಸ್ಥನಗರಕ್ಕೆ ಬಂದನು. ದ್ರೌಪದೀದೇವಿಗೂ ಸುಭದ್ರಾದೇವಿಗೂ ಅಸಂಖ್ಯ ರತ್ನಾಭರಣಗಳನ್ನು ಕೊಟ್ಟನು. ಪಾಂಡವರಿಂದ ವಿಶೇಷವಾಗಿ ಪೂಜಿಸಲ್ಪಟ್ಟವನಾಗಿ ಅನೇಕ ಮಾಸಗಳ ವರೆಗೆ ಅಲ್ಲಿಯೇ ವಾಸಿಸಿದನು. ಬಲರಾಮನು ಕೆಲವು ತಿಂಗಳುಗಳ ಅನಂತರದಲ್ಲಿ ದ್ವಾರಕಾಪಟ್ಟಣಕ್ಕೆ ಹಿಂದಿರುಗಿದನು. ಶ್ರೀಕೃಷ್ಣದೇವನು ಅನೇಕ ವರ್ಷಗಳವರೆಗೆ ಪಾಂಡವರಿಗೆ ಅಧಿಕವಾದ ಪ್ರೀತಿಯನ್ನು ಕೊಡುತ್ತಾ ಅಲ್ಲಿಯೇ ವಾಸಿಸಿದನು.

# ಪಾಂಡವರಿಗೆ ಪುತ್ರೋತ್ಸವ

ಐವರು ಪಾಂಡವರಿಗೆ ದ್ರೌಪದೀದೇವಿಯಲ್ಲಿ ಗುಣವಂತರಾದ ಐವರು ಮಕ್ಕಳು ಹುಟ್ಟಿದರು. ಆ ಐವರೂ ವಿಶ್ವೇದೇವತೆಗಳ ಅವತಾರವಾಗಿದ್ದರು. ಧರ್ಮರಾಜನಿಗೆ ದ್ರೌಪದೀದೇವಿಯಲ್ಲಿ ಪ್ರತಿವಿಂಧ್ಯ ಎಂಬ ಮಗನು ಹುಟ್ಟಿದನು. ಅವನಲ್ಲಿ ಚಿತ್ರರಥ ಎಂಬ ಗಂಧರ್ವನ ವಿಶೇಷ ಸನ್ನಿಧಾನವಿತ್ತು. ಭೀಮಸೇನದೇವರಿಗೆ ದ್ರೌಪದೀದೇವಿಯಲ್ಲಿ ಶ್ರುತಸೋಮ ಎಂಬ ಮಗನು ಹುಟ್ಟಿದನು. ಅವನಲ್ಲಿ ಅಭಿತಾಮ್ರ ಗಂಧರ್ವನ ವಿಶೇಷ ಸನ್ನಿಧಾನವಿತ್ತು. ಅರ್ಜುನನಿಗೆ ದ್ರೌಪದೀದೇವಿಯಲ್ಲಿ ಶ್ರುತಕೀರ್ತಿ ಎಂಬ ಮಗನು ಹುಟ್ಟಿದನು. ಅವನಲ್ಲಿ ಕಿಶೋರ ಎಂಬ ಗಂಧರ್ವನ ವಿಶೇಷ ಸನ್ನಿಧಾನವಿತ್ತು. ನಕುಲನಿಗೆ ದ್ರೌಪದೀದೇವಿಯಲ್ಲಿ ಶ್ರುತಾನೀಕ ಎಂಬ ಮಗನು ಹುಟ್ಟಿದನು. ಅವನಲ್ಲಿ ಗೋಪಾಲ ಎಂಬ ಗಂಧರ್ವನ ವಿಶೇಷ ಸನ್ನಿಧಾನವಿತ್ತು. ಸಹದೇವನಿಗೆ ದ್ರೌಪದೀದೇವಿಯಲ್ಲಿ ಶ್ರುತಕ್ರಿಯ ಎಂಬ ಮಗನು ಹುಟ್ಟಿದನು. ಅವನಲ್ಲಿ ಬಲ ಎಂಬ ಗಂಧರ್ವನ ವಿಶೇಷ ಸನ್ನಿಧಾನವಿತ್ತು.

ಭೀಮಸೇನದೇವನ ಮಗನಾಗಿರುವ ಶ್ರುತಸೋಮನು ಹುಟ್ಟಿದ ಕೂಡಲೇ ಸುಭದ್ರಾದೇವಿಯಲ್ಲಿ ಅಭಿಮನ್ಯು ಎಂಬ ಮಗನು ಹುಟ್ಟಿದನು. ಆ ಅಭಿಮನ್ಯು ಬುಧನ ಅವತಾರವಾಗಿದ್ದನು. ಅವನಲ್ಲಿ ಚಂದ್ರನ ವಿಶೇಷ ಸನ್ನಿಧಾನವಿತ್ತು. ಯಮಧರ್ಮರಾಜ, ವಾಯುದೇವರು, ದೇವೇಂದ್ರ, ಅಶ್ವಿನೀ ದೇವತೆಗಳು, ಶ್ರೀಕೃಷ್ಣದೇವ, ಇವರ ವಿಶೇಷ ಸನ್ನಿಧಾನವೂ ಈ ಅಭಿಮನ್ಯುವಿನಲ್ಲಿತ್ತು. ಪಾಂಡವರ ಎಲ್ಲಾ ಮಕ್ಕಳೂ ಮಹಾವೀರರು. ಸುಂದರವಾದ ರೂಪವುಳ್ಳವರು. ಸಕಲ ಶಾಸ್ತ್ರಗಳಲ್ಲಿಯೂ ಅತ್ಯಂತ ನಿಪುಣರು ಮತ್ತು ನಾರಾಯಣನ ಅತ್ಯಂತ ಭಕ್ತರು. ಈ ಮಕ್ಕಳುಗಳಿಂದ ಪಾಂಡವರು ತುಂಬಾ ಸಂತೋಷಿಸಿದರು. ಎಲ್ಲಾ ಮಕ್ಕಳುಗಳಿಗಿಂತ ಅಧಿಕವಾದ ಸಂತೋಷವನ್ನು ಅಭಿಮನ್ಯುವಿನಿಂದ ಹೊಂದಿದರು.

# ಅಗ್ನಿಯಿಂದ ಖಾಂಡವವನ ಯಾಚನೆ

ಒಂದು ದಿನ ಶ್ರೀಕೃಷ್ಣದೇವನೂ ಅರ್ಜುನನೂ ಖಾಂಡವ ಎಂಬ ವನಕ್ಕೆ ಕ್ರೀಡೆಗಾಗಿ ಹೋಗಿದ್ದರು. ಆಗ ಅರ್ಜುನನೊಡನೆ ಸುಭದ್ರಾದೇವಿಯೂ ಶ್ರೀಕೃಷ್ಣದೇವನೊಡನೆ ಸತ್ಯಭಾಮಾದೇವಿಯೂ ಹೋಗಿದ್ದರು. ಪರಿಚಾರಕರೆಲ್ಲರೂ ಅವರಿಬ್ಬರೊಡನೆ ಅಲ್ಲಿಗೆ ಹೋಗಿದ್ದರು. ಗಂಧರ್ವಶ್ರೇಷ್ಠರೆಲ್ಲರೂ ಇವರಿಬ್ಬರನ್ನು

ಹಿಂಬಾಲಿಸಿಕೊಂಡು ಹೋಗಿ ಗಾಯನ ಮಾಡುತ್ತಿದ್ದರು. ಮೆಲ್ಲನೆ ಗಾಳಿಯ ಬೀಸುತಿತ್ತು, ಪುಷ್ಪಗಳ ಅಸಂಖ್ಯವಾದ ಗೊಂಚಲುಗಳು ಆ ಗಾಳಿಯಿಂದ ಅಲ್ಲಾಡುತ್ತಿದ್ದವು. ಇಂತಹ ಸನ್ನಿವೇಶದಲ್ಲಿ ಯಮುನಾನದಿಯ ಜಲದಲ್ಲಿ ಶ್ರೀಕೃಷ್ಣದೇವನೂ ಅರ್ಜುನನೂ ಪತ್ನಿಯರೊಡನೆ ವಿಹರಿಸುತ್ತಿದ್ದರು.

ಆಗ ಅಗ್ನಿಯು ಒಬ್ಬ ಬ್ರಾಹ್ಮಣನ ರೂಪವನ್ನು ಸ್ವೀಕರಿಸಿದವನಾಗಿ ಇವರಿಬ್ಬರ ಮುಂದೆ ಬಂದು ನಿಂತನು. ಶ್ರೀಕೃಷ್ಣದೇವನನ್ನು ನಮಸ್ಕರಿಸಿದನು. "ನಾನು ಈ ಅರ್ಜುನನಲ್ಲಿ ಆಹಾರವನ್ನು ಕೇಳುವೆನು. ಆ ಆಹಾರವನ್ನು ಅವನಿಂದ ಕೊಡಿಸು" ಎಂದು ಬೇಡಿದನು. ಆಗ ಅರ್ಜುನನು "ನಿನಗೆ ಎಂತಹ ಆಹಾರವು ಬೇಕು. ಅದನ್ನು ಕೊಡುವೆನು" ಎಂದನು. "ನಾನು ಅಗ್ನಿಯು, ವನವನ್ನು ಆಹಾರವಾಗಿ ಬೇಡುವೆನು" ಎಂದನು. ನಾನು ಯಜ್ಞಗಳಲ್ಲಿ ಕೊಟ್ಟಿರುವ ಹವಿಸ್ಸುಗಳನ್ನು ಎಲ್ಲಾ ದೇವತೆಗಳಿಗೂ ತೆಗೆದುಕೊಂಡು ಹೋಗಿ ಕೊಡುತ್ತಿದ್ದೆನು. ಆ ಕೆಲಸಕ್ಕೆ ಶುಲ್ಕವಾಗಿ "ಪ್ರಯಾಜ" "ಅನುಯಾಜ" ಎಂಬ ಆಹುತಿಗಳನ್ನು ಕೊಡಬೇಕೆಂದು ದೇವತೆಗಳಲ್ಲಿ ಬೇಡಿದೆನು. ಶುಲ್ಕವನ್ನು ಕೇಳಿದ್ದಕ್ಕಾಗಿ ದೇವತೆಗಳಿಗೆ ಕೋಪವು ಬಂತು. ಅವರೆಲ್ಲರೂ "ನಿನ್ನ ಬಲವು ಕಮ್ಮಿಯಾಗಲಿ" ಎಂದು ಶಪಿಸಿ ಆಹುತಿಯನ್ನು ಕೊಟ್ಟರು.

ಬ್ರಹ್ಮದೇವನನ್ನು ನೋಡಿ ನಮಸ್ಕರಿಸಿ ನನ್ನ ಬಲವು ಪುನಃ ಪೂರ್ತಿಯಾಗುವ ಬಗೆ ಹೇಗೆ? ಎಂದು ಕೇಳಿದೆನು. "ನೀನು ಖಾಂಡವ ಎಂಬ ವನವನ್ನು ಯಾವಾಗ ಭಕ್ಷಿಸುತ್ತೀಯೋ ಆವಾಗ ನಿನಗೆ ಬಲವು ಪೂರ್ಣವಾಗುತ್ತದೆ" ಎಂದು ಬ್ರಹ್ಮದೇವನು ಹೇಳಿದನು.

ಈ ವನವು "ಖಾಂಡವ" ಎಂದು ಪ್ರಸಿದ್ಧವಾಗಿದೆ. ಈ ವನಕ್ಕೆ ದೇವೇಂದ್ರನು ಅಧಿಪತಿಯಾಗಿರುವನು. ನಾನು ಈ ವನವನ್ನು ಭಕ್ಷಣ ಮಾಡಲು ಆರಂಭಿಸಿದರೆ ದೇವೇಂದ್ರನು ನನಗೆ ವಿಘ್ನವನ್ನು ಮಾಡುತ್ತಾನೆ. ನಾನು ಯಾವ ವಿಘ್ನವೂ ಇಲ್ಲದೆ ಈ ವನವನ್ನು ಭಕ್ಷಿಸಬೇಕು. ಅದಕ್ಕಾಗಿ ನಿಮ್ಮಿಬ್ಬರಲ್ಲಿಗೆ ಬಂದಿರುವೆನು ಎಂದು ಬ್ರಾಹ್ಮಣರೂಪಿಯಾದ ಅಗ್ನಿದೇವನು ಹೇಳಿದನು. ಈ ಮಾತುಗಳನ್ನು ಅರ್ಜುನನೇ ಕೇಳಿದನು. "ನನ್ನಲ್ಲಿ ರಥ ಮತ್ತು ಧನುಸ್ಸುಗಳಿದ್ದರೆ ದೇವೇಂದ್ರನ ಜೊತೆಯಲ್ಲಿ ಯುದ್ಧವನ್ನು ಮಾಡಿ ನಿನಗೆ ಈ ವನವನ್ನು ಆಹುತಿಯಾಗಿ ಕೊಡುವೆನು" ಎಂದನು.

ಅರ್ಜುನನಲ್ಲಿ ವಿಷ್ಣುವಿನ ಬ್ರಹ್ಮನ ಮತ್ತು ವಾಯುವಿನ ವಿಶೇಷ ಸನ್ನಿಧಾನವುಳ್ಳ ನರನ ವಿಶೇಷಾವೇಶವಿದೆ. ಆದ್ದರಿಂದ ಅರ್ಜುನನ ಮೂಲರೂಪವಾದ ದೇವೇಂದ್ರನನ್ನು ಜಯಿಸುವ ಶಕ್ತಿಯು ಅವನಲ್ಲಿತ್ತು. ದೇವೇಂದ್ರನಿಗೆ ಅರ್ಜುನನ ವಿಷಯದಲ್ಲಿ ಮೊದಲು ಕೋಪವು ಏರ್ಪಟ್ಟಿದ್ದರೂ ಅರ್ಜುನರೂಪಿಯಾದ ತನ್ನಿಂದಲೇ ಕೊಡಲ್ಪಟ್ಟ ಅನ್ನವನ್ನು ತಾನು ಕಿತ್ತುಕೊಳ್ಳುವುದು ನ್ಯಾಯವಲ್ಲ ಎಂದು ದೇವೇಂದ್ರನು ತೀರ್ಮಾನಿಸಿದವನಾಗಿ ಅರ್ಜುನನಲ್ಲಿ ಕುಪಿತನಾಗಲಿಲ್ಲ. ಅದು ಮಾತ್ರ ವಲ್ಲ. ಶ್ರೀಕೃಷ್ಣದೇವನಿಂದ ಆಜ್ಞಪ್ತನಾಗಿ ಅರ್ಜುನನು ವನವನ್ನು ಅಗ್ನಿದೇವನಿಗೆ ದಾನಮಾಡಿದ್ದರೆ ದೇವೇಂದ್ರನ ಜೊತೆಯಲ್ಲಿಯೂ ಅರ್ಜುನನು ಯುದ್ಧವನ್ನು ಮಾಡಲು ಶಕ್ತನು. ಹಾಗೆ ಯುದ್ಧವನ್ನು ಮಾಡುವುದರಲ್ಲಿ ತಪ್ಪಿಲ್ಲ. ಅದಕ್ಕಾಗಿ ಅಗ್ನಿಯು ಅರ್ಜುನನನ್ನು, ಶ್ರೀಕೃಷ್ಣದೇವನನ್ನೂ ಪ್ರತ್ಯೇಕವಾಗಿ ಪ್ರಾರ್ಥಿಸಿದನು.

ಅಗ್ನಿಯು ಬದರೀಕ್ಷೇತ್ರದಲ್ಲಿರುವ ನಾರಾಯಣನ ಸಮೀಪಕ್ಕೆ ಶ್ರೀಕೃಷ್ಣದೇವನನ್ನು ಕರೆದುಕೊಂಡು

ಹೋದನು. ನಾರಾಯಣನ ಕೈಯಲ್ಲಿದ್ದ ಸುದರ್ಶನಚಕ್ರವನ್ನು ನಾರಾಯಣನಲ್ಲಿ ಪ್ರಾರ್ಥಿಸಿ ತೆಗೆದುಕೊಂಡನು. ಅದನ್ನು ಶ್ರೀಕೃಷ್ಣದೇವನ ಕೈಯಲ್ಲಿ ಕೊಟ್ಟನು. ಶ್ರೀಹರಿಯ ಆಯುಧಗಳು ಅನಂತರೂಪಗಳನ್ನು ಸ್ವೀಕರಿಸುತ್ತವೆ. ಹಿಂದೆ ಗೋಮಂತಪರ್ವತದಲ್ಲಿ ಶ್ರೀಕೃಷ್ಣದೇವನಿದ್ದಾಗ ಸುದರ್ಶನಚಕ್ರವು ಅವನಲ್ಲಿ ಬಂತೆಂದು ಹೇಳಿದ್ದೆವು. ಅದೇ ಸುದರ್ಶನಚಕ್ರವು ಈಗ ನಾರಾಯಣನ ಕೈಯಲ್ಲಿಯೂ ಇತ್ತು. ಅದನ್ನು ಅಗ್ನಿದೇವನು ಪ್ರಾರ್ಥಿಸಿ ತೆಗೆದುಕೊಂಡುನು. ಶ್ರೀಕೃಷ್ಣದೇವನ ಕೈಯಲ್ಲಿ ಕೊಟ್ಟನು. ಅಗ್ನಿದೇವನಿಂದ ಕೊಡಲ್ಪಟ್ಟ ಸುದರ್ಶನಚಕ್ರವೂ ಶ್ರೀಕೃಷ್ಣದೇವನ ಕೈಯಲ್ಲಿದ್ದ ಸುದರ್ಶನಚಕ್ರವೂ ಒಂದೇ ಆಯಿತು.

ಸುದರ್ಶನಚಕ್ರದಂತೆ ದೇವತೆಗಳಲ್ಲಿರುವ ಗಾಂಡೀವ ಮುಂತಾದ ಆಯುಧಗಳು ನಾನಾ ವಿಧವಾದ ರೂಪಗಳನ್ನು ಸ್ವೀಕರಿಸುತ್ತವೆ. ಪೂರ್ವದಲ್ಲಿ ಬ್ರಹ್ಮದೇವನ ಕೈಯಲ್ಲಿ ಗಾಂಡೀವ ಎಂಬ ಧನುಸ್ಸು ಇತ್ತು. ಆ ಧನುಸ್ಸಿನಿಂದ ಬ್ರಹ್ಮದೇವನು ಸರ್ವರನ್ನೂ ಸಂಹರಿಸಿದನು. ಆ ಧನುಸ್ಸಿನ ಒಂದು ಅಂಶವನ್ನು ಅಂದರೆ ಒಂದು ರೂಪವನ್ನು ರುದ್ರದೇವನಿಗೆ ಬ್ರಹ್ಮದೇವನು ಕೊಟ್ಟನು. ರುದ್ರದೇವನು ತನ್ನ ಗಾಂಡೀವ ಧನುಸ್ಸಿನ ಒಂದು ಅಂಶವನ್ನು ದೇವೇಂದ್ರನಿಗೆ ಕೊಟ್ಟನು. ಬ್ರಹ್ಮನಿಂದ ಆರಂಭಿಸಿ ವರುಣನ ವರೆಗಿನ ಸರ್ವರೂ ಮೂರು ಲೋಕಗಳಲ್ಲಿರುವ ಸರ್ವರನ್ನೂ ಆ ಧನುಸ್ಸಿನ ಸಹಾಯದಿಂದ ಬ್ರಹ್ಮದೇವನ ಅನುಗ್ರಹದಿಂದ ಜಯಿಸಿದರು. ಆ ಧನುಸ್ಸನ್ನು ಬ್ರಹ್ಮ ಮುಂತಾದವರನ್ನು ಬಿಟ್ಟು ಬೇರೆ ಯಾರಿಂದಲೂ ಎತ್ತಲು ಸಾಧ್ಯವಿಲ್ಲ. ಆ ಧನುಸ್ಸನ್ನು ಸ್ವೀಕರಿಸಿದವನು ಸಕಲ ಪ್ರಪಂಚವನ್ನೂ ಜಯಿಸುವನು. ಒಂದು ಲಕ್ಷ ಭಾರದಷ್ಟು ಭಾರವಾಗಿರುತ್ತದೆ. ಯಾವಾಗಲೂ ಆ ಧನುಸ್ಸನ್ನು ಧರಿಸಿದವನಿಗೆ ಶುಭವೇ ಏರ್ಪಡುತ್ತದೆ.

ಅರ್ಜುನನು ರಥವನ್ನು ಅಗ್ನಿದೇವನಲ್ಲಿ ಕೇಳಿದ್ದನು. ಶ್ರೀರಾಮದೇವನು ರಾವಣನನ್ನು ಸಂಹರಿಸುವಾಗ ಉಪಯೋಗಿಸಿದ ರಥವನ್ನು ಕೊಟ್ಟನು. ಆ ರಥವು ಬಿಳಿಯ ಕುದುರೆಗಳಿಂದ ಯುಕ್ತವಾಗಿತ್ತು. ಯಾವಾಗಲೂ ಜಯವನ್ನೇ ಕೊಡತಕ್ಕದ್ದು. ಆ ರಥದಲ್ಲಿ ಯುದ್ಧವನ್ನು ಮಾಡುವುದಕ್ಕಾಗಿ ಎರಡು ಬತ್ತಳಿಕೆಗಳನ್ನು ಕೊಟ್ಟನು. ಆ ಬತ್ತಳಿಕೆಗಳಲ್ಲಿರುವ ಬಾಣಗಳನ್ನು ಎಷ್ಟು ತೆಗೆದರೂ ಅಕ್ಷಯವಾಗುತ್ತಿದ್ದವು. ಆ ರಥದಲ್ಲಿ ಹನುಮಂತದೇವರೇ ಧ್ವಜಸ್ಥಾನದಲ್ಲಿದ್ದರು. ಶ್ರೀರಾಮದೇವನು ರಾವಣನನ್ನು ಸಂಹರಿಸುವಾಗ ದೇವೇಂದ್ರನು ಶ್ರೀರಾಮದೇವನಿಗಾಗಿ ತನ್ನ ರಥವನ್ನು ಕಳುಹಿಸಿದನು. ಆಗ ಹನುಮಂತದೇವರೇ ಧ್ವಜಸ್ಥಾನದಲ್ಲಿ ಕುಳಿತರು. ರಾಮಾವತಾರವು ಮುಗಿಯುವಾಗ ದೇವೇಂದ್ರನು ಈ ರಥವನ್ನು ವರುಣನ ವಶದಲ್ಲಿ ಕೊಟ್ಟಿದ್ದನು. ಅರ್ಜುನನಿಗಾಗಿ ವರುಣನಲ್ಲಿ ಕೊಟ್ಟಿದ್ದ ರಥವನ್ನು ವರುಣನಿಂದ ಅಗ್ನಿಯು ತೆಗೆದುಕೊಂಡು ಅರ್ಜುನನಿಗೆ ಕೊಟ್ಟನು. ಶ್ರೀಹನುಮಂತದೇವರು ಜಯರೂಪಿಯಾಗಿರುವರು. ಶ್ರೀಹನುಮಂತದೇವರು ಧ್ವಜದಲ್ಲಿರುವಾಗ ಈ ರಥದಲ್ಲಿರುವ ವೀರನನ್ನು ಯಾರೂ ಜಯಿಸಲು ಸಾಧ್ಯವಿಲ್ಲ. ಮೇಲೆ ಹೇಳಿರುವ ರಥವು ಕುದುರೆಗಳು ಬತ್ತಳಿಕೆಗಳು ಧ್ವಜವು ದಿವ್ಯವು ಅಭೇದ್ಯವೂ ಆಗಿರುತ್ತವೆ. ಗಾಂಡೀವಧನುಸ್ಸಿನಲ್ಲಿರುವ ಜ್ಯಾ ಅಂದರೆ ಹಗ್ಗವು ಮಿಂಚಿನಂತೆ ಹೊಳೆಯುತ್ತಿತ್ತು.

ಗಾಂಡೀವಧನುಸ್ಸನ್ನು ಎತ್ತುವುದಕ್ಕೆ ಬ್ರಹ್ಮದೇವನು ಒಬ್ಬನೇ ಶಕ್ತನು. ಬೇರೆ ಯಾರಿಂದಲೂ ಶಕ್ಯವಿಲ್ಲ. ಆದರೆ

ಬ್ರಹ್ಮದೇವನ ವರದಿಂದ ರುದ್ರ, ದೇವೇಂದ್ರ, ಚಂದ್ರ, ವರುಣ, ಮುಂತಾದವರು ಎತ್ತಿದರು. ಅರ್ಜುನನೂ ಶ್ರೀಕೃಷ್ಣದೇವನ ಅನುಗ್ರಹದಿಂದಲೇ ಎತ್ತುವುದಕ್ಕೆ ಸಾಧ್ಯವಾಯಿತು. ದೇವೇಂದ್ರನಿಗೆ ಗಾಂಡೀವ ಎಂಬ ಧನುಸ್ಸನ್ನು ಎತ್ತುವುದಕ್ಕೆ ಬ್ರಹ್ಮದೇವನು ಕೊಟ್ಟಿರುವ ವರದಿಂದ ಸಾಧ್ಯವಾಗಿತ್ತು. ದೇವೇಂದ್ರನ ಅವತಾರವಾಗಿರುವ ಅರ್ಜುನನಿಗೂ ಈ ಕಾರಣದಿಂದಲೇ ಎತ್ತುವುದಕ್ಕೆ ಸಾಧ್ಯವಾಯಿತು.

## ಖಾಂಡವವನ ದಹನ

ಅರ್ಜುನನಿಗೆ ರಥವೂ ಗಾಂಡೀವಧನುಸ್ಸೂ ಸಿಕ್ಕಿದ ಕೂಡಲೇ ಅರ್ಜುನನು ಹನ್ನೆರಡು ಯೋಜನ ಉದ್ದವೂ ಅಗಲವೂ ಆಗಿರುವ ಶರಶಾಲೆಯನ್ನು ಅಂದರೆ ಬಾಣಗಳಿಂದ ನಿರ್ಮಿತವಾದ ಪಟ್ಟಣವನ್ನು ಅಸ್ತ್ರಗಳಿಂದ ನಿರ್ಮಿಸಿದನು. ಆ ಪಟ್ಟಣದ ಒಳಗೆ ಇರುವ ಯಾವ ಪ್ರಾಣಿಯೂ ಹೊರಗೆ ಹೋಗದಂತೆ ಮಾಡಿದನು. ಅಗ್ನಿಯು ಖಾಂಡವವನವನ್ನು ಅಧಿಕವಾದ ಜ್ವಾಲೆಯಿಂದ ಯುಕ್ತನಾಗಿ ಭಕ್ಷಿಸಿದನು. ದೇವೇಂದ್ರನು ತನ್ನ ವನವನ್ನು ಅಗ್ನಿದೇವನು ಭಕ್ಷಿಸುತ್ತಿರುವುದನ್ನು ನೋಡಿದನು. ಅವನ ಮನಸ್ಸಿನಲ್ಲಿ ಕಳವಳವು ಏರ್ಪಟ್ಟಿತು. ಆಗ ರಥದ ಅಚ್ಚು ಮರದಷ್ಟು ಉದ್ದವೂ ಅಗಲವೂ ಆಗಿರುವ ಹನಿಗಳಿಂದ ಯುಕ್ತವಾಗಿರುವ ಮಳೆಯನ್ನು ಸುರಿಸುತ್ತಾ ಅಗ್ನಿಯನ್ನು ಆರಿಸುವುದಕ್ಕೆ ಪ್ರಯತ್ನಿಸಿದನು. ಶ್ರೀಕೃಷ್ಣದೇವನೂ ಅರ್ಜುನನೂ ಬಾಣಗಳ ಮಳೆಯನ್ನು ಸುರಿಸುತ್ತಾ ದೇವೇಂದ್ರನಿಂದ ಸುರಿಸಲ್ಪಟ್ಟ ಮಳೆಯನ್ನು ನಿಲ್ಲಿಸಿದರು. ದೇವೇಂದ್ರನ ಜೊತೆಯಲ್ಲಿ ಯುದ್ಧವನ್ನು ಮಾಡಿದರು. ದೇವೇಂದ್ರನು ಈ ಯುದ್ಧದಲ್ಲಿ ಸೋತನು.

ಅರ್ಜುನನ ಸಾಮರ್ಥ್ಯವನ್ನೂ ಶ್ರೀಕೃಷ್ಣದೇವನಿಗೆ ಅರ್ಜುನನಲ್ಲಿರುವ ಸ್ನೇಹವನ್ನೂ ದೇವೇಂದ್ರನು ತಿಳಿದು ತುಂಬಾ ಸಂತುಷ್ಟನಾಗಿ ಮೇಘಗಳನ್ನು ಹಿಂದಿರುಗಿಸಿ ಶ್ರೀಕೃಷ್ಣದೇವನನ್ನು ನಮಸ್ಕರಿಸಿ ಅರ್ಜುನನನ್ನು ಆಲಿಂಗಿಸಿದನು. ಆಗ ಸ್ವರ್ಗಲೋಕದಲ್ಲಿರುವ ವಾಮನನು ದೇವೇಂದ್ರನಿಂದ ಸಹಿತನಾಗಿ ಅಲ್ಲಿಗೆ ಬಂದನು. ಆ ವಾಮನನೂ ಶ್ರೀಕೃಷ್ಣದೇವನೂ ಒಬ್ಬನೇ ಆಗಿದ್ದರೂ ಬೇರೆ ಬೇರೆ ವ್ಯಕ್ತಿಗಳಂತೆ ತೋರಿದರು. ದೇವೇಂದ್ರನಿಂದ ಪೂಜಿಸಲ್ಪಡುತ್ತಿರುವ ವಾಮನನು ಆ ಸ್ಥಳದ ಯಜಮಾನನಂತೆಯೂ ಶ್ರೀಕೃಷ್ಣದೇವನು ಅತಿಥಿಯಂತೆಯೂ ನಟಿಸಿದರು. ದೇವೇಂದ್ರನೂ ಅರ್ಜುನನೂ ಯುದ್ಧವನ್ನು ಮಾಡುತ್ತಿದ್ದಾಗ ವಾಮನನು ದೇವೇಂದ್ರನ ಪಕ್ಕದಲ್ಲಿ ನಿಂತು ನೋಡುತ್ತಿದ್ದನು. ಯುದ್ಧವನ್ನು ಮಾಡಲಿಲ್ಲ. ಬ್ರಹ್ಮನೂ ರುದ್ರನೂ ಆಗ ಅಲ್ಲಿಗೆ ಬಂದು ಶ್ರೀಕೃಷ್ಣದೇವನನ್ನು ನಮಸ್ಕರಿಸಿದರು. ಅರ್ಜುನನಿಗೆ ಕೃಷ್ಣ ಎಂಬ ಹೆಸರನ್ನು ಕೊಟ್ಟರು. ತಮ್ಮ ತಮ್ಮ ಅಸ್ತ್ರಗಳನ್ನು ಕೊಡುವುದಾಗಿ ಪ್ರತಿಜ್ಞೆಯನ್ನು ಮಾಡಿದರು. ಆಮೇಲೆ ಶ್ರೀಕೃಷ್ಣದೇವನಿಂದ ಅನುಜ್ಞೆಯನ್ನು ಪಡೆದವರಾಗಿ ತಮ್ಮ ತಮ್ಮ ಲೋಕಗಳಿಗೆ ಹೋದರು. ದೇವೇಂದ್ರನೂ ಆಗ ಆಟಕ್ಕಾಗಿ ಯುದ್ಧವನ್ನು ಮಾಡಿದನು. ತನ್ನ ಮಗನಾಗಿರುವ ಅರ್ಜುನನಿಗೆ ಕೀರ್ತಿಯನ್ನು ಕೊಡುವುದಕ್ಕಾಗಿಯೇ ಯುದ್ಧವನ್ನು ಮಾಡಿ ಅನಂತರದಲ್ಲಿ ಸ್ವರ್ಗಲೋಕಕ್ಕೆ ಹಿಂದಿರುಗಿದನು.

ಆ ವನದಲ್ಲಿದ್ದ ದೈತ್ಯರೂ ಸರ್ಪಗಳೂ ಪಿಶಾಚಿಗಳೂ ರಾಕ್ಷಸರು ಸರ್ವರೂ ಅಗ್ನಿಯಿಂದ ಸುಡಲ್ಪಟ್ಟರು. ಆ ವನದಲ್ಲಿದ್ದ ನಾಲ್ಕು ಪಕ್ಷಿಗಳು "ಅಯಮಗ್ನೇ ಜರಿತಃ" ಮುಂತಾದ ಮಂತ್ರಗಳಿಂದ ಅಗ್ನಿಯನ್ನು ಸ್ತುತಿಸಿದವು. ಆದ್ದರಿಂದ ಆ ಪಕ್ಷಿಗಳು ಸಾಯಲಿಲ್ಲ.

ತಕ್ಷಕನ ಮಗನಾದ "ಅಶ್ವಸೇನ" ಎಂಬ ಸರ್ಪವನ್ನು ಅಗ್ನಿಯು ಸುಡುವುದಕ್ಕಾಗಿ ಹೋದನು. ಆಗ ಅವನ ತಾಯಿಯು ಅಶ್ವಸೇನನನ್ನು ಮುಖದ ಕಡೆಯಿಂದ ನುಂಗಿದಳು. ಆಕಾಶ ಮಾರ್ಗವಾಗಿ ಹಾರುತ್ತಿದ್ದಳು. ಇದನ್ನು ನೋಡಿದ ಅರ್ಜುನನು ಅವಳ ಬಾಯಿಯನ್ನು ಕತ್ತರಿಸಿದನು. ಇದರಿಂದ ಅವಳು ಸತ್ತಳು. ಅವಳ ಹೊಟ್ಟೆಯೊಳಗೆ ಅಶ್ವಸೇನನ ಮುಖವು ಉಳಿಯಿತು. ಆ ಅಶ್ವಸೇನನು ತನ್ನ ತಾಯಿಯ ಮರಣದಿಂದ ಕುಪಿತನಾಗಿ ಅರ್ಜುನನ್ನು ಕೊಲ್ಲುವುದಕ್ಕಾಗಿ ಕರ್ಣನ ಬತ್ತಳಿಕೆಯಲ್ಲಿ ಪ್ರವೇಶಿಸಿದನು.

ಮಯಾಸುರನು ಆ ವನದಲ್ಲಿದ್ದನು. ಅಗ್ನಿಯು ಅವನನ್ನು ಸುಡುವುದಕ್ಕೆ ಹೋದನು. ಮಯಾಸುರನು ತಪ್ಪಿಸಿಕೊಂಡು ಹೋಗಬೇಕೆಂದು ಪ್ರಯತ್ನಿಸಿದನು. ಆಗ ಶ್ರೀಕೃಷ್ಣದೇವನು ಅವನನ್ನು ಸಂಹರಿಸುವುದಕ್ಕಾಗಿ ಸುದರ್ಶನ ಚಕ್ರವನ್ನು ಎತ್ತಿದನು. ಮಯಾಸುರನು ಇದನ್ನು ನೋಡಿ ಯೋಚಿಸಿದನು. "ನಾನು ಎಲ್ಲಾ ದೇವತೆಗಳಿಗೂ ಶತ್ರುವಾಗಿರುವೆನು" ಎಂದೇ ಶ್ರೀಕೃಷ್ಣದೇವನಿಗೆ ನನ್ನಲ್ಲಿ ಕೋಪವು ಇರುತ್ತದೆ. ಈಗ ಶ್ರೀಕೃಷ್ಣದೇವನಿಂದ ತಪ್ಪಿಸಿಕೊಳ್ಳುವುದಕ್ಕೆ ದೇವೇಂದ್ರನನ್ನು ಶರಣು ಹೊಂದಬೇಕು. ಈ ಅರ್ಜುನನು ದೇವೇಂದ್ರನ ಅವತಾರವಾಗಿರುವುದರಿಂದ ಅವನನ್ನು ಶರಣು ಹೊಂದಿದರೆ ನನ್ನ ರಕ್ಷಣೆಯು ಏರ್ಪಡುತ್ತದೆ" ಎಂದು ತೀರ್ಮಾನಿಸಿ ಅರ್ಜುನನನ್ನು ಶರಣು ಹೊಂದಿದನು. ಅರ್ಜುನನು ತನ್ನನ್ನು ಶರಣು ಹೊಂದಿರುವ ಮಯಾಸುರನನ್ನು ಸಂಹರಿಸಕೂಡದು ಎಂದು ಶ್ರೀಕೃಷ್ಣದೇವನಲ್ಲಿ ಪ್ರಾರ್ಥಿಸಿದನು. ಇದರಿಂದ ಶ್ರೀಕೃಷ್ಣದೇವನು ಅವನನ್ನು ಕೊಲ್ಲಲಿಲ್ಲ. ಹೀಗೆ ನಾಲ್ಕು ಪಕ್ಷಿಗಳು, ಅಶ್ವಸೇನ ಎಂಬ ಸರ್ಪ, ಮಯಾಸುರ ಎಂಬ ಆರು ಜನರು ಮಾತ್ರ ಖಾಂಡವವನದಲ್ಲಿ ಸಂಹರಿಸಲ್ಪಡಲಿಲ್ಲ. ಉಳಿದವರೆಲ್ಲರೂ ಅಗ್ನಿಯಲ್ಲಿ ಬೂದಿಯಾದರು.

ಮಯಾಸುರನು ತನ್ನ ಪ್ರಾಣವನ್ನು ರಕ್ಷಿಸಿದ ಅರ್ಜುನನನ್ನು ನೋಡಿದನು. "ತನಗೆ ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರವನ್ನು ಏನು ಮಾಡಲಿ" ಎಂದು ಕೇಳಿದನು. ಅರ್ಜುನನು ಅವನ ಮಾತುಗಳನ್ನು ಕೇಳಿದನು. ಶ್ರೀಕೃಷ್ಣದೇವನ ಅನುಗ್ರಹದಿಂದ ನೀನು ಬದುಕಿದಿ. ಅವನಿಗೆ ಯಾವ ಉಪಕಾರವನ್ನು ಮಾಡಬೇಕೋ ಕೇಳು. ಅವನು ಹೇಳಿದ ಕಾರ್ಯವನ್ನು ಮಾಡು" ಎಂದನು. ಮಯಾಸುರನು ಶ್ರೀಕೃಷ್ಣದೇವನನ್ನು ಕೇಳಿದನು. ಶ್ರೀಕೃಷ್ಣದೇವನು "ಅರ್ಜುನನ ಅಣ್ಣನಾಗಿರುವ ಧರ್ಮರಾಜನಿಗಾಗಿ ಅತ್ಯಂತ ವಿಚಿತ್ರವಾಗಿರುವ ಸಭೆಯನ್ನು ನಿರ್ಮಾಣ ಮಾಡು" ಎಂದು ಆಜ್ಞಾಪಿಸಿದನು. ಅವನು ಹಾಗೆಯೇ ಮಾಡಿದನು. ಅಗ್ನಿದೇವನು ಶ್ರೀಕೃಷ್ಣದೇವನನ್ನೂ ಅರ್ಜುನನನ್ನೂ "ತಾನು ಖಾಂಡವವನವನ್ನು ಸುಡುತ್ತಿರುವಾಗ ಆ ಕಾಡಿನ ಒಳಗೆ ಇದ್ದ ಯಾವ ಪ್ರಾಣಿಯೂ ತಪ್ಪಿಸಿಕೊಂಡು ಹೊರಗೆ ಹೋಗಕೂಡದು. ಹಾಗೆ ಮಾಡಬೇಕು" ಎಂದು ಪ್ರಾರ್ಥಿಸಿದ್ದನು. ಅದರಂತೆಯೇ ಅವರಿಬ್ಬರೂ ಮಾಡಿದರು. ಕೊನೆಗೆ ಹಿಂದೆ ಹೇಳಿದ ಆರು ಪ್ರಾಣಿಗಳನ್ನು ಮಾತ್ರ ರಕ್ಷಿಸಿದರು. ಅವುಗಳಲ್ಲಿ ನಾಲ್ಕು ಪಕ್ಷಿಗಳನ್ನು ಅಗ್ನಿದೇವನೇ ಅವುಗಳಿಂದ ಮಾಡಲ್ಪಟ್ಟ ಸ್ತುತಿಗಳಿಂದ ಸಂತುಷ್ಟನಾಗಿ ಸಂಹರಿಸಲಿಲ್ಲ. ಮಯಾಸುರನನ್ನು ಅರ್ಜುನನಿಂದ ಪ್ರಾರ್ಥಿಸಲ್ಪಟ್ಟ ಶ್ರೀಕೃಷ್ಣದೇವನು ಸಂಹರಿಸಲಿಲ್ಲ.

ಮಯಾಸುರನಿಂದ ಧರ್ಮರಾಜನಿಗಾಗಿ ದಿವ್ಯವಾದ ಸಭೆಯನ್ನು ಮಾಡಿಸಿದನು. ಅಶ್ವಸೇನ ಎಂಬ ಸರ್ಪವು ಕುತ್ತಿಗೆ ವರೆಗೆ ಕತ್ತರಿಸಲ್ಪಟ್ಟವನಾಗಿ ಬದುಕಿರುವ ವರೆಗೂ ಕಷ್ಟವಾಗಿ ಜೀವಿಸಿದನು. ಶ್ರೀಕೃಷ್ಣದೇವನೂ ಅರ್ಜುನನೂ ಖಾಂಡವವನವನ್ನು ಸುಟ್ಟ ಮೇಲೆ ಇಂದ್ರಪ್ರಸ್ಥ ನಗರಕ್ಕೆ ಹಿಂದಿರುಗಿದರು. ಅವರಿಬ್ಬರನ್ನು ನೋಡಿದ ಎಲ್ಲಾ

ಪಾಂಡವರೂ ಸಂತೋಷಿಸಿದರು. ಸುಖ, ಜ್ಞಾನ, ಔದಾರ್ಯ, ವೀರ್ಯ ಮುಂತಾದ ಅನಂತ ಗುಣಗಳಿಂದ ಪೂರ್ಣನಾಗಿರುವ ಮತ್ತು ಅನಂತ ಶಕ್ತಿಯುಳ್ಳ ಶ್ರೀಕೃಷ್ಣದೇವನೂ ಈ ಪಾಂಡವರ ಮಧ್ಯದಲ್ಲಿ ಸಂತೋಷಿಸುತ್ತಾ ವಾಸಿಸಿದನು.

ಶ್ರೀಕೃಷ್ಣದೇವನ ಆಜ್ಞೆಯಿಂದ ಮಯಾಸುರನು ಧರ್ಮರಾಜನಿಗೆ ಎಲ್ಲಾ ಆಶ್ಚರ್ಯವಸ್ತುಗಳಿಂದಲೂ ಯುಕ್ತವಾದ ಮತ್ತು ಅತಿಶ್ರೇಷ್ಠವಾದ ಸಭಾಗೃಹವನ್ನು ನಿರ್ಮಾಣಮಾಡಿಕೊಟ್ಟನು. ಭೀಮಸೇನದೇವರಿಗೆ ಗದೆಯನ್ನು ಕೊಟ್ಟನು. ಈ ಗದೆಯು ವಾಯುದೇವರಿಂದ ಕೈಯಲ್ಲಿ ಧರಿಸಲ್ಪಟ್ಟಿತ್ತು. ಯವನಾಶ್ವನ ಮಗನಾಗಿರುವ ಮಾಂಧ್ಯಾತೃರಾಜನು ಶ್ರೀವಾಯುದೇವರ ಅನುಗ್ರಹದಿಂದ ಈ ಗದೆಯನ್ನು ಪಡೆದಿದ್ದನು. ಅದೇ ಗದೆಯನ್ನು ಮಯಾಸುರನು ಶ್ರೀಭೀಮಸೇನದೇವರಿಗೆ ಕೊಟ್ಟನು.

ಖಾಂಡವವನವನ್ನು ಅಗ್ನಿದೇವನಿಗೆ ಆಹುತಿಯಾಗಿ ಕೊಟ್ಟಮೇಲೆ ಶ್ರೀಕೃಷ್ಣದೇವನು ಎರಡು ವರ್ಷಗಳವರೆಗೆ ಪಾಂಡವರಿಂದ ಪೂಜಿತನಾಗಿ ಇಂದ್ರಪ್ರಸ್ಥಪುರದಲ್ಲಿ ವಾಸಿಸಿದನು. ಅನಂತರದಲ್ಲಿ ಅಲ್ಲಿಂದ ಹೊರಟು ದ್ವಾರಕೆಗೆ ಬಂದನು. ಪಾಂಡವರೆಲ್ಲರೂ ಶ್ರೀಕೃಷ್ಣದೇವನ ವಿರಹವನ್ನು ಸಹಿಸಲಾರದೆ ಕಳುಹಿಸಿಕೊಟ್ಟರು.

# ಶ್ರೀಕೃಷ್ಣದೇವನ ಅಶ್ವಮೇಧಯಾಗ

ದ್ವಾರಕಾಪಟ್ಟಣದಲ್ಲಿ ಒಮ್ಮೆ ಒಂದು ಅಶ್ವಮೇಧಯಾಗವನ್ನು ಶ್ರೀಕೃಷ್ಣದೇವನು ಮಾಡಿದನು. ಆ ಅಶ್ವಮೇಧಯಾಗವನ್ನು ಒಂದೇ ದಿನದಲ್ಲಿ ಮಾಡಬೇಕೆಂದು ಸಂಕಲ್ಪಿಸಿದನು. ಆ ಯಜ್ಞಕ್ಕೆ ಕುದುರೆಯು ಭೂಮಂಡಲವನ್ನು ಎಲ್ಲಾ ಕಡೆಯಲ್ಲಿಯೂ ಸುತ್ತಿಕೊಂಡು ಬರಬೇಕು. ಅದನ್ನು ಯಾರು ಯಾರು ಕಟ್ಟಿಹಾಕುತ್ತಾರೆಯೋ ಅವರನ್ನೆಲ್ಲರನ್ನೂ ಜಯಿಸಿ ಹಿಂದಿರುಗಿಸಿಕೊಂಡು ಬರಬೇಕು. ಭೂಮಂಡಲದಲ್ಲಿ ಎಲ್ಲಾ ಕಡೆಯಲ್ಲಿಯೂ ಅಲ್ಪಕಾಲದಲ್ಲಿ ಸುತ್ತಿಕೊಂಡು ಬರುವುದಕ್ಕೆ ಶಕ್ತವಾದ ಕುದುರೆ ಎಲ್ಲಿದೆ? ಶ್ರೀಕೃಷ್ಣದೇವನು ತನ್ನ ಸಂಕಲ್ಪದಿಂದ ಒಂದು ಕುದುರೆಯನ್ನು ಸೃಷ್ಟಿಸಿದನು. ಆ ಕುದುರೆಯು ಒಂದು ದಿನದಲ್ಲಿ ಲಕ್ಷಯೋಜನಗಳ ವರೆಗೆ ಹೋಗಲು ಶಕ್ತವಾಯಿತು. ಆ ಕುದುರೆಯು ಸೂರ್ಯೋದಯಕಾಲದಲ್ಲಿ ದ್ವಾರಕೆಯಿಂದ ಹೊರಟು ಆರು ಗಂಟೆಗಳೊಳಗೆ ಪ್ರಪಂಚದಲ್ಲಿ ಎಲ್ಲಾ ಕಡೆಯಲ್ಲಿಯೂ ಸಂಚರಿಸಿ ಹಿಂದಿರುಗಿತು. ಆ ಕುದುರೆಯ ಹಿಂದೆ ಶ್ರೀಕೃಷ್ಣದೇವನ ರಥವು ಹೊರಟಿತು. ಆ ರಥದಲ್ಲಿ ಭೀಮಸೇನದೇವರು ಮತ್ತು ಅರ್ಜುನರಿಂದ ಸಹಿತರಾಗಿರುವ ಶ್ರೀಕೃಷ್ಣದೇವನ ಮಕ್ಕಳಾಗಿರುವ ಪ್ರದ್ಯುಮ್ನ ಮುಂತಾದವರು ಹೊರಟರು. ಕುದುರೆಯನ್ನು ಕಟ್ಟಿಹಾಕಿದ ಜರಾಸಂಧ ಮುಂತಾದವರನ್ನು ಜಯಿಸಿ ಆರು ಗಂಟೆಗಳಲ್ಲಿ ಹಿಂದಿರುಗಿ ಬಂದರು. ಶ್ರೀವೇದವ್ಯಾಸರೂಪಿಯಾದ ಶ್ರೀಹರಿಯು ಶ್ರೀಕೃಷ್ಣದೇವನಿಗೆ ದೀಕ್ಷಾಸ್ವೀಕಾರವನ್ನು ಮಾಡಿಸಿದನು.

ಆಗ ಅಲ್ಲಿಗೆ ಒಬ್ಬ ಬ್ರಾಹ್ಮಣನು ಬಂದನು. ಅವನು ಕೈಯಲ್ಲಿ ಹುಲ್ಲನ್ನು ಧರಿಸಿದ್ದನು. ಗಟ್ಟಿಯಾಗಿ ಕೂಗಿಕೊಂಡು ಹೇಳಿದನು. "ನನ್ನ ಮಕ್ಕಳೆಲ್ಲರೂ ಹುಟ್ಟಿದಕೂಡಲೇ ಅದೃಶ್ಯರಾಗುತ್ತಿರುವರು. ಯಾವ ರಾಜನ

ರಾಜ್ಯದಲ್ಲಿ ಮಕ್ಕಳು ಚಿಕ್ಕ ವಯಸ್ಸಿನಲ್ಲಿ ಸಾಯುತ್ತಾರೆಯೋ ಆ ರಾಜನಿಗೆ ಧಿಕ್ಕಾರ ವಿರಲಿ'' ಎಂದು ಮೂರು ಬಾರಿ ಕೂಗಿದನು. ಆಗ ಆ ಸಭೆಯಲ್ಲಿದ್ದ ಅರ್ಜುನನು "ನಿನ್ನ ಮಕ್ಕಳುಗಳನ್ನು ನಾನು ರಕ್ಷಿಸುವೆನು'' ಎಂದು ಹೇಳಿದನು. ಅದಕ್ಕೆ ಆ ಬ್ರಾಹ್ಮಣನು'' ಬಲರಾಮನಿಂದಲೂ ಶ್ರೀಕೃಷ್ಣದೇವನಿಂದಲೂ ಶ್ರೀಕೃಷ್ಣದೇವನ ಮಗನಾದ ಪ್ರದ್ಯುಮ್ನನಿಂದಲೂ ಪ್ರದ್ಯುಮ್ನನ ಮಗನಾದ ಅನಿರುದ್ಧನಿಂದಲೂ ನನ್ನ ಮಕ್ಕಳನ್ನು ಸಾಯದಂತೆ ಮಾಡಲು ಸಾಧ್ಯವಾಗಲಿಲ್ಲ. ಹೀಗಿರುವಾಗ ಅತ್ಯಲ್ಪನಾದ ನಿನ್ನಿಂದ ಸಾಧ್ಯವೇ?'' ಎಂದನು. ಈ ಮಾತುಗಳನ್ನು ಕೇಳಿದಾಗ ಅರ್ಜುನನಲ್ಲಿ ದೈತ್ಯರ ಆವೇಶವು ಏರ್ಪಟ್ಟಿತು.

## ಅರ್ಜುನನು ದೈತ್ಯಾವೇಶದಿಂದ ಹೇಳಿದ ಮಾತು

ಅರ್ಜುನನು ಆಗ ದೈತ್ಯಾವೇಶದಿಂದ ಹೇಳಿದನು. "ನಾನು ಬಲರಾಮನಲ್ಲ. ಶ್ರೀಕೃಷ್ಣನಲ್ಲ. ಪ್ರದ್ಯುಮ್ನನಲ್ಲ. ಅನಿರುದ್ಧನಲ್ಲ. ಖಾಂಡವವನವನ್ನು ಅಗ್ನಿಗೆ ಆಹುತಿಯಾಗಿ ಕೊಟ್ಟು ಆಗ ಜಗಳಕ್ಕಾಗಿ ಬಂದಿರುವ ಎಲ್ಲಾ ದೇವತೆಗಳನ್ನೂ ಜಯಿಸಿರುವೆನು. ಇನ್ನು ನಿರ್ವಾತಕವಚ ಎಂಬ ಎಲ್ಲಾ ದೈತ್ಯರನ್ನೂ ಜಯಿಸುವೆನು. ಆದ್ದರಿಂದ ನಿಮ್ಮ ಮಕ್ಕಳನ್ನು ಖಂಡಿತವಾಗಿ ನಾನು ರಕ್ಷಿಸುವೆನು. ಈ ಕಾರ್ಯವು ನನ್ನಿಂದ ಸಾಧ್ಯವಾಗದೆ ಇದ್ದರೆ ಅಗ್ನಿಯಲ್ಲಿ ಪ್ರವೇಶಿಸುವೆನು'' ಎಂದು ಪ್ರತಿಜ್ಞೆಯನ್ನು ಮಾಡಿ ಶ್ರೀಕೃಷ್ಣದೇವನನ್ನು ನೋಡಿ ಅನುಮತಿಯನ್ನು ಕೇಳಿದನು.

"ಈ ಕಾರ್ಯವನ್ನು ಮಾಡುವುದಾಗಿ ಪ್ರತಿಜ್ಞೆಯನ್ನು ಮಾಡಿರುವಿ. ನಿನ್ನಿಂದ ಏನು ಮಾಡಲು ಸಾಧ್ಯ?'' ಎಂದು ಅಸ್ವಾರಸ್ಯವಾಗಿ ಉತ್ತರವನ್ನು ಶ್ರೀಕೃಷ್ಣದೇವನು ಕೊಟ್ಟನು. ಈ ಮಾತುಗಳನ್ನು ಕೇಳಿದ ಅರ್ಜುನನು ನಾಚಿಕೆಯಿಂದ ಯುಕ್ತನಾದನು. ಅದನ್ನು ನೋಡಿದ ಶ್ರೀಕೃಷ್ಣದೇವನು "ಹಾಗಾದರೆ ಹೋಗು'' ಎಂದು ಹೇಳಿದನು. ಅವನ ಸಹಾಯಕ್ಕಾಗಿ ಸಕಲ ಯಾದವರನ್ನೂ ಕಳುಹಿಸಿದನು. ಆದರೆ ಬಲರಾಮ ಪ್ರದ್ಯುಮ್ನ, ಅನಿರುದ್ಧ ಎಂಬುವರನ್ನು ಮಾತ್ರ ಅರ್ಜುನನಿಗೆ ಸಹಾಯವನ್ನು ಮಾಡುವುದಕ್ಕಾಗಿ ಕಳುಹಿಸಲಿಲ್ಲ. ಇದಕ್ಕೆ ಕಾರಣವನ್ನು ಹೇಳುವೆವು.

ಶ್ರೀಕೃಷ್ಣದೇವನಿಗೆ ಬಲರಾಮನು ಅತ್ಯಂತ ಪ್ರಿಯನಾಗಿರುವನು. ಅನಂತರ ತನ್ನ ಮಗನಾಗಿರುವ ಪ್ರದ್ಯುಮ್ನನಲ್ಲಿ ಎಲ್ಲರಿಗಿಂತಲೂ ಅಧಿಕವಾದ ಪ್ರೀತಿಯಿತ್ತು. ಪ್ರದ್ಯುಮ್ನನ ಅನಂತರ ಅನಿರುದ್ಧನು ಶ್ರೀಕೃಷ್ಣದೇವನಿಗೆ ಅತ್ಯಂತ ಪ್ರಿಯನಾದವನು. ರುಕ್ಮಿಯ ಮಗಳಾಗಿರುವ ರುಕ್ಮವತೀ ಎಂಬುವವಳಲ್ಲಿ ಪ್ರದ್ಯುಮ್ನನಿಂದ ಅವನು ಹುಟ್ಟಿದನು. ಆ ರುಕ್ಮವತಿಯು ಮನ್ಮಥನ ಪತ್ನಿಯಾದ ರತಿಯೇ ಆಗಿರುವಳು. ಪ್ರದ್ಯುಮ್ನನು ಮನ್ಮಥನೇ ಆಗಿರುವನು. ಅನಿರುದ್ಧನಲ್ಲಿ ಶ್ರೀಕೃಷ್ಣದೇವನ ಅನಿರುದ್ಧ ಎಂಬ ರೂಪವು ಸನ್ನಿಹಿತವಾಗಿದೆ. ಆ ಅನಿರುದ್ಧನು ರೂಪವಂತನಾಗಿಯೂ ಬಲವಂತನಾಗಿಯೂ ಸರ್ವಶಾಸ್ತ್ರಜ್ಞನಾಗಿಯೂ ಇದ್ದನು. ಆದ್ದರಿಂದ ಬಲರಾಮನನ್ನೂ ಪ್ರದ್ಯುಮ್ನನನ್ನೂ ಅನಿರುದ್ಧನನ್ನೂ ಅರ್ಜುನನ ಸಹಾಯಕ್ಕಾಗಿ ಕಳುಹಿಸಲಿಲ್ಲ. ಉಳಿದ ಸರ್ವಯಾದವರನ್ನೂ ಕಳುಹಿಸಿದನು.

ಸಕಲ ಯಾದವರಿಂದ ಸಹಿತನಾದ ಅರ್ಜುನನು ಆ ಬ್ರಾಹ್ಮಣನೊಡನೆ ಅವನ ಮನೆಗೆ ಹೋದನು. ಬ್ರಾಹ್ಮಣನ ಪತ್ನಿಗೆ ಪ್ರಸವವೇದನೆಯು ಆರಂಭವಾದ ಕೂಡಲೇ ಅಸ್ತ್ರಗಳಿಂದ ಪ್ರಸವಗೃಹವನ್ನು ಮುಚ್ಚಿದನು. ಯಾವ ದಿಕ್ಕಿನಿಂದಲೂ ಅಲ್ಲಿಗೆ ಯಾರೂ ಬಾರದಂತೆ ದಿಗ್ಬಂಧನವನ್ನು ಮಾಡಿದನು. ಬ್ರಾಹ್ಮಣನ ಪತ್ನಿಯು ಪ್ರಸವಿಸಿದಳು.

ಮರುಕ್ಷಣದಲ್ಲಿ ಮಗುವು ಅದೃಶ್ಯವಾಯಿತು. ಅರ್ಜುನನು ಈ ವಿಷಯವನ್ನು ತಿಳಿದು ಎಲ್ಲಾ ಲೋಕಗಳಿಗೂ ಹೋಗಿ ಹುಡುಕಿದನು. ಎಲ್ಲಿಯೂ ಕಾಣಿಸಲಿಲ್ಲ. ಕೊನೆಗೆ ಬೇಸತ್ತು ಸಕಲ ಯಾದವರಿಂದಲೂ ಸಹಿತನಾಗಿ ಶ್ರೀಕೃಷ್ಣದೇವನಿದ್ದಲ್ಲಿಗೆ ಬಂದನು. ಆ ಬ್ರಾಹ್ಮಣನು ಅರ್ಜುನನನ್ನು ಧಿಕ್ಕರಿಸುತ್ತಾ ಹಿಂದೆಯೇ ಬಂದನು. ಶ್ರೀಕೃಷ್ಣದೇವನು ಅರ್ಜುನನನ್ನು ನೋಡಿದನು. ಅರ್ಜುನನು ಅಗ್ನಿಪ್ರವೇಶಕ್ಕೆ ಸಿದ್ಧನಾದನು ಶ್ರೀಕೃಷ್ಣನು. ಅವನನ್ನು ತಡೆದು ನಿಲ್ಲಿಸಿದನು. ತನ್ನ ದೊಡ್ಡ ರಥದಲ್ಲಿ ಅರ್ಜುನನನ್ನು ಕುಳ್ಳಿರಿಸಿ ಉತ್ತರಾಭಿಮುಖವಾಗಿ ಕರೆದುಕೊಂಡು ಹೊರಟನು.

ಉಪ್ಪುನೀರಿನ ಸಮುದ್ರದಿಂದ ಆರಂಭಿಸಿ ಸಿಹಿನೀರಿನ ಸಮುದ್ರದ ವರೆಗೆ ಇರುವ ಏಳು ಸಮುದ್ರಗಳನ್ನೂ ಜಂಬೂದ್ವೀಪದಿಂದ ಆರಂಭಿಸಿ ಪುಷ್ಕರದ್ವೀಪದ ವರೆಗೆ ಇರುವ ಏಳು ದ್ವೀಪಗಳನ್ನೂ ದಾಟಿದನು. ಉಪ್ಪುನೀರಿನ ಸಮುದ್ರವು ಒಂದು ಲಕ್ಷಯೋಜನದಷ್ಟು ಅಗಲವೂ ಅನಂತರದಲ್ಲಿರುವ ಒಂದೊಂದು ಸಮುದ್ರಗಳು ಮೊದಲನೆಯ ಸಮುದ್ರಕ್ಕಿಂತ ಎರಡರಷ್ಟು ಅಗಲವಾಗಿಯೂ ಇದ್ದವು. ಜಂಬೂದ್ವೀಪಕ್ಕಿಂತ ಜಂಬೂದ್ವೀಪದ ಸುತ್ತಲೂ ಇರುವ ದ್ವೀಪಗಳು ಜಂಬೂದ್ವೀಪಕ್ಕಿಂತಲೂ ಒಳಗಿರುವ ದ್ವೀಪಗಳಿಗಿಂತಲೂ ಎರಡರಷ್ಟು ಅಗಲವಾಗಿದ್ದವು. ಕೊನೆಯ ಸಿಹಿನೀರಿನ ಸಮುದ್ರವು ಅರವತ್ನಾಲ್ಕು ಲಕ್ಷ ಯೋಜನದಷ್ಟು ಅಗಲವಾಗಿತ್ತು. ಕೊನೆಯ ಪುಷ್ಕರ ದ್ವೀಪವು ಅರವತ್ತನಾಲ್ಕು ಲಕ್ಷ ಯೋಜನದಷ್ಟು ಅಗಲವಾಗಿತ್ತು. ಈ ಏಳು ಸಮುದ್ರಗಳಾಗಲೀ ಏಳು ದ್ವೀಪಗಳಾಗಲೀ ಶ್ರೀಕೃಷ್ಣದೇವನ ರಥಕ್ಕೆ ಯಾವ ವಿಘ್ನವನ್ನೂ ಏರ್ಪಡಿಸಲಿಲ್ಲ. ಹಾದಿಯಲ್ಲಿದ್ದ ಪರ್ವತಗಳೂ ಸಮುದ್ರಗಳ ಜಲಗಳೂ ಹಾದಿಯನ್ನು ಬಿಟ್ಟುಕೊಟ್ಟವು. ಲೋಕಾಲೋಕ ಪರ್ವತವನ್ನು ದಾಟಿದ ಕೂಡಲೇ ತುಂಬಾ ಕತ್ತಲೆಯು ಏರ್ಪಟ್ಟಿತು. ಆ ಕತ್ತಲೆಯಲ್ಲಿ ಕುದುರೆಗಳಿಗೆ ಹಾದಿಯು ಕಾಣಿಸಲಿಲ್ಲ.

ಶ್ರೀಕೃಷ್ಣದೇವನು ತನ್ನ ಚಕ್ರದಿಂದ ಆ ಕತ್ತಲೆಯನ್ನು ಕತ್ತರಿಸಿದನು. ಕುದುರೆಗಳು ಮುಂದೆ ಹೋದವು. ಈ ಕತ್ತಲೆಯ ಭೂಮಿಯು ಮುಗಿದ ಕೂಡಲೇ ಗಟ್ಟಿಯಾದ ನೀರು ಅಂದರೆ ಘನೋದಕ ಎಂಬ ಪ್ರದೇಶವನ್ನು ಹೊಂದಿದನು. ಆ ಪ್ರದೇಶವನ್ನೂ ದಾಟಿದನು. ಆಗ ತನ್ನ ಅನಂತಾಸನ ಎಂಬ ಸ್ಥಾನವನ್ನು ನೋಡಿದನು. ಅಲ್ಲಿಯೇ ತನ್ನ ರಥವನ್ನು ನಿಲ್ಲಿಸಿದನು. ಆ ರಥದಲ್ಲಿಯೇ ಆ ಬ್ರಾಹ್ಮಣನೂ ಅರ್ಜುನನೂ ಕುಳಿತರು. ಅನಂತಾಸನದಲ್ಲಿ ತನ್ನ ರೂಪವನ್ನು ನೋಡಿದನು. ಆ ರೂಪವು ಎಂಟು ಭುಜಗಳಿಂದ ಯುಕ್ತವಾಗಿತ್ತು. ಸಮಸ್ತರತ್ನಗಳಿಂದ ಪ್ರಕಾಶಿಸುತ್ತಿರುವ ದಿವ್ಯವಾದ ಆಭರಣಗಳಿಂದ ಯುಕ್ತವಾಗಿತ್ತು. ನಿತ್ಯವಾದ ಮತ್ತು ಪೂರ್ಣವಾಗಿರುವ ಅನಂತಗುಣಗಳಿಂದ ಸಮುದ್ರದಂತಿತ್ತು. ಸಾವಿರ ಹೆಡೆಗಳಿಂದ ಯುಕ್ತನಾದ ಶೇಷದೇವನ ಮೇಲೆ ಮಲಗಿತ್ತು. ಅಸಂಖ್ಯಾಕರಾದ ಸೂರ್ಯರಂತೆ ಪ್ರಕಾಶಿಸುತ್ತಿತ್ತು. ಮಿಂಚಿನಂತೆ ಹೊಳೆಯುತ್ತಿತ್ತು. ರಮಾದೇವಿಯಿಂದ ಯುಕ್ತನಾಗಿರುವ ಅನಂತಾಸನನು ಮಿಂಚಿನಂತೆ ಹೊಳೆಯುತ್ತಿರುವ ವಸ್ತ್ರಗಳನ್ನು ಉಟ್ಟಿದ್ದನು. ಅವನನ್ನು ಹಿಂದೆ ಮುಕ್ತಿಯನ್ನು ಪಡೆದಿರುವ ಬ್ರಹ್ಮಮುಂತಾದ ಅನಂತ ದೇವತೆಗಳು ಪೂಜಿಸುತ್ತಿದ್ದರು.

ಆ ಅನಂತಾಸನನ ದೇಹದಲ್ಲಿ ಶ್ರೀಕೃಷ್ಣದೇವನು ಪ್ರವೇಶಿಸಿದನು. ಅನಂತಾಸನನೂ ಶ್ರೀಕೃಷ್ಣದೇವನೂ ಒಂದು ಮುಹೂರ್ತದ ವರೆಗೆ ಒಬ್ಬನೇ ಆದಂತೆ ಅರ್ಜುನನು ನೋಡಿದನು. ಆಮೇಲೆ ಬ್ರಾಹ್ಮಣ ಕುಮಾರರನ್ನು ಎತ್ತಿಕೊಂಡು ಶ್ರೀಕೃಷ್ಣದೇವನು ಅನಂತಾಸನನ ದೇಹದಿಂದ ಹೊರಗೆ ಬಂದನು.

ಅರ್ಜುನನಿಗೆ ಸ್ವಲ್ಪ ಗರ್ವವು ಬಂದಿತ್ತು. ಆ ಗರ್ವವನ್ನು ಪರಿಹರಿಸುವುದಕ್ಕಾಗಿ ಬ್ರಾಹ್ಮಣನ ಮಕ್ಕಳ

ರೂಪದಿಂದ ಸುನಂದ ಮುಂತಾದ ವಿಷ್ಣುವಿನ ದ್ವಾರಪಾಲಕರೇ ಭೂಮಿಯಲ್ಲಿ ಹುಟ್ಟಿದ್ದರು. ಈ ಸುನಂದ, ಜಯ, ವಿಜಯ ಮುಂತಾದವರು ಮುಕ್ತರು ಮಾತ್ರ ವಾಸಿಸುವ ಮುಕ್ತಿ ಸ್ಥಳಕ್ಕೆ ಹೋಗುವ ದ್ವಾರಪಾಲಕರಾದ ಮುಕ್ತಜೀವರು, ಶ್ರೀಕೃಷ್ಣದೇವನಿಗೆ ಅರ್ಜುನನಲ್ಲಿ ಅಧಿಕವಾದ ಪ್ರೀತಿಯಿತ್ತು. ಆದ್ದರಿಂದಲೇ "ನನಗೆ ಸಮಾನನು ಯಾರೂ ಇಲ್ಲ" ಎಂಬ ಗರ್ವವು ಅರ್ಜುನನಿಗೆ ಬಂದಿರುವಾಗ ತನ್ನ ದ್ವಾರಪಾಲಕರು ಭೂಮಿಯಲ್ಲಿ ಹುಟ್ಟಿ ಅದೃಶ್ಯರಾಗುವಂತೆ ಮಾಡಿದನು. ಅವರನ್ನು ತಂದುಕೊಟ್ಟು ಅರ್ಜುನನ ಗರ್ವವನ್ನು ಪರಿಹರಿಸಿದನು.

ಈ ಅನಂತಾಸನನು ಇರುವ ಪ್ರದೇಶವು ಅಪ್ರಾಕೃತ ಅಂದರೆ ಪ್ರಕೃತಿಯಿಂದ ನಿರ್ಮಿತವಾದುದಲ್ಲ. ಅದಕ್ಕಾಗಿಯೇ ಶ್ರೀಕೃಷ್ಣದೇವನು ಪ್ರಾಕೃತವಾದ ರಥವನ್ನೂ ಅರ್ಜುನನನ್ನೂ ಬ್ರಾಹ್ಮಣನನ್ನೂ ದೂರದಲ್ಲಿಯೇ ಬಿಟ್ಟು, ಆ ಸ್ಥಳದಿಂದ ಹಿಂದಿರುಗಿ, ಅನಂತ ಸೂರ್ಯರಂತೆ ಪ್ರಕಾಶದಿಂದ ಯುಕ್ತನಾಗಿ ರಥವನ್ನು ಏರಿ, ಆ ಬ್ರಾಹ್ಮಣನಿಂದಲೂ ಅರ್ಜುನನಿಂದಲೂ ಸಹಿತನಾಗಿ, ತಾನು ಅನಂತಾಸನದಿಂದ ತಂದಿರುವ ಬ್ರಾಹ್ಮಣಕುಮಾರರನ್ನು ಬ್ರಾಹ್ಮಣನಿಗೆ ಒಪ್ಪಿಸಿದನು.

## ದಂತವಕ್ತ್ರನ ಸಂಹಾರ

ಶ್ರೀಕೃಷ್ಣದೇವನು ಅಶ್ವಮೇಧಯಾಗವನ್ನು ಒಂದೇ ದಿನದಲ್ಲಿ ಮಾಡುವುದಾಗಿ ಸಂಕಲ್ಪಿಸಿ ಅದಕ್ಕಾಗಿ ದೀಕ್ಷೆಯನ್ನು ಸ್ವೀಕರಿದನು. ಆದರೆ ಅರ್ಜುನನ ಗರ್ವವನ್ನು ಪರಿಹರಿಸುವುದಕ್ಕಾಗಿ ಮಧ್ಯದಲ್ಲಿ ಯಜ್ಞಕಾರ್ಯವನ್ನು ನಿಲ್ಲಿಸಿದನು. ಅನಂತಾಸನಕ್ಕೆ ಹೋಗಿ ಹಿಂದಿರುಗಿದನು. ಇದಕ್ಕಾಗಿ ಒಂದೂವರೆ ಮುಹೂರ್ತದ ವರೆಗೆ ಯಜ್ಞಕಾರ್ಯವು ನಡೆಯಲಿಲ್ಲ. ಅದಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಿದನು. ಈ ಪ್ರಾಯಶ್ಚಿತ್ತವನ್ನು ಲೋಕಶಿಕ್ಷಣಾರ್ಥವಾಗಿಯೇ ಮಾಡಿದನು. ಈ ಯಜ್ಞವನ್ನು ನೋಡುವುದಕ್ಕಾಗಿ ಬ್ರಹ್ಮಮುಂತಾದ ತನ್ನ ಸೇವಕರಾದ ದೇವತೆಗಳು ಬಂದಿದ್ದರು. ಅವರನ್ನೆಲ್ಲರನ್ನೂ ಪೂಜಿಸಿದನು, ಅವರೆಲ್ಲರಿಗೂ ಹಿಂದುರಿಗಿ ಹೋಗುವಂತೆ ಅನುಮತಿಯನ್ನು ನೀಡಿದನು. ಅವರೆಲ್ಲರೂ ಹಿಂದಿರುಗಿದರು. ಅನಂತರದಲ್ಲಿ ಬ್ರಾಹ್ಮಣರನ್ನು ಪೂಜಿಸಿದನು.

ತನ್ನ ಪತ್ನಿಯರಿಂದಲೂ ಮಿತ್ರರಿಂದಲೂ ಸಹಿತನಾಗಿ ಯಮುನಾನದಿಯಲ್ಲಿ ಅವಭೃಥ ಸ್ನಾನವನ್ನು ಮಾಡಿದನು. ಅವಭೃಥಸ್ನಾನವನ್ನು ಮುಗಿಸಿ ದ್ವಾರಕಾಪಟ್ಟಣಕ್ಕೆ ಅಭಿಮುಖವಾಗಿ ಬರುತ್ತಿದ್ದನು. ಆಗ ದಂತವಕ್ತ್ರ ವಿದೂರಥ, ಎಂಬ ಇಬ್ಬರು ದೈತ್ಯರು ಬಂದು ಅಡ್ಡಗಟ್ಟಿದರು. ಅವರಿಬ್ಬರಲ್ಲಿ ವಿದೂರಥನು ಶ್ರೀಕೃಷ್ಣದೇವನ ಅತ್ಯಂತ ವಿರೋಧಿಯಾದುದರಿಂದ ಅವನನ್ನು ನಿತ್ಯ ನರಕದಲ್ಲಿ ತಳ್ಳಿದನು, ದಂತವಕ್ತ್ರನಲ್ಲಿ ವಿಜಯ ಎಂಬ ದ್ವಾರಪಾಲಕನು ಇದ್ದನು. ಸುದರ್ಶನ ಚಕ್ರದಿಂದ ಅವನ ಕುತ್ತಿಗೆಯನ್ನು ಕತ್ತರಿಸಿದವನಾಗಿ ಅವನ ದೇಹದಲ್ಲಿದ್ದ "ವಿಜಯ" ಎಂಬುವನನ್ನು ತನ್ನ ದೇಹದಲ್ಲಿ ಸೇರಿಸಿಕೊಂಡನು. ಆ ವಿಜಯನು ಶ್ರೀಕೃಷ್ಣಾವತಾರ ಮುಗಿಯುವ ವರೆಗೆ ಶ್ರೀಕೃಷ್ಣದೇವನ ದೇಹದಲ್ಲಿಯೇ ಇದ್ದು ಶ್ರೀಕೃಷ್ಣಾವತಾರವು ಮುಗಿಯುವಾಗ ಶ್ರೀಕೃಷ್ಣದೇವನ ದೇಹದಿಂದ ಹೊರಗೆ ಬಂದು ತನ್ನ ಮೂಲ ರೂಪದಲ್ಲಿ ಸೇರುವನು. ದಂತವಕ್ತ್ರನು ಈ ವಿಜಯನ ಜೊತೆಯಲ್ಲಿದ್ದು ಶ್ರೀಕೃಷ್ಣದೇವನನ್ನು ದ್ವೇಷಿಸಿ ವಿದೂರಥನಂತೆಯೇ ನಿತ್ಯ ನರಕವನ್ನು ಆಗಲೇ ಹೊಂದಿದನು.

ಅರ್ಜುನನು ಶ್ರೀಕೃಷ್ಣದೇವನ ರಥದಲ್ಲಿ ಕುಳಿತು ಒಂದೂವರೆ ಘಳಿಗೆವರೆಗೆ ಅತಿವೇಗದಿಂದ ಅನಂತಾಸನಲೋಕಕ್ಕೆ ಹೋಗಿ ಹಿಂದಿರುಗಿ ಬಂದನು. ಅವನಿಗೆ ವೇಗದಿಂದ ಹೋದದ್ದೂ ಹಿಂದಿರುಗಿ ಬಂದದ್ದೂ

ಗೊತ್ತಾಯಿತು. ಆದರೆ ಒಂದೂ ತಿಳಿಯಲಿಲ್ಲ. ಶ್ರೀಕೃಷ್ಣದೇವನನ್ನು "ನಾನು ಏನನ್ನು ನೋಡಿದೆನು"? ಎಂದುಪ್ರಶ್ನಿಸಿದನು. ಅದಕ್ಕೆ ಶ್ರೀಕೃಷ್ಣದೇವನು ಪ್ರತ್ಯುತ್ತರವನ್ನು ಕೊಡಲು ಆರಂಭಿಸಿದನು.

# ಭೂಗೋಳವರ್ಣನೆ

"ಈಗ ನಾವು ಇರುವ ದ್ವೀಪವು ಜಂಬೂದ್ವೀಪವೆನಿಸುತ್ತದೆ. ಈ ದ್ವೀಪವು ಒಂದು ಲಕ್ಷ ಯೋಜನ ಪರಿಮಿತ ಅಂದರೆ ಉದ್ದವೂ ಅಗಲವೂ ಉಳ್ಳದ್ದಾಗಿದೆ. ಈ ದ್ವೀಪದ ಸುತ್ತಲೂ ಉಪ್ಪುನೀರಿನ ಸಮುದ್ರವಿದೆ. ಆ ಉಪ್ಪುನೀರಿನ ಸಮುದ್ರವು ಒಂದು ಲಕ್ಷ ಯೋಜನ ಅಗಲವಾಗಿದೆ. ಉಪ್ಪುನೀರಿನ ಸಮುದ್ರದ ಸುತ್ತಲೂ ಎರಡನೆಯ ದ್ವೀಪವೂ ಎರಡನೆಯ ದ್ವೀಪದ ಸುತ್ತಲೂ ಎರಡನೆಯ ಸಮುದ್ರವೂ ಹೀಗೆಯೇ ಏಳು ದ್ವೀಪಗಳೂ ಏಳು ಸಮುದ್ರಗಳೂ ಇವೆ. ಮೊದಲನೆಯ ಸಮುದ್ರಕ್ಕಿಂತ ಎರಡನೆಯ ಸಮುದ್ರ ಮುಂತಾದ ಏಳು ಸಮುದ್ರಗಳೂ ಕ್ರಮೇಣ ಎರಡರಷ್ಟು ಪರಿಮಾಣವುಳ್ಳವುಗಳಾಗಿವೆ. ಏಳು ಸಮುದ್ರಗಳು ಅವುಗಳ ಸುತ್ತಲೂ ಇರುವ ದ್ವೀಪಗಳು ಅಗಲದಲ್ಲಿ ಸಮವಾಗಿವೆ. ಜಂಬೂದ್ವೀಪದ ಮಧ್ಯದಲ್ಲಿ ಮೇರು ಪರ್ವತವಿದೆ. ಏಳನೆಯ ಸಮುದ್ರದ ಸುತ್ತಲೂ ಬಂಗಾರದ ಪ್ರದೇಶವಿದೆ. ಆ ಬಂಗಾರದ ಪ್ರದೇಶವು ನಾಲ್ವತ್ತೆರಡು ಲಕ್ಷ ಇಪ್ಪತ್ತು ಸಾವಿರ ಯೋಜನದಷ್ಟು ಅಗಲವಾಗಿದೆ. ಬಂಗಾರದ ಪ್ರದೇಶವನ್ನು ದಾಟಿದರೆ ವಜ್ರದ ಸ್ಥಳವಿದೆ. ಇದೆಲ್ಲವೂ ಸೂರ್ಯನ ಪ್ರಕಾಶದಿಂದ ಯುಕ್ತವಾಗಿರುವುದರಿಂದ ಲೋಕವೆನಿಸುತ್ತದೆ. ಈ ಲೋಕವು ಮುಗಿಯುವಾಗ ಲೋಕಾಲೋಕ ಎಂಬ ಪರ್ವತವು ಭೂಮಿಯ ಸುತ್ತಲೂ ಇದೆ.; ಆ ಲೋಕಾಲೋಕಪರ್ವತದ ಒಳಗಿನ ಪ್ರದೇಶದಲ್ಲಿ ಸೂರ್ಯನ ಬೆಳಕೂ ಹೊರಗಿನ ಭಾಗದಲ್ಲಿ ಕತ್ತಲೆಯೂ ಇರುತ್ತದೆ. ಆದ್ದರಿಂದ ಆ ಪರ್ವತವನ್ನು "ಲೋಕಾಲೋಕಪರ್ವತ"ವೆಂದು ಸರ್ವರೂ ಕರೆಯುವರು"

ಈ ಲೋಕಾಲೋಕಪರ್ವತವು ಐವತ್ತು ಲಕ್ಷ ಐವತ್ತು ಸಹಸ್ರಯೋಜನದಷ್ಟು ಎತ್ತರವಾಗಿದೆ. ಮೇರು ಪರ್ವತದಿಂದ ನಾಲ್ಕು ದಿಕ್ಕುಗಳಲ್ಲಿಯೂ ಮೇಲೆಯೂ ಕೆಳಗೆಯೂ ಎಲ್ಲಾ ದಿಕ್ಕುಗಳಲ್ಲಿಯೂ ಬ್ರಹ್ಮಾಂಡದ ಆವರಣವಿದೆ. ಮೇರುಪರ್ವತಕ್ಕೂ ಬ್ರಹ್ಮಾಂಡದ ಆವರಣಕ್ಕೂ ಇಪ್ಪತ್ತೈದು ಕೋಟಿ ಯೋಜನಗಳಷ್ಟು ದೂರವು ಎಲ್ಲಾ ದಿಕ್ಕುಗಳಲ್ಲಿಯೂ ಇದೆ. ಈ ಬ್ರಹ್ಮಾಂಡದ ಸುತ್ತಲೂ ನೀರು, ಅಗ್ನಿ, ವಾಯು, ಆಕಾಶ, ಅಹಂಕಾರತತ್ತ್ವ, ಮಹತ್ತತ್ತ್ವ, ತಮೋಗುಣ, ರಜೋಗುಣ, ಸತ್ವಗುಣ ಎಂಬ ಒಂಭತ್ತು ಆವರಣಗಳಿವೆ. ಆ ಆವರಣಗಳಲ್ಲಿ ಮೊದಲನೆಯ ನೀರಿನ ಆವರಣವು ಒಂದು ಸಾವಿರಕೋಟಿ ಯೋಜನ ಪರಿಮಿತವಾಗಿದೆ. ಎರಡನೆಯ ಅಗ್ನಿಯ ಆವರಣದಿಂದ ಆರಂಭಿಸಿ ಸತ್ವಗುಣದ ಆವರಣದ ವರೆಗೆ ಕ್ರಮವಾಗಿ ಹತ್ತು ಹತ್ತರಷ್ಟು ಪರಿಮಾಣದಿಂದ ಯುಕ್ತವಾಗಿರುತ್ತವೆ. ಈ ಎಲ್ಲಾ ಆವರಣಗಳೂ ಮುಗಿದ ಮೇಲೆ ನಾನು ಸುತ್ತಲೂ ಇರುವೆನು. ನಾನು ಎಲ್ಲಾ ಸ್ಥಳಗಳಲ್ಲಿಯೂ ವ್ಯಾಪ್ತನಾಗಿರುವೆನು. ನಾನು ಅನಂತನು. ಅನಂತರೂಪಗಳಿಂದ ಯುಕ್ತನಾಗಿರುವೆನು. ಅನಂತ ತಲೆಗಳಿಂದಲೂ ಅನಂತಕಣ್ಣುಗಳಿಂದಲೂ ಅನಂತಪಾದಾದಿ ಅವಯವಗಳಿಂದಲೂ ಅನಂತ ಗುಣಗಳಿಂದಲೂ ಅನಂತ ಮಾಹಾತ್ಮ್ಯದಿಂದಲೂ ಯುಕ್ತನಾಗಿರುವೆನು. ನನ್ನ ದೇಹವು ಜ್ಞಾನ, ಆನಂದ ಮುಂತಾದ ಅನಂತ ಗುಣಾತ್ಮಕವಾದುದು. ಸರ್ವರೂ, ನೀನು ನನ್ನ ಅಧೀನರಾಗಿಯೇ ಯಾವಾಗಲೂ ಇರುವಿರಿ. ನನ್ನ ಅನುಗ್ರಹದಿಂದಲೇ ಬಲ, ಜಯ ಮುಂತಾದ ಎಲ್ಲಾ ಗುಣಗಳು ಸರ್ವರಿಗೂ ಏರ್ಪಡುತ್ತವೆ. ಆದ್ದರಿಂದ ನೀನು ನನ್ನ ಸಾಮರ್ಥ್ಯವನ್ನು ತಿಳಿದು ಆಶ್ಚರ್ಯದಿಂದ ಯುಕ್ತನಾಗಬೇಡ. ದುರಹಂಕಾರದಿಂದಲೂ ಯುಕ್ತನಾಗಬೇಡ. ನನ್ನಲ್ಲೇ ಮನಸ್ಸನ್ನು ಇಡು.

ನನ್ನ ಭಕ್ತನಾಗು. ನನ್ನನ್ನು ಪೂಜಿಸು. ನನ್ನನ್ನು ನಮಸ್ಕರಿಸು. ನನ್ನನ್ನೇ ಕೊನೆಗೆ ನೀನು ಹೊಂದುವಿ. ನಾನು ನಿನ್ನ ಮುಂದೆ ಪ್ರತಿಜ್ಞೆಯನ್ನು ಮಾಡುವೆನು. ನೀನು ನನಗೆ ಅತ್ಯಂತ ಪ್ರಿಯನಾಗಿರುವಿ. ನಿನ್ನಲ್ಲಿ ಸುಳ್ಳನ್ನು ಹೇಳಲಾರೆನು'' ಎಂದನು.

ಆಗ ಅರ್ಜುನನು ಶ್ರೀಕೃಷ್ಣದೇವನನ್ನು ನಮಸ್ಕರಿಸಿದನು. "ನನ್ನನ್ನು ಕ್ಷಮಿಸು'' ಎಂದು ಪ್ರಾರ್ಥಿಸಿದನು. ಅಶ್ವಮೇಧಯಾಗಕ್ಕಾಗಿ ಬಂದಿರುವ ಸಕಲ ಪಾಂಡವರೂ ಕೆಲವು ತಿಂಗಳುಗಳ ವರೆಗೆ ದ್ವಾರಕೆಯಲ್ಲಿಯೇ ಇದ್ದರು. ಶ್ರೀಕೃಷ್ಣದೇವನಲ್ಲಿ ಭಕ್ತಿಯಿಂದ ನಮ್ರವಾದ ಮನಸ್ಸುಗಳಿಂದ ಯುಕ್ತರಾದರು. ಶ್ರೀಕೃಷ್ಣದೇವನಿಂದ ಅತ್ಯಧಿಕವಾದ ಪ್ರೇಮದಿಂದ ಗೌರವಿಸಲ್ಪಟ್ಟರು. ಶ್ರೀಕೃಷ್ಣದೇವನಿಂದ ಅನುಮತಿಯನ್ನು ಪಡೆದರು. ಹಿಂದಿರುಗಿ ಇಂದ್ರಪ್ರಸ್ಥನಗರಕ್ಕೆ ಬಂದರು.

## ಖಗೋಳ ವರ್ಣನೆ

ಒಮ್ಮೆ ನಾರದರು ಧರ್ಮರಾಜ ಮುಂತಾದವರನ್ನು ನೋಡುವುದಕ್ಕಾಗಿ ಇಂದ್ರಪ್ರಸ್ಥನಗರಕ್ಕೆ ಬಂದಿದ್ದರು. ಧರ್ಮರಾಜ ಮುಂತಾದವರನ್ನು ನೋಡಿ ಭೂಮಿಯ ಮೇಲಿರುವ ಭುವರ್ಲೋಕ ಮುಂತಾದ ಲೋಕಗಳ ವರ್ಣನೆಯನ್ನು ಮಾಡಿದರು. ಅದನ್ನೆಲ್ಲಾ ಎಲ್ಲಾ ರಾಜರುಗಳಿಂದ ಯುಕ್ತನಾದ ಧರ್ಮರಾಜನು ಕೇಳಿದನು. ಆ ಅಂತರಿಕ್ಷಲೋಕದಲ್ಲಿರುವ ಎಲ್ಲಾ ದೇವತೆಗಳ ಸಭೆಗಳ ವಿಷಯಗಳನ್ನೂ ನಾರದರನ್ನು ಕುರಿತು ಪ್ರಶ್ನಿಸಿದನು.

"ಓ ನಾರದರೇ, ನೀವು ಭುವಃ ಎಂದು ಹೇಳಲ್ಪಡುವ ಅಂತರಿಕ್ಷಲೋಕವು ಈ ಭೂಲೋಕಕ್ಕಿಂತ ಒಂದು ಲಕ್ಷಯೋಜನ ಎತ್ತರವಾಗಿದೆ ಎಂದು, ಅಂತರಿಕ್ಷಲೋಕಕ್ಕಿಂತ ಸ್ವರ್ಗಲೋಕವು ಅರ್ಧಕೋಟಿ ಯೋಜನದಷ್ಟು ಎತ್ತರವಾಗಿದೆ ಎಂದು, ಆ ಸ್ವರ್ಗಲೋಕದಲ್ಲಿ ವಿಮಾನಗಳಲ್ಲಿ ಕುಳಿತವರಾಗಿ ಎಲ್ಲಾ ದೇವತೆಗಳೂ ಸಂಚರಿಸುತ್ತಿರುವರು ಎಂದು, ಈ ಅಂತರಿಕ್ಷಲೋಕವೂ ಸ್ವರ್ಗಲೋಕವೂ ಸುತ್ತಲೂ ಒಂದು ಕೋಟಿ ಯೋಜನದಷ್ಟು ಅಗಲವಾಗಿದೆ ಎಂದು, ಈ ಸ್ವರ್ಗಲೋಕದ ಮೇಲೆ ಮಹರ್ಲೋಕ, ಜನೋಲೋಕ, ತಪೋಲೋಕ ಎಂಬ ಮೂರು ಲೋಕಗಳಿವೆ ಎಂದು, ಸ್ವರ್ಗಲೋಕಕ್ಕಿಂತ ಎಪ್ಪತ್ತೈದು ಲಕ್ಷ ಯೋಜನಗಳಷ್ಟು ಎತ್ತರದಲ್ಲಿ ಮಹರ್ಲೋಕವೂ ಮಹರ್ಲೋಕಕ್ಕಿಂತ ಒಂದು ಕೋಟಿ ಹನ್ನೆರಡುವರೆ ಲಕ್ಷ ಯೋಜನದಷ್ಟು ಎತ್ತರದಲ್ಲಿ ಜನೋಲೋಕವೂ, ಜನೋಲೋಕಕ್ಕಿಂತ ಒಂದು ಕೋಟಿ ಅರವತ್ತೆಂಟು ಲಕ್ಷ ಎಪ್ಪತ್ತೈದು ಸಹಸ್ರಯೋಜನಗಳಷ್ಟು ಎತ್ತರದಲ್ಲಿ ತಪೋಲೋಕವೂ ಇರುವುದಾಗಿಯೂ ಹೇಳಿದಿರಿ.

ಈ ಮಹರ್ಲೋಕ, ಜನೋಲೋಕ, ತಪೋಲೋಕಗಳು ಹದಿನಾರು ಕೋಟಿ ಎಪ್ಪತ್ತಮೂರು ಲಕ್ಷ ಯೋಜನಗಳಷ್ಟು ಅಗಲವಾಗಿವೆಯೆಂದು ಹೇಳಿದಿರಿ. ತಪೋಲೋಕಕ್ಕಿಂತ ಸತ್ಯಲೋಕವು ನಾಲ್ಕು ಕೋಟಿ ಏಳೂಕಾಲು ಲಕ್ಷ ಯೋಜನಗಳಷ್ಟು ಎತ್ತರದಲ್ಲಿದೆಯೆಂದು, ಸತ್ಯಲೋಕದಲ್ಲಿ ಬ್ರಹ್ಮದೇವನು ಅಧಿಕವಾಗಿ ಶೋಭಿಸುತ್ತಿರುವನು ಎಂದು, ಸತ್ಯಲೋಕಕ್ಕಿಂತ ವಿಷ್ಣುಲೋಕಗಳು ಎಂಟು ಕೋಟಿ ಹದಿನೈದು ಲಕ್ಷ ಯೋಜನಗಳಷ್ಟು ಎತ್ತರವೆಂದು, ಮಹರ್ಲೋಕ, ಜನೋಲೋಕ, ತಪೋಲೋಕ ಸತ್ಯಲೋಕ, ವಿಷ್ಣುಲೋಕಗಳು ಹದಿನಾರು ಕೋಟಿ ಎಪ್ಪತ್ತಮೂರು ಲಕ್ಷ ಯೋಜನಗಳಷ್ಟು ಅಗಲವೆಂದು ಹೇಳಿದಿರಿ. ಅಂತರಿಕ್ಷಲೋಕ, ಸ್ವರ್ಗಲೋಕ, ಮಹರ್ಲೋಕ, ಜನೋಲೋಕ, ತಪೋಲೋಕ ಸತ್ಯಲೋಕ, ಎಂಬ ಈ ಆರು ಲೋಕಗಳು

ಕ್ರಮವಾಗಿ ನೂರರಷ್ಟು ಉತ್ತಮವೆಂದು, ಅಂತರಿಕ್ಷಲೋಕದಿಂದ ಆರಂಭಿಸಿ ವಿಷ್ಣು ಲೋಕಗಳ ವರೆಗೆ ಇರುವ ಎಲ್ಲಾ ಲೋಕಗಳಲ್ಲಿಯೂ ಶ್ರೀಹರಿಯ ಇಚ್ಛೆಯಿಂದ ಅನಂತ ಜನರು ಇದ್ದಾರೆಂದು, ಎಷ್ಟು ಜನರು ಬಂದರೂ ಆ ಲೋಕಗಳು ದಿವ್ಯವಾಗಿರುವುದರಿಂದ ಆ ಲೋಕಗಳಲ್ಲಿ ಸ್ಥಳ ಇದ್ದೇ ಇರುತ್ತದೆಂದು, ಆ ಲೋಕಗಳು ಅಪೇಕ್ಷಿಸಿದ ಎಲ್ಲಾ ಸುಖಗಳನ್ನು ಕೊಡುವ ಶಕ್ತಿಯಿಂದ ಯುಕ್ತವಾದವುಗಳು ಎಂದು, ಅಲ್ಲಿರುವ ಸ್ತ್ರೀಯರೂ ಪುರುಷರೂ ದಿವ್ಯವಾದ ಆಕಾರಗಳಿಂದ ಶೋಭಿಸುತ್ತಿರುವರು ಎಂದು ಹೇಳಿದಿರಿ.

ಅತಲ, ವಿತಲ, ಸುತಲ, ರಸಾತಲ, ತಲಾತಲ, ಮಹಾತಲ, ಪಾತಾಲ ಎಂಬ ಏಳು ಪಾತಾಲಲೋಕಗಳು ಭೂಮಿಯ ಕೆಳಗೆ ಇವೆಎಂದು, ಪಾತಾಳ ಲೋಕವು ದಿವ್ಯರತ್ನಗಳಿಂದ ಪ್ರಕಾಶಿಸುತ್ತದೆಎಂದು, ಈ ಪಾತಾಳಲೋಕಗಳ ಕೆಳಗೆ ಅತ್ಯಂತ ಬಲಿಷ್ಠನಾದ ಶೇಷದೇವನು ಈ ಭೂಮಿಯನ್ನು ಎತ್ತಿಕೊಂಡಿರುವುದಾಗಿ ಹೇಳಿದಿರಿ. ಮತ್ತು

ಈ ಭೂಮಂಡಲದಲ್ಲಿ ಜಂಬೂದ್ವೀಪವನ್ನು ಬಿಟ್ಟು ಇತರ ಆರು ದ್ವೀಪಗಳಲ್ಲಿ ಸ್ತ್ರೀಯರೂ ಪುರುಷರೂ ಪರಮ ಸುಂದರರಾಗಿಯೂ ಅನೇಕ ಸಹಸ್ರ ವರ್ಷಗಳ ವರೆಗೆ ಬದುಕುವವರಾಗಿಯೂ ಇದ್ದಾರೆಂದು, ಈ ಭೂಲೋಕದಲ್ಲಿ ಭೂಮಿಗಿಂತ ಮೇಲೆ ಇರುವ ಅಂತರಿಕ್ಷಲೋಕ ಮುಂತಾದ ಲೋಕಗಳಲ್ಲಿಯೂ ಭೂಮಿಗಿಂತ ಕೆಳಗಿರುವ ಏಳು ಪಾತಾಳ ಲೋಕಗಳಲ್ಲಿಯೂ ಪಾತಾಳಲೋಕಗಳಿಗಿಂತ ಕೆಳಗೆಯೂ ಇರುವ ಸರ್ವ ಜೀವರನ್ನೂ ಸರ್ವೋತ್ತಮನಾದ ನಾರಾಯಣನು ರಕ್ಷಿಸುತ್ತಿರುವನು ಎಂದು ಹೇಳಿದಿರಿ.

ಹಾಗೆಯೇ ಎಲ್ಲಾ ಲೋಕಗಳಿಗಿಂತಲೂ ಮೇಲೆ ಇರುವ ವಿಷ್ಣುಲೋಕಗಳಲ್ಲಿರುವ ನಾರಾಯಣನನ್ನು ಇಷ್ಟರ ವರೆಗೆ ಮುಕ್ತಿಯನ್ನು ಪಡೆದಿರುವ ಸರ್ವ ಮುಕ್ತರೂ ಉಪಾಸಿಸುತ್ತಿರುವರೆಂದು, ಬ್ರಹ್ಮದೇವನನ್ನು ಸಕಲ ದೇವತೆಗಳೂ ಸಕಲ ವೇದಾಭಿಮಾನಿದೇವತೆಗಳೂ ಸೇವಿಸುತ್ತಿರುವರೆಂದು, ಸ್ವರ್ಗಲೋಕದ ಅಧಿಪತಿಯಾದ ದೇವೇಂದ್ರನನ್ನು ಎಲ್ಲಾ ಮುನಿಗಳೂ ಹರಿಶ್ಚಂದ್ರರಾಜನೂ ಸೇವಿಸುತ್ತಿರುವರೆಂದು, ದೇವತೆಗಳಿಂದಲೂ ಹರಿಶ್ಚಂದ್ರನಿಂದಲೂ ಯುಕ್ತನಾದ ದೇವೇಂದ್ರನು ರಾಮ ರೂಪಿಯಾದ ಶ್ರೀಜನಾರ್ದನನನ್ನು ಸೇವಿಸುವುದಾಗಿ ಹೇಳಿದಿರಿ. ಉಳಿದ ಎಲ್ಲಾ ರಾಜರುಗಳೂ ನಮ್ಮ ತಂದೆಯಾದ ಪಾಂಡುರಾಜನೂ ಯಮನನ್ನು ಸೇವಿಸುತ್ತಿರುವುದಾಗಿ, ನಮ್ಮ ತಂದೆಯಾದ ಪಾಂಡುರಾಜನಿಂದಲೂ ರಾಜರುಗಳಿಂದಲೂ ಸಹಿತನಾದ ಯಮನು ಪರಶುರಾಮದೇವನನ್ನು ಅತ್ಯಂತ ಭಕ್ತಿಯಿಂದ ಆರಾಧಿಸುತ್ತಿರುವನು ಎಂದು, ಸತ್ಯಲೋಕಾಧಿಪತಿಯಾದ ಬ್ರಹ್ಮನು ಶ್ರೀಹರಿಯ ಎಲ್ಲಾ ಅವತಾರಗಳನ್ನೂ ಉಪಾಸಿಸುವುದಾಗಿ, ಪಾತಾಳ ಗಳಲ್ಲಿರುವ ಸರ್ಪಗಳೆಲ್ಲವೂ ವರುಣನಿಂದ ಸಹಿತರಾಗಿ ಮತ್ಸ್ಯರೂಪಿಯಾದ ಶ್ರೀಹರಿಯನ್ನು ಉಪಾಸಿಸುತ್ತಿರುವುದಾಗಿ, ಗಂಧರ್ವರೆಲ್ಲರೂ ಕುಬೇರನನ್ನೂ ಕುಬೇರನಿಂದ ಸಹಿತರಾಗಿ ಕಲ್ಕಿ ಎಂಬ ಶ್ರೀಹರಿಯ ರೂಪವನ್ನೂ ಉಪಾಸಿಸುತ್ತಿರುವುದಾಗಿ, ಉಗ್ರವಾದ ಸರ್ವಪ್ರಾಣಿಗಳೂ ರುದ್ರನನ್ನು ಅವನಿಂದ ಸಹಿತರಾಗಿ ನರಸಿಂಹರೂಪಿಯಾದ ಶ್ರೀಹರಿಯನ್ನೂ ಉಪಾಸಿಸುತ್ತಿರುವುದಾಗಿಯೂ ಹೇಳಿದಿರಿ. ನಿಮ್ಮ ಮಾತುಗಳಲ್ಲಿ ನನಗೆ ಸಂಶಯವು ಬಂದಿದೆ. ಹರಿಶ್ಚಂದ್ರರಾಜನು ದೇವೇಂದ್ರನ ಸಭೆಗೆ ಹೇಗೆ ಹೋದನು? ನಮ್ಮ ತಂದೆಯಾದ ಪಾಂಡುಮಹಾರಾಜನು ದೇವೇಂದ್ರನ ಸಭೆಗೆ ಯಾಕೆ ಹೋಗಲಿಲ್ಲ? ಈ ಸಂಶಯವನ್ನು ಪರಿಹರಿಸಬೇಕು'' ಎಂದು ಪ್ರಾರ್ಥಿಸಿದನು.

ಆಗ ನಾರದರು, ಹೇಳಲು ಆರಂಭಿಸಿದರು. ಹರಿಶ್ಚಂದ್ರನು ರಾಜಸೂಯಯಾಗವನ್ನು ಮಾಡಿದ್ದನು. ಅದರಿಂದ ಅವನಿಗೆ ಪರಲೋಕದಲ್ಲಿ ಇಂದ್ರನ ಸಭೆಯಲ್ಲಿ ದೇವೇಂದ್ರನಿಂದ ಗೌರವಿಸಲ್ಪಡುವಂತಾಯಿತು. ಇದನ್ನು ನಿಮ್ಮ ತಂದೆಯಾದ ಪಾಂಡುರಾಜನು ನೋಡಿದನು. ಅವನಿಗೂ ಯಾವ ನ್ಯೂನತೆಯೂ ಇಲ್ಲ. ಉತ್ತಮದೇವತೆಯಂತೆ ಯಮನ ಸಭೆಯಲ್ಲಿ ಪೂಜಿಸಲ್ಪಡುತ್ತಿದ್ದಾನೆ. ಆ ಸಭೆಯಲ್ಲಿ ಶ್ರೀಹರಿಯು ರಘುರಾಮ ಪರಶುರಾಮ ಎಂಬ ಎರಡು ರೂಪಗಳಿಂದ ಪೂಜಿಸಲ್ಪಡುತ್ತಿರುವನು. ಆದರೂ ರಾಜಸೂಯಯಾಗದಿಂದ ಬರುವ ಅಭಿವೃದ್ಧಿಯು ತನ್ನಲ್ಲಿಲ್ಲ ಎಂಬ ಕೊರತೆಯಿಂದ ಯುಕ್ತನಾಗಿ ನನ್ನನ್ನು ಕರೆದು ಹೇಳಿದನು. "ನನ್ನ ಮಗನಾದ ಧರ್ಮರಾಜನು ರಾಜಸೂಯ ಯಾಗವನ್ನು ಮಾಡಲಿ. ಅವನಿಗೆ ಯಾವ ನ್ಯೂನತೆಯೂ ಇಲ್ಲ. ಅವನ ತಮ್ಮಂದಿರಾದ ಭೀಮಸೇನ ಅರ್ಜುನರನ್ನು ಜಯಿಸುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ. ಶ್ರೀಕೃಷ್ಣದೇವನು ಅವನಿಗೆ ಎಲ್ಲಾ ವಿಧದಿಂದಲೂ ರಕ್ಷಕನಾಗಿರುವನು. ತಮ್ಮಂದಿರ ಬಲದಿಂದಲೂ ಶ್ರೀಕೃಷ್ಣದೇವನ ಸಹಾಯದಿಂದಲೂ ಅವನಿಗೆ ಅಸಾಧ್ಯವು ಯಾವುದೂ ಇಲ್ಲ ಎಂದು ಹೇಳಿದನು" ಎಂದು ನಾರದರು ಹೇಳಿದರು.

ಈ ಮಾತುಗಳನ್ನು ಕೇಳಿದ ಧರ್ಮರಾಜನು ತಮ್ಮನಾದ ಶ್ರೀಭೀಮಸೇನ, ಅರ್ಜುನ ಮುಂತಾದವರಿಂದ ಸಹಿತನಾಗಿ ರಾಜಸೂಯಯಾಗವನ್ನು ಮಾಡುವ ವಿಷಯವನ್ನು ಕುರಿತು ಆಲೋಚಿಸಿದನು. ಸರ್ವ ಸಹೋದರರೂ ಈ ಯಾಗವನ್ನು ಮಾಡಲೇಬೇಕು ಎಂದು ಹೇಳಿದರು.

**प्रातर्ध्यायन् प्रसन्नः कृतनिजविहितः सत्सभां प्राप्य कृष्णो**
**दूतं राज्ञां प्रतोष्यामरमुनिविदिताशेषकृत्यः प्रयातः ।**
**शक्रप्रस्थं चमूभिर्बहुविभवयुतं बन्धुभिर्मानितोऽयं**
**भीमेनापात्य बार्हद्रथमथ नृपतीन्मोचयन्मे प्रसीदेत् ॥ २३ ॥**

**ಪ್ರಾತರ್ಧ್ಯಾಯನ್ ಪ್ರಸನ್ನಃ ಕೃತನಿಜವಿಹಿತಃ ಸತ್ಸಭಾಂ ಪ್ರಾಪ್ಯ ಕೃಷ್ಣೋ**
**ದೂತಂ ರಾಜ್ಞಾಂ ಪ್ರತೋಷ್ಯಾಮರಮುನಿವಿದಿತಾಶೇಷಕೃತ್ಯಃ ಪ್ರಯಾತಃ ।**
**ಶಕ್ರಪ್ರಸ್ಥಂ ಚಮೂಭಿರ್ಬಹುವಿಭವಯುತಂ ಬಂಧುಭಿರ್ಮಾನಿತೋಽಯಂ**
**ಭೀಮೇನಾಪಾತ್ಯ ಬಾರ್ಹದ್ರಥಮಥ ನೃಪತೀನ್ಮೋಚಯನ್ಮೇ ಪ್ರಸೀದೇತ್ ॥ ೨೩ ॥**

ಪದಚ್ಛೇದ :- ಪ್ರಾತಃ ಧ್ಯಾಯನ್, ಪ್ರಸನ್ನಃ, ಕೃತನಿಜವಿಹಿತಃ, ಸತ್ಸಭಾಂ ಪ್ರಾಪ್ಯ ಕೃಷ್ಣಃ ದೂತಂ, ರಾಜ್ಞಾಂ, ಪ್ರತೋಷ್ಯ, ಅಮರಮುನಿವಿದಿತಾಶೇಷಕೃತ್ಯಃ, ಪ್ರಯಾತಃ ಶಕ್ರಪ್ರಸ್ಥಂ, ಚಮೂಭಿಃ, ಬಹುವಿಭವಯುತಂ, ಬಂಧುಭಿಃ, ಮಾನಿತಃ, ಅಯಂ, ಭೀಮೇನ, ಆಪಾತ್ಯ, ಬಾರ್ಹದ್ರಥಂ, ಅಥ, ನೃಪತೀನ್, ಮೋಚಯನ್, ಮೇ ಪ್ರಸೀದೇತ್.

ಅನ್ವಯ - ಯಃ ಪ್ರಾತಃ ಪ್ರಸನ್ನಃ (ಸ್ವಾತ್ಮಾನಂ) ಧ್ಯಾಯನ್, ಕೃತನಿಜವಿಹಿತಃ, ಸತ್ಸಭಾಂ ಪ್ರಾಪ್ಯ, ರಾಜ್ಞಾಂ ದೂತಂ ಪ್ರತೋಷ್ಯ, ಅಮರಮುನಿವಿದಿತಾಶೇಷಕೃತ್ಯಃ, ಚಮೂಭಿಃ, (ಸಹ) ಬಹುವಿಭವಯುತಂ ಶಕ್ರಪ್ರಸ್ಥಂ ಪ್ರಯಾತಃ, ಬಂಧುಭಿಃ ಮಾನಿತಃ ಬಾರ್ಹದ್ರಥಂ ಭೀಮೇನ ಆಪಾತ್ಯ ಅಥ ನೃಪತೀನ್ ಮೋಚಯನ್, ಅಯಂ ಕೃಷ್ಣಃ ಮೇ ಪ್ರಸೀದೇತ್.

ಅನ್ವಯಾರ್ಥ - ಯಃ ಯಾವ ಶ್ರೀಕೃಷ್ಣದೇವನು ಪ್ರಾತಃ ಅರುಣೋದಯಕಾಲದಲ್ಲಿ (ಸ್ವಾತ್ಮಾನಂ) ತನ್ನನ್ನು ಧ್ಯಾಯನ್ ಧ್ಯಾನಿಸುತ್ತಿರುವವನಾಗಿ ಕೃತನಿಜವಿಹಿತಃ ತನ್ನ ಕರ್ತವ್ಯ ಕರ್ಮಗಳನ್ನು ಮಾಡಿದವನಾಗಿ ಸತ್ಸಭಾಂ ಸಜ್ಜನರು ಸೇರುವ ತನ್ನ ಸಭೆಯನ್ನು ಪ್ರಾಪ್ಯ ಹೊಂದಿದವನಾಗಿ ರಾಜ್ಞಾಂ ತನ್ನ ಮಾವಂದಿರುಗಳೂ ಭಾವಂದಿರುಗಳೂ ಆಗಿರುವ ರಾಜರುಗಳ ದೂತಂ ದೂತನನ್ನು ಪ್ರತೋಷ್ಯ ಸಂತೋಷಪಡಿಸಿದವನಾಗಿ ಅಮರಮುನಿವಿದಿತಾಶೇಷಕೃತ್ಯಃ ದೇವಮುನಿಯಾಗಿರುವ ನಾರದರಿಂದ ತಿಳಿಯಲ್ಪಟ್ಟ ಎಲ್ಲಾ ಕರ್ತವ್ಯಗಳುಳ್ಳವನಾಗಿ ಚಮೂಭಿಃ ಸಹ ಸೈನ್ಯಗಳಿಂದ ಸಹಿತನಾಗಿ ಬಹುವಿಭವಯುತಂ ಅಸಂಖ್ಯಾಕವಾದ ವೈಭವದಿಂದ ಯುಕ್ತವಾಗಿರುವ ಶಕ್ರಪ್ರಸ್ಥಂ ಇಂದ್ರಪ್ರಸ್ಥ ನಗರವನ್ನು ಕುರಿತು ಪ್ರಯಾತಃ ಹೋದವನಾಗಿ ಬಂಧುಭಿಃ ತನ್ನ ಬಂಧುಗಳಾದ ಪಾಂಡವರಿಂದ ಮಾನಿತಃ ಗೌರವಿಸಲ್ಪಟ್ಟವನಾಗಿ ಬಾರ್ಹದ್ರಥಂ ಬೃಹದ್ರಥ ಎಂಬ ರಾಜನ ಮಗನಾಗಿರುವ ಜರಾಸಂಧನನ್ನು ಭೀಮೇನ ಭೀಮಸೇನದೇವರಿಂದ ಆಪಾತ್ಯ ಕೊಲ್ಲಿಸಿ ಅಥ ಅನಂತರ ನೃಪತೀನ್ ಎಲ್ಲಾ ರಾಜರುಗಳನ್ನೂ ಮೋಚಯನ್ ಸೆರೆಮನೆಯಿಂದ ಬಿಡಿಸಿದನೋ ಸಃ ಕೃಷ್ಣಃ ಆ ಶ್ರೀಕೃಷ್ಣದೇವನು ಮೇ ನನ್ನ ವಿಷಯದಲ್ಲಿ ಪ್ರಸೀದೇತ್ ಪ್ರಸನ್ನನಾಗಲಿ.

ವಿಗ್ರಹ - ಧ್ಯಾಯತಿ ಇತಿ ಧ್ಯಾಯನ್; ನಿಜಾನಿ ಚ ತಾನಿ ವಿಹಿತಾನಿ ಚ ನಿಜವಿಹಿತಾನಿ ; ಕೃತಾನಿ ನಿಜ ವಿಹಿತಾನಿ ಯೇನ ಸಃ ಕೃತನಿಜವಿಹಿತಃ ಸತೀ ಚ ಸಾ ಸಭಾ ಚ ಸತ್ಸಭಾ, ತಾಂ ಸತ್ಸಭಾಂ, ಅಮರಾಣಾಂ ಮುನಿಃ ಅಮರಮುನಿಃ ಅಮರಮುನೇಃ ವಿದಿತಾನಿ ಅಮರಮುನಿವಿದಿತಾನಿ, ಅಮರಮುನಿವಿದಿತಾನಿ ಅಶೇಷಾಣಿ ಕೃತ್ಯಾನಿ ಯೇನ ಸಃ ಅಮರಮುನಿವಿದಿತಾಶೇಷಕೃತ್ಯಃ, ಬಹವಶ್ಚ ತೇ ವಿಭವಾಶ್ಚ ಬಹುವಿಭವಾಃ, ಬಹುವಿಭವೈಃಯುತಃ ಬಹುವಿಭವಯುತಃ, ತಂ ಬಹುವಿಭವಯುತಂ; ಬೃಹದ್ರಥಸ್ಯ ಅಪತ್ಯಂ ಪುಮಾನ್ ಬಾರ್ಹದ್ರಥಃ, ತಂ ಬಾರ್ಹದ್ರಥಂ, ಮೋಚಯತಿ ಇತಿ ಮೋಚಯನ್;

ಪ್ರಾತಃ ಪ್ರಸನ್ನಃ (ಸ್ವಾತ್ಮಾನಂ) ಧ್ಯಾಯನ್ ಕೃತನಿಜವಿಹಿತಃ ಸತ್ಸಭಾಂ ಪ್ರಾಪ್ಯ.

ಒಮ್ಮೆ ಅರುಣೋದಯಕಾಲದಲ್ಲಿ ಪ್ರಸನ್ನ ಇಂದ್ರಿಯಗಳುಳ್ಳವನಾಗಿ ತನ್ನನ್ನೇ ಧ್ಯಾನಿಸಿದನು. ತನ್ನ ವಿಹಿತವಾದ ಕರ್ಮಗಳನ್ನು ಮಾಡಿದನು. ನಿರ್ದೋಷವಾದ ಸಭೆಗೆ ಬಂದನು.

**ವಿಶೇಷಾರ್ಥ - ಕದಾಚಿತ್ ಬ್ರಾಹ್ಮೇ ಮುಹೂರ್ತೇ ಉತ್ಥಾಯ, ಪಾದಪ್ರಕ್ಷಾಲನಾದಿಕಂ ಕೃತ್ವಾ ಪ್ರಸನ್ನಾಂತಃ ಕರಣಃ "ಏಕಃ ಪರಂಜ್ಯೋತಿಃ" ಇತ್ಯಾದ್ಯುಕ್ತಾನೇಕಗುಣವಿಶಿಷ್ಟತಯಾ ಸ್ವಾತ್ಮಾನಮೇವ ಧ್ಯಾಯನ್ ಸ್ನಾನಸಂಧ್ಯಾವಂದನೌಪಾಸನಾದಿಕಂ ಕೃತ್ವಾ ಸುಧರ್ಮಾಖ್ಯಾಂ ಸಭಾಂ ಪ್ರಾಪ್ಯ.**

**ವಿಶೇಷಾರ್ಥ ವಿವರಣ -** ಒಂದು ದಿನ ಬೆಳಿಗ್ಗೆ ಅರುಣೋದಯಕಾಲದಲ್ಲಿ ಶ್ರೀಕೃಷ್ಣದೇವನು ಎದ್ದು ಪಾದಪ್ರಕ್ಷಾಲನ ಮುಂತಾದ ಎಲ್ಲಾ ಕಾರ್ಯಗಳನ್ನೂ ಮುಗಿಸಿದನು. ಬೆಳಿಗ್ಗೆ ಮಂಗಳಕರವಾದ ವಸ್ತುಗಳನ್ನು ಸ್ಮರಿಸಬೇಕೆಂದು ಶಾಸ್ತ್ರವು ಹೇಳುತ್ತದೆ. ತನಗಿಂತ ಮಂಗಳಕರವಾದ ವಸ್ತುವು ಯಾವುದೂ ಇಲ್ಲ. ಆದ್ದರಿಂದ ತನ್ನನ್ನೇ ಸ್ಮರಿಸಿದನು.

ಶ್ರೀಕೃಷ್ಣದೇವನು ಎಲ್ಲಾ ವಸ್ತುಗಳಿಗಿಂತಲೂ ತಾನೇ ಮುಖ್ಯನೆಂದೂ, ತನ್ನಿಂದ ಏರ್ಪಡುವ ಗುಣಕರ್ಮ ಮುಂತಾದವುಗಳಿಗಿಂತ ತಾನು ಭಿನ್ನನಲ್ಲವೆಂದೂ, ತಾನು ತೇಜೋಮಯನೆಂದೂ, ತನ್ನ ತೇಜಸ್ಸು ಯಾವ ಇತರ ವಸ್ತುಗಳ ಸಹಾಯದಿಂದಲೂ ಏರ್ಪಟ್ಟಿಲ್ಲವೆಂದೂ, ತನ್ನ ಸ್ವಭಾವವು ಇತರರ ಅಧೀನವಲ್ಲವೆಂದೂ, ತಾನೇ ಸ್ವತಂತ್ರನೆಂದೂ, ತನಗೆ ಸಮಾನನು ತಾನೇ ಎಂದೂ, ತನ್ನಲ್ಲಿ ಯಾವ ದೋಷಗಳೂ ತನ್ನ ಮಹಿಮೆಯಿಂದಲೇ ಇಲ್ಲವೆಂದೂ, ಸಕಲ ಪ್ರಪಂಚಗಳನ್ನು ಸೃಷ್ಟಿಸುವುದು ಪಾಲಿಸುವುದು ಸಂಹರಿಸುವುದು ಮುಂತಾದ ತನ್ನಲ್ಲಿರುವ ಲಕ್ಷಣಗಳಿಂದ ತನ್ನ ಸ್ವರೂಪವಾದ ಆನಂದವನ್ನು ಯಾವಾಗಲೂ ಅನುಭವಿಸುತ್ತಿರುವುದಾಗಿಯೂ ತನ್ನನ್ನು ಸ್ಮರಿಸಿದನು.

ಪ್ರಾತಃಕಾಲದ ತನ್ನ ಸ್ಮರಣೆಯು ಮುಗಿದ ಕೂಡಲೇ ನೀರಿನಲ್ಲಿ ಅವಗಾಹನ ಸ್ನಾನವನ್ನು ಮಾಡಿದನು. ಶಾಸ್ತ್ರೋಕ್ತ ವಿಧಿಪ್ರಕಾರವಾಗಿ ಸಂಧ್ಯಾವಂದನ, ದೇವತಾರ್ಚನ ಮುಂತಾದವುಗಳನ್ನು ಮಾಡಿ ಮುಗಿಸಿದನು. ಶುದ್ಧವಾದ ಮಡಿವಸ್ತ್ರಗಳನ್ನು ಉಟ್ಟನು. ಗಾಯತ್ರೀಮಂತ್ರ ಮುಂತಾದ ಮಹಾಮಂತ್ರಗಳನ್ನು ಜಪಿಸಿದನು ಬ್ರಹ್ಮಯಜ್ಞ ಮುಂತಾದ ಕರ್ಮಗಳನ್ನು ಮುಗಿಸಿದನು. ಸೂರ್ಯೋದಯ ಕಾಲದಲ್ಲಿ ಸೂರ್ಯೋಪಸ್ಥಾನವನ್ನು ಮಾಡಿದನು. ತನ್ನ ಸನ್ನಿಧಾನವುಳ್ಳ ದೇವತೆಗಳನ್ನೂ ಋಷಿಗಳನ್ನೂ ಪಿತೃಗಳನ್ನೂ ತೃಪ್ತಿಪಡಿಸಿದನು. ವೃದ್ಧರನ್ನೂ ಬ್ರಾಹ್ಮಣರನ್ನೂ ನಮಸ್ಕರಿಸಿದನು.

ಅಸಂಖ್ಯವಾದ ಗೋವುಗಳನ್ನು ಪ್ರತಿದಿನದಲ್ಲಿಯೂ ಅಲಂಕೃತರಾದ ಬ್ರಾಹ್ಮಣರಿಗೆ ದಾನ ಮಾಡುತ್ತಾ ಬಂದನು. ಆ ಗೋವುಗಳ ಕೊಂಬುಗಳನ್ನು ಬಂಗಾರದಿಂದಲೂ ಗೊರಸುಗಳನ್ನು ಬೆಳ್ಳಿಯಿಂದಲೂ ಅಲಂಕರಿಸುತ್ತಿದ್ದನು. ಆ ಗೋವುಗಳು ತುಂಬಾ ಸಾಧುಗಳಾಗಿದ್ದವು. ತುಂಬಾ ಹಾಲನ್ನು ಕೊಡುತ್ತಿದ್ದವು. ಕರುಗಳಿಂದ ಯುಕ್ತವಾಗಿದ್ದವು. ಮೊದಲನೆಯ ಕರುವನ್ನು ಹಾಕಿದವುಗಳಾಗಿದ್ದವು. ಒಳ್ಳೆಯ ಹೊಸವಸ್ತ್ರಗಳಿಂದ ಹೊದಿಸಲ್ಪಟ್ಟಿದ್ದವು. ಈ ಗೋವುಗಳ ಜೊತೆಯಲ್ಲಿ ರೇಷ್ಮೆ ಮಡಿಗಳನ್ನೂ ಕೃಷ್ಣಾಜಿನ, ವ್ಯಾಘ್ರಾಜಿನ ಮುಂತಾದ ಆಸನಗಳನ್ನೂ, ಎಳ್ಳಿನ ರಾಶಿಗಳನ್ನೂ ದಾನ ಮಾಡಿದನು.

ಅನಂತರದಲ್ಲಿ ಗೋವುಗಳನ್ನೂ ಬ್ರಾಹ್ಮಣರನ್ನೂ ದೇವತೆಗಳನ್ನೂ ವೃದ್ಧರನ್ನೂ ಗುರುಗಳನ್ನೂ ಅಶ್ವತ್ಥ ಮುಂತಾದ ಮರಗಳನ್ನೂ ನಮಸ್ಕರಿಸಿದನು. ಗೋವು ಮುಂತಾದವುಗಳು ತನ್ನ ಪ್ರತಿಮೆಗಳಲ್ಲವೇ?

ಅನಂತರದಲ್ಲಿ ತಿಲ ಮುಂತಾದ ಮಂಗಳ ವಸ್ತುಗಳನ್ನು ಮುಟ್ಟಿದನು. ಅನಂತರದಲ್ಲಿ ಮುಕ್ತರಾದ ಜೀವರ ಮಧ್ಯದಲ್ಲಿಯೂ ಅಮುಕ್ತಜೀವರ ಮಧ್ಯದಲ್ಲಿಯೂ ಅಲಂಕಾರದಂತಿರುವ ತನ್ನನ್ನು ಅಲಂಕರಿಸಿಕೊಂಡನು. ನಾನಾ ವಿಧವಾದ ವಸ್ತ್ರಗಳನ್ನು ಧರಿಸಿ ದಿವ್ಯವಾದ ಆಭರಣಗಳನ್ನು ಧರಿಸಿದನು. ದಿವ್ಯವಾದ ಮಾಲೆಗಳಿಂದಲೂ ಗಂಧದಿಂದಲೂ ಅಲಂಕರಿಸಿಕೊಂಡನು.

ಅನಂತರದಲ್ಲಿ ತುಪ್ಪದಲ್ಲಿಯೂ ಕನ್ನಡಿಯಲ್ಲಿಯೂ ತನ್ನ ಮುಖವನ್ನು ನೋಡಿದನು. ಗೋವುಗಳನ್ನೂ ಎತ್ತುಗಳನ್ನೂ ಬ್ರಾಹ್ಮಣರನ್ನೂ ದೇವಾಲಯದಲ್ಲಿ ಪ್ರತಿಷ್ಠಿಸಲ್ಪಟ್ಟ ದೇವತೆಗಳನ್ನೂ ನೋಡಿದನು.

ಆಗ ಅಲ್ಲಿ ದ್ವಾರಕಾಪುರವಾಸಿಗಳೂ ಅಂತಃಪುರದಲ್ಲಿರುವವರೂ ಶ್ರೀಕೃಷ್ಣದೇವನಿಂದ ನಾನಾ ವಿಧವಾದ

ವಸ್ತುಗಳನ್ನು ಕೇಳುವುದಕ್ಕಾಗಿ ಕಾದಿದ್ದರು. ಅವರು ಕೇಳಿದ ಮತ್ತು ಕೇಳದಿದ್ದರೂ ಅವರವರು ಅಪೇಕ್ಷಿಸಿದ ಎಲ್ಲಾ ವಸ್ತುಗಳನ್ನೂ ಕೊಟ್ಟು ತೃಪ್ತಿಪಡಿಸಿದನು. ಅವರೆಲ್ಲರೂ ತೃಪ್ತರಾದುದನ್ನು ಕಂಡು ತಾನೂ ತೃಪ್ತನಾದನು. ಮಾಲೆಗಳನ್ನೂ ತಾಂಬೂಲ, ಗಂಧಲೇಪನ ಮುಂತಾದವುಗಳನ್ನೂ ಮೊದಲು ಬ್ರಾಹ್ಮಣರಿಗೆ ಕೊಟ್ಟನು. ಅನಂತರದಲ್ಲಿ ಮಿತ್ರರಿಗೂ ಅಂತಃಪುರವಾಸಿಗಳಿಗೂ ತನ್ನ ಪತ್ನಿಯರಿಗೂ ಕೊಟ್ಟನು. ಎಲ್ಲರಿಗೂ ತೃಪ್ತಿಯಾದ ಮೇಲೆ ತಾನು ಸ್ವೀಕರಿಸಿದನು. ಮೇಲ್ಕಂಡ ವಿಧದಿಂದ ಮನೆಯ ಯಜಮಾನನು ಸರ್ವರನ್ನೂ ತೃಪ್ತಿಪಡಿಸಬೇಕೆಂದು ತಿಳಿಸಿದನು.

ಅಷ್ಟರಲ್ಲಿ ಶ್ರೀಕೃಷ್ಣದೇವನ ಸಾರಥಿಯಾದ ದಾರುಕನು ಅತ್ಯದ್ಭುತವಾದ ರಥದಲ್ಲಿ ಶೈಬ್ಯ, ಸುಗ್ರೀವ, ಮೇಘಪುಷ್ಪ, ಬಲಾಹಕ ಎಂಬ ನಾಲ್ಕು ಕುದುರೆಗಳನ್ನು ಕಟ್ಟಿದನು. ಆ ರಥವನ್ನು ಶ್ರೀಕೃಷ್ಣದೇವನ ಮುಂದೆ ನಿಲ್ಲಿಸಿ ನಮಸ್ಕರಿಸಿದನು. ಸಾರಥಿಯ ಕೈಯನ್ನು ಹಿಡಿದುಕೊಂಡು ಶ್ರೀಕೃಷ್ಣದೇವನು ರಥವನ್ನು ಏರಿ ಕುಳಿತನು. ಶ್ರೀಕೃಷ್ಣದೇವನ ಒಂದು ಪಕ್ಕದಲ್ಲಿ ಸಾತ್ಯಕಿಯೂ ಇನ್ನೊಂದು ಪಕ್ಕದಲ್ಲಿ ಉದ್ಧವನೂ ಕುಳಿತರು. ಅಂತಃಪುರದಲ್ಲಿರುವ ಶ್ರೀಕೃಷ್ಣದೇವನ ಎಲ್ಲಾ ಪತ್ನಿಯರೂ ಲಜ್ಜೆಯಿಂದ ಕಡೆಗಣ್ಣುಗಳ ನೋಟದಿಂದ ಆಸೆಯಿಂದ ನೋಡುತ್ತಿದ್ದರು. ತುಂಬಾ ಕಷ್ಟದಿಂದ ಬೀಳ್ಕೊಟ್ಟರು. ಶ್ರೀಕೃಷ್ಣದೇವನು ಎಲ್ಲಾ ದಿಕ್ಕುಗಳನ್ನೂ ಬೆಳಗಿಸುತ್ತಾ ಮೆಲ್ಲನೆ ನಗುತ್ತಾ ಹೊರಟನು. ಎಲ್ಲಾ ಯಾದವರಿಂದಲೂ ಸುತ್ತುವರಿಯಲ್ಪಟ್ಟವನಾಗಿ ಸುಧರ್ಮಾ ಎಂಬ ಸಭೆಗೆ ಬಂದನು ಆ ಸಭೆಗೆ ಪ್ರವೇಶಿಸಿದವರಿಗೆ ಹಸಿವು ನೀರಡಿಕೆ ಮುಂತಾದವುಗಳ ಯಾವ ಬಾಧೆಯೂ ಇಲ್ಲ. ಸುಧರ್ಮಾ ಎಂಬ ಸಭೆಯಲ್ಲಿ ಪುರುಷ ಶ್ರೇಷ್ಠರಾದ ಯಾದವರಿಂದ ನಕ್ಷತ್ರಗಳ ಮಧ್ಯದಲ್ಲಿ ಚಂದ್ರನಂತೆ ಸುತ್ತುವರಿಯಲ್ಪಟ್ಟನು. ಆ ಸಭೆಯಲ್ಲಿರುವ ಎಲ್ಲಾ ಮಂತ್ರಿಗಳೂ ನಾನಾ ವಿಧವಾದ ಹಾಸ್ಯರಸಗಳಿಂದ ಶ್ರೀಕೃಷ್ಣದೇವನನ್ನು ಸಂತೋಷಪಡಿಸಿದರು. ನಾಟ್ಯಾಚಾರ್ಯರು ನಾಟ್ಯದಿಂದಲೂ ನರ್ತಕಿಯರು ನರ್ತನದಿಂದಲೂ ಸಂತೋಷಪಡಿಸಿದರು. ಸೂತ, ಮಾಗಧ, ಬಂದಿಗಳು ಸ್ತುತಿಸಿದರು. ಆ ಸಭೆಯಲ್ಲಿದ್ದ ಬ್ರಹ್ಮಜ್ಞಾನಿಗಳಾದ ಪೌರಾಣಿಕರು ಪುಣ್ಯಪುರುಷರಾದ ಪ್ರಾಚೀನರಾಜರುಗಳ ಕಥೆಗಳನ್ನು ಹೇಳಿದರು.

ಆಗ ಒಬ್ಬ ಪುರುಷನು ಅಲ್ಲಿಗೆ ಬಂದನು. ಇಷ್ಟರ ವರೆಗೆ ಯಾರೂ ಅವನನ್ನು ದ್ವಾರಕೆಯಲ್ಲಿ ನೋಡಿರಲಿಲ್ಲ. ಅವನು ಶ್ರೀಕೃಷ್ಣದೇವನನ್ನು ನೋಡಿ ಮಾತಾಡಬೇಕೆಂದನು. ದ್ವಾರಪಾಲಕರು ಶ್ರೀಕೃಷ್ಣದೇವನಿಗೆ ಈ ವಿಷಯವನ್ನು ತಿಳಿಸಿದರು. ಶ್ರೀಕೃಷ್ಣದೇವನು ಕರೆದುಕೊಂಡು ಬಾ ಎಂದು ಹೇಳಿದನು. ಶ್ರೀಕೃಷ್ಣದೇವನ ಹದಿನಾರು ಸಾವಿರದ ನೂರು ಪತ್ನಿಯರ ತಂದೆಯವರ ಮತ್ತು ಅಣ್ಣತಮ್ಮಂದಿರುಗಳ ಕಡೆಯಿಂದ ದೂತನಾಗಿ ಬಂದಿರುವ ಆ ಅಪೂರ್ವಪುರುಷನು ಹೇಳಲು ಆರಂಭಿಸಿದನು.

## ರಾಜರುಗಳು ಮಾಡಿದ ಶ್ರೀಕೃಷ್ಣದೇವನ ಸ್ತುತಿ

"ಓ ಶ್ರೀಕೃಷ್ಣದೇವ!, ನಿನ್ನ ಮಾವಂದಿರೂ ನಿನ್ನ ಹದಿನಾರುಸಾವಿರದ ನೂರು ಪತ್ನಿಯರ ಸಹೋದರರೂ ನಿನ್ನನ್ನು ಈ ರೀತಿಯಲ್ಲಿ ಸ್ತುತಿಸುತ್ತಿರುವರು. "ಲೋಕದಲ್ಲಿರುವ ಸರ್ವರೂ ತಮ ತಮಗೆ ವಿಹಿತವಾಗಿರುವ ಕರ್ಮಗಳನ್ನು ಮಾಡುತ್ತಿರುವುದಾಗಿ ತಿಳಿದುಕೊಂಡಿರುವರು. ಎಲ್ಲರೂ ಮಾಡಬೇಕಾದ ಅವಶ್ಯಕರ್ತವ್ಯವು ನಿನ್ನ

ಪೂಜೆ. ಆ ಪೂಜೆಯ ವಿಧಾನವನ್ನು ನೀನೇ ಉಪದೇಶಿಸಿರುವಿ. ನಿನ್ನ ಪೂಜೆಯನ್ನು ಹೇಗೆ ಮಾಡಬೇಕು? ಎಂಬ ವಿಷಯವನ್ನು ನೀನಲ್ಲದೆ ಇತರರು ಯಾರು ಬಲ್ಲರು? ಸರ್ವರೂ ನಿನ್ನಿಂದ ನಿನ್ನ ಪೂಜಾವಿಧಿಯನ್ನು ತಿಳಿಯದೆ ಯಾರು ಯಾರಿಂದಲೋ ನಿನ್ನ ಪೂಜಾ ವಿಧಿಯನ್ನು ತಿಳಿಯುತ್ತಿರುವರು. ಅವರವರು ನಿನ್ನ ಪೂಜಾವಿಧಿಯನ್ನು ಅವರವರಿಗೆ ತೋರಿದಂತೆ ಉಪದೇಶಿಸುತ್ತಿರುವರು. ಇದರಿಂದ ಸರ್ವರೂ ತಿಳಿದಿರುವುದು ವಿಕರ್ಮ ಅಂದರೆ ನಿನ್ನ ಪೂಜೆಗೆ ವಿರುದ್ಧವಾದ ಕರ್ಮಗಳೇ ಆಗುತ್ತವೆ.''

"ನಿನ್ನ ಪೂಜೆಯನ್ನು ನಿನ್ನಿಂದ ತಿಳಿದು ಸರಿಯಾಗಿ ಮಾಡಿದರೆ ಅತ್ಯಂತ ಸುಲಭವೂ ಮೋಕ್ಷ ಮುಂತಾದ ಮಹಾಪುರುಷಾರ್ಥಗಳನ್ನು ಕೊಡತಕ್ಕವುಗಳೂ ಆಗುತ್ತವೆ. ಅತ್ಯಲ್ಪ ಶ್ರಮದಿಂದ ಮಹಾಪುರುಷಾರ್ಥವನ್ನು ಕೊಡುತ್ತಿರುವ ನಿನ್ನ ಪೂಜೆಯು ಅತ್ಯಂತ ಕುಶಲಕರ್ಮವೇ ಆಗುತ್ತದೆ. ಅವುಗಳನ್ನು ಬಿಟ್ಟು ಸರ್ವರೂ ವಿಕರ್ಮಗಳಲ್ಲಿ ಆಸಕ್ತರಾಗಿರುವರು.''

ಆದರೆ ಒಬ್ಬೊಬ್ಬನಿಗೂ ಬಹುಕಾಲದ ವರೆಗೆ ಬಾಳಬೇಕು ಎಂಬ ಆಸೆಯಿದೆ. ಆ ಆಸೆಯಿಂದಲೇ ಎಲ್ಲಾ ಕರ್ಮಗಳನ್ನು ಮಾಡುತ್ತಿರುವರು. ಕುಶಲಕರ್ಮಗಳಿಗೂ ವಿಕರ್ಮಗಳಿಗೂ ಫಲವನ್ನು ಕೊಡುವವನು ನೀನೇ ಅಲ್ಲವೇ? ಎಲ್ಲಾ ಜೀವರೂ ಮಾಡಿರುವ ಕರ್ಮಗಳಿಗೆ ಯೋಗ್ಯವಾದ ಫಲವನ್ನು ಕೊಡುತ್ತಿರುವ ಅತಿಬಲಿಷ್ಠನಾದ ನೀನು ಅವರವರು ಮಾಡುತ್ತಿರುವ ವಿಕರ್ಮಗಳನ್ನೂ ಕುಶಲಕರ್ಮಗಳಲ್ಲಿ ಅವರಿಗಿರುವ ಅಸಡ್ಡೆಯನ್ನೂ ನೋಡುತ್ತಿರುವಿ. ಸರ್ವರಲ್ಲಿರುವ ಜೀವನದ ಆಸೆಯನ್ನು ಯಾವಾಗಲೂ ಕಣ್ಣು ತೆರೆದುಕೊಂಡು ನೋಡುತ್ತಾ ಮರುಕ್ಷಣದಲ್ಲಿಯೇ ಮುರಿಯುತ್ತಿರುವವನು ನೀನು ಆದ್ದರಿಂದ ನಿನ್ನನ್ನು "ಅನಿಮಿಷ'' ಅಂದರೆ "ಕಣ್ಣನ್ನು ಮುಚ್ಚದಿರುವವನು'' ಎಂದು ಜ್ಞಾನಿಗಳು ಹೇಳುತ್ತಿರುವರು. ಓ ಅನಿಮಿಷನೆನಿಸುವ ಮಹಾಪ್ರಭುವೇ, ನಿನ್ನನ್ನು ಅತ್ಯಂತ ಭಕ್ತಿಯಿಂದ ನಾವೆಲ್ಲರೂ ನಮಸ್ಕರಿಸುತ್ತಿರುವೆವು.''

"ಓ ಕೃಷ್ಣದೇವ!, ನೀನು ಕಾಲ ಎಂಬ ಹೆಸರಿನಿಂದ ಸಜ್ಜನರನ್ನು ರಕ್ಷಿಸುವುದಕ್ಕೂ ದುಷ್ಟರನ್ನು ಶಿಕ್ಷಿಸುವುದಕ್ಕೂ ಅವತಾರವನ್ನು ಮಾಡಿದಿ. ನಿನ್ನ ಆಜ್ಞೆಯನ್ನು ಮೀರುವವನು ಅಯೋಗ್ಯನೆನಿಸುವನು. ಅವನು ಎಷ್ಟು ಪುಣ್ಯಗಳನ್ನು ಮಾಡಿದರೂ ಆ ಪುಣ್ಯಗಳಿಗೆ ಫಲವಿಲ್ಲ. ಪುಣ್ಯಕಾರ್ಯಗಳಿಗೆ ಫಲವನ್ನು ಕೊಡುವವನು ನೀನೇ. ನಿನ್ನ ಆಜ್ಞೆಯನ್ನು ಮೀರಬೇಕೆಂದು ಆಸೆಯುಳ್ಳವನು ಪುಣ್ಯಕಾರ್ಯಗಳನ್ನು ಮಾಡಿದರೆ ಆ ಪುಣ್ಯಕರ್ಮಗಳಿಗೆ ಫಲವು ಬರುತ್ತದೆಯೇ?

ಓ ಕೃಷ್ಣದೇವ!, ಅಯೋಗ್ಯರಾದ ನಮಗೆ ಪರಲೋಕದಲ್ಲಿ ಏರ್ಪಡುವ ಸ್ವರ್ಗಸುಖದ ಆಸೆಯಿಲ್ಲ. ಈ ಲೋಕದಲ್ಲಿ ಬರುವ ರಾಜ್ಯಸುಖವನ್ನೇ ಸುಖವೆಂದು ಅನುಭವಿಸುತ್ತಿರುವೆವು. ಈ ಸುಖವೂ ಸ್ವಪ್ನ ಸುಖದಂತೆ ಕ್ಷಣಿಕವಾದುದು. ಈ ಕ್ಷಣಿಕವಾದ ಸುಖವೂ ಪರಾಧೀನವಾದುದು. ಈ ಸುಖವನ್ನು ಅನುಭವಿಸುವುದೂ ಈ ಮನುಷ್ಯದೇಹದಿಂದ. ಈ ಮನುಷ್ಯದೇಹವೂ ಯಾವ ಕ್ಷಣದಲ್ಲಿಯೂ ನಾಶದ ಭಯದಿಂದ ಯುಕ್ತವಾದುದು. ಹೆಣದಂತೆ ಅಮಂಗಲವಾದ ಮತ್ತು ದುಃಖಸಾಧನವಾದ ಈ ದೇಹದಿಂದ ರಾಜ್ಯವನ್ನು ನಿರ್ವಹಿಸುತ್ತಾ ಹೆಮ್ಮೆಯಿಂದ ಯುಕ್ತರಾಗಿರುವೆವು. ಈ ಸುಖವನ್ನು ಬಿಟ್ಟು ಇತರ ಸುಖವನ್ನು ನಮ್ಮ ದೇಹದಿಂದ ನಾವು ಅನುಭವಿಸಿದವರಲ್ಲ. ಆದರೆ ಈ ದೇಹದಿಂದ ಏರ್ಪಡುವ ಶಾಶ್ವತ ಸುಖವು ಇದೆ. ಆ ಸುಖವನ್ನು ನಾವು ಅಪೇಕ್ಷಿಸುತ್ತಿಲ್ಲ. ಯಾವ

ವಿಧವಾದ ಸುಖವನ್ನೂ ಅಪೇಕ್ಷಿಸದೆ ನಿನ್ನ ಅನುಗ್ರಹವನ್ನೇ ಅಪೇಕ್ಷಿಸುತ್ತಿರುವ ಮಹಾತ್ಮರಿಗೆ ಆ ಸುಖವು ತಮ್ಮ ಮನಸ್ಸಿನಲ್ಲಿಯೇ ಸಿಗುತ್ತದೆ. ನಿನ್ನ ಮಾಯೆಯಿಂದ ನಾವೆಲ್ಲರೂ ಮೋಹಿತರಾಗಿರುವೆವು. ನಮಗೆ ಆ ಸುಖವು ಸಿಗಲಾರದು. ಯೋಗಿಗಳಿಗೆ ಸಿಗುತ್ತಿರುವ ಪರಮ ಸುಖವು ನಮಗೆ ಸಿಗುತ್ತಿಲ್ಲ. ಇತರ ಸುಖಗಳು ಸುಖವೇ ಅಲ್ಲ. ಸುಮ್ಮನೇ ನಾವೆಲ್ಲರೂ ಕ್ಲೇಶದಿಂದ ಯುಕ್ತರಾಗಿರುವೆವು.''

"ಓ ಶ್ರೀಕೃಷ್ಣದೇವ!, ನಿನ್ನ ಪಾದಗಳನ್ನು ಯಾರು ಆರಾಧಿಸುತ್ತಿರುವರೋ ಅವರ ಶೋಕಗಳೆಲ್ಲವನ್ನೂ ನೀನು ಪರಿಹರಿಸುತ್ತಿರುವಿ. ಜರಾಸಂಧನು ನಮ್ಮೆಲ್ಲರನ್ನೂ ಕರ್ಮಬಂಧನವು ಬಿಗಿದಂತೆ ಕಾರಾಗೃಹದಲ್ಲಿ ಬಿಗಿದಿರುವನು. ಕೊಲೆಗಾರನು ಕುರಿಗಳನ್ನು ಕಟ್ಟಿಹಾಕಿದಂತೆ ನಮ್ಮೆಲ್ಲರನ್ನು ಕಟ್ಟಿ ಹಾಕಿರುವನು. ಈ ಜರಾಸಂಧನು ದೊಡ್ಡ ಸೈನ್ಯದಿಂದ ಸಹಿತನಾಗಿ ಹದಿನೆಂಟು ಸಲ ನಿನ್ನೊಡನೆ ಯುದ್ಧಕ್ಕಾಗಿ ಬಂದನು. ಆಗ ನೀನು ಹದಿನೇಳು ಸಲ ಅವನನ್ನು ಜಯಿಸಿದಿ. ಹದಿನೆಂಟನೆಯ ಯುದ್ಧದಲ್ಲಿ ಅವನನ್ನು ನಿಗ್ರಹಿಸಲಿಲ್ಲ. ನೀನೇ ಸೋತಂತೆ ನಟಿಸಿದಿ. ಅನಂತವೀರ್ಯದಿಂದ ಯುಕ್ತನಾಗಿರುವ ನೀನೆಲ್ಲಿ. ಅಲ್ಪಬಲದಿಂದ ಯುಕ್ತನಾಗಿರುವ ಜರಾಸಂಧನೆಲ್ಲಿ. ಆದರೂ ಜಯಿಸಿದಂತೆ ಹೆಮ್ಮೆಯಿಂದ ಯುಕ್ತನಾಗಿರುವ ಜರಾಸಂಧನು ನಿನ್ನ ಭಕ್ತರಾಗಿರುವ ನಮ್ಮೆಲ್ಲರನ್ನೂ ಸಂಹರಿಸಬೇಕೆಂದು ತೀರ್ಮಾನಿಸಿರುವನು. ಅವನು ಒಂದು ಯಜ್ಞವನ್ನು ಮಾಡುತ್ತಾನಂತೆ. ಆ ಯಜ್ಞದಲ್ಲಿ ನಮ್ಮನ್ನು ಆಹುತಿ ಕೊಡುತ್ತಾನಂತೆ. ನಾವು ಇಪ್ಪತ್ತೆರಡು ಸಾವಿರದ ನೂರ ಎಂಭತ್ತು ಜನರು ಇರುವೆವು. ಆ ಯಜ್ಞದಲ್ಲಿ ಅವನಿಂದ ಸರ್ವೋತ್ತಮನೆಂದು ತೀರ್ಮಾನಿಸಲ್ಪಟ್ಟ ರುದ್ರನು ದೇವತೆಯಂತೆ. ಈ ವೇದ ನಿಷಿದ್ಧವಾದ ಯಾಗವನ್ನು ಶೀಘ್ರದಲ್ಲಿಯೇ ಮಾಡುತ್ತಾನಂತೆ. ಆದ್ದರಿಂದ ನೀನು ಕೂಡಲೇ ಇಲ್ಲಿಗೆ ಬಂದು ಅವನನ್ನು ಸಂಹರಿಸಿ ನಮ್ಮನ್ನು ಬಿಡಿಸಬೇಕು. ನಮ್ಮಿಂದ ನಿನ್ನ ಸೇವೆಯನ್ನು ಮಾಡಿಸಬೇಕು.'' ಇದು ನಿನ್ನ ವಿವಾಹಬಂಧುಗಳ ಪ್ರಾರ್ಥನೆ ಎಂದು ದೂತನು ಹೇಳಿದನು.

"ಓ ಮಹಾಪ್ರಭೋ, ಜರಾಸಂಧನಿಂದ ಕಾರಾಗೃಹದಲ್ಲಿಡಲ್ಪಟ್ಟ ನಿನ್ನ ವಿವಾಹಬಂಧುಗಳು ನಿನ್ನನ್ನು ನೋಡಬೇಕೆಂದು ಆಶಿಸುತ್ತಿರುವರು. ದೀನರಾದ ಅವರಿಗೆ ಕ್ಷೇಮವು ಏರ್ಪಡುವಂತೆ ಮಾಡು'' ಎಂದು ದೂತನು ಹೇಳಿದನು. ಶ್ರೀಕೃಷ್ಣದೇವನು ಈ ಮಾತುಗಳನ್ನು ಕೇಳಿದನು. ರಾಜರುಗಳಿಗೆ ಅತಿಶೀಘ್ರದಲ್ಲಿ ತನ್ನ ದರ್ಶನವನ್ನು ಕೊಡುವುದಾಗಿಯೂ ರಾಜರುಗಳನ್ನು ಬಂಧನದಿಂದ ಬಿಡಿಸುವುದಾಗಿಯೂ ಹೇಳಿದನು. ಆ ಬ್ರಾಹ್ಮಣನು ಸಂತೋಷದಿಂದ ಹಿಂದಿರುಗಿದನು.

## ಸುರಮುನಿವಿದಿತಾಶೇಷಕೃತ್ಯಃ

ದೇವತೆಗಳ ಮಧ್ಯದಲ್ಲಿ ಮುನಿಯಾಗಿರುವ ನಾರದರಿಂದ ಸಕಲ ವಿಷಯಗಳನ್ನೂ ತಿಳಿದನು.

**(೯೬) ವಿಶೇಷಾರ್ಥ - ತಸ್ಮಿನ್ನೇವ ಸಮಯೇ ಆಗತೇನ ನಾರದೇನ ಪಾಂಡವಚಿಕೀರ್ಷಿತ ರಾಜಸೂಯಮುಖೋದ್ಯೋಗಂ ಶ್ರುತ್ವಾ ತತ್ರ ಗಂತುಂ ತೇನ ಪ್ರಾರ್ಥಿತಃ ತಮನುಜ್ಞಾಯ, ಅಷ್ಟೋತ್ತರಶತಯುಕ್ತಷೋಡಶಕಾಂತಾಭಿರನ್ವಿತಃ ಪುತ್ರಪೌತ್ರಾದಿಭಿರನೇಕಸೇನಾಭಿಸ್ಸಹ ಕನಕಮಯಶಿಬಿಕಾದಿ ವಾಹನೇಷ್ವಾರುಹ್ಯ ಸಕಲಕಾಮ್ಯೈಃ ಪೂರ್ಣಂ ಇಂದ್ರಪ್ರಸ್ಥಪುರಂ ಪ್ರಾಪ್ಯ, ಪಾಂಡವೈಃ ಪೂಜಿತಃ,**

**ವಿಶೇಷಾರ್ಥ ವಿವರಣೆ** - ರಾಜರುಗಳ ಪ್ರತಿನಿಧಿಯಾಗಿ ಬಂದಿರುವ ದೂತನು ಹಿಂದಿರುಗಿದನು. ಅದೇ ಸಮಯದಲ್ಲಿ ಮಹಾತೇಜಸ್ವಿಗಳೂ ಎಳೆಕೆಂಪಾಗಿರುವ ಜಡೆಯನ್ನು ಧರಿಸಿದವರೂ ಆಗಿರುವ ನಾರದರು ಸೂರ್ಯನಂತೆ ತೇಜಸ್ಸಿನಿಂದ ಯುಕ್ತರಾಗಿ ಶ್ರೀಕೃಷ್ಣದೇವನ ಮುಂದೆ ಪ್ರಾದುರ್ಭವಿಸಿದರು. ಮಧುರವಾದ ಧ್ವನಿಯಿಂದ ಶ್ರೀಕೃಷ್ಣದೇವನಿಗೆ ಅತ್ಯಂತ ಪ್ರಿಯವಾಗಿರುವ ಅವನ ಕರ್ಮಗಳನ್ನೂ ಅವನ ಅವತಾರ ಲೀಲೆಗಳನ್ನೂ ಗಾಯನ ಮಾಡುತ್ತಾ ಬಂದರು. ಆ ಗಾಯನವನ್ನು ಕೇಳುತ್ತಿರುವವರ ಎಲ್ಲಾ ಪಾಪಗಳೂ ಓಡುತ್ತಿದ್ದವು. ಸರ್ವರೂ ಆನಂದ ಪರವಶರಾಗುತ್ತಿದ್ದರು.

ಅವರನ್ನು ಶ್ರೀಕೃಷ್ಣದೇವನು ನೋಡಿ ಎದ್ದು ನಿಂತು ತಲೆಯನ್ನು ಬಗ್ಗಿಸಿ ನಮಸ್ಕರಿಸಿದನು. ಸಭೆಯಲ್ಲಿರುವ ಸಭ್ಯರೂ, ಅವನ ಸೇವಕರೂ ಸರ್ವರೂ ಎದ್ದು ನಿಂತು. ತಲೆಯನ್ನು ಬಗ್ಗಿಸಿ ನಮಸ್ಕರಿಸಿ ಕ್ರಮವಾಗಿ ಎಲ್ಲಾ ಮರ್ಯಾದೆಗಳನ್ನೂ ಮಾಡಿದರು. ಶ್ರೀಕೃಷ್ಣದೇವನು ಅತ್ಯಂತ ಮಧುರವಾದ ಮಾತುಗಳಿಂದ ನಾರದರನ್ನು ತೃಪ್ತಿಪಡಿಸುತ್ತಾ ಮಾತನಾಡಿದನು.

"ನಾರದರೇ!, ನೀವು ಯಾವಾಗಲೂ ಎಲ್ಲಾ ಲೋಕಗಳಲ್ಲಿಯೂ ಸಂಚರಿಸುತ್ತಿರುವಿರಿ. ನನ್ನಿಂದ ನಿರ್ಮಿತವಾದ ಲೋಕಗಳಲ್ಲಿ ನಿಮಗೆ ತಿಳಿಯದ ವಿಷಯವಿಲ್ಲ. ಆದ್ದರಿಂದ ಸಕಲ ಸಜ್ಜನರಿಗೂ ಯಾವ ವಿಧವಾದ ಭಯವೂ ಇಲ್ಲ. ಈಗ ಪಾಂಡವರು ಯಾವ ಕಾರ್ಯವನ್ನು ಮಾಡಬೇಕೆಂದು ತೀರ್ಮಾನಿಸಿರುವರೋ ಆ ಕಾರ್ಯವನ್ನು ಕುರಿತು ಹೇಳಬೇಕು" ಎಂದು ಪ್ರಾರ್ಥಿಸಿದನು.

ಶ್ರೀಕೃಷ್ಣದೇವನ ಈ ಪ್ರಶ್ನೆಗೆ ನಾರದರು ಉತ್ತರವನ್ನು ಕೊಡಲು ಆರಂಭಿಸಿದರು. "ಓ ಶ್ರೀಕೃಷ್ಣದೇವ!, ನಿನ್ನಲ್ಲಿರುವ ಮಹಿಮೆಗಳು ಅಪಾರವಾದುವು. ನೀನು ಎಲ್ಲಾ ವಸ್ತುಗಳ ಒಳಗೂ ಹೊರಗೂ ವ್ಯಾಪ್ತನಾಗಿರುವಿ. ಕಟ್ಟಿಗೆಯೊಳಗೆ ವ್ಯಾಪ್ತವಾಗಿರುವ ಅಗ್ನಿಯ ತೇಜಸ್ಸುಗಳು ಮಥನದಿಂದ ವ್ಯಕ್ತವಾಗುತ್ತವೆ. ನಿನ್ನ ಮಹಿಮೆಗಳು ಅಜ್ಞಾನಿಗಳಿಂದ ತಿಳಿಯಲು ಅಶಕ್ಯವಾಗಿವೆ. ನಿನ್ನ ಇಚ್ಛೆಯಿಂದಲೇ ಈ ಪ್ರಪಂಚವನ್ನು ಸೃಷ್ಟಿಸಿ ಸಂಹರಿಸುತ್ತಿರುವ ನಿನ್ನ ಅಚಿಂತ್ಯವಾದ ಮಹಿಮೆಗಳನ್ನು ಯಾವನು ತಾನೇ ಸರಿಯಾಗಿ ತಿಳಿಯುವನು? ಅಂತಹ ನಿನ್ನ ಮಹಿಮೆಗಳನ್ನು ನಿನ್ನ ಅನುಗ್ರಹದಿಂದ ಯಾವಾಗಲೂ ಸಂಚರಿಸುತ್ತಾ ತಿಳಿಯುತ್ತಿರುವೆನು."

"ಓ ಶ್ರೀಕೃಷ್ಣದೇವ!, ಎಲ್ಲಾ ಜೀವರೂ ಅಜ್ಞಾನದಿಂದ ಸಂಸಾರವನ್ನು ಅನುಭವಿಸುತ್ತಿರುವರು. ಅವರಿಗೆ ಅನರ್ಥ ಪರಂಪರೆಯನ್ನು ಕೊಡುತ್ತಿರುವ ಈ ದೇಹದಿಂದ ಸರ್ವಥಾ ವಿಯೋಗವು ಏರ್ಪಡುವುದಕ್ಕೆ ನಿನ್ನ ಮಹಿಮೆಗಳ ಜ್ಞಾನವು ಏರ್ಪಡಬೇಕು. ನೀನು ಲೀಲೆಯಿಂದ ನಾನಾ ವಿಧವಾದ ಅವತಾರಗಳನ್ನು ಸ್ವೀಕರಿಸುತ್ತಿರುವಿ. ಆ ಅವತಾರಗಳಿಂದ ನಿನ್ನ ಮಹಿಮೆಗಳನ್ನು ತಿಳಿಸುತ್ತಿರುವಿ. ನಿನ್ನ ಲೀಲಾವತಾರಗಳಿಂದ ನನ್ನ ಜ್ಞಾನವೂ ಹೆಚ್ಚಬೇಕು. ಅದಕ್ಕೋಸ್ಕರ ನಾನು ಎಲ್ಲಾ ಲೋಕಗಳಲ್ಲಿಯೂ ಯಾವಾಗಲೂ ಸುತ್ತುತ್ತಿರುವೆನು. ನಿನ್ನ ಲೀಲಾವಿಷಯಕವಾದ ಅಜ್ಞಾನವನ್ನು ಪರಿಹರಿಸು. ತತ್ವಜ್ಞಾನವು ಹೆಚ್ಚುವಂತೆ ಮಾಡು. ನನ್ನಂತಹ ದೇವರ್ಷಿಗಳಿಗೂ ಸಹ ನಿನ್ನ ಅನುಗ್ರಹದಿಂದಲೇ ಜ್ಞಾನವು ಏರ್ಪಡುತ್ತದೆ. ಆದ್ದರಿಂದ ಜ್ಞಾನಮೂರ್ತಿಯಾಗಿರುವ ನಿನಗೆ ಹೇಳಬೇಕಾದದ್ದು ಯಾವುದೂ ಇಲ್ಲ. ಆದರೂ ನೀನು ಕೇಳಿರುವಿ. ಅದಕ್ಕಾಗಿ ನಾನು ಪ್ರತ್ಯುತ್ತರವನ್ನು ಕೊಡಬೇಕು."

"ಸಕಲ ಪುರುಷಾರ್ಥಗಳು ಬರಬೇಕಾದರೂ ನಿನ್ನಲ್ಲಿ ಭಕ್ತಿಯನ್ನು ಸರ್ವರೂ ಮಾಡಬೇಕು. ಅದಕ್ಕಾಗಿಯೇ ನಿನಗಿಂತ ಭಿನ್ನರಾದ ದೇವತೆಗಳು ಯಜ್ಞ ಮುಂತಾದ ಧರ್ಮಕಾರ್ಯಗಳನ್ನು ಮಾಡುತ್ತಿರುವರು. ನಿನ್ನ ಸೋದರ ಅತ್ತೆಯ ಮಗನೂ ನಿನ್ನ ಭಕ್ತನೂ ಆಗಿರುವ ಧರ್ಮರಾಜನು ಸಂಕಲ್ಪಿಸಿರುವ ಕಾರ್ಯವನ್ನು ಹೇಳುವೆನು. ಯಜ್ಞಗಳಲ್ಲಿ ಶ್ರೇಷ್ಠವಾಗಿರುವ ರಾಜಸೂಯಯಾಗದಿಂದ ನಿನ್ನನ್ನು ಪೂಜಿಸುವೆನೆಂದು ತೀರ್ಮಾನಿಸಿರುವನು. ಆ ಯಾಗವು ಬ್ರಹ್ಮಪದವಿಗೆ ಯೋಗ್ಯರಾದವರಿಗೆ ಬ್ರಹ್ಮಪದವಿಯನ್ನು ಕೊಡುತ್ತದೆ. ಆ ಯಾಗವನ್ನು ಉತ್ತಮರೀತಿಯಿಂದ ಮಾಡಬೇಕೆಂದು ತೀರ್ಮಾನಿಸಿರುವನು. ನೀನು ಸಂತೋಷದಿಂದ ಅನುಗ್ರಹಿಸು. ಉತ್ತಮವಾದ ಸಕಲ ಗುಣಗಳಿಂದ ಪರಿಪೂರ್ಣನಾದುದರಿಂದ "ಬ್ರಹ್ಮ" ಎಂದು ಹೊಗಳಲ್ಪಡುವ ನಿನ್ನ ಪ್ರೀತಿಗಾಗಿ ಮಾಡುವ ಯಾಗವನ್ನು ನೋಡುವುದಕ್ಕಾಗಿ ಎಲ್ಲಾ ದೇವಶ್ರೇಷ್ಠರೂ ಯಶಸ್ವಿಗಳಾದ ರಾಜರುಗಳೂ ಬರುವರು. ನಿನ್ನನ್ನು ಸರ್ವರೂ ನೋಡುವರು. ನಿನ್ನ ಪಾದಗಳನ್ನು ಸ್ಪರ್ಶಿಸುವರು. ಈ ದರ್ಶನದಿಂದಲೂ ಪಾದಸ್ಪರ್ಶದಿಂದಲೂ ಚಂಡಾಲ ಮುಂತಾದ ನೀಚ ಯೋನಿಯಲ್ಲಿ ಹುಟ್ಟಿದವರೂ ಪರಿಶುದ್ಧ ರಾಗುತ್ತಿರುವರು. ಹೀಗಿರುವಾಗ ದೇವತೆಗಳೂ ಯಶಸ್ವಿಗಳಾದ ರಾಜರುಗಳೂ ಪರಿಶುದ್ಧರಾಗುವ ವಿಷಯದಲ್ಲಿ ಸಂಶಯವೇನಿದೆ?" "ನಿನ್ನ ನಿರ್ಮಲವಾದ ಕೀರ್ತಿಯು ದೇವಲೋಕದಲ್ಲಿಯೂ ಪಾತಾಳದಲ್ಲಿಯೂ ಭೂಮಿಯಲ್ಲಿಯೂ ಎಲ್ಲಾ ದಿಕ್ಕುಗಳಲ್ಲಿಯೂ ವ್ಯಾಪ್ತವಾಗಿದೆ. ನಿನ್ನ ಪಾದಗಳನ್ನು ತೊಳೆದಿರುವ ಗಂಗೆಯು ನಿನ್ನ ಪಾದಗಳ ಧೂಳಿಗಳಿಂದ ಯುಕ್ತವಾದ ಅಲೆಗಳನ್ನು ಹರಿಯುವಂತೆ ಮಾಡುತ್ತಾ ಸಕಲ ಲೋಕಗಳನ್ನೂ ಪರಿಶುದ್ಧವಾಗುವಂತೆ ಮಾಡುತ್ತಾ ಇದೆ. ಅಂತಹ ಪುಣ್ಯಮೂರ್ತಿಯಾದ ನೀನು ಧರ್ಮರಾಜನ ರಾಜಸೂಯಯಾಗಕ್ಕೆ ಬರಬೇಕು. ಸರ್ವರನ್ನೂ ಪರಿಶುದ್ಧರಾಗುವಂತೆ ಮಾಡಬೇಕು" ಎಂದು ನಾರದರು ಪ್ರಾರ್ಥಿಸಿದರು. ನಾರದರ ಮಾತುಗಳನ್ನು ಉದ್ಧವನು ಕೇಳಿದನು. ಆ ಸಭೆಯಲ್ಲಿರುವ ಸಕಲ ಸಭ್ಯರ ಮತ್ತು ಶ್ರೀಕೃಷ್ಣದೇವನ ಅಭಿಪ್ರಾಯವನ್ನು ತಿಳಿದನು.

ಓ ಶ್ರೀಕೃಷ್ಣದೇವ!, ದೇವರ್ಷಿಗಳಾದ ನಾರದರು ಹೇಳಿದ ಮಾತುಗಳನ್ನು ಕೇಳಿದಿ. ಧರ್ಮರಾಜನು ನಿನ್ನ ಸೋದರ ಅತ್ತೆಯ ಮಗನು. ಅವನು ತಾನು ಮಾಡುವ ಯಾಗದಲ್ಲಿ ಸಹಾಯಕ್ಕಾಗಿ ನಿನ್ನನ್ನು ಕರೆಯುತ್ತಿದ್ದಾನೆ. ಸ್ವಲ್ಪ ಹಿಂದೆ ಶರಣಾಗತರಾಗಿರುವ ರಾಜರುಗಳ ಮಾತುಗಳನ್ನು ದೂತನು ಹೇಳಿದನು. ಅವನ ಮಾತಿನಂತೆ ಶರಣಾಗತರಾದ ರಾಜರನ್ನೂ ರಕ್ಷಿಸಬೇಕು. ಈ ಎರಡು ಕಾರ್ಯಗಳಲ್ಲಿ ಯಾವ ಕಾರ್ಯವನ್ನು ಮೊದಲು ಮಾಡಬೇಕು? ಎಂಬ ಪ್ರಶ್ನೆಯು ಬರುತ್ತದೆ. ರಾಜಸೂಯಯಾಗವನ್ನು ಮಾಡುವವನು ಆರಂಭದಲ್ಲಿ ಎಲ್ಲಾ ದಿಕ್ಕುಗಳಲ್ಲಿರುವ ರಾಜರುಗಳನ್ನು ಜಯಿಸಬೇಕು. ಜರಾಸಂಧನ ವಧೆಯಿಂದ ರಾಜಸೂಯಯಾಗವನ್ನೂ ಮಾಡಿದಂತಾಗುವುದು. ಶರಣಾಗತರಾದ ರಾಜರುಗಳನ್ನು ರಕ್ಷಿಸಿದಂತೆಯೂ ಆಗುತ್ತದೆ. ನಮಗೂ ಜರಾಸಂಧನ ವದೆಯಿಂದ ಮಹತ್ತರವಾದ ಪ್ರಯೋಜನವು ಏರ್ಪಡುತ್ತದೆ. ಎಲ್ಲಾ ರಾಜರುಗಳನ್ನೂ ಬಂಧನದಿಂದ ಬಿಡಿಸಿದ್ದರಿಂದ ನಿನಗೂ ಅಪಾರವಾದ ಕೀರ್ತಿಯು ಬರುತ್ತದೆ." "ಪ್ರಪಂಚದಲ್ಲಿ ಅತ್ಯಂತ ಬಲಿಷ್ಠರಿಂದಲೂ ಜರಾಸಂಧನನ್ನು ನಿಗ್ರಹಿಸಲು ಸಾಧ್ಯವಿಲ್ಲ. ಭೀಮಸೇನನೊಬ್ಬನೇ ಅವನನ್ನು ಸಂಹರಿಸಲು ಶಕ್ತನು. ಜರಾಸಂಧನು ನೂರುಗಟ್ಟಲೆ ಅಕ್ಷೌಹಿಣೀ ಸೈನ್ಯಗಳಿಂದ ಯುಕ್ತನಾಗಿ ಬಂದರೆ ಅವನನ್ನು ಜಯಿಸುವುದು ಅಶಕ್ಯವಾಗುತ್ತದೆ. ದ್ವಂದ್ವಯುದ್ಧ ಅಂದರೆ ಯಾರಾದರೂ ಒಬ್ಬನ ಜೊತೆಯಲ್ಲಿ ಅವನು ಯುದ್ಧಕ್ಕೆ ಬಂದರೆ ಆಗ ಅವನನ್ನು ಸಂಹರಿಸಬಹುದು. ಅವನು ದ್ವಂದ್ವಯುದ್ಧಕ್ಕೆ ಬಾರದಿದ್ದರೆ ಅದಕ್ಕೆ ಉಪಾಯವನ್ನು ಹೇಳುವೆನು."

"ಜರಾಸಂಧನು ಬ್ರಾಹ್ಮಣರಲ್ಲಿ ತುಂಬಾ ಭಕ್ತಿಯುಳ್ಳವನು. ಬ್ರಾಹ್ಮಣರು ಕೇಳಿದ್ದನ್ನು ಕೊಡುವವನು. ನಿರಾಕರಿಸುವುದಿಲ್ಲ. ಭೀಮಸೇನನು ಬ್ರಾಹ್ಮಣವೇಷಧಾರಿಯಾಗಿ ಅವನ ಮನೆಗೆ ಹೋಗಲಿ. "ನನ್ನ ಜೊತೆಯಲ್ಲಿ ದ್ವಂದ್ವ ಯುದ್ಧವನ್ನು ಮಾಡು" ಎಂದು ಬೇಡಲಿ. ಆಗ ಜರಾಸಂಧನು ದ್ವಂದ್ವಯುದ್ಧಕ್ಕೆ ಬರುವನು. ಅವನನ್ನು ಈ ಭೀಮಸೇನನು ನಿನ್ನ ಸನ್ನಿಧಾನದಲ್ಲಿ ಸಂಹರಿಸಲಿ." ಓ ಶ್ರೀಕೃಷ್ಣದೇವ, ಲೋಕಗಳನ್ನು ಸೃಷ್ಟಿಸುವುದಕ್ಕೆ ಬ್ರಹ್ಮನೂ, ಸಂಹರಿಸುವುದಕ್ಕೆ ಶಿವನೂ, ಕಾರಣರೆಂದು ಪ್ರಸಿದ್ಧಿಯುಂಟು. ಆದರೆ ನೀನೇ ಸಕಲ ಲೋಕಗಳನ್ನು ಸೃಷ್ಟಿಸುವುದಕ್ಕೂ ಸಂಹರಿಸುವುದಕ್ಕೂ ಮುಖ್ಯ ಕಾರಣನು. ನೀನು ಅವರಿಬ್ಬರನ್ನು ನಿಮಿತ್ತವಾಗಿಟ್ಟುಕೊಂಡು ಸೃಷ್ಟಿಯನ್ನೂ ಸಂಹಾರವನ್ನೂ ಮಾಡುತ್ತಿರುವಿ."

"ಕುವಲಯಾಪೀಡ" ಎಂಬ ಆನೆಯನ್ನೂ "ಚಾಣೂರ" ಮುಂತಾದ ನಿನ್ನ ಶತ್ರುಗಳನ್ನೂ ಸಂಹರಿಸಿದುದನ್ನು ತಿಳಿದ ಗೋಪಿಕಾಸ್ತ್ರೀಯರು ಸಂತೋಷಿಸಲಿಲ್ಲವೇ? ಮೊಸಳೆಯನ್ನು ಸಂಹರಿಸಿ ಗಜೇಂದ್ರನನ್ನು ಬಿಡಿಸಿದ ನಿನ್ನ ವ್ಯಾಪಾರವನ್ನೂ, ರಾವಣನನ್ನು ಸಂಹರಿಸಿ ಸೀತಾದೇವಿಯನ್ನು ಬಿಡಿಸಿದ ಶ್ರೀರಾಮದೇವನ ವ್ಯಾಪಾರವನ್ನೂ ತಿಳಿದ ವಾಲ್ಮೀಕಿ ಮುಂತಾದ ಮುನಿಗಳೂ ದೇವತಾಸ್ತ್ರೀಯರೂ ಸಂತೋಷದಿಂದ ಹೊಗಳಲಿಲ್ಲವೇ? ಕಂಸನಿಂದ ಮಾಡಲ್ಪಟ್ಟ ಶೃಂಖಲಾ ಬಂಧನದಿಂದ ನಿನ್ನ ತಂದೆ ತಾಯಿಗಳನ್ನು ಬಿಡಿಸಿ ಕಂಸನನ್ನು ಸಂಹರಿಸಿದ ನಿನ್ನನ್ನು ನಾವೆಲ್ಲರೂ ಸ್ತುತಿಸಲಿಲ್ಲವೇ? ಅದರಂತೆ ಜರಾಸಂಧನನ್ನು ನೀನು ಸಂಹರಿಸಿ ರಾಜರುಗಳನ್ನೆಲ್ಲಾ ಬಿಡಿಸಿದುದನ್ನೂ ಆ ರಾಜರುಗಳ ಪತ್ನಿಯರೆಲ್ಲರೂ ಹೊಗಳುತ್ತಿರುವರು."

"ಮೇಲೆ ಹೇಳಿದಂತೆ ಜರಾಸಂಧನ ವಧೆಯು ಅನೇಕ ಪ್ರಯೋಜನಗಳನ್ನು ಸಾಧಿಸುತ್ತದೆ. ಭೂಭಾರವನ್ನು ಪರಿಹರಿಸುವುದಕ್ಕಾಗಿ ಅವತರಿಸಿರುವ ನಿನಗೆ ಪ್ರಾಯಶಃ ಅಭಿಮತವೂ ಆಗಿದೆ. ಆದ್ದರಿಂದ ಸರ್ವಸೈನ್ಯ ಸಮೇತನಾಗಿ ಇಂದ್ರಪ್ರಸ್ಥನಗರಕ್ಕೆ ಹೊರಡು" ಎಂದು ಹೇಳಿದನು.

ಶ್ರೀಕೃಷ್ಣದೇವನು ರಾಜರುಗಳ ಕಡೆಯಿಂದ ಬಂದಿರುವ ದೂತನ ಕಡೆಗೆ ತಿರುಗಿದನು. "ಎಲೋ ದೂತನೇ!, ಹೆದರಬೇಡಿರಿ. ನಿಮ್ಮೆಲ್ಲರಿಗೂ ಮಂಗಳವಾಗಲಿ. ಜರಾಸಂಧನನ್ನು ಕೊಲ್ಲಿಸುವೆನು" ಎಂದು ಹೇಳಿದನು. ಆ ದೂತನು ಹಿಂದಿರುಗಿ ಜನರುಗಳ ಸಮೀಪಕ್ಕೆ ಹೋದನು. ನಡೆದ ಎಲ್ಲಾ ವಿಷಯಗಳನ್ನೂ ತಿಳಿಸಿದನು.

ಅವರೆಲ್ಲರೂ ಶ್ರೀಕೃಷ್ಣದೇವನ ಆಗಮನವನ್ನು ನಿರೀಕ್ಷಿಸುತ್ತಿದ್ದರು. ಶ್ರೀಕೃಷ್ಣದೇವನು ದ್ವಾರಕೆಯಿಂದ ಹೊರಟನು. ಅನೇಕ ದೇಶಗಳನ್ನು ದಾಟಿದನು. ಇಂದ್ರಪ್ರಸ್ಥನಗರಕ್ಕೆ ಬಂದನು. ಧರ್ಮರಾಜನು ಉಪಾಧ್ಯಾಯರಿಂದ ಯುಕ್ತನಾಗಿ ಮಹಾವೈಭವದಿಂದ ಸ್ವಾಗತಿಸಿದನು. ಅತ್ಯಂತ ಭಕ್ತಿಯಿಂದ ಮನಸ್ಸು ಕರಗಿತು. ಬಹುಕಾಲದ ಮೇಲೆ ನೋಡಿದ್ದರಿಂದ ಪುನಃ ಪುನಃ ಆಲಿಂಗಿಸಿದನು. ಆನಂದದಿಂದ ಕಣ್ಣುಗಳಲ್ಲಿ ನೀರನ್ನು ಸುರಿಸಿದನು. ರೋಮಾಂಚನದಿಂದ ಯುಕ್ತನಾಗಿ ಪ್ರಪಂಚವನ್ನು ಮರೆತನು.

ಸೋದರಮಾವನ ಮಗನಾಗಿರುವ ಶ್ರೀಕೃಷ್ಣದೇವನನ್ನು ಶ್ರೀಭೀಮಸೇನದೇವರು ಪ್ರೇಮದಿಂದ ಆಲಿಂಗಿಸಿ ಕಣ್ಣುಗಳಿಂದ ನೀರು ಸುರಿಸಿ ಪರವಶರಾದರು. ಅರ್ಜುನನು ಆನಂದದಿಂದ ಆಲಿಂಗಿಸಿದನು. ನಕುಲ, ಮತ್ತು ಸಹದೇವನು ನಮಸ್ಕರಿಸಿದರು. ಶ್ರೀಕೃಷ್ಣದೇವನು ಬ್ರಾಹ್ಮಣರಿಗೂ ವಯಸ್ಸಿನಲ್ಲಿ ದೊಡ್ಡವರಿಗೂ ನಮಸ್ಕರಿಸಿದನು.

ಮರ್ಯಾದೆಗೆ ಯೋಗ್ಯರಾದ ಕುರುರಾಜರುಗಳಿಗೆ ಮರ್ಯಾದೆಯನ್ನು ಮಾಡಿದನು. ಒಂದೊಂದು ಮನೆಗಳಲ್ಲಿಯೂ ಮಂಗಳ ವಸ್ತುಗಳನ್ನು ಶ್ರೀಕೃಷ್ಣದೇವನಿಗೆ ಸಮರ್ಪಿಸಿ ಪೂಜಿಸಿದರು. ಕುಂತಿಯನ್ನು ನಮಸ್ಕರಿಸಿದನು. ದ್ರೌಪದೀ ಸುಭದ್ರೆಯರು ನಮಸ್ಕರಿಸಿದರು. ಕುಂತಿಯಿಂದ ಪ್ರೇರಿತಳಾಗಿ ದ್ರೌಪದೀದೇವಿಯು ಶ್ರೀಕೃಷ್ಣದೇವನ ಪತ್ನಿಯರನ್ನು ಪೂಜಿಸಿದಳು. ಶ್ರೀಕೃಷ್ಣದೇವನು ಧರ್ಮರಾಜನ ತೃಪ್ತಿಗಾಗಿ ಕೆಲವು ತಿಂಗಳುಗಳ ವರೆಗೆ ಇಂದ್ರಪ್ರಸ್ಥನಗರದಲ್ಲಿಯೇ ಇದ್ದನು.

ಒಂದು ದಿನ ಸಭಾಮಧ್ಯದಲ್ಲಿ ಮುನಿಗಳಿಂದಲೂ ತಮ್ಮಂದಿರಿಂದಲೂ ಸಹಿತನಾಗಿ ಶ್ರೀಕೃಷ್ಣದೇವನನ್ನು ನೋಡಿ ಹೇಳಿದನು - "ಓ ಶ್ರೀಕೃಷ್ಣದೇವ, ರಾಜಸೂಯಯಾಗವು ಯಾಗಗಳಲ್ಲಿ ಅತ್ಯಂತ ಶ್ರೇಷ್ಠವಾದುದು. ಆ ಯಾಗದಿಂದ ನಿನ್ನ ವಿಶೇಷ ಸನ್ನಿಧಾನಕ್ಕೆ ಪಾತ್ರರಾಗಿರುವ ಇಂದ್ರಾದಿ ದೇವತೆಗಳನ್ನು ಪೂಜಿಸಬೇಕೆಂದು ತೀರ್ಮಾನಿಸಿರುವೆನು. ನಿನ್ನ ಪಾದಕಮಲಗಳು ಅಮಂಗಳವನ್ನು ಪರಿಹರಿಸುವ ಶಕ್ತಿಯುಳ್ಳವುಗಳು. ಅವುಗಳನ್ನು ಯಾರು ಸೇವಿಸುವರೋ ಧ್ಯಾನ ಮಾಡುವರೋ ಅವರು ಸಂಸಾರದಿಂದ ಬಿಡುಗಡೆಯನ್ನು ಪಡೆಯುವರು. ಐಹಿಕ ಮತ್ತು ಪಾರತ್ರಿಕ ಫಲಗಳನ್ನು ಅಪೇಕ್ಷಿಸಿದರೆ ಅವುಗಳನ್ನೂ ಪಡೆಯುವರು. ನಿನ್ನ ಪಾದಕಮಲಗಳನ್ನು ಯಾರು ಸೇವಿಸುವುದಿಲ್ಲವೋ ಅವರು ಮುಕ್ತಿಯನ್ನೂ ಐಹಿಕ ಪಾರತ್ರಿಕ ಫಲಗಳನ್ನೂ ಹೊಂದಲಾರರು."

"ಓ ಶ್ರೀಕೃಷ್ಣದೇವ!, ನಿನ್ನ ಪಾದಾರವಿಂದಗಳನ್ನು ನಾವು ಸೇವಿಸಿರುವೆವು. ಅದರ ಫಲವನ್ನು ಸರ್ವರೂ ಕಣ್ಣಿನಿಂದ ನೋಡಲಿ. ನಿನ್ನನ್ನು ಸೇವಿಸುವವರಿಗೆ ಮತ್ತು ಸೇವಿಸದವರಿಗೆ ಏರ್ಪಡುವ ಫಲವ್ಯತ್ಯಾಸವನ್ನು ಸರ್ವರೂ ತಿಳಿಯಲಿ. ನೀನು ಪೂರ್ಣನಾಗಿರುವಿ. ಆದ್ದರಿಂದ ನಿನಗೆ ನಿನ್ನ ಭಕ್ತರಿಂದ ಆಗಬೇಕಾದ ಲಾಭವು ಯಾವುದೂ ಇಲ್ಲ. ದ್ವೇಷಿಗಳಿಂದ ಯಾವ ಹಾನಿಯೂ ಏರ್ಪಡುವುದಿಲ್ಲ. ನೀನು ಸರ್ವರಿಗೂ ಸ್ವಾಮಿಯಾಗಿರುವಿ. ಅವರವರ ಯೋಗ್ಯತೆಯನ್ನು ಅನುಸರಿಸಿ ಅವರವರಿಗೆ ಫಲವನ್ನು ಕೊಡುತ್ತಿರುವಿ. ಸ್ವರೂಪವಾಗಿರುವ ಆನಂದವನ್ನು ಅನುಭವಿಸುತ್ತಿರುವಿ. ಇಂತಹ ನೀನು ಒಬ್ಬನನ್ನು ತನ್ನವನೆಂದೂ ಇನ್ನೊಬ್ಬನನ್ನು ಪರಕೀಯನೆಂದೂ ಭಾವಿಸಿ ವೈಷಮ್ಯದಿಂದ ನಡೆಯುವವನಲ್ಲ. ಕಲ್ಪವೃಕ್ಷವನ್ನು ಸೇವಿಸಿದವನಿಗೆ ಅವನ ಸೇವೆಗೆ ಯೋಗ್ಯವಾದ ಫಲವು ಸಿಗುವುದಿಲ್ಲವೇ? ಫಲಭೇದವು ಬಂದದ್ದರಿಂದ ಕಲ್ಪವೃಕ್ಷವನ್ನು ವಿಷಮಸ್ವಭಾವವುಳ್ಳದ್ದು ಎಂದು ಯಾರಾದರೂ ದೂರುವರೇ? ಅದರಂತೆ ನೀನೂ ಜನರು ಮಾಡುವ ಸೇವೆಗೆ ಯೋಗ್ಯವಾದ ಫಲವನ್ನು ಕೊಡುವಿ. ನೀನು ವಿಷಮಸ್ವಭಾವವುಳ್ಳವನಲ್ಲ." ಇದು ಧರ್ಮರಾಜನ ಪ್ರಾರ್ಥನೆ.

"ಓ ಧರ್ಮರಾಜ!, ನೀನು ರಾಜಸೂಯಯಾಗವನ್ನು ಮಾಡುವುದಾಗಿ ಹೇಳಿದಿ. ಈ ಯಾಗವನ್ನು ಮಾಡಿದ್ದರಿಂದ ನಿನ್ನ ಕೀರ್ತಿಯು ಎಲ್ಲಾ ಲೋಕಗಳಲ್ಲಿಯೂ ವ್ಯಾಪಿಸುತ್ತದೆ. ಈ ಯಾಗವು ಋಷಿಗಳಿಗೂ, ಪಿತೃಗಳಿಗೂ, ನಿನ್ನ ಮಿತ್ರರಾದ ನಮ್ಮೆಲ್ಲರಿಗೂ ಇಷ್ಟವಾದುದು. ಈ ಯಾಗವನ್ನು ಮಾಡುವ ಮೊದಲು ಸಕಲ ರಾಜರುಗಳನ್ನೂ ಗೆಲ್ಲಬೇಕು. ಪ್ರಪಂಚವನ್ನೆಲ್ಲಾ ತನ್ನ ವಶನನ್ನಾಗಿ ಮಾಡಿಕೊಳ್ಳಬೇಕು. ಯಾಗಕ್ಕೆ ಬೇಕಾಗಿರುವ ಎಲ್ಲಾ ಸಾಮಗ್ರಿಗಳನ್ನೂ ಸಿದ್ಧಪಡಿಸಿಕೊಳ್ಳಬೇಕು. ಅನಂತರದಲ್ಲಿ ಈ ಯಾಗವನ್ನು ಮಾಡಬೇಕು."

"ಈ ನಿನ್ನ ತಮ್ಮಂದಿರು ನಿನಗೆ ವಶರಾಗಿರುವರು. ಇವರುಗಳೆಲ್ಲರೂ ಲೋಕಪಾಲಕರಾದ ದೇವೇಂದ್ರ ಮುಂತಾದವರ ಅಂಶದಿಂದ ಹುಟ್ಟಿದವರು. ನಾನು ನಿನ್ನ ಅಧೀನನಾಗಿರುವೆನು. ನನ್ನ ಅನುಗ್ರಹವಿಲ್ಲದವರು ನನ್ನನ್ನು

ವಶಪಡಿಸಿಕೊಳ್ಳಲಾರರು. ನನ್ನ ಅನುಗ್ರಹಕ್ಕೆ ಪಾತ್ರನಾದವನನ್ನು ತೇಜಸ್ಸಿನಿಂದಲಾಗಲೀ, ಕೀರ್ತಿಯಿಂದಲಾಗಲೀ ಸಂಪತ್ತಿನಿಂದಲಾಗಲೀ ವೈಭವದಿಂದಲಾಗಲೀ ಅಣಿಮಾದ್ಯಷ್ಟೈಶ್ವರ್ಯಗಳಿಂದಲಾಗಲೀ ಮೀರಿಸಲು ದೇವತೆಗಳಿಂದಲೂ ಸಾಧ್ಯವಿಲ್ಲ. ಹೀಗಿರುವಾಗ ರಾಜರುಗಳಿಂದ ಸಾಧ್ಯವೇ?'' ಇದು ಶ್ರೀಕೃಷ್ಣದೇವನ ಅನುಗ್ರಹವಚನ. ಶ್ರೀಕೃಷ್ಣದೇವನು ಹೇಳಿದ ಈ ಮಾತುಗಳನ್ನು ಧರ್ಮರಾಜನು ಕೇಳಿದನು. ಸಂತೋಷದಿಂದ ಕಣ್ಣುಗಳು ಅರಳಿದವು.

"ಎಷ್ಟೋ ರಾಜರುಗಳು ಭೂಮಿಯಲ್ಲಿ ಹುಟ್ಟಿರುವರು. ಆದರೆ ರಾಜಸೂಯಯಾಗವನ್ನು ಮಾಡಿ ತಮ್ಮ ಯೋಗ್ಯತೆಗೆ ಸಮಾನವಾದ ಯೋಗ್ಯತೆಯುಳ್ಳ ರಾಜರುಗಳಿಗಿಂತ ವಿಶೇಷವಾದ ಗೌರವವನ್ನು ಪಡೆಯಲಿಲ್ಲ. ಹರಿಶ್ಚಂದ್ರ ಮುಂತಾದ ರಾಜರುಗಳು ರಾಜಸೂಯಯಾಗವನ್ನು ಮಾಡಿ ತಮ್ಮ ಯೋಗ್ಯತೆಗೆ ಸಮಾನವಾದ ಯೋಗ್ಯತೆಯುಳ್ಳ ಪಾಂಡುರಾಜ ಮುಂತಾದವರಿಗಿಂತ ಅಧಿಕವಾದ ಗೌರವವನ್ನು ಪಡೆದಿರುವರು. ಆದರೆ ಅವರು ರಾಜಸೂಯಯಾಗವನ್ನು ಮಾಡಿದಾಗ ಜರಾಸಂಧನಂತಹ, ಬ್ರಹ್ಮದೇವನ ಮತ್ತು ರುದ್ರದೇವನ ವರಗಳಿಂದ ಅವಧ್ಯರಾದ ಶತ್ರುಗಳು ಅವರಿಗಿರಲಿಲ್ಲ. ನಾನು ರಾಜಸೂಯಯಾಗವನ್ನು ಮಾಡಬೇಕೆಂದು ಯೋಚಿಸಿದಾಗ ಜರಾಸಂಧನು ವಿರೋಧಿಯಾಗಿರುವನು. ಆದ್ದರಿಂದ ರಾಜಸೂಯಯಾಗವನ್ನು ಮಾಡುವ ಯೋಚನೆಯನ್ನು ಬಿಟ್ಟೆನು'' ಎಂದನು.

"ಎಲೋ ಧರ್ಮರಾಜನೇ!, ಈ ರಾಜಸೂಯಯಾಗವನ್ನು ವಿಧಿಪ್ರಕಾರವಾಗಿ ಮಾಡುವವನು ಬ್ರಹ್ಮಪದವಿಗೆ ಯೋಗ್ಯವಾದ ಋಜುಗಣದಲ್ಲಿ ಸೇರಿದವನಾಗಿದ್ದರೆ ಈ ಬ್ರಹ್ಮನು ಮುಕ್ತಿಯನ್ನು ಪಡೆದಕೂಡಲೇ ಅಥವಾ ಅನಂತರದಲ್ಲಿ ಬ್ರಹ್ಮಪದವಿಯನ್ನು ಪಡೆಯುವನು. ಬ್ರಹ್ಮಪದವಿಗೆ ಅನರ್ಹನಾಗಿದ್ದರೆ ಈ ಯಜಮಾನನಿಗೆ ಸಮಾನ ಯೋಗ್ಯತೆಯುಳ್ಳವನಾದ ಮುಕ್ತನಿಗಿಂತ ಮುಕ್ತ್ಯವಸ್ಥೆಯಲ್ಲಿ ವಿಶೇಷವಾದ ಮರ್ಯಾದೆಯನ್ನು ಪಡೆಯುವನು. ಅವನನ್ನು ನೋಡಿದ ಕೂಡಲೇ ಅವನಿಗೆ ಸಮಾನ ಯೋಗ್ಯತೆಯುಳ್ಳ ಎಲ್ಲಾ ಮುಕ್ತರೂ ಎದ್ದು ನಿಂತು ಅವನನ್ನು ಗೌರವಿಸುವರು. ಮುಕ್ತಿಯನ್ನು ಹೊಂದುವುದಕ್ಕಿಂತ ಪೂರ್ವದಲ್ಲಿಯೂ ಅವನ ಯೋಗ್ಯತೆಗೆ ಸಮಾನ ಯೋಗ್ಯತೆಯುಳ್ಳವರಿಗಿಂತ ಅಧಿಕವಾದ ಗೌರವವನ್ನು ಪಡೆಯುವನು. ತ್ರಿಶಂಕುವಿನ ಮಗನಾದ ಹರಿಶ್ಚಂದ್ರನು ರಾಜಸೂಯಯಾಗವನ್ನು ಮಾಡಿರುವನು. ಅವನಿಗೆ ಈಗ ಮುಕ್ತಿಯು ಸಿಗಲಿಲ್ಲ. ಆದರೂ ರಾಜಸೂಯಯಾಗವನ್ನು ಮಾಡಿರುವುದರಿಂದ ಅವನಿಗೆ ಎಲ್ಲಾ ರಾಜರುಗಳಿಗಿಂತಲೂ ವಿಶೇಷ ಮರ್ಯಾದೆಯು ಏರ್ಪಡುತ್ತಾ ಇದೆ. ಆದ್ದರಿಂದಲೇ ಎಲ್ಲಾ ರಾಜರುಗಳಿಗಿಂತಲೂ ಅಧಿಕ ಮರ್ಯಾದೆಯನ್ನು ದೇವೇಂದ್ರನ ಸಭೆಯಲ್ಲಿ ಪಡೆಯುತ್ತಿರುವನು. ನಿನ್ನ ತಂದೆಯಾದ ಪಾಂಡುರಾಜನು ದೇವತೆಯಾಗಿರುವನು. ಹರಿಶ್ಚಂದ್ರನಿಗೆ ಸಮಾನನಾಗಿರುವನು. ಆದರೂ ರಾಜಸೂಯ ಯಾಗವನ್ನು ಮಾಡಲಿಲ್ಲ. ಆದ್ದರಿಂದಲೇ ಹರಿಶ್ಚಂದ್ರನಿಗೆ ಸಮಾನವಾದ ಮರ್ಯಾದೆಯನ್ನು ಪಡೆಯಲಿಲ್ಲ.

## ಪಾಂಡುರಾಜನಿಗೆ ದೇವೇಂದ್ರನಿಂದ ಶಾಪ

ಮುಖ್ಯವಾದ ಇನ್ನೊಂದು ಕಾರಣವನ್ನು ಹೇಳುವೆನು. ಹಿಂದೆ ನಿನ್ನ ತಂದೆಯಾದ ಪಾಂಡುರಾಜನು ಒಮ್ಮೆ ತಪಸ್ಸನ್ನು ಮಾಡುತ್ತಿದ್ದನು. ಆಗ ದೇವೇಂದ್ರನು ಅವನನ್ನು ನೋಡುವುದಕ್ಕಾಗಿ ಬಂದನು. ತಾನು ಮರುತ್ತುಗಳ

ಮಧ್ಯದಲ್ಲಿ ಉತ್ತಮನೆಂಬ ಅಹಂಕಾರದಿಂದ, ಎದ್ದು ದೇವೇಂದ್ರನಿಗೆ ಮರ್ಯಾದೆಯನ್ನು ಮಾಡಲಿಲ್ಲ. ಆಗ ದೇವೇಂದ್ರನು ಕುಪಿತನಾದನು. "ಎಲೈ ಮರುದ್ಗಣದಲ್ಲಿ ಉತ್ತಮನೆಂದು ತಿಳಿದು ನನ್ನನ್ನು ಗೌರವಿಸದಿರುವವನೇ!, ನೀನು ಮನುಷ್ಯ ಜನ್ಮವನ್ನು ಹೊಂದು. ಮನುಷ್ಯಜನ್ಮವು ಮುಗಿಯುವಾಗ ಸ್ವರ್ಗಕ್ಕೆ ಹೋಗುವಿ. ಸ್ವರ್ಗದಲ್ಲಿ ನಿನ್ನ ಮೂಲರೂಪವನ್ನು ಪ್ರವೇಶಿಸುವುದಕ್ಕೆ ಪ್ರಯತ್ನಿಸುವಿ. ಆದರೆ ಅದು ಸಾಧ್ಯವಾಗುವುದಿಲ್ಲ. ಆಗ ಯೋಗ್ಯತೆಯಲ್ಲಿ ನಿನಗೆ ಸಮಾನನಾದ ಹರಿಶ್ಚಂದ್ರನು ನಿನಗಿಂತ ಅಧಿಕವಾದ ಗೌರವದಿಂದ ಯುಕ್ತನಾಗುವನು" ಎಂದು ಶಪಿಸಿದನು.

ಆಗ ಪಾಂಡುರಾಜನು ದೇವೇಂದ್ರನ ಕಾಲುಗಳಲ್ಲಿ ಬಿದ್ದು ಕ್ಷಮಿಸುವಂತೆ ಬೇಡಿದನು. ಆಗ ದೇವೇಂದ್ರನು ಹೇಳಿದನು. "ನೀನು ರಾಜಸೂಯಯಾಗವನ್ನು ಮಾಡು. ಅಥವಾ ನಿನ್ನ ಮಕ್ಕಳು ರಾಜಸೂಯಯಾಗವನ್ನು ಮಾಡಿ ಪುಣ್ಯವನ್ನು ನಿನಗೆ ಕೊಡಲಿ. ಆ ಪುಣ್ಯದಿಂದ ಹರಿಶ್ಚಂದ್ರನಿಗಿಂತ ಅಧಿಕವಾದ ಗೌರವವನ್ನು ಪಡೆಯುವಿ" ಎಂದು ಅನುಗ್ರಹಿಸಿದನು.

"ಓ ಧರ್ಮರಾಜ, ದೇವೇಂದ್ರನ ಮಾತಿನಂತೆ ನೀನು ರಾಜಸೂಯಯಾಗವನ್ನು ಮಾಡಲೇ ಬೇಕು. ಈ ಯಾಗದಿಂದ ಪಾಂಡುರಾಜನಿಗೆ ವಿಶೇಷವಾದ ಗೌರವವು ಸಿಗುತ್ತದೆ. ಅದು ಮಾತ್ರವಲ್ಲ. ಪಾಂಡುರಾಜನ ಮಕ್ಕಳಾಗಿರುವ ನಿಮ್ಮೆಲ್ಲರಿಗೂ ಯೋಗ್ಯವಾದ ಫಲವು ಸಿಗುತ್ತದೆ. ಅಂದರೆ ನಿಮನಿಮಗೆ ಯೋಗ್ಯವಾದ ಎಲ್ಲಾ ಫಲವೂ ಪೂರ್ಣವಾಗುತ್ತದೆ" ಎಂದು ಶ್ರೀಕೃಷ್ಣದೇವನು ಆಜ್ಞಾಪಿಸಿದನು. ಈ ರಾಜಸೂಯಯಾಗವನ್ನು ಬ್ರಹ್ಮಪದವಿಗೆ ಯೋಗ್ಯನಾದವನು ಮಾಡಿದರೆ ಅವನಿಗೆ ಬ್ರಹ್ಮಪದವಿಯು ಸಿಗುವುದೆಂದು ಶ್ರೀಕೃಷ್ಣದೇವನು ಹೇಳಿದನಲ್ಲವೇ? ಧರ್ಮರಾಜನಲ್ಲಿ ಆ ಯೋಗ್ಯತೆಯಿಲ್ಲವೆಂದೂ ಭೀಮಸೇನದೇವರಲ್ಲಿಯೇ ಇದೆಯೆಂದೂ ಆದ್ದರಿಂದಲೇ ಭೀಮಸೇನದೇವರಿಗೆಯೇ ಈ ಯಾಗದ ಸಂಪೂರ್ಣ ಫಲವನ್ನು ಕೊಡಬೇಕೆಂದೂ ತೀರ್ಮಾನಿಸಿದನು. ಅದಕ್ಕಾಗಿ ಮುಂದೆ ಹೇಳುವ ಮಾತುಗಳನ್ನು ಶ್ರೀಕೃಷ್ಣದೇವನು ಹೇಳಿದನು.

"ಓ ಧರ್ಮರಾಜನೇ, ನೀನು ರಾಜಸೂಯಯಾಗವನ್ನು ಮಾಡುವುದಾಗಿ ಹೇಳಿದಿ. ಅದು ಅಶಕ್ಯವೆಂದು ನನಗೆ ತೋರುತ್ತದೆ. ಈ ಯಾಗದ ಆರಂಭದಲ್ಲಿ ಪ್ರಪಂಚದಲ್ಲಿರುವ ಸರ್ವ ರಾಜರುಗಳನ್ನೂ ಜಯಿಸಬೇಕು. ಬ್ರಹ್ಮ ಮತ್ತು ರುದ್ರದೇವನ ವರಗಳಿಂದ ಜರಾಸಂಧನು ಪ್ರಪಂಚದಲ್ಲಿರುವ ಸರ್ವರನ್ನೂ ಜಯಿಸಿರುವನು. ಅವನು ಬದುಕಿರುವ ವರೆಗೆ ಅವನನ್ನು ಜಯಿಸಲು ಯಾರಿಂದಲೂ ಸಾಧ್ಯವಿಲ್ಲ. ಇದರಿಂದ ರಾಜಸೂಯಯಾಗವನ್ನು ಮಾಡುವುದು ಅಶಕ್ಯ" ಎಂದನು. ಅದನ್ನು ಕೇಳಿದ ಧರ್ಮರಾಜನು "ಹಾಗಾದರೆ ರಾಜಸೂಯಯಾಗವನ್ನು ನಿಲ್ಲಿಸಿಬಿಟ್ಟೆನು" ಎಂದು ಹೇಳಿದನು.

ಧರ್ಮರಾಜನು ರಾಜಸೂಯಯಾಗವನ್ನು ಮಾಡುವುದಿಲ್ಲ ಎಂದು ಹೇಳಿಬಿಟ್ಟನು. ಅದಕ್ಕೆ ಜರಾಸಂಧನ ಭಯವೇ ಕಾರಣವಾಯಿತು. ಆದ್ದರಿಂದ ಈ ರಾಜಸೂಯಯಾಗದಿಂದ ಅವನಿಗೆ ಪೂರ್ಣಫಲವು ಬರುವುದಿಲ್ಲವೆಂದು ಶ್ರೀಕೃಷ್ಣದೇವನು ಸ್ಪಷ್ಟಪಡಿಸಿದನು. ಇದಕ್ಕಾಗಿಯೇ ಹಿಂದೆ ಧರ್ಮರಾಜನಿಗೆ ಭಯವನ್ನು ತೋರಿಸಿದನು.

ಆಗ ಶ್ರೀಭೀಮಸೇನದೇವರು ಹೇಳುತ್ತಾರೆ. "ಬ್ರಹ್ಮ" ಪದವಿಯನ್ನೂ ಸಹ ಮಹಾಪ್ರಯತ್ನದಿಂದ ಸಾಧಿಸಬಹುದು. ಅದನ್ನು ಈಗ ವಿವರಿಸುವೆನು. "ಸ್ವರೂಪದೇಹದಲ್ಲಿ ಸ್ವಾಭಾವಿಕವಾದ ಸಾಮರ್ಥ್ಯವಿರಬೇಕು. ಶ್ರೀಹರಿಯ ವಿಶೇಷಾನುಗ್ರಹವಿರಬೇಕು. ಮಹಾಪ್ರಯತ್ನವಿರಬೇಕು. ಈ ಮೂರರಿಂದ ಯುಕ್ತರಾಗಿರುವವರು

ಎಂತಹ ಅಸಾಧ್ಯವಾದ ಕಾರ್ಯವನ್ನೂ ಮಾಡಬಲ್ಲರು. ಈ ಮೂರು ಗುಣಗಳು ಯಾರಲ್ಲಿ ಇಲ್ಲವೋ ಅವರು ಯಾವ ಕಾರ್ಯವನ್ನೂ ಸಾಧಿಸಲಾರರು. ನನ್ನಲ್ಲಿ ಸ್ವರೂಪಸಾಮರ್ಥ್ಯವು ಸ್ಥಿರವಾಗಿದೆ. ಶ್ರೀಹರಿಯ ಅನುಗ್ರಹವೂ ಅತ್ಯಧಿಕವಾಗಿದೆ. ಈ ಎರಡು ಗುಣಗಳು ಪೂರ್ಣವಾಗಿವೆ. ಮೂರನೆಯ ಗುಣವಾದ ಪ್ರಯತ್ನವನ್ನು ಮುಂದಿಟ್ಟುಕೊಂಡು ಐಶ್ವರ್ಯವನ್ನು ಪಡೆಯುವೆನು.'' ಎಂದು ಹೇಳಿದರು.

ಈ ಮಾತುಗಳನ್ನು ಶ್ರೀಕೃಷ್ಣದೇವನು ಕೇಳಿದನು. ರಾಜಸೂಯಯಾಗವನ್ನು ಮಾಡುವುದಕ್ಕೆ ಪ್ರಧಾನ ಕಾರಣರಾಗಿರುವ ಮತ್ತು ಮಹಾಪ್ರಯತ್ನವನ್ನು ಮಾಡಲು ಸಮರ್ಥರಾಗಿರುವ ಶ್ರೀಭೀಮಸೇನದೇವರನ್ನು ನೋಡಿ ಹೇಳಿದನು.

ಈಗ ಪ್ರಪಂಚದಲ್ಲಿ ಕಲಿಯ ಅನಂತರದಲ್ಲಿ ಸಜ್ಜನರ ವೈರಿಗಳಿಗೆ ಬಲಪ್ರದನಾಗಿರುವವನು ಜರಾಸಂಧನು ಒಬ್ಬನೇ ಇರುವನು. ಅವನಂತೆ ಸಜ್ಜನರಿಗೆಲ್ಲರಿಗೂ ಆಶ್ರಯನಾಗಿರುವವನೂ ಸಕಲ ಸದ್ಗುಣಗಳಿಗೂ ಉತ್ಪತ್ತಿಸ್ಥಾನವೂ ಆಗಿರುವವನೂ ಒಬ್ಬನೇ ಆಗಿರುವನು. ಅವನನ್ನು ಯೋಚಿಸಿ ನೀನು ಜರಾಸಂಧನಲ್ಲಿಗೆ ಕಳುಹಿಸು. ನೀನು ಕಳುಹಿಸಿದವನು ಜರಾಸಂಧನನ್ನು ಸಂಹರಿಸಬೇಕು. ಹಾಗಾದರೆ ಸಜ್ಜನರಿಗೆ ಜಯವು ಏರ್ಪಟ್ಟಂತಾಗುತ್ತದೆ. ಇಲ್ಲದಿದ್ದರೆ ಅಯೋಗ್ಯರಿಗೆ ಜಯವು ಏರ್ಪಡುತ್ತದೆ. ಈ ತತ್ವವನ್ನು ನೀನು ತಿಳಿಯಬೇಕು. ಈ ತತ್ವವು ವ್ಯತ್ಯಾಸವಾಗುವುದಿಲ್ಲ.

ಯಾವನು ಜರಾಸಂಧನನ್ನು ಸಂಹರಿಸುವನೋ ಅವನು ಬ್ರಹ್ಮಪದವಿಯನ್ನು ಪಡೆಯುವನು. ಈ ವಿಷಯದಲ್ಲಿ ಸಂಶಯವಿಲ್ಲ. ಅವನೇ ವೇದಗಳನ್ನೂ ಧರ್ಮಗಳನ್ನೂ ರಕ್ಷಿಸುವನು. ಶೈವರ ನಾಯಕನಾಗಿರುವ ಜರಾಸಂಧನನ್ನು ಸಂಹರಿಸುವವನು ವೈಷ್ಣವರಲ್ಲಿ ಶ್ರೇಷ್ಠನೆನಿಸುವನು ಎಂಬ ಅಭಿಪ್ರಾಯದಿಂದ ಶ್ರೀಕೃಷ್ಣದೇವನು ಒತ್ತಿ ಒತ್ತಿ ಹೇಳುತ್ತಿರುವ ಮಾತುಗಳನ್ನು ಧರ್ಮರಾಜನು ಕೇಳಿ ತುಂಬಾ ಹೆದರಿದನು. "ಯಜ್ಞವು ಬೇಡ'' ಎಂದನು. ಆಗ ಶ್ರೀಭೀಮಸೇನದೇವರು "ಜರಾಸಂಧನನ್ನು ನಾನು ಸಂಹರಿಸುವೆನು'' ಎಂದು ಹೇಳಿದರು.

ಶ್ರೀಕೃಷ್ಣದೇವನು ಧರ್ಮರಾಜನನ್ನು ನೋಡಿ ಹೇಳಿದನು. "ನಾನು ಭೀಮಸೇನನನ್ನೂ ಅರ್ಜುನನನ್ನೂ ಕರೆದುಕೊಂಡು ಜರಾಸಂಧನನ್ನು ಸಂಹರಿಸುವುದಕ್ಕಾಗಿ ಹೊರಡುವೆನು. ಭೀಮಸೇನನು ಜರಾಸಂಧನನ್ನು ಸಂಹರಿಸಿದರೆ ರಾಜಸೂಯಯಾಗವು ಪೂರ್ತಿಯಾಗುತ್ತದೆ. ಈ ಎಲ್ಲಾ ಪ್ರಪಂಚವೂ ನಿನ್ನ ವಶದಲ್ಲಿರುತ್ತದೆ'' ಎಂದನು.

ಆ ಮಾತುಗಳನ್ನು ಕೇಳಿದ ಧರ್ಮರಾಜನು "ನೀನೂ ಸಕಲ ಯಾದವರೂ ಜರಾಸಂಧನ ಭಯದಿಂದಲೇ ಈ ಮಥುರಾ ಪಟ್ಟಣವನ್ನು ಬಿಟ್ಟು ಸಮುದ್ರದ ಮಧ್ಯಕ್ಕೆ ಓಡಿಹೋದಿರಿ'' ನಿಮ್ಮ ಸ್ಥಿತಿಯೇ ಹೀಗಾದ ಮೇಲೆ ಜರಾಸಂಧನ ವಿಷಯದಲ್ಲಿ ನನಗೆ ತುಂಬಾ ಭಯವಾಗುತ್ತಿದೆ. ಈ ಭೀಮ ಮತ್ತು ಅರ್ಜುನನು ಯಾವಾಗಲೂ ನನ್ನ ಎರಡು ಕಣ್ಣುಗಳಂತಿರುವರು. ನೀನು ನನ್ನ ಮನಸ್ಸಿನಂತಿರುವವನು. ಭೀಮನೂ ಅರ್ಜುನನೂ ಇಲ್ಲದಿದ್ದರೆ ನಾನು ಕುರುಡನಿಗೆ ಸಮಾನನೆನಿಸುವೆನು. ನೀನಿಲ್ಲದಿದ್ದರೆ ಮನಸ್ಸು ಸ್ವಾಧೀನವಿಲ್ಲದ ಹುಚ್ಚನಂತಾಗುವೆನು. ನೀವು ಮೂವರೂ ನನಗೆ ಪ್ರಾಣಕ್ಕಿಂತಲೂ ಅಧಿಕ ಪ್ರೀತಿಗೆ ಪಾತ್ರರಾಗಿರುವಿರಿ. ನಿಮ್ಮೂವರನ್ನು ಅತಿ ಬಲಿಷ್ಠನಾದ ಶತ್ರುವಿನ ಮನೆಗೆ ನನ್ನ ಸ್ವಾರ್ಥಕ್ಕಾಗಿ ಕಳುಹಿಸಲಾರೆನು'' ಎಂದನು.

ಈ ಮಾತುಗಳನ್ನು ಕೇಳಿದ ಶ್ರೀಭೀಮಸೇನದೇವರು ಹೇಳಲು ಆರಂಭಿಸಿದರು. "ಅಣ್ಣಾ,

ಶ್ರೀಕೃಷ್ಣದೇವನನ್ನು ಏನೆಂದು ತಿಳಿದಿರುವಿ? ರಮಾದೇವಿಯರಿಗೂ ಬ್ರಹ್ಮದೇವರು ರುದ್ರದೇವನು ಮುಂತಾದ ಸಕಲ ದೇವತೆಗಳಿಗೂ ಇವನೇ ನಾಯಕನು ಮತ್ತು ಪ್ರೇರಕನು. ಸುರರಲ್ಲಿಯೂ ಅಸುರರಲ್ಲಿಯೂ ಸರ್ಪ ಮುಂತಾದ ಪ್ರಾಣಿಗಳಲ್ಲಿಯೂ ಇರುವ ಎಲ್ಲಾ ಬಲವೂ ಇವನ ಅಧೀನವಾದುದು. ಇಂತಹ ಮಹಾಪ್ರಭುವೆಲ್ಲಿ? ಅಲ್ಪನಾದ ಜರಾಸಂಧನೆಲ್ಲಿ?

ನನ್ನ ವಿಷಯವನ್ನು ಹೇಳುವೆನು. ಜರಾಸಂಧ ಮುಂತಾದ ಸಕಲ ದುಷ್ಟರಿಂದಲೂ ಎದುರಿಸಲು ಸಾಧ್ಯವಿಲ್ಲದ ಬಲವು ನನ್ನಲ್ಲಿದೆ. ನನ್ನಲ್ಲಿರುವ ಆ ಬಲಕ್ಕೂ ಇವನೇ ಪ್ರೇರಕನು. ಸಕಲ ಲೋಕಪ್ರೇರಕನಾಗಿರುವ ಇವನಲ್ಲಿ ಸರ್ವ ಶಕ್ತಿಗಳೂ ಇವೆ. ಅರ್ಜುನನನ್ನು ಯಾರಿಂದಲೂ ಜಯಿಸಲು ಶಕ್ಯವಿಲ್ಲ. ಅಂತಹ ವರವನ್ನು ಶ್ರೀಕೃಷ್ಣದೇವನು ಅವನಿಗೆ ಕೊಟ್ಟಿರುವನು. ಆದ್ದರಿಂದ ನಾವು ಮೂವರು ಈಗ ಆ ಜರಾಸಂಧನನ್ನು ನಿಗ್ರಹಿಸುವುದಕ್ಕಾಗಿ ಹೋಗುವೆವು. ನಾನು ಈಗ ಪ್ರತಿಜ್ಞೆಯನ್ನು ಮಾಡುವೆನು ಕೇಳು. ಶ್ರೀಕೃಷ್ಣದೇವನ ಸನ್ನಿಧಾನದಲ್ಲಿ ಅವನ ಪ್ರಬಲ ವಿರೋಧಿಯಾಗಿರುವ ಜರಾಸಂಧನನ್ನು ಖಂಡಿತವಾಗಿಯೂ ಸಂಹರಿಸುವೆನು" ಎಂದು ಪ್ರತಿಜ್ಞೆಯನ್ನು ಮಾಡಿದರು.

ಆಗ ಶ್ರೀಕೃಷ್ಣದೇವನು ಧರ್ಮರಾಜನನ್ನು ಕುರಿತು ಹೇಳಿದನು. "ನಮ್ಮಲ್ಲಿ ಒಬ್ಬೊಬ್ಬನು ಜರಾಸಂಧನನ್ನು ಕೊಲ್ಲುವ ವಿಷಯದಲ್ಲಿ ನಿನಗೆ ನಂಬಿಕೆಯಿಲ್ಲದಿದ್ದರೆ ನಾವು ಮೂರು ಜನರು ಸೇರಿ ಆ ಜರಾಸಂಧನನ್ನು ಕೊಲ್ಲುವೆವು. ಭೀಮಸೇನನು ಜರಾಸಂಧನನ್ನು ಖಂಡಿತವಾಗಿಯೂ ಸಂಹರಿಸುವನು. ನಾನು ಜರಾಸಂಧನನ್ನು ಕೊಲ್ಲದಿರುವುದರಿಂದ ನಿನ್ನ ಮನಸ್ಸಿನಲ್ಲಿ ಭಯವು ಇದೆಯೆಂದು ತಿಳಿಯುತ್ತದೆ. ಆ ಭಯವನ್ನು ಇಟ್ಟುಕೊಳ್ಳಬೇಡ. ನಾನು ಕೊಲ್ಲದಿರುವುದಕ್ಕೆ ಕಾರಣವಿದೆ. ಜರಾಸಂಧನು ರುದ್ರಭಕ್ತರಲ್ಲಿ ಉತ್ತಮನು. ಭೀಮಸೇನನು ನನ್ನ ಭಕ್ತರಲ್ಲಿ ಉತ್ತಮನು. ನನ್ನ ಭಕ್ತರಲ್ಲಿ ಉತ್ತಮನಾದ ಭೀಮಸೇನನಿಂದ ರುದ್ರಭಕ್ತರಲ್ಲಿ ಉತ್ತಮನಾದ ಜರಾಸಂಧನು ಕೊಲ್ಲಲ್ಪಟ್ಟರೆ ಜರಾಸಂಧನಿಗೆ ವರವನ್ನು ಕೊಟ್ಟಿರುವ ಶಿವನ ಬಲಕ್ಕಿಂತ ಭೀಮಸೇನನಿಂದ ಪೂಜ್ಯನಾದ ನನ್ನ ಬಲವು ಅತ್ಯಧಿಕ ಎಂಬ ತತ್ವವು ತಿಳಿಯುತ್ತದೆ. ಇದಕ್ಕಾಗಿಯೇ ನಾನು ಜರಾಸಂಧನನ್ನು ಕೊಲ್ಲಲಿಲ್ಲ. ಭೀಮಸೇನನಿಂದ ಕೊಲ್ಲಿಸುತ್ತಿದ್ದೇನೆ. ಆದ್ದರಿಂದ ನೀನು ಸಂಶಯದಿಂದ ಯುಕ್ತನಾಗಬೇಡ. "ಜರಾಸಂಧನನ್ನು ಭೀಮಸೇನನಿಂದ ಕೊಲ್ಲಿಸುವೆನು. ಭೀಮಸೇನನನ್ನೂ ಅರ್ಜುನನನ್ನೂ ಕರೆದುಕೊಂಡು ಹಿಂದಿರುಗಿ ಬರುವೆನು" ಎಂದು ಪ್ರತಿಜ್ಞೆಯನ್ನು ಮಾಡಿದನು.

**ಭೀಮೇನ ಬಾರ್ಹದ್ರಥಂ ಆಪಾತ್ಯ ಅಥ ನೃಪತೀನ್ ಮೋಚಯನ್ ಮೇ ಪ್ರಸೀದೇತ್.**

ಭೀಮಸೇನದೇವರಿಂದ ಜರಾಸಂಧನನ್ನು ಕೊಲ್ಲಿಸಿ ರಾಜರುಗಳನ್ನು ಬಿಡಿಸಿದ ಶ್ರೀಕೃಷ್ಣದೇವನು ನನ್ನ ವಿಷಯದಲ್ಲಿ ಪ್ರಸನ್ನನಾಗಲಿ.

**(೯೮) ವಿಶೇಷಾರ್ಥ - ಭೀಮಾರ್ಜುನಾಭ್ಯಾಂ ಸಹ ಬ್ರಾಹ್ಮಣರೂಪೇಣ ಜರಾಸಂಧಪುರಂ ಪ್ರಾಪ್ಯ, ಭೀಮೇನ ಜರಾಸಂಧೇನ ಸಹ ಪಂಚದಶದಿನೇಷು ದ್ವಂದ್ವಯುದ್ಧಂ ಕಾರಯಿತ್ವಾ ಜರಾಸಂಧಂ ಘಾತಯಿತ್ವಾ, ಜರಾಸಂಧೇನ ರುದ್ಧಾನ್ ಸ್ವಬಂಧೂನ್ ಭೂಪಾನ್ ವಿಮೋಚ್ಯ, ತೈಃ ಸ್ತುತಃ ತೇಷಾಂ ಮಜ್ಜನಾದಿಕಂ ಕಾರಯಿತ್ವಾ ಯಥೇಷ್ಟಂ ಭಾಗ್ಯಾನಿ ದತ್ವಾ, ತಾನ್ ತತ್ತದ್ದೇಶಾನ್ ಪ್ರತ್ಯನುಜ್ಞಾಪ್ಯ, ಸರ್ವಾನತೋಷಯತ್.**

**ವಿಶೇಷಾರ್ಥ ವಿವರಣ** - ಧರ್ಮರಾಜನು ಶ್ರೀಕೃಷ್ಣದೇವನ ಬಲದಲ್ಲಿ ಸಂದೇಹದಿಂದ ಯುಕ್ತನಾಗಿದ್ದನು.

ಶ್ರೀಕೃಷ್ಣದೇವನು ಹೇಳಿದ ಪ್ರತಿಜ್ಞೆಯನ್ನೂ ಜರಾಸಂಧನನ್ನು ಇಷ್ಟರವರೆಗೆ ಕೊಲ್ಲದಿರುವುದಕ್ಕೆ ಕಾರಣವನ್ನೂ ತಿಳಿದ ಮೇಲೆ ಅವನಿಗೆ ಭಯವು ಹೋಯಿತು. ಶ್ರೀಕೃಷ್ಣದೇವನಲ್ಲಿರುವ ಗುಣಗಳನ್ನೆಲ್ಲವನ್ನೂ ಪುನಃ ಆಲೋಚಿಸಿದನು. ಭೀಮಸೇನ ಅರ್ಜುನರಿಂದ ಸಹಿತನಾಗಿ ಶ್ರೀಕೃಷ್ಣದೇವನು ಹೊರಡುವುದಕ್ಕೆ ಅನುಮತಿಯನ್ನು ನೀಡಿದನು. ಶ್ರೀಕೃಷ್ಣದೇವನೂ ಶ್ರೀಭೀಮಸೇನದೇವರೂ ಅರ್ಜುನನೂ ಹೊರಟು ಮಗಧದೇಶಕ್ಕೆ ಬಂದರು.

(೧) ಅಲ್ಲಿ ಒಂದು ಪರ್ವತವನ್ನು ನೋಡಿದರು. ಅದು ದೊಡ್ಡ ಲಿಂಗದ ಆಕಾರವುಳ್ಳದ್ದಾಗಿತ್ತು. ಶಿವಭಕ್ತನಾದ ಜರಾಸಂಧನು ತನ್ನ ಭಕ್ತಿಗೆ ಮೆಚ್ಚಿದ ಶಿವನೇ ಪ್ರತ್ಯಕ್ಷನಾಗಿ ಬಂದಿರುವನೆಂದು ತಿಳಿದನು. ಅತ್ಯಂತ ಭಕ್ತಿಯಿಂದ ಆ ಪರ್ವತವನ್ನೇ ನಾನಾ ವಿಧವಾದ ವಸ್ತ್ರಗಳಿಂದಲೂ ಆಭರಣಗಳಿಂದಲೂ ಮಾಲೆಗಳಿಂದಲೂ ಯಾವಾಗಲೂ ಪೂಜಿಸುತ್ತಿದ್ದನು. ತನ್ನ ತಲೆಗಿಂತಲೂ ಅಧಿಕವಾದ ಪ್ರೀತಿಯನ್ನು ಆ ಪರ್ವತದಲ್ಲಿ ಇಟ್ಟಿದ್ದನು. ಶ್ರೀಕೃಷ್ಣದೇವನು ಶ್ರೀಭೀಮಸೇನದೇವರೂ ಅರ್ಜುನನೂ ಆ ಪರ್ವತವನ್ನು ತಮ್ಮ ಕೈಗಳಿಂದ ಅವನ ತಲೆಯನ್ನು ಉರುಳಿಸಿದಂತೆ ಉರುಳಿಸಿದರು.

(೨) ಆ ಪಟ್ಟಣದ ಮಹಾದ್ವಾರದಿಂದ ಪ್ರವೇಶಿಸಲಿಲ್ಲ. ಕೋಟೆಯನ್ನು ಕೆಳಗೆ ತಳ್ಳಿ ಅದರ ಮೇಲೆ ನಡೆದುಕೊಂಡು ಹೋದರು.

(೩) ಮಾಷ ಎಂಬ ದೈತ್ಯನು ತನ್ನ ಕಂಠದ ನಾಳಗಳಿಂದ ಹೊರಡುವ ಧ್ವನಿಯು ಎಲ್ಲಿಯ ವರೆಗೆ ಕೇಳುತ್ತದೆಯೋ ಅಲ್ಲಿ ಇರುವ ಸರ್ವರೂ ಹಸಿವಿನಿಂದಲೂ ನೀರಡಿಕೆಯಿಂದಲೂ ರಹಿತರಾಗಿ ತೃಪ್ತರಾಗಿರಬೇಕು ಎಂಬ ವರವನ್ನು ಪಡೆದಿದ್ದನು. ಈ ವಿಷಯವನ್ನು ತಿಳಿದ ಜರಾಸಂಧನು ಅವನನ್ನು ಕೊಂದನು. ಅವನ ಕಂಠದಲ್ಲಿರುವ ನಾಳಗಳಿಂದ ಮೂರು ನಗಾರಿಗಳನ್ನು ತಯಾರಿಸಿದ್ದನು. ಆ ನಗಾರಿಗಳ ಧ್ವನಿಯನ್ನು ಕೇಳಿದ ಕೂಡಲೇ ಸುತ್ತಮುತ್ತಲೂ ಇರುವ ಸರ್ವರೂ ತೃಪ್ತಿಯನ್ನು ಪಡೆಯುತ್ತಿದ್ದರು. ಈ ನಗಾರಿಗಳು ಅವನ ಕೀರ್ತಿಯಂತೆಯೂ ಅವನಿಂದ ಮಾಡಿಸಲ್ಪಟ್ಟ ಶೈವ ಶಾಸ್ತ್ರದಂತೆಯೂ ಅವನಿಗೆ ಮಾನ್ಯವಾಗಿದ್ದವು. ಈ ಮೂವರು ಆ ನಗಾರಿಗಳನ್ನು ಗುದ್ದಿ ಪುಡಿಯಾಗುವಂತೆ ಮಾಡಿದರು. ಈ ಮೂರು ವ್ಯಾಪಾರಗಳಿಂದ ಜರಾಸಂಧನನ್ನು ಧಿಕ್ಕರಿಸಿದರು.

ಹಿಂದೆ ಹೇಳಿದಂತೆ ಜರಾಸಂಧನಿಂದ ತನ್ನ ತಲೆಗಿಂತಲೂ ಅಧಿಕ ಪ್ರೇಮದಿಂದ ಆದರಿಸಲ್ಪಟ್ಟ ಗಿರಿಯನ್ನು ಕೈಗಳಿಂದ ತಳ್ಳಿ ಪುಡಿ ಪುಡಿಯಾಗುವಂತೆ ಮಾಡಿದರು. ಗೋಡೆಯನ್ನು ಹಿಡಿದು ಹೊಸಹಾದಿಯಿಂದ ನಗರವನ್ನು ಪ್ರವೇಶಿಸಿದರು. ಮಾಷ ಎಂಬ ದೈತ್ಯನ ಕಂಠದ ನಾಳದಿಂದ ನಿರ್ಮಿತವಾದ ಮೂರು ಭೇರಿಗಳನ್ನು ಮುಷ್ಟಿಪ್ರಹಾರಗಳಿಂದ ಭೇದಿಸಿದರು. ಈ ಮೂರು ವ್ಯಾಪಾರಗಳಿಂದ ಜರಾಸಂಧನ ಕೀರ್ತಿಯನ್ನು ಅವನಿಗೆ ಸಮ್ಮತವಾಗಿರುವ ಶೈವಶಾಸ್ತ್ರವನ್ನೂ ಧಿಕ್ಕರಿಸಿದರು.

ಅಂಗಡಿಗಳಿಗೆ ಪ್ರವೇಶಿಸಿ ಅಸಂಖ್ಯವಾದ ಮಾಲೆಗಳನ್ನೂ ಗಂಧಗಳನ್ನೂ ಬಲಾತ್ಕಾರದಿಂದ ತೆಗೆದುಕೊಂಡು ಶ್ರೇಷ್ಠವಾದವುಗಳನ್ನು ಧರಿಸಿದರು. ಅವನ ಮನೆಯ ಗೋಡೆಯನ್ನು ಇಳಿದು ಹೊಸಹಾದಿಯಿಂದ ಪ್ರವೇಶಿಸಿದರು. ಎಲೋ, ಎಂಬ ಶಬ್ದದಿಂದ ಅವನನ್ನು ಕರೆದರು.

ಜರಾಸಂಧನು ಇವರ ಈ ವ್ಯಾಪಾರಗಳನ್ನೆಲ್ಲಾ ನೋಡಿದನು. ಇವರನ್ನು ನೋಡಿದರೆ ಬ್ರಾಹ್ಮಣವೇಷವನ್ನು

ಧರಿಸಿರುವರು. ಸ್ನಾತಕವೇಷದಿಂದ ಯುಕ್ತರಾಗಿರುವರು. ತೋಳುಗಳನ್ನು ನೋಡಿದರೆ ನೀಳವಾಗಿಯೂ ಪುಷ್ಟವಾಗಿಯೂ ಇದೆ. ಧನುಸ್ಸು ಮುಂತಾದ ಆಯುಧಗಳ ಗುರುತುಗಳಿಂದ ಕರ್ಕಶವಾಗಿದೆ. ಆದ್ದರಿಂದ ಈ ಮೂವರು ಕ್ಷತ್ರಿಯರೆಂದು ತೀರ್ಮಾನಿಸಿದನು.

ನೀವು ಯಾರು? ಯಾವ ಕಾರಣದಿಂದ ಬಂದಿರುವಿರಿ? ಪರ್ವತರೂಪವಾದ ನನ್ನ ಲಿಂಗವನ್ನು ಯಾಕೆ ಭೇದಿಸಿದಿರಿ? ನನ್ನ ನಗರವನ್ನೂ ಮನೆಯನ್ನೂ ಗೋಡೆಗಳನ್ನೂ ಇಳಿದು ಪ್ರವೇಶಿಸುವುದು, ನನ್ನ ಪಟ್ಟಣದ ಅಂಗಡಿಗಳಲ್ಲಿ ಲೂಟಿ ಮಾಡುವುದು ಮುಂತಾದ ಅನ್ಯಾಯಗಳನ್ನ ಯಾಕೆ ಮಾಡಿದಿರಿ? ಬ್ರಾಹ್ಮಣವೇಷದಿಂದ ಇಂತಹ ಅನ್ಯಾಯಗಳನ್ನು ಮಾಡಲು ಕಾರಣವೇನು? ಎಂದು ಕೇಳಿದನು.

ಈ ಮಾತುಗಳನ್ನು ಶ್ರೀಕೃಷ್ಣದೇವನು ಕೇಳಿ "ನೀನು ನಮಗೆ ಶತ್ರುವಾಗಿರುವಿ. ಶತ್ರುವಿಗೆ ಎಲ್ಲಾ ವಿಧದಿಂದಲೂ ಪ್ರತಿಕೂಲವಾದ ವ್ಯಾಪಾರಗಳನ್ನು ಮಾಡಬೇಕು. ಆದ್ದರಿಂದ ನಾವು ಮಾಡಿರುವ ವ್ಯಾಪಾರಗಳಿಗೆ ಕಾರಣವನ್ನು ಹೇಳಬೇಕಾಗಿಲ್ಲ" ಎಂದು ಹೇಳಿದನು.

ಈ ಮಾತುಗಳನ್ನು ಕೇಳಿದ ಜರಾಸಂಧನು "ನೀವು ಬ್ರಾಹ್ಮಣರಲ್ಲವೇ? ನಾನು ಬ್ರಾಹ್ಮಣಶತ್ರುವಲ್ಲ. ಬ್ರಾಹ್ಮಣರು ನನಗೆ ಶತ್ರುಗಳಲ್ಲ. ಆದ್ದರಿಂದ ನಿಮ್ಮ ಮಾತುಗಳು ಹೇಗೆ ಯುಕ್ತವಾಗುತ್ತವೆ?" ಎಂದು ಹೇಳಿದನು.

ಈ ಮಾತುಗಳನ್ನು ಕೇಳಿದ ಶ್ರೀಕೃಷ್ಣದೇವನು ನಾವು ಊಟಕ್ಕಾಗಿ ಬಂದಿರುವ ಬ್ರಾಹ್ಮಣಾರ್ಥದ ಬ್ರಾಹ್ಮಣರಲ್ಲ. ನಾನು ನಿನ್ನ ಶತ್ರುವಾಗಿರುವ ಶ್ರೀಕೃಷ್ಣದೇವನು. ನನ್ನ ಜೊತೆಯಲ್ಲಿ ಯುದ್ಧವನ್ನು ಮಾಡಿ ಪರಾಜಿತನಾಗಿ ಹದಿನೇಳು ಸಲ ನೀನು ಓಡಲಿಲ್ಲವೇ? "ದೈತ್ಯಾರಿಃ ಪುಂಡರೀಕಾಕ್ಷಃ" ಎಂದು ಕೋಶದಲ್ಲಿ ನನ್ನ ಹೆಸರು "ದೈತ್ಯಾರಿ" ಎಂದು ಪ್ರಸಿದ್ಧವಾಗಿದೆಯಲ್ಲವೇ? ಆದ್ದರಿಂದಲೇ ದೈತ್ಯನಾದ ನಿನಗೆ ನಾನು ಶತ್ರು ಎಂದು ಹೇಳಬೇಕಾದ್ದೇ ಇಲ್ಲ. ಇವರಿಬ್ಬರು ನನ್ನ ವಿಶೇಷಾನುಗ್ರಹಕ್ಕೆ ಪಾತ್ರರಾಗಿರುವ ಭೀಮಸೇನ ಮತ್ತು ಅವನ ತಮ್ಮನಾಗಿರುವ ಅರ್ಜುನನು ಎಂದು ತಿಳಿ.

ನೀನು ರುದ್ರದೇವನ ಪ್ರಿತ್ಯರ್ಥವಾಗಿ ಒಂದು ಯಜ್ಞವನ್ನು ಮಾಡುವುದಾಗಿ ನಾವು ತಿಳಿದೆವು. ಆ ಯಜ್ಞದಲ್ಲಿ ನರಬಲಿಯನ್ನು ಕೊಡುವುದಾಗಿ ತಿಳಿದೆವು. "ವೇದಗಳಲ್ಲಿ ಅಸಂಖ್ಯ ಯಜ್ಞಗಳು ಹೇಳಲ್ಪಟ್ಟಿವೆ. ಆ ಯಜ್ಞಗಳಲ್ಲಿ ನರಬಲಿಯನ್ನು ಕೊಡುವ ಯಜ್ಞವು ಯಾವುದೂ ಇಲ್ಲ. ಮನುಷ್ಯರ ರಕ್ತವನ್ನು ಕುಡಿಯಬೇಕೆಂಬ ಆಸೆಯಿದ್ದವನು ಈ ವಿಧವಾದ ಯಜ್ಞವನ್ನು ಮಾಡುವನು. ಈ ಯಜ್ಞವು "ಪಿಶಿತಾಶಿಧರ್ಮ" ಅಂದರೆ ರಕ್ತವನ್ನು ಕುಡಿಯುವ ರಾಕ್ಷಸರ ಧರ್ಮ ಎಂದೆನಿಸುತ್ತದೆ. ನರಬಲಿಯನ್ನು ಕೊಡುತ್ತಿರುವ ಯಾಗದಲ್ಲಿ ಬಲಿಯಾಗುವವರನ್ನು ರಕ್ಷಿಸಬೇಕಾದ್ದು ನಮ್ಮೆಲ್ಲರ ಮುಖ್ಯಕರ್ತವ್ಯವಾಗಿದೆ. ನೀನು ಈ ಅವೈದಿಕಯಜ್ಞದಲ್ಲಿ ಬಲಿಕೊಡಬೇಕೆಂದು ತೀರ್ಮಾನಿಸಿರುವುದು ನನ್ನನ್ನು ನನ್ನ ಬಂಧುಗಳನ್ನು ಬಿಡಿಸುವುದಕ್ಕೂ ಈ ಅವೈದಿಕವಾದ ಯಜ್ಞವನ್ನು ಸಲ್ಲಿಸುವುದಕ್ಕೂ ನಾವು ಬಂದಿರುವೆವು. ಅಧಾರ್ಮಿಕರನ್ನು ಶಿಕ್ಷಿಸುವುದೂ ಧಾರ್ಮಿಕರನ್ನು ರಕ್ಷಿಸುವುದೂ ನಮ್ಮೆಲ್ಲರಿಗೆ ಮುಖ್ಯ ಕರ್ತವ್ಯವಾಗಿದೆ. ನಿನ್ನನ್ನು ಬಲದಿಂದ ಶಿಕ್ಷಿಸಿ ಬಂಧುಗಳನ್ನು ಬಿಡಿಸುವೆವು. ನೀನು ಅವರನ್ನು ಬಿಡಬೇಕು. ಇಲ್ಲದಿದ್ದರೆ ಸಾಯುವುದಕ್ಕೆ ಸಿದ್ಧನಾಗಿ ಯುದ್ಧಕ್ಕೆ ಬರಬೇಕು" ಎಂದು ಶ್ರೀಕೃಷ್ಣದೇವನು ಹೇಳಿದನು.

ಈ ಮಾತುಗಳನ್ನು ಜರಾಸಂಧನು ಕೇಳಿದನು. ಅವನಿಗೆ ಮಿತಿಮೀರಿದ ಕೋಪವು ಬಂತು. "ಇವನು ನನ್ನ ವೈರಿಯಾಗಿರುವ ಕೃಷ್ಣನೆಂದು ಹೇಳುತ್ತಿರುವನು. ನನ್ನಿಂದ ಪೂಜಿಸಲ್ಪಡುತ್ತಿರುವ ಸರ್ವೋತ್ತಮನಾಗಿರುವ ರುದ್ರದೇವರ ಪೂಜೆಗೆ ವಿರೋಧವನ್ನು ಮಾಡುವ ಉದ್ದೇಶದಿಂದ ಬಂದಿರುವನು. ಶಿವಪೂಜೆಗೆ ವಿರೋಧವನ್ನು ಮಾಡುತ್ತಿರುವ ಕೃಷ್ಣನ ಬಂಧುಗಳನ್ನು ಬಿಡಲೇಬಾರದು ಎಂದು ತೀರ್ಮಾನಿಸಿದನು.

"ಓ ಶ್ರೀಕೃಷ್ಣ! ನಾನು ಸರ್ವೋತ್ತಮರಾದ ರುದ್ರದೇವರನ್ನು ಪೂಜಿಸುವುದಕ್ಕಾಗಿ ಈ ಯಾಗವನ್ನು ಆರಂಭಿಸಿರುವೆನು. ಈ ಯಾಗದಲ್ಲಿ ಶಿವಭಕ್ತಾಗ್ರೇಸರನಾದ ನಾನು ರುದ್ರದೇವರಿಗಾಗಿ ಸಂಕಲ್ಪಿಸಲ್ಪಟ್ಟ ಪಶುಗಳನ್ನು ಬಿಡಲಾರೆನು. ಕ್ರಮವಾಗಿ ಒಂದೊಂದು ಪಶುವನ್ನಾಗಲೀ ಎಲ್ಲಾ ಪಶುಗಳನ್ನು ಒಟ್ಟಿಗೆಯಾಗಲೀ ರುದ್ರದೇವರಿಗೆ ಬಲಿಯಾಗಿ ಸಮರ್ಪಿಸುವೆನು" ಎಂದನು.

"ನೀನು ನನ್ನ ಬಂಧುಗಳನ್ನು ಬಿಡದಿದ್ದರೆ ನಾವು ನಿನ್ನನ್ನು ಕೊಂದು ಬಿಡಿಸುವೆವು. ಸಾಯುವುದಕ್ಕೆ ಸಿದ್ಧನಾಗಿ ನೀನು ಯುದ್ಧಕ್ಕೆ ಬಾ" ಎಂದು ಶ್ರೀಕೃಷ್ಣದೇವನು ಹೇಳಿದನು.

"ನಾನು ಬಿಡಲಾರೆನು. ಯುದ್ಧಕ್ಕೆ ಬರುತ್ತೇನೆ. ನೀವು ಮೂರು ಜನರು, ನಾನೊಬ್ಬನು, ಆದರೂ ಮೂವರೊಡನೆ ನಾನೊಬ್ಬನೇ ಯುದ್ಧವನ್ನು ಮಾಡುವೆನು. ಬೇಕಾದರೆ ನೀವು ನಿಮ್ಮ ಸೈನ್ಯಗಳಿಂದ ಸಹಿತರಾಗಿ ಬರಬಹುದು. ನಾನು ಆಯುಧಗಳಿಲ್ಲದೆ. ಬಾಹುಗಳಿಂದಲೇ ಯುದ್ಧವನ್ನು ಮಾಡುವೆನು. ಆಯುಧಗಳನ್ನು ತೆಗೆದುಕೊಳ್ಳಬೇಕೆಂದು ನೀವು ಅಪೇಕ್ಷಿಸಿದರೆ ಆಯುಧಗಳಿಂದ ಸಹಿತನಾಗಿ ಯುದ್ಧವನ್ನು ಮಾಡುವೆನು. ನಿಮಗೆ ಇಷ್ಟವಾದ ಆಯುಧಗಳನ್ನು ಧರಿಸಿ ಯುದ್ಧವನ್ನು ಮಾಡುವೆನು. ಸೈನ್ಯಸಹಿತನಾಗಿ ಯುದ್ಧವನ್ನು ಮಾಡಬೇಕೆಂದರೆ ನೀವೂ ಸೈನ್ಯಸಹಿತರಾಗಿ ಬಂದರೆ ನಾನೂ ಸೈನ್ಯಸಹಿತನಾಗಿ ಯುದ್ಧವನ್ನು ಮಾಡುವೆನು" ಎಂದನು.

ಜರಾಸಂಧನು ಯುದ್ಧಕ್ಕೆ ಸಿದ್ಧನಾದನು. "ಮೂವರಲ್ಲಿ ಯಾರಾದರೂ ಒಬ್ಬನ ಜೊತೆಯಲ್ಲಿ ಯುದ್ಧವನ್ನು ಮಾಡು. ನಿನ್ನ ಕಡೆಯಲ್ಲಿ ನೀನು ಒಬ್ಬನೇ ಆದರೂ ಸರಿ, ಸೈನ್ಯಸಹಿತನಾದರೂ ಸರಿ, ಯುದ್ಧವು ನಡೆಯಲಿ. ನಮ್ಮಲ್ಲಿ ಯಾರ ಜೊತೆಯಲ್ಲಿ ಯುದ್ಧವನ್ನು ಮಾಡುವಿಯೋ ಬೇಗನೆ ಅವನ ಜೊತೆಯಲ್ಲಿ ಯುದ್ಧವನ್ನು ಆರಂಭಿಸು" ಎಂದು ಶ್ರೀಕೃಷ್ಣದೇವನು ಹೇಳಿದನು.

ಶ್ರೀಕೃಷ್ಣದೇವನು ಜರಾಸಂಧನೊಡನೆ ಮಾತಾಡುವಾಗ "ನೀನು ಬೇಕಾದರೆ ಆಯುಧವಿಲ್ಲದೆ ಯುದ್ಧವನ್ನು ಮಾಡು. ಆಯುಧಸಹಿತನಾಗಿ ಬೇಕಾದರೆ ಮಾಡು. ಅಥವಾ ನಿನಗೆ ಇಷ್ಟವಾದ ಆಯುಧದಿಂದ ಮಾಡು" ಎಂದನು. ಈ ರೀತಿಯಿಂದ ಹೇಳಿದ್ದರಿಂದ ಭೀಮಸೇನದೇವರಲ್ಲಿ ಕೀರ್ತಿಯು ಹೆಚ್ಚಾಗುವಂತೆ ಮಾಡಿದಂತಾಯಿತು. ತನ್ನ ಶತ್ರುವಾದ ಜರಾಸಂಧನನ್ನು ಭೀಮಸೇನದೇವರಿಂದ ಕೊಲ್ಲಿಸಿ ಭೀಮಸೇನದೇವರಲ್ಲಿ ವಿಶೇಷಾನುಗ್ರಹ ಮತ್ತು ಜ್ಞಾನ, ಭಕ್ತಿ ಮುಂತಾದ ಗುಣಗಳ ವೃದ್ಧಿಯನ್ನು ಮಾಡಬೇಕೆಂಬ ಉದ್ದೇಶದಿಂದಲೇ ಮೇಲ್ಕಂಡಂತೆ ಹೇಳಿದನು. ಶತ್ರುವನ್ನು ಹುಲ್ಲಿನ ಕಡ್ಡಿಯಂತೆ ತೃಣೀಕರಿಸುವುದಕ್ಕೆ ಆಯುಧಗಳನ್ನು ತೆಗೆದುಕೊಳ್ಳದಂತೆ ಜರಾಸಂಧನ ಮನೆಗೆ ಹೋದನು.

ಕೃಷ್ಣ, ಭೀಮ, ಅರ್ಜುನರು ಬ್ರಾಹ್ಮಣವೇಷದಿಂದ ಜರಾಸಂಧನ ಮನೆಗೆ ಹೋಗಲು ಕಾರಣವನ್ನು ಈಗ

ಹೇಳುವೆವು. ಕ್ಷತ್ರಿಯನ ವೇಷದಲ್ಲಿ ಆಯುಧವು ಅತ್ಯವಶ್ಯವಾಗಿರುತ್ತದೆ. ಆಯುಧವಿಲ್ಲದೆ ಕ್ಷತ್ರಿಯವೇಷವು ಯೋಗ್ಯವಲ್ಲ. ಬ್ರಾಹ್ಮಣವೇಷದಲ್ಲಿ ಆಯುಧದ ಆವಶ್ಯಕತೆಯಿಲ್ಲ. ಅದಕ್ಕಾಗಿ ಬ್ರಾಹ್ಮಣವೇಷದಿಂದ ಜರಾಸಂಧನ ಮನೆಗೆ ಹೋದರು. ಇದರಿಂದ ಜರಾಸಂಧನನ್ನು ತೃಣೀಕರಿಸಿದಂತೆಯೂ ಆಗುತ್ತದೆ. ಶ್ರಾದ್ಧ ಭೋಜನವನ್ನು ಮಾಡುವ ಬ್ರಾಹ್ಮಣರೂ ಸಹ ನಿನ್ನೊಡನೆ ಯುದ್ಧ ಮಾಡಿ ನಿನ್ನನ್ನು ಕೊಲ್ಲಲು ಶಕ್ತರು. ಹೀಗಿರುವಾಗ ಕ್ಷತ್ರಿಯರು ಕೊಲ್ಲಲು ಶಕ್ತರೆಂದು ಹೇಳಬೇಕಾದ್ದೇನಿದೆ? ಎಂದು ತಿಳಿಸುವುದಕ್ಕಾಗಿಯೂ ಬ್ರಾಹ್ಮಣವೇಷದಿಂದ ಮೂವರೂ ಜರಾಸಂಧನ ಮನೆಗೆ ಹೋದರು.

ಜರಾಸಂಧನು ತನ್ನ ಮನೆಯಲ್ಲಿರುವವನು. ಸೈನ್ಯಸಹಿತನಾಗಿರುವ ಮತ್ತು ಮನೆಯಲ್ಲಿರುವ ಜರಾಸಂಧನನ್ನು ಆಯುಧವಿಲ್ಲದ ಶ್ರೀಭೀಮಸೇನದೇವರು ಯುದ್ಧಕ್ಕೆ ಕರೆದರೆ ಅಪರಿಮಿತವಾದ ಧರ್ಮವೂ ಕೀರ್ತಿಯೂ ಶ್ರೀಭೀಮಸೇನದೇವರಿಗೆ ವೃದ್ಧಿಯಾಗುತ್ತದೆ. ಅದಕ್ಕಾಗಿ ಶ್ರೀಭೀಮಸೇನದೇವರನ್ನು ಆಯುಧವಿಲ್ಲದಂತೆ ಶ್ರೀಕೃಷ್ಣದೇವನು ಕಳುಹಿಸಿದನು.

ಮೂರನೆಯವನಾಗಿ ಅರ್ಜುನನನ್ನು ಶ್ರೀಕೃಷ್ಣದೇವನು ಕರೆದುಕೊಂಡು ಹೋದದ್ದಕ್ಕೆ ಕಾರಣವನ್ನು ಹೇಳುವೆವು. ನಮ್ಮೂವರಲ್ಲಿ ಯಾರನ್ನಾದರೂ ಒಬ್ಬನನ್ನು ನೀನು ಯುದ್ಧಕ್ಕಾಗಿ ಕರೆಯಬಹುದು ಎಂದು ಶ್ರೀಕೃಷ್ಣದೇವನು ಜರಾಸಂಧನನ್ನು ಕುರಿತು ಹೇಳಿದನು. ಆ ಮಾತುಗಳನ್ನು ಕೇಳಿದ ಜರಾಸಂಧನು "ಈ ಅರ್ಜುನನಿಗೆ ಐವತ್ತೈದು ವರ್ಷಗಳು ಈಗ ಪೂರ್ಣವಾಗುತ್ತಿವೆ. ಆದರೂ ಈ ಅರ್ಜುನನು ಚಿಕ್ಕ ಹುಡುಗನಿಗೆ ಸಮಾನನಾಗಿರುವನು; ಆದ್ದರಿಂದ ಮಹಾ ವೀರನಾಗಿರುವ ನಾನು ಚಿಕ್ಕ ಹುಡುಗನಾಗಿರುವ ಅರ್ಜುನನೊಡನೆ ಯುದ್ಧವನ್ನು ಮಾಡಲಾರೆನು" ಎಂದನು. ಹೀಗೆ ಜರಾಸಂಧನ ಬಾಯಿಯಿಂದಲೇ ಶ್ರೀಭೀಮಸೇನದೇವರ ಮಹಾಧಿಕ್ಯವನ್ನು ಹೇಳಿಸುವುದಕ್ಕಾಗಿ ಶ್ರೀಕೃಷ್ಣದೇವನು ಅರ್ಜುನನನ್ನು ಕರೆದುಕೊಂಡು ಹೋದನು.

ಜರಾಸಂಧನು ಧಿಕ್ಕಾರಪೂರ್ವಕವಾಗಿ ಮೇಲ್ಕಂಡ ಮಾತುಗಳನ್ನು ಹೇಳಿದಾಗ ಅರ್ಜುನನು "ಭುಜದಿಂದಲಾಗಲೀ ಯುದ್ಧವನ್ನು ಮಾಡುವಿಯಾ? ಪರೀಕ್ಷೆಯನ್ನು ಮಾಡು" ಎಂದು ಹೇಳಬೇಕಾಗಿತ್ತು. ಆದರೆ ಹಾಗೆ ಹೇಳಲಿಲ್ಲ. ಒಂದು ಪಕ್ಷದಲ್ಲಿ ತನಗೆ ಪರಾಜಯವು ಏರ್ಪಡಬಹುದು ಎಂಬ ಶಂಕೆಯಿಂದ ಹಾಗೆ ಹೇಳಲಿಲ್ಲ. ಇದರಿಂದ ಶ್ರೀಭೀಮಸೇನದೇವರ ಮಹಾಧಿಕ್ಯವು ವ್ಯಕ್ತವಾಯಿತು. ಇದಕ್ಕಾಗಿಯೇ ಅರ್ಜುನನನ್ನು ಶ್ರೀಕೃಷ್ಣದೇವನು ಕರೆದುಕೊಂಡು ಹೋದನು.

ಜರಾಸಂಧನು ಶ್ರೀಕೃಷ್ಣದೇವನಲ್ಲಿರುವ ತನ್ನಿಂದ ಸಹಿಸಲಾರದ ಘೋರವಾದ ಬಲವನ್ನು ತಿಳಿದಿದ್ದನು. ಆದ್ದರಿಂದ ಶ್ರೀಕೃಷ್ಣದೇವನನ್ನು ಕರೆಯಲು ಭೀತನಾದನು. ಆದರೆ ತನ್ನ ಮಾನರಕ್ಷಣೆಗಾಗಿ ಶ್ರೀಕೃಷ್ಣದೇವನನ್ನು "ಗೊಲ್ಲ" ಎಂದು ಹೇಳಿ ಅವನ ಜೊತೆಯಲ್ಲಿ ಯುದ್ಧವನ್ನು ಮಾಡಲಾರೆನೆಂದು ಹೇಳಿದನು.

"ಒಂದು ಪಕ್ಷದಲ್ಲಿ ಬದುಕಿದರೂ ಬದುಕಬಹುದು" ಎಂದು ನಿಶ್ಚಯಿಸಿದವನಾಗಿ ಭೀಮಸೇನದೇವರನ್ನು ಕರೆದನು. "ಶ್ರೀಕೃಷ್ಣನು ತನ್ನನ್ನು ಕೊಂದೇ ಬಿಡುವನು" ಎಂಬ ನಂಬಿಕೆಯಿತ್ತು. ಆದ್ದರಿಂದ ಹೆದರಿದವನಾಗಿ ಶ್ರೀಕೃಷ್ಣದೇವನನ್ನು ಕರೆಯಲಿಲ್ಲ. ಅರ್ಜುನನು ನನ್ನಿಂದ ಸೋತರೆ ಭೀಮಸೇನನೂ ಶ್ರೀಕೃಷ್ಣನೂ ಒಟ್ಟಾಗಿ ಸೇರಿ ತನ್ನನ್ನು ಕೊಂದುಬಿಡುವರು ಎಂದು ಅಂಜಿದನು. ಮೂವರಲ್ಲಿ ದುರ್ಬಲನಾಗಿರುವ ಅರ್ಜುನನನ್ನು ಕರೆದದ್ದರಿಂದ

ತನಗೆ ಕೀರ್ತಿಯು ನಶಿಸುತ್ತದೆ ಎಂದೂ ಅಂಜಿದನು. ಕೊನೆಗೆ ಭೀಮಸೇನದೇವರನ್ನು ತನ್ನೊಡನೆ ಯುದ್ಧಕ್ಕಾಗಿ ಕರೆದನು.

ಯುದ್ಧದ ಆರಂಭದಲ್ಲಿ ಯಾವ ಆಯುಧದಿಂದ ಯುದ್ಧವನ್ನು ಮಾಡುವುದು? ಎಂದು ಆಲೋಚಿಸಿದನು. ನನ್ನಲ್ಲಿರುವ ಬಲಕ್ಕಿಂತ ಅಧಿಕವಾದ ಬಲವು ಭೀಮನಲ್ಲಿ ಇರುತ್ತದೆ. ತನ್ನಲ್ಲಿ ಗದಾಯುದ್ಧದ ವಿಶೇಷವಾದ ಅಭ್ಯಾಸವು ಇರುತ್ತದೆ. ಆದ್ದರಿಂದ ಶಿಕ್ಷಣ ಬಲದಿಂದ ನಾನು ಜಯಿಸಿದರೂ ಜಯಿಸಬಹುದು ಎಂಬ ದುರಾಶೆಯಿಂದ ಗದಾಯುದ್ಧವನ್ನು ಮಾಡುವುದಾಗಿ ತೀರ್ಮಾನಿಸಿದನು. ಈ ಯುದ್ಧದಲ್ಲಿ "ತನ್ನ ಮರಣವು ಏರ್ಪಡಬಹುದು" ಎಂದು ನಂಬಿ ತನ್ನ ಮಗನಾಗಿರುವ ಸಹದೇವನಿಗೆ ತನ್ನ ರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಿದನು. ಈ ಸಹದೇವನು ಪತ್ರತಾಪ ಎಂಬ ರುದ್ರನ ಅವತಾರನಾಗಿದ್ದನು.

ನಂತರ ಜರಾಸಂಧನು ಭೀಮಸೇನದೇವರಿಗೆ ಒಂದು ಗದೆಯನ್ನು ಕೊಟ್ಟು ತಾನು ಒಂದು ಗದೆಯನ್ನು ಸ್ವೀಕರಿಸಿದನು. ಊರಿನ ಹೊರಗೆ ಭೀಮಸೇನದೇವರೂ ಜರಾಸಂಧನೂ ಬಂದರು. ಮೊದಲು ಜರಾಸಂಧನು ಶಿವಸರ್ವೋತ್ತಮತ್ವವನ್ನು ಸಮರ್ಥಿಸಲು ಆರಂಭಿಸಿದನು. ಶ್ರೀಭೀಮಸೇನದೇವರು ಜರಾಸಂಧನನ್ನು ವಾಗ್ಯುದ್ಧದಲ್ಲಿ ಜಯಿಸಿ ಶ್ರೀಕೃಷ್ಣದೇವನ ಮುಂದೆ ಶ್ರೀವಿಷ್ಣುಸರ್ವೋತ್ತಮತ್ವವನ್ನು ಸಾಧಿಸಿದರು.

## ಭೀಮಸೇನ ಜರಾಸಂಧಯುದ್ಧ

ವಜ್ರಾಯುಧದಂತೆ ಅತಿ ಕಠೋರವಾದ ಗದೆಗಳಿಂದ ಅನ್ಯೋನ್ಯವಾಗಿ ಹೊಡೆದುಕೊಂಡರು. ಆ ಗದೆಗಳು ಇಬ್ಬರ ಅತಿ ಕಠಿನವಾದ ದೇಹಗಳ ಸ್ಪರ್ಶದಿಂದ ಮಣ್ಣಿನ ಮುದ್ದೆಗಳು ಬಂಡೆಕಲ್ಲುಗಳಲ್ಲಿ ಒಗೆದಾಗ ಪುಡಿ ಪುಡಿಯಾದಂತೆ ಪುಡಿಪುಡಿಯಾದವು. ಅನ್ಯೋನ್ಯವಾಗಿ ಯುದ್ಧವನ್ನು ಮಾಡುತ್ತಿದ್ದಾಗ ಬ್ರಹ್ಮಾಂಡವು ಬಿರುಕುಬಿಟ್ಟಾಗ ಏರ್ಪಟ್ಟ ಧ್ವನಿಯಂತೆ ಭಯಂಕರವಾದ ಧ್ವನಿಯು ಏರ್ಪಟ್ಟಿತು.

ಶ್ರೀಹರಿಯೂ ಕೈಟಭದೈತ್ಯನೂ ಯುದ್ಧವನ್ನು ಮಾಡಿದಂತೆ ಮಾಡಿದರು. ಭೂಮಿಯು ನಡುಗಿತು. ಪರ್ವತಗಳೆಲ್ಲವೂ ಇವರಿಬ್ಬರ ದೇಹಸ್ಪರ್ಶದಿಂದ ಪುಡಿ ಪುಡಿಯಾದವು. ಕುಲಾಚಲಗಳು ಚಲಿಸಿದವು. ಎಲ್ಲಾ ಸಮುದ್ರಗಳೂ ಅಲ್ಲೋಲಕಲ್ಲೋಲವಾದವು. ಬ್ರಹ್ಮ ರುದ್ರ ಮುಂತಾದ ಎಲ್ಲ ದೇವತೆಗಳೂ, ದೈತ್ಯರುಗಳೂ ಆಕಾಶದಲ್ಲಿ ಸಾಲು ಸಾಲಾಗಿ ನಿಂತರು. ದೇವತೆಗಳೆಲ್ಲರೂ "ಶ್ರೀಭೀಮಸೇನದೇವರಿಗೆ ಜಯವಾಗಲಿ" ಎಂದು ಕೂಗಿದರು. ಅಸುರರೆಲ್ಲರೂ "ಜರಾಸಂಧನಿಗೆ ಜಯವಾಗಲಿ" ಎಂದು ಕೂಗಿದರು.

ಬ್ರಹ್ಮದೇವನು ಜರಾಸಂಧನಿಗೆ ಅವಧ್ಯತ್ವ ವರವನ್ನು ಕೊಟ್ಟಿರುವನು. ಆ ವರಕ್ಕೆ ಮರ್ಯಾದೆಯನ್ನು ಕೊಡುವುದಕ್ಕಾಗಿ ಭೀಮಸೇನದೇವರು ಹದಿನೈದು ದಿವಸಗಳ ವರೆಗೆ ಮೆಲ್ಲನೆ ಯುದ್ಧವನ್ನು ಮಾಡಿದರು. ಕೊನೆಗೆ ಶ್ರೀಕೃಷ್ಣದೇವನ ಆಜ್ಞೆಯಿಂದ ಜರಾಸಂಧನನ್ನು ಸಂಹರಿಸುವುದಕ್ಕಾಗಿ ತನ್ನ ಬಲವನ್ನು ಸ್ವೀಕರಿಸಬೇಕೆಂದು ಸಂಕಲ್ಪಿಸಿದರು. ಶ್ರೀಕೃಷ್ಣದೇವನನ್ನು ಅತ್ಯಂತ ಭಕ್ತಿಯಿಂದ ನಮಸ್ಕರಿಸಿದರು. ಸಂತೋಷದಿಂದ ಅರ್ಜುನನನ್ನು ತಬ್ಬಿಕೊಂಡರು. ಸಿಂಹವು ಆನೆಯ ಗಂಡಸ್ಥಳವನ್ನು ಹಿಡಿದಂತೆ ಜರಾಸಂಧನ ಜುಟ್ಟನ್ನು ಹಿಡಿದು ಶೆಳೆದರು. ಮೊಣಕಾಲಿನಿಂದ ಬೆನ್ನನ್ನು ಒತ್ತಿದರು. ಜರಾಸಂಧನು ಹುಟ್ಟುವಾಗ ಅವನ ದೇಹವು ಎರಡು ಹೋಳಾಗಿ ಹುಟ್ಟಿತ್ತು.

"ಜರಾ" ಎಂಬ ರಾಕ್ಷಸಿಯು ದೇಹದಿಂದ ಬಂದಿರುವ ಆ ಹೋಳುಗಳನ್ನು ಒಟ್ಟುಗೂಡಿಸಿ ಅವನನ್ನು ಬದುಕಿಸಿದ್ದಳು. ಕೂರ್ಮದೇಶದಲ್ಲಿ ಅಂದರೆ ಬೆನ್ನಿನ ಬುಡದಲ್ಲಿ ಅವನ ದೇಹವು ಬಂದಾಗಿತ್ತು. ಮರಣಕಾಲದಲ್ಲಿ ಕೂರ್ಮದೇಶವನ್ನು ಮುರಿದರು. ಅವನ ದೇಹವು ಹುಟ್ಟಿದಾಗ ಇದ್ದಂತೆ ಸೀಳಲ್ಪಟ್ಟಿತು. ಜರಾಸಂಧನ ದೇಹವು ಸೀಳಲ್ಪಡುವಾಗ ಬ್ರಹ್ಮಾಂಡವು ಒಡೆದಾಗ ಏರ್ಪಡುವ ಧ್ವನಿಯಂತೆ ಭಯಂಕರವಾದ ಧ್ವನಿಯು ಏರ್ಪಟ್ಟಿತು. ಆ ಧ್ವನಿಯನ್ನು ಕೇಳಿದ ಮೂರು ಲೋಕಗಳಲ್ಲಿರುವ ಸರ್ವರೂ ಹೆದರಿದರು.

ಭೀಮಸೇನದೇವರು ಜರಾಸಂಧನ ಮರ್ಮಗಳಲ್ಲಿ ಹೊಡೆದು ಅವನನ್ನು ಕೊಲ್ಲಬಹುದಾಗಿತ್ತು. ಹಾಗೆ ಮಾಡಿದ್ದರೆ ಶ್ರೀಭೀಮಸೇನದೇವರ ಪೌರುಷವು ವ್ಯಕ್ತವಾಗುತ್ತಿದ್ದಿಲ್ಲ. ಭೀಮಸೇನದೇವರ ಪೌರುಷವು ವ್ಯಕ್ತವಾಗಬೇಕಾಗಿದೆ. ಅದಕ್ಕಾಗಿ ಮರ್ಮಗಳಲ್ಲಿ ಹೊಡೆದು ಅವನನ್ನು ಕೊಲ್ಲದೆ ಕೂರ್ಮದೇಶವನ್ನು ಮುರಿದು ಅವನನ್ನು ಕೊಂದರು. ಜರಾಸಂಧನನ್ನು ಶ್ರೀಕೃಷ್ಣದೇವನ ಮುಂದೆ ಸಂಹರಿಸಿ ಈ ಮಹಾಪುಣ್ಯಕಾರ್ಯವನ್ನು ಶ್ರೀಕೃಷ್ಣದೇವನಿಗೆ ಶ್ರೀಭೀಮಸೇನದೇವರು ಸಮರ್ಪಿಸಿದರು.

ಶ್ರೀಭೀಮಸೇನದೇವರು ತಮ್ಮ ಪುಣ್ಯಕಾರ್ಯವನ್ನು ಸಮರ್ಪಿಸುತ್ತಿರುವಾಗ ಈ ಸಂದರ್ಭದಲ್ಲಿ ತಾನು ಭಾಗವನ್ನು ವಹಿಸಬೇಕೆಂದು ಬ್ರಹ್ಮದೇವನು ಅಲ್ಲಿಗೆ ಬಂದನು. ಭೀಮಸೇನದೇವರು ಮಾಡಿದ ಪೂಜೆಯನ್ನು ಶ್ರೀಕೃಷ್ಣದೇವನು ಗಟ್ಟಿಯಾಗಿ ತಬ್ಬಿಕೊಂಡು ಸ್ವೀಕರಿಸಿದನು. ಅರ್ಜುನನು ಶ್ರೀಭೀಮಸೇನದೇವರನ್ನು ಅತ್ಯಂತ ಭಕ್ತಿಯಿಂದ ನಮಸ್ಕರಿಸಿದನು. ಪುನಃ ಶ್ರೀಭೀಮಸೇನದೇವರು ಶ್ರೀಕೃಷ್ಣದೇವನನ್ನು ನಮಸ್ಕರಿಸಿದರು. ಎಲ್ಲಾ ದೇವತೆಗಳೂ ತುಂಬಾ ಸಂತೋಷದಿಂದ ಶ್ರೀಭೀಮಸೇನದೇವರನ್ನು ಹೊಗಳಿದರು. ದೈತ್ಯರೆಲ್ಲರೂ ತುಂಬಾ ಖಿನ್ನರಾದರು.

ರುದ್ರದೇವನ ವರದಿಂದ ಅವಧ್ಯನಾಗಿರುವ ಜರಾಸಂಧನನ್ನು ಸಂಹರಿಸಿ ಶ್ರೀಭೀಮಸೇನದೇವರು ತಾನು ರುದ್ರದೇವನಿಗಿಂತಲೂ ಉತ್ತಮವೆಂದು ತಿಳಿಸಿದರು. ಜರಾಸಂಧನ ಮಗನಾಗಿರುವ ಸಹದೇವನು ಶ್ರೀಕೃಷ್ಣದೇವನನ್ನೂ ಶ್ರೀಭೀಮಸೇನದೇವರನ್ನೂ ಅರ್ಜುನನನ್ನೂ ಶರಣು ಹೊಂದಿದನು.

ದೇವೇಂದ್ರನು ಶ್ರೀಹರಿಯನ್ನು ಆರಾಧಿಸಿ ಶ್ರೀಹರಿಯ ರಥವನ್ನು ಪಡೆದಿದ್ದನು. ವಸುರಾಜನು ದೇವೇಂದ್ರನನ್ನು ಆರಾಧಿಸಿ ಶ್ರೀಹರಿಯ ರಥವನ್ನು ಪಡೆದಿದ್ದನು. ವಸುರಾಜನ ವಂಶದಲ್ಲಿ ಹುಟ್ಟಿರುವ ಜರಾಸಂಧನಲ್ಲಿ ಅದೇ ಶ್ರೀಹರಿಯ ರಥವು ಇತ್ತು. ಜರಾಸಂಧನು ಸತ್ತಕೂಡಲೇ ಅವನ ಮಗನಾದ ಸಹದೇವನು ತನ್ನ ತಂಗಿಯನ್ನು ಶ್ರೀಭೀಮಸೇನದೇವರಿಗೆ ಕೊಟ್ಟನು. ಆ ಕಾಲದಲ್ಲಿ ತನ್ನಲ್ಲಿದ್ದ ಶ್ರೀಹರಿಯ ರಥವನ್ನೂ ಕೊಟ್ಟನು. ಶ್ರೀಕೃಷ್ಣದೇವನನ್ನು ಅತ್ಯಂತ ಭಕ್ತಿಯಿಂದ ನಮಸ್ಕರಿಸಿದನು. ಶ್ರೀಭೀಮಸೇನದೇವರು ಶ್ರೀಹರಿಯ ರಥವನ್ನು ಶ್ರೀಕೃಷ್ಣದೇವನಿಗೆ ಸಮರ್ಪಿಸಿದರು. ಶ್ರೀಕೃಷ್ಣದೇವನು ಗರುಡನನ್ನು ಸ್ಮರಿಸಿದನು. ಗರುಡನು ಕೂಡಲೇ ಬಂದನು. ಧ್ವಜಸ್ಥಾನದಲ್ಲಿ ಕುಳಿತನು. ಆ ರಥದ ಮೇಲೆ ಭೀಮಸೇನದೇವರಿಂದಲೂ ಅರ್ಜುನನಿಂದಲೂ ಸಹಿತನಾಗಿ ಶ್ರೀಕೃಷ್ಣದೇವನು ಏರಿ ಕುಳಿತನು.

ಸಹದೇವನ ತಂಗಿಯನ್ನು ಶ್ರೀಭೀಮಸೇನದೇವರು ತನ್ನ ತಮ್ಮನಾದ ಸಹದೇವನಿಗಾಗಿ ಸ್ವೀಕರಿಸಿದರು. ಹಿಂದೆ ಮದ್ರರಾಜನು ತನ್ನ ಮಗಳನ್ನು ನಕುಲನಿಗೆ ಕೊಟ್ಟು ವಿವಾಹವನ್ನು ಮಾಡಿದ್ದನು. ನಕುಲನ ಪತ್ನಿಯಾಗಿರುವ

ಮದ್ರರಾಜನ ಕುಮಾರಿಯೂ ಜರಾಸಂಧನ ಮಗಳೂ ಇಬ್ಬರೂ ಮೂಲರೂಪದಲ್ಲಿ ಅಶ್ವಿನೀದೇವತೆಗಳ ಪತ್ನಿಯಾಗಿರುವ ಉಷಾದೇವಿಯೇ ಆಗಿರುವಳು. ನಾಸತ್ಯ, ದಸ್ರ ಎಂಬ ದ್ವಿವಿಧರಾದ ಅಶ್ವಿನೀದೇವತೆಗಳು ನಕುಲ, ಸಹದೇವ ಎಂಬ ಎರಡು ಮಕ್ಕಳಾಗಿ ಪಾಂಡುರಾಜನಿಗೆ ಮಕ್ಕಳಾಗಿ ಹುಟ್ಟಿರುವ ವಿಷಯವು ನಿಮಗೆಲ್ಲರಿಗೂ ಗೊತ್ತಿದೆ. ಮದ್ರರಾಜನ ಕುಮಾರಿಯಾಗಿ ಹುಟ್ಟಿರುವ ವಿಷಯವು ನಿಮಗೆಲ್ಲರಿಗೂ ಗೊತ್ತಿದೆ. ಮದ್ರರಾಜನ ಕುಮಾರಿಯಾಗಿ ಹುಟ್ಟಿರುವ ಉಷಾದೇವಿಯು ನಕುಲನ ಪತ್ನಿಯಾದಳು. ಜರಾಸಂಧನ ಮಗಳಾಗಿ ಹುಟ್ಟಿರುವ ಉಷಾದೇವಿಯು ಸಹದೇವನ ಪತ್ನಿಯಾದಳು.

ಜರಾಸಂಧನು ಯುದ್ಧಕ್ಕೆ ಹೋದವನು ಯುದ್ಧದಲ್ಲಿ ಲೀಲೆಯಿಂದ ಸರ್ವರನ್ನೂ ಜಯಿಸಿದನು. ಹದಿನಾರು ಸಾವಿರದ ನೂರ ಎಂಟು ರಾಜರುಗಳು ಅವನಿಂದ ಯುದ್ಧದಲ್ಲಿ ಸೋತರು. ಅವರನ್ನೆಲ್ಲರನ್ನೂ ಪರ್ವತದಲ್ಲಿ ಹಳ್ಳದಂತಿರುವ ಪ್ರದೇಶದಲ್ಲಿ ಜೈಲಿನಲ್ಲಿಟ್ಟಿದ್ದನು. ಅವರುಗಳಿಗೆ ಸ್ನಾನ ಮುಂತಾದ ಯಾವ ಉಪಚಾರಗಳೂ ಇರಲಿಲ್ಲ. ಆದ್ದರಿಂದ ಅವರೆಲ್ಲರ ದೇಹಗಳಲ್ಲಿ ಕೊಳೆಗಳು ಅಂಟಿಕೊಂಡಿದ್ದವು. ಅವರುಗಳ ವಸ್ತ್ರಗಳೆಲ್ಲವೂ ತುಂಬಾ ಕೊಳೆಗಳಿಂದ ಯುಕ್ತವಾಗಿದ್ದವು. ಅವರಿಗೆ ಸರಿಯಾದ ಆಹಾರಗಳಿರಲಿಲ್ಲ. ಆದ್ದರಿಂದ ಹಸಿವಿನಿಂದ ಪೀಡಿತರಾಗಿದ್ದರು. ದೇಹಗಳು ಕೃಶವಾಗಿದ್ದವು. ಮುಖಗಳು ಬಾಡಿ ಹೋಗಿದ್ದವು. ಕಾರಾಗೃಹವಾಸದಿಂದ ದೇಹಗಳು ತುಂಬಾ ಕೃಶವಾಗಿದ್ದವು.

ಶ್ರೀಕೃಷ್ಣದೇವನು ಅವರೆಲ್ಲರನ್ನೂ ಜೈಲಿನಿಂದ ಬಿಡಿಸಿದನು. ಅವರೆಲ್ಲರೂ ನೀಲಮೇಘದಂತೆ ನೀಲವರ್ಣದಿಂದ ಯುಕ್ತನಾಗಿಯೂ, ಹಳದಿಬಣ್ಣದ ಪೀತಾಂಬರವನ್ನು ಧರಿಸಿದವನಾಗಿಯೂ ಎದೆಯಲ್ಲಿ "ಶ್ರೀವತ್ಸ" ಎಂಬ ಗುರುತಿನಿಂದ ಯುಕ್ತನಾಗಿಯೂ ನಾಲ್ಕು ಕೈಗಳಿಂದ ಶಂಖ, ಚಕ್ರ ಮುಂತಾದ ಆಯುಧಗಳನ್ನು ಧರಿಸಿದವನಾಗಿಯೂ ಇರುವ ಶ್ರೀಕೃಷ್ಣದೇವನನ್ನು ನೋಡಿದರು. ಪದ್ಮದ ಮಧ್ಯಪ್ರದೇಶದಂತೆ ಎಳೆಕೆಂಪಾಗಿರುವ ಕಣ್ಣುಗಳಿಂದ ತಮ್ಮನ್ನು ನೋಡುತ್ತಿರುವವನೂ ಮೊಸಳೆಯ ಆಕಾರವುಳ್ಳ ಕರ್ಣಕುಂಡಲಗಳಿಂದ ಕೆನ್ನೆಯು ಹೊಳೆಯುತ್ತಿರುವಂತೆ ತಮ್ಮನ್ನು ನೋಡಿದನು. ಕಿರೀಟ ಮುತ್ತಿನ ಹಾರಗಳು, ಬಳೆಗಳು, ಉಡುದಾರ ಮುಂತಾದ ಆಭರಣಗಳಿಂದಲೂ ಕುತ್ತಿಗೆಯಲ್ಲಿ ವೈಜಯಂತಿ ಎಂಬ ಮಣಿಯಿಂದಲೂ ವನಮಾಲೆಯಿಂದಲೂ ಶೋಭಿತನಾಗಿ ಇವರನ್ನು ನೋಡಿದನು.

ಶ್ರೀಕೃಷ್ಣದೇವನನ್ನು ನೋಡಿದ ಕೂಡಲೇ ಸರ್ವೇಂದ್ರಿಯಗಳಿಂದಲೂ ತುಂಬಾ ಆಸೆಯಿಂದ ಶ್ರೀಕೃಷ್ಣದೇವನನ್ನು ನೋಡಿದರು. ಆಗ ಕಣ್ಣುಗಳು ಎವೆ ಇಕ್ಕದೆ ಶ್ರೀಕೃಷ್ಣದೇವನನ್ನು ಕುಡಿಯುತ್ತಿರುವಂತೆ ಕಾಣಿಸಿತು. ನಾಲಿಗೆಯಿಂದ ನೆಕ್ಕುತ್ತಿರುವಂತೆ ತೋರಿತು. ಮೂಗುಗಳಿಂದ ಮಹಾ ಪ್ರಭುವನ್ನು ಮೂಸುತ್ತಿರುವಂತೆ ತಿಳಿಯಿತು. ಎರಡು ಕೈಗಳಿಂದ ತಬ್ಬಿಕೊಳ್ಳುವಂತೆ ಶ್ರೀಕೃಷ್ಣದೇವನನ್ನು ನಮಸ್ಕರಿಸಿದರು. ಶ್ರೀಕೃಷ್ಣದೇವನ ದರ್ಶನದಿಂದ ಜೈಲಿನಲ್ಲಿದ್ದದ್ದರಿಂದ ಏರ್ಪಟ್ಟ ಎಲ್ಲಾ ಆಯಾಸಗಳೂ ದೂರವಾದವು. ಎರಡು ಕೈಗಳನ್ನು ಜೋಡಿಸಿದವರಾಗಿ ಸರ್ವೇಂದ್ರಿಯ ಪ್ರೇರಕನಾದ ಶ್ರೀಕೃಷ್ಣದೇವನನ್ನು ಸ್ತುತಿಸಿದರು.

ಓ ದೇವದೇವೇಶನೇ, ಶರಣಾಗತರ ಆಪತ್ತುಗಳನ್ನೆಲ್ಲಾ ಪರಿಹರಿಸುವ ದೇವದೇವನೇ, ನಾವೆಲ್ಲರೂ ನಿನ್ನನ್ನು ಶರಣು ಹೊಂದಿರುವೆವು. ಘೋರವಾದ ಸಂಸಾರದಲ್ಲಿ ಬಿದ್ದು ಒದ್ದಾಡುತ್ತಿರುವ ನಮ್ಮೆಲ್ಲರನ್ನೂ ರಕ್ಷಿಸು. ಜರಾಸಂಧನು

ನಮ್ಮೆಲ್ಲರ ರಾಜ್ಯಗಳನ್ನು ಕಿತ್ತುಕೊಂಡನು. ಇದರಿಂದ ನಮಗೆಲ್ಲರಿಗೂ ಅನುಗ್ರಹವನ್ನು ಮಾಡಿದನು. ರಾಜ್ಯದ ಸಂಪತ್ತು ಮುಂತಾದವುಗಳಿಂದ ಮದವು ಬಂದರೆ "ಈ ಸಂಪತ್ತುಗಳೆಲ್ಲವೂ ಶಾಶ್ವತ" ಎಂಬ ಮೋಹವು ಬರುತ್ತದೆ. ಈ ಮೋಹದಿಂದ ಮೃಗತೃಷ್ಣೆಯನ್ನು ಜಲಾಶಯವೆಂದು ತಿಳಿಯುವರು. ಹಿಂದೆ ನಾವೆಲ್ಲರೂ ಸಂಪತ್ತಿನ ಮದದಿಂದ ಯುಕ್ತರಾಗಿದ್ದೆವು. ಈ ಭೂಮಿಯನ್ನು ಜಯಿಸಬೇಕೆಂದು ಅನ್ಯೋನ್ಯವಾಗಿ ಸ್ಪರ್ಧೆಯಿಂದ ನಿರ್ದಯರಾಗಿ ಒಬ್ಬರು ಇನ್ನೊಬ್ಬರನ್ನು ಕೊಲ್ಲಬೇಕೆಂದು ಪ್ರಯತ್ನಿಸಿದೆವು. ನೀನು ಸರ್ವರಿಗೂ ಮೃತ್ಯುವಾಗಿ ಸಂಚರಿಸುತ್ತಿರುವಿ. ನಿನ್ನನ್ನು ಲಕ್ಷ್ಯಮಾಡದೆ ನಾವೇ ಮೃತ್ಯುವಿನಂತೆ ಭಾವಿಸಿ ತಿರುಗುತ್ತಿದ್ದೆವು. ದುರ್ಮದದಿಂದ ಯುಕ್ತರಾಗಿರುವ ನಮ್ಮನ್ನು ನಿಗ್ರಹಿಸುತ್ತಿರುವ ಅತಿ ವೇಗದಿಂದ ಸಂಚರಿಸುತ್ತಿರುವ ನಿನ್ನ ಆಯುಧಗಳಿಂದ ನಮ್ಮೆಲ್ಲರ ಅಹಂಕಾರಗಳೂ ಅಡಗಿದವು. ಆದ್ದರಿಂದ ಮೃಗತೃಷ್ಣೆಯಂತಿರುವ ರಾಜ್ಯವು ನಮಗೆ ಬೇಡ. ಈ ದೇಹವು ಎಲ್ಲಾ ರೋಗಗಳಿಗೂ ಆಶ್ರಯವಾಗಿದೆ. ಈ ದೇಹದಿಂದ ರಾಜ್ಯ ಸುಖವನ್ನು ಅನುಭವಿಸುವುದು ಅಶಕ್ಯವಾಗಿದೆ. ಕಿವಿಗಳಿಗೆ ಇಂಪಾಗಿರುವ ರಾಜ್ಯವು ನಮಗೆ ಬೇಡ. ನಿನ್ನ ಪಾದಗಳು ಮರೆಯದಂತಿರುವುದಕ್ಕೆ ಉಪಾಯವನ್ನು ತಿಳಿಸು. ಪ್ರಣತಕ್ಲೇಶನಾಶಕನಾಗಿರುವ ಗೋವಿಂದನೇ, ನಮ್ಮನ್ನು ಅನುಗ್ರಹಿಸು'' ಎಂದು ಪ್ರಾರ್ಥಿಸಿದರು.

"ಎಲೈ ರಾಜರುಗಳೇ, ಇವತ್ತಿನಿಂದ ಆರಂಭಿಸಿ ನಿಮಗೆಲ್ಲರಿಗೂ ನನ್ನಲ್ಲಿ ಅತಿ ದೃಢವಾದ ಭಕ್ತಿಯು ಏರ್ಪಡುತ್ತದೆ. ನಿಮ್ಮ ಆಸೆಯೆಲ್ಲವೂ ಪೂರ್ಣವಾಗುತ್ತವೆ. ರಾಜ್ಯಮದವು ಸಕಲ ಅನರ್ಥಗಳಿಗೂ ಮೂಲಕಾರಣವೆಂದು ನೀವು ಸತ್ಯವಾಗಿ ಹೇಳಿದಿರಿ. ಕಾರ್ತವೀರ್ಯಾರ್ಜುನ, ನಹುಷ, ವೇನ, ರಾವಣ, ನರಕಾಸುರ ಮುಂತಾದವರು ಸಂಪತ್ತಿನ ಮದದಿಂದ ಅನರ್ಥಗಳಿಗೆ ಗುರಿಯಾದರು. ನೀವು ಈ ದೇಹಗಳೇ ಮುಂತಾದವುಗಳು ನಶ್ವರವೆಂದು ತಿಳಿದಿರಿ. ಇನ್ನು ಮುಂದೆ ನಾನಾ ಪ್ರಜೆಗಳನ್ನು ರಕ್ಷಿಸುತ್ತಾ ಸುಖ, ದುಃಖ ಮುಂತಾದವುಗಳು ಬಂದವುಗಳನ್ನೆಲ್ಲವನ್ನೂ ನನ್ನಲ್ಲಿ ಸಮರ್ಪಿಸಿರಿ. ದೇಹ ಮುಂತಾದವುಗಳಲ್ಲಿ ಉದಾಸೀನರಾಗಿ ನನ್ನ ಪ್ರೀತಿಗಾಗಿ ನಾನಾ ವಿಧವಾದ ವ್ರತಗಳನ್ನು ಮಾಡುತ್ತಾ ನನ್ನಲ್ಲಿ ಮನಸ್ಸನ್ನು ನಿಲ್ಲಿಸಿರಿ. ಹೀಗೆ ಮಾಡಿದರೆ ನನ್ನ ಸನ್ನಿಧಾನವನ್ನು ಹೊಂದುವಿರಿ'' ಎಂದು ಶ್ರೀಕೃಷ್ಣದೇವನು ಹೇಳಿದನು.

ಶ್ರೀಕೃಷ್ಣದೇವನು ರಾಜರುಗಳನ್ನು ನೋಡಿ ಮೇಲ್ಕಂಡ ಮಾತುಗಳನ್ನು ಹೇಳಿದನು. ಆ ರಾಜರುಗಳಿಗೆಲ್ಲಾ ಸ್ನಾನವನ್ನು ಮಾಡಿಸುವಂತೆ ಸ್ತ್ರೀಯರುಗಳಿಗೆಲ್ಲಾ ಆಜ್ಞಾಪಿಸಿದನು. ರಾಜರುಗಳನ್ನು ಯೋಗ್ಯವಾದ ವಸ್ತ್ರಗಳಿಂದಲೂ ಆಭರಣಗಳಿಂದಲೂ ಗಂಧಗಳಿಂದಲೂ ಮಾಲೆಗಳಿಂದಲೂ ಪೂಜಿಸುವಂತೆ ಜರಾಸಂಧನ ಮಗನಾಗಿರುವ ಸಹದೇವನನ್ನು ಕರೆದು ಹೇಳಿದನು. ಸ್ನಾನವು ಮುಗಿದ ಕೂಡಲೇ ಭಕ್ಷ್ಯಭೋಜ್ಯಗಳಿಂದ ಉತ್ತಮವಾದ ಭೋಜನವನ್ನು ಮಾಡಿಸಿದನು. ರಥಗಳಲ್ಲಿ ಒಳ್ಳೆಯ ಕುದುರೆಗಳನ್ನು ಕಟ್ಟಿಸಿ ಆ ರಥಗಳಲ್ಲಿ ಕೂಡಿಸಿ ಅವರವರ ಊರುಗಳಿಗೆ ಕಳುಹಿಸಿದನು. ಹೀಗೆ ಮಹಾಕ್ಲೇಶಗಳಿಂದ ರಾಜರೆಲ್ಲರೂ ಶ್ರೀಕೃಷ್ಣದೇವನಿಂದ ಬಿಡಿಸಲ್ಪಟ್ಟರು. ಜಗತ್ಪತಿಯಾದ ಶ್ರೀಕೃಷ್ಣದೇವನಿಂದ ಕಳುಹಿಸಲ್ಪಟ್ಟರು. ತಮ್ಮ ತಮ್ಮ ಊರುಗಳಿಗೆ ಹೋಗಿ ಸೇರಿದರು. ॥೨೩॥

पुत्रं राज्येऽस्य कृत्वा हृतशिरसमथो चेदिराजं विधाय
प्रोद्यन्तं राजसूयं यमसुतविहितं संस्थितं यो विधाय ।
शक्रप्रस्थात्प्रयातो निजनगरमसौ साल्वभग्नं समीक्ष्य
क्रुद्धो घ्नन्व्योमगं तं शिववरवलिनं यान्पुरं पातु नित्यम् ॥ २४॥

**ಪುತ್ರಂ ರಾಜ್ಯೇಽಸ್ಯ ಕೃತ್ವಾ ಹೃತಶಿರಸಮಥೋ ಚೇದಿರಾಜಂ ವಿಧಾಯ**
**ಪ್ರೋದ್ಯಂತಂ ರಾಜಸೂಯಂ ಯಮಸುತವಿಹಿತಂ ಸಂಸ್ಥಿತಂ ಯೋ ವಿಧಾಯ ।**
**ಶಕ್ರಪ್ರಸ್ಥಾತ್ಪ್ರಯಾತೋ ನಿಜನಗರಮಸೌ ಸಾಲ್ವಭಗ್ನಂ ಸಮೀಕ್ಷ್ಯ**
**ಕ್ರುದ್ಧೋ ಘ್ನನ್ನಬ್ಧಿಗಂ ತಂ ಶಿವವರಬಲಿನಂ ಯಾನ್ಪುರಂ ಪಾತು ನಿತ್ಯಮ್ ॥ ೨೪ ॥**

**ಪದಚ್ಛೇದ:-** ಪುತ್ರಂ, ರಾಜ್ಯೇ, ಅಸ್ಯ, ಕೃತ್ವಾ, ಹೃತಶಿರಸಂ, ಅಥೋ, ಚೇದಿರಾಜಂ, ವಿಧಾಯ, ಪ್ರೋದ್ಯಂತಂ ರಾಜಸೂಯಂ, ಯಮಸುತವಿಹಿತಂ, ಸಂಸ್ಥಿತಂ, ಯಃ, ವಿಧಾಯಃ, ಶಕ್ರಪ್ರಸ್ಥಾತ್, ಪ್ರಯಾತಃ, ನಿಜನಗರಂ, ಅಸೌ, ಸಾಲ್ವಭಗ್ನಂ, ಸಮೀಕ್ಷ್ಯ, ಕ್ರುದ್ಧಃ, ಘ್ನನ್, ಅಬ್ಧಿಗಂ, ತಂ, ಶಿವವರಬಲಿನಂ, ಯಾನ್, ಪುರಂ, ಪಾತು, ನಿತ್ಯಂ.

ಅನ್ವಯ - ಯಃ ಅಸ್ಯ ಪುತ್ರಂ ರಾಜ್ಯೇ ಕೃತ್ವಾ, ಅಥೋ ಚೇದಿರಾಜಂ ಹೃತಶಿರಸಂ ವಿಧಾಯ, ಯಃ ಪ್ರೋದ್ಯಂತಂ ಯಮಸುತವಿಹಿತಂ ರಾಜಸೂಯಂ ಸಂಸ್ಥಿತಂ ವಿಧಾಯ, ಶಕ್ರಪ್ರಸ್ಥಾತ್ ನಿಜನಗರಂ ಪ್ರಯಾತಃ ಅಸೌ ಸಾಲ್ವಭಗ್ನಂ ನಿಜನಗರಂ ಸಮೀಕ್ಷ್ಯ, ಕ್ರುದ್ಧಃ ಅಬ್ಧಿಗಂ ಶಿವವರಬಲಿನಂ ತಂ ಘ್ನನ್, ಪುರಂ ಯಾನ್, ಅಸೌ ನಿತ್ಯಂ ಪಾತು.

ಅನ್ವಯಾರ್ಥ - ಯಃ ಯಾವ ಶ್ರೀಕೃಷ್ಣದೇವನು ಅಸ್ಯ ಈ ಜರಾಸಂಧನ ಪುತ್ರಂ ಮಗನಾದ ಸಹದೇವನನ್ನು ರಾಜ್ಯೇ ಅವನ ರಾಜ್ಯದಲ್ಲಿ ಕೃತ್ವಾ ಪಟ್ಟಾಭಿಷೇಕ ಮಾಡಿದವನಾಗಿ ಅಥೋ ಅನಂತರದಲ್ಲಿ ಚೇದಿರಾಜಂ ಚೇದಿದೇಶದ ರಾಜನಾದ, ಶಿಶುಪಾಲನನ್ನು ಹೃತಶಿರಸಂ ಕತ್ತರಿಸಲ್ಪಟ್ಟ ಶಿರಸ್ಸುಳ್ಳವನನ್ನಾಗಿ ವಿಧಾಯ ಮಾಡಿ ಯಃ ಯಾವ ಶ್ರೀಕೃಷ್ಣದೇವನು ಪ್ರೋದ್ಯಂತಂ ಆರಂಭಿಸಲ್ಪಟ್ಟ ಯಮಸುತವಿಹಿತಂ ಯಮನ ಮಗನಾಗಿರುವ ಧರ್ಮರಾಜನಿಂದ ಮಾಡಲ್ಪಟ್ಟ ರಾಜಸೂಯಂ ರಾಜಸೂಯಯಾಗವನ್ನು ಸಂಸ್ಥಿತಂ ಮುಗಿದದ್ದನ್ನಾಗಿ ವಿಧಾಯ ಮಾಡಿ ಶಕ್ರಪ್ರಸ್ಥಾತ್ ಇಂದ್ರಪ್ರಸ್ಥ ನಗರದಿಂದ ನಿಜನಗರಂ ತನ್ನ ನಗರವಾದ ದ್ವಾರಕಾಪಟ್ಟಣವನ್ನು ಕುರಿತು ಪ್ರಯಾತಃ ಬಂದವನಾಗಿ ಸಾಲ್ವಭಗ್ನಂ ಸಾಲ್ವನಿಂದ ಮುರಿಯಲ್ಪಟ್ಟ (ನಿಜನಗರಂ) ತನ್ನ ನಗರವನ್ನು ಸಮೀಕ್ಷ್ಯ ನೋಡಿ ಕ್ರುದ್ಧಃ ಕೋಪದಿಂದ ಯುಕ್ತನಾಗಿ ಅಬ್ಧಿಗಂ ಸಮುದ್ರದಲ್ಲಿ ಬಿದ್ದಿರುವ ಶಿವವರಬಲಿನಂ ರುದ್ರದೇವನ ವರದಿಂದ ಬಲಿಷ್ಠನಾದ ತಂ ಆ ಸಾಲ್ವನನ್ನು ಘ್ನನ್ ಸಂಹರಿಸುತ್ತಿರುವವನಾಗಿ ಪುರಂ ಪ್ರತಿ ದ್ವಾರಕೆಯನ್ನು ಕುರಿತು ಯಾನ್ ಹೋಗುತ್ತಿರುವ ಅಸೌ ಈ ಶ್ರೀಕೃಷ್ಣದೇವನು ನಿತ್ಯಂ ಯಾವಾಗಲೂ (ಮಾಂ) ನನ್ನನ್ನು ಪಾತು ರಕ್ಷಿಸಲಿ.

ವಿಗ್ರಹ - ಹೃತಂ ಶಿರಃ ಯಸ್ಯ ಸಃ ಹೃತಶಿರಾಃ, ತಂ ಹೃತಶಿರಸಂ ; ಚೇದೀನಾಂ ರಾಜಾ ಚೇದಿರಾಜಃ, ತಂ ಚೇದಿರಾಜಂ ; ಪ್ರೋದ್ಯತಿ ಇತಿ ; ಪ್ರೋದ್ಯನ್, ತಂ ಪ್ರೋದ್ಯಂತಂ; ಯಮಸ್ಯ ಸುತಃ ಯಮಸುತಃ ಯಮಸುತೇನ ವಿಹಿತಃ ಯಮಸುತವಿಹಿತಃ ತಂ ಯಮಸುತವಿಹಿತಂ; ನಿಜಂ ಚ ತತ್ ನಗರಂ ಚ, ನಿಜನಗರಮ್, ತತ್ ನಿಜನಗರಂ; ಸಾಲ್ವೇನ ಭಗ್ನಂ ತತ್ ಸಾಲ್ವಭಗ್ನಂ; ಹಂತಿ ಇತಿ ಘ್ನನ್; ಅಬ್ಧಿಂ ಗಚ್ಛತಿ ಇತಿ ಅಬ್ಧಿಗಮ್, ತತ್ ಅಬ್ಧಿಗಂ; ಶಿವಸ್ಯ ವರಃ ಶಿವ ವರಃ ಶಿವವರೇಣ ಬಲೀ ಶಿವವರಬಲೀ, ತಂ ಶಿವರಬಲಿನಂ ಯಾತಿ ಇತಿ ಯಾನ್:.

**(೯೯) ಅಸ್ಯ ಪುತ್ರಂ ರಾಜ್ಯೇ ಕೃತ್ವಾ ರಾಜ್ಯದ ಜರಾಸಂಧನ ಮಗನಾದ ಸಹದೇವನನ್ನು ಜರಾಸಂಧನ ಅಧಿಪತಿಯಾಗಿ ಮಾಡಿದನು.**

**ವಿಶೇಷಾರ್ಥ - ಶ್ರೀಕೃಷ್ಣಃ ಜರಾಸಂಧವಧಾನಂತರಂ ತತ್ಪುತ್ರಂ ಪತ್ರತಾಪಾಖ್ಯರುದ್ರಸ್ವರೂಪಂ**

**ಸಹದೇವನಾಮಕಂ ಸ್ವಭಕ್ತಂ ಜರಾಸಂಧರಾಜ್ಯಾಧಿಪತ್ಯೇ ಕೃತ್ವಾ, ಭೀಮಾರ್ಜುನಾಭ್ಯಾಂ ಸಹ ಇಂದ್ರಪ್ರಸ್ಥಂ ಪ್ರಾಪ್ಯ, ಧರ್ಮರಾಜೇನ ರಾಜಸೂಯನಾಮಕಯಜ್ಞಂ ಕಾರಯನ್.**

**ವಿಶೇಷಾರ್ಥವಿವರಣೆ -** ಶ್ರೀಕೃಷ್ಣದೇವನು ಶ್ರೀಭೀಮಸೇನದೇವರ ಮೂಲಕವಾಗಿ ಜರಾಸಂಧನನ್ನು ಕೊಲ್ಲಿಸಿದನು. ಜರಾಸಂಧನ ಮಗನಾಗಿ ಸಹದೇವ ಎಂಬ ಹೆಸರಿನಿಂದ ಹುಟ್ಟಿರುವ ಪತ್ರತಾಪ ಎಂಬ ರುದ್ರನಲ್ಲಿರುವ ಭಕ್ತಿಯಿಂದ ಪ್ರಸನ್ನನಾಗಿ ಸಹದೇವನಿಗೆ ಜರಾಸಂಧನ ರಾಜ್ಯಾಧಿಪತ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಿದನು. ಜರಾಸಂಧನು ಶ್ರೀಕೃಷ್ಣದೇವನಲ್ಲಿ ದ್ವೇಷವನ್ನು ಮಾಡಿದ್ದಕ್ಕೆ ಫಲವಾಗಿ ಕ್ರಮವಾಗಿ ನಿತ್ಯನರಕವಾಗಿರುವ ತಪಸ್ಸನ್ನು ಪ್ರವೇಶಿಸಿದನು. ಶ್ರೀಕೃಷ್ಣದೇವನು ಅರ್ಜುನನಿಂದಲೂ ಶ್ರೀಭೀಮಸೇನದೇವರಿಂದಲೂ ಸಹಿತನಾಗಿ ತನ್ನ ರಥದಲ್ಲಿ ಕುಳಿತವನಾಗಿ ಧರ್ಮರಾಜನಲ್ಲಿಗೆ ಬಂದನು. ಮೊದಲೇ ಈ ಮೂವರ ಕೈಗಳಲ್ಲಿರುವ ಶಂಖಗಳ ಧ್ವನಿಗಳಿಂದ ಜರಾಸಂಧನನ್ನು ಸಂಹರಿಸಿರುವುದಾಗಿ ತಿಳಿದಿರುವನು. ಶ್ರೀಕೃಷ್ಣದೇವನು ತನ್ನ ಪ್ರತಿಜ್ಞೆಯಂತೆ ಅರ್ಜುನನನ್ನೂ ಶ್ರೀಭೀಮಸೇನದೇವರನ್ನೂ ಧರ್ಮರಾಜನ ಮುಂದೆ ನಿಲ್ಲಿಸಿದನು. ಧರ್ಮರಾಜನು ತುಂಬಾ ಸಂತುಷ್ಟನಾದನು.

ಆಗ ಶ್ರೀವೇದವ್ಯಾಸರೂಪಿಯಾದ ಶ್ರೀಹರಿಯು ರಾಜಸೂಯಯಾಗಕ್ಕೆ ಬೇಕಾಗಿರುವ ಎಲ್ಲಾ ವಸ್ತುಗಳನ್ನೂ ಸಂಗ್ರಹಿಸುವುದಕ್ಕೆ ಆಜ್ಞಾಪಿಸಿದನು. ರಾಜಸೂಯಯಾಗವನ್ನೂ ಶ್ರೇಷ್ಠವಾದ ಅಶ್ವಮೇಧಯಾಗವನ್ನೂ ಮಾಡುವಂತೆ ಆಜ್ಞಾಪಿಸಿದನು. ಈ ವಿಧವಾದ ಯಾಗವನ್ನು ಬ್ರಹ್ಮದೇವನನ್ನು ಬಿಟ್ಟು ಇತರರು ಯಾರೂ ಇಷ್ಟರವರೆಗೆ ಮಾಡಲಿಲ್ಲ. ಈ ಯಾಗವನ್ನು ಮಾಡಿದವನು ಬೇರೆ ಎಲ್ಲಾ ಗುಣಗಳಿಂದಲೂ ಬ್ರಹ್ಮದೇವನಿಗೆ ಸಮಾನನಾಗಿದ್ದರೆ ಮುಂದಿನ ಕಲ್ಪದಲ್ಲಿ ಬ್ರಹ್ಮಪದವಿಯನ್ನು ಪಡೆಯುವನು. ಶ್ರೀಭೀಮಸೇನದೇವನಲ್ಲಿರುವ ಭಕ್ತಿ ಮುಂತಾದ ಗುಣಗಳು ಬ್ರಹ್ಮದೇವನಲ್ಲಿರುವ ಭಕ್ತಿ ಮುಂತಾದ ಗುಣಗಳಿಗೆ ಸಮಾನವಾಗಿದ್ದುದರಿಂದ ಶ್ರೀಭೀಮಸೇನದೇವನೇ ಈ ಯಾಗವನ್ನು ಮಾಡುವುದಕ್ಕೆ ಅರ್ಹನು. ಬ್ರಹ್ಮದೇವರಿಗೆ ಗುರುವಾಗಿರುವ ಶ್ರೀವ್ಯಾಸದೇವನು ಈ ಯಾಗವನ್ನು ಮಾಡುವಂತೆ ಆಜ್ಞಾಪಿಸಿದನು. ಇದರಿಂದ ಈ ಯಾಗದಿಂದಬರುವ ಫಲವು ಭೀಮಸೇನದೇವರಲ್ಲಿ ಪೂರ್ಣವಾಗಿ ಬರುವುದಾಗಿ ತಿಳಿಸಿದಂತಾಯಿತು. ಯಾವ ಕರ್ಮವನ್ನು ಮಾಡುವುದಕ್ಕೆ ಯಾವನು ಅಸಾಧಾರಣವಾದ ಕಾರಣನೋ ಅವನೇ ಆ ಕರ್ಮದ ಪೂರ್ಣಫಲವನ್ನು ಅನುಭವಿಸುವನು. ಇತರರು ಅಲ್ಪ ಫಲವನ್ನು ಅನುಭವಿಸುವರು. ವಿಷ್ಣುವಿನ ವಿಷಯದಲ್ಲಿ ಈ ನಿರ್ಣಯವಿಲ್ಲ. ಶ್ರೀಹರಿಯು ಕರ್ಮಫಲಗಳಿಲ್ಲದವನಲ್ಲವೇ?

ಪಾಪಗಳನ್ನು ಮಾಡುವುದಕ್ಕೆ ದೇವತೆಗಳೆಲ್ಲರೂ ಕಾರಣರಾಗಿರುವರು. ಆದರೂ ಅವರು ಪಾಪಗಳ ಫಲವನ್ನು ಪ್ರಾಯಶಃ ಅನುಭವಿಸುವುದಿಲ್ಲ. ದುರ್ಯೋಧನನೇ ಮೊದಲಾದ ದೈತ್ಯರು ಪುಂಡರೀಕಯಾಗ ಮುಂತಾದ ಪುಣ್ಯಕರ್ಮಗಳನ್ನು ಮಾಡುತ್ತಾರೆ. ಆ ಕರ್ಮಗಳಿಂದ ಬರುವ ಪುಣ್ಯವು ದೈತ್ಯರಿಗೆ ಸೇರುವುದಿಲ್ಲ. ಆ ದೈತ್ಯರಲ್ಲಿ ಸನ್ನಿಹಿತರಾಗಿರುವ ಮುಖ್ಯಪ್ರಾಣದೇವರೇ ಪುಂಡರೀಕಯಾಗ ಮುಂತಾದ ಪುಣ್ಯಕಾರ್ಯಗಳನ್ನು ಮಾಡುವರು. ಆ ಪುಣ್ಯದ ಫಲವನ್ನೂ ದೈತ್ಯರಲ್ಲಿ ಸನ್ನಿಹಿತರಾಗಿರುವ ಮುಖ್ಯಪ್ರಾಣದೇವರೇ ಪೂರ್ಣವಾಗಿ ಅನುಭವಿಸುವರು.

ದೈತ್ಯರು ಡಾಂಭಿಕತನದಿಂದಲೂ ಸಜ್ಜನರಲ್ಲಿರುವ ಹೊಟ್ಟೆಕಿಚ್ಚಿನಿಂದಲೂ ಯುಕ್ತರಾಗಿ ಪುಣ್ಯಕಾರ್ಯಗಳನ್ನು ಮಾಡುತ್ತಿರುವುದರಿಂದ ಆ ದೈತ್ಯರಿಗೂ ಸ್ವಲ್ಪ ಫಲವು ಬರುತ್ತದೆ. ಈ ದೇವತೆಗಳಿಂದಲೂ ದೈತ್ಯರಿಂದಲೂ ಅಪಹರಿಸಲ್ಪಟ್ಟ ಭಾಗವನ್ನು ಬಿಟ್ಟು ಉಳಿದಿರುವ ಫಲವನ್ನು ಮನುಷ್ಯರು ಅನುಭವಿಸುವರು.

ಈ ರಾಜಸೂಯಯಾಗವನ್ನು ಮಾಡುವುದಕ್ಕೆ ಭೀಮನೇ ಅಸಾಧಾರಣ ಕಾರಣನೆನಿಸುವನು. ಈ ಯಾಗವನ್ನು ಮಾಡುವುದಕ್ಕೆ ಮುಂಚಿತವಾಗಿ ಜರಾಸಂಧನನ್ನು ಕೊಲ್ಲಬೇಕು. ಕರ್ಣನನ್ನು ಜಯಿಸಬೇಕು. ಕೀಚಕ ಮುಂತಾದವರನ್ನು ಜಯಿಸಬೇಕು. ಇವರೆಲ್ಲರನ್ನೂ ಜಯಿಸುವುದಕ್ಕೆ ಶ್ರೀಭೀಮಸೇನನೇ ಸಮರ್ಥ. ಆದ್ದರಿಂದ ಶ್ರೀಭೀಮಸೇನು ಈ ಯಾಗಕ್ಕೆ ಅಸಾಧಾರಣ ಹೇತು ಎಂದು ಹೇಳಿದನು. ಭೀಮಸೇನನು ಬ್ರಹ್ಮಪದವಿಯನ್ನು ಮುಂದೆ ಹೊಂದಲಿ ಎಂಬ ಉದ್ದೇಶದಿಂದ ದಿಗ್ವಿಜಯವನ್ನು ಭೀಮನೊಬ್ಬನೇ ಮಾಡಲು ಶಕ್ತನು ಎಂದು ತಿಳಿಸುವುದಕ್ಕಾಗಿ ದಿಗ್ವಿಜಯವನ್ನು ಮಾಡುವುದಕ್ಕೆ ಆಜ್ಞಾಪಿಸಿದನು. ಆಗ ಅರ್ಜುನನು "ನನ್ನಲ್ಲಿ ಗಾಂಡೀವ ಧನುಸ್ಸು ಇದೆ. ಹನುಮಂತನು ಧ್ವಜಸ್ಥಾನದಲ್ಲಿ ಇರುವನು. ಶ್ರೇಷ್ಠವಾದ ರಥವಿದೆ. ಆದ್ದರಿಂದ ನಾನೇ ದಿಗ್ವಿಜಯವನ್ನು ಮಾಡುವೆನು" ಎಂದು ಹೇಳಿದನು.

ಈ ಮಾತುಗಳನ್ನು ಶ್ರೀವೇದವ್ಯಾಸರೂಪಿಯಾದ ಶ್ರೀಹರಿಯು ಕೇಳಿದನು. "ಅರ್ಜುನಾ, ನಿನ್ನಲ್ಲಿ ರಥ, ಧ್ವಜ ಮುಂತಾದ ಎಲ್ಲಾ ಸಾಧನಗಳಲ್ಲಿಯೂ ಆಧಿಕ್ಯವು ಇದೆ. ನಿನ್ನ ವೀರ್ಯವೂ ಅಧಿಕವಾಗಿದೆ. ಆದರೂ ಕೀಚಕ ಮುಂತಾದವರೂ, ಕರ್ಣನೂ ನಿನ್ನ ವಶರಾಗಲಾರರು. ಕರ್ಣನಿಗಿಂತ ನೀನು ಅಧಿಕ ಬಲವುಳ್ಳವನಾಗಿರುವಿ. ಆದರೂ ಕರ್ಣನಿಗೆ ನಿನ್ನಲ್ಲಿ ಅತ್ಯಂತ ಸ್ಪರ್ಧೆಯು ಇರುತ್ತದೆ. ಆದ್ದರಿಂದ ಅವನು ನಿನಗೆ ಕಪ್ಪವನ್ನು ಕೊಡಲಾರನು. ಆ ಕರ್ಣನು ಹುಟ್ಟುವಾಗ ಅವನ ದೇಹದಲ್ಲಿ ಕವಚವೂ ಕಿವಿಗಳಲ್ಲಿ ಕರ್ಣಕುಂಡಲಗಳೂ ಇದ್ದವು. ಅವೆರಡೂ ಇರುವ ವರೆಗೆ ಕರ್ಣನನ್ನು ಕೊಲ್ಲಲು ಯಾರಿಂದಲೂ ಸಾಧ್ಯವಿಲ್ಲ. ಆದ್ದರಿಂದ ಶ್ರೀಭೀಮಸೇನನು ಪೂರ್ವದಿಕ್ಕನ್ನು ಕುರಿತು ದಿಗ್ವಿಜಯಕ್ಕೆ ಹೊರಡಲಿ. ಭೀಮಸೇನನನ್ನು ನೋಡಿದ ಕೂಡಲೇ ಕರ್ಣನು ತನ್ನನ್ನು ಈ ಭೀಮಸೇನನು ಬದುಕಿರುವಾಗಲೇ ಸೆರೆಯಲ್ಲಿಡಬಹುದು ಎಂದು ಹೆದರಿದವನಾಗಿ ಭೀಮಸೇನನಿಗೆ ಕಪ್ಪವನ್ನು ಕೊಡುವನು. ಹಿಂದೆ ಭೀಮಸೇನನಿಂದ ಪರಾಜಿತನಾಗಿರುವನು. ಈ ವಿಷಯದಲ್ಲಿ ಸಂದೇಹವಿಲ್ಲ. ಕೀಚಕನೂ ಪೌಂಡ್ರಕವಾಸುದೇವನೂ ರುದ್ರನ ವರದಿಂದ ಯಾರಿಂದಲೂ ಪರಾಜಯವಿಲ್ಲದವರಾಗಿದ್ದಾರೆ. ಆದರೂ ಭೀಮನ ವಶರಾಗುವರು. ಶಿಶುಪಾಲನು ರುದ್ರನ ವರದಿಂದ ಅವಧ್ಯನಾಗಿದ್ದರೂ ಭೀಮನ ವಶನಾಗುವನು. ಇವರೆಲ್ಲರಿಗೂ ಜರಾಸಂಧನನ್ನು ಸಂಹರಿಸಿರುವುದರಿಂದ ಬದುಕಿರುವಾಗಲೇ ಭೀಮಸೇನನು ತಮ್ಮನ್ನು ಸೆರೆಹಿಡಿಯುವನೆಂಬ ಭಯವು ಇದ್ದೇ ಇರುತ್ತದೆ. ಯುದ್ಧದಲ್ಲಿ ಸೋತರೂ ಅಥವಾ ಯುದ್ಧಕ್ಕಿಂತ ಪೂರ್ವದಲ್ಲಿಯೇ ಕಪ್ಪವನ್ನು ಕೊಡುವರು. ಎಲೋ ಅರ್ಜುನ, ನೀನು ಉತ್ತರದಿಕ್ಕಿಗೆ ಹೋಗು. ಎಲ್ಲಾ ದಿಕ್ಕುಗಳಲ್ಲಿಯೂ ದ್ವೀಪಗಳಲ್ಲಿಯೂ ಸಮುದ್ರಗಳಲ್ಲಿಯೂ ಇರುವ ಸರ್ಪಗಳನ್ನೂ ದೈತ್ಯರನ್ನೂ ಜಯಿಸಿ ಹಿಂದಿರುಗಿ ಬೇಗನೆ ಬಾ" ಎಂದು ಶ್ರೀವೇದವ್ಯಾಸರು ಹೇಳಿದರು.

"ಅರ್ಜುನನು ಎಲ್ಲಾ ದ್ವೀಪಗಳಿಗೂ ಸಮುದ್ರಗಳಿಗೂ ದಿಗ್ವಿಜಯಕ್ಕಾಗಿ ಹೊರಡಲಿ" ಎಂದು ಶ್ರೀವೇದವ್ಯಾಸರು ಹೇಳಿದರು. ಅನೇಕ ಲಕ್ಷ ಯೋಜನ ವಿಸ್ತೀರ್ಣವಾದ ಸಮುದ್ರಗಳನ್ನು ದಾಟುವುದು ಅರ್ಜುನನಿಗೆ

ಅಶಕ್ಯವಲ್ಲ ಎಂಬ ವಿಷಯವನ್ನು ಶ್ರೀವೇದವ್ಯಾಸರು ಹೇಳುತ್ತಿದ್ದಾರೆ. "ಎಲೋ ಅರ್ಜುನನೇ, ನಿನ್ನ ರಥವು ದಿವ್ಯವಾಗಿದೆ. ಆಕಾಶಮಾರ್ಗದಲ್ಲಿ ಸಂಚರಿಸುತ್ತದೆ. ನಿನ್ನಲ್ಲಿ "ಗಾಂಡೀವ" ಎಂಬ ದಿವ್ಯವಾದ ಧನುಸ್ಸು ಇದೆ. ದಿವ್ಯವಾದ ಅಸ್ತ್ರಗಳಿವೆ. ಈಗ ಹೇಳಿರುವ ಕೀಚಕ ಮುಂತಾದವರುಗಳಿಗಿಂತ ಬೇರೆಯಾಗಿರುವ ಬಾಣಾಸುರ ಮುಂತಾದ ದೈತ್ಯರುಗಳಿರುವರು. ಅವರೆಲ್ಲರೂ ಶಿವನ ವರದಿಂದ ಇತರರಿಂದ ಜಯಿಸಲು ಅಶಕ್ಯರಾದವರು. ಅವರೆಲ್ಲರನ್ನೂ ಜಯಿಸಲು ಶ್ರೀಭೀಮಸೇನನು ಹೋಗಲಿ"

ನನ್ನ ಆಜ್ಞೆಯಿಂದ ಸಕಲ ದೇವತೆಗಳೂ ಶ್ರೀಭೀಮಸೇನನಿಗೆ ಕಾಣಿಕೆಯನ್ನು ಕೊಡುವರು. ಪಶ್ಚಿಮದಿಕ್ಕಿಗೂ ದಕ್ಷಿಣದಿಕ್ಕಿಗೂ ನಕುಲ ಮತ್ತು ಸಹದೇವರು ಯಜ್ಞಕ್ಕಾಗಿ ದಿಗ್ವಿಜಯಕ್ಕಾಗಿ ಹೋಗಲಿ. ಈ ರಾಜಸೂಯಯಾಗಕ್ಕಾಗಿ ದಿಗ್ವಿಜಯವನ್ನು ಮಾಡಿದ್ದರಿಂದ ಅವರಿಬ್ಬರಿಗೂ ಕೀರ್ತಿಯೂ ಪುಣ್ಯವೂ ಬರಲಿ ಎಂಬ ಉದ್ದೇಶ್ಯದಿಂದ ಸತ್ಯವತೀ ಸೂನುಗಳಾದ ಶ್ರೀವೇದವ್ಯಾಸರು ಹೀಗೆ ಆಜ್ಞಾಪಿಸಿದರು. ಭೀಮ, ಅರ್ಜುನ, ನಕುಲ, ಸಹದೇವ ಎಂಬ ನಾಲ್ವರು ಶ್ರೀವೇದವ್ಯಾಸರನ್ನು ನಮಸ್ಕರಿಸಿದರು. ವೇದವ್ಯಾಸರಿಂದ ತಮ್ಮ ತಮಗೆ ಆಜ್ಞಪ್ತವಾದ ಬೇರೆ ಬೇರೆ ದಿಕ್ಕುಗಳಿಗೆ ಹೊರಟರು. ಶ್ರೀಭೀಮಸೇನದೇವರು ಪೂರ್ವದಿಕ್ಕಿನಲ್ಲಿರುವ ರಾಜರುಗಳನ್ನು ಜಯಿಸಿದರು. ವಿರಾಟನಗರಕ್ಕೆ ಬಂದರು. ಅಲ್ಲಿ ಕೀಚಕನು ಯುದ್ಧಕ್ಕೆ ಬಂದನು. ಅವನು ಸೋತ ಕೂಡಲೇ ಕಾಣಿಕೆಯನ್ನು ವಿರಾಟನು ಕೊಟ್ಟನು.

ಅಲ್ಲಿಂದ ಮುಂದೆ ಹೊರಟು ಚೇದಿದೇಶಕ್ಕೆ ಬಂದರು. ತಾಯಿಯ ಮಾತಿನಿಂದಲೂ ಭೀಮಸೇನದೇವರ ಹೆದರಿಕೆಯಿಂದಲೂ ಶಿಶುಪಾಲನು ಭೀಮಸೇನದೇವರನ್ನು ಪೂಜಿಸಿದನು. ಚಿಕ್ಕಮ್ಮನ ಮನೆಯಲ್ಲಿ ಕೆಲವು ದಿನಗಳ ವರೆಗೆ ಪೂಜಿಸಲ್ಪಟ್ಟವರಾಗಿ ಸುಖವಾಗಿ ವಾಸಿಸಿದರು. ದೊಡ್ಡ ಕಾಣಿಕೆಯನ್ನು ಸ್ವೀಕರಿಸಿ ಅಲ್ಲಿಂದ ಪೂರ್ವದಿಕ್ಕಿಗೆ ಹೋದರು. ಪೂರ್ವದಿಕ್ಕಿನಲ್ಲಿರುವ ಸರ್ವರನ್ನೂ ಜಯಿಸಿದರು. ಮಹಾಬಲಿಷ್ಠನಾದ ಪೌಂಡ್ರಕವಾಸುದೇವನ ರಥವನ್ನು ನಾಶಮಾಡಿದರು. ಕರ್ಣನ ರಥವನ್ನೂ ನಾಶ ಮಾಡಿ ಅವನಿಂದ ಕಾಣಿಕೆಯನ್ನು ಸ್ವೀಕರಿಸಿದರು.

ಹಿಮವತ್ಪರ್ವತದ ಶಿಖರದಲ್ಲಿ ಇಂದ್ರ ಮುಂತಾದ ದೇವತೆಗಳನ್ನು ಜಯಿಸಿದರು. ಆಟಕ್ಕಾಗಿ ಯುದ್ಧವನ್ನು ಮಾಡುತ್ತಿರುವ ಆ ದೇವತೆಗಳಿಂದ ರತ್ನಗಳ ರಾಶಿಗಳನ್ನು ಕಾಣಿಕೆಯಾಗಿ ಸ್ವೀಕರಿಸಿದರು. ಶೇಷದೇವನ ಜೊತೆಯಲ್ಲಿ ಬಾಹುಯುದ್ಧವನ್ನು ಮಾಡಿದರು. ಮಹಾಬಲಿಷ್ಠನಾದ ಗರುಡದೇವನ ಜೊತೆಯಲ್ಲಿ ಆಟವಾಡುತ್ತಾ ಯುದ್ಧವನ್ನು ಮಾಡುತ್ತಾ ಗರುಡನಿಂದ ಸಂತೋಷದಿಂದ ಕೊಡಲ್ಪಟ್ಟ ಆಭರಣಗಳನ್ನು ಸ್ವೀಕರಿಸಿದರು. ಅವರಿಬ್ಬರಿಂದಲೂ ಸ್ನೇಹಪರವಶವಾದ ಮನಸ್ಸಿನಿಂದ ಆಲಿಂಗಿಸಲ್ಪಟ್ಟರು.

ಅಲ್ಲಿಂದ ಹೊರಟು ಸಮುದ್ರದಲ್ಲಿ ಈಸುತ್ತಾ ಬಾಣಾಸುರನ ಪಟ್ಟಣಕ್ಕೆ ಹೋದರು. ಅಲ್ಲಿದ್ದ ರುದ್ರನು ಆನೆಯ ರೂಪದಿಂದ ಶ್ರೀಭೀಮಸೇನದೇವರೊಡನೆ ಆಟಕ್ಕಾಗಿ ಯುದ್ಧವನ್ನು ಮಾಡಿ ತುಂಬಾ ಸಂತುಷ್ಟನಾದನು. ದಿಗ್ವಿಜಯದಲ್ಲಿ ಯಾರು ಯಾರ ಜೊತೆಯಲ್ಲಿ ಯುದ್ಧವನ್ನು ಮಾಡಿದಿರಿ ಎಂದು ಕೇಳಿದನು. ಗರುಡದೇವರು, ಶೇಷದೇವರು ಮುಂತಾದವರು ಸಿಂಹ, ಹುಲಿ ಮುಂತಾದ ರೂಪಗಳಿಂದ ಬಂದಿರುವುದಾಗಿಯೂ ಅವರೆಲ್ಲರನ್ನೂ ತಾನು ಜಯಿಸಿರುವುದಾಗಿಯೂ ಹೇಳಿದರು. ರುದ್ರದೇವನು ಈ ಎಲ್ಲಾ ವೃತ್ತಾಂತವನ್ನೂ ಕೇಳಿ ತಿಳಿದನು. ಶ್ರೀಕೃಷ್ಣದೇವನೇ ಪ್ರತ್ಯಕ್ಷವಾಗಿ ನಿಂತು ಈ ರಾಜಸೂಯಯಾಗವನ್ನು ನಡೆಯಿಸುತ್ತಾನೆ ಎಂದು ತಿಳಿದನು. ಬಲಿಯ ಮಗನಾಗಿರುವ ಬಾಣಾಸುರನಿಂದ

ರತ್ನಗಳ ರಾಶಿಯನ್ನು ಕೊಡಿಸಿದನು. ಆ ರತ್ನಗಳ ರಾಶಿಯನ್ನು ತೆಗೆದುಕೊಂಡು ಇಂದ್ರಪ್ರಸ್ಥನಗರಕ್ಕೆ ಹಿಂದಿರುಗಿದನು.

ಶ್ರೀವೇದವ್ಯಾಸರೂಪಿಯಾಗಿ ಬ್ರಾಹ್ಮಣರೂಪದಿಂದಲೂ ಶ್ರೀಕೃಷ್ಣರೂಪಿಯಾಗಿ ಯಾದವರೂಪದಿಂದಲೂ ಪ್ರತ್ಯಕ್ಷವಾಗಿರುವ ಶ್ರೀಹರಿಯ ಮುಂದೆ ದಿಗ್ವಿಜಯದಿಂದ ತಂದಿರುವ ಸಕಲ ವಸ್ತುಗಳನ್ನೂ ಸಮರ್ಪಿಸಿದರು. ಕೀಚಕ ಮುಂತಾದವರನ್ನೂ ಏಕಲವ್ಯನಿಂದ ಸಹಿತನಾಗಿರುವ ಮಹಾಬಲಿಷ್ಠನಾಗಿರುವ ಪೌಂಡ್ರಕವಾಸುದೇವನನ್ನೂ, ಸಿಂಹಾದಿರೂಪಗಳಿಂದ ಯುಕ್ತರಾಗಿರುವ ಶೇಷದೇವರು, ಗರುಡದೇವರು ಇಂದ್ರ ಮುಂತಾದ ದೇವತೆಗಳನ್ನೂ, ಆನೆಯ ರೂಪದಿಂದ ಯುಕ್ತನಾಗಿರುವ ರುದ್ರನನ್ನೂ ಜಯಿಸಿದ ವೃತ್ತಾಂತಗಳನ್ನೆಲ್ಲಾ ಹೇಳಿದರು.

ಆಗ ಶ್ರೀವೇದವ್ಯಾಸರೂಪಿಯಾದ ಶ್ರೀಹರಿಯಿಂದಲೂ ಶ್ರೀಕೃಷ್ಣರೂಪಿಯಾದ ಶ್ರೀಹರಿಯಿಂದಲೂ ಧರ್ಮರಾಜನಿಂದಲೂ ವಿಶೇಷವಾಗಿ ಗೌರವಿಸಲ್ಪಟ್ಟರು.

ಅನಂತರದಲ್ಲಿ ಶ್ರೀವೇದವ್ಯಾಸದೇವರ ಆಜ್ಞೆಯಿಂದ ಯಜ್ಞಕ್ಕೆ ಅಂಗಗಳನ್ನು ಸಂಗ್ರಹಿಸಿದರು. ಶ್ರೀವೇದವ್ಯಾಸರು ಆಗ ಹೇಳಿದರು. ಮೊದಲು ಬ್ರಹ್ಮನು ಸರ್ವರನ್ನೂ ಜಯಿಸಿ ಈ ರಾಜಸೂಯಯಾಗವನ್ನು ಮಾಡಿದನು. ಅನಂತರದಲ್ಲಿ ನೀನು ಸರ್ವರನ್ನೂ ಜಯಿಸಿ ಈ ಯಾಗವನ್ನು ಮಾಡಿರುವಿ ಎಂದು ಹೇಳುತ್ತಾ ಶ್ರೀಭೀಮಸೇನದೇವರನ್ನು ಕುರಿತು ಹೇಳಿ ಆಲಿಂಗಿಸಿದರು. ರಾಜಸೂಯಯಾಗದ ಅಂಗಗಳನ್ನು ಮಾಡಿಸಿದರು. ಅದೇ ಸಮಯದಲ್ಲಿ ಬೇರೆ ದಿಕ್ಕುಗಳಿಗೆ ದಿಗ್ವಿಜಯಕ್ಕಾಗಿ ಹೋಗಿದ್ದ ಶ್ರೀಭೀಮಸೇನದೇವರ ತಮ್ಮಂದಿರುಗಳಲ್ಲಿ ದಕ್ಷಿಣದಿಕ್ಕಿಗೆ ಹೋಗಿದ್ದ ಸಹದೇವನು ದಿಗ್ವಿಜಯವನ್ನು ಮಾಡಿ ಹಿಂದಿರುಗಿದನು. ಆಗ ರುಕ್ಮಿಯು ಸಹದೇವನ ಜೊತೆಯಲ್ಲಿ ಯುದ್ಧವನ್ನು ಮಾಡಲಿಲ್ಲ.

ಅದಕ್ಕೆ ಕಾರಣಗಳನ್ನು ಹೇಳುವೆವು. (೧) ಶ್ರೀಕೃಷ್ಣದೇವನಿಂದ ಪರಾಜಿತನಾದ ರುಕ್ಮಿಯು ರುದ್ರದೇವನನ್ನು ಕುರಿತು ಘೋರವಾದ ತಪಸ್ಸನ್ನು ಮಾಡಿದನು. ರುದ್ರದೇವನು ಪ್ರಸನ್ನನಾದನು. ಅಚ್ಛೇದ್ಯಾಭೇದ್ಯವಾದ ಧನುಸ್ಸನ್ನು ಬೇಡಿದನು. ಧನುಸ್ಸನ್ನು ಕೊಡುವಾಗ ರುದ್ರನು ಹೇಳಿದನು. "ಈ ಧನುಸ್ಸಿನಿಂದ ನೀನು ಸರ್ವರನ್ನೂ ಜಯಿಸುವಿ. ಆದರೆ ಯಾವಾಗ ನಿನಗೆ ಶ್ರೀಕೃಷ್ಣನೊಡನೆ ವಿರೋಧವು ಏರ್ಪಡುತ್ತದೆಯೋ ಆಗ ಧನುಸ್ಸು ನಿನ್ನನ್ನು ಬಿಟ್ಟು ನನ್ನಲ್ಲಿಗೆ ಬರುತ್ತದೆ. ಅಲ್ಲಿಯವರೆಗೆ ಶ್ರೀಕೃಷ್ಣನನ್ನು ಬಿಟ್ಟು ಉಳಿದಿರುವ ಸರ್ವರನ್ನೂ ಜಯಿಸುತ್ತೀ" ಎಂದು ಹೇಳಿದನು. ಅದಕ್ಕಾಗಿ ಆ ಧನುಸ್ಸಿನ ಮೇಲಿರುವ ಮೋಹದಿಂದ ಶ್ರೀಕೃಷ್ಣನೊಡನೆ ವಿರೋಧವನ್ನು ಮಾಡಲಿಲ್ಲ. (೨) ರುಕ್ಮಿಗೆ ತಂಗಿಯಾದ ರುಕ್ಮಿಣಿಯಲ್ಲಿರುವ ಸ್ನೇಹವು ಅಧಿಕವಾಗಿತ್ತು. ತಂಗಿಯ ಗಂಡನಾಗಿರುವ ಶ್ರೀಕೃಷ್ಣದೇವನು ಈ ಯಜ್ಞವನ್ನು ಮಾಡಿಸುತ್ತಿರುವನು. ಆ ತಂಗಿಯಾದ ರುಕ್ಮಿಣಿಯಲ್ಲಿರುವ ಸ್ನೇಹದಿಂದ ಮತ್ತು ಶ್ರೀಭೀಮಸೇನದೇವರ ಮತ್ತು ಅರ್ಜುನನ ಬಲದಿಂದ ಹೆದರಿದವನಾಗಿ ಕಾಣಿಕೆಯನ್ನು ಕೊಟ್ಟನು. ಉಳಿದ ಎಲ್ಲಾ ದಕ್ಷಿಣದೇಶದ ರಾಜರುಗಳನ್ನು ಪ್ರತಾಪಶಾಲಿಯಾದ ಸಹದೇವನು ಜಯಿಸಿದನು.

ದಕ್ಷಿಣದೇಶದಲ್ಲಿ ಲಂಕಾಪಟ್ಟಣದಲ್ಲಿ ವಾಸಿಸುತ್ತಿದ್ದ ವಿಭೀಷಣನಲ್ಲಿ ಘಟೋತ್ಕಚನನ್ನು ಕಳುಹಿಸಬೇಕೆಂದು ಸಂಕಲ್ಪಿಸಿದನು. ಘಟೋತ್ಕಚನನ್ನು ಸ್ಮರಿಸಿದ ಕೂಡಲೇ ಆವನು ಬಂದನು. ಆವನನ್ನು ಲಂಕಾಪಟ್ಟಣಕ್ಕೆ ಕಳುಹಿಸಿದನು. ಶ್ರೀರಾಮಾವತಾರವು ಮುಗಿಯುವಾಗ ಶ್ರೀರಾಮದೇವನು ಮುಂದೆ ಶ್ರೀಕೃಷ್ಣಾವತಾರವನ್ನು

ಸ್ವೀಕರಿಸುವುದಾಗಿಯೂ ಆಗ ತಾನು ತನ್ನ ಭಕ್ತನಾದ ಧರ್ಮರಾಜನಿಂದ ರಾಜಸೂಯಯಾಗವನ್ನು ಮಾಡಿಸುವುದಾಗಿಯೂ ಆಗ ಆ ರಾಜಸೂಯಯಾಗಕ್ಕಾಗಿ ಕಾಣಿಕೆಯನ್ನು ಕಳುಹಿಸಿಕೊಡಬೇಕೆಂದೂ ಆಜ್ಞಾಪಿಸಿದ್ದನು. ಘಟೋತ್ಕಚನು ಶ್ರೀಕೃಷ್ಣದೇವನ ಬಲವನ್ನು, ಶ್ರೀಭೀಮಾರ್ಜುನರ ಬಲವನ್ನೂ ತಿಳಿಸಿದನು. ಅದನ್ನು ಕೇಳಿದಕೂಡಲೇ ಶ್ರೀಕೃಷ್ಣದೇವನೇ ಶ್ರೀರಾಮರೂಪಿಯಾದ ಶ್ರೀಹರಿಯೆಂದೂ ಶ್ರೀಭೀಮಸೇನದೇವರೂ ಅರ್ಜುನನೂ ದೇವತೆಗಳಲ್ಲಿ ಉತ್ತಮರ ಅವತಾರವೆಂದೂ ತೀರ್ಮಾನಿಸಿದನು. ಕೊನೆಗೆ ಕಾಣಿಕೆಯನ್ನು ಕೊಟ್ಟು ಕಳುಹಿಸಿದನು. ಅಸಂಖ್ಯಾಕವಾದ ರತ್ನಗಳನ್ನು ವಿಭೀಷಣನಿಂದ ಪಡೆದ ಘಟೋತ್ಕಚನು ಸಹದೇವನಲ್ಲಿಗೆ ಬಂದನು. ಸಹದೇವನು ಕಾಣಿಕೆಗಳನ್ನೆಲ್ಲಾ ಸ್ವೀಕರಿಸಿ ಅಲ್ಲಿಂದ ಹೊರಟು ಇಂದ್ರಪ್ರಸ್ಥನಗರಕ್ಕೆ ಹಿಂದಿರುಗಿದನು.

## ನಕುಲನ ದಿಗ್ವಿಜಯ

ನಕುಲನು ಪಶ್ಚಿಮದಿಕ್ಕಿನಲ್ಲಿರುವ ಸಕಲ ರಾಜರುಗಳನ್ನೂ ಜಯಿಸಿ ಕಾಣಿಕೆಯನ್ನು ಸ್ವೀಕರಿಸಿದನು. ಸೋದರಮಾವನಾದ ಶಲ್ಯನು ತನ್ನ ತಂಗಿಯ ಮಗನಾದ ನಕುಲನಲ್ಲಿ ಸ್ನೇಹದಿಂದ ಕಾಣಿಕೆಯನ್ನು ಸಮರ್ಪಿಸಿದನು. ನಕುಲನು ಅಸಂಖ್ಯವಾದ ರತ್ನಗಳ ರಾಶಿಗಳಿಂದ ಸಹಿತನಾಗಿ ಇಂದ್ರಪ್ರಸ್ಥನಗರಕ್ಕೆ ಹಿಂದಿರುಗಿದನು.

## ಅರ್ಜುನನ ದಿಗ್ವಿಜಯ

ದಿಗ್ವಿಜಯಕ್ಕಾಗಿ ಹೋಗಿರುವ ಅರ್ಜುನನು ಕಪಿಶ್ರೇಷ್ಠರಾಗಿರುವ ಹನುಮಂತದೇವರ ಧ್ವಜದಿಂದ ಯುಕ್ತವಾಗಿರುವ ರಥದಲ್ಲಿ ಕುಳಿತು "ಗಾಂಡೀವ" ಎಂಬ ಧನುಸ್ಸಿನಿಂಧ ಸಹಿತನಾಗಿ ಉತ್ತರದಿಕ್ಕಿಗೆ ಅಭಿಮುಖವಾಗಿ ಬಂದನು. ಆಗ ಪರ್ವತವಾಸಿಗಳಾಗಿರುವ "ತ್ರಿಗರ್ತ" ಎಂಬ ಪ್ರಬಲರಾಜನ ಸೈನಿಕರು ಅರ್ಜುನನೊಡನೆ ಯುದ್ಧಕ್ಕಾಗಿ ಬಂದರು. ಅರ್ಜುನನ ಜೊತೆಯಲ್ಲಿ ಘೋರವಾದ ಯುದ್ಧವನ್ನು ಮಾಡಿದರು. ಅವರೆಲ್ಲರನ್ನೂ ಅರ್ಜುನನು ಜಯಿಸಿದನು.

ಕ್ರಮವಾಗಿ ಎಲ್ಲರನ್ನೂ ಜಯಿಸಬೇಕೆಂದು ತೀರ್ಮಾನಿಸಿದವನಾಗಿ ಎಲ್ಲರನ್ನೂ ಜಯಿಸುತ್ತಾ ಬಂದನು. ಆಗ ನರಕಾಸುರನ ಮಗನಾದ ಭಗದತ್ತನು ತುಂಬಾ ಆಯಾಸದಿಂದ ಯುಕ್ತನಾಗಿ ಯುದ್ಧಕ್ಕೆ ಕಾರಣವನ್ನು ಕೇಳಿದನು. ಕಾಣಿಕೆಯನ್ನು ಕೊಡಬೇಕೆಂದು ಅರ್ಜುನನು ಕೇಳಿದನು. "ನಿನ್ನ ತಂದೆಯಾಗಿರುವ ದೇವೇಂದ್ರನು ನನ್ನ ಗುರು" ಎಂದು ಹೇಳುತ್ತಾ "ನನ್ನಲ್ಲಿ ವರಾಹರೂಪಿಯಾದ ಶ್ರೀಹರಿಯು ಕೊಟ್ಟಿರುವ ನಾರಾಯಣಾಸ್ತ್ರವು ಇದೆ. ಆದ್ದರಿಂದ ನನ್ನನ್ನು ಜಯಿಸಲು ನಿನ್ನಿಂದ ಸಾಧ್ಯವಿಲ್ಲ" ಎಂದು ಹೇಳುತ್ತಾ ಕಾಣಿಕೆಯನ್ನು ನೀಡಿದನು.

ಭಗದತ್ತನು ಅಲಕ್ಷ್ಯವಾಗಿ ಮಾತಾಡಿದರೂ ವ್ಯರ್ಥವಾಗಿ ಕಲಹವನ್ನು ಮಾಡಲು ಅಪೇಕ್ಷಿಸದ ಅರ್ಜುನನು ಪ್ರೀತಿಯಿಂದ ಕೊಟ್ಟಿರುವ ಕಾಣಿಕೆಯನ್ನು ಸ್ವೀಕರಿಸಿದನು. ಅರ್ಜುನನು ಕ್ರಮವಾಗಿ ಭಾರತವರ್ಷದಲ್ಲಿರುವ ಕಿಂಪುರುಷವರ್ಷ ಮುಂತಾದ ಎಂಟು ವರ್ಷಗಳನ್ನು ಜಯಿಸಿದನು. ಜಂಬೂದ್ವೀಪ ವ್ಯತಿರಿಕ್ತವಾದ ಪ್ಲಕ್ಷದ್ವೀಪ ಮುಂತಾದ ಆರು ದ್ವೀಪಗಳನ್ನೂ ಜಯಿಸಿದನು. ತನ್ನ ಶಸ್ತ್ರಗಳ ತೇಜಸ್ಸಿನಿಂದ ನಾಲ್ಕು ದಿಕ್ಕುಗಳನ್ನೂ ಜಯಿಸಿದನು.

ಭೂಮಿಯ ಕೆಳಗಿರುವ ಅತಲ, ವಿತಲ, ಸುತಲ, ಮಹಾತಲ ತಲಾತಲ, ರಸಾತಲ, ಪಾತಾಲ ಎಂಬ ಏಳು ಲೋಕಗಳಿಗೆ ಹೋದನು. ಅಲ್ಲಿರುವ ದೈತ್ಯರನ್ನೂ ದಾನವರನ್ನೂ ಜಯಿಸಿದವನಾಗಿ ಅವರಿಂದ ಕಾಣಿಕೆಯನ್ನು ಸ್ವೀಕರಿಸಿದನು. ಬಲಿಚಕ್ರವರ್ತಿಯ ಮನೆಯಲ್ಲಿ ದ್ವಾರಪಾಲಕನಾಗಿದ್ದ ವಾಮನರೂಪಿಯಾದ ಶ್ರೀಹರಿಯನ್ನು ನೋಡಿದನು. ವಾಮನನು ಬಲಿಚಕ್ರವರ್ತಿಯನ್ನು ಕರೆದು ಧರ್ಮರಾಜನು ಮಾಡುವ ರಾಜಸೂಯಯಾಗಕ್ಕೆ ಕಾಣಿಕೆಯನ್ನು ಕೊಡಬೇಕೆಂದು ಆಜ್ಞಾಪಿಸಿದನು. ಬಲಿಚಕ್ರವರ್ತಿಯೊಡನೆ ಒಳ್ಳೆಯ ಮಾತುಗಳನ್ನು ಆಡುತ್ತಾ ಕಾಣಿಕೆಯನ್ನು ಅರ್ಜುನನು ಸ್ವೀಕರಿಸಿದನು. ಅಲ್ಲಿಂದ ಹೊರಟು ವಾಸುಕಿಯು ಇದ್ದ ಸ್ಥಳಕ್ಕೆ ಬಂದನು. ವಾಸುಕಿಯನ್ನು ಜಯಿಸಿದನು. ಅಸಂಖ್ಯವಾದ ರತ್ನಗಳನ್ನು ಅವನಿಂದ ಕಾಣಿಕೆಯಾಗಿ ಪಡೆದನು. ಮಹಾವೀರನಾದ ಅರ್ಜುನನು ಭಾರತವರ್ಷದಲ್ಲಿ ದಿಗ್ವಿಜಯವನ್ನು ಮುಗಿಸಿಕೊಂಡು ಇಂದ್ರಪ್ರಸ್ಥನಗರಕ್ಕೆ ಹಿಂದಿರುಗಿದನು.

## ದಿಗ್ವಿಜಯದಿಂದ ಸಂಪಾದಿಸಿದ ದ್ರವ್ಯಗಳು

ನಕುಲನು ಹತ್ತು ಯೋಜನದಷ್ಟು ಎತ್ತರವಾಗಿಯೂ ಸಹದೇವನು ಮೂವತ್ತು ಯೋಜನದಷ್ಟು ಎತ್ತರವೂ, ಭೀಮಸೇನದೇವರು ನೂರು ಯೋಜನದಷ್ಟು ಎತ್ತರವೂ, ಅರ್ಜುನನು ನಾನೂರು ಯೋಜನದಷ್ಟು ಎತ್ತರವೂ ಆಗಿರುವ ಬಂಗಾರ ಮತ್ತು ರತ್ನಗಳ ಪರ್ವತಗಳು ಅವರವರ ದಿಗ್ವಿಜಯ ಕಾಲದಲ್ಲಿ ಸಂಪಾದಿಸಿದವುಗಳು. ಇಂದ್ರಪ್ರಸ್ಥನಗರವು ಚಿಕ್ಕದಾಗಿದ್ದರೂ ಆ ನಗರವು ವಿಶ್ವಕರ್ಮನಿಂದ ರಚಿಸಲ್ಪಟ್ಟಿರುವುದರಿಂದ ಚಿಕ್ಕಸ್ಥಳದಲ್ಲಿಯೂ ಈ ಪರ್ವತಗಳು ಅಡಗಿದವು. ಇದು ತುಂಬಾ ಆಶ್ಚರ್ಯವಾಗಿತ್ತು.

ಶ್ರೀವೇದವ್ಯಾಸರು ರಾಜಸೂಯಯಾಗವನ್ನು ಮಾಡಿಸಿದರು. ಸರ್ವವಿದ್ಯೆಗಳಲ್ಲಿಯೂ ಪಾರಂಗತರಾದ ಋತ್ವಿಕ್ಕುಗಳು ವೇದವ್ಯಾಸರು ಹೇಳಿದ ವಿಧಿಯಿಂದ ಧರ್ಮರಾಜನಿಗೆ ದೀಕ್ಷಾಕಾರ್ಯವನ್ನು ಮಾಡಿಸಿದರು. ಯಜಮಾನ ಸ್ಥಾನವನ್ನು ಜ್ಯೇಷ್ಠಸಹೋದರನಾದ ಧರ್ಮರಾಜನಿಗೆ ವಹಿಸಿದರು. ಧರ್ಮರಾಜನೊಡನೆ ಐವರೂ ಆಸನಗಳಲ್ಲಿ ಕುಳಿತರು. ಮುಂದೆ ಬ್ರಹ್ಮದೇವನ ಪತ್ನಿಯ ಸ್ಥಾನಕ್ಕೆ ಯೋಗ್ಯಳಾದ ದ್ರೌಪದಿಯು ಮಾತ್ರ ಯಜಮಾನನ ಪತ್ನಿಯ ಸ್ಥಾನದಲ್ಲಿ ಕುಳಿತರು. ಇತರ ಪತ್ನಿಯರು ಕುಳಿತುಕೊಳ್ಳಲಿಲ್ಲ.

ಜಗತ್ಕರ್ತನಾದ ಶ್ರೀವೇದವ್ಯಾಸರ ಆಜ್ಞೆಯಿಂದ ಯಜ್ಞಶಾಲೆಯಲ್ಲಿರುವ ಎಲ್ಲಾ ವಸ್ತುಗಳೂ ಸುವರ್ಣಮಯವಾಗಿಯೂ ರತ್ನಮಯವಾಗಿಯೂ ಇದ್ದವು. ಹೀಗಿರುವಾಗ ಪಾತ್ರೆಗಳೂ ಶಿಬಿರಗಳೂ ಸುವರ್ಣಮಯವಾಗಿಯೂ ರತ್ನಮಯವಾಗಿಯೂ ಇದ್ದವು ಎಂದು ಹೇಳಬೇಕಾದ್ದೇನಿದೆ.

ಹದಿನಾಲ್ಕು ಲೋಕಗಳಲ್ಲಿರುವ ಸರ್ವರನ್ನೂ ಪಾಂಡವರು ದಿಗ್ವಿಜಯ ಕಾಲದಲ್ಲಿ ಆಹ್ವಾನ ಮಾಡಿದ್ದರು. ಅವರೆಲ್ಲರೂ ಬಂದಿದ್ದರು. ಬ್ರಹ್ಮದೇವರೂ ರುದ್ರ, ಇಂದ್ರ ಮುಂತಾದವರೂ ಪತ್ನೀಸಹಿತರಾಗಿ ಬಂದಿದ್ದರು. ಭೀಷ್ಮರು, ದ್ರೋಣರು. ವಿದುರ, ಧೃತರಾಷ್ಟ್ರ, ದುರ್ಯೋಧನ ಮುಂತಾದ ಧೃತರಾಷ್ಟ್ರನ ಮಕ್ಕಳು, ಬಾಹ್ಲೀಕಮಹಾರಾಜ, ಅವನ ಮಕ್ಕಳು, ಬಲರಾಮದೇವನು ಮುಂತಾದ ಸಕಲ ಯಾದವರು, ರುಕ್ಮಿಣೀ, ಸತ್ಯಭಾಮಾ ಮುಂತಾದ ಶ್ರೀಕೃಷ್ಣ ಮುಂತಾದವರ ಪತ್ನಿಯರೂ ಬಂದಿದ್ದರು.

ಆ ಸಭೆಯಲ್ಲಿ ಸಕಲ ಪ್ರಪಂಚವೂ ಒಟ್ಟುಗೂಡಿತ್ತು. ಸಂದಿಗ್ಧವಾದ ಅನೇಕ ವಿಷಯಗಳನ್ನು ನಿರ್ಣಯಿಸುವ ಕಥೆಗಳು ನಡೆದವು. ಪೂರ್ಣಜ್ಞಾನ ಸ್ವರೂಪಿಯಾಗಿರುವ ಶ್ರೀವೇದವ್ಯಾಸರು ಪ್ರಾಶ್ನಿಕರಾಗಿದ್ದರು. ಆ ತತ್ವನಿರ್ಣಯ ಕಥೆಗಳಲ್ಲಿ "ಶ್ರೀಹರಿಯು ಅನಂತ ಗುಣಗಳಿಂದ ಪರಿಪೂರ್ಣನಾಗಿರುವನು" ಎಂಬ ನಿರ್ಣಯವು ಏರ್ಪಟ್ಟಿತು.

"ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ" ಎಂಬ ವಿಷಯದಲ್ಲಿ "ಬ್ರಹ್ಮ" ಮುಂತಾದವರು ವಾದಿಸಿದರು. ಈ ವಾದದಲ್ಲಿ ನಿರ್ಣಯವೂ ಏರ್ಪಟ್ಟಿತು. ಆದರೂ ಶ್ರೀಕೃಷ್ಣದೇವನು ಸಾಮಾನ್ಯ ಮನುಷ್ಯ ಎಂದು ಕೆಲವು ರಾಜರು ತಿಳಿದರು. ಶ್ರೀಕೃಷ್ಣದೇವನೇ ನಾರಾಯಣ ಎಂದು ಸ್ಪಷ್ಟವಾಗಿ ತಿಳಿಸುವುದಕ್ಕಾಗಿ ನಾನಾ ವ್ರತಗಳಿಂದ ಶ್ರೀಹರಿಯನ್ನು ಆರಾಧಿಸಿರುವ ಭೀಷ್ಮರನ್ನು ಕುರಿತು ಧರ್ಮರಾಜನು ಪ್ರಶ್ನೆ ಮಾಡಿದನು. ಈ ಪ್ರಶ್ನೆಯನ್ನು ಬ್ರಹ್ಮ ಮುಂತಾದ ದೇವತೆಗಳಲ್ಲಿಯೇ ಮಾಡಬಹುದಿತ್ತಲ್ಲವಾ? ಭೀಷ್ಮರಲ್ಲಿ ಮಾಡಲು ಕಾರಣವೇನು? ಎಂದು ಕೇಳಬಹುದು. ಅದಕ್ಕೆ ಈಗ ಉತ್ತರವನ್ನು ಕೊಡುವೆವು.

(೧) "ಬ್ರಹ್ಮ" ಮುಂತಾದ ದೇವತೆಗಳು ಆ ಸಭೆಯಲ್ಲಿ ಮನುಷ್ಯರಂತೆ ಕಾಣಿಸುತ್ತಿದ್ದರು. ಆದ್ದರಿಂದ "ಬ್ರಹ್ಮ" ಮುಂತಾದವರಲ್ಲಿ ನಂಬಿಕೆಯು ಯಾರಿಗೂ ಹುಟ್ಟಲಾರದು. (೨) ಸಕಲಶಾಸ್ತ್ರಪಾರಂಗತರಾಗಿರುವ ಮುನಿಗಳಲ್ಲಿ ಪ್ರಶ್ನೆ ಮಾಡಿರಬಹುದು. ಆದರೆ ಮುನಿಗಳಲ್ಲಿ ಅಧಿಕವಾದ ಅಭ್ಯಾಸವು ಮನುಷ್ಯರಿಗೆ ಇರುವುದಿಲ್ಲ. ಆದ್ದರಿಂದ ಮುನಿಗಳಲ್ಲಿಯೂ ಧರ್ಮರಾಜನು ಪ್ರಶ್ನೆ ಮಾಡಲಿಲ್ಲ. (೩) "ಭೀಷ್ಮರು ಸಕಲ ಶಾಸ್ತ್ರಗಳನ್ನೂ ತಿಳಿದವರು" ಎಂದು ಇಲ್ಲಿ ನೆರೆದಿರುವ ಎಲ್ಲಾ ರಾಜರುಗಳೂ ತಿಳಿದಿದ್ದರು. (೪) ತಮ್ಮ ಕುಲದಲ್ಲಿ ಮುದುಕರೂ ಆಗಿದ್ದರು. ಆದ್ದರಿಂದ ಅವರಲ್ಲೇ ಧರ್ಮರಾಜನು ಪ್ರಶ್ನಿಸಿದನು.

"ಓ ಪಿತಾಮಹರೇ, ಈ ಸಭೆಯಲ್ಲಿ ಮೊದಲು ಯಾರನ್ನು ಪೂಜಿಸಬೇಕು. "ಈ ಸಭೆಯಲ್ಲಿ ಬ್ರಹ್ಮ ಮುಂತಾದ ದೇವತೆಗಳೂ ರಾಜರುಗಳೂ ಇರುವರು. ಇವರಲ್ಲಿ ಯಾರು ಉತ್ತಮನೋ ಅವನೇ ಅಗ್ರಪೂಜೆಗೆ ಅರ್ಹನಾಗಿರುವನು. ನನ್ನ ಸಂಶಯವನ್ನು ಪರಿಹರಿಸಿರಿ" ಎಂದು ಧರ್ಮರಾಜನು ಪ್ರಶ್ನಿಸಿದನು. ಶ್ರೀಕೃಷ್ಣದೇವನೇ ಪೂಜ್ಯರಲ್ಲಿ ಉತ್ತಮನೆಂದು ಶ್ರೀಭೀಷ್ಮರು ಹೇಳಿದರು.

(೧) ಈ ಸಭೆಯಲ್ಲಿ ವಸಿಷ್ಠರ ಗೋತ್ರದಲ್ಲಿ ಅವತರಿಸಿರುವ ಶ್ರೀವೇದವ್ಯಾಸರೂ, ಜಮದಗ್ನಿಋಷಿಯ ಗೋತ್ರದಲ್ಲಿ ಅವತರಿಸಿರುವ ಶ್ರೀಪರಶುರಾಮದೇವರೂ ಇದ್ದರು. ಯಾದವರಲ್ಲಿ ಅವತರಿಸಿದ ಶ್ರೀಕೃಷ್ಣದೇವನೂ ಇದ್ದನು. ಶ್ರೀಕೃಷ್ಣದೇವನ ಹೆಸರನ್ನು ಹೇಳದೆ ಶ್ರೀಪರಶುರಾಮದೇವರ ಹೆಸರನ್ನೂ ಶ್ರೀವೇದವ್ಯಾಸರ ಹೆಸರನ್ನೂ ಹೇಳಿ ಅವನೇ ಉತ್ತಮನೆಂದು ಹೇಳಿದ್ದರೆ ಅವರಿಬ್ಬರೂ ಬ್ರಾಹ್ಮಣರೇ ಆಗಿರುವುದರಿಂದ ಅವರಿಬ್ಬರು ಉತ್ತಮರೆಂಬ ವಿಷಯದಲ್ಲಿ ಯಾರಿಗೂ ವಿರೋಧವು ಬರುತ್ತಿದ್ದಿಲ್ಲ. ಅವರಿಬ್ಬರೂ ಬ್ರಾಹ್ಮಣರಾಗಿರುವುದರಿಂದಲೇ ಅವರಿಬ್ಬರ ಉತ್ತಮತ್ವವು ಯುಕ್ತವಾಗಿದೆ ಎಂದು ಸರ್ವರೂ ಅಂಗೀಕರಿಸುತ್ತಿದ್ದರು. (೨) ಯುದ್ಧ ಮುಂತಾದವುಗಳಿಂದ ಶ್ರೀಕೃಷ್ಣದೇವನಲ್ಲಿ ರಾಜರುಗಳಿಗೆ ವಿರೋಧವು ಏರ್ಪಟ್ಟಂತೆ ಅವರಿಬ್ಬರಲ್ಲಿ ವಿರೋಧವು ಯಾರಿಗೂ ಏರ್ಪಟ್ಟಿಲ್ಲ. ಶ್ರೀಕೃಷ್ಣದೇವನಲ್ಲಿ ಎಲ್ಲಾ ರಾಜರುಗಳಿಗೂ ವಿರೋಧವು ಇರುವುದರಿಂದ ಶ್ರೀಕೃಷ್ಣದೇವನೇ ಅಗ್ರಪೂಜೆಗೆ ಅರ್ಹನೆಂದು ಹೇಳಿಬಿಟ್ಟರೆ ವಿವಾದವು ಏರ್ಪಡುತ್ತದೆ. ಈ ವಿವಾದದಲ್ಲಿ ಶ್ರೀಕೃಷ್ಣದೇವನ ಸರ್ವೋತ್ತಮತ್ವವು ಸ್ಪಷ್ಟವಾಗುತ್ತದೆ ಎಂಬ ಅಭಿಪ್ರಾಯದಿಂದ ಶ್ರೀಭೀಷ್ಮರು ಶ್ರೀಕೃಷ್ಣದೇವನೇ ಸರ್ವೋತ್ತಮನು ಎಂದು ಹೇಳಿದರು.

ಶ್ರೀಕೃಷ್ಣದೇವನೇ ಸರ್ವೋತ್ತಮನೆಂದೂ ಅವನಿಗೆ ಅಗ್ರಪೂಜೆಯನ್ನು ಮಾಡಬೇಕೆಂದೂ ಸಹದೇವನು ಪ್ರಸ್ತಾಪಿಸಿದನು. ಆ ಮಾತುಗಳನ್ನು ಶ್ರೀಭೀಷ್ಮರು ಅನುಮೋದಿಸಿದರು.

ಶ್ರೀಭೀಷ್ಮರು ಆಜ್ಞಾಪಿಸಿದಂತೆ ಪಾಂಡವರು ಶ್ರೀಕೃಷ್ಣದೇವನಿಗೆ ಅಗ್ರಪೂಜೆಯನ್ನು ಮಾಡಿದರು. ಶ್ರೀಕೃಷ್ಣದೇವನಿಂದ ಶ್ರೀವೇದವ್ಯಾಸರೂ ಶ್ರೀಪರಶುರಾಮದೇವರೂ ಅಭಿನ್ನರಾಗಿರುವುದರಿಂದ ಶ್ರೀಕೃಷ್ಣದೇವನನ್ನು ಪೂಜಿಸಿದ ಮೇಲೆ ಶ್ರೀವೇದವ್ಯಾಸರಿಗೂ ಶ್ರೀಪರಶುರಾಮದೇವರಿಗೂ ಅಗ್ರಪೂಜೆಯನ್ನು ಧರ್ಮರಾಜನು ಮಾಡಿದನು. ಉಳಿದ ದೇವತೆಗಳನ್ನೂ ಅವರವರ ಯೋಗ್ಯತೆಯನ್ನು ಅನುಸರಿಸಿ ಪೂಜಿಸಿದನು.

**(೧೦೦) ಅಥೋ ಚೇದಿರಾಜಂ ಹೃತಶಿರಸಂ ವಿಧಾಯ ಪ್ರೋದ್ಯಂತಂ ರಾಜಸೂಯಂ ಯಮಸುತವಿಹಿತಂ ಸಂಸ್ಥಿತಂ ಯೋ ವಿಧಾಯ ಶಕ್ರಪ್ರಸ್ಥಾತ್ ನಿಜನಗರಂ ಪ್ರಯಾತಃ.**

## ಶಿಶುಪಾಲ ವಧ

**ವಿಶೇಷಾರ್ಥ - ತದಾ ಅಗ್ರಪೂಜಾವಿಷಯೇ ಬಹುಶಃ ಸ್ವಾತ್ಮನಿಂದಕಂ ಚೇದಿದೇಶಾಧಿಪತಿಂ ಶಿಶುಪಾಲಂ ಚಕ್ರೇಣ ಛಿತ್ವಾ, ಉಪಕ್ರಾಂತಂ ಯಜ್ಞಂ ಸಮ್ಯಕ್ ಸಮಾಪ್ಯ, ತತ್ರೈವ ಪಾಂಡವಪ್ರೀತ್ಯರ್ಥಂ ಕತಿಚನ್ಮಾಸಾನುಷಿತ್ವಾ, ಪಾಂಡವೈರನುಜ್ಞಾತಃ ದ್ವಾರಕಾಂ ಪ್ರಾಪ್ಯ.**

**ವಿಶೇಷಾರ್ಥ ವಿವರಣ -** ಶ್ರೀಕೃಷ್ಣದೇವನಿಗೆ ಅಗ್ರಪೂಜೆಯನ್ನು ಮಾಡಿದ ಕೂಡಲೇ ಇದನ್ನು ನೋಡಿದ ಶಿಶುಪಾಲನು ತುಂಬಾ ಕೋಪದಿಂದ ಯುಕ್ತನಾದನು. ಶ್ರೀಕೃಷ್ಣದೇವನನ್ನು ನಿಂದಿಸಲು ಆರಂಭಿಸಿದನು. "ಕಾಲವನ್ನು ಮೀರಲು ಯಾರಿಂದಲೂ ಸಾಧ್ಯವಿಲ್ಲ" ಎಂದು ಶ್ರುತಿಯು ಇದೆ. ಇದು ಸತ್ಯ. ವಯಸ್ಸಾದ ಮುದುಕರಿಗೂ ಬುದ್ಧಿಯು ಹುಡುಗರ ಮಾತುಗಳಿಂದ ಕೆಡುತ್ತದೆ. ನೀವೆಲ್ಲರೂ ಮರ್ಯಾದೆಯನ್ನು ಕೊಡಬಾರದು. ಈ ಸಭೆಯಲ್ಲಿ ತಪಸ್ವಿಗಳೂ ವಿದ್ಯಾವಂತರೂ ವ್ರತಗಳನ್ನು ಅನುಷ್ಠಾನ ಮಾಡಿದವರೂ ಜ್ಞಾನಬಲದಿಂದ ಎಲ್ಲಾ ಪಾಪಗಳನ್ನೂ ನಾಶ ಮಾಡಿಕೊಂಡಿರುವವರೂ ಬ್ರಹ್ಮನಿಷ್ಠರಾದ ಪರಮರ್ಷಿಗಳೂ ಲೋಕಪಾಲಕರಿಂದಲೂ ಪೂಜಿತರಾಗಿರುವವರೂ ಇರುವಾಗ ಅವರೆಲ್ಲರನ್ನೂ ಬಿಟ್ಟು ಕುಲವನ್ನು ಕೆಡಿಸಿರುವ ಗೊಲ್ಲನನ್ನು ನೀವೆಲ್ಲರೂ ಅಗ್ರಪೂಜೆಗೆ ಅರ್ಹನೆಂದು ಹೇಗೆ ತೀರ್ಮಾನಿಸಿದಿರಿ? ಅಮೇಧ್ಯ ಭಕ್ಷಣವನ್ನು ಮಾಡುವುದಕ್ಕೆ ಯೋಗ್ಯವಾಗಿರುವ ಕಾಗೆಯು ಪುರೋಡಾಶವನ್ನು ಭಕ್ಷಿಸುವುದಕ್ಕೆ ಅರ್ಹವಾಗುತ್ತದೆಯೇ? ಕೃಷ್ಣನು ಯಾವ ಜಾತಿಯವನು? ಎಂದು ಹೇಳಲು ಲಾಯಕ್ಕಿಲ್ಲದವನು ಅವನೇನು? ಬ್ರಹ್ಮಚಾರಿಯಾ? ಗೃಹಸ್ಥನಾ? ವಾನಪ್ರಸ್ಥನಾ? ಯಾವ ಅರ್ಹತೆಯೂ ಇಲ್ಲದವನು. ಯಾವ ಕುಲದವನು? ಯಾವ ಕುಲವೂ ಇಲ್ಲದವನು. ಎಲ್ಲಾ ಧರ್ಮಗಳಿಂದಲೂ ಬಹಿಷ್ಕರಿಸಲ್ಪಟ್ಟವನು. ಸ್ವೇಚ್ಛಾಚಾರಿಯು., ಗುಣವಿಲ್ಲದವನು. ಅವನು ಮರ್ಯಾದೆಗೆ ಯೋಗ್ಯನಾ? ಯಯಾತಿ ಮಹಾರಾಜನು ಇವನ ಕುಲವನ್ನು ಶಪಿಸಿರುವನು. ಆದ್ದರಿಂದ ಸಜ್ಜನರು ಕೃಷ್ಣನ ಕುಲವನ್ನು ನಿಂದಿಸುತ್ತಿರುವನು. ಬ್ರಹ್ಮರ್ಷಿಗಳು ವಾಸಿಸುತ್ತಿರುವ ದೇಶಗಳನ್ನು ಬಿಟ್ಟು ಬ್ರಹ್ಮವರ್ಚಸ್ಸಿನಿಂದ ರಹಿತನಾಗಿರುವ ಈ ಕೃಷ್ಣನು ವ್ಯರ್ಥವಾಗಿ ಮದ್ಯಪಾನ ಮಾಡುತ್ತಾ ಸಮುದ್ರದ ಮಧ್ಯದಲ್ಲಿ ವಾಸಿಸುತ್ತಾ ಇತರರಿಗೆ ಸಿಗದೆ ಕಳ್ಳರಂತೆ ಸಜ್ಜನರನ್ನು ಪೀಡಿಸುತ್ತಿರುವನು. ಎಂದು ಅಮಂಗಳಕರವಾದ ಮಾತುಗಳಿಂದ ಶ್ರೀಕೃಷ್ಣದೇವನನ್ನು ದೂಷಿಸಿದನು.

ಅವನು ಮಾಡಿದ ಮಂಗಲ ಕಾರ್ಯಗಳೆಲ್ಲವೂ ನಷ್ಟವಾದವು. ಶಿಶುಪಾಲನು ಶ್ರೀಕೃಷ್ಣದೇವನನ್ನು ನಿಂದಿಸುತ್ತಿರುವುದನ್ನು ಶ್ರೀಕೃಷ್ಣದೇವನು ಕೇಳುತ್ತಿದ್ದರೂ ಯಾವ ಪ್ರತ್ಯುತ್ತರವನ್ನೂ ಕೊಡಲಿಲ್ಲ. ನರಿಯು ಕೂಗುತ್ತಿರುವುದನ್ನು ಸಿಂಹವು ಲಕ್ಷ್ಯಮಾಡುತ್ತದೆಯೇ? ಆ ಸಭೆಯಲ್ಲಿದ್ದ ಸಭಿಕರೆಲ್ಲರೂ ಸಹಿಸಲಾರದ ವ್ಯಥೆಯಿಂದ ಯುಕ್ತರಾಗಿ ಎರಡು ಕಿವಿಗಳನ್ನೂ ಕೈಗಳಿಂದ ಮುಚ್ಚಿಕೊಂಡವರಾಗಿ ಶಿಶುಪಾಲನನ್ನು ಶಪಿಸುತ್ತಾ ಆ ಸಭೆಯನ್ನು ಬಿಟ್ಟು ಹೊರಗೆ ಹೋದರು.

ಶ್ರೀಕೃಷ್ಣದೇವನ ಮತ್ತು ಅವನ ಭಕ್ತರ ನಿಂದೆಯನ್ನು ಕೇಳಕೂಡದು. ಭಗವನ್ನಿಂದೆಯನ್ನೂ ಭಗವದ್ಭಕ್ತರ ನಿಂದೆಯನ್ನೂ ಕೇಳಿದವನು ಶಕ್ತನಾಗಿದ್ದರೆ ನಿಂದಿಸಿದವನ ನಾಲಿಗೆಯನ್ನು ಸೀಳಬೇಕು. ಅದರಲ್ಲಿ ಅಶಕ್ತನಾಗಿದ್ದರೆ ಪ್ರಾಣವನ್ನು ಬಿಡಬೇಕು. ಈ ಎರಡು ಕಾರ್ಯಗಳಲ್ಲಿಯೂ ಅಶಕ್ತನಾಗಿದ್ದರೆ ಕಿವಿಗಳನ್ನು ಮುಚ್ಚಿಕೊಂಡು ಆ ಸ್ಥಳವನ್ನು ಬಿಟ್ಟು ಬೇರೆ ಬೇರೆ ಕಡೆಗೆ ಹೋಗಬೇಕು. ಇದು ಸರ್ವರೂ ಮಾಡಬಹುದಾದ ಧರ್ಮವಾಗಿದೆ.

ಭೀಮಸೇನದೇವರು ಶಿಶುಪಾಲನು ಶ್ರೀಕೃಷ್ಣದೇವನನ್ನು ನಿಂದಿಸುತ್ತಿರುವುದನ್ನು ನೋಡಿದರು. "ಯಾವನು ದೂರದಲ್ಲಿಯೂ ಶ್ರೀಕೃಷ್ಣದೇವನನ್ನು ನಿಂದಿಸುವನೋ ಅವನ ನಾಲಿಗೆಯನ್ನು ಸೀಳುವೆನು" ಎಂದು ಯಾವಾಗಲೂ ಪ್ರತಿಜ್ಞೆಯನ್ನು ಶ್ರೀಭೀಮಸೇನದೇವರು ಮಾಡಿರುವರು. ತಮ್ಮ ಪ್ರತಿಜ್ಞೆಯಂತೆ ತಾವು ಶಿಶುಪಾಲನನ್ನು ಸಂಹರಿಸುವುದಕ್ಕೆ ಹೊರಟರು. ಆಗ ಶ್ರೀಭೀಷ್ಮರು ಶ್ರೀಭೀಮಸೇನದೇವರ ಕೈಗಳನ್ನು ಹಿಡಿದರು. ಶ್ರೀಕೃಷ್ಣದೇವನ ಸಂಕಲ್ಪವನ್ನು ಜ್ಞಾಪಕಪಡಿಸಿದರು.

"ಓ ಭೀಮ, ಶ್ರೀಹರಿಯು ಶಿಶುಪಾಲನ ಮತ್ತು ದಂತವಕ್ತ್ರನ ಹಿಂದಿನ ಎರಡು ಜನ್ಮಗಳಲ್ಲಿಯೂ ಮೂರನೆಯ ಈ ಜನ್ಮದಲ್ಲಿಯೂ ತಾನೇ ಶಿಶುಪಾಲನನ್ನೂ ದಂತವಕ್ತ್ರನನ್ನೂ ಸಂಹರಿಸುವುದಾಗಿ ವರವನ್ನು ಕೊಟ್ಟಿರುವನು. ಆದ್ದರಿಂದ ನೀನು ಅವನನ್ನು ಸಂಹರಿಸಕೂಡದು" ಎಂದು ಹೇಳಿ ಅಡ್ಡಗಟ್ಟಿದರು. ಭೀಷ್ಮರ ಈ ಮಾತುಗಳನ್ನು ಕೇಳಿದ ಭೀಮಸೇನದೇವರು ಸುಮ್ಮನಾದರು. ಶಿಶುಪಾಲನನ್ನು ತಾನೇ ಸಂಹರಿಸುವುದು ಶ್ರೀಕೃಷ್ಣದೇವನಿಗೆ ಇಷ್ಟವೆಂದು ಶ್ರೀಭೀಮಸೇನದೇವರಿಗೆ ಮೊದಲೇ ಗೊತ್ತಿತ್ತು. ಆದರೂ ಶಿಶುಪಾಲನು ಶ್ರೀಕೃಷ್ಣದೇವನನ್ನು ನಿಂದಿಸುತ್ತಿರುವಾಗ ತನ್ನ ಕರ್ತವ್ಯವೇನು? ಎಂದು ತಿಳಿಸುವುದಕ್ಕಾಗಿ ಶ್ರೀಭೀಮಸೇನದೇವರು ಶಿಶುಪಾಲನನ್ನು ಸಂಹರಿಸುವುದಕ್ಕಾಗಿ ಹೊರಟರು. ಶ್ರೀಭೀಷ್ಮರು ಅಡ್ಡಗಟ್ಟಿದ ಕೂಡಲೇ ಶ್ರೀಭೀಷ್ಮರ ಮಾತಿಗೆ ಮರ್ಯಾದೆಯನ್ನು ಕೊಡುವುದಕ್ಕಾಗಿ ಸುಮ್ಮನಾದರು.

ಆ ಸಮಯದಲ್ಲಿ ಆ ಸಭೆಯಲ್ಲಿದ್ದ ಉತ್ತಮ ಜೀವರೆಲ್ಲರೂ ಶ್ರೀಕೃಷ್ಣದೇವನಲ್ಲಿ ಅಧಿಕವಾದ ಭಕ್ತಿಯನ್ನು ಮಾಡಿದರು. ಮನುಷ್ಯರು ಮಧ್ಯಸ್ಥರಾಗಿದ್ದರು. ತಮೋಯೋಗ್ಯರಾದ ದುರ್ಯೋಧನ ಮುಂತಾದವರು ಶ್ರೀಕೃಷ್ಣದೇವನನ್ನು ದ್ವೇಷಿಸಿದರು. ಶಿಶುಪಾಲನು ಸದ್ಗುಣಸಮುದ್ರನಾಗಿರುವ ಶ್ರೀಕೃಷ್ಣದೇವನನ್ನು ಕೆಟ್ಟ ಮಾತುಗಳಿಂದ ಹೆಚ್ಚು ಹೆಚ್ಚಾಗಿ ನಿಂದಿಸುತ್ತಾ ಬಂದನು.

ಶಿಶುಪಾಲನು ಶ್ರೀಕೃಷ್ಣದೇವನ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು. ಯುದ್ಧಕ್ಕೆ ಶ್ರೀಕೃಷ್ಣ ದೇವನನ್ನು ಕರೆದನು. ಆಗ ಶ್ರೀಕೃಷ್ಣನು ಶಿಶುಪಾಲನ ಎಲ್ಲಾ ಬಾಣಗಳನ್ನೂ ತಡೆದು ನಿಲ್ಲಿಸಿ ಸುದರ್ಶನಚಕ್ರದಿಂದ ಶಿಶುಪಾಲನ ಶಿರಸ್ಸನ್ನು ಕತ್ತರಿಸಿದನು. ಸುದರ್ಶನ ಚಕ್ರದಿಂದ ಕುತ್ತಿಗೆಯು ಕತ್ತರಿಸಲ್ಪಡುತ್ತಿರುವಾಗ ಅವನ ದೇಹದಲ್ಲಿದ್ದ "ಜಯ"

ಎಂಬ ದ್ವಾರಪಾಲಕನಿಗೆ ಅತ್ಯಂತ ಭಕ್ತಿಯು ಏರ್ಪಡುತ್ತಾ ಬಂತು. ಜಯನಲ್ಲಿ ಆವಿಷ್ಟನಾದ ದೈತ್ಯನು ನಿತ್ಯ ನರಕವನ್ನು ಹೊಂದಿದನು.

ಧರ್ಮರಾಜನಿಂದ ರಾಜಸೂಯಯಾಗವು ಹಿಂದೆ ಹೇಳಿದಂತೆ ಮಾಡಲ್ಪಟ್ಟಿತು. ಈ ಯಜ್ಞದಲ್ಲಿ ಯಥೇಷ್ಟ ಭಕ್ಷ್ಯ ಭೋಜ್ಯಗಳಿಂದ ಬ್ರಾಹ್ಮಣರನ್ನೆಲ್ಲರನ್ನೂ ಭೋಜನ ಮಾಡಿಸಿದನು. ಅನೇಕ ಸಂಖ್ಯಾಕವಾದ ಸುವರ್ಣಗಳ ಮತ್ತು ರತ್ನಗಳ ಭಾರಗಳನ್ನು ದಕ್ಷಿಣೆಗಳಾಗಿ ಕೊಟ್ಟನು. ಯಾರಿಗೆ ಯಾವುದು ಇಷ್ಟವೋ ಆ ವಸ್ತುವನ್ನು ಅವನಿಗೆ ಕೊಟ್ಟನು. ಕೊನೆಗೆ ದೇವಗಂಗೆಯಲ್ಲಿ ಅವಭೃಥಸ್ನಾನಕ್ಕಾಗಿ ಸರ್ವರೂ ಹೋದರು. ಆ ಕಾಲದಲ್ಲಿ ದೇವದುಂದುಭಿಗಳು ಬಾರಿಸಲ್ಪಟ್ಟವು. ದೇವಗಾಯಕರು ಹಾಡಿದರು. ದೇವತಾಸ್ತ್ರೀಯರು ನರ್ತನವನ್ನು ಮಾಡಿದರು. ಗಂಗಾನದಿಯಲ್ಲಿ ಅವಭೃಥಸ್ನಾನವನ್ನು ಮಾಡಿದ ಪಾಂಡವರು ಇಂದ್ರಪ್ರಸ್ಥನಗರವನ್ನು ಪ್ರವೇಶಿಸಿದರು. ಎಲ್ಲಾ ದೇವತೆಗಳೂ ತಮ್ಮ ತಮ್ಮ ಸ್ಥಾನಗಳಿಗೆ ಹಿಂದಿರುಗಿ ಹೋದರು.

# ಸಾಲ್ವನ ಸಂಹಾರ

**(೧೦೧) ನಿಜನಗರಂ ಶಾಲ್ವಭಗ್ನಂ ಸಮೀಕ್ಷ್ಯ, ಕೃದ್ಧಃ ಅಬ್ಧಿಗಂ ತಂ ಶಿವವರಬಲಿನಂ ಘ್ನನ್ ಪುರಂ ಯಾನ್, ನಿತ್ಯಂ ಪಾತು.**

ತನ್ನ ದ್ವಾರಕಾಪಟ್ಟಣವು ಸಾಲ್ವನಿಂದ ಮುರಿಯಲ್ಪಟ್ಟಿತು. ಆ ಸಾಲ್ವನನ್ನು ಸಮುದ್ರದಲ್ಲಿ ಮುಳುಗಿಸಿದನು. ರುದ್ರದೇವನ ವರದಿಂದ ಅವಧ್ಯನಾದ ಸಾಲ್ವನನ್ನು ಸಂಹರಿಸಿದನು. ದ್ವಾರಕಾಪಟ್ಟಣಕ್ಕೆ ಹೋದನು. ಸರ್ವರನ್ನೂ ರಕ್ಷಿಸಿದನು. ಅವನು ನಮ್ಮನ್ನೆಲ್ಲರನ್ನೂ ಕಾಪಾಡಲಿ.

**ವಿಶೇಷಾರ್ಥ - ಸಾಲ್ವಭಗ್ನಾಂ ದ್ವಾರಕಾಂ ದೃಷ್ಟ್ವಾ, ಸಾಲ್ವಹನನಾರ್ಥಂ ತತ್ಸಮೀಪಂ ಪ್ರಾಪ್ಯ, ರುದ್ರಪ್ರಸಾದಲಬ್ಧ ಸೌಭವಿಮಾನಮಾರುಹ್ಯ ಸಮುದ್ರಸ್ಯೋಪರಿ ವಿದ್ಯಮಾನಂ ಪೂರ್ವಂ ಬಲಿಮಾವಿಶ್ಯ ಹರೌ ದೇವೇಷು ಚ ವಿರೋಧಂ ಕೃತವಂಶಂ ಬಲಿನಾಮಕಾಸುರಂ ಬ್ರಹ್ಮದತ್ತಸುತತ್ವೇನ ಜಾತಂ ಸಾಲ್ವಂ ಚಕ್ರೇಣ ಹತ್ವಾ ದೇವಾದಿಭಿಃ ಸ್ತೂಯಮಾನಃ ದ್ವಾರಕಾಂ ಪ್ರಾಪ್ಯ ಸರ್ವಾನತೋಷಯತ್.**

**ವಿಶೇಷಾರ್ಥ ವಿವರಣ -** ಪೂರ್ವದಲ್ಲಿ ಬಲಿಚಕ್ರವರ್ತಿಯಲ್ಲಿ ಆವಿಷ್ಟನಾದ "ಬಲಿ" ಎಂಬ ದೈತ್ಯನು ವಾಮನರೂಪಿಯಾದ ಶ್ರೀಹರಿಯಲ್ಲಿಯೂ, ಇಂದ್ರ ಮುಂತಾದ ದೇವತೆಗಳಲ್ಲಿಯೂ "ಸಾಲ್ವ" ಎಂಬ ಹೆಸರಿನಿಂದ ಯುಕ್ತವಾಗಿ ಪ್ರಬಲವಾದ ವಿರೋಧವನ್ನು ಮಾಡಿದ್ದನು. ಆ ಸಾಲ್ವನು ಶ್ರೀಕೃಷ್ಣಾವತಾರಕಾಲದಲ್ಲಿ ಬ್ರಹ್ಮದತ್ತನಿಗೆ ಮಗನಾಗಿ "ಸಾಲ್ವ" ಎಂಬ ಹೆಸರಿನಿಂದ ಹುಟ್ಟಿದ್ದನು. ರುಕ್ಮಿಣಿಯನ್ನು ಅವಳ ಅಣ್ಣನಾದ ರುಕ್ಮಿಯು ಶಿಶುಪಾಲನಿಗೆ ಕೊಟ್ಟು ವಿವಾಹವನ್ನು ಮಾಡುವುದಾಗಿ ತೀರ್ಮಾನಿಸಿ ವಿವಾಹಕ್ಕಾಗಿ ಶಿಶುಪಾಲನ ಸ್ನೇಹಿತನಾದ ಸಾಲ್ವನಿಗೆ ಆಹ್ವಾನವನ್ನು ಮಾಡಿದಾಗ ಕುಂಡಿನಪುರಕ್ಕೆ ಬಂದಿದ್ದನು. ಶಿಶುಪಾಲನಿಗಾಗಿ ಜರಾಸಂಧ ಮುಂತಾದವರು ಶ್ರೀಕೃಷ್ಣದೇವನೊಡನೆ ಯುದ್ಧವನ್ನು ಮಾಡಿದಾಗ ಬಲರಾಮ ಮುಂತಾದ ಯಾದವರಿಂದ ಪರಾಜಿತನಾದನು. ಆಗ ಸಕಲ ಯಾದವರ ಮುಂದೆ "ಭೂಮಿಯಲ್ಲಿ ಎಲ್ಲೆಲ್ಲಿಯೂ ಯಾದವನೇ ಇಲ್ಲದಂತೆ ಮಾಡುವೆನು. ನನ್ನ ಪೌರುಷವನ್ನು ನೋಡಿ" ಎಂದು ಪ್ರತಿಜ್ಞೆಯನ್ನು ಮಾಡಿದನು.

ಅವನು ಮಾಡಿದ ಮಂಗಲ ಕಾರ್ಯಗಳೆಲ್ಲವೂ ನಷ್ಟವಾದವು. ಶಿಶುಪಾಲನು ಶ್ರೀಕೃಷ್ಣದೇವನನ್ನು ನಿಂದಿಸುತ್ತಿರುವುದನ್ನು ಶ್ರೀಕೃಷ್ಣದೇವನು ಕೇಳುತ್ತಿದ್ದರೂ ಯಾವ ಪ್ರತ್ಯುತ್ತರವನ್ನೂ ಕೊಡಲಿಲ್ಲ. ನರಿಯು ಕೂಗುತ್ತಿರುವುದನ್ನು ಸಿಂಹವು ಲಕ್ಷ್ಯಮಾಡುತ್ತದೆಯೇ? ಆ ಸಭೆಯಲ್ಲಿದ್ದ ಸಭಿಕರೆಲ್ಲರೂ ಸಹಿಸಲಾರದ ವ್ಯಥೆಯಿಂದ ಯುಕ್ತರಾಗಿ ಎರಡು ಕಿವಿಗಳನ್ನೂ ಕೈಗಳಿಂದ ಮುಚ್ಚಿಕೊಂಡವರಾಗಿ ಶಿಶುಪಾಲನನ್ನು ಶಪಿಸುತ್ತಾ ಆ ಸಭೆಯನ್ನು ಬಿಟ್ಟು ಹೊರಗೆ ಹೋದರು.

ಶ್ರೀಕೃಷ್ಣದೇವನ ಮತ್ತು ಅವನ ಭಕ್ತರ ನಿಂದೆಯನ್ನು ಕೇಳಕೂಡದು. ಭಗವನ್ನಿಂದೆಯನ್ನೂ ಭಗವದ್ಭಕ್ತರ ನಿಂದೆಯನ್ನೂ ಕೇಳಿದವನು ಶಕ್ತನಾಗಿದ್ದರೆ ನಿಂದಿಸಿದವನ ನಾಲಿಗೆಯನ್ನು ಸೀಳಬೇಕು. ಅದರಲ್ಲಿ ಅಶಕ್ತನಾಗಿದ್ದರೆ ಪ್ರಾಣವನ್ನು ಬಿಡಬೇಕು. ಈ ಎರಡು ಕಾರ್ಯಗಳಲ್ಲಿಯೂ ಅಶಕ್ತನಾಗಿದ್ದರೆ ಕಿವಿಗಳನ್ನು ಮುಚ್ಚಿಕೊಂಡು ಆ ಸ್ಥಳವನ್ನು ಬಿಟ್ಟು ಬೇರೆ ಬೇರೆ ಕಡೆಗೆ ಹೋಗಬೇಕು. ಇದು ಸರ್ವರೂ ಮಾಡಬಹುದಾದ ಧರ್ಮವಾಗಿದೆ.

ಭೀಮಸೇನದೇವರು ಶಿಶುಪಾಲನು ಶ್ರೀಕೃಷ್ಣದೇವನನ್ನು ನಿಂದಿಸುತ್ತಿರುವುದನ್ನು ನೋಡಿದರು. "ಯಾವನು ದೂರದಲ್ಲಿಯೂ ಶ್ರೀಕೃಷ್ಣದೇವನನ್ನು ನಿಂದಿಸುವನೋ ಅವನ ನಾಲಿಗೆಯನ್ನು ಸೀಳುವೆನು" ಎಂದು ಯಾವಾಗಲೂ ಪ್ರತಿಜ್ಞೆಯನ್ನು ಶ್ರೀಭೀಮಸೇನದೇವರು ಮಾಡಿರುವರು. ತಮ್ಮ ಪ್ರತಿಜ್ಞೆಯಂತೆ ತಾವು ಶಿಶುಪಾಲನನ್ನು ಸಂಹರಿಸುವುದಕ್ಕೆ ಹೊರಟರು. ಆಗ ಶ್ರೀಭೀಷ್ಮರು ಶ್ರೀಭೀಮಸೇನದೇವರ ಕೈಗಳನ್ನು ಹಿಡಿದರು. ಶ್ರೀಕೃಷ್ಣದೇವನ ಸಂಕಲ್ಪವನ್ನು ಜ್ಞಾಪಕಪಡಿಸಿದರು.

"ಓ ಭೀಮ, ಶ್ರೀಹರಿಯು ಶಿಶುಪಾಲನ ಮತ್ತು ದಂತವಕ್ತ್ರನ ಹಿಂದಿನ ಎರಡು ಜನ್ಮಗಳಲ್ಲಿಯೂ ಮೂರನೆಯ ಈ ಜನ್ಮದಲ್ಲಿಯೂ ತಾನೇ ಶಿಶುಪಾಲನನ್ನೂ ದಂತವಕ್ತ್ರನನ್ನೂ ಸಂಹರಿಸುವುದಾಗಿ ವರವನ್ನು ಕೊಟ್ಟಿರುವನು. ಆದ್ದರಿಂದ ನೀನು ಅವನನ್ನು ಸಂಹರಿಸಕೂಡದು" ಎಂದು ಹೇಳಿ ಅಡ್ಡಗಟ್ಟಿದರು. ಭೀಷ್ಮರ ಈ ಮಾತುಗಳನ್ನು ಕೇಳಿದ ಭೀಮಸೇನದೇವರು ಸುಮ್ಮನಾದರು. ಶಿಶುಪಾಲನನ್ನು ತಾನೇ ಸಂಹರಿಸುವುದು ಶ್ರೀಕೃಷ್ಣದೇವನಿಗೆ ಇಷ್ಟವೆಂದು ಶ್ರೀಭೀಮಸೇನದೇವರಿಗೆ ಮೊದಲೇ ಗೊತ್ತಿತ್ತು. ಆದರೂ ಶಿಶುಪಾಲನು ಶ್ರೀಕೃಷ್ಣದೇವನನ್ನು ನಿಂದಿಸುತ್ತಿರುವಾಗ ತನ್ನ ಕರ್ತವ್ಯವೇನು? ಎಂದು ತಿಳಿಸುವುದಕ್ಕಾಗಿ ಶ್ರೀಭೀಮಸೇನದೇವರು ಶಿಶುಪಾಲನನ್ನು ಸಂಹರಿಸುವುದಕ್ಕಾಗಿ ಹೊರಟರು. ಶ್ರೀಭೀಷ್ಮರು ಅಡ್ಡಗಟ್ಟಿದ ಕೂಡಲೇ ಶ್ರೀಭೀಷ್ಮರ ಮಾತಿಗೆ ಮರ್ಯಾದೆಯನ್ನು ಕೊಡುವುದಕ್ಕಾಗಿ ಸುಮ್ಮನಾದರು.

ಆ ಸಮಯದಲ್ಲಿ ಆ ಸಭೆಯಲ್ಲಿದ್ದ ಉತ್ತಮ ಜೀವರೆಲ್ಲರೂ ಶ್ರೀಕೃಷ್ಣದೇವನಲ್ಲಿ ಅಧಿಕವಾದ ಭಕ್ತಿಯನ್ನು ಮಾಡಿದರು. ಮನುಷ್ಯರು ಮಧ್ಯಸ್ಥರಾಗಿದ್ದರು. ತಮೋಯೋಗ್ಯರಾದ ದುರ್ಯೋಧನ ಮುಂತಾದವರು ಶ್ರೀಕೃಷ್ಣದೇವನನ್ನು ದ್ವೇಷಿಸಿದರು. ಶಿಶುಪಾಲನು ಸದ್ಗುಣಸಮುದ್ರನಾಗಿರುವ ಶ್ರೀಕೃಷ್ಣದೇವನನ್ನು ಕೆಟ್ಟ ಮಾತುಗಳಿಂದ ಹೆಚ್ಚು ಹೆಚ್ಚಾಗಿ ನಿಂದಿಸುತ್ತಾ ಬಂದನು.

ಶಿಶುಪಾಲನು ಶ್ರೀಕೃಷ್ಣದೇವನ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು. ಯುದ್ಧಕ್ಕೆ ಶ್ರೀಕೃಷ್ಣ ದೇವನನ್ನು ಕರೆದನು. ಆಗ ಶ್ರೀಕೃಷ್ಣನು ಶಿಶುಪಾಲನ ಎಲ್ಲಾ ಬಾಣಗಳನ್ನೂ ತಡೆದು ನಿಲ್ಲಿಸಿ ಸುದರ್ಶನಚಕ್ರದಿಂದ ಶಿಶುಪಾಲನ ಶಿರಸ್ಸನ್ನು ಕತ್ತರಿಸಿದನು. ಸುದರ್ಶನ ಚಕ್ರದಿಂದ ಕುತ್ತಿಗೆಯು ಕತ್ತರಿಸಲ್ಪಡಿತ್ತಿರುವಾಗ ಅವನ ದೇಹದಲ್ಲಿದ್ದ "ಜಯ"

ಎಂಬ ದ್ವಾರಪಾಲಕನಿಗೆ ಅತ್ಯಂತ ಭಕ್ತಿಯು ಏರ್ಪಡುತ್ತಾ ಬಂತು. ಜಯನಲ್ಲಿ ಆವಿಷ್ಟನಾದ ದೈತ್ಯನು ನಿತ್ಯ ನರಕವನ್ನು ಹೊಂದಿದನು.

ಧರ್ಮರಾಜನಿಂದ ರಾಜಸೂಯಯಾಗವು ಹಿಂದೆ ಹೇಳಿದಂತೆ ಮಾಡಲ್ಪಟ್ಟಿತು. ಈ ಯಜ್ಞದಲ್ಲಿ ಯಥೇಷ್ಟ ಭಕ್ಷ್ಯ ಭೋಜ್ಯಗಳಿಂದ ಬ್ರಾಹ್ಮಣರನ್ನೆಲ್ಲರನ್ನೂ ಭೋಜನ ಮಾಡಿಸಿದನು. ಅನೇಕ ಸಂಖ್ಯಾಕವಾದ ಸುವರ್ಣಗಳ ಮತ್ತು ರತ್ನಗಳ ಭಾರಗಳನ್ನು ದಕ್ಷಿಣೆಗಳಾಗಿ ಕೊಟ್ಟನು. ಯಾರಿಗೆ ಯಾವುದು ಇಷ್ಟವೋ ಆ ವಸ್ತುವನ್ನು ಅವನಿಗೆ ಕೊಟ್ಟನು. ಕೊನೆಗೆ ದೇವಗಂಗೆಯಲ್ಲಿ ಅವಭೃಥಸ್ನಾನಕ್ಕಾಗಿ ಸರ್ವರೂ ಹೋದರು. ಆ ಕಾಲದಲ್ಲಿ ದೇವದುಂದುಭಿಗಳು ಬಾರಿಸಲ್ಪಟ್ಟವು. ದೇವಗಾಯಕರು ಹಾಡಿದರು. ದೇವತಾಸ್ತ್ರೀಯರು ನರ್ತನವನ್ನು ಮಾಡಿದರು. ಗಂಗಾನದಿಯಲ್ಲಿ ಅವಭೃಥಸ್ನಾನವನ್ನು ಮಾಡಿದ ಪಾಂಡವರು ಇಂದ್ರಪ್ರಸ್ಥನಗರವನ್ನು ಪ್ರವೇಶಿಸಿದರು. ಎಲ್ಲಾ ದೇವತೆಗಳೂ ತಮ್ಮ ತಮ್ಮ ಸ್ಥಾನಗಳಿಗೆ ಹಿಂದಿರುಗಿ ಹೋದರು.

## ಸಾಲ್ವನ ಸಂಹಾರ

**(೧೦೧) ನಿಜನಗರಂ ಶಾಲ್ವಭಗ್ನಂ ಸಮೀಕ್ಷ್ಯ, ಕೃದ್ಧ: ಅಬ್ಧಿಗಂ ತಂ ಶಿವವರಬಲಿನಂ ಘ್ನನ್ ಪುರಂ ಯಾನ್, ನಿತ್ಯಂ ಪಾತು.**

ತನ್ನ ದ್ವಾರಕಾಪಟ್ಟಣವು ಸಾಲ್ವನಿಂದ ಮುರಿಯಲ್ಪಟ್ಟಿತು. ಆ ಸಾಲ್ವನನ್ನು ಸಮುದ್ರದಲ್ಲಿ ಮುಳುಗಿಸಿದನು. ರುದ್ರದೇವನ ವರದಿಂದ ಅವಧ್ಯನಾದ ಸಾಲ್ವನನ್ನು ಸಂಹರಿಸಿದನು. ದ್ವಾರಕಾಪಟ್ಟಣಕ್ಕೆ ಹೋದನು. ಸರ್ವರನ್ನೂ ರಕ್ಷಿಸಿದನು. ಅವನು ನಮ್ಮನ್ನೆಲ್ಲರನ್ನೂ ಕಾಪಾಡಲಿ.

**ವಿಶೇಷಾರ್ಥ - ಸಾಲ್ವಭಗ್ನಾಂ ದ್ವಾರಕಾಂ ದೃಷ್ಟ್ವಾ, ಸಾಲ್ವಹನನಾರ್ಥಂ ತತ್ಸಮೀಪಂ ಪ್ರಾಪ್ಯ, ರುದ್ರಪ್ರಸಾದಲಬ್ಧ ಸೌಭವಿಮಾನಮಾರುಹ್ಯ ಸಮುದ್ರಸ್ಯೋಪರಿ ವಿದ್ಯಮಾನಂ ಪೂರ್ವಂ ಬಲಿಮಾವಿಶ್ಯ ಹರೌ ದೇವೇಷು ಚ ವಿರೋಧಂ ಕೃತವಂಶಂ ಬಲಿನಾಮಕಾಸುರಂ ಬ್ರಹ್ಮದತ್ತಸುತತ್ವೇನ ಜಾತಂ ಸಾಲ್ವಂ ಚಕ್ರೇಣ ಹತ್ವಾ ದೇವಾದಿಭಿಃ ಸ್ತೂಯಮಾನಃ ದ್ವಾರಕಾಂ ಪ್ರಾಪ್ಯ ಸರ್ವಾನತೋಷಯತ್.**

ವಿಶೇಷಾರ್ಥ ವಿವರಣ - ಪೂರ್ವದಲ್ಲಿ ಬಲಿಚಕ್ರವರ್ತಿಯಲ್ಲಿ ಆವಿಷ್ಟನಾದ "ಬಲಿ" ಎಂಬ ದೈತ್ಯನು ವಾಮನರೂಪಿಯಾದ ಶ್ರೀಹರಿಯಲ್ಲಿಯೂ, ಇಂದ್ರ ಮುಂತಾದ ದೇವತೆಗಳಲ್ಲಿಯೂ "ಸಾಲ್ವ" ಎಂಬ ಹೆಸರಿನಿಂದ ಯುಕ್ತವಾಗಿ ಪ್ರಬಲವಾದ ವಿರೋಧವನ್ನು ಮಾಡಿದ್ದನು. ಆ ಸಾಲ್ವನು ಶ್ರೀಕೃಷ್ಣಾವತಾರಕಾಲದಲ್ಲಿ ಬ್ರಹ್ಮದತ್ತನಿಗೆ ಮಗನಾಗಿ "ಸಾಲ್ವ" ಎಂಬ ಹೆಸರಿನಿಂದ ಹುಟ್ಟಿದ್ದನು. ರುಕ್ಮಿಣಿಯನ್ನು ಅವಳ ಅಣ್ಣನಾದ ರುಕ್ಮಿಯು ಶಿಶುಪಾಲನಿಗೆ ಕೊಟ್ಟು ವಿವಾಹವನ್ನು ಮಾಡುವುದಾಗಿ ತೀರ್ಮಾನಿಸಿ ವಿವಾಹಕ್ಕಾಗಿ ಶಿಶುಪಾಲನ ಸ್ನೇಹಿತನಾದ ಸಾಲ್ವನಿಗೆ ಆಹ್ವಾನವನ್ನು ಮಾಡಿದಾಗ ಕುಂಡಿನಪುರಕ್ಕೆ ಬಂದಿದ್ದನು. ಶಿಶುಪಾಲನಿಗಾಗಿ ಜರಾಸಂಧ ಮುಂತಾದವರು ಶ್ರೀಕೃಷ್ಣದೇವನೊಡನೆ ಯುದ್ಧವನ್ನು ಮಾಡಿದಾಗ ಬಲರಾಮ ಮುಂತಾದ ಯಾದವರಿಂದ ಪರಾಜಿತನಾದನು. ಆಗ ಸಕಲ ಯಾದವರ ಮುಂದೆ "ಭೂಮಿಯಲ್ಲಿ ಎಲ್ಲೆಲ್ಲಿಯೂ ಯಾದವನೇ ಇಲ್ಲದಂತೆ ಮಾಡುವೆನು. ನನ್ನ ಪೌರುಷವನ್ನು ನೋಡಿ" ಎಂದು ಪ್ರತಿಜ್ಞೆಯನ್ನು ಮಾಡಿದನು.

ಮೂರ್ಖನಾದ ಸಾಲ್ವನು ಹೀಗೆ ಪ್ರತಿಜ್ಞೆಮಾಡಿ ರುದ್ರನನ್ನು ಕುರಿತು ಘೋರವಾದ ತಪಸ್ಸನ್ನು ಮಾಡಿದನು. ಪ್ರತಿದಿನದಲ್ಲಿಯೂ ಒಂದು ಹಿಡಿಯಷ್ಟು ಉಸುಗನ್ನು ತಿನ್ನುತ್ತಾ ಒಂದು ವರ್ಷದವರೆಗೆ ರುದ್ರನನ್ನು ಆರಾಧಿಸಿದನು. ಒಂದುವರ್ಷವು ಮುಗಿಯುವಾಗ "ಆಶುತೋಷ" ಅಂದರೆ "ಬಹು ಬೇಗನೆ ಪ್ರಸನ್ನನಾಗುವ" ರುದ್ರನು ಪ್ರತ್ಯಕ್ಷನಾದನು. ಶರಣಾಗತನಾಗಿರುವ ಸಾಲ್ವನಿಗೆ ಬೇಕಾದ ವರವನ್ನು ಕೊಡುವುದಾಗಿ ಹೇಳಿದನು. ಆಗ ಸಾಲ್ವನು "ದೇವತೆಗಳಿಂದಲೂ ಅಸುರರಿಂದಲೂ ಭೇದನ ಮಾಡಲು ಶಕ್ಯವಿಲ್ಲದ ಮತ್ತು ಎಲ್ಲಿ ಬೇಕಾದರೂ ಸಂಚರಿಸಲು ಶಕ್ತಿಯುಳ್ಳ ಮತ್ತು ಯಾದವರಿಗೆ ಭಯವನ್ನು ಹುಟ್ಟಿಸುವ ವಿಮಾನವನ್ನು ಪ್ರಾರ್ಥಿಸಿದನು. ರುದ್ರನು "ಮಯ" ಎಂಬ ದೈತ್ಯಶಿಲ್ಪಿಯನ್ನು ಕರೆದು ಉಕ್ಕಿನಿಂದ ಕತ್ತಲೆಯಿಂದ ತುಂಬಿದ ವಿಮಾನವನ್ನು ಮಾಡಿಸಿಕೊಟ್ಟನು.

ಸಾಲ್ವನು ಯಾದವರಿಂದ ತನಗೆ ಏರ್ಪಟ್ಟ ಅಪಮಾನವನ್ನು ಸ್ಮರಿಸುತ್ತಾ ಆ ವಿಮಾನದಲ್ಲಿ ಕುಳಿತವನಾಗಿ ದೊಡ್ಡ ಸೈನ್ಯದಿಂದ ಸಹಿತನಾಗಿ ಶ್ರೀಕೃಷ್ಣದೇವನು ಇಲ್ಲದಿರುವ ಸಮಯದಲ್ಲಿ ದ್ವಾರಕಾಪಟ್ಟಣವನ್ನು ಮುತ್ತಿಗೆ ಹಾಕಿದನು. ದ್ವಾರಕಾಪಟ್ಟಣವನ್ನೂ ಗೋಪುರದ್ವಾರಗಳನ್ನೂ ಮಹಡಿ ಮನೆಗಳನ್ನೂ ಬಾಣಗಳ ಮಳೆಯಿಂದ ಉರುಳಿಸುತ್ತಾ ಬಂದನು. ಮರಗಳನ್ನೂ ಕಲ್ಲುಗಳನ್ನೂ ಮಳೆಯಂತೆ ಸುರಿಸಿದನು. ತ್ರಿಪುರಾಸುರರಿಂದ ಸರ್ವರಿಗೂ ಬಾಧೆಯು ಏರ್ಪಟ್ಟಂತೆ ದ್ವಾರಕಾಪಟ್ಟಣದಲ್ಲಿರುವ ಸರ್ವರನ್ನೂ ಪೀಡಿಸಿದನು.

ಆಗ ಪ್ರದ್ಯುಮ್ನನು ಸಕಲ ಯಾದವರನ್ನೂ ನೋಡಿದವನಾಗಿ "ಹೆದರಬೇಡಿರಿ" ಎಂದು ಹೇಳುತ್ತಾ ಯುದ್ಧಕ್ಕೆ ಬಂದನು. ರಥಗಳ ಮೇಲೆಯೂ ಆನೆಗಳ ಮೇಲೆಯೂ ಕುದುರೆಗಳ ಮೇಲೆಯೂ ಕಾಲ್ನಡೆಯಿಂದಲೂ ಸಾಲ್ವನ ಸೈನ್ಯವನ್ನು ಸಕಲ ಯಾದವರೂ ಎದುರಿಸಿದರು. ಪ್ರದ್ಯುಮ್ನನು ದಿವ್ಯವಾದ ಅಸ್ತ್ರಗಳಿಂದಲೂ ಸಾಲ್ವನ ಎಲ್ಲಾ ಮಾಯೆಗಳನ್ನೂ ನಾಶಮಾಡಿದನು. ಪ್ರದ್ಯುಮ್ನನ ಈ ಪರಾಕ್ರಮವನ್ನು ನೋಡಿದ ಸಾಲ್ವನ ಸೈನಿಕರೂ ಯಾದವರೂ ಸರ್ವರೂ ಹೊಗಳಿದರು.

ಆಗ ಸೌಭ ವಿಮಾನವು ಒಂದೊಂದು ಕ್ಷಣದಲ್ಲಿ ಒಂದೊಂದು ಸ್ಥಳಗಳಲ್ಲಿ ಕಾಣಿಸಿತು. ಎಲ್ಲೆಲ್ಲಿ ಕಾಣಿಸಿತೋ ಅಲ್ಲಲ್ಲಿಗೆ ಬಾಣಗಳನ್ನು ಯಾದವರು ಪ್ರಯೋಗಿಸಿದರು. ಸಾಲ್ವನ ಮಂತ್ರಿಯಾದ 'ದ್ಯುಮಾನ್' ಎಂಬುವನು ಪ್ರದ್ಯುಮ್ನನಿಂದ ಪೀಡಿಸಲ್ಪಟ್ಟನು. ತೀಕ್ಷ್ಣವಾದ ಗದೆಯಿಂದ ಪ್ರದ್ಯುಮ್ನನನ್ನು ಹೊಡೆದನು. ಪ್ರದ್ಯುಮ್ನನು ಆ ಪೆಟ್ಟಿನಿಂದ ಮೂರ್ಛಿತನಾದನು. ಅವನ ಸಾರಥಿಯು ಆಪತ್ಕಾಲದಲ್ಲಿ ಸಾರಥಿಯು ರಥಿಕನನ್ನು ಕಾಪಾಡಬೇಕೆಂಬ ನೀತಿಯನ್ನು ಅನುಸರಿಸಿ ರಣರಂಗದಿಂದ ಪ್ರದ್ಯುಮ್ನನನ್ನು ಬೇರೆ ಸ್ಥಳಕ್ಕೆ ಕರೆದುಕೊಂಡು ಹೋದನು. ಒಂದು ಮೂಹೂರ್ತದಲ್ಲಿ ಪ್ರದ್ಯುಮ್ನನು ಚೇತರಿಸಿಕೊಂಡನು. ತನ್ನನ್ನು ಯುದ್ಧರಂಗದಿಂದ ಕರೆದುಕೊಂಡು ಬಂದಿರುವುದಕ್ಕಾಗಿ ಸಾರಥಿಯನ್ನು ಧಿಕ್ಕರಿಸಿದನು.

ಪ್ರದ್ಯುಮ್ನನ ಈ ಮಾತುಗಳನ್ನು ಕೇಳಿದ ಸಾರಥಿಯು "ಆಪತ್ಕಾಲದಲ್ಲಿ ರಥಿಕನನ್ನು ಸಾರಥಿಯೂ ಸಾರಥಿಯನ್ನು ರಥಿಕನೂ ರಕ್ಷಿಸಬೇಕು ಎಂಬ ಧರ್ಮವನ್ನು ಅವಲಂಬಿಸಿ ನಿನ್ನನ್ನು ರಣರಂಗದಿಂದ ಕರೆದುಕೊಂಡು ಬಂದೆನು. ಇನ್ನು ಪುನಃ ಶತ್ರುವಿನ ಮುಂದೆ ಯುದ್ಧಕ್ಕೆ ಕರೆದುಕೊಂಡು ಹೋಗುವೆನು ಎಂದು ಹೇಳಿದನು.

ಆಚಮನವನ್ನು ಮಾಡಿ ಕವಚವನ್ನು ತೊಟ್ಟನು. ಧನುಸ್ಸನ್ನು ಕೈಯಲ್ಲಿ ಧರಿಸಿ "ದ್ಯುಮಾನ್" ಎಂಬ ಸಾಲ್ವಮಂತ್ರಿಯ ಮುಂದೆ ರಥವನ್ನು ನಿಲ್ಲಿಸು ಎಂದನು. ಸಾರಥಿಯು ಅದರಂತೆಯೇ ಮಾಡಿದನು. ಪ್ರದ್ಯುಮ್ನನು

ತನ್ನ ಬಾಣಗಳಿಂದ "ದ್ಯುಮಾನ್" ಎಂಬುವನ ಧನುಸ್ಸು ಮುಂತಾದವುಗಳನ್ನು ನಾಶಮಾಡಿ ಅವನ ತಲೆಯನ್ನು ಕತ್ತರಿಸಿದನು. ಗದ, ಸಾತ್ಯಕಿ, ಸಾಂಬ ಮುಂತಾದವರು ಸಾಲ್ವನ ಸೈನ್ಯಗಳನ್ನು ನಾಶ ಮಾಡಿದರು. ಇಪ್ಪತ್ತೇಳು ದಿನಗಳ ವರೆಗೆ ಪ್ರದ್ಯುಮ್ನ ಮುಂತಾದವರಿಗೂ ಸಾಲ್ವನಿಗೂ ಘೋರವಾದ ಯುದ್ಧವು ನಡೆಯಿತು.

ರಾಜಸೂಯಯಾಗವು ಮುಗಿಯಿತು. ಶಿಶುಪಾಲನನ್ನು ಶ್ರೀಕೃಷ್ಣದೇವನು ಸಂಹರಿಸಿದನು. ಆಗ ಘೋರವಾದ ಶಕುನಗಳನ್ನು ಶ್ರೀಕೃಷ್ಣದೇವನು ತಿಳಿಸಿದನು. ಕುಂತೀ, ಧರ್ಮರಾಜ ಮುಂತಾದವರಲ್ಲಿ ಅನುಮತಿಯನ್ನು ಪಡೆದನು. "ನಾನು ಇಲ್ಲಿಗೆ ಬಂದೆನು. ಧರ್ಮರಾಜನ ಜೊತೆಯಲ್ಲಿ ರಾಜಸೂಯಯಾಗವನ್ನು ನಡೆಯಿಸುತ್ತಾ ನಿಂತು ಬಿಟ್ಟೆನು. ಶಿಶುಪಾಲನ ಪಕ್ಷದಲ್ಲಿ ಸೇರಿರುವ ರಾಜರುಗಳು ನನ್ನ ಪಟ್ಟಣವನ್ನು ನಾಶ ಮಾಡಬಹುದು" ಎಂದು ಹೇಳಿದನು. ಸಾಲ್ವನ ವಿಚಾರವನ್ನೂ "ಸೌಭ" ಎಂಬ ವಿಮಾನದ ವಿಚಾರವನ್ನೂ ನಾರದರಿಂದ ತಿಳಿದನು. ತನ್ನ ರಥವನ್ನು ದ್ವಾರಕಾಪಟ್ಟಣಕ್ಕೆ ಅಭಿಮುಖವಾಗಿ ಹೊರಡಿಸುವಂತೆ ದಾರುಕನಿಗೆ ಆಜ್ಞಾಪಿಸಿದನು. ಕೆಲವು ನಿಮಿಷಗಳಲ್ಲಿ ರಥವು ದ್ವಾರಕಾಪಟ್ಟಣವನ್ನು ಸಮೀಪಿಸಿತು.

ಸಾಲ್ವನು ಶ್ರೀಕೃಷ್ಣದೇವನನ್ನು ನೋಡಿದನು. ಅವನ ಮಾಯೆಗಳೆಲ್ಲವೂ ನಷ್ಟವಾದವು. ಅವನ ಸೈನ್ಯವೂ ನಷ್ಟವಾಯಿತು. ತನ್ನಲ್ಲಿದ್ದ ಒಂದು ಶಕ್ತ್ಯಾಯುಧವನ್ನು ಶ್ರೀಕೃಷ್ಣದೇವನ ಮೇಲೆ ಪ್ರಯೋಗಿಸಿದನು. ಆ ಶಕ್ತ್ಯಾಯುಧವು ಶ್ರೀಕೃಷ್ಣದೇವನ ಎಡಕೈಗೆ ತಗಲಿತು. ಕೂಡಲೇ ಶಾರ್ಙ್ಗ ಧನುಸ್ಸು ಕೆಳಗೆ ಬಿತ್ತು. ಇದನ್ನು ನೋಡುತ್ತಿದ್ದ ಸರ್ವರಿಗೂ ಆಶ್ಚರ್ಯವಾಯಿತು.

ಸಾಲ್ವನು ಗಟ್ಟಿಯಾಗಿ ಹೇಳಿದನು. "ಎಲೋ ಮೂರ್ಖನೇ, ನನ್ನ ಸ್ನೇಹಿತನಾದ ಶಿಶುಪಾಲನ ಪತ್ನಿಯನ್ನು ಸರ್ವ ರಾಜರುಗಳ ಮಧ್ಯದಲ್ಲಿ ಅಪಹರಿಸಿದಿ. ಅವನನ್ನು ಸಭೆಯ ಮಧ್ಯದಲ್ಲಿ ಸಂಹರಿಸಿದಿ. "ನಿನಗೆ ಪರಾಜಯವೇ ಇಲ್ಲ" ಎಂಬ ದುರಹಂಕಾರದಿಂದ ಯುಕ್ತನಾಗಿರುವಿ. ನನ್ನ ಮುಂದೆ ಒಂದು ನಿಮಿಷಗಳ ವರೆಗೆ ಇದ್ದರೆ ನಿನ್ನನ್ನು ಯಮಲೋಕಕ್ಕೆ ಕಳುಹಿಸುವೆನು" ಎಂದು ಬೊಗಳಿದನು.

"ಎಲೋ ದಡ್ಡನೇ, ವ್ಯರ್ಥವಾಗಿ ಬೊಗಳುತ್ತಿರುವಿ. ನಿನ್ನ ಸಮೀಪದಲ್ಲಿರುವ ಮೃತ್ಯುವನ್ನು ನೋಡಲಿಲ್ಲ. ಶೂರರು ಅಧಿಕವಾಗಿ ಮಾತಾಡುವುದಿಲ್ಲ. ಪೌರುಷವನ್ನು ತೋರಿಸುವರು" ಎಂದು ಹೇಳುತ್ತಾ ಶ್ರೀಕೃಷ್ಣದೇವನು ಗದೆಯಿಂದ ಅವನ ಎದೆಗೆ ಹೊಡೆದನು. ರಕ್ತವನ್ನು ಬಾಯಿಯಿಂದ ಕಾರುತ್ತಾ ಕೆಳಗೆ ಬಿದ್ದನು. ಅದೇ ಸಮಯವನ್ನು ನೋಡಿ ಸಾಲ್ವನು ಅಂತರ್ಹಿತನಾದನು. ಒಂದು ಮುಹೂರ್ತದೊಳಗೆ ಒಬ್ಬ ಪುರುಷನು ಅಲ್ಲಿಗೆ ಬಂದನು. ಅಳುತ್ತಾ ಒಂದು ತಲೆಯನ್ನು ಕೊಟ್ಟನು. "ಕೃಷ್ಣ, ಕೃಷ್ಣ ನಿನ್ನ ತಾಯಿಯು ನನ್ನನ್ನು ನಿನ್ನಲ್ಲಿಗೆ ಕಳುಹಿಸಿರುವಳು. "ನಿನ್ನ ತಂದೆಯನ್ನು ಕೊಲೆಗಾರನು ಪಶುವನ್ನು ಬಲಾತ್ಕಾರದಿಂದ ಎತ್ತಿಕೊಂಡು ಹೋದಂತೆ ಸಾಲ್ವನು ಎತ್ತಿಕೊಂಡು ಹೋದನು."

ಈ ಮಾತುಗಳನ್ನು ಶ್ರೀಕೃಷ್ಣದೇವನ ಮುಂದೆ ತಿಳಿಸಿದನು. "ಬಲರಾಮನು ಮಹಾಬಲಿಷ್ಠನು. ದೇವತೆಗಳಿಂದಲೂ ದೈತ್ಯರಿಂದಲೂ ಅವನನ್ನು ಜಯಿಸಲು ಸಾಧ್ಯವಿಲ್ಲ. ಅಂತಹ ಬಲರಾಮನನ್ನು ಜಯಿಸದೆ ಅಲ್ಪನಾದ ಸಾಲ್ವನು ಹೇಗೆ ಎತ್ತಿಕೊಂಡು ಹೋದನು. ನನ್ನ ಹಣೆಬರಹವು ಬಲಿಷ್ಠವಾಗಿದೆ" ಎಂದು ಹೇಳುತ್ತಾ ಮನುಷ್ಯರಂತೆ ಅಳಲು ಆರಂಭಿಸಿದನು. ಕೆಲವು ನಿಮಿಷಗಳಲ್ಲಿ ವಸುದೇವನನ್ನು ಎತ್ತಿಕೊಂಡು ಸಾಲ್ವನು ಅಲ್ಲಿಗೆ

ಬಂದನು. ಶ್ರೀಕೃಷ್ಣದೇವನನ್ನು ನೋಡಿ, "ಎಲೋ ಕೃಷ್ಣಾ, ನೀನು ಯಾವನಿಗಾಗಿ ಬದುಕಿದ್ದೀಯೋ ಆ ವಸುದೇವನನ್ನು ಈಗ ಸಂಹರಿಸುವೆನು" ಎಂದು ಹೇಳುತ್ತಾ ತನ್ನ ಖಡ್ಗದಿಂದ ವಸುದೇವನ ತಲೆಯನ್ನು ಕಡಿದನು. ಆಕಾಶದಲ್ಲಿರುವ "ಸೌಭ" ಎಂಬ ವಿಮಾನದಲ್ಲಿ ಏರಿದನು.

ಸ್ವಲ್ಪ ಸಮಯದಲ್ಲಿ ಯಾರೂ ಕಾಣಿಸಲಿಲ್ಲ. ಶ್ರೀಕೃಷ್ಣದೇವನು ಇದೆಲ್ಲವೂ ಸಾಲ್ವನ ಮಾಯೆಯೆಂದು ತಿಳಿದನು. "ಸೌಭ" ಎಂಬ ವಿಮಾನದಲ್ಲಿದ್ದ ಸಾಲ್ವನನ್ನು ಸಂಹರಿಸಬೇಕೆಂದು ತೀರ್ಮಾನಿಸಿದನು. ಆಗ ಆಕಾಶದಲ್ಲಿದ್ದ ದೇವತೆಗಳು ಹೇಳುತ್ತಿರುವ ಅಶರೀರವಾಣಿಯನ್ನು ಕೇಳಿದನು. "ಶೋಕ, ಮೋಹ ಮುಂತಾದ ದೋಷಗಳನ್ನು ಶ್ರೀಕೃಷ್ಣದೇವನು ತೋರಿಸಿರುವನು. ಜ್ಞಾನಪೂರ್ಣನಾಗಿರುವ ಅವನಿಗೆ ಶೋಕ ಮತ್ತು ಮೋಹಗಳೆಲ್ಲಿ?" ಎಂದು ಆ ಅಶರೀರವಾಣಿಯಿಂದ ತಿಳಿಯಿತು. ಶ್ರೀಕೃಷ್ಣದೇವನು ತನ್ನ ಗದೆಯಿಂದ "ಸೌಭ" ಎಂಬ ವಿಮಾನವನ್ನೂ ಸಾಲ್ವನನ್ನೂ ಸಂಹರಿಸಿದನು. ದೇವತೆಗಳೆಲ್ಲರೂ ದೇವ ದುಂದುಭಿ ಧ್ವನಿಯಿಂದ ಸಂತೋಷವನ್ನು ವ್ಯಕ್ತಪಡಿಸಿದರು. ಅನಂತರದಲ್ಲಿ ಶ್ರೀಕೃಷ್ಣದೇವನು ದ್ವಾರಕಾಪಟ್ಟಣವನ್ನು ಪ್ರವೇಶಿಸಿದನು ॥೨೪॥

# ದುರ್ಯೋಧನನ ಮಾನಭಂಗ

ರಾಜಸೂಯಯಾಗಕ್ಕೆ ಬಂದಿದ್ದ ಭೀಷ್ಮರೇ ಮುಂತಾದವರೂ ಧೃತರಾಷ್ಟ್ರ ಮುಂತಾದವರೂ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿದರು. ವಿಚಿತ್ರ ರತ್ನಗಳಿಂದ ನಿರ್ಮಿತವಾಗಿರುವ, ಮತ್ತು ಸೂರ್ಯನಂತೆ ಹೊಳೆಯುತ್ತಿರುವ ಸಭಾಗೃಹದಲ್ಲಿ ಶ್ರೀಕೃಷ್ಣದೇವನಿಂದ ಸಹಿತನಾದ ಧರ್ಮರಾಜನು ಉತ್ತಮವಾದ ಆಸನದಲ್ಲಿ ಕುಳಿತನು. ರುಕ್ಮಿಣೀದೇವಿಯರು ಮುಂತಾದ ಶ್ರೀಕೃಷ್ಣದೇವನ ಪತ್ನಿಯರು ಶ್ರೀಕೃಷ್ಣದೇವನ ಪಾರ್ಶ್ವದಲ್ಲಿ ಕುಳಿತರು. ಅರ್ಜುನನ ಸಮೀಪದಲ್ಲಿ ನಕುಲ ಸಹದೇವರೂ ಧೃಷ್ಟದ್ಯುಮ್ನ ಮುಂತಾದವರೂ ಕುಳಿತರು. ಬಲರಾಮನೂ ಸಾತ್ಯಕಿಯೂ ಧರ್ಮರಾಜನ ಸಮೀಪದಲ್ಲಿ ಕುಳಿತರು. ಬ್ರಹ್ಮಸಭೆಯು ವಿಷ್ಣುವಿನಿಂದ ಶೋಭಿಸಿದಂತೆ ಆ ಸಭೆಯು ಆಗ ಅಧಿಕವಾಗಿ ಶೋಭಿಸಿತು. ಆಗ ಅಲ್ಲಿದ್ದ ಎಲ್ಲಾ ರಾಜರುಗಳೂ ವಿಚಿತ್ರವಾದ ಬಂಗಾರದ ಮಾಲೆಗಳಿಂದಲೂ ಶುಭಪೀತಾಂಬರಗಳಿಂದಲೂ ಪ್ರಕಾಶಿಸುತ್ತಿರುವ ಕಿರೀಟಕುಂಡಲಾದಿಗಳಿಂದಲೂ ಪ್ರಕಾಶಿಸಿದರು. ಪತ್ನೀಸಮೇತನಾದ ಅನಂತಸದ್ಗುಣಸಮುದ್ರನಾದ ಶ್ರೀಕೃಷ್ಣದೇವನು ದೇವತೆಗಳ ಸಭೆಯಲ್ಲಿ ಪ್ರಕಾಶಿಸಿದಂತೆ ಅಧಿಕವಾಗಿ ಪ್ರಕಾಶಿಸಿದನು. ಶ್ರೀಕೃಷ್ಣದೇವನನ್ನು ಎಲ್ಲಾ ರಾಜರುಗಳೂ ಮಿತ್ರರುಗಳೂ ಪೂಜಿಸಿದರು.

ಆಗ ಅಲ್ಲಿಗೆ ಖಡ್ಗಧಾರಿಯಾದ ದುರ್ಯೋಧನನು ತನ್ನ ತಮ್ಮಂದಿರಿಂದ ಸಹಿತನಾಗಿ ಬಂದನು. ಅವನು ಬರುವ ಹಾದಿಯಲ್ಲಿ ಸಭಾಗೃಹದ ಬಾಗಿಲು ಇತ್ತು. ಆ ಬಾಗಿಲಿನ ಎರಡು ಪಕ್ಕಗಳಲ್ಲಿಯೂ ಇಂದ್ರನೀಲಮಣಿಯ ಪ್ರಕಾಶದಿಂದ ಕಣ್ಣು ಕುಕ್ಕುವಂತಿತ್ತು. ಬಾಗಿಲು ತಿಳಿಯಲಿಲ್ಲ. ಬಾಗಿಲು ಇಲ್ಲವೆಂದು ಭ್ರಮಿಸಿದನು. ಆ ಬಾಗಿಲಿನ ಒಳಗೆ ಸ್ಫಟಿಕಮಣಿಯಿಂದ ನಿರ್ಮಿತವಾದ ಗೋಡೆಯಿತ್ತು. ಒಳಗಿರುವ ಸರ್ವರಿಗೂ ತಿಳಿಯುವಂತೆ ಆ ಸ್ಫಟಿಕಮಣಿಮಯವಾದ ಗೋಡೆಯನ್ನು ಚುಂಬಿಸಿದನು. ನಕುಲ ಸಹದೇವರು ಆ ದುರ್ಯೋಧನನ ಎರಡು ಕೈಗಳನ್ನು ಹಿಡಿದುಕೊಂಡವರಾಗಿ ಧರ್ಮರಾಜನ ಪಾರ್ಶ್ವದಲ್ಲಿ ಕುಳ್ಳಿರಿಸಿದರು. ಅಲ್ಲಿ ಕುಳಿತ ದುರ್ಯೋಧನನು ಧರ್ಮರಾಜಾದಿಗಳಲ್ಲಿರುವ ಈ ಸಂಪತ್ತನ್ನು ನೋಡಿ ಸಹಿಸದೆ ಅಲ್ಲಿಂದ ಇನ್ನೊಂದು ಕಡೆಗೆ ಹೋದನು. ಅದು

ಇಂದ್ರನೀಲಮಣಿಮಯವಾದ ಪ್ರದೇಶವಾಗಿತ್ತು. ಮಧ್ಯ ಮಧ್ಯದಲ್ಲಿ ಕೆಂಪು ರತ್ನಗಳಿಂದ ನಿರ್ಮಿತಗಳಾದ ಕಮಲಗಳು ಕಾಣಿಸಿದವು. ಆ ಪ್ರದೇಶವನ್ನು ನೋಡಿದನು. ಪ್ರದೇಶವನ್ನು ಸರೋವರದ ತೀರವೆಂದು ಭ್ರಮಿಸಿದನು. ಬಟ್ಟೆಗಳನ್ನು ಎತ್ತಿ ಹಿಡಿಯುತ್ತಾ ನಡೆದನು. ಅಲ್ಲಿಂದ ಇನ್ನೊಂದು ಸ್ಥಳಕ್ಕೆ ಹೋದನು. ಆ ಪ್ರದೇಶವು ರತ್ನಗಳ ಕಾಂತಿಯಿಂದ ಕಣ್ಣುಗಳು ಕಾಣದಂತೆ ಮಾಡುವ ಸರೋವರವಾಗಿತ್ತು. ಅಲ್ಲಿ ಸರೋವರದಲ್ಲಿ ಧೊಪ್ಪನೆ ಬಿದ್ದನು. ಅವನೂ ತಮ್ಮಂದಿರೂ ಆ ಸರೋವರದಲ್ಲಿ ಮುಳುಗಿದರು.

ಇದನ್ನು ನೋಡಿದ ಶ್ರೀಭೀಮಸೇನದೇವರು ಗಟ್ಟಿಯಾದ ಧ್ವನಿಯಿಂದ ನಕ್ಕರು. ದ್ರೌಪದೀದೇವಿಯರೂ ತನ್ನ ಪತಿಯ ಅಭಿಪ್ರಾಯವನ್ನು ತಿಳಿದು ಗಟ್ಟಿಯಾಗಿ ನಕ್ಕರು. ಹಾಗೆಯೇ ಶ್ರೀಕೃಷ್ಣದೇವನ ಪತ್ನಿಯರೂ ಶ್ರೀಕೃಷ್ಣದೇವನ ಅಭಿಪ್ರಾಯವನ್ನು ತಿಳಿದ ಇತರರೂ ಗಟ್ಟಿಯಾಗಿ ನಕ್ಕರು. ಭೂಭಾರಭೂತರಾದ ದೈತ್ಯರ ನಿಗ್ರಹಕ್ಕಾಗಿ ದುರ್ಯೋಧನನನ್ನು ಅಪಹಾಸ ಮಾಡುವುದು ಶ್ರೀಕೃಷ್ಣದೇವನಿಗೆ ಸಮ್ಮತವಲ್ಲವೇ? ಶ್ರೀಕೃಷ್ಣದೇವನು ಮುಗುಳುನಗೆಯಿಂದ ನಗುತ್ತಾ ಶ್ರೀಭೀಮಸೇನದೇವರ ಮುಖವನ್ನು ನೋಡಿದನು. ಬೇರೆ ಮಾತುಗಳನ್ನು ಆಡಲಿಲ್ಲ. ಧರ್ಮರಾಜನು ನಗುತ್ತಿರುವ ಶ್ರೀಭೀಮಸೇನಾದಿಗಳನ್ನು ತಡೆದನು. ಒಣಗಿದ ಬಟ್ಟೆಗಳನ್ನೂ ಮಾಲೆಗಳನ್ನೂ ಆಭರಣಗಳನ್ನೂ ಕಳುಹಿಸಿದನು. ದ್ರೌಪದೀದೇವಿಯಲ್ಲಿಯೂ ಶ್ರೀಭೀಮಸೇನದೇವರಲ್ಲಿಯೂ ದುರ್ಯೋಧನನಿಗೆ ನಗುವುದರಿಂದ ಏರ್ಪಟ್ಟ ಕೋಪವನ್ನು ಅಧಿಕವಾಗುವಂತೆ ಮಾಡಿದನು.

ಲಜ್ಜೆಯಿಂದ ಯುಕ್ತನಾದ ದುರ್ಯೋಧನನು ಧರ್ಮರಾಜನಿಂದ ಕಳುಹಿಸಲ್ಪಟ್ಟ ವಸ್ತ್ರ ಮುಂತಾದವುಗಳನ್ನು ಸ್ವೀಕರಿಸಲಿಲ್ಲ. ತುಂಬಾ ಕೋಪದಿಂದ ಸಭಾಗೃಹವನ್ನು ಬಿಟ್ಟು ಹೊರಗೆ ಬಂದನು. ಮಾರ್ಗದಲ್ಲಿ ಶಕುನಿಯನ್ನು ಕುರಿತು ಹೇಳಿದನು. "ಎಲೋ ಮಾವನೇ, ದ್ರೌಪದಿಯೂ ಭೀಮನೂ ಕೃಷ್ಣನ ಮುಂದೆ ನನ್ನನ್ನು ಅಪಹಾಸ ಮಾಡಿರುವರು. ಅವರಿಬ್ಬರಿಗೂ ಸಂತಾಪವು ಬರುವಂತೆ ಮಾಡದೆ ಜೀವಿಸಲಾರೆನು. ನನಗೆ ಶಕ್ತಿಯು ಇದ್ದಿದ್ದರೆ ಭೀಮಸೇನ್ನು ಆಗಲೇ ಕೊಲ್ಲುತ್ತಿದ್ದೆನು. ಶ್ರೀಕೃಷ್ಣನಿಗೆ ಅಗ್ರಪೂಜೆಯನ್ನು ನಿಲ್ಲಿಸುತ್ತಿದ್ದೆನು. ಈ ವಿಷಯದಲ್ಲಿ ಸಂಶಯವು ಬೇಡ. ಎಲ್ಲಾ ರಾಜರುಗಳೂ ವೈಶ್ಯರಂತೆ ಪಾಂಡವರಿಗೆ ಕಾಣಿಕೆಗಳನ್ನು ಕೊಡುತ್ತಿರುವರು. ಇಂತಹ ಪಾಂಡವರ ಐಶ್ವರ್ಯವನ್ನು ನೋಡಿದವನು ಬದುಕಲು ಇಚ್ಛಿಸುವನೇ?

ದುರ್ಯೋಧನನ ಈ ಮಾತುಗಳನ್ನು ಕೇಳಿದ ಶಕುನಿಯು ಪಾಂಡವರಲ್ಲಿ ವೈರವನ್ನು ದೃಢಪಡಿಸುವುದಕ್ಕೆ "ಪಾಂಡವರು ನಿನಗಿಂತ ಅಧಿಕವಾದ ಗುಣಗಳಿಂದ ಯುಕ್ತರಾಗಿರುವರು. ಬಲಿಷ್ಠರು ಮತ್ತು ಅಣ್ಣಂದಿರು. ಅವರ ಜೊತೆಯಲ್ಲಿ ವೈರವನ್ನು ಮಾಡಿದ್ದರಿಂದ ಪ್ರಯೋಜನವೇನು? ಅವರನ್ನು ಅನುಸರಿಸು" ಎಂದನು.

ಈ ಮಾತುಗಳನ್ನು ಕೇಳಿದ ದುರ್ಯೋಧನನು ಅಧಿಕ ಕೋಪದಿಂದ ಯುಕ್ತನಾದನು. "ಅವರ ಎಲ್ಲಾ ಸಂಪತ್ತೂ ನನ್ನಲ್ಲಿ ಬಂದು ಸೇರದಿದ್ದರೆ ಖಂಡಿತವಾಗಿ ನಾನು ಬದುಕಲಾರೆನು. ಇದು ಸತ್ಯವಾದ ಮಾತು. ದೇವೇಂದ್ರನೂ ಸಹ ಯುದ್ಧದಲ್ಲಿ ಅವರನ್ನು ಜಯಿಸಲು ಶಕ್ತನಾಗಲಾರನು ಮನುಷ್ಯನು ಶಕ್ತನಾಗಲಾರನು ಎಂದು ಹೇಳಬೇಕಾದ್ದೇನಿದೆ? ಆದ್ದರಿಂದ ಪಾಂಡವರನ್ನು ಭುಜಬಲದಿಂದ ಜಯಿಸಲು ನಾನು ಶಕ್ತನಾಗಲಾರೆನು.

ಈ ಮಾತುಗಳನ್ನು ಕೇಳಿದ ಮಹಾಪಾಪಿಯಾದ ಶಕುನಿಯು "ಪಾಂಡವರಲ್ಲಿರುವ ಸಂಪತ್ತನ್ನಲ್ಲವೇ ನೀನು

ಅಪೇಕ್ಷಿಸುತ್ತಿದ್ದೀ. ಅದನ್ನು ಚದುರಂಗ ಆಟವನ್ನು ಆಡುತ್ತಾ ಕ್ಲೇಶವಿಲ್ಲದೆ ನಿನ್ನಲ್ಲಿಗೆ ಬಂದು ಸೇರುವಂತೆ ಮಾಡುವೆನು" ಎಂದನು.

ದುರ್ಯೋಧನನು ಈ ಮಾತುಗಳನ್ನು ಕೇಳಿ ಪ್ರಸನ್ನನಾದನು. ದುರ್ಯೋಧನನೂ ಶಕುನಿಯೂ ಒಟ್ಟುಗೂಡಿದವರಾಗಿ ಧೃತರಾಷ್ಟ್ರನಲ್ಲಿಗೆ ಬಂದರು. "ದ್ವಾಪರ" ಎಂಬ ದೈತ್ಯನಅವತಾರವೂ, ಮಹಾಪಾಪಿಷ್ಠನೂ ನಾಸ್ತಿಕ್ಯಕ್ಕೆ ಅಭಿಮಾನಿಯೂ ಆಗಿರುವ ಶಕುನಿಯು ಧೃತರಾಷ್ಟ್ರನನ್ನು ನೋಡಿ ಹೇಳಿದನು. ಆಗ ಧೃತರಾಷ್ಟ್ರನ ಸ್ವಾಭಾವಿಕವಾಗಿರುವ ವರ್ಣವು ಬದಲಾವಣೆಯಾಗಿತ್ತು. ಕಾಮಿಲಾರೋಗದಿಂದ ಪೀಡಿತನಾದವನಂತೆ ಕಾಣಿಸಿದನು. ಅವನನ್ನು ನೋಡಿ ಮಾರ್ಗದಲ್ಲಿ ಶಕುನಿಯೂ ದುರ್ಯೋಧನನ್ನೂ ಯೋಚಿಸಿದ ವಿಷಯವನ್ನು ತಿಳಿಸಿದನು.

ಈ ಮಾತುಗಳನ್ನು ಕೇಳಿದ ಕೂಡಲೇ ಈ ಕಾರ್ಯವು ಧರ್ಮಕ್ಕೆ ವಿರೋಧಿಯೆಂದೂ ಬುಡಸಹಿತವಾಗಿ ತನ್ನ ನಾಶಕ್ಕೆ ಕಾರಣವೆಂದೂ ಆದ್ದರಿಂದಲೇ ತನಗೆ ಇಷ್ಟವಿಲ್ಲವೆಂದೂ ಪಾಂಡವರು ತಮ್ಮ ಭುಜಬಲದಿಂದ ಸಂಪಾದಿಸಿದ ಮಹಾ ಸಂಪತ್ತುಗಳಿಂದ ಯುಕ್ತರಾಗಿರುವರೆಂದೂ ದುರ್ಯೋಧನನು ಬೇಕಾದರೆ ತನ್ನ ಭುಜಗಳ ಬಲದಿಂದ ದಿಕ್ಕುಗಳನ್ನು ಜಯಿಸಿ ಶ್ರೇಷ್ಠ ಯಜ್ಞಗಳನ್ನು ಮಾಡಲಿ ಎಂದೂ, ಗುಣವಂತರಲ್ಲಿ ಅತ್ಯುತ್ತಮರಾದ ಪಾಂಡವರ ಜೊತೆಯಲ್ಲಿ ಸ್ಪರ್ಧೆಯನ್ನು ಮಾಡಕೂಡದೆಂದೂ ಹೇಳಿದನು. ಅದರಲ್ಲಿಯೂ ಸಹೋದರರು ಅದರಲ್ಲಿಯೂ ಪೌರುಷದಲ್ಲಿ ಅತಿ ಶ್ರೇಷ್ಠರಾದ ಪಾಂಡವರಲ್ಲಿ ಸ್ಪರ್ಧೆಯು ಬೇಡವೆಂದು ಹೇಳಿದನು. ಈ ಮಾತುಗಳನ್ನು ಕೇಳಿದ ದುರ್ಯೋಧನನು "ಪಾಂಡವರ ಈ ಸಂಪತ್ತನ್ನು ಚದುರಂಗ ಆಟದಿಂದ ಕಿತ್ತುಕೊಳ್ಳಲು ನಿನಗೆ ಇಷ್ಟವಿಲ್ಲದಿದ್ದರೆ ನಾನು ಈ ಕ್ಷಣದಲ್ಲಿ ಸಾಯುವೆನು. ಪಾಂಡವರನ್ನು ಆಟಕ್ಕಾಗಿ ಈ ಕ್ಷಣದಲ್ಲಿ ಇಲ್ಲಿಗೆ ಕರಿಸು," ಈ ಚದುರಂಗ ಆಟವನ್ನು ಆಡಿ ಪಾಂಡವರನ್ನು ಜಯಿಸಿ ಅವರ ಸಂಪತ್ತನ್ನು ಅಪಹರಿಸುವುದರಲ್ಲಿ ಯಾವ ಅಧರ್ಮವೂ ಇಲ್ಲ. ಬ್ರಾಹ್ಮಣರು ವೇದಗಳಿಂದ ಜೀವಿಸಬೇಕು. ಕ್ಷತ್ರಿಯರು ಶಸ್ತ್ರಗಳಿಂದ ಜೀವಿಸಬೇಕು. ಶತ್ರುವು ಯಾವುದರಿಂದ ಭೇದಿಸಲ್ಪಡುವನೋ ಅದು ಶಸ್ತ್ರವೆನಿಸುತ್ತದೆ. ಈ ದ್ಯೂತವೂ ನಮ್ಮಜನ್ಮಶತ್ರುಗಳಾದ ಪಾಂಡವರ ವಿನಾಶಕ್ಕೆ ಕಾರಣವಾದುದು. ಆದ್ದರಿಂದಲೇ ಶಸ್ತ್ರವೆನಿಸುತ್ತದೆ. ಇದನ್ನು ಬಿಟ್ಟು ಬೇರೆ ಶಸ್ತ್ರಗಳಿಲ್ಲ. ಆದ್ದರಿಂದ ಕ್ಷತ್ರಿಯರಿಗೆ ದ್ಯೂತವು ಸ್ವಧರ್ಮವೇ ಆಗುತ್ತದೆ. ಈ ದ್ಯೂತದಿಂದ ನಿನಗೂ ಮಹಾಫಲವು ಏರ್ಪಡುತ್ತದೆ" ಎಂದು ಹೇಳಿದನು.

ಈ ಮಾತುಗಳನ್ನು ಕೇಳಿದ ಧೃತರಾಷ್ಟ್ರನು "ನನಗೆ ಆ ಫಲವು ಬೇಡ. ನಿನಗೇ ಇರಲಿ" ಎಂದನು. ಇಷ್ಟು ಹೇಳುತ್ತಿರುವ ಧೃತರಾಷ್ಟ್ರನಿಗೆ ಆ ಕಾಲದಲ್ಲಿ ಕಲಿಯ ಆವೇಶವು ಏರ್ಪಟ್ಟಿತು. ಕಲಿಯ ಆವೇಶದಿಂದಲೂ ಪಿತೃಸ್ನೇಹದಿಂದಲೂ ವಿದುರನನ್ನು ಕಳುಹಿಸಿ ಅವನ ಮೂಲಕವಾಗಿ ಪಾಂಡವರನ್ನು ಕರೆಯಿಸಿದನು.

ತಂದೆಯಲ್ಲಿ ಮೊದಲು ಪ್ರವೇಶವೆಂದೂ ತಾಯಿಯಲ್ಲಿ ಅನಂತರದಲ್ಲಿ ಪ್ರವೇಶವೆಂದೂ ನಿಯಮವಿದೆ. ಅದರಂತೆ ದುರ್ಯೋಧನನಲ್ಲಿ ಧೃತರಾಷ್ಟ್ರನ ಪುತ್ರತ್ವವು ಸಿದ್ಧಿಸುವುದಕ್ಕಾಗಿ ಕಲಿಯು ಧೃತರಾಷ್ಟ್ರನಲ್ಲಿ ಮೊದಲು ಪ್ರವೇಶಿಸಿದನು. ಆ ದಿನದಿಂದ ಆರಂಭಿಸಿ ಕಲಿಯು ಧೃತರಾಷ್ಟ್ರನನ್ನು ಬಿಟ್ಟು ಹೊರಗೆ ಬರಲೇ ಇಲ್ಲ. ಒಂದು ಅಂಶದಿಂದ ಧೃತರಾಷ್ಟ್ರನಲ್ಲಿಯೇ ಯಾವಾಗಲೂ ಈ ಕಲಿಯು ಇದ್ದನು. ಆದ್ದರಿಂದ ಆ ಕಾಲದಲ್ಲಿ ಧೃತರಾಷ್ಟ್ರನ

ಮನಸ್ಸು ಪಾಪದಿಂದ ಯುಕ್ತವಾಯಿತು.

ವಿದುರನು ಧೃತರಾಷ್ಟ್ರನ ಮಾತುಗಳನ್ನು ಕೇಳಿದನು. "ಅಣ್ಣಾ, ದ್ಯೂತವನ್ನು ಮಾಡುವುದು ಮಹಾಪಾಪಕಾರ್ಯವಾಗಿದೆ. ಕುಲನಾಶವೂ ಈ ವ್ಯಾಪಾರದಿಂದ ಏರ್ಪಡುತ್ತದೆ. ಈ ವಿಷಯದಲ್ಲಿ ನಿನಗೆ ಸಂಶಯವು ಬೇಡ" ಎಂದು ಹೇಳಿದನು. "ಈ ದ್ಯೂತದಲ್ಲಿ ಪಾಂಡವರಿಗೂ ದುರ್ಯೋಧನಾದಿಗಳಿಗೂ ಕಲಹವು ಏರ್ಪಡುವುದಾಗಿದ್ದರೆ ಆ ಕಲಹವನ್ನು ನಾವು ನಿಲ್ಲಿಸೋಣ. ಒಂದೇ ಕಡೆಯಲ್ಲಿ ಸೇರಿ ಆಟವಾಡುತ್ತಿರುವ ಕುಂತಿಯ ಮಕ್ಕಳನ್ನೂ ದುರ್ಯೋಧನನೇ ಮೊದಲಾದವರನ್ನೂ ನೋಡಬೇಕೆಂದೂ ಅಪೇಕ್ಷಿಸುವೆನು. ಆದ್ದರಿಂದ ತಡಮಾಡದೆ ಶೀಘ್ರವಾಗಿ ಪಾಂಡವರನ್ನು ಕರೆದುಕೊಂಡು ಬಾ" ಎಂದು ಬಲಾತ್ಕಾರದಿಂದ ಹೇಳಿದನು. ವಿದುರನು ಪಾಂಡವರಲ್ಲಿಗೆ ಬಂದನು.

ಅದೇ ಸಮಯದಲ್ಲಿ ನಾರದರು ಶ್ರೀಕೃಷ್ಣದೇವನನ್ನು ನೋಡುವುದಕ್ಕಾಗಿ ಇಂದ್ರಪ್ರಸ್ಥನಗರಕ್ಕೆ ಬಂದರು. ಅವರನ್ನು ನೋಡಿದ ಶ್ರೀಕೃಷ್ಣದೇವನು "ರಾಜರುಗಳ ಮಧ್ಯದಲ್ಲಿ ಮಹಾಪ್ರಯತ್ನಶಾಲಿಯಾಗಿರುವರು ಯಾರು? ಎಂದು ಕೇಳಿದನು. ಅದಕ್ಕೆ ನಾರದರು "ಸೌಭ" ಅನೇಕ ವರ್ಷಗಳ ವರೆಗೆ ತಪಸ್ಸನ್ನು ಮಾಡಿದನು. ಸಕಲ ಯಾದವರನ್ನೂ ಜಯಿಸಬೇಕೆಂದು ರುದ್ರನಿಂದ ವರವನ್ನು ಪಡೆದನು. ಆ ಸಾಲ್ವನು ತಪಸ್ಸಿನಿಂದ ಹಿಂದಿರುಗಿ ಬಂದನು. ಆಗ ಜರಾಸಂಧನು ಕೊಲ್ಲಲ್ಪಟ್ಟ ಸಮಾಚಾರವನ್ನೂ, ಪಾಂಡವರು ದಿಗ್ವಿಜಯವನ್ನು ಮಾಡಿದ ಸಮಾಚಾರವನ್ನೂ ಧರ್ಮರಾಜನು ರಾಜಸೂಯಯಾಗವನ್ನು ಮಾಡಿದ ಸಮಾಚಾರವನ್ನೂ, ಶಿಶುಪಾಲನನ್ನು ರಾಜಸೂಯಯಾಗದ ಮಧ್ಯದಲ್ಲಿ ಶ್ರೀಕೃಷ್ಣದೇವನು ಸಂಹರಿಸಿದ ಸಮಾಚಾರವನ್ನೂ ಕೇಳಿ ತಿಳಿದನು. ಆ ಸಮಾಚಾರವನ್ನು ಕೇಳಿದ ದಿನದಿಂದ ಸಕಲ ಯಾದವರನ್ನೂ ಎದುರಿಸಿ ಶೀಘ್ರದಲ್ಲಿಯೇ ಯುದ್ಧಕ್ಕಾಗಿ ಪ್ರಯತ್ನವನ್ನು ಮಾಡುವುದಾಗಿ ತಿಳಿಯುತ್ತದೆ" ಎಂದು ಹೇಳಿದರು.

ಈ ಮಾತುಗಳನ್ನು ಕೇಳುತ್ತಿರುವ ಶ್ರೀಕೃಷ್ಣದೇವನ ಮುಖವನ್ನು ಧರ್ಮರಾಜನು ನೋಡಿದನು. "ಇರಲಿ" ಎಂದು ಹೇಳುತ್ತಾ ಪ್ರದ್ಯುಮ್ನ ಮುಂತಾದ ಯಾದವರನ್ನು ದ್ವಾರಕಾಪಟ್ಟಣಕ್ಕೆ ಕಳುಹಿಸಿದನು. ಕೆಲವು ದಿನಗಳ ಅನಂತರದಲ್ಲಿ ತಾನು ಹೋದನು.

ಶ್ರೀಕೃಷ್ಣದೇವನು ಇಲ್ಲದಿರುವ ಸಮಯದಲ್ಲಿ ಧರ್ಮರಾಜನನ್ನು ವಿದುರನು ಕರೆದನು. ಆಗ ಅವನ ಸಹೋದರರೂ ದ್ರೌಪದೀದೇವಿಯೂ ತಡೆದರೂ ಸಹ ಧರ್ಮರಾಜನು ತನ್ನ ತಾಯಿಯಿಂದಲೂ ತಮ್ಮಂದಿರಿಂದಲೂ ದ್ರೌಪದಿಯಿಂದಲೂ ಸಹಿತನಾಗಿ ಅತಿವೇಗವಾಗಿ ಹೊರಟನು. ತನ್ನ ಅಣ್ಣನ ಆಜ್ಞೆಯಿಂದ ದ್ಯೂತಕ್ಕಾಗಿ ಧರ್ಮರಾಜನನ್ನು ಕರೆಯುತ್ತಿದ್ದರೂ ವಿದುರನು ದ್ಯೂತದಲ್ಲಿ ಏರ್ಪಡಬಹುದಾದ ಅಸಂಖ್ಯ ದೋಷಗಳನ್ನು ಹೇಳುತ್ತಾ "ಬರಕೂಡದು" ಎಂದು ಹೇಳಿದನು. ಇಷ್ಟು ದೋಷಗಳಿವೆ. ಆದರೂ ನಿನ್ನ ತಂದೆಯ ಮಾತುಗಳನ್ನು ಗೌರವಿಸಬೇಕಾದುದು ಮುಖ್ಯ ಕರ್ತವ್ಯವಾಗಿದೆ. ಆದ್ದರಿಂದ ಈ ದೋಷಗಳನ್ನೂ ಪಿತೃವಾಕ್ಯಪಾಲನೆಯ ಆವಶ್ಯಕತೆಯನ್ನೂ ಯೋಚಿಸಿ ಯೋಗ್ಯವಾದ ಕಾರ್ಯವನ್ನು ಮಾಡು ಎಂದು ವಿದುರನು ಹೇಳಿದರೂ ಕಲಿಪ್ರವೇಶದಿಂದ ಧರ್ಮರಾಜನು ಧೃತರಾಷ್ಟ್ರನಲ್ಲಿಗೆ ಬಂದನು. ಈ ಧರ್ಮರಾಜನು "ನನ್ನನ್ನು ದ್ಯೂತವನ್ನು ಮಾಡುವುದಕ್ಕಾಗಿ ಕರೆದರೆ ಯಾರು ಎಷ್ಟು ಬುದ್ಧಿವಾದವನ್ನು ಹೇಳಿ ತಡೆದರೂ, ಹೋಗದಿರಲಾರೆನು"

ಎಂದು ಕಲಿಪ್ರವೇಶದಿಂದ ಪ್ರತಿಜ್ಞೆಯನ್ನು ಹಿಂದೆಯೇ ಮಾಡಿದ್ದನು. ಧರ್ಮಾತ್ಮನಾದ ಈ ಧರ್ಮರಾಜನು ತನ್ನ ಪ್ರತಿಜ್ಞೆಯನ್ನು ರಕ್ಷಿಸುವುದಕ್ಕಾಗಿ ವಿದುರನು ಬುದ್ಧಿವಾದವನ್ನು ಹೇಳಿದರೂ ಹೊರಟನು. ಆದ್ದರಿಂದಲೇ ದ್ಯೂತವನ್ನು ಮಾಡುವವನಿಗೆ ಧರ್ಮವೇ ಇಲ್ಲ. ಅದರಲ್ಲಿಯೂ ಲೋಕಗುರುವೆನಿಸಿದ ಕ್ಷತ್ರಿಯನಿಗೆ ಧರ್ಮವು ಅಲ್ಲವೇ ಅಲ್ಲ ಎಂದು ಧರ್ಮರಾಜನು ತಿಳಿದಿದ್ದರೂ ದ್ಯೂತಕ್ಕಾಗಿ ಹೊರಟು ಹಸ್ತಿನಾವತಿಗೆ ಬಂದನು.

ದುರ್ಯೋಧನನು ಧರ್ಮರಾಜನನ್ನೂ ಭೀಮಾದಿಗಳನ್ನೂ ಅಂದು ರಾತ್ರಿಯಲ್ಲಿ ವಿಶೇಷವಾಗಿ ಗೌರವಿಸಿದನು. ಮರುದಿನ ಬೆಳಿಗ್ಗೆ ಪಾಂಡವರಿಂದ ಸಹಿತರಾಗಿರುವ ಭೀಷ್ಮ ಮುಂತಾದ ಸಕಲ ರಾಜರುಗಳೂ ಬಂದರು. ಧೃತರಾಷ್ಟ್ರನು ವಿದುರನಿಂದಲೂ ದುರ್ಯೋಧನ, ಕರ್ಣ, ಶಕುನಿ ಮುಂತಾದವರಿಂದಲೂ ಸಹಿತನಾಗಿ ಸಭಾಗೃಹಕ್ಕೆ ಬಂದರು. ಆಗ ಶಕುನಿಯು ಧರ್ಮರಾಜನನ್ನು ದ್ಯೂತಕ್ಕಾಗಿ ಕರೆದನು. ಆಗ ಶ್ರೀಭೀಮಸೇನದೇವರು, ಅರ್ಜುನ, ನಕುಲ, ಸಹದೇವ ಎಂದು ನಾಲ್ಕು ಧರ್ಮರಾಜನ ಸಹೋದರರನ್ನೂ, ಕುಂತೀದೇವಿಯನ್ನೂ, ದ್ರೌಪದೀದೇವಿಯನ್ನೂ ಈ ವಿದುರನನ್ನೂ ಹೀಗೆ ಏಳು ಜನರನ್ನು ಬಿಟ್ಟು ಉಳಿದಿರುವ ಭೀಷ್ಮ ಮುಂತಾದ ಸರ್ವರನ್ನೂ ಕಲಿಯು ಪ್ರವೇಶಿಸಿದನು. ಆದ್ದರಿಂದಲೇ ಕುಲನಾಶ ಕಾರ್ಯದಲ್ಲಿ ಪ್ರವೃತ್ತರಾಗಿರುವ ಧರ್ಮರಾಜ ಮುಂತಾದವರನ್ನು ತಡೆದು ನಿಲ್ಲಿಸುವುದಕ್ಕಾಗಿ ಯಾರೂ ಪ್ರವೃತ್ತರಾಗಲಿಲ್ಲ. ಭೀಮ ಮುಂತಾದವರೂ ವಿದುರನೂ ಅಡ್ಡಗಟ್ಟಿದರು. ಧರ್ಮರಾಜನು ಕಲಿಪ್ರವೇಶದಿಂದ ಎಲ್ಲಾ ವಸ್ತುಗಳನ್ನೂ ದ್ಯೂತದಲ್ಲಿ ಕಳೆದುಕೊಂಡನು. ಶಕುನಿಯು ಚದುರಂಗ ಆಟದ ಮರ್ಮವನ್ನು ತಿಳಿದವನು ಅವನು ಧರ್ಮರಾಜನನ್ನು ಸೋಲಿಸಿದನು. ನಕುಲನನ್ನು ಸೋಲಿಸುವ ಸಂದರ್ಭವು ಬಂತು. ಆಗ ಧರ್ಮರಾಜನು ನಕುಲನನ್ನು ಚದುರಂಗ ಆಟದಲ್ಲಿ ಪಣವಾಗಿ ಇಟ್ಟನು. ನಕುಲನನ್ನೂ ಶಕುನಿಯು ಸೋಲಿಸಿ ಗೆದ್ದನು. ಮುಂದೆ ಸಹದೇವನನ್ನು ಪಣವಾಗಿ ಇಟ್ಟನು. ಅವನನ್ನೂ ಚದುರಂಗ ಆಟದಲ್ಲಿ ಶಕುನಿಯು ಸೋಲಿಸಿದನು. ಅನಂತರದಲ್ಲಿ ಅರ್ಜುನ, ಶ್ರೀಭೀಮಸೇನದೇವರು, ದ್ರೌಪದೀದೇವಿಯರು ಇವರುಗಳನ್ನು ಧರ್ಮರಾಜನು ಕ್ರಮವಾಗಿ ಪಣವಾಗಿ ಇಟ್ಟನು. ಅವರನ್ನೂ ಶಕುನಿಯು ಸೋಲಿಸಿದನು.

ಆಗ ದುರ್ಯೋಧನನು ತನ್ನ ಸಾರಥಿಯನ್ನು ಕರೆದನು. "ಎಲೋ ಸಾರಥಿಯೇ ದ್ರೌಪದಿಯನ್ನು ಕರೆದು ಹೇಳು". "ನೀನು ಚದುರಂಗ ಆಟದಲ್ಲಿ ಸೋತಿರುವಿ. ನಿನ್ನ ಗಂಡಂದಿರಾಗಿರುವ ಭೀಮ ಮುಂತಾದವರು ಈಗ ನಿನಗೆ ಯಜಮಾನರಲ್ಲ. ದುರ್ಯೋಧನನ ಅಧೀನಳಾಗಿರುವಿ. ಎಲ್ಲಾ ರಾಜರುಗಳ ಸಭೆಗೆ ನೀನು ಬರಬೇಕು. ಈ ಸಭೆಯಲ್ಲಿರುವ ಸಕಲ ರಾಜರುಗಳೂ ನಿನ್ನನ್ನು ನೋಡಲಿ. ಬೇಗನೆ ಹೊರಡು." ಎಂದು ನನ್ನ ಆಜ್ಞೆಯನ್ನು ಈ ದ್ರೌಪದಿಗೆ ತಿಳಿಸು" ಎಂದು ಹೇಳಿದನು.

ಆ ಸಾರಥಿಯು ದ್ರೌಪದೀದೇವಿಯರ ಸಮೀಪಕ್ಕೆ ಬಂದನು. ದುರ್ಯೋಧನನ ಆಜ್ಞೆಯನ್ನು ತಿಳಿಸಿದನು. ಆದರೂ ಭೀಮಸೇನದೇವರ ಭಯದಿಂದ ನಡುಗುತ್ತಿದ್ದನು. "ನಾನು ಕುರುರಾಜರುಗಳ ಸಭೆಗೆ ಬರಲಾರೆನು" ಎಂದು ದ್ರೌಪದೀದೇವಿಯರು ಹೇಳಿದರು. ಭೀಮಸೇನದೇವರ ಭಯದಿಂದ ನಡುಗುತ್ತಿರುವ ಸಾರಥಿಯನ್ನು ದುರ್ಯೋಧನನು ನೋಡಿದನು. ಆ ಸಾರಥಿಯ ಪಕ್ಕದಲ್ಲಿ ನಿಂತಿರುವ ದುಃಶಾಸನನನ್ನು ನೋಡಿದನು. "ಎಲೋ ದುಃಶಾಸನಾ, ಈ ದ್ರೌಪದಿಯು ಕುರುರಾಜರುಗಳ ಸಭೆಗೆ ಬರಲಾರೆನೆಂದು ಹೇಳುತ್ತಿರುವಳು ಅವಳನ್ನು ಎಳೆದುಕೊಂಡು ಕುರುರಾಜರುಗಳ ಸಭೆಯ ಮಧ್ಯದಲ್ಲಿ ನಿಲ್ಲಿಸು" ಎಂದು ಆಜ್ಞಾಪಿಸಿದನು.

ಪಾಪಿಷ್ಠನಾದ ದುಃಶಾಸನನು ದ್ರೌಪದೀದೇವಿಯ ಸಮೀಪಕ್ಕೆ ಬಂದನು. ಆಗ ದ್ರೌಪದಿದೇವಿಯರು ರಜಸ್ವಲೆಯಾಗಿದ್ದರು. ಒಂದು ಸೀರೆಯನ್ನು ಉಟ್ಟುಕೊಂಡಿದ್ದರು. ದುಃಶಾಸನನು, ಗಾಂಧಾರಿದೇವಿಯರ ಅಂತಃಪುರವನ್ನು ಪ್ರವೇಶಿಸಿದನು. ದ್ರೌಪದೀದೇವಿಯರ ಜುಟ್ಟನ್ನು ಹಿಡಿದನು. ಭೀಷ್ಮಮುಂತಾದ ರಾಜರುಗಳ ಮುಂದೆ ತಂದು ನಿಲ್ಲಿಸಿದನು. ಆಗ ದ್ರೌಪದೀದೇವಿಯರು ಭೀಷ್ಮಮುಂತಾದವರನ್ನು ನೋಡಿದರು. "ಜೂಜು ಆಟವು ಕಪಟಮಯವಾದುದು. ಈ ಆಟದಲ್ಲಿ ಜಯಿಸಿದವನು ಧರ್ಮದಿಂಧ ಜಯಿಸಿದವನಾಗುವನೇ? ನೀವೆಲ್ಲರೂ ಧರ್ಮವನ್ನು ತಿಳಿದವರಲ್ಲವೇ? ದ್ಯೂತವು ಧರ್ಮವೆಂದು ಜ್ಞಾನಿಗಳು ಹೇಳುವರೇ? ಅದರಲ್ಲಿಯೂ ಕ್ಷತ್ರಿಯರು ಈ ದ್ಯೂತವನ್ನು ಧರ್ಮವೆಂದು ಹೇಳಲಾರರು ಯಾರು ಧರ್ಮವನ್ನು ಹೇಳುವುದಿಲ್ಲವೋ ಅವರನ್ನು ವೃದ್ಧರೆಂದು ಯಾರೂ ಹೇಳುವುದಿಲ್ಲ. ವೃದ್ಧರು ಯಾವ ಸಭೆಯಲ್ಲಿ ಇಲ್ಲವೋ ಆ ಸ್ಥಳವನ್ನು ಸಭೆಯೆಂದು ಯಾರು ಹೇಳುವುದಿಲ್ಲ. "ನನ್ನ ಪತಿಯಾಗಿರುವ ಧರ್ಮರಾಜನಿಗೆ ಈಗ ಪರಾಜಯವು ಏರ್ಪಟ್ಟಿಲ್ಲ. ಅವನು ಸೋಲಿಸಲ್ಪಡದಿರುವಾಗ ನನ್ನನ್ನು ಯಾರಿಗೆ ಜಯಿಸಲು ಸಾಧ್ಯವಾಗುತ್ತದೆ? ನಾನು ನನ್ನ ಪತಿಗೆ ಸಮಾನ ಧರ್ಮಿಣಿಯಲ್ಲವೇ? ಹೀಗಿರುವಾಗ ನನ್ನ ಪತಿಯನ್ನು ಜಯಿಸಿದರೆ ನನ್ನನ್ನು ಜಯಿಸುವುದು ಹೇಗೆ ಶಕ್ಯವಾಗುತ್ತದೆ? ನನ್ನ ಪತಿಯು ದಾಸನಾದರೆ ನಾನು ದಾಸಿಯಾಗಬಹುದು. ನನಗೆ ದಾಸಿತ್ವವು ಬೇರೆ ಇಲ್ಲ. "ಹೀಗೆ ದ್ರೌಪದೀದೇವಿಯರು ಭೀಷ್ಮಾದಿಗಳನ್ನು ನೋಡಿ ಮೊರೆಯಿಟ್ಟರು. ಭೀಷ್ಮಾದಿಗಳು ದ್ರೌಪದೀದೇವಿಯರ ಮಾತುಗಳನ್ನು ಕೇಳಿದರು. "ಧರ್ಮರಾಜನನ್ನೇ ಕೇಳು" ಎಂದು ಉತ್ತರವನ್ನು ಕೊಟ್ಟರು. ದುರ್ಯೋಧನನಿಗೆ ವಿರುದ್ಧವಾದ ಯಾವ ಮಾತುಗಳನ್ನೂ ಯಾರೂ ಹೇಳಲಿಕ್ಕೆ ಶಕ್ತರಾಗಲಿಲ್ಲ.

ವಿದುರನು ಮಾತ್ರ "ಇದು ಅತ್ಯಂತ ಅಧರ್ಮ" ಎಂದು ಸ್ಪಷ್ಟವಾಗಿ ಹೇಳಿದನು. ವಿದುರನ ಮಾತುಗಳನ್ನು ಧೃತರಾಷ್ಟ್ರನೂ ಅವನ ಮಕ್ಕಳೂ ಯಾರೂ ಅಂಗೀಕರಿಸಲಿಲ್ಲ. ವಿದುರನು ಎರಡು ಕೈಗಳನ್ನು ಮೇಲೆ ಎತ್ತಿ "ಇದು ಅಧರ್ಮ". "ಇದು ಅಧರ್ಮ" ಎಂದು ಕೂಗಿದನು. ದೇವತೆಗಳು ತನ್ನ ಮಾತುಗಳನ್ನು ಕೇಳಲಿ ಎಂದು ಕೈಗಳನ್ನು ಮೇಲೆ ಎತ್ತಿ "ತಾನು ನಿರಪರಾಧಿ" ಎಂದು ತಿಳಿಸಿದನು. "ಈ ಸಭೆಯನ್ನು ಅಧರ್ಮವು ಆಕ್ರಮಿಸಿಕೊಂಡಿದೆ" ಎಂದು ಕೂಗಿದನು.

ಆ ಸಭೆಯಲ್ಲಿದ್ದವರಲ್ಲಿ "ವಿಕರ್ಣ" ಎಂಬುವನು ಮಹಾಪಾಪಿಯಾಗಿರುವನು. ಆದರೂ ಡಾಂಭಿಕವಾಗಿ "ಧಾರ್ಮಿಕನು ತಾನು" ಎಂದು ತಿಳಿಸುವುದಕ್ಕಾಗಿ "ಇದು ಅಧರ್ಮವೇ ಆಗಿರುತ್ತದೆ" ಎಂದು ಕೂಗಿ ಹೇಳಿದನು. ಆ ಮಾತುಗಳನ್ನು ಕೇಳಿದ ಕರ್ಣನು ಅವನನ್ನು ಧಿಕ್ಕರಿಸಿದನು.

ಈ ಸಮಯದಲ್ಲಿ ಶ್ರೀಭೀಮಸೇನದೇವರು ದ್ರೌಪದೀದೇವಿಯರು ಕಷ್ಟಪಡುವುದನ್ನು ನೋಡಿದರು. ಧರ್ಮರಾಜನು ಧರ್ಮವಿರುದ್ಧವಾದ ಕಾರ್ಯವನ್ನು ಮಾಡುತ್ತಿರುವನು. ರಾಜನು ಧರ್ಮವಿರುದ್ಧವಾದ ಕಾರ್ಯವನ್ನು ಮಾಡುತ್ತಿರುವಾಗ ಯುವರಾಜನಾಗಿರುವವನು ರಾಜನನ್ನು ಶಿಕ್ಷಿಸಬೇಕು ಎಂದು ತಿಳಿಸುವುದಕ್ಕಾಗಿ ಮುಂದೆ ಹೇಳುವ ಮಾತುಗಳನ್ನು ಹೇಳಿದರು. "ಈ ದ್ರೌಪದಿದೇವಿಯನ್ನು ದ್ಯೂತದಲ್ಲಿ ಪಣವಾಗಿ ಇಟ್ಟಿರುವ ನಿನ್ನ ಎರಡು ಕೈಗಳನ್ನೂ ಸುಡಬೇಕು" ಎಂದು ಹೇಳಿದರು. ಅಷ್ಟರಲ್ಲಿ ಅರ್ಜುನನು "ಧರ್ಮರಾಜನ ಎರಡು ಕೈಗಳನ್ನೂ ಸುಡಬೇಕು" ಎಂದು ಹೇಳಿರುವಿ. ಹಾಗೆ ಮಾಡಬಾರದು ಎಂದು ಹೇಳಿದನು.

"ಉತ್ತಮರನ್ನು ಮಾತುಗಳಿಂದ ಶಿಕ್ಷಿಸಬೇಕು ಮಧ್ಯಮರಲ್ಲಿರುವ ಹಣಗಳನ್ನು ಕಿತ್ತುಕೊಳ್ಳಬೇಕು. ಅಧಮರಲ್ಲಿ ದೇಹದಂಡನೆಯನ್ನು ಮಾಡಬೇಕು. ಧರ್ಮರಾಜನು ನನಗಿಂತ ದೊಡ್ಡವನಾಗಿರುವುದರಿಂದ ಅವನು ಮಾಡಿರುವ ಅಕ್ರಮವನ್ನು ಹೇಳಲೇಬೇಕಾಗಿದೆ. ಅದಕ್ಕಾಗಿಯೇ ನಾನು ಧರ್ಮರಾಜನು ಮಾಡಿರುವ ಕ್ರಮವನ್ನು ಹೇಳಿದನೇ ಹೊರತು ಅವನಿಗೆ ಬೇರೆ ವಿಧವಾದ ಶಿಕ್ಷೆಯನ್ನು ಮಾಡಲಿಲ್ಲ. ಇದು ನನಗೆ ಅಪರಾಧವಾಗಲಾರದು" ಎಂದು ಶ್ರೀಭೀಮಸೇನದೇವರು ಹೇಳಿದರು.

ಆಗ ಕರ್ಣನು ದ್ರೌಪದೀದೇವಿಯನ್ನು ನೋಡಿ ಹೇಳಿದನು. "ಎಲೈ ದ್ರೌಪದಿಯೇ, ನೀನು ಶೋಭನಲಕ್ಷಣಗಳುಳ್ಳವಳಾಗಿರುವಿ. ಆದರೂ ಗಂಡನಿಲ್ಲದವಳಾಗಿರುವಿ. ದುರ್ಯೋಧನನ ಮನೆಯನ್ನು ಪ್ರವೇಶಿಸು" ಎಂದು ಹೇಳಿದನು. ಆಗ ದುರ್ಯೋಧನನು ಪಾಂಡವರಲ್ಲಿ ಅನ್ಯೋನ್ಯ ವಿರೋಧವನ್ನು ಹುಟ್ಟಿಸುವುದಕ್ಕಾಗಿ ಮುಂದೆ ಹೇಳುವ ಮಾತುಗಳನ್ನು ಹೇಳಿದನು. "ಎಲೈ ದ್ರೌಪದಿಯೇ, ಧರ್ಮರಾಜನು ನಿನ್ನ ದುಃಖಗಳಿಗೆ ಕಾರಣನಲ್ಲವೇ? ಅವನನ್ನು ಈ ಪಾಂಡವರಲ್ಲಿ ಎಲ್ಲರೂ ಅಥವಾ ಭೀಮನೂ ಅರ್ಜುನನೂ ಇಬ್ಬರು ಒಟ್ಟುಗೂಡಿ, ಅಥವಾ ಭೀಮನೊಬ್ಬನೇ, ಧರ್ಮರಾಜನು ನನಗೆ ಮಾನ್ಯವಲ್ಲವೆಂದು ಹೇಳಲಿ. ಹಾಗೆ ಮಾಡಿದರೆ ನಿನ್ನನ್ನು ಬಿಟ್ಟು ಬಿಡುವೆನು" ಎಂದು ಹೇಳಿದನು.

ಆ ಮಾತುಗಳನ್ನು ಕೇಳಿದ ಶ್ರೀಭೀಮಸೇನದೇವರು ಹೇಳಿದರು. "ಧರ್ಮರಾಜನು ನಮಗೆಲ್ಲರಿಗೂ ಪೂಜ್ಯನು. ಈ ವಿಷಯದಲ್ಲಿ ಸಂಶಯವು ಬೇಡ. ನಿಮಗೆಲ್ಲರಿಗೂ ನಾನೊಬ್ಬನೇ ಗುರುವು. ಕ್ಷತ್ರಿಯ ಜಾತಿಯಲ್ಲಿ ಹುಟ್ಟಿರುವವರಲ್ಲಿ ಯಾರು ಬಲಿಷ್ಠನೋ, ಅವನೇ ಉತ್ತಮನು. ನಾನು ನಿಮ್ಮಲ್ಲಿ ಸರ್ವರಿಗಿಂತಲೂ ಬಲಿಷ್ಠನಾಗಿರುವುದರಿಂದ ನಾನೊಬ್ಬನೇ ನಿಮ್ಮಲ್ಲಿ ಸರ್ವರಿಗಿಂತಲೂ ಉತ್ತಮನು. ಈ ವಿಷಯದಲ್ಲಿ ಯಾರಿಗೂ ಸಂಶಯವು ಬೇಡ. ನಿಮಗೆ ಈ ವಿಷಯದಲ್ಲಿ ಸಂಶಯವಿದ್ದರೆ ವೀರರಾಗಿರುವ ಸರ್ವರೂ ಎದ್ದು ನಿಲ್ಲಿರಿ. ನನ್ನ ಕಾಲುಗಳಿಂದ ತಿಕ್ಕಿಬಿಟ್ಟು ಸಂಹರಿಸುವೆನು. ಯಾವನು ನನ್ನೊಡನೆ ಯುದ್ಧವನ್ನು ಮಾಡುವ ಆಸೆಯುಳ್ಳವನೋ ಅವನನ್ನೂ ಅವನ ಪರಿವಾರದಲ್ಲಿ ಸೇರಿರುವನೋ ಅವರೆಲ್ಲರನ್ನೂ ಕಾಲಿನಿಂದ ತಿಕ್ಕಿ ಸಂಹರಿಸುವೆನು." ಹೀಗೆ ಹೇಳುತ್ತಾ ಭೀಮಸೇನದೇವರು ಗರ್ಜಿಸಿದರು. ಹೀಗೆ ಶ್ರೀಭೀಮಸೇನದೇವರು ಹೇಳಿದಾಗ ಭೀಮಸೇನದೇವರ ಭಯದಿಂದ ಯಾವನೂ ಏಳಲಿಲ್ಲ. ಏನೂ ಹೇಳಲಿಲ್ಲ.

ಆಗ ಭೀಷ್ಮರೂ, ದ್ರೋಣರೂ, ವಿದುರ ಮುಂತಾದವರೂ "ನೀನು ಹೇಳಿರುವ ಎಲ್ಲಾ ಮಾತುಗಳೂ ಸತ್ಯವಾಗಿವೆ. ಕ್ಷಮಿಸು" ಎಂದು ಹೇಳುತ್ತಾ ಶ್ರೀಭೀಮಸೇನದೇವರ ಎರಡು ಕೈಗಳನ್ನು ಹಿಡಿದು ನಿಲ್ಲಿಸಿದರು. ಭೀಮಸೇನದೇವರು ನಿಂತಕೂಡಲೇ ಧೃತರಾಷ್ಟ್ರನ ಎಲ್ಲಾ ಮಕ್ಕಳು ಶಾಂತಿಯನ್ನು ಹೊಂದಿದರು. ಭೀಷ್ಮಾದಿಗಳಿಗೆ ಮರ್ಯಾದೆಯನ್ನು ಕೊಡುವುದಕ್ಕಾಗಿ ಶ್ರೀಭೀಮಸೇನದೇವರು ಯಾರನ್ನೂ ಕೊಲ್ಲಲಿಲ್ಲ. ಧರ್ಮಾತ್ಮನಾಗಿರುವ ಅಣ್ಣನಾದ ಧರ್ಮರಾಜನನ್ನು ಯಾವ ಕಾರಣದಿಂದಲೂ ಯಾವಾಗಲೂ ಮೀರಿ ನಡೆದುದಿಲ್ಲ. ಧರ್ಮರಾಜನು ತಡೆದು ನಿಲ್ಲಿಸಿದ ಕೂಡಲೇ ಸಭೆಯು ಶಾಂತವಾಯಿತು. ದುರ್ಯೋಧನ ಮುಂತಾದವರಿಗೆ ಪಾಪವು ಅಧಿಕವಾಗಬೇಕು. ಅದಕ್ಕಾಗಿ ಅಣ್ಣನಾದ ಧರ್ಮರಾಜನಲ್ಲಿ ಅಣ್ಣನಲ್ಲಿ ಇಡಬೇಕಾದ ಮರ್ಯಾದೆಯನ್ನು ಶ್ರೀಭೀಮಸೇನದೇವರು ಇಟ್ಟಿದ್ದರು.

ಅದೇ ಸಮಯದಲ್ಲಿ ಮಹಾಪಾಪಿಷ್ಠನಾದ ದುರ್ಯೋಧನನು ಶ್ರೀಭೀಮಸೇನದೇವರು ನೋಡುತ್ತಿರುವಾಗ ದ್ರೌಪದೀದೇವಿಗೆ ತನ್ನ ತೊಡೆಯನ್ನು ತೋರಿಸಿದನು. ಅದನ್ನು ನೋಡಿದ ಶ್ರೀಭೀಮಸೇನದೇವರು ನಿನ್ನ ಈ ತೊಡೆಯನ್ನು ನಾನು ಅತಿವೇಗವಾಗಿರುವ ಗದೆಯಿಂದ ಮುರಿಯುವೆನು" ಎಂದು ಪ್ರತಿಜ್ಞೆಯನ್ನು ಮಾಡಿದರು. ಆಗ ದುರ್ಯೋಧನನು ಪುನಃಹೇಳಿದನು. "ಭೀಮ, ನಿಮ್ಮಲ್ಲಿರುವ ಎಲ್ಲಾ ಹಣಗಳನ್ನೂ ದ್ಯೂತದಲ್ಲಿ ಕಳೆದುಕೊಂಡು ಮುಗಿಯಿತು. ಇನ್ನು ಉಳಿದಿರುವುದು ಕೃಷ್ಣನೊಬ್ಬನೇ, ಆದ್ದರಿಂದ ಕೃಷ್ಣನನ್ನು ಪಣವಾಗಿ ಇಟ್ಟು ಆಡಿರಿ" ಎಂದು ಹೇಳಿದನು.

ದುರ್ಯೋಧನನ ಆ ಮಾತುಗಳನ್ನು ಕೇಳಿದ ಶ್ರೀಭೀಮಸೇನದೇವರು ಹೇಳಿದರು. "ಎಲೋ ಪಾಪಿಯಾದ ದುರ್ಯೋಧನನೇ, ನನ್ನ ಪರೋಕ್ಷದಲ್ಲಿಯೂ ಯಾವನು ಶ್ರೀಹರಿಯನ್ನು ನಿಂದಿಸುವನೋ ಅವನನ್ನು ನಾನು ಕೊಲ್ಲುವೆನು ಎಂದು ಪ್ರತಿಜ್ಞೆಯನ್ನು ಮಾಡಿರುವೆನು. ಈಗ ನನ್ನ ಮುಂದೆಯೇ ಶ್ರೀಹರಿಯನ್ನು ನಿಂದಿಸಿರುವಿ. ಆದ್ದರಿಂದ ನಿನ್ನನ್ನು ಕೊಂದು ನಿನ್ನ ತಲೆಯನ್ನು ಕಾಲಿನಿಂದ ಮರ್ದನ ಮಾಡುವೆನು." ಎಂದು ಪ್ರತಿಜ್ಞೆಯನ್ನು ಮಾಡಿದರು. ಆಗಲೇ ಪಾಪಿಯಾದ ದುರ್ಯೋಧನನನ್ನು ಕೊಲ್ಲಬಹುದಾಗಿತ್ತು. ಆದರೂ ಪಾಪವು ಇನ್ನೂ ಬೆಳೆಯಲಿ ಎಂಬ ಉದ್ದೇಶ್ಯದಿಂದಲೇ ಆಗ ಕೊಲ್ಲಲಿಲ್ಲ.

ಆಗ ಸೂರ್ಯನ ಮಗನಾಗಿರುವ ಕರ್ಣನು ದ್ರೌಪದೀದೇವಿಯನ್ನು ನೋಡಿ "ದ್ರೌಪದಿಯೇ, ದುರ್ಯೋಧನ ಮುಂತಾದ ರಾಜರುಗಳನ್ನು ಆಶ್ರಯಿಸು. ಪಾಂಡವರು ಇಲ್ಲವೆಂದು ತಿಳಿ" ಎಂದು ಹೇಳಿದನು. ಆ ಮಾತುಗಳನ್ನು ಕೇಳಿದ ಶ್ರೀಭೀಮಸೇನದೇವರು ಎದ್ದು ನಿಂತರು. ಅರ್ಜುನನೂ ಎದ್ದು ನಿಂತನು. ಅದನ್ನು ನೋಡಿದ ಧರ್ಮರಾಜನೂ ಭೀಷ್ಮಾದಿಗಳೂ ತಡೆದು ನಿಲ್ಲಿಸಿದರು. ಅವರಿಬ್ಬರೂ ಕುಳಿತರು. ಆಗ ದುರ್ಯೋಧನನು ಹೇಳಿದನು.

"ಎಲೋ ದುಃಶಾಸನನೇ, ಇವರೆಲ್ಲರೂ ನನ್ನ ದಾಸರು. ಇವರ ವಸ್ತ್ರಗಳನ್ನೆಲ್ಲಾ ಅಪಹರಿಸಿ ಬತ್ತಲೆಯಾಗಿ ನಿಲ್ಲಿಸು" ಎಂದನು.

ಈ ಮಾತುಗಳನ್ನು ಕೇಳಿದ ದುಃಶಾಸನನು ಪಾಂಡವರ ಮುಂದೆ ಬಂದು ನಿಂತನು. ಅವರೆಲ್ಲರೂ ತಮ್ಮ ತಮ್ಮ ವಸ್ತ್ರಗಳನ್ನು ಬಿಚ್ಚಿಕೊಟ್ಟರು. ದುರ್ಯೋಧನಾದಿಗಳೆಲ್ಲರೂ ಅತ್ಯಂತ ಅಯೋಗ್ಯರು ಎಂದು ತಿಳಿಸಿದರು. ಮಾನರಕ್ಷಣೆಗಾಗಿ ಚರ್ಮದ ವಸ್ತ್ರಗಳನ್ನು ಧರಿಸಿದರು. ಭೂಮಿಯಲ್ಲಿ ಕುಳಿತರು. ಕ್ಷಮಾಗುಣವನ್ನು ಪ್ರಕಾಶಪಡಿಸಿದರು. ಪುನಃ ದುರ್ಯೋಧನನು ದುಃಶಾಸನನನ್ನು ಕರೆದು ಹೇಳಿದನು. ಪಾಂಡವರ ಮುಂದೆ ಅವರ ಪತ್ನಿಯಾಗಿರುವ ದ್ರೌಪದಿಯನ್ನು ಬತ್ತಲೆಯಾಗಿ ನಿಲ್ಲಿಸು ಎಂದನು.

ಆ ಮಾತುಗಳನ್ನು ಕೇಳಿದ ಭೀಮಸೇನದೇವರು ಜಗಳಕ್ಕೆ ಎದ್ದರು. ಅರ್ಜುನನೂ ಎಂದ್ದು ನಿಂತನು. ಧರ್ಮರಾಜನು ಅವರಿಬ್ಬರನ್ನೂ ತಡೆದು ನಿಲ್ಲಿಸಿದನು. ಬೇರೆ ಜನರೂ ತಡೆದು ನಿಲ್ಲಿಸಿದರು. ಅವರಿಬ್ಬರೂ ಸುಮ್ಮನೆ ಕುಳಿತರು. ಪುನಃ ದುರ್ಯೋಧನನು "ದುಃಶಾಸನಾ, ಪಾಂಡವರ ಮುಂದೆ ದ್ರೌಪದಿಯ ಸೀರೆಗಳನ್ನು ಬಿಚ್ಚು" ಎಂದನು. ದುಃಶಾಸನನು ದ್ರೌಪದಿಯ ಸೀರೆಗಳನ್ನು ಪಾಂಡವರು ನೋಡುತ್ತಿರುವಾಗ ಸೆಳೆದನು. ಆಗ

ಭೀಮಸೇನದೇವರು ಹೇಳಿದರು. "ಕುರುರಾಜನ ವಂಶದಲ್ಲಿ ಹುಟ್ಟಿದವರೆಲ್ಲರೂ ಮಹಾಧಾರ್ಮಿಕರು. ಆ ವಂಶದಲ್ಲಿ ಹುಟ್ಟಿದವರಲ್ಲಿ ಈ ದುಃಶಾಸನನು ಅತ್ಯಂತ ಅಧಮನು. ಅವನ ಎದೆಯನ್ನು ಶೀಳುವೆನು. ಎಲ್ಲರ ಮುಂದೆ ಎದೆಯಿಂದ ಬಂದಿರುವ ರಕ್ತವನ್ನು ನಾನು ಕುಡಿಯುವೆನು" ಎಂದು ಪ್ರತಿಜ್ಞೆಯನ್ನು ಮಾಡಿದರು.

ದ್ರೌಪದೀದೇವಿಯರ ಶೀರೆಯನ್ನು ಶೆಳೆಯುತ್ತಿರುವಾಗ ಶ್ರೀಕೃಷ್ಣದೇವನನ್ನು ವಿಶೇಷವಾಗಿ ದ್ರೌಪದೀದೇವಿಯರು ಸ್ಮರಿಸಿದರು. ಆಗ ಬಂಗಾರದಂತೆ ಹೊಳೆಯುತ್ತಿರುವ ಅತಿ ಸೂಕ್ಷ್ಮವಾದ ವಸ್ತುವು ಕಾಣಿಸಿತು. ಪುನಃ ಪುನಃ ದುಃಶಾಸನನು ಸೀರೆಯನ್ನು ಸೆಳೆಯುವಾಗ ಅಸಂಖ್ಯವಾದ ಹೊಸ ಸೂಕ್ಷ್ಮವಾದ ವಸ್ತ್ರಗಳು. ಅಕ್ಷಯವಾಗುತ್ತಾ ಬಂದವು. ಪರ್ವತಾಕಾರವಾದ ವಸ್ತ್ರಗಳ ರಾಶಿಯು ಏರ್ಪಟ್ಟಿತು. ಇದನ್ನು ನೋಡಿದ ದುರ್ಯೋಧನನಿಗೆ ಕೋಪವು ಮಿತಿಮೀರಿತು. "ದುಃಶಾಸನಾ, ಇವಳನ್ನು ನನ್ನ ಮನೆಯೊಳಗೆ ಪ್ರವೇಶ ಮಾಡಿಸು. ತಡ ಯಾಕೆ ಮಾಡುತ್ತೀ?" ಎಂದು ಹೇಳಿದನು. ಇಷ್ಟು ಪ್ರಭಾವವನ್ನು ತಿಳಿದ ಮೇಲೆಯೂ ಮೂರ್ಖನಾಗಿರುವ ದುರ್ಯೋಧನನಷ್ಟು ಮೂರ್ಖನು ಯಾರಿರುವನು. ಸೀರೆಗಳನ್ನೆಲ್ಲಾ ಸೆಳೆದು ಆಯಾಸದಿಂದ ಯುಕ್ತನಾದ ದುಃಶಾಸನನು ಕುಳಿತನು.

ಈ ಮಾತುಗಳನ್ನು ಕೇಳಿದ ದ್ರೌಪದೀದೇವಿಯರು ಪ್ರತಿಜ್ಞೆಯನ್ನು ಮಾಡಿದರು. "ಭೀಮಸೇನದೇವರು ದುರ್ಯೋಧನನನ್ನು ಕೊಲ್ಲಲಿ. ಅರ್ಜುನನು ಕರ್ಣನನ್ನು ಕೊಲ್ಲಲಿ. ಚದುರಂಗ ಆಟದಲ್ಲಿ ಮೋಸಗಾರನಾದ ಶಕುನಿಯನ್ನು ನಕುಲನು ಕೊಲ್ಲಲಿ" ಎಂದು ದ್ರೌಪದೀದೇವಿಯರು ಪ್ರತಿಜ್ಞೆಯನ್ನು ಮಾಡುತ್ತಿರುವಾಗ ಶ್ರೀಭೀಮಸೇನದೇವರು, "ಹಾಗೆಯೇ ನಾವೆಲ್ಲರೂ ಮಾಡುವೆವು" ಎಂದು ಹೇಳಿದರು. ಭೀಮಸೇನದೇವರು ದುರ್ಯೋಧನನನ್ನು ಕೊಲ್ಲುವುದಾಗಿ ಪ್ರತಿಜ್ಞೆಯನ್ನು ಮಾಡಿದರು. ನಕುಲನು ಶಕುನಿಯನ್ನು ಕೊಲ್ಲುವುದಾಗಿ ಪ್ರತಿಜ್ಞೆಯನ್ನು ಮಾಡಿದನು.

ದುಃಶಾಸನನು ದ್ರೌಪದೀದೇವಿಯನ್ನು ಎಳೆದುಕೊಂಡು ದುರ್ಯೋಧನನ ಮನೆಯೊಳಗೆ ಹೋದನು. ಇದನ್ನು ನೋಡಿದ ಶ್ರೀಭೀಮಸೇನದೇವರು ತುಂಬಾ ಕೋಪದಿಂದ ಯುಕ್ತರಾಗಿ ಹೇಳಿದರು. "ಅರ್ಜುನ, ಅರ್ಜುನ, ಈ ಸಂದರ್ಭದಲ್ಲಿ ಸಹಿಸುವುದು ನನಗೆ ರುಚಿಸುವುದಿಲ್ಲ. ಪತ್ನಿಯಿಂದ ಮೂರು ಫಲಗಳು ಬರುವುದಾಗಿ ಶಾಸ್ತ್ರವು ಹೇಳುತ್ತದೆ. (೧) ವಿದ್ಯೆ, (೨) ಕರ್ಮ, (೩) ಸಂತತಿ ಈ ಮೂರು ಫಲಗಳು ಪತ್ನಿಯಿಂದ ಏರ್ಪಡುತ್ತವೆ.

ಪತ್ನಿಯು ಪುನಃ ಪುನಃ ಪಾಪಕಾರ್ಯವನ್ನು ಮಾಡದಂತೆ ಅವಳನ್ನು ಸಂಕೋಲೆ ಮುಂತಾದವುಗಳಿಂದ ಕಟ್ಟಿಹಾಕಿ ಸ್ವಲ್ಪ ಸ್ವಲ್ಪ ಅನ್ನಪಾನಾದಿಗಳನ್ನು ಕೊಡುತ್ತಾ ಇದ್ದರೆ ಅವಳನ್ನು ಸರಿಯಾಗಿ ರಕ್ಷಿಸದಿರುವುದರಿಂದ ಪಾಪವು ಬರುತ್ತದೆ. ಅಗ್ನಿಸಾಕ್ಷಿಯಾಗಿ ವಿವಾಹವನ್ನು ಮಾಡಿಕೊಂಡಿರುವ ಪತ್ನಿಯ ಸಂಗವನ್ನು ಮಾತ್ರ ಬಿಟ್ಟು ಅನ್ನವನ್ನು ಹಾಕದಿದ್ದರೆ ಪರಲೋಕಹಾನಿಯು ಏರ್ಪಡುತ್ತದೆ. ಉದಾಸೀನನಾಗಿ ಅವಳನ್ನು ಬಿಟ್ಟು ಬಿಟ್ಟರೆ ಅವಳು ಮಾಡುತ್ತಿರುವ ಪಾಪಕಾರ್ಯವನ್ನು ಉಪೇಕ್ಷಿಸಿದಂತಾಗುತ್ತದೆ. ಅದರಿಂದ ಪರಲೋಕ ಹಾನಿಯು ಏರ್ಪಡುತ್ತದೆ. ನಮ್ಮ ಮುಂದೆಯೇ ಪುನಃ ಪುನಃ ಪಾಪವನ್ನು ಮಾಡುವುದಕ್ಕೆ ಅವಕಾಶವನ್ನು ಕೊಟ್ಟಿದ್ದರಿಂದ ಪರಲೋಕ ಹಾನಿಯು ಏರ್ಪಡುತ್ತದೆ. ಐಹಿಕ ಹಾನಿಯೂ ಏರ್ಪಡುತ್ತದೆ. ಅವಳನ್ನು ನಿರ್ಬಂಧದಿಂದ ರಕ್ಷಿಸುವುದು ನಿತ್ಯದುಃಖದಾಯಕವಾಗಿರುವುದರಿಂದ ನಿತ್ಯನರಕಕ್ಕೆ ಸಮಾನವೂ ಆಗಿದೆ. ಆದ್ದರಿಂದ ಪತ್ನಿಯ ರಕ್ಷಣೆಯು ಅತಿ

ಕಷ್ಟಕರವಾಗಿದೆ. ದುರ್ಯೋಧನ ಮುಂತಾದವರು ನಮ್ಮ ಪತ್ನಿಯಾಗಿರುವ ದ್ರೌಪದೀದೇವಿಯನ್ನು ಕೆಡಿಸುವ ಆಲೋಚನೆಯಲ್ಲಿದ್ದಾರೆ. ಅದಕ್ಕೆ ಬಿಡಕೂಡದು" ಎಂದು ಹೇಳುತ್ತಾ ಅತಿಘೋರವಾದ ಪರಿಘಾಯುಧವನ್ನು ತೆಗೆದುಕೊಳ್ಳುವುದಕ್ಕೆ ಹೊರಟರು. ಧೃತರಾಷ್ಟ್ರನ ಮಕ್ಕಳನ್ನೆಲ್ಲರನ್ನೂ ಕೊಲ್ಲಬೇಕೆಂದು ತೀರ್ಮಾನಿಸಿದರು.

ಆಗ ದುರ್ಯೋಧನನ ಅಗ್ನಿಶಾಲೆಯಲ್ಲಿ ಹೆಣ್ಣು ನರಿಗಳು ಕೂಗಿದವು. ಧೃತರಾಷ್ಟ್ರನ ಮನೆಯಲ್ಲಿ ಭಯಂಕರವಾದ ಅನೇಕ ದುಃಶಕುನಗಳು ಏರ್ಪಟ್ಟವು.

ಧೃತರಾಷ್ಟ್ರನು ಈ ಶಕುನಗಳನ್ನೆಲ್ಲಾ ತಿಳಿದನು. ಈ ಶಕುನಗಳ ಫಲವನ್ನು ವಿದುರನಲ್ಲಿ ಪ್ರಶ್ನಿಸಿದನು. ವಿದುರನು ಈ ಪ್ರಶ್ನೆಗೆ ಉತ್ತರವನ್ನು ಕೊಟ್ಟನು. "ನಿನ್ನ ಮಕ್ಕಳುಗಳೂ ಮತ್ತು ಅವರ ಸಹಾಯಕರೂ ಇನ್ನೊಂದು ಕ್ಷಣದಲ್ಲಿ ಭೀಮಸೇನನ ಬಲದಿಂದ ಕೊಲ್ಲಲ್ಪಡುವರು. ನೀನು ಚಿಕ್ಕ ಮಗುವಿನಂತೆ" ಯಾವ ವಸ್ತುವನ್ನು ಶಕುನಿಯು ಜಯಿಸಿದನು.?" "ಯಾವ ವಸ್ತುವನ್ನು ಶಕುನಿಯು ಜಯಿಸಿದನು? ಎಂದು ಕೇಳುತ್ತಾ ಆಟವನ್ನು ಆಡುತ್ತಿರುವಿ. ಅಧರ್ಮದಿಂದ ಶಕುನಿಯು ಜಯಿಸಿದ್ದನ್ನೆಲ್ಲಾ ಜಯಿಸಿದಂತೆ ತಿಳಿದಿರುವಿ. ಸ್ತ್ರೀಯರಲ್ಲಿಯೂ ದ್ಯೂತದಲ್ಲಿಯೂ ಮದಾಂಧನಾದ ಮನುಷ್ಯನಲ್ಲಿಯೂ ಅವನ ಬಂಧುಗಳಿಂದಲೂ ಕೊಡಲ್ಪಟ್ಟ ವಸ್ತುಗಳನ್ನು ಕೊಡಲ್ಪಟ್ಟವುಗಳೆಂದು ತಿಳಿಯಬಾರದು. ಆ ವಸ್ತುಗಳನ್ನು ಹಿಂದೆ ತೆಗೆದುಕೊಳ್ಳಬಹುದು. ಇದು ಶಾಸ್ತ್ರಸಮ್ಮತವಾದ ವಿಷಯವಾಗಿದೆ. ಆದರೂ ಪಾಂಡವರು ಆ ವಸ್ತುಗಳನ್ನು ಅಪೇಕ್ಷಿಸಲಿಲ್ಲ. ನಿನ್ನ ಮಕ್ಕಳು ಅಯೋಗ್ಯರು ಎಂದು ತಿಳಿಸುವುದಕ್ಕಾಗಿಯೇ ಅಧರ್ಮದಿಂದ ಜಯಿಸಿದ ಯಾವ ವಸ್ತುಗಳನ್ನೂ ಪಾಂಡವರು ಸ್ವೀಕರಿಸಲಿಲ್ಲ." ಹೀಗೆ ವಿದುರನು ಹೇಳಿದನು.

ಈ ನಿಮಿತ್ತಗಳಿಗೆ ಫಲವು ಏರ್ಪಡದಿರಬೇಕಾದರೆ ಏನು ಮಾಡಬೇಕು? ಎಂದು ಧೃತರಾಷ್ಟ್ರನು ಕೇಳಿದನು. ಕೂಡಲೇ "ದ್ರೌಪದೀದೇವಿಯನ್ನು" ಬಿಡಬೇಕು ಎಂದು ವಿದುರನು ಹೇಳಿದನು. ದ್ರೌಪದೀದೇವಿಗೆ ಬೇಕಾದ ವರಗಳನ್ನು ಕೊಟ್ಟು ತೃಪ್ತಿಪಡಿಸಬೇಕು. ಇಲ್ಲದಿದ್ದರೆ ನಿನ್ನ ಮಕ್ಕಳೆಲ್ಲರೂ ಹಿಟ್ಟಿನ ಮುದ್ದೆಯಂತೆ ತಿಕ್ಕಲ್ಪಡುವರು. ಈ ವಿಷಯದಲ್ಲಿ ನಿನಗೆ ಸಂಶಯವು ಬೇಡ ಎಂದು ವಿದುರನು ಹೇಳಿದನು.

ದ್ರೌಪದಿಯೂ ಪಾಂಡವರೂ ತಪಸ್ಸಿನ ವೃದ್ಧಿಯನ್ನು ಅಪೇಕ್ಷಿಸುತ್ತಿರುವುದರಿಂದ ತಪಸ್ಸಿನ ಬಲದಿಂದ ನಿನ್ನ ಮಕ್ಕಳನ್ನು ಸುಡದೆ ಇರುವರು. ಆದ್ದರಿಂದ ನಿನ್ನ ಮಕ್ಕಳು ಇಷ್ಟರವರೆಗೆ ಬದುಕಿರುವರು. ದ್ರೌಪದಿಯನ್ನು ನೀನು ಬಿಡಿಸದಿದ್ದರೆ ಭೀಮಸೇನನು ಬಲದಿಂದಲೇ ನಿನ್ನ ಮಕ್ಕಳನ್ನು ಕೊಂದುಬಿಡುವನು. ಹೀಗೆ ವಿದುರನು ಹೇಳಿದನು. ಈ ಮಾತುಗಳನ್ನು ಕೇಳಿದ ಧೃತರಾಷ್ಟ್ರನು ದುಃಶಾಸನನನ್ನು ಧಿಕ್ಕರಿಸಿ ದ್ರೌಪದೀದೇವಿಯನ್ನು ದುಃಶಾಸನನಿಂದ ಬಿಡಿಸಿದನು. ಅವಳು ಕೇಳುವ ವರಗಳನ್ನು ಕೊಡುವುದಾಗಿ ನಿರ್ಬಂಧಿಸಿದನು. ದ್ರೌಪದೀದೇವಿಯು ತನ್ನ ಪತಿಯನ್ನೂ ಶ್ರೀಹರಿಯನ್ನೂ ಬಿಟ್ಟು ಇತರರಿಂದ ವರಗಳನ್ನು ಸ್ವೀಕರಿಸುವವಳಲ್ಲ. ಯಾವ ವರವನ್ನೂ ಬೇಡಲಿಲ್ಲ. ಆದರೆ ಧರ್ಮರಾಜನನ್ನೂ ಧರ್ಮರಾಜನಿಂದ ಅಪಹರಿಸಿರುವ ರಾಜ್ಯ ಮುಂತಾದವುಗಳನ್ನೂ ವರವಾಗಿ ಕೇಳಿದಳು. ಅದೂ ವರವಲ್ಲ. ಅಧರ್ಮದಿಂದ ಅಪಹರಿಸಲ್ಪಟ್ಟವುಗಳು. ಆದ್ದರಿಂದ ಭಾಗವತ ಧರ್ಮದಲ್ಲಿ ನಿರತಳಾಗಿರುವ ದ್ರೌಪದೀದೇವಿಯರಿಗೆ ಇವುಗಳು ವರಗಳಲ್ಲ. ಈ ಕಾರಣದಿಂದ ಮೇಲ್ಕಂಡ ವರಗಳನ್ನು ಬಿಟ್ಟು ಬೇರೆ ಯಾವ ವರವನ್ನೂ ಕೇಳಲಿಲ್ಲ. ಹೀಗೆ ದ್ರೌಪದೀದೇವಿಯರಿಂದ ಸಹಿತರಾದ ಪಾಂಡವರು ಬಿಡುಗಡೆಯನ್ನು ಪಡೆದವರಾಗಿ ಹಿರಿಯರಾದ ಧೃತರಾಷ್ಟ್ರ ಮುಂತಾದವರನ್ನು ನಮಸ್ಕರಿಸಿ ತಮ್ಮ ಇಂದ್ರಪ್ರಸ್ಥನಗರಕ್ಕೆ ಹಿಂದಿರುಗಿದರು.

ಪಾಂಡವರ ಸಕಲ ಸಂಪತ್ತುಗಳೂ ದ್ಯೂತದಿಂದ ತಮ್ಮ ಸ್ವಾಧೀನವಾಗಿದ್ದವು. ಅಂತಹ ಸಂಪತ್ತುಗಳು ಈಗ ಕೈಬಿಟ್ಟು ಹೋದವು. ಈ ದೌರ್ಭಾಗ್ಯವನ್ನು ದುಃಶಾಸನನು ನೋಡಿದನು. ಪಾಪಿಷ್ಠರುಗಳಲ್ಲಿ ಪ್ರಧಾನನಾಗಿರುವ ದುಃಶಾಸನನು ತಂದೆಯನ್ನು ನೋಡಿ ಹೇಳಿದನು.

ತಂದೆಯೇ, ಪಾಂಡವರ ಸಕಲ ಸಂಪತ್ತುಗಳನ್ನೂ ಮಹಾಪ್ರಯಾಸದಿಂದ ನಾವೆಲ್ಲರೂ ಸಂಪಾದಿಸಿದ್ದೆವು. ಅಂತಹ ಸಂಪತ್ತನ್ನು ಈಗ ನೀನು ಪ್ರಯಾಸವಿಲ್ಲದೆ ಹಿಂದಿರುಗಿಸಿದೆ. ಭೀಮನು ನಮ್ಮನ್ನೆಲ್ಲರನ್ನೂ ಕೊಲ್ಲುವುದರಲ್ಲಿ ಸಂಶಯವಿಲ್ಲ. ನೀನು ನಮಗಾಗಿ ಧರ್ಮರಾಜನನ್ನು ಪುನಃ ಇಲ್ಲಿಗೆ ಕರೆಯಿಸಬೇಕು. ಪುನಃ ಚದುರಂಗ ಆಟವು ನಡೆಯಲಿ. ಈ ಆಟದಲ್ಲಿ ಸೋತರೆ ಅವರೆಲ್ಲರೂ ಕಾಡಿಗೆ ಹೋಗಲಿ ಎಂದು ದುಃಶಾಸನನು ಹೇಳಿದನು. ಪುನಃ ವಿದುರನನ್ನು ಧರ್ಮರಾಜನಿಗೆ ಹೇಳಿ ಕಳುಹಿಸಿದನು.

ಆಗ ಭೀಮಸೇನ ಮುಂತಾದ ಸಹೋದರರೂ ದ್ರೌಪದೀದೇವಿಯರೂ ಹೋಗಕೂಡದು ಎಂದು ಅಡ್ಡಗಟ್ಟಿದರು. ಆದರೂ ಧರ್ಮರಾಜನು ದ್ಯೂತವನ್ನು ಆಡುವುದಕ್ಕಾಗಿ ರಾಜಸಭೆಗೆ ಬಂದನು. ಆಗ ಹೊಸ ನಿಬಂಧನೆಯಿಂದ ದ್ಯೂತವು ನಡೆಯಿತು. ಈ ದ್ಯೂತದಲ್ಲಿ ಧರ್ಮರಾಜನು ಸೋತರೆ (೧) ಹನ್ನೆರಡು ವರ್ಷಗಳ ವರೆಗೆ ಕಾಡಿನಲ್ಲಿ ಪಾಂಡವರೆಲ್ಲರೂ ವಾಸಿಸಬೇಕು. (೨) ಹದಿಮೂರನೆಯ ವರ್ಷದಲ್ಲಿ ಯಾರಿಗೂ ತಿಳಿಯದಂತೆ ಎಲ್ಲರೂ ವಾಸಿಸಬೇಕು. ಈ ಪಾಂಡವರಲ್ಲಿ ಯಾರಾದರೂ ಒಬ್ಬನನ್ನು ದುರ್ಯೋಧನಾದಿಗಳಲ್ಲಿ ಯಾರಾದರೂ ಕಂಡುಹಿಡಿದರೆ ಪುನಃ ಹನ್ನೆರಡು ವರ್ಷಗಳ ವರೆಗೆ ಕಾಡಿನಲ್ಲಿ ಇವರೆಲ್ಲರೂ ವಾಸಿಸಬೇಕು. ಪುನಃ ಹದಿಮೂರನೆಯ ವರ್ಷದಲ್ಲಿ ಇವರಲ್ಲಿ ಯಾರಾದರೂ ಒಬ್ಬನನ್ನು ದುರ್ಯೋಧನಾದಿಗಳಲ್ಲಿ ಯಾರಾದರೂ ಒಬ್ಬನು ಕಂಡುಹಿಡಿದರೆ ಪುನಃ ದ್ರೌಪದೀಸಹಿತರಾದ ಪಾಂಡವರಿಗೆ ಹನ್ನೆರಡು ವರ್ಷಗಳ ವರೆಗೆ ವನವಾಸ. ಹೀಗೆಯೇ ಪಾಂಡವರಿಗೆ ವನವಾಸವು ತಪ್ಪಲಾರದು. ಈ ಅಜ್ಞಾತವಾಸವೂ ಸಮೀಪದಲ್ಲಿರುವ ಮತ್ತು ಪ್ರಸಿದ್ಧನಾದ ರಾಜನ ಊರಿನಲ್ಲಿ ಆಗಬೇಕು. ಹೀಗೆ ನಿಬಂಧನೆಯನ್ನು ಮಾಡಿಕೊಂಡು ಚದುರಂಗ ಆಟವನ್ನು ಆಡಿದರು. ಈ ವಿಧವಾದ ನಿಬಂಧನೆಯು ದುಃಶಾಸನನು ಹೇಳಿದಂತೆ ದುರ್ಯೋಧನನಿಂದ ಮಾಡಲ್ಪಟ್ಟಿತ್ತು.

ಪುನಃ ಈಗ ಹೇಳಿದ ನಿಬಂಧನೆಯನ್ನು ಅನುಸರಿಸಿ ಚದುರಂಗ ಆಟವು ನಡೆಯಿತು. ಆ ಆಟದಲ್ಲಿ ದುಃಶಾಸನನು ಹೇಳಿಕೊಟ್ಟ ಉಪಾಯದಿಂದ ಮೇಲೆ ಹೇಳಿದಂತೆ ಪಣವನ್ನಿಟ್ಟು ಧರ್ಮರಾಜನೊಂದಿಗೆ ಶಕುನಿಯು ಪುನಃ ಚದುರಂಗ ಆಟವನ್ನು ಆಡಿದನು. ಆ ಆಟದಲ್ಲಿ ಧರ್ಮರಾಜನು ಸೋತನು. ಆಗ ಧರ್ಮರಾಜನು ತನ್ನ ಸಹೋದರರಿಂದ ಸಹಿತನಾಗಿ ಕಾಡಿಗೆ ಹೋಗಬೇಕೆಂದು ತೀರ್ಮಾನಿಸಿದನು.

ಆ ಸಮಯದಲ್ಲಿ ಪಾಪಿಷ್ಠನಾದ ದುಃಶಾಸನನು ನಗುತ್ತಾ ಶ್ರೀಭೀಮಸೇನದೇವರನ್ನು ನೋಡಿ "ಎಲೈ ಪಶುವೇ" ಎಂದು ಹೇಳುತ್ತಾ ಪುನಃ ಪುನಃ ಕುಣಿದನು. ಆ ಸಭೆಯ ಮಧ್ಯದಲ್ಲಿ ದ್ರೌಪದೀದೇವಿಯರನ್ನು ನೋಡುತ್ತಾ "ಎಲೈ ದ್ರೌಪದಿಯೇ, ನಿನಗೆ ಗಂಡನಿಲ್ಲ. ಆದ್ದರಿಂದ ದುರ್ಯೋಧನನ ಮನಗೆ ಹೋಗು" ಎಂದು ಕುಣಿಯುತ್ತಾ ಹೇಳಿದನು. ಇವರೆಲ್ಲರೂ ಜೊಳ್ಳು ಎಳ್ಳುಗಳು, ಇವರೆಲ್ಲರೂ ನಿತ್ಯನರಕವನ್ನು ಪ್ರವೇಶಿಸಿದರು. ಆ ನರಕದಲ್ಲಿಯೇ ಮುಳಿಗಿದರು. ಪುನಃ ಇವರೆಲ್ಲರೂ ಆ ನರಕದಿಂದ ಹೊರಗೆ ಬರುವಂತಿಲ್ಲ" ಎಂದು ಹೇಳುತ್ತಾ ಅಪಹಾಸವನ್ನು

ಮಾಡಿದನು. ಶ್ರೀಭೀಮಸೇನದೇವರು ನಡೆದಂತೆ ನಡೆದು ತೋರಿಸಿದನು. ಅವನು ನಡೆಯುತ್ತಿರುವುದನ್ನು ನೋಡಿದ ಅವನ ಸಹೋದರರೆಲ್ಲರೂ ಅಪಹಾಸವನ್ನು ಮಾಡಿದರು.

"ಆಗ ಶ್ರೀಭೀಮಸೇನದೇವರು ಯುದ್ಧದಲ್ಲಿ ನಿಮ್ಮನ್ನೆಲ್ಲರನ್ನೂ ಸಂಹರಿಸುವೆನು" ಎಂದು ಪ್ರತಿಜ್ಞೆಯನ್ನು ಮಾಡಿದರು. ಆಗ ಶ್ರೀಭೀಮಸೇನದೇವರ ಭಯದಿಂದ ಎಲ್ಲಾ ಧೃತರಾಷ್ಟ್ರನ ಮಕ್ಕಳೂ ದ್ರೋಣಾಚಾರ್ಯರನ್ನು ಶರಣು ಹೊಂದಿದರು. ಆಗ ದ್ರೋಣಾಚಾರ್ಯರು "ನಾನು ಬ್ರಾಹ್ಮಣನಾಗಿದ್ದರೂ ಶಸ್ತ್ರವನ್ನೂ ಧರಿಸಿ ನಿಮಗಾಗಿ ಯುದ್ಧವನ್ನು ಮಾಡುವೆನು. ನನ್ನ ಮಗನಾದ ಅಶ್ವತ್ಥಾಮನೂ ನನ್ನ ಭಾವನಾದ ಶ್ರೀಕೃಪಾಚಾರ್ಯರೂ ನಿಮಗಾಗಿ ಶಸ್ತ್ರವನ್ನು ಧರಿಸುವರು. ನಾವೆಲ್ಲರೂ ನಿಮ್ಮನ್ನು ರಕ್ಷಿಸುವುದಕ್ಕೆ ಪ್ರಯತ್ನವನ್ನು ಮಾಡುವೆವು. ಆದರೆ ಭೀಮಸೇನನಿಂದ ನಿಮ್ಮನ್ನು ರಕ್ಷಿಸುವುದಕ್ಕೆ ಶಕ್ತರಲ್ಲ. ಇದು ಸತ್ಯ" ಎಂದು ಹೇಳಿದರು.

ಅನಂತರದಲ್ಲಿ ಮಹಾಶೂರರಾದ ಪಾಂಡವರೆಲ್ಲರು ದ್ರೌಪದೀದೇವಿಯರಿಂದ ಯುಕ್ತರಾಗಿ ಆ ದ್ಯೂತ ಸಭೆಯಿಂದ ಕಾಡಿಗೆ ಹೊರಟರು. ತರುಣರಾದ ಶ್ರೀಭೀಮಸೇನದೇವರನ್ನು ದುರ್ಯೋಧನನು ನೋಡಿ ನಕ್ಕನು. ಶ್ರೀಭೀಮಸೇನದೇವರು ಅವನನ್ನು ಕೆಂಡದಂತೆ ಕೆಂಪಾದ ಕಣ್ಣುಗಳಿಂದ ತಿರುಗಿ ನೋಡಿದರು. "ಎಲವೋ ದುರ್ಯೋಧನ, ನಿನ್ನ ಒಂದು ತೊಡೆಯನ್ನು ಮುರಿಯುವುದಾಗಿ ಹಿಂದೆ ಹೇಳಿದ್ದೆನು. ಇನ್ನೊಂದು ತೊಡೆಯನ್ನೂ ಮುರಿಯುತ್ತೇನೆ" ಎಂದು ಹೇಳಿದರು. ಪಾಂಡವರೆಲ್ಲರೂ ಅಯೋಗ್ಯವಾದ ಆ ಸಭೆಯಿಂದ ಹೊರಟರು.

ಪಾಂಡವರೆಲ್ಲರೂ ಕಾಡಿಗೆ ಹೋದಾಗ ಕುಂತೀದೇವಿಯು ತನ್ನ ಮಕ್ಕಳಲ್ಲಿರುವ ಪ್ರೇಮದಿಂದ ಕಾಡಿಗೆ ಹೊರಟಳು. ಅಳುತ್ತಿರುವ ಅವಳನ್ನು ವಿದುರನು ತನ್ನ ಮನೆಯಲ್ಲಿ ಇರುವಂತೆ ಹೇಳಿ ತನ್ನ ಮನೆಯಲ್ಲಿ ನಿಲ್ಲಿಸಿದನು. ಪಾಂಡವರು ಐವರೂ ಅವಳನ್ನು ನಮಸ್ಕರಿಸಿ ಅತಿವೇಗವಾಗಿ ಕಾಡಿಗೆ ಹೋದರು. ಧರ್ಮರಾಜನು ದುರ್ಯೋಧನಾದಿಗಳಲ್ಲಿ ಕೋಪಗೊಂಡಿದ್ದರೂ, ಆ ಕೋಪದ ಜೊತೆಯಲ್ಲಿ ಅವನ ತಪಸ್ಸೂ ದುರ್ಯೋಧನ ಮುಂತಾದವರನ್ನು ಸುಟ್ಟು ಬೂದಿ ಮಾಡುವ ಶಕ್ತಿಯುಳ್ಳದ್ದು, ಆದ್ದರಿಂದ ದುರ್ಯೋಧನ ಮುಂತಾದವರನ್ನು ತಮ್ಮ ಕೋಪಾಗ್ನಿಯಿಂದ ಸಹಿತವಾದ ತಪೋಬಲದಿಂದ ಸುಟ್ಟು ಬೂದಿ ಮಾಡಕೂಡದು ಎಂಬ ಉದ್ದೇಶದಿಂದ ತಲೆಯನ್ನು ತಗ್ಗಿಸಿಕೊಂಡು ಅವರನ್ನು ನೋಡದಂತೆ ಹೊರಟುಹೋದನು.

ಶ್ರೀಭೀಮಸೇನದೇವರು ಸರ್ವರನ್ನೂ ನೋಡುತ್ತಲೇ ಹೋದರು. ಅವರ ಕೋಪಾಗ್ನಿಯ ಜೊತೆಯಲ್ಲಿ ತಪಸ್ಸು ಎಂಬ ಅಗ್ನಿಯು ಸೇರುವುದಿಲ್ಲ. ಅವರು ವಿದ್ಯೋಪಜೀವಿಗಳಲ್ಲ. ಆದ್ದರಿಂದ ಅವರ ಕೋಪಾಗ್ನಿಯ ಜೊತೆಯಲ್ಲಿ ತಪಸ್ಸು ಎಂಬ ಪುಣ್ಯವು ಸೇರುವ ಸಂಭವವಿಲ್ಲ. ಅದು ಮಾತ್ರವಲ್ಲ. ಆದ್ದರಿಂದಲೇ ಸರ್ವರನ್ನೂ ಸಹಜವಾಗಿ ನೋಡುತ್ತಾ ಹೋದರು. ಎರಡು ಕೈಗಳನ್ನು ಮೇಲೆ ಎತ್ತಿಕೊಂಡೇ ಶ್ರೀಭೀಮಸೇನದೇವರು ಹೋದರು. ನನಗೆ ಯಾವ ಆಯುಧವೂ ಬೇಕಾಗಿಲ್ಲ. ಈ ಎರಡು ಕೈಗಳಿಂದಲೇ ಎಲ್ಲಾ ಶತ್ರುಗಳನ್ನೂ ಸಂಹರಿಸುವೆನು ಎಂದು ತಿಳಿಸುತ್ತಾ ಹೋದರು.

ದ್ರೌಪದೀದೇವಿಯರು ಆ ಸಭಾಗೃಹದಿಂದ ತಲೆಯನ್ನು ಜುಟ್ಟು ಗಂಟನ್ನು ಹಾಕಿಕೊಳ್ಳದೆಯೇ ಹೊರಗೆ ಬಂದರು. ದುರ್ಯೋಧನ ಮುಂತಾದವರ ಪತ್ನಿಯರಿಗೆಲ್ಲಾ ನನ್ನಂತೆಯೇ ತಲೆಗಂಟು ಹಾಕಿಕೊಳ್ಳುವ

ಭಾಗ್ಯವಿಲ್ಲವೆಂದೂ ಅವರೆಲ್ಲರೂ ಸಕೇಶಿಯರಾಗುವ ಸ್ಥಿತಿಯು ಏರ್ಪಡುತ್ತದೆಯೆಂದೂ ತಮ್ಮ ವೇಷದಿಂದ ತಿಳಿಸಿದರು.

ಆ ಕಾಲದಲ್ಲಿ ಅರ್ಜುನನು ಉಸುಗುಗಳನ್ನು ಚೆಲ್ಲುತ್ತಾ ಹೊರಟನು. ಇದರಿಂದ ಈ ಉಸುಗುಗಳನ್ನು ಚೆಲ್ಲಿದಂತೆ ಶತ್ರುಗಳಲ್ಲಿ ಬಾಣಗಳನ್ನು ಚೆಲ್ಲುವೆನು ಎಂದು ತಿಳಿಸಿದನು.

ನಕುಲ ಸಹದೇವರು ತಲೆಯನ್ನು ಬಗ್ಗಿಸಿಕೊಂಡು ಸಭಾಗೃಹದಿಂದ ಹೊರಟರು. ಈ ಅವಸ್ಥೆಯಲ್ಲಿ ನಮ್ಮ ಮುಖಗಳನ್ನು ಶತ್ರುಗಳು ನೋಡಕೂಡದು ಎಂಬ ಅಭಿಪ್ರಾಯವನ್ನು ತಿಳಿಸುತ್ತಾ ಅವರಿಬ್ಬರು ತಲೆಯನ್ನು ಬಗ್ಗಿಸಿಕೊಂಡು ಹೋಗುತ್ತಾ ತಿಳಿಸಿದರು.

ಇವರೆಲ್ಲರ ಮುಂದೆ "ಧೌಮ್ಯ" ಎಂದು ಪಾಂಡವರ ಪುರೋಹಿತರು ಪ್ರೇತಸಂಸ್ಕಾರಸೂಕ್ತಗಳನ್ನು ಹೇಳುತ್ತಾ ಹೋದರು. "ಈ ದುರ್ಯೋಧನ ಮುಂತಾದವರು ಸತ್ತ ಮೇಲೆ ಇವರಿಗೆಲ್ಲಾ ಪ್ರೇತಸಂಸ್ಕಾರಗಳನ್ನು ಮಾಡಬೇಕು" ಎಂದು ಇದರಿಂದ ತಿಳಿಸುತ್ತಾ ಹೋದರು.

**विप्रादाकर्ण्य धर्मं वनगतमनुजैः सान्त्वयित्वैत्य सर्वा-**
**नभ्येत्य द्वारकां यो नृगमथ कुजनिं दिव्यरूपं चकार।**
**गत्वा वैदेहगेहं कतिपयदिवसांस्तत्र नीत्वाऽतिभक्तौ**
**सन्तोष्य द्वारकां यान् बहुबलसमितोऽयन्नुपप्लाव्यमव्यात् ॥ २५ ॥**

**ವಿಪ್ರಾದಾಕರ್ಣ್ಯ ಧರ್ಮಂ ವನಗತಮನುಜೈಃ ಸಾಂತ್ವಯಿತ್ವೈತ್ಯ ಸರ್ವಾ**
**ನಭ್ಯೇತ್ಯ ದ್ವಾರಕಾಂ ಯೋ ನ ನೃಗಮಥ ಕುಜನಿಂ ದಿವ್ಯರೂಪಂ ಚಕಾರ।**
**ಗತ್ವಾ ವೈದೇಹಗೇಹಂ ಕತಿಪಯದಿವಸಾಂಸ್ತತ್ರ ನೀತ್ವಾತಿಬಕ್ತೌ**
**ಸಂತೋಷ್ಯ ದ್ವಾರಕಾಂ ಯಾನ್ ಬಹುಬಲಸಮಿತೋಽಯನ್ನುಪಪ್ಲಾವ್ಯಮವ್ಯಾತ್ ॥೨೫॥**

ಪದಛೇದ - ವಿಪ್ರಾತ್, ಆಕರ್ಣ್ಯ, ಧರ್ಮಂ, ವನಗತಂ, ಅನುಜೈಃ, ಸಾಂತ್ವಯಿತ್ವಾ, ಏತ್ಯ, ಸರ್ವಾನ್, ಅಭ್ಯೇತ್ಯ ದ್ವಾರಕಾಂ, ಯಃ ನೃಗಂ, ಅಥ, ಕುಜನಿಂ, ದಿವ್ಯರೂಪಂ, ಚಕಾರ, ಗತ್ವಾ, ವೈದೇಹಗೇಹಂ, ಕತಿಪಯದಿವಸಾನ್, ತತ್ರ, ನೀತ್ವಾ, ಅತಿಭಕ್ತೌ, ಸಂತೋಷ್ಯ, ದ್ವಾರಕಾಂ ಯಾನ್ ಬಹುಬಲಸಮಿತಃ, ಆಯನ್, ಉಪಪ್ಲಾವ್ಯಂ, ಅವ್ಯಾತ್.

ಅನ್ವಯ - ಯಃ ಅನುಜೈಃ (ಸಹ) ವನಗತಂ, ಧರ್ಮಂ, ವಿಪ್ರಾತ್ ಆಕರ್ಣ್ಯ, ವನಂ ಏತ್ಯ, ಸರ್ವಾನ್, ಸಾಂತ್ವಯಿತ್ವಾ, ದ್ವಾರಕಾಂ ಅಭ್ಯೇತ್ಯ, ಅಥ, ಕುಜನಿಂ, ನೃಗಂ, ದಿವ್ಯರೂಪಂ, ಚಕಾರ, ವೈದೇಹಗೇಹಂ ಗತ್ವಾ, ತತ್ರ ಕತಿಪಯದಿವಸಾನ್, ನೀತ್ವಾ ಅತಿಭಕ್ತೌ, ಸಂತೋಷ್ಯ, ದ್ವಾರಕಾಂ ಯಾನ್ ಬಹುಚಲಸಮಿತಃ ಉಪಪ್ಲಾವ್ಯಂ ಆಯನ್ ಸಃ (ಮಾಂ) ಅವ್ಯಾತ್.

ಅನ್ವಯಾರ್ಥ - ಅನುಜೈಃ ಸಹ ತಮ್ಮಂದಿರೊಡನೆ ವನಗತಂ ಕಾಡನ್ನು ಪ್ರವೇಶಿಸಿರುವ ಧರ್ಮಂ

ಧರ್ಮರಾಜನನ್ನು ವಿಪ್ರಾತ್ ಬ್ರಾಹ್ಮಣನಿಂದ ಆಕರ್ಣ್ಯ ಕೇಳಿ ತಿಳಿದವನಾಗಿ (ಏತ್ಯ) ವನವನ್ನು ಕುರಿತು ಬಂದವನಾಗಿ ಸರ್ವಾನ್ ಸರ್ವರನ್ನೂ ಸಾಂತ್ವಯಿತ್ವಾ ಸಮಾಧಾನ ಮಾಡಿದವನಾಗಿ ದ್ವಾರಕಾಂ ದ್ವಾರಕೆಯನ್ನು ಕುರಿತು ಏತ್ಯ ಬಂದವನಾಗಿ ಅಥ ಅನಂತರದಲ್ಲಿ ಕುಜನಿಂ ಕುತ್ಸಿತವಾದ ಜನ್ಮವನ್ನು ಪಡೆದಿರುವ ಅಂದರೆ ಹೆಂಟೆಗೊದ್ದದ ರೂಪವನ್ನು ಪಡೆದಿರುವ ನೃಗಂ ನೃಗ ಎಂಬ ರಾಜನನ್ನು ದಿವ್ಯರೂಪಂ ದಿವ್ಯರೂಪದಿಂದ ಯುಕ್ತನನ್ನು ಚಕಾರ ಮಾಡಿದನೋ ವೈದೇಹಗೇಹಂ ಮಿಥಿಲಾಧಿಪತಿಯಾಗಿರುವ ಬಹುಲಾಶ್ವ ಎಂಬ ರಾಜನ ಮನೆಯನ್ನು ಕುರಿತು ಗತ್ವಾ ಹೋಗಿ ಕತಿಪಯದಿವಸಾನ್ ಕೆಲವು ದಿವಸಗಳನ್ನು ತತ್ರ ಅಲ್ಲಿ ನೀತ್ವಾ ಕಳೆದವನಾಗಿ ಅತಿಭಕ್ತ್ಯಾ ಅತ್ಯಂತ ಭಕ್ತರಾಗಿರುವ ಶ್ರುತದೇವ ಎಂಬ ಯಾದವನನ್ನೂ ಬಹುಲಾಶ್ವ ಎಂಬ ವಿದೇಹದೇಶದ ರಾಜನನ್ನೂ ಸಂತೋಷಪಡಿಸಿದವನಾಗಿ ದ್ವಾರಕಾಂ ದ್ವಾರಕೆಯನ್ನು ಕುರಿತು ಯಾನ್ ಹೋದವನಾಗಿ ಬಹುಬಲಸಮಿತಃ ಅಸಂಖ್ಯಾಕವಾದ ಸೈನ್ಯದಿಂದ ಸಹಿತವಾದ ಉಪಪ್ಲಾವ್ಯಂ ಉಪಪ್ಲಾವ್ಯ ಎಂಬ ಪಟ್ಟಣವನ್ನು ಕುರಿತು ಆಯನ್ ಹೊಂದಿರುವ ಸಃ ಆ ಕೃಷ್ಣದೇವನು (ಮಾಂ) ನನ್ನನ್ನು ಅವ್ಯಾತ್ ರಕ್ಷಿಸಲಿ.

ವಿಗ್ರಹ - ವನಂ ಗತಃ ವನಗತಃ ತಂ ವನಗತಂ ; ಸಾಂತ್ವನಂ ಕೃತ್ವಾ ಸಾಂತ್ವಯಿತ್ವಾ, ಕುತ್ಸಿಕಾ ಜನಿಃ ಯಸ್ಯ ಸಃ ಕುಜನಿಃ, ತಂ ಕುಜನಿಂ ; ದಿವ್ಯಂ ರೂಪಂ ಯಸ್ಯ ಸಃ ದಿವ್ಯರೂಪಃ ತಂ ದಿವ್ಯರೂಪಂ; ಕ್ರಿಯಾಪದ-ಚಕಾರ ಚಕ್ರತುಃ ಚಕ್ರುಃ, ಚಕೃಥ ಚಕ್ರಥುಃ ಚಕ್ರ, ಚಕಾರ ಚಕರ ಚಕೃವ ಚಕೃಮ. ಡುಕೃಞ್ ಕರಣೇ ಕರಣಾರ್ಥಕಾತ್ ಕೃಞ್‌ಧಾತೋಃ ಲಿಟ್‌ಪ್ರಥಮ ಪುರುಷೈಕವಚನೇ ಚಕಾರ ಇತಿ ರೂಪಂ; ವಿದೇಹಸ್ಯ ರಾಜಾ ವೈದೇಹಃ ತಸ್ಯ ಗೇಹಃ ವೈದೇಹಗೇಹಃ, ತಂ ವೈದೇಹಗೇಹಂ । ; ಕತಿಪಯೇ ಚ ತೇ ದಿವಸಾಃ ಚ ಕತಿಪಯದಿವಸಾಃ, ತಾನ್ ಕತಿಪಯದಿವಸಾನ್; ಅತ್ಯಂತಂ ಭಕ್ತ್ಯಾ, ಅತಿಭಕ್ತ್ಯಾ, ತೌ ಅತಿಭಕ್ತೌ ; ಯಾತಿ ಇತಿ ಯಾನ್ ; ಬಹೂನಿ ಚ ತಾನಿ ಬಲಾನಿ ಚ ಬಹುಬಲಾನಿ, ಬಹುಬಲೈಃ ಸಮಿತಃ ಬಹುಬಲಸಮಿತಃ ; ಏತಿ ಇತಿ ಯನ್ ಕ್ರಿಯಾಪದಂ ; ಅವ್ಯಾತ್ ಅವ್ಯಾಸ್ತಾಂ ಅವ್ಯಾಸುಃ, ಅವ್ಯಾಃ, ಅವಾಸ್ತಂ, ಅವ್ಯಾಸ್ತ ಅವ್ಯಾಸಂ ಅವ್ಯಾಸ್ವ ಅವ್ಯಾಸ್ಮ ಅವ ರಕ್ಷಣೇ ರಕ್ಷಣಾರ್ಥಕಾತ್ ಅವ ಧಾತೋಃ ಅವ್ಯಾತ್ ಇತಿ ಆಶೀರ್ಲಿಙ್ ಪ್ರಥಮಪುರುಷೈಕವಚನೇ ರೂಪಂ.

**ವಿಶೇಷಾರ್ಥ - ಶ್ರೀಕೃಷ್ಣಃ ಸುಧರ್ಮಾಖ್ಯಸಭಾಯಾಂ ಸ್ವಕೀಯೈಃ ಸೈವ್ಯಮಾನಃ ಅಧರ್ಮಚಾರಿಣಾ ದುರ್ಯೋಧನೇನ ಅಕ್ಷೈಃ ಪರಾಜಿತಂ ಭ್ರಾತೃಭಿಃ ಸಹ ವನಂ ಪ್ರಾಪ್ತಂ ಧರ್ಮರಾಜಂ ಸ್ವಪ್ರೇಷಿತಬ್ರಾಹ್ಮಣೇನ ಶ್ರುತ್ವಾ ಕ್ರೋಧೋದ್ರಿಕ್ತಮನಾಃ ತೂರ್ಣಂ ಸತ್ಯಭಾಮಯಾ ಸಹ ರಥಮಾರುಹ್ಯ ಪಾಂಡವಸಮೀಪಂ ಗತಃ ನಾನಾವಿಧವಚನೈಃ ಸಮಾಶ್ವಾಸ್ಯ ತೈರನುಜ್ಞಾತಃ ದ್ವಾರಕಾಂ ಪ್ರಾಪ್ಯ.**

(೧೦೩) ಶ್ರೀಕೃಷ್ಣದೇವನು "ಸುಧರ್ಮಾ" ಎಂಬ ಸಭೆಯಲ್ಲಿ ಸ್ವಕೀಯರಿಂದ ಸೇವಿಸಲ್ಪಡುತ್ತಿದ್ದನು. ಆಗ ಅಲ್ಲಿಗೆ ಒಬ್ಬ ಬ್ರಾಹ್ಮಣನು ಬಂದನು. ಧರ್ಮರಾಜನು ಚದುರಂಗ ಆಟದಲ್ಲಿ ಸೋತನೆಂದೂ ತಮ್ಮಂದಿರಿಂದ ಸಹಿತನಾಗಿ ಕಾಡಿಗೆ ಹೋದನೆಂದೂ ಅಧರ್ಮಚಾರಿಯಾದ ದುರ್ಯೋಧನನಿಂದ ಕಾಡಿಗೆ ಕಳುಹಿಸಲ್ಪಟ್ಟನೆಂದೂ ತಿಳಿಸಿದನು. ಈ ಮಾತುಗಳನ್ನು ಕೇಳಿದ ಶ್ರೀಕೃಷ್ಣದೇವನು ತುಂಬಾ ಕೋಪದಿಂದ ಯುಕ್ತನಾದನು. ತನ್ನ ಪತ್ನಿಯಾದ ಸತ್ಯಭಾಮಾದೇವಿಯಿಂದ ಸಹಿತನಾಗಿ ಕಾಡಿಗೆ ಬಂದನು. ಅಲ್ಲಿ ಧರ್ಮರಾಜನನ್ನು ನೋಡಿದನು. ಆ ಸಮಯಕ್ಕೆ ಉಚಿತವಾದ ಸಮಾಧಾನ ಮಾತುಗಳನ್ನು ಹೇಳಿದನು. ಪಾಂಡವರ ಅನುಮತಿಯನ್ನು ಪಡೆದನು. ಹಿಂದಿರುಗಿ

ದ್ವಾರಕೆಗೆ ಬಂದನು.

**(೧೦೪) ವಿಶೇಷಾರ್ಥ - ತತ್ರೋಪವನೇ ಜಲರಹಿತಕೂಪೇ ಪತಿತಂ ಕಸ್ಯಚಿದ್ಬ್ರಾಹ್ಮಣಸ್ಯ ಸಂಬಂಧಿನಂ ಗೋರೂಪಪಶುಂ ಪ್ರಾಮಾದಿಕೇನ ವಿಧಿನಾ ಸ್ವಕೀಯಗೋಷು ಪ್ರವಿಷ್ಟಂ ಅಜ್ಞಾನತಃ ಅಪಹೃತ್ಯಾನ್ಯಸ್ಮೈ ದಾಪನಾಪನಾಪರಾಧನಿಮಿತ್ತೇನ ಕೃಕಲಾಸರೂಪಂ ಪ್ರಾಪ್ತಂ ಪರ್ವತನಿಭಂ ನೃಗಾಖ್ಯಂ ರಾಜಾನಂ ತತ್ರ ವನೇ ಕ್ರೀಡದ್ಭಿರ್ಯಾದವೈಃ ಶ್ರುತ್ವಾ ತೈರುದ್ಧರ್ತುಮಶಕ್ಯಂ ತಂ ಲೀಲಯಾ ವಾಮೇನ ಕರೇಣೋದ್ಧೃತ್ಯ, ಕೃಕಲಾಸದೇಹಾನ್ಮೋಚಯಿತ್ವಾ, ತಂ ದಿವ್ಯಸ್ವರೂಪಂ ಕೃತ್ವಾ, ತೇನ ರಾಜ್ಞಾ ಸ್ತುತಃ,ತಮನುಜ್ಞಾಪ್ಯ, ಸ್ವಕೀಯಾನಾಂ ಬ್ರಹ್ಮಸ್ವಾಪಹಾರಾದಿ ನ ಕರ್ತವ್ಯಮಿತಿ ಧರ್ಮಶಿಕ್ಷಾಂ ಚ ಕೃತ್ವಾ।**

**ವಿಶೇಷಾರ್ಥ ವಿವರಣ** - ದ್ವಾರಕಾಪಟ್ಟಣದ ಉಪವನದಲ್ಲಿ ಒಮ್ಮೆ ಪ್ರದ್ಯುಮ್ನ ಮುಂತಾದ ಯದುಕುಮಾರರು ಆಟಕ್ಕಾಗಿ ಹೋಗಿದ್ದರು. ಕೊನೆಗೆ ಎಲ್ಲಾ ಬಾಲಕರೂ ನೀರಡಿಕೆಯಿಂದ ಯುಕ್ತರಾದರು. ನೀರನ್ನು ಹುಡುಕುತ್ತಾ ಹೋದರು. ಆಗ ಒಂದು ಹಾಳು ಭಾವಿಯನ್ನು ನೋಡಿದರು. ಆ ಭಾವಿಯಲ್ಲಿ ನೀರು ಇರಲಿಲ್ಲ. ಕೃಕಲಾಸ ಅಂದರೆ ಹೆಂಟೆಗೊದ್ದ ಎಂಬ ಪರ್ವತಾಕಾರವುಳ್ಳ ಅತ್ಯಾಶ್ಚರ್ಯಕರವಾದ ಪ್ರಾಣಿಯನ್ನು ನೋಡಿದರು. ಅತ್ಯಾಶ್ಚರ್ಯದಿಂದ ಯುಕ್ತರಾದರು. ಚರ್ಮದಿಂದಲೂ ತಂತುಗಳಿಂದಲೂ ನಿರ್ಮಿತವಾದ ಹಗ್ಗಗಳಿಂದ ಆ ಪ್ರಾಣಿಯಲ್ಲಿ ಕೃಪೆಯಿಂದ ಮೇಲೆ ತರಬೇಕೆಂದು ಪ್ರಯತ್ನಿಸಿದರು. ಅವರಿಂದ ಸಾಧ್ಯವಾಗಲಿಲ್ಲ. ಶ್ರೀಕೃಷ್ಣದೇವನಿಗೆ ಹೇಳಿದರು. ಶ್ರೀಕೃಷ್ಣದೇವನು ಅಲ್ಲಿಗೆ ಬಂದನು. ಆ ಪ್ರಾಣಿಯನ್ನು ಎಡಗೈಯಿಂದ ಮುಟ್ಟಿದನು. ಮರುಕ್ಷಣದಲ್ಲಿ ಆ ಪ್ರಾಣಿಯು ತನ್ನ ಕೃಕಲಾಸ ಶರೀರವನ್ನು ಬಿಟ್ಟಿತು. ಕಾಸಿದ ಭಂಗಾರದ ಬಣ್ಣದಿಂದಲೂ ಅದ್ಭುತವಾದ ಆಭರಣಗಳಿಂದಲೂ ಯುಕ್ತವಾದ ದೇವತಾಶರೀರದಿಂದ ಯುಕ್ತನಾದನು.

ಶ್ರೀಕೃಷ್ಣದೇವನು ಅವನ ನಿಜಸ್ವರೂಪವನ್ನು ತಿಳಿದಿದ್ದರೂ ಅವನ ಕಥೆಯನ್ನು ಸರ್ವರಿಗೂ ತಿಳಿಸುವುದಕ್ಕೋಸ್ಕರ ಅವನನ್ನು ಕುರಿತು ಪ್ರಶ್ನೆ ಮಾಡಿದನು. ಎಲೊ ಮಹಾನುಭಾವನೇ, ನೀನು ಉತ್ತಮದೇವತೆಯೆಂದು ತಿಳಿಯುತ್ತದೆ. ನೀನು ಯಾರು ? ಕೃಕಲಾಸ ಎಂಬ ಪ್ರಾಣಿಯ ದೇಹವು ನಿನಗೆ ಹೇಗೆ ಬಂತು? ತಿಳಿಯಬೇಕೆಂದು ಆಶಿಸುವ ನಮಗೆ ನಿನ್ನ ಚರಿತ್ರೆಯನ್ನು ಹೇಳು ಎಂದು ಕೇಳಿದನು. ಹೀಗೆ ಪ್ರಶ್ನಿಸಲ್ಪಟ್ಟ ಆತನು (ನೃಗಮಹಾರಾಜನು) ತನ್ನ ಕಿರೀಟಗಳಿಂದ ಬಗ್ಗಿ ನಮಸ್ಕರಿಸಿದವನಾಗಿ ಉತ್ತರವನ್ನು ಕೊಟ್ಟನು.

"ಇಕ್ಷ್ವಾಕು" ಎಂಬ ರಾಜನ ಮಗನಾದ "ನೃಗ"ನನ್ನು ನೀನು ಕೇಳಿರಬಹುದು. ದಾನವನ್ನು ಕೊಡುವವರಲ್ಲಿ ನಾನು ಅತ್ಯಂತ ಪ್ರಸಿದ್ಧನು. ನಿನಗೆ ತಿಳಿಯದ ವಿಷಯವು ಯಾವುದೂ ಇಲ್ಲ. ಆದರೂ ನಿನ್ನ ಆಜ್ಞೆಯಿಂದ ತಿಳಿಸುವೆನು. ಭೂಮಿಯಲ್ಲಿರುವ ಉಸುಗುಗಳ ಸಂಖ್ಯೆಯನ್ನೂ ಆಕಾಶದಲ್ಲಿರುವ ನಕ್ಷತ್ರಗಳ ಸಂಖೆಯನ್ನೂ ಎಣಿಸಲು ಸಾಧ್ಯವಿಲ್ಲ. ನಾನು ಕೊಟ್ಟಿರುವ ಗೋವುಗಳ ಸಂಖ್ಯೆಯೂ ಅಪರಿಮಿತವಾದುದು. ನಾನು ಕೊಟ್ಟಿರುವ ಗೋವುಗಳೆಲ್ಲವೂ ಒಳ್ಳೇ ಹಾಲನ್ನು ಕರೆಯುತ್ತಿದ್ದವು. ಒಳ್ಳೆಯ ಶೀಲದಿಂದಲೂ ಗುಣಗಳಿಂದಲೂ ರೂಪದಿಂದಲೂ ಯುಕ್ತವಾಗಿದ್ದವು. ಎಲ್ಲಾ ಗೋವುಗಳೂ ತಾರುಣ್ಯದಿಂದ ಯುಕ್ತವಾಗಿದ್ದವು. ಎಲ್ಲಾ ಗೋವುಗಳೂ ಕಪಿಲಬಣ್ಣದಿಂದ ಯುಕ್ತವಾಗಿದ್ದವು. ಭಂಗಾರದ ಕೊಂಬುಗಳಿಂದಲೂ ಬೆಳ್ಳಿಯ ಗೊರಸುಗಳಿಂದಲೂ ಕರುಗಳಿಂದಲೂ ಯುಕ್ತವಾಗಿಯೂ ಇದ್ದವು. ಮಾಲೆಗಳಿಂದಲೂ ಪೀತಾಂಬರಗಳಿಂದಲೂ ಅಲಂಕರಿಸಿ ಈ ಗೋವುಗಳನ್ನು ದಾನ ಮಾಡಿದೆನು.

ದಾನವನ್ನು ತೆಗೆದುಕೊಳ್ಳುವ ಬ್ರಾಹ್ಮಣರೂ ಅಲಂಕರಿಸಲ್ಪಟ್ಟರು. ಗುಣಗಳಿಂದಲೂ ಶೀಲಗಳಿಂದಲೂ ಭೂಷಿತರಾಗಿದ್ದರು. ಬಡವರನ್ನು ನೋಡಿ ದಾನವನ್ನು ಮಾಡಿದೆನು. ತರುಣರೂ ತಪಸ್ವಿಗಳೂ ಆದ ಬ್ರಾಹ್ಮಣರು ದಾನವನ್ನು ತೆಗೆದುಕೊಂಡರು.

ಗೋದಾನ, ಹಿರಣ್ಯದಾನ, ಗೃಹದಾನ, ಅಶ್ವದಾನ, ಹಸ್ತಿದಾನ, ಕನ್ಯಾದಾನ, ದಾಸೀದಾನ, ತಿಲದಾನ, ರಜತದಾನ, ಶಯ್ಯಾದಾನ, ವಸ್ತ್ರದಾನ, ರತ್ನದಾನ, ರಥದಾನ ಮುಂತಾದ ಎಲ್ಲಾ ದಾನಗಳನ್ನೂ ಮಾಡಿದೆನು. ಕೆರೆ, ಭಾವಿ ಮುಂತಾದವುಗಳನ್ನು ತೋಡಿದೆನು.

ಈ ವಿಧದಿಂದ ಅಸಂಖ್ಯ ದಾನಗಳನ್ನು ಮಾಡುತ್ತಿದ್ದ ನನಗೆ ಕಷ್ಟಕಾಲವು ಬಂತು. ಒಂದು ದಿನ ನನ್ನಿಂದ ಒಬ್ಬ ಬ್ರಾಹ್ಮಣಶ್ರೇಷ್ಠರಿಗೆ ದಾನ ಮಾಡಲ್ಪಟ್ಟ ಒಂದು ಗೋವು ನನ್ನ ಗೋವುಗಳ ಮಂದೆಯೊಳಗೆ ಸೇರಿಕೊಂಡಿತು. ಮರುದಿನದಲ್ಲಿ ಅದೇ ಗೋವನ್ನು ಇನ್ನೊಬ್ಬನಿಗೆ ದಾನ ಮಾಡಿದೆನು. ಎರಡನೆಯದಾಗಿ ಆ ಗೋವನ್ನು ತೆಗೆದುಕೊಂಡವನು ತನ್ನ ಮನೆಗೆ ಹೋಗುತ್ತಿದ್ದನು. ಹಿಂದಿನ ದಿನದಲ್ಲಿ ದಾನವನ್ನು ತೆಗೆದುಕೊಂಡವನು ಆ ಮಾರ್ಗವಾಗಿ ಬರುತ್ತಿದ್ದನು. ಅವನು ಆ ಗೋವನ್ನು ಗುರುತು ಹಿಡಿದನು. "ಇದು ನನ್ನ ಆಕಳು. ನನಗೆ ಕೊಡು" ಎಂದು ಹೇಳಿದನು. ಮರುದಿನದಲ್ಲಿ ದಾನವನ್ನು ತೆಗೆದುಕೊಂಡವನು "ಇದು ನನ್ನ ಆಕಳು. ನನಗೆ ಕೊಡು ನೃಗ ಎಂಬ ರಾಜನು ನನಗೆ ಕೊಟ್ಟಿರುವನು" ಎಂದು ಹೇಳಿದನು. ಇಬ್ಬರೂ ನನ್ನಲ್ಲಿಗೆ ಬಂದರು.

ಎಲೋ ರಾಜನೇ, ನೀನು ದಾನಮಾಡಿದ್ದೀ, ಅಪಹಾರವನ್ನೂ ಮಾಡಿದ್ದೀ, ಇದು ನ್ಯಾಯವೇ? ಎಂದು ಕೇಳಿದನು. ಅದಕ್ಕೆ ನಾನು "ತಿಳಿಯದೆ ಮೊದಲನೆಯ ಯಜಮಾನನ ಮನೆಯಿಂದ ತಪ್ಪಿಸಿಕೊಂಡು ಬಂದು ನನ್ನ ಗೋವುಗಳ ಸಮೂಹದಲ್ಲಿ ಸೇರಿರುವ ಗೋವನ್ನು ಇನ್ನೊಬ್ಬನಿಗೆ ದಾನ ಮಾಡಿಬಿಟ್ಟೆನು. ಒಂದು ಲಕ್ಷ ಉತ್ತಮ ಗೋವುಗಳನ್ನು ಕೊಡುತ್ತೇನೆ. ಈ ಗೋವನ್ನು ನನಗೆ ಕೊಡಿರಿ" ಎಂದು ಪ್ರಾರ್ಥಿಸಿದೆನು. ಇಬ್ಬರೂ "ಅದೇ ಗೋವೇ ಬೇಕು" ಎಂದು ಹಟ ಹಿಡಿದರು. ಆ ಗೋವನ್ನು ಬಿಟ್ಟು ಹೋದರು. ನಾನು ಸತ್ತಕೂಡಲೇ ಯಮನ ಮುಂದೆ ನನ್ನನ್ನು ನಿಲ್ಲಿಸಿದರು. ಆಗ ಯಮನು ನನ್ನನ್ನು ನೋಡಿ ಕೇಳಿದನು. "ಎಲೋ ನೃಗಮಹಾರಾಜನೇ, ನೀನು ಗೋವನ್ನು ಒಬ್ಬ ಬ್ರಾಹ್ಮಣನಿಗೆ ದಾನ ಮಾಡಿ ತಿಳಿಯದೆ ಇನ್ನೊಬ್ಬನಿಗೆ ದಾನ ಮಾಡಿರುವಿ. ಇದು ಒಂದು ನೀನು ಮಾಡಿರುವುದು ಪಾಪಕಾರ್ಯ, ಈ ಪಾಪಕ್ಕೆ ಫಲವನ್ನು ಮೊದಲು ಅನುಭವಿಸುವಿಯಾ? ಅಸಂಖ್ಯ ಗೋದಾನಗಳನ್ನು ಮಾಡಿರುವಿ. ಅವುಗಳಿಗೆ ಅನಂತ ಫಲವು ಇರುವುದು. ಆ ಪುಣ್ಯಗಳ ಫಲವನ್ನು ಮೊದಲು ಅನುಭವಿಸುವಿಯಾ? ಎಂದು ಯಮನ ಕೇಳಿದನು. ಅದಕ್ಕೆ ನಾನು ಪಾಪದ ಫಲವನ್ನು ಮೊದಲು ಅನುಭವಿಸುವೆನು ಎಂದು ಹೇಳಿದೆನು.

ಆ ಕ್ಷಣದಲ್ಲಿ ಯಮನು ನನ್ನನ್ನು ನೋಡಿ "ಪತ" ಅಂದರೆ "ಕೆಳಗೆ ಬೀಳು" ಎಂದನು. ಆಗ ನಾನು ಕೃಕಲಾಸ ಎಂಬ ಈ ಶರೀರದಿಂದ ಕೆಳಗೆ ಬಿದ್ದೆನು. "ಬ್ರಾಹ್ಮಣರಲ್ಲಿ ವಿಶೇಷವಾದ ಪ್ರೀತಿಯುಳ್ಳವನೂ ಬ್ರಾಹ್ಮಣರಿಗೆ ಬೇಕಾದ ಅನುಗ್ರಹವನ್ನು ಮಾಡುತ್ತಿರುವವನೂ ಆಗಿರುವ ನಿನ್ನ ಅನುಗ್ರಹದಿಂದ ಈ ಕೃಕಲಾಸಯೋನಿಯಲ್ಲಿಯೂ ನಿನ್ನ ಸ್ಮರಣೆಯು ಹೋಗಲಿಲ್ಲ. ನಿನ್ನನ್ನು ನೋಡಬೇಕೆಂದು ಆಶಿಸುತ್ತಿರುವ ನನಗೆ ನಿನ್ನ ಸಂದರ್ಶನವು ಏರ್ಪಟ್ಟಿತು. ಯೋಗೇಶ್ವರರಿಗೂ ದುರ್ಲಭವಾದ ನಿನ್ನ ದರ್ಶನದಿಂದ ಧನ್ಯನಾದೆನು. ದೇವದೇವ, ಜಗನ್ನಾಥ, ಗೋವಿಂದ,

ಪುರುಷೋತ್ತಮ, ನಾರಾಯಣ, ಹೃಷೀಕೇಶ, ನಾನು ದೇವತ್ವವನ್ನು ಹೊಂದುತ್ತಿರುವೆನು. ನೀನು ಅನುಜ್ಞೆಯನ್ನು ಕೊಡು. ಎಲ್ಲಿ ನಾನು ಹುಟ್ಟಿದರೂ ನನ್ನ ಮನಸ್ಸು ನಿನ್ನಲ್ಲಿ ಸೇರಲಿ." ಹೀಗೆ ಶ್ರೀಕೃಷ್ಣದೇವನನ್ನು ಸ್ತುತಿಸುತ್ತಾ ದೇವಲೋಕದಿಂದ ಅವನಿಗಾಗಿ ಬಂದಿರುವ ವಿಮಾನದಲ್ಲಿ ಏರಿ ಕುಳಿತನು. ಎಲ್ಲರೂ ನೋಡುತ್ತಿರುವಾಗ ದೇವಲೋಕಕ್ಕೆ ಹೋದನು.

ಆಗ ಶ್ರೀಕೃಷ್ಣದೇವನು ಸಕಲ ಯಾದವರನ್ನೂ ನೋಡಿ ಧರ್ಮರಹಸ್ಯವನ್ನು ಉಪದೇಶಿಸಿದನು. "ಎಲೈ ಯಾದವರಿರಾ, ಬ್ರಾಹ್ಮಣರ ವಸ್ತುವು ಜೀರ್ಣಿಸಿಕೊಳ್ಳಲು ಅಶಕ್ಯವಾದುದು. ಬೆಂಕಿಯನ್ನು ತಿಂದು ಜೀರ್ಣಿಸಿಕೊಳ್ಳುವುದು ಹೇಗೆ ಅಶಕ್ಯವೋ ಅದರಂತೆ ಎಂದು ತಿಳಿಯಿರಿ. ರಾಜನು ತಾನು ಈಶ್ವರನು ಎಂದು ತಿಳಿದಿರಬಹುದು. ತಾನು ಮಹಾ ತೇಜಸ್ವಿ ಎಂದು ತಿಳಿದುಕೊಂಡಿರಬಹುದು. ಆದರೂ ಬ್ರಾಹ್ಮಣರ ದ್ರವ್ಯದಂತೆ ಭಯಂಕರವಾದ ವಸ್ತುವು ಯಾವುದೂ ಇಲ್ಲ. ಹಾಲಾಹಲ ವಿಷಕ್ಕೂ ಪರಿಹಾರವಿದೆ. ಆದ್ದರಿಂದ ಹಾಲಾಹಲ ವಿಷವನ್ನು ವಿಷವೆಂದು ನಾನು ತಿಳಿಯಲಿಲ್ಲ. ಬ್ರಾಹ್ಮಣರ ದ್ರವ್ಯವೆಂಬ ವಿಷಕ್ಕೆ ಪರಿಹಾರವೇ ಇಲ್ಲ. ವಿಷವು ಕುಡಿಯುವವನನ್ನು ಕೊಲ್ಲುತ್ತದೆ. ಬೆಂಕಿಯು ನೀರಿನಿಂದ ಶಾಂತವಾಗುತ್ತದೆ. ಬ್ರಾಹ್ಮಣದ್ರವ್ಯ ಎಂಬ ಅರಣಿಯಿಂದ ಹುಟ್ಟಿರುವ ಅಗ್ನಿಯು ಕುಲವನ್ನು ಬೇರು ಸಹಿತವಾಗಿ ಸುಡುತ್ತದೆ. ಬ್ರಾಹ್ಮಣ ದ್ರವ್ಯವು ಬ್ರಾಹ್ಮಣರಿಂದ ಅಸಡ್ಡೆಯಿಂದ ಕೊಡಲ್ಪಟ್ಟರೆ ಆ ದ್ರವ್ಯವನ್ನು ತಿಂದವನೂ ಅವನಿಗಿಂತ ಹಿಂದಿನ ಮತ್ತು ಮುಂದಿನ ಮೂರು ಪುರುಷರೂ ಹಾಳಾಗಿ ಹೋಗುವರು. ಬಲಾತ್ಕಾರದಿಂದ ಬ್ರಾಹ್ಮಣರಿಂದ ಅಪಹರಿಸಿ ಆ ದ್ರವ್ಯವನ್ನು ಅನುಭವಿಸುವವರು ಅವರಿಗಿಂತ ಹಿಂದಿನ ಮತ್ತು ಮುಂದಿನ ಹತ್ತು ಹತ್ತು ಜನರಿಂದ ಸಹಿತರಾಗಿ ನರಕಗಳಲ್ಲಿ ಯಾತನೆಯನ್ನು ಅನುಭವಿಸುವರು.

ರಾಜಲಕ್ಷ್ಮಿಯು ರಾಜರನ್ನು ಕುರುಡರಾಗುವಂತೆ ಮಾಡುತ್ತದೆ. ರಾಜಲಕ್ಷ್ಮಿಯಿಂದ ಕುರುಡರಾಗಿರುವ ರಾಜರುಗಳು ತಾವು ನರಕದಲ್ಲಿ ಬೀಳುತ್ತಿರುವುದನ್ನು ತಿಳಿಯುವುದಿಲ್ಲ. ಮೂರ್ಖರು ಬ್ರಾಹ್ಮಣ ದ್ರವ್ಯವೆಂಬ ನರಕವನ್ನು ತಿಳಿಯುವುದಿಲ್ಲ. ಬ್ರಾಹ್ಮಣರ ಜೀವನೋಪಾಯಗಳು ಅಪಹರಿಸಲ್ಪಟ್ಟಾಗ ಕುಟುಂಬಿಗಳು ಕಣ್ಣೀರುಗಳನ್ನು ಸುರಿಸುತ್ತಿರುವಾಗ ಆ ಕಣ್ಣೀರಿನ ಬಿಂದುಗಳು ಭೂಮಿಯಲ್ಲಿರುವ ಧೂಳಿಗಳಲ್ಲಿ ಎಷ್ಟು ಬಿಂದುಗಳನ್ನು ಸ್ವೀಕರಿಸುತ್ತವೆಯೋ ಅಷ್ಟು ವರ್ಷಗಳ ವರೆಗೆ "ಕುಂಭೀಪಾಕ" ಎಂಬ ನರಕದಲ್ಲಿ ಪಾಪಿಗಳು ಕಷ್ಟವವನ್ನು ಅನುಭವಿಸುವರು.

ತನ್ನಿಂದ ಕೊಡಲ್ಪಟ್ಟ ಅಥವಾ ಇತರರಿಂದ ಕೊಡಲ್ಪಟ್ಟ ಅಥವಾ ಬ್ರಾಹ್ಮಣರ ದ್ರವ್ಯವನ್ನು ಯಾರು ಅಪಹರಿಸುವರೋ ಅವರು ಅರವತ್ತು ಸಾವಿರ ವರ್ಷಗಳ ವರೆಗೆ ಅಮೇಧ್ಯದಲ್ಲಿ ಹುಳುವಾಗಿ ಹುಟ್ಟುವರು. ನನಗೆ ಬ್ರಾಹ್ಮಣದ್ರವ್ಯವು ಬಾರದಿರಲಿ. ಅದನ್ನು ತಿಂದದ್ದರಿಂದ ಆಯುಸ್ಸು ಕ್ಷೀಣವಾಗುತ್ತದೆ. ಯುದ್ಧದಲ್ಲಿ ಪರಾಜಯವೂ ರಾಜ್ಯಭ್ರಂಶವೂ ಏರ್ಪಡುತ್ತದೆ. ಎಲ್ಲಾ ಕಡೆಯಿಂದಲೂ ಭಯವು ಏರ್ಪಡುತ್ತದೆ.

ಎಲೈ ಮಕ್ಕಳಿರಾ, ಬ್ರಾಹ್ಮಣನು ಅಪರಾಧವನ್ನು ಮಾಡಿದ್ದರೂ, ಹೊಡೆದಿದ್ದರೂ, ಶಾಪವನ್ನು ಕೊಡುತ್ತಿದ್ದರೂ ಅವನನ್ನು ನಮಸ್ಕರಿಸಿರಿ. ಬ್ರಾಹ್ಮಣರನ್ನು ನಾನು ನಮಸ್ಕರಿಸುತ್ತಿರುವಂತೆ ನೀವೆಲ್ಲರೂ ನಮಸ್ಕರಿಸಿರಿ. ನನ್ನ ಆಜ್ಞೆಯಂತೆ ನಡೆಯದಿದ್ದವನು ನನ್ನಿಂದ ಶಿಕ್ಷಿಸಲ್ಪಡುವನು.

ಬ್ರಾಹ್ಮಣನ ದ್ರವ್ಯವನ್ನು ಅಪಹರಿಸಿದವನು ನರಕದಲ್ಲಿ ಬೀಳುವನು. ತಿಳಿಯದೆ ಅಪಹರಿಸಿದರೂ ನರಕದಲ್ಲಿ ಪತನವು ನಿಶ್ಚಿತ. ಬ್ರಾಹ್ಮಣನ ಗೋವು ನೃಗನನ್ನು ನರಕದಲ್ಲಿ ತಳ್ಳಲಿಲ್ಲವೇ? ಹೀಗೆ ಶ್ರೀಕೃಷ್ಣದೇವನು ಧರ್ಮರಹಸ್ಯವನ್ನು ಉಪದೇಶಿಸಿ ತನ್ನ ಮನೆಯೊಳಗೆ ಪ್ರವೇಶಿಸಿದನು

**(೧೦೫) ವಿಶೇಷಾರ್ಥ - ವಿದೇಹಪುರವಾಸಿನಂ ಸ್ವಭಕ್ತಂ ಯಾದವಶ್ರೇಷ್ಠಂ ಶ್ರುತದೇವನಾಮಾನಂ ತಥಾ ವಿದೇಹದೇಶಾಧಿಪತಿಂ ಸ್ವಭಕ್ತಂ ಬಹುಲಾಶ್ವನಾಮಕಂ ರಾಜಾನಂ ಚ ದ್ರಷ್ಟುಂ ವಿದೇಹನಗರಂ ಪ್ರಾಪ್ಯ, ಸ್ವಸ್ವಗೃಹಂ ಪ್ರತ್ಯಾಗಮನಾರ್ಥಂ ಉಭಾಭ್ಯಾಂ ಪ್ರಾರ್ಥಿತಃ ಯುಗಪದೇವ ರೂಪದ್ವಯೇನ ರಾಜಗೃಹಂ ಶ್ರುತದೇವಗೃಹಂ ಚ ಪ್ರಾಪ್ಯ, ತಾಭ್ಯಾಂ ಕೃತಪೂಜಾಂ ಸ್ವೀಕೃತ್ಯ, ರಾಜಪ್ರೀತ್ಯರ್ಥಂ, ತದ್ಗೃಹೇ ಕತಿಚನ್ಮಾಸಾನುಷಿತ್ವಾ, ಸ್ವಭಕ್ತೌ ರಾಜಶ್ರುತದೇವೌ ಸಂತೋಷ್ಯ ತಾಭ್ಯಾಮನುಜ್ಞಾತಃ ದ್ವಾರಕಾಂ ಪ್ರಾಪ್ತವಾನ್.**

ವಿಶೇಷಾರ್ಥ ವಿವರಣ - ಶ್ರೀಕೃಷ್ಣದೇವನಿಗೆ ಅತ್ಯಂತ ಪ್ರಿಯನಾದ "ಶ್ರುತದೇವ" ಎಂದು ಪ್ರಸಿದ್ಧನಾದ ಬ್ರಾಹ್ಮಣಶ್ರೇಷ್ಠನು ವಿದೇಹನಗರದಲ್ಲಿ ವಾಸಿಸುತ್ತಿದ್ದನು. ಅವನು ಶ್ರೀಕೃಷ್ಣಭಕ್ತಿಯಿಂದ ಕೃತಕೃತ್ಯನಾಗಿದ್ದನು. ಶಾಂತನೂ, ಜ್ಞಾನಿಶ್ರೇಷ್ಠನೂ, ವಿಷಯಗಳ ಆಸೆಯಿಲ್ಲದವನೂ ಆಗಿದ್ದನು. ತನ್ನ ದೇಹಯಾತ್ರೆಯ ನಿರ್ವಾಹಕ್ಕೆ ಬೇಕಾಗಿರುವ ವಸ್ತುಗಳನ್ನು ಮಾತ್ರ ಪ್ರತಿದಿನದಲ್ಲಿಯೂ ಭಿಕ್ಷೆಯಿಂದ ತಂದು ಜೀವಿಸುತ್ತಿದ್ದನು. ಅದಕ್ಕಿಂದ ಅಧಿಕವಾದ ಯಾವ ವಸ್ತುಗಳನ್ನೂ ಸಂಗ್ರಹಿಸುತ್ತಿದ್ದಿಲ್ಲ. ಹೀಗೆ ತೃಪ್ತನಾಗಿ ಶ್ರುತದೇವನು ಜೀವಿಸುತ್ತಿದ್ದನು.

ಅದೇ ರಾಜ್ಯದಲ್ಲಿ "ಬಹುಲಾಶ್ವ" ಎಂಬ ರಾಜನು ವಾಸಿಸುತ್ತಿದ್ದನು. ಅವನು ಅಹಂಕಾರ ಮಮಕಾರಗಳನ್ನು ಬಿಟ್ಟವನು. ಈ ಶ್ರುತದೇವನೂ ಬಹುಲಾಶ್ವರೂ ಶ್ರೀಕೃಷ್ಣದೇವನಿಗೆ ತುಂಬಾ ಪ್ರಿಯರಾದವರು. ಶ್ರೀಕೃಷ್ಣದೇವನು ಬಂದ ಸಮಾಚಾರವನ್ನು ತಿಳಿದ ಶ್ರುತದೇವನೂ ಬಹುಲಾಶ್ವನೂ ಶ್ರೀಕೃಷ್ಣದೇವನನ್ನು ಒಂದೇ ಸಲ ತಮ್ಮ ತಮ್ಮ ಮನೆಗಳಿಗೆ ಬರಬೇಕೆಂದು ಪ್ರಾರ್ಥಿಸಿದರು. ಶ್ರೀಕೃಷ್ಣದೇವನು ಅವರಿಬ್ಬರ ಪ್ರಾರ್ಥನೆಗಳನ್ನೂ ಅಂಗೀಕರಿಸಿದನು. ತನ್ನ ಜೊತೆಯಲ್ಲಿ ಬಂದಿರುವ ನಾರದ, ವಾಮದೇವ, ಅತ್ರಿ ಮುಂತಾದ ಮುನಿಗಳ ಮುಂತಾದ ಋಷಿಗಳೂ ಎರಡು ಎರಡು ರೂಪಗಳನ್ನು ಸ್ವೀಕರಿಸಿದರು. ಸರ್ವಪರಿವಾರ ಸಮೇತನಾಗಿ ಒಂದು ರೂಪದಿಂದ ಶ್ರುತದೇವನ ಮನೆಗೂ ಇನ್ನೊಂದು ರೂಪದಿಂದ ಬಹುಲಾಶ್ವನ ಮನೆಗೂ ಹೋದರು. ಆ ನಗರದಲ್ಲಿರುವ ಸಕಲ ಜನರೂ ಈ ವಿಚಿತ್ರ ವ್ಯಾಪಾರವನ್ನು ನೋಡಿ ಪರವಶರಾದರು.

ಆನರ್ತ, ಧನ್ವ, ಕುರುಜಾಂಗಲ, ಕಂಕ, ಮತ್ಸ್ಯ, ಪಾಂಚಾಲ, ಕುಂತಿ, ಕೇಕಯ, ಕೋಸಲ ಮುಂತಾದ ದೇಶಗಳಲ್ಲಿರುವ ಸ್ತ್ರೀಯರೂ, ಪುರುಷರೂ ಶ್ರೀಕೃಷ್ಣದೇವನ ಸ್ನೇಹಪೂರಿತವಾದ ಮುಖವನ್ನು ತಮ್ಮ ಕಣ್ಣುಗಳಿಂದ ಆಸೆ ತೀರುವ ವರೆಗೂ ಪುನಃ ಪುನಃ ನೋಡಿದರು. ಅವರುಗಳೆಲ್ಲರೂ ಶ್ರೀಕೃಷ್ಣದೇವನನ್ನು ನೋಡುತ್ತಾ ತೃಪ್ತರಾದರು. ಬಹಳ ಸಂತೋಷದಿಂದ ಪೂಜಿಸಿದರು. ಪ್ರೀತಿಯಿಂದ ಪರವಶವಾಗಿರುವ ಮನಸ್ಸಿನಿಂದ ಎರಡು ಕೈಗಳನ್ನು ತಲೆಯಲ್ಲಿ ಧರಿಸಿ ಶ್ರೀಕೃಷ್ಣದೇವನನ್ನು ನಮಸ್ಕರಿಸಿದರು. ಶ್ರುತದೇವನೂ ಬಹುಲಾಶ್ವರಾಜನೂ ತಮ್ಮನ್ನು ಅನುಗ್ರಹಿಸುವುದಕ್ಕಾಗಿ ಬಂದಿರುವನು ಎಂದು ತಿಳಿದು ಸಾಷ್ಟಾಂಗ ನಮಸ್ಕಾರವನ್ನು ಮಾಡಿದರು.

ಕಿವಿಗಳಿಂದ ಕೇಳಿ ತಿಳಿಯುವುದಕ್ಕೂ ದುರ್ಲಭನಾಗಿರುವ ಶ್ರೀಕೃಷ್ಣದೇವನನ್ನೂ, ಅವನೊಡನೆ ಬಂದಿರುವ ನಾರದ ಮುಂತಾದ ಮುನಿಗಳನ್ನೂ ಉತ್ತಮವಾದ ಆಸನಗಳಲ್ಲಿ ಬಹುಲಾಶ್ವರಾಜನು ಕುಳ್ಳಿರಿಸಿದನು. ಅವರೆಲ್ಲರ ಲೋಕಪಾವನಕರವಾದ ಪಾದಗಳನ್ನು ತೊಳೆದನು. ಆ ಜಲವನ್ನು ತಾನು ಕುಟುಂಬ ಸಹಿತನಾಗಿ ತಲೆಯಲ್ಲಿ ಧರಿಸಿ ಧನ್ಯನಾದನು. ಅತ್ಯಂತ ಮಧುರವಾದ ಮಾತುಗಳಿಂದ ಶ್ರೀಕೃಷ್ಣದೇವನನ್ನು ತೃಪ್ತಿಪಡಿಸಿದನು. "ಪ್ರಭೋ, ಸರ್ವ ಪ್ರಾಣಿಗಳಿಗೂ ಅಂತರ್ಯಾಮಿಯಾಗಿರುವ ನಿನ್ನ ಪಾದಕಮಲಗಳನ್ನು ನಾನು ಯಾವಾಗಲೂ ಸ್ಮರಿಸುತ್ತಿರುವೆನು. ಈ ದಿನ ನೀನು ನನಗೆ ಪ್ರತ್ಯಕ್ಷನಾಗಿರುವಿ. ನಿಷ್ಕಿಂಚನರಾಗಿರುವ ಶಾಂತರಾಗಿರುವ ಮುನಿಗಳಿಗೆ ನೀನು ನಿನ್ನನ್ನೇ ಕೊಡುತ್ತೀಯಿ. ನೀನು ಕೆಲವು ದಿನಗಳ ವರೆಗೆ ನನ್ನ ಮನೆಯಲ್ಲಿದ್ದು ನಿನ್ನ ಪಾದಗಳ ಧೂಳಿಗಳಿಂದ ನನ್ನನ್ನು ಪಾವನನಾಗುವಂತೆ ಮಾಡು" ಎಂದು ಪ್ರಾರ್ಥಿಸಿದನು.

ಶ್ರುತದೇವನು ತನಗಾಗಿ ಬಂದಿರುವ ಶ್ರೀಕೃಷ್ಣದೇವನನ್ನು ನೋಡಿ ಮುನಿಗಳನ್ನೂ ನೋಡಿದನು. ತನ್ನ ವಸ್ತ್ರವನ್ನು ಹಾರಿಸುತ್ತಾ ಕುಣಿದನು. ಹುಲ್ಲಿನ ಆಸನವನ್ನು ಸಮರ್ಪಿಸಿ ಪಾದಗಳನ್ನು ತೊಳೆದನು. ಆನಂದ ಪರವಶನಾಗಿ ಫಲಗಳನ್ನೂ ಲಾಮಂಚ ಮುಂತಾದ ವಸ್ತುಗಳನ್ನೂ ಶೀತಲವಾದ ನೀರುಗಳನ್ನೂ ತುಳಸೀ, ದರ್ಭೆ, ಕಮಲ ಮುಂತಾದವುಗಳನ್ನೂ ಸಮರ್ಪಿಸಿ ಪೂಜಿಸಿದನು.

ಪರಮ ಪುರುಷನಾಗಿರುವ ನೀನು ಇವತ್ತು ನನ್ನ ಕಣ್ಣುಗಳಿಗೆ ಬಿದ್ದಿರುವಿ. ನೀನು ನಮಗೆ ನಿನ್ನನ್ನು ಹೇಗೆ ಸೇವಿಸಬೇಕೋ ಅದನ್ನು ಆಜ್ಞಾಪಿಸು. ನಾವು ಏನನ್ನು ಮಾಡಬೇಕೋ ಅದನ್ನು ಆಜ್ಞಾಪಿಸು. ನಿನ್ನ ದರ್ಶನವು ಏರ್ಪಡುವ ವರೆಗೆ ಎಲ್ಲಾ ಕ್ಲೇಶಗಳೂ ಏರ್ಪಡುತ್ತವೆ. ನಿನ್ನ ದರ್ಶನವು ಏರ್ಪಟ್ಟ ಮೇಲೆ ಕ್ಲೇಶಗಳಿಲ್ಲ. ಎಂದು ಶ್ರುತದೇವನು ಹೇಳಿದನು. ನಂತರ ಶ್ರೀಕೃಷ್ಣದೇವನು ಶ್ರುತದೇವನನ್ನು ಕುರಿತು ಹೀಗೆ ಹೇಳಿದನು. ಓ ಶ್ರುತದೇವ, ಈ ಮುನಿಗಳೆಲ್ಲರೂ ನಿನ್ನನ್ನು ಅನುಗ್ರಹಿಸುವುದಕ್ಕಾಗಿ ಈಗ ನಿನ್ನ ಮನೆಗೆ ಬಂದಿರುವರು. ನನ್ನಿಂದ ಸಹಿತರಾಗಿ ನಿನ್ನಂತಹ ಭಕ್ತರ ಮನೆಗಳಲ್ಲಿ ಸಂಚರಿಸುತ್ತಿರುವರು. ದೇವತೆಗಳ ತೀರ್ಥಕ್ಷೇತ್ರಗಳ ದರ್ಶನ, ಸ್ಪರ್ಶನ, ಅರ್ಚನ ಮುಂತಾದವುಗಳಿಂದ ಸರ್ವರನ್ನೂ ಪರಿಶುದ್ಧರಾಗುವಂತೆ ಮಾಡುತ್ತಿರುವವು. ಅದೂ ಜ್ಞಾನಿಗಳ ಸೇವೆಯಿಂದ ಸಫಲವಾಗುತ್ತದೆ. ಬ್ರಾಹ್ಮಣನು ಎಲ್ಲರಿಗಿಂತಲೂ ಶ್ರೇಷ್ಠನು. ತಪಸ್ಸಿನಿಂದಲೂ ವಿದ್ಯೆಯಿಂದಲೂ ತೃಪ್ತಿಯಿಂದಲೂ ಯುಕ್ತನಾದ ಬ್ರಾಹ್ಮಣನಷ್ಟು ಉತ್ತಮನು ಯಾರೂ ಇಲ್ಲ. ಇದನ್ನು ತಿಳಿಯದೆ ಬ್ರಾಹ್ಮಣರನ್ನು ಕೆಲವರು ತಿರಸ್ಕರಿಸುವರು. ನೀನು ಬ್ರಾಹ್ಮಣರನ್ನು ಬಹಳ ಭಕ್ತಿಯಿಂದ ಆರಾಧಿಸು ಎಂದು ಆಜ್ಞಾಪಿಸಿದನು. ಆ ಶ್ರುತದೇವನೂ ಬಹುಲಾಶ್ವನೂ ಶ್ರೀಕೃಷ್ಣದೇವನಿಂದ ಬ್ರಾಹ್ಮಣ ಭಕ್ತಿಯ ಪ್ರಭಾವವನ್ನು ತಿಳಿದರು. ಬ್ರಾಹ್ಮಣ ಭಕ್ತಿಯಿಂದ ಸದ್ಗತಿಯನ್ನು ಪಡೆದರು. ಅನಂತರದಲ್ಲಿ ಶ್ರೀಕೃಷ್ಣನು ಬಹುಲಾಶ್ವ ಎಂಬ ರಾಜನಿಂದಲೂ ಶ್ರುತದೇವ ಎಂಬ ಬ್ರಾಹ್ಮಣನಿಂದಲೂ ಅನುಮತಿಯನ್ನು ಪಡೆದು ದ್ವಾರಕಾ ಪಟ್ಟಣಕ್ಕೆ ಹಿಂದಿರುಗಿದನು.

ಪಾಂಡವರು ಹನ್ನೆರಡು ವರ್ಷಗಳ ವರೆಗೆ ವನವಾಸವನ್ನು ಮಾಡಿ ಮುಗಿಯಿತು. ಒಂದು ವರ್ಷಕಾಲದ ವರೆಗೆ ಅಜ್ಞಾತ ವಾಸವನ್ನೂ ಮಾಡಿ ಮುಗಿಯಿತು. ಸೈನ್ಯಗಳಿಂದ ಸಹಿತರಾಗಿ ಉಪಪ್ಲಾವ್ಯ ಎಂಬ ನಗರಕ್ಕೆ ಬಂದರು.

ಈ ಸಮಾಚಾರವನ್ನು ಶ್ರೀಕೃಷ್ಣದೇವನು ಕೇಳಿ ತಿಳಿದನು. ಒಂದು ಅಕ್ಷೌಹಿಣೀ ಸೈನ್ಯದಿಂದ ಸಹಿತನಾಗಿ ಉಪಪ್ಲಾವ್ಯ ಎಂಬ ನಗರಕ್ಕೆ ಬಂದನು. ಪಾಂಡವರಿಂದ ಪೂಜಿಸಲ್ಪಟ್ಟನು. ಸರ್ವರನ್ನೂ ಸಂತೋಷಪಡಿಸಿದನು.

**ವಿಶೇಷಾರ್ಥ - ವನವಾಸತಃ ಅಜ್ಞಾತವಾಸತಶ್ಚ ಪಾರಂಗತಾನ್ ಗೋಗ್ರಹೇ ಜಿತಕೌರವಾನ್ ಮಹತ್ಯಾ ಸೇನಯಾ ವೃತಾನ್ ಉಪಪ್ಲಾವ್ಯಗತಾನ್ ಪಾಂಡವಾನ್ ಶ್ರುತ್ವಾ ಸಂತುಷ್ಟಮನಾಃ ಯಾದವೈಃ ಸಹ ಅಕ್ಷೌಹಿಣ್ಯಾ ಸಹಿತಃ ಉಪಪ್ಲಾವ್ಯಂ ಪ್ರಾಪ್ಯ ಪಾಂಡವೈಃ ಪೂಜಿತಃ ಸರ್ವಾನತೋಷಯತ್.**

**ವಿಶೇಷಾರ್ಥ ವಿವರಣ** - ಪಾಂಡವರು ವನವಾಸದಿಂದಲೂ ಅಜ್ಞಾತವಾಸದಿಂದಲೂ ಬಿಡುಗಡೆಯನ್ನು ಪಡೆದರು. ಉತ್ತರ ಗೋಗ್ರಹಣ ಸಂದರ್ಭದಲ್ಲಿ ಕೌರವರನ್ನೆಲ್ಲರನ್ನೂ ಜಯಿಸಿದರು. ದೊಡ್ಡ ಸೈನ್ಯದಿಂದ ಸಹಿತರಾಗಿ ಉಪಪ್ಲಾವ್ಯ ನಗರಕ್ಕೆ ಬಂದರು. ಪಾಂಡವರ ಈ ಸ್ಥಿತಿಯನ್ನು ತಿಳಿದು ಸಂತುಷ್ಟನಾಗಿ ಒಂದು ಅಕ್ಷೌಹಿಣೀಸೈನ್ಯದಿಂದ ಸಹಿತನಾಗಿ ಉಪಪ್ಲಾವ್ಯ ನಗರಕ್ಕೆ ಬಂದು ಸರ್ವ ಪಾಂಡವರಿಂದ ಪೂಜಿತನಾದ ಶ್ರೀಕೃಷ್ಣದೇವನು ಸರ್ವರನ್ನೂ ಸಂತೋಷಪಡಿಸಿದನು.

**दौत्यं कुर्वन्ननन्ता निजरुचिरतनूर्दर्शयन् दिव्यदृष्टे-**
**र्गीतातत्वोपदेशाद्रणमुखविजयस्याचरन् सारथित्वम् ।**
**नीत्वा कैलासमेनं पशुपतिमुखतो दापयित्वाऽस्त्रमस्मै**
**भीमेनाऽपात्य दुष्टं क्षितिपतिमकरोद्धर्मराजं तमीडे ॥ २६ ॥**

**ದೌತ್ಯಂ ಕುರ್ವನ್ನನಂತಾ ನಿಜರುಚಿರತನೂರ್ದರ್ಶಯನ್ ದಿವ್ಯದೃಷ್ಟೇ-**
**ರ್ಗೀತಾತತ್ತ್ವೋಪದೇಶಾದ್ರಣಮುಖವಿಜಯಸ್ಯಾಚರನ್ ಸಾರಥಿತ್ವಮ್ ।**
**ನೀತ್ವಾ ಕೈಲಾಸಮೇನಂ ಪಶುಪತಿಮುಖತೋ ದಾಪಯಿತ್ವಾಸ್ತ್ರಮಸ್ಮೈ**
**ಭೀಮೇನಾಪಾತ್ಯ ದುಷ್ಟಂ ಕ್ಷಿತಿಪತಿಮಕರೋದ್ಧರ್ಮರಾಜಂ ತಮೀಡೇ ॥ ೨೬ ॥**

ಪದಭೇದ - ದೌತ್ಯಂ, ಕುರ್ವನ್, ಅನಂತಾಃ, ನಿಜರುಚಿರತನೂಃ ದರ್ಶಯನ್, ದಿವ್ಯದೃಷ್ಟೇಃ, ಗೀತಾತತ್ತ್ವೋಪದೇಶಾತ್, ರಮಣಮುಖವಿಜಯಸ್ಯ ಆಚರನ್, ಸಾರಥಿತ್ವಂ, ನೀತ್ವಾ ಕೈಲಾಸಂ ಏನಂ ಪಶುಪತಿಮುಖತಃ ದಾಪಯಿತ್ವಾ ಅಸ್ತ್ರಂ ಅಸ್ಮೈ, ಭೀಮೇನ, ಆಪಾತ್ಯ, ದುಷ್ಟಂ, ಕ್ಷಿತಿಪತಿಂ, ಅಕರೋತ್ ಧರ್ಮರಾಜಂ ತಂ, ಈಡೇ.

ಅನ್ವಯ - ಯಃ, ದೌತ್ಯಂ ಕುರ್ವನ್, ದಿವ್ಯದೃಷ್ಟೇಃ, ಅನಂತಾಃ, ನಿಜರುಚಿರತನೂಃ ದರ್ಶಯನ್, ಗೀತಾತತ್ತ್ವೋಪದೇಶಾತ್, ರಮಣಮುಖವಿಜಯಸ್ಯ (ದಿವ್ಯದೃಷ್ಟೇಃ) ಸಾರಥಿತ್ವಂ, ಆಚರನ್ ಏನಂ ಕೈಲಾಸಂ, ನೀತ್ವಾ ಪಶುಪತಿಮುಖತಃ ಅಸ್ತ್ರಂ ಅಸ್ಮೈ, ದಾಪಯಿತ್ವಾ ಭೀಮೇನ, ದುಷ್ಟಂ ಆಪಾತ್ಯ, ಧರ್ಮರಾಜಂ, ಕ್ಷಿತಿಪತಿಂ, ಅಕರೋತ್, ತಂ ಅಹಂ, ಈಡೇ.

ಯಃ ಯಾವ ಶ್ರೀಕೃಷ್ಣದೇವನು "ಕುರುಪಾಂಡವಾನಾಂ ಸಂಧಿಕಾರ್ಯಾರ್ಥಂ" ಕೌರವರಿಗೂ ಸಂಧಿಯನ್ನು

ಮಾಡುವುದಕ್ಕಾಗಿ ದೌತ್ಯಂ ದೂತನ ಕೆಲಸವನ್ನು ಕುರ್ವನ್ ಮಾಡುತ್ತಿರುವವನಾಗಿ ದಿವ್ಯದೃಷ್ಟೇಃ ದಿವ್ಯವಾದ ದೃಷ್ಟಿಯಿಂದ ಯುಕ್ತನಾಗಿರುವ ಧೃತರಾಷ್ಟ್ರನಿಗೆ ಅನಂತಾಃ ಅಪರಿಮಿತವಾದ ನಿಜರುಚಿರತನೂಃ ತನ್ನ ಸುಂದರವಾದ ರೂಪಗಳನ್ನು ದರ್ಶಯನ್ ತೋರಿಸುತ್ತಿರುವವನಾಗಿ ಗೀತಾತತ್ತ್ವೋಪದೇಶಾತ್ ಭಗವದ್ಗೀತೆಯಲ್ಲಿ ಹೇಳಿರುವ ತತ್ವಗಳನ್ನು ಉಪದೇಶಿಸಿದ್ದುದರಿಂದ ರಣಮುಖವಿಜಯಸ್ಯ ಯುದ್ಧದಲ್ಲಿ ಅಭಿಮುಖನಾಗಿರುವ ಅರ್ಜುನನಿಗೆ ಸಾರಥಿತ್ವಂ ಸಾರಥಿಯ ಕೆಲಸವನ್ನು ಆಚರನ್ ಮಾಡುತ್ತಿರುವವನಾಗಿ ಏನಂ ಈ ಅರ್ಜುನನನ್ನು ಕೈಲಾಸಂ ಕೈಲಾಸವನ್ನು ಕುರಿತು ನೀತ್ವಾ ಕರೆದುಕೊಂಡು ಹೋದವನಾಗಿ ಪಶುಪತಿಮುಖತಃ ರುದ್ರನ ಮುಖದಿಂದ ಅಸ್ಮೈ ಈ ಅರ್ಜುನನಿಗೆ ಅಸ್ತ್ರಂ ಪಾಶುಪತಾಸ್ತ್ರವನ್ನು ದಾಪಯಿತ್ವಾ ಉಪದೇಶವನ್ನು ಮಾಡಿಸಿ ಭೀಮೇನ ಭೀಮಸೇನದೇವರಿಂದ ದುಷ್ಟಂ ದೋಷಸ್ವರೂಪಿಯಾದ ದುರ್ಯೋಧನನನ್ನು ಆಪಾತ್ಯ ನಿಗ್ರಹಮಾಡಿಸಿ ಧರ್ಮಂ ಧರ್ಮರಾಜನನ್ನು ಕ್ಷಿತಿಪತಿಂ ಭೂಮಂಡಲದ ಅಧಿಪತಿಯನ್ನಾಗಿ ಅಕರೋತ್ ಮಾಡಿದನೋ ತಂ ಆ ಶ್ರೀಕೃಷ್ಣದೇವನನ್ನು (ಅಹಂ) ನಾನು ಈಡೇ ಸ್ತುತಿಸುವೆನು.

ವಿಗ್ರಹ - ದೂತಸ್ಯ ಕರ್ಮ ದೌತ್ಯಂ, ತತ್ ದೌತ್ಯಂ ; ಕರೋತಿ ಇತಿ ಕುರ್ವನ್ ; ನ ವಿದ್ಯತೇ ಅಂತಃ ಯೇಷಾಂ ತೇ ಅನಂತಾಃ, ತಾಃ ಅನಂತಾಃ ; ನಿಜಾಃ ರುಚಿರಾಃ ತನವಃ ನಿಜರುಚಿರತನವಃ ತಾಃ ನಿಜರುಚಿತನೂಃ ದರ್ಶಯತಿ ಇತಿ ದರ್ಶಯನ್ ; ದಿವ್ಯಾ ದೃಷ್ಟಿ ಃ ಯಸ್ಯ ಸಃ ದಿವ್ಯದೃಷ್ಟಿಃ ತಸ್ಯ ದಿವ್ಯದೃಷ್ಟೇಃ ಗೀತಾಯಾಂ ತತ್ವಾನಿ ಗೀತಾತತ್ವಾನಿ ಗೀತಾತತ್ವಾನಾಂ ಉಪದೇಶಃ ಗೀತಾತತ್ತ್ವೋಪದೇಶಃ, ತಸ್ಮಾತ್ ಗೀತಾತತ್ತ್ವೋಪದೇಶಾತ್; ರಣೇ ಮುಖಂ ಯಸ್ಯ ಸಃ ರಣಮುಖಃ, ರಣಮುಖಶ್ಚಾಸೌ ವಿಜಯಶ್ಚ ರಣಮುಖವಿಜಯಃ ಸಾರಥೇಃ ಭಾವಃ ಸಾರಥಿತ್ವಂ, ತತ್ ಸಾರಥಿತ್ವಂ ; ಪಶೂನಾಂ ಪತಿಃ ಪಶುಪತಿಃ ಪಶುಪತೇಃ ಮುಖಂ, ಪಶುಪತಿಮುಖಂ, ತಸ್ಮಾತ್ ಪಶುಪತಿಮುಖತಃ ; ಕ್ಷಿತೇಃ ಪತಿಃ ಕ್ಷಿತಿಪತಿಃ ತಂ ಕ್ಷಿತಿಪತಿಂ ; ಧರ್ಮಸ್ಯ ರಾಜಾ ಧರ್ಮರಾಜಃ, ತಂ ಧರ್ಮರಾಜಂ,

ಕ್ರಿಯಾಪದ - (ಅಕರೋತ್ ಅಕುರುತಾಂ ಅಕುರ್ವನ್, ಅಕರೋಃ ಅಕುರುತಂ ಅಕುರುತ, ಅಕರವಂ ಅಕುರುವ ಅಕುರ್ವ ಅಕುರುಮ ಅಕುರ್ಮ) ಡು ಕೃಞ್ ಕರಣೇ ಕರಣಾರ್ಥಕಾತ್ ಈಳ ಧಾತೋಃ ಆತ್ಮನೇಪದಿನಃ ಉತ್ತಮಪುರುಷೈಕವಚನೇ (ಈಡೇ ಇತಿ ರೂಪಂ).

ಕ್ರಿಯಾಪದ - (ಈಡತೇ ಈಡೇತೇ ಈಡಂತೇ, ಈಡಸೇ ಈಡೇಥೇ ಈಡಧ್ವೇ ಈಡೇ ಈಡಾವಹೇ ಈಡಾಮಹೇ, ಈಳ ಸ್ತುತೌ ಸ್ತುತ್ಯರ್ಥಕಾತ್ ಈಳ ಧಾತೋಃ ಆತ್ಮನೇಪದಿನಃ ಉತ್ತಮಪುರುಷೈಕವಚನೇ (ಈಡೇ ಇತಿ ರೂಪಂ).

**ವಿಶೇಷಾರ್ಥ - ಕೃಷ್ಣಃ ಉಪಪ್ಲಾವ್ಯಗಮನಾನಂತರಂ ದುರ್ಯೋಧನಾದೀನಾಂ ಪಾಂಡವಾನಾಂ ಚ ಸಂಧಿಕಾರ್ಯಾರ್ಥಂ ದೌತ್ಯಂ ಕುರ್ವನ್ ಧೃತರಾಷ್ಟ್ರಸಮೀಪಂ ಗತ್ವಾ ಪಾಂಡವಾನಾಂ ರಾಜ್ಯಮನಿಚ್ಛಂತಂ ಸ್ವಬಂಧನಾರ್ಥಮುದ್ಯುಕ್ತಂ ಕುಮತಿಂ ದುರ್ಯೋಧನಂ ಜ್ಞಾತ್ವಾ ಸ್ವಮಹಿಮಪ್ರಕಾಶನೇನ ದುರ್ಯೋಧನಾದೀನಾಂ ಭಯಜನನಾರ್ಥಂ ಧೃತರಾಷ್ಟ್ರಸ್ಯ ದಿವ್ಯದೃಷ್ಟಿಂ ದತ್ವಾ ಸ್ವಸ್ಯಾಪರಿಚ್ಛಿನ್ನಾನಂತರೂಪಾಣಿ ದರ್ಶಯಿತ್ವಾ ಸ್ವತೇಜಸಾ ದುರ್ಯೋಧನಾದಿಚಕ್ಷೂಂಷಿ ಪಿಧಾಯ ಪುನಸ್ತ ಥೈವ ಚಾಂಧಂ ಧೃತರಾಷ್ಟ್ರಂ ವಿಧಾಯ ತೇಷಾಂ ಭಯಂ ಜನಯಿತ್ವಾ ಧೃತರಾಷ್ಟ್ರೇಣ ಪೂಜಿತಸ್ತಸ್ಯ ದೃಷ್ಟಿಂ ಪೂರ್ವವದ್ವಿಧಾಯ ಪಾಂಡವಸಮೀಪಂ ಪ್ರಾಪ್ಯ ತೈರ್ಯುದ್ಧೋದ್ಯೋಗಂ ಕಾರಯಿತ್ವಾ ಪಾಂಡವಸಂಬಂಧಿಸಪ್ತಸಂಖ್ಯಾಕಾಕ್ಷೌಹಿಣೀಸೇನಾಯಾಃ**

**ದುರ್ಯೋಧನಸಂಬಂಧ್ಯೇಕಾದಶಾ-ಕ್ಷೌಹಿಣೀಸೇನಾಯಾಶ್ಚ ಮಧ್ಯೇ ಅರ್ಜುನರಥಂ ಸಂಸ್ಥಾಪ್ಯ ತಸ್ಯ ಸಾರಥ್ಯಮಚರನ್.**

ಉಪಪ್ಲಾವ್ಯ ಎಂಬ ನಗರವನ್ನು ಪಾಂಡವರು ಹೊಂದಿದ ಕೂಡಲೇ ಪಾಂಡವರಿಗೂ ದುರ್ಯೋಧನ ಮುಂತಾದವರಿಗೂ ಸಂಧಿಯನ್ನು ಮಾಡುವ ಉದ್ದೇಶ್ಯದಿಂದ ಶ್ರೀಕೃಷ್ಣದೇವನು ದೂತನಾಗಿ ಹೊರಟನು. ಇದನ್ನು ತಿಳಿದು ದುರ್ಯೋಧನನು ಶ್ರೀಕೃಷ್ಣದೇವನನ್ನು ಕಟ್ಟಿಹಾಕಿಬಿಡಬೇಕೆಂದು ತೀರ್ಮಾನಿಸಿದನು. ಅವನನ್ನು ಕಟ್ಟಿಹಾಕಿಬಿಟ್ಟರೆ ಧರ್ಮರಾಜನಿಗೆ ಶ್ರೀಕೃಷ್ಣದೇವನ ಸಹಾಯವಿಲ್ಲದೆ ಇರುವುದರಿಂದ ಧರ್ಮರಾಜನನ್ನು ಸುಲಭವಾಗಿ ನಿಗ್ರಹಿಸಬಹುದು ಎಂಬ ದುರ್ಬುದ್ಧಿಯಿಂದಲೂ ಸಂಧಿಯು ಏರ್ಪಡುವ ಸಂಭವವೇ ಇಲ್ಲವೆಂದೂ ಆಶೆಯು ದುರ್ಯೋಧನನಿಗೆ ಪ್ರಬಲವಾಗಿತ್ತು. ಅವರ ದುರ್ಬುದ್ಧಿಯನ್ನು ಶ್ರೀಕೃಷ್ಣದೇವನು ತಿಳಿದನು. ತನ್ನ ಮಹಿಮೆಯನ್ನು ಪ್ರಕಟಪಡಿಸಬೇಕೆಂದು ಶ್ರೀಕೃಷ್ಣದೇವನು ಸಂಕಲ್ಪಿಸಿದನು. ಈ ಮಹಿಮೆಯನ್ನು ತಿಳಿದ ದುರ್ಯೋಧನನು ಹೆದರಲಿ ಎಂದು ಸಂಕಲ್ಪಿಸಿದನು.

ಧೃತರಾಷ್ಟ್ರನು ಹುಟ್ಟುಕುರುಡನು. ಅವನಿಗೆ ದಿವ್ಯದೃಷ್ಟಿಯನ್ನು ಕೊಟ್ಟನು. ಹುಟ್ಟುವಾಗಲೇ ಕಣ್ಣುಗಳಿಂದ ಯುಕ್ತರಾಗಿರುವ ದುರ್ಯೋಧನ ಮುಂತಾದವರ ಕಣ್ಣುಗಳ ಶಕ್ತಿಯನ್ನು ಕುಗ್ಗಿಸಿದನು. ಧೃತರಾಷ್ಟ್ರನಿಗೆ ತನ್ನ ಅನಂತರೂಪಗಳನ್ನು ತೋರಿಸಿದನು. ದುರ್ಯೋಧನ ಮುಂತಾದವರಿಗೆ ಆ ರೂಪಗಳನ್ನು ತೋರಿಸಲಿಲ್ಲ. ಪುನಃ ಧೃತರಾಷ್ಟ್ರನನ್ನು ಕುರುಡನಾಗುವಂತೆ ಮಾಡಿದನು. ದುರ್ಯೋಧನ ಮುಂತಾದವರಿಗೆ ಧೃತರಾಷ್ಟ್ರನಿಗೆ ವಿಶ್ವರೂಪ ದರ್ಶನವನ್ನು ತೋರಿಸಿದ್ದೂ ದುರ್ಯೋಧನ ಮುಂತಾದವರನ್ನು ವಂಚಿಸಿದ್ದೂ ತಿಳಿಯಲಿಲ್ಲ. ಅಲ್ಲಿಂದ ಹೊರಟನು. ಪುನಃ ಪಾಂಡವರ ಸಮೀಪಕ್ಕೆ ಬಂದನು. ಪಾಂಡವರನ್ನು ಯುದ್ಧವನ್ನು ಮಾಡುವುದಕ್ಕಾಗಿ ಪ್ರೋತ್ಸಾಹಿಸಿದನು. ಪಾಂಡವರ ಪಕ್ಷದಲ್ಲಿ ಏಳು ಅಕ್ಷೌಹಿಣೀಸೈನ್ಯವನ್ನೂ ಕೌರವರ ಪಕ್ಷದಲ್ಲಿ ಹನ್ನೊಂದು ಅಕ್ಷೌಹಿಣಿಸೈನ್ಯವನ್ನೂ ಒಟ್ಟುಗೂಡಿಸಿದನು. ಎರಡು ಕಡೆಯಲ್ಲಿಯೂ ಸೈನ್ಯಗಳು ಯುದ್ಧಕ್ಕೆ ಸಿದ್ಧವಾದವು. ಆಗ ಅರ್ಜುನನ ರಥವನ್ನು ಶ್ರೀಕೃಷ್ಣದೇವನು ಓಡಿಸುತ್ತಾ ಬಂದನು. ಎರಡು ಸೈನ್ಯಗಳ ಮಧ್ಯದಲ್ಲಿ ನಿಲ್ಲಿಸಿದನು. ಆಗ ಅರ್ಜುನನು ಎರಡು ಪಕ್ಷದಲ್ಲಿಯೂ ಇರುವ ಸೈನಿಕರನ್ನು ನೋಡಿದನು.

**ವಿಶೇಷಾರ್ಥ - ಸ್ವಬಾಂಧವಾನ್ ದೃಷ್ಟ್ವಾ ತದ್ವಧಪಾಪಶಂಕಯಾ ಯುದ್ಧಾನ್ನಿವೃತ್ತಮರ್ಜುನಂ ದೃಷ್ಟ್ವಾ ತಸ್ಯ ದೃಷ್ಟಿಂ ದತ್ವಾ ತದ್ಯೋಗ್ಯತಾನುಸಾರೇಣ ಸ್ವಕೀಯವಿಶ್ವರೂಪಂ ದರ್ಶಯಿತ್ವಾ ಭಗವದ್ಗೀತೋಕ್ತರೀತ್ಯಾ ಸ್ವಸ್ಯೈವ ಸರ್ವಸ್ವಾತಂತ್ರ್ಯಾದಿ ರೂಪತತ್ವಮುಪದಿಶ್ಯ ತೇನ ಯುದ್ಧಂ ಕಾರಯನ್ ತದಾ ಏಕಸ್ಮಿನ್ ದಿನೇ ಜಯದ್ರಥೇನ ಹತಂ ಸ್ವಪುತ್ರಮಭಿಮನ್ಯುಂ ಶ್ರುತ್ವಾ ಜಯದ್ರಥಸ್ಯ ವಧೇ ಪ್ರತಿಶ್ರವಂ ಕೃತವಂತಮರ್ಜುನಂ ತಸ್ಯಾಂ ರಾತ್ರೌ ಸ್ವಪ್ನೇ ಕೈಲಾಸಗತರುದ್ರಂ ಪ್ರತಿ ನೀತ್ವಾ ಸ್ವಯಮೇವಾಖಿಲಜಗತ್ಸೃಷ್ಟ್ಯಾದ್ಯಮಿತಶಕ್ತಿಮಾನಪಿ 'ಅಸ್ಯಚ್ಯುತೋ ಗುರುದ್ವಾರಾ ಪ್ರಸಾದಕೃದಹಂ ತ್ವಿತಿ' ಇತಿ ಜ್ಞಾಪಯನ್ ಅರ್ಜುನಗುರೋಃ ರುದ್ರಾದರ್ಜುನಸ್ಯ ವಾಂಛಿತಮುಲ್ಬಣಮಂತ್ರಂ ದಾಪಯಿತ್ವಾ ಅರ್ಜುನೇನ ಸಹೋಪಪ್ಲಾವ್ಯಂ ಪ್ರಾಪ್ಯ.**

**ವಿಶೇಷಾರ್ಥ ವಿವರಣ** - ತನ್ನ ಬಂಧುಗಳೆಲ್ಲರೂ ಯುದ್ಧಕ್ಕೆ ಸಿದ್ಧರಾಗಿರುವುದನ್ನು ನೋಡಿದನು. ಇನ್ನು ಕೆಲವು ನಿಮಿಷಗಳಲ್ಲಿ ಸರ್ವರೂ ಸಾಯುವುದನ್ನು ಸ್ಮರಿಸಿದನು. ಅವರೆಲ್ಲರೂ ಸಾಯುವುದರಿಂದ ಬರಬಹುದಾಗ

ಅಪಾರವಾದ ಪಾಪದ ಶಂಕೆಯಿಂದ ಅವರನ್ನೆಲ್ಲರನ್ನೂ ಸಂಹರಿಸಕೂಡದೆಂದು ತೀರ್ಮಾನಿಸಿದನು. ಅವನಿಗೆ ದಿವ್ಯ ದೃಷ್ಟಿಯನ್ನು ಕೊಟ್ಟು ಭಗವದ್ವೇಷಿಗಳನ್ನೂ ಅವರ ಪಕ್ಷದಲ್ಲಿ ಸೇರಿದವರನ್ನೂ ಸಂಹರಿಸುವುದು ಪಾಪವಲ್ಲವೆಂದೂ ಮಹಾ ಪುಣ್ಯಸಾಧನವೆಂದೂ ಉಪದೇಶಿಸಿದನು. ತಾನು ಮಾಡಿರುವ ಉಪದೇಶಗಳೆಲ್ಲವೂ ನಿಜವೆಂದು ತಿಳಿಸುವುದಕ್ಕಾಗಿ ಅರ್ಜುನನಿಗೆ ದಿವ್ಯದೃಷ್ಟಿಯನ್ನು ಕೊಟ್ಟು ಅರ್ಜುನನ ಯೋಗ್ಯತೆಗೆ ಅನುಗುಣವಾಗಿ ವಿಶ್ವರೂಪವನ್ನು ತೋರಿಸಿದನು. ಭಗವದ್ಗೀತೆಯಲ್ಲಿ ಹೇಳಿದಂತೆ "ತಾನೇ ಸರ್ವತಂತ್ರನು" ಎಂಬ ತತ್ವವನ್ನು ದೃಢಪಡಿಸಿ ಅರ್ಜುನನಿಂದ ಯುದ್ಧವನ್ನು ಮಾಡಿಸಿದನು.

ಒಂದು ದಿನ ಅರ್ಜುನನು ತನ್ನ ಮಗನಾದ ಅಭಿಮನ್ಯುವನ್ನು ಜಯದ್ರಥನು ಸಂಹರಿಸಿದ ವಿಷಯವನ್ನು ಕೇಳಿದನು. ಜಯದ್ರಥನನ್ನು ಕೊಲ್ಲುವುದಾಗಿ ಪ್ರತಿಜ್ಞೆಯನ್ನು ಮಾಡಿದನು. ರುದ್ರನ ವರದಿಂದ ಅವಧ್ಯನಾದ ಜಯದ್ರಥನನ್ನು ಕೊಲ್ಲಬೇಕಾದರೆ ರುದ್ರದೇವನ ವಿಶೇಷಾನುಗ್ರಹವು ಬೇಕು. ಆದರೆ ಸಕಲ ಪ್ರಪಂಚಗಳ ಸೃಷ್ಟಿ ಮುಂತಾದ ಸಕಲ ಕಾರ್ಯಗಳನ್ನೂ ಮಾಡುವ ಶಕ್ತಿಯಿಂದ ತಾನೇ ಯುಕ್ತನಾಗಿರುವವನು. ಆದರೂ ಅರ್ಜುನನ ಆಸೆಯನ್ನು ಅರ್ಜುನನ ಗುರುವಾದ ರುದ್ರದೇವನ ಅನುಗ್ರಹದಿಂದಲೇ ಪೂರ್ತಿ ಮಾಡಬೇಕೆಂದು ತೀರ್ಮಾನಿಸಿದನು. ರಾತ್ರಿಯಲ್ಲಿ ಮಲಗಿರುವ ಅರ್ಜುನನನ್ನು ಕೈಲಾಸಕ್ಕೆ ಕರೆದುಕೊಂಡು ಹೋದನು. ಕೈಲಾಸದಲ್ಲಿ ರುದ್ರನ ಸಮೀಪಕ್ಕೆ ಹೋದನು. ಅರ್ಜುನನಿಂದ ಅಪೇಕ್ಷಿಸಲ್ಪಟ್ಟ ಉಲ್ಬಣವಾದ ಮಂತ್ರವನ್ನು ಉಪದೇಶಿಸಿದನು. ಅನಂತರದಲ್ಲಿ ಶ್ರೀಕೃಷ್ಣದೇವನು ಅರ್ಜುನನ್ನು ಕರೆದುಕೊಂಡು ಉಪಪ್ಲಾವ್ಯ ನಗರಕ್ಕೆ ಬಂದನು.

**ವಿಶೇಷಾರ್ಥ - ಪಾಂಡವೈರಷ್ಟಾದಶದಿನಪರ್ಯಂತಂ ಯುದ್ಧಂ ಕಾರಯಿತ್ವಾ ಕೌರವಾನ್ ಸರ್ವಾನ್ ಘಾತಯಿತ್ವಾ ಭೀಮಸೇನಗದಾಯುದ್ಧೇನ ದುರ್ಯೋಧನಂ ಶಿವವರಬಲಿನಂ ಕಲಿಸ್ವರೂಪಂ ಘಾತಯಿತ್ವಾ ಬ್ರಹ್ಮಾದಿಭಿಃ ಸ್ತೂಯಮಾನಃ ಶತ್ರುರಹಿತಂ ಯುದ್ಧದೇಶಂ ಪರಿತ್ಯಜ್ಯ ಪಾಂಡವೈಃ ಸಹ ಹಸ್ತಿನಪುರಂ ಪ್ರಾಪ್ಯ ಧೃತರಾಷ್ಟ್ರಂ ಗಾಂಧಾರೀಂ ಚ ಸಾಂತ್ವಯಿತ್ವಾ ಧರ್ಮರಾಜಂ ಸಾಮ್ರಾಜ್ಯೇಽಭಿಷಿಚ್ಯ ಭೀಮಸೇನಂ ಯೌವರಾಜ್ಯೇಽಭಿಷಿಚ್ಯ ಅರ್ಜುನಾದೀನ್ ಸ್ವಸ್ವವ್ಯಾಪಾರೇಷು ನಿಯೋಜ್ಯ ತೈರ್ಜಗತ್ಪಾಲಯನ್ ಸರ್ವಾನತೋಷಯತ್।**

**ವಿಶೇಷಾರ್ಥ ವಿವರಣ** - ಉಪಪ್ಲಾವ್ಯ ನಗರಕ್ಕೆ ಬಂದ ಶ್ರೀಕೃಷ್ಣದೇವನು ಪಾಂಡವರ ಮೂಲಕವಾಗಿ ಹದಿನೆಂಟು ದಿನಗಳ ವರೆಗೆ ಮಹಾಭಾರತ ಯುದ್ಧವನ್ನು ಮಾಡಿಸಿದನು. ಎಲ್ಲಾ ಕೌರವರನ್ನೂ ಕೊಲ್ಲಿಸಿದನು. ಕೊನೆಗೆ ಶ್ರೀಭೀಮಸೇನದೇವರಿಂದ ದುರ್ಯೋಧನನೊಡನೆ ಗದಾಯುದ್ಧವನ್ನು ಮಾಡಿಸಿದನು. ಆ ಗದಾಯುದ್ಧದಲ್ಲಿ ಶ್ರೀಕೃಷ್ಣನು ಶ್ರೀಭೀಮಸೇನದೇವರಿಂದ ದುರ್ಯೋಧನನನ್ನು ಕೊಲ್ಲಿಸಿದನು. ಬ್ರಹ್ಮಾದಿದೇವತೆಗಳಿಂದ ಸ್ತುತಿಸಲ್ಪಡುತ್ತಾ ಹಸ್ತಿನಾವತೀ ಪುರವನ್ನು ಪ್ರವೇಶಿಸಿದನು. ಧೃತರಾಷ್ಟ್ರನನ್ನೂ ಗಾಂಧಾರಿಯನ್ನೂ ಸಮಾಧಾನ ಮಾಡಿದನು. ಧರ್ಮರಾಜನನ್ನು ಸಾಮ್ರಾಜ್ಯದಲ್ಲಿಯೂ ಶ್ರೀಭೀಮಸೇನದೇವರನ್ನು ಯೌವರಾಜ್ಯದಲ್ಲಿಯೂ ಪಟ್ಟಾಭಿಷೇಕವನ್ನು ಮಾಡಿಸಿದನು. ಅರ್ಜುನನೇ ಮೊದಲಾದವರನ್ನು ಅವರವರಿಗೆ ಯೋಗ್ಯವಾದ ವ್ಯಾಪಾರಗಳಲ್ಲಿ ನಿಯೋಜನ ಮಾಡಿದನು. ಅವರುಗಳಿಂದ ಜಗತ್ತನ್ನು ಪಾಲಿಸುತ್ತಾ ಸರ್ವರನ್ನೂ ಸಂತೋಷಪಡಿಸಿದನು.

प्राप्तः स्थानं यदूनां प्रियसखमकृतावाप्तकामं कुचेलं
कुर्वन् कर्माश्वमेधं निजभवनमथो दर्शयित्वाऽर्जुनाय ।
पुत्रान् विप्राय दत्वा सहसहजमसौ दन्तवक्त्रं निपात्य
प्राप्याथ द्वारकां स्वां समवतु विहरन्नुद्धवायोक्ततत्वः ॥२७॥

ಪ್ರಾಪ್ತಃ ಸ್ಥಾನಂ ಯದೂನಾಂ ಪ್ರಿಯಸಖಮಕೃತಾವಾಪ್ತಕಾಮಂ ಕುಚೇಲಂ
ಕುರ್ವನ್ ಕರ್ಮಾಶ್ವಮೇಧಂ ನಿಜಭವನಮಥೋ ದರ್ಶಯಿತ್ವಾಽರ್ಜುನಾಯ ।
ಪುತ್ರಾನ್ ವಿಪ್ರಾಯ ದತ್ವಾ ಸಹಸಹಜಮಸೌ ದಂತವಕ್ತ್ರಂ ನಿಪಾತ್ಯ
ಪ್ರಾಪ್ಯಥ ದ್ವಾರಕಾಂ ಸ್ವಾಂ ಸಮವತು ವಿಹರನ್ನುದ್ಧವಾಯೋಕ್ತತತ್ವಃ ॥ ೨೭ ॥

**ಪದಚ್ಛೇದ :-** ಪ್ರಾಪ್ತಃ ಸ್ಥಾನಂ, ಯದೂನಾಂ ಪ್ರಿಯಸಖಂ, ಅಕೃತ, ಅವಾಪ್ತಕಾಮಂ, ಕುಚೇಲಂ, ಕುರ್ವನ್, ಕರ್ಮ, ಅಶ್ವಮೇಧಂ, ನಿಜಭವನಂ, ಅಥೋ, ದರ್ಶಯಿತ್ವಾ, ಅರ್ಜುನಾಯ, ಪುತ್ರಾನ್, ವಿಪ್ರಾಯ, ದತ್ವಾ, ಸಹಸಹಜಂ, ಅಸೌ, ದಂತವಕ್ತ್ರಂ, ನಿಪಾತ್ಯ, ಪ್ರಾಪ್ಯ, ಅಥ, ದ್ವಾರಕಾಂ, ಸ್ವಾಂ, ಸಮವತು, ವಿಹರನ್, ಉದ್ಧವಾಯ, ಉಕ್ತತತ್ವಃ ॥ ೨೭ ॥

ಅನ್ವಯ - ಯದೂನಾಂ ಸ್ಥಾನಂ ಪ್ರಾಪ್ತಃ ಅವಾಪ್ತಕಾಮಂ ಪ್ರಿಯಸಖಂ ಕುಚೇಲಂ ಅಕೃತ ಅಥೋ ಅಶ್ವಮೇಧಂ ಕರ್ಮ ಕುರ್ವನ್ ನಿಜಭವನಂ ಅರ್ಜುನಾಯ ದರ್ಶಯಿತ್ವಾ ವಿಪ್ರಾಯ ಪುತ್ರಾನ್ ದತ್ವಾ, ಸಹಸಹಜಂ, ದಂತವಕ್ತ್ರಂ ನಿಪಾತ್ಯ ಅಥ ಸ್ವಾಂ ದ್ವಾರಕಾಂ ಪ್ರಾಪ್ಯ ಉದ್ಧವಾಯ ಉಕ್ತತತ್ವಃ ವಿಹರನ್ ಸಮವತು.

ಅನ್ವಯಾರ್ಥ - ಯಃ ಯಾವ ಶ್ರೀಕೃಷ್ಣದೇವನು ಯದೂನಾಂ ಯಾದವರ ಸ್ಥಾನಂ ಸ್ಥಾನವಾಗಿರುವ ದ್ವಾರಕೆಯನ್ನು ಪ್ರಾಪ್ತಃ ಹೊಂದಿದವನಾಗಿ ಪ್ರಿಯಸಖಂ ತುಂಬಾಪ್ರಿಯನಾಗಿರುವ ಸ್ನೇಹಿತನಾದ ಕುಚೇಲಂ ಕುಚೇಲ ಎಂಬ ಭಕ್ತನನ್ನು ಅವಾಪ್ತಕಾಮಂ ಪಡೆಯಲ್ಪಟ್ಟ ಅಭಿಲಷಿತವಾದ ವಸ್ತುಗಳಿಂದ ಯುಕ್ತನಾಗಿರುವವನನ್ನಾಗಿ ಅಕೃತ ಮಾಡಿದನೋ ಅಥೋ ಅಶ್ವಮೇಧಂ ಅನಂತರದಲ್ಲಿ ಅಶ್ವಮೇಧ ಎಂಬ ಕರ್ಮ ಕರ್ಮವನ್ನು ಕುರ್ವನ್ ಮಾಡುತ್ತಿರುವವನಾಗಿ ನಿಜಭವನಂ ತನ್ನ ಅನಂತಾಸನ ಎಂಬ ಲೋಕವನ್ನು ಅರ್ಜುನಾಯ ಅರ್ಜುನನಿಗೋಸ್ಕರ ದರ್ಶಯಿತ್ವಾ ತೋರಿಸಿದವನಾಗಿ ಪುತ್ರಾನ್ ಮಕ್ಕಳುಗಳನ್ನು ವಿಪ್ರಾಯ ಬ್ರಾಹ್ಮಣನಿಗೆ ದತ್ವಾ ಕೊಟ್ಟವನಾಗಿ ಸಹಸಹಜಂ ತನ್ನ ತಮ್ಮನಿಂದ ಸಹಿತನಾದ ದಂತವಕ್ತ್ರಂ ದಂತವಕ್ತ್ರನನ್ನು ನಿಪಾತ್ಯ ಸಂಹರಿಸಿದವನಾಗಿ ಅಥ ಅನಂತರದಲ್ಲಿ ಸ್ವಾಂ ಸ್ವಕೀಯವಾದ ದ್ವಾರಕಾಂ ದ್ವಾರಕೆಯನ್ನು ಕುರಿತು ಪ್ರಾಪ್ಯ ಬಂದವನಾಗಿ ವಿಹರನ್ ವಿಹರಿಸುತ್ತಿರುವವನಾಗಿ ಉದ್ಧವಾಯ ಉದ್ಧವನಿಗೋಸ್ಕರ ಉಕ್ತತತ್ವಃ ತತ್ತ್ವೋಪದೇಶವನ್ನು ಮಾಡಿರುವ (ಅಸೌ) ಶ್ರೀಕೃಷ್ಣದೇವನು (ಮಾಂ) ನನ್ನನ್ನು ಸಮವತು ರಕ್ಷಿಸಲಿ.

ವಿಶೇಷಾರ್ಥ - ಕೃಷ್ಣಃ ಪಾಂಡವಾನಾಂ ಸಾಮ್ರಾಜ್ಯಪ್ರಾಪ್ತ್ಯನಂತರಂ ತೈರನುಜ್ಞಾತಃ ಸ್ವಕೀಯೈಸ್ಸಹ ದ್ವಾರಕಾಂ ಪ್ರಾಪ್ಯ ಕದಾಚಿತ್ಸ್ವಸ್ಯಾತಿಪ್ರೀತಿವಿಷಯಂ ಸಖಾಯಂ ಸ್ವೇನ ಸಹ ಗುರುಕುಲವಾಸಂ ಕೃತವಂತಂ ಶಮದಮಾದ್ಯನೇಕಗುಣವಂತಂ ಯದೃಚ್ಛಾಲಾಭಸಂತುಷ್ಟಂ ದಾರಿದ್ರ್ಯದೋಷೇಣ ಕೃಶಯಾ ಸ್ವಸ್ತ್ರಿಯಾ "ನನು

ಬ್ರಹ್ಮನ್ ಭಗವತಃ ಸಖಾ ಸಾಕ್ಷಾಚ್ಛ್ರಿಯಃ ಪತಿಃ ಬ್ರಹ್ಮಣ್ಯಶ್ಚ ಶರಣ್ಯಶ್ಚ ಭಗವಾನ್ ಸಾತ್ವತರ್ಷಭಃ, ತಮುಪೇಹಿ ಮಹಾಭಾಗಂ ಸಾಧೂನಾಂ ಚ ಪರಾಯಣಂ । ದಾಸ್ಯತಿ ದ್ರವಿಣಂ ಭೂರಿ ಸೀದತೇ ತೇ ಕುಟುಂಬಿನೇ ॥'' ಇತ್ಯಾದ್ಯನೇಕಪ್ರಕಾರೇಣ ಪ್ರಾರ್ಥಿತಃ "ಅಯಂ ಹಿ ಪರಮೋ ಲಾಭ ಉತ್ತಮಶ್ಲೋಕದರ್ಶನಂ'' ಇತಿ ನಿಶ್ಚಿತ್ಯ ಮನಸಾ ಸ್ವಸಮೀಪಂ ಪ್ರಾಪ್ತಂ ಕುಚೇಲಂ ದೋರ್ಭ್ಯಾಮಾಲಿಂಗ್ಯ ಸ್ವಪರ್ಯಂಕ ಉಪವೇಶ್ಯ ಗಂಧಪುಷ್ಪಾಕ್ಷತಾದಿನಾನಾವಿಧೋಪಚಾರ್ಯೈಃ ತಂ ಪೂಜಯಿತ್ವಾ ಭೋಜನಾದಿಕಂ ಕಾರಯಿತ್ವಾ ತೇನೋಪಾಯನಾರ್ಥಮಾನೀತಾನ್ ಪೃಥುಕತಂಡುಲಾನುಪಾದಾಯ ಕಿಂಚಿದ್ಭಕ್ಷಯಿತ್ವಾ ತೇನ ಸಹ ಗುರುಕುಲವಾಸಕೃತವ್ಯಾಪಾರಾದಿ ಕಥನೇನ ತಾಂ ರಾತ್ರಿಂ ನೀತ್ವಾ ಪ್ರಾತಸ್ತಮನುಜ್ಞಾಪ್ಯ, ತಸ್ಯ ಗೃಹಂ ದೇವೇಂದ್ರಭವನಸದೃಶಂ ಕೃತ್ವಾ ತಸ್ಯ ಸಕಲಭಾಗ್ಯಾದಿ ದತ್ವಾ।

**ವಿಶೇಷಾರ್ಥ ವಿವರಣ** - ಪಾಂಡವರು ಸಾಮ್ರಾಜ್ಯವನ್ನು ಪಡೆದರು. ಅವರಿಂದ ಅನುಮತಿಯನ್ನು ಪಡೆದು ಶ್ರೀಕೃಷ್ಣದೇವನು ದ್ವಾರಕೆಗೆ ಬಂದನು. ಅನಂತರದಲ್ಲಿ ತನ್ನ ಬಾಲ್ಯದ ಗುರುಕುಲವಾಸವನ್ನು ಸ್ಮರಿಸಿದನು. ಆಗ ತನ್ನ ಮಿತ್ರರಲ್ಲಿ ತನ್ನ ಅತ್ಯಂತ ಪ್ರೀತಿಗೆ ಪಾತ್ರನಾದ ಕುಚೇಲನ ಜ್ಞಾಪಕವು ಬಂತು. ಆ ಕುಚೇಲನು ಶಮ, ದಮ, ಮುಂತಾದ ಅನೇಕ ಗುಣವಂತನಾಗಿದ್ದನು. ಶ್ರೀಹರಿಸಂಕಲ್ಪದಿಂದ ಸಿಕ್ಕಿರುವ ವಸ್ತುಗಳಿಂದ ತೃಪ್ತಿಯನ್ನು ಪಡೆಯುತ್ತಿದ್ದನು. ಅದಕ್ಕಿಂತ ಅಧಿಕವಾಗಿ ಯಾವ ವಸ್ತುವನ್ನೂ ಬಯಸುತ್ತಿದ್ದಿಲ್ಲ. ಬಡತನದಿಂದ ತುಂಬಾ ಪೀಡಿಸಲ್ಪಡುತ್ತಿದ್ದನು. ಅವನ ಪತ್ನಿಯು ಪತಿಭಕ್ತಿಯಿಂದ ಯುಕ್ತಳಾಗಿದ್ದಳು. ಒಂದು ದಿನ ತನ್ನ ಬಡತನವನ್ನು ವಿವರಿಸುತ್ತಾ ಅವಳು ಪತಿಯನ್ನು ನೋಡಿ ಹೇಳಿದಳು.

ಎಲೈ ಪತಿಯೇ, ನೀವು ಯಾವಾಗಲೂ ನಿಮಗೆ ಲಕ್ಷ್ಮೀಪತಿಯಾಗಿರುವ ಶ್ರೀಕೃಷ್ಣದೇವನೇ ಮಿತ್ರನೆಂದು ಹೇಳುತ್ತಿರುವಿರಿ. ಅವನು ಬ್ರಾಹ್ಮಣರಲ್ಲಿ ವಿಶೇಷವಾದ ಭಕ್ತಿಯುಳ್ಳವನೆಂದು ನಾನು ಕೇಳಿರುವೆನು. ಶರಣಾಗತರಲ್ಲಿ ವಿಶೇಷವಾದ ವಿಶ್ವಾಸವುಳ್ಳವನೆಂದು ತಿಳಿದಿರುವೆನು. ಸಾಧುಗಳಿಗೆ ಅವನು ಗತಿಯೆಂದು ತಿಳಿದಿರುವೆನು. ಅವನನ್ನು ಆಶ್ರಯಿಸಿದರೆ ಅಪರಿಮಿತವಾದ ದ್ರವ್ಯವನ್ನು ಕೊಡುವುದರಲ್ಲಿ ಸಂಶಯವಿಲ್ಲ. ಅವನು ಕೊಟ್ಟಿರುವ ಅಪರಿಮಿತವಾದ ಸಂಪತ್ತಿನಿಂದ ಕುಟುಂಬಿಯಾದ ನೀವು ತಾಪತ್ರಯದಿಂದ ಮುಕ್ತರಾಗುವುದರಲ್ಲಿ ಸಂಶಯವಿಲ್ಲ. ಆದ್ದರಿಂದ ಅಲ್ಲಿಗೆ ಹೋಗಿರಿ ಎಂದು ನಾನಾ ವಿಧದಿಂದ ಪ್ರಾರ್ಥಿಸಿದಳು. ಈ ಮಾತುಗಳನ್ನು ಕೇಳಿದ ಕುಚೇಲನು ಯೋಚಿಸಿದನು. ಶ್ರೀಕೃಷ್ಣದೇವನನ್ನು ನೋಡಿ ತನ್ನ ಬಡತನವನ್ನು ತಿಳಿಸಿದರೆ ಅಪಾರವಾದ ಸಂಪತ್ತುಗಳನ್ನು ಕೊಡುವನೆಂದು ನನ್ನ ಪತ್ನಿಯು ಹೇಳುರುವಳು. ಎಲ್ಲಾ ಫಲಗಳಿಗಿಂತಲೂ ಉತ್ತಮವಾದ ಫಲವು ಇದೆ. ಶ್ರೀಕೃಷ್ಣದೇವನ ಮಹಿಮೆಗಳು ಅತ್ಯುತ್ತಮ ವಾದವುಗಳು. ಅವನ ಮಹಿಮೆಗಳನ್ನು ತಿಳಿಯುವವನು ಸಂಸಾರದಿಂದ ಬಿಡುಗಡೆಯನ್ನು ಪಡೆಯುವನು. ಅಂತಹ ಶ್ರೀಕೃಷ್ಣದೇವನ ದರ್ಶನಕ್ಕಾಗಿ ತನ್ನ ಪತ್ನಿಯು ನಿರ್ಬಂಧಿಸುತ್ತಿರುವಳೆಂದು ಹೇಳುತ್ತಿರುವವನಾಗಿ ಕುಚೇಲನು ಹೊರಟನು.

ಶ್ರೀಕೃಷ್ಣದೇವನಿಗೆ ಕಾಣಿಕೆಯನ್ನು ಸಮರ್ಪಿಸುವುದಕ್ಕೆ ಏನಾದರೂ ಇದ್ದರೆ ಕೊಡು ಎಂದು ಕೇಳಿದನು. ಪತ್ನಿಯು ಕೆಲವು ಮನೆಗಳಲ್ಲಿ ಭಿಕ್ಷೆಯನ್ನು ಬೇಡಿ ತಂದಿರುವ ಅವಲಕ್ಕಿಯನ್ನು ಹರಕು ಬಟ್ಟೆಯಲ್ಲಿ ಕಟ್ಟಿಕೊಟ್ಟಳು. ಹರಕು ಬಟ್ಟೆಯನ್ನು ಹೊರಗೆ ತೋರಿಸಲು ನಾಚಿದವನಾಗಿ ಕುಂಕುಳಿನಲ್ಲಿ ತುರುಕಿಕೊಂಡನು. ದ್ವಾರಕೆಯ ರಾಜಬೀದಿಯಲ್ಲಿ ನಡೆಯುತ್ತಾ. ಶ್ರೀಕೃಷ್ಣದೇವನ ಮನೆಯನ್ನು ಹುಡುಕುತ್ತಾ ಬಂದನು. ಶ್ರೀಕೃಷ್ಣದೇವನ

ಮನೆಯೆಂದು ಒಂದು ಮನೆಯನ್ನು ಪ್ರವೇಶಿಸಿದನು. ಆ ಮನೆಯಲ್ಲಿ ಶ್ರೀಕೃಷ್ಣದೇವನು ಮಂಚದಲ್ಲಿ ಕುಳಿತಿದ್ದನು. ಅವನ ಪತ್ನಿಯು ಕಾಲುಗಳನ್ನು ಒತ್ತುತ್ತಿದ್ದಳು. ಶ್ರೀಕೃಷ್ಣದೇವನು ಕುಚೇಲನನ್ನು ನೋಡಿದನು. ಮರು ನಿಮಿಷದಲ್ಲಿ ಕುಚೇಲನಿದ್ದಲ್ಲಿಗೆ ಬಂದು, ಅವನನ್ನು ಆಲಿಂಗಿಸಿದನು. ಅವನ ಕೈಗಳನ್ನು ಹಿಡಿದು ತನ್ನ ಆಸನಕ್ಕೆ ಕರೆದುಕೊಂಡು ಹೋದನು. ಆ ಆಸನದಲ್ಲಿ ಕುಳ್ಳಿರಿಸಿ ಪಾದಗಳನ್ನು ತೊಳೆದನು.

ಬ್ರಾಹ್ಮಣಶ್ರೇಷ್ಠರೇ, ನೀವು ನನ್ನೊಡನೆ ಗುರುಕುಲವಾಸವನ್ನು ಮಾಡಿದಿರಿ. ಇಲ್ಲಿಂದ ಊರಿಗೆ ಹೋದ ಮೇಲೆ ಗುಣವತಿಯಾದ ಕನ್ಯೆಯನ್ನು ವಿವಾಹ ಮಾಡಿಕೊಂಡಿದ್ದೀರಾ? ನಿಮ್ಮ ದಾಂಪತ್ಯವು ಧರ್ಮಾನುಗುಣವಾಗಿದೆಯಾ? ಎಂದು ಕೇಳಿದನು. ಗುರುಕುಲವಾಸವು ಅತ್ಯಂತ ಶ್ರೇಷ್ಠವಾದುದು. ನಾವು ಒಂದು ದಿನ ಕಾಡಿಗೆ ಹೋದೆವು. ಆಗ ಮಳೆಯು ಅತಿ ಭಯಂಕರವಾಗಿ ಬಂತು. ಆ ಮಳೆಯಿಂದ ಹಳ್ಳವೂ ಮಿಟ್ಟೆಯೂ ತಿಳಿಯಲಿಲ್ಲ. ನಾವು ಅಲ್ಲಲ್ಲಿ ನಿಂತಲ್ಲಿಯೇ ನಿಂತುಬಿಟ್ಟೆವು. ಮರುದಿನ ಬೆಳಗಾದ ಮೇಲೆ ಗುರುಗಳು ನಮ್ಮನ್ನು ಹುಡುಕಿಕೊಂಡು ಬಂದರು. ಎಲೈ ಮಕ್ಕಳಿರಾ, ನೀವು ಎಲ್ಲಿರುವಿರಿ? ನಮಗಾಗಿ ನಿಮ್ಮ ಶರೀರಗಳನ್ನೂ ಲಕ್ಷ್ಯಮಾಡದೆ ನಮ್ಮನ್ನು ಸೇವಿಸಿದಿರಿ. ನಿಮಗೆ ಎಲ್ಲಾ ವಿದ್ಯೆಗಳೂ ಸರ್ವಾಭೀಷ್ಟಗಳನ್ನೂ ಕೊಡಲಿ ಎಂದರು. ಗುರುಗಳ ವಿಶೇಷಾನುಗ್ರಹಕ್ಕೆ ಪಾತ್ರರಾದ ನಾವೆಲ್ಲರೂ ಧನ್ಯರು ಎಂದು ಶ್ರೀಕೃಷ್ಣದೇವನು ಸಂಭಾಷಣೆಯನ್ನು ಮಾಡುತ್ತಾ ಆ ರಾತ್ರಿಯನ್ನು ಕಳೆದನು. ಮರುದಿನ ಬೆಳಗಾದ ಮೇಲೆ ಶ್ರೀಕೃಷ್ಣದೇವನಿಂದ ಯಾವುದನ್ನೂ ಕೇಳದೇ ತನ್ನ ಊರಿಗೆ ಹೊರಟನು.

ಕುಚೇಲನನ್ನು ನೋಡಿ ಶ್ರೀಕೃಷ್ಣದೇವನು "ಕುಚೇಲಾ, ನನಗೆ ಪ್ರಿಯವಾದ ಯಾವ ವಸ್ತುವನ್ನು ತಂದಿರುವಿ"? ಎಂದು ಪ್ರಶ್ನಿಸಿದನು. ಆಗ ಅವಲಕ್ಕಿಯ ಗಂಟನ್ನು ಕುಂಕುಳಿನಲ್ಲಿ ಇಟ್ಟುಕೊಂಡಿದ್ದರೂ ಅದನ್ನು ಹೊರಪಡಿಸದಿರುವುದಕ್ಕೆ ಕುಚೇಲನು ಇಷ್ಟಪಡಲಿಲ್ಲ. ಅವಲಕ್ಕಿಯನ್ನು ಕಟ್ಟಿರುವ ಹರಕು ಬಟ್ಟೆಯೇ ಅದನ್ನು ಹೊರಪಡಿಸದಿರುವುದಕ್ಕೆ ಕಾರಣವಾಗಿತ್ತು. ಸರ್ವರ ಹೃದಯದಲ್ಲಿರುವ ಅಭಿಪ್ರಾಯವನ್ನು ತಿಳಿದಿರುವ ಶ್ರೀಕೃಷ್ಣದೇವನು ಕುಚೇಲನ ಮನಸ್ಸಿನ ಅಭಿಪ್ರಾಯವನ್ನೂ ತಿಳಿದನು. ತನ್ನ ಕೈಗಳಿಂದ ಅವಲಕ್ಕಿಯ ಗಂಟನ್ನು ಕಿತ್ತುಕೊಂಡನು. ಅದನ್ನು ಬಿಚ್ಚಿದನು. ಪ್ರಿಯಮಿತ್ರನೇ, ನನಗೆ ತುಂಬಾ ಪ್ರಿಯವಾದ ಅವಲಕ್ಕಿಯನ್ನು ನನಗೆ ಕೊಡುವುದಕ್ಕೆ ಯಾಕೆ ಸಂಕೋಚಪಡುತ್ತಿದ್ದೀ? ಎಂದು ಹೇಳುತ್ತಾ ಒಂದು ಹಿಡಿಯಷ್ಟು ಅವಲಕ್ಕಿಯನ್ನು ಮುಕ್ಕಿದನು. ಎರಡನೆಯ ಹಿಡಿಯಲ್ಲಿ ಅವಲಕ್ಕಿಯನ್ನು ತೆಗೆದನು. ಅಷ್ಟರಲ್ಲಿ ಲಕ್ಷ್ಮೀದೇವಿಯರು ತಡೆದರು. ನೀವು ಒಂದು ಹಿಡಿಯಷ್ಟು ಅವಲಕ್ಕಿಯನ್ನು ಈ ಬ್ರಾಹ್ಮಣನಿಂದ ಸ್ವೀಕರಿಸಿದ್ದರಿಂದಲೇ ಸಾಕಷ್ಟು ಭಾಗ್ಯವು ಬಂತು. ಅಧಿಕವಾದ ಅವಲಕ್ಕಿಯನ್ನು ತಿನ್ನುವುದು ಬೇಡ ಎಂದಳು. ಶ್ರೀಕೃಷ್ಣದೇವನು ಕುಚೇಲನನ್ನು ಮರ್ಯಾದೆಯಿಂದ ಕಳುಹಿಸಿದನು. ಕುಚೇಲನು ತನ್ನ ಆಶ್ರಮದ ಸಮೀಪಕ್ಕೆ ಬಂದನು. ಶ್ರೀಕೃಷ್ಣದೇವರ ಅನುಗ್ರಹದಿಂದ ಅವನ ಆಶ್ರಮವು ಅನೇಕ ಮಹಡಿಗಳಿಂದ ಯುಕ್ತವಾಗಿತ್ತು. ಅವನ ಪತ್ನಿಯು ಅಸಂಖ್ಯದಾಸಿಯರಿಂದ ಯುಕ್ತಳಾಗಿದ್ದಳು. ಶ್ರೀಕೃಷ್ಣದೇವನ ಅನುಗ್ರಹದಿಂದ ಸಕಲ ಸೌಭಾಗ್ಯಗಳಿಂದಲೂ ಯುಕ್ತಳಾಗಿದ್ದಳು. ಅವನು ತನ್ನ ಮನೆಗೆ ಬಂದನು. ಅಹಂಕಾರಾದಿಗಳಿಂದ ರಹಿತನಾಗಿ ಉತ್ತಮ ಭಕ್ತಿಯಿಂದ ಶ್ರೀಹರಿಯನ್ನು ಆರಾಧಿಸಿದನು.

**ವಿಶೇಷಾರ್ಥ - ಕದಾಚಿತ್ಪಾಂಡವಾನ್ನಾನಾಜನಪದೇಶ್ವರಾನ್ ಭೂಪಾನ್ನೃಪಾಂಶ್ಚಾಹೂಯ ಅಶ್ವಮೇಧಾಖ್ಯಯಜ್ಞಂ ಕುರ್ವನ್ ತೃಣಪೂಗಧರಂ "ಮಮ ಸುತಾಃ ಜನನೋತ್ತರಕ್ಷಣ ಏವಾದೃಶ್ಯತಾಂ ಯಾಂತಿ"**

ಇತಿ ವದಂತಂ ದುಃಖೇನ ಕ್ರೋಶಂತಂ ಸ್ವಸಮೀಪಂ ಪ್ರಾಪ್ತಂ ಕಂಚನ ಬ್ರಾಹ್ಮಣಂ ದೃಷ್ಟ್ವಾ ತತ್ಪುತ್ರರಕ್ಷಣೇ ಕೃತಪ್ರತಿಶ್ರವಂ "ತವ ತತ್ಪುತ್ರರಕ್ಷಣೇ ಶಕ್ತಿರ್ನಾಸ್ತಿ" ಇತಿ ಸ್ವೇನೋಕ್ತಂ ವಚನಂ ಅಸುರಾವೇಶೇನಾನಾದೃತ್ಯ "ಅಗ್ನಿಂ ಪ್ರವೇಕ್ಷ್ಯೇಽಶಕ್ತಶ್ಚೇತ್" ಇತಿ ವದಂತಮರ್ಜುನಂ ಅನುಜ್ಞಾಪ್ಯ ಬ್ರಾಹ್ಮಣಸ್ತ್ರಿಯಃ ಪ್ರಸವಕಾಲೇ ಶಸ್ತ್ರೈರ್ದಿಗ್ಬಂಧನಾದ್ಯುಪಾಯೈಃ ಪುತ್ರರಕ್ಷಣಾರ್ಥಮುದ್ಯೋಗಂ ಕೃತ್ವಾ ಜನನಕಾಲ ಏವ ಪೂರ್ವವದದೃಶ್ಯತಾಂ ಪ್ರಾಪ್ತಂ ಪುತ್ರಂ ರಕ್ಷಿತುಮಶಕ್ತಂ ಸ್ವಸಮೀಪಂ ಪ್ರಾಪ್ಯ ವಹ್ನಿಪ್ರವೇಶಾರ್ಥಮುದ್ಯುಕ್ತಂ ಅರ್ಜುನಂ ನಿವಾರ್ಯ ಬ್ರಾಹ್ಮಣಾರ್ಜುನಾಭ್ಯಾಂ ಸಹ ರಥಮಾರುಹ್ಯೋದೀಚೀಂ ದಿಶಂ ಗತ್ವಾ ಸಪ್ತವಾರಿಧೀನ್ ಸಪ್ತದ್ವೀಪಾಂಶ್ಚ ಕ್ಷಣೇನ ತೀರ್ತ್ವಾ ಲೋಕಾಲೋಕಪರ್ವತಂ ಚಾತೀತ್ಯ ಅತಿ ನಿಬಿಡಮಂಧತಮಸಂ ಚಕ್ರೇಣ ವಿದಾರ್ಯ ಘನೋದಕಮಪ್ಯತೀತ್ಯ ಅನಂತಾಸನಾಖ್ಯಂ ಸ್ವಮಂದಿರಂ ಅರ್ಜುನಾಯ ದರ್ಶಯಿತ್ವಾ ದೂರೇ ರಥಸ್ಥಂ ಸವಿಪ್ರಂ ಪಾರ್ಥಂ ಸಂಸ್ಥಾಪ್ಯ ಸ್ವಮಂದಿರಂ ಪ್ರವಿಶ್ಯ ತತ್ರಸ್ಥೇನ ಶೇಷಶಾಯಿನಾ ಅಷ್ಟಭುಜಯುಕ್ತೇನ ಕಿರೀಟಾದಿವಿಭೂಷಣೈರಲಂಕೃತೇನ ಜ್ಞಾನಾನಂದಸ್ವರೂಪಿಣಾ ಲಕ್ಷ್ಮೀನಾರಾಯಣೇನೈಕೀಭೂಯ ಮುಹೂರ್ತಂ ಸ್ಥಿತ್ವಾ ಸ್ವಪಾರ್ಷದಾನ್ ಸುನಂದಾದೀನ್ ವಿಪ್ರಸುತತ್ವೇನ ಜಾತಾನ್ ಅರ್ಜುನಸ್ಯ ದರ್ಪಂ ನಿಹಂತುಂ ಹರಿಣಾ ತತ್ರಾನೀತಾನುಪಾದಾಯ ಅಪ್ರಾಕೃತಾತ್ಸ್ವಮಂದಿರಾನ್ನಿಃಸೃತ್ಯ ಬ್ರಾಹ್ಮಣಾರ್ಜುನಾಭ್ಯಾಂ ಸಹ ರಥಮಾರುಹ್ಯ ಸಮುದ್ರಾದೀನ್ ತೀರ್ತ್ವಾ ಬ್ರಾಹ್ಮಣಾಯ ಸುತಾನ್ ದತ್ವಾ ತಮನುಜ್ಞಾಪ್ಯ ಅರ್ಜುನೇನ ಸಹ ಯಜ್ಞಶಾಲಾಂ ಪ್ರವಿಶ್ಯ ಲೋಕಶಿಕ್ಷಾರ್ಥಮೇವ ಸಾರ್ಧಮುಹೂರ್ತಂ ಯಜ್ಞವಿಚ್ಛೇದನೇನ ತನ್ನಿಮಿತ್ತಪ್ರಾಯಶ್ಚಿತ್ತಂ ಕೃತ್ವಾ ಯಜ್ಞಂ ಸಮಾಪ್ಯ ತತ್ರಾಗತಾನ್ ಬ್ರಹ್ಮಾದೀನ್ ಪೂಜಯಿತ್ವಾ ಸ್ವಸ್ತ್ರೀಭಿಃ ಪುತ್ರಪೌತ್ರಾದಿ ಬಂಧುಜನೈಶ್ಚ ಸಹ ಯಮುನಾಯಾಂ ಅವಭೃಥಸ್ನಾನಂ ಕೃತ್ವಾ ವಸ್ತ್ರ ಭೂಷಣಾದಿಭಿಸ್ಸಮ್ಯಗಲಂಕೃತ್ಯ ರಥಮಾರುಹ್ಯ ಸ್ವಕೀಯೈಸ್ಸಹ ದ್ವಾರಕಾಂ ಪ್ರತಿಗಚ್ಛನ್ ಮಾರ್ಗೇ ಯುದ್ಧಾರ್ಥಮಾಗತಂ ಮಹತ್ಯಾ ಸೇನಯಾ ಯುಕ್ತಂ ಸ್ವಕೀಯಶಿಶುಪಾಲಾದಿವಧೇನ ಕುಪಿತಂ ದಂತವಕ್ತ್ರಂ ಗದಯಾ ಹತ್ವಾ ತದ್ದೇಹಸ್ಥಂ ಸ್ವಪಾರ್ಷದಮನುಗೃಹ್ಯ ತದಾವಿಷ್ಟಮಸುರಂ ತಮಸಿ ನಿರಸ್ಯ ತಸ್ಯಾನುಜಂ ವಿಡೂರಥಂ ಚಕ್ರೇಣ ಹತ್ವಾ ತಮಸಿ ನಿರಸ್ಯ ತತ್ಸೈನ್ಯಂ ನಾಶಯಿತ್ವಾ ತತ್ಸಂಬಂಧಿಗಜಾದಿಕಂ ಸ್ವೀಕೃತ್ಯ ದೇವಾದಿಭಿಸ್ತೂಯಮಾನಃ ದ್ವಾರಕಾಂ ಪ್ರಾಪ್ಯ ತತ್ರ ಶತೋತ್ತರ ಷೋಡಶ ಸಹಸ್ರ ಸಂಖ್ಯಾಕಾಭಿಸ್ಸ್ವಸ್ತ್ರೀಭಿಃ ರುಕ್ಮಿಣ್ಯಾದಿಪ್ರಧಾನಸ್ತ್ರೀಭಿಶ್ಚ ಸಹ ಅನೇಕರೂಪೈಃ ಕ್ರೀಡಾಂ ಕುರ್ವನ್ ಪುತ್ರಪೌತ್ರಾದಿಭಿಸ್ಸಹಿತಃ ಸರ್ವಾನ್ಸಂತೋಷ್ಯ ಸ್ವಭಕ್ತಾಯ ಉದ್ಧವಾಯ ತತ್ವಾನಿ ಉಪದಿಶ್ಯ ಸುಖೇನ ಸ್ಥಿತವಾನ್

ವಿಶೇಷಾರ್ಥ ವಿವರಣ - ಶ್ರೀಕೃಷ್ಣದೇವನ ಅಶ್ವಮೇಧಯಾಗದ ವಿಷಯವು ಹಿಂದೆ ವರ್ಣಿಸಲ್ಪಟ್ಟಿದೆ.

रक्षन् लोकान्समस्तान्निजजननयनानन्दकारी निरस्ता-
वद्यस्सौख्यैकमूर्तिस्सुरतरुकुसुमैः कीर्यमाणोऽमरेन्द्रैः ।
सिद्धैर्गन्धर्वपूर्वैर्जयजयवचनैस्तूयमानोऽत्र कृष्णः
स्त्रीभिः पुत्रैश्च पौत्रैस्स जयति भगवान् सर्वसंपत्समृद्धः ॥ २८ ॥

**ರಕ್ಷನ್ ಲೋಕಾನ್ಸಮಸ್ತಾನ್ ನಿಜಜನನಯನಾನಂದಕಾರೀ ನಿರಸ್ತಾ-**
**ವದ್ಯಸ್ಸೌಖ್ಯೈಕಮೂರ್ತಿಸ್ಸು ರತರುಕುಸುಮೈಃ ಕೀರ್ಯಮಾಣೋಽಮರೇಂದ್ರೈಃ।**
**ಸಿದ್ಧೈರ್ಗಂಧರ್ವಪೂರ್ವೈರ್ಜಯಜಯವಚನೈಃ ಸ್ತೂಯಮಾನೋಽತ್ರ ಕೃಷ್ಣಃ**
**ಸ್ತ್ರೀಭಿಃ ಪುತ್ರೈಶ್ಚ ಪೌತ್ರೈಸ್ಸ ಜಯತಿ ಭಗವಾನ್ ಸರ್ವಸಂಪತ್ಸಮೃದ್ಧಃ ॥ ೨೮ ॥**

**ಪದಚ್ಛೇದ** :- ರಕ್ಷನ್, ಲೋಕಾನ್, ಸಮಸ್ತಾನ್, ನಿಜಜನನಯನಾನಂದಕಾರೀ, ನಿರಸ್ತಾವದ್ಯಃ, ಸೌಖ್ಯೈಕಮೂರ್ತಿಃ, ಸುರತರುಕುಸುಮೈಃ, ಕೀರ್ಯಮಾಣಃ, ಅಮರೇಂದ್ರೈಃ ಸಿದ್ಧೈಃ ಗಂಧರ್ವಪೂರ್ವೈಃ ಜಯಜಯ ವಚನೈಃ ಸ್ತೂಯಮಾನಃ ಅತ್ರ ಕೃಷ್ಣಃ ಸ್ತ್ರೀಭಿಃ, ಪುತ್ರೈಃ ಚ, ಪೌತ್ರೈಃ ಸಃ, ಜಯತಿ, ಭಗವಾನ್ ಸರ್ವಸಂಪತ್ಸಮೃದ್ಧಃ,

ಅನ್ವಯ - ಲೋಕಾನ್, ಸಮಸ್ತಾನ್ ರಕ್ಷನ್, ನಿಜಜನನಯನಾನಂದಕಾರೀ, ನಿರಸ್ತಾವದ್ಯಃ, ಸೌಖ್ಯೈಕಮೂರ್ತಿಃ, ಸುರತರುಕುಸುಮೈಃ, ಅಮರೇಂದ್ರೈಃ ಕೀರ್ಯಮಾಣಃ ಸಿದ್ಧೈಃ ಗಂಧರ್ವಪೂರ್ವೈಃ ಜಯಜಯ ವಚನೈಃ ಅತ್ರ ಕೃಷ್ಣಃ ಸ್ತೂಯಮಾನಃ ಸ್ತ್ರೀಭಿಃ ಪುತ್ರೈಃ ಪೌತ್ರೈಃ ಚ, ಸಃ, ಭಗವಾನ್ ಸರ್ವಸಂಪತ್ಸಮೃದ್ಧಃ ಅಸ್ಮಾನ್ ರಕ್ಷತು.

ಅನ್ವಯಾರ್ಥ - ಲೋಕಾನ್ ಸಮಸ್ತಾ ನ್ ಎಲ್ಲಾ ಲೋಕಗಳನ್ನು ರಕ್ಷನ್ ರಕ್ಷಿಸುತ್ತಿರುವ ನಿಜಜನನಯನಾನಂದಕಾರೀ ಸ್ವಕೀಯರಾದ ಜನರುಗಳ ಎರಡು ಕಣ್ಣುಗಳಿಗೆ ಆನಂದಕರನಾದ ನಿರಸ್ತಾವದ್ಯಃ ಯಾವ ದೋಷಗಳೂ ಇಲ್ಲದಿರುವ ಸೌಖ್ಯೈಕಮೂರ್ತಿಃ ಸೌಖ್ಯದಿಂದ ಅಭಿನ್ನವಾಗಿರುವ ಶರೀರದಿಂದ ಯುಕ್ತನಾಗಿರುವ ಸುರತರುಕುಸುಮೈಃ ದೇವತೆಗಳ ಪುಷ್ಪವಾಗಿರುವ ಪಾರಿಜಾತಪುಷ್ಪ ಮುಂತಾದವುಗಳಿಂದ ಅಮರೇಂದ್ರೈಃ ದೇವಶ್ರೇಷ್ಠರುಗಳಿಂದ ಕೀರ್ಯಮಾಣಃ ಅಭಿಷೇಕ ಮಾಡಲ್ಪಡುತ್ತಿರುವ ಸಿದ್ಧೈಃ ಸಿದ್ಧರುಗಳಿಂದಲೂ ಗಂಧರ್ವಪೂರ್ವೈಃ ಗಂಧರ್ವ ಮುಂತಾದವರುಗಳಿಂದಲೂ ಜಯಜಯವಚನೈಃ ಜಯಜಯಕಾರಸ್ತೂಯಮಾನಃ ವಚನಗಳಿಂದ ಸ್ತೋತ್ರ ಮಾಡಿಸಿಕೊಳ್ಳಲ್ಪಟ್ಟ ಶ್ರೀಕೃಷ್ಣನು ಸ್ತ್ರೀಭಿಃ ಸ್ತ್ರೀಯರಿಂದಲೂ ಪುತ್ರೈಃ ಚ ಮಕ್ಕಳುಗಳಿಂದಲೂ ಪೌತ್ರೈಃ ಚ ಮೊಮ್ಮಕ್ಕಳುಗಳಿಂದಲೂ ಭಗವಾನ್ ಅಷ್ಟೈಶ್ವರ್ಯ ಸಂಪನ್ನನಾಗಿಯೂ ಸರ್ವಸಂಪತ್ಸಮೃದ್ಧಃ ಸರ್ವಸಂಪತ್ತುಗಳಿಂದ ಸಮೃದ್ಧಿಯುಳ್ಳವನಾಗಿಯೂ ಇರುವ ಶ್ರೀಕೃಷ್ಣದೇವನು ಅಸ್ಮಾನ್ ರಕ್ಷತು ನಮ್ಮನ್ನು ರಕ್ಷಿಸಲಿ.

ತಾತ್ಪರ್ಯಾರ್ಥ - ಎಲ್ಲಾ ಲೋಕಗಳನ್ನೂ ಶ್ರೀಕೃಷ್ಣದೇವನು ರಕ್ಷಿಸುತ್ತಿರುವನು. ಸ್ವಭಕ್ತರಿಗೆ ಕಣ್ಣುಗಳಿಗೆ ಯಾವಾಗಲೂ ಆನಂದವನ್ನು ಕೊಡುತ್ತಿರುವನು. ಅವನಲ್ಲಿ ಯಾವ ದೋಷವೂ ಇಲ್ಲ. ಸೌಖ್ಯದಿಂದ ಅಭಿನ್ನವಾದ ಶರೀರದಿಂದ ಯುಕ್ತನಾಗಿರುವನು. ದೇವಶ್ರೇಷ್ಠರುಗಳು ಪಾರಿಜಾತ ಮುಂತಾದ ಪುಷ್ಪಗಳಿಂದ ಮಳೆಯನ್ನು ಯಾವಾಗಲೂ ಸುರಿಸುತ್ತಿರುವರು. ಸಿದ್ಧರೂ ಗಂಧರ್ವ ಮುಂತಾದವರೂ ಯಾವಾಗಲೂ ಜಯಜಯಕಾರವನ್ನು ಮಾಡುತ್ತಾ ಇರುವರು. ಸ್ತ್ರೀಯರೂ ಗಂಡುಮಕ್ಕಳುಗಳೂ ಅಷ್ಟೈಶ್ವರ್ಯ ಯುಕ್ತನಾದ ಸರ್ವಸಂಪತ್ತು ಗಳಿಂದಲೂ ಸಮೃದ್ಧಿಯುಳ್ಳ ಶ್ರೀಕೃಷ್ಣದೇವನು ಜಯಶೀಲನಾಗಿರಲಿ ಮತ್ತು ನಮ್ಮೆಲ್ಲರನ್ನೂ ರಕ್ಷಿಸಲಿ.

ವಿಗ್ರಹ - ರಕ್ಷತಿ ಇತಿ ರಕ್ಷನ್; ನಿಜಾಶ್ಚ ತೇ ಜನಾಶ್ಚ ನಿಜಜನಾಃ, ನಿಜಜನಾನಾಂ ಆನಂದಃ ನಿಜಜನಾನಂದಃ ನಿಜಜನಾನಂದಂ ಕರೋತಿ ಇತಿ ನಿಜಜನಾನಂದಕಾರೀ; ನಿರಸ್ತಾನಿ ಅವದ್ಯಾನಿ ಯಸ್ಮಾತ್ ಸಃ ನಿರಸ್ತಾವದ್ಯಃ; ಸುಖಂ ಏವ ಸೌಖ್ಯಂ, ಸೌಖ್ಯಂ ಏವ ಮೂರ್ತಿಃ ಯಸ್ಯ ಸಃ ಸೌಖ್ಯೈಕಮೂರ್ತಿಃ; ಸುರಾಣಾಂ ತರವಃ ಸುರತರವಃ

ಸುರತರೂಣಾಂ ಕುಸುಮಾನಿ. ಸುರತರುಕುಸುಮಾನಿ, ತೈಃ ಸುರತರುಕುಸುಮೈಃ, ಕೀರ್ಯತೇ ಇತಿ ಕೀರ್ಯಮಾಣಃ; ಅಮರಾಣಾಂ ಇಂದ್ರಾಃ ಅಮರೇಂದ್ರಾಃ ತೈಃ, ಅಮರೇಂದ್ರೈಃ; ಪುತ್ರಾಣಾಂ ಅಪತ್ಯಾನಿ ಪುಮಾಂಸಃ ಪೌತ್ರಾಃ, ತೈಃ ಪೌತ್ರೈಃ ಜಯಜಯ ಇತಿ ವಚನಂ ಯೇಷಾಂ ತೇ ಜಯಜಯವಚನಾಃ ತೈಃ ಜಯಜಯವಚನೈಃ; ಸರ್ವಾಶ್ಚ ತಾಃ ಸಂಪದಶ್ಚ ಸರ್ವಸಂಪದಃ ಸರ್ವಸಂಪದ್ಭಿ; ಸಮೃದ್ಧಃ ಸರ್ವಸಂಪತ್ಸಮೃದ್ಧಃ; ಭಗಃ ಅಸ್ಯ ಅಸ್ತಿ ಇತಿ ಭಗವಾನ್;.

ಕ್ರಿಯಾಪದ - ಭೂಯಾತ್ ಭೂಯಾಸ್ತಾಂ ಭೂಯಾಸುಃ, ಭೂಯಾಃ ಭೂಯಾಸ್ತಂ ಭೂಯಾಸ್ತ ಭೂಯಾಸಂ ಭೂಯಾಸ್ವ ಭೂಯಾಸ್ಮ; ಭೂ ಸತ್ತಾಯಾಂ ಸತ್ತಾರ್ಥಕಾತ್ ಭೂಧಾತೋಃ ವಿಧಿ ಲಿಙ್ ಪ್ರಥಮಪುರುಷೈಕವಚನೇ "ಭೂಯಾತ್" ಇತಿ ರೂಪಂ.

**इति श्रीकृष्णचारित्रमञ्जरी लेशतः कृता।**
**राघवेन्द्रेण यतिना भूयात् कृष्णप्रसाददा॥ २९॥**

ಇತಿ ಶ್ರೀಕೃಷ್ಣಚಾರಿತ್ರಮಂಜರೀ ಲೇಶತಃ ಕೃತಾ।
ರಾಘವೇಂದ್ರೇಣ ಯತಿನಾ ಭೂಯಾತ್ ಕೃಷ್ಣಪ್ರಸಾದದಾ ॥ ೨೯ ॥

**ಪದಚ್ಛೇದ :-** ಇತಿ ಶ್ರೀಕೃಷ್ಣಚಾರಿತ್ರಮಂಜರೀ ಲೇಶತಃ ಕೃತಾ, ರಾಘವೇಂದ್ರೇಣ, ಯತಿನಾ ಭೂಯಾತ್, ಕೃಷ್ಣಪ್ರಸಾದದಾ.

ಅನ್ವಯ - ಇತಿ ರಾಘವೇಂದ್ರೇಣ ಯತಿನಾ ಲೇಶತಃ ಕೃತಾ ಶ್ರೀಕೃಷ್ಣಚಾರಿತ್ರಮಂಜರೀ ಕೃಷ್ಣಪ್ರಸಾದದಾ ಭೂಯಾತ್.

ಅನ್ವಯಾರ್ಥ - ಇತಿ ಹೀಗೆಂದು ರಾಘವೇಂದ್ರೇಣ, ಯತಿನಾ, ರಾಘವೇಂದ್ರ ಎಂಬ ಯತಿಯಿಂದ ಲೇಶತಃ ಸಂಕ್ಷಿಪ್ತವಾಗಿ ಕೃತಾ ಮಾಡಲ್ಪಟ್ಟ ಶ್ರೀಕೃಷ್ಣಚಾರಿತ್ರಮಂಜರೀ ಶ್ರೀಕೃಷ್ಣಚಾರಿತ್ರಮಂಜರೀ ಎಂಬ ಗ್ರಂಥವು ಕೃಷ್ಣ ಪ್ರಸಾದದಾ ಶ್ರೀಕೃಷ್ಣದೇವನ ಅನುಗ್ರಹವನ್ನು ಕೊಡತಕ್ಕದ್ದು ಭೂಯಾತ್ ಆಗಲಿ.

॥ ಇತಿ ಶ್ರೀಕೃಷ್ಣಚಾರಿತ್ರಮಂಜರೀ ಸಮಾಪ್ತಾ ॥

ಲಕ್ಷ್ಮೀನಾರಾಯಣಾಖ್ಯೇನ ಗುರುಪಾದಪ್ರಸಾದತಃ।
ಕೃತೇಯಂ ಮಂಜರೀಮಾಲಾ ಕೃಷ್ಣಃ ಪ್ರೀಣಾತು ಮೇ ತಯಾ ॥

॥ ಶ್ರೀಕೃಷ್ಣಾರ್ಪಣಮಸ್ತು ॥

